## ನಯಸೇನ ವಿರಚಿತ

# ಧರ್ಮಾಮೃತಂ

ಗದ್ಯಾನುವಾದ :
ಕೆ. ವೆಂಕಟರಾಮಪ್ಪ

ಕನ್ನಡ ಸಾಹಿತ್ಯ ಪರಿಷತ್ತು
1977
ವಜ್ರ ಮಹೋತ್ಸವ

## ಈ ಮಾಲೆಯಲ್ಲಿ ಪ್ರಕಟವಾಗುವ ಕಾವ್ಯಗಳು

ಪಂಪಭಾರತ * ಆದಿಪುರಾಣ * ಗದಾಯುದ್ಧ

ನೇಮಿನಾಥ ಪುರಾಣ (ಕರ್ಣಪಾರ್ಯ)

ನೇಮಿನಾಥ ಪುರಾಣ (ನೇಮಿಚಂದ್ರ)

ಯಶೋಧರ ಚರಿತೆ * ಅನಂತನಾಥ

ಪುರಾಣ * ಧರ್ಮಾಮೃತ

ಕರ್ಣಾಟಕ ಕಾದಂಬರಿ

ಪಂಚತಂತ್ರ * ನಳಚಂಪು

ಗಿರಿಜಾಕಲ್ಯಾಣ ಮಹಾಪ್ರಬಂಧ

ಜಗನ್ನಾಥ ವಿಜಯ * ಕಬ್ಬಿಗರ ಕಾವ

ಶಬರಶಂಕರ ವಿಲಾಸ * ಹರಿಹರನ ರಗಳೆಗಳು

[ಮುಂದುವರಿಸಿದೆ]



ರೂಪಾಯಿಗಳು

ಪಂಚವಾರ್ಷಿಕ ಯೋಜನೆಯ ಪುಸ್ತಕಮಾಲೆ-125

ನಯಸೇನ ವಿರಚಿತ

# ಧರ್ಮಾಮೃತಂ

ಗದ್ಯಾನುವಾದ :

ಕೆ. ವೆಂಕಟರಾಮಪ್ಪ



ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜಪೇಟೆ : : ಬೆಂಗಳೂರು-18.
1977

DHARMAMRUTHAM : Original with Prose rendering by Sri K. Venkataramappa. First Published in 1978 by Kannada Sahitya Parishat, Bangalore-560 018 in commemoration of its Diamond Jubilee, Demy Octavo Pages xii+1008, Price Rs. 15-00



ಮೊದಲನೆಯ ಮುದ್ರಣ : 1978

ಬೆಲೆ : ಹದಿನೈದು ರೂಪಾಯಿಗಳು



ಪ್ರತಿ ಸಂಪುಟಕ್ಕೆ ಹತ್ತುರೂಪಾಯಿ ಬೆಲೆಯಂತೆ ಎರಡು ಸಂಪುಟಗಳಲ್ಲಿ ತರಬೇಕಾದ ಈ ಗ್ರಂಥವನ್ನು ಕಡಮೆ ಬೆಲೆಗೆ ಕೊಡುವ ದೃಷ್ಟಿಯಿಂದ 15-00 ರೂ. ಗಳ ಒಂದು ಸಂಪುಟ ದಲ್ಲಿ ಹೊರತರಲಾಗಿದೆ.



ಪ್ರಕಾಶಕರು : ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು–560 018

ಮುದ್ರಣ : ಶ್ರೀ ಮೀರಾ ಪ್ರಿಂಟರ್ಸ್, ಶಿವರಾಂಪೇಟೆ, ಮೈಸೂರು–570 001

# ಪ್ರಸ್ತಾವನೆ

ಕನ್ನಡದ ಪ್ರಾಚೀನ ಕಾವ್ಯಸಂಪತ್ತು ಅಮೂಲ್ಯವಾಗಿದೆ. ಈ ಸಂಪತ್ತನ್ನು ಈಗಿನ ಕನ್ನಡ ಜನತೆ ಓದಿ ತಿಳಿದುಕೊಳ್ಳುವುದು ಅತ್ಯಾವಶ್ಯಕವಾಗಿದೆ. ಆದರೆ ಈ ಕಾವ್ಯಗಳು ಜನಸಾಮಾನ್ಯರಿಗೆ ಕಠಿಣವಾಗಿ ತೋರುವುದರಿಂದ ಇವುಗಳ ವ್ಯಾಸಂಗದಲ್ಲಿ ಉತ್ಸಾಹ ಪೂರ್ಣವಾದ ಪ್ರವೃತ್ತಿ ಕಂಡುಬರುತ್ತಿಲ್ಲ. ಅನೇಕ ಸಂದರ್ಭಗಳಲ್ಲಿ ಮೂಲಗ್ರಂಥಗಳೂ ದೊರೆಯುವುದಿಲ್ಲ. ಎಷ್ಟೋ ವೇಳೆ ವಿಶ್ವವಿದ್ಯಾನಿಲಯದವರು ಪ್ರಾಚೀನ ಕಾವ್ಯಗಳನ್ನು ಕನ್ನಡ ಬಿ.ಎ., ಎಂ.ಎ., ಪದವಿಪರೀಕ್ಷೆಗಳಿಗೆ ಪಠ್ಯಪುಸ್ತಕಗಳಾಗಿ ಇಟ್ಟಾಗಲಂತೂ ಮೂಲಗ್ರಂಥಗಳ ಅಭಾವ ವಿಶೇಷವಾಗಿ ಕಂಡುಬರುತ್ತದೆ.

ಆದ್ದರಿಂದ ಈ ಕೊರತೆಯನ್ನು ನಿವಾರಣೆ ಮಾಡಲು ಕನ್ನಡ ಸಾಹಿತ್ಯ ಪರಿಷತ್ತು ತನ್ನ ಪಂಚವಾರ್ಷಿಕ ಯೋಜನೆಯಲ್ಲಿ ಹಳಗನ್ನಡ ಕಾವ್ಯಗಳ ಪುನರ್ಮುದ್ರಣಕ್ಕೆ ವಿಶೇಷ ಗಮನ ಹರಿಸಿ ಅದಕ್ಕಾಗಿ ಪ್ರತ್ಯೇಕ ಯೋಜನೆಯನ್ನು ಹಾಕಿಕೊಂಡಿತು. ಆರಿಸಿದ ಹಳಗನ್ನಡ ಹಾಗೂ ನಡುಗನ್ನಡ ಕಾವ್ಯಗಳನ್ನು ಹೊಸಗನ್ನಡ ಗದ್ಯದಲ್ಲಿ ಅನುವಾದಿಸಿ, ಆ ಅನುವಾದದೊಡನೆ ಮೂಲಪಾಠವನ್ನು ಪ್ರಕಟಿಸಿ ಪುಸ್ತಕ ರೂಪದಲ್ಲಿ ಹೊರತರುವುದು ಮತ್ತು ಸರ್ಕಾರದ ಸಹಾಯ ಪಡೆದು ಆ ಪುಸ್ತಕಗಳು ಸಾಧ್ಯವಾದಮಟ್ಟಿಗೆ ಸುಲಭ ಬೆಲೆಯಲ್ಲಿ ದೊರೆಯುವಂತೆ ಮಾಡುವುದು, ಈ ಯೋಜನೆಯ ಮುಖ್ಯ ಅಂಶಗಳು.

ಈ ಯೋಜನೆಯ ಕಾರ್ಯನಿರ್ವಹಣೆಗಾಗಿ ಪರಿಷತ್ತು ಮೊದಲು ಅನೇಕ ವಿದ್ವಾಂಸರಿಗೆ ಪ್ರಾರ್ಥನಾಪತ್ರಗಳನ್ನು ಕಳಿಸಿ ಯಾವ ಯಾವ ಕಾವ್ಯಗಳನ್ನು ಹೊಸಗನ್ನಡ ಗದ್ಯಾನುವಾದಕ್ಕೆ ತೆಗೆದುಕೊಳ್ಳಬಹುದು ಎಂದು ತಿಳಿಸುವಂತೆ ಕೇಳಿಕೊಳ್ಳಲಾಯಿತು. ಆ ಪಂಡಿತರ ಸಹಾನುಭೂತಿಯುತವಾದ ಮತ್ತು ಮೆಚ್ಚುಗೆಯ ಸೂಚನೆಗಳು ಬಂದಮೇಲೆ ಅನುವಾದಗ್ರಂಥಗಳ ಪಟ್ಟಿಯೊಂದನ್ನು ಪರಿಷತ್ತು ಸಿದ್ಧಪಡಿಸಿತು. ಆ ಪಟ್ಟಿಯಲ್ಲಿ ಸುಮಾರು ಅರವತ್ತಕ್ಕೂ ಮಿಕ್ಕ ಕಾವ್ಯಗಳು ಇದ್ದವು.

ತರುವಾಯ ಆ ವಿದ್ವಜ್ಜನರ ಒಂದು ಸಭೆಯನ್ನು ದಿನಾಂಕ 23-9-73ನೆಯ ಭಾನುವಾರ ಬೆಳಗ್ಗೆ 10 ಗಂಟೆಗೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕರೆಯಲಾಯಿತು. ಆ ಸಭೆ ಬೆಳಗ್ಗೆಯಿಂದ ಸಂಜೆಯವರೆಗೆ ನಡೆದು ಅನುವಾದಕಾರ್ಯದ ವಿಷಯವನ್ನು ಕುರಿತು ಕೂಲಂಕಷವಾಗಿ ಸಮಾಲೋಚಿಸಿ ಈ ಕೆಳಕಂಡ ತೀರ್ಮಾನಗಳನ್ನು ಕೈಗೊಂಡಿತು.

1. ಭಾರತೀಯ ಜ್ಞಾನಪೀಠದವರು, ವಿಶ್ವವಿದ್ಯಾನಿಲಯದವರು, ಖಾಸಗಿ ಪ್ರಕಾಶಕರು ಪರಿಷತ್ತಿನ ಉದ್ದೇಶದಂತೆ ಈಗಾಗಲೆ ಕನ್ನಡ ಕಾವ್ಯಗಳನ್ನು ಅನುವಾದ

ಮಾಡಲು ಕಾರ್ಯ ಕೈಗೊಂಡಿದ್ದರೆ, ಅಂಥ ಕಾವ್ಯಗಳನ್ನು ಪರಿಷತ್ತು ಅನುವಾದಕ್ಕೆ ತೆಗೆದುಕೊಳ್ಳಬೇಕಾಗಿಲ್ಲ.

2. ಆಗತ್ಯ ಕಂಡ ಕಡೆ ಮೂಲವನ್ನು ಪರಿಷ್ಕರಿಸಿ ಅನುವಾದವನ್ನು ಕೈಗೊಳ್ಳತಕ್ಕದ್ದು.

3. ಈ ಕೆಳಗೆ ಕಾಣಿಸಿದ ಹಳಗನ್ನಡ ಮತ್ತು ನಡುಗನ್ನಡ ಕಾವ್ಯಗಳನ್ನು ಸದ್ಯದಲ್ಲಿ ಅನುವಾದಕ್ಕೆ ಆರಿಸಿಕೊಳ್ಳತಕ್ಕದ್ದು :

ಹಳಗನ್ನಡ : ವಿಕ್ರಮಾರ್ಜುನವಿಜಯ, ಆದಿಪುರಾಣ, ಗದಾಯುದ್ಧ, ನೇಮಿನಾಥಪುರಾಣ (1. ಕರ್ಣಪಾರ್ಯ 2. ನೇಮಿಚಂದ್ರ), ಯಶೋಧರಚರಿತೆ, ಅನಂತನಾಥ ಪುರಾಣ, ಧರ್ಮಾಮೃತ, ಕಾದಂಬರಿ, ಪಂಚತಂತ್ರ, ನಳಚಂಪು, ವಡ್ಡಾರಾಧನೆ, ಗಿರಿಜಾ ಕಲ್ಯಾಣ, ಜಗನ್ನಾಥವಿಜಯ, ಕಬ್ಬಿಗರಕಾವ, ಶಬರಶಂಕರವಿಳಾಸ, ಹರಿಹರನ ರಗಳೆಗಳು, ಕೆಳದಿನೃಪವಿಜಯ, ದಮಯಂತೀಸ್ವಯಂವರ, ಶಾಂತಿಪುರಾಣ, ಚಂದ್ರಪ್ರಭ ಪುರಾಣ, ಉದ್ಭಟಕಾವ್ಯಂ, ಕುಸುಮಾವಳಿ ಕಾವ್ಯ, ಅಭಿನವ ದಶಕುಮಾರಚರಿತೆ, ಮಲ್ಲಿನಾಥ ಪುರಾಣ, ರಾಜಶೇಖರವಿಳಾಸ, ಚಿಕ್ಕದೇವರಾಜ ವಂಶಾವಳಿ, ದಿವ್ಯಸೂರಿ ಚರಿತೆ.

ನಡುಗನ್ನಡ : ಸಿದ್ಧರಾಮಚಾರಿತ್ರ, ಬಸವಪುರಾಣ, ಪ್ರಭುಲಿಂಗಲೀಲೆ, ತೊರವೆ ರಾಮಾಯಣ, ರಾಮನಾಥಚರಿತೆ, ಭರತೇಶವೈಭವ, ಅನುಭವಾಮೃತ, ಗೀತಗೋಪಾಲ ಹದಿಬದೆಯಧರ್ಮ, ನಳಚರಿತ್ರೆ, ಅದ್ಭುತರಾಮಾಯಣ, ಚೆನ್ನಬಸವಪುರಾಣ, ಭಾಗವತ, ಹರಿಕಥಾಮೃತಸಾರ, ಭಿಕ್ಷಾಟನಚರಿತೆ, ಮೋಹನತರಂಗಿಣಿ.

4. ಅನುವಾದಕಾರ್ಯವನ್ನು ನಡೆಸಲು ಪರಿಷತ್ತಿನ ಪ್ರಕಟಣಾ ಸಮಿತಿ ಆಶ್ರಯದಲ್ಲಿ ಎರಡು ಅನುವಾದಕ ಮಂಡಲಿಗಳು ಇರತಕ್ಕದ್ದು ; ಒಂದು ಬೆಂಗಳೂರಿನಲ್ಲಿ, ಇನ್ನೊಂದು ಮೈಸೂರಿನಲ್ಲಿ. ಅನುವಾದಕಾರ್ಯವನ್ನು ನಡೆಸಿಕೊಡಲು ಒಪ್ಪಿರುವ ಪಂಡಿತರು ಈ ಎರಡು ಅನುವಾದಕ ಮಂಡಲಿಗಳ ಪೈಕಿ ತಮಗೆ ಹತ್ತಿರವಿರುವ ಮಂಡಲಿಯ ಸದಸ್ಯರಾಗಬಹುದು.

5. ಮಂಡಲಿಯ ಸದಸ್ಯರಾದ ಅನುವಾದಕರು ಕನ್ನಡದಲ್ಲಿ ವಿದ್ವಾಂಸರಾಗಿದ್ದು ಆಧುನಿಕರಿಗೆ ಹಿತಕರವಾದ ಹೊಸಗನ್ನಡ ಶೈಲಿಯನ್ನು ಚೆನ್ನಾಗಿ ಬಲ್ಲವರಾಗಿರಬೇಕು. ಅವರಿಗೆ ಹಳಗನ್ನಡ ಮತ್ತು ಸಂಸ್ಕೃತ ಸಾಹಿತ್ಯ ವಾಙ್ಮಯದಲ್ಲಿ ಉತ್ತಮವಾದ ಪರಿಣತಿ ಇರಬೇಕು. ಒಂದೊಂದು ಅನುವಾದಕ ಮಂಡಲಿಗೂ ಒಬ್ಬೊಬ್ಬ ಅಧ್ಯಕ್ಷರಿದ್ದು ಆ ಮಂಡಲಿಯ ಸಲಹೆಯಂತೆ ಅನುವಾದ ಕಾರ್ಯವು ನಡೆಯುತಕ್ಕದ್ದು.

6. ಮೈಸೂರಿನ ಅನುವಾದಕ ಮಂಡಲಿಗೆ ಶ್ರೀ ಕೆ. ವೆಂಕಟರಾಮಪ್ಪ ಅವರು ಅಧ್ಯಕ್ಷರಾಗಿರಬೇಕೆಂದೂ ಬೆಂಗಳೂರಿನ ಅನುವಾದಕ ಮಂಡಲಿಗೆ ವಿದ್ವಾನ್

ಎನ್. ರಂಗನಾಥಶರ್ಮಾ ಅವರು ಅಧ್ಯಕ್ಷರಾಗಿರಬೇಕೆಂದೂ ಪರಿಷತ್ತಿನ ಅಧ್ಯಕ್ಷರು ನೀಡಿದ ಸೂಚನೆಗೆ ಸಭೆ ತನ್ನ ಸಮ್ಮತಿ ನೀಡಿತು.

7. ಒಂದು ತಿಂಗಳಿಗೆ ಕನಿಷ್ಠಪಕ್ಷದಲ್ಲಿ ಮೂರುಸಲವಾದರೂ ಈ ಅನುವಾದಕ ಮಂಡಲಿಯು ಆಯಾ ಊರಿನಲ್ಲಿ ಸಭೆ ಸೇರಿ ಕಾರ್ಯವಿಧಾನವನ್ನೂ ಕಾರ್ಯಪ್ರಗತಿಯನ್ನೂ ಪರಿಶೀಲಿಸತಕ್ಕದ್ದು. ಅನುವಾದಕಾರ್ಯದಲ್ಲಿ ಸಂಭವಿಸಬಹುದಾದ ಎಡರು ತೊಡರು, ಸಂದೇಹಗಳನ್ನು ಪರಸ್ಪರವಾಗಿ ಚರ್ಚಿಸಿ ಪರಿಹರಿಸಿಕೊಳ್ಳತಕ್ಕದ್ದು.

(ಅ) ಒಬ್ಬೊಬ್ಬ ಅನುವಾದಕನಿಗೆ ಒಂದೊಂದು ಕಾವ್ಯವನ್ನು ಪೂರ್ತಿಯಾಗಿ ಅನುವಾದಿಸುವ ಕಾರ್ಯವನ್ನು ವಹಿಸಿಕೊಡಬೇಕು. ವಿಶೇಷ ಸಂದರ್ಭದಲ್ಲಿ ಒಂದು ಪುಸ್ತಕವನ್ನು ಇಬ್ಬರು ಮೂವರು ಅನುವಾದಕರಿಗೆ ವಹಿಸಿಕೊಡಬಹುದು.

(ಆ) ಅನುವಾದದಲ್ಲಿ ಏಕರೂಪತೆ ಇರಬೇಕು. ಮಧ್ಯದಲ್ಲಿ ವಿಚ್ಛಿನ್ನತೆ ಕಾಣಬಾರದು. ಕಥೆಯಂತೆ ಓದಿಸಿಕೊಂಡು ಹೋಗಬೇಕು.

(ಇ) ಅನುವಾದವು ಆಧುನಿಕರಿಗೆ ಪ್ರಿಯವಾಗುವ ಹೊಸಗನ್ನಡ ಗದ್ಯದಲ್ಲಿ ಇರಬೇಕು.

(ಈ) ಭಾಷೆಯು ಸರಳವಾಗಿಯೂ ಶುದ್ಧವಾಗಿಯೂ ಇರಬೇಕು. ಅನುವಾದವು ಮೂಲದಿಂದ ದೂರ ಹೋಗಬಾರದು ಮತ್ತು ಮೂಲವನ್ನು ಬಿಡಲೂಬಾರದು.

(ಉ) ಇದು ಪ್ರಾಚೀನ ಕಾವ್ಯಗಳ ಅನುವಾದವಾದದ್ದರಿಂದ ವಿಷಯದ ಗಂಭೀರತೆ ಪವಿತ್ರತೆಗಳಿಗೆ ಅನುಗುಣವಾಗಿ ಭಾಷೆಯು ಲಲಿತಗಂಭೀರವಾಗಿ ಇರಬೇಕು.

(ಊ) ಪ್ರತಿಯೊಬ್ಬ ಅನುವಾದಕನೂ ತಾನು ಅನುವಾದಿಸಿದ ಗ್ರಂಥಕ್ಕೆ ಒಂದು ಉಪೋದ್ಘಾತ, ಶಬ್ದಾರ್ಥಕೋಶ, ಅನುಬಂಧಗಳನ್ನು ತಯಾರಿಸಿ ಕೊಡಬೇಕು. ಉಪೋದ್ಘಾತದಲ್ಲಿ ಪ್ರಸ್ತುತ ಕವಿಯ ದೇಶಕಾಲಾದಿ ಪರಿಚಯ, ಪ್ರಸ್ತುತ ಕಾವ್ಯದ ವಿಮರ್ಶೆ ಮುಂತಾದವು ಸಂಕ್ಷೇಪವಾಗಿ ಇರಬೇಕು. ಕಾವ್ಯದಲ್ಲಿ ಬಂದಿರುವ ನ್ಯಾಯಗಳು, ಗಾದೆಗಳು, ಪೂರ್ವಕಥೆಗಳು ಮುಂತಾದುವುಗಳ ವಿವರಣೆ ಅನುಬಂಧದಲ್ಲಿ ಇರಬೇಕು, ವಿವರಣೆ ಸಂಕ್ಷಿಪ್ತವಾಗಿದ್ದರೆ ಆಯಾ ಪುಟದ ಅಡಿ ಟಿಪ್ಪಣಿಯಲ್ಲಿ ಬರಬಹುದು.

(ಋ) ಅನುವಾದಕನು ಮೂಲ ಪರಿಷ್ಕೃತ ಪಾಠವನ್ನೂ ಅದರ ಕೆಳಗಡೆ ಅನುವಾದವನ್ನೂ ಕೊಡಬೇಕು.

(ೠ) ಉಪೋದ್ಘಾತದಲ್ಲಿ ಅನುವಾದಕನು ತನ್ನ ಸ್ವಂತ ವಿಷಯವೇನನ್ನೂ ಪ್ರಸ್ತಾಪಿಸಕೂಡದು.

(ಎ) ಯಾವೊಬ್ಬ ಅನುವಾದಕನ ಅನುವಾದಕಾರ್ಯ ಮಂಡಲಿಗೆ ತೃಪ್ತಿಕರವಾಗಿ ಕಂಡುಬಾರದಿದ್ದಲ್ಲಿ ಅಥವಾ ಅನುವಾದಕ ತಾನಾಗಿ ಒಪ್ಪಿಸಿದ ಕಾರ್ಯಮಾಡಲು ತನ್ನಿಂದ ಸಾಧ್ಯವಿಲ್ಲವೆಂದು ತಿಳಿಸಿದ ಸಂದರ್ಭದಲ್ಲಿ ಆ ಅನುವಾದಕಮಂಡಲಿಯು

ಅಧ್ಯಕ್ಷರು ಪರಿಷತ್ತಿನ ಅಧ್ಯಕ್ಷರಿಗಾಗಲೀ ಅಥವಾ ಪರಿಷತ್ತಿನ ಪ್ರಕಟಣ ಸಮಿತಿ ಪ್ರಧಾನ ಸಂಪಾದಕರಿಗಾಗಲೀ ಆ ವಿಷಯವನ್ನು ತಿಳಿಸಿ ಆ ಕಾರ್ಯಕ್ಕೆ ಬೇರೊಬ್ಬ ವಿದ್ವಾಂಸರನ್ನು ಗೊತ್ತುಮಾಡಬಹುದು. ಹಾಗೆಯೇ ಅನುವಾದಕ ಮತ್ತು ಅನುವಾದಕ ಮಂಡಲಿ ಅಧ್ಯಕ್ಷರ ಮಧ್ಯೆ ಉದ್ಭವಿಸಬಹುದಾದ ಸಮಸ್ಯೆಗಳನ್ನು ಪರಿಷತ್ತಿನ ಅಧ್ಯಕ್ಷರು ಅಥವಾ ಪ್ರಕಟಣ ಸಮಿತಿಯ ಪ್ರಧಾನ ಸಂಪಾದಕರು ಪರಿಹರಿಸತಕ್ಕದ್ದು.

(ಬಿ) ನಿಯಮದಂತೆ ಗ್ರಂಥದ ಅನುವಾದಕಾರ್ಯ ಮುಗಿದ ಕೂಡಲೆ ಮಂಡಲಿಯ ಅಧ್ಯಕ್ಷರು ಅನುವಾದಕರಿಂದ ಪಡೆದು ತಮ್ಮ ಸಲಹೆಯೊಡನೆ ಪರಿಷತ್ತಿನ ಅಧ್ಯಕ್ಷರಿಗೆ ಕಳುಹಿಸಿಕೊಡತಕ್ಕದ್ದು.

8. ಹೀಗೆ ಅನುವಾದಕಾರ್ಯವನ್ನು ವಿದ್ವಾಂಸರಿಂದ ಮಾಡಿಸಿದಾಗ ಅವರಿಗೆ ಯುಕ್ತ ಸಂಭಾವನೆಯನ್ನು ಕೊಡುವ ಬಗ್ಗೆ ಸಭೆ ತೀರ್ಮಾನ ಕೈಗೊಂಡು, ಸಂಭಾವನೆ ಗ್ರಂಥದ ಪರಿಮಾಣದ ಆಧಾರದ ಮೇಲೆ ಸಲ್ಲಬೇಕೆಂದು ನಿರ್ಣಯಿಸಿ, ಗ್ರಂಥದ 400 ಅಕ್ಷರಗಳಿಗೆ ಒಂದು ಘಟಕವೆಂದೂ ಒಂದು ಘಟಕಕ್ಕೆ 2 ರೂ.ನಂತೆ ಸಂಭಾವನೆ ನೀಡಬೇಕೆಂದೂ ನಿಶ್ಚಯಿಸಲಾಯಿತು. ಮತ್ತು ಅನುವಾದಕ ಮಂಡಲಿಯ ಅಧ್ಯಕ್ಷರಿಗೆ ಅನುವಾದಕರಿಗೆ ಸಲ್ಲುವ ಸಂಭಾವನೆಯ ಶೇಕಡ 15ರಷ್ಟನ್ನು ಸಂಭಾವನೆಯಾಗಿ ಕೊಡತಕ್ಕದ್ದೆಂದೂ ಸಭೆ ನಿರ್ಣಯಿಸಿತು. ಮತ್ತು ಅವರು ಮೂಲಪಾಠ ಪರಿಷ್ಕರಣ, ಮುನ್ನುಡಿ, ಉಪೋದ್ಘಾತ, ಶೋಧನೆ, ಮೇಲ್ವಿಚಾರಣೆ ಇತ್ಯಾದಿ ಕಾರ್ಯಗಳನ್ನು ಗಮನದಲ್ಲಿಟ್ಟುಕೊಂಡು ಹಸ್ತಪ್ರತಿಯನ್ನು ಸಿದ್ಧಮಾಡಿ ಪರಿಷತ್ತಿಗೆ ಒಪ್ಪಿಸತಕ್ಕದ್ದೆಂದೂ ತೀರ್ಮಾನಿಸಲಾಯಿತು.

9. ಅನುವಾದಕರಿಗೆ ಅನುವಾದಕಾರ್ಯಕ್ಕಾಗಿ ಹಣ ಸಂದಾಯವಾದಮೇಲೆ ಆ ಗ್ರಂಥದ ಪೂರ್ಣ ಹಕ್ಕು ಪರಿಷತ್ತಿಗೆ ಸೇರುತ್ತದೆ. ಪುಸ್ತಕ ಪ್ರಕಟಣೆಯಾದ ಮೇಲೆ ಅನುವಾದಕರಿಗೆ ಗೌರವಧನ ನೀಡುವ ಪ್ರಶ್ನೆ ಬರುವುದಿಲ್ಲ. ಪುಸ್ತಕ ಅಚ್ಚಾದಮೇಲೆ ಅನುವಾದಕರಿಗೆ ಆ ಗ್ರಂಥದ ಹತ್ತು ಪ್ರತಿಗಳನ್ನೂ, ಮಂಡಲಿಯ ಅಧ್ಯಕ್ಷರಿಗೆ ಎರಡು ಪ್ರತಿಗಳನ್ನೂ ಉಚಿತವಾಗಿ ನೀಡತಕ್ಕದ್ದು.

ಮೇಲ್ಕಂಡ ತೀರ್ಮಾನದಂತೆ ಅನುವಾದಕಾರ್ಯ ಕೈಗೊಳ್ಳಲು ಪರಿಷತ್ತು ಮೈಸೂರಿನಲ್ಲಿ ಮತ್ತು ಬೆಂಗಳೂರಿನಲ್ಲಿ ಅನುವಾದಕ ಮಂಡಲಿಗಳನ್ನು ರಚಿಸಿ ಅವಕ್ಕೆ ಬೇಕಾದ ಸಲಕರಣೆಗಳನ್ನು ಒದಗಿಸಿಕೊಟ್ಟಿದೆ. ಯೋಜನೆಯ ಪ್ರಕಾರ ಅನುವಾದ ಕಾರ್ಯ ಎರಡೂ ಕಡೆಯೂ ನಡೆಯುತ್ತಿದೆ. ವಿದ್ವಾಂಸರು ಅನುವಾದಕ ಮಂಡಲಿ ಅಧ್ಯಕ್ಷರೊಡನೆ ಸಹಕರಿಸುತ್ತಿದ್ದಾರೆ. ಅನುವಾದಕ ಮಂಡಲಿ ಅಧ್ಯಕ್ಷರು ವಿಶೇಷ ಆಸಕ್ತಿ

ವಹಿಸಿ ಅನುವಾದಕಾರ್ಯ ಅಚ್ಚುಕಟ್ಟಾಗಿ ನಡೆಯುವಂತೆ ಶ್ರಮಿಸುತ್ತಿದ್ದಾರೆ. ಪರಿಷತ್ತಿನ ಪ್ರಕಟಣ ಸಮಿತಿಯ ಪ್ರಧಾನ ಸಂಪಾದಕರಾದ ಡಾ॥ ರಂ. ಶ್ರೀ. ಮುಗಳಿಯವರು ಅಷ್ಟೇ ಮುತುವರ್ಜಿಯಿಂದ ಅನುವಾದಕರಿಗೆ, ಮಂಡಲಿ ಅಧ್ಯಕ್ಷರಿಗೆ, ತಮ್ಮ ಸಲಹೆ ಸೂಚನೆಗಳನ್ನು ನೀಡಿ ಸಹಕರಿಸುತ್ತಿದ್ದಾರೆ. ಒಟ್ಟಿನಲ್ಲಿ ಈ ಎಲ್ಲ ವಿದ್ವನ್ಮಣಿಗಳೂ ಇದೊಂದು ಕನ್ನಡ ನುಡಿಯ ಮಹತ್ತರವಾದ ಸೇವೆ ಎಂಬ ಭಾವನೆಯಿಂದ ದುಡಿಯುತ್ತಿದ್ದಾರೆ. ಇವರೆಲ್ಲರಿಗೂ ಪರಿಷತ್ತಿನ ಪರವಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ಈಗ 20 ಗ್ರಂಥಗಳ ಅನುವಾದಕಾರ್ಯ ಮುಗಿದು ಅವು ಅಚ್ಚಿಗೆ ಹೋಗಿವೆ. 1977ನೆಯ ಏಪ್ರಿಲ್ ತಿಂಗಳಿನಲ್ಲಿ ನಡೆಯುವ ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರ ಮಹೋತ್ಸವ ಸಂದರ್ಭದಲ್ಲಿ ಈ ಗ್ರಂಥಗಳು ಹೊರಬಿದ್ದು ಸಾರ್ವಜನಿಕರ ಕೈಗೆ ಸೇರುವಂತೆ ಮಾಡಬೇಕೆಂದು ಪರಿಷತ್ತು ನಿಶ್ಚಯಿಸಿದೆ. ಆ ವೇಳೆಗೆ ಈ ಎಲ್ಲ ಗ್ರಂಥಗಳನ್ನು ಮುದ್ರಿಸಿಕೊಡುವ ಜವಾಬ್ದಾರಿಯನ್ನು ಮೈಸೂರಿನ ಶ್ರೀ ಮೀರಾ ಪ್ರಿಂಟರ್ಸ್ ಮಾಲಿಕರಾದ ಶ್ರೀ ಕೆ. ಪಿ. ಪುಟ್ಟಸ್ವಾಮಿಯವರು ವಹಿಸಿಕೊಂಡಿದ್ದಾರೆ. ಅದಕ್ಕಾಗಿ ಅವರು ಈ ವರ್ಷ ಬೇರೆ ಯಾವ ಮುದ್ರಣ ಕೆಲಸಗಳನ್ನೂ ತೆಗೆದುಕೊಳ್ಳದೆ ಪರಿಷತ್ತಿನ ಈ ಅನುವಾದ ಗ್ರಂಥಗಳ ಮುದ್ರಣಕ್ಕೆ ವಿಶೇಷ ಗಮನಕೊಟ್ಟಿದ್ದಾರೆ. ಇವರಿಗೆ ಪರಿಷತ್ತು ಎಷ್ಟು ಕೃತಜ್ಞತೆಯನ್ನು ಅರ್ಪಿಸಿದರೂ ಸಾಲದು. ಇಂಥ ಗ್ರಂಥಗಳ ಕರಡಚ್ಚು ತಿದ್ದುವ ಕಾರ್ಯ ಎಷ್ಟು ಕಷ್ಟಕರವಾದುದು ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಇದರ ಹೊಣೆಯನ್ನು ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಉಪನಿರ್ದೇಶಕರಾದ ಶ್ರೀ ಆರ್. ಎಲ್. ಅನಂತರಾಮಯ್ಯನವರು ಮತ್ತು ಕನ್ನಡ ಅಧ್ಯಯನ ಸಂಸ್ಥೆಯ ಸಂಪಾದನ ವಿಭಾಗದ ಸಹಾಯಕ ನಿರ್ದೇಶಕರಾದ ಶ್ರೀ ಬಿ. ಎಸ್. ಸಣ್ಣಯ್ಯನವರು ಹೊತ್ತುಕೊಂಡು ತಮಗಾಗುವ ಅಪಾರ ಶ್ರಮವನ್ನು ಲೆಕ್ಕಿಸದೆ ಪ್ರೀತಿಯಿಂದ ದುಡಿಯುತ್ತಿದ್ದಾರೆ. ಈ ಮಹನೀಯರಿಗೆ ಪರಿಷತ್ತು ತುಂಬಾ ಆಭಾರಿಯಾಗಿದೆ.

ಈ ಅನುವಾದ ಗ್ರಂಥಗಳು ಕನ್ನಡ ಜನತೆಗೆ ಸುಲಭ ಬೆಲೆಯಲ್ಲಿ ದೊರೆಯಬೇಕೆಂಬ ಪರಿಷತ್ತಿನ ಆಶೆಯು ಸರ್ಕಾರದ ನೆರವಿನಿಂದ ಕೈಗೂಡಿದೆ ಎಂದು ತಿಳಿಸಲು ಸಂತೋಷಿಸುತ್ತೇನೆ. ವಜ್ರಮಹೋತ್ಸವದ ವೇಳೆಗೆ ಬಿಡುಗಡೆಯಾಗಲಿರುವ 20 ಅನುವಾದ ಗ್ರಂಥಗಳಿಗೆ ತಗಲುವ ವೆಚ್ಚ ಸುಮಾರು 4 ಲಕ್ಷ ರೂಪಾಯಿಗಳೆಂದು ಅಂದಾಜು ಮಾಡಲಾಗಿದೆ. ಈ ಅಂದಾಜಿನಂತೆ ಅನುವಾದಕೃತಿಗಳ ಬೆಲೆಯನ್ನು ಗೊತ್ತುಮಾಡುವುದಾದರೆ ಈಗ ಇಟ್ಟಿರುವ ಬೆಲೆಯ ಮೂರು ಅಥವಾ ನಾಲ್ಕುಪಟ್ಟು ಹೆಚ್ಚಾಗುತ್ತದೆ. ಅನುವಾದಕೃತಿ ಎಷ್ಟೇ ಪುಟವಿರಲಿ 10 ರೂಪಾಯಿಗಳಿಗಿಂತ ಹೆಚ್ಚು ಬೆಲೆ ಇಡಕೂಡದು. ಪುಸ್ತಕದ ಬೆಲೆಯನ್ನು ನೋಡಿಯಾದರೂ ಜನರು ಈ ಗ್ರಂಥಗಳನ್ನು ಕೊಂಡು ಓದಲಿ

ಎನ್ನುವ ದೃಷ್ಟಿಯಿಂದ ಉದಾರ ಧನಸಹಾಯಕ್ಕಾಗಿ ಈ ಯೋಜನೆಯನ್ನು ರಾಜ್ಯ ಸರ್ಕಾರದ ಮುಂದಿಡಲಾಯಿತು. ರಾಜ್ಯಸರ್ಕಾರ ಅನುವಾದಕೃತಿಗಳ ಮಹತ್ವವನ್ನರಿತು, ಪರಿಷತ್ತಿನ ಕೋರಿಕೆಯನ್ನು ಸಹಾನುಭೂತಿಯಿಂದ ಪರಿಶೀಲಿಸಿ ಉಚಿತ ಪ್ರಮಾಣದಲ್ಲಿ ಧನಸಹಾಯ ನೀಡಲು ಒಪ್ಪಿದೆ. ಇದರಿಂದ ಈ ಪುಸ್ತಕಗಳನ್ನು ಸುಲಭ ಬೆಲೆಗೆ ಕೊಡಲು ಸಾಧ್ಯವಾಗಿದೆ. ಈ ಸಹಾಯಕ್ಕಾಗಿ ಕನ್ನಡ ಸಾಹಿತ್ಯ ಪರಿಷತ್ತು ನಾಡಿನ ಜನತೆಯ ಪರವಾಗಿ ರಾಜ್ಯಸರ್ಕಾರಕ್ಕೆ ತನ್ನ ಅಪಾರ ಕೃತಜ್ಞತೆಗಳನ್ನು ಅರ್ಪಿಸುತ್ತದೆ.

ಕನ್ನಡಿಗರು ಈ ಅಮೂಲ್ಯವಾದ ಕೃತಿಗಳನ್ನು ಉತ್ಸಾಹದಿಂದ ಬರಮಾಡಿ ಕೊಂಡು ಇವುಗಳ ಪೂರ್ಣ ಪ್ರಯೋಜನ ಪಡೆಯಬೇಕೆಂದು ಪರಿಷತ್ತು ಬಯಸುತ್ತದೆ.

ದೇಶಹಳ್ಳಿ ಜಿ. ನಾರಾಯಣ
ಅಧ್ಯಕ್ಷ
ಕನ್ನಡ ಸಾಹಿತ್ಯ ಪರಿಷತ್ತು

ಬೆಂಗಳೂರು
ದಿನಾಂಕ : 2–10–76
ಗಾಂಧಿ ಜಯಂತಿ

# ಮುನ್ನುಡಿ

ಕನ್ನಡ ಸಾಹಿತ್ಯದ ಅಭಿವೃದ್ಧಿಗಾಗಿ ಶ್ರಮಿಸುತ್ತಿರುವ ಕನ್ನಡ ಸಾಹಿತ್ಯ ಪರಿಷತ್ತು ಸಾಹಿತ್ಯದ ಸಂರಕ್ಷಣೆಗಾಗಿಯೂ ಕೆಲಸ ಮಾಡಬೇಕಾಗಿದೆ. ಕನ್ನಡ ಸಾಹಿತ್ಯ ಚರಿತ್ರೆಯನ್ನು ಅಭ್ಯಾಸ ಮಾಡಿದವರಿಗೆ ಸಾಹಿತ್ಯದಲ್ಲಿ ವಿವಿಧ ರೀತಿಯ ಆಂದೋಲನಗಳು ನಡೆದಿರುವುದು ಗೋಚರವಾಗದೆ ಇರದು. ಚಂಪೂರೂಪದಲ್ಲಿ ಬರವಣಿಗೆ ಕೆಲವು ಕಾಲ ನಡೆದು ವಚನ, ರಗಳೆ, ಷಟ್ಪದಿ, ಸಾಂಗತ್ಯ ಈ ಮುಂತಾದ ಪ್ರಕಾರಗಳು ತರುವಾಯ ಬಳಕೆಗೆ ಬಂದುದನ್ನು ನಾವು ಖಚಿತವಾಗಿ ಗುರುತಿಸಬಹುದು. ಅಲ್ಲಿಂದ ನವೋದಯದ ಕಾಲದಲ್ಲಿ ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದ ಹೊಸ ಛಂದಸ್ಸು 'ಭಾವಗೀತೆ'ಗಳ ಧಾಟಿಯಲ್ಲಿ ಬಂದದ್ದನ್ನೂ ನಾವು ನೋಡುತ್ತೇವೆ. ಈಚೆಗೆ ಮುಕ್ತ ಛಂದಸ್ಸೂ, 'ನವ್ಯ ಕಾವ್ಯ'ದ ಧಾಟಿಯ ಗದ್ಯ ಛಂದಸ್ಸೂ ಬಳಕೆಯಲ್ಲಿವೆ. ಈ ರೀತಿಯ ಮಾರ್ಪಾಡು ಸಾಹಿತ್ಯರಚನೆಯಲ್ಲಿ ಅನಿವಾರ್ಯ ಮತ್ತು ಅವಶ್ಯ. ಇದು ಸಾಹಿತಿಗಳ, ಕವಿಗಳ ಪ್ರಗತಿಪರ ಮನೋಭಾವವನ್ನೂ ಸಾಮಾಜಿಕ ಪ್ರಜ್ಞೆಯನ್ನೂ ಪ್ರದರ್ಶಿಸುತ್ತದೆ. ಈ ಹೊಸ ದೃಷ್ಟಿ ಮೂಡಿದಂತೆ ಹಳೆಯದರ ಕಡೆ ಜನ ದೃಷ್ಟಿಹರಿಸುವುದು ಅಪರೂಪ. ಛಂದಸ್ಸಿನ ಬಗ್ಗೆ ಈ ಮಾತು ಹೇಗೆ ಅನ್ವಯಿಸುತ್ತದೆಯೋ ಹಾಗೆಯೇ ಕಾವ್ಯವಸ್ತುವಿಗೂ ಅನ್ವಯಿಸುತ್ತದೆ. ದೇವರು, ಪುರಾಣ, ಶ್ಲೀಲ, ಅಶ್ಲೀಲ, ಈ ವಿಷಯಗಳಲ್ಲಿಯೂ ಜನತೆಯ ಕಲ್ಪನೆ ಮತ್ತು ಅವುಗಳಿಗೆ ನೀಡುವ ಮೌಲ್ಯ ವ್ಯತ್ಯಾಸವಾಗುತ್ತಲೇ ಹೋಗುತ್ತದೆ. ಆ ಹಳೆಯ ಸಾಹಿತ್ಯ ಪ್ರಕಾರಗಳು ಮತ್ತು ವಿಷಯಗಳು ಇಂದಿನ ದೃಷ್ಟಿಗೆ ದಾರಿ ಮಾಡಿಕೊಟ್ಟಿವೆ ಎಂಬುದನ್ನು ನಾವು ಮರೆಯಬಾರದು. ಹೊಸ ಸಾಹಿತ್ಯ ಸೃಷ್ಟಿಯ ಮೋಹದಲ್ಲಿ ಹಳೆಯದು ನಮ್ಮ ಕೈಬಿಟ್ಟು ಹೋಗಬಾರದು ಎಂಬುದನ್ನು ನಾವು ಅರಿಯಬೇಕು, ಏಕೆಂದರೆ ಈಚೆಗೆ ಪಂಪಾದಿ ಕವಿಗಳ ಕಾವ್ಯಾಭ್ಯಾಸ ಪದವಿ ಪರೀಕ್ಷೆಗಳಲ್ಲಿ ಬಿಟ್ಟರೆ ಉಳಿದ ಕಡೆ ಕಡಮೆ ಆಗುತ್ತಿದೆ. ಅದನ್ನು ಉಳಿಸಿಕೊಳ್ಳಬೇಕು. ನಮ್ಮ ಜನಕ್ಕೆ ಅದು ಎಟುಕುವಂತಿರಬೇಕು ಎಂಬ ಉದ್ದೇಶದಿಂದ ಪರಿಷತ್ತು ಹಳಗನ್ನಡ ಕಾವ್ಯಗಳನ್ನು ಹೊಸಗನ್ನಡಕ್ಕೆ ಅನುವಾದಿಸಿ ಮೂಲಪಾಠಗಳೊಡನೆ ಸುಲಭ ಬೆಲೆಗೆ ಕೊಡಲು ಯೋಜನೆಯೊಂದನ್ನು ಹಾಕಿಕೊಂಡಿದೆ. ಇದರ ವಿವರ ಪರಿಷತ್ತಿನ ಅಧ್ಯಕ್ಷರ ಪ್ರಸ್ತಾವನೆಯಲ್ಲಿ ವಿವರವಾಗಿ ಬಂದಿದೆ.

ಹಳಗನ್ನಡ ಕಾವ್ಯಗಳನ್ನು ಹಳೆಯ ಮಾದರಿಯಲ್ಲಿ ಓದಿ, ವ್ಯಾಸಂಗ ಮಾಡಿ ಅದರಲ್ಲಿ ಪಾಂಡಿತ್ಯವನ್ನು ಸಂಪಾದಿಸಿಕೊಂಡಿರುವ ಜನ ನಮ್ಮಲ್ಲಿ ಈಗ ಕಡಮೆ. ಆದರೂ ಆ ರೀತಿಯ ಪಾಂಡಿತ್ಯವುಳ್ಳವರನ್ನು ಪರಿಷತ್ತು ಆರಿಸಿ, ಅವರಿಂದ ಈ ಅನುವಾದ ಕಾರ್ಯಗಳನ್ನು ಮಾಡಿಸಿದೆ. ಕಾವ್ಯವನ್ನು ಅಭ್ಯಾಸ ಮಾಡಿದವರು, ಪಾಠ ಹೇಳಿದವರು, ಕವಿಯ ಮನೋಭಾವವನ್ನು ಅರಿತವರು, ಹೊಸಗನ್ನಡವನ್ನು ಬಲ್ಲವರು, ನಮಗೆ ಈ ಅನುವಾದಕಾರ್ಯವನ್ನು ಮಾಡಿಕೊಟ್ಟಿದ್ದಾರೆ. ಅವರೆಲ್ಲರಿಗೆ ಪರಿಷತ್ತು ತನ್ನ ಹೃತ್ಪೂರ್ವಕವಾದ ವಂದನೆಯನ್ನು ಸಲ್ಲಿಸುತ್ತದೆ.

ಧರ್ಮಾಮೃತವನ್ನು ಅನುವಾದ ಮಾಡಿಕೊಟ್ಟವರು ಮೈಸೂರು ವಿಭಾಗದ ಅನುವಾದಕ ಮಂಡಲಿಯ ಅಧ್ಯಕ್ಷರಾದ ಶ್ರೀ ಕೆ. ವೆಂಕಟರಾಮಪ್ಪನವರು, ಅವರ ಪಾಂಡಿತ್ಯದ ಬಗ್ಗೆಯಾಗಲಿ,ಅವರ ಗದ್ಯಶೈಲಿಯ ಬಗ್ಗೆಯಾಗಲಿ ಪ್ರತ್ಯೇಕವಾಗಿ ಹೇಳುವ ಅವಶ್ಯಕತೆಯೇ ಇಲ್ಲ ಎಂದು ನನ್ನ ಭಾವನೆ. ಅವರ ಮಾತಿನಂತೆಯೇ ಅವರ ಶೈಲಿಯೂ ಸರಳ ಮತ್ತು ರಂಜಕ. ಧರ್ಮಾಮೃತ ಅವರ ಪ್ರೀತಿಯ ಕಾವ್ಯ. ಅದನ್ನು ಪದವಿ ತರಗತಿಗಳಿಗೆ ಅವರು ಪಾಠ ಹೇಳಿದ್ದು ಉಂಟು. ಅದಲ್ಲದೆ ಧರ್ಮಾಮೃತ ಕಥೆಗಳ ಗುಚ್ಛ. ಹಳಗನ್ನಡದಲ್ಲಿ ಈ ಕಾವ್ಯ ಪ್ರಸಿದ್ಧವಾಗಿದೆ. ಇದರ ಅನೇಕ ಕಥೆಗಳನ್ನು ಬೇರೆ ಬೇರೆಯವರು ಕನ್ನಡಕ್ಕೆ ಸಂಗ್ರಹ ರೂಪದಲ್ಲಿ ತಂದಿದ್ದಾರೆ. ಮಕ್ಕಳಿಗಾಗಿ ಡಾ. ರಾಜರತ್ನಂ 'ಧರ್ಮಾಮೃತ'ದ ಕೆಲವು ಕಥೆಗಳನ್ನು ತಮ್ಮ ಸುಲಭ ಶೈಲಿಯಲ್ಲಿ ಹೇಳಿದ್ದಾರೆ. ಇಂಥ ಕಥಾಸಾಹಿತ್ಯದ ಮೂಲಕಾವ್ಯವನ್ನು ಶ್ರೀ ವೆಂಕಟರಾಮಪ್ಪನವರು ಮೂಲಸಹಿತ ಅನುವಾದದೊಡನೆ ಪರಿಷತ್ತಿನ ಪ್ರಕಟಣೆಗಾಗಿ ಕೊಟ್ಟಿರುವುದು ಪರಿಷತ್ತಿನ ಮೇಲೆ ಅವರಿಗಿರುವ ಅಭಿಮಾನವನ್ನು ಸೂಚಿಸುತ್ತದೆ. ಅವರ ಭಾಷೆ ಸರಳತರವಾಗಿದೆ. ಅವರ ಶೈಲಿ ಸುಗಮವಾಗಿದೆ. ಅವರಿಗೆ ನಮ್ಮ ಅಭಿನಂದನೆಗಳು.

ಬೆಂಗಳೂರು
2–10–76

ರಂ. ಶ್ರೀ. ಮುಗಳಿ
ಪ್ರಧಾನ ಸಂಪಾದಕ

# ಹೆಚ್ಚಿನ ಮಾತು

ಕನ್ನಡ ಸಾಹಿತ್ಯ ಪರಿಷತ್ತಿನ ಪಂಚವಾರ್ಷಿಕ ಯೋಜನೆಯ ಅಂಗವಾಗಿ, ಹಳಗನ್ನಡ ಕಾವ್ಯಗಳ ಹೊಸಗನ್ನಡ ಅನುವಾದ ಮಾಲೆಯಲ್ಲಿ ಪ್ರಕಟವಾಗುತ್ತಿರುವ ನಯಸೇನ ಕವಿಯ ಈ ಧರ್ಮಾಮೃತಕಾವ್ಯಕ್ಕೆ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವಿಶಿಷ್ಟ ವಾದ ಸ್ಥಾನವಿದೆ. ವಸ್ತುವಿನ ವಿನೂತನತೆ, ಭಾಷೆಯ ಲಾಲಿತ್ಯ ಹಾಗೂ ಸರಳತೆ, ನಿರೂಪಣೆಯಲ್ಲಿನ ಆತ್ಮೀಯತೆ-ನಾಟಕೀಯತೆ, ಉಪಮೆ ಮಾಲೋಪಮೆಗಳಲ್ಲಿ ಜಿನುಗುವ ಜೀವಂತಿಕೆ ಮೊದಲಾದ ಗುಣಗಳಿಂದ ಧರ್ಮಾಮೃತಕಾವ್ಯ ಬಹು ಜನ ಪ್ರಿಯವಾಗಿದೆ. ತನ್ನ ಸಮಕಾಲೀನ ಸಮಾಜವನ್ನು ಬಿಡುಗಣ್ಣಾಗಿ ನಯಸೇನ ಕವಿ ನೋಡಿದ್ದಾನೆಂಬುದಕ್ಕೆ ನೂರಾರು ನಿದರ್ಶನಗಳು ಹೆಕ್ಕಿದಲ್ಲಿ ಸಿಕ್ಕುತ್ತವೆ. ತನ್ನ ಗರಿಗರಿ ಯಾದ ವ್ಯಾವಹಾರಿಕ ಸ್ವರೂಪದ ಭಾಷೆಯ ಜತೆಗೆ ಹೃದ್ಯವಾದ ಕಥೆಗಾರಿಕೆಯಿಂದ ನಯಸೇನ ಓದುಗರ ಹೃದಯವನ್ನು ಬಹು ಬೇಗ ಗೆದ್ದುಬಿಡುತ್ತಾನೆ.

ಕನ್ನಡಿಗರಿಗೆ ಓದಲು ಅಲಭ್ಯವಾಗಿದ್ದ ಈ ಕಾವ್ಯವನ್ನು ನನ್ನ ವಿದ್ಯಾಗುರುಗಳೂ ಕನ್ನಡದ ಗಣ್ಯ ವಿದ್ವಾಂಸರೂ ಆದ ಶ್ರೀ ಕೆ. ವೆಂಕಟರಾಮಪ್ಪನವರು ಸೊಗಸಾಗಿ ಅನು ವಾದಿಸಿ ಉಪಕರಿಸಿದ್ದಾರೆ. ಪರಿಷತ್ತಿನ ಹೆಮ್ಮೆಯ ಪ್ರಕಟನೆಗಳಲ್ಲೊಂದಾದ ಈ ಗ್ರಂಥ ನಾನು ಅಧ್ಯಕ್ಷನಾಗಿ ಅಧಿಕಾರವಹಿಸಿಕೊಂಡ ಮೇಲೆ ಹೊರಬರುತ್ತಿರುವ ಮೊದಲನೆಯ ಕೃತಿಯೂ ಆಗಿರುವುದು ಯೋಗಾಯೋಗ. ಪರಿಷತ್ತಿನ ಅಧ್ಯಕ್ಷರಾಗಿದ್ದ ಶ್ರೀ ಜಿ. ನಾರಾಯಣರು ಹಮ್ಮಿಕೊಂಡಿದ್ದ ಈ ಯೋಜನೆ ತನ್ನ ಆಶಯದಿಂದ ದೂರ ಸರಿಯದೆ ಮಾರ್ಚಿ 79ರ ವರೆಗೂ ಮುಂದುವರಿಯುತ್ತದೆ.

ಹಂಪ. ನಾಗರಾಜಯ್ಯ
ಅಧ್ಯಕ್ಷರು
ಕನ್ನಡ ಸಾಹಿತ್ಯ ಪರಿಷತ್ತು

ಬೆಂಗಳೂರು
2-8-78

# ವಿಷಯಸೂಚಿ

# ಉಪೋದ್ಘಾತ

**ಕವಿಯ ಕಾಲ**

ಧರ್ಮಾಮೃತಕಾರನಾದ ನಯಸೇನ ಕವಿಯು ಅವನೇ ಹೇಳಿಕೊಂಡಿರುವಂತೆ ಶಾಲಿವಾಹನ ಶಕದ ೧೦೩೭ನೇ ಸಂವತ್ಸರದಲ್ಲಿ ಕೃತಿ ರಚನೆ ಮಾಡಿದವನು. ಅದಕ್ಕೆ ೭೮ ಸೇರಿಸಿದರೆ ಕ್ರಿ. ಶ. ೧೧೧೫ ಆಗುತ್ತದೆ. ಆದರೆ ಕವಿಯು ಹೇಳಿರುವ ಇತರ ವಿವರ ಗಳು ಆ ಇಸವಿಗೆ ಹೊಂದುವುದಿಲ್ಲ. ನಂದನ ಸಂವತ್ಸರದ ಭಾದ್ರಪದ ಮಾಸದ ಶುಕ್ಲ ಪಕ್ಷದ ಪಾಡ್ಯಮಿ, ಹಸ್ತ ನಕ್ಷತ್ರದಿಂದ ಕೂಡಿದ ಭಾನುವಾರ ಧರ್ಮಾಮೃತದ ರಚನೆಯ ನಿರ್ವಾಹವಾಯಿತಂತೆ. ಕವಿಯು ಶಕವರ್ಷವನ್ನು ಹೇಳುವಾಗ ಮೊದಲ ಅಂಕೆಯನ್ನು ತಪ್ಪಾಗಿ ಹೇಳಿರಬೇಕೆಂದು ಭಾವಿಸಬೇಕಾಗಿದೆ. ಏಕೆಂದರೆ ಕವಿ ದಿನಶುದ್ಧಿಯ ವಿವರ ಗಳನ್ನು ತಪ್ಪಾಗಿ ಹೇಳುವ ಸಂಭವವಿಲ್ಲ. ಕ್ರಿ. ಶ. ೧೧೧೨ರಲ್ಲಿ ನಂದನ ಸಂವತ್ಸರ ಬಂದಿದ್ದು ಕವಿ ಹೇಳಿರುವ ಮಿಕ್ಕ ವಿವರಗಳೂ ಹೊಂದುವುದರಿಂದ ನಯಸೇನನ ಕಾಲ ಕ್ರಿ. ಶ. ೧೧೧೨ ಎಂದು ನಂಬಬೇಕು.

ಮುಳುಗುಂದದಲ್ಲಿ ಇದ್ದುಕೊಂಡು ಕೃತಿರಚನೆ ಮಾಡಿದೆನೆಂದು ಹೇಳಿರುವುದರಿಂದ ನಯಸೇನನು ಇಂದಿನ ಧಾರವಾಡ ಜಿಲ್ಲೆಗೆ ಸೇರಿದ ಮುಳುಗುಂದದ ನಿವಾಸಿಯೆಂಬುದು ಖಚಿತ. ಕವಿಯು ಧರ್ಮಾಮೃತದಲ್ಲಿ ತನ್ನ ಸ್ವಂತ ವಿಷಯಗಳನ್ನೇನೂ ಹೇಳಿಕೊಂಡಿಲ್ಲ. ಅವನ ತಂದೆ ತಾಯಿಗಳ ಹೆಸರುಗಳನ್ನಾಗಲಿ ಆಶ್ರಯದಾತನಾದ ದೊರೆ, ಮಂತ್ರಿ, ಶ್ರೀಮಂತ ಮೊದಲಾದವರ ಹೆಸರುಗಳನ್ನಾಗಲಿ ಎಲ್ಲಿಯೂ ಪ್ರಸ್ತಾಪಿಸಿಲ್ಲ. ಬಹುಶಃ ಈತನು ರಾಜಾಶ್ರಯವನ್ನು ಬಯಸಿಲಾರ. ಈ ಕೃತಿಯನ್ನು ಬರೆಯುವ ಹೊತ್ತಿಗೆ ನಯಸೇನನ ಜೈನಯತಿಯಾಗಿದ್ದನೆಂಬ ನಂಬಿಕೆ ಮೂಡಿಸುವಂಥ ಕೆಲವು ಅಂಶಗಳು ಧರ್ಮಾಮೃತದಲ್ಲಿ ಕಂಡುಬಾದಿವೆ. ಆಶ್ವಾಸಾಂತಗದ್ಯಗಳಲ್ಲೆಲ್ಲ 'ಶ್ರೀಮನ್ನಯಸೇನ ದೇವವಿರಚಿತ'ವೆಂಬ ಪದಪುಂಜ ಇದೆ. ಇಲ್ಲಿನ 'ದೇವ' ಶಬ್ದ ಯತಿಯೆಂಬ ಅರ್ಥ ಕೊಡುತ್ತದೆ. ಕಾವ್ಯದ ಆರಂಭದಲ್ಲಿ ವಾಗ್ದೇವಿಯನ್ನು ಪ್ರಾರ್ಥಿಸುವಾಗ ಕವಿ "ವಾಕ್ಸುಂದರಿ ಕೂರ್ತುನಿಲ್ಕೆ ನಯಸೇನ ಮುನೀಂದ್ರ ಮುಖಾಬ್ಜಷಂಡದೊಳ್" ಎಂದು ಹೇಳಿಕೊಡಿದ್ದಾನೆ. ತಾನು 'ಸುವ್ರತಾಂಬೋನಿಧಿ', 'ಸಕಲಜಗತ್ಪಾವನಂ,' 'ಪರಮ ಶ್ರೀ ಜೈನಧರ್ಮಾಂಬರ ದಿನಕರನ್' ಎಂದು ಹೊಗಳಿಕೊಂಡಿದ್ದಾನೆ. ತಾನು 'ಉದ್ಯತ್ತಪೋ ಮೂರ್ತಿ'ಯೆಂದು ಹೇಳಿಕೊಂಡಿದ್ದಾನೆ. ಈ ಎಲ್ಲ ಹೇಳಿಕೆಗಳನ್ನೂ ಗಮನಿಸುವಾಗ ನಯಸೇನಬುಧನು ಧರ್ಮಾಮೃತದ ರಚನೆಯ ವೇಳೆಗೇ ಯತಿಯಾಗಿದ್ದನೆಂದು ಅರ್ಥ ವಾಗುತ್ತದೆ.

'ಕರ್ಣಾಟಕ ಭಾಷಾಭೂಷಣ'ದಲ್ಲಿ 'ದೀರ್ಘೋಕ್ತಿರ್ನಯಸೇನಸ್ಯ' ಎಂದು ನಯಸೇನನ ಹೆಸರಿದೆ. ಸಂಬೋಧನಾವಿಭಕ್ತಿಯಲ್ಲಿ ದೀರ್ಘವುಂಟೆಂದು ಹೇಳುವಾಗ ಈ ಪ್ರಸ್ತಾಪ ಬಂದಿದೆ. ಇದರಿಂದ ಧರ್ಮಾಮೃತಕಾರನಾದ ನಯಸೇನನು ಒಂದು ವ್ಯಾಕರಣವನ್ನು ಬರೆದಿದ್ದನೆಂದೂ ಅದು ಸಿಕ್ಕಿಲ್ಲವೆಂದೂ ಒಂದು ಹೇಳಿಕೆಯಿದೆ. ಆದರೆ ಇದು ಸರಿಯಲ್ಲ. ವ್ಯಾಕರಣದ ನಯಸೇನ ಬೇರೆ, ಧರ್ಮಾಮೃತದವನು ಬೇರೆ. ೧೦೫೩ (ಕ್ರಿ.ಶ.)ರ ಒಂದು ಶಾಸನದಲ್ಲಿ ವ್ಯಾಕರಣ ಗ್ರಂಥದ ಪ್ರಸ್ತಾಪವಿದೆ. ಧರ್ಮಾಮೃತದ ಕಾಲ ೧೧೧೨. ಆದ್ದರಿಂದ ಮುಳುಗುಂದದ ಶಾಸನದಲ್ಲಿ ಪ್ರಸ್ತಾಪಿತನಾಗಿರುವ ನರೇಂದ್ರಸೇನರ ಶಿಷ್ಯ 'ಸಮಸ್ತ ಶಬ್ದಶಾಸ್ತ್ರಪಾರಾವಾರಪಾರಂಗತ' ನಯಸೇನನು ಬೇರೆ ಯವನೆಂಬುದು ನಿಸ್ಸಂದೇಹ. ನಾಗವರ್ಮನು ಹೇಳಿರುವ ವೈಯಾಕರಣ ನಯಸೇನನು ೧೦೫೩ರವನು. ಅವನು ೧೧೧೨ರಲ್ಲಿ ಧರ್ಮಾಮೃತಕಾವ್ಯವನ್ನು ಬರೆದಿರುವುದು ಶಕ್ಯವಲ್ಲ.

## ಕವಿಯ ಬಿರುದುಗಳು

ನಯಸೇನ ನೂತ್ನಕವಿತಾವಿಳಾಸ, ದಿಗಂಬರದಾಸ, ಸುಕವಿನಿಕರಪಿಕಮಾಕಂದಂ, ಸಹಜಕವಿ ಜನಪಯಃಪಯೋಧಿ ಹಿಮಕರ, ಸುಕವಿಜನಮನಃಪದ್ಮಿನೀರಾಜಹಂಸಂ, ಎಂಬ ಬಿರುದುಗಳನ್ನು ಬಳಸಿಕೊಂಡಿದ್ದಾನೆ. ಪಂಪನೇ ಮೊದಲಾದ ಹಿಂದಿನ ಕವಿಗಳ ಪದ್ಧತಿಯಂತೆ 'ಸುಕವಿನಿಕರಪಿಕಮಾಕಂದಂ' ಎಂಬ ತನ್ನ ಪ್ರೀತಿಯ ಬಿರುದನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಕಥಾನಾಯಕನಿಗೂ ಹೇರುತ್ತಾನೆ.

## ಪೂರ್ವಕವಿಸ್ತೋತ್ರ

ನಯಸೇನ ತನ್ನ ಕಾವ್ಯದಲ್ಲಿ ಇಷ್ಟದೇವತಾಸ್ತೋತ್ರವಾದಮೇಲೆ ಪೂರ್ವಕವಿಸ್ಮರಣೆಮಾಡುತ್ತ, ಅಸಗ, ಪೊನ್ನ, ಪಂಪ, ಗಜಾಂಕುಶ, ಗುಣವರ್ಮ ಮತ್ತು ರನ್ನ ಎಂಬ ಈ ಆರು ಕನ್ನಡ ಕವಿಗಳನ್ನು ಮಾತ್ರ ಹೊಗಳಿ ಅವರ ಕಾವ್ಯಗುಣಗಳು ತನ್ನ ಕೃತಿಗೂ ಒದಗಿಬರಲೆಂದು ಪ್ರಾರ್ಥಿಸಿಕೊಂಡಿದ್ದಾನೆ. ಬೇರೆ ಯಾವ ಕನ್ನಡ ಕವಿಯನ್ನಾಗಲಿ, ಸಂಸ್ಕೃತ ಕವಿಯನ್ನಾಗಲಿ ಹೆಸರಿಸುವ ಗೋಜಿಗೇ ಹೋಗಿಲ್ಲವೆಂಬುದು ಗಮನಾರ್ಹ.

## ಕನ್ನಡ ಮತ್ತು ಸಂಸ್ಕೃತ

ಪೂರ್ವಕವಿಸ್ಮರಣೆಯಾದಮೇಲೆ ನಯಸೇನನು ಕನ್ನಡ ಸಂಸ್ಕೃತಗಳ ಪರಸ್ಪರ ಸಂಬಂಧ ಹೇಗಿರಬೇಕೆಂದು ಚರ್ಚಿಸಿದ್ದಾನೆ. ಕನ್ನಡಕಾವ್ಯಗಳಲ್ಲಿ ಸಂಸ್ಕೃತದ ಬಳಕೆ ಅತಿಯಾಯಿತೆಂದೂ ಓಚಿತ್ಯವಿಲ್ಲದ, ಅನಗತ್ಯವಾದ, ಅಪ್ರಸಿದ್ಧವಾದ ಸಂಸ್ಕೃತಪದಗಳನ್ನು ಉಪಯೋಗಿಸಿ ಓದುಗರ ಕ್ಲೇಶವನ್ನು ಹೆಚ್ಚಿಸುವುದು ವಿವೇಕವಲ್ಲವೆಂದೂ ನಯಸೇನನ

ಮತ. ಕನ್ನಡದಲ್ಲಿ ಕಾವ್ಯವನ್ನು ರಚಿಸುವ ಸಂಕಲ್ಪಹೂಡಿ ತನ್ನ ಅಭಿಪ್ರಾಯವನ್ನು ಕನ್ನಡ ಮಾತುಗಳಲ್ಲಿ ಸರಿಯಾಗಿ ತಿಳಿಯ ಹೇಳಲು ಸಾಧ್ಯವಾಗದೆ 'ಮಿಸುಕದ ಸಕ್ಕದಮನಿಕ್ಕುವವನುಂ ಕವಿಯೇ ?' ಎಂದು ನಯಸೇನ ಗಟ್ಟಿಸಿ ಕೇಳಿದ್ದಾನೆ. ಸಂಸ್ಕೃತವನ್ನು ಬಳಸುವ ಅಪೇಕ್ಷೆಯಿದ್ದರೆ ಸಂಪೂರ್ಣವಾಗಿ ಆ ಭಾಷೆಯಲ್ಲಿಯೇ ಕೃತಿ ರಚನೆಮಾಡಬಹುದಲ್ಲಾ ! ಅದಕ್ಕೆ ಯಾರ ಅಡ್ಡಿ ಏನಿದೆ ? ಕನ್ನಡ ನಾಡಿನ ಅನೇಕ ವಿದ್ವಾಂಸರು, ವಿದುಷಿಯರು, ಗೀರ್ವಾಣ ಭಾಷೆಯಲ್ಲಿ ಕೃತಿರಚನೆ ಮಾಡಿಲ್ಲವೆ ? ಹಾಗೆ ಮಾಡದೆ ಶುದ್ಧ ಕನ್ನಡದಲ್ಲಿ ಮಧ್ಯೆ ಅರ್ಥವಾಗದ ಸಂಸ್ಕೃತವನ್ನು ತಂದಿಕ್ಕುವುದು ಸರಿಯಲ್ಲ, ಅದು ತುಪ್ಪ ಮತ್ತು ಎಣ್ಣೆಗಳನ್ನು ಬೆರಸುವಂಥ ಕೆಟ್ಟ ಕೆಲಸ. ಕನ್ನಡ ಸಂಸ್ಕೃತಗಳಲ್ಲಿ ಎಣ್ಣೆ ಯಾವುದು, ತುಪ್ಪಯಾವುದು ? ಅದು ಅವರವರ ಅಭಿರುಚಿಗೆ ಬಿಟ್ಟವಿಚಾರ. ಆದರೆ ಅವುಗಳ ಬೆರಕೆ ಸುತರಾಂಸಹ್ಯವಲ್ಲ. ಅವೆರಡೂ ಬೆರೆತಾಗ ತುಪ್ಪದ ರುಚಿಯೂ ಹಾಳು, ಎಣ್ಣೆಯ ಗುಣವೂ ನಷ್ಟ ! ಅದು ದುರ್ಮಿಶ್ರಣ ; ಎಣ್ಣೆಯೂ ಅಲ್ಲ, ತುಪ್ಪವೂ ಅಲ್ಲ. ಹಾಗೆ ಈ ಎರಡು ಭಾಷೆಗಳನ್ನೂ ಕಲಬೆರಕೆಮಾಡಿ ಕನ್ನಡ ಓದುಗರಿಗೆ ತಲೆಬೇನೆ ತರಿಸುವುದು ಸಮಾಜ ವಿರೋಧಿ ಚಟುವಟಿಕೆ ! ಇದು ನಯಸೇನನ ವಾದದ ಧಾಟಿ. ಕನ್ನಡ ಕಾವ್ಯ ಹೇಗಿದ್ದರೆ ಚೆನ್ನ ? ನಯಸೇನ ಹೀಗೆ ಅಭಿಪ್ರಾಯಪಟ್ಟಿದ್ದಾನೆ :

## ದೇಸಿ, ಮಾರ್ಗ

ರಸಭಾವಂ ಗಮಕಂ ಕಾ
ಣಿಸೆನಾಣ್ನುಡಿ ದೇಸಿವೆತ್ತ ಪೊಸನುಡಿ ಮಾರ್ಗಂ
ಕುಸುಱಿಯ ಬಗೆಯಂದಿನಿತಱೊ
ಳಿಸೆಯದಕೃತಿ·ಕೃತಿಯೆ ಬಗದುನೋಱಿಪ್ಪಡೆ ಜಗದೋಳ್

ಕಾವ್ಯ ರಸವತ್ತಾಗಿರಬೇಕೆಂಬುದಷ್ಟೇ ಅಲ್ಲದೆ ಅದರಲ್ಲಿ ನಾಣ್ನುಡಿಗಳಿರಬೇಕು. ದೇಸೀ ! ಪದ್ಧತಿಯ ರಚನೆಯಿರಬೇಕು ! ಅದರ ಜತೆಗೆ ಮಾರ್ಗ ಶೈಲಿಯೂ ಇರಬೇಕು, ಹಾಗಿರದ ಕೃತಿ ಕೃತಿಯೇ ಅಲ್ಲವಂತೆ ! ನಯಸೇನನಿಗೆ ದೇಸಿಯ ಮೇಲೆ ಆದರ. ನಾಣ್ಣುಡಿಗಳನ್ನಂತೂ ಅವನು ತನ್ನ ಕೃತಿಯಲ್ಲಿ ಬೇಕಾದ ಹಾಗೆ ಬಳಸಿಕೊಂಡಿದ್ದಾನೆ. ಸಾಮಾನ್ಯ ವಾಚಕರಿಗೆ ಈ ಗಾದೆಗಳು, ಸಾಮತಿಗಳು ಹಿಡಿಸುವಷ್ಟು, ಕಾವ್ಯದ ಚಮತ್ಕಾರ ವಿಶೇಷಗಳೂ ಅಲಂಕಾರ ವೈಚಿತ್ರ್ಯಗಳೂ ಪ್ರಿಯವಾಗಲಾರವು. ಆದ್ದರಿಂದಲೇ ನಯಸೇನ ಇವುಗಳನ್ನು ಧಾರಾಳವಾಗಿ ಉಪಯೋಗಿಸಿಕೊಂಡಿದ್ದಾನೆ. ಅವನಿಗೆ ಪಂಡಿತರ ಸಂತೋಷ ಬೇಕಾಗಿರಲಿಲ್ಲ ; ರಾಜಮನ್ನಣೆಯೂ ಅಗತ್ಯವಿರಲಿಲ್ಲ. ಸಾಮಾನ್ಯರಿಗೂ ಪ್ರಾಕೃತರಿಗೂ, ನರಕದಲ್ಲಿ ಬಿದ್ದು ಕೋಟಲೆಗೊಳ್ಳುವವರಿಗೂ ತಿಳಿಯುವಂತೆ "ಕನ್ನಡ ದೊಳೊಪ್ಪಂಪೆತ್ತು ಜಾಣ್ಮಾತಿನಿಂ ಪಲವುಂದೇಸಿಯಿಂ" ದೃಷ್ಟಾಂತ ಸಮೇತವಾಗಿ ಹೇಳಬೇಕೆಂಬುದೇ

ಕವಿಯ ಮನೋರಥ. ನಯಸೇನನಿಗೆ ಆ ಮನೋರಥಸಿದ್ಧಿಯಾಗಿದೆ, 'ಧರ್ಮಾಮೃತದಲ್ಲಿ'.

ನಯಸೇನ 'ಸುದ್ದಗನ್ನಡ' 'ದೇಸಿ' 'ಜಾಣ್ಮಾತು' ಇವೆಲ್ಲವುಗಳ ಪರವಾಗಿ ವಾದಿಸಿ ಸಂಸ್ಕೃತ ಕನ್ನಡಗಳ ಬೆರಕೆಯ ಶೈಲಿಯನ್ನು ದಾಕ್ಷಿಣ್ಯವಿಲ್ಲದೆ ಖಂಡಿಸಿದರೂ ಅವನಿಗೆ ಸಂಸ್ಕೃತದ ಮೇಲೆ ದ್ವೇಷವಾಗಲಿ, ಅನಾದರವಾಗಲಿ ಇರಲಿಲ್ಲ. ಸಂಸ್ಕೃತ ಶಬ್ದಗಳನ್ನು ಬಳಸಲೇ ಬಾರದೆಂಬ ಕಟ್ಟುಹಟ ನಯಸೇನನಿಗಿರಲಿಲ್ಲ. ಭಾಷಾಮಿಶ್ರಣವನ್ನು ಖಂಡಿಸುವಾಗಲೇ ಘೃತ, ತೈಲ, ವ್ಯಾವರ್ಣಿಸು, ಸತ್ಕೃತಿ, ಮೊದಲಾದ ಸಂಸ್ಕೃತಪದಗಳನ್ನು ಅವನೇ ಬಳಸಿದ್ದಾನೆ! ಕನ್ನಡಿಗರ ಆಡುಮಾತಿನಲ್ಲಿ ಬಳಕೆಯಾಗಿದ್ದು ಹೆಚ್ಚು ಪ್ರಯತ್ನವಿಲ್ಲದೆ ಸುಲಭವಾಗಿ ಅರ್ಥವಾಗುವ ಸಂಸ್ಕೃತ ಪದಗಳ ಬಳಕೆ ನಯಸೇನನ ದೃಷ್ಟಿಯಲ್ಲಿ ಅಪರಾಧವಲ್ಲ. ಪಾಂಡಿತ್ಯ ಪ್ರದರ್ಶನಕ್ಕೋಸ್ಕರ, ಶ್ಲೇಷ, ಕಾವ್ಯಲಿಂಗ, ಮೊದಲಾದ ಅಲಂಕಾರಗಳನ್ನು ತರುವುದಕ್ಕಾಗಿ ಕ್ಲಿಷ್ಟವಾದ ಅಪೂರ್ವ ಪದಗಳನ್ನು ಬಳಸಬಾರದೆಂಬುದಿಷ್ಟೇ ಕವಿಯ ಆಶಯ. ನಯಸೇನ ನಿರೂಪಿಸಿದ ನೀತಿಯನ್ನು ತನ್ನ ಕೃತಿಯಲ್ಲಿ ಆಚರಣೆಗೆ ತಂದು ಕೃತಕೃತ್ಯನಾಗಿದ್ದಾನೆ.

ಕವಿತೆ ಸಹಜವಾಗಿರಬೇಕು. ಪಾಂಡಿತ್ಯದ ಬಲದಿಂದ ಶ್ರಮಪಟ್ಟು ಜೋಡಿಸಿದ ಮಾತಿನ ಮಾಲೆ ಕಾವ್ಯವೆನಿಸುವುದಿಲ್ಲ.

### ಸಹಜಕವಿತೆ

ಮಟೆಯಿಲ್ಲದೆ ಪೊಯ್ನೀರಿಂ
ಬೆಳೆಗುಮೆ ಧರೆ, ಮಱುಗಿ ಕುದಿದು ಶಾಸ್ತ್ರದಬಲದಿಂ
ದಳಿಪಿಂ ಪೇೞ್ದೊಡಮದುಕೋ
ಮಳಮಕ್ಕುಮೆ ಸಹಜಮಿಲ್ಲದಾತನ ಕಬ್ಬಂ ?

ಸಹಜವಾದ ಕವಿತಾಸ್ಫೂರ್ತಿಯಿಲ್ಲದೆ ಛಂದಶ್ಶಾಸ್ತ್ರ ನಿಘಂಟುಗಳ ಬಲದಿಂದ ತಿಣುಕಿ ಆಸೆಯಿಂದ ಹೇಳಿದ ಮಾತ್ರಕ್ಕೆ ಆ ಕಾವ್ಯ ಶೋಭಿಸುವುದಿಲ್ಲ. ಅದು ಕೋಮಲವೆನಿಸುವುದಿಲ್ಲ. ಅದು ಮಳೆಯಿಲ್ಲದಾಗ ಹೊಯ್ಯುವ ನೀರಿನ ನೆರವಿನಿಂದ ಬೆಳಸಿದ ಪೈರಿನ ಹಾಗೆ; ಸೊಂಪಿರುವುದಿಲ್ಲ. ಉಪ್ಪಿಲ್ಲದೆ ಹೆಚ್ಚಾಗಿ ತುಪ್ಪವನ್ನು ಹಾಕಿಕೊಂಡು ತಿಂದರೆ ಮಾತ್ರ ಊಟ ರುಚಿಯಾಗದು, ಅದು ಅಸಹ್ಯವೇ ಆಗಬಹುದು, ಹಾಗೆಯೇ ಸಹಜ ಶಕ್ತಿಯಿಲ್ಲವನು ಬರೆದ ಕವಿತೆ ನೀರಸ, ಅರುಚಿ!

### ಕುಕವಿಖಂಡನ

ನಯಸೇನ ಉತ್ತಮವಾದ ಸಹಜಕವಿತೆಯ ಗುಣಗಳನ್ನು ನಿರೂಪಿಸಿ, ಉತ್ತಮ ಕೃತಿಗಳನ್ನು ನಾನಾ ಕಾರಣಗಳಿಂದ ಮೆಚ್ಚಿಕೊಳ್ಳಲೊಲ್ಲದ ಕುಕವಿಗಳನ್ನೂ ಗುಣಗ್ರಹಣ

ಪರಾಯಣರಲ್ಲದ ವಿಮರ್ಶಕರನ್ನೂ ತರಾಟೆಗೆ ತೆಗೆದುಕೊಂಡಿದ್ದಾನೆ. ಕಪ್ಪೆ ಸಮುದ್ರ ವನ್ನು ಕಂಡರಿಯದು. ಅದು ಇರುವುದು ಒಂದು ಸಣ್ಣ ಬಾವಿಯಲ್ಲಿ. ಅಂಥ ಅಜ್ಞಾನದ ಜಂತು 'ಮಹಾಸಮುದ್ರ'ವನ್ನು ಹೀಯಾಳಿಸಿದರೆ ಸಾಗರಕ್ಕೆ ಆದರಿಂದ ಅಪಮಾನ ವಾದೀತೆ ? ಹಾಗೆಯೇ ಶ್ರೇಷ್ಠ ಕವಿತೆಯ ಹಿರಿಮೆ ಸ್ವಾರಸ್ಯಗಳನ್ನು ಅನುಭವಿಸಿ ಅರಿಯದ ಮೂರ್ಖರು, ಅರಸಿಕರು, ಕುಕವಿಗಳು ಅವಹೇಳನ ಮಾಡಿದರೆ, ಆಕ್ಷೇಪಿಸಿದರೆ ಕಾವ್ಯಕ್ಕೆ ಕುಂದೆ ? ಅಥವಾ ಶ್ರೇಷ್ಠ ಕವಿತೆಯನ್ನು ಮೆಚ್ಚಿಕೊಂಡ ಪಂಡಿತೋತ್ತಮರಿಗೆ ತಾನೆ ಕುಂದೆ ? ಸುಕವೀಶ್ವರರು ಬೇರೆಯವರ ಕೃತಿಗಳಲ್ಲಿ ದೋಷವನ್ನು ಕಂಡರೆ ಅದನ್ನು ಸ್ನೇಹ ಭಾವದಿಂದ ತಿದ್ದಿ ಸರಿಪಡಿಸುತ್ತಾರೆ. ಆದರೆ ಕುಕವಿಗಳು ಅವುಗಳಲ್ಲಿಲ್ಲದ ದೋಷ ಗಳನ್ನು ಆರೋಪಿಸಿ ಕೃತಿಗಳನ್ನು ಹಳಿಯುತ್ತಾರೆ. ಇಲಿಗಳೂ ಮರಕುಟಿಗನ ಹಕ್ಕಿಗಳೂ ಸದಾ ಕಡಿಯುತ್ತಿರುವುದು ಸ್ವಾಭಾವಿಕ. ಅವು ತಮ್ಮ ನೈಜಗುಣವನ್ನು ಹೇಗೆತಾನೆ ಬಿಟ್ಟಾವು? ನವಿಲಿನ ನೃತ್ಯ ವಿವೇಕಿಯಾದವನಿಗೆ ಸಂತೋಷವನ್ನುಂಟು ಮಾಡುತ್ತದೆಯೇ ಹೊರತು ಅದು ನಾಯಿಗೆ ರುಚಿಸುತ್ತದೆಯೆ? ಹಾಗೆಯೇ ದೋಷೈಕ ದೃಷ್ಟಿಗಳಾದ ಕುಕವಿ ಗಳಿಗೆ ಸತ್ಕವಿಗಳ ಕೃತಿಗಳು ಮೆಚ್ಚಿಗೆಯಾಗವು. ಅವರು ಕೃತಿರಚನೆಗೆ ಅಸಮರ್ಥರು. ಆದರೆ ಇನ್ನೊಬ್ಬರ ಕವಿಕೀರ್ತಿಯನ್ನು ಸಹಿಸಲಾರರು. ಮಡಿಕೆಗಳನ್ನು ಅಚ್ಚುಕಟ್ಟಾಗಿ ಒಂದರ ಮೇಲೊಂದನ್ನು ಜೋಡಿಸಿ ಇಡುವುದಕ್ಕೆ ಸಾಧ್ಯವಾಗದಿದ್ದರೂ ನಾಯಿ ಅವು ಗಳನ್ನು ಕೆಡವಿ ಒಡೆಯಬಲ್ಲುದಲ್ಲವೆ ? ನಯಸೇನನಿಗೆ ಯಾವ ಕವಿವಿಮರ್ಶಕರ ಮೇಲೆ ಏನು 'ಖಾರ' ಇತ್ತೋ ಅದನ್ನೆಲ್ಲ ಇಲ್ಲಿ ತೀರಿಸಿಕೊಂಡಿದ್ದಾರೆ. ಅವರನ್ನು ಇಲಿ, ಮರ ಕುಟಿಗ, ನಾಯಿಗಳಿಗೆ ಹೋಲಿಸಿ ತೃಪ್ತಿಪಟ್ಟಿದ್ದಾನೆ. ಸತ್ಕವಿಯ ಕೃತಿ ಕುಣಿಯುವ ನವಿಲಿನ ಹಾಗೆ ಸೊಗಸಾದದ್ದು. ಅದನ್ನು ಅರ್ಥಮಾಡಿಕೊಳ್ಳದೆ, ಅರ್ಥವಾದರೂ ಸಹನೆಯಿಲ್ಲದೆ ಆಕ್ಷೇಪಿಸುವ ಕುಕವಿಯ ಮನೋಧರ್ಮ ಬೊಗಳುವ ಅಥವಾ ಕಚ್ಚುವ ನಾಯಿಯ ಮನೋಧರ್ಮ.

ನಯಸೇನನು ಕುಕವಿಗಳ ಸ್ವಭಾವವನ್ನು ಹೇಳಿ ಅಂಥವರಿಂದ ಶ್ರೇಷ್ಠರಾದ ಸಹಜ ಸತ್ಕವಿಗಳಿಗೆ ಒದಗಬಹುದಾದ ಬೇಸರ, ಅಸಂತೋಷಗಳನ್ನು ವರ್ಣಿಸಿಯಾದ ಮೇಲೆ ಈಪ್ರಕರಣಕ್ಕೆ ಮುಕ್ತಾಯ ಹಾಡುತ್ತ "ಅಂಜಿ ದುರ್ಜನಪರಮೇಶ್ವರರ್ಗಿದು ಕೈ ಮುಗಿವೆಂ ಬಲಗೊಂಡು ಭಕ್ತಿಯಿಂ" ಎಂದು ಒಂದು ಮಹಾವಾಕ್ಯವನ್ನು ನುಡಿದಿದ್ದಾನೆ. ಸಜ್ಜನರು ಸಿಟ್ಟುಗೊಳ್ಳರೆಂದು ಖಚಿತವಾಗಿದ್ದರೂ, ಅದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ ದಿದ್ದರೂ ಈ ದುರ್ಜನರು ಏಕೆ ಹೀಗೆ ದ್ವೇಷಮಾಡುತ್ತಾರೋ ತಿಳಿಯದೆಂದು ನಯ ಸೇನನ ವ್ಯಥೆ. ಆದರೆ ಕಡು ದುಷ್ಟರಾದವರು ಮುನಿದರೂ ಒಲಿದರೂ ಬಹಳ ಕೆಟ್ಟ ದಂತೆ ! ಆದ್ದರಿಂದ ಈ ಪರಮೇಶ್ವರರಿಗೆ ಪ್ರದಕ್ಷಿಣೆ ಹಾಕಿ ಕೈಮುಗಿಯುವುದೇ ಮೇಲೆಂಬ ತೀರ್ಮಾನಕ್ಕೆ ಬಂದಿದ್ದಾನೆ.

**ಕವಿಯ ವಿನಯ**

ನಯಸೇನ ವಿನೀತ, ಕುಕವಿಗಳನ್ನು ಅವನು ತೀಕ್ಷ್ಣವಾಗಿಯೇ ಆಕ್ಷೇಪಿಸಿದ್ದರೂ ಆತ್ಮಪ್ರಶಂಸೆಗೆ ಹೊರಟಿಲ್ಲ ; ಜಿನವಾಕ್ಯವೆಂಬ ಅಂಬುಧಿಯನ್ನು ಈಜಿ ದಾಟುವೆನೆಂಬ ತನಗಿಂತ ದಡ್ಡರು ಬೇರೆ ಯಾರೂ ಇಲ್ಲವೆಂದು ಹೇಳಿಕೊಂಡು ಸ್ವಾಹಂಕಾರ ಖಂಡನೆ ಮಾಡಿಕೊಂಡಿದ್ದಾನೆ. ಹರಿಗೋಲಿನಲ್ಲಿ ಕುಳಿತು ಸಮುದ್ರವನ್ನು ದಾಟುವ ಸಾಹಸ ದಂತೆಯೇ ಇದೂ ಮೂರ್ಖತನವೆಂದೇ ಅವನ ಎಣಿಕೆ. ಆದರೆ ಈ ಕೃತಿಗೇಕೆ ಕೈಹಾಕಿದ ? ಈ ಪ್ರಶ್ನೆಗೆ ನಯಸೇನನ ಉತ್ತರ ರಮಣೀಯವಾಗಿದೆ, "ಸೂರ್ಯ ಪ್ರಕಾಶವಿದ್ದ ಮೇಲೆ ಇನ್ನು ತಮ್ಮ ಆಧಿಕ್ಯವೇನು", ಎಂದು ನಕ್ಷತ್ರಗಳು ಬೆಳಗದೆ ಇರುವುವೆ ? ಐರಾವತವೇ ಇರುವಾಗ ಬೇರೆ ಆನೆಗಳೇಕೆನ್ನಲಾದೀತೆ ? ಪರಮ ಕವಿಗಳೇ ಸಾಕೆಂದು ಸುಮ್ಮನಿರದೆ ನಾನೂ ಆದರದಿಂದ ಕೃತಿಬರೆಯುತ್ತೇನೆ" ಎಂದಿದ್ದಾನೆ. ನಯಸೇನ 'ಅರ್ಥೀದೋಷಂ ನಪಶ್ಯತಿ' ಎಂಬುದೇ ಅವನ ಸಮರ್ಥನೆ, ತನ್ನ ಪ್ರಯತ್ನಕ್ಕೆ. ಕವಿಕೀರ್ತಿಯನ್ನು ಬಯಸುವವನಿಗೆ ಕೃತಿರಚನೆಯ ಪ್ರಯತ್ನದಲ್ಲಿ ತಪ್ಪು ಕಾಣಿಸು ವುದಿಲ್ಲವಂತೆ.

**ಕಾವ್ಯೋದ್ದೇಶ**

ಜಿನ ಮತದಲ್ಲಿ ಎಷ್ಟು ಸಾರವಿದೆಯೋ ಅದೆಲ್ಲವೂ ತನ್ನ ಕೃತಿಯಲ್ಲಿ ಚೆನ್ನಾಗಿರೂಪು ಗೊಂಡಿದೆಯೆಂದು ನಯಸೇನನ ನಂಬಿಕೆ. ದೊಡ್ಡ ಆನೆಯ ರೂಪ ಸಣ್ಣ ಕನ್ನಡಿ ಯಲ್ಲಿಯೂ ಸ್ಪಷ್ಟವಾಗಿ ಮೂಡುವ ಹಾಗೆ ಮಹತ್ತಮವಾದ ಜಿನಧರ್ಮದತಿರುಳು ತನ್ನ ಕೃತಿಯಲ್ಲಿ ಪ್ರತಿಬಿಂಬಿಸಿದೆಯಂತೆ. ಮರೆತಾದರೂ ಜಿನೇಶ್ವರನ ಹೆಸರನ್ನು ಸ್ಮರಿಸಿದರೆ ಅಂಥವನು ಸ್ವಲ್ಪವೂ ದುಃಖಕ್ಕೆ ಒಳಗಾಗದೆ ಅನಂತವಾದ ಸುಖವನ್ನು ಪಡೆಯುವ ನೆಂಬಾಗ ಸಂತೋಷದಿಂದ ಕಾವ್ಯಗಳಲ್ಲಿ ಭಕ್ತಿಪೂರ್ವಕವಾಗಿ ಜಿನಕಥೆ, ಜಿನವಚನಗಳನ್ನು ವಿಸ್ತಾರವಾಗಿ ಹೇಳುವವರಿಗೆ ಕರ್ಮಬಂಧನದಿಂದ ಬಿಡುಗಡೆಯಾಗಿ ನಿರ್ವೃತಿ ಸೌಖ್ಯ ದೊರೆಯದೆ ಇರುವುದೆ ? ಆದ್ದರಿಂದ ಮಾನಿತಶೀಲನಾದ ನಯಸೇನನು.

"ಅತಿಶಯ ಜಿನೇಂದ್ರವಚನಾ
ಮೃತಮಂ ಸಕಲೈಕಜೀವಹಿತಮಂ ಪುಣ್ಯೋ
ದಿತಮಂ ಭವ್ಯನಿಕಾಯ
ಸ್ತುತಮಂ ನೆಱಪೇಱ್ವೆನಱಿಯೆ ಧರ್ಮಾಮೃತಮಂ"

ಎಂದು ಸಂಕಲ್ಪಿಸಿ ತನ್ನ ಗ್ರಂಥ ರತ್ನದ ರಚನೆಗೆ ಹೊಡಿ ಕೊಂಡಿದ್ದಾನೆ. ಜೈನಧರ್ಮದ ಹಿರಿಮೆಯನ್ನು ನಿರೂಪಿಸಿ ಅದರ ಪ್ರಚಾರ ಮಾಡುವುದೇ ಕವಿಯ ಉದ್ದೇಶ. ಈ ಉದ್ದೇಶ ಸಾಧನೆಗೋಸ್ಕರ ಕವಿ ಜೈನ ಗೃಹಸ್ಥರು ಆಚರಿಸಬೇಕಾದ ಸಮ್ಯಗ್ದರ್ಶನ ಮತ್ತು ಅದರ ಎಂಟು ಅಂಗಗಳಾದ ನಿಶ್ಶಂಕೆ, ನಿಷ್ಕಾಂಕ್ಷೆ, ನಿರ್ವಿಚಿಕಿತ್ಸೆ, ಅಮೂಢ

ದೃಷ್ಟಿತ್ವ, ಉಪಗೂಹನ, ಸ್ಥಿತಿಕರಣ, ವಾತ್ಸಲ್ಯ ಮತ್ತು ಪ್ರಭಾವನೆಗಳನ್ನೂ ಪಂಚಾಣು ವ್ರತಗಳೆಂದು ಹೆಸರಾಗಿರುವ ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹಗಳನ್ನೂ ವರ್ಣಿಸಿ ಹೇಳಿ ಅವುಗಳ ಆಚರಣೆಯಿಂದ ನಿರ್ವೃತಿಯನ್ನು ಪಡೆದು ಪ್ರಸಿದ್ಧರಾದ ಧರ್ಮಿಷ್ಠರ ಕಥೆಗಳನ್ನು ಹೇಳಿದ್ದಾನೆ. ಕಥೆಯ ಮೂಲಕ ಧರ್ಮ ಪ್ರಚಾರ ಪ್ರಾಚೀನ ಕಾಲದಿಂದಲೂ ನಡೆದು ಬಂದ ಪದ್ಧತಿ. ಉಪನಿಷತ್ತುಗಳಲ್ಲಿ ಕಥೆಗಳನ್ನು ಕಾಣಬಹುದು. ಕಥೆ, ಸಾಮತಿ, ದೃಷ್ಟಾಂತ ಮೊದಲಾದುವುಗಳನ್ನು ಬಳಸಿ ಶ್ರೋತೃಗಳಿಗೆ ಆಕರ್ಷಕವಾಗುವಂತೆ ತತ್ತ್ವವನ್ನು ಉಪದೇಶಿಸುವುದು ಹಿತಕರವಾದಪದ್ಧತಿ. ಇದರಿಂದ ಮನರಂಜನೆಯೂ ಆಯಿತು, ಉಪದೇಶವೂ ಆಯಿತು. ನಯಸೇನನು ಇದನ್ನು ಮನವರಿಕೆ ಮಾಡಿಕೊಂಡಿದ್ದಾನೆ. ಅದ್ದರಿಂದಲೇ ಅವನ ಧರ್ಮಾಮೃತ 'ಕಥಾಮೃತ'ವೂ ಆಗಿದೆ. "ಚಕ್ರಾಯುಧವೇ ಮೊದಲಾದ ಹದಿನಾಲ್ಕೂ ಮಹಾರತ್ನಗಳನ್ನು ಧರಿಸಿದವರು ತಪ್ಪದೆ ಶ್ರೇಷ್ಠವಾದ ಚಕ್ರವರ್ತಿ ಪದವಿಯಲ್ಲಿ ನಿಲ್ಲುವ ಹಾಗೆ ಸಮ್ಯಗ್ದರ್ಶನವೇ ಮೊದಲಾದ ಈ ಹದಿನಾಲ್ಕು ಕಥೆಗಳ ಸಮೂಹವನ್ನು ಕೇಳಿ ಚಿತ್ತದಲ್ಲಿ ಧರಿಸಿದವರು ತಪ್ಪದೆ ವಿಶೇಷ ಪದವಿಯಲ್ಲಿ, ಮೋಕ್ಷಪದವಿಯಲ್ಲಿ, ನಿಲ್ಲುವರು." ಎಂದು ನಯಸೇನ ಬುಧನು ತನ್ನ ಕೃತಿಯ ಮಹೋಪಯೋಗವನ್ನು ಹೇಳಿಕೊಂಡಿದ್ದಾನೆ.

## ಧರ್ಮಾಮೃತ

ಧರ್ಮಾಮೃತ ಹದಿನಾಲ್ಕು ಆಶ್ವಾಸಗಳನ್ನೊಳಗೊಂಡ ದೀರ್ಘ ಚಂಪೂ ಕಾವ್ಯ, ಒಂದೊಂದು ಆಶ್ವಾಸವೂ ಚಿತ್ತಾಹ್ಲಾದಕರವಾದ ಒಂದು ಕಥೆಯಿಂದ ಕೂಡಿದೆ. ತತ್ತ್ವ ಪ್ರಚಾರಕ್ಕಾಗಿಯೇ ಬರೆದ ಕಥೆಗಳೆಂದು ಮೊದಲೇ ತಿಳಿದಿದ್ದರೂ ಅವು ಓದುಗರ ಕುತೂಹಲವನ್ನು ಕೆರಳಿಸದೆ ಇರುವುದಿಲ್ಲ. ಕಥೆಯ ಒಂದೊಂದು ಹಂತವೂ ಓದುಗರಿಗೆ ವಿಸ್ಮಯವನ್ನುಂಟುಮಾಡುವಂತಿರುತ್ತದೆ. ಧರ್ಮದಲ್ಲಿ ಶ್ರದ್ಧೆಯಾಗಲಿ, ಗೌರವವಾಗಲಿ ಇಲ್ಲದ ಜನ, ಆಕಸ್ಮಾತ್ತಾಗಿ ಕೇಳಿದ ಧರ್ಮೋಪದೇಶದಿಂದ ಪ್ರಭಾವಿತರಾಗಿ ಮನಃಪರಿವರ್ತನೆಯಾಗಿ ಧರ್ಮದಲ್ಲಿ ವಿಶೇಷ ಶ್ರದ್ಧೆಯನ್ನು ತಾಳಿ ವ್ರತಗಳನ್ನು ಧರಿಸಿ ಉನ್ನತ ಪದವಿಗೇರಿದವರು, ವೈರಾಗ್ಯಾತಿಶಯದಿಂದ ಸಂನ್ಯಸನ ವಿಧಿಯನ್ನು ಧರಿಸಿ ಮುಕ್ತಿಯನ್ನೇ ಪಡೆದವರು, ಇಂಥ ಪುಣ್ಯವಂತರ ಕಥೆಗಳೇ ಈ ಗ್ರಂಥದಲ್ಲಿ ಹೆಚ್ಚಾಗಿ ಬಂದಿವೆ. ಹಾಗೆಯೇ ಗುರೂಪದೇಶಲಭಿಸಿ ಅದರ ಲಾಭ ಪಡೆದು ಕೊಳ್ಳದೆ ಮೂರ್ಖತನದಿಂದ ಅಧೋಗತಿಗೆ ಹೋದವರ ಕಥೆಗಳೂ ಕೆಲವು ಬಂದಿವೆ. 'ಧರ್ಮಾಚರಣೆಯಿಂದ ಶ್ರೇಯಸ್ಸು, ಧರ್ಮ ವಿಮುಖತೆಯಿಂದ ದುರ್ಗತಿ' ಇದನ್ನು ಪ್ರತಿಪಾದಿಸುವುದೇ ಧರ್ಮಾಮೃತದಲ್ಲಿ ನಯಸೇನನು ಅನುಸರಿಸಿರುವ ಮಾರ್ಗ.

ಮೊದಲನೆಯ ಆಶ್ವಾಸ ಜೈನದರ್ಶನದ ಕಥೆ. ಜಿನಧರ್ಮದತತ್ತ್ವಗಳಲ್ಲಿ ಅವಿಚಲವಾದ ನಂಬಿಕೆಯೇ ದರ್ಶನ, ಈ ನಂಬಿಕೆಕುದುರಬೇಕಾದರೆ ಅನುಸರಿಸಬೇಕಾದ ಕ್ರಮ

ಗಳು, ಆಚರಿಸಬೇಕಾದ ವ್ರತಗಳು, ಓದಿತಿಳಿಯಬೇಕಾದ ಜಿನಾಗಮಗಳು ಮೊದಲಾದ ವಿಷಯಗಳನ್ನೆಲ್ಲ ನಯಸೇನ ಈ ಕೃತಿಯಲ್ಲಿ ಆಕರ್ಷಕವಾದ ರೀತಿಯಲ್ಲಿ ನಿರೂಪಿಸಿ ಕೃತಕೃತ್ಯನಾಗಿದ್ದಾನೆ.

ವರಚಕ್ರವರ್ತಿಪದವಿಗ
ಮುರುಗೀರ್ವಾಣಾಧಿಪತಿಯ ಸದ್ವಿಭವಕ್ಕಂ
ಪರಮಾರ್ಹಂತ್ಯ ಪದಕ್ಕಂ
ಪರಮಾರ್ಥಂ ಶುದ್ಧದರ್ಶನಂ ಮೊತ್ತಮೊದಲ್ ೧-೬೮

ಆದ್ದರಿಂದ ಮೊತ್ತಮೊದಲು ದರ್ಶನದಕಥೆ ಬಂದಿದೆ. ಜೈನದರ್ಶನವೇ ಶುದ್ಧದರ್ಶನ, ಯಾರು ಸಂಸಾರದಲ್ಲಿ ಒಂದೇ ಸಮನಾಗಿ ತಿರುಗುತ್ತಿರದೆ ಅಕ್ಷಯ ಸುಖಾವಾಸ ವೆನಿಸುವ ಮೋಕ್ಷಪದದಲ್ಲಿ ನಿಲ್ಲಬಯಸುವರೋ ಅವರು ಧರ್ಮದಲ್ಲಿ ನಿಶ್ಚಲವಾದ ನಂಬಿಕೆಯನ್ನು ಹೊಂದಬೇಕು. ಜೀವನದ ಯಾವ ಸನ್ನಿವೇಶದಲ್ಲಿಯೂ ಈ ಧರ್ಮ ಶ್ರದ್ಧೆ ಕುಗ್ಗಬಾರದು ; ಅದರ ಮಹಿಮೆಯ ವಿಚಾರದಲ್ಲಿ ಅಧೈರ್ಯ ಹುಟ್ಟಬಾರದು.

ನಯಸೇನ ತನ್ನ ಗ್ರಂಥಾರಂಭದಲ್ಲಿಯೇ ಬರುವ ಈ ದರ್ಶನ ಕಥೆಯನ್ನೂ ಉಳಿದ ಹದಿಮೂರು ಕಥೆಗಳನ್ನೂ ಗೌತಮಗಣಧರರು ಮಗಧರಾಜನಾದ ಶ್ರೇಣಿಕನಿಗೆ ಅವನ ಪ್ರಾರ್ಥನೆಯಂತೆ ಹೇಳಿದರೆಂದು ತಿಳಿಸಿದ್ದಾನೆ. ಚರಮ ತೀರ್ಥಂಕರನಾದ ಮಹಾವೀರ ಸ್ವಾಮಿಯು ವಿಪುಳಾಚಲದಲ್ಲಿ ಬಂದು ನಿಂತಾಗ ಅವರ ಜತೆಯಲ್ಲಿಯೇ ಅನೇಕ ಜೈನ ಮುನಿಗಳೂ ಅಲ್ಲಿಗೆ ಬಂದರು. ಇವರೆಲ್ಲ ಬಂದುದನ್ನು ತಿಳಿದು ಶ್ರೇಣಿಕಮಹಾರಾಜ ಪರಿವಾರ ಸಮೇತನಾಗಿ ಅಲ್ಲಿಗೆ ಹೋಗಿ ಪಾದಾಭಿವಂದನೆಮಾಡಿ ಹಲವು ವಿಧದ ಅರ್ಚನೆ ಗಳನ್ನು ಸಲ್ಲಿಸಿ ಸನ್ನಿಧಿಯಲ್ಲಿ ವಿನಯದಿಂದ 'ಶಾಶ್ವತಸೌಖ್ಯದಲ್ಲಿ ನಿಲ್ಲುವ ಉಪಾಯ ವನ್ನು ಅನುಗ್ರಹಮಾಡಿ ಉಪದೇಶಿಸಬೇಕೆಂದು' ಬೇಡಿಕೊಂಡನು. ಆಗ ಜ್ಞಾನರ್ಧಿಸಂಪನ್ನ ರಾದ ಗೌತಮಸ್ವಾಮಿಗಳು ವೀರಜಿನೇಂದ್ರನ ಸನ್ನಿಧಿಯಲ್ಲಿ ಧರ್ಮಾಮೃತವನ್ನು ಹೇಳ ತೊಡಗಿದರು. 'ದೇಹಕ್ಕೆ ಪ್ರಾಣ ಹೇಗೋ ಕಣ್ಣಿಗೆ ಆಲಿ ಹೇಗೋ, ಕೆರೆಗೆ ಕಟ್ಟೆ ಹೇಗೋ, ಹಾಗೆ ಧರ್ಮಕ್ಕೆ ದರ್ಶನವೇ ಮುಖ್ಯಾಧಾರ. ಅದೇ ಧರ್ಮದ ಜೀವ' ಆದ್ದರಿಂದ ಗೌತಮಸ್ವಾಮಿಗಳು ಮೊದಲು ದರ್ಶನವನ್ನು ನಿರೂಪಿಸಿದರು.

## ೧. ದಯಾಮಿತ್ರಸೆಟ್ಟಿ—ವಸುಭೂತಿ

**ಕಥಾಸಾರ**

ಗಿರಿನಗರದ ರಾಜಶ್ರೇಷ್ಠಿಯಾದ ದಯಾಮಿತ್ರಸೆಟ್ಟಿ ಕುಬೇರನಂಥ ಶ್ರೀಮಂತ. ಆದರೆ ಸದಾ ಉದ್ಯೋಗಶೀಲನಾಗಿದ್ದು ದ್ರವ್ಯಾರ್ಜನೆಮಾಡುತ್ತಿರಬೇಕೆಂಬ ನಂಬಿಕೆ ಯವನು. ದ್ರವ್ಯಾರ್ಜನೆಯಿಂದ ಇಹಪರಗಳೆರಡೂಲಭಿಸುವುವೆಂದು ಅವನ ಭಾವನೆ.

ಆದರಂತೆ ಒಂದು ದಿನ ಆವನು ತಕ್ಕಷ್ಟು ಸರಕನ್ನು ತೆಗೆದುಕೊಂಡು ಉಚಿತ ಪರಿವಾರ ದೊಡನೆ ಪ್ರಯಾಣಬೆಳೆಸಲು ಸಿದ್ಧನಾಗಿ ಊರ ಹೊರಗೆ ಬೀಡು ಬಿಟ್ಟನು. ಆಗ ಇನ್ನೂ ಕೆಲವರು ವರ್ತಕರು ಅವನೊಡನೆ ಹೊರಡಲು ಸಿದ್ಧರಾದರು. ದಾರಿಯಲ್ಲಿ ಕ್ಷೇಮ ಸಾಧನೆಗಾಗಿ ಹೀಗೆ ಒಟ್ಟಿಗೆ ಪ್ರಯಾಣಮಾಡುವುದು ವಾಡಿಕೆ. ಆ ಸಮಯದಲ್ಲಿ ವಸುಭೂತಿಯೆಂಬ ಬ್ರಾಹ್ಮಣನು ಗಂಗಾಸ್ನಾನಮಾಡುವ ಹಂಬಲದೀದ ಈ ಸೆಟ್ಟಿಯ ಜತೆಸಿಕ್ಕಿದರೆ ಅನುಕೂಲವೆಂದು ಯೋಚಿಸಿ ಬಂದು ಸೆಟ್ಟಿಯನ್ನು ಕೇಳಿಕೊಳ್ಳಲು 'ಒಳ್ಳೆಯದು, ಬನ್ನಿ' ಎಂದು ಬಿಟ್ಟನು. ಹೀಗೆ ಜೈನಧರ್ಮ ಪರಾಯಣನಾದ ದಯಾ ಮಿತ್ರನಿಗೂ ಬ್ರಾಹ್ಮಣನಾದ ವಸುಭೂತಿಗೂ ಒಟ್ಟಿಗೆ ಪ್ರಯಾಣಮಾಡುವ ಯೋಗ ಏರ್ಪಟ್ಟಿತು.

ಪ್ರತಿದಿನವೂ ಕೊಂಚಹೊತ್ತಾದರೂ ಧರ್ಮಶ್ರವಣಮಾಡಿದಲ್ಲದೆ ಊಟಮಾಡ ಬಾರದೆಂಬುದು ಸೆಟ್ಟಿಯ ವ್ರತ. ಆದರೆ ಮಾರ್ಗದಲ್ಲಿ ಈ ವರ್ತಕರಿಗೆ ಧರ್ಮೋ ಪದೇಶ ಮಾಡಬಲ್ಲ ಯತಿಗಳು ಸಿಕ್ಕುವುದಾದರೂ ಹೇಗೆ? ಆದ್ದರಿಂದ ದಯಾಮಿತ್ರ ಸೆಟ್ಟಿಯೇ ಮೂರು ಘಳಿಗೆ ತಮ್ಮ ಗುಂಪಿನಲ್ಲಿದ್ದ ಶ್ರಾವಕರಿಗೆಲ್ಲ ಜೈನ ಧರ್ಮವನ್ನು ಕುರಿತು ಪ್ರವಚನ ಮಾಡುತ್ತಿದ್ದನು. ಇದನ್ನು ಕಂಡ ವಸುಭೂತಿ ಒಳಗೇ ನಕ್ಕನು. "ಈ ಸೆಟ್ಟಿ ನಾಚಿಕೆ ಗೆಟ್ಟ ದಿಗಂಬರರ ಮಾತನ್ನು ನಂಬಿ ಕೆಟ್ಟು ಹೋಗುತ್ತಿದ್ದಾನೆ" ಎಂದು ಅವನ ಭಾವನೆ. ಅವನು ಸೆಟ್ಟಿಯೊಡನೆ ಮಾತಿಗಿಳಿದು ಜೈನ ಸನ್ಯಾಸಿಗಳ ರೀತಿನೀತಿಗಳನ್ನು ದೂಷಿಸಿದನು. "ಬಟ್ಟೆಯನ್ನು ವರ್ಜಿಸಿ ಸ್ನಾನಮಾಡದೆ ಕೊಳಕರಾಗಿ ಮಲಧಾರಿಗಳೆಂದೇ ಹೆಸರು ಹೊತ್ತು, ಹಲ್ಲುಜ್ಜದೆ, ಕುಲಭ್ರಷ್ಟರಾದವರನ್ನು ನೀನು ಮನ್ನಿಸಬಹುದೆ?" ಎಂದು ವಸುಭೂತಿ ವಾದಿಸಿದನು.

ವಸುಭೂತಿಯ ವಾದಕ್ಕೆ ಸೆಟ್ಟಿ ಸಿಟ್ಟುಗೊಳ್ಳದೆ, ಆಗ ಏನೂ ಹೇಳದೆ ಹತ್ತೆಂಟು ದಿನ ಪ್ರಯಾಣ ಸಾಗಿದ ಮೇಲೆ ಉಪಾಯವಾಗಿ ವಸುಭೂತಿಯನ್ನು ತಿದ್ದುವ ಉದ್ದೇಶ ದಿಂದ ಅವನ ಬ್ರಾಹ್ಮಣಿಕೆಯನ್ನು ಹೊಗಳಿ "ನಮ್ಮ ವಂಶದಲ್ಲಿ ಒಂದು ವ್ರತವಿದೆ, ಪ್ರಯಾಣ ಹೊರಡುವಾಗ ಅದನ್ನು ನಾನು ಮರೆತೆ. ಅದನ್ನು ಬಿಡುವುದು ಶಕ್ಯವಿಲ್ಲ. ಇಲ್ಲಿ ಜಿನಮುನಿಗಳು ಯಾರೂ ಇಲ್ಲ. ಆದರೆ ನನ್ನ ಪುಣ್ಯದಿಂದ ತಮ್ಮಂಥ ಶ್ರೇಷ್ಠ ಬ್ರಾಹ್ಮಣರು ದೊರೆತದ್ದು ಭಾಗ್ಯ, ನೀವು ನಾನು ಹೇಳುವಂತೆ ಆ ವ್ರತವನ್ನು ನನ್ನ ಪರ ವಾಗಿ ಮಾಡಿದರೆ ನೀವು ಕೇಳಿದಷ್ಟು ದಕ್ಷಿಣೆ ಕೊಡುತ್ತೇನೆ" ಎಂದು ಹೇಳಿದನು. ವಸು ಭೂತಿಗೆ ದಕ್ಷಿಣೆಯ ಆಸೆ. ಅದಕ್ಕಿಂತ ಈ ಜಿನಭಕ್ತ ತನ್ನನ್ನು ಮೆಚ್ಚಿ ಹೊಗಳಿ ತನ್ನನ್ನೇ ಈ ವ್ರತಾಚರಣೆಗೆ ಕರೆದನೆಂಬ ಸಂತೋಷ ಬೇರೆ, ಈ ಸಂಭ್ರಮದಲ್ಲಿ ತನಗೆ ಮುಂದೆ ಏನು ಕಾದಿರಬಹುದೆಂದು ಯೋಚಿಸದೆ 'ಮನದಲ್ಲಿಯೇ ಹಾಲುಕುಡಿದು' ಒಪ್ಪಿಕೊಂಡು ಬಿಟ್ಟನು. ಆಮೇಲೆ ವ್ರತ ವಿವರಗಳನ್ನು ಸೆಟ್ಟಿ ಹೇಳಿದನು: "ಆರಂಭದಲ್ಲಿಯೂ ವ್ರತ ಸಮಾಪ್ತಿಯಲ್ಲಿಯೂ ಧೈರ್ಯದಿಂದ ತಲೆಯ ರೋಮಗಳನ್ನೆಲ್ಲ ಕೀಳಿಸಿಕೊಂಡು

ನಮಗೆ ಕೊಡತಕ್ಕದ್ದು. ಆಮೇಲೆ ಗಂಭೀರವಾಗಿ ಒಂದೇ ಕಡೆ ಕುಳಿತು ಅಧ್ಯಯನ ನಿರತನಾಗಿರಬೇಕು. ಎರಡು ತಿಂಗಳ ಕಾಲ ವಸ್ತ್ರಾಲಂಕಾರಗಳಲ್ಲಿ ಉಪೇಕ್ಷೆಯಿಂದಿದ್ದು ನಾವು ಹೇಳುವ ರೀತಿಯಲ್ಲಿ ವ್ರತವನ್ನಾಚರಿಸಬೇಕು." ಈ ವ್ರತ ವಿವರಣೆಯಿಂದ ವಸು ಭೂತಿ ಸ್ವಲ್ಪ ತಳ್ಳಂಕಗೊಂಡರೂ ತನಗೆ ಪರಿಚಿತರಾದ ಬ್ರಾಹ್ಮಣರು ಯಾರೂ ಅಲ್ಲಿರಲಿಲ್ಲವಾದ್ದರಿಂದ ಹೇಗೋ ಸಂತೈಸಿಕೊಂಡು ದಯಾಮಿತ್ರಸೆಟ್ಟಿಯ ಸೂಚನೆಗೆ ಸಮ್ಮತಿಸಿದನು.

ಮಾರನೆಯ ದಿನ ಸೆಟ್ಟಿ ಒಂದು ಎಡೆಯಲ್ಲಿ ತಂಗಿ ಜಿನಸ್ವಾಮಿಗೆ ಸಡಗರದಿಂದ ಅಭಿಷೇಕ ಪೂಜೆಗಳನ್ನು ಮಾಡಿಸಿ ವಸುಭೂತಿಯನ್ನು ಉತ್ತರಾಭಿಮುಖವಾಗಿ ಕೂಡಿಸಿ 'ಲೋಚು' ಮಾಡಿಸಿದನು, ಧಾಂಡಿಗರಿಬ್ಬರು ಪಕ್ಕಗಳಲ್ಲಿ ನಿಂತು ವಸು ಭೂತಿಯ ತಲೆಯ ಕೂದಲುಗಳನ್ನು ಚಿಮುಟದಿಂದ ಕೀಳತೊಡಗಿದರು. ವಸುಭೂತಿಗೆ ಕಳವಳ ಹುಟ್ಟಿತು. ಶುಂಠಿ ತಿಂದ ಕೋತಿಯಂತೆ ಆಯಿತು ಅವನ ಸ್ಥಿತಿ. ಆದರೆ ಮುಂದೆ ಸಿಕ್ಕಲಿರುವ ಹೊನ್ನಿನ ಆಸೆಗೆ ಅವನು ಪ್ರಾಣ ಬಿಗಿ ಹಿಡಿದುಕೊಂಡು ಈ ಯಾತನೆ ಯನ್ನು ಸಹಿಸಿದನು. ಸೆಟ್ಟಿ ಆದಿನವೆಲ್ಲ ಉಪವಾಸವಿದ್ದು, ಮಾರನೆಯ ದಿನ ವಸು ಭೂತಿಗೆ ಪಾಣಿ ಪಾತ್ರದಲ್ಲಿ ಹಾಲು ಸಕ್ಕರೆಗಳನ್ನು ಹಾಕಿ ಕುಡಿಸಿ, ರುಚಿಕರವಾಗಿ ಮಾಡಿದ ಘೃತಪಕ್ವವಾದ ಹಲವು ಮಧುರವಾದ ತಿಂಡಿಗಳನ್ನು ತಿನ್ನಿಸಿದನು. ಆಮೇಲೆ ದಿವ್ಯ ನಾದ ಹೆಸರು ಬೇಳೆಯ ತೊವ್ವೆ, ಗಟ್ಟಿಯಾದ ಮೊಸರು ತಿಳಿದುಪ್ಪಗಳಿಂದ ಅನ್ನ ವನ್ನು ಬಡಿಸಿ ವಸುಭೂತಿಯನ್ನು ತೃಪ್ತಿಪಡಿಸಿದನು. ಅಂಥ ಊಟವನ್ನು ಅವನು ಹುಟ್ಟಿದಂದಿನಿಂದಲೂ ಕಂಡರಲಿಲ್ಲ.

ರಾತ್ರಿ ಒಂದು ಹೊತ್ತಿನಲ್ಲಿ ಎಚ್ಚರಗೊಂಡ ವಸುಭೂತಿಗೆ ಅಸದಳವಾದ ದಾಹ ಹುಟ್ಟಿತು. ಆದರೆ ನೀರು ಕುಡಿಯುವುದಕ್ಕಿಲ್ಲ. ಪುನಃ ಮಾರನೆಯ ದಿನ ಊಟದ ಹೊತ್ತಿನವರೆಗೆ ಅವನು ಏನೂ ತೆಗೆದು ಕೊಳ್ಳಕೂಡದು, ಸ್ನಾನ ಮಾಡಕೂಡದು. ವಸುಭೂತಿಯ ಕಳವಳ ಹೇಳತೀರದು, "ಹೀಗೆ ಇನ್ನೂ ಎರಡು ತಿಂಗಳು ಕಳೆಯ ಬೇಕಲ್ಲಾ ?" ಎಂಬ ಭಯ ಅವನನ್ನು ಪೂರ್ತಿಯಾಗಿ ಕಂಗೆಡಿಸಿತು.

ಸೆಟ್ಟಿ ಕ್ರಮವಾಗಿ ಪ್ರತಿದಿನವೂ ದಿವ್ಯನಾದ ಮಧುರಾತಿಮಧುರವಾದ ಭಕ್ಷ್ಯ ಗಳನ್ನು ತರಿಸಿ ಉಣಬಡಿಸುವುದನ್ನು ನಿಲ್ಲಿಸಲಿಲ್ಲ. ವಸುಭೂತಿ ಆಹಾರದಲ್ಲಿ ನಿರಪೇಕ್ಷೆ ಯನ್ನು ಸೂಚಿಸಿದಾಗ ಸೆಟ್ಟಿ "ಕೀಳರಾದ ಜೈನಯತಿಗಳು ನಾವು ಹೇಳಿದಂತೆ ಮೌನ ದಿಂದ ಊಟ ಮಾಡುವರು. ಕುಲಜರೂ ಭೂಸುರರೂ ಆದ ನಿಮಗಿದೇನು ಕಷ್ಟ ? ಹಿಡಿಯಿರಿ " ಎಂದು ಗದರಿಸಿ ಉಣಲಿಕ್ಕಿದನು. ಒಂದು ಕಡೆ ಸಹಿಸಲಾಗದ ದಾಹ. ಸ್ನಾನವಿಲ್ಲದ್ದರಿಂದ ಮೈಯೆಲ್ಲ ನವೆ. ಆದರೆ ವ್ರತನಿಯಮದಂತೆ ಮೈ ಕೆರೆದುಕೊಳ್ಳ ಕೂಡದು. ರಾತ್ರಿ ನಿದ್ರೆ ಬಾರದು. ಇನ್ನು ಅಧ್ಯಯನವೆಲ್ಲಿ ? ಕಡೆಗೆ ವಸುಭೂತಿ ತಾಳಲಾರದೆ "ಈ ವ್ರತ ನನ್ನಿಂದ ಆಗದು' ಎಂದು ಒಪ್ಪಿಕೊಂಡು ಬಿಟ್ಟನು. ಸೆಟ್ಟಿ

ಗಹಗಹಿಸಿ ನಕ್ಕು "ಮೂರ್ಖರು ತಮಗಿಷ್ಟವಾದದ್ದೇ ದೊಡ್ಡದೆಂದು ಹೇಳಿಕೊಳ್ಳುವರು. ತಾವು ಬಂದು ಇಲಿ ಹೊಡೆದರೆ ಮಹಾಪರಾಕ್ರಮವೆನ್ನುವರು, ಬೇರೆಯವರು ಒಂದು ಹುಲಿಯನ್ನು ಹಿಡಿದರೆ ಅದನ್ನು ನಿಕೃಷ್ಟವಾಗಿ ಭಾವಿಸುವರು. ಜೈನ ಧರ್ಮ ಏನು ಸುಲಭವೆ ? ಪರೀಷಹಗಳನ್ನು ಸ್ವೈರಣೆಯಿಂದ ತಾಳಿ ಧರ್ಮಾಚರಣೆ ಮಾಡುವ ಜಿನ ಮುನಿಗಳ ಮಹಿಮೆ ಇತರರಿಗೆ ಹೇಗೆ ತಿಳಿಯಬೇಕು ?" ಎಂದು ತನ್ನ ಕೋಪವನ್ನೆಲ್ಲ ಹೊರಗೆಡವಿದನು. ಆಗ ವಸುಭೂತಿ ಸೋತು "ಜಿನಧರ್ಮವೇ ಶ್ರೇಷ್ಠವೆಂಬುದನ್ನು ಈಗ ತಿಳಿದೆ. ನಿಮ್ಮ ಧರ್ಮದ ಸ್ವರೂಪವನ್ನು ನನಗೆ ತಿಳಿಯಹೇಳಬೇಕು" ಎಂದು ಕೇಳಿಕೊಂಡನು.

ಆಗ ದಯಾಮಿತ್ರನು ಸಮ್ಯಕ್ತ್ವದ ಸ್ವರೂಪವನ್ನೂ ಅದರ ಹಿರಿಮೆಯನ್ನೂ ಹೇಳಿದನು. ವಸುಭೂತಿ ಸಮ್ಯಕ್ ದರ್ಶನ ಲಭಿಸಿದ್ದರಿಂದ ದೃಢಚಿತ್ತನಾಗಿ ಸಮಾಧಾನದಿಂದಿದ್ದನು. ಮರುದಿನ ಸೆಟ್ಟಿಯ ಪರಿವಾರ ನಂದ್ಯಾವಲಿಯೆಂಬ ಅಡವಿಯಲ್ಲಿ ಬೇಡರ ಮುತ್ತಿಗೆಗೆ ಸಿಕ್ಕಿತು, ಒಂದು ಬಾಣ ವಸುಭೂತಿಗೆ ತಗುಲಿ ಸಾವು ಸನ್ನಿಹಿತವಾಯಿತು. ಆ ಹೊತ್ತಿನಲ್ಲಿ ಸೆಟ್ಟಿ ವಸುಭೂತಿಗೆ ಪಂಚನಮಸ್ಕಾರಗಳನ್ನು ಉಪದೇಶಿಸಿ ಸನ್ಯಾಸವನ್ನು ಕೊಟ್ಟನು. ವಸುಭೂತಿ 'ಜಿನನೇ ದೈವ' ಎಂದು ಧ್ಯಾನಿಸುತ್ತ ಸತ್ತನು. ಆ ಸಮಾಧಿ ಮರಣದ ಫಲವಾಗಿ ಅವನಿಗೆ ಸೌಧರ್ಮಕಲ್ಪದಲ್ಲಿ ಮಣಿಪ್ರಭಾ ವಿಮಾನದಲ್ಲಿ ಮಣಿಕುಂಡಲನೆಂಬ ಹೆಸರಿನಿಂದ ದೇವ ಜನ್ಮಲಭಿಸಿತು ! ಆ ದೇವಲೋಕದ ಮಹಾವೈಭವವನ್ನು ಕಂಡು ತನಗೆ ಈ ಭಾಗ್ಯವನ್ನುಂಟುಮಾಡಿದ ಜೈನ ದರ್ಶನಕ್ಕೂ ತನಗೆ ಮಾರ್ಗದರ್ಶನ ಮಾಡಿದ ದಯಾಮಿತ್ರ ಸೆಟ್ಟಿಗೂ ವಸುಭೂತಿಯಾಗಿದ್ದ ಮಣಿಕುಂಡಲನು ಬಹಳ ಕೃತಜ್ಞನಾದನು. 'ಸಮ್ಯಕ್ತ್ವಮುಳ್ಳಮನುಜನೆ ದೇವಂ' ಎಂಬ ಭಾವನೆ ಅವನಲ್ಲಿ ದೃಢವಾಗಿ ಬೇರೂರಿಕೊಂಡಿತು. ಜಿನಧರ್ಮವನ್ನು ಅರಿತು ಅದರ ಹಿರಿಮೆಯನ್ನು ಏಕಚಿತ್ತದಿಂದ ನಂಬುವುದೇ ದರ್ಶನ. "ತತ್ವಾರ್ಥ ಶ್ರದ್ಧಾನಂ ಸಮ್ಯಗ್ದರ್ಶನಂ." ಅವನ ಮರಣ ಸಮಯದಲ್ಲಿ ಜಿನತತ್ವದ ಮೇಲೆ ಅನೂನವಾದ ಶ್ರದ್ಧೆ (ನಂಬಿಕೆ) ಇದ್ದುದರಿಂದ ವಸುಭೂತಿಗೆ ಕೂಡಲೆ ದೇವ ಜನ್ಮ ಬಂತು. ಭವಪ್ರತ್ಯಯಜ್ಞಾನ ಹುಟ್ಟಿತು !

"ವಸುಭೂತಿ ಮಣಿ ಕುಂಡಲನಾಗಿ ಒಂದು ಸಾಗರೋಪಮಕಾಲ ದೇವಲೋಕದ ಸುಖವನ್ನು ಅನುಭವಿಸಿ ಮತ್ತೆ ಶ್ರೇಣಿಕ ಮಹಾರಾಜನ ಹೆಂಡತಿ ನಂದಶ್ರೀಯ ಗರ್ಭದಲ್ಲಿ ಅಭಯ ಕುಮಾರನೆಂಬ ಹೆಸರಿನಿಂದ ಹುಟ್ಟಿದ್ದಾನೆ" ಎಂದು ಗೌತಮಸ್ವಾಮಿಗಳು ಹೇಳಲು ಶ್ರೇಣಿಕನಿಗೆ ದರ್ಶನದಿಂದ ಆಗುವ ಫಲವನ್ನು ಪ್ರತ್ಯಕ್ಷವಾಗಿ ಕಂಡ ಹಾಗೆ ಆಯಿತು,

## ೨. ಲಲಿತಾಂಗ

ದರ್ಶನದ ಮಹಿಮೆಯನ್ನು ಕೇಳಿದ ಶ್ರೇಣಿಕ ಮಹಾರಾಜನು ನಿಶ್ಶಂಕೆಯ ಕಥೆಯನ್ನು ಹೇಳಬೇಕೆಂದು ಬೇಡಿಕೊಂಡನು. ಅದರಂತೆ ಗೌತಮ ಸ್ವಾಮಿಗಳು ಹೀಗೆ

ಹೇಳತೊಡಗಿದರು. ದರ್ಶನ ಮತ್ತು ನಿಶ್ಶಂಕೆಗಳು ಸದಾ ಜತೆಯಾಗಿರುವಂಥವು. ಯಾವನು ಶಂಕೆಯನ್ನು ಬಿಟ್ಟು ಮಿಥ್ಯಾತ್ವವೆಂಬ ಹೆಬ್ಬುಲಿಯ ಹಿಂಡನ್ನು ಸೋಕದೆ ಒಂದೇ ಮನಸ್ಸಿನಿಂದ ಜಿನಪಾದ ಕಮಲಗಳನ್ನು ನಂಬುವನೋ ಅವನು ಮೋಕ್ಷವನ್ನು ಹೊಂದುತ್ತಾನೆ. ಶಂಕೆಯಿಂದ ಪೀಡಿತನಾದವನಿಗೆ ದರ್ಶನ ಸಿದ್ಧಿಸುವುದಿಲ್ಲ. ಜಿನವಚನ ಫಲಿಸುವುದೆಂಬ ಅಂಶದಲ್ಲಿ ಸ್ವಲ್ಪವೂ ಸಂಶಯ ಮನಸ್ಸಿನಲ್ಲಿರಬಾರದು. ಈ ವಿಚಾರದಲ್ಲಿ ಲಲಿತಾಂಗನೆಂಬ ರಾಜಕುಮಾರನ ಕಥೆ ಶ್ರೇಷ್ಠವಾದ ದೃಷ್ಟಾಂತ.

ಕಾಶ್ಮೀರದ ವಿಜಯಪುರದ ದೊರೆ ಅರಿಮಥನನ ಒಬ್ಬನೇ ಮಗ ಲಲಿತಾಂಗ. ಅವನನ್ನು ತಾಯಿತಂದೆಗಳು ಬಹಳ ಮುದ್ದು ಮಾಡಿದರು. ಅವನ ದುಶ್ಚೇಷ್ಟೆಗಳನ್ನು ಖಂಡಿಸದೆ, ದುರುಕ್ತಿಗಳಿಗಾಗಿ ದಂಡಿಸುವ ಗೋಜಿಗೇ ಹೋಗದೆ ಅವನನ್ನು ಸ್ವೇಚ್ಛೆಯಾಗಿ ಬೆಳೆಯ ಬಿಟ್ಟರು. ಅವನು ಅಂಕುಶವಿಲ್ಲದ ಆನೆಯಂತೆ ಮತ್ತನಾಗಿ ಮೈಮರೆತು ದುಷ್ಟರ ಗುಂಪನ್ನು ಕಟ್ಟಿಕೊಂಡು ಊರಿನ ಜನರನ್ನು ನಾನಾ ವಿಧವಾಗಿ ಪೀಡಿಸ ತೊಡಗಿದನು. ದೊರೆಯ ಮಗನೆಂಬ ಕಾರಣದಿಂದ ಜನ ಅವನನ್ನು ಎದುರಿಸಲು ಅಂಜಿದರು. ಇದರಿಂದ ಅವನ ಪುಂಡಾಟಕ್ಕೆ ಮೇರೆಯಿಲ್ಲದಂತೆ ಆಯಿತು. ಜನರಿಗೆ ಕನಸಿನಲ್ಲಿಯೂ ಲಲಿತಾಂಗನದೇ ಭಯವಾಯಿತು! ಕೊನೆಗೆ ಊರ ಜನರ ಸಹನೆಗೆ ಮೀರಿತು—ಲಲಿತಾಂಗನ ಗೆಳೆಯರ ಅವಾಂತರ. ಆಗ ಜನರೆಲ್ಲ ಒಂದಾಗಿ ಅರಮನೆಗೆ ಹೋಗಿ ಅರಿಮಥನ ಮಹಾರಾಜನನ್ನು ಕಂಡು ತಮ್ಮ ಗೋಳನ್ನು ಹೇಳಿಕೊಂಡರು.

ಅರಿಮಥನ ಪ್ರಜಾವತ್ಸಲ. ಮಗನ ದುಷ್ಟಚರಿತ್ರೆಯನ್ನು ಕೇಳಿ ಅವನು ಬಹಳ ರುಷ್ಟನಾದನು. ತನ್ನಲ್ಲಿಗೆ ಬಂದಿದ್ದ ಜನರಿಗೆಲ್ಲ ಸಮಾಧಾನ ಹೇಳಿ ಕಳುಹಿಸಿ ತಾನು ಮಗನನ್ನು ದಂಡಿಸದೆ ಇಷ್ಟುಕಾಲ ಸುಮ್ಮನಿದ್ದುದು ಅವಿವೇಕವಾಯಿತೆಂದು ಮನ ಗಂಡು ಲಲಿತಾಂಗನನ್ನು ಬರಮಾಡಿಕೊಂಡು "ಈವೊತ್ತಿನಿಂದ ಮುಂದೆ ನೀನು ಊರಿನಲ್ಲಿ ಜನರನ್ನು ಕಾಡಿಸಿದರೆ ನಾನು ಕ್ಷಮಿಸಲಾರೆ; ನೀನು ನನಗೆ ಮಗನೇ ಅಲ್ಲ, ನೀನು ನಿನ್ನ ಪಾಪಕಾರ್ಯವನ್ನು ಬಿಡು; ದುರ್ಜನರ ಸಂಗವನ್ನು ತೊರೆ" ಎಂದು ಖಂಡಿತವಾಗಿ ಮಾತನಾಡಿ ಬುದ್ಧಿ ಹೇಳಿದನು. ಮಗ 'ಹಾಗೆಯೇ ಸರಿ' ಎಂದು ತಂದೆಯ ಮೇಲೆ ಆಣೆಯಿಟ್ಟು ಹೇಳಿದನು. ಆದರೆ ಅವನು ತನ್ನ ದುಷ್ಟ ಚರಿತ್ರೆಯನ್ನೇನೂ ತಗ್ಗಿಸಲಿಲ್ಲ. ನಾಯಿಯ ಬಾಲವನ್ನು ಹೊಸ ತೆಂಗಿನ ಹಗ್ಗದಿಂದ ಕಟ್ಟಿದಷ್ಟೇ ಫಲ ದೊರಕಿತು—ರಾಜನ ಉಪದೇಶಕ್ಕೆ! ಅರಿಮಥನ ರೋಷಗೊಂಡು "ನನ್ನ ದೇಶದಿಂದ ಹೊರಗೆ ಹೊರಟು ಹೋಗು" ಎಂದು ಕಟ್ಟಾಜ್ಞೆಯನ್ನೇ ಮಾಡಿದನು. ತಾಯಿ ಮಮತಾಧಿಕ್ಯ ದಿಂದ ಮಗನನ್ನು ತನ್ನಲ್ಲಿಗೆ ಕರೆಸಿಕೊಂಡು ಅನೇಕ ಹಿತವಚನಗಳನ್ನು ಹೇಳಿದಳು. ಯಾವುದರಿಂದಲೂ ಏನೂ ಪ್ರಯೋಜನವಾಗಲಿಲ್ಲ.

ಕೊನೆಗೆ ಲಲಿತಾಂಗನು ಸ್ವದೇಶತ್ಯಾಗಮಾಡಿ ನೇಪಾಳವನ್ನು ಸೇರಿ ಅಲ್ಲಿನ ಒಂದು ಕಳ್ಳರಕೂಟಕ್ಕೆ ಸೇರಿಕೊಂಡು "ಮೊದಲು ಹುಟ್ಟಿದ ಕಿವಿಗಿಂತ ಆಮೇಲೆ ಬಂದ ಕೋಡು

ಹರಿತ" ಎಂಬ ಹಾಗೆ ಆ ಕಳ್ಳರಿಗೆಲ್ಲ ಅವನೇ ಮುಖಂಡನಾದನು! ಆ ಕಳ್ಳರಿಂದ ಅಂಜನ ಘುಟಿಕೆಯನ್ನು ಪಡೆದನು. ಲಲಿತಾಂಗನು ಎಲ್ಲ ಧರ್ಮ ನೀತಿಗಳನ್ನೂ ಗಾಳಿಗೆ ತೂರಿ ಸ್ವೇಚ್ಛೆಯಾಗಿ ವಿಹರಿಸುತ್ತ ಕಳವು, ಜೂಜು, ಬೇಟೆ, ಹಾದರ, ಮದ್ಯ,—ಯಾವುದನ್ನೂ ಬಿಡದೆ, ಕರಟದ ಕದಿರಂತೆ' ತಿರುಗುತ್ತ. ರಾಜಗೃಹಕ್ಕೆ ಹೋಗಿ ಅಲ್ಲಿನ ಒಬ್ಬ ಸೂಳೆ ಯಾದ ಅನಂಗಸೌಂದರಿಯೆಂಬಳನ್ನು ಮೋಹಿಸಿ ಅವಳಿಗೆ ಯಥೇಷ್ಟವಾಗಿ ಧನಕನಕ ಗಳನ್ನು ಕೊಟ್ಟು ಒಲಿಸಿಕೊಂಡು ಭೋಗಮಗ್ನನಾದನು. ಅವನಿಗೆ ನೇಪಾಳದ ಕಳ್ಳರು ಕೊಟ್ಟಿದ್ದ ಅದೃಶ್ಯ ಘುಟಿಕೆಯ ಸಹಾಯದಿಂದ ಸ್ವೇಚ್ಛೆಯಾಗಿ ಎಲ್ಲೆಲ್ಲಿಯೂ ಅದೃಶ್ಯ ನಾಗಿ ಕಳ್ಳತನ ಮಾಡಿ 'ಅಂಜನ ಚೋರ'ನೆಂಬ ಹೆಸರು ಪಡೆದಿದ್ದನು. ಇವನ ಮೋಹದ ಸೂಳೆ ಒಂದು ದಿನ ಪಟ್ಟದರಾಣಿಯ ಹಾರದಲ್ಲಿ ಹೊಳೆಯುತ್ತಿದ್ದ 'ಜ್ಯೋತಿ ಪ್ರಭ' ಎಂಬ ರತ್ನ ಪದಕ ತನಗೆ ಬೇಕೆಂದು ಹಟ ಹಿಡಿದಳು. ಇವನು ಮೋಹದಿಂದ ತನ್ನ ಕಸಬಿನ ವಿವರಗಳನ್ನೆಲ್ಲ ಅವಳಿಗೆ ಮೊದಲೇ ಹೇಳಿಬಿಟ್ಟಿದ್ದನಾದ್ದರಿಂದ ಅವನು ತಪ್ಪಿಸಿ ಕೊಳ್ಳುವಂತಿರಲಿಲ್ಲ. ಅವಳ ಕಾಟವನ್ನು ತಾಳಲಾರದೆ 'ಅಂಜನ ಚೋರ'ನಾದ ಲಲಿತಾಂಗನು ಕೃಷ್ಣಪಕ್ಷದ ಅಷ್ಟಮಿ ರಾತ್ರಿ ಅಂಜನವನ್ನು ಹಚ್ಚಿಕೊಂಡು ಅದೃಶ್ಯ ನಾಗಿ ಅರಮನೆಯನ್ನು ಹೊಕ್ಕು ಪದಕವನ್ನು ಕದ್ದು ಹೊರಗೆ ಬಂದನು. ಕಳ್ಳ ಅದೃಶ್ಯನಾಗಿದ್ದರೂ ಪದಕದ ಕಾಂತಿ ಎಲ್ಲರಿಗೂ ಕಾಣಿಸುತ್ತಿತ್ತು. ದಂಡಕನೆಂಬ ಅಲ್ಲಿನ ತಳವಾರನು ಲಲಿತಾಂಗನ ಅಂಜನವಿದ್ಯೆಯನ್ನು ಕೆಡಿಸಿ ಬೆನ್ನಟ್ಟಿದನು. ಆಗ ಅಂಜನಚೋರ ಅಂಜಿ ಪದಕವನ್ನು ಎಸೆದು, ವಿದ್ಯಾಧರ ಕರಣಬಲದಿಂದ ಕೋಟೆಯನ್ನು ನೆಗೆದು ದಿಕ್ಕೆಟ್ಟು ಓಡುತ್ತ. ಆ ನಗರದ ಶ್ಮಶಾನವನ್ನು ಹೊಕ್ಕನು. ಅಲ್ಲಿ ಒಂದು ಆಲದ ಮರದ ಕೆಳಗೆ ಭರ್ಜಿ ಶೂಲ, ಚಕ್ರ ಮೊದಲಾದ ಹಲವು ಮೊನೆ ಯಾದ ಆಯುಧಗಳನ್ನು ನೆಟ್ಟು ಆ ಮರದ ಕೊಂಬಿಗೆ ಒಂದು ನೆಲುವನ್ನು ಕಟ್ಟಿ ಆ ಆ ನೆಲುವಿನ ಕಾಲನ್ನು ಕೊಯ್ಯಲು ಧೈರ್ಯವಿಲ್ಲದೆ, ಆ ನಿಲುವಿನ ಮೇಲೆ ಹತ್ತುತ್ತ ಇಳಿಯುತ್ತ ಒಬ್ಬ ಸಾಧಕನು ಪೇಚಾಟದಲ್ಲಿದ್ದನು. ಆಗ ಅಂಜನಚೋರ ಅವನನ್ನು ಹಿಡಿದು "ಇಲ್ಲಿ ಏನು ವಿದ್ಯೆಯನ್ನು ಸಾಧಿಸುತ್ತಿರುವೆ ? ಇದನ್ನು ನಿನಗೆ ಯಾರು ಹೇಳಿ ಕೊಟ್ಟರು ? ಹೇಳು. ಹೇಳದಿದ್ದರೆ ಈಗಲೇ ನಿನ್ನನ್ನು ಕೊಲ್ಲುತ್ತೇನೆ" "ಎಂದು ಅಬ್ಬರಿಸಿ ತನ್ನ ಕತ್ತಿಯನ್ನು ಅವನು ಕತ್ತಿಗೆ ಆನಿಸಿದನು. ಅವನು ಮರಣ ಭಯ ಕ್ಕೊಳಗಾಗಿ ಕೂಡಲೆ, "ನನ್ನ ಹೆಸರು ವರಸೇನ. ಇದು ಗಗನ ಗಾಮಿನೀ ವಿದ್ಯೆಯ ಸಾಧನೆ. ಜಿನದತ್ತಸೆಟ್ಟಿ ಉಪದೇಶಕ" ಎಂದು ಒದರಿಬಿಟ್ಟನು.

ಆಗ ಲಲಿತಾಂಗನು "ಒಂದು ಇರುವೆಯ ಪ್ರಾಣಕ್ಕೂ ಮುಳಿಯದಿರುವ ಜಿನದತ್ತನು ಉಪದೇಶಿಸಿರುವುದರಿಂದ ಇದು ಸರಿಯಾದ ದಾರಿ" ಎಂದು ಒಡನೆಯೇ ನಿಶ್ಚಯಿಸಿ ಆ ತಳವಾರನ ಕೈಯಿಂದ ಸಾಯದೆ ಇಲ್ಲಿ ಸತ್ತರೆ ಚಿಂತೆಯಿಲ್ಲವೆಂದು ನಿಶ್ಚಯಿಸಿ "ಬೇಗ ಮಂತ್ರವನ್ನು ಹೇಳಿಕೊಡು. ಇಲ್ಲದಿದ್ದರೆ ಈಗಲೇ ನಿನ್ನನ್ನು ದಿಗ್ಬಲಿ ಕೊಡುತ್ತೇನೆ"

ಎಂದನು. ಅವನು ಹೇಡಿಯ ಮೇಲೆ ಹಾವು ಬಿದ್ದಂತೆ ಆಗಿ ತಟ್ಟನೆ ತನಗೆ ಜಿನದತ್ತ ಹೇಳಿದ ಹಾಗೆಯೇ ಕ್ರಮವಾಗಿ ಲಲಿತಾಂಗನಿಗೆ ಹೇಳಿ ಕೊಟ್ಟನು. ಲಲಿತಾಂಗ ಜಿನೇಶ್ವರ ಪಾದಗಳನ್ನು ಸ್ಮರಿಸಿ ಗುರುವಾದ ಜಿನದತ್ತ ಸೆಟ್ಟಿಗೆ ಅಲ್ಲಿಂದಲೇ ಕೈಮುಗಿದು ಪಂಚನಮಸ್ಕಾರಗಳನ್ನು ಉಚ್ಚರಿಸುತ್ತ ಆ ನೆಲುವನ್ನು ಏರಿ ಸ್ವಲ್ಪವೂ ಶಂಕೆಪಡದೆ ಸಂತೋಷವಾಗಿ ಆ ನೆಲುವಿನ ನೂರೆಂಟು ಕಾಲುಗಳನ್ನು 'ಚಕ್'ಎಂದು ಕತ್ತರಿಸಿಬಿಟ್ಟನು! ಆಗ ಆ ಆಯುಧಗಳ ತನಕ ಬಂದು, ಅವುಗಳನ್ನು ಸೋಕದೆ ಮೇಲಕ್ಕೆ ನೆಗೆದನು. ಆಗ ಆ ಗಗನಗಾಮಿನೀ ವಿದ್ಯಾದೇವತೆ ಎದುರಿಗೆ ಬಂದು ನಿಂತು ಕೈಮುಗಿದು "ಏನಪ್ಪಣೆ ?" ಎಂದಳು, 'ನನ್ನನ್ನು ಜಿನದತ್ತಸೆಟ್ಟಿಯ ಬಳಿಗೆ ಕರೆದುಕೊಂಡು ಹೋಗು"ಎಂದು ಲಲಿತಾಂಗನ ಅಪ್ಪಣೆ. ಕೂಡಲೆ ಭದ್ರಪಾಲನಂದನದಲ್ಲಿದ್ದ ಜಿನದತ್ತನನ್ನು ತೋರಿಸಿ ಅವನನ್ನು ಕೆಳಕ್ಕೆ ಇಳಿಸಿ ಆ ವಿದ್ಯೆ ಹೊರಟು ಹೋದಳು. ಆಗ ಅಂಜನಚೋರನು ಮೇರು ಪರ್ವತವನ್ನು ನೋಡಿ ಆ ಸುರೇಶ್ವರ ಶೈಲವು ದೇವರು ಮಾಡಿದ ಒಂದು ದೊಡ್ಡ ಮಾನಸ್ತಂಭದಂತೆ ಇದೆಯೆಂದು ಭಾವಿಸಿ ಮೆಚ್ಚಿಕೊಂಡನು.

ಆ ಮೇರುಪರ್ವತದ ತಪ್ಪಲಿನ ನಂದನವನದ ಜಿನಾಲಯಗಳನ್ನೆಲ್ಲ ನೋಡಿ ವಂದಿಸಿ ಜಿನದತ್ತಸೆಟ್ಟಿಯನ್ನು ಸಮೀಪಿಸಿ ಆ ಮಹಾತೇಜಸ್ವಿಗೆ ಲಲಿತಾಂಗನು ನಮಸ್ಕಾರ ಮಾಡಿದನು. ಅಂಜನ ಚೋರನನ್ನು ನೋಡಿ ಜಿನದತ್ತನು ಬೆರಗುಗೊಂಡನು. ಈ ಪಾಪಿಗೆ ಗಗನಗಾಮಿನೀವಿದ್ಯೆ ವಶವಾದ್ದರಿಂದ ಇವನು ಇನ್ನು ದೇಶವನ್ನೆಲ್ಲ ಹಾಳು ಮಾಡುವನೆಂದು ಆತನ ಭೀತಿ. "ಈ ವಿದ್ಯೆ ನಿನಗೆ ಹೇಗೆ ಬಂತು ?" ಎಂಬ ಜಿನದತ್ತನ ಪ್ರಶ್ನೆಗೆ ಲಲಿತಾಂಗನು ತನ್ನ ಕಥೆಯನ್ನೆಲ್ಲ ಹೇಳಿ, "ಜಿನದತ್ತ, ನಿನ್ನ ಮಾತೇ ಜಿನವಾಕ್ಯವೆಂದು ತೀವ್ರವಾಗಿ ನಂಬಿದ್ದರಿಂದ ಆದ ಫಲವನ್ನು ಕಂಡೆ, ಇನ್ನು ನನಗೆ ಜಿನನ ಮತ್ತು ನಿಮ್ಮ ಪಾದಗಳೇ ಶರಣು" ಎಂದು ವಿನಯದಿಂದ ನುಡಿದು ತನ್ನ ಹಿಂದಿನ ದುಶ್ಚರಿತ್ರೆಯನ್ನೆಲ್ಲ ಸ್ಮರಿಸಿಕೊಂಡು ಪಶ್ಚಾತ್ತಾಪದಿಂದ ನೊಂದು ಬಹಳವಾಗಿ ಮರುಗಿ ಕ್ಷಮೆಬೇಡಿ "ನಿಮಗೆ ಈ ಗಗನಗಾಮಿನೀ ವಿದ್ಯೆ ಹೇಗೆ ಬಂತು ?" ಎಂದು ಕುತೂಹಲವನ್ನು ತಡೆಯಲಾರದೆ ಪ್ರಶ್ನೆಮಾಡಿದನು. ಆಗ ಆತನು ಧನ್ವಂತರಿ ಮತ್ತು ವಿಶ್ವಾನುಲೋಮ ಎಂಬ ಇಬ್ಬರು ಗೆಳೆಯರ ಕಥೆಯನ್ನು ಹೇಳಿದನು. ಒಬ್ಬರಾಜಪುತ್ರ, ಎರಡನೆಯವನು ಮಂತ್ರಿ ಪುತ್ರ. ಅವರು ಲಂಪಟರಾಗಿದ್ದು ನಾನಾ ದುರ್ವ್ಯಾಪಾರಗಳನ್ನು ನಡೆಸಿ ಅಕಸ್ಮಾತ್ ಒಂದುದಿನ 'ಸಹಸ್ರಕೂಟ ಮಂಡಿತ' ವೆಂಬ ಒಂದು ಜಿನಾಲಯವನ್ನು ಹೊಕ್ಕು ಅಲ್ಲಿ ನಡೆಯುತ್ತಿದ್ದ ಧರ್ಮಪ್ರವಚನವನ್ನು ಕೇಳಿದರು. ಧನ್ವಂತರಿಯು ಅದರಿಂದ ಪ್ರಭಾವಿತನಾಗಿ (ಭಟ್ಟಾರಕರನ್ನು ಒಂದು ವ್ರತವನ್ನು ಉಪದೇಶಿಸುವಂತೆ) ಕೇಳಿಕೊಂಡನು. ಆ ವ್ರತದಿಂದ ಅವನಿಗೆ ಬಹಳ ಲಾಭವಾಯಿತು. ಹಾಗೆಯೇ ಇನ್ನೂ ಹಲವುವ್ರತಗಳನ್ನು ಕೇಳಿ ನಂಬಿ ಆಚರಿಸಿ ಅತಿಶಯವಾದ ಐಹಿಕ ಫಲ ಪಡೆದು ಜಿನವಚನದಲ್ಲಿ ಗಾಢವಾದ ನಂಬಿಕೆಯನ್ನು ಹೊಂದಿ ಜಿನದೀಕ್ಷೆ ಕೈಕೊಂಡು ತಪಸ್ಸಿಗೆ ಹೊರಟುಹೋದನು. ಮುಂದಿನ

ಜನ್ಮದಲ್ಲಿ ಧನ್ವಂತರಿಯು ಅಚ್ಯುತ ಕಲ್ಪದ ಅಹಮಿಂದ್ರದೇವನಾಗಿಯೂ ವಿಶ್ವಾನುಲೋಮನು ವಾಹನದೇವನಾಗಿಯೂ ಹುಟ್ಟಿದರು. ಆ ಜನ್ಮದಲ್ಲಿ ತಮ್ಮ ಧರ್ಮಲೇಸು, ತಮ್ಮ ಧರ್ಮಲೇಸು ಎಂಬ ಸ್ಪರ್ಧೆ ಆ ಗೆಳೆಯರಲ್ಲಿ ಹುಟ್ಟಿ ಕೊನೆಗೆ ಜಿನಧರ್ಮವೇ ಸರಿಯೆಂದು ಮನಗಂಡು ವಿಶ್ವಾನುಲೋಮನೂ ತನ್ನ ಶಂಕೆಯನ್ನು ಕಳೆದುಕೊಂಡು ಜೈನಧರ್ಮಾವಲಂಬಿಯಾದನು. ಈ ಅಚ್ಯುತೇಂದ್ರ (ಧನ್ವಂತರಿಯಾಗಿದ್ದವನು) ಒಂದು ದಿನ ಜಿನದತ್ತ ಸೆಟ್ಟಿಗೆ ನಮಸ್ಕಾರಮಾಡಿ "ಪರ್ವದಿನಗಳಲ್ಲಿ ಅಕೃತ್ರಿಮ ಚೈತ್ಯಾಲಯಗಳಿಗೆ ಹೋಗಲು ಸಹಾಯವಾಗುತ್ತದೆ" ಎಂದು ಹೇಳಿ ಗಗನಗಾಮಿನೀ ವಿದ್ಯೆಯನ್ನು ಕೊಟ್ಟು ಹೋದ ವೃತ್ತಾಂತವನ್ನು ಜಿನದತ್ತನು ಲಲಿತಾಂಗನಿಗೆ ತಿಳಿಸಿದಾಗ ಅವನಿಗೆ ಮಹತ್ತರವಾದ ಆಶ್ಚರ್ಯವೆನಿಸಿತು. "ದೇವರಾದವರೂ ಈ ಜಿನದತ್ತನಿಗೆ, ಮನುಷ್ಯ ಮಾತ್ರನಿಗೆ ನಮಸ್ಕಾರಮಾಡಿದರೆಂದರೆ ಸಾಮಾನ್ಯವೆ ?" ಎಂದು ಕೊಂಡನು. ಜಿನದತ್ತನು ತನಗೆ ಲಭಿಸಿದ ಗಗನಗಾಮಿನೀ ವಿದ್ಯೆಯನ್ನು ತಮ್ಮ ದೇವಾಲಯದ ಪೂಜಾರಿ ವರಸೇನನಿಗೆ ಕೊಟ್ಟಿದ್ದನು. ಅವನಿಂದಲೇ ಅವನ್ನು ಲಲಿತಾಂಗನು ಪಡೆದುಕೊಂಡಿದ್ದ. ಇದನ್ನೆಲ್ಲ ಕೇಳಿ ಲಲಿತಾಂಗನು ವಿರಕ್ತನಾಗಿ, ದೀಕ್ಷೆಯನ್ನು ಕೈಕೊಂಡು ತಪಸ್ಸುಮಾಡಿ 'ತ್ರಿಲೋಕ ಶಿಖರಿಶೇಖರನೇ' ಆದನು. ನಿಶ್ಶಂಕೆಯಿಂದ ಲಲಿತಾಂಗ ಸಿದ್ಧಿಹೊಂದಿದ ; ಶಂಕಾಪೀಡಿತನಾಗಿದ್ದುದರಿಂದ ವರಸೇನ ಕೆಟ್ಟ. ನಿಶ್ಶಂಕೆಯಿಂದ ಧನ್ವಂತರಿ ಸದ್ಗತಿ ಹೊಂದಿದ. ನಿಶ್ಶಂಕೆಯನ್ನು ಪಡೆದ ಮೇಲೆಯೇ ವಿಶ್ವಾನುಲೋಮನಿಗೂ ಸದ್ಗತಿಯಾಯಿತು.

## ೩. ಅನಂತಮತಿ

ಶ್ರೇಣಿಕ ಮಹಾರಾಜನು ದರ್ಶನ ನಿಶ್ಶಂಕೆಗಳ ಮಹಿಮೆಯನ್ನು ಕೇಳಿ ತಿಳಿದ ಮೇಲೆ ನಿಷ್ಕಾಂಕ್ಷೆಯ ಕಥೆ ಹೇಳಬೇಕೆಂದು ಬೇಡಲು ಗೌತಮ ಗಣಧರಸ್ವಾಮಿಗಳು ಅಂಗದೇಶದ ಚಂಪಾಪುರದ ಪ್ರಿಯದತ್ತನೆಂಬ ವರ್ತಕನ ಪ್ರೀತಿಯಮಗಳಾದ ಅನಂತಮತಿಯ ಕಥೆಯನ್ನು ಹೇಳಿದರು.

ಅನಂತಮತಿ ಬಲು ಚೆಲುವೆ : ತಾಯಿತಂದೆಗಳ ಕಣ್ಮಣಿ. ಅವಳು ತನ್ನ ಜತೆಗಾತಿಯರೊಡನೆ ವಿನೋದದಿಂದ ಆಟವಾಡುತ್ತ, ಹೊತ್ತುಗಳೆಯುತ್ತಿರಲು ಒಂದುದಿನ ಅವಳ ಗೆಳತಿಯರು ಮದುವೆಯ ಆಟ ಆಡುವ ಆಸೆಯಿಂದ ಒಂದು ಬೊಂಬೆಗೆ ನಾನಾ ವಸ್ತ್ರಗಳಿಂದ ಅಲಂಕಾರ ಮಾಡಿ ಅದನ್ನೇ ಮದವಣಿಗನೆಂದು ಹೆಸರಿಟ್ಟು ಅನಂತಮತಿಯ ಪಕ್ಕದಲ್ಲಿಟ್ಟು ಚಪ್ಪಾಳೆ ತಟ್ಟುತ್ತ ಸಂತೋಷದಿಂದ ಕುಣಿದಾಡುತ್ತಿದ್ದರು. ಆ ಸಮಯದಲ್ಲಿ ಪ್ರಿಯದತ್ತ ಸೆಟ್ಟಿ ಬಸದಿಗೆ ಹೊರಟಿದ್ದನು. ಮಕ್ಕಳ ಕೋಲಾಹಲದಿಂದ ಆಕರ್ಷಿತನಾಗಿ ಮಗಳನ್ನು ತನ್ನ ಜತೆಯಲ್ಲಿ ಕರೆದುಕೊಂಡು ಹೋದನು. ಅಲ್ಲಿ ಜಿನದರ್ಶನ ಮಾಡಿ ಭಟ್ಟಾರಕರಿಗೆ ನಮಸ್ಕಾರ ಮಾಡಿ ನಿತ್ಯವ್ರತವನ್ನು ಸ್ವೀಕರಿಸಿ ಧರ್ಮಶ್ರವಣ,

ಮಾಡಿ ಕೊನೆಯಲ್ಲಿ ವಿನೋದದಿಂದ ಭಟ್ಟಾರಕರೊಡನೆ "ಸ್ವಾಮಿ, ನಮ್ಮ ಅನಂತಮತಿ ನಂಟರಿಗೂ ನಮಗೂ ತಿಳಿಯದಂತೆ, ಜಿನಪೂಜೆಯೂ ಇಲ್ಲದೆ ಇವೊತ್ತು ಗೆಳತಿಯರೆದು ರಿನಲ್ಲಿ ಗುಟ್ಟಾಗಿ ಮದುವೆ ಮಾಡಿಕೊಳ್ಳುತ್ತಿದ್ದಳು. ಈ ನಿಮ್ಮ ಶಿಷ್ಯಳಿಗೆ ಬ್ರಹ್ಮ ಚರ್ಯೆ ವ್ರತವನ್ನು ಕೊಡಿ" ಎಂದು ಹೇಳಿದನು. ಆ ಭಟ್ಟಾರಕರಾದರೂ ಅನಂತ ಮತಿಯ ಮನೋಧರ್ಮವನ್ನು ಅರಿಯದೆ ಸೆಟ್ಟಿಯ ಹಾಸ್ಯವನ್ನು ಗ್ರಹಿಸಿ ನಗುತ್ತ "ಇಂದು ಮೊದಲುಗೊಂಡು ನಿನಗೆ ಬ್ರಹ್ಮಚರ್ಯ ವ್ರತವನ್ನು ಕೊಟ್ಟೆವು" ಎಂದು ಹೇಳಿ ಬಿಟ್ಟರು. ಅನಂತಮತಿ ಮಾತ್ರ ಇದನ್ನು ಪರಿಹಾಸವೆಂದು ಭಾವಿಸಲಿಲ್ಲ, ಅವಳು ಭಟ್ಟಾರಕರ ಮಾತು ಕೇಳಿ "ಮಹಾಪ್ರಸಾದ" ಎಂದು ಆ ವ್ರತವನ್ನು ದೃಢ ಸಂಕಲ್ಪದಿಂದ ಸ್ವೀಕರಿಸಿದಳು. "ಬಾಲ್ಯದಲ್ಲಿಯೇ ತನಗೆ ಇಂಥ ವ್ರತ ಲಭಿಸಿದುದಕ್ಕೆ ಹರ್ಷಪಟ್ಟು ಇನ್ನು ಇದನ್ನು ಬಿಟ್ಟರೆ ತನಗೆ ಇಂಥ ಪುಣ್ಯಲಭಿಸುವುದೆ ?" ಎಂದು ಯೋಚಿಸಿ ಬ್ರಹ್ಮಚರ್ಯವನ್ನು ಪರಿಪಾಲಿಸಲು ಕಂಕಣ ಕಟ್ಟಿಕೊಂಡಳು.

ಮನೆಗೆ ಹೋಗುತ್ತಲೂ ಅನಂತಮತಿ ತನಗೆ ಭಟ್ಟಾರಕರು ಕೊಟ್ಟ ವ್ರತದ ವಿಚಾರವನ್ನು ಉತ್ಸಾಹದಿಂದ ಹೇಳಿಕೊಂಡಾಗ ಮನೆಯವರೆಲ್ಲ ನಕ್ಕು ಅವಳಿಗೆ 'ಬ್ರಹ್ಮಚಾರಿ' ಎಂಬ ಅಡ್ಡ ಹೆಸರನ್ನಿಟ್ಟರು. ಅಂದಿನಿಂದ ಅನಂತಮತಿ ತನ್ನ ಹನ್ನೆರ ಡನೆಯ ವರ್ಷದವರೆಗೂ ಬ್ರಹ್ಮಚರ್ಯೆಯ ವ್ರತವನ್ನು ಎಚ್ಚರದಿಂದ ಪರಿಪಾಲಿಸಿ ದಳು. ಒಂದು ದಿನ ಅವರ ಮನೆಯ ಹಿಂದಿನ ಉದ್ಯಾನದಲ್ಲಿ ಅನಂತಮತಿ ತನ್ನ ಗೆಳತಿಯರೊಡನೆ, ಪರಿಚಾರಕಿಯ ನೆರವಿನಿಂದ ಆನಂದವಾಗಿ ಉಯ್ಯಾಲೆಯಾಡುತ್ತಿ ದ್ದಳು. ಆ ಸಮಯದಲ್ಲಿ ಕುಂಡಲಮಂಡಿತನೆಂಬ ವಿದ್ಯಾಧರನು ತನ್ನ ಪತ್ನಿ ಸುಕೇಶಿ ನಿಯ ಸಂಗಡ ಕಾಮವಿಹಾರಕ್ಕಾಗಿ ಆಕಾಶಮಾರ್ಗದಲ್ಲಿ ಬರುತ್ತ ಕೆಳಗೆ ಉಯ್ಯಾಲೆ ಯಾಡುತ್ತಿದ್ದ ಅನಂತಮತಿಯನ್ನು ಕಂಡು ಮೆಚ್ಚಿ ಮೋಹಿಸಿ ಮೈಮರೆತು ವಿರಹ ಪೀಡೆಗೊಳಗಾದನು ! ಸುಕೇಶಿನಿ ಪಕ್ಕದಲ್ಲಿದ್ದುದರಿಂದ ಕೆಳಗೆ ಇಳಿಯಲಾರದೆ ಉಪಾಯ ದಿಂದ ಹೆಂಡತಿಯನ್ನು ವಂಚಿಸಿ ಅರಮನೆಗೆ ಹೋಗಿ ಅವಳನ್ನು ಅಲ್ಲಿ ಬಿಟ್ಟು 'ಮೇರು ಪರ್ವತಕ್ಕೆ ಹೋಗಿ ಬರುವೆ'ನೆಂದು ಸುಳ್ಳು ಹೇಳಿ. ಮತ್ತೆ ಮಹಾವೇಗದಿಂದ ಚಂಪಾ ಪುರಕ್ಕೆ ಹಿಂತಿರುಗಿ ಅನಂತಮತಿಯನ್ನು ವಿಮಾನಕ್ಕೆ ಹತ್ತಿಸಿಕೊಂಡು ಅವಳ ರೂಪಾತಿಶ ಯವನ್ನು ಕೊಂಡಾಡುತ್ತ ಗಗನಕ್ಕೆ ಹಾರಿ ಪ್ರಯಾಣ ತೊಡಗಿದನು. ಅನಂತಮತಿ ಅನಿರೀಕ್ಷಿತದಾದ ಈ ವಿಪತ್ತಿಗೆ ಅಂಜಿದರೂ ಜಿನೇಂದ್ರ ಸ್ಮರಣೆಯಲ್ಲಿ ಮಗ್ನೆಯಾದಳು.

ಇತ್ತ ಆ ಖೇಚರನ ಹೆಂಡತಿ ಇವನು ಹಿಂತಿರುಗದೆ ಏಕೆ ತಡಮಾಡುತ್ತಿರುವನೆಂದು ತಿಳಿಯದೆ ಪರಿಶೋಧನೆ ಮಾಡಬಯಸಿ ಅವಲೋಕಿನೀ ವಿದ್ಯೆಯನ್ನು ಬರಮಾಡಿ ಕೇಳಲು ಆ ವಿದ್ಯಾದೇವತೆ ಖಚರನಿದ್ದಲ್ಲಿಗೆ ಹೋಗಿ ಬಂದು ನಡೆದ ವೃತ್ತಾಂತವನ್ನೆಲ್ಲ ಕ್ರಮವಾಗಿ ಹೇಳಿದಳು. ಆಗ ಸುಕೇಶಿನಿ (ಖೇಚರನ ಹೆಂಡತಿ) ಸಿಟ್ಟಾಗಿ ತುಂಬುರು ಕೊಳ್ಳಿಯಂತೆ ಕಿಡಿಕಾರುತ್ತ ರೌದ್ರರೂಪಧರಿಸಿ ಬಿಚ್ಚುಗತ್ತಿಯನ್ನು ಹಿಡಿದು ಖೇಚರ

ನನ್ನೂ ಅವನ ಪ್ರೇಯಸಿಯನ್ನೂ ಕೊಲ್ಲಲು ಸಂಕಲ್ಪಿಸಿ ಹೊರಟಳು. ಅವಳನ್ನು ಕಂಡು ಅಂಜಿ ಕುಂಡಲಮಂಡಿತನು ಪರ್ಣಲಘು ವಿದ್ಯೆಯ ನೆರವಿನಿಂದ ಅನಂತಮತಿಯನ್ನು ಭೂಮಿಯ ಮೇಲಕ್ಕೆ ಕಳುಹಿಸಿದನು.

ಆ ವಿದ್ಯೆಯ ದೇವತೆ ಅನಂತಮತಿಯನ್ನು ನೆಟ್ಟಗೆ ಭೀಮವನವೆಂದು ಪ್ರಸಿದ್ಧ ವಾಗಿದ್ದ ಒಂದು ದೊಡ್ಡ ಅರಣ್ಯದ ಮಧ್ಯದಲ್ಲಿ ಒಂದು ಮಾವಿನ ತೋಪಿನಲ್ಲಿ ಇಳಿಸಿ ಹೊರಟು ಹೋದಳು. ಅನಂತಮತಿ ಆ ಭಯಂಕರವಾದ ಕಾಡಿನ ನಡುವೆ ಅಸಹಾಯಕ ಳಾಗಿ ಒಬ್ಬಳೇ ಇದ್ದರೂ ಆ ಕಷ್ಟಸಮಯದಲ್ಲಿ ಜಿನವಾಕ್ಯವನ್ನು ಸ್ಮರಿಸಿಕೊಂಡು ಲೋಕದ ಎಲ್ಲ ಭಾಗ್ಯಗಳೂ ಕಾಮನಬಿಲ್ಲಿನಂತೆ ಕ್ಷಣಿಕವೆಂದು ಪುನಸ್ಸಾರ ನಂಬಿ ಜಿನಪಾದ ಧ್ಯಾನ ತತ್ಪರಳಾದಳು ; ಧರ್ಮಭ್ರಷ್ಟರಾಗಿ ನರಕವಾಸಿಗಳಾದವರ ದುಃಖಪರಂಪರೆ ಯನ್ನು ಕುರಿತು ಚಿಂತಿಸಿದಳು. ಆ ದುಃಖಕ್ಕಿಂತ ಈ ವನವಾಸದ ದುಃಖ ದೊಡ್ಡದಲ್ಲ ವೆಂದು ಬಗೆದು 'ಜಿನಪಾದವೇಶರಣು' ಎಂದು ನಿಶ್ಚಯಿಸಿಕೊಂಡು ಮನಸ್ಸಿನಲ್ಲಿ ಸದಾ ಜಿನಪೂಜೆಯನ್ನೇ ನೆನೆಯುತ್ತ ಜಿನಸ್ತೋತ್ರ ಮಾಡುತ್ತ ಇರುವಾಗ ಆ ಭೀಮವನದಲ್ಲಿ ಎಲ್ಲ ಮೃಗಗಳೂ ಪರಸ್ಪರ ವೈರವಿಲ್ಲದೆ ಮೈತ್ರೀ ಭಾವದಲ್ಲಿದ್ದುದನ್ನು ಗಮನಿಸಿದಳು. ಶಂಖಪುರದ ಬೇಡನೊಬ್ಬನು ತನ್ನ ಹೆಂಡತಿಯೊಡನೆ ಹೊಲಕ್ಕೆ ಬರುತ್ತ ಅನಂತ ಮತಿಯನ್ನು ಗಮನಿಸಿ 'ಇವಳು ಯಾರೋ ದೇವತೆ' ಎಂದು ಭಾವಿಸಿ ಹಲವು ಹಣ್ಣು ಹಂಪಲುಗಳನ್ನು ಕಾಣಿಕೆಗೊಟ್ಟು ನಮಸ್ಕಾರಮಾಡಿ, ಹೋಗಿ ತಮ್ಮ ಒಡೆಯನಿಗೆ ವರ್ತ ಮಾನಕೊಟ್ಟನು. ಬೇಡರ ಅರಸನು ಭೀಮವನಕ್ಕೆ ಒಬ್ಬ ದೇವತೆ ಬಂದಿದ್ದಾಳೆಂದು ಕೇಳಿ ತಡಮಾಡದೆ ಹೋಗಿ ಕಂಡನು. ಆದರೆ ಆಕೆ ರೆಪ್ಪೆ ಹೊಡೆಯುತ್ತಿದ್ದುದನ್ನು ಗಮನಿಸಿ ಅವಳು ದೇವತೆಯಲ್ಲವೆಂದು ನಿಶ್ಚಯಿಸಿಕೊಂಡು ಅವಳ ರೂಪಾತಿಶಯವನ್ನು ವಿಶೇಷವಾಗಿ ಮೆಚ್ಚಿಕೊಂಡು ಅವಳಲ್ಲಿ ಆಸಕ್ತನಾದನು. ಕೂಡಲೆ ಅವನು ಅನಂತ ಮತಿಯನ್ನು ತನ್ನ ಅರಮನೆಗೆ ಕರೆದುಕೊಂಡು ಹೋಗಿ ತನ್ನ ಹಿರಿಮೆ ಮಹಿಮೆಗಳನ್ನು ಮೆರೆದು ಅವಳನ್ನು ಮೆಚ್ಚಿಸುವ ಪ್ರಯತ್ನಮಾಡಿದನು. ಆದರೆ ಅನಂತಮತಿ ಇದಾವುದರಿಂದಲೂ ಪ್ರಭಾವಿತಳಾಗಲಿಲ್ಲ. ಅವನ ಪ್ರೇಮಾಲಾಪ ಅವಳಿಗೆ ಬೇಸರ ವನ್ನೇ ತಂದಿತು. ಅವಳು ಮೌನಮೂರ್ತಿಯಾಗಿ ಜಿನಧ್ಯಾನ ತತ್ಪರಳಾಗಿದ್ದು ಬಿಟ್ಟಳು.

ಆ ಬೇಡರಸನಿಗೆ ಅನಂತಮತಿಯ ವ್ರತನಿಷ್ಠೆ ಏನು ಅರ್ಥವಾಗಬೇಕು ? ಅವನು ಸಿಟ್ಟಾಗಿ "ನಾಳೆಯೊಳಗಾಗಿ ನಿನ್ನ ಮನಸ್ಸನ್ನು ತಿದ್ದಿಕೊಂಡರೆ ಸರಿ. ಇಲ್ಲದಿದ್ದರೆ ನಿನ್ನ ಗತಿ ನೆಟ್ಟಗಾಗದು" ಎಂದು ಎಚ್ಚರಿಸಿ ಹೊರಟುಹೋದನು ; ಅವಳು ತಪ್ಪಿಸಿಕೊಂಡು ಹೋಗದಂತೆ ಬಲವಾದ ಕಾವಲನ್ನಿಟ್ಟನು. ಅನಂತಮತಿ ತನ್ನ ಬ್ರಹ್ಮಚರ್ಯವ್ರತ ವನ್ನು ಬಲವಾಗಿ ಹಿಡಿದಳು. ಬೇಡನ ಈ ಉಪಸರ್ಗ ಕಳೆಯುವವರೆಗೆ ಆಹಾರ ಸ್ವೀಕರಿಸೆನೆಂದು ಅವಳು ಪ್ರತಿಜ್ಞೆ ಮಾಡಿದಳು.

ಅನಂತಮತಿ ಕೈಕೊಂಡ ದೃಢಪ್ರತಿಜ್ಞೆ, ಬೇಡರಸನಿಂದ ಅವಳಿಗೆ ಸಂಭವಿಸಬಹುದಾಗಿದ್ದ ವಿಪತ್ತು, ಇವುಗಳನ್ನು ಸೂಚಿಸುವಂತೆ ಯಕ್ಷಿಗೆ ಆಸನಕಂಪವಾಯಿತು ! ಆಕೆ ತನ್ನ ದಿವ್ಯದೃಷ್ಟಿಯಿಂದ ಎಲ್ಲವನ್ನೂ ತಿಳಿದು "ಈ ಕನ್ಯೆಯ ಮನಸ್ಸನ್ನು ಪರೀಕ್ಷಿಸಬೇಕು" ಎಂದು ಬಗೆದು ಕಿರಾತನ ರೂಪವನ್ನೇ ಧರಿಸಿ ಬಂದು ಅನಂತಮತಿಯೊಡನೆ ಬಹುವಾಗಿ 'ವಾದಿಸಿದಳಾದರೂ ಏನೂ ಪ್ರಯೋಜನವಾಗಲಿಲ್ಲ. ಅವಳು ತನ್ನ ಜಿನಧ್ಯಾನ, ಮೌನಗಳನ್ನು ಬಿಡಲಿಲ್ಲ. ಆಗ ಯಕ್ಷಿ ತನ್ನ ದಿವ್ಯ ಸ್ವರೂಪವನ್ನು ತೋರಿಸಿ ಅವಳಿಗೆ ಅಭಯ ನೀಡಿ ಆ ಬೇಡರಸನು ಮಲಗಿ ನಿದ್ರಿಸುತ್ತಲಿದ್ದ ಸ್ಥಳಕ್ಕೆ ಹೋಗಿ ತನ್ನ ಭಯಂಕರ ರೂಪವನ್ನು ಮೆರೆದು "ಅನಂತಮತಿಯನ್ನು ನಾಳೆ ಸುರಕ್ಷಿತವಾಗಿ ಅಯೋಧ್ಯಾಪುರಕ್ಕೆ ಕಳುಹಿಸು. ಇಲ್ಲದಿದ್ದರೆ ನಿನಗೇನು ಗತಿಯೊದಗುವುದೆಂಬುದನ್ನು ನೀನೇ ನೋಡುವೆ" ಎಂದು ಅಬ್ಬರಿಸಿ ಅದೃಶ್ಯಳಾದಳು. ಬೇಡರಸ ಅಂಜಿಕೆಯಿಂದ ಕಂಗೆಟ್ಟನು. ಮರುದಿನ ಅವನು ಅನಂತಮತಿಯ ಪಾದಗಳಿಗೇ ಪೂಜೆ ಸಲ್ಲಿಸಿ ಭೀಮವನದಿಂದ ಹೊರಕ್ಕೆ ಕರೆದುಕೊಂಡು ಹೋಗಿ ಅಯೋಧ್ಯೆಯ ದಾರಿಯನ್ನು ತೋರಿಸಿ ತನ್ನೂರಿಗೆ ಹಿಂತಿರುಗಿದನು.

ಮುಂದೆ ಪುಷ್ಪಕನೆಂಬ ವರ್ತಕನ ಆಶ್ರಯು ದೊರೆಯಿತಾದರೂ ಅವನ ಹೆಂಡತಿ ಅನಂತಮತಿಯ ಸೌಂದರ್ಯಕ್ಕೆ ಅಸೂಯೆಪಟ್ಟು ಅವಳನ್ನು ಮನೆಯಲ್ಲಿಟ್ಟುಕೊಳ್ಳುವುದು ಕ್ಷೇಮವಲ್ಲವೆಂದು ಬಗೆದು ಒಬ್ಬ ಕುಂಟಿಣಿಗೆ ಮಾರಿಬಿಟ್ಟಳು. ಆ ಸೂಳೆ ಮಾಡಿದ ಯಾವ ಪ್ರಯತ್ನವೂ ಫಲಿಸದಿರಲು ಅವಳು ಉಪಾಯವಾಗಿ ಅನಂತಮತಿಯನ್ನು ಸಿಂಹರಥನೆಂಬ ಅರಸನಿಗೆ ಲಾಭಕ್ಕೆ ಮಾರಿದಳು ! ಆ ರಾಜ ಅನಂತಮತಿಯಲ್ಲಿ ಮೋಹಪರವಶನಾಗಿ ಅವಳನ್ನು ಒಲಿಸಿಕೊಳ್ಳಲು ಸಾಧ್ಯವಾಗದಿರಲು ಸಿಟ್ಟಾಗಿ ಆಳುಗಳನ್ನು ಕರೆದು ಅವಳನ್ನು ಸಾಯ ಹೊಡೆಯುವಂತೆ ಆಜ್ಞಾಪಿಸಿದನು. ಆಗ ಆ ನಗರದೇವತೆಗಳಿಗೆ ಆಸನಕಂಪವಾಗಲು ಅವರು ಅನಂತಮತಿಯ ದೃಢವ್ರತವನ್ನು ಮೆಚ್ಚಿ ಅವಳ ನೋವನ್ನೆಲ್ಲ ರಾಜನ ಹೆಂಡಿರು, ಪರಿಜನರು, ಕುಮಾರರು ಮತ್ತು ಪ್ರಧಾನರ ಮೇಲೆ ಇಟ್ಟರಂತೆ ! ಅನಂತಮತಿ ಸುರಕ್ಷಿತಳಾಗಿದ್ದಳು. ಆದರೆ ಅವಳನ್ನು ಹೊಡೆದವರಿಗೇ ಮೈಯೆಲ್ಲ ಬಾಸುಂಡೆಗಳೆದ್ದವು ! ದೇವದುಂದುಭಿಗಳು ಮೊಳಗಿದವು. ಸಿಂಹರಥ ಮೊದಲುಗೊಂಡು ಎಲ್ಲರೂ ಅನಂತಮತಿಯ ಜಿನಭಕ್ತಿಯನ್ನು ಮೆಚ್ಚಿ ನಮಸ್ಕರಿಸಿದರು, ಎಲ್ಲರೂ ಜೈನಶ್ರಾವಕರಾದರು !

ಇತ್ತ ಅನಂತಮತಿಯ ತಾಯಿತಂದೆಗಳು ಇದ್ದಕ್ಕಿದ್ದ ಹಾಗೆ ಅದೃಶ್ಯಳಾದ ಮಗಳ ಕ್ಷೇಮದ ವಿಷಯಕ್ಕೆ ಆತಂಕಪಟ್ಟು ಅವಳನ್ನು ಹುಡುಕುತ್ತ ಎಲ್ಲಿಯೂ ಕಾಣದೆ ಬಹಳವಾಗಿ ಹಲಬಿ ಹಲುಬಿಸುತ್ತಿದ್ದರು. ಒಂದು ದಿನ ವರದತ್ತಭಟ್ಟಾರಕರೇ ಬಂದು ಅವರಿಗೆ ಧರ್ಮೋಪದೇಶಮಾಡಿ ಸಮಾಧಾನ ಹೇಳಿದರು. ಆ ದಂಪತಿಗಳು ಆ ಮನೆಯಲ್ಲಿ ಅನಂತಮತಿಯ ಆಟಪಾಟಗಳನ್ನು ನೆನೆದುಕೊಳ್ಳುತ್ತಾ ಅವಳ ಅಗಲಿಕೆಗೆ

ಆಳಲುತ್ತ ಇರಲಾರದೆ ಊರಿಂದ ಹೊರಟು ಅಯೋಧ್ಯೆಗೆ ಹೊರಟರು. ಅಲ್ಲಿ ದೇಹಾರದ ಮುಂದೆ ಹಾಕಿದ್ದ ಬಣ್ಣ ಬಣ್ಣಗಳ ರಂಗೋಲಿಯನ್ನು ಕಂಡು ಅನಂತಮತಿಯ ಸ್ಮರಣೆ ಬಂದು ಅದನ್ನು ನೋಡುತ್ತ ನೋಡುತ್ತ, ದೇಹಾರವನ್ನು ಹೊಕ್ಕು ಅಲ್ಲಿದ್ದ ಅನಂತಮತಿಯನ್ನು ಕಂಡರು. ಆ ತಂದೆ ಮಗಳ ಪುನರ್ಮಿಲನ ಸನ್ನಿವೇಶ ವರ್ಣನೆಗೆ ನಿಲುಕುವಂಥದಲ್ಲ, ಅವರ ಆನಂದ ಮೇರೆಯಿಲ್ಲದ್ದು.

ಅನಂತಮತಿಗೆ ಬೇಗನೆ ಮದುವೆ ಮಾಡುವ ಆಸೆಯಿಂದ ಪ್ರಿಯದತ್ತಸೆಟ್ಟಿ ಬೇಕು ಬೇಕಾದ ವ್ಯವಸ್ಥೆಗಳನ್ನೆಲ್ಲ ಮಾಡತೊಡಗಿ ತನ್ನ ಸೋದರಳಿಯ ಶ್ರುತಸಾಗರನನ್ನು ಕರೆಯಿಸಿದನು. ಅವನು ಅನಂತಮತಿಗೆ ಕೊಡಿಸಿದ್ದ ಬ್ರಹ್ಮಚರ್ಯದೀಕ್ಷೆಯ ಸುದ್ದಿಯನ್ನೇ ಮರೆತುಬಿಟ್ಟಿದ್ದನು! ಆದರೆ ದೃಢವ್ರತೆಯಾದ ಅನಂತಮತಿ ಅದನ್ನು ಸ್ವಲ್ಪವೂ ಮರೆತಿರಲಿಲ್ಲ. ಹಿಡಿದ ವ್ರತವನ್ನು ಭಂಗಗೊಳಿಸುವುದು ಅವಿವೇಕವೆಂದು ಅವಳು ತಂದೆಗೆ ಹೇಳಿ ವಿವಾಹವನ್ನು ನಿರಾಕರಿಸಿದಳು. ಅವಳು ನಿಷ್ಕಾಂಕ್ಷೆಯನ್ನು ಸಾಧಿಸಿಕೊಂಡಿದ್ದಳು. ಅವಳಿಗೆ ಮೋಕ್ಷಸುಖಾಪೇಕ್ಷೆಯಲ್ಲದೆ ಬೇರೆ ಆಸೆಗಳೇನೂ ಉಳಿದಿರಲಿಲ್ಲ. ಅವಳು ಜಿನದೀಕ್ಷೆಯನ್ನು ಕೈಕೊಂಡು ತಪಸ್ಸು ಮಾಡಿ ದೇಹಾಂತ್ಯದಲ್ಲಿ ಸಹಸ್ರಾರಕಲ್ಪದಲ್ಲಿ ಸುಕಾಂತನೆಂಬ ಮಹತ್ತರ ದೇವನಾಗಿ ಹುಟ್ಟಿದಳು. ವಯಸ್ಸಿನಲ್ಲಿ ಚಿಕ್ಕವಳಾದರೂ ಅನಂತಮತಿ ಸಾಧನೆಯಲ್ಲಿ ಬಹಳ ದೊಡ್ಡವಳು.

## ೪. ಶೀಲವತಿ

ಸೌಧರ್ಮ ಕಲ್ಪದಲ್ಲಿ ಒಂದು ದಿನ ಧರ್ಮಶ್ರವಣವಾದ ಮೇಲೆ ದೇವತೆಗಳು "ನಿರ್ವಿಚಿಕಿತ್ಸೆಯಲ್ಲಿ ದೊಡ್ಡವರು ಯಾರು ?" ಎಂದು ಸೌಧರ್ಮೇಂದ್ರನನ್ನು ಕೇಳಿದರು. ಅವನು ರೌರವಪುರದ ಒಡ್ಡಾಯಣ ಮಹಾರಾಜನ ಹೆಸರನ್ನು ಹೇಳಲು ಅಲ್ಲಿಯೇ ಕುಳಿತು ಕೇಳುತ್ತಿದ್ದ ವಾಸವನೆಂಬ ದೇವನು ಅದನ್ನು ಪರೀಕ್ಷಿಸುವ ಹಟತೊಟ್ಟು ಭೂಲೋಕಕ್ಕೆ ಇಳಿದು ಕುಷ್ಠರೋಗಿಯಾಗಿ ಅಸಹ್ಯಕರವಾದ ರೂಪಧರಿಸಿ ಜೈನಯತಿ ವೇಷದಲ್ಲಿ ರೌರವಪುರದ ಬೀದಿಗಳಲ್ಲಿ ನಡೆದುಹೋಗುತ್ತಿದ್ದನು. ಯಾವ ಶ್ರಾವಕನೂ ಆ ಯತಿಯನ್ನು ವಂದಿಸಲಿಲ್ಲ.; ಚರಿಗೆಗೆ ನಿಲ್ಲಿಸಲಿಲ್ಲ. ಅಷ್ಟೇ ಅಲ್ಲ, ಆ ನಗರ ವಾಸಿಗಳು ಆತನನ್ನು ನೋಡಬಯಸದೆ ತಲೆ ತಪ್ಪಿಸಿಕೊಳ್ಳುತ್ತಿದ್ದರು. ಯತಿವೇಷಧಾರಿ ವಾಸವನು ಇದಾವುದರಿಂದಲೂ ಕಂಗೆಡದೆ ನೇರವಾಗಿ ಅರಮನೆಗೇ ಹೋಗಿ ಒಡ್ಡೋಲಗವನ್ನೇ ಪ್ರವೇಶಿಸಿದನು !

ಒಡ್ಡಾಯಣ ಮಹಾಜಿನಭಕ್ತನಾದುದರಿಂದ ಯತಿಯನ್ನು ಕಂಡು ಗೌರವಿಸಿ ಉನ್ನತಾಸನದಲ್ಲಿ ಕುಳ್ಳಿರಿಸಿದನು. ಆ ರೋಗಿಯ ದೇಹದ ದುರ್ನಾತಕ್ಕೆ ಸಹಿಸಲಾರದೆ ಪರಿವಾರದವರೂ ಪರಾರಿಯಾದರು ! ಆದರೆ ರಾಜರಾಣಿಯರು ಮಾತ್ರ ಸ್ವಲ್ಪವೂ ಬೇಸರಪಡದೆ ಯತಿಯನ್ನು ವಂದಿಸಿ ಅವನಿಗೆ ಬೇಕಾದ ಆಹಾರವನ್ನು ತಂದುಕೊಟ್ಟರು. ಆ

ಯತಿ ಅದನ್ನೆಲ್ಲ ತೃಪ್ತಿಯಾಗಿ ಉಂಡು ಅರಸನ ಮೈಮೇಲೆಯೇ ವಾಂತಿಮಾಡಿಬಿಟ್ಟನಂ. ದೊರೆಯ ಮೈಯೆಲ್ಲ ಅದರಲ್ಲಿ ತೊಯ್ದು ಹೋಯಿತು. ಆದರೂ ಒದ್ದಾಯನನು ಯತಿಯ ಆಯಾಸ ಹಿಂಗುವ ತನಕ ಹಾಗೆಯೇ ಹಿಡಿದುಕೊಂಡಿದ್ದು ಆಮೇಲೆ ಪತ್ನಿಯ ಸಹಾಯದಿಂದ ಯತಿಗೆ ಸ್ನಾನಮಾಡಿಸಿ ಪೀತಾಂಬರದಿಂದ ತೇವವನ್ನು ಒರೆಸಿದನಂತೆ! ಆಮೇಲೆ ಯತಿಯನ್ನು ಸುಖಾಸನದ ಮೇಲೆ ಕುಳ್ಳಿರಿಸಿ ತಮ್ಮ ದೆಸೆಯಿಂದ ಆದ ಕ್ಲೇಶ ವನ್ನು ಕ್ಷಮಿಸಬೇಕೆಂದು ಆ ರಾಜದಂಪತಿಗಳು ಬೇಡಿಕೊಂಡರು! ಆಗ ವಾಸವ ರಾಜ ರಾಣಿಯರ ನಿರ್ವಿಚಿಕಿತ್ಸೆಯನ್ನು ಮೆಚ್ಚಿ ತನ್ನ ನಿಜರೂಪವನ್ನು ತೋರಿಸಿ, ತಾನಂ ಬಂದ ಸುದ್ದಿಯನ್ನೆಲ್ಲ ಹೇಳಿ, ರಾಣಿ ಪ್ರಭಾವತಿಯ ಮಹಿಮೆಯನ್ನು ಹೇಳತೊಡಗಿದನಂ.

ಒಂದು ಸಲ ಒದ್ದಾಯನ ವಿಜಯಯಾತ್ರೆಗೆ ಹೋಗಿದ್ದಾಗ ರಾಣಿಯ ಬಾಲ್ಯದ ಗೆಳತಿ ನಾರಾಯಣದತ್ತೆಯೆಂಬ ವಿಧವೆ ಬಂದು ರಾಣಿ ತನ್ನನ್ನು ವಿಶೇಷವಾಗಿ ಮನ್ನಿಸ ಲಿಲ್ಲವೆಂದು ಅಸಮಾಧಾನಪಟ್ಟು ಅವಳ ಶ್ರಾವಕತ್ವವನ್ನು ಕೆಡಿಸುವ ದುಷ್ಟ ಸಂಕಲ್ಪದಿಂದ ಅವಳ ಚಿತ್ರಪಟವೊಂದನ್ನು ಬರೆದು ಮಾಳವರಾಜನಾದ ಚಂಡಪ್ರದ್ಯೋತನಿಗೆ ಅದನ್ನು ತೋರಿಸಿ ಅವನಿಗೆ ಅವಳ ಮೇಲೆ ಆಸಕ್ತಿ ಹುಟ್ಟಿಸಿದಳು. ಚಂಡಪ್ರದ್ಯೋತನು ಕಾಮುಕ ನಾಗಿ ಒದ್ದಾಯನನ ಪಟ್ಟಣವನ್ನು ಮುತ್ತಿ ಪ್ರಭಾವತಿಗೆ ಹೇಳಿ ಕಳುಹಿಸಿದನಂ. ಆದರೆ ಅವಳು ಅದನ್ನು ಲಕ್ಷಿಸಲಿಲ್ಲ. ಅವನಂ ಯುದ್ಧವನ್ನೇ ಹೂಡುವುದರಲ್ಲಿದ್ದನು. ಆಗ ವಾಸವನು ವಿಮಾನದಲ್ಲಿ ಹೋಗುತ್ತಿದ್ದು ಇದನ್ನೆಲ್ಲ ಕಂಡು ಚಂಡಪ್ರದ್ಯೋತನ ಸೈನ್ಯ ವನ್ನೆಲ್ಲ ಉಜ್ಜಯಿನಿಗೆ ತೆಗೆದುಕೊಂಡು ಹೋಗಿಬಿಟ್ಟನು. ಅಲ್ಲದೆ ರೌರವಪಟ್ಟಣದವರೆಲ್ಲ ನಿದ್ರಿತರಾಗಿದ್ದಾಗ ತಾನೇ ಪ್ರದ್ಯೋತನ ವೇಷ ಧರಿಸಿ ಅರಮನೆಯನ್ನು ಹೊಕ್ಕು ರಾಣಿ ಯನ್ನು ಬಹಳವಾಗಿ ಪೀಡಿಸಿದನಾದರೂ ಏನೂ ಫಲವಾಗಲಿಲ್ಲ. ಆಗ ವಾಸವ ತನ್ನ ಸ್ವಸ್ವರೂಪವನ್ನು ತೋರಿಸಿ, ಆಕೆಗೆ 'ಶೀಲವತಿ' ಯೆಂಬ ಹೆಸರು ಕೊಟ್ಟು ಹೊರಟು ಹೋದನಂ. ಆ ವಾಸವನೇ ಈಗ ಒದ್ದಾಯನನ ನಿರ್ವಿಚಿಕಿತ್ಸೆಯನ್ನು ಒರೆಹಚ್ಚಲು ಮಾಯಾ ಕುಷ್ಠನಾಗಿ ಬಂದಿದ್ದನು! ಈ ಕಥೆಯನ್ನೆಲ್ಲ ಹೇಳಿಯಾದ ಮೇಲೆ ವಾಸವನಂ ಬಂದು ರತ್ನಸಿಂಹಾಸನದ ಮೇಲೆ ರಾಜರಾಣಿಯರನ್ನು ಕುಳ್ಳಿರಿಸಿ, ಅವರಿಗೆ ಅಭಿಷೇಕ ಮಾಡಿ ಪೂಜಿಸಿದನು, ದೇವದುಂದುಭಿಗಳು ಮೊಳಗಿದವು. ಪುಷ್ಪವೃಷ್ಟಿಯೇ ಆಯಿತು!

## ೫. ರೇವತೀದೇವಿ

ಅಮೂಢದೃಷ್ಟಿತ್ವ ದರ್ಶನ ಸಿದ್ಧಿಗೆ ಅಗತ್ಯವಾಗಿ ಬೇಕಾದ ಒಂದು ಅಂಗ. ಇತರರು ಮಾಡುವ ಕಪಟಚಮತ್ಕಾರಗಳಿಗೆ ಮರುಳಾಗದೆ ಮೂರ್ಖರು ಹೇಳುವುದನ್ನು ಒಪ್ಪದೆ ವಿವೇಚನಾಪರರಾಗಿ ಧರ್ಮವನ್ನು ಆಚರಿಸಬೇಕು, ಲೋಕಮೂಢನಾಗಬಾರದು. ಅಮೂಢದೃಷ್ಟಿತ್ವದಲ್ಲಿ ಹಿರಿಯ ಸಾಧನೆ ಮಾಡಿದವರಾರೆಂದು ಶ್ರೇಣಿಕಮಹಾರಾಜನು ಕೇಳಲು ಗಣಧರಸ್ವಾಮಿಗಳು ರೇವತೀಮಹಾದೇವಿಯ ಪುಣ್ಯಚರಿತ್ರೆಯನ್ನು ಹೇಳಿದರು.

ಉತ್ತರ ಮಧುರೆಯೆಂಬ ಪಟ್ಟಣದ ದೊರೆ ವರುಣ. ಅವನ ರಾಣಿ ರೇವತೀ ಮಹಾದೇವಿ. ಅವರು ಜಿನಧರ್ಮಪರರಾಗಿ ವ್ರತಾಚರಣೆಮಾಡುತ್ತ ರಾಜ್ಯಭಾರ ನಡೆಸುತ್ತಿರಲು ಮೇಘಕೂಟ ಪುರದಲ್ಲಿ ಖೇಚರ ರಾಜನಾದ ಚಂದ್ರಾಭನು ವೈರಾಗ್ಯ ಪರನಾಗಿ ಮಗನಿಗೆ ರಾಜ್ಯವನ್ನು ಒಪ್ಪಿಸಿ ಖೇಚರ ಲೋಕವನ್ನು ಬಿಟ್ಟು ಪಾಂಡ್ಯ ದೇಶದ ದಕ್ಷಿಣ ಮಧುರೆಗೆ ಹೋದನು. ಅಲ್ಲಿ ರಾಜನಾಗಿದ್ದ ಚಿತ್ರವಾಹನನು ತಮ್ಮ ವಂಶದ ಬಸದಿಗೆ ಬಂದು ಅಲ್ಲಿ ಚತುರ್ಮುಖ ಶಾಂತನಾಥನಿಗೆ ಅರ್ಚನೆ ಮಾಡಿದುದನ್ನು ಕಂಡು ಚಂದ್ರಾಭನು ತಾನೂ ಒಳಹೊಕ್ಕು ಜಿನವಂದನೆ ಮಾಡಿ ಅಲ್ಲಿದ್ದ ಮುನಿಗುಪ್ತ ಭಟ್ಟಾರ ಕರಲ್ಲಿ ಧರ್ಮಶ್ರವಣವನ್ನು ಮಾಡಿ ಅದರಿಂದ ದೀಕ್ಷೆಬೇಕೆಂದು ಬೇಡಿದನು. ಆದರೆ ಮುನಿಗುಪ್ತರು "ಅಯ್ಯಾ ತಪಸ್ಸು ಸುಲಭವಲ್ಲ, ನೀನು ಮೊದಲಿನಂತೆ ವಿದ್ಯಾಧರರಾಜ ನಾಗಿರು" ಎಂದು ಹಿತಬೋಧೆ ಮಾಡಿದರು. ಆದರೆ ಅವನು ಒಪ್ಪದೆ ಪಟ್ಟು ಹಿಡಿದಾಗ ಅವನ ವೈರಾಗ್ಯವನ್ನು ಮೆಚ್ಚಿ ಮುನಿಗುಪ್ತರು "ನಿನ್ನ ಪರಿಗ್ರಹಗಳನ್ನೆಲ್ಲ ತೊರೆದು ಬಿಡು" ಎಂದರು. ಚಂದ್ರಾಭನು ಮಿಕ್ಕೆಲ್ಲವನ್ನೂ ತ್ಯಜಿಸಿದನಾದರೂ ಕೆಲವು ವಿದ್ಯೆಗಳನ್ನು ಮಾತ್ರ ತೊರೆಯಲಿಲ್ಲ. ಜಿನಾಲಯಗಳನ್ನು ನೋಡುವುದಕ್ಕೋಸ್ಕರ ಬೇಕಾದ ಕಡೆಗೆ ಹೋಗಲು ಅನುಕೂಲಿಸುವಂತೆ ಕೆಲವು ವಿದ್ಯೆಗಳನ್ನು ಇಟ್ಟುಕೊಂಡನು, ಇದನ್ನು ಗಮನಿಸಿದ ಭಟ್ಟಾರಕರು ಇವನ ವೈರಾಗ್ಯ ಇನ್ನೂ ಪರಿಪಕ್ವವಾಗಿಲ್ಲವೆಂದು ತಿಳಿದು "ನೀನು ಕೊಂಚಕಾಲ ಅಣುವ್ರತಧಾರಿಯೇ ಆಗಿರು" ಎಂದು ಹೇಳಿಬಿಟ್ಟರು ; ಅವನ ಅಪೇಕ್ಷೆಯಂತೆ ಉದ್ದಿಷ್ಟವಿರತನೆಂಬ ಹನ್ನೊಂದನೆಯ ಮಹಾಶ್ರಾವಕತ್ವವನ್ನು ಅನು ಗ್ರಹಿಸಿದರು.

ಚಂದ್ರಾಭನು ಗುರ್ವಾಜ್ಞೆಯನ್ನು ಶಿರಸಾವಹಿಸಿ ಆಚರಣೆಗೆ ಕಷ್ಟವಾದ ಏಕಾದ ಶಸ್ಥಾನವನ್ನು ಕೈಕೊಂಡು ಬಹಳದಿನ ಗುರುಸೇವಾನಿರತನಾಗಿದ್ದು ಒಂದುದಿನ ಶೂರಸೇನ ದೇಶದ ಉತ್ತರ ಮಧುರೆಯ ಜಿನಾಲಯಗಳನ್ನು ಸಂದರ್ಶಿಸುವ ಸಲುವಾಗಿ ಗುರುಗಳ ಅನುಮತಿ ಬೇಡಿದನು. ಅವರು ತೀರ್ಥವಂದನೆಮಾಡಿ ಬರತಕ್ಕದ್ದೆಂದು ಆಜ್ಞೆಕೊಟ್ಟರು. ಅಲ್ಲದೆ ವರುಣ ಮಹಾರಾಜನಹೆಂಡತಿ ರೇವತೀದೇವಿಗೆ ಆಶೀರ್ವಾದವನ್ನೂ ಉಂಡು ರುಳಿಭಟ್ಟಾರಕರಿಗೆ ಪ್ರತಿವಂದನೆಯನ್ನೂ ಮರೆಯದೆ ಹೇಳಬೇಕೆಂದು ಸೂಚನೆಕೊಟ್ಟರು.

ಚಂದ್ರಾಭನಿಗೆ ಆಶ್ಚರ್ಯವಾಯಿತು, "ಉತ್ತರ ಮಧುರೆಯಲ್ಲಿ ಭವಸೇನಾ ಚಾರ್ಯರೇ ಮೊದಲಾದ ಅನೇಕ ಮುನಿಗಳಿರುವಾಗ ಮುನಿಗುಪ್ತರಿಗೆ ಉಂಡುರುಳಿ ಭಟ್ಟಾರಕರ- ಮೇಲೆ ಏಕಿಷ್ಟು ಮೋಹ ? ರೇವತೀದೇವಿಯ ಹಿರಿಮೆಯೇನು ?" ಹೀಗೆ ಪ್ರಶ್ನೆಮಾಡಲು ಮುನಿಗುಪ್ತರು ಹೆಚ್ಚಿಗೆ ಮಾತು ಬೆಳಸದೆ "ಅಯ್ಯಾ, ಅವರ ಸಂಬಂಧವ ನ್ನೆಲ್ಲ ಕೇಳುವ ಕಷ್ಟ ನಿನಗೆ ಬೇಡ. ಆ ಪುರದವರು ಸದ್ಧರ್ಮವನ್ನು ಕೇಳಿದವರಾದರೂ ಸಂಶಯ ಗ್ರಸ್ತರಾಗಿರುವುದರಿಂದ ಅವರಿಗೆ ಹರಕೆಯನ್ನೂ ವಂದನೆಯನ್ನೂ ಹೇಳಲಿಲ್ಲ" ಎಂದು ಸಂಕ್ಷೇಪವಾಗಿ ಹೇಳಿ ಮುಗಿಸಿದರು, ಆಗ ಚಂದ್ರಾಭನು ಗುರುಗಳನ್ನು ವಂದಿಸಿ

ವಿದ್ಯಾಬಲದಿಂದ ಸಿದ್ಧವಾದ ಮಾಯಾ ವಿಮಾನವನ್ನೇರಿ ಆಕಾಶಮಾರ್ಗವಾಗಿ ಉತ್ತರ ಮಧುರೆಯನ್ನು ಸೇರಿದನು.

ಚಂದ್ರಾಭನು ಭವಸೇನಾಚಾರ್ಯರನ್ನೂ ರೇವತಿದೇವಿಯನ್ನೂ ಪರೀಕ್ಷಿಸಲು ಸಂಕಲ್ಪಿಸಿ ಒಬ್ಬ ಬ್ರಹ್ಮಚಾರಿಯ ವೇಷದಲ್ಲಿ ಭವಸೇನರ ಬಳಿಗೆ ಹೋಗಿ ಧರ್ಮ ಜಿಜ್ಞಾಸೆಗೆ ತೊಡಗಲು ಅವರು ಆಗಮ ವಚನಗಳನ್ನು ಗಿಳಿಯಂತೆ ಹೇಳ ಬಲ್ಲವರೇ ಹೊರತು ಅವರಲ್ಲಿ ಸಮ್ಯಕ್ತ್ವವಿಲ್ಲವೆಂಬುದನ್ನು ಮನಗಂಡು ಮುನಿಗುಪ್ತರ ನಿರ್ಧಾರವನ್ನು ಮೆಚ್ಚಿಕೊಂಡನು. ಉಂಡುರುಳಿಭಟ್ಟಾರಕ ಸಮ್ಯಜ್ಞಾನ ಚಾರಿತ್ರಗಳುಳ್ಳ ದೃಢಚಿತ್ತರೆಂಬುದನ್ನೂ ಖೇಚರ ಮನಗಂಡು ರೇವತೀದೇವಿಯ ಅಮೂಢದೃಷ್ಟಿತ್ವದ ಪರೀಕ್ಷೆಗೆ ಹೂಡಿಕೊಂಡನು.

ಮಾರನೆಯದಿನ ಚಂದ್ರಾಭನು ಚತುರ್ಮುಖ ಬ್ರಹ್ಮನ ವೇಷವನ್ನು ಧರಿಸಿ ನಗರದ ಪೂರ್ವದಿಕ್ಕಿನಲ್ಲಿ ನಿಂತನು. ಊರೆಂಬ ಊರೇ ಹೋಗಿ ಆ ಕೃತಕ ಬ್ರಹ್ಮನ ಪೂಜೆ ಮಾಡಿತು, ಅರಸನೂ ಬ್ರಹ್ಮದರ್ಶನಕ್ಕೆ ಹೋಗ ಬಯಸಿದನು, ಆದರೆ ಪ್ರಾಜ್ಞಳಾದ ರೇವತೀ ಮಹಾದೇವಿಯು ಗಂಡನನ್ನೂ ತಡೆದು ತಾನೂ ಅಲ್ಲಿಗೆ ಹೋಗಲಿಲ್ಲ, ಚಂದ್ರಾಭನಿಗೆ ನಿರಾಸೆಯಾಯಿತು, ಆಮೇಲೆ ಅವನು ನಾರಾಯಣ ಈಶ್ವರರ ವೇಷಗಳನ್ನೂ ಕೊನೆಗೆ ವರ್ಧಮಾನ ಸ್ವಾಮಿಯ ವೇಷವನ್ನೂ ಧರಿಸಿ ಹೋದನಾದರೂ ಪ್ರಯೋಜನವಾಗಲಿಲ್ಲ. ರೇವತೀ ಮಹಾದೇವಿ ಇದೆಲ್ಲ ಮಾಯಾಚೇಷ್ಟೆಯೆಂದು ನಿರ್ಧರಿಸಿ ಬಿಟ್ಟಳು. ಆಗ ಖೇಚರ ರಾಜನು ರೇವತೀ ಮಹಾದೇವಿಯ ಸಂದರ್ಶನಮಾಡಿ ತನ್ನ ವೃತ್ತಾಂತವನ್ನೆಲ್ಲ ವಿವರಿಸಿ ಹೇಳಿ ದಕ್ಷಿಣ ಮಧುರೆಯ ಮುನಿಗುಪ್ತಭಟ್ಟಾರಕರ ಆಶೀರ್ವಾದವನ್ನು ಹೇಳಿದನು. ವರುಣ ಮಹಾರಾಜನು ಇದನ್ನೆಲ್ಲ ಕಂಡು ಮೂಢತ್ರಯವನ್ನು ಬಿಟ್ಟು ತನ್ನ ಹಿರಿಯ ಮಗನಿಗೆ ಪಟ್ಟಕಟ್ಟಿ ಅರಿಂಜಯ ಭಟ್ಟಾರಕರಲ್ಲಿ ದೀಕ್ಷೆಯನ್ನು ಕೈಕೊಂಡನು. ರೇವತೀದೇವಿ ಬಹಳ ಕಾಲ ಜಿನ ಪೂಜಾದಿಗಳನ್ನು ಮಾಡಿ ಅನ್ನದಾನ ನಿರತಳಾಗಿದ್ದು ಕಡೆಯಲ್ಲಿ ಅಚ್ಯುತ ಕಲ್ಪದಲ್ಲಿ ಮಹರ್ಧಿಕ ದೇವನಾಗಿ ಹುಟ್ಟಿದಳು. ರೇವತೀದೇವಿ ದೇಹತ್ಯಾಗ ಮಾಡಿದ ಸ್ಥಳವು ಈಗಲೂ ರೇವತೀ ಸತ್ತೀರ್ಥವೆಂದು ಹೆಸರಾಗಿದೆ.

## ೬. ಜಿನಭಕ್ತಸೆಟ್ಟಿ

ಗೊಲ್ಲ ದೇಶದ ಕಾಮಲಿಪ್ತಿಯಲ್ಲಿ ಜಿನಭಕ್ತ ಸೆಟ್ಟಿಯೆಂಬ ಮಹಾ ಜೈನಧರ್ಮ ಪರಾಯಣನು ಶ್ರೀಮಂತನಾಗಿ ಒಂದು ದೊಡ್ಡ ದೇಹಾರವನ್ನು ಕಟ್ಟಿಸಿ ಬಹಳ ವೈಭವದಿಂದ ಪೂಜಾಕೈಂಕರ್ಯಗಳನ್ನು ನಡೆಸುತ್ತ, ಜಿನಮುನಿಗಳಿಗೆ ಅನ್ನದಾನ ಮಾಡುತ್ತ ಪ್ರಸಿದ್ಧನಾಗಿದ್ದನು. ಅವನ ದೇಹಾರದ ಸಂಪತ್ತು, ಅದರಲ್ಲಿದ್ದ ವಜ್ರ ವೈಡೂರ್ಯಗಳು, ಲೋಕಪ್ರಸಿದ್ಧವಾಗಿದ್ದುವು. ಜಿನಭಕ್ತ ಸೆಟ್ಟಿ ಆ ದೇಹಾರದ ಅಲಂಕಾರಕ್ಕೆ ಅಪಾರವಾದ ಧನವನ್ನು ವೆಚ್ಚಮಾಡಿದ್ದನು.

ಇತ್ತ, ಮಗಧರಾಜ್ಯದ ವೀರಕುಮಾರನೆಂಬ ಯುವರಾಜನು ವಿದ್ಯಾ ವೈದುಷ್ಯ ಗಳೇನೂ ಇಲ್ಲದೆ ನೀಚಸಂಸರ್ಗದಿಂದ ಪೋಲಿಯಾಗಿ ಕಳ್ಳಕಾಕರೊಡನಾಡಿಯಾಗಿ ದುರಾ ಚಾರಮಗ್ನನಾಗಿದ್ದನು. ಒಂದುದಿನ ಚೋರ ಪ್ರಧಾನನೆಂಬ ಅವನ ಗೆಳೆಯನೊಬ್ಬನು ಕಾಮಲಿಪ್ತಿಯ ದೇಹಾರದಲ್ಲಿನ ಒಂದು ಮುಕ್ಕೊಡೆಯನ್ನೂ ಅದರಲ್ಲಿನ ಒಂದು ರತ್ನ ವನ್ನೂ ಹೊಗಳಿ ಆ ರತ್ನ ಲೋಕೋತ್ತರವಾದುದೆಂದೂ ಅದನ್ನು ಕದ್ದು ತರಬಲ್ಲವನು ಯಾರೂ ಇಲ್ಲವೆಂದೂ ಹೇಳಿದನು. ರಾಜಕುಮಾರ ಈ ವರ್ಣನೆಯಿಂದ ಆ ರತ್ನದಲ್ಲಿ ಬಹಳ ಆಸಕ್ತನಾಗಿ ಅದನ್ನು ತನಗೆ ತಂದು ಕೊಟ್ಟವನಿಗೆ ತನ್ನ ರಾಜ್ಯದಲ್ಲಿ ಅರ್ಧವನ್ನು ಪಾರಿತೋಷಕವಾಗಿ ಕೊಡುವೆನೆಂದು ಹೇಳಿದನು. ಆ ಅರ್ಧರಾಜ್ಯದ ಆಸೆಗೆ ಬಲಿಬಿದ್ದು ಸೂರ್ಪನೆಂಬ ಒಬ್ಬ ಕಳ್ಳನು ತಾನು ಆ ಮಹಾ ರತ್ನವನ್ನು ಕದ್ದು ತರುವೆನೆಂದು ಪ್ರತಿಜ್ಞೆಮಾಡಿದನು. ಅವನಿಗೆ ಯುವರಾಜನು ವೀಳೆಯನ್ನು ಕೊಟ್ಟು ಕಳುಹಿಸಿದನು.

ಸೂರ್ಪನು ರತ್ನಾಪಹರಣದ ಶಪಥವನ್ನೇನೋ ಮಾಡಿದ. ಆದರೆ ಅದನ್ನು ಹೇಗೆ ಸಾಧಿಸಬೇಕೆಂಬುದು ತೋರಲಿಲ್ಲ. ಆ ದೇಹಾರದ ಭದ್ರತೆ, ಅದಕ್ಕೆ ಜಿನಭಕ್ತ ಸೆಟ್ಟಿ ಇಟ್ಟಿದ್ದ ಸರ್ಪಕಾವಲು, ರಾತ್ರಿಯೆಲ್ಲ ಆವನೇ ದೇಹಾರದಲ್ಲಿರುತ್ತಿದ್ದುದು, ಈ ಅಂಶಗಳನ್ನೆಲ್ಲ ಗಮನಿಸಿ ಕೇಳಿದ ಸೂರ್ಪನು ತನ್ನ ಪ್ರತಿಜ್ಞಾಪಾಲನೆಗೆ ಬಹಳ ಕಷ್ಟ ಪಡಬೇಕೆಂಬುದನ್ನು ಮನಗಂಡು ಜೈನಯತಿಯ ವೇಷ ಧರಿಸಿ ಹೋಗಿ ಜಿನಭಕ್ತಸೆಟ್ಟಿಯ ಮನಸ್ಸಿಗೆ ನಂಬಿಕೆಯುಂಟುಮಾಡಿ ದೇಹಾರದಲ್ಲಿಯೇ ಇದ್ದು ಸಮಯ ನೋಡಿ ಕಾರ್ಯಸಾಧನೆ ಮಾಡಿಕೊಳ್ಳಬೇಕೆಂದು ನಿರ್ಧರಿಸಿಕೊಂಡನು. ಅದರಂತೆ ಅವನು ಯತಿಗಳ ನಡೆನುಡಿಗಳನ್ನು ಶ್ರದ್ಧೆಯಿಂದ ಗಮನಿಸಿ ಅನುಕರಣಮಾಡತೊಡಗಿದನು. ಲೋಚು ಮಾಡಿಸಿಕೊಳ್ಳುವುದಕ್ಕೆ ಶಕ್ತನಾಗದೆ ತಲೆಬೋಳಿಸಿಕೊಂಡು ಬ್ರಹ್ಮಚಾರಿಯ ವೇಷಧರಿಸಿ ಹಲವು ವ್ರತೋಪವಾಸಗಳನ್ನು ಮಾಡುತ್ತ ಒಂದು ಕಡೆ ನಿಲ್ಲದೆ ಗ್ರಾಮೈ ಕರಾತ್ರವಾಗಿ ಅಲೆದು ಕಾಮಲಿಪ್ತಿ ನಗರವನ್ನು ಸಮೀಪಿಸುತ್ತಲೇ ಅಲ್ಲಲ್ಲಿ ನಿಂತು ಚರಿ ಗೆಗೆ ಹೋಗತೊಡಗಿದನು. ಇವನ ವೈರಾಗ್ಯವನ್ನು ಆ ಸುತ್ತಿನ ಜನರೆಲ್ಲ ಏಕಗ್ರೀವರಾಗಿ ಹೊಗಳತೊಡಗಿದರು. ಸೂರ್ಪನಿಗಿಂತ ಅವನ ಯತಿಕೀರ್ತಿಯೇ ಮೊದಲು ಕಾಮಲಿಪ್ತಿ ಯನ್ನು ಸೇರಿತು.

ಸೂರ್ಪ ಕಾಮಲಿಪ್ತಿಯನ್ನು ಹೊಕ್ಕಾಗ ಅವನ ಮಾಯೆಯನ್ನು ಅರಿಯದೆ ಜಿನ ಭಕ್ತಸೆಟ್ಟಿ ಈ 'ಪರಮವಿರಕ್ತ'ನನ್ನು ವಂದಿಸಿ ಕರೆದುಕೊಂಡು ಹೋಗಿ ತನ್ನ ದೇಹಾರ ದಲ್ಲಿಯೇ ನಿಲ್ಲಿಸಿದನು. ಆದರೂ ಸೂರ್ಪನು ಸ್ವಲ್ಪವೂ ಎಚ್ಚರ ತಪ್ಪದೆ ವ್ರತೋಪ ವಾಸಗಳನ್ನು ಆಚರಿಸುತ್ತ ಎಲ್ಲರ ಗೌರವಕ್ಕೂ ಪಾತ್ರನಾಗಿದ್ದನು. ಸೆಟ್ಟಿ ವ್ಯಾಪಾರಕ್ಕೆಂದು ಗ್ರಾಮಾಂತರ ಹೊರಡಲು ನಿರ್ಧರಿಸಿ ಜತೆಯ ವರ್ತಕರನ್ನೂ ಸೇರಿಸಿಕೊಂಡು ಹೊರ ಬೀಡು ಬಿಟ್ಟಾಗ ಸೂರ್ಪ ತಾನು ಬಯಸಿದ ಅವಕಾಶ ಲಭಿಸಿತೆಂದು ಅಪರಾತ್ರಿಯಲ್ಲಿ ಎದ್ದು ಮುಕ್ಕೊಡೆಯ ಜಾಜ್ವಲ್ಯಮಾನವಾದ ಆ ರತ್ನವನ್ನು ಉಪಾಯವಾಗಿ ಕಿತ್ತು

ತನ್ನ ಉತ್ತರೀಯದಲ್ಲಿ ಮುಚ್ಚಿಟ್ಟುಕೊಂಡು ಹೊರಬಿದ್ದನು. ಆದರೆ ದುರ್ದೈವದಿಂದ ನಗರದ ಕೊತ್ವಾಲನ ಕಡೆಯವರು ಸೂರ್ಪನ ಕೈಯಲ್ಲಿ ಥಳತಥಳಿಸುವ ರತ್ನವಿದ್ದು ದನ್ನು ಕಂಡು ದೇಹಾರದಲ್ಲಿ ತಡಕಿ ನೋಡಿ ಅಲ್ಲಿ ರತ್ನವಿಲ್ಲದ್ದನ್ನು ಕಂಡು ಆ ಯತಿಯೇ ಕಳ್ಳನೆಂದು ನಿರ್ಧರಿಸಿ ಕಳಕಳ ಮಾಡುತ್ತ ಅವನನ್ನು ಅಟ್ಟಿಕೊಂಡು ಹೋದರು. ಸೂರ್ಪ ದಿಕ್ಕೆಟ್ಟು ಓಡುತ್ತ, ಹೆಚ್ಚು ದೂರ ಓಡಲಾರದೆ, ತಳವಾರರ ಕೈಗೆ ಬಿದ್ದು ಸಾಯುವುದಕ್ಕಿಂತ ಜಿನಭಕ್ತಸೆಟ್ಟಿಗೆ ಶರಣಾಗುವುದೇ ಲೇಸೆಂದು ಬಗೆದು ಹೊರಬೀಡನ್ನು ಹೊಕ್ಕು ಸೆಟ್ಟಿಯನ್ನು ಕಂಡು ಮರೆಹೊಕ್ಕನು.

ಜಿನಭಕ್ತ ಸೆಟ್ಟಿ ಮಾಯಾವಿಯ ಮೊದಲಿನ ತಪಶ್ಚರ್ಯೆ, ಸಾಧುತ್ವಗಳನ್ನೂ ಆಮೇಲೆ ಅವನಲ್ಲಿ ಉಂಟಾದ ದುರ್ಜನತ್ವವನ್ನೂ ಕಂಡು ಆಶ್ಚರ್ಯಪಟ್ಟನು. ಆ ವೇಳೆಗೆ ತಳವಾರರೂ ದೇಹಾರದ ಕಾವಲುಗಾರರರೂ ಕಳ್ಳನನ್ನು ಹುಡುಕುತ್ತ ಸೆಟ್ಟಿಯ ಬಳಿಗೇ ಬಂದರು. ಸೆಟ್ಟಿಗೆ ಧರ್ಮಸಂಕಟ. ಅದುವರೆಗೆ ಯತಿಯೆಂದು ತಾನೇ ಗೌರವಿಸಿದವನನ್ನು ಈಗ ದಂಡನೆಗೆ ಗುರಿ ಮಾಡುವುದೇ? ದೇಹಾರದಲ್ಲಿ ಕಳ್ಳತನ ಮಾಡಿದವನನ್ನು ಮನ್ನಿಸುವುದೇ ? "ಇವನಿಗಾದರೋ ಒಂದು ಮೊರ ತವುಡಿನ ಬೆಲೆಯೂ ಇಲ್ಲ. ಆದರೆ ಇವನ ದೆಸೆಯಿಂದ ಮೂರು ಲೋಕಗಳಲ್ಲಿಯೂ ಪೂಜ್ಯವಾದ ಜಿನಧರ್ಮವನ್ನು ಪಾಪಿಗಳು ನಿಂದಿಸುವರು" — ಈ ಧಾಟಿಯಲ್ಲಿ ಯೋಚಿಸಿದ ಸೆಟ್ಟಿ ಈ ಪಾಪಿಯನ್ನು ಈಗ ಉಳಿಸುವುದೇ ಸರಿಯೆಂದು ತಿಳಿದು ಸೂರ್ಪನನ್ನು ದೊಡ್ಡ ಮಣೆಯ ಮೇಲೆ ಕೂಡಿಸಿ ಅವನ ಪಾದಸೇವೆ ಮಾಡತೊಡಗಿದನು! ಅವನು ಆ ರತ್ನವನ್ನು ತನಗೆ ತಲಪಿಸುವುದಕ್ಕಾಗಿಯೇ ಬಂದನೆಂದೂ ಕಳ್ಳನಾಗಿದ್ದರೆ ಅವನು ತನ್ನ ಬಳಿಗೆ ಬರುತ್ತಲೇ ಇರಲಿಲ್ಲವೆಂದೂ ಹೇಳಿ ಸೆಟ್ಟಿ ಸೂರ್ಪನ ಮಾನಪ್ರಾಣಗಳನ್ನು ಕಾಪಾಡಿದನು. ತಳವಾರರು ಹೊರಟು ಹೋದರು.

ಆಮೇಲೆ ಸೆಟ್ಟಿ ಸೂರ್ಪನನ್ನು ಏಕಾಂತಸ್ಥಳಕ್ಕೆ ಕರೆದೊಯ್ದು ಅವನಿಗೆ ವಿವೇಕ ಹೇಳಿದನು. ಸೂರ್ಪನಿಗೆ ಜ್ಞಾನೋದಯವಾಯಿತು. ಅವನು ಜಿನಭಕ್ತಸೆಟ್ಟಿಗೆ ನಮಸ್ಕಾರ ಮಾಡಿ ತನ್ನ ಹಿಂದಿನ ಸುದ್ದಿಯನ್ನೆಲ್ಲ ಹೇಳಿ ವಿರಕ್ತನಾಗಿ ದೀಕ್ಷೆಯನ್ನು ಕೈಕೊಂಡು ಸಮಾಧಿಮರಣ ಹೊಂದಿ ದೇವಗತಿಯನ್ನು ಹೊಂದಿದನು. ಯತಿ ಕಳ್ಳತನ ಮಾಡಿದನೆಂದು ಆರೋಪ ಹೊರಿಸಿ ಶಿಕ್ಷೆಗೆ ಗುರಿ ಮಾಡಿದ್ದರೆ ಸೂರ್ಪ ಅಧೋಗತಿಗೇ ಹೋಗುತ್ತಿದ್ದನು. ಸೆಟ್ಟಿ ಅವನ ತಪ್ಪನ್ನು ಮನ್ನಿಸಿ ಧರ್ಮವಾತ್ಸಲ್ಯದಿಂದ ರಕ್ಷಣೆ ನೀಡಿದ್ದರಿಂದ ಸೂರ್ಪನು ಉನ್ನತ ಗತಿಯನ್ನು ಹೊಂದಿದುದೇ ಅಲ್ಲದೆ ಜೈನ ಧರ್ಮಕ್ಕೂ ಜೈನಯತಿಗಳಿಗೂ ಒದಗಬಹುದಾಗಿದ್ದ ಅಪನಿಂದೆ ತಪ್ಪಿತು.

## ೭. ವಾರಿಷೇಣ—ಪುಷ್ಪದಾಡ

ಶ್ರೇಣಿಕ ಮಹಾರಾಜನಿಗೆ ಚೇಳಿನೀದೇವಿಯಲ್ಲಿ ಹುಟ್ಟಿದ ವಾರಿಷೇಣ ಕುಮಾರನು ಚಿಕ್ಕತನದಿಂದಲೂ ಧರ್ಮಶ್ರದ್ಧೆಯುಳ್ಳವನು. ಯುವರಾಜನಾಗಿ ಎಲ್ಲ ಭೋಗಭಾಗ್ಯ

ಗಳೂ ಇದ್ದರೂ ಅವನು ಜಿನಮುನಿಗಳ ಉಪದೇಶವನ್ನು ಭಕ್ತಿಯಿಂದ ಕೇಳುತ್ತಿದ್ದನು. ಒಂದು ಸಲ ಮುಂಡಿಯ ಪುತ್ರರೆಂಬ ಮುನಿಗಳು ಬರಲು ಮಹಾರಾಜನ ಕುಟುಂಬದ ಜತೆಯಲ್ಲಿ ವಾರಿಷೇಣನೂ ಅವರಲ್ಲಿಗೆ ಹೋಗಿ ಮುನಿವಂದನೆ ಮಾಡಿ ಧರ್ಮಶ್ರವಣ ಮಾಡಿದನು. ಮಿಕ್ಕವರೆಲ್ಲ ಊರಿಗೆ ಹಿಂತಿರುಗಿದರು. ಆದರೆ ವಾರಿಷೇಣ ಮುನಿಸನ್ನಿಧಿ ಯನ್ನು ಬಿಟ್ಟು ಕದಲಲಿಲ್ಲ. ಅವನಿಗೆ ಧರ್ಮಶ್ರವಣದ ಅಪೇಕ್ಷೆ ತೀವ್ರವಾಯಿತು. ಆ ಮುಂಡಿಯ ಪುತ್ರಾಚಾರ್ಯರು ಧರ್ಮವನ್ನು ಬಹಳ ಸಂಕ್ಷೇಪವಾಗಿಯಾದರೂ ಸ್ಪಷ್ಟ ವಾಗಿ ಹೇಳುತ್ತಿದ್ದರು. ವಾರಿಷೇಣ ಅವರ ಉಪದೇಶವನ್ನು ಕೇಳುತ್ತ ಕೇಳುತ್ತ ಐಹಿಕ ವಿಚಾರಗಳಲ್ಲಿ ಹೆಚ್ಚು ಹೆಚ್ಚು ವಿರಕ್ತನಾಗತೊಡಗಿದನು.

ಒಂದು ರಾತ್ರಿ ವಾರಿಷೇಣ ಕುಮಾರನು ಆಚಾರ್ಯರ ಸನ್ನಿಧಿಯಿಂದ ಹೊರಟ ವನು ರಾತ್ರಿ ಶ್ಮಶಾನಕ್ಕೆ ಹೋಗಿ ಅಲ್ಲಿ 'ರಾತ್ರಿ ಪ್ರತಿಮೆ' ನಿಂತನು. ಆ ಹೊತ್ತಿಗೆ ಮೃಗವೇಗನೆಂಬ ಒಬ್ಬ ಕಳ್ಳನು ಕೀರ್ತಿಮತಿಯೆಂಬ ಶ್ರೀಮಂತಳ ಹಾರವೊಂದನ್ನು ಕದ್ದು ಹೋಗುತ್ತಿದ್ದಾಗ ತಳವಾರರು ಅವನನ್ನು ಅಟ್ಟಿಸಿಕೊಂಡು ಹೋದರು. ಅವನು ಅಂಜಿ ಆ ಹಾರವನ್ನು ಪ್ರತಿಮೆಯಂತೆ ನಿಂತಿದ್ದ ವಾರಿಷೇಣನ ಮುಂದೆ ಎಸೆದು ತಪ್ಪಿಸಿಕೊಂಡು ಹೋದನು. ಹಾರವನ್ನು ಕಂಡ ತಳವಾರರು ವಾರಿಷೇಣನೇ ಕಳ್ಳ ನೆಂದು ತಿಳಿದು ಅವನನ್ನು ಹಿಂಸೆಗೆ ಗುರಿಮಾಡಿದರು. ಆದರೆ ಜಿನಭಕ್ತನಾದ ವಾರಿಷೇಣ ತಳವಾರರಿಂದ ಒದಗಿದ ಹಿಂಸೆಯನ್ನು ಲೆಕ್ಕಿಸದೆ ಜಿನಧ್ಯಾನ ಮಗ್ನನಾಗಿದ್ದುಬಿಟ್ಟನು. ಆಗ ಆ ನಗರದ ದೇವತೆಗಳಿಗೆ ಆಸನಕಂಪವುಂಟಾಯಿತು. ಅವರು ವಾರಿಷೇಣನಿಗೆ ಒದಗಿದ್ದ ಉಪಸರ್ಗವನ್ನು ಅರಿತು ಅವನಿಗೆ ಬೀಳುತ್ತಿದ್ದ ಏಟುಗಳನ್ನೆಲ್ಲ ಒಡವೆ ಗಳಾಗಿ ಮಾಡಿಬಿಟ್ಟರು. ತಳವಾರರಿಗೆ ಬಹಳ ಸೋಜಿಗವೇ ಆಯಿತು. ಅವರು ನಡೆದ ಸಂಗತಿಯನ್ನೆಲ್ಲ ದೊರೆಗೆ ವರದಿ ಮಾಡಿದರು. ಅವನು ಪರಿವಾರ ಸಮೇತನಾಗಿ ಅಲ್ಲಿಗೆ ಬರುವ ಹೊತ್ತಿಗೆ ಬೆಳಗಾಯಿತು. ವಾರಿಷೇಣ 'ರಾತ್ರಿ ಪ್ರತಿಮೆ'ಯ ಶಪಥ ನೆರ ವೇರಿತು. ಎತ್ತಿಕೊಂಡಿದ್ದ ತನ್ನ ಕೈಗಳನ್ನು ಅವನು ಕೆಳಕ್ಕೆ ಇಳಿಸಿ ರಾಜನನ್ನು ಎದುರು ಗೊಂಡನು. ದೊರೆ ಅವನ ಮಹಿಮೆಯನ್ನು ಮನಗಂಡು ಅವನ ಕ್ಷಮೆ ಬೇಡಿದನು.

ವಾರಿಷೇಣ ಇದೆಲ್ಲ ತನ್ನ ಪೂರ್ವಸಂಚಿಕ ಕರ್ಮಫಲವೆಂದೇ ತಿಳಿದನು. ಅರಮನೆ ಯಲ್ಲಿ ಕೊಂಚಕಾಲ ಎಲ್ಲರೊಂದಿಗೆ ಇದ್ದು ಆಮೇಲೆ ತಂದೆತಾಯಿಗಳ ಅನುಮತಿಯನ್ನು ಪಡೆದು ಪುಷ್ಯಗಿರಿಗೆ ಹೋಗಿ ಜಿನದೀಕ್ಷೆ ಪಡೆದು ತಪಸ್ಸು ಮಾಡಿದನು. ಅವನಿಗೆ ಜಂಘಚಾರಣವೆಂಬ ಋದ್ಧಿ ಲಭಿಸಿತು. ಆದರೂ ವಾರಿಷೇಣ ಅತಿಶಯವಾದ ತಪಸ್ಸಿನಲ್ಲಿ ಮಗ್ನನಾಗಿದ್ದನು.

ಒಂದು ದಿನ ವಾರಿಷೇಣಮುನಿಗೆ ತನ್ನ ಬಾಲ್ಯ ಸ್ನೇಹಿತನಾದ ಪುಷ್ಪದಾಡನೆಂಬ ಬ್ರಾಹ್ಮಣ ಯುವಕನ ನೆನಪಾಯಿತು. ಅವನಿಗೆ ಸುದಂತಿಯೆಂಬ ಕನ್ಯೆಯೊಡನೆ ಮದುವೆ ನಡೆಯುವ ಏರ್ಪಾಟಾಗಿದ್ದುದೂ ಅವನಿಗೆ ತಿಳಿಯಿತು. ಸಂಸಾರದ ಅಸಾರತೆಯನ್ನು

ಮನಗುಂಡಿದ್ದ ವಾರಿಷೇಣನು ತನ್ನ ಗೆಳೆಯನನ್ನು ಸಂಸಾರ ಕೂಪದೊಳಕ್ಕೆ ಬೀಳದಂತೆ ತಡೆಯಬೇಕೆಂದು ಸಂಕಲ್ಪಿಸಿ ಮದುವೆಯ ಮನೆಯಿಂದ ಅವನನ್ನು ಬಲವಂತವಾಗಿ ಕರೆ ತಂದು ತನ್ನ ಗುರುಗಳಿಂದಲೇ ಅವನಿಗೆ ಜಿನದೀಕ್ಷೆಯನ್ನು ಕೊಡಿಸಿದನು. ಆದರೆ ಪುಷ್ಪ ದಾಡ ವಿರಕ್ತನಲ್ಲ. ಗೆಳೆಯನ ದಾಕ್ಷಿಣ್ಯಕ್ಕೆ ದೀಕ್ಷೆಯನ್ನು ಕೈಕೊಂಡನಾದರೂ ಅವನಿಗೆ ತನ್ನ ಹೆಂಡತಿ ಸುದಂತಿಯ ಮೋಹ ಹೋಗಿರಲಿಲ್ಲ. ಅದನ್ನು ಗ್ರಹಿಸಿದ ವಾರಿಷೇಣ ಅವನ ಈ ಕೊರಗನ್ನು ಕಳೆದಲ್ಲದೆ ಅವನಿಗೆ ಸದ್ಗತಿಯಾಗದೆಂದು ತಿಳಿದು ಅವನನ್ನು ಜತೆಯಲ್ಲಿ ಕರೆದುಕೊಂಡು ತನ್ನ ತಂದೆಯ ಅರಮನೆಗೆ ಹೋಗಿ ಅಲ್ಲಿ ತನ್ನ ಹೆಂಡಿರಾಗಿದ್ದ ಐನೂರು ಸುಂದರ ವನಿತೆಯರನ್ನೆಲ್ಲ ತೋರಿಸಿದನು. ಪುಷ್ಪದಾಡನ ಹೆಂಡತಿ ಸುದಂತಿ ಯನ್ನೂ ಅಲ್ಲಿಗೆ ಕರೆಸಲಾಯಿತು. ವಾರಿಷೇಣನ ತ್ಯಾಗ ದೊಡ್ಡದೆಂದು ಮನವರಿಕೆ ಯಾದರೂ ಪುಷ್ಪದಾಡನಿಗೆ ಪತ್ನೀಮೋಹ ಬಿಡಲಿಲ್ಲ. ಆಗ ಸುದಂತಿಯು "ಜಿನೇಶ್ವರ ರೂಪಧರಿಸಿ ಪುನಃ ಹೆಂಡತಿಯನ್ನು ಸ್ಮರಿಸುವವನು ನಾಯಿಗಿಂತಲೂ ಕಡೆ, ನಾಯಿಯೂ ತಾನು ವಾಂತಿ ಮಾಡಿದುದನ್ನು ಮತ್ತೆ ಮುಟ್ಟದು" ಎಂದು ಹೇಳಿದುದನ್ನು ಕೇಳಿ ಪುಷ್ಪ ದಾಡನಿಗೆ ವಿಷಾದ ವೈರಾಗ್ಯಗಳು ಏಕಕಾಲದಲ್ಲಿ ಹುಟ್ಟಿ ಅದುವರೆಗೆ ತಾನು ಕೇಳಿದ್ದ ಜಿನಾಗಮಗಳನ್ನೆಲ್ಲ ದೃಢವಾಗಿ ನಂಬಿ, ಪುನಃ ಜಿನದೀಕ್ಷೆಯನ್ನು ಕೈಕೊಂಡು ತಪಸ್ಸು ಮಾಡಿ ಮರಣಾನಂತರ ದೇವಗತಿಯನ್ನು ಪಡೆದನು. ಅವನು ಮೊದಲು ಚಂಚಲ ಚಿತ್ತನಾಗಿದ್ದರೂ ವಾರಿಷೇಣ ಅವನನ್ನು ತಿರಸ್ಕರಿಸಿ ದೂರಮಾಡದೆ ಸಕಾಲದಲ್ಲಿ ಸರಿ ಯಾಗಿ ದೃಷ್ಟಾಂತ ಸಮೇತವಾಗಿ ಉಪದೇಶ ನೀಡಿದ್ದರಿಂದ ಅವನು ಉಳಿದುಕೊಂಡನು. ಶಿಥಿಲಮನಸ್ಕರನ್ನು ತಿದ್ದಿ ಧೈರ್ಯ ಹೇಳಿ ವಿವೇಕ ಮೂಡಿಸುವುದೇ ಸ್ಥಿತಿಕರಣ. ವಾರಿಷೇಣ ಪುಷ್ಪದಾಡನಿಗೆ ಆ ಉಪಕಾರ ಮಾಡಿದನು. ಅವನೂ ಕೊನೆಯಲ್ಲಿ ಸರ್ವಾರ್ಥಸಿದ್ಧಿಯಲ್ಲಿ ಹುಟ್ಟಿದನು.

## ೮. ಯಜ್ಞದತ್ತೆ– ಸೋಮದತ್ತ

ಅಹಿಚ್ಛತ್ರ ಪುರದ ರಾಜಪುರೋಹಿತ ಸೋಮದತ್ತನ ಹೆಂಡತಿ ಯಜ್ಞದತ್ತೆ ಗರ್ಭವತಿಯಾಗಿದ್ದಾಗ ಜಿನಸೇವೆ ಮಾಡುವ ಬಯಕೆಯನ್ನು ಪಡೆದಳು. ಮಹಾ ಶ್ರೋತ್ರಿಯರ ಮನೆಯ ಸೊಸೆ ಈ ಮಾತನ್ನು ಗಂಡನಲ್ಲಿ ಹೇಳಿಕೊಳ್ಳುವುದಕ್ಕೂ ಅಂಜಿ ಸುಮ್ಮನಿದ್ದಳು. ಆದರೆ ಅವಳ ಅಂತರಂಗದ ಕೋರಿಕೆ ಅಡಗಲಿಲ್ಲ. ಅವಳು ದಿನ ಕ್ರಮದಲ್ಲಿ ಬಹಳ ಕೃಶಳಾದಳು. ನೆಂಟರು ಅವಳು ಹೀಗೆ ನವೆಯುವುದಕ್ಕೆ ಕಾರಣ ತಿಳಿಯದೆ ಕಂಗೆಟ್ಟರು. ಅವಳಿಗೆ ಏನು ಅಪೇಕ್ಷೆಯಿದ್ದರೂ ನಿಸ್ಸಂಕೋಚವಾಗಿ ಹೇಳ ಬೇಕೆಂದರು. ಆದರೆ ಆಕೆ ನಿಜ ಹೇಳದೆ ತನಗೆ ಮಾವಿನ ಹಣ್ಣು ತಿನ್ನುವ ಬಯಕೆ ಎಂದು ಹೇಳಿದಳು. ಆದರೆ ಅಕಾಲದಲ್ಲಿ ಮಾವಿನ ಹಣ್ಣು ಹೇಗೆ ಸಿಕ್ಕಬೇಕು?

ಸೋಮದತ್ತನೂ ಶಿಷ್ಯರೂ ನಾಡಿನಲ್ಲೆಲ್ಲ ಅಲೆದರು. ಎಲ್ಲಿಯೂ ಹಣ್ಣು ಲಭಿಸಲಿಲ್ಲ. ಬಲವಾಹಿನಿಯೆಂಬ ತೊರೆಯ ದಡದ ಸುಮತಿಭಟ್ಟಾರಕರ ತೋಟದಲ್ಲಿ ಹಣ್ಣು ಬಿಟ್ಟಿದ್ದುದನ್ನು ಕೇಳಿ ಸೋಮದತ್ತ ಅಲ್ಲಿಗೆ ಹೋಗುತ್ತ ಆ ಮುನಿಗಳ ತಪಸ್ಸಿನ ಪ್ರಭಾವದಿಂದಲೇ ಅಕಾಲದಲ್ಲಿ ಮಾವು ಫಲಿಸಿರಬೇಕೆಂದು ಯೋಚಿಸಿಕೊಂಡನು. ಭಟ್ಟಾರಕರನ್ನು ಕಂಡಾಗ ಅವರು ಸಹಸ್ರಾರ ಕಲ್ಪದ ಸೂರ್ಯಾಭವೆಂಬ ವಿಮಾನವನ್ನು ವರ್ಣಿಸುತ್ತಿದ್ದರು. ಆ ವರ್ಣನೆ ಕೇಳಿ ಸೋಮದತ್ತನಿಗೆ ತಾನು ಹಿಂದಿನ ಭವದಲ್ಲಿ ಆ ವಿಮಾನದಲ್ಲಿ ಸೂರ್ಯವರದೇವನಾಗಿ ಹುಟ್ಟಿದ್ದ ಸಂಗತಿ ನೆನಪಿಗೆ ಬಂದು ಮೂರ್ಛೆ ಹೋದನು. ಎಚ್ಚತ್ತ ಮೇಲೆ ಅವನು ಮುನಿಗಳನ್ನು ವಂದಿಸಿ ತನ್ನ ಹೆಂಡತಿ ಮಾವಿನಹಣ್ಣೇಬೇಕೆಂದು ಕೇಳಲು ಕಾರಣವೇನೆಂದು ಕೇಳಿದನು. ಆಗ ಅವರು ಯಜ್ಞದತ್ತೆ ಗರ್ಭದಲ್ಲಿ ಧರಿಸಿದ್ದ ಕೂಸು ಜಿನಭಕ್ತನಾಗಿದ್ದನೆಂದೂ ಅವನ ಬಯಕೆಯೇ ಆಕೆಯ ಬಯಕೆಯಾಯಿತೆಂದೂ ಅದನ್ನು ಹೇಳಲಂಜಿ ಮಾವಿನಹಣ್ಣು ಬೇಕೆಂದು ಕೇಳಿದಳೆಂದೂ ಹೇಳಿದರು.

ಆಗ ಸೋಮದತ್ತನು ಆ ಹಣ್ಣುಗಳನ್ನು ತನ್ನ ಶಿಷ್ಯರ ಕೈಲಿ ಮನೆಗೆ ಕಳುಹಿಸಿ ತಾನು ವಿರಕ್ತನಾಗಿ ಜಿನದೀಕ್ಷೆ ಪಡೆದು ನಾಭಿಗಿರಿಗೆ ಹೋಗಿ ತಪಸ್ಸಿಗೆ ತೊಡಗಿದನು. ಅತ್ತ ಯಜ್ಞದತ್ತೆ ಗಂಡುಮಗುವನ್ನು ಹೆತ್ತಳು. ಕಾಲಕ್ರಮದಲ್ಲಿ ಸೋಮದತ್ತನ ವೃತ್ತಾಂತವನ್ನು ಕೇಳಿ ನಾಭಿಗಿರಿಗೆ ಹೋಗಿ ಅವನ ತಪಸ್ಸನ್ನು ಕೆಡಿಸಲು ಪ್ರಯತ್ನಿಸಿದರಾದರೂ ನೆಂಟರ ಉದ್ದೇಶ ಕೈಗೂಡಲಿಲ್ಲ. ಅವನು ಸ್ಥಿರಚಿತ್ತನಾಗಿದ್ದುಬಿಟ್ಟನು. ಆಗ ಅವನ ಬಂಧುಗಳು ಅವನ ಮಗುವನ್ನು ಅವನ ಮುಂದೆಯೇ ಬಿಟ್ಟು ಮನೆಗೆ ಹಿಂತಿರುಗಿದರು.

ಒಂದು ದಿನ ಅಮರಾವತಿಯ ಭಾಸ್ಕರದೇವನೂ ಅವನ ಹೆಂಡತಿ ಮಣಿಮಾಲೆಯೂ ವಿಮಾನದಲ್ಲಿ ಹೋಗುತ್ತ ಸೋಮದತ್ತ ತಪಸ್ವಿಯನ್ನೂ ಅವನ ಮುಂದೆ ಇದ್ದ ಮಗುವನ್ನೂ ನೋಡಿ ಆ ಮಗುವನ್ನು ಕರೆದುಕೊಂಡು ಹೋಗಿ ವಜ್ರಕುಮಾರನೆಂದು ಹೆಸರಿಟ್ಟು ಸಲಹಿದರು. ವಜ್ರಕುಮಾರ ಯೌವನಕನಾಗಿ ವಿಮಳ ಮಹಾರಾಜನ ಮಗಳು ಇಂದುಮತಿಯನ್ನು ಮದುವೆಯಾಗಿ ವಿಮಾನದಲ್ಲಿ ಹೋಗುತ್ತಿದ್ದಾಗ ಪವನವೇಗೆಯೆಂಬ ವಿದ್ಯಾಧರಸ್ತ್ರೀಯೊಬ್ಬಳನ್ನು ಒಂದು ಹಾವು ನುಂಗುತ್ತಿದ್ದುದನ್ನು ಕಂಡು ಅವಳನ್ನು ಕರುಣೆಯಿಂದ ರಕ್ಷಿಸಿದನು, ಅದಕ್ಕೆ ಅವಳು ಕೃತಜ್ಞಳಾಗಿ ವಜ್ರಕುಮಾರನಿಗೆ ಅನೇಕ ವಿದ್ಯೆಗಳನ್ನು ಕೊಟ್ಟಳು. ಆ ವಿದ್ಯಾಬಲದಿಂದ ವಜ್ರಕುಮಾರನು ಅಮರಾವತಿಯನ್ನು ಆಕ್ರಮಿಸಿಕೊಂಡಿದ್ದ ಮಂದರದೇವನನ್ನು ಗೆದ್ದು ಅಲ್ಲಿ ಸುಖವಾಗಿ ರಾಜ್ಯಭಾರ ಮಾಡುತ್ತಿದ್ದನು. ಹಿಂದೆ ಅವನು ಹಾವಿನ ಬಾಯಿಂದ ಕಾಪಾಡಿದ್ದ ಪವನವೇಗೆಯು ಸ್ವಯಂವರದಲ್ಲಿ ವಜ್ರಕುಮಾರನನ್ನೇ ವರಿಸಿದಳು.

ಕೊಂಚಕಾಲ ವಜ್ರಕುಮಾರನು ತನ್ನ ಮಡದಿಯರೊಡನೆ ಸುಖವಾಗಿ ಕಾಲಕ್ಷೇಪ ಮಾಡುತ್ತಿರಲು ಒಂದು ದಿನ ಮಣಿಮಾಲೆ ತನಗೆ ವಜ್ರಕುಮಾರನು ಆಕಸ್ಮಾತ್ ದೊರೆತ ಸಾಕು ಮಗನೇ ಹೊರತು ಸ್ವಂತ ಮಗನಲ್ಲವೆಂಬುದನ್ನು ಮೈಮರೆತು ಸೂಚ್ಯವಾಗಿ

ಹೇಳಿದುದನ್ನು ಕೇಳಿದ ಪವನವೇಗೆ ಗಂಡನಿಗೆ ತಿಳಿಯ ಹೇಳಿದಳು. ಅವನು ಮರುದಿನ ತನ್ನ ತಾಯಿಯಿಂದಲೇ ಎಲ್ಲ ವೃತ್ತಾಂತವನ್ನೂ ವಿವರವಾಗಿ ತಿಳಿದು ವಿರಕ್ತನಾಗಿ ದಕ್ಷಿಣ ಮಥುರೆಯ ಸಹಸ್ರಕೂಟ ಚೈತ್ಯಾಲಯದ ಸೋಮದತ್ತ ಭಟ್ಟಾರಕರಿಂದಲೇ ದೀಕ್ಷೆಯನ್ನು ಕೈಕೊಂಡು ತಪೋಮಗ್ನನಾದನು. ತಪೋಬಲದಿಂದ ಅವನು ಚಾರಣಋದ್ಧಿಯನ್ನು ಪಡೆದನು.

ವಜ್ರಕುಮಾರನು ತಪಶ್ಚರ್ಯೆಗೆ ತೊಡಗಿದ್ದ ಪಟ್ಟಣದ ದೊರೆ ಪೂತಿವಾಹನನ ಪಟ್ಟದರಾಣಿ ಓಹಿಲೆಯು ಫಾಲ್ಗುಣದ ನಂದೀಶ್ವರ ಹಬ್ಬದಂದು ಪದ್ಧತಿಯಂತೆ ಜಿನಪೂಜೆ ನಡೆಸಬೇಕೆಂದಿರಲು ಆ ರಾಜನ ಪ್ರಿಯಪತ್ನಿಯಾಗಿದ್ದ ಬುದ್ಧದಾಸಿಯು ಅದೇ ದಿನ ಬುದ್ಧನ ಉತ್ಸವವನ್ನು ಏರ್ಪಡಿಸಿದಳು. ಇದರಿಂದ ಓಹಿಲೆ ಅಪಮಾನಪಟ್ಟುಕೊಂಡು ಸೋಮದತ್ತಭಟ್ಟಾರಕರಲ್ಲಿ ಮೊರೆಯಿಟ್ಟಳು. ಅವರು ವಜ್ರಕುಮಾರನಿಂದಲೇ ಈ ಕೆಲಸ ನೆರವೇರುವುದೆಂದು ಹೇಳಿದರು. ಅದರಂತೆ ಓಹಿಲೆ ವಜ್ರಕುಮಾರನಲ್ಲಿಗೆ ಹೋಗಿ ಬೇಡಿದಳು. ಆತನು ಓಹಿಲೆಯ ಕೋರಿಕೆಯನ್ನು ಈಡೇರಿಸುವುದಕ್ಕಾಗಿ ಜಿನಧರ್ಮ ವಾತ್ಸಲ್ಯದಿಂದ ಅಮರಾವತಿಯಲ್ಲಿದ್ದ ಭಾಸ್ಕರ ದೇವನನ್ನೂ ಅವನ ಸಂಗಡಿಗರಾದ ವಿದ್ಯಾಧರರನ್ನೂ ಓಹಿಲೆ ನಡೆಸುವ ಜಿನಪೂಜೋತ್ಸವಕ್ಕೆ ಬರಮಾಡಿದನು. ಅವರೆಲ್ಲರೂ ಎಂಟು ದಿನಗಳ ಕಾಲ ದಕ್ಷಿಣ ಮಧುರೆಯಲ್ಲಿ ವಜ್ರಮಯವಾದ ಜಿನಪ್ರತಿಮೆಗಳಿಂದ ತುಂಬಿದ ಸ್ತೂಪವನ್ನು ಇರಿಸಿ ಮಹಾವೈಭವದಿಂದ ಪೂಜೆಮಾಡಿಸಿದನು. ಅದನ್ನು ದೇವಾನುದೇವತೆಗಳೂ ಪೂಜಿಸಿದರು. ಓಹಿಲೆಯ ಮನೋರಥ ಪೂರ್ಣವಾಗಿ ನೆರವೇರಿತು.

## ೯. ಅಕಂಪನಾಚಾರ್ಯರು

ಕುರುಜಾಂಗಣದ ಹಸ್ತಿನಾಪುರದ ದೊರೆ ಮಹಾಪದ್ಮನೂ ಅವನ ಮಗ ವಿಷ್ಣುಕುಮಾರನೂ ಇಹಸಂಸಾರದಲ್ಲಿ ವೈರಾಗ್ಯ ಹೊಂದಿ ತಪಸ್ಸಿಗೆ ಹೋದರು. ಆಗ ಮಹಾಪದ್ಮನೇ ಅರಸನಾಗಿದ್ದನು. ಅವಂತಿದೇಶದ ಉಜ್ಜಯನೀಪಟ್ಟಣದ ಜಯವರ್ಮರಾಜನ ಮಂತ್ರಿ ಬಲಿಯು ತನ್ನ ತಮ್ಮಂದಿರಾದ ಶಕ್ರ, ಬೃಹಸ್ಪತಿ, ಪ್ರಹ್ಲಾದ ಎಂಬ ಸೋದರರೊಡನೆ ಸುಖದಿಂದಿರಲು ಒಂದು ದಿನ ಅಕಂಪನ ಮುನೀಶ್ವರರು ಐನೂರು ಮಂದಿ ಜತೆಯ ಮುನಿಗಳೊಡನೆ ಆವೂರಿಗೆ ಬಂದರು. ರಾಜನು ಅವರ ದರ್ಶನಮಾಡಿ ಅವರಿಂದ ಧರ್ಮವನ್ನು ಕೇಳಿ ಅವರನ್ನು ಪೂಜಿಸುತ್ತಿರುವಾಗ ಮಂತ್ರಿಯಾದ ಬಲಿಯು ಅಕಂಪನರೊಡನೆ ವಿತಂಡಾವಾದ ತೊಡಗಿ ಸೋತು ಅವಮಾನಪಟ್ಟನು. ಆ ಅಪಮಾನದಿಂದ ರೋಷಗೊಂಡು ಆ ಮುನಿಯನ್ನು ಕೊಲ್ಲಲು ಸಂಕಲ್ಪಿಸಿ ಅವನು ಸಮಯ ನಿರೀಕ್ಷಣೆ ಮಾಡುತ್ತಿದ್ದನು.

ಈ ಮಧ್ಯದಲ್ಲಿ ಸಿಂಹಕೀರ್ತಿಯೆಂಬ ರಾಜನು ಪದ್ಮನ ಸೈನ್ಯವನ್ನು ಕಾಳಗದಲ್ಲಿ ಸೋಲಿಸಿದನು. ಆಗ ಬಲಿ ಅವನ ಮೇಲೆ ದಂಡೆತ್ತಿ ಹೋಗಿ ಅವನನ್ನು ಗೆದ್ದು ಸೆರೆ

ಹಿಡಿದು ತಂದು ಅರಸನಿಗೆ ಒಪ್ಪಿಸಿದನು. ಪದ್ಮ ಇದರಿಂದ ಬಹಳ ಸಂತೋಷಪಟ್ಟು ಬಲಿಗೆ ಒಂದು ವರವನ್ನು ಕೊಟ್ಟನು. ಬಲಿ ಅದನ್ನು ಆಗಲೇ ಕೇಳದೆ ತನಗೆ ಮುಂದೆ ಬೇಕಾದಾಗ ಬೇಡುವುದಾಗಿ ಹೇಳಿದನು. ಕೊಂಚ ಕಾಲದ ತರುವಾಯ ಅಕಂಪನರು ಆವೂರಿಗೆ ಬಂದು ಚಾತುರ್ಮಾಸ್ಯಕ್ಕೆ ನಿಂತರು. ಇದನ್ನು ಕಂಡು ತನ್ನ ಸೇಡಿಗೆ ಇದು ಸರಿಯಾದ ಸಮಯವೆಂದು ಯೋಚಿಸಿ ತಾನು ದೇಶದ ಕ್ಷೇಮಕ್ಕಾಗಿ ಒಂದು ಯಜ್ಞ ಕೈಕೊಳ್ಳುವುದಾಗಿ ಹೇಳಿ ಆ ಮಹಾ ಕಾರ್ಯನಿರ್ವಹಣೆ ಗೋಸ್ಕರ ರಾಜ್ಯವನ್ನು ಹದಿನೈದು ದಿನಗಳ ಕಾಲ ತನಗೆ ವಶಪಡಿಸಬೇಕೆಂದೂ ಅದೇ ತಾನು ಬೇಡುವ ವರವೆಂದೂ ಹೇಳಿದನು. ಪದ್ಮನು ತನ್ನ ಮಾತಿನಂತೆ ಅವನು ಬೇಡಿದ ವರವನ್ನು ಕೊಟ್ಟು ತಾನು ಅರಮನೆಯಲ್ಲಿ ಇರುತ್ತಿದ್ದನು ; ರಾಜ್ಯಾಡಳಿತದಲ್ಲಿ ಪ್ರವೇಶಿಸುತ್ತಿರಲಿಲ್ಲ.

ಆಗ ಬಲಿಯು ಅಕಂಪನರು ತಂಗಿದ್ದ ಸಿತಗಿರಿಯ ತಪ್ಪಲಿನ ವಿಸ್ತಾರ ಪ್ರದೇಶದಲ್ಲಿ ಭೂಶೋಧನೆ ಮಾಡಿಸುತ್ತಿದ್ದನು. ಆಗ ಮುನಿಗಳು ವಾಸವಾಗಿದ್ದ ಗುಹೆಗೆ ಅಡ್ಡಲಾಗಿ ಸೌದೆಯನ್ನು ತುಂಬಿಸಿ ಬೆಂಕಿ ಹಚ್ಚಿರೆಂದು ಆಳುಗಳಿಗೆ ಅಪ್ಪಣೆ ಮಾಡಿದನು. ಆಗುಹೆಯೊಳಗೆ ಯಾವುದಾದರೂ ಕ್ರೂರಮೃಗಗಳಿರಬಹುದೆಂಬ ನೆಪವೊಡ್ಡಿ ಅವರನ್ನು ನಾಶಪಡಿಸುವ ಮನೋರಥ ಅವನದು. ಆದರೆ ದೈವಚಿತ್ತವನ್ನು ಅರಿಯಬಲ್ಲವರಾರು ? ಮಿಥಿಲಾಪುರದ ಜಿಷ್ಣು ಆಚಾರ್ಯರು ತಮ್ಮ ಪರಮಾವಧಿಜ್ಞಾನದಿಂದ ಇದನ್ನು ತಿಳಿದು ಮುನಿಗಳಿಗೆ ಒದಗಲಿದ್ದ ಭಯಂಕರ ಉಪಸರ್ಗವನ್ನು ತಪ್ಪಿಸುವುದಕ್ಕೋಸ್ಕರ ತಮ್ಮ ಶಿಷ್ಯನಾದ ವಿಷ್ಣುಕುಮಾರನನ್ನು ಕಳುಹಿಸಿದರು. !

ವಿಷ್ಣುಕುಮಾರನು ಮೊದಲು ಪದ್ಮರಾಜನನ್ನು ಕಂಡು ಬಲಿಯು ಮಾಡುತ್ತಿದ್ದ ದುಷ್ಟತಂತ್ರವನ್ನು ವಿವರಿಸಿ ಇತರರಿಗೆ ಹಿಂಸೆಯಾಗದಂತೆ ಬಲಿಯನ್ನು ತಾನೇ ಶಿಕ್ಷಿಸುವೆನೆಂದು ಹೇಳಿ ವಾಮನನ ರೂಪದಿಂದ ಬಲಿಯ ಬಳಿಗೆ ಹೋಗಲು, ಅವನು ಈ ವಾಮನನು ಸಾಕ್ಷಾತ್ ವಿಷ್ಣುವೆಂದೇ ಬಗೆದು ತನ್ನಿಂದ ಏನಾದರೂ ದಾನ ಸ್ವೀಕರಿಸಬೇಕೆಂದು ಬೇಡಿಕೊಳ್ಳಲು ವಾಮನನು ಮೂರಡಿ ಭೂಮಿಯನ್ನು ಬೇಡಿ ಪಡೆದುಕೊಂಡು ಅದ್ಭುತ ರೂಪಧರಿಸಿ ಇದ್ದ ಸ್ಥಳವನ್ನೆಲ್ಲ ಎರಡು ಹೆಜ್ಜೆಗಳಲ್ಲಿ ಅಳೆದು ಮೂರನೆಯ ಅಡಿಗೆ ಸ್ಥಳವಿಲ್ಲದೆ ಅದನ್ನು ಆಕಾಶದಲ್ಲಿ ಮೆರೆಸುತ್ತಿರಲು ದೇವಾನುದೇವತೆಗಳೆಲ್ಲ ಅಂಜಿ ಓಡಿಬಂದು ಬಲಿಯನ್ನು ಮುಟ್ಟಿಕಟ್ಟಿ ಹಸ್ತಿನಾಪುರದಿಂದ ಹೊರಕ್ಕೆ ಹಾಕಿ, ಅಕಂಪನರನ್ನು ಗುಹೆಯೊಳಗಿಂದ ಹೊರಕ್ಕೆ ಕರೆತಂದು ಅವರಿಗೆ ಉಂಟಾಗಿದ್ದ ಉಪಸರ್ಗವನ್ನು ತಪ್ಪಿಸಿದರು. ಆಮೇಲೆ ವಾಮನನು ತನ್ನ ನಿಜ ರೂಪವನ್ನು ಮೆರೆದು ಎಲ್ಲರ ಪೂಜೆ ವಂದನೆಗಳನ್ನು ಸ್ವೀಕರಿಸಿದನು. ಪದ್ಮರಾಜನು ಮೊದಲುಗೊಂಡು ಎಲ್ಲರೂ ಈ ಪವಾಡವನ್ನು ಕಂಡು ಬೆರಗಾಗಿ ವಿಷ್ಣುಕುಮಾರನನ್ನು ಭಕ್ತಿಯಿಂದ ಪೂಜಿಸಿ ಜಿನಧರ್ಮವನ್ನು ದೃಢವಾಗಿ ನಂಬಿದರು,

## ೧೦ ಅಹಿಂಸೆಯ ಕಥೆ—ಧನಕೀರ್ತಿ

ಇದುವರೆಗೆ ಗೌತಮಸ್ವಾಮಿಗಳು ಶ್ರೇಣಿಕ ಮಹಾರಾಜನಿಗೆ ಸಮ್ಯಗ್ದರ್ಶನ ಮತ್ತು ಅದರ ಎಂಟು ಅಂಗಗಳಾದ ನಿಶ್ಶಂಕೆ ನಿಷ್ಕಾಂಕ್ಷೆ, ನಿರ್ವಿಚಿಕಿತ್ಸೆ, ಅಮೂಢ ದೃಷ್ಟಿತ್ವ, ಉಪಗೂಹನ, ಸ್ಥಿತಿಕರಣ ವಾತ್ಸಲ್ಯ ಮತ್ತು ಧರ್ಮಪ್ರಭಾವನೆಗಳನ್ನೂ ಅವು ಗಳ ಸಾಧನೆಯಲ್ಲಿ ಪ್ರಸಿದ್ಧರಾದ ಶ್ರಾವಕ ಮತ್ತು ಮುನಿಗಳ ಕಥೆಗಳನ್ನೂ ಹೇಳಿ ಈಗ ಜೈನಗೃಹಸ್ಥರು ಅನುಸರಿಸಬೇಕಾದ ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹಗಳೆಂಬ ಐದು ಅಣುವ್ರತಗಳ ಮಹಿಮೆಯನ್ನು ನಿರೂಪಿಸಿ ಅವು ಗಳಲ್ಲಿ ಸಿದ್ಧಿ ಹೊಂದಿದವರ ಕಥೆಗಳನ್ನು ಹೇಳತೊಡಗುತ್ತಾರೆ. ಅವುಗಳಲ್ಲಿ ಮೊದಲನೆ ಯದು ಅಹಿಂಸೆ. ಇದರಲ್ಲಿ ಧನಕೀರ್ತಿಯೆಂಬ ವೈಶ್ಯಯುವಕನು ತನ್ನ ಹಿಂದಿನ ಜನ್ಮದಲ್ಲಿ ಬೆಸ್ತನಾಗಿದ್ದು ಗುರುಗಳಿಂದ ಪ್ರಾಪ್ತವಾದ ಅಹಿಂಸಾವ್ರತದ ನಿಯಮದಂತೆ ತನ್ನ ಬಲೆಗೆ ಬಿದ್ದ ಮೊದಲನೆಯ ಮೀನನ್ನು ಕೊಲ್ಲದೆ ಬಿಟ್ಟ ಪುಣ್ಯಫಲದಿಂದ ತನಗೆ ಬಂದ ವಿಪತ್ತುಗಳನ್ನೆಲ್ಲ ಗೆದ್ದುಕೊಂಡ ಕಥೆ ಬಂದಿದೆ. ಬೆಸ್ತ ಮೀನನ್ನು ಕೊಲ್ಲದೆ ಜೀವಿಸು ವುದು ಹೇಗೆ ? ಈ ಕಷ್ಟವನ್ನು ತಿಳಿದ ಗುರುಗಳು 'ಮೊದಲು ಬಲೆಗೆ ಬಿದ್ದ ಮೀನನ್ನು ಬಿಟ್ಟು ಬಿಡು' ಎಂದರು. ಆದರೆ ಆ ಭಕ್ತ ಬಹಳ ನಿಷ್ಠ. ಮೊದಲು ಬಿದ್ದ ಮೀನನ್ನು ತಾನು ಜೀವದಿಂದ ಬಿಟ್ಟರೂ, ತಾನು ಎರಡನೆ ಸಲ ಬಲೆ ಬೀಸಿದಾಗ ಅದು ಮತ್ತೆ ಬೀಳದೆಂಬ ಭರವಸೆಯೇನಿದೆ ? ಅದಕ್ಕಾಗಿ ಅವನು ಅಂದು ಮೊದಲು ಹಿಡಿದ ಮೀನಿನ ಕೊರಳಿಗೆ ಒಂದು ದಾರಕಟ್ಟಿದ, ಅದು ಪುನಃ ಬಂದರೆ ಗುರುತಿಸುವುದ ಕ್ಕಾಗಿ ! ಆ ದಿನ ಐದು ಸಲ ಬಲೆ ಬೀಸಿದರೂ ಅದೊಂದೇ ಮೀನು ಮತ್ತೆ ಮತ್ತೆ ಬಿತ್ತು. ಬೇರೆ ಮೀನು ಸಿಕ್ಕಲಿಲ್ಲ! ವ್ರತ ಮೀರಬಾರದೆಂದು ಅಂದು ಬರಿಗೈಯಲ್ಲಿ ಮನೆಗೆ ಹೋಗಿ ಹೆಂಡತಿಯ ಬೈಗಳಿಗೆ ರೋಸಿ ಗುರುಗಳನ್ನು ನೋಡಬಯಸಿ ಬರುತ್ತ ಕತ್ತಲೆ ಯಲ್ಲಿ ಹಾವು ಕಚ್ಚಿ ಸತ್ತನು. ಆ ವ್ರತನಿಷ್ಠೆಯಲ್ಲಿಯೇ ಇದ್ದು ಸತ್ತುದರಿಂದ ಆ ಪುಣ್ಯ ಫಲ ಅವನಿಗೆ ಧನಕೀರ್ತಿಯ ಜನ್ಮವನ್ನು ಕೊಟ್ಟಿತು. ಐದು ಸಲ ಮೀನನ್ನು ಕಾಪಾಡಿದ್ದ ರಿಂದ ಐದು ಸಲ ಒದಗಿದ್ದ ಮೃತ್ಯು ತಪ್ಪಿತು. ಅದು ಅಹಿಂಸಾವ್ರತದ ಮಹಿಮೆ !

ಮಾಳವದ ಗುಣಪಾಲಸೆಟ್ಟಿಗೂ ಅವನ ಹೆಂಡತಿ ಧನಶ್ರೀಗೂ ಹುಟ್ಟಿದವನೇ ಧನಕೀರ್ತಿ. ಅವನಿಗೆ ಸುಬಂಧುಶ್ರೀ ಎಂಬ ಅಕ್ಕನಿದ್ದಳು. ಅವಳು ಮಹಾಸುಂದರಿ ಉದ್ಯಾನದಲ್ಲಿ ಉಯ್ಯಾಲೆಯಾಡುತ್ತಿದ್ದ ಆ ಕನ್ಯೆಯನ್ನು ಕಂಡು ಮೋಹಿಸಿ ಮಾಳವದ ವಿಶ್ವಂಧರ ಮಹಾರಾಜನು ಅವಳನ್ನು ತನಗೆ ಮದುವೆ ಮಾಡಿಕೊಡಬೇಕೆಂದು ಕೇಳಿ ಹೆಗ್ಗಡೆಗಳನ್ನು ಸೆಟ್ಟಿಯ ಬಳಿಗೆ ಕಳುಹಿಸಿದನು. ಸೆಟ್ಟಿ ರಾಜಾಜ್ಞೆಯನ್ನು ಮೀರುವಂತಿರ ಲಿಲ್ಲ. ಆದರೆ ಜಿನಭಕ್ತನಾದ ತಾನು ಅನ್ಯಧರ್ಮದವನಿಗೆ ಹೆಣ್ಣು ಕೊಡುವುದು ಸರಿ ಯಲ್ಲ ; ಅದು ದುರ್ಗತಿಗೆ ದಾರಿ. ಅವನ ಹೆಂಡತಿಯೂ ಮಗಳೂ ಹಾಗೆಯೇ ಅಭಿಪ್ರಾಯಪಟ್ಟರು. ಆಗ ಗುಣಪಾಲಸೆಟ್ಟಿ ಹೆಗ್ಗಡೆಗಳಿಗೆ ಸಮಯೋಚಿತವಾದ ಉತ್ತರ

ಹೇಳಿ ಕಳುಹಿಸಿ ತಾನು ತನ್ನ ಸಮಸ್ತ ಐಶ್ವರ್ಯವನ್ನೂ ತ್ಯಜಿಸಿ ಮಗಳನ್ನು ಕರೆದು ಕೊಂಡು ದೇಶತ್ಯಾಗ ಮಾಡಲು ಸಂಸಿದ್ಧನಾದನು. ಆದರೆ ಅವನ ಹೆಂಡತಿ ಧನಶ್ರೀ ಆಗ ಪೂರ್ಣ ಗರ್ಭಿಣಿ. ಅವಳನ್ನು ಪ್ರಯಾಣದ ಶ್ರಮಕ್ಕೆ ಗುರಿಪಡಿಸುವಂತಿರಲಿಲ್ಲ. ಆದ್ದರಿಂದ ಅವಳನ್ನು ತನ್ನ ಪ್ರಾಣಸ್ನೇಹಿತನಾದ ಶ್ರೀದತ್ತಸೆಟ್ಟಿಯ ಮನೆಯಲ್ಲಿ ಬಿಟ್ಟು ಗುಣಪಾಲನು ರಾತ್ರಿಯೇ ಪ್ರಯಾಣ ಹೊರಟುಬಿಟ್ಟನು.

ಗುಣಪಾಲಸೆಟ್ಟಿ ಧರ್ಮರಕ್ಷಣೆಗಾಗಿ ಸಮಸ್ತ ಐಶ್ವರ್ಯವನ್ನು ತ್ಯಜಿಸಿ ಹೊರಟು ಹೋದನೆಂಬ ಸುದ್ದಿ ಕೇಳಿ ದೊರೆ, ಅವನ ಧರ್ಮವೇ ಶ್ರೇಷ್ಠವಾದದ್ದಿರಬಹುದೆಂದು ಬಗೆದು ಅವನ ಆಸ್ತಿ ಪಾಸ್ತಿಗಳಿಗೆ ರಕ್ಷಕರನ್ನು ಗೊತ್ತು ಮಾಡಿ ಗುಣಪಾಲಸೆಟ್ಟಿಯನ್ನು ಹುಡುಕಿ ಕರೆತರುವಂತೆ ತನ್ನ ಭಟರಿಗೆ ನೇಮಿಸಿದನು.

ಇತ್ತ ಗುಣಪಾಲನ ಹೆಂಡತಿ ಧನಶ್ರೀ ಶ್ರೀದತ್ತಸೆಟ್ಟಿಯ ಮನೆಯಲ್ಲಿ ರಹಸ್ಯದಿಂದಿರುವಾಗ ಅವನ ಮನೆಗೆ ಶಿವಗುಪ್ತರೆಂಬ ಮುನಿಗಳು ಬಂದರು. ಅವರಿಗೆ ಮನೆಯವರೆಲ್ಲ ವಂದಿಸಿದಾಗ ಆಕೆಯೂ ಹೋಗಿ ವಂದನೆ ಮಾಡಿದಳು. ಮುನಿಗಳು ಆಕೆಯ ವೃತ್ತಾಂತ ವನ್ನು ಕೇಳಿ ತಿಳಿದು, ಆಕೆಯ ಹೊಟ್ಟೆಯಲ್ಲಿ ಹುಟ್ಟುವ ಮಗನು ಮುಂದೆ ಈ ಭೂಮಂಡಲಕ್ಕೆ ರಾಜನಾಗುವನೆಂದು ಹೇಳಿದರು. ಈ ಭವಿಷ್ಯವನ್ನು ಕೇಳಿ ಶ್ರೀದತ್ತನ ಅಸೂಯೆ ಕೆರಳಿತು. ಗೋಪಾಲಸೆಟ್ಟಿಯ ಸ್ನೇಹವನ್ನು ಮರೆತು, ಧನಶ್ರೀ ಹೆತ್ತ ಕೂಡಲೆ ಆ ಕೂಸನ್ನು ಕೊಲ್ಲಲು ಒಬ್ಬ ಕ್ರೂರ ಪುರುಷನಿಗೆ ಒಪ್ಪಿಸಿ ಗರ್ಭಸ್ರಾವವಾಯಿ ತೆಂದು ಧನಶ್ರೀಗೆ ಸುಳ್ಳು ಹೇಳಿದನು. ಆ ಹೊಲೆಯನು ಕೂಸನ್ನು ಕಾಡಿನಲ್ಲಿ ಬಿಟ್ಟು ಬಂದನೇ ಹೊರತು ಕೊಲ್ಲಲಿಲ್ಲ. ಪುಣ್ಯವಶದಿಂದ ಶ್ರೀದತ್ತನ ತಂಗಿಯ ಗಂಡ ವ್ಯಾಪಾರಕ್ಕೆ ಹೋಗುತ್ತ ದಾರಿಯಲ್ಲಿ ಆ ಕೂಸನ್ನು ಕಂಡು ಅದನ್ನು ತನ್ನ ಮಗುವಿನಂತೆಯೇ ಸಾಕಿ ಅದಕ್ಕೆ ಧನಕೀರ್ತಿಯೆಂಬ ಹೆಸರಿಟ್ಟನು.

ಶ್ರೀದತ್ತಸೆಟ್ಟಿ ತನ್ನ ತಂಗಿಗೆ ಬಹಳ ಕಾಲದ ಮೇಲೆ ಮಗ ಹುಟ್ಟಿದ್ದಕ್ಕೆ ಸಂತೋಷ ಪಟ್ಟವನಂತೆ ನಟಿಸುತ್ತ ಉಪಾಯದಿಂದ ಆ ಕೂಸನ್ನು ಕೊಲ್ಲುವ ಪ್ರಯತ್ನ ಹೂಡಿ ಅದನ್ನು ಒಬ್ಬ ಮಾದಿಗನ ಕೈಲಿ ಕೊಟ್ಟನಾದರೂ ಅವನು ಮಗುವನ್ನು ಮೆಚ್ಚಿ ಕೊಲ್ಲಲು ಮನಸ್ಸಾಗದೆ ನದೀ ತೀರದ ಮರಳಿನ ಮೇಲೆ ಮಲಗಿಸಿ ಹೋದನು. ಆ ಮಗು ಗೋವಿಂದ ನೆಂಬ ಒಬ್ಬ ಗೋಪಾಲಕನಿಗೆ ಸಿಕ್ಕಿತು. ಅವನು ಅದು ದೇವರೇ ಕೊಟ್ಟ ಕೂಸೆಂದು ಭಾವಿಸಿ ಅಕ್ಕರೆಯಿಂದ ಸಾಕಿದನು. ಮತ್ತೆ ಶ್ರೀದತ್ತ ಕೆಲವು ವರ್ಷಗಳ ಮೇಲೆ ಗೊಲ್ಲರ ಹಳ್ಳಿಗೆ ಬಂದು ಧನಕೀರ್ತಿಯನ್ನು ಕಂಡು ಅವನೇ ಧನಶ್ರೀಯ ಮಗನೆಂದು ನಿರ್ಣಯಿಸಿ ಚಮತ್ಕಾರದಿಂದ ಅವನನ್ನು ತನ್ನ ಊರಿಗೆ ಕಳುಹಿಸಿ ತನ್ನ ಮಗನ ಮೂಲಕ ಕೊಲ್ಲಿಸಲು ಸಂಚುಹೂಡಿ ಒಂದು ಕಾಗದ ಬರೆದುಕೊಟ್ಟು ಕಳುಹಿಸಿದನು, ಆದರೆ ಅವನು ಸಿಂಪಾ ನದಿಯ ದಡದಲ್ಲಿ ಮಲಗಿ ನಿದ್ರಿಸುತ್ತಿದ್ದಾಗ ಅಲ್ಲಿಗೆ ಬಂದ ಒಬ್ಬ ವೇಶ್ಯೆ ಆ ಕಾಗದವನ್ನು ಓದಿ ಆ ಯುವಕನ ಮೇಲೆ ಕನಿಕರಪಟ್ಟು "ಇವನನ್ನು ಕಂಡಕೂಡಲೆ ನಿನ್ನ ತಂಗಿಯನ್ನು

ಕೊಟ್ಟು ಮದುವೆಮಾಡು" ಎಂದು ಇನ್ನೊಂದು ಕಾಗದ ಬರೆದು ಯುವಕನ ಕಿಸೆಯಲ್ಲಿ ಸೇರಿಸಿಟ್ಟಳು. ಅವಳ ಯುಕ್ತಿ ಫಲಿಸಿ ಧನಕೀರ್ತಿಗೂ ಶ್ರೀದತ್ತನ ಮಗಳು ಶ್ರೀಮತಿಗೂ ಮದುವೆಯಾಯಿತು !

ಊರಿಗೆ ಹಿಂತಿರುಗಿದ ಶ್ರೀದತ್ತ ವಿಷಯ ತಿಳಿದು ತನ್ನ ಮಗಳು ವಿಧವೆಯಾದರೂ ಚಿಂತೆಯಿಲ್ಲ. ಧನಕೀರ್ತಿಯನ್ನು ಕೊಲ್ಲಲೇಬೇಕೆಂದು ಹಟತೊಟ್ಟು ಊರಿನ ನಾಗಾಲಯ ದಲ್ಲಿ ಹಂತಕರನ್ನಿಟ್ಟು ಅಳಿಯನ ಕೈಲಿ ನೈವೇದ್ಯವನ್ನು ಕಳುಹಿಸಿದನು. ಆದರೆ ಶ್ರೀ ದತ್ತನ ಮಗ ಮಹಾಬಲ ಆ ನೈವೇದ್ಯವನ್ನು ತಾನು ಕಸಿದುಕೊಂಡು ಭಾವನನ್ನು ಮನೆಗೆ ಹಿಂತಿರುಗಿಸಿ ತಾನು ನಾಗಾಲಯದಲ್ಲಿದ್ದ ಹಂತಕರಿಂದ ಸತ್ತನು. ಹೀಗೆ ನಾಲ್ಕು ಸಲ ತನ್ನ ಪ್ರಯತ್ನ ವಿಫಲವಾದರೂ ಬಿಡದೆ ಶ್ರೀದತ್ತ ತನ್ನ ಹೆಂಡತಿ ಶ್ರೀಮತಿಯ ಮೂಲಕ ಅಳಿಯನಿಗೆ ವಿಷಹಾಕಿಸುವ ಸಂಚುಮಾಡಿದನು. ಆದರೆ ಶ್ರೀಮತಿ ಮಾಡಿಟ್ಟಿದ್ದ ವಿಷದ ಲಡ್ಡುಗೆಯನ್ನು ತಾನೇ ತಿಂದು ಸತ್ತ. ಅವನ ಹೆಂಡತಿ ಶ್ರೀಮತಿ ನಡೆದ ಸುದ್ದಿ ಯನ್ನೆಲ್ಲ ಹೇಳಿ, ಧನಕೀರ್ತಿಯು ಗುಣಪಾಲನ ಮಗನೆಂದು ತಿಳಿಸಿ ತಾನೂ ಆ ವಿಷದ ಲಡ್ಡು ತಿಂದು ಸತ್ತುಹೋದಳು. ಇದನ್ನೆಲ್ಲ ಕೇಳಿದ ದೊರೆ ಧನಕೀರ್ತಿಯನ್ನು ಕಂಡು ಅವನ ತೇಜಸ್ಸಿಗೆ ಮೆಚ್ಚಿ ಅವನಿಗೆ ತನ್ನ ಮಗಳನ್ನು ಕೊಟ್ಟು ಮದುವೆಮಾಡಿ ಅರ್ಧ ರಾಜ್ಯವನ್ನು ಬಳುವಳಿಯಾಗಿ ಕೊಟ್ಟನು ! ಮುನಿಗುಪ್ತರು ನುಡಿದ ಭವಿಷ್ಯ ನಿಜ ವಾಯಿತು ; ಧನಶ್ರೀಯ ಮಗ ರಾಜನಾದ ! ಆಗ ಕೌಶಾಂಬಿಯಲ್ಲಿದ್ದ ಗುಣಪಾಲಸೆಟ್ಟಿ ಬಂದು ಮಗನನ್ನು ಕಂಡು ಆನಂದಿಸಿ ತನ್ನ ಹಿಂದಿನ ಸಂಪತ್ತಿಗೆ ಒಡೆಯನಾದನು. ವಿಶ್ವಂಧರ ಮಹಾರಾಜನೂ ಗುಣಪಾಲನೂ ಅವರ ಹೆಂಡಿರೂ ಜೈನ ದೀಕ್ಷೆಯನ್ನು ಕೈಕೊಂಡು ಧನ್ಯರಾದರು.

## ೧೧ ಸತ್ಯವ್ರತ—ಧನದ—ಸಂಘಶ್ರೀ

ವೆಂಗಿಮಂಡಲದ ಪ್ರತಿಪಾಲಪುರದ ದೊರೆ ಧನದ ಜಿನಭಕ್ತ. ಮಹಾಮಾಂಡಳಿಕ ನಾದ ಆತ ಸುಖದಿಂದ ರಾಜ್ಯವಾಳುತ್ತಿದ್ದಾಗ ಅವನ ಸ್ವಭಾವವನ್ನು ಬಲ್ಲ ಒಬ್ಬ ಚಾರನು ದೊರೆಯನ್ನು ಏಕಾಂತದಲ್ಲಿ ಕಂಡು "ಸಂಘಶ್ರೀ ಎಂಬ ಬುದ್ಧೋಪಾಸಕನ ಮಗಳು ಕಮಳಶ್ರೀ ಮಹಾಸುಂದರಿ. ಅವಳು ತಮಗೆ ತಕ್ಕ ಹೆಣ್ಣು" ಎಂದು ಹೇಳಿ ಬಹುಮಾನ ಪಡೆದು ಹೊರಟುಹೋದನು. ಅರಸನು ಸಂಘಶ್ರೀಯಲ್ಲಿಗೆ ಹೆಗ್ಗಡೆಗಳನ್ನು ಕಳುಹಿಸಿ ತನ್ನ ಅಪೇಕ್ಷೆಯನ್ನು ತಿಳಿಸಿದನು. ಆ ಬುದ್ಧೋಪಾಸಕ ಕೂಡಲೆ ಒಪ್ಪಿ ತನ್ನ ಮಗಳನ್ನು ಅರಸನಲ್ಲಿಗೆ ಕಳುಹಿಸಿಕೊಟ್ಟುಬಿಟ್ಟನು. ದೊರೆ ಅವಳೊಡಗೂಡಿ ಸುಖಲೋಲುಪ ನಾದನು. ಆದರೆ ಕೆಲವು ವರ್ಷ ಕಳೆದ ಮೇಲೆ ತನ್ನ ಧರ್ಮವನ್ನು ಅಲಕ್ಷ್ಯಮಾಡಿ ಬೌದ್ಧಳನ್ನು ಮದುವೆಯಾದುದಕ್ಕೆ ವಿಷಾದಪಟ್ಟು ಧನದನು ಕಮಲಶ್ರೀಯನ್ನು

ಒಳ್ಳೆಮಾತಿನಿಂದ ಜೈನಧರ್ಮಕ್ಕೆ ಸೇರಿಸಿದನು. ಆದರೆ ಅವಳ ತಂದೆ ಸಂಘಶ್ರೀ ಅಷ್ಟು ಸುಲಭವಾಗಿ ಜಿನಧರ್ಮಕ್ಕೆ ಒಲಿಯಲಿಲ್ಲ. ಅವನು ವಾದ ಮಾಡುತ್ತಲೇ ಇದ್ದನು.

ಒಂದು ದಿನ ಪೂರ್ವವಿದೇಹದಿಂದ ಚಾರಣಋಷಿಗಳು ಅಂತರಿಕ್ಷದಲ್ಲಿ ಪ್ರಯಾಣ ಮಾಡುತ್ತಿದ್ದುದನ್ನು ಕಂಡು ಅರಸನು ಸಂಘಶ್ರೀಗೂ ಅವರನ್ನು ತೋರಿಸಿ "ನೋಡು, ಜಿನಧರ್ಮದ ಮಹಾಮಹಿಮೆ" ಎಂದನು. ಆ ದಿವ್ಯ ದೃಶ್ಯವನ್ನು ಕಂಡ ಸಂಘಶ್ರೀ ಮೆಚ್ಚಿ ಜಿನಮತವನ್ನು ಅವಲಂಬಿಸಿ ಶ್ರಾವಕವ್ರತಗಳನ್ನು ಕೈಕೊಂಡಿದ್ದನು. ಆದರೆ ಅವನ ಜಿನಭಕ್ತಿ ದೃಢವಾದದ್ದಲ್ಲ. ಅವನ ಮನಸ್ಸಿನಲ್ಲಿ ಬೌದ್ಧಾಭಿಮಾನ ಹೊಗೆಯಾಡು ತ್ತಲೇ ಇತ್ತು. ಒಂದು ದಿನ ಅಲ್ಲಿಗೆ ಬಂದ ಬುದ್ಧಶ್ರೀಯೆಂಬ ಬೌದ್ಧ ಭಿಕ್ಷು ಅವನಿಗೆ ಬೋಧನೆಮಾಡಿ ಮತ್ತೆ ಬೌದ್ಧಧರ್ಮವನ್ನು ಸೇರುವಂತೆ ಮಾಡಿದನು. ಆಮೇಲೆ ಧನದ ಮಹಾರಾಜನೆಷ್ಟು ಬೋಧಿಸಿದರೂ ಏನೂ ಪ್ರಯೋಜನವಾಗಲಿಲ್ಲ.

ಒಂದು ದಿನ ಒಡ್ಡೋಲಗದಲ್ಲಿ ಎಲ್ಲರ ನಡುವೆ ಕುಳಿತಿರುವಾಗ 'ಅಂದು ಗಗನ ಮಾರ್ಗದಲ್ಲಿ ಹೋಗುತ್ತಿದ್ದ ಚಾರಣ ಮುನಿಗಳನ್ನು ನೋಡಿದ್ದು ನಿಜವೇ ಸುಳ್ಳೆ ?' ಎಂದು ಕೇಳಿದಾಗ, ಅವನು ಅದು ಸುಳ್ಳೆಂದು ಹೇಳಿಬಿಟ್ಟನು. ಈ ಅಪಲಾಪವನ್ನು ಕೇಳಿದ ಪುರದೇವತೆಗಳು ಸಿಟ್ಟುಗೊಂಡು ಅವನ ಎರಡು ಕಣ್ಣುಗಳನ್ನೂ ಕಿತ್ತುಹಾಕಿದರು. ಅವನು ಕುರುಡನಾದನಷ್ಟೇ ಅಲ್ಲದೆ ಅಸತ್ಯವಂತನೆಂದು ಎಲ್ಲರಿಂದಲೂ ತಿರಸ್ಕಾರಕ್ಕೆ ಗುರಿಯಾದನು. ಸಂಘಶ್ರೀ ಆ ಸಂಕಟದಲ್ಲಿ ಸತ್ತು ರೌರವ ನರಕಕ್ಕೆ ಹೋದನು. ಅಷ್ಟೇ ಅಲ್ಲ. ಅವನ ವಂಶದಲ್ಲಿ ಏಳು ತಲೆಮಾರಿನವರು ಎಲ್ಲಶೂ ಕುರುಡಾಗಿದ್ದರು. ಆದ ರಿಂದಲೇ ಆ ದೇಶಕ್ಕೆ ಅಂಧಕ ವಿಷಯವೆಂಬ ಹೆಸರು ಬಂತು.

## ೧೨. ಅಸ್ತೇಯ—ಜಿನದತ್ತ—ಜಿನಪಾಲಿತಮುನಿ

ಜಿನಪಾಲಿತರೆಂಬ ಋಷಿಗಳು ಏಕವಿಹಾರಿಗಳಾಗಿ ಸಂಚರಿಸುತ್ತ ಒಂದು ಸಂಜೆ ಉಜ್ಜಯಿನೀನಗರದ ಬಳಿಗೆ ಬಂದರು. ಅಷ್ಟರಲ್ಲಿ ಕತ್ತಲೆಯಾದುದರಿಂದ ಊರೊಳಕ್ಕೆ ಹೋಗದೆ ಗಂಧವತೀ ನದಿಯ ಹತ್ತಿರದ ಶ್ಮಶಾನದಲ್ಲಿ ಒಂದು ಬಂಡೆಯ ಮೇಲೆ ಒಂದೇ ಮಗ್ಗುಲಾಗಿ ಮಲಗಿ ಇಡೀ ರಾತ್ರಿಯನ್ನು ಕಳೆಯುವುದೆಂದು ಸಂಕಲ್ಪಿಸಿ ಮಲಗಿ ಕೊಂಡರು. ಬಿಗಿದು ಕಟ್ಟಿದ ಬಿಲ್ಲಿನಂತೆ ಸ್ವಲ್ಪವೂ ಅಲುಗದೆ ಮಲಗಿದ್ದ ಮುನಿಯನ್ನು ಅಲ್ಲಿಗೆ ನಡುವಿರುಳು ಬಂದ ವಿಡಂಬನೆಂಬ ಸಾಧಕನು ಆತನು ಒಂದು ಹೆಣವೆಂದೇ ಭಾವಿಸಿ ಇನ್ನೆರಡು ಹೆಣಗಳನ್ನು ಎಳೆದುತಂದು ಮೂರು ತಲೆಗಳನ್ನು ಒಲೆಯ ಗುಂಡು ಗಳಂತೆ ಬಳಸಿ ಚರುವನ್ನು ಬೇಯಿಸತೊಡಗಿದನು. ಬೆಂಕಿಯ ಬೇಗೆ ದುಸ್ಸಹವಾದರೂ ಜಿನಪಾಲಿತ ಮುನಿ ತನ್ನ ರಾತ್ರಿಯ ಸಂಕಲ್ಪದಂತೆ ಅಲುಗದೆ ಮನಸ್ಸಿನಲ್ಲಿ ಜಿನಧರ್ಮ ಚಿಂತನೆ ಮಾಡುತ್ತ ಮಲಗಿದ್ದನು. ಆದರೆ ವಿಡಂಬನು ಹಚ್ಚಿದ ಬೆಂಕಿಯಿಂದ ಹೆಗಲೆಲ್ಲ ಸುಟ್ಟು ತೋಳಿನ ಬುಡವನ್ನು ಸೋಕಿದಾಗ ನರಗಳು ಹರಿದು ತೋಳು ತನ್ನಷ್ಟಕ್ಕೆ

ತಾನೇ ಮೇಲೆ ಎದ್ದಿತು ! ಇದನ್ನು ಕಂಡ ಏಡಂಬ ಭೀತನಾಗಿ ಬೀಳುವುದೇಳುವುದನ್ನು ಕಾಣದೆ ದಿಕ್ಕೆಟ್ಟು ಓಡಿದನು. ಆಗ ಜಿನಪಾಲಿತ ಮುನಿಗಳು ಆ ವಿಡಂಬನ ಪಾದ ಘಟ್ಟನದಿಂದ ಎಷ್ಟು ಜೀವಿಗಳಿಗೆ ನೋವಾಯಿತೋ ಎಂದು ವ್ಯಥೆಪಟ್ಟರೇ ಹೊರತು ತಮಗಾದ ಯಾತನೆಗೆ ಮರುಗಲಿಲ್ಲ. ಆಗ ನಗರ ದೇವತೆಗಳು, ವನದೇವತೆಗಳು, ಎಲ್ಲ ನೆರೆದು ಮುನಿಯ ಜೀವದಯೆಗೆ ಮೆಚ್ಚಿ ಜಯಕಾರ ಮಾಡುತ್ತ ಮಂದಾರ ಪಾರಿಜಾತ ವೃಕ್ಷಗಳ ಹೂಗಳನ್ನು ಮುನಿಯ ಮೇಲೆ ಸುರಿದು ಆತನ ಧೈರ್ಯ, ಜೀವದಯೆ, ಸಮ್ಯಗ್ದರ್ಶನಗಳನ್ನು ವಿಶೇಷವಾಗಿ ಕೊಂಡಾಡತೊಡಗಿದರು.

ದೇವತೆಗಳ ಹೊಗಳಿಕೆಯ ಕಳಕಳವನ್ನೂ ಪಂಚಮಹಾವಾದ್ಯಗಳ ಪ್ರಘೋಷ ವನ್ನೂ ಕೇಳಿ ಪುರಜನರು ಆಶ್ಚರ್ಯಪಟ್ಟು ಹೊರಡುವ ವೇಳೆಗೆ ಬೆಳಗಾಯಿತು. ಆಗ ಜಿನಪಾಲಿತ ಮುನಿ ತನ್ನ ರಾತ್ರಿಯ ಸಂಕಲ್ಪ ನೆರವೇರಿದ್ದರಿಂದ ಎದ್ದು ಹೊರಟು ಬಂದನು. ಆತನನ್ನು ಕಂಡು ಆ ನಗರದ ಶ್ರೇಷ್ಠಿ ಜಿನದತ್ತನು ಭಕ್ತಿ, ಆದರಗಳಿಂದ ತನ್ನ ಮನೆಗೆ ಕರೆದುಕೊಂಡು ಹೋಗಿ ದೇಹಾರದಲ್ಲಿ ನಿಲ್ಲಿಸಿ ವೈದ್ಯರನ್ನು ಬರಮಾಡಿ ದಿವ್ಯೌಷಧವನ್ನು ಕೊಡಿಸಿ ಚಿಕಿತ್ಸೆಮಾಡಿಸಿ ಉಪಚಾರಮಾಡಿದನು. ಜಿನಪಾಲಿತ ಮುನಿಯು ಜಿನದತ್ತನ ಮನೆಯಲ್ಲಿ ಚಿಕಿತ್ಸೆಯ ನಿಮಿತ್ತದಿಂದ ಹೆಚ್ಚು ಕಾಲ ನಿಂತೆನೆಂದು ಸಂಕೋಚಪಟ್ಟು ಸೆಟ್ಟಿಗೆ ಹೇಳಿ ಪ್ರಯಾಣಸನ್ನದ್ಧನಾಗಿ ಹೊರಟನು.

ಜಿನದತ್ತನು ಆ ಮುನಿಯನ್ನು ಬಿಟ್ಟಿರಲಾರದೆ ಆತನ ಜತೆಯಲ್ಲಿ ಸ್ವಲ್ಪ ದೂರ ಹೋದನು. ಆದರೆ ಆ ಮುನಿಯು ಜಿನದತ್ತನಿಗೆ ಹಿತಬೋಧೆಮಾಡಿ ಮನೆಗೆ ಕಳುಹಿಸಿ ಮುಂದೆ ಹೊರಟನು. ಇತ್ತ ಜಿನದತ್ತ ಸೆಟ್ಟಿಯ ಮಗ ಜಿನದಾಸನು ತಂದೆ ಮನೆಯಲ್ಲಿಲ್ಲದ ಹೊತ್ತು ಸಾಧಿಸಿ ತಂದೆ ಚಿನ್ನವನ್ನಿಟ್ಟಿದ್ದ ಕೋಣೆಯ ಬೀಗತೆಗೆದು ಒಳಹೊಕ್ಕು ತನಗೆ ಬೇಕಾದಷ್ಟು ಚಿನ್ನವನ್ನು ಕಟ್ಟಿಕೊಂಡು ಹೊರಡುವುದರೊಳಗಾಗಿ ಜಿನದತ್ತ ಮನೆಗೆ ಬಂದು ಬೇರೇನನ್ನೂ ನೋಡದೆ ಚಿನ್ನದ ಕೋಣೆಯ ಬಾಗಿಲನ್ನು ನೋಡಿದನು. ತಾನು ಹಾಕಿದ ಬೀಗ ಕಾಣಿಸಲಿಲ್ಲ. ಬಾಗಿಲನ್ನು ನೂಕಲು ಜಿನದಾಸನು ಹೆದರಿ ಚಿನ್ನದ ಡಿಂಡಿನ ಮರೆಯಲ್ಲಿ ಅವಿತುಕೊಂಡನು. ಜಿನದಾಸ ಒಳಹೊಕ್ಕು ಚಿನ್ನದ ರಾಸಿಯಲ್ಲಿ ಕೊಂಚ ಕಡಿಮೆಯಾಗಿದ್ದುದನ್ನು ಗಮನಿಸಿ ಬೇರೆ ಯಾರನ್ನೂ ಕಾಣದೆ 'ಇದು ಆ ಮುನಿಯ ಕೈವಾಡವೇ' ಎಂದು ನಿರ್ಧರಿಸಿಕೊಂಡು ಆ ಕೋಣೆಗೆ ಬೇರೆ ಬೀಗಹಾಕಿ ಓಡಿಹೋಗಿ ಜಿನಪಾಲಿತರನ್ನು ಊರಹತ್ತಿರದಲ್ಲಿಯೇ ಕಂಡು ಕಪಟವಿನಯವನ್ನು ಮೆರೆದು ಮತ್ತೆ ಕರೆತಂದು ಚಿನ್ನದ ಕೋಣೆಯ ಬಳಿಯಲ್ಲಿಯೇ ಕುಳಿತು ಸಂಭಾಷಣೆಗೆ ತೊಡಗಿದನು.

ಆ ಋಷಿಗೆ ಜಿನದತ್ತನ ಮನಸ್ಸಿನಲ್ಲಿದ್ದ ದುರುದ್ದೇಶ ತಿಳಿಯದು. ಕೇವಲ ಧರ್ಮ ವಾತ್ಸಲ್ಯದಿಂದಲೇ ತನ್ನನ್ನು ಕರೆತಂದನೆಂದು ತಿಳಿದು ಆತನ ಮಾತುಗಳನ್ನು ಕೇಳ ತೊಡಗಿದನು. ಜಿನದತ್ತನು 'ಒಂದು ಕಥೆ ಹೇಳುವೆ' ನೆಂದು ಆರಂಭಿಸಿ ಅತಿಥಿಸತ್ಕಾರ ಮಾಡಿದ ಗೃಹಸ್ಥನಿಗೇ ದ್ರೋಹ ಬಗೆದ ಕೃತಘ್ನರ ಕಥೆಗಳನ್ನೇ ಒಂದಾದ ಮೇಲೊಂದ

ರಂತೆ ಹೇಳ ತೊಡಗಿದನು. ಸ್ವಲ್ಪ ಹೊತ್ತಿನಲ್ಲಿಯೇ ಅವನ ದುರಭಿಸಂಧಿಯನ್ನರಿತ ಮುನಿಯು ಜಿನದತ್ತನಿಗೆ ಆತುರಪಟ್ಟು ನಿರ್ದೋಷಿಗಳ ಮೇಲೆ ಶಂಕೆ ಪಟ್ಟು ಪಾಪಕಟ್ಟಿ ಕೊಂಡವರ ಕಥೆಗಳನ್ನು ಹೇಳತೊಡಗಿದನು. ಈ ಒಳಗತೆಗಳು ಬಹಳ ಸ್ವಾರಸ್ಯವಾಗಿವೆ. ಈ ಕಥಾರೂಪವಾದ ಚರ್ಚೆ ಕುತೂಹಲಕಾರಿಯಾಗಿದ್ದರೂ ಯಾವ ಅಪರಾಧವನ್ನೂ ಅರಿಯದ ಮುನಿಯ ಮನಸ್ಸಿಗೆ ಬಹಳ ಆಘಾತವಾಗಿ 'ಘೋರೋಪಸರ್ಗಂ ಪಿಂಗುವಿನ ಮಾಹಾರಶರೀರನಿವೃತ್ತಿ' ಯೆಂದು ಕೃತ ಸಂಕಲ್ಪವಾಗಿ ಮೌನದಿಂದ ಕುಳಿತು ಬಿಟ್ಟನು. ಆಗ ಜಿನದತ್ತನು ಕೋಪದಿಂದ ಮುನಿಯನ್ನು ದಂಡಿಸಲು ಸಿದ್ಧನಾಗಲು ಒಳಗಿದ್ದ ಜಿನದಾಸನು ಬಾಗಿಲನ್ನು ಕಿತ್ತು ಗದ್ದಲ ಮಾಡಿ ಚಿನ್ನದ ಓವರಿಯಿಂದ ಹೊರಗೆ ಬಂದು ತಾನು ಕಟ್ಟಿಕೊಂಡಿದ್ದ ಚಿನ್ನವನ್ನು ತಂದೆಯ ಮುಂದೆಸೆದು ಮುನಿನಾಥನಿಗೆ ನಮಸ್ಕಾರ ಮಾಡಿ ತನಗೆ ಜಿನದೀಕ್ಷೆಯನ್ನು ಅನುಗ್ರಹಿಸಬೇಕೆಂದು ಕೇಳಿಕೊಂಡು ತಪಸ್ವಿಯಾಗಿ ಬಿಟ್ಟನು ! ಅಷ್ಟಕ್ಕೆ ಸ್ವಲ್ಪ ಹೊತ್ತಿನ ಮುಂಚೆ ಚಿನ್ನವನ್ನು ಕದಿಯುವ ಸಂಕಲ್ಪದಲ್ಲಿದ್ದ ವನಿಗೆ ಮುನಿಯ ಮಾತುಗಳಿಂದ ವಿವೇಕ ಮೂಡಿ ವೈರಾಗ್ಯಹುಟ್ಟಿತು.!

## ೧೩. ಬ್ರಹ್ಮಚರ್ಯದ ಕಥೆ. ದಂತಿಬಲ–ಧಾರಿಣೀ

ಕೌಶಾಂಬಿಯ ರಾಜ ದಂತಿಬಲ. ಅವನ ಹೆಂಡತಿ ಧಾರಿಣೀದೇವಿ. ಅವರ ಹಿರಿಯ ಮಗ ಪ್ರಮಾಥಿ. ಇವರು ಸುಖದಿಂದಿರುವಾಗ ಒಂದು ವಸಂತಮಾಸದಲ್ಲಿ ಎಲ್ಲರೂ ವನಕ್ರೀಡೆಗೆ ಹೋದರು. ಬಹಳ ಹೊತ್ತು ಆನಂದದಿಂದ ವನದಲ್ಲಿ ಸಂಚಾರಮಾಡಿ ಬಳಲಿ ಒಂದು ಮಾವಿನ ಮರದ ಕೆಳಗೆ ಚಿಗುರಿನ ಹಾಸಿಗೆಯ ಮೇಲೆ ಮಲಗಿ ವಿಶ್ರಾಂತಿ ಪಡೆಯುತ್ತಿದ್ದರು: ಉಳಿದವರೂ ಹೀಗೆಯೇ ಒಂದೊಂದು ಮಾವಿನ ಮರವನ್ನು ಆಶ್ರಯಿಸಿದ್ದರು. ಆ ಸಮಯದಲ್ಲಿ ಪ್ರಮಾಥಿ ಕುಮಾರನು ತನ್ನ ಹೆಂಡತಿ ಸೌಂದರ ದೇವಿಯೊಡನೆ ಒಂದು ಅಶೋಕ ವೃಕ್ಷದ ಬುಡದಲ್ಲಿ ಮಲಗಿದ್ದನು. ಸೌಂದರಿ ಗಾಢ ನಿದ್ರೆಯಲ್ಲಿದ್ದಳು. ಆ ವೇಳೆಯಲ್ಲಿ ಮಹಾಸಾಮಂತನ ಮಗ ವಸಂತನು ನೆಲದ ಮೇಲೆ ಮಲಗಿಕೊಂಡೇ ಪುಂಖಾನುಪುಂಖವೆಂಬ ಬಾಣ ವಿದ್ಯೆಯಿಂದ ತನ್ನ ನಲ್ಲೆಗೆ ಸೀಮಾವಿನ ಕಾಯಿಗಳ ಗೊಂಚಲುಗಳನ್ನು ನೆಲಕ್ಕೆ ಬೀಳದಂತೆ ಬಾಣವೇ ಕೈಯೆಂಬಹಾಗೆ ಕಿತ್ತು ಕೊಡುತ್ತಿದ್ದುದನ್ನು ಪ್ರಮಾಥಿ ಗಮನಿಸಿದನು. ತನ್ನ ಹೆಂಡತಿಯೂ ಈ ಬಿಲ್ಲ ಚಮತ್ಕಾರವನ್ನು ತೋರಿಸಬೇಕೆಂದು ಕೇಳಿದರೆ ಬಹಳ ಅಪಮಾನವಾಗುವುದೆಂದು ಅಂಜಿ ಅವಳು ನಿದ್ದೆಯಿಂದೇಳುವ ಮೊದಲೇ ಅಲ್ಲಿಂದ ಹೊರಟು ಪಾಟಲೀಪುತ್ರಕ್ಕೆ ಪ್ರಯಾಣ ಮಾಡಿ ಅಲ್ಲಿ ದ್ರೋಣಾಚಾರ್ಯರನ್ನು ಕಂಡು ನಮಸ್ಕಾರ ಮಾಡಿ ತನಗೆ ಬಾಣ ವಿದ್ಯೆಯನ್ನು ಉಪದೇಶಿಸಬೇಕೆಂದು ಬೇಡಿಕೊಂಡು ಆತನನ್ನು ಒಪ್ಪಿಸಿದನು.

ದ್ರೋಣರು ಅನುಗ್ರಹ ಬುದ್ಧಿಯಿಂದ ಪ್ರಮಾಥಿಗೆ ಬಹಳ ಶ್ರದ್ಧೆಯಿಂದ ಬಿಲ್ಲ ವಿದ್ಯೆಯನ್ನು ಕಲಿಸತೊಡಗಿದರು. ಪ್ರಮಾಥಿ ತಾನು ರಾಜಕುಮಾರನೆಂಬ ಗರ್ವವನ್ನು

ಬಿಟ್ಟು ಭಿಕ್ಷಾನ್ನವನ್ನು ತಿಂದು ಬಿಲ್ಲವಿದ್ಯೆಯನ್ನು ಸಾಂಗವಾಗಿ ಕಲಿತನು. ಎಲ್ಲರೂ ಈ ಜಿನಭಕ್ತನ—ಪ್ರಮಾಥಿ ತನ್ನ ಹೆಸರನ್ನು ಬಹಿರಂಗಪಡಿಸದೆ ಜಿನಭಕ್ತನೆಂದು ಹೇಳಿ ಕೊಂಡಿದ್ದ—ಬಿಲ್ಲ ಜಾಣ್ಮೆಯನ್ನು ಕೊಂಡಾಡಿದರು.

ಒಂದು ದಿನ ಆ ಪಟ್ಟಣದ ದೊರೆ ಸಿಂಹಸೇನನ ಮಗಳು ಚಂದ್ರಲೇಖೆಯೆಂಬ ಕನ್ಯೆ ಸಹಸ್ರಕೂಟ ಚೈತ್ಯಾಲಯಕ್ಕೆ ಹೋಗಿ ಹಿಂತಿರುಗುತ್ತಿರುವಾಗ ಒಂದು ಆನೆ ರಭಸ ದಿಂದ ನುಗ್ಗಿ ಬಂತು. ಜತೆಯವರೆಲ್ಲ ಅಂಜಿ ಓಡಿಹೋದರೂ ಚಂದ್ರಲೇಖೆ ಜಿನಧ್ಯಾನ ಮಗ್ನಳಾಗಿ ಆನೆಯ ಉಪಸರ್ಗ ಕಳೆಯಲೆಂದು ಪಂಚ ನಮಸ್ಕಾರಗಳನ್ನು ಹೇಳಿಕೊಳ್ಳುತ್ತ ನಿಂತು ಬಿಟ್ಟಳು. ಜಿನಭಕ್ತ ಚಂದ್ರಲೇಖೆಯ ಧೈರ್ಯವನ್ನು ಮೆಚ್ಚಿ ಧರ್ಮ ವಾತ್ಸಲ್ಯ ದಿಂದ ಆ ಮದ್ದಾನೆಗೆ ಅಡ್ಡವಾಗಿ ನಿಂತು ವಿದ್ಯಾಧರಕರಣದಿಂದ ಆ ಆನೆಯನ್ನು ಹತ್ತಿ ಅದನ್ನು ವಶಪಡಿಸಿಕೊಂಡು ಚಂದ್ರಲೇಖೆಯನ್ನು ಸಂಬೋಧಿಸಿ "ಉಪಸರ್ಗ ಕಳೆಯಿತು. ಕಯ್ಯನೆತ್ತಿಕೊಳ್ಳಿ" ಎಂದನು. ಆಗ ಚಂದ್ರಲೇಖೆ ಸಂತೋಷಿಸಿ ಪ್ರಮಾಥಿಯೇ ಈ ಜನ್ಮದಲ್ಲಿ ತನಗೆ ಗಂಡನೆಂದು ನಿರ್ಧರಿಸಿಕೊಂಡು ಅರಮನೆಗೆ ಹೋದಳು. ಇದರಿಂದ ದ್ರೋಣರ ಉಳಿದ ಶಿಷ್ಯರಿಗೆ ಪ್ರಮಾಥಿಯ ಮೇಲೆ ಅಸೂಯೆ ಹುಟ್ಟಿತು. ಆದರೆ ಆಚಾರ್ಯರು ಅವರಿಗೆ ವಿವೇಕ ಹೇಳಿದರು. ಅಷ್ಟೇ ಅಲ್ಲದೆ 'ತೆಂಗಿನ ಮರದ ಮೇಲಿನ ಗೊನೆಯನ್ನು ಬಾಣದಿಂದ ತಾವು ಇದ್ದಲ್ಲಿಗೆ ತರಿಸುವವರು ಯಾರಿದ್ದೀರಿ?' ಎಂದು ದ್ರೋಣರು ಒಂದು ಪಂಥವನ್ನು ಒಡ್ಡಿದರು. ಬೇರೆ ಯಾರೂ ಆ ಪಂಥದಲ್ಲಿ ಗೆಲ್ಲ ಲಿಲ್ಲ. ಪ್ರಮಾಥಿಕುಮಾರನೊಬ್ಬನೇ ಅದನ್ನು ಮಾಡಿತೋರಿಸಿ ವಿಜಯಿಯಾದನು. ಅವನ ಜತೆಯ ಶಿಷ್ಯರು ಆಗ ತಮ್ಮ ಯೋಗ್ಯತೆಯ ಮಿತಿಯನ್ನು ತಿಳಿದು ಅಸೂಯೆ ಯನ್ನು ಬಿಟ್ಟರು.

ಕೆಲವು ಕಾಲದ ತರುವಾಯ ಸಿಂಹಸೇನ ಮಹಾರಾಜನು ಚಂದ್ರಕವೇಧವೆಂಬ ಬಾಣಪ್ರಯೋಗ ಮಾಡಿತೋರಿಸಿದ ಪ್ರಮಾಥಿಕುಮಾರನಿಗೆ ತನ್ನ ಮಗಳು ಚಂದ್ರಲೇಖೆ ಯನ್ನು ಕೊಟ್ಟು ವಿವಾಹ ಮಾಡಿ ಅರ್ಧರಾಜ್ಯವನ್ನೇ ಬಳುವಳಿಯಾಗಿ ಕೊಟ್ಟನು. ಇದಾದ ಕೆಲವು ದಿನಗಳ ಮೇಲೆ ತನ್ನ ತಂದೆಯ ರಾಜಧಾನಿ ಕೌಶಾಂಬಿಯನ್ನು ಶತ್ರು ಗಳು ಮುತ್ತಿರುವ ಸುದ್ದಿ ತಿಳಿಯಲು ಪ್ರಮಾಥಿ ಪತ್ನೀಸಮೇತನಾಗಿ ರಥಹತ್ತಿ ಹೊರಟನು. ದಾರಿಯ ನಡುವೆ ಒಂದು ಘೋರವಾದ ಅರಣ್ಯವನ್ನು ದಾಟಬೇಕಾಗಿತ್ತು. ಅಡವಿಯಲ್ಲಿ ಪ್ರಯಾಣಮಾಡುತ್ತಿದ್ದಾಗ ಸುವೇಗನೆಂಬ ಕಳ್ಳರಮುಖಂಡನಿಗೂ ಪ್ರಮಾಥಿಗೂ ಕಾಳಗ ತೊಡಗಿತು. ಸುವೇಗನು ಚಂದ್ರಲೇಖೆಯ ರೂಪಾತಿಶಯಕ್ಕೆ ಮೋಹಿಸಿದ್ದನು. ಆದರೆ ಬಾಣವಿದ್ಯೆಯಲ್ಲಿ ಪ್ರಮಾಥಿ ಗಟ್ಟಿಗನೆಂಬುದು ಅವನಿಗೆ ತಿಳಿದಿರ ಲಿಲ್ಲ. ಘೋರವಾದ ಬಾಣ ಯುದ್ಧನಡೆಯಿತು. ಅದರಲ್ಲಿ ಪ್ರಮಾಥಿಯದೇ ಮೇಲ್ಗೈ ಯಾಗಿದ್ದರೂ ಅವನಲ್ಲಿ ಬಾಣಗಳು ಇನ್ನೇ ಎರಡೇ ಉಳಿದಿದ್ದುವು. ಆ ಘಳಿಗೆಯಲ್ಲಿ ಚಂದ್ರಲೇಖೆ ತನ್ನ ಗಂಡನಿಗೆ ಸಾವು ತಪ್ಪದೆಂದು ಅಂಜಿ ತಾನು ಮೊದಲೇ ಸಾಯಲು

ಬಯಸಿ ರಥದಿಂದ ಕೆಳಕ್ಕೆ ಧುಮ್ಮಿಕ್ಕಿದಳು. ಸುವೇಗ ಅವಳ ಸರ್ವಾಂಗ ಸೌಂದರ್ಯವನ್ನು ನೋಡಿ ತಬ್ಬಿಬ್ಬಾಗಿ ಬಿಲ್ಲುಬಾಣಗಳನ್ನು ಕ್ಷಣಕಾಲ ಮರೆತನು. ಆ ಸಂಧಿಯನ್ನು ಗಮನಿಸಿ ಪ್ರಮಾಥಿಕುಮಾರನು ಗುರಿಯಿಟ್ಟು ಬಾಣ ಹೊಡೆದು ಸುವೇಗನನ್ನು ಕೊಂದು ಕೆಡವಿದನು. ಸುವೇಗ ಅನ್ಯಸ್ತ್ರೀಯನ್ನು ಅಪೇಕ್ಷಿಸಿದವನಾದ್ದರಿಂದ ನರಕ ಸೇರಿದನು: ಪ್ರಮಾಥಿ ಗೆದ್ದು ಪತ್ನಿಯೊಡನೆ ಕೌಶಾಂಬಿಯನ್ನು ಸೇರಿ ತನ್ನ ತಂದೆಯ ಶತ್ರುಗಳೊಡನೆ ಹೋರಾಡಿ ಅವರನ್ನು ನಿಗ್ರಹಿಸಿ ತಂದೆ ತಾಯಿಗಳ ಕಷ್ಟವನ್ನು ಪರಿಹರಿಸಿ ಸೌಂದರ ಮಹಾದೇವಿ ಚಂದ್ರಲೇಖೆಯರೊಡನೆ ಸುಖದಿಂದ ರಾಜ್ಯಭಾರ ಮಾಡುತ್ತಿದ್ದು ವೃದ್ಧ ನಾದ ಮೇಲೆ ವೈರಾಗ್ಯ ಹುಟ್ಟಿ ತನ್ನ ಮಗ ವಿಮಲಕೀರ್ತಿಗೆ ಪಟ್ಟಕಟ್ಟಿ ಸಮಾಧಿ ಮರಣದಿಂದ ದೇವಗತಿಯನ್ನು ಸಾಧಿಸಿಕೊಂಡನು.

## ೧೪. ಉಪರಿಚರ ಮಹಾರಾಜ—ಗುರುದತ್ತ

ಕುರುಜಾಂಗಣದ ಶ್ರಾವಂತಿಯೆಂಬ ಪುರದ ದೊರೆ ಉಪರಿಚರನು ತನ್ನ ನಾಲ್ವರು ಪಟ್ಟದರಸಿಯರೊಡನೆಯೂ ಇತರ ಪ್ರಿಯ ಪತ್ನಿಯರೊಡನೆಯೂ ವಿಹರಿಸುತ್ತ ಐನೂರ್ವರು ಕುಮಾರರನ್ನು ಪಡೆದು ವೈಭವದಿಂದ ರಾಜ್ಯವಾಳುತ್ತಿದ್ದನು. ಒಂದು ಸಲ ವಸಂತಮಾಸದಲ್ಲಿ ವನಕ್ರೀಡೆಗೆ ಹೋಗಿ ವಿಹಾರನಡೆಸಿ ಆಯಾಸವಾಗಲು ಉಳಿದ ಅರಸಿಯರನ್ನೂ ಮಕ್ಕಳನ್ನೂ ದೂರದಲ್ಲಿರಿಸಿ ತನ್ನ ನಾಲ್ವರು ಪಟ್ಟದ ರಾಣಿಯರೊಡನೆ ಸುದರ್ಶನವೆಂಬ ಕೊಳದಲ್ಲಿ ಜಲಕ್ರೀಡೆಯಾಡಿ ಆಯಾಸ ಪರಿಹರಿಸಿಕೊಳ್ಳುತ್ತಿದ್ದನು. ಆ ಹೊತ್ತಿನಲ್ಲಿ ವಿಜಯಾರ್ಧ ಪರ್ವತದ ಉತ್ತರ ಶ್ರೇಣಿಯ ಖೇಚರರಾಜ ವಜ್ರ ದಾಡನು ತನ್ನ ಮನದನ್ನೆಯಾದ ಮದನವೇಗೆಯೊಡನೆ ಗಗನಮಾರ್ಗದಲ್ಲಿ ಹೋಗುತ್ತ ಉಪರಿಚರನ ಆನಂದ ವಿಹಾರವನ್ನು ನೋಡುತ್ತ ನಿಂತನು. ಆಗ ಮದನವೇಗೆ ಉಪರಿಚರನ ರಾಜಲೀಲೆ ದೇವೇಂದ್ರನ ರಾಜವೈಭವವನ್ನು ಸರಿಗಟ್ಟುವಂತಿದೆಯೆಂದು ಹೊಗಳಿದಳು. ಅದನ್ನು ಕೇಳಿ ವಜ್ರದಾಡನಿಗೆ ಬಹಳ ಅಸೂಯೆಯಾಯಿತು. ಅವನು ರೋಷದಿಂದ ಒಂದು ದೊಡ್ಡ ಬಂಡೆಯನ್ನು ಎತ್ತಿತಂದು ಆ ಸರೋವರದ ಮೇಲೆ ಮುಚ್ಚಿಬಿಟ್ಟನು. ರಾಜರಾಣಿಯರು ಆ ಬಂಡೆಯ ಅಡಿಯಲ್ಲಿ ಸೆರೆಯಾದರು. ಹೊರಕ್ಕೆ ಬರಲು ಅವರಿಗೆ ದಾರಿಯೇ ಉಳಿಯಲಿಲ್ಲ. ಆ ಬಂಡೆಯನ್ನು ಎತ್ತಲು ಯಾರಿಗೂ ಶಕ್ಯವಾಗಲಿಲ್ಲ !

ಆಗ ಉಪರಿಚರನ ಅರಸಿಯರು ಇದು ಅಪರಿಹಾರ್ಯವಾದ ವಿಪತ್ತೆಂದು ಮನ ಗಂಡು ಜಿನಧ್ಯಾನ ತತ್ಪರರಾದರು ; ತಮ್ಮ ಗಂಡನಿಗೂ ಹಾಗೆ ಮಾಡೆಂದು ಉಪದೇಶಮಾಡಿ ದರು. ಆದರೆ ಉಪರಿಚರನಿಗೆ ರೋಷಾವೇಶ ತಪ್ಪಲಿಲ್ಲ. ಅವನಿಗೆ ಜಿನಧ್ಯಾನ ಕುದುರ ಲಿಲ್ಲ. ಅವನು ತನ್ನ ಪರಿಗ್ರಹಕಾಂಕ್ಷೆಯನ್ನು ಗೆಲ್ಲಲಾರದೆ ಆರ್ತಧ್ಯಾನದಿಂದ ಸತ್ತು ಸರ್ಪಜನ್ಮವನ್ನು ಪಡೆದನು. ಅವನ ಅರಸಿಯರು ಭಕ್ತಿಯಿಂದ ಜಿನಧ್ಯಾನದಲ್ಲಿದ್ದು ಪ್ರಾಣಬಿಟ್ಟಿದ್ದರಿಂದ ಸೌಧರ್ಮಕಲ್ಪದಲ್ಲಿ ಸಾಮಾನಿಕ ದೇವರುಗಳಾಗಿ ಹುಟ್ಟಿದರು.

ಇತ್ತ ಉಪರಿಚರನ ಉಳಿದ ಹೆಂಡಿರೂ ಕುಮಾರರೂ ಅರಸನಿಗೆ ಒದಗಿದ ವಿಪತ್ತಿಗೆ ಬಹಳವಾಗಿ ಮರುಗಿದರು. ಒಂದುದಿನ ಸಾರಸ್ವತರೆಂಬ ಆಚಾರ್ಯರು ಶ್ರಾವಂತಿಗೆ ಬಂದು ಅನಂತವೀರ್ಯರಾಜನಿಂದಲೂ ಅವನ ತಮ್ಮಂದಿರಿಂದಲೂ ಪೂಜಿತರಾಗಿ ಧರ್ಮಶ್ರವಣ ಮಾಡಿಸುತ್ತಿದ್ದಾಗ "ನಮ್ಮ ತಂದೆಗೂ ತಾಯಿಯರಿಗೂ ಒದಗಿದ ಆಕಸ್ಮಿಕ ಮರಣದ ಕಾರಣವೇನು ?" ಎಂದು ಕೇಳಿದರು. ಆ ಮುನೀಶ್ವರರು ತಮ್ಮ ಅವಧಿ ಜ್ಞಾನದಿಂದ ಎಲ್ಲವನ್ನೂ ತಿಳಿದು "ನಿಮ್ಮ ಅಯ್ಯನಿಗೆ ವಜ್ರದಾಡನೆಂಬ ಖೇಚರನಿಂದ ಸಾವು ಒದಗಿತು. ನಿನ್ನ ತಾಯಿಯವರು ಜಿನಧ್ಯಾನಮಗ್ನರಾದ್ದರಿಂದ ಸಾಮಾನಿಕ ದೇವರುಗಳಾಗಿ ಹುಟ್ಟಿದರು. ನಿಮ್ಮ ತಂದೆ ಆರ್ತಧ್ಯಾನದಿಂದ ಸತ್ತನಾದ್ದರಿಂದ ಈ ವನದ ಸರ್ಪಾಶ್ರಯವೆಂಬ ಗವಿಯಲ್ಲಿ ಹೆಬ್ಬಾವಾಗಿ ಹುಟ್ಟಿದ್ದಾನೆ" ಎಂದು ವಿವರವಾಗಿ ಉತ್ತರ ನೀಡಿದರು.

ಆಗ ಅನಂತ ವೀರ್ಯನು ಸರ್ಪಾಶ್ರಯ ಗುಹೆಯ ಬಾಗಿಲಲ್ಲಿ ನಿಂತು ಜಿನ ಧರ್ಮವನ್ನು ಹೇಳಲು ತೊಡಗಿದನು. ಆ ಹಾವು ಒಳಗೇ ಬಂದು ಮೌನದಿಂದ ಕೇಳುತ್ತಿತ್ತು, ಕೊನೆಗೆ ಅದಕ್ಕೆ ಪೂರ್ವಜನ್ಮಸ್ಮರಣೆ ಹುಟ್ಟಿತು. ಆಗ ಉಪರಿಚರನ ಅರಸಿಯರು ದೇವಲೋಕದಿಂದ ಇಳಿದು ತಮ್ಮ ಪೂರ್ವರೂಪದಲ್ಲಿ ಬಂದು ಅವನಿಗೆ ಮತ್ತೆ ಧರ್ಮವನ್ನು ಹೇಳಿದರು. ಅನಂತರ ಸಾರಸ್ವತ ಮುನಿನಾಥನು ಗವಿಯ ಬಾಗಿಲಿಗೆ ಬಂದು ಆ ಹೆಬ್ಬಾವಿಗೆ ಧರ್ಮವನ್ನು ಹೇಳಿ ಅಣುವ್ರತಗಳ ಮಹಿಮೆಯನ್ನು ತಿಳಿಸಿ "ನಿನಗೆ ಇನ್ನು ಹೆಚ್ಚು ಆಯುಸ್ಸಿಲ್ಲ. ಇನ್ನು ಹದಿನೈದು ದಿನ ಅಣುವ್ರತಗಳನ್ನು ಆಚರಿಸು, ಜಿನಧ್ಯಾನಮಾಡು, ನಿನಗೆ ಸದ್ಗತಿಯಾಗುತ್ತದೆ." ಎಂದು ಹೇಳಿದನು. ಇತ್ತ ಅನಂತವೀರ್ಯನು ಹದಿನೈದು ದಿವಸಗಳವರೆಗೂ ಜಿನಪೂಜೆ ಅಭಿಷೇಕಗಳನ್ನು ಮಾಡಿಸಿದನು. ಕೊನೆಗೆ ಆ ಹೆಬ್ಬಾವು ವಜ್ರದಾಡನು ಮಾಡಿದ ಸಾಹಸವನ್ನು ನೆನೆಯುತ್ತ ಸತ್ತು ವ್ಯಂತರ ಕುಲದಲ್ಲಿ ವಿಮಳನೆಂಬ ಹೆಸರಿನ ದೇವನಾಗಿ ಹುಟ್ಟಿದನು. ಪರಿಗ್ರಹಕ್ಕೆ ಆಸೆ ಪಟ್ಟಿದ್ದರಿಂದ ಉಪರಿಚರನಿಗಾದ ದುರ್ಗತಿಯನ್ನೂ ಅದನ್ನು ತ್ಯಜಿಸಿದ್ದರಿಂದ ತನ್ನ ತಾಯಂದಿರಿಗಾದ ಸದ್ಗತಿಯನ್ನೂ ನೆನೆದು ಅನಂತ ವೀರ್ಯನು ತನ್ನ ಮಗ ಸುಬಾಹುವಿಗೆ ಪಟ್ಟ ಕಟ್ಟಿ ಜಿನದೀಕ್ಷೆಯನ್ನು ಪಡೆದು ಕೊಂಡು ಸಮ್ಮೇದಪರ್ವತದಲ್ಲಿ ಕರ್ಮಕ್ಷಯ ಮಾಡಿ ಮೋಕ್ಷವನ್ನು ಹೊಂದಿದನು,

ಇತ್ತ ವಿಮಲದೇವನು ಒಂದು ದಿನ ವಜ್ರದಾಡನನ್ನು ನೋಡಿ ವಿಭಂಗಜ್ಞಾನದಿಂದ ಪೂರ್ವವೈರವನ್ನು ತಿಳಿದು ಕೋಪದಿಂದ ಆಖೇಚರನ ವಿದ್ಯೆಗಳನ್ನೆಲ್ಲ ಹಾಳು ಮಾಡಿ ಆ ಖೇಚರನನ್ನೂ ಅವನ ಹೆಂಡಿರನ್ನೂ ಸಮುದ್ರಕ್ಕೆ ಎಳೆದೊಯ್ದು ಹುಡುಕು ನೀರದ್ದಿ ಮೂದಲಿಸಿ ಗೋಳುಗುಟ್ಟಿಸಿದನು. ಅವನು ರೌದ್ರಧ್ಯಾನದಿಂದ ಸತ್ತು ನರಕದಲ್ಲಿ ಜನಿಸಿದನು. ವಿಮಳದೇವನು ಜಯದತ್ತ ಮಹಾರಾಜನ ರಾಣಿ ವಿಜಯೆಯಲ್ಲಿ ಮಗನಾಗಿ ಹುಟ್ಟಿ ಗುರುದತ್ತನೆಂದು ಹೆಸರಿಟ್ಟುಕೊಂಡು ಪ್ರಸಿದ್ಧನಾದನು. ಅತ್ತ ನಾರಕನಾಗಿದ್ದ ವಜ್ರದಾಡನು ಹುಲಿಯಾಗಿ ಹುಟ್ಟಿ ಗುರುದತ್ತನ ಕೈಲಿ ಸತ್ತು ಹಳಮುಖ

ನೆಂಬ ಬ್ರಾಹ್ಮಣನಾಗಿ ಹುಟ್ಟಿದನು. ಮುಂದೆ ಗುರುದತ್ತನು ತಪಸ್ವಿಯಾಗಿ ಪಳ್ಳಿಖೇಡ ಪುರದ ಬಳಿ ಸೂರ್ಯ ಪ್ರತಿಮೆ ನಿಂದಿದ್ದಾಗ ಹಲಮುಖನು ಸಲ್ಲದ ಕೋಪ ದಿಂದ ಅವನನ್ನು ಸುಡಲು ಸಿದ್ಧವಾದಾಗ, ಶುಕ್ಲಧ್ಯಾನಮಗ್ನನಾಗಿದ್ದನು. ಆಗ ಚತುರ್ವಿಧ ದೇವರುಗಳೂ ಬಂದು ಗುರುದತ್ತ ಕೇವಲಿಯನ್ನು ಪೂಜಿಸಿ ಸ್ತೋತ್ರ ಮಾಡಿದ್ದನ್ನು ನೋಡಿ ಹಲಮುಖ ಹೆದರಿ ಓಡಿ ಹೋದನು. ಆಮೇಲೆ ಅವನೂ ಕೇವಲಿ ಗಳಿಂದ ತನ್ನ ಪೂರ್ವ ಚರಿತ್ರೆಯನ್ನು ಕೇಳಿ ತಿಳಿದು ವಿರಕ್ತನಾಗಿ ಜಿನಧರ್ಮವನ್ನು ಅವಲಂಬಿಸಿದನು.

## ನಯಸೇನಬುಧನ ಕಾವ್ಯರತ್ನ

ಜಿನಧರ್ಮದ ಸಾರಸರ್ವಸ್ವವನ್ನೂ ಭವ್ಯಾವಳಿಗೆ ಸುಲಭವಾಗಿ ತಿಳಿಸುವುದಕ್ಕಾಗಿ 'ಸುಕವಿನಿಕರಪಿಕಮಾಕಂದ'ನೆನಿಸಿದ ನಯಸೇನನು ಹದಿನಾಲ್ಕು ಬೇರೆ ಬೇರೆ ಕಥೆಗಳುಳ್ಳ ಕಾವ್ಯವನ್ನು ಬರೆದು ಅದಕ್ಕೆ 'ಧರ್ಮಾಮೃತ'ವೆಂದು ನಾಮಕರಣ ಮಾಡಿ 'ಕಾವ್ಯರತ್ನ ವೆಂದು ತಾನೇ ಪ್ರಶಂಸೆಮಾಡಿದ್ದಾನೆ. ಈ ಹದಿನಾಲ್ಕು ಕಥೆಗಳಲ್ಲಿಯೂ ಅನೇಕ ಜಿನ ಭಕ್ತರ ಪುಣ್ಯಕಥೆಗಳೂ, ಅವರಿಗೆ ಉಪಸರ್ಗವನ್ನುಂಟುಮಾಡಿದ ಪಾಪಿಗಳ ವೃತ್ತಾಂತ ಗಳೂ ಅವರಿಗುಂಟಾದ ಸದ್ಗತಿದುರ್ಗತಿಗಳ ವರ್ಣನೆಯೂ ಯಥೇಷ್ಟವಾಗಿ ಬಂದಿವೆ. ಜೈನಧರ್ಮಾವಲಂಬಿಯಾದ ದೃಢವ್ರತನಿಗೆ ನಿರ್ವೃತಿಸೌಖ್ಯವೂ ಆಳಿಶ್ರಾವಕನಿಗೆ, ಧರ್ಮ ದಲ್ಲಿ ನಂಬಿಕೆಯಿಲ್ಲದ ವ್ರತಭ್ರಷ್ಟನಿಗೆ, ತಿರ್ಯಕ್‌ನಾರಕಗತಿಗಳೂ ಉಂಟಾಗುವುವೆಂದು ಹೇಳಿ ಜೈನಧರ್ಮದ ಮಹಿಮಾತಿಶಯವನ್ನು ನಿರೂಪಿಸುವುದೇ ನಯಸೇನನ ಗುರಿ. ಧರ್ಮಪ್ರಚಾರವೇ ಈ ಕವಿಯ ಉದ್ದೇಶ. ಇದು ನಿಸ್ಸಂಶಯವಾಗಿ ಧಾರ್ಮಿಕ ಗ್ರಂಥ. ಧರ್ಮಾಮೃತದಲ್ಲಿ ನೇರವಾಗಿ ಜೈನಧರ್ಮದ ಹಿರಿಮೆಯ ಹೊಗಳಿಕೆಯೂ ಇದೆ ; ಕಥೆಯ ಸನ್ನಿವೇಶದ ಮೂಲಕ ಧ್ವನಿತವಾಗುವ ಉಪದೇಶವೂ ಇದೆ. ತೀರ್ಥಂಕರ ಚರಿತ್ರೆಗಳಲ್ಲಿ ಇರುವಂಥ ಭವಾವಳಿಯೂ ಬೇಕಾದ ಹಾಗೆ ಬಂದಿದೆ. ನಯಸೇನಬುಧನು ತನ್ನ ಈ ಕಾವ್ಯವು ಕುಲಪರ್ವತಗಳು ನಿಲ್ಲುವಂತೆ, ಸಮುದ್ರ ನಿಂತಿರುವಂತೆ, ಅನಂತ ಕಾಲದವರೆಗೆ ನಿಲ್ಲಲೆಂದು ಪ್ರಾರ್ಥಿಸಿ ತನ್ನ ಕೃತಿರತ್ನಕ್ಕೆ ಮಂಗಳ ಹಾಡಿದ್ದಾನೆ. "ಜಿನ ಧರ್ಮಂ ಸಕಳಾವನೀತಳಮುಮಂ ಪರ್ವಿಕ್ಕೆ" ಎಂಬುದು ಕವಿಯ ನಿತ್ಯಪ್ರಾರ್ಥನೆ.

ಧರ್ಮಪ್ರಚಾರವೇ ಮೂಲೋದ್ದೇಶವಾಗಿ ಉಳ್ಳ ಇಂಥ ಕೃತಿಯಲ್ಲಿ ಸ್ವಧರ್ಮ ಪ್ರಶಂಸೆ, ಅನ್ಯಧರ್ಮಖಂಡನೆ, ಎರಡೂ ಅನಿವಾರ್ಯ, ಜೈನಧರ್ಮ, ಜಿನಮುನಿಗಳು, ಜೈನಶ್ರಾವಕರು, ಅವರು ಆಚರಿಸುವ ವ್ರತಪೂಜಾದಿಗಳು, ಎಲ್ಲ ಶ್ರೇಷ್ಠ. ಅವು ನಿರ್ವೃತಿಸೌಖ್ಯದಾಯಕಗಳು. ಅನ್ಯಧರ್ಮಗಳು ಕುಧರ್ಮಗಳು, ಮಿಥ್ಯಾಧರ್ಮಗಳು. ಅವುಗಳನ್ನು ಅನುಸರಿಸಿದರೂ ಸದ್ಗತಿಯನ್ನು ಪಡೆಯುವುದು ಸಾಧ್ಯವಲ್ಲ. ಇದೇ ಈ ಗ್ರಂಥದ ಎಲ್ಲ ಕಥೆಗಳಲ್ಲಿಯೂ ಇರುವ ಮುಖ್ಯ ಆಶಯ. ಈ ಆಶಯವನ್ನು ನಯ

ಸೇನ ಕವಿ ಬಹಳ ಚಮತ್ಕಾರವಾಗಿ ನಿರೂಪಿಸಿ ತನ್ನ ಕಥನ ಕೌಶಲದಿಂದ ಓದುಗರ ಮನಸ್ಸನ್ನು ಸೂರೆಗೊಳ್ಳುತ್ತಾನೆ.

ಮೊದಲನೆಯದಾದ ಸಮ್ಯಗ್ದರ್ಶನದ ಕಥೆಯಲ್ಲಿಯೇ ಅನ್ಯಮತವಿಡಂಬನೆ ಸುವ್ಯಕ್ತವಾಗಿದೆ. ವಸುಭೂತಿಯೆಂಬ ಬ್ರಾಹ್ಮಣ ದಿಗಂಬರ ಜೈನಶ್ರಮಣಕರ ಹಿರಿಮೆಯನ್ನು ಅರ್ಥಮಾಡಿಕೊಳ್ಳದೆ "ಅವರು ಮಲಧಾರಿಗಳು, ನಿರ್ಗ್ರಂಥರು. ದೇವಕಾರ್ಯ ದೊಳನಿಸುಂ ನೋಯದೆ ಸುಖಿಯಿಪ"ರೆಂದು ಅವಹೇಳನಮಾಡುತ್ತಾನೆ. "ಅವರ ಮಾಟಮೆಲ್ಲಂ ಕೂಟಿರ್ ಕಾರಣಮಲ್ಲದೆ ಗತಿಕಾರಣಮಲ್ಲಂ ; ಗತಿವಡೆವೆನೆಂಬುದು ಕಾಯ ಕ್ಲೇಶಂ ಬೇಟ್ಟುದು; ಆ ಕಾಯಕ್ಲೇಶಂ ನಿಮ್ಮ ಸಚ್ಚಿನ ಸವಣರ ಮೆಯ್ಯೊಳೆಳ್ಳನಿತುಮಿಲ್ಲ" ಎಂದು ವಸುಭೂತಿ ಪೂರ್ವಾಪರ ವಿಚಾರವಿಲ್ಲದೆ ಸವಣರ ನಡತೆಯನ್ನೂ ಯೋಗ್ಯತೆಯನ್ನೂ ಟೀಕಿಸಿದನು. ಆದರೆ ವ್ಯವಹಾರಜ್ಞನಾದ ಸೆಟ್ಟಿ ಸಿಟ್ಟುಗೊಳ್ಳದೆ ಸುಮ್ಮನಿದ್ದು ಎರಡು ದಿನ ಕಳೆದ ಮೇಲೆ ಬ್ರಾಹ್ಮಣನಿಗೆ ಹಣದ ಆಸೆ ತೋರಿಸಿ ಒಂದು ಜೈನ ನೋಂಪಿಯನ್ನು ಆಚರಿಸಲು ಒಪ್ಪಿಸುತ್ತಾನೆ. ಆಗ ವಸುಭೂತಿ ಕೂಡಲೆ ತನಗೆ ಲಭಿಸಲಿದ್ದ ಪಕ್ವಾನ್ನದ ಊಟ ಕೊನೆಯಲ್ಲಿ ಲಭಿಸಲಿದ್ದ ಧನ, ಇವೆರಡನ್ನೇ ಮನಸ್ಸಿನಲ್ಲಿಟ್ಟುಕೊಂಡು ಮುಂದುವರಿದು ಜೈನನೋಂಪಿಗೆ ಸಿದ್ಧನಾದನು. ತನಗೆ ಏನು ಗತಿ ಕಾದಿದೆಯೆಂಬುದು ಅವನಿಗೆ ತಿಳಿಯಲಿಲ್ಲ.

ದಯಾಮಿತ್ರಸೆಟ್ಟಿ, ವಸುಭೂತಿ ಮೊದಲು ಲೋಚನ್ನು ಮಾಡಿಸಿಕೊಳ್ಳಬೇಕೆಂದು ಹೇಳಿ ಅವನನ್ನು ಉತ್ತರಾಭಿಮುಖವಾಗಿ ಕೂಡಿಸಿ ಲುಂಛನಕ್ಕೆ ಆರಂಭಮಾಡಿಸಿದನು. ಇಲ್ಲಿ ನಯಸೇನನ ವಿಡಂಬನಾತ್ಮಕವಾದ ಹಾಸ್ಯವನ್ನು ಮನಗಾಣಬಹುದು. ಲೋಚು 'ನಿಶ್ರೇಯಸಶ್ರೀಯ ವಿವಾಹಗೇಹದ ಭೂಮಿಶೋಧನೆ' ಎಂದು ವರ್ಣಿಸಿದ ಕವಿ ಇಲ್ಲಿ ವಸುಭೂತಿಯ ಅವಸ್ಥೆಯನ್ನು ಹೇಳುವಾಗ

"ತಲೆಯುಂ ಬಲುದಡಿಗರ್ಕೀಳೆ
ನಿಲಲಾಱದೆ ಸುಂಟಿದಿಂದ ಕೋಡಗದಂತು
ಮ್ಮಳಿಸಿ ಕಳವಳಿಸಿ ನೋವಿಂ
ತಲೆಯುಂತಿರಿಪುತ್ತುಮಂಜಿ . . ."

ಗೋಳಾಡಿದನೆಂದು ಹೇಳಿದ್ದಾನೆ. ಮಂದರಧೈರ್ಯರಾದ ದಿಗಂಬರ ಮುನಿವರೇಣ್ಯರು ಅಚಂಚಲರಾಗಿ ಕುಳಿತು ಉಂಛನ ಕ್ರಿಯೆಯನ್ನು ಮಾಡಿಸಿಕೊಳ್ಳುವರೆಂಬುದನ್ನು ಈ ಆಸೆಪಾತಕನೆಲ್ಲಿ ಬಲ್ಲ ? ಇನ್ನು ಎಷ್ಟು ಪಕ್ವಾನ್ನ ತಿಂದರೂ ಮತ್ತೆ ಮರುದಿನ ಆ ಹೊತ್ತಿನವರೆಗೆ ನೀರು ಕುಡಿಯಕೂಡದು, ನವೆಯಹಾದರೆ ಮೈ ಕೆರೆದುಕೊಳ್ಳಕೂಡದು, ಸದಾ ಅಧ್ಯಯನತತ್ಪರನಾಗಿರಬೇಕು. ಈ ನಿಯಮಗಳನ್ನೆಲ್ಲ ಪಾಲಿಸುವುದು ವಸುಭೂತಿ ಯಿಂದಾಗಲಿಲ್ಲ. ಅವನು ಮೈತುರಿಕೆಯಿಂದ ಕಂಗೆಟ್ಟ. ತಡೆಯಲಾರದ ನೀರಡಿಕೆ ಬಾಧಿ

ಸಿತು. ಕೊನೆಗೆ ಸೆಟ್ಟಿ ಕೊಡಬಹುದಾದ ಧನದ ಮೋಹವನ್ನೂ ಬಿಟ್ಟು "ಸಂತಾಪದ ಮೇಲೆ ಸಂತಾಪಮಂ ಮಾಟ್ಪ ನಿನ್ನ ಸೋಂಪಿಯೆಂಬ ಗರಗಸಕ್ಕಿನ್ನ ಮೆಯ್ಯನೊಡ್ಡ ಲಾಱೆಂ" ಎಂದು ಸ್ಪಷ್ಟವಾಗಿ ಹೇಳಿ ಕೆರೆಗೆ ಹೋಗಿ ಅವಗಾಹಸ್ನಾನಮಾಡಿ ನೀರು ಕುಡಿಯಲು ಆತುರಪಟ್ಟನು. ಸೆಟ್ಟಿಗೂ ಅಷ್ಟೇ ಬೇಕಾಗಿತ್ತು. ಈ ಸನ್ನಿವೇಶ ಬರುವು ದೆಂದು ಅವನು ಮೊದಲೇ ಊಹಿಸಿದ್ದನು. ತನ್ನ ತಂತ್ರ ಬೇಗನೆ ಫಲಿಸಿತೆಂಬ ಸಂತೋಷ ದಿಂದ ಸೆಟ್ಟಿ "ಬಾಯುತಂಬುಲಂ ಸೂಸೆ ಕಳಕಳಿಸಿನಕ್ಕಂ" ! ಇನ್ನೊಬ್ಬನನ್ನು ಕೊಳಕ ನೆಂದೂ ಸೋಂಬನೆಂದೂ ಹೀಗಳೆವುದು ಸುಲಭ ; ಅವನ ವ್ರತವನ್ನು ಕೈಕೊಂಡು ಆಚರಿಸುವುದು ಈ ಮತದೂಷಕರಿಗೆ ಶಕ್ಯವಲ್ಲ.

"ಕಡುಮೂರ್ಖರ್ತಮ್ಮಿಚ್ಛೆಗೆ
ಪಿಡಿದುದೆ ಪಿರಿದೆಂಬರಣ್ಣ ಜಿನಮಾರ್ಗದೊಳೇಂ
ನಡೆಯಲ್ ಬರ್ಕುಮೆ ? ಬಾರದು
ಕಡಲೆಗಳಂ ತಿಂಬವೊಗ್ಗು ಕಲ್ಗಳೊಳುಂಟೇ"

ಎಂದು ದಯಾಮಿತ್ರನು ವಸುಭೂತಿಯನ್ನು ಹಂಗಿಸಿ ಇನ್ನೊಮ್ಮೆ ಮಹಾತ್ಮರಾದ ಮಲ ಧಾರಿ ದೇವರುಗಳನ್ನು ಹಾಸ್ಯಮಾಡದಿರುವಂತೆ ಚೆನ್ನಾಗಿ ಬುದ್ಧಿಗಲಿಸಿದನು. ಬ್ರಾಹ್ಮಣ ತನ್ನ ಸ್ನಾನ ಶೌಚಗಳನ್ನೇ ಘನವೆಂದು ಹೇಳಿ ದಿಗಂಬರರ ಆಚಾರವನ್ನು ಕೀಳಾಗಿ ಕಾಣ ಬಾರದು. ಅದೇನು ಸುಲಭಸಾಧ್ಯವಲ್ಲ.

ಇದೇ ರೀತಿಯಲ್ಲಿಯೇ ನಯಸೇನ ಬೌದ್ಧರನ್ನೂ ಟೀಕಿಸಿದ್ದಾನೆ. ಬುದ್ಧಶ್ರೀ ಯೆಂಬ ಭಿಕ್ಷು ಜೈನಧರ್ಮದ ಮೇಲಿನ ಮತ್ಸರದಿಂದ ಸಂಘಶ್ರೀಯೆಂಬ ತನ್ನ ಶಿಷ್ಯ ವನ್ನು ಅಧಃಪಾತಕ್ಕೆ ತಳ್ಳಿದ ಕಥೆಯನ್ನು ಸತ್ಯವ್ರತದ ಕಥೆಯಲ್ಲಿ ಹೇಳಿದ್ದಾನೆ. ಜೈನ ನಾದ ರಾಜನಿಗೆ ಹೆಣ್ಣು ಕೊಟ್ಟ ನಿಮಿತ್ತದಿಂದ ಸಂಘಶ್ರೀ ರಾಜನ ಉಪದೇಶಕ್ಕೆ ಮನ ಸೋತು ಜೈನಶ್ರಾವಕನಾಗಿದ್ದನು. ದೊರೆ ಅವನಿಗೆ ಗಗನಗಾಮಿಗಳಾದ ಚಾರಣರನ್ನು ತೋರಿಸಿ ಆ ವೈಭವ ಅವರಿಗೆ ಜಿನಧರ್ಮಾವಲಂಬನೆಯ ಮಹಿಮೆಯಿಂದ ಲಭಿಸಿತೆಂದು ಹೇಳಿದಾಗ ಆ ದಿವ್ಯದೃಶ್ಯವನ್ನು ನೋಡಿ ನಂಬಿದ ಸಂಘಶ್ರೀ ತನ್ನ ಮೊದಲ ಗುರುವಾ ಗಿದ್ದ ಬುದ್ಧಶ್ರೀಯ ಪ್ರೇರಣೆಗೊಳಗಾಗಿ ತಾನು ಕಂಡ ಸತ್ಯವನ್ನು ಕಾಣಲಿಲ್ಲವೆಂದು ಸುಳ್ಳಾಡಿ ನಗರ ದೇವತೆಗಳ ಕೋಪಕ್ಕೆ ಗುರಿಯಾಗಿ ಕಣ್ಣು ಕಳೆದುಕೊಂಡನು ! ಜೈನ ಧರ್ಮದ ಹಿರಿಮೆಯ ಹೊಗಳಿಕೆ, ಅನ್ಯಧರ್ಮದ ಕೀಳ್ಮೆಯ ವರ್ಣನೆ, ಇವೆರಡೂ 'ಧರ್ಮಾಮೃತ'ದಲ್ಲಿ ಯಥೇಷ್ಟವಾಗಿ ಕಾಣಸುತ್ತವೆ. ಆದರೆ ನಯಸೇನ ಇದನ್ನು ಕಥೆಯ ಸನ್ನಿವೇಶವಶನಾಗಿ ಹೇಳುತ್ತ ಬಹಳ ಗಂಭೀರವಾಗಿ ಮಾಡಿದ್ದಾನೆ. "ಜಿನ ಧರ್ಮಂ ಪ್ರಾಣಿಗಾರ್ಮಂ, ತ್ರಿಭುವನತಿಲಕಂ ಲೋಕೈಕ ಪೂಜ್ಯಂ" ಎಂದು ನಯಸೇನ ಘೋಷಿಸಿದ್ದಾನೆ. ಹನ್ನೆರಡನೆಯ ಶತಮಾನದ ಆರಂಭದಲ್ಲಿಯೇ ಮತಕಲಹಗಳು

ತೊಡಗಿ 'ತಾಮೇಲು ನೀಕೀಳು' ಎಂಬ ಮನೋಭಾವದ ವಾದವಿವಾದಗಳು ಆರಂಭ ವಾಗಿದ್ದುವೆಂದು ತೋರುತ್ತದೆ. ಆದ್ದರಿಂದಲೇ ತಮ್ಮ ತಮ್ಮ ಧರ್ಮಗಳ ಪ್ರಾಶಸ್ತ್ಯ ನಿರೂಪಣೆಗೆ ಜನ ಬಳಸದ ತರ್ಕವಾವುದೂ ಇಲ್ಲ. ದಿಗಂಬರರಾದ ಜಿನಮುನಿಗಳನ್ನು ಯಾರೋ ಹಳಿಯಲು ದಿಗಂಬರತ್ವವನ್ನು ಸಮರ್ಥಿಸಲು ನಯಸೇನ ಹೂಡಿರುವ ವಾದ ವನ್ನು ಗಮನಿಸಿ :

"ನೆಲಂ ನಿರ್ಗ್ರಂಥಮಾದೊಡೆ ಬಿತ್ತುವಂಗೆ ರಾಗಂ, ಗಗನಂ ನಿರ್ಗ್ರಂಥಮಾದೊಡೆ ಮದುವೆಗುತ್ಸವಂ, ನೀರ್ ನಿರ್ಗ್ರಂಥಮಾದೊಡೆ ಕುತ್ತದ ಕೇಡು, ಕಿರ್ಚು ನಿರ್ಗ್ರಂಥ ಮಾದೊಡೆ ಅಡುಗೆಯ ಕಾರ್ಯಂ, ಅಕ್ಕಿ ನಿರ್ಗ್ರಂಥಮಾದೊಡೂಟದ ರುಚಿ, ಪಾಲ್ ನಿರ್ಗ್ರಂಥಮಾದೊಡಳೆಯ ಸವಿ, ಸೂರ್ಯಂ ನಿರ್ಗ್ರಂಥಮಾದೊಡೆ ದಿವಸಶುದ್ಧಿ, ಚಂದ್ರಂ ನಿರ್ಗ್ರಂಥಮಾದೊಡೆ ರಾತ್ರಿಶುದ್ಧಿ, ಮನಂ ನಿರ್ಗ್ರಂಥಮಾದೊಡೆ ಕಾರ್ಯದೊದವು, ರತ್ನಂ ನಿರ್ಗ್ರಂಥಮಾದೊಡೆ ಬೆಲೆಯ ಪೆರ್ಚು, ಪೊನ್ ನಿರ್ಗ್ರಂಥಮಾದೊಡೆ ಮನ್ನಣೆ ಯಕ್ಕುಂ ; ಅಂತೆ ಜಿನೇಶ್ವರನ ತಪದ ನಿರ್ಗ್ರಂಥದಿಂದಮ ಲೋಕದ ಕಾರ್ಯಂಗಳೆಲ್ಲಂ ಸಿದ್ಧಿಯಕ್ಕುಂ" ಆದ್ದರಿಂದ ನಿರ್ಗ್ರಂಥವಾಗಿರುವುದೇ ಶ್ರೇಷ್ಠ. ಇನ್ನೂ ಕೇಳಿ : "ಧರೆಯುಂ ಪುಟ್ಟಿದ ಮಕ್ಕಳುಂ ದಿನಪನುಂ ಗೋವೃಂದಮುಂ ವಾರಣೋತ್ಕರಮುಂ ವ್ಯೋಮಮುಮಬ್ಧಿಯುಂ ತುರಗಮುಂ ಕಿರ್ಚುಂ ತರುವ್ರಾತಮುಂ ಗಿರಿಯುಂ ಲೋಕ ದೊಳಾದ ವಸ್ತುವನಿತುಂ ನಿರ್ಗ್ರಂಥಮಪ್ಪಾ ಜಿನೇಶ್ವರ ಮುದ್ರಾಂಕಿತಮಲ್ಲದುಂಟೆ ಜಗದೊಳ್ ಮತ್ತನ್ಯಸಲ್ಲಾಂಛನಂ ?" "ಭಾವಿಪೊಡೆ ಬತ್ತಲೆಯಿಲ್ಲದ ವಸ್ತುವಾ ವುದೋ ?" ಎಂದು ನಯಸೇನ ಉದ್ಗಾರ ತೆಗೆದಿದ್ದಾನೆ. ದಿಗಂಬರತೆಯನ್ನು ಸಮರ್ಥಿ ಸಲು ನಯಸೇನ ಇಷ್ಟು ದೂರ ಶ್ರಮಿಸಿರುವುದನ್ನು ನೋಡಿದರೆ ಅವನ ಕಾಲಕ್ಕೆ ಜೈನ ಯತಿಗಳು ದಿಗಂಬರರಾಗಿ ಸಂಚರಿಸುವುದನ್ನು ಕಂಡ ಅನ್ಯಧರ್ಮೀಯರು ಇದು ಅನಾಗರಿಕ ನಡೆವಳಿಕೆ, ಅಸಹ್ಯ, ಅಪಶಕುನ' ಎಂದು ಮುಂತಾಗಿ ಆಕ್ಷೇಪಿಸಿರಬೇಕು ; ದಿಗಂಬರ ಯತಿಗಳನ್ನು ಹಿಂಸೆಗೂ ಗುರಿಪಡಿಸಿರಬಹುದು. ಜೈನರೇ ಆದ ಶ್ವೇತಾಂಬ ರರೂ ಇದನ್ನು ಅಲ್ಲಗಳೆದಿರಬೇಕು. ಆದ್ದರಿಂದಲೇ 'ದಿಗಂಬರದಾಸ'ನಾದ ನಮ್ಮ ನಯ ಸೇನದೇವನು ಯತಿಗಳ ಬೆತ್ತಲೆತನವನ್ನು ಗಟ್ಟಿಯಾಗಿ ಸಮರ್ಥಿಸಲು ಹೊರಟಿದ್ದಾನೆ.

ನಯಸೇನ ತನ್ನ ಕೃತಿಯ ಕಥಾವಸ್ತುವನ್ನು ಬೇರೆ ಬೇರೆ ಮೂಲಗಳಿಂದ ತೆಗೆದು ಕೊಂಡಿರುವಂತೆ ತೋರುತ್ತದೆ. ಸಮಂತ ಭದ್ರಾಚಾರ್ಯರಿಂದ ರಚಿತವಾದ 'ರತ್ನಕರಂಡಕ ಶ್ರಾವಕಾಚಾರ'ದಲ್ಲಿ ಈ ಕೆಲವು ಕಥೆಗಳು ಸಂಕ್ಷೇಪವಾಗಿ ಬಂದಿವೆ. ಶಿವಾಕೋಟ್ಯಾ ಚಾರ್ಯನ ವಡ್ಡಾರಾಧನೆಯನ್ನೂ ನಯಸೇನ ನೋಡಿರಬೇಕು. ಅದರಲ್ಲಿ ಬಂದಿರುವ ವಿಶ್ವಾನುಲೋಮ, ಅಂಜನಚೋರರ ಕಥೆ ಧರ್ಮಾಮೃತದಲ್ಲಿಯೂ ಬಂದಿದೆ. ದುರ್ಗ ಸಿಂಹನ ಪಂಚತಂತ್ರದಲ್ಲಿ ಬಂದಿರುವ ಒಂದು ಕಥೆಯನ್ನು ನಯಸೇನ ಸಂಗ್ರಹಿಸಿದ್ದಾನೆ. ಆದರೆ ನಯಸೇನ ವಸುಭಾಗಭಟ್ಟನ ಮೂಲಕೃತಿಯನ್ನು ನೋಡಿದ್ದನೆ, ಇಲ್ಲವೆ

ಎಂಬುದು ನಿಷ್ಕರ್ಷೆಯಿಲ್ಲ. ಅಲ್ಲದೆ ಇದು ಜನಪದ ಕಥೆಯೂ ಆಗಿದ್ದಿರಬಹುದು. 'ಧರ್ಮಾಮೃತ'ದ ಕಥೆಗಳಲ್ಲಿ ಅಲ್ಲಲ್ಲಿ ಮೂಡಿಬಂದಿರುವ 'ಒಳಗತೆ'ಗಳು ಜಾನಪದ ಸಾಹಿತ್ಯಕ್ಕೆ ಸೇರಿದುವೇ ಆಗಿದ್ದಿರಬಹುದು. ಹರಿಷೇಣನ ಜೈನ ಬೃಹತ್ಕಥಾಕೋಶ, ಪ್ರಭಾಚಂದ್ರ, ನೇಮಿದತ್ತ ಮೊದಲಾದವರು ರಚಿಸಿದ ಆರಾಧನಾ ಕಥಾಕೋಶಗಳೂ ಪ್ರಸಿದ್ಧವಾದವು. ಇವುಗಳನ್ನೆಲ್ಲ ನಯಸೇನಬುಧನು ನೋಡಿರಬಹುದು. ಆದರೆ ಕಥಾ ವಸ್ತುವನ್ನು ಯಾವಮೂಲದಿಂದ ಆರಿಸಿಕೊಂಡಿದ್ದರೂ ನಯಸೇನ ಅದನ್ನು ತನ್ನ ಕಥನ ಕೌಶಲದಿಂದ ಬಹಳ ಸುಂದರವಾಗಿ ರೂಪಿಸಿ ಅದಕ್ಕೆ ಹೆಚ್ಚಿನ ರಮ್ಯತೆಯನ್ನುಂಟುಮಾಡಿದ್ದಾನೆ. ನಯಸೇನನ ಹೃದಯಂಗಮವಾದ ಶೈಲಿ ಆ ಕಥೆಗಳಿಗೆ ಹೊಸ ಚೈತನ್ಯವನ್ನು ಮೂಡಿಸುತ್ತದೆ. ಅವನು ಸಂಸ್ಕೃತಪ್ರಾಕೃತ ಭಾಷೆಗಳನ್ನು ಬಲ್ಲ ಪಂಡಿತನಾಗಿದ್ದು ವಿಪುಲವಾದ ಸಾಹಿತ್ಯವನ್ನು ಓದಿಬಲ್ಲವನಾದರೂ ತಾನು ಹೇಳಬಯಸುವ ಕಥೆಯನ್ನೂ ಅದರಲ್ಲಿ ಅವನು ಉಪದೇಶಿಸಬಯಸಿದ ಜೈನಧರ್ಮದ ತತ್ತ್ವವನ್ನೂ ಆದಮಟ್ಟಿಗೂ ಸುಲಭಗನ್ನಡದಲ್ಲಿ ಹೇಳಿ ಎಂಥವರಿಗೂ ತಿಳಿಯುವಂತೆ ಗ್ರಂಥರಚನೆ ಮಾಡಿದ್ದಾನೆ. ಚಂಪೂಕಾವ್ಯದ ರಚನೆಮಾಡಿರುವ ನಯಸೇನ ಕಾವ್ಯಾಂಗಗಳೆನಿಸಿದ ಹದಿನೆಂಟು ವರ್ಣನೆಗಳ ಚಪಲದಿಂದ ವಿಮುಕ್ತನಾಗಿಲ್ಲವಾದರೂ ಆ ವರ್ಣನೆಗಳು ಇದ್ದೂ ಇಲ್ಲದ ಹಾಗೆ ಬಹಳ ಸಂಕ್ಷೇಪವಾಗಿದ್ದು ಓದುಗರ ಗಮನವನ್ನು ವಿಶೇಷವಾಗಿ ಸೆಳೆಯುವುದಿಲ್ಲ. ಸಾಧಾರಣವಾಚಕರಿಗೆ ಅಪ್ರಯತ್ನವಾಗಿ ಅರ್ಥವಾಗುವಂಥ ಸುಲಭ ಸಂಸ್ಕೃತ ಪದಗಳ ಬಳಕೆ, ಅನೇಕ ಕನ್ನಡಗಾದೆಗಳ ಜೋಡಣೆ, ಸಾಲುಸಾಲಾಗಿ, ಬರುವ ಉಪಮಾನ ಶ್ರೇಣಿಗಳ ಪ್ರಯೋಗ—ಇವು 'ಧರ್ಮಾಮೃತ'ವನ್ನು ಬಹಳ ಜನಪ್ರಿಯವಾಗಿ ಮಾಡಿವೆ. ಆ ಉಪಮಾನಗಳಾದರೂ ಎಲ್ಲರಿಗೂ ಸುಪರಿಚಿತವಾದುವುಗಳೇ. 'ಇವುಗಳಲ್ಲೇನು ಸ್ವಾರಸ್ಯವಿದೆ ?' ಎಂದು ಕೇಳಬಹುದಾದಷ್ಟುಮಟ್ಟಿಗೆ ನಿತ್ಯಬಳಕೆಯಲ್ಲಿರುವಂಥ ಉಪಮಾನಗಳನ್ನೇ ಬಳಸಿ ಕವಿ ತಾನು ನಿರೂಪಿಸಲು ಬಯಸಿದ ಜೈನಧರ್ಮದ ತತ್ತ್ವಗಳ ಹಿರಿಮೆ ಓದುಗರ ಮನಸ್ಸಿನಲ್ಲಿ ನಡುವಂತೆ ಮಾಡಿದ್ದಾನೆ. 'ಧರ್ಮಾಮೃತ'ದಲ್ಲಿ ಪ್ರಯುಕ್ತವಾಗಿರುವ ಕನ್ನಡ ಗಾದೆಗಳನ್ನೆಲ್ಲ ಪಟ್ಟಿಮಾಡಿದರೆ ಅದೇ ಒಂದು ಸಣ್ಣ ಗ್ರಂಥವಾಗಬಹುದು. ಯಾವ ಸನ್ನಿವೇಶದಲ್ಲಿಯೂ ನಯಸೇನ ಡಜನ್‌ಗಟ್ಟಲೆ ಉಪಮಾನಗಳನ್ನು ಹೇಳುವನೇ ಹೊರತು ಒಂದೇ ಉಪಮಾನವನ್ನು ಕೊಟ್ಟು ತೃಪ್ತನಾಗುವ ಸ್ವಭಾವದವನಲ್ಲ. ಆ ಉಪಮಾನ ಪರಂಪರೆಯನ್ನು ದಾಟುವವೇಳೆಗೆ ಪಾಠಕರಿಗೆ ಉಪಮೇಯವೇ ಮರೆತು ಹೋಗುವ ಸಂಭವವೂ ಉಂಟು! ಆ ಉಪಮೆಗಳ ಸ್ವಾರಸ್ಯವನ್ನು ಸವಿಯುತ್ತ ನಾವು ಕಥಾಸನ್ನಿವೇಶವನ್ನೇ ಮರೆಯುವಂತಾಗುತ್ತದೆ. ನಯಸೇನನಿಗೆ ಕಥೆಯನ್ನು ಬೇಗನೆ ಮುಗಿಸಿಬಿಡಬೇಕೆಂಬ ಆತುರವಿಲ್ಲ. ಅದನ್ನು ಆದಷ್ಟು ಅಚ್ಚುಕಟ್ಟಾಗಿ, ಚಚ್ಚೌಕನಾಗಿ ಅಲಂಕರಿಸಿ ಆಕರ್ಷಕವಾಗಿ ಹೇಳಬೇಕೆಂಬುದೇ ಅವನ ಅಭಿಲಾಷೆ. 'ಧರ್ಮಾಮೃತ'ದ ಹದಿನಾಲ್ಕು ಕಥೆಗಳನೂ ಆಮೂಲಾಗ್ರವಾಗಿ ಓದಿ ಮುಗಿಸಿದ ಮೇಲೆ ನಮಗೆ ನಯಸೇನನ ಸಹಜ ಕವಿತಾ ಪ್ರತಿಭೆ,

ಅನೂನವಾದ ಕಥನ ಕೌಶಲ, ಅಪಾರವಾದ ಶಬ್ದ ಸಂಪತ್ತುಗಳ ವಿಚಾರದಲ್ಲಿ ಯಾವ ಸಂಶಯವೂ ಉಳಿಯುವುದಿಲ್ಲ.

ನಯಸೇನ ತನ್ನ ಕಥೆಗಳಲ್ಲಿ ಚಿತ್ರಿಸಿರುವ ಪಾತ್ರಗಳಲ್ಲಿ ಹಲವರು ನಮ್ಮ ಮನೋರಂಗದಮೇಲೆ ನೆಲೆ ನಿಲ್ಲುತ್ತಾರೆ. ಅವರ ನೆನಪು ಎಂದೂ ಮಸಕಾಗುವುದು ಸಾಧ್ಯವಲ್ಲ. ಜಿನಪಾಲಿತಮುನಿ, ಜಿನೇಂದ್ರಭಕ್ತಸೆಟ್ಟಿ, ಅನಂತಮತೀಕುಮಾರಿ, ಮೊದಲಾದ ಸ್ತ್ರೀಪುರುಷರ ಜಿನಭಕ್ತ್ಯತಿಶಯವನ್ನು ನಯಸೇನ ಬಹಳ ರಾಮಣೀಯಕವಾಗಿ ಚಿತ್ರಿಸಿದ್ದಾನೆ. ಅವನ ಪಾತ್ರಚಿತ್ರಣ, ಅವನ ಕಥನಕೌಶಲದಷ್ಟೇ ದೊಡ್ಡದು, ಅನಂತಮತಿಯೆಂಬ ಚಿಕ್ಕಹುಡುಗಿಗೆ ಅವಳ ತಂದೆ ವಿನೋದಪರನಾಗಿ 'ಇವಳಿಗೆ ಬ್ರಹ್ಮಚರ್ಯದೀಕ್ಷೆ ಕೊಡಿ' ಎಂದಾಗ ಭಟ್ಟಾರಕರೂ ಹಾಸ್ಯಕ್ಕಾಗಿಯೇ 'ನಿನಗೆ ಬ್ರಹ್ಮಚರ್ಯವ್ರತವನ್ನು ಕೊಟ್ಟೆವು ಎಂದರು. ಆದರೆ ಆ ಚಿಕ್ಕಮಗು ಇದರಲ್ಲಿ ಹಾಸ್ಯವನ್ನೇನೂ ಕಾಣಲಿಲ್ಲ. ಭಟ್ಟಾರಕರಲ್ಲಿ ಅಮಿತವಾದ ಭಕ್ತಿಯಿಟ್ಟುಕೊಂಡಿದ್ದ ಅನಂತಮತಿ ತ್ರಿಕರಣಶುದ್ಧಳಾಗಿ ವ್ರತಪರಿಪಾಲನೆ ಮಾಡಿದಳು. ಎಂಥ ಸನ್ನಿವೇಶದಲ್ಲಿಯೂ ಆಕೆ ಸಂಸಾರಸುಖಕ್ಕೆ ಆಸೆಪಡಲಿಲ್ಲ. ಅವಳ ತಂದೆಯೇ ಮದುವೆಗೆ ಸಜ್ಜುಮಾಡಿ ಅವಳನ್ನು ತನ್ನ ಸೋದರಳಿಯನನ್ನು ಒಪ್ಪಿ ಮದುವೆಯಾಗೆಂದು ಎಷ್ಟು ಬಗೆಯಾಗಿ ಹೇಳಿದರೂ ಅವಳು ತನ್ನ ಮನೋನಿರ್ಧಾರದಿಂದ ಚಲಿಸಲಿಲ್ಲ. "ಅನ್ಯರ್‌ಬಾರಿಸೆ ಮಾಣ್ಬುದು ಮಾವ ಕಂಚಿನ ದನಿಯೆ ?" ಎಂದು ಕೇಳಿಬಿಟ್ಟಳು. ಕಂಚಿನಜಾಗಟೆಯನ್ನು ಇತರರು ಬಾರಿಸಿದರೆ ಸದ್ದುಮಾಡುತ್ತದೆ. ಇಲ್ಲದಿದ್ದರೆ ಮೌನ. ಹಾಗೆ ತಮ್ಮ ಧರ್ಮವನ್ನು ಅನ್ಯರ ಪ್ರೇರಣೆಯಂತೆ ಕೆಡಿಸಬಹುದೆ ? ಇತರರು ವಾರಿಸಿದರೆ (ತಡೆದರೆ) ಜಿನವ್ರತವನ್ನು ಕೈಬಿಡಬಹುದೆ ? ದೃಢವ್ರತನಿಗೆ ಎರಡುನಾಲಿಗೆಯಿವೆಯೆ ? ಸಾರಾಸಾರವಿಚಾರ ಮಾಡಿ ವ್ರತವನ್ನು ಕೈಕೊಂಡ ಮೇಲೆ ಅದನ್ನು ಬಿಡದೆ ನಡೆಸಬೇಕೆಂದು ವಾದಿಸಿ ಅನಂತಮತಿ ವಿರಕ್ತಳಾಗಿ ಕೊನೆಗೆ ಸಹಸ್ರಾರಕಲ್ಪದಲ್ಲಿ ದೇವಜನ್ಮವನ್ನೇ ಪಡೆದಳು! ವ್ರತನಿಷ್ಠೆ ಸತ್ಫಲವನ್ನೇ ನೀಡುತ್ತದೆ !

ಎಲ್ಲ ಕಥೆಗಳಲ್ಲಿಯೂ ಜಿನಧರ್ಮದ ಹಿರಿಮೆಯ ನಿರೂಪಣೆಯೇ ಕವಿಯ ಮುಖ್ಯ ಧ್ಯೇಯ. ಅದನ್ನು ಸಾಧಿಸುವಾಗ ಆನುಷಂಗಿಕವಾಗಿ ಅನ್ಯಧರ್ಮಗಳ ಖಂಡನೆಯೂ ಬರುತ್ತದೆ. ಅದಕ್ಕೆ ನಯಸೇನ ವಿಮುಖನಲ್ಲ. ಬಹುಶಃ ಧರ್ಮಪ್ರಚಾರಕರೆಲ್ಲರೂ ಅನುಸರಿಸುವ ಮಾರ್ಗವನ್ನೇ ನಯಸೇನನೂ ಹಿಡಿದಿದ್ದಾನೆ. ಆ ಶತಮಾನದವರೇ ಆದ ಬ್ರಹ್ಮಶಿವ ಮೊದಲಾದ ಕವಿಗಳು ಈ ದಿಕ್ಕಿನಲ್ಲಿ ಇನ್ನೂ ಮುಂದುವರಿದಿದ್ದಾರೆನ್ನಬಹುದು.

ಕಥನಚಮತ್ಕಾರ, ಸುಲಭಶೈಲಿ, ಸುಂದರ ಉಪಮಾರೂಪಕಗಳ ಪ್ರಯೋಗ, ದೇಸಿ ಮತ್ತು ಮಾರ್ಗಶೈಲಿಗಳ ಹೊಂದಾಣಿಕೆ, ಇವುಗಳನ್ನು ಸಾಧಿಸಿದ ನಯಸೇನ ಉತ್ತಮಕವಿಯಾಗಿದ್ದಾನೆ. ಪಂಪ ಕುಮಾರವ್ಯಾಸರಂಥ ಪ್ರತಿಭಾ ಶ್ರೀಮಂತರಾದ ಮಹಾಕವಿಗಳ ಸಾಲಿನಲ್ಲಿ ಸೇರಿಸಲಾಗದಿದ್ದರೂ ನಯಸೇನ ದ್ವಿತೀಯ ಶ್ರೇಣಿಯಲ್ಲಿ ಉನ್ನತ ಸ್ಥಾನವನ್ನು ಗಳಿಸಿಕೊಂಡಿರುವನೆಂದು ಹೇಳಬಹುದು.

ಈ ಅನುವಾದವನ್ನು ಮಾಡಲು ಮೈಸೂರು ಓರಿಯಂಟಲ್ ಲೈಬ್ರರಿಯ ಗ್ರಂಥ ಮಾಲೆಯ ಪ್ರಕಟನೆಯನ್ನು ಬಳಸಲಾಗಿದೆ. ಮೂಲಪಾಠವನ್ನು ಅಲ್ಲಿಂದಲೇ ಪ್ರತಿ ಮಾಡಲಾಗಿದೆ. ಇದರಲ್ಲಿ ಹಲವು ಪಾಠಕ್ಲೇಶಗಳು ಉಳಿದಿವೆ. ಕೆಲವನ್ನು ಮಾತ್ರ ತಿದ್ದಿ ಕೊಂಡಿದ್ದೇನೆ.

ಈ ಅನುವಾದ ಕಾರ್ಯವನ್ನು ಮಾಡಲು ನನಗೆ ಅನುಮತಿ ನೀಡಿದ ಪರಿಷತ್ ಅಧ್ಯಕ್ಷರಾದ ಶ್ರೀ. ಜಿ. ನಾರಾಯಣರಿಗೆ ನಾನು ಕೃತಜ್ಞ.

ಕೆ. ವೆಂಕಟರಾಮಪ್ಪ

## ಗ್ರಂಥಋಣ

ಆದಿ ಪುರಾಣ ಪಂಪ— ಸಂ॥ ರೈಸ್
ರತ್ನಕರಂಡಕಶ್ರಾವಕಾಚಾರ— ಸಂ॥ ವಿದ್ಯಾವಾಚಸ್ಪತಿ ಶ್ರೀ ವರ್ಧಮಾನ
— ಪಾರ್ಶ್ವನಾಥಶಾಸ್ತ್ರಿಗಳು
ತತ್ವ ರತ್ನ ಪ್ರದೀಪಿಕೆ — ಸಂ॥ ವಿದ್ವಾನ್ ಶಾಂತಿರಾಜಶಾಸ್ತ್ರಿಗಳು
ವಡ್ಡಾರಾಧನೆ — ಸಂ॥ ಡಿ. ಎಲ್. ನರಸಿಂಹಾಚಾರ್ಯರು
ಜೈನಧರ್ಮ — ಮಿರ್ಜಿ ಅಣ್ಣಾರಾಯ ಪ್ರ॥ ಡಿ. ವಿ.ಕೆ. ಮೂರ್ತಿ, ಮೈಸೂರು.

# ಪ್ರಥಮಾಶ್ವಾಸಂ

ಶ್ರೀರಾಮಾ ರಮಣೀಯ ಪಾದಸರಸೀಜಾತಂ ನಿಲಿಂಪೇಂದ್ರವೃಂ
ದಾರಾಧ್ಯಂ ಭುವನತ್ರಯ ಪ್ರಭು ವಿನೇಯಾನೀಕಕಲ್ಪದ್ರುಮಂ
ಧೀರಂ ನಿತ್ಯನನಂತನಕ್ಷಯಸುಖಂ ಮುಕ್ತ್ಯಂಗನೇಶಂ ಜಗ
ತ್ಸಾರಂ ವೀರಜಿನೇಂದ್ರನೀಗೆಮಗೆ ಮುಕ್ತಿ ಶ್ರೀ ಸುಖಾವಾಪ್ತಿಯಂ ೧

ಪುದಿದೆಂಟುಂ ಕರ್ಮಬಂಧಂ ಪಱಿವಡೆ ಕಿಡದೆಂಟುಂ ಗುಣಂ ಪೊರ್ದೆ ಲೋಕಾ
ಗ್ರದೊಳೋರಂತೊಪ್ಪಿ ನಿಂದಚ್ಯುತರಜಿತರಮೂರ್ತರ್ಪ್ರಣೂತರ್ಸುಸೌಖ್ಯಾ
ಭ್ಯುದಯರ್ನಿತ್ಯರ್ಜಗನ್ಮಂಗಳರಮಳಗುಣೋತ್ತುಂಗರುದ್ಧೂತಲೇಪ
ಮರ್ಗದದಿಂ ಸಿದ್ಧರ್ಸ್ವಕೀಯ ಪ್ರಭುತೆಯನೆಮಗಂ ಮಾೞ್ಕೆ ಕಾರುಣ್ಯದಿಂದಂ ೨

ವರಪಂಚಾಚಾರದೊಂದುನ್ನತಿಯೊಳಿವರೆಲೋಕೋತ್ತಮರ್ವಿಶ್ವಸತ್ವೋ
ತ್ವರಮಂ ರಕ್ಷಿಪ್ಪುಪಾಯಕ್ಕಿವರೆ ಧರಣಿಯೊಳ್ ಸಜ್ಜನಪ್ರಸ್ತುತರ್ಭಾ
ಸುರಮೂವತ್ತಾಱುಮತ್ಯುತ್ತಮಗುಣದೊಳಿವರ್ತಾಮೆ ಸತ್ಪೂಜ್ಯರೆಂಬಂ
ತಿರೆ ಮುಃಕ್ಕಾಚಾರ್ಯವರ್ಯರ್ಕರುಣದಿನಘನಿರ್ಮುಕ್ತರಂ ಮಾಡುಗೆಮ್ಮಂ ೩

ಶ್ರೀ ಲಕ್ಷ್ಮಿದೇವಿಯ ಸುಂದರ ಪಾದಕಮಲದಲ್ಲಿ ಸಂಜನಿಸಿ ದೇವೇಂದ್ರ ಸಮೂಹದಿಂದ ಪೂಜಿತನಾದ, ಮೂರು ಲೋಕಗಳ ಒಡೆಯ, ಜಿನಭಕ್ತ ಜನಸಮೂಹಕ್ಕೆ ಕಲ್ಪವೃಕ್ಷದಂತಿರುವವನು, ಧೀರ, ಅಮರ, ಅನಂತನು, ಅಕ್ಷಯ ಸುಖವನ್ನು ಹೊಂದಿದವನು, ಮುಕ್ತಿಯೆಂಬ ಅಂಗನೆಗೆ ಗಂಡ, ಜಗತ್ತಿನ ಸಾರಸ್ವರೂಪನಾದ ವೀರಜಿನೇಂದ್ರ ಸ್ವಾಮಿಯು ನಮಗೆ ಮುಕ್ತಿಸೌಖ್ಯವನ್ನುಕೊಡಲಿ. ೧. ಹಬ್ಬಿಕೊಂಡಿರುವ ಎಂಟು ಕರ್ಮಬಂಧಗಳು ಕೆಡಲು, ಅಚಂಚಲವಾದ ಎಂಟು ಗುಣಗಳು ಲಭಿಸಲಾಗಿ, ವಿಶೇಷವಾಗಿ ಲೋಕಾಗ್ರದಲ್ಲಿ ಶೋಭಿಸುತ್ತ ನಿಂತ ಅಚ್ಯುತರು, ಅಜಿತರು, ನಿರಾಕಾರರು, ಸ್ತೋತ್ರ ಪಾತ್ರರು, ಒಳ್ಳೆಯ ಸೌಖ್ಯ, ಅಭ್ಯುದಯಗಳನ್ನು ಹೊಂದಿದವರು, ಎಲ್ಲ ಕಾಲಕ್ಕೂ ಜಗಕ್ಕೆ ಮಂಗಳವನ್ನುಂಟುಮಾಡುವವರು, ಅತ್ಯಂತ ಶುದ್ಧರೂ, ಗುಣಗಳಲ್ಲಿ ಶ್ರೇಷ್ಠರೂ, ಕರ್ಮಲೇಪವನ್ನು ಕಳೆದುಕೊಂಡವರೂ ಆದ ಸಿದ್ಧರು ಕರುಣೆಯಿಂದ ಆತ್ಮಪ್ರಭುತ್ವವನ್ನು ಅನುಗ್ರಹಿಸಲಿ. ೨. ಆಚಾರ್ಯರು ಪಂಚಾಚಾರದ ಹೆಚ್ಚಳದಿಂದ ಲೋಕದಲ್ಲೆಲ್ಲ ಉತ್ತಮರು. ವಿಶ್ವದ ಸಮಸ್ತ ಜೀವಿಗಳನ್ನೂ ರಕ್ಷಿಸುವ ಉಪಾಯಕ್ಕೆ ಭೂಮಿಯ ಮೇಲೆ ಇವರೇ ಸಮರ್ಥರು, ಮೂವತ್ತಾರು ಗುಣಗಳಲ್ಲಿ ಇವರೇ ಸತ್ಪೂಜ್ಯರು. ಶ್ರೇಷ್ಠರಾದ ಆಚಾರ್ಯರು ಕರುಣೆಯಿಂದ ನಮ್ಮನ್ನು ದುರಿತದಿಂದ ಪಾರುಮಾಡಲಿ ೩.

ನುತಭವ್ಯಾನೀಕ ನೀಳಾಂಬುರುಹಮಲರೆ ಮಿಥ್ಯಾತ್ವಸೂರ್ಯಾಂಶು ಕುಂದಲ್
ಶ್ರುತದುಗ್ಧಾಂಭೋಧಿಪೆರ್ಚಲ್ಜಿನಗದಿತತತ್ತ್ವಾಂಶುಪರ್ವಲ್ಸರತ್ನ
ತ್ರಿತಯಾದ್ರೀಂದ್ರಾಗ್ರದೊಳ್ ಶೋಭಿಸುವನಘರುಪಾಧ್ಯಾಯತಾರಾಧಿಪರ್ಸಂ
ತತಮಸ್ಮಚ್ಚಿತ್ತಗೇಹಾಂತರವಿಮಳತೆಯಂಮಾಳ್ಕೆವಾಗ್ಜ್ಯೋತಿಯಿಂದಂ ೪

ಮನದೊಳ್ಕೈಗಣ್ಮುಪೊಣ್ಮುತ್ತಿರೆದಯೆ ವರಚಾರಿತ್ರದೊಳ್ಪೆರ್ಚೆಶೀಲಂ
ಜಿನಪಾದಾಂಭೋಜದೊಳ್ತಳ್ತಿರೆಮತಿ ಜಿನತತ್ತ್ವಾಬ್ಧಿಯೊಳ್ ಸಂತತಂ ಭಾ
ವನೆ ಮತ್ತೋಲಾಡೆ ಕರ್ಮಾರಿಯನದಟಲೆವಾನಂದವೀರರ್ತಪಶ್ರೀ
ವನಿತಾಳಂಕಾರರೆಮ್ಮಿಂದಪಹರಿಸುಗೆ ದುರ್ಮೋಹಮಂ ಸಾಧುವರ್ಗಂ ೫

ಶತಪತ್ರಾನನೆ ಜೈನಧರ್ಮಕುಲಿಶಪ್ರಾಕಾರೆ ಮಿಥ್ಯಾತ್ವಪ
ರ್ವತವಜ್ರಾಭೆ ಸಮಸ್ತಭವ್ಯಜನಚಿತ್ತಾಹ್ಲಾದೆ ಲೋಕೈಕ ಸಂ
ಸ್ತುತೆ ಧರ್ಮಪ್ರಿಯೆ ಕೋಮಲಾಂಗಿ ವಿಲಸನ್ಮಾಂಗಲ್ಯ ಸದ್ಧರ್ಮಸಂ
ಯುತೆ ಸಿದ್ಧಾಯಿನಿ ಯಕ್ಷಿಮಾಳ್ಕೆ ನುತಮತ್ಕಾವ್ಯಕ್ಕೆ ನಿರ್ವಿಘ್ನಮಂ ೬

ಸ್ತೋತ್ರಾರ್ಹರಾದ ಭವ್ಯಸಮೂಹವೆಂಬ ನೈದಿಲೆಗಳು ಅರಳಲು ಮಿಥ್ಯಾಧರ್ಮದಲ್ಲಿ ನಂಬಿಕೆಯೆಂಬ ಸೂರ್ಯಕಿರಣವು ಅಡಗಲು, ಜ್ಞಾನವೆಂಬ ಹಾಲ್ಗಡಲು ಉಕ್ಕಲು ಜಿನನು ಉಪದೇಶಿಸಿದ ತತ್ವಜ್ಯೋತಿ ಹಬ್ಬಲು ರತ್ನತ್ರಯಗಳೆಂಬ ಪರ್ವತಾಗ್ರದಲ್ಲಿ ಶೋಭಿಸುವ ಪಾಪರಹಿತರಾದ ಉಪಾಧ್ಯಾಯರೆಂಬ ತಾರಾನಾಯಕ (ಚಂದ್ರ)ರು ಸಂತತವಾಗಿ ನನ್ನ ಚಿತ್ತವೆಂಬ ಮನೆಯಲ್ಲಿ ತಮ್ಮ ವಾಗ್ಜ್ಯೋತಿಯಿಂದ ಬೆಳಕನ್ನುಂಟು ಮಾಡಲಿ. ೪. ಸರ್ವಸಾಧುಗಳು ಮನಸ್ಸಿನಲ್ಲಿ ಸದಾ ಉಕ್ಕುತ್ತಿರುವ ದಯೆ, ಮತ್ತು ತಮ್ಮ ಚಾರಿತ್ರದಲ್ಲಿ ಸಂತತವಾಗಿ ಹೆಚ್ಚುತ್ತಿರುವ ಶೀಲಗಳಿಂದ ಕೂಡಿದವರು. ಅವರ ಮತಿ ಜಿನ ಪಾದಕಮಲದಲ್ಲಿ ಸೇರಿ ಹೋಗಿರುತ್ತದೆ. ಜಿನತತ್ವ ಸಮುದ್ರದಲ್ಲಿ ಅವರ ಭಾವನೆ ಸದಾ ಓಲಾಡುತ್ತಿರುತ್ತದೆ. ತಪೋಲಕ್ಷ್ಮಿಗೆ ಅವರು ಅಲಂಕಾರವಾಗಿರುವವರು. ಅಂಥ ಮಹಾತ್ಮರಾದ ಸಾಧುಗಳು ನಮ್ಮ ಕೆಟ್ಟ ಮೋಹವನ್ನು ಕಳೆಯಲಿ, ೫. ಸಿದ್ಧರ ಮಾತೆಯಾದ ಯಕ್ಷಿಯು ಕಮಲಮುಖಿ, ಜೈನಧರ್ಮಕ್ಕೆ ಅಭೇದ್ಯವಾದ ವಜ್ರದಂಥ ಕೋಟೆಯಾಗಿರುವವಳು. ಮಿಥ್ಯಾ ದರ್ಶನಕ್ಕೆ ವಜ್ರಾಯುಧಸದೃಶಳು. ಭವ್ಯಜನರ ಚಿತ್ತಕ್ಕೆ ಆಹ್ಲಾದವನ್ನು ಕೊಡುವವಳು, ಲೋಕದೆಲ್ಲೆಲ್ಲ ಮುಖ್ಯವಾಗಿ ಹೊಗಳಿಸಿಕೊಳ್ಳುವವಳು ; ಧರ್ಮಪ್ರಿಯಳು, ಕೋಮಲಾಂಗಿ, ಹೊಳೆಯುವ ಮಾಂಗಲ್ಯದಂತೆ ಸದ್ಧರ್ಮವನ್ನುಳ್ಳವಳು, ಇಂಥ ಯಕ್ಷಿಯು ನನ್ನ ಕಾವ್ಯಕ್ಕೆ ವಿಘ್ನ ಬರದಂತೆ ಕಾಪಾಡಲಿ. ೬. ಶ್ರೇಷ್ಠವಾದ

ವರಲಕ್ಷಣಾಂಗನರ್ಹ
ಚ್ಚರಣಾಂಬುಜಮಧುಪನನುಪಮಂ ಗುಣರತ್ನಾ
ಭರಣಂ ಗಜಮುಖಯಕ್ಷಂ
ನಿರುತಂ ರಕ್ಷಿಸುಗೆ ಕೂರ್ತು ಭವ್ಯೋತ್ತಮರಂ ೭

ಕುಂದದ ಕೋಮಲಾಂಗರುಚಿಯಿಂ ಚೆಲುವಿಂಗೆಡೆಯಾಗಿ ವೃತ್ತದೊಂ
ದಂದದೊಳಿರ್ದ ಪೆರ್ಮೊಲೆಯಿನಂತೆಸೆದೊಪ್ಪುವನೇಕ ಛಂದದೊಂ
ದಂದದಯಾನದೊಂದು ರಮಣೀಯತೆಯಿಂ ಕಡುಗಾಡಿವೆತ್ತ ವಾ
ಕ್ಸುಂದರಿ ಕೂರ್ತುನಿಲ್ಕೆ ನಯಸೇನ ಮುನೀಂದ್ರಮುಖಾಬ್ಜಷಂಡದೊಳ್ ೮

ದುರಿತೇಂಧನಾನಲರ್ಭಾ
ಸುರಕೀರ್ತಿಪತಾಕರಮಳಗುಣನಿಕರಕ್ಕಾ
ಗರರರ್ಹದ್ಬಲ್ಯಾಚಾ
ರ್ಯರೆಜಗದೊಳನಿಂದ್ಯರದಱಿನೆಮಗಭಿವಂದ್ಯರ್ ೯

ಪ್ರಕಟ ಯಶರ್ಗುಣನಿಧಿಗ
ಳ್ಸಕಲಧರಾವಳಯಪೂಜಿತರ್ಸುಶ್ರುತರ
ಕ್ಷಕರೆನೆ ಗುಣಧರ ಭಟ್ಟಾ
ರಕರೆವಲಮನಿಂದ್ಯರದಱಿನೆಮಗಭಿವಂದ್ಯರ್ ೧೦

ಲಕ್ಷಣಗಳೇ ಅಂಗಗಳಾಗಿ ಉಳ್ಳ ಅರ್ಹಂತನ ಚರಣ ಕಮಲದಲ್ಲಿ ದುಂಬಿಯಾಗಿರುವವನು, ಹೋಲಿಕೆಯಿಲ್ಲದವನು. ಗುಣರತ್ನಗಳೇ ಆಭರಣಗಳಾಗಿ ಉಳ್ಳವನು, ಇಂಥ ಗಜಮುಖ ಯಕ್ಷನು ಭವ್ಯ ಶ್ರೇಷ್ಠರನ್ನು ಸದಾ ಪ್ರೀತಿಯಿಂದ ಕಾಪಾಡಲಿ. ೭. ಕುಗ್ಗದ ಕೋಮಲ ಶರೀರ ಕಾಂತಿಯುಳ್ಳವಳು, ಚೆಲುವಿಗೆ ಆಶ್ರಯಳಾಗಿರುವವಳು, ವೃತ್ತ (ನಡತೆ, ಕಾವ್ಯ ದಲ್ಲಿನ ಪದ್ಯಜಾತಿ)ದ ಒಂದು ಅಂದದಲ್ಲಿರುವ ಪೆರ್ಮೊಲೆಯಿಂದ ಕೂಡಿ, ಅನೇಕ ರೀತಿಯ (ವಿಭಿನ್ನ ಛಂದಸ್ಸುಗಳಿಂದ ಕೂಡಿ) ಅಂದವಾದ ನಡಿಗೆಯುಳ್ಳ, ಸೌಂದರ್ಯಾತಿಶಯ ದಿಂದ ಕೂಡಿದ ವಾಕ್ಸುಂದರಿಯು ನಯಸೇನ ಮುನೀಂದ್ರನ ಮುಖಕಮಲದಲ್ಲಿ ಪ್ರೀತಿ ಯಿಂದ ನೆಲಸಲಿ. ೮. ಪಾಪವೆಂಬ ಸೌದೆಯನ್ನು ಸುಡುವ ಅಗ್ನಿಯಂಥವರೂ ಪ್ರಕಾಶಮಾನವಾದ ಕೀರ್ತಿಯುಳ್ಳವರೂ ನಿರ್ಮಲ ಗುಣಸಮೂಹಕ್ಕೆ ಆಶ್ರಯಸ್ಥಾನರೂ ಆದ ಅರ್ಹತ್‌ಬಲ್ಯಾಚಾರ್ಯರೇ ಜಗತ್ತಿನಲ್ಲಿ ಅನಿಂದ್ಯರು. ಆದ್ದರಿಂದ ನಮಗೆ ಅವರು ಅಭಿ ವಂದ್ಯರು. ೯. ಪ್ರಸಿದ್ಧವಾದ ಯಶಸ್ಸುಳ್ಳವರೂ ಗುಣನಿಧಿಗಳೂ ಸಕಲ ಭೂಮಂಡಲ ದಲ್ಲಿಯೂ ಪೂಜೆ ಹೊಂದಿದವರೂ ಒಳ್ಳೆಯ ಶ್ರುತಜನರನ್ನು ಕಾಪಾಡುವವರೆಂದು ಪ್ರಸಿದ್ಧರಾದವರೂ ಆದ ಗುಣಧರಭಟ್ಟಾರಕರೇ ಖಂಡಿತವಾಗಿ ಅನಿಂದ್ಯರು. ಆದ್ದರಿಂದ ಅವರೇ ನಮಗೆ ಅಭಿವಂದ್ಯರು (ವಿಶೇಷವಂದನಾರ್ಹರು.) ೧೦. ಶ್ರೇಷ್ಠರಾದ ಮುಂಷ್ಠಾ

ವರ್ಯರೆನಿಪಾರ್ಯಮಂಕ್ಷಾ
ಚಾರ್ಯರ ನೆಗಳ್ದಿರ್ದ ನಾಗಹಸ್ತ್ಯಾಚಾರ್ಯಾ
ದ್ಯಾರ್ಯರ ನುತಯತಿವೃಷಭಾ
ಚಾರ್ಯರ ಪದಕಮಲವಿಗಾಗೆ ಶಾಶ್ವತಪದಮಂ ೧೧

ಧೈರ್ಯಯುತರ್ಧರಸೇನಾ
ಚಾರ್ಯರ್ಭೂತಬಲಿಪುಷ್ಪದಂತಾಚಾರ್ಯರ್
ವರ್ಯರ್ಭವ್ಯಾಂಭೋರುಹ
ಸೂರ್ಯರ್ದಯೆಗೆಯ್ಗೆ ವಿಮಳರತ್ನತ್ರಯಮಂ ೧೨

ವರ್ಯರ್ಲೋಕೋತ್ತಮರ್ಭಾವಿಸಃವೂಡನಘರಶ್ಯುನ್ನತರ್ಕೊಂಡಕುಂದಾ
ಚಾರ್ಯರ್ಚಾರಿತ್ರರತ್ನಾಕರರಧಿಕಗುಣರ್ಸಜ್ಜಟಾಸಿಂಹನಂದ್ಯಾ
ಚಾರ್ಯರ್ಶ್ರೀಕೂಚಿಭಟ್ಟಾರಕರುದಿತಯಶರ್ವಿರ್ಕ್ಕಪೆಂಪಿಂಗೆಲೋಕಾ
ಶ್ಚರ್ಯರ್ನಿಷ್ಕರ್ಮರೆಮ್ಮಂ ಪೊರಮಡಿಸುಗೆ ಸಂಸಾರ ಕಾಂತಾರದಿಂದಂ ೧೩

ಶ್ರೀಮತ್ಸಮಂತಭದ್ರ
ಸ್ವಾಮಿಗಳ ನೆಗಟ್ತೆವೆತ್ತ ಕವಿ ಪರಮೇಷ್ಠಿ
ಸ್ವಾಮಿಗಳ ಪೂಜ್ಯಪಾದ
ಸ್ವಾಮಿಗಳ ಪದಂಗಳೀಗೆ ಬೋಧೋದಯಮಂ ೧೪

ಚಾರ್ಯರು, ಸುಪ್ರಸಿದ್ಧರಾದ ನಾಗಹಸ್ತ್ಯಾಚಾರ್ಯ, ಮೊದಲಾದ ಆರ್ಯರ ಮೆಚ್ಚಿಗೆಗೆ ಪಾತ್ರರಾದ ಯತಿ ವೃಷಭಾಚಾರ್ಯರ ಪಾದಕಮಲಗಳು ನಮಗೆ ಶಾಶ್ವತವಾದ ಮೋಕ್ಷ ಪದವಿಯನ್ನು ಕೊಡಲಿ. ೧೧. ಧೀರರಾದ ಧರಸೇನಾಚಾರ್ಯರು, ಭೂತಬಲಿ, ಪುಷ್ಪ ದಂತಾಚಾರ್ಯರು ಶ್ರೇಷ್ಠರು, ಭವ್ಯರೆಂಬ ಕಮಲಗಳಿಗೆ ಸೂರ್ಯನಂಥವರು (ಮನಸ್ಸನ್ನು ಹರ್ಷದಿಂದ ಅರಳುವಂತೆ ಮಾಡುವವರು, ಪ್ರಿಯರು) ಇವರು ಪರಿಶುದ್ಧವಾದ ರತ್ನ ತ್ರಯವನ್ನು ದಯಪಾಲಿಸಲಿ. ೧೨. ಲೋಕದಲ್ಲಿಯೇ ಉತ್ತಮರು, ಶ್ರೇಷ್ಠರು, ಪಾಪರಹಿತರು, ಬಹಳ ದೊಡ್ಡವರು, ಎನ್ನಿಸಿಕೊಂಡ ಕೊಂಡಕುಂದಾಚಾರ್ಯರು, ಚಾರಿತ್ರ್ಯ ಸಮುದ್ರರೂ ಅಧಿಕಗುಣರೂ ಆದ ಸಜ್ಜಟಾಸಿಂಹನಂದಿ ಆಚಾರ್ಯರೂ ಶ್ರೀಕೂಚಿ ಭಟ್ಟಾರಕರೂ, ವಿಶೇಷ ಯಶೋವಂತರು. ಅತಿಶಯವಾದ ಹಿರಿಮೆಯಿಂದ ಲೋಕಕ್ಕೆ ಆಶ್ಚರ್ಯಕರರಾದವರು ಕರ್ಮವನ್ನು ಕಳೆದುಕೊಂಡವರು–ಈ ಎಲ್ಲ ಆಚಾರ್ಯರೂ ನಮ್ಮನ್ನು ಈ ಸಂಸಾರವೆಂಬ ಅಡವಿಯಿಂದ ಹೊರಗೆ ಕರೆದುಕೊಳ್ಳಲಿ, ೧೩. ಶ್ರೀಮತ್ಸ ಮಂತಭದ್ರಸ್ವಾಮಿಗಳು, ಹಿರಿಮೆಯನ್ನು ಪಡೆದ ಕವಿಪರಮೇಷ್ಠಿಸ್ವಾಮಿಗಳು, ಪೂಜ್ಯ ಪಾದಸ್ವಾಮಿಗಳು–ಈ ಮಹಾಪುರುಷರ ಪಾದಮಹಿಮೆಯಿಂದ ನಮಗೆ ಜ್ಞಾನೋದಯ ವುಂಟಾಗಲಿ. ೧೪. ಶ್ರೀಮದ್ವಿದ್ಯಾನಂದಸ್ವಾಮಿಗಳು ಸಮಸ್ತ ಶಾಸ್ತ್ರ ಸಮುದ್ರರು,

ಶ್ರೀಮದ್ವಿದ್ಯಾನಂದ
ಸ್ವಾಮಿಗಳಿ ಸಮಸ್ತ ಶಾಸ್ತ್ರ ವಾರಾಶಿಗಳಿ
ನ್ನೇಮಾತೊ ಸಕಳಶಾಸ್ತ್ರದೊ
ಳೀ ಮಹಿಯೊಳನಂತವೀರ್ಯದೇವರೆ ದೇವರ್ ೧೫

ಕ್ಷಿತಿಪೂಜ್ಯರ್ಸಿದ್ಧಸೇನವ್ರತಿಪತಿನುತವಾಕ್ಛ್ರೀವಧೂಕರ್ಣಪೂರರ್
ಶ್ರುತಕೀರ್ತ್ಯಾಚಾರ್ಯರುರ್ವೀವಳಯವ್ಯತಯಶೋರಾಶಿಗಳ್ ಕರ್ಮ ಸಂದೋ
ಹತಮಃಪ್ರಧ್ವಂಸನೈಕದ್ಯುಮಣಿಗಳಮಳ ಶ್ರೀ ಪ್ರಭಾಚಂದ್ರದೇವರ್
ಜಿತಮಾರರ್ಬೊಪ್ಪದೇವರ್ವಿದಿತ ಸಕಲವಿದ್ಯಾಬ್ಧಿ ತಾರಾಧಿನಾಥರ್ ೧೬

ನಿರುಪಮರೇಳಾಚಾರ್ಯರ
ನಿರತಿಶಯರ್ವೀರಸೇನ ಜಿನಸೇನಾಚಾ
ರ್ಯರ ಗುಣಭದ್ರ ಭಚಂದ್ರರ
ಚರಣಯುಗಂ ಮಾಡುಗೆಮಗೆ ನಿರ್ವೃತಿಸುಖಮಂ ೧೭

ಪರಮಜಿನಾಗಮಾಂಬುನಿಧಿಪಾರಗರೂರ್ಜಿತಗಂಡಮಂಡಲೇ
ಶ್ವರನುತಪಾದಪಂಕರುಹರುನ್ನತಕೀರ್ತಿಪತಾಕರಿಂದ್ರ ಭೂ
ಧರನಿಭಧೈರ್ಯರಂಗಜನೃಪಾಲಮದೇಭಹರರ್ಲಸದ್ಗುಣಾ
ಭರಣರೆನಿಪ್ಪ ಪೆಂಪಜಿತಸೇನಮುನೀಶ್ವರನೊಳ್ ವಿರಾಜಿಕುಂ ೧೮

ಅವರು ಅರಿಯದ ಶಾಸ್ತ್ರವಿಲ್ಲ. ಇನ್ನು ಹೆಚ್ಚು ಮಾತೇಕೆ ? ಈ ಭೂಮಂಡಲದಲ್ಲಿಯೇ ಅನಂತವೀರ್ಯದೇವರು ಸಕಲಶಾಸ್ತ್ರಗಳಲ್ಲಿಯೂ ದೇವತಾಸ್ವರೂಪರು. ೧೫. ಸಿದ್ಧ ಸೇನರೆಂಬ ವ್ರತಿಶ್ರೇಷ್ಠರು ಲೋಕಪೂಜ್ಯರು. ಶ್ರುತಕೀರ್ತಿ ಆಚಾರ್ಯರು ವಾಗ್ದೇವತೆಗೆ ಕರ್ಣಾಭರಣದಂಥವರು ; ಭೂಮಂಡಲದಲ್ಲೆಲ್ಲ ಆವರಿಸಿದ ಯಶಸ್ಸುಳ್ಳವರು. ಕರ್ಮ ರಾಶಿಯ ಕತ್ತಲೆಯ ಧ್ವಂಸಮಾಡುವ ಸೂರ್ಯರೆನಿಸಿಕೊಂಡ ಅಮಳ ಶ್ರೀ ಪ್ರಭಾಚಂದ್ರ ದೇವರು ಮಾರನನ್ನು ಜಯಿಸಿದವರು. ಬೊಪ್ಪದೇವರು ಸಮಸ್ತ ವಿದ್ಯಾಸಮುದ್ರಕ್ಕೆ ಚಂದ್ರನಂಥವರೆಂದು ಪ್ರಸಿದ್ಧರು. ೧೬. ಹೋಲಿಕೆಯೇ ಇಲ್ಲದ ಏಳಾಚಾರ್ಯರು. ದೊಡ್ಡವರಾದ ವೀರಸೇನ ಜಿನಸೇನಾಚಾರ್ಯರು, ಗುಣಭದ್ರ, ಭಚಂದ್ರರ, ಪಾದ ಯುಗಳ ಗಳು ನಮಗೆ ನಿರ್ವೃತಿಸುಖವನ್ನುಂಟುಮಾಡಲಿ. ೧೭. ಶ್ರೇಷ್ಠವಾದ ಜಿನಾಗಮವೆಂಬ ಸಮುದ್ರದ ಕೊನೆಯನ್ನು ಕಂಡವರು, ಪ್ರಖ್ಯಾತನಾದ ಗಂಡಮಂಡಲೇಶ್ವರನ ಸ್ತೋತ್ರಕ್ಕೆ ಪಾತ್ರವಾದ ಪಾದಕಮಲಗಳುಳ್ಳವರು, ಉನ್ನತವಾದ ಕೀರ್ತಿಧ್ವಜವುಳ್ಳ ವರು, ಇಂದ್ರಪರ್ವತದಂತೆ, ಧೈರ್ಯವುಳ್ಳವರು. ಮನ್ಮಥರಾಜನೆಂಬ ಮದ್ದಾನೆ ಯನ್ನು ಕೊಂದವರು, ಪ್ರಕಾಶಯುಕ್ತರು, ಗುಣಗಳೇ ಆಭರಣವಾಗಿ ಉಳ್ಳವರು. ಇಂಥ ಪೆಂಪು ಅಜಿತಸೇನಮುನೀಶ್ವರನಲ್ಲಿ ವಿರಾಜಿಸುತ್ತಿದೆ. ೧೮. ಶ್ರೇಷ್ಠ ಗುಣಗಳಿಗೆ

ಅನುಪಮ ಗುಣನಿಳಯರ್ವೆ
ದಿನಿ ಪೂಜ್ಯರ್ಸೋಮದೇವಪಂಡಿತರಮಳರ್
ಮುನಿವೃಷಭರ್ವಿನತತ್ರಿಭು
ವನದೇವರ್ವಿಬುಧಜನವನಕಳಹಂಸರ್ ೧೯

ಪಡೆದೊಡೆ ತಪಮಂ ಶ್ರುತಮಂ
ಪಡೆಯರ್ ತಚ್ಛ್ರುತಮನೆಯ್ದೆ ಪಡೆದೊಡೆ ತಪಮಂ
ಪಡೆಯರದಂತವನೆರಡುಮ
ನೊಡವಡೆದ ನರೇಂದ್ರಸೇನ ಮುನಿಪನೆ ಧನ್ಯಂ ೨೦

ಎನಿತೊಳವು ತರ್ಕಶಾಸ್ತ್ರಮ
ವನಿತುಮನತಿಶಯದಿನೆಸೆಯೆ ನಯಸೇನಮುನೀಂ
ದ್ರನೆ ಬಲ್ಲನೆಂದು ಧಾರಿಣಿ
ಮನದಾದರದಿಂದೆ ಪೊಗಟ್ಟೆ ಕೀರ್ತಿಯನಾಂತಂ ೨೧

ಶಾಂತಮೂರ್ತಿಗಳುಗ್ರಕರ್ಮಹರರ್ದಿವಾಕರಣಂದಿಸಿ
ದ್ಧಾಂತದೇವರುದಗ್ರಮನ್ಮಥ ವೈರಿಗಳ್ ಶುಭಚಂದ್ರಸಿ
ದ್ಧಾಂತದೇವರುದಾತ್ತಚಾರುಚರಿತ್ರರೀಧರೆಯೊಳ್ ಮನೋ
ಜಾಂತಕರ್ಮುನಿವಂದಿತರ್ಗುಣವಾರ್ಧಿಗಳ್ ಮದವರ್ಜಿತರ್ ೨೨

ಆಶ್ರಯರಾದವರೂ ಭೂಮಂಡಲಕ್ಕೇ ಪೂಜ್ಯರೂ ಆದ ಸೋಮದೇವ ಪಂಡಿತರು ಪರಿಶುದ್ಧರಾದ ಮುನಿಶ್ರೇಷ್ಠರು. ಮೂರು ಲೋಕಗಳ ದೇವತೆಗಳಿಂದಲೂ ವಿದ್ವಾಂಸರಿಂದಲೂ ಹೊಗಳಿಸಿಕೊಂಡವರು ; ಪಂಡಿತಜನರೆಂಬ ವನದಲ್ಲಿ ಕಳಹಂಸಗಳಂತೆ ರಂಜಿಸುವವರು. ೧೯. ತಪಸ್ಸನ್ನು ಗಳಿಸಿದರೆ ವಿದ್ಯೆಯನ್ನು ಗಳಿಸಿರುವುದಿಲ್ಲ. ವಿದ್ಯೆಯನ್ನು ಪಡೆದರೆ ತಪಸ್ಸನ್ನು ಗಳಿಸಿರುವುದಿಲ್ಲ. ವಿದ್ಯೆ ತಪಸ್ಸುಗಳೆರಡನ್ನೂ ಒಟ್ಟಿಗೆ ಪಡೆದ ನರೇಂದ್ರಸೇನ ಮುನಿಶ್ರೇಷ್ಠನೇ ಧನ್ಯ. ೨೦. ತರ್ಕಶಾಸ್ತ್ರಗಳು ಎಷ್ಟು ಇವೆಯೋ ಅವಷ್ಟನ್ನೂ ಸಂಪೂರ್ಣವಾಗಿ ನಯಸೇನ ಮುನಿಶ್ರೇಷ್ಠನೇ ಬಲ್ಲನೆಂಬುದಾಗಿ ಭೂಲೋಕವೇ ಮನದ ಆದರದಿಂದ ಹೊಗಳುವಂತೆ ಕೀರ್ತಿವಂತನಾದನು. ೨೧. ಶಾಂತಾಕಾರರೂ ಉಗ್ರಕರ್ಮನಾಶಕರೂ ಆದ ದಿವಾಕರಣಂದಿ ಸಿದ್ಧಾಂತ ದೇವರು ಬಲಿಷ್ಠನಾದ ಮನ್ಮಥನನ್ನು ಗೆದ್ದವರು. ಶುಭಚಂದ್ರ ಸಿದ್ಧಾಂತದೇವರು ಉದಾತ್ತವೂ ಸುಂದರವೂ ಆದ ಚಾರಿತ್ರವುಳ್ಳವರು. ಈ ಲೋಕದಲ್ಲಿ ಅವರು ಮನ್ಮಥನಿಗೆ ಅಂತಕಸ್ವರೂಪರು ಅವರು ಮುನಿಗಳ ವಂದನೆ ಪಡೆದವರು, ಗುಣಸಮುದ್ರರು, ಮದವನ್ನು ವರ್ಜಿಸಿದವರು. ೨೨. ಚರ್ಚೆಯೇಕೆ ? ವಿದ್ಯೆಯಿಂದಲೂ ಗುಣದಿಂದಲೂ ತಪಸ್ಸಿನಿಂದಲೂ ರಾಮಣಂದಿ

ಪಂತಣಮೇಂ ಶ್ರುತದಿಂ ಗುಣ
ದಿಂ ತಪದಿಂ ರಾಮಣಂದಿ ಸಿದ್ಧಾಂತಿಗಳಿ
ರ್ದಂತೆ ಪೆಱಪೆಱರನಂತಿಂ
ತುಂತೇದೇನೆಂದು ಬಣ್ಣಿಪರ್ಜಡಮತಿಗಳ್ ೨೩

ನುತಸಿದ್ಧಾಂತದೊಳೊಪ್ಪುವೆತ್ತ ಜಿನಸೇನಾಚಾರ್ಯರಿಂ ಶಾಸ್ತ್ರದು
ನ್ನತಿಯೊಳ್ ಭಾವಿಸೆ ಪೂಜ್ಯಪಾದ ಮುನಿಯಿಂ ಪಟ್ತರ್ಕದೊಳ್ಧಾರಿಣೀ
ಸ್ತುತನಾಗಿರ್ದ ಸಮಂತಭದ್ರಮುನಿಯಿಂ ಮಿಕ್ಕಿರ್ದನುದ್ಯತ್ತಪ
ಶ್ರುತವಾರಾಶಿನರೇಂದ್ರಸೇನಮುನಿಪಂ ತ್ರೈವಿದ್ಯ ಚಕ್ರೇಶ್ವರಂ ೨೪

ಪೊಡವೀಶರ್ಭುವನೈಕಮಲ್ಲನುತಪಾದಾಂಭೋಜರತ್ಯೂರ್ಜಿತರ್
ದೃಢಚಿತ್ತರ್ ಗುಣಚಂದ್ರಪಂಡಿತರಿಳಾಲೋಕೈಕ ಪೂಜ್ಯರ್ವನಂ
ಬಿಡೆ ತ್ರೈವಿದ್ಯ ಮಹಾಭಿದಾನಮನದಂ ಕೂರ್ತಟ್ಟಿಱಂ ಕೊಟ್ಟರೆಂ
ದೊಡೆ ತ್ರೈವಿದ್ಯ ನರೇಂದ್ರಸೇನ ಮುನಿಪೋಲ್ವಾಗ್ಮೀಶರಾರ್ಲೋಕದೊಳ್ ೨೫

ಭೇರುಂಡಪಂಡಿತರ್ವಾ
ಕ್ಶ್ರೀರಮಣರ್ವಾಸುಪೂಜ್ಯ ಸಿದ್ಧಾಂತೇಶರ್
ಮೇರುನಗಕ್ಷಮರವನೀ
ಶಾರಾಧ್ಯರ್ಮುನಿಕದಂಬವನವಮಾಕಂದರ್ ೨೬

ಸಿದ್ಧಾಂತಿಗಳು ಇರುವಾಗ ಬೇರೆ ಬೇರೆಯವರನ್ನು ಹಾಗೆ, ಹೀಗೆ, ಎಂದು ಬಣ್ಣಿಸಿ ಹೊಗಳುವವರು ಜಡಮತಿಗಳೇ ಸರಿ. ೨೩. ಜೈನಸಿದ್ಧಾಂತದಲ್ಲಿ ಹೆಸರು ಪಡೆದ ಜಿನ ಸೇನಾಚಾರ್ಯರಿಗಿಂತಲೂ, ಶಾಸ್ತ್ರದ ಹಿರಿಮೆಯಲ್ಲಿ ಪೂಜ್ಯಪಾದ ಮುನಿಗಳಿಗಿಂತ, ಷಟ್ತರ್ಕ ದಲ್ಲಿ ಲೋಕಸ್ತೋತ್ರಪಾತ್ರನಾದ ಸಮಂತಭದ್ರಮುನಿಗಿಂತಲೂ, ಮೀರಿದವನು, ನರೇಂದ್ರಸೇನ ಮುನಿವರನು. ಅವನು ತ್ರೈವಿದ್ಯಚಕ್ರೇಶ್ವರ, ಜ್ಞಾನಸಮುದ್ರನು. ೨೪. ಪೃಥ್ವೀಪತಿಯಾದ ಭುವನೈಕಮಲ್ಲನಿಂದ ಹೊಗಳಿಸಿಕೊಂಡ ಶ್ರೀಪಾದಗಳುಳ್ಳ ವರು, ಅತ್ಯಂತ ಪ್ರಭಾವಿಗಳು, ದೃಢಚಿತ್ತರು, ಗುಣಚಂದ್ರಪಂಡಿತರು. ಅವರು ಸಮಸ್ತಲೋಕಗಳಿಗೂ ಪೂಜ್ಯರು. ಅವರಿಗೆ ತ್ರೈವಿದ್ಯರೆಂಬ ದೊಡ್ಡಬಿರುದನ್ನು ಪ್ರೀತಿಯಿಂದ ಕೊಟ್ಟರೆಂದ ಮೇಲೆ ತ್ರೈವಿದ್ಯ ನರೇಂದ್ರಸೇನಮುನಿಯ ಹಾಗೆ ಈ ಲೋಕ ದಲ್ಲಿ ವಾಗ್ಮಿಶ್ರೇಷ್ಠರು ಯಾರು ? ೨೫. ಭೇರುಂಡಪಂಡಿತರು ವಾಗ್ದೇವಿಯ ರಮಣ ನಂಥವರು. ವಾಸುಪೂಜ್ಯ ಸಿದ್ಧಾಂತೇಶರು ಮೇರುಪರ್ವತದಂತೆ ಕ್ಷಮಾಶೀಲರು. ಅವರು ಸಮಸ್ತರಾಜರಿಂದಲೂ ಆರಾಧಿತರಾದವರು ; ಮುನಿಸಮೂಹವೆಂಬ ವನದಲ್ಲಿ ಮಾವಿನಂತೆ ಶೋಭಿಸುವಂಥವರು. ೨೬. ಮನ್ಮಥವೈರಿ, ಪಾಪವೆಂಬ ಆನೆಗೆ ಸಿಂಹ

ಕಂತುವಿರೋಧಿ ಕಿಲ್ಬಿಷಗಜಾಧಿಪಕೇಸರಿ ಪದ್ಮಣಂದಿಸೈ
ದ್ಧಾಂತಮುನೀಂದ್ರರಂತವರಶಿಷ್ಯರನಂತಗುಣರ್ಚತುಷ್ಕಷಾ
ಯಾಂತಕರುಗ್ರ ಕರ್ಮಪರಣಶ್ರುತವಾರಿಧಿಮೇಘಚಂದ್ರಸಿ
ದ್ಧಾಂತಮುನೀಂದ್ರರಿಂದ್ರಧರಣೀಧ್ರನಿಭಕ್ಷಮರೀಡ್ಯಸತ್ಕ್ರಮರ್ ೨೭

ಯತಿವಂದಿತಕ್ರಮರ್ದು
ಷ್ಕೃತದೂರರ್ಮಾಘಣಂದಿಸೈದ್ಧಾಂತಿಗಳೂ
ರ್ಜಿತರವನಿಪೂಜ್ಯರತ್ಯು
ನ್ನತ ಪ್ರಭಾಚಂದ್ರಸೇನ ಸೈದ್ಧಾಂತೀಶರ್ ೨೮

ಅವರಿವರೊಳ್ಳಿದರೆಂಬೀ
ಬವರದೊಳೇನರ್ಹಣಂದಿ ಭಟ್ಟಾರಕರು
ದ್ಭವಚಾರುಚರಿತರೆನಲೀ
ಭುವನಂ ಕೈಮುಗಿಯೆ ಗಣಕೆ ಮೊದಲಿಗರಾದರ್ ೨೯

ಒದವಿದ ಕವಿತೆಯ ವಾಗ್ಮಿ
ತ್ವದ ಗಮಕದ ವಿಬುಧತತಿಗೆ ರಂಜಿಪ ವಾದಿ
ತ್ವದ ಬಲ್ಮೆಗೆ ಸಕಲ ಕಲಾ
ಭ್ಯುದಯ ಶ್ರುತಕೀರ್ತಿದೇವನಲ್ಲವೆ ದೇವಂ ೩೦

ನಂಥವರು, ಪದ್ಮಣಂದಿ ಸೈದ್ಧಾಂತ ಮುನಿಶ್ರೇಷ್ಠರು. ಅವರು ಶಿಷ್ಯರು ಅನಂತಗುಣರು. ನಾಲ್ಕು ಕಷಾಯಗಳಿಗೆ ಯಮನಂಥವರು. ಕ್ರೂರವಾದ ಕರ್ಮವನ್ನು ನಾಶಪಡಿಸುವವರು, ವಿದ್ಯಾವಾರಿಧಿಗಳೂ ಆದ ಮೇಘಚಂದ್ರ ಸಿದ್ಧಾಂತ ಮುನೀಂದ್ರರು ಮೇರು ಪರ್ವತದಂತೆ ಅಚಲರು ; ಸತ್ಕ್ರಮಾನುವರ್ತಿಗಳು. ೨೭. ಯತಿಗಳಿಂದ ನಮಸ್ಕಾರ ಹೊಂದಿದ ಪಾದಗಳುಳ್ಳವರೂ ಪಾಪದೂರರೂ ಆದ ಮಾಘಣಂದಿ ಸೈದ್ಧಾಂತಿಗಳು ಹಿರಿಯರು, ಲೋಕಪೂಜ್ಯರು. ಪ್ರಭಾಚಂದ್ರಸೇನ ಸೈದ್ಧಾಂತೀಶರು ಉನ್ನತವಾದ ತೇಜಸ್ಸುಳ್ಳವರು. ೨೮. ಅವರು ಒಳ್ಳೆಯವರು, ಇವರು ಒಳ್ಳೆಯವರು, ಎಂಬ ಈ ಜಗಳದಿಂದ ಏನು ಫಲ ? ಅರ್ಹಣಂದಿ ಭಟ್ಟಾರಕರು ಸಹಜವಾದ ಸಚ್ಚಾರಿತ್ರವುಳ್ಳವರು—ಹುಟ್ಟಿನಿಂದಲೇ ಒಳ್ಳೆಯ ಚಾರಿತ್ರವನ್ನು ಪಡೆದವರು, ಎಂದಮೇಲೆ ಈ ಪ್ರಪಂಚವೇ ಅವರಿಗೆ ಕೈಮುಗಿಯಿತು. ಅವರು ಗಣಕ್ಕೆ ಮೊದಲಿಗರಾದರು. ೨೯. ವಿಶೇಷವಾದ ಕವಿತ್ವ, ಮಾತುಗಾರಿಕೆ, ಗಮಕ, ಇವುಗಳಲ್ಲಿಯೂ ವಿದ್ವತ್ಸಮೂಹಕ್ಕೆ ರಂಜನೆಯನ್ನುಂಟುಮಾಡುವ ವಾದಕೌಶಲದಲ್ಲಿಯೂ ಸಮಸ್ತಕಲೆಗಳಲ್ಲಿಯೂ ಪರಿಣತನಾದ ಶ್ರುತಕೀರ್ತಿದೇವನು ದೇವನಲ್ಲವೆ? ೩೦. ನೀಚವಾದ ಕರ್ಮಸಮುದ್ರಕ್ಕೆ ಬಡಬಾಗ್ನಿ

ಖಳಕರ್ಮಜಲಧಿ ಬಡಬಾ
ನಳರುದ್ಧತವಾದಿ ನಿಕರಧರಣೀಧರಸಂ
ಕುಳಕುಳಿಶರಮಳಗುಣಗಣ
ನಿಳಯರ್ಶ್ರುತವಾರ್ಧಿರಾಮಸಿಂಹಬುಧೇಂದ್ರರ್ ೩೧

ಪರಮ ಜಿನೇಂದ್ರಾಗಮಸಾ
ಗರಚಂದ್ರರ್ವಾಸುಪೂಜ್ಯ ಭಟ್ಟಾರಕರು
ರ್ವರೆ ಪೊಗಟೆ ಗುಣಗಣಕಾ
ಗರ ಮೊಗಲ್ದರೆಗೆ ಚಾರುಸೇನಾಚಾರ್ಯರ್ ೩೨

ಅಳವಟ್ಟುಗ್ರೋಗ್ರತಪೋ
ನಳನಿಂ ದುರಿತೇಂಧನಂಗಳಂ ಸುಟ್ಟುತಪೋ
ಜ್ವಳಮಪ್ಪಕುಕ್ಕುಟಾಶಾ
ಮಳಧಾರಿ ಮುನಿಂದ್ರರವನಿತಳ ಸಂಸ್ತುತ್ಯರ್ ೩೩

ಅಗಣಿತಮೆನಿಸುವ ಗುಣದಿಂ
ನೆಗಟ್ತೆವಡೆದಿರ್ದ ಶಾಸ್ತ್ರ ತರ್ಕಾಗಮದಿಂ
ಜಗತೀವಳಯಂ ಬಣ್ಣಿಸೆ
ನೆಗಟ್ದರ್ ತ್ರೈವಿದ್ಯಮೇಘಚಂದ್ರ ಮುನೀಂದ್ರರ್ ೩೪

ಯಂಥವರೂ, ಕೊಬ್ಬಿದ ವಾದಿಗಳೆಂಬ ಪರ್ವತಗಳಿಗೆ ವಜ್ರಾಯುಧ ಸದೃಶರೂ, ಅಮಲಗುಣಗಣಗಳಿಗೆ ಮನೆಯೇ ಆಗಿರುವವರೂ ಆದವರು ಶ್ರುತ ವಾರಿಧಿಗಳಾದ ರಾಮಸಿಂಹಬುಧೇಂದ್ರರು. ೩೧. ಶ್ರೇಷ್ಠವಾದ ಜಿನೇಂದ್ರಾಗಮ ಸಾಗರಕ್ಕೆ ಚಂದ್ರ ನಂತಿರುವವರು ವಾಸುಪೂಜ್ಯಭಟ್ಟಾರಕರು. ಪ್ರಪಂಚವೇ ಹೊಗಳುವಂತೆ ಗುಣ ಸಮೂಹಕ್ಕೆ ಆಶ್ರಯರಾದವರು ಚಾರುಸೇನಾಚಾರ್ಯರು. ೩೨. ಒದಗಿದ ಉಗ್ರೋಗ್ರ ವಾದ ತಪೋಗ್ನಿಯಿಂದ ಪಾಪಗಳೆಂಬ ಸೌದೆಗಳನ್ನು ಸುಟ್ಟು, ತಪಸ್ಸಿನಿಂದ, ತಪಸ್ಸಿನ ಮಹಿಮೆಯಿಂದ, ಉಜ್ಜಲವಾದ ಮಲಧಾರಿ ಕುಕ್ಕುಟಮುನೀಂದ್ರರು ಅವನಿತಳದ ಸ್ತೋತ್ರಕ್ಕೆ ಪಾತ್ರರು. ೩೩. ಅಸಂಖ್ಯಾತವಾದ ಗುಣಗಳಿಂದ ಕೂಡಿ ಪ್ರಸಿದ್ಧರಾದ, ಶಾಸ್ತ್ರ, ತರ್ಕ ಮತ್ತು ಆಗಮಗಳ ಪಾಂಡಿತ್ಯದಿಂದ ಲೋಕದ ಜನ ಹೊಗಳಲಾಗಿ ತ್ರೈವಿದ್ಯಮೇಘಚಂದ್ರ ಮುನೀಂದ್ರರು ಮನ್ನಣೆ ಹೊಂದಿದರು. ೩೪. ಹರಳಿನಿಂದ

ಪತಲಿಂ ಮುದ್ರಿಕೆ ವಜ್ರದಿಂ ಕುಲಿಶಮಾ ತಾರೇಶನಿಂರಾತ್ರಿ ಭಾ
ಸ್ಕರನಿಂದಂಬರ ಚಕ್ರಮಾಮ್ರತರುವಿಂದುದ್ಯಾನಮುರ್ವೀಶರಿಂ
ಧರೆ ಪಂಕೇಜದಿನೊಳ್ಗೊಳಂ ಬುಧನುತ ಶ್ರೀರಾಮಸೇನವ್ರತೀ
ಶ್ವರನಿಂ ನಿರ್ಮಳ ಜೈನಧರ್ಮವೆ ವಲಂ ರಮ್ಯಂ ಮಹೀಚಕ್ರದೊಳ್ ೩೫

ಪರವಾದಿ ಘನಾಘನ ನಿ
ಷ್ಠುರ ಪವನರ್ಜೈನಸಮಯಮುಗ್ಧಾಬ್ಧಿ ನಿಶಾ
ಕರರುಗ್ರ ಕರ್ಮಗಜರಿಪು
ಶರಭರ್ತ್ರೈವಿದ್ಯ ಕನಕನಂದಿ ಮುನೀಂದ್ರರ್ ೩೬

ವಿವಿಧ ಮುನಿಸಮಿತಿ ಗಣಧರ
ನಿವಹಂ ಯತಿಪತಿ ಮುನೀಂದ್ರನಿಕರಂ ಮಾಳ್ಕು
ತ್ತವದಿಂ ಭವ್ಯಸಮೂಹ
ಕ್ಕವಿತಥ ಸಮ್ಯಕ್ತ್ವ ರತ್ನಮಂ ದಯೆಯಿಂದಂ ೩೭

ನಿರವದ್ಯರ್ಜಿನಸಮಯಾಂ
ಬರಹಿಮಕರರಖಿಳವಿಬುಧಜನ ಸಂಸ್ತುತ್ಯರ್
ಧರೆಯೊಳಕಳಂಕ ದೇವರೆ
ಪರಮಾರ್ಥಂ ನೋಡೆ ಸಕಲ ವಿದ್ಯಾಂಬುಧಿಗಳ್ ೩೮

ಮುದ್ರಿಕೆ (ಉಂಗುರ), ಶೋಭಿಸುವಂತೆ, ವಜ್ರವಾದ್ದರಿಂದ ಇಂದ್ರನ ಕುಲಿಶಾಯುಧ ಶೋಭಿಸುವಂತೆ, ರಾತ್ರಿ ಆ ಚಂದ್ರನಿಂದ ಭಾಸ್ಕರನಿಂದ, ಆಕಾಶಮಂಡಲ, ಮಾವಿನಮರ ದಿಂದ ಉದ್ಯಾನ, ದೊರೆಗಳಿಂದ ಭೂಮಂಡಲ, ಕಮಲಪುಷ್ಪದಿಂದ ಸರೋವರ ಶೋಭಾ ಯಮಾನವಾಗುವಂತೆ ಬುಧರ ಹೊಗಳಿಕೆಗೆ ಪಾತ್ರನಾದ ಶ್ರೀರಾಮಸೇನ ಯತೀಶ್ವರ ನಿಂದ ಈ ಭೂಮಂಡಲದಲ್ಲಿ ಜೈನಧರ್ಮವು ರಮ್ಯವಾಯಿತು. ೩೫. ಅನ್ಯ ಧರ್ಮದ ವಾದಿಗಳೆಂಬ ಮೋಡಗಳಿಗೆ ಬಿರುಗಾಳಿ, ಜೈನಧರ್ಮವೆಂಬ ಕ್ಷೀರಸಾಗರಕ್ಕೆ ಚಂದ್ರ, ಉಗ್ರ ವಾದ ಕರ್ಮವೆಂಬ ಸಿಂಹಕ್ಕೆ ಶರಭ, ಎಂದು ಹೆಸರು ಪಡೆದವರು ತ್ರೈವಿದ್ಯಕನಕನಂದಿ ಮುನಿಶ್ರೇಷ್ಠರು. ೩೬. ಭವ್ಯಜನಗಳಿಗೆ ಸಮಸ್ತಮುನಿಗಳೂ ಗಣಧರರೂ ಯತೀಶ್ವರರೂ ಮುನಿಶ್ರೇಷ್ಠರೂ ದಯೆಯಿಂದ ಸಮ್ಯಕ್ತ್ವವೆಂಬ ರತ್ನವನ್ನು ಸಾರ್ಥಕವಾಗುವಂತೆ ಅನುಗ್ರಹಿಸಲಿ, ೩೭. ಸ್ತೋತ್ರಾರ್ಹರಾದ ಜಿನಧರ್ಮವೆಂಬ ಆಕಾಶದಲ್ಲಿ ಚಂದ್ರನಂತೆ ವಿರಾಜಮಾನರಾದವರೂ ಸಮಸ್ತ ವಿದ್ವಜ್ಜನರ ಸ್ತೋತ್ರಕ್ಕೆ ಪಾತ್ರರಾದವರೂ ಆದ ಅಕಳಂಕ ದೇವರವರೇ ಸಮಸ್ತ ವಿದ್ಯಾಸಮುದ್ರದಂಥವರು. ಇದು ಪರಮಾರ್ಥ, ಸತ್ಯ. ೩೮. ಅಸಗನದೇಸಿಯೂ ಪೊನ್ನನ ಅತಿಶಯವಾದ ಚಮತ್ಕಾರವೂ ಪಂಪನ ಅಸದೃಶ

ಅಸಗನ ದೇಸಿ ಪೊನ್ನನ ಮಹೋನ್ನತಿವೆತ್ತ ಬೆಡಂಗು ಪಂಪನೊಂ
ದಸದೃಸಮಪ್ಪಪೂರ್ವರಸಮೊಯ್ದು ಗಜಾಂಕುಶನೊಳ್ಪುವೆತ್ತುರಂ
ಜಿಸುವ ಸದರ್ಥ ದೃಷ್ಟಿ ಗುಣವರ್ಮನ ಜಾಣ್ಕವಿರತ್ನನೋಜೆ ಶೋ
ಭಿಸೆ ನೆಲಸಿರ್ಕೆ ಧಾರಿಣಿ ಮನಂಗೊಳೆ ಮತ್ಕೃತಿಯೊಳ್ನಿರಂತರಂ ೩೯

ರಸಭಾವಂ ಗಮಕಂ ಕಾ
ಣಿಸೆ ನಾಣ್ನುಡಿ ದೇಸಿವೆತ್ತ ಪೊಸನುಡಿ ಮಾರ್ಗಂ
ಕುಸುಱಿಯ ಬಗೆಯಿಂದಿನತಱೊ
ಳಸೆಯದ ಕೃತಿ ಕೃತಿಯೆ ಬಗೆದು ನೋೞ್ಪೊಡೆ ಜಗದೊಳ್ ೪೦

ಪೊಸಗನ್ನಡದಿಂ ವ್ಯಾವ
ರ್ಣಿಸುವೆಂ ಸತ್ಕೃತಿಯನೆಂದು ಕನ್ನಡಮಂ ಚಿಂ
ತಿಸಿ ಕೂಡಲಾಱದಕ್ಕಟ
ಮಿಸುಕದ ಸಕ್ಕವಮನಿಕ್ಕುವವನುಂ ಕವಿಯೇ ೪೧

ಸಕ್ಕದಮಂ ಪೇೞ್ವೊಡೆ ನೆಱೆ
ಸಕ್ಕದಮಂ ಪೇೞ್ಗೆ ಸುದ್ಧಗನ್ನಡದೊಳ್ತಂ
ದಿಕ್ಕುವುದೇ ಸಕ್ಕದಮಂ
ತಕ್ಕುದೆ ಬೆರಸಲ್ಕೆಘೃತಮುಮಂ ತೈಲಮುಮಂ ೪೨

ವಾದ ಅಪೂರ್ವ ರಸವಂತಿಕೆಯೂ ಗಜಾಂಕುಶನಶ್ರೇಷ್ಠವಾದ ಒಳ್ಳೆಯ ಅರ್ಥಕಲ್ಪನೆಯೂ ಗುಣವರ್ಮನ ಜಾಣತನವೂ ಕವಿ ರತ್ನನ ಓಜಸ್ಸೂ, ನನ್ನ ಕಾವ್ಯದಲ್ಲಿ ನಿರಂತರವಾಗಿ (ಕಾವ್ಯದ ಉದ್ದಕ್ಕೂ) ಓದುಗರ ಮನಸ್ಸನ್ನು ಆಕರ್ಷಿಸುವಂತೆ ನೆಲಸಿರಲಿ. ೩೯. ರಸ, ಭಾವ, ಗಮಕ, ಕಾಣಿಸುತ್ತಿರಲು ನಾಣ್ನುಡಿಯ ಸಹಜವಾದ ಸ್ವಾರಸ್ಯ, ಮಾರ್ಗಕವಿತೆಯ ಪ್ರೌಢಿಮೆ, ಕುಸುರಿಯ ಕೆಲಸಮಾಡಿದಂತೆ ಕಾವ್ಯದಲ್ಲಿ ಹೊಂದಿಕೆಯಾಗಿ ಶೋಭಿಸದಿರುವ ಕಾವ್ಯ ಕಾವ್ಯವೆನಿಸೀತೆ ? (ಇಲ್ಲ) ೪೦. ಹೊಸಗನ್ನಡದಲ್ಲಿ ಒಳ್ಳೆಯ ಕಾವ್ಯವನ್ನು ರಚಿಸುವೆನೆಂದು ಆರಂಭಿಸಿ, ಎಷ್ಟು ಚಿಂತಿಸಿದರೂ ಕನ್ನಡ ಕೈಗೂಡದೆ, ಅರ್ಥವಾಗದ ಸಂಸ್ಕೃತವನ್ನು ಸೇರಿಸುವವನೂ ಒಬ್ಬ ಕವಿಯೆ ? ೪೧. ಸಂಸ್ಕೃತದಲ್ಲಿ ಹೇಳುವುದಾದರೆ ಪೂರ್ತಿಯಾಗಿ ಸಂಸ್ಕೃತದಲ್ಲಿಯೇ ಕೃತಿಯನ್ನು ರಚಿಸಲಿ. ಶುದ್ಧ ಕನ್ನಡದಲ್ಲಿ ಸಂಸ್ಕೃತವನ್ನು ತಂದಿಕ್ಕಬಹುದೆ ? ತುಪ್ಪವನ್ನೂ ಎಣ್ಣೆಯನ್ನೂ ಬೆರಸಬಹುದೆ ? ೪೨.

ಪರಿಣತರೆನಿಸುವ ನಿರ್ಮ
ತ್ಸರರಂ ಮೆಚ್ಚಿಪುದು ಗಹನಮಲ್ಲದು ಜಡರಂ
ಕರಮಱಿದು ತಿಳಿಪಲೆಂತೆನೆ
ಖರಕರನಂ ಗೂಗೆಗೆಯ್ದೆ ತೋರ್ಪಂತಕ್ಕುಂ ೪೩

ಮಂಡೂಕಂ ಶರನಿಧಿಯಂ
ಕಂಡಱಿಯದೆ ಫಳಿಗುಮಬ್ಧಿಗದು ಭಂಗಮೆ ಪೇಟ್
ಖಂಡಿಸೆ ಕುಕವಿ ಸಮೂಹಂ
ಪಂಡಿತರಪ್ಪವರ್ಗೆ ಭಂಗಮಕ್ಕುಮೆ ಜಗದೊಳ್ ೪೪

ಪೊಲ್ಲಮೆಗಂಡದನಱಿದುಂ
ಮೆಲ್ಲನೆ ಸಯ್ಪಾಗೆ ತಿರ್ದುವರ್ಸುಕವೀಶರ್
ಪೊಲ್ಲಮೆಯಿಲ್ಲದೊಡಂ ಲೇ
ಸಲ್ಲದು ಕೃತಿಯೆಂದು ಕುಕವಿನಿಕರಂ ಪಳಿಗುಂ ೪೫

ಇಲಿಗಂ ಮರಕುಟವಕ್ಕಿಗ
ಮಲಸದೆ ಕರ್ದುಕುತ್ತೆ ಕಡಿಯುತಿರ್ಪುದೆ ಸಹಜಂ
ಸಲೆ ಚಪಲಂಗಂ ಕುಕವಿಗ
ಮಲಸದೆ ತೆಗಳ್ವಿದುವೆ ಸಹಜಮುವಱಂತೆ ಕರಂ ೪೬

ಪಂಡಿತರೆನಿಸಿಕೊಂಡ ಮತ್ಸರವಿಲ್ಲದವರನ್ನು ಕಾವ್ಯರಚಿಸಿ ಮೆಚ್ಚಿಸುವುದು ಕಷ್ಟವಲ್ಲ. ಜಡರನ್ನು, ತಿಳಿದೂ ತಿಳಿಯದವರನ್ನು, ಮೆಚ್ಚಿಸುವುದು ಹೇಗೆ ? ಅದು ಗೂಬೆಗೆ ಸೂರ್ಯನನ್ನು ತೋರಿಸುವ ಪ್ರಯತ್ನದಂತೆ ದಂಡ. ೪೩. ಕಪ್ಪೆ ತಾನು ಕಂಡು ತಿಳಿಯದ ಸಮುದ್ರವನ್ನು ಹಳಿಯುತ್ತದೆ. ಆದರೆ ಅದರಿಂದ ಸಮುದ್ರಕ್ಕೆ ನಷ್ಟವೆ ? ಅಪಮಾನವೆ ? ಹಾಗೆಯೇ ಕುಕವಿಗಳ ಗುಂಪು ಕಾವ್ಯವನ್ನು ಅಲ್ಲಗಳೆದರೆ, ಜಗತ್ತಿನಲ್ಲಿ ಪಂಡಿತರಾದವರಿಗೆ ಅಪಮಾನವೆ, ನಷ್ಟವೆ ? ೪೪. ಕಾವ್ಯದಲ್ಲಿ ದೋಷವನ್ನು ಕಂಡಾಗ ತಿಳಿದು ಸುಕವೀಶರು ಅದನ್ನು ಮೆಲ್ಲಗೆ ಚೆನ್ನಾಗುವಂತೆ ತಿದ್ದುತ್ತಾರೆ. ದೋಷವಿರದಿದ್ದರೂ ಆ ಕೃತಿ ಚೆನ್ನಾಗಿಲ್ಲವೆಂದು ಕುಕವಿಗಳ ಗುಂಪು ದೂಷಿಸುತ್ತದೆ. ೪೫. ಇಲಿಗೂ ಮರಕುಟಿಗನ ಹಕ್ಕಿಗೂ ಬೇಸರವಿಲ್ಲದೆ ಕೊಕ್ಕಿನಿಂದ ಕುಕ್ಕುತ್ತ ಕಡಿಯುತ್ತಿರುವುದೇ ಸ್ವಭಾವ. ಚಪಲಚಿತ್ತನಿಗೂ ಕುಕವಿಗೂ ಬೇಸರಗೊಳ್ಳದೆ ಇತರರ ಕೃತಿಗಳನ್ನು ಹಳಿಯುತ್ತಿರುವುದೇ ಸ್ವಭಾವ. ಇವನೂ ಆ ಇಲಿ ಮರಕುಟಿಗ ಹಕ್ಕಿಗಳಂತೆಯೇ ಸರಿ. ೪೬. ವಿವೇಕಿಯಾದವನಿಗೆ ನವಿಲಿನ ಕುಣಿತ ಸೊಗಸುತ್ತದೆ. ಆದರೆ

ನವಿಲಾಟಂ ಸೊಗಯಿಸುವುದು
ವಿವೇಕಿಯಪ್ಪಂಗೆ ನಾಯ್ಗೆ ಸೊಗಯಿಸುವುದೆ ಸ
ತ್ಕವಿಯ ಬಗೆಗೊಳ್ಪ ಪುಗುವವೊ
ಲವಿವೇಕಿಯ ಮನಮನೊಳ್ಪದೇಂ ಪೊಕ್ಕಪುದೇ ೪೭

ಅಡಕಿಲ ಮಡಕೆಗಳಂ ಸ
ಯ್ತಿಡಲಱಿವುವೆ ನಾಯ್ಗಳೊಡೆವುದಲ್ಲದೆ ಕೃತಿಯಂ
ಕಿಡೆನುಡಿವರಲ್ಲದೇಂ ಜಡ
ರೊಡಂಬಡಲ್ತಿದ್ದಿ ನುಡಿಯಬಲ್ಲರೆ ಕವಿವೋಲ್ ೪೮

ಮಱಿಯಿಲ್ಲದೆ ಪೊಯ್ನೀರಿಂ
ಬೆಳಗುಮೆ ಧರೆ ಮುಱುಗಿ ಕುದಿದು ಶಾಸ್ತ್ರದ ಬಲದಿಂ
ದಳಿಪಿಂ ಪೇಱಿಸ್ವಡಮದುಕೋ
ಮಳಮಕ್ಕುಮೆ ಸಹಜಮಿಲ್ಲದಾತನ ಕಬ್ಬಂ ೪೯

ಉಪ್ಪಿಲ್ಲದೆ ಕೀಳೊಕ್ಕಳ
ತುಪ್ಪವನೆಱೆದುಣ್ಬೆನೆಂಬೊಡುಣಿಸೇಂ ಸ್ವಾ
ದಪ್ಪುದೆ ಸಹಜಂ ತನಗಿನಿ
ಸಪ್ಪೊಡಮಿಲ್ಲದನ ಕವಿತೆ ರುಚಿವಡೆದಪುದೇ ೫೦

ಅದು ನಾಯಿಗೆ ಸೊಗಸಾಗುತ್ತದೆಯೆ ? ಹಾಗೆಯೇ ಸತ್ಕವಿಯ ಮನಸ್ಸಿಗೆ ಗುಣ ಹಿಡಿಸುವಂತೆ ಅವಿವೇಕಿಯ ಮನಸ್ಸಿಗೆ ಹಿಡಿಸುತ್ತದೆಯೆ ? (ಇಲ್ಲವೆಂದು ಭಾವ) ೪೭. ಪೇರಿಸಿದ್ದ ಮಡಕೆಗಳನ್ನು ನಾಯಿಗಳು ಒಡೆಯಬಲ್ಲುವೇ ಹೊರತು ಮತ್ತೆ ಜೋಡಿಸಿ ಇಡಲಾರವು. ಹಾಗೆಯೇ ಕೆಟ್ಟವರು ಕೆಟ್ಟಮಾತುಗಳನ್ನಾಡಬಲ್ಲರು, ಕಾವ್ಯವನ್ನು ಆಕ್ಷೇಪಿಸಬಲ್ಲರೇ ಹೊರತು ಅದನ್ನು ತಿದ್ದಿ ಹೇಳಲಾರರು. ೪೮. ಮಳೆ ಸುರಿಯದೆ ಇರುವಾಗ ಬರಿಯ ಹೊಯ್ಯುವ ನೀರಿನ ಆಸರೆಯಿಂದ ಭೂಮಿ ಬೆಳೆಯುತ್ತದೆಯೆ ? ಅಂಥ ಬೆಳೆ ಸೊಂಪಾಗುವುದಿಲ್ಲ. ಹಾಗೆಯೇ ಸಹಜವಾದ ಕವಿತಾ ಪ್ರತಿಭೆಯಿಲ್ಲದೆ ಶಾಸ್ತ್ರದ ಬಲದಿಂದ ಕಷ್ಟಪಟ್ಟು ಹೇಗೋ ಕವಿತೆ ಕಟ್ಟಿದರೆ ಅದು ಇಂಪಾಗುವುದಿಲ್ಲ. ೪೯. ಯಾರಾದರೂ ಉಪ್ಪನ್ನೇ ಬಳಸದೆ ಒಕ್ಕಳ ತುಪ್ಪವನ್ನು ಹಾಕಿಕೊಂಡು ಊಟ ಮಾಡುವೆನೆಂದು ಹೇಳಿದರೆ ಆ ಊಟ ರುಚಿಯಾಗುತ್ತದೆಯೆ ? ತನಗೆ ಸಹಜ ಪ್ರತಿಭೆ ಸ್ವಲ್ಪವೂ ಇಲ್ಲದವನ ಕವಿತೆ ಎಂದಿಗೂ ಸ್ವಾರಸ್ಯವಾಗುವುದಿಲ್ಲ. ೫೦. ಬಹಳ ದುಷ್ಟ

ಮುನಿದಪರೆಂಬುದೊಂದು ಭಯಮೆಳ್ಳನಿತಪ್ಪೊಡಮೊಂದುಮಿಲ್ಲ ಸ
ಜ್ಜನರೊಳದೇಕವರ್ಘರುಡಿಪರ್ಮುನಿವರ್ಕಡು ದುಷ್ಕರಪ್ಪವರ್
ಮುನಿದೊಡೆ ರಾಗದಿಂದೊಸೆದೊಡಂ ಕಡುಪೊಲ್ಲದಱಿಂದಮಂಜಿ ದು
ರ್ಜನ ಪರಮೇಶ್ವರರ್ಗಱಿದು ಕೈಮುಗಿವೆಂ ಬಲಗೊಂಡು ಭಕ್ತಿಯಿಂ ೫೧

ಪಱುಗೋಲೋಳ್ ವಾರ್ಧಿಯ ತಡಿ
ಗುಱದೆ ಭರಂಗೆಯ್ದು ಪೋಪೆನೆಂಬೆಗ್ಗನವೋಲ್
ನೆಱೆ ಜಿನವಾಕ್ಯಾಂಬುನಿಧಿಯುಮ
ನಿಱದೀಸುವೆನೆಂಬ ದಿಟ್ಟರೆಮ್ಮಿಂ ಪೆಱರಾರ್ ೫೨

ತರಣಿ ಬೆಳಗಲ್ಪಿಂಪೇಕೆಂದಿರ್ದುವೇ ಭಗಣಂಸುರ
ದ್ವಿರದಮಿರಲಿಂ ಸೊರ್ಕೇಕೆಂದಿರ್ದುವೇ ಪೆಱವಾನೆಗಳ್
ಪರಮಕವಿಗಳ್ ಸಾಲ್ವರ್ತಾಮೆಂದು ಮಾಣದೆ ಪೇಱ್ವೆನಾ
ದರದಿನೊಲವಿಂದರ್ಥಿ ದೋಷಂ ನಪಶ್ಯತಿಯೆಂಬಿನಂ ೫೩

ಮಱೆದಾನುಂ ಜಿನನಾಮಮಂ ಸುಮನದಿಂ ಪೇಳ್ವಾತನುಂ ದುಃಖಮಂ
ಕಿಱಿದುಂ ಪೊರ್ದದನಂತಮಪ್ಪಸುಖದೊಳ್ ಕೂಡಿರ್ಪನೆಂದಂದು ತ
ಳ್ತುಱೆ ಪುಣ್ಯೋದಿತಮಪ್ಪ ತಚ್ಚರಿತಮಂ ಕಾವ್ಯಂಗಳೊಳ್ ಭಕ್ತಿಯಿಂ
ನೆಱೆ ಪೇಳ್ವಾತನ ಕರ್ಮನಿರ್ಜರೆಯನಂತಿಂತುಂತೆನಲ್ಬರ್ಕುಮೇ ೫೪

ರಾದ ಈ ಜನ ಇತರರು ಸಿಟ್ಟಾಗುವರೆಂಬ ಭಯವು ಸ್ವಲ್ಪವೂ ಇಲ್ಲದೆ ಸಜ್ಜನರ ಮೇಲೆ ಏಕೆ ಹರುಡುಗಟ್ಟುವರೊ! ಏಕೆ ಮುನಿಸಿಕೊಳ್ಳುವರೊ! ಅಂಥವರು ಬಹಳ ಸಿಟ್ಟುಗೊಂಡರೂ, ಪ್ರೀತಿಯಿಂದ ಒಲಿದರೂ ಕೆಟ್ಟದ್ದೇ. ಆದ್ದರಿಂದ ಆ ದುರ್ಜನ ಪರಮೇಶ್ವರರಿಗೆ ನಾನು ಭಕ್ತಿಯಿಂದ ಪ್ರದಕ್ಷಿಣೆ ನಮಸ್ಕಾರ ಮಾಡುತ್ತೇನೆ. ೫೧. ಹರಿಗೋಲಿನಲ್ಲಿ ಸಮುದ್ರವನ್ನು ರಭಸದಿಂದ ದಾಟಿ ದಡ ಸೇರುವೆನೆಂಬ ದಡ್ಡನ ಹಾಗೆ ಜಿನವಾಕ್ಯ ಸಮುದ್ರವನ್ನು ದಾಟುವೆನೆಂಬ ನಮಗಿಂತ ಗಟ್ಟಿಗರು ಬೇರೆ ಯಾರಿದ್ದಾರೆ? ೫೨. ಸೂರ್ಯನು ಬೆಳಗುತ್ತಿರುವುದರಿಂದ ಇನ್ನು ತಮ್ಮ ಹೆಚ್ಚಳವೇನೆಂದು ನಕ್ಷತ್ರಗಳು ಸುಮ್ಮನಿರುವುವೆ? ಐರಾವತವಿರುವಾಗ ತಮ್ಮ ಸೊಕ್ಕು ಏತಕ್ಕೆಂದು ಉಳಿದ ಆನೆಗಳು ಸುಮ್ಮನಾಗುವುವೆ? ಲೋಕದಲ್ಲಿ ಪರಮಕವಿಗಳೇ ಸಾಕೆಂದು ತಿಳಿಯದೆ ನಾನು ಆದರದಿಂದ ಕಾವ್ಯ ಬರೆಯುತ್ತೇನೆ, ಬೇಡುವವನಿಗೆ ದೋಷ ಕಾಣದು ಎಂಬಂತೆ! ೫೩. ಮರೆತಾದರೂ ಜಿನನಾಮವನ್ನು ಸಂತೋಷದಿಂದ ಹೇಳುವವನು ಸ್ವಲ್ಪವೂ ದುಃಖಪಡದೆ ಅನಂತವಾದ ಸುಖವನ್ನು ಹೊಂದುವನೆಂಬಾಗ ವಿಶೇಷ ಪುಣ್ಯಪ್ರದವಾದ ಅವನ ಚರಿತ್ರೆಯನ್ನು ಭಕ್ತಿಯಿಂದ ಕಾವ್ಯರೂಪದಲ್ಲಿ ಹೇಳುವವನ ಕರ್ಮಪರಿಹಾರವಾಗುವುದನ್ನು ಹೀಗೆ ಹಾಗೆ ಎಂದು ಹೇಳಲು ಸಾಧ್ಯವೆ? ೫೪. ಜೈನಮತದಲ್ಲಿ ಎಷ್ಟು ಸಾರ

ಜಿನಮತದೊಳೆನಿತುಸಾರಮು
ದನಿತುಂ ಲೇಸಾಗಿ ತೋರ್ಪುದೀ ಕೃತಿಯೊಳದೆಂ
ತೆನೆ ಕನ್ನಡಿಯೊಳಗೆ ಜಲ
ಕ್ಕನೆ ತೋರ್ಪವೊಲಿಭದರೂಪು ವಿಸ್ಮರದಿಂದಂ ೫೪

ಗುರು ವಿದ್ಯಾನರೇಂದ್ರಸೇನಮುನಿಪಂ ತ್ರೈಲೋಕ್ಯ ಚಕ್ರೇಶ್ವರಂ
ಪರಮಶ್ರೀ ಜಿನನಿಷ್ಟದೈವನಮಳರ್ ಶ್ರೀ ಜೈನಯೋಗೀಶ್ವರರ್
ಪರಮಾರ್ಥಂ ತನಗಾಳ್ದರುತ್ತಮವಿನೇಯರ್ಬಂಧುವರ್ಗಂ ನಿಜಾ
ದರದಿಂದೆಂದೊಡೆ ಭಾಪು ಧನ್ಯನೆ ದಿಟಂ ವಾತ್ಸಲ್ಯ ರತ್ನಾಕರಂ ೫೫

ಸ್ಥಿರವಾಕ್ಯಂ ಸುವ್ರತಾಂಭೋನಿಧಿ ಸಕಲ ಜಗತ್ಪಾವನಂ ರಾಜಪೂಜ್ಯಂ
ಪರಮಶ್ರೀಜೈನ ಧರ್ಮಾಂಬರ ದಿನಕರನುದ್ಯತ್ತಪೋಮೂರ್ತಿವಾಣ್ಯಾ
ಭರಣಂ ತ್ರೈವಿದ್ಯ ಚಕ್ರೇಶ್ವರ ವಿಮಳ ಪದಾಂಭೋಜ ಭೃಂಗಂ ಜಿನಶ್ರೀ
ಚರಣಾಲಂಕಾರ ಶೀರ್ಷಂ ಸುಕವಿಜನಮನಃಪದ್ಮಿನೀ ರಾಜಹಂಸಂ ೫೬

ಮಾನಿತ ಶೀಲನಿಧಾನನ
ನೂನಗುಣಂ ಸಕಳಭವ್ಯಜನಬುಧಜನಚಿ
ತ್ತಾನಂದಕರಂ ಕೇಳ್ನಯ
ಸೇನಬುಧಂ ಸುಕವಿನಿಕರಪಿಕಮಾಕಂದಂ ೫೭

ವಿದೆಯೋ ಅದಷ್ಟೂ ಈ ಕೃತಿಯಲ್ಲಿ ಕಾಣುತ್ತದೆ. ಅದು ಹೇಗೆಂದರೆ ದೊಡ್ಡದಾದ ಆನೆ ಕನ್ನಡಿಯಲ್ಲಿ ಸ್ಪಷ್ಟವಾಗಿ ಕಾಣಿಸುವುದಿಲ್ಲವೆ ? ೫೫. 'ವಾತ್ಸಲ್ಯರತ್ನಾಕರ' ಎಂಬ ಬಿರುದು ಹೊತ್ತ ನಯಸೇನನಿಗೆ ವಿದ್ಯಾನರೇಂದ್ರಸೇನಮುನಿಯೇ ಗುರು. ತ್ರೈಲೋಕ್ಯ ಚಕ್ರೇಶ್ವರನಾದ ಪರಮಜಿನನೇ ಇಷ್ಟದೈವ, ಶ್ರೀ ಜೈನಯೋಗೀಶ್ವರರೇ ಅವನಿಗೆ ಪ್ರಭುಗಳು. ಉತ್ತಮ ಜಿನಭಕ್ತರೇ ಬಂಧು ಸಮೂಹ. ಇಂಥ ನಯಸೇನ ಕವಿ ದಿಟವಾಗಿ ಧನ್ಯ. ೫೬. ಸುಕವಿ ಜನರ ಮನಸ್ಸೆಂಬ ಪದ್ಮಗಳಲ್ಲಿ ವಿಹರಿಸುವ ರಾಜಹಂಸ ನಯಸೇನನು, ಸತ್ಯವಾಕ್ಯನೂ ವ್ರತಸಮುದ್ರನೂ ಜಗತ್ಪಾವನ ಮೂರ್ತಿಯೂ ರಾಜ ಪೂಜ್ಯನೂ ಆದ ಶ್ರೇಷ್ಠವಾದ ಜೈನಧರ್ಮಾಕಾಶಕ್ಕೆ ಸೂರ್ಯನಂಥ ಮಹಾ ತಪೋ ಮೂರ್ತಿಯೂ ವಾಣಿಯೇ ಆಭರಣವಾಗಿ ಉಳ್ಳವನೂ ಆದ ತ್ರೈವಿದ್ಯ ಚಕ್ರೇಶ್ವರನ ಪಾದಕಮಲಗಳಲ್ಲಿ ಒಬ್ಬ ದುಂಬಿ. ಜಿನನ ಶ್ರೀಚರಣಗಳಿಗೆ ತಲೆಬಾಗಿ ವಂದಿಸುವವನು. ೫೭. ನಯಸೇನ ಪಂಡಿತ ಸಕಲ ಭವ್ಯಜನರಿಗೂ ಪಂಡಿತ ಜನರಿಗೂ ಚಿತ್ತಾನಂದವುಂಟು ಮಾಡುವವನು, ಎಲ್ಲರಿಂದಲೂ ಮನ್ನಣೆ ಹೊಂದಿದ ಶೀಲವುಳ್ಳವನು, ಪೂರ್ಣಗುಣ ಶಾಲಿ. ಅವನು ಸುಕವಿಗಳೆಂಬ ಕೋಗಿಲೆಗಳಿಗೆ ಮಾವಿನಮರದಂಥವನು. (ಸಂತೋಷ ದಾಯಕ) ೫೮. ಅತಿಶಯವಾದ ಜಿನವಾಕ್ಯಾಮೃತವನ್ನೊಳಗೊಂಡು ಸಕಲ ಜೀವಿ

ಅತಿಶಯ ಜಿನೇಂದ್ರ ವಚನಾ
ಮೃತಮಂ ಸಕಲೈಕಜೀವಹಿತಮಂ ಪುಣ್ಯೋ
ದಿತಮಂ ಭವ್ಯನಿಕಾಯ
ಸ್ತುತಮಂ ನೆಱೆಪೇಟ್ವೆನಱಿಯೆ ಧರ್ಮಾಮೃತಮಂ ೫೯

ಅದು ಮತ್ತೆಂತೆಂದೊಡಿಂದ್ರಪ್ರಣತ ಪದಯುಗಂ ಮೋಕ್ಷಲಕ್ಷ್ಮೀವಿಳಾಸಂ
ಮದನೇಭೇಂದ್ರೋಗ್ರ ಕಂಠೀರವನಮಳಯಶಂ ನಿರ್ಮಳಂ ಸರ್ವಸೌಖ್ಯಾ
ಭ್ಯುದಯಂ ಶ್ರೀ ವೀರನಾಥಂ ನೆಲಸಿರೆ ವಿಪುಳಾದ್ರೀಂದ್ರದೊಳ್ ಶೋಭೆಯಿಂ ಮು
ತ್ತಿದ ದೇವಾನೀಕದಿಂ ಸುತ್ತಿದ ಖಚರ ನರಾಧೀಶ ಸಂದೋಹದಿಂದಂ ೬೦

ಅಂತಿರ್ದಾತ್ರಿ ಜಗನ್ಮಹೀಶ ಸಭೆಯೊಳ್ ಭವ್ಯಾಳಿಗಂ ಚಂದ್ರನೆಂ
ಬಂತೊಪ್ಪಿರ್ದಸಮಸ್ತ ಶಾಸ್ತ್ರವಿದರಂ ಧರ್ಮೋದೇಶಜ್ಞರಂ
ಮುಂತಾ ಗೌತಮರಂ ಮುನೀಂದ್ರನುತರಂ ಸದ್ಭಕ್ತಿಯಿಂ ಶ್ರೇಣಿಕಂ
ಸಂತೋಷಂ ಮಿಗೆ ಕೂರ್ತ. ಕೇಳ್ದನಧಿಕ ಶ್ರೀಗಾರ್ಮಮಂ ಧರ್ಮಮಂ ೬೧

ಗದ್ಯ॥ ಅಂತಾಗಿರೀಂದ್ರದೊಳ್ಚರಮತೀರ್ಥಕರಪರಮದೇವರಸಮವಸರಣಂ ಬಂದು ನೆಲಸಿರ್ದದನಱಿದು ಋಷಿನಿವೇದಕಂ ಷಡೃತು ಫಲಂಗಳನಾಶ್ಚರ್ಯಮಪ್ಪಂತೆ ಶ್ರೇಣಿಕ ಮಹಾರಾಜಂಗೆ ಕಾಣ್ಕೆಗೊಟ್ಟು ಸರ್ವಾಂಗ ಪ್ರಣತನಾಗಿ ಕೈಮುಗಿದು ದೇವಾ ನಮ್ಮ ವಿಪುಳ ಗಿರಿ

ಗಳಿಗೂ ಅತ್ಯಂತ ಹಿತಕಾರಿಯೂ ಪುಣ್ಯಪ್ರದವೂ ಭವ್ಯರು ಹೊಗಳುವಂಥಾದ್ದೂ ಆದ ಧರ್ಮಾಮೃತವನ್ನು ತಿಳಿಯುವಂತೆ ಹೇಳುತ್ತೇನೆ. ೫೯. ಅದು ಮತ್ತೆ ಹೇಗೆಂದರೆ, ಇಂದ್ರನು ಹೊಗಳಿದ ಪಾದಗಳುಳ್ಳವನು, ಮೋಕ್ಷಲಕ್ಷ್ಮಿಯ ಲೀಲೆಯುಳ್ಳವನು, ಮದನ ನೆಂಬ ಆನೆಗೆ ಸಿಂಹದಂಥವನು, ಪರಿಶುದ್ಧವಾದ ಕೀರ್ತಿಯುಳ್ಳವನು, ನಿರ್ಮಲನೂ, ಸರ್ವಸೌಖ್ಯಾಭ್ಯುದಯದಿಂದ ಕೂಡಿದವನು, ಆದ ಶ್ರೀ ವೀರನಾಥನು ನೆಲಸಿರುವಾಗ ವಿಪುಳಾದ್ರಿಯಲ್ಲಿ ದೇವ ಸಮೂಹವೂ ಖೇಚರರೂ ನರಾಧೀಶರೂ ಸಮಾವೇಶಗೊಂಡಿರುವಾಗ ೬೦. ಹಾಗಿದ್ದ ಮೂರು ಲೋಕಗಳ ರಾಜಸಭೆಯಲ್ಲಿ ಭವ್ಯಾವಳಿಗೆ ಚಂದ್ರನೆಂಬ ಹಾಗೆ ಇದ್ದ ಸಮಸ್ತ ಶಾಸ್ತ್ರಜ್ಞರನ್ನೂ ಧರ್ಮೋಪದೇಶಕರನ್ನೂ ಮೊದಲು ಆ ಗೌತಮರನ್ನೂ ಮುನೀಂದ್ರರನ್ನೂ ಶ್ರೇಣಿಕನು ಭಕ್ತಿಯಿಂದ ಸಂತೋಷವಾಗಿ ಪ್ರೀತಿಯಿಂದ ಅಧಿಕ ಸಂಪತ್ತಿಗಾಶ್ರಯವಾದ ಧರ್ಮವನ್ನು ಕುರಿತು ಕೇಳಿದನು. ೬೧. ಗದ್ಯ॥ ಹಾಗೆ ಆ ಪರ್ವತದ ಮೇಲೆ ಕೊನೆಯ ತೀರ್ಥಂಕರ ಪರಮಸ್ವಾಮಿಗಳ ಸಮವಸರಣವು ಬಂದು ನೆಲಸಿದ್ದಾಗ ಅದನ್ನು ತಿಳಿದು ಋಷಿ ನಿವೇದಕನು ಆರು ಋತುಗಳ ಫಲಗಳನ್ನೂ ಆಶ್ಚರ್ಯವಾಗುವಂತೆ ತಂದು ಶ್ರೇಣಿಕ ಮಹಾರಾಜನಿಗೆ ಕಾಣಿಕೆ ಕೊಟ್ಟು ನಮಸ್ಕರಿಸಿ ಕೈಮುಗಿದುಕೊಂಡು ಸ್ವಾಮಿ, ನಮ್ಮ ವಿಪುಳಾದ್ರಿಯ ಮೇಲೆ ಶ್ರೀ ವೀರವರ್ಧಮಾನ

ಯೊಳ್ ಶ್ರೀವೀರವರ್ಧಮಾನ ಸ್ವಾಮಿಗಳ ಸಮವಸರಣಂ ಬಂದು ನೆಲಸಿರ್ದುದೆಂದು ಬಿನ್ನಪಂ ಗೆಯ್ಯಲೊಡನೆ ಕೇಳ್ದು ಸಿಂಹಾಸನದಿಂದಿಳಿದತ್ತಲೇಳಡಿಯಂ ನಡೆದು ವಿನಮಿತ ಶಿರಸ್ಕನಾಗಿ ಋಷಿನಿವೇದಕಂಗೆ ಪೂರ್ಣಾನಂದಪುರಸ್ಸರಮಂಗಚಿತ್ತಮಂ ಕೊಟ್ಟಾನಂದಭೇರಿಯಂ ಪೊಯ್ಸಿ ಪಡೆವಳನಂ ಬರಿಸಿ ಬೀಡೆಲ್ಲಮರ್ಚನಾದ್ರವ್ಯಂಬೆರಸು ಪೊಱಮಡುವಂತೆ ಸಾರೆಂದು ನಿಯಮಿಸಿ ತಾನುಂ ಚೇಳಿನೀದೇವಿಯುಂ ಪಟ್ಟವರ್ಧನ ಗಜಮನೇಱಿ ಸಪರಿವಾರಂ ವಿಪುಳಾದ್ರಿಯನೆಯ್ದಿ ದೂರೋತ್ಸಾರಿತವಾಹನಂ ವಿಚಿತ್ರಾತಪತ್ರಪ್ರಮುಖ ರಾಜಚಿಹ್ನಂಗಳಂ ಬಿಟ್ಟು ಸಮವಸರಣ ಮನೆಯ್ದಿ ಗಂಧಕುಟಿಯಂ ತ್ರಿಃಪ್ರದಕ್ಷಿಣಂಗೆಯ್ದು ಪರಮೇಶ್ವರನ ಪಾದಪದ್ಮಂಗಳಂ ದಿವ್ಯಾರ್ಚನೆಗಳಿಂದರ್ಚಿಸಿ ತ್ರೈಲೋಕ್ಯ ಸ್ವಾಮಿಗಭಿಮುಖನಾಗಿ ನಿಂದು ಮುಕುಳಿತಕರ ಕಮಳನುಂ ವಿಕಸಿತ ಹೃತ್ಕಮಳನುಮಾಗಿ ೬೨

ದುರಿತತಿಮಿರಪ್ರಭಾವಂ
ಪರಿಹರಿಪುದು ದೇವ ನಿನ್ನ ಮುಖಚಂದ್ರಮನಿಂ
ತ್ವರಿತಂ ನೋಡಲದೆಂತುಂ
ದೊರೆಕೊಳ್ವುದು ವೀರಜಿನಪ ನಿರ್ವೃತಿ ಸೌಖ್ಯಂ ೬೩

ಸ್ವಾಮಿಗಳ ಸಮವಸರಣ ಬಂದು ನೆಲಸಿದೆಯೆಂದು ಬಿನ್ನಹ ಮಾಡಲು ಕೇಳಿದ ಒಡನೆಯೇ ಸಿಂಹಾಸನದಿಂದ ಇಳಿದು ವಿಪುಳಾದ್ರಿಯ ಕಡೆಗೆ ಏಳು ಅಡಿಯಿಟ್ಟು ತಲೆಬಾಗಿ ಋಷಿ ನಿವೇದಕನಿಗೆ ತುಂಬು ಸಂತೋಷದಿಂದ ಬಹುಮಾನವನ್ನು ಕೊಟ್ಟು ಆನಂದಭೇರಿಯನ್ನು ಹೊಡೆಯಿಸಿ ಸೇನಾಪತಿಯನ್ನು ಬರಮಾಡಿ ಊರಿನವರೆಲ್ಲ ಪೂಜಾದ್ರವ್ಯಗಳೊಡನೆ ಹೊರಡುವಂತೆ ಸಾರಬೇಕೆಂದು ಆಜ್ಞಾಪಿಸಿ ತಾನೂ ಚೇಳಿನೀ ದೇವಿಯೂ ಪಟ್ಟದಾನೆ ಯನ್ನೇರಿ ಪರಿವಾರದೊಡನೆ ವಿಪುಳಾಚಲವನ್ನು ಸೇರಿ ದೂರದಲ್ಲಿಯೇ ವಾಹನಗಳನ್ನು ನಿಲ್ಲಿಸಿ ಅಲಂಕೃತವಾದ ಬೆಳ್ಗೊಡೆ ಮೊದಲಾದ ರಾಜ ಚಿಹ್ನೆಗಳನ್ನೂ ಬಿಟ್ಟು ಸಮ ವಸರಣವನ್ನು ಸಮೀಪಿಸಿ ಗಂಧಕುಟಿಯನ್ನು ಮೂರುಸಲ ಪ್ರದಕ್ಷಿಣೆ ಮಾಡಿ ಪರ ಮೇಶ್ವರನ ಪಾದಕಮಲಗಳನ್ನು ದಿವ್ಯಾರ್ಚನೆಗಳಿಂದ ಪೂಜಿಸಿ ತ್ರಿಲೋಕಸ್ವಾಮಿಗೆ ಎದುರಾಗಿ ನಿಂತು ಕೈಜೋಡಿಸಿ ಅರಳಿದ ಹೃದಯಕಮಲದಿಂದ ಕೂಡಿ ೬೨. (ಕೈಗಳೆಂಬ ಕಮಲಗಳು ಮುಚ್ಚಿಕೊಳ್ಳಲು ಹೃದಯಕಮಲವು ಅರಳಿತು) ಸ್ವಾಮಿ, ನಿನ್ನ ಮುಖ ಚಂದ್ರನು ಪಾಪದ ಕತ್ತಲೆಯ ಪ್ರಭಾವವನ್ನು ಹೋಗಲಾಡಿಸುತ್ತಿದ್ದಾನೆ. ವೀರಜಿನಪ! ಇನ್ನು ನಿರ್ವೃತಿ ಸೌಖ್ಯವನ್ನು ನಾವು ಬೇಗನೆ ಹೇಗೆ ಕಾಣಬಹುದು ? ೬೩. ಗದ್ಯ॥ ಎಂದು

ಗದ್ಯ॥ ಎಂದನೇಕಸ್ತುತಿಸಹಸ್ರಂಗಳಿಂ ಸ್ತುತಿಯಿಸಿ ನಿರ್ಭರಭಕ್ತಿಯಿಂದೆಱಗಿ ಪೊಡೆವಟ್ಟು ಶ್ರೇಣಿಕ ಮಹಾರಾಜಂ ಜ್ಞಾನರ್ಧಿಸಂಪನ್ನರಪ್ಪ ಗೌತಮ ಸ್ವಾಮಿಗಳ್ಗೆ ಪೊಡೆವಟ್ಟು ಮುಕುಳಿತ ಕರಕಮಳನುಮಾಗಿ ೬೪

ತಿರಿಕನಾರಕಮಾನವಾಮರಲೋಕದೊಳ್ ನೆಲೆಗೊಂಡು ನಿ
ತ್ತರಿಸದೆಲ್ಲಿಯುಮಲ್ಲಿಗಲ್ಲಿಗೆ ಪುಟ್ಟಿರಾಟಳದಂದದಿಂ
ತಿರಿವ ಸಂಸ್ಕೃತಿ ದುಃಖದಿಂ ಪೊಱಮಟ್ಟು ಶಾಶ್ವತ ಸೌಖ್ಯದೊಳ್
ನೆರೆವುಪಾಯಮನಟ್ಟಿಯಿಂ ಬೆಸಸಲ್ಕೆವೇಟ್ಕು ಮುನೀಶ್ವರಾ ೬೫

ಎನೆ ನಯದಿಂ ಚತುರ್ವಿಧ ಸುರಾಳಿ ಶಿರೋನತರಾಗಿ ಹಸ್ತಕೋ
ಕನದ ಯುಗಂಗಳಂ ಮುಗಿಯೆ ದಂತಮರೀಚಿ ಸುಧಾಂಶುರಶ್ಮಿಯಂ
ತನುಪಮಮಾಗಿ ಶೋಭಿಸಿರೆ ಸರ್ವಜನಸ್ತುತರಪ್ಪಗೌತಮರ್
ವನಧಿಗಭೀರದಿಂ ನುಡಿದರಾಪ್ತ ಮುಖೋದ್ಗತಮಪ್ಪ ತತ್ವಮಂ ೬೬

ಗದ್ಯ॥ ನೀಂ ಬೆಸಗೊಂಡ ಚತುರ್ಗತಿಚ್ಛೇದಮುಂ ಜಾತಿಜರಾಮರಣದೂರಮುಂ ಸಾರಮುಮಪ್ಪ ನಿರಂತರ ಸುಖಂ ಮುಕ್ತಿಯೊಳಲ್ಲದೆ ದೊರೆಕೊಳ್ಳದಾ ಮುಕ್ತಿಯುಂ ತ್ರಿಜಗನ್ಮಾಂಗಲ್ಯಮಪ್ಪಸಮ್ಯಗ್ದರ್ಶನದಿಂದಲ್ಲದೆ ಸಮನಿಸದಾ ಸಮ್ಯಗ್ದರ್ಶನಮುಂ ಕರಣಲಬ್ಧಿಯಿಲ್ಲದೆ ಕೂಡದಾ

ಅನೇಕ ಬಗೆಯಾಗಿ ಸ್ತೋತ್ರ ಮಾಡಿ ಸಂಪೂರ್ಣವಾದ ಭಕ್ತಿಯಿಂದ ಬಾಗಿ ನಮಸ್ಕರಿಸಿ ಶ್ರೇಣಿಕ ಮಹಾರಾಜನು ಜ್ಞಾನಾಧಿಕ್ಯ ಸಂಪನ್ನರಾದ ಗೌತಮಸ್ವಾಮಿಗಳಿಗೆ ನಮಸ್ಕಾರ ಮಾಡಿ ಮೊಗ್ಗಾದ ಕೈಗಳೆಂಬ ಕಮಲಗಳುಳ್ಳವನಾಗಿ (ಕೈಜೋಡಿಸಿಕೊಂಡು) ೬೪. "ಮುನೀಶ್ವರನೆ, ತಿರ್ಯಕ್, ನಾರಕ, ಮಾನವ, ಅಮರಲೋಕಗಳಲ್ಲಿ ನೆಲೆಗೊಂಡು ಮುಕ್ತರಾಗದೆ ಅಲ್ಲಲ್ಲಿ ಹುಟ್ಟಿ ರಾಟಳದಂತೆ ತಿರುಗುತ್ತಲೇ ಇರುವ ಸಂಸಾರ ದುಃಖದಿಂದ ಹೊರಬಿದ್ದು ಶಾಶ್ವತಸೌಖ್ಯ (ಮೋಕ್ಷ) ದಲ್ಲಿ ಸೇರುವ ಉಪಾಯವನ್ನು ನಮಗೆ ಅನುಗ್ರಹದಿಂದ ಹೇಳಬೇಕು" ಎನ್ನಲು ೬೫. ನಾಲ್ಕು ಬಗೆಯ ದೇವರುಗಳೂ ತಲೆಬಾಗಿ ನಮಸ್ಕರಿಸಿ ಕೈಜೋಡಿಸಿಕೊಂಡು ನಿಂತಿರಲು ಮಂದಹಾಸದಿಂದ ಕೂಡಿದವರಾದ ಗೌತಮರು ತಮ್ಮ ದಂತಕಾಂತಿಯು ಚಂದ್ರಕಿರಣಗಳಂತೆ ಹೊಳೆಯುತ್ತಿರಲು ಸಮುದ್ರಘೋಷದಂತೆ ಗಂಭೀರ ಧ್ವನಿಯಲ್ಲಿ ತಮ್ಮ ಪ್ರೀತಿಯುಕ್ತವಾದ ಮಾತುಗಳಲ್ಲಿ ತತ್ವವನ್ನು ಉಪದೇಶಿಸಿದರು. ೬೬. ಗದ್ಯ॥ ನೀನು ಕೇಳಿದ ಚತುರ್ಗತಿ ಛೇದಕವೂ (ದೇವಗತಿ, ಮಾನವಗತಿ, ನಾರಕಗತಿ, ತಿರ್ಯಗ್ಗತಿ) ಜನ್ಮಜರಾಮರಣದೂರವೂ, ಸಾರವೂ ಆದ ನಿರಂತರ ಸುಖವು ಮುಕ್ತಿಯಲ್ಲಿ ಹೊರತು ಬೇರೆಲ್ಲಿಯೂ ದೊರೆಯುವುದಿಲ್ಲ. ಆ ಮುಕ್ತಿಯೂ ಮೂರು ಲೋಕಗಳಿಗೂ ಮಂಗಳಕರವಾದ ಸಮ್ಯಗ್ದರ್ಶನದಿಂದ ಹೊರತು ಬೇರೆ ಯಾವುದರಿಂದಲೂ ಲಭಿಸುವುದಿಲ್ಲ. ಆ ಸಮ್ಯಗ್ದರ್ಶನವೂ ಕರಣಲಬ್ಧಿಯಿಲ್ಲದೆ

ಸಮ್ಯಗ್ದರ್ಶನ ಮಿಲ್ಲದೆ ನಿರಂತರಸ್ಥಾಯಿಯಪ್ಪ ಮುಕ್ತಿಶ್ರೀಯುಂ ಪಡೆವೆನೆಂಬಾತಂ ಕಣ್ಣಿಲ್ಲದೆ ಕಾಣ್ಬೆನೆಂಬ ಮಣ್ಣಿಲ್ಲದೆ ಬೆಳೆವೆನೆಂಬ ಸತಿಯಿಲ್ಲದೆ ಸುತರಂ ಪಡೆವೆನೆಂಬ, ಮತಿಯಿಲ್ಲದೆ ಪರ ದುಗೆಯ್ವೆನೆಂಬ ಕೇರಿಲ್ಲದೆ ಚಿತ್ರಮಂ ಬರೆವೆನೆಂಬ ನೀರಿಲ್ಲದೆ ಕೂಳನಡುವೆನೆಂಬ ಅಂಬಿಲ್ಲದೆ ಬಿಲ್ವಿಡಿವೆನೆಂಬ ತೂಬಿಲ್ಲದೆ ಕೆಱೆಯುಂ ಕಟ್ಟುವೆನೆಂಬ ಕಾಲಿಲ್ಲದೆ ಪರಿವೆನೆಂಬ ಕೀಲಿಲ್ಲದೆ ಪಡಿದೆಱೆ ವೆನೆಂಬ ಭೈತ್ರಮಿಲ್ಲದೆ ಸಮುದ್ರದೊಳ್ಪೋಪೆನೆಂಬ ಗೋತ್ರಮುಱಿಯದೆ ಕೂಸು ಗುಡುವೆನೆಂಬ ಕಿವಿಯಿಲ್ಲದೆ ಕೇಳ್ವೆನೆಂಬ ಸವಿಯಿಲ್ಲದುಣ್ಬೆನೆಂಬ ಕೆಯ್ಯಿಲ್ಲದೆ ಬೇಲಿಯಿಕ್ಕುವೆನೆಂಬ ಬಾಗಿಲಲ್ಲದೆ ಪೊಗುವೆನೆಂಬ ಧನಮಿಲ್ಲದಧಿಕನೆಂಬ ವಾಹನಮಿಲ್ಲದೇರುವೆನೆಂಬ, ನಾಲಗೆಯಿಲ್ಲದೆ ನುಡಿವೆ ನೆಂಬ ಪಱುಗೋಲಿಲ್ಲದೆತೊಱೆಯುಂ ಪಾಯ್ವೆನೆಂಬ ಪಚ್ಚಪಸಿಯಗ್ಗಸಂ ಪೋಲ್ಗುಂ ಇಂತು ೬೭

ವರಚಕ್ರರ್ತಿಪದವಿಗ
ಮುರುಗೀರ್ವಾಣಾಧಿಪತಿಯ ಸದ್ವಿಭವಕ್ಕಂ
ಪರಮಾರ್ಹಂತ್ಯ ಪದಕ್ಕಂ
ಪರಮಾರ್ಥಂ ಶುದ್ಧದರ್ಶನಂ ಮೊತ್ತಮೊದಲ್ ೬೮

ಆದರ್ಶನಮೆಂತಪ್ಪುದೆಂದೊಡೆ, ೬೯

ಸಿಕ್ಕುವುದಿಲ್ಲ. ಆ ಸಮ್ಯಗ್ದರ್ಶನವಿಲ್ಲದೆ ನಿರಂತರವಾಗಿ ನಿಲ್ಲುವ ಮುಕ್ತಿ ಸಂಪತ್ತನ್ನು ಪಡೆಯುವೆನೆಂಬುವನು "ಕಣ್ಣಿಲ್ಲದೆ ನೋಡುವೆ, ಮಣ್ಣಿಲ್ಲದೆ ಬೆಳೆಯುತ್ತೇನೆ, ಹೆಂಡತಿಯಿಲ್ಲದೆ ಮಕ್ಕಳನ್ನು ಪಡೆಯುವೆ, ಬುದ್ಧಿಯಿಲ್ಲದೆ ವ್ಯಾಪಾರ ಮಾಡುವೆ, ಗೋಡೆಯಿಲ್ಲದೆ ಚಿತ್ರವನ್ನು ಬರೆಯುವೆ, ನೀರಿಲ್ಲದೆ ಅನ್ನವನ್ನು ಬೇಯಿಸುವೆ, ಬಾಣವಿಲ್ಲದೆ ಬಿಲ್ಲು ಹಿಡಿಯುತ್ತೇನೆ, ತೂಬಿಲ್ಲದೆ ಕೆರೆಯನ್ನು ಕಟ್ಟುವೆ, ಕಾಲಿಲ್ಲದೆ ಓಡುತ್ತೇನೆ, ಕೀಲಿಲ್ಲದೆ ಬಾಗಿಲು ತೆರೆಯುತ್ತೇನೆ, ಹಡಗಿಲ್ಲದೆ ಸಮುದ್ರದ ಮೇಲೆ ಹೋಗುತ್ತೇನೆ, ರುಚಿಯಿಲ್ಲದೆ ಊಟಮಾಡುತ್ತೇನೆ, ಗದ್ದೆ ಯಿಲ್ಲದೆ ಬೇಲಿಯನ್ನು ಕಟ್ಟುತ್ತೇನೆ, ಬಾಗಿಲಿಲ್ಲದೆ ಹೊಗುತ್ತೇನೆ, ಹಣವಿಲ್ಲದೆ ತಾನು ದೊಡ್ಡವನು, ವಾಹನವಿಲ್ಲದೆ ಏರುತ್ತೇನೆ, ನಾಲಗೆಯಿಲ್ಲದೆ ನುಡಿಯುತ್ತೇನೆ. ಹರಿಗೋಲಿಲ್ಲದೆ ನದಿಯನ್ನು ದಾಟುವೆ" ಎಂಬ ಹಸೀ ದಡ್ಡನನ್ನು ಹೋಲುತ್ತಾನೆ. ಹೀಗೆ ೬೭. ಶ್ರೇಷ್ಠವಾದ ಚಕ್ರವರ್ತಿಯ ಪದವಿಗೂ ದೇವಲೋಕಾಧಿಪತಿಯಾದ ಇಂದ್ರನ ವೈಭವಕ್ಕೂ ಅತ್ಯಂತ ಹಿರಿದಾದ ಅರ್ಹತ್ಪದವಿಗೂ ಶುದ್ಧ ದರ್ಶನವೇ ಮೊಟ್ಟ ಮೊದಲನೆಯದು. ಇದು ಪರಮಾರ್ಥ, (ಖಂಡಿತ, ಸಂಶಯವಿಲ್ಲ, ಎಂಬ ಭಾವ) ೬೮. ಆ ದರ್ಶನವೆಂತಾಗುವುದೆಂದರೆ ೬೯. ಹದಿನೆಂಟು ದೋಷಗಳನ್ನು ಕಳೆದುಕೊಂಡು

ಅಮರ್ದರ್ಪ್ಪಾದಶದೋಷವರ್ಜಿತನವಂ ಸರ್ವಜ್ಞನಿಂದ್ರಾರ್ಚಿತ
ಕ್ರಮನಂತಾತನೆ ಪೇಟ್ದುದಾಗಮಮಿಳಾ ಲೋಕೈಕ ಪೂಜ್ಯಂ ತದಾ
ಗಮದೊಂದರ್ಥಮೆ ತತ್ವಮೆಂದು ನಯದಿಂ ಕೈಕೊಂಡು ನಂಬಿರ್ಪುದು
ತ್ತಮ ಸೌಖ್ಯಾನ್ವಿತಮಪ್ಪ ನಿರ್ವೃತಿನುತಶ್ರೀಸ್ಪರ್ಶನಂದರ್ಶನಂ ೭೦

ವಿದಿತಂ ದರ್ಶನಮುಳ್ಳವಂಗೆ ಭವನ ಜ್ಯೋತಿಷ್ಕರಾವ್ಯಂತರಾ
ಸ್ಪದ ಮಲ್ಪಾಯುಮನಂಗತಾಪಮಬಲತ್ವಂ ನಿರ್ಧನತ್ವಂ ದುರಾ
ಸ್ಪದ ಭೋಗಾವನಿಜತ್ವಮುಗ್ರನರಕಂ ತಾವಾಗವೆಂದಂದು ಲೋ
ಕದೊಳಾರ್ಬಣ್ಣಿಪರಣ್ಣ ದರ್ಶನದೊಳಾದೈಶ್ವರ್ಯಮಂ ಸ್ಥೈರ್ಯಮಂ ೭೧

ಭಟಸಂಘಕ್ಕದಟೆಂತುಟಂತುಟೆ ಮುಖಾಂಭೋಜಕ್ಕೆ ಮೂಗೆಂತುಟಂ
ತುಟೆ ಬಿತ್ತಿಂಗೆಲೆಯೆಂತುಟಂತುಟೆ ಮಹಾಭೈತ್ರಕ್ಕೆಕೀಲೆಂತುಟಂ
ತುಟೆ ಕೈಗಂಗುಲಿಯೆಂತುಟಂತುಟೆ ಲಸದ್ದೀಪಕ್ಕೆ ಸಂದೆಣ್ಣೆಯಂ
ತುಟು ತಾನಂತುಟೆ ದರ್ಶನಂ ಸಕಲಧರ್ಮಕ್ಕಂ ಧರಾಚಕ್ರದೊಳ್ ೭೨

ಪಟುದೇಹಕ್ಕಸುವೆಂತುಟಂತುಟೆಕುಜಾನೀಕಕ್ಕೆಬೇರೆಂತುಟಂ
ತುಟೆ ಕಣ್ಣಾಲಿಯುದೆಂತುಟಂತುಟೆ ತಟಾಕಕ್ಕೇರಿತಾನೆಂತುಟಂ
ತುಟೆ ಕಾಲಿಂಗಡಿಯೆಂತುಟಂತುಟೆಚಿರಾವಾಸಕ್ಕಧಿಷ್ಠಾನಮಂ
ತುಟು ತಾನಂತುಟೆ ದರ್ಶನಂ ಸಕಲಧರ್ಮಕ್ಕಂ ಮಹೀಚಕ್ರದೊಳ್ ೭೩

ಸರ್ವಜ್ಞನೂ ಇಂದ್ರನಿಂದ ಪಾದಪೂಜೆ ಹೊಂದಿದವನೂ ಆದವನು ಹೇಳಿದುದೇ ಆಗಮ. ಅದು ಲೋಕಕ್ಕೆಲ್ಲ ಪೂಜ್ಯ, ಆಗಮದ ಪ್ರಯೋಜನವೇ ತತ್ವವೆಂದು ಒಪ್ಪಿ ನಂಬುವುದೇ ದರ್ಶನ. ಅದರಿಂದ ಉತ್ತಮ ಸೌಖ್ಯದಿಂದ ಕೂಡಿದ ನಿರ್ವೃತಿ ಸೌಖ್ಯ ಲಭಿಸುತ್ತದೆ. ೭೦. ಶ್ರೇಷ್ಠವಾದ ದರ್ಶನವುಳ್ಳವರಿಗೆ ಭವನಜ್ಯೋತಿಷ್ಕರ (?) ಪಿಶಾಚಿ ಕಾಟ ಅಲ್ಪಾಯುಸ್ಸು, ಮನ್ಮಥತಾಪ, ಬಲಹೀನತೆ, ಕ್ರೂರನರಕ ಇವು ಆಗುವುದಿಲ್ಲ ವೆಂದಾಗ ಲೋಕದಲ್ಲಿ ದರ್ಶನದಿಂದಾಗುವ ಭಾಗ್ಯವನ್ನೂ ಸ್ಥೈರ್ಯವನ್ನೂ ಯಾರು ಬಣ್ಣಿಸಬಹುದು ? ೭೧. ಶೂರರಿಗೆ ಪರಾಕ್ರಮ ಎಂಥಾದ್ದೋ, ಮುಖ ಕಮಲಕ್ಕೆ ಮೂಗು ಹೇಗೋ ಬೀಜಕ್ಕೆ ಎಲೆ ಹೇಗೋ ದೊಡ್ಡ ಹಡಗಿಗೆ ಕೀಲು ಹೇಗೋ ಕೈಗೆ ಬೆರಳು ಹೇಗೋ ಪ್ರಕಾಶಮಾನವಾದ ದೀಪಕ್ಕೆ ಎಣ್ಣೆ ಹೇಗೋ ಸಮಸ್ತ ಭೂಮಂಡಲ ದಲ್ಲಿ ಸಕಲ ಧರ್ಮಗಳಿಗೂ ದರ್ಶನ ಹಾಗೆ ಮುಖ್ಯ ೭೨. ಬಲವಾದ ದೇಹಕ್ಕೆ ಪ್ರಾಣ ಹೇಗೋ, ಸಸ್ಯಸಮೂಹಕ್ಕೆ ಬೇರು ಹೇಗೋ, ಕಣ್ಣಿಗೆ ಆಲಿ ಹೇಗೋ ಕರೆಗೆ ಏರಿ (ಕಟ್ಟೆ) ಹೇಗೋ, ಕಾಲಿಗೆ ಹೆಜ್ಜೆ ಹೇಗೋ, ಸ್ಥಿರವಾದ ವಾಸಕ್ಕೆ ಮನೆ ಹೇಗೋ ಈ ಭೂ ಮಂಡಲದಲ್ಲಿ ಸಕಲ ಧರ್ಮಕ್ಕೂ ದರ್ಶನ ಹಾಗೆ (ಆಧಾರ) ೭೩. ಸುಂದರಿಯರಿಲ್ಲದ

ಸುದತಿಯರಿಲ್ಲದೋಲಗದ ಲೀಲೆ ಮನೋಹರಮಪ್ಪಪುತ್ರರಿ
ಲ್ಲದ ಮನೆವಾರ್ತೆ ಸಾರಜಲಮಿಲ್ಲದ ಬಾವಿ ವಿಶೇಷದುರ್ಗಮಿ
ಲ್ಲದಮಹಿಪಾಲನುಗ್ರತೆ ಜನೋನ್ನತಿಯಿಲ್ಲದನಾಡು ಕೂರ್ಮೆಯಿ
ಲ್ಲದ ನಿಜಕಾಂತೆ ಸತ್ವದಯೆಯಿಲ್ಲದಧರ್ಮಮದೊಪ್ಪಲಾರ್ಕುಮೇ ೭೪

ಗದ್ಯ॥ ಕಂಪಿಲ್ಲದ ತುಪ್ಪಮುಂ ಪೆಂಪಿಲ್ಲದ ಪ್ರಭುತ್ವಮುಂ ಸ್ನೇಹಮಿಲ್ಲದ ಕೊಡುಂ ಮೋಹಮಿಲ್ಲದ ಬಾಟುಂ ಭಕ್ತಿಯಿಲ್ಲದ ಕೊಂಡಾಟಮುಂ ಶಕ್ತಿಯಿಲ್ಲದ ಸೆಣಸುಂ ಕೊಡಿಲ್ಲದ ಸಿರಿಯುಂ ನಾಡಿಲ್ಲದರಸುಂ ಫಲಮಿಲ್ಲದ ತೋಟಮುಂ ಕುಲಮಿಲ್ಲದಮಹಿಮೆಯುಂ ಬಟ್ಟೆಯಿಲ್ಲದ ಪಯಣಮುಂ ಪಟ್ಟಣಮಿಲ್ಲದರಾಜ್ಯಮುಂ ಕಿಚ್ಚಿಲ್ಲದಡುಗೆಯುಂ ನಚ್ಚಿಲ್ಲದ ಪೆಂಡತಿಯುಂ ದಯೆಯಿಲ್ಲದನೆಗಟ್ಟೆಯುಂ ನಯಮಿಲ್ಲದ ಸೇವೆಯುಂ ಭಂಡಮಿಲ್ಲದಂಗಡಿಯುಂ ಗಂಡನಿಲ್ಲದ ಸತಿಯುಂ ಮೊದಲಿಲ್ಲದ ಪರದುಂ ಮದಮಿಲ್ಲದಾನೆಯುಂ ನೀರಿಲ್ಲದೂರುಂ ಕೇರಿಲ್ಲದಮನೆಯುಂ ಶ್ರುತಮಿಲ್ಲದ ತಪಮುಂ ಘೃತಮಿಲ್ಲದೂಟಮುಂ ಸಮ್ಯಗ್ದರ್ಶನಮಿಲ್ಲದ ದಾನಮುಂ ತಪಮುಂ ಜಪಮುಂ ಧರ್ಮಮುಮೊಪ್ಪಲಾರ್ಕುಮೆ ?" ೭೫

ಒದವಿದ ಭೂಪರಿಲ್ಲದಿಳೆ ಭೋಜನಮಿಲ್ಲದಬಾಡು ವಸ್ತ್ರಮಿ
ಲ್ಲದಬಹುಭೂಷಣಂ ನಯನಮಿಲ್ಲದ ಸೂಳೆ ವಿಶೇಷಲಾಭಮಿ
ಲ್ಲದಪರದಬ್ಜಮಿಲ್ಲದಕೊಳಂ ಬೆಳೆಸಿಲ್ಲದ ಧಾತ್ರಿ ರಕ್ಷೆಯಿ
ಲ್ಲದನೃಪನಾಳ್ಕೆ ದರ್ಶನದೊಳೊಂದದ ಧರ್ಮಮುಮೊಪ್ಪಲಾರ್ಕುಮೇ ೭೬

ಸಭೆಯಲೀಲೆ, ಮನೋಹರರಾದ ಮಕ್ಕಳಿಲ್ಲದ ಮನೆವಾರ್ತೆ, ಶ್ರೇಷ್ಠವಾದ ನೀರಿಲ್ಲದ ಬಾವಿ, ವಿಶೇಷವಾದ ದುರ್ಗವಿಲ್ಲದ ರಾಜನ ಉಗ್ರತೆ, ಜನರ ಅಭ್ಯುದಯವಿಲ್ಲದ ದೇಶ, ಪ್ರೇಮವಿಲ್ಲದ ಸ್ವಂತ ಹೆಂಡತಿ, ಸತ್ವ, ಮತ್ತು ದಯೆಗಳಿಲ್ಲದ ಧರ್ಮವು ಶೋಭಿಸುವುದು ಸಾಧ್ಯವೆ ? ೭೪. ಗದ್ಯ॥ ಸುವಾಸನೆಯಿಲ್ಲದತುಪ್ಪವೂ ಹೆಚ್ಚಳವಿಲ್ಲದ ಪ್ರಭುತ್ವವೂ ಪ್ರೀತಿಯಿಲ್ಲದ ದಾನವೂ ಮೋಹವಿಲ್ಲದ ಬದುಕೂ, ಭಕ್ತಿಯಿಲ್ಲದ ಹೊಗಳಿಕೆಯೂ ಶಕ್ತಿಯಿಲ್ಲದ ಹೊಡೆದಾಟವೂ ದಾನವಿಲ್ಲದ ಐಶ್ವರ್ಯವೂ ನಾಡೇ ಇಲ್ಲದ ಅರಸನೂ ಹಣ್ಣಿಲ್ಲದ ತೋಟವೂ ಕುಲವಿಲ್ಲದ ಹಿರಿಮೆಯೂ ದಾರಿಯಿಲ್ಲದ ಪ್ರಯಾಣವೂ ಪಟ್ಟಣವೇ ಇಲ್ಲದ ರಾಜ್ಯವೂ ಬೆಂಕಿಯಿಲ್ಲದ ಅಡುಗೆಯೂ ನಂಬಿಕೆಯಿಲ್ಲದ ಹೆಂಡತಿಯೂ ದಯೆಯಿಲ್ಲದ ಕಾರ್ಯವೂ ನ್ಯಾಯವಿಲ್ಲದ ಸೇವೆಯೂ ಸರಕು ಇಲ್ಲದ ಅಂಗಡಿಯೂ ಗಂಡನಿಲ್ಲದ ಹೆಂಡತಿಯೂ ಬಂಡವಾಳವಿಲ್ಲದ ವ್ಯಾಪಾರವೂ ಮದವಿಲ್ಲದ ಆನೆಯೂ ನೀರಿಲ್ಲದ ಊರೂ ಗೋಡೆಯಿಲ್ಲದ ಮನೆಯೂ ವಿದ್ಯೆಯಿಲ್ಲದ ತಪಸ್ಸೂ ತುಪ್ಪವಿಲ್ಲದ ಊಟವೂ ಸಮ್ಯಗ್ದರ್ಶನವಿಲ್ಲದ ದಾನ, ತಪಸ್ಸು, ಜಪವೂ, ಧರ್ಮವೂ ಶೋಭಿಸುವುದು ಸಾಧ್ಯವೆ ? ೭೫. ಶಕ್ತರಾದ ಭೂಪಾಲಕರಿಲ್ಲದ ದೇಶ, ಭೋಜನಕ್ಕಿಲ್ಲದ ಮಾಂಸ, ಬಟ್ಟೆಯಿಲ್ಲದ ಅನೇಕ ಒಡವೆಗಳು, ಕಣ್ಣಿಲ್ಲದ ಸೂಳೆ, ಹೆಚ್ಚಿನ ಲಾಭವಿರದ ವ್ಯಾಪಾರ, ಕಮಲವಿಲ್ಲದ ಸರೋವರ, ಬೆಳೆಯಿಲ್ಲದ ಭೂಮಿ, ರಕ್ಷಣೆಯಿಲ್ಲದ ರಾಜನ ಆಳ್ವಿಕೆ, ದರ್ಶನದಿಂದ ಕೂಡದಧರ್ಮ–ಇವು ಶೋಭಾಯಮಾನವಾಗುವುದುಂಟೆ ? ೭೬. ಪಾಪವಶದಿಂದ

ದುಂತವಶದಿಂದತಿಜ್ಜನೆ
ತಿರಿಯದೆಸುಖನಿಳಯಮಪ್ಪಮುಕ್ತಿಶ್ರೀಯೊಳ್
ನೆರೆದಿರ್ಪೆನೆಂಬ ಭವ್ಯಂ
ಪರದಾದರದಿಂದೆತ್ತಳ್ದುವುದು ದರ್ಶನಮಂ ೭೭

ಗದ್ಯ॥ ಆ ದರ್ಶನ ಸೌಖ್ಯಕ್ಕಷ್ಟಾಂಗಮುಂ ಶರೀರಕ್ಕವಯವಮುಂ ಮರಕ್ಕೆ ಶಾಖೆಯು ಮೆಂತಂತೆ ನಿಶ್ಶಂಕೆಯುಂ ನಿಷ್ಕಾಂಕ್ಷೆಯುಂ ನಿರ್ವಿಚಿಕಿತ್ಸೆಯುಂ ಅಮೂಢದೃಷ್ಟಿತ್ವಮುಂ ಉಪಗೂಹನಮುಂ ಸ್ಥಿತಿಕರಣಮುಂ ವಾತ್ಸಲ್ಯಮುಂ ಧರ್ಮಪ್ರಭಾವನೆಯುಮೆಂದು ೭೮

ಎಸೆವಂಗಮೆಂಟಱಿಂ ರಂ
ಜಿಸುವಮಹಾನರ್ಘ್ಯಮಪ್ಪದರ್ಶನಮುಂ ಶಂ
ಕಿಸದೆ ತಡೆದಿರದೆ ಕೈಕೊಂ
ಡೆಸಗುಗೆತಾಂ ಬಱಿಕಮೈದಣುವ್ರತತತಿಯುಂ ೭೯

ಅವಾವುವೆಂದೊಡೆ ೮೦

ಕೊಲ್ಲದ ಪುಸಿಯದ ಕಳವಿನಿ
ಸಿಲ್ಲದ ಪರವನಿತೆಯರ್ಗೆಪದಪಿಂಚಿತ್ತಂ
ಸಲ್ಲದ ಪರಿಗ್ರಹಕ್ಕಿ
ಪಿಲ್ಲದ ಸುವ್ರತಮಿವೈದುಮಲ್ಲವೆ ರತ್ನಂ ೮೧

ನಿರಂತರವಾಗಿ ತಿರುಗದೆ ಸುಖಕ್ಕೆ ಆಶ್ರಯವಾದ ಮುಕ್ತಿಶ್ರೀಯಲ್ಲಿ ಸೇರಿ ಕೊಳ್ಳುವೆನೆಂಬ ಭವ್ಯನು ಅತ್ಯಂತ ಆದರದಿಂದ ದರ್ಶನವನ್ನು ಹೊಂದಬೇಕು ೭೭. ಶರೀರಕ್ಕೆ ಅವಯವಗಳೂ ಮರಕ್ಕೆ ಕೊಂಬೆಗಳೂ ಹೇಗೋ, ಆ ದರ್ಶನ ಸೌಖ್ಯಕ್ಕೆ ಅಷ್ಟಾಂಗವೂ ಹಾಗೆ ನಿಶ್ಶಂಕೆ, ನಿಷ್ಕಾಂಕ್ಷೆ, ನಿರ್ವಿಚಿಕಿತ್ಸೆ, ಅಮೂಢದೃಷ್ಟಿತ್ವ, ಉಪಗೂಹನ, ಸ್ಥಿತಿಕರಣ, ವಾತ್ಸಲ್ಯ ಧರ್ಮ ಪ್ರಭಾವನೆ ಎಂಬುವು. ೭೮. ಶೋಭಿಸುವ ಎಂಟು ಅಂಗ ಗಳಿಂದ ರಂಜಿಸುವ ಮಹಾ ಅನರ್ಘ್ಯವಾದ ದರ್ಶನವನ್ನು ಸಂದೇಹ ಪಡದೆ, ತಡ ಮಾಡದೆ, ಅಂಗೀಕರಿಸಿ ತರುವಾಯ ತಾನು ಐದು ಅಣು ವ್ರತ ಸಮೂಹವನ್ನೂ ಆಚರಿಸಲಿ ೭೯. ಅವು ಯಾವುವೆಂದರೆ ೮೦. ಕೊಲ್ಲದ, ಹುಸಿಯಾಡದ, ಕಳ್ಳತನಸ್ವಲ್ಪವೂ ಇಲ್ಲದ ಅನ್ಯಸ್ತ್ರೀಯರಿಗೆ ಮನಸ್ಸನ್ನು ಆಸೆಯಿಂದ ಸಲ್ಲಿಸದ, ದಾನಸ್ವೀಕಾರಕ್ಕೆ ಆಸೆ ಯಿರದ ಈ ಐದು ವ್ರತಗಳೇ ಶ್ರೇಷ್ಠವಾದ ರತ್ನಗಳಲ್ಲವೆ ? (ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ). ೮೧. ಇಂತು ಈ ಹದಿನಾಲ್ಕನ್ನೂ

ಇಂತೀಪದಿನಾಲ್ಕುಮನ
ತ್ಯಂತಂದೃಢಹೃದಯನಾಗಿ ತಾಳ್ದಿರ್ದಂಗೋ
ರಂತೆ ನಿರಂತರ ಸೌಖ್ಯಂ
ಭ್ರಾಂತಿಲ್ಲದೆ ಕೂಡುಗಲ್ಲಿ ಸಂದೆಯಮುಂಟೇ ೮೨

ಇನಿತುಮನೋರಂತಿರ ನೆ
ಟ್ಟನೆ ತಾಳ್ದಿದ ನರನ ಸುಖಮನೇವೊಗಟ್ಟುದೊ ಕೇ
ಳನಿತರೊಳೊಂದಂತಾಳ್ದಿದ
ಮನುಜಂಗಂ ಮುಕ್ತಿಲಕ್ಷ್ಮಿಗಹನಮೆ ಧರೆಯೊಳ್ ೮೩

ಗದ್ಯ॥ ಎಂಬುದುಂ ಗಣಧರದೇವರ್ಗೆ ಮಗಧಾವನೀವಲ್ಲಭಂ ಭಕ್ತಿಪೂರ್ವಕಂ ವಂದಿಸಿ ನಿಮ್ಮಡಿಯೆ:ನಗೆ ತಿಳಿವಂತಾಗೆ ದರ್ಶನಮುಂ ನಿಶ್ಶಂಕಾದ್ಯಷ್ಟಗುಣಂಗಳುಂ ಪಂಚಾಣುವ್ರತಮುಮೆಂಬ ಪದಿನಾಲ್ಕು ಮಹಾರತ್ನಂಗಳೊಳೊಂದೊಂದರೊಳ್‌ಚರಿಯಿಸಿ ನಿರ್ವೃತಿಯನೆಯ್ದಿದ ಮಹಾಪುರುಷರ ಕಥೆಗಳಂ ಬೆಸಸಲ್ವೇಟ್ಕುಮೆಂಬುದುಂ ಮೃದುಮಧುರಗಂಭೀರಧ್ವನಿಯಿನಿಂತೆಂದುಪೇಟಲ್ಬಗೆಲ್ದರ್ ೮೪

ಮುದದಿಂದೊಂದೊಂದರೊಳ್ತಾಗುವಜಲಚರಸಂದೋಹದಳ್ಳೇಱಿನಿಂ ಪೊ
ಣ್ಮಿದ ತಚ್ಛೀತಾಂಬುವಿಂ ತಜ್ಜಲದಿನೊಗೆದ ಮುಕ್ತಾಳಿಯಿಂದೆಯ್ದೆಶುಭ್ರಾಂ
ಬುದಮುಂ ತಾರಾಳಿಯುಂಪೋಲ್ತೆಸೆವನೆಱನಭೋಭಾಗದಂತೊಪ್ಪುಸುತ್ತಿ
ರ್ದುದುಜಂಬೂದ್ವೀಪಮುಂ ವಾರಿಧಿ ಕವಯ:ರಮುಂ ಬೀಸಿದಂತಾಗೆ ಚೆಲ್ವಿಂ ೮೫

ಅತ್ಯಂತ ದೃಢ ಮನಸ್ಕನಾಗಿ ಧರಿಸಿರುವವನಿಗೆ ಅತಿಶಯವಾದ ನಿರಂತರ ಸೌಖ್ಯ ತಪ್ಪದೆ ಲಭಿಸುತ್ತದೆ. ಅದರಲ್ಲಿ ಸಂಶಯ:ವೇನಿದೆ ?. ೮೨. ಇಷ್ಟನ್ನೂ ಒಂದೇ ಸಮನಾಗಿ ಅಚಂಚಲನಾಗಿಧರಿಸಿದ ಮಾನವನ ಸುಖವನ್ನು ಏನೆಂದು ಹೋಗಳುವುದೋ ! ಕೇಳು. ಅಷ್ಟರಲ್ಲಿ ಒಂದನ್ನು ಧರಿಸಿದ (ಒಂದು ವ್ರತವನ್ನು ಕೈಕೊಂಡು ಪಾಲಿಸಿದ) ಮನುಜನಿಗೂ ಈ ಲೋಕದಲ್ಲಿ ಮೋಕ್ಷಲಕ್ಷ್ಮಿ ದೊರೆಯುವುದು ಕಷ್ಟವಲ್ಲ. ೮೩. ಎನ್ನುತ್ತಲೇ ಗಣಧರ ದೇವರಿಗೆ ಮಗಧ ದೇಶದ ಒಡೆಯನು ಭಕ್ತಿಪೂರ್ವಕವಾಗಿ ವಂದಿಸಿ ನಿಮ್ಮಪಾದ ! ನನಗೆ ತಿಳಿಯುವ ಹಾಗೆ ದರ್ಶನವೂ ನಿಶ್ಶಂಕೆಯೇ ಮೊದಲಾದ ಅಷ್ಟ ಗುಣಗಳು. ಪಂಚ ಅಣುವ್ರತಂ ಎಂಬ ಈ ಹದಿನಾಲ್ಕು ಮಹಾ ರತ್ನಗಳಲ್ಲಿ ಒಂದೊಂದರಲ್ಲಿಯೂ ಆಚರಿಸಿ ಮೋಕ್ಷವನ್ನು ಹೊಂದಿದ ಮಹಾಪುರುಷರ ಕಥೆಗಳನ್ನು ಹೇಳಬೇಕು, ಎನ್ನಲು, ಮೃದುಮಧುರವೂ ಗಂಭೀರವೂ ಆದ ಧ್ವನಿಯಲ್ಲಿ ಹೀಗೆ ಹೇಳಲು ತೊಡಗಿದರು, ೮೪. ಸಂತೋಷವಾಗಿ ಒಂದೊಂದರಲ್ಲಿ ತಾಕುವ ಜಲಚರಸಮೂಹದ ಬಲವಾದ ಪೆಟ್ಟಿನಿಂದ ಹೊರಹೊಮ್ಮಿದ ಆ ಶೀತೋದಕದಿಂದ, ಆ ನೀರಿನಿಂದ ಹುಟ್ಟಿದ ಮುತ್ತಿನ ಸಾಲಿನಿಂದ. ಚೆನ್ನಾಗಿ ಬಿಳಿಯ ಮೋಡವನ್ನೂ ನಕ್ಷತ್ರಸಮೂಹವನ್ನೂ ಹೋಲುತ್ತ, ಶೋಭಿಸುವ ಆಕಾಶಭಾಗದಂತೆ ಹೊಳೆಯುತ್ತ, ಸಮುದ್ರವು ಕೆವಯುರ ? (ಕೆಯಪ್ಪಾರ)ವನ್ನು ಬೀಸಿದ ಹಾಗೆ ಜಂಬೂದ್ವೀಪವನ್ನು ಸುತ್ತಿಕೊಂಡಿತ್ತು. ೮೫. ಆ

ಗದ್ಯ॥ ಆ ಜಂಬೂದ್ವೀಪದ ನಟ್ಟನಡುವೆ ೮೬

ಮುದದಿಂಜಿನಾಭಿಷೇಕ
ಕ್ಕಿದುಮಜ್ಜನಪೀಠಮೆನಿಸಿ ಮಹಿಮೆಯಿನೊಪ್ಪಿ
ರ್ದುದು ಪೆಂಪಿಂ ತ್ರೈಲೋಕ್ಯಾ
ಭ್ಯುದಯಂ ರಮಣೀಯಮಪ್ಪಮಂದರಶೈಲಂ ೮೭

ಗದ್ಯ॥ ಆ ಮೇರುಗಿರಿಯ ದಕ್ಷಿಣಭಾಗದ ಭರತಕ್ಷೇತ್ರದೊಳ್ ಸೌರಾಷ್ಟ್ರ ವಿಷಯಮೆಂಬುದು ನಾಡಲ್ಲಿ ೮೮

ಜಿನಭವನಾವಳಿಯಿಂದುಪ
ವನದಿಂ ಪೆರ್ಗೆಱೆಗಳಿಂ ಸರೋಜಾಕರದಿಂ
ಧನದನಪುರದಂತೊಪ್ಪುವು
ದನವರತಂ ಶೋಭೆಯಿಂ ಕರಂ ಗಿರಿನಗರಂ ೮೯

ಆ ಪುರಮನಾಳ್ವಂ ವಿಶ್ವಸೇನನೆಂಬ ಮಹಾಮಂಡಳಿಕನಾತನ ರಾಜಶ್ರೇಷ್ಠಿಯನ್ವಯ ಶುದ್ಧನುಂ ಪ್ರಸಿದ್ಧನುಮಪ್ಪದಯಾಮಿತ್ರಸೆಟ್ಟಿಯೆಂಬ ಪರದನಿರ್ಪನಾತಂ ೯೦

ಸಿರಿಯೊಳ್‌ಕುಬೇರನಂ ತ್ರ
ಸ್ತರಿಯೊಡುವನಹಿಪನೊಡನೆ ಭೋಗಕ್ಕಂ ಮ
ಚ್ಚರಿಸುವನುದಾರಗುಣದೊಳ್
ಪುರುಡಿಸುವಂ ಕಲ್ಪವೃಕ್ಷದೊಳ್ತದ್ವಣಿಜಂ ೯೧

ಜಂಬೂದ್ವೀಪದ ಮಧ್ಯದಲ್ಲಿ. ೮೬. ಸಂತೋಷದಿಂದ ಇದು ಜಿನಾಭಿಷೇಕಕ್ಕೆ ತಕ್ಕ ಸ್ನಾನ ಪೀಠವೆನಿಸಿಕೊಂಡು ಮಹಿಮೆಯಿಂದ, ವೈಭವದಿಂದ ಕೂಡಿ ತ್ರಿಲೋಕಗಳ ಅಭ್ಯುದಯ ಕಾರಕವೂ ರಮಣೀಯವೂ ಆದ ಮಂದರ ಪರ್ವತವು ಕಂಗೊಳಿಸುತ್ತಿತ್ತು. ೮೭. ಆ ಮೇರುಪರ್ವತದ ದಕ್ಷಿಣ ದಿಗ್ಭಾಗದ ಭರತ ಕ್ಷೇತ್ರದಲ್ಲಿ ಸೌರಾಷ್ಟ್ರವೆಂಬ ಒಂದು ಪ್ರಾಂತ್ಯ ವಿದೆ, ಅಲ್ಲಿ. ೮೮. ಜಿನಮಂದಿರಗಳಿಂದಲೂ ಉದ್ಯಾನಗಳಿಂದಲೂ ದೊಡ್ಡ ಕೆರೆಗಳಿಂದಲೂ ಕಮಲ ಸರೋವರಗಳಿಂದಲೂ ಕುಬೇರನ ಪಟ್ಟಣದಂತೆ ಗಿರಿನಗರವು ಸದಾ ಶೋಭಾಯ ಮಾನವಾಗಿ ವಿರಾಜಿಸುತ್ತಿತ್ತು. ೮೯. ಆ ಪಟ್ಟಣದ ದೊರೆ ವಿಶ್ವಸೇನನೆಂಬ ಮಹಾ ಮಾಂಡಳಿಕ. ಆತನ ರಾಜಶ್ರೇಷ್ಠಿ, ವಂಶಪರಿಶುದ್ಧನೂ ಪ್ರಸಿದ್ಧನೂ ಆದ ನಯಾಮಿತ್ರ ಸೆಟ್ಟಿಯೆಂಬ ವ್ಯಾಪಾರಿ ಇದ್ದನು. ಆತನು. ೯೦. ಐಶ್ವರ್ಯದಲ್ಲಿ ಕುಬೇರನನ್ನು ತಲ್ಲಣ ಗೊಳಿಸುವನು, ಭೋಗದಲ್ಲಿ ಭೋಗಿಲೋಕದ ಒಡೆಯ ಆದಿಶೇಷನೊಡನೆ ಸ್ಪರ್ಧಿಸುವನು ಉದಾರಗುಣದಲ್ಲಿ ಕಲ್ಪವೃಕ್ಷದ ಮೇಲೆ ಮೇಲಾಟವಾಡುವವನು, ಆ ವ್ಯಾಪಾರಿ. ೯೧.

ಗದ್ಯ॥ ಅಂತಳವಿಗಳಿದ ಸಿರಿಯೊಳಮುಪಮೆಗಳಿದ ಭೋಗದೊಳಮಪರಿಮಿತ ಜಿನಭಕ್ತಿಯೊಳಂ ನೆಗಟ್ತೆವೆತ್ತು ಸುಖಸಂಕಥಾವಿನೋದದಿಂ ಪಲವು ಕಾಲಂ ಪೋಪುದುಮೊಂದುದಿವಸಂ ತನ್ನೊಳಿಂತೆರದಂ ೯೨

ಪುರುಷಂ ಧನಮೆನಗುಂಟೆಂ
ದಿರಲಾಗದು ದ್ರವ್ಯಮುಳ್ಳೊಡಂ ದ್ರವ್ಯಮನಾ
ರ್ಜಿಪುದೇಕೆನೆ ವಿತ್ತಂ ತಾಂ
ದೊರೆಕೊಳೆ ಕೇಳಿಹಪರಂಗಳೆರಡುಂ ಸಾಧ್ಯಂ ೯೩

ಗದ್ಯ॥ ಎಂದು ಪರದುವೋಪೆನೆಂಬ ಬಗೆಯಂ ತಂದು ಯಥೋಚಿತಮಪ್ಪ ಭಂಡಮಂ ಕೊಂಡು ಶುಭದಿನದೊಳ್ ಪೊಱವೀಡಂಬಿಟ್ಟು ತನ್ನನಾಶ್ರಯಿಸಿ ಬರ್ಪವರ್ ಬರ್ಪನ್ನೆವರಮಿರ್ಪನ್ನೆಗಂ ೯೪

ಕೊರಲ ಪೊಸಜನ್ನಿವರಮೊ
ಪ್ಪಿರೆ ನಿಡುಃಬೊಟ್ಟೆಸೆಯೆ ದರ್ಭೆಕರಮತಿಶಯದಿಂ
ಬೆರಳೊಳ್ ರಂಜಿಸೆ ಕಾಶಾಂ
ಬರಮೆಸೆದಿರೆ ಬಂದು ನಿಂದುಭೂಸುರನೊರ್ವಂ ೯೫

ಗದ್ಯ॥ ವೇದರುಕ್ಕಂ ಪೇಳ್ದಕ್ಷತೆಯನೀವುದುಂ ದಯಾಮಿತ್ರಸೆಟ್ಟಿ ನೋಡಿ ನಿಮ್ಮ ಪೆಸರೇನೆಂದೆತ್ತಿಣಂಬಂದಪ್ಪರಿನ್ನೆಲ್ಲಿಗೆ ಪೋದಪ್ಪಿರಿಲ್ಲಿಗೇಂ ಕಾರಣಂ ಬಂದಿರೆಂದು ಬೆಸಗೊಳ್ಳುದುಂ ಪಾರ್ವನಿಂತೆಂದಂ ೯೬

ಹಾಗೆ ಅಳತೆಯಿಲ್ಲದ ಐಶ್ವರ್ಯದಿಂದ, ಹೋಲಿಕೆಯೇ ಇಲ್ಲದ ಭೋಗದಿಂದ, ಅಪರಿಮಿತವಾದ ಜಿನಭಕ್ತಿಯಿಂದಲೂ ಪ್ರಸಿದ್ಧಿಹೊಂದಿ, ಸುಖಸಂತೋಷಗಳಲ್ಲಿ ಬಹಳ ಕಾಲ ಕಳೆದು ಹೋಗಲು ಒಂದು ದಿನ ಅವನು ತನ್ನಲ್ಲಿಯೇ ಹೀಗೆಂದು ಕೊಂಡನು. ೯೨. ಪುರುಷನು ತನಗೆ ಧನವಿದೆಯೆಂದು ಸುಮ್ಮನಿರಬಾರದು. ದ್ರವ್ಯವಿದ್ದರೂ ಮತ್ತೆ ದ್ರವ್ಯವನ್ನು ಸಂಪಾದಿಸಲೇಕೆ ? ಎಂದರೆ ಧನ ಸಿಕ್ಕಿದರೆ ಇಹಪರಗಳೆರಡನ್ನೂ ಸಾಧಿಸಬಹುದು; ೯೩. ಎಂದು ಭಾವಿಸಿ ವ್ಯಾಪಾರಕ್ಕೆ ಹೊರಡಬೇಕೆಂದು ಮನಸ್ಸುಮಾಡಿ ಯಥೋಚಿತವಾದ ಸರಕನ್ನು ತೆಗೆದುಕೊಂಡು ಶುಭದಿನ ನೋಡಿ ಹೊರಬೀಡನ್ನು ಬಿಟ್ಟು ತನ್ನನ್ನು ಆಶ್ರಯಿಸಿ ಬರುವವರು ಬರುವವರೆಗೂ ಕಾದಿರುವಾಗ ೯೪. ಕೊರಳಿನಲ್ಲಿ ಹೊಸ ಜನಿವಾರ ಶೋಭಿಸುತ್ತಿರಲು ದೊಡ್ಡ ಚುಕ್ಕೆಯನ್ನು ಹಣೆಗಿಟ್ಟು ಬೆರಳಲ್ಲಿ ಧರ್ಭೆಅತಿಶಯವಾಗಿ ಕಾಣುತ್ತಿರಲು ಕಾಶಾಂಬರವನ್ನುಟ್ಟುಕೊಂಡು ಬಂದು ಒಬ್ಬ ಬ್ರಾಹ್ಮಣನು ಸೆಟ್ಟಿಯ ಎದುರಿಗೆ ನಿಂತು. ೯೫. ವೇದಮಂತ್ರವನ್ನು ಹೇಳಿ ಅಕ್ಷತೆಯನ್ನು ಕೊಡುತ್ತಲೂ ಸೆಟ್ಟಿ ಗಮನಿಸಿ "ನಿಮ್ಮ ಹೆಸರೇನು, ಎಲ್ಲಿಂದ ಬಂದಿರಿ ? ಎಂದು ಬಂದಿರಿ ? ಇನ್ನು ಎಲ್ಲಿಗೆ ಹೋಗುವಿರಿ ? ಇಲ್ಲಿಗೆ ಏನು ಕಾರಣ ಬಂದಿರಿ ?" ಎಂದು ಕೇಳಲು ಆ ಬ್ರಾಹ್ಮಣ ಹೀಗೆ ಹೇಳಿದನು. ೯೬. ವಸುಭೂತಿಯೆಂದು ನನ್ನ

ವಸುಭೂತಿಯೆಂಬುದೆನ್ನಯ
ಪೆಸರುನ್ನತಿವೆತ್ತತೆಂಕನಾಡಿಂ ಬಂದೆಂ
ವಸುಧೆಗೆಸೆದಿರ್ದ ಗಂಗೆಯ
ನಸಹಾಯನೆಯೆರ್ತಿವೆರಸುವಿಂೞಯಲ್ಕೆಂದಾಂ ೯೭

ಗದ್ಯ॥ ಎಂದು ಮುಂದಡವಿಯಪ್ಪುದಱಿಂ ಕ್ರೂರಮೃಗಂಗಳಿಂದಾನುಂ ವನಚರರಿಂದಾನುಂ ಪ್ರಾಣಭಯಮಕ್ಕುಮೆಂದಂಜಿ ನೆರವಂ ಪೊೞಲಿನೊಳಱಸುತ್ತುಮಿರ್ದು ನಿಮ್ಮ ಪೋಗಂ ಪುರಜನಂ ಪೇೞೆ ಕೇಳ್ದು ನಿಮ್ಮನೆರವನಾಶ್ರಯಿಸಿ ಬಂದೆನೆಂಬುದುಂ ಸೆಟ್ಟಿ ಕರವೊಳ್ಳಿತ್ತು ಬನ್ನಿಮೆನೆ ವಸುಭೂತಿ, ೯೮

ಕರಮೊಸೆದು ರಾಗದಿಂ ಪೆ
ರ್ಚಿರೆ ಸೆಟ್ಟಿಮನೋನುರಾಗದಿಂದೊಡನೆಯುವರ್
ಬರೆ ನಯದಿಂ ಪಿರಿದುಃಬಲಂ
ಬೆರಸು ಮಹೋತ್ಸಾಹ ಚಿತ್ತಂ ಮಱುದಿವಸಂ ೯೯

ಗದ್ಯ॥ ಮುವ್ವತ್ತಿರ್ವರ್ಪೆಂಡಿರುಮಂ ಬಂಧುಜನಮುಮಂ ಜ್ಯೇಷ್ಠಪುತ್ರನುಮಂ ಕರೆದು ೧೦೦

ಸಂತತಂ ಮುನಿಸಂಕುಳಕ್ಕೆಱಿದನ್ನಮಂ ಜಿನಪೂಜೆಗೋ
ರಂತೆ ಬೇೞ್ಪ ಸಮಸ್ತ ವಸ್ತುವ ಸಾರಿಸಾರಿಗೆ ದಾನಮಂ
ಸಂತಸಂ ಮಿಗೆ ನಿಮ್ಮನಾಶ್ರಯಿಸಿರ್ದ ಭವ್ಯಜನಕ್ಕೆ ನಾ
ನೆಂತು ಮಾಡುವೆನೆನ್ನ ಬರ್ಪಿನಮಂತೆ ಮಾಡಿ ನಿರಂತರಂ ೧೦೧

ಹೆಸರು. ಲೋಕಪ್ರಸಿದ್ಧವಾದ ಗಂಗೆಯಲ್ಲಿ ಸ್ನಾನಮಾಡಬೇಕೆಂದು ಆಸೆಪಟ್ಟು. ಶ್ರೇಷ್ಠವಾದ ತೆಂಕನಾಡಿನಿಂದ ಬಂದೆ. ೯೭. ಎಂದು ನುಡಿದು, ಮುಂದೆ ಅಡವಿಯಾದ್ದರಿಂದ ಕ್ರೂರಮೃಗಳಿಂದಾಗಲಿ, ಕಾಡು ಜನರಿಂಧಾಗಲಿ ಪ್ರಾಣಭಯವೆಂದು ಅಂಜಿ ಈ ಪಟ್ಟಣದಲ್ಲಿ ನೆರವನ್ನು ಬೇಡುತ್ತಿರುವಾಗ ನೀವು ಹೋಗುವ ಅಂಶವನ್ನು ಪುರಜನರಿಂದ ಕೇಳಿ ನಿಮ್ಮ ಸಹಾಯವನ್ನು ಕೋರಲೆಂದು ಬಂದನೆನ್ನಲು ಸೆಟ್ಟಿಯು 'ಬಹಳ ಒಳ್ಳೆಯದು ಬನ್ನಿ' ಎಂದನು. ವಸುಭೂತಿ. ೯೮. ಬಹಳವಾಗಿ ಸಂತೋಷಪಟ್ಟು ಉತ್ಸಾಹದಿಂದಿರಲು, ಸೆಟ್ಟಿ ತನ್ನ ಜತೆಯವರು ಸಂತೋಷ ಮನಸ್ಕರಾಗಿ ಬರಲಾಗಿ, ಮರುದಿನ ಬಹಳ ಉತ್ಸಾಹದಿಂದ. ೯೯. ತನ್ನ ಮೂವತ್ತಿಬ್ಬರು ಹೆಂಡಿರುಗಳನ್ನೂ ಬಂಧು ಜನರನ್ನೂ ತನ್ನ ಹಿರಿಯ ಮಗನನ್ನೂ ಹತ್ತಿರ ಕರೆದು. ೧೦೦. "ಯಾವಾಗಲೂ ಮುನಿಸಮೂಹಕ್ಕೆ ಅನ್ನವನ್ನು ನೀಡಿ. ಜಿನಪೂಜೆಗೆ ಸದಾ ಬೇಕಾಗುವ ವಸ್ತುಗಳನ್ನು ಸಲಸಲಕ್ಕೂ ಸಂತೋಷವಾಗಿ ದಾನ ಮಾಡಬೇಕು. ನಿಮ್ಮನ್ನು ಆಶ್ರಯಿಸಿರುವ ಭವ್ಯ ಜನರಿಗೆ ನಾನು ಹೇಗೆ ಮಾಡುತ್ತಿರುವೆನೋ ನಾನು ಹಿಂದಿರುಗಿ ಬರುವತನಕ ನೀವೂ ಹಾಗೆಯೇ ಮಾಡಿ." ೧೦೧.

ಗದ್ಯ॥ ಎಂದು ಕೈಮುಗಿದು ಬೇಡಿಕೊಂಡು ಭರದಿಂದೊಪ್ಪೈಸಿ ಪೊಱಮಟ್ಟುಕಿಱಿದಂತರಮಂ ಬಂದು ಬಂಧುಜನರುಮಂ ತನಯರುಮಂ ರಮಣೀಯಮಪ್ಪ ಬಹಿರುದ್ಯಾನದೊಳ್ ನಿಂದು ಮಗುಟಲ್ವೇಟ್ಟು ಪಯಣಂಬೋಗುತ್ತುಂ ತನಗೆ ದಿವಸಕ್ಕೆ ಮೂಱುಗಳಿಗೆವರಂ ಧರ್ಮಶ್ರವಣಮಂ ಕೇಳ್ದಲ್ಲದುಣ್ಣೆನೆಂಬ ವ್ರತಮುಂಟಪ್ಪುದಱಿಂ ಬಿಟ್ಟ ಬೀಡುಗಳೊಳ್ ಸಕಲಶ್ರಾವಕರ್ಗೆ ಧರ್ಮಮಂ ಪೇಟ್ವ ದಯಾಮಿತ್ರ ಸೆಟ್ಟಿಯ ಧರ್ಮಶ್ರವಣಕ್ಕೆ ವಸುಭೂತಿ ಕಳಕಳಿಸಿ ನಕ್ಕು ತನ್ನೊಳಿಂತೆಂದಂ ೧೦೨

ಅಕಟಕಟ ವೈಶ್ಯಜಂ ಭಾ
ವಕನಲ್ಲಂ ಲಜ್ಜೆಗೆಟ್ಟು ಸವಣರ ಮಾತಂ
ನಿಕರಕ್ಕೆ ನಂಬಿ ಠಕ್ಕಿಂ
ಗೆ ಕರಂ ಮತಿಗೆಟ್ಟು ಗತಿಯನಱಿಯದೆ ಕೆಟ್ಟಂ ೧೦೩

ವಸುಮತಿಯೊಳ್ ಪಲರುಂ ಪೂ
ಜಿಸುವೆಸಗುವ ದೈವಮಂ ಮಹಾಧರ್ಮಮುಮಂ
ಬಿಸುಟಹಹ ನೋಡಕೋಣೆಯ
ಕುಸುಕುಱುಧರ್ಮಮನದೆಂತು ನಂಬಿದನೀತಂ ೧೦೪

ಎಂದು ಕೈಮುಗಿದು ಬೇಡಿಕೊಂಡು ಸಂಭ್ರಮದಿಂದ ಒಪ್ಪಿಸಿ ಹೊರಟು ಕೊಂಚ ದೂರ ಬಂದಮೇಲೆ ಸುಂದರವಾದ ಬಹಿರುದ್ಯಾನದಲ್ಲಿ ನಿಂತು ಬಂಧು ಜನರನ್ನೂ ಮಕ್ಕಳನ್ನೂ ಹಿಂತಿರುಗುವಂತೆ ಹೇಳಿ ಪ್ರಯಾಣಮಾಡುತ್ತ ಪ್ರತಿದಿನ ಮೂರುಗಳಿಗೆಯಾದರೂ ಧರ್ಮಶ್ರವಣಮಾಡದೆ ಊಟ ಮಾಡೆನೆಂಬ ವ್ರತ ತನಗೆ ಇರುವುದರಿಂದ ಬೀಡು ಬಿಟ್ಟಾಗ ಸಮಸ್ತಶ್ರಾವಕರಿಗೂ ಧರ್ಮವನ್ನು ಹೇಳುವ ದಯಾಮಿತ್ರಸೆಟ್ಟಿಯ ಧರ್ಮಶ್ರವಣಕ್ಕೆ ವಸುಭೂತಿ ಸಂಕಟಪಟ್ಟು ತನ್ನಲ್ಲಿಯೇ ಹೀಗೆಂದುಕೊಂಡನು. ೧೦೨. ಅಯ್ಯಯ್ಯೋ, ಈ ವೈಶ್ಯಕುಲಜನು ವಿವೇಚನೆಯುಳ್ಳವನಲ್ಲ. ನಾಚಿಕೆಬಿಟ್ಟ ಸವಣರ ಮಾತನ್ನು ನಿಜವಾಗಿಯೂ ನಂಬಿ ಅವರ ಠಕ್ಕಿನಿಂದ ಸಂಪೂರ್ಣವಾಗಿ ಬುದ್ಧಿಹೀನನಾಗಿ ಸನ್ಮಾರ್ಗವನ್ನರಿಯದೆ ಕೆಟ್ಟ. ೧೦೩. ಭೂಮಿಯಮೇಲೆ ಅನೇಕರು ಪೂಜೆಮಾಡುವ ದೈವವನ್ನೂ ಮಹಾಧರ್ಮವನ್ನೂ ಬಿಟ್ಟು, ಆಹಾ, ನೋಡಿದೆಯಾ, ಮೂಲೆಯಲ್ಲಿ ಅಡಗಿರುವ ಅಪ್ರಸಿದ್ಧವಾದ ಧರ್ಮವನ್ನು ಈತನು ಹೇಗೆ ನಂಬಿದನು ! ೧೦೪. ಕಾಯಕ್ಲೇಶಗಳಿಂದ ಸ್ವಲ್ಪವೂ ಆಯಾಸ ಪಡದೆ (ದೇಹದಂಡನೆಮಾಡದೆ) ಇತರರ

ಕಾಯಕ್ಲೇಶಂಗಳಿನಿನಿ
ಸಾಯಾಸಂ ಬಡದೆ ಪೆಱರ ಮನೆಯೊಳ್ಕುಣಿಸಂ
ಮಾಯಾವಿತನದಿನುಣ್ಬರ
ದಾಯಮನೀಪರದನಱಿಯದಕ್ಕಟ ಕೆಟ್ಟಂ ೧೧೫

ತಿರಿದಾಕೂಳಂ ನೀರೊಳ್
ಗರಗರನಪ್ಪಂತು ಕರ್ಚಿಮೇಣುಂಡಪರೋ
ಪರಿಯೊಳ್ ಮೇಣ್ಮಿಂದಪರೊ
ಪರುಳೀತಂ ಶ್ರವಣರಾವತಪಮಂ ಕಂಡರ್ ೧೧೬

ಜಗದಧಿವಲ್ಲಭನಂ ಲ
ಡ್ಡುಗೆಯಿಂ ಪಲತೆಱದ ಪುಷ್ಪದಿಂ ನಾನಾಪ
ತ್ರಗಳಿಂ ಪೂಜಿಸಿ ನಿಚ್ಚಂ
ಸೊಗಯಿಸಿ ಮೈಯಿಕ್ಕಿ ನಾಡೆ ಬಡವಾದಪರೊ ೧೧೭

ಕುಲಮಂ ಮಾಸಿಸಿ ಮಿಾಹಮಂ ತೊಱೆದು ಕಂಡಪೇಸೆ ಮೆಯ್ಯೊಳ್ ಮಹಾ
ಮಲಮಂ ತಾಳ್ದಿದ ಕಪ್ಪರಂ ಸವಣರಂ ಕಂಗೆಟ್ಟರಂ ಕಂಡು ಸಂ
ಚಲಚಿತ್ತಂ ಕುಲದೈವಮೆಂದು ಪದಪಿಂ ಕೊಂಡಾಡುಮಿಂತಪ್ಪಗಾ
ವಿಲನಂ ಗಾಂಪನನೆಗ್ಗನಂ ಜಡನನಾಂ ಕಾಣೆಂ ಮಹೀಚಕ್ರದೊಳ್ ೧೧೮

ಮನೆಗಳೊಳಗಿನ ಒಳ್ಳೆಯ ತಿಂಡಿಗಳನ್ನು ಮಾಯಾವಿತನದಿಂದ ತಿನ್ನುವ ಯುಕ್ತಿಯನ್ನು ಈ ವ್ಯಾಪಾರಿಯು ತಿಳಿಯದೆ ಕೆಟ್ಟ. ! ೧೧೫. ಬೇಡಿತಂದ ಅನ್ನವನ್ನು ಸ್ವಚ್ಛವಾಗುವಂತೆ ತೊಳೆದು ತಿನ್ನುವರೋ, ಕ್ರಮವಾಗಿ ಸ್ನಾನಮಾಡುವರೋ, ಆ ಶ್ರವಣರು ಯಾವ ತಪಸ್ಸನ್ನು ಕಂಡಿದ್ದಾರೆ ? ಈತನು ದಡ್ಡ. ೧೧೬. ಜಗತ್ತಿಗೇ ಸ್ವಾಮಿಯಾದ ಭಗವಂತನನ್ನು ಲಡ್ಡುಗಳಿಂದಲೂ ಹಲವು ಬಗೆಯ ಹೂಗಳಿಂದಲೂ ನಾನಾ ಬಗೆಯ ಪತ್ರಗಳಿಂದಲೂ ಪೂಜೆಮಾಡಿ ನಿತ್ಯವೂ ಸರಿಯಾಗಿ ನಮಸ್ಕಾರಮಾಡಿ ಕೃಶರಾಗುವರೆ, ಈ ಸವಣರು ? ೧೧೭. ಕುಲವನ್ನು ಕೆಡಿಸಿ ಸ್ನಾನವನ್ನು ಬಿಟ್ಟು ಕಂಡವರು ಹೇಸಿಕೊಳ್ಳುವ ಹಾಗೆ ಮೈಮೇಲೆ ವಿಶೇಷವಾದ ಕಶ್ಮಲವನ್ನು ಧರಿಸಿಕೊಂಡಿರುವ ನೀಚರಾದ ಸವಣರನ್ನು, ಆ ಗತಿಗೆಟ್ಟವರನ್ನು, ಕಂಡು ಚಂಚಲಚಿತ್ತನಾಗಿ ಕುಲದೈವವೆಂದು, ಉತ್ಸಾಹದಿಂದ ಕೊಂಡಾಡುವ ಇಂಥಾ ನಾಗರಿಕತೆಯಿಲ್ಲದ, ದಡ್ಡ, ಅಜ್ಞಾನಿಯನ್ನು ಈ ಭೂಮಂಡಲದಲ್ಲಿ ಬೇರೆ ಯಾರನ್ನೂ ಕಾಣೆ. ೧೧೮. ಎಂದು ನಾನಾ ವಿಧವಾಗಿ

ಗದ್ಯ॥ ಎಂದು ನಾನಾ ವಿಧದಿಂ ದೂಷಿಸಿ ಮತ್ತಂ ಸೈರಿಸಲಾರದೆ ಈತನ ಧನಮುಂ ಬುದ್ಧಿಯುಂ ವ್ಯರ್ಥಯಾಗದಂತೆನ್ನ ಬಲ್ಲಮಾರ್ಗದಿಂ ತಿಳಿಪಿ ಬಟಿಕ್ಕೀ ಧರ್ಮಮಂ ಪತ್ತುವಿಡಿಸಿ ಮದೀಯ ಧರ್ಮದೊಳ್ ಪತ್ತಿಸುವೆನೆಂಬ ಬಗೆಯಂ ತಂದು ಸೆಟ್ಟಿಗಿಂತೆಂದಂ ೧೦೯

ವರವಸ್ತುವನಱಿವೆಡೆಗಂ
ಪರದರ್ಕಡು ಜಾಣರೆಂದು ಕರಮಾದರದಿಂ
ನರನಾಥರ್ಪೂಜಿಸುವ
ರ್ಧರೆ ಪೊಗಟ್ಟುದು ವಸ್ತು ಪುರುಷರೆಂದು ನಿಮ್ಮಂ ೧೧೦

ಎಲ್ಲೆಲ್ಲ ವಸ್ತುಗಳುಮಂ
ಬಲ್ಲರ್ನಿಮ್ಮನ್ನರಿಲ್ಲ ಬುದ್ಧಿಗೆ ನೀವುಂ
ನಿರ್ಲಜ್ಜರಪ್ಪ ಸವಣರ
ಸೊಲ್ಲಿಂಗೊಳಗಾದುದಕ್ಕೆ ನಾಂ ಬೆಱಗಾದೆಂ ೧೧೧

ಮಾಯಮನೆ ಬೀಸಿ ಪೆಱರನು
ಪಾಯದೆ ಠಕ್ಕಿಕ್ಕಿ ದೇವಕಾರ್ಯದೊಳಿನಿಸುಂ
ನೋಯದೆ ಸುಖಿಯಿಪ ಸವಣರು
ಪಾಯಮನಿಂ ನಿನ್ನೊಳಣ್ಣ ಭಾವಿಸಿ ನೋಡಾ ೧೧೨

ದೂಷಿಸಿ ಪುನಃ ಸೈರಿಸಲಾರದೆ, ಈತನ ಧನವೂ ಬುದ್ಧಿಯೂ ವ್ಯರ್ಥವಾಗದ ಹಾಗೆ ನನ್ನ ಕೈಲಾದ ದಾರಿಯಲ್ಲಿ ತಿಳಿಯಹೇಳಿ ಆಮೇಲೆ ಈ ಧರ್ಮದಿಂದ ಬಿಡಿಸಿ ನನ್ನ ಧರ್ಮದಲ್ಲಿ ಸೇರಿಸುತ್ತೇನೆ ಎಂಬ ಯೋಚನೆಮಾಸೆಟ್ಟಿಗೆ ಹೀಗೆ ಹೇಳಿದನು. ೧೦೯. ಶ್ರೇಷ್ಠವಾದ ಪದಾರ್ಥಗಳನ್ನು ಕಂಡುಕೊಳ್ಳುವುದರಲ್ಲಿ; ವರ್ತಕರು ಬಹಳ ಜಾಣರೆಂದು ರಾಜರೂ ಕೂಡ ಬಹಳ ಆದರದಿಂದ ಗೌರವಿಸುತ್ತಾರೆ ; ಲೋಕ ನಿಮ್ಮನ್ನು ವಸ್ತುಪರೀಕ್ಷರೆಂದು ಹೊಗಳುತ್ತದೆ. ೧೧೦. ಎಲ್ಲಾ ವಸ್ತುಗಳನ್ನೂ ನೀವು ಬಲ್ಲಿರಿ. ಬುದ್ಧಿಯ ವಿಷಯದಲ್ಲಿ ನಿಮ್ಮಂಥವರು ಇನ್ನಿಲ್ಲ. ಆದರೆ ಅಂಥ ನೀವು ಕೂಡ ಲಜ್ಜೆಯಿಲ್ಲದ (ನಾಚಿಕೆಗೆಟ್ಟ ದಿಗಂಬರರು) ಸವಣರ ಮಾತಿಗೊಳಗಾಗಿರುವುದನ್ನು ಕಂಡು ನಾನು ಬೆರಗಾಗಿದ್ದೇನೆ. ೧೧೧. ಸವಣರು ತಮ್ಮ ಮಾಯೆಯನ್ನು ಬೀಸಿ ಇತರರನ್ನು ಠಕ್ಕಗೊಳಿಸಿ ತಮ್ಮ ದೇವ ಕಾರ್ಯದಲ್ಲಿ ಸ್ವಲ್ಪವೂ ನೋಯದೆ ಉಪಾಯದಿಂದಲೇ ಸುಖವಾಗಿ ಜೀವಿಸುತ್ತಾರೆ. ಅವರ ಉಪಾಯವನ್ನು ನಿನ್ನ ಮನಸ್ಸಿನಲ್ಲಿಯೇ ಕೊಂಚ ಭಾವಿಸಿ ನೋಡು. ೧೧೨.

ಮಲಮಂ ಧರಿಯಿಸಿ ನಾಣಂ
ತೊಲಗಿಸಿ ನಿರ್ಗ್ರಂಥಮಿರ್ದು ಸೋಂಬಿಂ ಪಲ್ಲಂ
ಸುಲಿಯದೆ ಮಿಾಯದೆ ಮಿಳ್ಕದೆ ೧೧೩
ಕುಲದಿಂ ಕೆಟ್ಟವರವಣ್ಣ ನೀಂ ಮನ್ನಿಪುದೇ

ಗದ್ಯ॥ ಮತ್ತಂ ಭಾವಿಸುವೊಡವರ ಮಾಟಮೆಲ್ಲಂ ಕೊಟ್ ಕಾರಣಮಲ್ಲದೆ ಗತಿ ಕಾರಣ ಮಲ್ಲದು ; ಗತಿವಡೆವೆನೆಂಬುದು ಕಾಯಕ್ಲೇಶಂ ಬೇಟ್ಬುದು ; ಆ ಕಾಯಕ್ಲೇಶಂ ನಿಮ್ಮ ನಚ್ಚಿನ ಸವಣರ ಮೆಯ್ಯೊಳೆಳ್ಳನಿತುಮಿಲ್ಲ ; ನೀನವರುಮನವರ ದೈವಮುಮಂ ಕೊಂಡಾಡುವ ಮರುಳಾಟಕ್ಕೆನಗೆ ಪಿರಿದುಂ ವಿಸ್ಮಯಮಾದಪುದೆಂಬುದುಂ ದಯಾಮಿತ್ರಸೆಟ್ಟಿ ಮುಗುಳ್ನಗೆ ೧೧೪
ನಕ್ಕು ತನ್ನೊಳಿಂತೆಂದಂ

ಬೇಡಂ ಮಾಣಿಕಮೊಂದಂ
ಕಾಡೊಳ್ ಕಂಡೊರ್ಮೆ ಮೆಲ್ದು ಪಗಿನಲ್ಲೆಂದೀ
ಡಾಡಿದನೆಂಬೀನಾಣ್ನುಡಿ ೧೧೫
ನಾಡೆಯುಮೆಸೆದಪುದು ದುರಿತವಶದಿಂದಿವನೊಳ್

ಬೆಳಗಿನೊಳಂ ಕಾಣದು ನಿಶಿ
ಯೊಳ್ ಕಾಣ್ಬುದು ಪೆಗ್ಗಣಕ್ಕೆ ನಿರ್ಗುಣರ್ಗಂತು
ಜ್ಜ್ವಳ ಧರ್ಮಮನಱಿಯದೆಯು
ಮ್ಮಳಮಂ ಪೊರ್ದುವುದು ಜಡರ್ಗೆ ಸಹಜಮೆನಿಕ್ಕುಂ ೧೧೬

ಕೊಳೆಯನ್ನು ಧರಿಸುವಂತೆಮಾಡಿ ನಾಚಿಕೆಯನ್ನು ತೊಲಗಿಸಿ ಬೆತ್ತಲೆಯಿದ್ದು ಸೋಮಾರಿ ತನದಿಂದ ಹಲ್ಲನ್ನೂ ಉಜ್ಜದೆ, ಸ್ನಾನಮಾಡದೆ, ಕುಲಭ್ರಷ್ಟರಾದವರನ್ನು, ಅಣ್ಣಾ ನೀನು ಮನ್ನಿಸಬಹುದೆ ? ೧೧೩. ಇನ್ನೂ ಯೋಚಿಸಿದರೆ ಅವರ ಕೆಲಸವೆಲ್ಲ ಅನ್ನದ ನಿಮಿತ್ತವೇ ಹೊರತು ಸದ್ಗತಿಗಾಗಿ ಅಲ್ಲ ; ಸದ್ಗತಿ ಪಡೆಯುವೆನೆಂಬುದು ಕಾಯ ಕ್ಲೇಶ ವನ್ನು ಬಯಸುತ್ತದೆ. ಆ ಕಾಯಕ್ಲೇಶ ನಿಮ್ಮ ಪ್ರೀತಿಯ ಸವಣರಮೆಯ್ಯೊಳಗೇ ಸ್ವಲ್ಪವೂ ಇಲ್ಲ. ನೀನು ಅವರನ್ನೂ ಅವರ ದೇವರನ್ನೂ ಕೊಂಡಾಡುವ ಹುಚ್ಚುತನಕ್ಕೆ ನನಗೆ ಭಹಳ ಆಶ್ಚರ್ಯವಾಗಿದೆ. ಎಂದು ಹೇಳಲಾಗಿ, ದಯಾಮಿತ್ರ ಸೆಟ್ಟಿ ಮುಗುಳು ನಗೆಯನ್ನು ಬೀರಿ ತನ್ನೊಳಗೇ ಹೀಗೆ ಎಂದುಕೊಂಡನು. ೧೧೪. ಬೇಡನು ಮಾಣಿಕ್ಯ ವೊಂದನ್ನು ಕಾಡಿನಲ್ಲಿ ಕಂಡು ಒಮ್ಮೆಮೆದ್ದು ಇದು ಹಣ್ಣಲ್ಲವೆಂದು ಬಿಸಾಡಿದನೆಂಬ ಗಾದೆಯು ಪಾಪವಶದಿಂದ ಇವನಿಗೆ ಅನ್ವಯಿಸುತ್ತಿದೆ. ೧೧೫. ಹೆಗ್ಗಣಕ್ಕೆ ಹಗಲು ಹೊತ್ತು ಕಾಣಿಸುವುದಿಲ್ಲ ; ರಾತ್ರಿಯಲ್ಲಿ ಕಾಣಿಸುತ್ತದೆ. ಗುಣಹೀನರಿಗೆ, ದಡ್ಡರಿಗೆ, ಉಜ್ವಲಧರ್ಮವನ್ನು ತಿಳಿಯದೆ ಮನಸ್ಸಿನಲ್ಲಿ ಸಂಕಟಪಡುವುದು ಸ್ವಾಭಾವಿಕ. ೧೧೬. ಕಪ್ಪೆ ಸಾಗರವನ್ನು ಕಂಡಿಲ್ಲ. ಅದರಿಂದ ಸಮುದ್ರಕ್ಕೆ ಕುಂದೆ ? ಗೂಬೆ ಚಿಂಡ

ಅಱಿಯದು ಕಪ್ಪೆ ಸಾಗರಮನಂಬುಧಿಗಂತದು ಕುಂದೆ ಗೂಗೆ ಕಂ
ಡಱಿಯದು ಚಂಡರೋಚಿಯಿನಿನಂಗದು ಭಂಗಮೆ ನೋಡೆ ಕಾಗೆ ಕಂ
ಡಱಿಯದು ಚಂದ್ರನಂ ಸಸಿಗೆ ಹೀನಮೆ ಸಜ್ಜನರೊಳ್ಪನಿಂ
ತಱಿಯದೆ ದೂರ್ತನಿಂ ಪಱಿಯೆ ಕಪ್ಪತೆ ಸಾರ್ಗುಮೆ ದಿವ್ಯರಪ್ಪರಂ ೧೧೭

ಗದ್ಯ॥ ಮದ್ದುಕುಣಿಕೆಯುಂ ತಿಂದಂಗೆ ಕಲ್ಲುಂ ಮಣ್ಣುಂ ಮರನುಂ ಪೊಂಬಣ್ಣಮಾಗಿ ತೋರ್ಪಂತೆ ಕರ್ಮದ ತೀವ್ರತೆಯಿಂದೀಪಾರ್ವಂಗೆ ಲೌಕಿಕಧರ್ಮಮೆ ಧರ್ಮಮಾಗಿ ತೋರ್ಪುದದು ಕಾರಣದಿಂ ಸದ್ಧರ್ಮಮನೊರ್ಮೆಯೆ ಪೇಟ್ದಿನಪ್ಪೊಡೆ ಪಿತ್ತಜ್ವರಮುಳ್ಳವಂಗೆ ಕುದಿವ ಪಾಲನೆಱೆವಂತಾನುಂ ಶಿಶುವಿನ ಕೈಯ್ಯೊಳ್ ಮಸೆದ ಬಾಳಂ ಕೊಟ್ಟಂತಾನುಂ ಕಪಿಯ ಕೊರಲೊಳ್ ಪೂಮಾಲೆಯಿಕ್ಕಿದಂತಾನುಮಕ್ಕುಮದಱಿಂದುಪಾಯದೊಳೆ ತಿಳಿಪಲ್ವೇ ಟ್ಕುಮೆಂದು ದಯಾಮಿತ್ರಸೆಟ್ಟಿ ಪತ್ತೆಂಟು ದಿವಸಂ ಪೋಗಲಿ? ಮತ್ತೊಂದು ದಿವಸಂ ೧೧೮

ಬರಿಸಿ ವಸುಭೂತಿಯುಂ ವಿ
ಷ್ಟರಮಂ ಕುಡವೇಟ್ದು ಪಿರಿದು ಮನ್ನಣೆಯಿಂದಾ
ದರದಿಂ ವೀಳಯಮಂ ಕ
ರ್ಪುರ ಸಹಿತಂ ಕೊಟ್ಟು ವೈಶ್ಯಸುತನಿಂತೆಂದಂ ೧೧೯

ಕಿರಣನನ್ನು (ಸೂರ್ಯ) ಕಾಣದು. ಆದರಿಂದ ಸೂರ್ಯನಿಗೇನು ಕೊರತೆ ? ಹಾಗೆಯೇ ಕಾಗೆ ಚಂದ್ರನನ್ನು ನೋಡಿ ಅರಿಯದು. ಆದರಿಂದ ಚಂದ್ರನಿಗೇನು ಹೀನಾಯ? ಸಜ್ಜನರ ಒಳ್ಳೆಯತನವನ್ನು ತಿಳಿದುಕೊಳ್ಳದೆ ಹೀಗೆ ಧೂರ್ತತನದಿಂದ ದೂಷಿಸಿದರೆ ದಿವ್ಯರಾದ ವರಿಗೆ ನೀಚತನವುಂಟಾಗುವುದಿಲ್ಲ. ೧೧೭. ಗದ್ಯ॥ ಮದ್ದುಗುಣಿಕೆಯನ್ನು ತಿಂದವನಿಗೆ ಕಲ್ಲುಮಣ್ಣುಗಳೂ ಮರಗಳೂ ಹೊಂಬಣ್ಣವಾಗಿಯೇ ಕಾಣಿಸುವ ಹಾಗೆ ಕರ್ಮಫಲದ ತೀವ್ರತೆಯಿಂದ ಈ ಹಾರುವನಿಗೆ ಲೌಕಿಕ ಧರ್ಮವೇ ಧರ್ಮವಾಗಿ ತೋರುತ್ತಿದ್ದೆ. ಆ ಕಾರಣದಿಂದ ಇವನಿಗೆ ಒಡನೆಯೇ ಸದ್ಧರ್ಮವನ್ನು ಹೇಳಿದರೆ ಪಿತ್ತಜ್ವರವಿರುವನಿಗೆ ಕುದಿಯುವ ಹಾಲನ್ನು ಕೊಟ್ಟಂತೆಯೂ ಮಗುವಿನ ಕೈಗೆ ಮಸೆದ ಕತ್ತಿಯನ್ನು ಕೊಟ್ಟಂತೆಯೂ ಕಪಿಯ ಕೊರಳಿಗೆ ಹೂಮಾಲೆಯನ್ನು ಹಾಕಿದಂತೆಯೂ ಆಗುವುದು, ಆದ್ದರಿಂದ ಉಪಾಯದಿಂದಲೇ ತಿಳಿಸಬೇಕು ಎಂದು ದಯಾಮಿತ್ರ ಸೆಟ್ಟಿ ಆಗ ಏನೂ ಹೇಳದೆ ಹತ್ತೆಂಟುದಿನ ಕಳೆದ ಮೇಲೆ ಮತ್ತೊಂದು ದಿನ ೧೧೮. ವಸುಭೂತಿಯನ್ನು ಬರಮಾಡಿಕೊಂಡು ಅವನಿಗೆ ಒಂದು ಆಸನವನ್ನು ಕೊಡಲು ಹೇಳಿ ಬಹಳ ಮನ್ನಣೆ ಯಿಂದಲೂ ಆದರದಿಂದಲೂ ಕರ್ಪೂರವೀಳ್ಯವನ್ನು ಕೊಟ್ಟು ಆ ವೈಶ್ಯಪುತ್ರನು ಹೀಗೆಂದನು. ೧೧೯. ಭಟ್ಟರೆ, ಕೇಳಿ ನಿಮ್ಮನ್ನು ಬಿಟ್ಟರೆ ಸತ್ಕುಲಜರಾದವರು ಬೇರೆ

ಭಟ್ಟರೆ ಕೇಳಿಂ ನಿಮ್ಮಿಂ
ಬಟ್ಟು ಕಿಲರ್ಕುಲಜರೊಳರೆ ನಂಬಿದೆನೀಗಳ್
ನೆಟ್ಟನೆ ನಿಮ್ಮಿಂ ಸುಗತಿಯ
ಬಟ್ಟೆಯ ತೆಱನಱಿಯಲಾಯ್ತು ಪುಣ್ಯೋದಯದಿಂ ೧೨೦

ಗದ್ಯ॥ ಎಂಬುದುಂ ವಸುಭೂತಿ ಮಹಾಭೂತಿವೆತ್ತಂತೆ ಮನದೊಳ್ ಪೆರ್ಚಿ ದಯಾಮಿತ್ರ ಸೆಟ್ಟಿ ಮೆಲ್ಲನಿಂತೆಂದಂ ೧೨೧

ಎಮ್ಮನ್ವಯದಿಂ ಬಂದುದು
ತಾಮ್ಮಿಗಿಲಪ್ಪೊಂದು ನೋಂಪಿಯಾ ನೋಂಪಿಯುಮಂ
ನಾಮ್ಮಱೆದೆಂ ಸಂತತಮೆಂ
ತೆಮ್ಮಯ್ಯಂ ನೋಂಪನಂತು ನೋನುತುಮಿರ್ಪೆಂ ೧೨೨

ಗದ್ಯ॥ ಅದೆಂತೆಂದೊಡೆ ಮನೋಜಮದಹರನುಂ ಸುರಾಸುರ ಮಕುಟತಟಘಟಿತಚರಣಾರವಿಂದನುಮಪ್ಪರ್ಹತ್ಪರಮೇಶ್ವರನೆಮ್ಮನ್ವಯದಿ ಬಂದ ಕುಲದೈವಮಿಷ್ಟದೈವಮುಮಪ್ಪುದಱಿಂ ಜಿನೇಶ್ವರಸಾಕ್ಷಿಯಾಗಿ ಮಹರ್ಷಿಯರ್ಕಳಿಂ ನೋನಿಸಿ ಬೇಟ್ಟುದಂ ಕುಡುವೆ ನೀಗಳ್ ಆ ನೋಂಪಿಯಂ ನೋಂಪಕಾಲವಾಸನ್ನಮಾಯ್ತೀಯವಸರದೊಳ್ ಋಷಿಯರಾರುಮಿಲ್ಲ. ಇಲ್ಲದೊಡೇನಾಯ್ತು ೧೨೩

ಇದ್ದಾರೆಯೆ ? ಈಗ ತಟ್ಟನೆ ನಿಮ್ಮಿಂದ ಸದ್ಗತಿಯ ದಾರಿಯನ್ನು ಪುಣ್ಯೋದಯದಿಂದ ತಿಳಿದೆ. ೧೨೦. ಎಂದು ಹೇಳುತ್ತಲೂ ವಸುಭೂತಿ ಮಹಾಮಹಿಮೆಯನ್ನು ಹೊಂದಿದವನಂತೆ ಮನಸ್ಸಿನಲ್ಲಿ ಉಬ್ಬಿಹೋಗಲು ದಯಾಮಿತ್ರ ಸೆಟ್ಟಿ ಮೆತ್ತಗೆ ಹೀಗೆ ನುಡಿದನು. ೧೨೧. ನಮ್ಮ ವಂಶಕ್ಕೆ ಬಂದ ಒಂದು ಶ್ರೇಷ್ಠವಾದ ವ್ರತವಿದೆ. ಆ ನೋಂಪಿಯನ್ನು ನಾನು ಮರೆತಿದ್ದೆ. ನಮ್ಮ ತಂದೆ ಆ ವ್ರತವನ್ನು ಹೇಗೆ ಆಚರಿಸುತ್ತಿದ್ದನೋ ನಾನೂ ಹಾಗೆಯೇ ಆಚರಿಸುತ್ತಿದ್ದೇನೆ. ೧೨೨. ಅದು ಹೇಗೆಂದರೆ, ಮನ್ಮಥನ ಅಹಂಕಾರವನ್ನಿಳಿಸಿದವನೂ ಸುರಾಸುರರ ಕಿರೀಟಗಳಿಗೆ ಚರಣ ತಾಕಿಸಿದವನೂ ಆದ ಅರ್ಹತ್ಪರಮೇಶ್ವರನು ನಮ್ಮ ವಂಶದಲ್ಲಿ ಬಂದ ಕುಲದೈವ, ಇಷ್ಟದೈವವೂ ಹೌದು. ಆದರಿಂದ ಜಿನೇಶ್ವರನ ಸಾಕ್ಷಿಯಾಗಿ ಮಹರ್ಷಿಗಳಿಂದ ವ್ರತವನ್ನು ಮಾಡಿಸಿ ಅವರು ಬೇಡಿದುದನ್ನು ಕೊಡುತ್ತೇನೆ. ಈಗ ವ್ರತದ ಕಾಲ ಹತ್ತಿರಕ್ಕೆ ಬಂತು. ಋಷಿಗಳು ಯಾರೂ ಇಲ್ಲ. ಇಲ್ಲದಿದ್ದರೇನಾಯಿತು ? ೧೨೩. 'ಹಾಲೇ ಮದ್ದು' ಎಂಬಂತೆ ಲೋಕ

ಪಾಲೇಮರ್ದಂಬಂತಿರೆ
ಭೂಲೋಕಸ್ತುತ್ಯರಪ್ಪ ನಿಮ್ಮನ್ನೊರ್ವರ್
ಸಾಲದೆ ಜಗದೊಳ್ ನೀವಿರೆ
ಮೇಲೆನಿಸುವರಾರೊ ಕುಲದೊಳಂ ಶೀಲದೊಳಂ ೧೨೪

ನಿತ್ತರಿಸದೆ ಬಲ್ಪೊಱೆಯೊಳ್
ಮತ್ತೆನಿಸದೆ ಬಿರ್ದೊಡಣ್ಣ ಸಹವಾಸಿಯೆ ಬಂ
ದೆತ್ತುವುದುಳಿದವರಱಸಿಯು
ಮೆತ್ತಲ್ ಕೇಳಾಗದೆಂಬ ನಿಯಮಮುಮುಂಟೇ ೧೨೫

ಗದ್ಯ॥ ಅದರಿಂದೆಮಗೆ ರಿಸಿಯರಲ್ಲದೆ ಪೆಱರಾಗದೆಂಬ ನಿಯಮವಿಲ್ಲ ; ಅದಂ ಬಗೆವೊಡವರಿಂ ನೀವೆಮಗೆ ಸಹಸ್ರಮಡಿಯಪ್ಪುದಱಿಂ ನಿಮಗೆ ಮಾಡಿದ ದಾನಮುಂ ಪಾಲುಕ್ಕಿಮ್ಮಡಿಸುವಂತಿ ಮ್ಮಡಿಯಕ್ಕುಮದು ಕಾರಣದಿನಿಲ್ಲಿ ನೋಂಪಿಯುಂ ನೋಂತು ನೋಂಪಿಯ ತದನಂತರಂ ಬೇಟ್ಪನಿತು ದಕ್ಷಿಣೆಯುಂ ಬೇಡಿಕೊಳ್ಳಿಮೆನೆ ಸೆಟ್ಟಿಯ ಮಾತಿಂಗೆ ವಸುಭೂತಿ ಮನದೊಳ್ ಗುಡಿ ಗಟ್ಟಿ ೧೨೬

ಬಿತ್ತರದಿಂ ಕುರುಡಂ ಕ
ಣ್ಪೆತ್ತಂತಿರೆ ರಾಗಮೊದವೆ ಬೆಳೆವೆಣ್ ಪೆಣ್ಣಂ
ಪೆತ್ತಂತಿರೆ ಪಾರ್ವಂ ಮು
ಣ್ಪೆತ್ತಂತಿರೆ ಪಿರಿದು ಸಂತಸಂ ಮಿಗೆ ಮನದೊಳ್ ೧೨೭

ಸ್ತುತ್ಯರಾದ ನಿಮ್ಮಂಥವರೊಬ್ಬರು ಸಾಲದೆ ? ನೀವಿರಲು ಜಗದಲ್ಲಿ ಕುಲಶೀಲಗಳಲ್ಲಿ ನಿಮಗಿಂತ ಮೇಲೆನಿಸಿಕೊಳ್ಳುವವರು ಯಾರು ? ೧೨೪. ದೊಡ್ಡ ನದಿಯನ್ನು ದಾಟಲಾರದೆ ಬಿದ್ದರೆ, ಅಣ್ಣ, ಸಹವಾಸಿಯೇ ಬಂದು ಎತ್ತಬೇಕು, ಬೇರೆಯವರನ್ನು (ಮತ್ತೆನಿಸದೆ ?) ಹುಡುಕಿ ಎತ್ತುವಂತೆ ಕೇಳಲಾಗದು. ಹಾಗೆ ಕೂಡದೆಂಬ ನಿಯಮ ವಿದೆಯೆ ? ೧೨೫ ಆದ್ದರಿಂದ ನಮಗೆ ರಿಸಿಯರೇ ಆಗಬೇಕು, ಇತರರು ಆಗಬಾರ ದೆಂಬ ನಿಯಮವಿಲ್ಲ. ಹಾಗೆ ಯೋಚಿಸುವುದಾದರೆ ನೀವು ಅವರಿಗಿಂತ ಸಾವಿರ ಪಟ್ಟು ಹೆಚ್ಚು. ಆದ್ದರಿಂದ ನಿಮಗೆ ಮಾಡಿದ ದಾನ ಹಾಲುಉಕ್ಕಿ ಇಮ್ಮಡಿಸುವಂತೆ ಇಮ್ಮಡಿ ಯಾಗುವುದು. ಆದ್ದರಿಂದ ಇಲ್ಲಿ ವ್ರತವನ್ನು ಮಾಡಿ, ಅನಂತರ ನಿಮಗೆ ಬೇಕಾದಷ್ಟು ದಕ್ಷಿಣೆಯನ್ನು ಕೇಳಿರಿ. ಎನ್ನಲು ಸೆಟ್ಟಿಯ ಮಾತಿಗೆ ವಸುಭೂತಿ ಮನಸ್ಸಿನಲ್ಲಿಯೇ ಬಹಳ ಉತ್ಸಾಹಪಟ್ಟು ೧೨೬. ಕುರುಡನಿಗೆ ಕಣ್ಣು ಬಂದ ಹಾಗೆ ಹರ್ಷವಾಗಲು, ಸೂಳೆ ಹೆಣ್ಣನ್ನು ಹೆತ್ತ ಹಾಗೆ, ಬ್ರಾಹ್ಮಣ ಭೂಮಿಯನ್ನು ಪಡೆದ ಹಾಗೆ, ಬಹಳ ಸಂತೋಷವಾಗಲು ೧೨೭. ಮದ್ದನ್ನು ಅಗೆಯಲು ಹೋದವನು ನಿಧಿಯನ್ನು

ಗದ್ಯ॥ ಮರ್ದನಗಳಲ್ಲೋದಂ ನಿಧಿಗಂಡಂತೆ ಪೆರ್ಚಿ ಕರಮಶುಚಿಗಳಪ್ಪ ಸವಣರ್ಗೆ ಕುಡು ವಾತನೆಮ್ಮನ್ನರಪ್ಪ ಸದ್ಬ್ರಾಹ್ಮಣರ್ಗೆ ಕುಡುವನೆಂಬುದಾವ ಚೋದ್ಯಂ ೧೨೮

ಒದವಿದ ಪೊನ್ನಪ್ಪೊಡೆ ಜೋ
ಳದ ರಾಸಿಯವೊಲಿರ್ಪುದಿಲ್ಲಿ ತಾನೇನಂ ಬೇ
ಡಿದೊಡಂ ಬೇಡಿದುದಂ ಕುಡು
ವುದು ಪುಸಿಯೇ ವೈಶ್ಯನಂದನಂ ಪುಸಿದಪನೇ ೧೨೯

ಕರವೊಳ್ಳಿತಾಯ್ತು ಪರದನ
ನೆರವಿಂ ಮೆಟ್ಟಿತ್ತಲತ್ತ ಚಪ್ಪಟೆಯೆಂಬಂ
ತಿರಲಾಂ ಬೇಟ್ಪನಿತರ್ಥಂ
ದೊರಕೊಂಡಪುದಾನೆ ಧನ್ಯಂ ಭೂತಳದೊಳ್ ೧೩೦

ನೆರಪಲ್ಬಾರದ ವಿತ್ತಂ
ದೊರೆಕೊಂಡುದು ನೆಲೆಗೆ ಪೋಗಿ ಮಕ್ಕಳೊಳಂ ಪೆಂ
ಡಿರೊಳವೊಡಗೂಡಿ ಸುಖದಿಂ
ಚರಿಯಿಸುವೆಂ ಮೆಚ್ಚಿದಂದದಿಂ ಭೋಗಿಸುವೆಂ ೧೩೧

ಗದ್ಯ॥ ಎಂದು ಮನದೊಳ್ ಪಾಲ್ಗುಡಿದು ನೋಂಪಿಯಂ ನೋಂಪ ಕ್ರಮಮಂ ಪೇಟಿಮೆನೆ ವೈಶ್ಯವಂಶಲಲಾಮನಿಂತೆಂದನಾ ನೋಂಪಿ ತೀರ್ವನ್ನಂ ಗ್ರಾಸದೊಳ್ ಕಳಪೆಯ ಕೂಟಂ ತೀದುಪ್ಪಮಂ ಪೆಟಿರೊರ್ವರ್ಬಡಿಸೆ ಕೈಯೊಳ್ ಮೋನದಿಂದುಂಡು ೧೩೨

ಕಂಡ ಹಾಗೆ ಉಬ್ಬಿ ಬಹಳ ಅಶುಚಿಗಳಾದ ಸವಣರಿಗೆ ಕೊಡುವವನು ನಮ್ಮಂಥ ಒಳ್ಳೆಯ ಬ್ರಾಹ್ಮಣರಿಗೆ ಕೊಡುವುದೇನಾಶ್ಚರ್ಯ ? ೧೨೮. ಲಭಿಸಿದ ಹಣವಾದರೋ ಇಲ್ಲಿ ಜೋಳದರಾಸಿಯಂಹಾಗಿದೆ. ನಾನು ಏನು ಕೇಳಿದರೂ ಕೊಡುವುದು ಸುಳ್ಳೆ ? ಈ ವೈಶ್ಯಪುತ್ರನು ಸುಳ್ಳಾಡುವನೆ ? ೧೨೯. ಬಹಳ ಒಳ್ಳೆಯದಾಯಿತು. ವರ್ತಕನ ಸಹಾಯದಿಂದ, ಮೆಟ್ಟು ಇತ್ತಲಾಗಿ ಅತ್ತ ಚಪ್ಪಟೆ, ಎಂಬಂತೆ ನಾನು ಬೇಡುವಷ್ಟು ಧನ ಲಭಿಸುತ್ತವೆ. ಪ್ರಪಂಚದಲ್ಲಿ ನಾನೇ ಧನ್ಯ. ೧೩೦. ಶೇಖರಿಸ ಲಾಗದಷ್ಟು ಹಣ ಸಿಕ್ಕುತ್ತದೆ. ನನ್ನ ಊರಿಗೆ ಹೋಗಿ ಮಕ್ಕಳು ಮಡದಿಯರೊಡನೆ ಸುಖದಿಂದ ಬಾಳುತ್ತ ಇಷ್ಟಬಂದ ಭೋಗಗಳನ್ನು ಅನುಭವಿಸುತ್ತೇನೆ. ೧೩೧. ಎಂದು ಮನಸ್ಸಿನಲ್ಲಿಯೇ ಹಾಲು ಕುಡಿದು ಇನ್ನು ವ್ರತವನ್ನು ಆಚರಿಸುವ ಕ್ರಮವನ್ನು ಹೇಳಿರೆನ್ನಲು ವೈಶ್ಯವಂಶಾಲಂಕಾರನು ಹೀಗೆಂದನು. ವ್ರತ ಮುಗಿಯುವವರೆಗೂ ಆಹಾರ ದಲ್ಲಿ ನೆಲ್ಲಕ್ಕಿಯ ಅನ್ನವನ್ನೂ ಶುದ್ಧವಾದ ತುಪ್ಪವನ್ನೂ ಬೇರೊಬ್ಬನು ಬಡಿಸಲು ಕೈಲಿ ಸ್ವೀಕರಿಸಿ ಮೌನದಿಂದ ಊಟಮಾಡಿ ೧೩೨. ಮೂರನೆಯದಿನ ಆ ಹೊತ್ತಾಗುವ

ಮಱುದಿನಮಾಪೊತ್ತಪ್ಪಿನ
ಮಱಿಕೆಯ ನೀರೂಟ ತಂಬುಲಂಗಳ ಮಾತಂ
ತೊಱೆದು ಮತಿಮಱೆದು ಮನೆಯೊಳ್
ಪೊಱಮಡದೋದುತ್ತುಮಿರ್ಪುದಿರುಳುಂ ಪಗಲುಂ ೧೩೩

ಗದ್ಯ॥ ಮತ್ತಂ ನೋಂಪಿಯ ಪ್ರಾರಂಭದೊಳಂ ನೆಱವಿಯೊಳಂ ಮಂದರದಂತೆ ಧೈರ್ಯಂ ಬೆರಸು ಲಾಭಂಬೆತ್ತ ಪರದನಂತುತ್ಸಾಹಂಬೆರಸು ಪಂದೆಯಂತು ನೋವಿಂಗಳ್ಕದೆ ತಣಿಯುಂಡನಂತೆ ಸಾಲ್ಗುಮೆನ್ನದೆ ದೃಢಚಿತ್ತದಿಂದಿರ್ದು ತಲೆಯ ರೋಮಂಗಳೆಲ್ಲಮಂ ಪಱಿಯಿಸಿ ರಾಗದಿನೆಮಗೀವುದಿತ್ತು ಮನದೊಳುಮ್ಮಳಿಸದೊಂದೆಡೆಯೊಳ್ ಮುನ್ನಿನ ವಿನೋದಂಗಳಂ ಮಱೆದಪ್ಪೊಡಂ ನೆನೆಯದೆ ಸ್ವಾಧ್ಯಾಯ ಪರನಾಗಿ ಬೀಡಿನೊಳಾದಿನಿತಕ್ಕಂ ವಿಸ್ಮಯಕ್ಕಂ ವಸ್ತ್ರಕ್ಕಮಪೇಕ್ಷೆಯಿಂದೆಳಸದಿಂತೆರಡು ತಿಂಗಳ್ವರಂ ಎಮ್ಮ ಪೇೞ್ದೀಜೆಯಿಂ ಕ್ರಮಂದಪ್ಪದೆ ನೋಂಪುದೆಂದು ಪೇೞ್ವುದುಂ ೧೩೪

ಸಲೆ ಮಱೆಯೊಳ್ಪಡುವುದು ಮೈ
ಮಲವೇಱಿತ್ತೆಂದು ಮಿಾಯಲಾಗದು ಪಲ್ಲಂ
ಸುಲಿಯದೆ ವನಿತೆಯರಂ ಪಂ
ಬलिಸದೆ ತಲ್ಲಣಿಸದಿರ್ಪುದತ್ಯುತ್ಸವದಿಂ ೧೩೫

ತನಕ ನೀರು, ಊಟ, ತಾಂಬೂಲಗಳ ಮಾತನ್ನು ತೊರೆದು ಬುದ್ಧಿಮರೆತುಕೊಡ ಮನೆಯಿಂದ ಹೊರಗೆ ಹೋಗದೆ, ಓದುತ್ತ ಹಗಲೂ ರಾತ್ರಿ, ಹೊತ್ತು ಕಳೆಯಬೇಕು. ೧೩೩. ಅಲ್ಲದೆ ವ್ರತದ ಮೊದಲಲ್ಲಿಯೂ ಅಂತ್ಯದಲ್ಲಿಯೂ ಮಂದರಪರ್ವತದಂತೆ ಧೈರ್ಯದಿಂದ ಕೂಡಿ ಲಾಭಪಡೆದ ವರ್ತಕನಂತೆ ಉತ್ಸಾಹದಿಂದ, ಹೇಡಿಯು ಹಾಗೆ ನೋವಿಗೆ ಅಂಜದೆ, ತೃಪ್ತಿಯಾಗಿ ತಿಂದವನಹಾಗೆ 'ಸಾಕು' ಎನ್ನದೆ, ದೃಢಮನಸ್ಸಿನಿಂದಿದ್ದು ತಲೆಯ ಕೂದಲುಗಳನ್ನೆಲ್ಲ ಸಂತೋಷದಿಂದ ತೆಗೆಸಿ ನಮಗೆ ಕೊಡುವುದು, ಕೊಟ್ಟು ಮನಸ್ಸಿನಲ್ಲಿ ಸಂಕಟಪಡದೆ ಒಂದು ಮರೆಯಲ್ಲಿ ಮಲಗಿಕೊಳ್ಳುವುದು. ಮೈ ಕೊಳೆಯಾಯಿತೆಂದು ಸ್ನಾನಮಾಡಲಾಗದು. ಹಲ್ಲನ್ನುಜ್ಜಬಾರದು. ಹೆಂಗಸಿಗೆ ಆಸೆಪಡಬಾರದು. ತಲ್ಲಣಗೊಳ್ಳದೆ ಬಹಳ ಸಂತೋಷದಿಂದ ಇರಬೇಕು ೧೩೪. ಸ್ಥಳದಲ್ಲಿ ಮೊದಲಿನ ವಿನೋದಗಳನ್ನು ಮರೆತುಕೊಡ ಸ್ಮರಿಸದೆ ವೇದಾಧ್ಯಯನಾಸಕ್ತವಾಗಿ ಬೀಡಿನೊಳಗಾಗಬಹುದಾದ ವಿನೋದ, ಆಶ್ಚರ್ಯ, ವಸ್ತ್ರ, ಯಾವುದಕ್ಕೂ ಆಸೆಪಡದೆ, ಹೀಗೆ ಎರಡು ತಿಂಗಳವರೆಗೆ ನಾವು ಹೇಳಿದ ಕ್ರಮದಲ್ಲಿ ಲೋಪವಿಲ್ಲದಂತೆ ಆಚರಿಸಬೇಕೆಂದು ಸೆಟ್ಟಿ ಹೇಳುತ್ತಲಿರಲು ೧೩೬. ರಹಸ್ಯವನ್ನು ತಿಳಿಯದೆ ಚಂಚಲ ಚಿತ್ತನಾದ

ಒಳಗಱಿಯದನಿತುವಂ ಪಂ
ಚಲಚಿತ್ತಂ ಮಾಟ್ಪೆನೆಂದು ಪೂಣ್ದಂ ತನ್ನೊಂ
ದಳವಱಿಯದೆ ಕಡುಲೋಭದಿ .
ನೆಳಗಱು ಭಯಮಱಿಯದೆಂಬವೊಲ್ಲದ್ವಿಪ್ರಂ ೧೩೬

ಆರಯ್ದು ನೋಡಿ ನಗುವವ
ರಾರೆನ್ನಂ ದೂರದೇಶವಮಾಂ ನೋಂಪೆನಿದಂ
ಸೈರಣೆಯಿಂ ಚಿಂಬೊಂಗಳ
ನೋರಂತಿರೆ ಬೇಡಿಕೊಳ್ವೆನೆನ್ನಾರ್ಪನಿತಂ ೧೩೭

ಉಸಿರದೆ ಗಳಿಗೆವರಂ ಸೈ
ರಿಸಿ ತಲೆಯಂ ಪಱಿಸಿಕೊಂಡು ಚಿಂಬೊನ್ನಂ ಸಂ
ತಸದಿಂ ಕೈಕೊಳ್ವೆಂ ಭಾ
ವಿಸುವೊಡೆ ತಲೆಯಲ್ಲಿ ಮತ್ತೆ ಪುಲ್ಮೊಳೆದಪುದೆ ೧೩೮

ಉಂಬುದು ಕಳವೆಯ ಕೂಟ್ಗಡ
ತಂಬುಲಮಿರ್ಪೊತ್ತಿನುಣಿಸು ಮಿಾಹಂ ಕೇಳಿ
ಲ್ಲೆಂಬೆನಿತೆ ಗಡಂ ತಿಂಗಳು
ಮೆಂಬುದು ತಾಂ ದೂರವಾಯ್ತೆ ಪೇಟ್ೀಂ ಗಹನಂ ೧೩೯

ಆ ಬ್ರಾಹ್ಮಣನು ತನ್ನ ಸಾಮರ್ಥ್ಯವನ್ನೂ ತಿಳಿದುಕೊಳ್ಳದೆ ಬಹಳ ಆಸೆಯಿಂದ ಎಳೆಯ ಕರು ಭಯವನ್ನರಿಯದೆಂಬ ಹಾಗೆ ಎಲ್ಲವನ್ನೂ ಮಾಡುವೆನೆಂದು ಪ್ರತಿಜ್ಞೆ ಮಾಡಿದನು. ೧೩೬. ಗಮನಿಸಿ ನೋಡಿ ನಗುವವರು ಯಾರಿದ್ದಾರೆ ? ಇದು ದೂರ ದೇಶ. ನಾನು ಈ ನೋಂಪಿಯನ್ನು ನಡೆಸುತ್ತೇನೆ. ಸೈರಣೆಯಿಂದ ನನಗೆ ಶಕ್ತಿಯಿದ್ದಷ್ಟು ಕೆಂಪನೆಯ ಹೊನ್ನಿನ ನಾಣ್ಯಗಳನ್ನು ಕೇಳಿ ಪಡೆದುಕೊಳ್ಳುತ್ತೇನೆ. ೧೩೭. ಹೀಗೆ ಯೋಚಿಸಿ ಒಂದುಗಳಿಗೆ ಕಾಲ ಸಹಿಸಿಕೊಂಡು ಉಸಿರಾಡದೆ ತಲೆಹರಿಸಿಕೊಂಡು ಸಂತೋಷದಿಂದ ಹೊನ್ನನ್ನು ಪಡೆದುಕೊಳ್ಳುತ್ತೇನೆ. ಯೋಚಿಸಿದರೆ ತಲೆಯಲ್ಲಿ ಮತ್ತೆ ಹುಲ್ಲು ಮೊಳೆಯುತ್ತದೆಯೆ ? ೧೩೮. ಊಟಮಾಡುವುದು ನೆಲ್ಲಕ್ಕಿಯ ಅನ್ನವಲ್ಲವೆ ? ತಾಂಬೂಲ, ಎರಡು ಹೊತ್ತಿನ ಊಟ, ಸ್ನಾನ, ಇಲ್ಲ, ಎಂಬಿಷ್ಟೇ ಅಲ್ಲವೆ? ತಿಂಗಳೆಂಬುದೇನು ದೂರವಾಯಿತೆ ? ಹೇಳು, ಏನು ಕಷ್ಟ? ೧೩೯. ಎಂದು ತನ್ನೊಳಗೇ ಉತ್ಸಾಹಪಡುತ್ತಿರಲಾಗಿ ಆ ವರ್ತಕ

ಗದ್ಯ॥ ಎಂದು ತನ್ನೊಳೆ ರಾಗಿಸುತ್ತಿರೆ ಆವಣೆಗ್ವಂಶ ಲಲಾಮಂ ಬೀಡನುಪ್ಪಯಣಂ ಮಾಡಿ ಮುಱುದಿವಸಂ ಸಮಸ್ತ ದುರಿತವಿಳಯನಪ್ಪ ಜಿನಸ್ವಾಮಿಗೆ ತೂರ್ಯರವಮೆಸೆಯೆ ಮಹಾಭಿಷೇಕ ಪೂಜೆಯುಂ ಮಾಡಿಸಿ ವಸುಭೂತಿಯುಂ ಬಡಗಮುಖನಾಗಿ ಕುಳ್ಳಿರಿಸಿ ೧೪೦

ತಲೆಯಂ ಬಲುದಡಿಗರ್ಕಿಳೆ
ನಿಲಲಾಱದೆ ಸುಂಟಿದಿಂದ ಕೋಡಗದಂತು
ಮ್ಮಳಿಸಿ ಕಳವಳಿಸಿ ನೋವಿಂ
ತಲೆಯಂ ತಿರಿಪುತ್ತುಮಂಜಿ ಕೆಟ್ಟೆನೆನುತ್ತುಂ ೧೪೧

ನಡುಗೆ ಶರೀರಂ ಪಲ್ಲಂ
ಗಿಡಿಗಿಱಿದಿರ್ದೆಗೂಡುವಾಯೆ ಪಂದೆಯ ಮೇಲ್ಪಾ
ವಡರ್ದಂತಿರೆ ದೇಹಂ ಮರ
ವಡೆ ಕಣ್ಣೀರ್ಸುರಿಯೆ ತಳದಿನದನೊತ್ತುತ್ತುಂ ೧೪೨

ಬಿಡದೌಡುಗರ್ಚಿನೋವಿಂ
ದಡಿಗಡಿಗಹಹಾಯೆನುತ್ತುಮೆಡಗಯ್ಯಿಂದಂ
ತಡವರಿಸುತ್ತುಂ ಸಾಸವೆ
ಗುಡಿದಂತಿರೆ ಕರಮೆ ಮಱುಗಿ ತಳವೆಳಗಾದಂ ೧೪೩

ಗದ್ಯ॥ ಮತ್ತಂ ಕುದುರೆಯೇರ್ದ ಕುಱುಂಟನಂತೆ ನಡುಗುತ್ತುಂ ಪೆಣನಂ ಕಂಡ ಪಂದೆಯಂತೆ ಕಣ್ಣಂ ಮುಚ್ಚುತ್ತುಂ ಬಿನ್ನಪಂಗೆಯ್ವ ವೊಕ್ಕಲಿಗನಂತೆ ಬಿಕ್ಕುತ್ತುಂ ಸಾಕ್ಷಿಯಿಲ್ಲದೆ

ವಂಶಾಲಂಕಾರನು ಪ್ರಯಾಣವನ್ನು ತಡೆದು ಸಮಸ್ತಪಾಪಗಳಿಗೂ ಪ್ರಳಯ ಸ್ವರೂಪನಾದ ಜಿನಸ್ವಾಮಿಗೆ ವಾದ್ಯಘೋಷದ ನಡುವೆ ಮಹಾಭಿಷೇಕ ಮತ್ತು ಪೂಜೆಯನ್ನು ಮಾಡಿಸಿ ವಸುಭೂತಿಯನ್ನು ಉತ್ತರಾಭಿಮುಖನಾಗಿ ಕೂಡಿಸಿ ೧೪೧. ಬಲಿಷ್ಠರಾದ ಧಾಂಡಿಗರು ತಲೆಕೂದಲುಗಳನ್ನು ಕೀಳಲು. ನಿಲ್ಲಲಾರದೆ ಶುಂಠಿಯನ್ನು ತಿಂದ ಕಪಿಯ ಹಾಗೆ ಸಂಕಟಪಟ್ಟು ನೋವಿನಿಂದ ತಲೆಯನ್ನು ತಿರುಗಿಸುತ್ತ ಅಂಜಿ 'ಕೆಟ್ಟೆ' ಎಂದು ಕೊಳ್ಳುತ್ತ ೧೪೧. ದೇಹ ನಡುಗುತ್ತಿರಲು ಹಲ್ಲುಗಳನ್ನುಗಟ್ಟಿಯಾಗಿ ಕಚ್ಚಿಕೊಳ್ಳುತ್ತ ಎದೆಗೂಡು ಹೊಡೆದುಕೊಳ್ಳುತ್ತಿರಲು ಹೇಡಿಯ ಮೇಲೆ ಹಾವು ಹತ್ತಿದ ಹಾಗೆ ದೇಹ ಮರವಟ್ಟು ಕಣ್ಣೀರು ಸುರಿಯಲು ಅದನ್ನು ಅಂಗೈಯಿಂದ ಒತ್ತಿಕೊಳ್ಳುತ್ತ ೧೪೨. ಗಟ್ಟಿಯಾಗಿ ತುಟಿಕಚ್ಚಿಕೊಂಡು ನೋವಿನಿಂದ ಪದೇ ಪದೇ 'ಅಹಹಾ' ಎನ್ನುತ್ತ ಎಡಗೈಯಿಂದ ತಡವಿಕೊಳ್ಳುತ್ತ ಸಾಸವೆಯನ್ನು (ಅರೆದು) ಕುಡಿದ ಹಾಗೆ ಹೆಚ್ಚಾಗಿ ಸಂಕಟಪಟ್ಟು ತಳವೆಳಗಾದನು. ೧೪೩. ಅಲ್ಲದೆ, ಕುದುರೆಯೇರಿದ ಕುರುಬನ ಹಾಗೆ ನಡುಗುತ್ತ, ಪೆಣವನ್ನು ಕಂಡ ಹೇಡಿಯಂತೆ ಕಣ್ಣು ಮುಚ್ಚುತ್ತ, ಬಿನ್ನಹ ಮಾಡಿಕೊಳ್ಳುವ ಒಕ್ಕಲಿಗನಂತೆ ಬಿಕ್ಕುತ್ತ, ಸಾಕ್ಷಿಯಿಲ್ಲದೆ ಸಾಲಕೊಟ್ಟ ಒಕ್ಕಲಿಗನಂತೆ

ಸಾಲಂಗೊಟ್ಟೊಕ್ಕಲಿಗನಂತೆ ಸುಯ್ಯುತ್ತುಂ ಸಿಕ್ಕಿದ ಕಳ್ಳನಂತೆ ಪಲವಂ ನೆನೆಯುತ್ತುಂ ಗ್ರಹಪೀಡಿತನಂತೆ ತೊನೆಯುತ್ತುಂ ಪೇನುಳ್ಳನಂತೆ ತಲೆಯಂ ತುಱಿಸುತ್ತುಂ ಕಱು ಸತ್ತಾವಿನಂತೆ ಮಱುಗುತ್ತುಂ ಕಾಯ್ ಸತ್ತ ಶಿಶುವಿನಂತೆ ಬಾಯ್ಬಿಡುತ್ತುಂ ಕಿಸಱಿೊಳ್ ಬಿದ್ದನಂತೆ ಮಿಡುಕುತ್ತುಂ ಮಗನಿಲ್ಲದರ್ಥಪತಿಯಂತೆ ಬೆದಬೆದೆ ಬೇಯುತ್ತುಂ ಸೂಲವೇಱಿದನಂತೆ ಕಾಲಂ ನೀಡುತ್ತುಂ ಕೂಟ್ಟಡೆಯದನಂತೆ ಬಂಬಲ್ಬಾಡುತ್ತುಂ ಮುಳ್ವೊಕ್ಕವನಂತೆ ಕುಸಿಯುತ್ತುಂ ಸೂಲೆಯುಳ್ಳವನಂತೆ ಕವಿದು ಬೀೞುತ್ತುಂ ಮೋನಂಗೊಂಡ ಚಪಳನಂತುಮ್ಮಳಿಸುತ್ತುಂ ಚಿತ್ತದೊಳುಳ್ಳುಳ್ಕುತ್ತುಂ ನಿಲಲ್ಬಾರದೆನಿಸುವ ನೋವಿಂಗೆ ಬೆಬ್ಬಳವೋಗಿ ಬಾಳ ಮೊಹಕ್ಕೆ ಶಿಶುವಂ ಪಿಡಿದರೆಂಬ ನಾಣ್ಣುಡಿಯಂತೆ ಪೊನ್ನಮೋಹಕ್ಕೆ ಮನಮಂ ಬಲ್ವಿಡಿದು ನಿಶ್ರೇಯಸಶ್ರೀಯ ವಿವಾಹಗೇಹದ ಭೂಮಿಶೋಧನೆಯೆನಿಪ ಲೋಚನೆಂತಾನುಂ ಸೈರಿಸಿ ೧೪೪

ವಿನಯ ಪಯೋನಿಧಿ ಸತ್ಯದ
ಮನೆಯೆನಿಸಿದ ಸೆಟ್ಟಿ ಪೇಟ್ದ ಮಾರ್ಗದೊಳಂತಂ
ದಿನದಿನಮುಪವಾಸಮನಿ
ರ್ದನುನಯದಿಂದದೇಕ ಚಿತ್ತದಿಂ ಮಱುದಿವಸಂ ೧೪೫

ನಿಟ್ಟುಸಿರುಬಿಡುತ್ತ, ಸಿಕ್ಕಿಬಿದ್ದ ಕಳ್ಳನ ಹಾಗೆ ಹಲವನ್ನು ಯೋಚಿಸುತ್ತ, ಪಿಶಾಚಿ ಹಿಡಿದವನಂತೆ ತೂಗಾಡುತ್ತ, ಹೇನಿರುವವನಂತೆ ತಲೆತುರಿಸಿಕೊಳ್ಳುತ್ತ, ಕರು ಸತ್ತ ಹಸುವಿನಂತೆ ಸಂಕಟಪಡುತ್ತ, ತಾಯಿಸತ್ತಮಗುವಿನಂತೆ ಬಾಯಿ ಬಿಡುತ್ತ, ಕೆಸರಿನಲ್ಲಿ ಬಿದ್ದವನ ಹಾಗೆ ಮಿಡುಕುತ್ತ, ಮಗನಿಲ್ಲದ ಶ್ರೀಮಂತನಂತೆ ಬೆದಬೆದೆ ಬೇಯುತ್ತ, ಶೂಲವೇರಿದವನಂತೆ ಕಾಲುಗಳನ್ನು ನೀಡುತ್ತ ಅನ್ನ ಪಡೆಯದಿದ್ದವನ ಹಾಗೆ ವಿಶೇಷವಾಗಿ ಬಾಡಿ ಬತ್ತುತ್ತ, ಮುಳ್ಳು ಹೊಕ್ಕವನಂತೆ ಕುದಿಯುತ್ತ, ಶೂಲೆಯುಳ್ಳವನ ಹಾಗೆ ಮುದುರಿಕೊಂಡು ಬೀಳುತ್ತ, ಮೌನವಹಿಸಿದ ಚಪಲನ ಹಾಗೆ ಸಂಕಟ ಪಡುತ್ತ, ಚಿತ್ತದಲ್ಲಿ ಒಳಗೇ ಹೆದರುತ್ತ, ನಿಲ್ಲಲಾಗದೆನ್ನಿಸುವಂಥ ನೋವಿಗೆ ಗಾಬರಿಯಾಗಿ, ಕತ್ತಿಯ ಮೇಲಿನ ಮೋಹಕ್ಕೆ ಶಿಶುವನ್ನು ಹಿಡಿದರೆಂಬ ಗಾದೆಯ ಹಾಗೆ, ಹೊನ್ನಿನ ಮೇಲಿನ ಮೋಹಕ್ಕೆ ಮನಸ್ಸನ್ನು ಬಲವಾಗಿ ಹಿಡಿದು, ಮೋಕ್ಷಲಕ್ಷ್ಮಿಯ ಮದುವೆಯ ಮಂಟಪಕ್ಕಾಗಿ ಮಾಡುವ ಭೂಶೋಧನೆಯೆನ್ನಿಸುವ ಲೋಚನ್ನು ಹೇಗೋ ಸಹಿಸಿಕೊಂಡು ೧೪೪. 'ವಿನಯಸಮುದ್ರನು' 'ಸತ್ಯದಮನೆ' ಎನ್ನಿಸಿಕೊಂಡ ಸೆಟ್ಟಿ ಹೇಳಿದ ದಾರಿಯಲ್ಲಿ ಆತನು ದಿನ ದಿನವೂ ಉಪವಾಸವಿದ್ದು ಸಮಾಧಾನದಿಂದಲೂ ಒಂದೇ ಮನಸ್ಸಿನಿಂದಲೂ ಮರುದಿನ ೧೪೫. ತಾನು ಬೇಡದೆ ಇದ್ದ ವ್ರತವಾದ್ದರಿಂದ

ಗದ್ಯ॥ ಆಯಾಚಿತವ್ರತಮಪ್ಪುದಱಿಂ ಸೆಟ್ಟಿ ನಿಱಿಸೆ ಮನೆಗೆ ಪೋಗಿ ವೈಶ್ಯೋತ್ತಮಂ ಪೇೞ್ದೋಜೆಯಿಂ ನಿಂದಿರ್ದು ಪಾಣಿಪಾತ್ರೆಯೊಳ್ ಶರ್ಕರೆವೆರಸಿದ ಪಾಲಂ ಕುಡಿದು ತದನಂತರಂ ೧೪೬

ಸೊಗಯಿಪ ಘೃತಪೂರಂ ಹೋ
ಳಿಗೆ ಮಂಡಗೆ ತಱಿಗು ನಾಡೆ ರುಚಿವೆರಸಿದ ಲ
ಡ್ಡುಗೆ ಚಕ್ಕುಲಿಗಾರಿಗೆ ಪೂ
ರಿಗೆ ಮೊದಲಾಗಿರ್ದ ಪಲವು ಭಕ್ಷ್ಯಮನಾಗಳ್ ೧೪೭

ಗದ್ಯ॥ ಆಜ್ಯಯುತಮಪ್ಪುವಂ ಮೆಲ್ದು ತೊಱೆಯೊಳ್ ಪೋಪವಂಗೆ ತೆಪ್ಪವನಿಕ್ಕಿದಂತಿಕ್ಕಿದ ಗಟ್ಟಿಗೊಂಡ ಬಲ್ಮೊಸರಂ ಕೊಂಡು ಪದುಳಿಸಿ ನಿಂದ ಬಳಿಕ್ಕಂ ೧೪೮

ಕಳವೆಯ ಕೂೞ್ಮಗಮಗಿಸುವ
ಶಿಳಿದುಪ್ಪಂ ತಿವುಡುಗಳೆದ ಪೊಂಬೆಸಱ ಮಹೋ
ಜ್ವಳಮಪ್ಪ ಕಂಪಿನಿಂಪಿನ
ನಿಳಯಮೆನಿಸಿರ್ದ ಸವಿಯಿನೊದವಿದ ತೊವೆಯುಂ ೧೪೯

ಗದ್ಯ॥ ಅಂತಮೃತದೊಳ್ ಮಚ್ಚರಿಸುವ ರಸಾಯನದೊಳ್ ಪುರುಡಿಸುವ ದಿವ್ಯಾಹಾರಮಂ ಕೆಯ್ಯೊಳಿಕ್ಕುವುದುಮಾ ಕಂಠಂ ಉಂಡು ಬೞಲ್ಕೆವೋಗಿರ್ಪುದುಂ ೧೫೦

ಸೆಟ್ಟಿ ಏರ್ಪಡಿಸಿದಂತೆ ಅವನ ಮನೆಗೆ ಹೋಗಿ ವೈಶ್ಯೋತ್ತಮನು ಹೇಳಿದ ಕ್ರಮದಲ್ಲಿ ನಿಂತಿದ್ದು ಕೈಪಾತ್ರೆಯಲ್ಲಿ ಸಕ್ಕರೆ ಬೆರೆಸಿದ ಹಾಲನ್ನು ಕುಡಿದು ಆದಾದಮೇಲೆ ೧೪೬. ಶ್ರೇಷ್ಠವಾದ ತುಪ್ಪದ ಧಾರೆ, ಹೋಳಿಗೆ, ಮಂಡಿಗೆ, ತಱಿಗು ಮತ್ತು ಚೆನ್ನಾಗಿ ರುಚಿಯಿಂದ ಕೂಡಿದ ಲಾಡು, ಚಕ್ಕುಲಿ, ಗಾರಿಗೆ, ಪೂರಿ ಮೊದಲಾದ ಪಲವು ಭಕ್ಷ್ಯಗಳನ್ನು ಆಗ ೧೪೭. ತುಪ್ಪದಿಂದ ಕೂಡಿದವುಗಳನ್ನು ಮೆದ್ದು ನದಿಯಲ್ಲಿ (ತೇಲಿ) ಹೋಗುತ್ತಿರುವವನಿಗೆ ತೆಪ್ಪವನ್ನು ಕೊಟ್ಟಹಾಗೆ ಕೊಟ್ಟ ಗಟ್ಟಿಯಾದ ಒಳ್ಳೆಯ ಮೊಸರನ್ನು ಸ್ವೀಕರಿಸಿ ಸುಧಾರಿಸಿಕೊಂಡು ನಿಂತ ಬಳಿಕ ೧೪೮. ನೆಲ್ಲಕ್ಕಿಯ ಅನ್ನ ಘಮಘಮಿಸುವ ಶುದ್ಧವಾದ ತುಪ್ಪ ಹೊಟ್ಟು ಕಳೆದ ಹೊಂಬಣ್ಣದ ಹೆಸರು (ಬೇಳೆ) ಮಹತ್ತರವಾದ ಪರಿಮಳದ ಇಂಪಿನ ಮನೆಯೆನಿಸಿದ್ದ ಸವಿಯನ್ನು ಒದಗಿಸುವ ತೊವ್ವೆಯನ್ನು ೧೪೯. ಹಾಗೆ ಅಮೃತದ ಸಂಗಡ ಸ್ಪರ್ಧಿಸುವ, ರಸಾಯನವನ್ನು ಮೀರಿಸುವಂಥ ದಿವ್ಯನಾದ ಆಹಾರವನ್ನು ಕೈಯಲ್ಲಿ ಇಕ್ಕಲು ಕಂಠಪೂರ್ತಿಯಾಗಿ ತಿಂದು ಬಳಲಿಹೋಗಿರುವಾಗ ೧೫೦.

ಬಾಳೆಯ ಕರ್ಜೂರದ ಕಿ
ತ್ತಿಳೆಯ ಕಂಚಿಯ ಮರದ ರಂಜಿಪ ಸಿಹಿಮಾವಿನ ಪೇ
ರಳೆಯ ನಾರಂಗದ ಕಂ
ಚಿಳೆಯ ತನಿವಣ್ಣನಿಕ್ಕೆ ಮೆಲ್ದಾದರದಿಂ ೧೫೧

ಗದ್ಯ॥ ಕಯ್ಯಂ ಕರ್ಚಿಕೊಂಡು ತಣ್ಗಿರಗದ ತಣ್ಗೋಡು ವಾಲಿ ನೀರಂ ಆರ್ಪನಿತಂ ಕುಡಿದು ಸಂತೋಷದಿಂ ನುಡಿದು ದಯಾಮಿತ್ರ ಸೆಟ್ಟಿಯಧ್ಯಕ್ಷಂಬೆರಸು ವಿಹಾರಕ್ಕೆ ಬಂದು ಕಾಷ್ಠಾಸನ ದೊಳ್ ಕುಳ್ಳಿರ್ದು ತನ್ನೊಳ್ ೧೫೨

ಇವು ಲೇಸವು ಲೇಸೆಂಬೀ
ವಿವರದೊಳೇಂ ಸಕಲ ಭಕ್ಷ್ಯಮುಂ ಬಾಡುಗಳುಂ
ಸವಿಯೊಳ್ ಸಾಸಿರಮಡಿ ಮಿ
ಕ್ಕುವು ಭಾವಿಸಿ ನೋಟ್ಪೊಡಿಂದ್ರನುಣ್ಬಮೃತಮುಮಂ ೧೫೩

ಗದ್ಯ॥ ಎಂದು ತನ್ನೂಟಂ ತನಗೆ ಜನ್ಮಾಪೂರ್ವಮಪ್ಪುದಱಿಂ ಮಹಾವಿಸ್ಮಯಂಬಟ್ಟು ಇರುಳ್ಕಂಡ ಕನಸುಗಳಂ ಪಗಲ್ನೆನೆವಂತೆ ನೆನೆಯುತ್ತುಂ ಪಗಲೆಲ್ಲಂ ಸಂತಸದಿಂದಿರ್ದು ನೇಸರ್ಪ ಟ್ಟೊಂದು ಜಾವಕ್ಕೆ ತೊಟ್ಟನೆ ೧೫೪

ಅಸದಳಮೆನಿಸುವ ತೀವ್ರದ
ತೃಷೆ ಮೊಕ್ಕಳಮಾಗೆ ನಾಡೆಯುಂ ಮನದೊಳ್ಸೈ
ರಿಸಲಾರದೆ ತಲ್ಲಣದಿಂ
ಬಿಸುಸುಯ್ದುಮ್ಮಳಿಸಿ ಬಾಟಲರಿದಾಯ್ತೆನುತುಂ ೧೫೫

ಬಾಳೆ, ಖರ್ಜೂರ, ಕಿತ್ತಿಳೆ, ಕಂಚಿಯ (ಮರದ) ಸಿಹಿಮಾವಿನ, ಪೇರಳದ, ನಾರಂಗದ, ಹೇರಳೆ, ತನಿಯಾದ ಹಣ್ಣುಗಳನ್ನು ಆದರದಿಂದ ಬಡಿಸಲು ಮೆದ್ದು ೧೫೧. ಕೈತೊಳೆದು ಕೊಂಡು ತಣ್ಣಗಿರುವ ಆಲಿಕಲ್ಲಿನ ನೀರನ್ನು ಆದಷ್ಟೂ ಕುಡಿದು ಸಂತೋಷದಿಂದ ಮಾತನಾಡಿ ದಯಾಮಿತ್ರಸೆಟ್ಟಿಯ ಅಧ್ಯಕ್ಷತೆಯಲ್ಲಿ ವಿಹಾರಕ್ಕೆ ಬಂದು ಮರದ ಪೀಠದ ಮೇಲೆ ಕುಳಿತು ತನ್ನೊಳಗೇ ೧೫೨. 'ಇವು ಚೆನ್ನ ಅವು ಚೆನ್ನ' ಎಂಬ ಈ ವಿವರದಲ್ಲೇನು ? ಎಲ್ಲ ಭಕ್ಷ್ಯಗಳೂ ವ್ಯಂಜನಗಳೂ ರುಚಿಯಲ್ಲಿ ಯೋಚಿಸಿ ನೋಡಿ ದರೆ ಇಂದ್ರನು ಉಂಬ ಅಮೃತವನ್ನೂ ಸಾವಿರ ಪಟ್ಟು ಮೀರಿದವು ೧೫೩. ಎಂದು ತನಗೆ ಅಂದು ದೊರೆತ ಊಟ ತನ್ನ ಜನ್ಮದಲ್ಲಿಯೇ ಅಪೂರ್ವವಾದ್ದರಿಂದ ಮಹಾ ಆಶ್ಚರ್ಯಪಟ್ಟು ಇರುಳು ಕಂಡ ಕನಸುಗಳನ್ನು ಹಗಲು ನೆನೆಸುವಂತೆ ಸ್ಮರಿಸುತ್ತ ಹಗಲೆಲ್ಲ ಸಂತೋಷವಾಗಿದ್ದು ಸೂರ್ಯ ಮುಳುಗಿದ ಒಂದು ಜಾವಕ್ಕೆ ಇದ್ದಕ್ಕಿದ್ದಹಾಗೆ ೧೫೪. ಅಸಾಧ್ಯವಾದ ತೀಕ್ಷ್ಣವಾದ ಬಾಯಾರಿಕೆ ಹೆಚ್ಚಾಗಲು ಮನಸ್ಸಿನಲ್ಲಿ ಸಹಿಸಲಾರದೆ ಗಾಬರಿಯಿಂದ ನಿಟ್ಟುಸಿರುಬಿಡುತ್ತ ಸಂಕಟಪಟ್ಟು ಜೀವಿಸಲು ಅಸಾಧ್ಯವಾಯಿತೆನ್ನುತ್ತ ೧೫೫, ಕೋತಿಯನ್ನು ಹಲ್ಲಿನಲ್ಲಿ ಮುಚ್ಚಲು ಸಿಡಿಮಿಡಿಗೊಳ್ಳುವಂತೆ ಸಿಡಿಮಿಡಿ

ಗದ್ಯ॥ ಕೋಡಗಮಂ ಪುಲ್ಲೊಳ್ ಮುಚ್ಚಿ ಸಿಡಿಮಿಡಿಗೊಂಬಂತೆ ಸಿಡಿಮಿಡಿಗೊಳುತ್ತುಂ ಪೆಱರ್ಗೆ ಪೇಟಲಂಜಿ ಲಜ್ಜೆಯಿಂ ಮೂಗಿಯ ಕೋಗಿಲೆಯಂತೆ ಬಾಯುವಿಟ್ಟಾಡದೆ ಮಳಲೇಱಿಯಂತೆ ಜಱ್ರನೆ ಜರಿದು ೧೫೬

ಬಿಡುಗುಂ ಬಾಯುಂ ನೆಲದೊಳ್
ಪಡುಗುಂ ಪೊಱಗಣ್ಗೆ ಪೋಗಿ ತಣ್ಣಪ್ಪೆಡೆಯೊಳ್
ಪಡುಗುಂ ತಂಪಿಲ್ಲದೊಡೆರ್ದೆ
ಗಿಡುಗುಂ ವಸುಭೂತಿ ಧೈರ್ಯಮಿಲ್ಲದೆ ಮನದೊಳ್ ೧೫೭

ಗದ್ಯ॥ ತರುವಲಿಯ ತಲೆಯ ಕಿರೀಟಮನಾಲಿಕಲ್ಲ ಮೞೆಕೊಂಡುದೆಂಬಂತೆನಗೀ ಮುನ್ನಿನಿರುಳ್ಗಳಂ ನೋಡಲಿಂದಿನಿರುಳ್ಪಿರಿದಾಯ್ತೋವೊ ಕೆಟ್ಟೆನೆಂದು ೧೫೮

ನೀರೞ್ಕೆ ಪೆರ್ಚೆ ನಿಲಲುಂ
ಸೈರಿಸಲುಂ ಬಾರದಳ್ಕಿ ತನ್ನಿಂದಂ ತಾ
ನೋರಂತೆ ಕುದಿದು ಮಱುಗುವ
ಸಾರಂಗದ ಪೋಱಿಯಂದಮಂ ನೆಱೆ ಪೋಲ್ತಂ ೧೫೯

ಗದ್ಯ॥ ಅಂತಿರುಳ್ ನಾಲ್ಕು ಜಾವಮುಂ ಮೌಹೂರ್ತಿಕನಂತೆ ಪೊತ್ತಿನಳವಿಯುಂ ನೋಡುತ್ತುಂ ಪೆರ್ಬಾವಿನಂತೆ ಮಂಡಲಂಗೊಳ್ಳುತ್ತುಂ ಜಾವದ ಕಾಪಿನವರಂತೇೞುತ್ತುಂ ಜಂಘಾಬಲಮಿಲ್ಲದನಂತೆ ಕುಳ್ಳಿರುತ್ತುಂ ಮರುಳನಂತೆ ತನ್ನೊಳ್ತಾನೆ ನುಡಿಯುತ್ತುಂ ಮೞೆಯುಂ

ಗೊಳ್ಳುತ್ತ ಇತರರಿಗೆ ಹೇಳಲು ಹೆದರಿ ನಾಚಿಕೆಯಿಂದ ಮೂಗಿಯ ಕೋಗಿಲೆಯ ಹಾಗೆ ಬಾಯಿಬಿಟ್ಟು ಹೇಳದೆ ಮರಳಿನ ಕಟ್ಟೆಯ ಹಾಗೆ ಜರ್ರನೆ ಜರಿದು ೧೫೬. ಬಾಯಿ ಬಿಡುವನು, ನೆಲದಮೇಲೆ ಮಲಗುವನು, ಹೊರಗಡೆಗೆ ಹೋಗಿ ತಂಪಾದ ಸ್ಥಳದಲ್ಲಿ ಬಿದ್ದುಕೊಳ್ಳುವನು. ತಂಪಿಲ್ಲದಿದ್ದರೆ ಎದೆಗೆಡುವನು (ಅಂಜುವನು) ವಸುಭೂತಿ ಮನಸ್ಸಿನಲ್ಲಿ ಧೈರ್ಯವಿಲ್ಲದೆ ೧೫೭. 'ತಬ್ಬಲಿಯ ಕಿರೀಟವನ್ನು ಆಲಿಕಲ್ಲಿನ ಮಳೆ ಎಳೆದುಕೊಂಡಿತೆಂಬ ಹಾಗೆ ನನಗೆ ಇದಕ್ಕೆ ಮೊದಲಿನ ರಾತ್ರಿಗಳನ್ನು ನೆನೆಸಿಕೊಂಡರೆ ಇಂದಿನ ರಾತ್ರಿ ದೊಡ್ಡದಾಯಿತು. ಓವೊ ! ಕೆಟ್ಟೆ' ಎಂದು ೧೫೮. ನೀರಡಿಕೆ ಹೆಚ್ಚಲು ನಿಲ್ಲುವುದಕ್ಕೂ ಸೈರಿಸುವುದಕ್ಕೂ ಆಗದೆ ಸಂಕಟಪಟ್ಟು ತನಗೆ ತಾನೇ ಕುದಿದು ಮರುಗುವ ಸಾರಂಗದ ಮರಿಯನ್ನು ವಿಶೇಷವಾಗಿ ಹೋಲುತ್ತಿದ್ದನು ೧೫೯. ಹಾಗೆ ರಾತ್ರಿ ನಾಲ್ಕು ಜಾವಗಳನ್ನೂ ಮುಹೂರ್ತಗಳನ್ನು ಲೆಕ್ಕ ಹಾಕುವವನಂತೆ ಕಾಲದ ಅಳತೆಯನ್ನು ಗಮನಿಸುತ್ತ, ಹೆಬ್ಬಾವಿನಂತೆ ಚಕ್ರಾಕಾರವಾಗಿ ಮುದುರಿಕೊಳ್ಳುತ್ತ ಜಾವದ ಕಾವಲಿನವರಂತೆ ಏಳುತ್ತ, ಜಂಘಾಬಲವಿಲ್ಲದವನಂತೆ ಕುಳಿತುಕೊಳ್ಳುತ್ತ, ಹುಚ್ಚನ ಹಾಗೆ ತನ್ನಲ್ಲಿಯೇ ಮಾತನಾಡಿಕೊಳ್ಳುತ್ತ ಮಳೆಗೆ ಎದುರು ನೋಡುವ ಒಕ್ಕಲಿಗನಂತೆ

ಪಾರ್ವೊಕ್ಕಲಿಗನಂತೆ ಗಗನಮಂಡಲಮಂ ನೋಡುತ್ತುಂ ನೂತನ ಶ್ರೀಮಂತನಂತೆ ಮಯ್ಯಱಿಯದೆ ಬಳ್ಕುತ್ತುಂ ಚಾದಗೆಯಂತಾಕಾಸವನಿಗೆ ಬಾಯಂ ಬಿಡುತ್ತುಂ ದಾಹಜ್ವರಂಬೆತ್ತಂತೆ ಗಾಳಿಗಾಸೆಗೆಯ್ಯುತ್ತುಂ ಕಪ್ಪೆಯಂತೆ ತಣ್ಪಪ್ಪೆಡೆಯೊಳ್ ಪತ್ತುತ್ತುಂ ಚೊಚ್ಚಲ್ ಪೆಱುವಳಂತೆ ತೊಟಲುತ್ತುಂ ಪಲ್ಲಿಯಂತೆ ಕೇರಂ ಪತ್ತುತ್ತುಂ ಎಲೆವಳ್ಳಿಯಂತೆ ಕಂಬಮಂ ಸುತ್ತುತ್ತುಂ ಪಾದರಿಗೆಯಂತೆ ಪೆಱರ್ಗಂಜುತ್ತುಂ ಸೂಲೆವೆತ್ತರಂತೆ ಪೊರಳುತ್ತುಂ ಕಳ್ಗುಡಿದರಂತೆ ಮತಿಗಿಡುತ್ತುಂ ವೃದ್ಧನಂತೆ ತಡವರಿಸುತ್ತುಂ ಲತೆಯಂತಲ್ಲಾಡುತ್ತುಂ ಕಣ್ಗೊಳಿ ಬೆಳಗಾಗೆ ೧೬೦

ನಿಲಲಾಱದಲಸಿ ಪೋದೊಡೆ
ಪಲವುಂ ಪೊಂಬೊನ್ನಪಡಪು ಕೆಟ್ಟಪುದು ಕರಂ
ಕಲಿಯಾಗಿ ನಿಂದೆನಪ್ಪೊಡೆ
ನಿಲಲಾಱದು ನೀರ ದೆಸೆಯನುಱದಸುವಿನಿಸುಂ ೧೬೧

ಗದ್ಯ॥ ಎಂದೆರಕಕ್ಕೆ ಬಿಟ್ಟ ಕರುವಿನಂತೆ ಮಱುಗುವಂತೆ ಇರ್ದು ಮತ್ತಂ ದಯಾಮಿತ್ರಸೆಟ್ಟಿ ನಿಱಿಸೆ ಮನೆಗೆ ಪೋಗಿ ಮನದಕಾಂಕ್ಷೆಯಿಂ ಮುನ್ನಿನಂತುಂಡು ಮುನ್ನಿನ ಮಱುಕದಿಂದಿಮ್ಮಡಿ ಮಱುಕಮಾಗೆ ಮಱುದಿವಸಂ ಭಕ್ಷ್ಯದ ದೆಸೆಗೆ ಪಕ್ಷಂಗೆಟ್ಟು ಪಾಲಿಂಗೆ ಬೆರ್ಚಿ ತುಪ್ಪಕ್ಕಿನಿಸಪ್ಪೊಡಂ ಮನಂದರಲಾಱದೆ ತೃಷೆಯೊಳಾದ ಭೀತಿಯಿಂದೊಲ್ಲೆನೆಂಬುದುಂ ವೈಶ್ಯಲಲಾಮನಿಂತೆಂದಂ ೧೬೨

ಆಕಾಶಮಂಡಲವನ್ನು ನೋಡುತ್ತ, ಹೊಸದಾಗಿ ಹಣಗಾರರಾದವರಂತೆ ಮೈಮೇಲೆ ಎಚ್ಚರವಿಲ್ಲದೆ ಬಳುಕುತ್ತ, ಚಾತಕದ ಹಾಗೆ ಆಕಾಶದ ಹನಿಗೆ ಬಾಯಿಬಿಡುತ್ತ, ಸುಡುವ ಜ್ವರ ಬಂದವನಂತೆ ಗಾಳಿಗೆ ಆಸೆ ಪಡುತ್ತ, ಕಪ್ಪೆಯ ಹಾಗೆ ತಂಪಾದ ಸ್ಥಳಕ್ಕೆ ಹತ್ತುತ್ತ ಮೊದಲಸಾರಿ ಹೆರುವವಳಂತೆ ಒದ್ದಾಡುತ್ತ, ಹಲ್ಲಿಯ ಹಾಗೆ ಗೋಡೆ ಹತ್ತುತ್ತ, ಎಲೆ ಬಳ್ಳಿಯ ಹಾಗೆ ಕಂಬವನ್ನು ಸುತ್ತುತ್ತ, ಹಾದರಗಿತ್ತಿಯಂತೆ ಬೇರೆಯವರಿಗೆ ಹೆದರುತ್ತ ಶೂಲೆ ಬಂದವರಂತೆ ಹೊರಳುತ್ತ, ಹೆಂಡ ಕುಡಿದವರಹಾಗೆ ಬುದ್ಧಿ ಕಳೆದುಕೊಂಡು, ಮುದುಕನಂತೆ ತಡವರಿಸುತ್ತ ಬಳ್ಳಿಯಂತೆ ಅಲುಗಾಡುತ್ತ ಕಣ್ಣುಬಿಟ್ಟುಕೊಂಡಿರುವಂತೆಯೇ ಬೆಳಗಾಗಲು ೧೬೦. "ನಿಲ್ಲಲಾರದೆ ಸೋತುಹೋದರೆ ಅನೇಕ ಹೊನ್ನುಗಳ ಪ್ರಾಪ್ತಿ ತಪ್ಪಿಹೋಗುವುದು. ಬಹಳ ಧೈರ್ಯಮಾಡಿ ಶೂರನಂತೆ ನಿಂತೆನಾದರೆ ನೀರಿಗಾಗಿ ತಳಮಳಿಸುವ ಈ ಪ್ರಾಣ ಉಳಿಯಲಾರದು" ೧೬೧. ಎಂದು ಎರಕಕ್ಕೆ ಹೊಯ್ದ ಲೋಹದ ದ್ರವದಂತೆ ಕುದಿಯುತ್ತಿದ್ದು ಪುನಃ ದಯಾಮಿತ್ರಸೆಟ್ಟಿ ಏರ್ಪಡಿಸಿದಂತೆ ಮನೆಗೆ ಹೋಗಿ ಮನಸ್ಸಿನ ಆಸೆಯಂತೆ ಮೊದಲಿನ ಹಾಗೆ ಊಟಮಾಡಿ ಮೊದಲಿನ ಸಂಕಟದ ಎರಡರಷ್ಟು ಸಂಕಟವಾಗಲು ಮೂರನೆ ದಿನ ಭಕ್ಷ್ಯದ ಕಡೆ ಅಭಿಮಾನ ಕಳೆದುಕೊಂಡು, ಹಾಲಿಗೆ ಹೆದರಿ, ತುಪ್ಪಕ್ಕೆ ಸ್ವಲ್ಪವೂ ಮನವೊಲಿಯದೆ, ಬಾಯಾರಿಕೆಯ ಭಯದಿಂದ ಒಲ್ಲೆನೆನ್ನಲು ವೈಶ್ಯಶ್ರೇಷ್ಠನು ಹೀಗೆಂದನು ೧೬೨. 'ಹಾಗೆ ಹೀಗೆ' ಎನ್ನದೆ

ಅಂತಿಂತೆನ್ನದೆ ಮುಂ ಪೇ
ಳ್ದಂತುಸಿರದೆ ಮೋನದಿಂದಮುಣ್ಬುದು ನಾನೇ
ನಂ ತಂದಿಕ್ಕಿದೊಡಂ ಗುಣ
ವಂತರ್ಕುಲದೊಡೆಯರೆನಿಪ ನಿಮಗಿದು ಪಿರಿದೇ ೧೬೩

ಗದ್ಯ॥ ಅಱಿಪರಪ್ಪ ರಿಸಿಯರ್ಮೊದಲಾಗಿಯುಸಿರದೆಮ್ಮ ಪೇಳ್ದಂತೆ ಮೋನದಿಂದುಂಬ ರೆಂದೊಡೆ ಕುಲಜರುಂ ಭೂದೇವರುಮಪ್ಪ ನಿಮಗಿದಾವುದರಿದಾಯ್ತು ಸಿರದಿರಿಮೆಂಬುದುಂ ಮಱು ಮಾತುಗುಡಲಱಿಯದುಮ್ಮಳಿಸಿ ಬೆಮರ್ತುಸಿರದುಣುತ್ತುಮಿೀಮಾರ್ಗದಿಂದೇೞೆಂಟು ದಿವಸ ಮಿರ್ದಿರಲಾಱದೆ ತಲ್ಲಣಿಸಿ ನಿಂದುಣಿಸಿನಂದಕ್ಕಲಸಿ "ಕಯ್ಯೊಳುಂಬುದು ರಯ್ಯಮಲ್ಲದು; ಬತ್ತಲೆ ಯಿರವು ನಿತ್ತರಿಸಲರಿದು ; ನೆಲೆವಕ್ಕೆ ಸಲೆಕಷ್ಟಂ" ಎಂದು ಸೈರಣೆಗೆಟ್ಟು ೧೬೪

ನಸುಗುನ್ನಿ ಮುಟ್ಟಿದಂತಿರೆ
ಬಸಮಲ್ಲದೆ ತಿಂಬ ಮೆಯ್ಯತಿನಿಸಿಂಗಂ ಸೈ
ರಿಸಲಾಱದೆರಡು ಕಯ್ಯಿಂ
ಮಸಗಿ ಮನಂಗೆಟ್ಟುಮರುಳವೊಲ್ತುಱಿಸುತ್ತುಂ ೧೬೫

ಕುಂದದಿನಿಸಂ ಮನಕೆ ಬಂದುಣಿಸನುಂಡು ಪದ
ಪಿಂದೆ ಪೆಱತೇಂ ಕೆಱೆಗೆ ಪೋಗಿ ತಿಳಿನೀರಂ
ಮಿಂದು ಬಿಡದೂರೊಳಗಣೊಂದುಲಿವ ಮಾತುಗಳ
ದಂದುಗದೊಳಾರ್ತಸಗಿ ಕೂರ್ತಿರದೆ ನಿಚ್ಚಂ ೧೬೬

ಮೊದಲು ಹೇಳಿದ ಹಾಗೆ ಉಸುರದೆ ಮೌನವಾಗಿ ನಾನೇನು ತಂದು ಬಡಿಸಿದರೂ ಊಟ ಮಾಡಬೇಕು. ಗುಣವಂತರೂ ಕುಲವುಳ್ಳವರೂ ಆದ ನಿಮಗೆ ಇದು ದೊಡ್ಡದೆ? ೧೬೩. ಅಲ್ಪರಾದ ರಿಸಿಯರು ಮೊದಲುಗೊಂಡು ಎಲ್ಲರೂ ಮಾತನಾಡದೆ ನಾವು ಹೇಳಿದ ಹಾಗೆ ಮೌನದಿಂದ ಊಟಮಾಡುವರು ಎಂದಾಗ ಕುಲಜರೂ, ಭೂದೇವರೂ ಆದ ನಿಮಗೆ ಇದು ಯಾವ ಕಷ್ಟ ? ಸುಮ್ಮನಿರಿ. ಎನ್ನಲು ಉತ್ತರ ಹೇಳಲು ತಿಳಿಯದೆ ಸಂಕಟ ಪಟ್ಟು ಬೆವತುಹೋಗಿ, ಉಸಿರೆತ್ತದೆ ಊಟ ಮಾಡುತ್ತ, ಈ ರೀತಿಯಾಗಿ ಏಳೆಂಟು ದಿನಗಳಿದ್ದು ಇನ್ನು ಇರಲಾರದೆ ತಲ್ಲಣಗೊಂಡು ಊಟಕ್ಕೆ ಬೇಸರಿಸಿ "ಕೈಯಲ್ಲಿ ತಿನ್ನು ವುದು ಚನ್ನವಲ್ಲ. ಬತ್ತಲೆಯ ಸ್ಥಿತಿ ಸೈರಿಸಲಾಗದು. ನೆಲದಮೇಲೆ ಮಲಗುವುದು ಬಹಳ ಕಷ್ಟ" ಎಂದು ಸೈರಣೆಯನ್ನು ಕಳೆದುಕೊಂಡು ೧೬೪. ನಸಗುನ್ನಿತಗಲಿದ ಹಾಗೆ ಅಸಾಧ್ಯವಾದ ಮೈನವೆಗೂ ಸೈರಿಸಲಾರದೆ ಧೈರ್ಯ ಕಳೆದುಕೊಂಡು ಎರಡು ಕೈ ಯಿಂದಲೂ ರಭಸದಿಂದ ಹುಚ್ಚನಹಾಗೆ ಕೆರೆದುಕೊಳ್ಳುತ್ತ ೧೬೫. ಯಾವ ಕೊರತೆಯೂ ಇಲ್ಲವೆ ಮನಸ್ಸಿಗೆ ಒಪ್ಪಿದ ಊಟ ಮಾಡಿ ಸ್ವೇಚ್ಛೆಯಿಂದ ಕೆರೆಗೆ ಹೋಗಿ ತಿಳಿನೀರಿನಲ್ಲಿ ಸ್ನಾನಮಾಡಿ ಊರಿನ ಜನರ ವಾರ್ತೆಗಳನ್ನು ಕುರಿತು ಚರ್ಚಿಸುತ್ತ ಸಂತೋಷದಿಂದಿರದೆ ನಿತ್ಯವೂ ೧೬೬. ಒಂದೇ ಊಟದಿಂದ, ದೇಹದ ಒಂದು ನವೆಯಿಂದ, ಬಾಯಾರಿಕೆ

ನಿಂದುಣಿಸಿನಿಂದೊಡಲದೊಂದು ತಿನಿಸಿಂ ತೃಷೆಯ
ದೊಂದು ಕುದಿಪಿಂ ತಿಗುಳನಾಡಸೆಱೆಯಂತಾ
ನೊಂದಿದತಿದುಃಖದೊಳೆ ಬೆಂದುನಿಲಲಿನ್ನರಿದಿ
ದೆಂದು ವಸುಭೂತಿಸೆಡೆದಳ್ಕಿಬಡವಾದಂ ೧೬೭

ಗದ್ಯ॥ ಅಂತು ಬೆಗಡುಗೊಂಡು ನಿಲಲುಂ ನಿತ್ತರಿಸಲುಮಾಱದೆ ಗಾಳಿಗೊಡ್ಡಿದ ಸೊಡರಂತೆ ನಡುಗಿ, ಸೂಳೆಯ ಕೊರಳಂತೆ ಕರ್ಗಿ, ಪಿಡಿವೆತ್ತಕಳ್ಳನಂತೆ ತಲ್ಲಣಿಸಿ, ಬಡಿವೆತ್ತಬಡವನಂತೆ ಶಕ್ತಿಗೆಟ್ಟು, ಮಟದಬೆಕ್ಕಿನಂತೊಳಗಣ್ಗೋಡಿಯಾಡಿ, ಪಟದಸೀರೆಯಂತಲ್ಲಾಡಿ, ಒಲ್ಲದಪೆಂಡತಿಯಂತೆಸುಯ್ದು, ಮಲ್ಲರೊಳ್ತೊಡರ್ದರಂತೆತಳ್ಗಿ, ಗರ್ಭಿಣಿಯಾದ ರಂಡೆಯಂತೆ ಬಾಯಂಬಿಟ್ಟು, ಪರ್ವತವೇಱಿಬಿದ್ದರಂತೆ ನಿರ್ಜೀವನಾಗಿ, ಪಗಲಚಂದ್ರನಂತೆ ತೇಜಂಗೆಟ್ಟು, ಜಗಳಗಂಟಿಯಂತೆ ಮಿಡುಮಿಡುಮಿಡುಕಿ, ಬೇಸಗೆಯ ಕೋಣನಂತೆ ನಾಲಗೆಯನುರ್ಚಿಹಾಸುಗೊಂಡನಾಯಂತೆ ಸಿಡಿಮಿಡಿಗೊಂಡು, ಕಿಚ್ಚುತಗುಳ್ದಮರದಂತೆ ನಯಂಗೆಟ್ಟು, ಪೆಚ್ಚುಗೆಟ್ಟ ಬಡವನಂತೆ ಬೆಂಬಿರ್ದು, ದೆಸೆಗೆಟ್ಟರಂತೆ ಚಿಂತಿಸಿ, ಪಸುಗೆಟ್ಟರಂತೆ ಮಱುಗಿ, ಹುಣಿಸೆಯ ಕಾಯಂ ತಿಂದರಂತೆ ಚಳಿತು. ಪಣ್ತಕಬ್ಬಿನಂತೆ ನೆಲನಂಪತ್ತಿ, ಸೆಱೆಸಿಕ್ಕಿದನಂತುಮ್ಮಳಿಸಿ, ನೆಱವಿಲ್ಲದವನಂತೆಕುಂದಿ, ಕೂರ್ಪರನಗಲ್ದಱಂತೆ ಬೆದೆಬೆದೆಬೆಂದು, ಸರ್ಪನಂಮೆಟ್ಟಿದರಂತೆ ಭಯಂಗೊಂಡು, ಬಂಧನಕ್ಕೆಬಂದಾನೆಯಂತೆ

ಯಿಂದಾದ ಒಂದು ಸಂಕಟದಿಂದ, ತಿಗುಳ (ತಮಿಳ) ನಾಡಿನಲ್ಲಿ ಸೆಱೆಯಾದ್ದರಿಂದ ತಾನು ಹೊಂದಿದ ಅತಿ ದುಃಖದಲ್ಲಿಯೇ ಬೆಂದು ಇನ್ನು ನಿಲ್ಲಲಾಗದೆಂದು ವಸುಭೂತಿ ಬಹಳ ಅಂಜಿ ಬಡಕಲಾದನು. ೧೬೭. ಹಾಗೆ ಭೀತನಾಗಿ ನಿಲ್ಲಲೂ ಸಹಿಸಲೂ ಆಗದೆ, ಗಾಳಿಗಿಟ್ಟ ದೀಪದಂತೆ ನಡುಕ ಹೊಂದಿ, ಸೂಳೆಯ ಕೊರಳಿನ ಹಾಗೆ ಕಪ್ಪಾಗಿ ಹಿಡಿಯು ಪಟ್ಟ ಕಳ್ಳನಂತೆ ತಲ್ಲಣಿಸಿ, ಹೊಡೆತ ತಿಂದ ಬಡವನಂತೆ ಶಕ್ತಿಗುಂದಿ, ಮಠದ ಬೆಕ್ಕಿನ ಹಾಗೆ ಒಳಗಡೆಯೇ ಓಡಾಡಿ, ಧ್ವಜದ ಬಟ್ಟೆಯಂತೆ ಅಲ್ಲಾಡಿ, ಪ್ರೀತಿಸದ ಹೆಂಡತಿಯಂತೆ ನಿಟ್ಟುಸಿರುಬಿಡುತ್ತ, ಜಟ್ಟಿಗಳಲ್ಲಿ ಜಗಳ ಕಟ್ಟಿಕೊಂಡವರಂತೆ ತಗ್ಗಿ, ಬಸಿರಿಯಾದ ರಂಡೆಯ ಹಾಗೆ ಬಾಯಿಬಿಟ್ಟು, ಬೆಟ್ಟ ಹತ್ತಿ ಬಿದ್ದವನಂತೆ ನಿರ್ಜೀವನಾಗಿ, ಹಗಲು ಹುಟ್ಟಿದ ಚಂದ್ರನಂತೆ ತೇಜಸ್ಸನ್ನು ಕಳೆದುಕೊಂಡು, ಕಲಹಶೀಲಳಂತೆ ವಿಶೇಷವಾಗಿ ಮಿಡುಕುತ್ತ, ಬೇಸಗೆಯ ಕೋಣನ ಹಾಗೆ ನಾಲಗೆಯನ್ನು ಚಾಚಿ, ಕಟ್ಟಿಹಾಕಿದ ನಾಯಿಯ ಹಾಗೆ ಸಿಡಿಮಿಡಿಗೊಂಡು, ಬೆಂಕಿಹತ್ತಿದ ಮರದ ಹಾಗೆ ಅಂದವನ್ನು ಕಳೆದುಕೊಂಡು, ನಂಬಿಕೆಕಳೆದುಕೊಂಡ ಬಡವನ ಹಾಗೆ ಆಶ್ರಯಿಸಿ, ದಿಕ್ಕೆಟ್ಟವರ ಹಾಗೆ ಚಿಂತಿಸಿ, ಮಗು ಕಳೆದು ಹೋದವರಂತೆ ಮರುಗಿ, ಹುಣಿಸೆಕಾಯಿತಿಂದವನಂತೆ ಹಲ್ಲುಂಚುಳ್ಳೆನುತ್ತಿರಲು, ಹಣ್ಣಾದಕಬ್ಬಿನಂತೆ ನೆಲಕ್ಕೆ ಬಿದ್ದು, ಸೆರೆಸಿಕ್ಕಿದವನ ಹಾಗೆ ಸಂಕಟಪಟ್ಟು, ಸಹಾಯವಿಲ್ಲದವನಂತೆ ಕುಂದಿ, ಪ್ರೀತಿಪಾತ್ರರನ್ನು ಅಗಲಿದವರಂತೆ ವಿಶೇಷವಾಗಿ ಸಂಕಟಪಟ್ಟು, ಹಾವು ತುಳಿದವರ ಹಾಗೆ ಭಯಪಟ್ಟು, ಕಟ್ಟಿಗೆ ಸಿಕ್ಕಿದ ಆನೆಯಂತೆ ತೂಗಾಡುತ್ತ,

ಜೂಕರಿಸಿ, ಬಡವೊಡಲಂತೆಜೋಲ್ದು, ಏರ್ವಡೆದಪಂದೆಯಂತೆ ತಲ್ಲಣಿಸಿ, ಮಾಱುವಡೆಯದ ಪರದನಂತೆಕಂದಿ, ತಣ್ಪೇರಿದಪಱೆಯಂತೆ ದನಿಪೊಱಮಡದೆ ಮಣ್ಪತ್ತಿದಮೂಲಿಗನಂತೆ ದೂರಿಸಿ, ಬಯಲೊಳಿಕ್ಕಿದ ಮೀನಂತೆಮಿಡುಕಿ ತಳಾಱನಂತೆ ನಿದ್ರೆಗೆಟ್ಟು, ಸಮ್ಯಕ್ತ್ವಚೂಡಾಮಣಿಗಿಂತೆಂದಂ ೧೬೮

ಪುಲಿಯಃಮೀಸೆಯನಂಜದುಯ್ಯಲನಾಡಲಪ್ಪುದು ನಂಜನಂ
ಜಲಿಸಲಪ್ಪುದು ಸಿಂಹಮಂಪಿಡಿದೇಱಲಪ್ಪುದುಕಿಚ್ಚಿನೊ
ಳ್ಪೊತ್ತಲಗದೊರ್ಮೆಯೆಪಾಯಲಪ್ಪುದು ಸೊಕ್ಕಿದಾನೆಗೆಸಂದುಮಾ
ರ್ಮಲೆಯಲಪ್ಪುದು ನಿನ್ನನೋಂಪಿಗೆ ಗಂಡನಾವನೊ ಸೈರಿಪಂ ೧೬೯

ತ್ರಿಸೆ ಮೆಯ್ಯುತಿನಿಸು ನೆಱೆ ಸೈ
ರಿಸಬಾರದ ತಲೆಯ ನೋವುಮತ್ತೆತ್ತಲ್ಮುಂ
ಮಿಸುಕದಿರವೆಂಬವಿನಿತುಂ
ಪುಸಿಯಲ್ಲೊಂದೊಂದೆ ಕಿಡಿಸಲಾಱವೆ ನರರಂ ೧೭೦

ಕೇಳೊಂದನೆ ಪೆಱಗಣಪೋ
ದೇೞೆಂಟುಂದಿವಸಮೆಂಬವೆನಗುಮ್ಮಳದಿಂ
ದೇೞೆಂಟುವರ್ಷವಾದುವು
ಕೇಳೀ ದುಃಖಕ್ಕೆ ಸೈರಿಸಿರ್ಪವನಾವಂ ೧೭೧

ಬಡಕಲಾದ ಶರೀರದಂತೆ ಜೋತುಬಿದ್ದು, ಗಾಯಗೊಂಡ ಹೇಡಿಯ ಹಾಗೆ ತಲ್ಲಣಗೊಂಡು, ಸರಕು ಮಾರಾಟವಾಗದ ವರ್ತಕನ ಹಾಗೆ ಕಾಂತಿಹೀನನಾಗಿ, ಶೈತ್ಯಹತ್ತಿದ ತಂಬಟೆಯಂತೆ ಧ್ವನಿ ಹೊರಡದೆ, ಮಣ್ಣು ಹತ್ತಿದ ಮೂಲಿಗನಂತೆ (ಕಷ್ಟದೆಸೆಗೆ ಬಿದ್ದ ಬಂಡವಾಳಗಾರನಂತೆ?) ಚಿಂತೆಗೊಳಗಾಗಿ, ಬಯಲಲ್ಲಿ ಹಾಕಿದ ಮೀನಿನಂತೆ ಒದ್ದಾಡಿ, ತಳವಾರನಂತೆ ನಿದ್ದೆಗೆಟ್ಟು, ಸ್ವಮ್ಯಕ್ತ್ವಚೂಡಾಮಣಿಗೆ (ದಯೂಮಿತ್ರಸೆಟ್ಟಿಗೆ) ಹೀಗೆ ಹೇಳಿದನು. ೧೬೮. “ಹುಲಿಯ ಮೀಸೆಯಲ್ಲಿ ಅಂಜದೆ ಉಯ್ಯಾಲೆಯಾಡಬಹುದು. ನಂಜ (ವಿಷವನ್ನು)ನ್ನ ತಿನ್ನಬಹುದು. ಸಿಂಹವನ್ನು ಹಿಡಿದು ಏರಿಕೊಳ್ಳಬಹುದು. ಬೆಂಕಿಯಲ್ಲಿ ತಟ್ಟನೆ ನುಗ್ಗಬಹುದು ಮದ್ದಾನೆಯ ಸಂಗಡ ಪ್ರತಿಭಟಿಸಿ ಕಾದಾಡಬಹುದು. ಆದರೆ ನಿನ್ನ ವ್ರತಕ್ಕೆ ಸೈರಿಸಿಕೊಳ್ಳಬಲ್ಲ ಶೂರನು ಯಾವನೋ ! ೧೬೯. ತ್ರಿಸೆ? ದೇಹದ ನವೆಯನ್ನು ಸಹಿಸಿಕೊಳ್ಳಲು ಸಾಧ್ಯವಿಲ್ಲ. ಸಹಿಸಿಕೊಳ್ಳಲು ಸಾಧ್ಯವಾಗದ ತಲೆನೋವು ಮತ್ತೆ ಎತ್ತಲೂ ಅಲುಗದೆ ಇರುವಂಥ ಸ್ಥಿತಿ. ಇವು ಯಾವುವೂ ಸುಳ್ಳಲ್ಲ. ಇವುಗಳಲ್ಲಿ ಒಂದೊಂದೇ ಮನುಷ್ಯರನ್ನು ಕೆಡಿಸಬಲ್ಲುದು ೧೭೦. ಇದೊಂದನ್ನು ಕೇಳು. ಕಳೆದ ಏಳೆಂಟು ದಿನಗಳು ಈ ಸಂಕಟದಿಂದ ನನ್ನಪಾಲಿಗೆ ಏಳೆಂಟು ವರ್ಷಗಳೇ ಆದುವು. ಇನ್ನು ಈ ದುಃಖಕ್ಕೆಸೈರಿಸಿಕೊಂಡಿರಬಲ್ಲವನು ಯಾರು ? ೧೭೧. “ಹೇರಿನಮೇಲೆ ಹಾಸುಗಲ್ಲು, ಗಾಯದ

ಗದ್ಯ॥ ಪೇಱಿನಮೇಲೆ ಪಾಸಱಿಯೇಱಿನಮೇಲೆ ಬಡಿಗೋಲ್ಕೊಲೆಯ ಮೇಲೆ ಕವರ್ತೆಯೆಂಬಂತೆ ಸಂತಾಪದಮೇಲೆ ಸಂತಾಪಮಂ ಮಾೞ್ಪ ನಿನ್ನ ನೋಂಪಿಯೆಂಬಗರಸಕ್ಕೆನ್ನಮೆಯ್ಯನೊಡ್ಡಲಾಱೆಂ ; ಮತ್ತಮೊಂದೆರಡುತಿಂಗಳ್ವಿಶೇಷಮಾಗಿ ನೋಂತುಕೊಟ್ಟಪೆಂ, ಪಿರಿದಪ್ಪೆನ್ನ ಮುೞಿಕೆ ಪೋಪಂತು ನಿಮ್ಮಧ್ಯಕ್ಷಂಬೆರಸು ಕೆಱೆಗೆಪೋಗಿ ಮೆಯ್ಯಂಕರ್ಚಿಕೊಂಡೊರ್ಮೆಯಿರ್ಮೆ ನೀರಂ ಕುಡಿದು ನಿಮ್ಮ ಬೀಡಿನೊಳೊಂದೆರಡುಗಳಿಗೆ ಸುೞಿದಾಡುವಂತು ಮಾೞ್ಪುದೆನೆ, ದಯಾಮಿತ್ರಸೆಟ್ಟಿ ಬಾಯತಂಬುಲಂ ಸೂಸೆ ಕಳಕಳಿಸಿ ನಕ್ಕು ೧೭೨

ಕಲಿತನದಿಂದಂ ಲೋಗರ್
ಪುಲಿಯಂ ಪಿಡಿದೊಡಮದೇಂಬಿಡೆಂಬರ್ತಾಮೊಂ
ದಿಲಿಯಂಪಿಡಿದೊಡಮದು ಪೆ
ರ್ಬುಲಿಯೆಂಬರ್ದುರ್ಜನರ್ಗೆ ತಾನಿದು ಸಹಜಂ ೧೭೩

ಗದ್ಯ॥ ಪಾವಿಲ್ಲದೆಡೆಯೊಳ್ ಕಪ್ಪೆಗಳ್ ತಮ್ಮ ಗಜಱಿಗಜಱಾಗಿರ್ಪುವು, ಪಾವು ಬರೆಗಜಱುಗೆಟ್ಟುಸತ್ತಂತಿರ್ಪುವು. ಅಂತೆ ಮಹಾಪರೀಷಹಂಗಳ್ ತಮ್ಮ ಮನಮಂ ಕದಡದನ್ನಂ ಕುತ್ಸಿತರ್ ತಮ್ಮ ನೆಗೞ್ತೆಯೆ ಪಿರಿದೆಂದು ಪೊಂಗುತ್ತಿರ್ಪರ್ ಪರೀಷಹಂಗಳಡಸಿದಂದು ದೆಸೆಗೆಟ್ಟು ಮಱುಗುತ್ತಿರ್ಪರ್ ೧೭೪

ಮೇಲೆ ಕೋಲಿನ ಪೆಟ್ಟು, ಕೊಲೆಯಮೇಲೆ ಸುಲಿಗೆ" ಎನ್ನುವ ಹಾಗೆ ಸಂತಾಪದ ಮೇಲೆ ಸಂತಾಪವನ್ನುಂಟು ಮಾಡುವ ನಿನ್ನ ವ್ರತವೆಂಬ ಗರಗಸಕ್ಕೆ ನನ್ನ ಮೈಯನ್ನು ಒಡ್ಡಲಾರೆ. ಮತ್ತೆ ಒಂದೆರಡು ತಿಂಗಳು ವಿಶೇಷವಾಗಿ ವ್ರತ ಮಾಡಿಯೇನು; ಹೆಚ್ಚಾದ ನನ್ನ ಈ ಸಂಕಟ ಕಳೆಯುವ ಹಾಗೆ ನಿಮ್ಮ ಅಧ್ಯಕ್ಷನೊಡನೆ ಕೆರೆಗೆ ಹೋಗಿ ಮೈತೊಳೆದುಕೊಂಡು ಒಂದುಸಲ, ಎರಡುಸಲ ನೀರುಕುಡಿದು, ನಿಮ್ಮ ಬೀಡಿನಲ್ಲಿ ಒಂದೆರಡು ಗಳಿಗೆಗಳ ಕಾಲ ಓಡಾಡುವಂತೆ ಮಾಡಬೇಕು, ಎನ್ನಲು, ದಯಾಮಿತ್ರ ಸೆಟ್ಟಿ ಗಹಗಹಿಸಿ ನಕ್ಕಾಗ ಅವನ ಬಾಯಲ್ಲಿನ ತಂಬುಲ ಹೊರಗೆ ಚೆಲ್ಲಿತು! ೧೭೨. ಪರಾಕ್ರಮದಿಂದ ಇತರರು ಒಂದು ಹುಲಿಯನ್ನು ಹಿಡಿದರೂ 'ಅದೇನು ಬಿಡು' ಎನ್ನುವರು. ತಾವು ಒಂದು ಇಲಿಯನ್ನು ಹಿಡಿದರೂ ಅದು ಹೆಬ್ಬುಲಿ ಎನ್ನುವರು. ದುರ್ಜನರಿಗೆ ಇದು ಸ್ವಾಭಾವಿಕ ೧೭೩. ಹಾವು ಇಲ್ಲದ ಕಡೆ ಕಪ್ಪೆಗಳು ತಮ್ಮ ಗರ್ಜನೆಯೇ ಗರ್ಜನೆಯಾಗಿ ಇರುತ್ತವೆ. ಹಾವು ಬಂದರೆ ಗರ್ಜನೆ ಕಳೆದುಕೊಂಡು ಸತ್ತ ಹಾಗೆ ಇರುವುವು. ಹಾಗೆಯೇ ಮಹಾಕಷ್ಟಗಳು ತಮ್ಮ ಮನಸ್ಸಿನ ಶಾಂತಿಯನ್ನು ಕದಡದೆ ಇರುವಾಗ ಕೆಟ್ಟ ಜನ ತಮ್ಮ ಕೆಲಸವೇ (ಆಚರಣೆಯೆ) ದೊಡ್ಡದೆಂದು ಉಬ್ಬುತ್ತಿರುತ್ತಾರೆ. ಸಂಕಷ್ಟಗಳು ಒದಗಿದಾಗ ದಿಕ್ಕೆಟ್ಟು ಸಂಕಟ ಪಡುತ್ತಾರೆ ೧೭೪. ಕಡುಮೂರ್ಖರಾದವರು ತಮಗೆ ಇಷ್ಟವಾದದ್ದೇ

ಕಡುಮೂರ್ಖರ್ತಮ್ಮಿಚ್ಛೆಗೆ
ಪಿಡಿದುದೆ ಪಿರಿದೆಂಬರಣ್ಣ ಜಿನಮಾರ್ಗದೊಳೇಂ
ನಡೆಯಲ್ ಬರ್ಕುಮೆ ಬಾರದು
ಕಡಲೆಗಳಂ ತಿಂಬ ಪೊಗ್ಗು ಕಲ್ಗಳೊಳುಂಟೇ ೧೭೫

ಗದ್ಯ॥ ಇಂತು ನೆಗಟಲ್ಕರಿದಾದುವುಂ ಫಲದೊಳ್ ಪಿರಿಯವುಮಪ್ಪ ಪನ್ನೆರಡು ತೆಱದತಪ ಮುಮಂ ನಿಲಲುಂ ನಿತ್ತರಿಸಲುಂ ಬಾರದಿಪ್ಪತ್ತೆರಡು ಮಹಾಪರೀಷಹಂಗಳುಮಂ ಮೋಕ್ಷನಿಶ್ರೇಣಿ ಗಿವು ಮೆಟ್ಟೆನಿಸಿರ್ಪಿಪ್ಪತ್ತೆಂಟು ಮೂಲಗುಣಂಗಳುಮಂ ಮಹಾವ್ರತಕ್ಕಿವು ವಜ್ರಪ್ರಾಕಾರಮೆನಿಸಿ ನೆಗಟ್ತೆವಡೆದ ಪಂಚಾಚಾರಮುಮಂ ರತ್ನತ್ರಯಕ್ಕೆ ಕಾಪಾಗಿ ಬಳಸಿದ ಕೋಂಟೆಯೆನಿಸಿರ್ಪ ಪದಿ ಮೂರು ಚಾರಿತ್ರಮುಮಂ ಸಕಲಗುಣಂಗಳೆಂಬ ರತ್ನಂಗಳ್ಗೆ ಕರಂಡಮೆನಿಸುವ ದಶಧರ್ಮ ಮುಮಂ ಒರ್ವಗಲಪ್ಪೊಡಂ ತಪ್ಪಲೀಯದೆ ಮರಣಪರ್ಯಂತಂ ಬೆಂಬೀಟದಲರದೋಸರಿಸದಾ ಱೆನೆನ್ನದೆ ಬೆಚ್ಚದೆ ನಡೆಯಿಸುವ ಮಹರ್ಷಿಗಳ ಮನದ ಧೈರ್ಯಮಂ ಬಣ್ಣಿಪನಾವನವಱೊಳ್ಕಿ ಱಿಯುವಪೊಂದೆರಡು ಪರೀಷಹಂಗಳ್ಗೆ ಬೆಂಬಿರ್ದಿರಕ್ಕಟಾಯೆಂಬುದುಂ ವಸುಭೂತಿವಿಸ್ಮಯಂ ಬಟ್ಟು ೧೭೬

ದೊಡ್ಡದೆಂದು ಹೇಳುವರು. ಅಣ್ಣ ! ಜಿನಮಾರ್ಗದಲ್ಲಿ ನಡೆಯಲು ಸಾಧ್ಯವೇ ? ಸಾಧ್ಯವಲ್ಲ. ಕಡಲೆಗಳನ್ನು ತಿನ್ನುವಷ್ಟು ಸೌಲಭ್ಯ ಕಲ್ಲುಗಳಲ್ಲಿ ಸಾಧ್ಯವೆ ? (ಕಡಲೆ ತಿಂದ ಹಾಗೆ ಕಲ್ಲು ತಿನ್ನಬಹುದೆ ?) ೧೭೫. ಹೀಗೆ ಮಾಡುವುದಕ್ಕೆ ಅಸಾಧ್ಯವಾದುವೂ ಫಲ ದಲ್ಲಿ ದೊಡ್ಡವೂ ಆದ ಹನ್ನೆರಡು ಬಗೆಯ ತಪಸ್ಸನ್ನೂ ನಿಲ್ಲಲೂ ಸಹಿಸಲೂ ಸಾಧ್ಯ ವಾಗದ ಇಪ್ಪತ್ತೆರಡು ಮಹಾಪರೀಷಹಗಳನ್ನೂ ಮೋಕ್ಷವೆಂಬ ನಿಚ್ಚಣಿಗೆಗೆ ಇವು ಮೆಟ್ಟಿಲುಗಳೆನಿಸಿಕೊಂಡಿರುವ ಇಪ್ಪತ್ತೆಂಟು ಮೂಲಗುಣಗಳನ್ನೂ ಮಹಾವ್ರತಕ್ಕೆ ಇವು ವಜ್ರದ ಪೌಳಿಯೆನಿಸಿ ಪ್ರಸಿದ್ಧಿ ಹೊಂದಿದ ಪಂಚಾಚಾರವನ್ನೂ ರತ್ನತ್ರಯಕ್ಕೆ ರಕ್ಷಣೆಯಾಗಿ ಬಳಸಿದ ಕೋಟೆಯೆನ್ನಿಸಿರುವ ಹದಿಮೂರು ಚಾರಿತ್ರಗಳನ್ನೂ ಸಕಲಗುಣಗಳೆಂಬ ರತ್ನ ಗಳಿಗೆ ಭರಣಿಯೆನಿಸಿಕೊಳ್ಳುವ ದಶಧರ್ಮವನ್ನೂ ಒಂದು ಹಗಲು ಕೂಡ ತಪ್ಪಗೊಡದೆ ಸಾಯುವವರೆಗೂ ಹಿಂದೆ ಬೀಳದೆ, ಬೇಸರಗೊಳ್ಳದೆ, ಉದಾಸೀನಮಾಡದೆ, ಕೈಲಾಗ ದೆಂದು ಹೇಳದೆ, ಭಯಪಡದೆ ನಡೆಸುವ ಮಹರ್ಷಿಗಳ ಮನಸ್ಸಿನ ಧೈರ್ಯವನ್ನು ವರ್ಣಿಸುವವನು ಯಾರು ? ಅವುಗಳಲ್ಲಿ ಚಿಕ್ಕವಾದ ಒಂದೆರಡು ಪರೀಷಹಗಳಿಗೇ ಹೆದರಿ ಹಿಮ್ಮೆಟ್ಟಿದಿರಿ. ಅಯ್ಯೋ ! ಎನ್ನಲು ವಸುಭೂತಿ ಆಶ್ಚರ್ಯಪಟ್ಟು ೧೭೬. ಆಸೆ

ಅಳಿಪಿಂದಮಳೆಯುಬರ್ದೆಗೆ
ಯಳೆಯಂ ಕುಡಿಯಿಸಿದರೆಂಬತೆಱದಿಂ ಮುನಿಸಂ
ಕುಳಮುಮನಾನುರ್ಕಿಂದಂ
ಪಳಿದೊಡೆಮುನಿದೆನ್ನಸಿಟ್ಟನೆನೊಳ್ ಕಳೆದಂ. ೧೭೭

ಗದ್ಯ॥ ಕಟಕಮಂ ಕಂಡಱಿಯದವಂಗೆ ಪಳ್ಳಿಪಿರಿಯೂರಾಗಿ ತೋರ್ಪಂತೆ ಧೈರ್ಯಾನ್ವಿತರಪ್ಪ ಮಹರ್ಷಿಯರ ತಪೋಮಾರ್ಗಮನಱಿಯದೆನಗೆಮ್ಮ ಚಾರಿತ್ರಮೆ ಪಿರಿದಾಗಿರ್ದುದು ಸಹಜಮಾದೊಡಂ "ಪರದರೊಳ್ಮರುಳಿಲ್ಲ ಸೂಳೆ ಸಾಧುವಲ್ಲ" ಎಂಬ ನಾಣ್ಣುಡಿಯುಂಟಪ್ಪುದಱಿಂದೀತಂ ಮರುಳಲ್ಲನೀತನ ಪಿಡಿದ ಧರ್ಮಮೆ ಧರ್ಮಮೆಂದು ೧೭೮

ಆರುಮಿದಕ್ಕೆನಿತ್ತರಿಸಲಾಱರೆನಿಪ್ಪಪರೀಷಹಂಗಳಂ
ಸೈರಣೆಯಿಂದೆ ಗೆಲ್ವಮುನಿಮುಖ್ಯರ ಸಾರ್ದು ಜಿನೇಂದ್ರ ಧರ್ಮಮಂ
ಸಾರಮೆನಿಪ್ಪುದಂ ತಿಳಿದು ನಂಬಿದರನ್ಯರನೇಕೆ ಪೊರ್ದುವರ್
ಮೇರುವನೇಱಿನೋಡಿದವರ್ಗೀಧರೆ ತಾಂ ಕಿಱಿದಾಗಿ ತೋರದೇ ೧೭೯

ಗದ್ಯ। ಎಂದು ತನ್ನೊಳೆ ವಿಚಾರಿಸಿ ವಾತ್ಸಲ್ಯರತ್ನಾಕರಂಗೆ ಕೈಗಳಂ ಮುಗಿದು ನಿಮ್ಮ ಪಿಡಿದ ಧರ್ಮಮೆ ಲೇಸೆಂಬುದನೀಗಳಱಿದೆಂ ನೀವೆನಗೆ ಧರ್ಮದೊಳಾದಭಿಪ್ರಾಯಮನಱಿಯೆ ಪೇಟಲ್ವೇಟ್ಕೆಂಬುದುಂ ಸೆಟ್ಟಿಯಿಂತೆಂದಂ ೧೮೦

ಯಿಂದ ಮಜ್ಜಿಗೆ ಮಾರುವ ಪ್ರೌಢೆಗೇ ಮಜ್ಜಿಗೆಯನ್ನು ಕುಡಿಸಿದರೆಂಬ ಹಾಗೆ ಮುನಿಸಮೂಹವನ್ನು ನಾನು ಕೊಬ್ಬಿನಿಂದ ದೂಷಿಸಲು ಮುನಿಸಿಕೊಂಡು ನನ್ನ ಸಿಟ್ಟನ್ನು ನನ್ನಲ್ಲಿಯೇ ಕಳೆದನು (ಸೆಟ್ಟಿ) ೧೭೭. ರಾಜಧಾನಿಯನ್ನು ಕಾಣದವನಿಗೆ ಹಳ್ಳಿ ಹಿರಿಯ ಊರೆಂದು ತೋರುವ ಹಾಗೆ ಧೈರ್ಯಶೀಲರಾದ ಮಹರ್ಷಿಗಳ ತಪೋಮಹಿಮೆಯನ್ನು ತಿಳಿಯದ ನನಗೆ ನಮ್ಮ ಚಾರಿತ್ರವೇ ದೊಡ್ಡದಾಗಿದ್ದುದು ಸಹಜವಾದರೂ "ವರ್ತಕರಲ್ಲಿ ದಡ್ಡತನವಿಲ್ಲ, ಸೂಳೆ ಸಾಧುವಲ್ಲ" ಎಂಬ ಗಾದೆ ಇದೆ. ಅದರಂತೆ ಈತನು ದಡ್ಡನಲ್ಲ. ಈತನು ಹಿಡಿದಿರುವ ಧರ್ಮವೇ ಧರ್ಮವೆಂದು. ೧೭೮. ಬಗೆದು ಯಾರೂ ಇದಕ್ಕೆ ಸೈರಿಸಲಾರರೆನ್ನಿಸುವ ಪರೀಷಹಗಳನ್ನು ಸಹನೆಯಿಂದ ಗೆಲ್ಲುವ ಮುನಿಶ್ರೇಷ್ಠರನ್ನು ಸಮೀಪಿಸಿ ಸಾರವಾದ ಜಿನೇಂದ್ರ ಧರ್ಮವನ್ನು ತಿಳಿದುಕೊಂಡು ನಂಬಿದವರು ಇತರರನ್ನೇಕೆ ಸೇರುತ್ತಾರೆ ? ಮೇರುಪರ್ವತವನ್ನು ಹತ್ತಿ ನೋಡಿದವರಿಗೆ ಈ ಭೂಮಿ ಚಿಕ್ಕದಾಗಿ ತೋರುವುದಿಲ್ಲವೆ ? ೧೭೯. ಎಂದು ತನ್ನ ಮನಸ್ಸಿನಲ್ಲಿಯೇ ಯೋಚಿಸಿ ವಾತ್ಸಲ್ಯ ರತ್ನಾಕರನಾದ ದಯಾಮಿತ್ರಸೆಟ್ಟಿಗೆ ಕೈಮುಗಿದು ನೀವು ಆಶ್ರಯಿಸಿದ ಧರ್ಮವೇ ಶ್ರೇಷ್ಠವೆಂಬುದನ್ನು ಈಗ ತಿಳಿದುಕೊಂಡೆ. ನೀನು ನನಗೆ ಧರ್ಮದ ವಿಷಯದಲ್ಲಿ ಆದ ಅಭಿಪ್ರಾಯವನ್ನು ತಿಳಿಯ ಹೇಳಬೇಕೆಂದು ಕೇಳಲು ಸೆಟ್ಟಿ ಹೀಗೆ ಹೇಳಿದನು. ೧೮೦. ಪರ

ಪರಮಾರ್ಥಮಪ್ಪುದಂ ಮ
ಚ್ಚರಿಸದೆ ಕೋಪಿಸದೆ ಡಂಗೆಗೊಳ್ಳದೆ ಪಕ್ಷ
ಕ್ಕುರಿದೇಳದೊಂದೆಮನದಿಂ
ನಿರುತಂ ಕೇಳ್ವವನೆ ಧರ್ಮದೊಳಗಂ ತಿಳಿಗುಂ ೧೮೧

ಕನ್ನಡಿಯಂ ನೋಡುವವಂ
ತನ್ನಯ ಪೆಱಗಣ್ಗೆ ಕಾಣಲಾರ್ಪನೆ ರೂಪಂ
ಮುನ್ನಮೆ ಬಱಿದೊಳಱುವವಂ
ಸನ್ನುತಸದ್ಧರ್ಮಮಪ್ಪುದಂ ತಾನಱಿಯಂ ೧೮೨

ಗದ್ಯ॥ ಒನಲಿಯಂತೆ ಪೊಲ್ಲಮೆಯುಂ ಪಿಡಿಯದೆ ಕೋಣನಂತೆ ಕಡಡದೆ ಬಕನಂತೆ ಧೂರ್ತನಾಗದೆ ಪಾಣ್ಬೆಯಂತೆ ಮತ್ತೊಂದು ಮನಮಾಗದೆ ನರಿಯಂತೊಡನೊಡನೊದಱದೆ ಜಡನಂತ ವಿಚಾರಿಯಾಗದೆ ನಪುಂಸಕನಂತೆರಡಕ್ಕಾಸೆಗೆಯ್ಯದೆ ಗಿಳಿಯಂತೆ ಪಲವಂ ಗಟಪದೆ ಸವತಿಯಂತೆ ಪುರುಡಿಸದೆ ಪುಲಿಯಂತೆ ಮೇಲ್ವಾಯದೆ ಪೆಱೆಯಂತೆ ವಕ್ರವಾಗದೆ ಸಿಡಿಲಂತೆ ಭಯಂದೋಱದೆ ಲಂಚಗಾಱನಂತೆ ನುಡಿಗೆಡಿಸದೆ ಏಕಚಿತ್ತದಿಂ ಕೇಳ್ವರಪ್ಪೊಡೆ ಪೇೞ್ದಪೆನೆಂಬುದುಂ ವಸುಭೂತಿ ನಿಮ್ಮ ಬೆಸಸಿದಂತೆ ಪೆಱತು ಭಾವನೆಯಿಲ್ಲದೊಂದೆ ಬುದ್ಧಿಯಿಂ ಕೇಳ್ದಪೆನೆಂಬುದುಂ ಸುಖಕ್ಕಾಗರಮೆನಿಸುವ ಸದ್ಧರ್ಮಮಂ ಸೆಟ್ಟಿಯಿಂತೆಂದು ಪೇೞ್ದಂ ೧೮೩

ಮಾರ್ಥವಾದದ್ದನ್ನು ಮತ್ಸರ ಪಡದೆ, ಕೋಪಗೊಳ್ಳದೆ, ಪಟ್ಟುಹಿಡಿಯದೆ, ಪಕ್ಷಪಾತದಿಂದ ರೋಷಗೊಳ್ಳದೆ ಒಂದೇ ಮನಸ್ಸಿನಿಂದ ನಿಶ್ಚಲವಾಗಿ ಕೇಳುವವನೇ ಧರ್ಮದ ರಹಸ್ಯವನ್ನು ತಿಳಿದುಕೊಳ್ಳುವನು. ೧೮೧. ಕನ್ನಡಿಯನ್ನು ನೋಡಿಕೊಳ್ಳುವವನು ತನ್ನ ಹಿಂದಿನ ಭಾಗವನ್ನು ಕಾಣಲಾರ. ಮೊದಲೇ ಸುಮ್ಮನೆ ಕೂಗಿಕೊಳ್ಳುವವನು ಶ್ರೇಷ್ಠವಾದ ಸದ್ಧರ್ಮವನ್ನು ತಿಳಿದುಕೊಳ್ಳಲಾರ. ೧೮೨. ಜರಡಿಯ ಹಾಗೆ ಕಸವನ್ನೇ (ಕೆಟ್ಟದ್ದನ್ನೇ) ಹಿಡಿಯದೆ, ಕೋಣದ ಹಾಗೆ ಕಲಕಿಬಿಡದೆ, ಬಕಪಕ್ಷಿಯಂತೆ ಧೂರ್ತನಾಗದೆ, ಹಾದರಗಿತ್ತಿಯಂತೆ ಬೇರೊಂದು ಮನಸ್ಸುಮಾಡದೆ, ನರಿಯ ಹಾಗೆ ಒಂದೇ ಸಮನೆ ಕೂಗದೆ, ದಡ್ಡನ ಹಾಗೆ ವಿಚಾರವನ್ನೇ ಮಾಡದೆ ಇದ್ದುಬಿಡದೆ ನಪುಂಸಕನಂತೆ ಎರಡಕ್ಕೆ ಆಸೆಪಡಧೆ (?) ಗಿಳಿಯಂತೆ ಹಲವು ಮಾತನ್ನು ಹರಟದೆ, ಸವತಿಯ ಹಾಗೆ ಸ್ಪರ್ಧೆಮಾಡದೆ, ಹುಲಿಯಂತೆ ಮೇಲೆ ಬೀಳದೆ, ಚಂದ್ರನಂತೆ ಸೊಟ್ಟನಾಗದೆ, ಸಿಡಿಲಿನಂತೆ ಭಯಪಡಿಸದೆ, ಲಂಚಗಾರನ ಹಾಗೆ ಮಾತಿಗೆ ತಪ್ಪದೆ, ಒಂದೇ ಮನಸ್ಸಿನಿಂದ ಕೇಳುವಿರಾದರೆ, ಹೇಳುತ್ತೇವೆ. ಎನ್ನುತ್ತಲೆ, ವಸುಭೂತಿ ನೀವು ಹೇಳಿದಂತೆ ಬೇರೆ ಭಾವನೆಯಿಲ್ಲದೆ ಒಂದೇ ಬುದ್ಧಿಯಿಂದ ಕೇಳುತ್ತೇನೆಂದು ನುಡಿಯಲು ಸುಖಕ್ಕೆ ಆಶ್ರಯವೆನಿಸುವ ಒಳ್ಳೆಯ ಧರ್ಮವನ್ನು ಸೆಟ್ಟಿ ಹೀಗೆ ಹೇಳಿದನು: ೧೮೩. ಎಲ್ಲರೂ ಸೇರಿ

ನೆರೆದೆಲ್ಲರ್ ಕಳ್ಳುಡಿಯುಃ
ತ್ತಿರೆ ಬಡವರ್ಗಲ್ಲಿ ಧರ್ಮಗಳ್ಳೆಂದೆಜಿ್ಪರ್
ಧರೆಯೊಳಗದುವುಂ ಧರ್ಮಮೆ
ನಿರುತಂ ಪೇಟಣ್ಣನೀನೆ ಭಾವಿಸಿಮನದೊಳ್ ೧೮೪

ಪರವನಿತೆಗೋತು ಸೈರಿಸ
ಲರಿದಾಗಿಂಬಾಗಿ ತೋರ್ಪ ಧರ್ಮಂ ನಿನಗ
ಕ್ಕೆರಡಿಲ್ಲದೆಂದು ನಂಬಿಸಿ
ನೆರೆವರ್ಸದ್ಧರ್ಮಮಪ್ಪುದೇ ಕೇಳದುವುಂ ೧೮೫

ಬಸಮಲ್ಲದ ರುಜೆಯಂ ಸೈ
ರಿಸಲಾಜಿದ ಧರ್ಮಮಣ್ಣಕೊಲ್ಲೆನೆ ದಯೆಯಿಂ
ವಸುಮತಿಯೊಳಿಜಿ್ಪರದುವುಂ
ಮಿಸುಗುವ ಸದ್ಧರ್ಮವೆಂದು ನಂಬುವುದೆ ಬುಧಂ ೧೮೬

ಗದ್ಯ॥ ಧರೆಯೊಳ್ ಕಳವುಂ ಕೊಲೆಯುಂ ಪ್ರಸಿದ್ಧಪಾಪಂಗಳಾಗಿರ್ದುಂ ಕವರ್ದುತಂದ ಧನಮುಮಂ ಬೇಂಟೆಯೊಳ್ ಕೊಂದುತಂದಡಗುಮಂ ತಮ್ಮೊಳ್ ಧರ್ಮದಿಂಪಚ್ಚಿಕೊಡಿಮೆಂ ಬರದುವುಂ ಧರ್ಮಮಕ್ಕುಮೆ ೧೮೭

ಹೆಂಡ ಕುಡಿಯುತ್ತಿರುವ ಕಡೆ 'ಧರ್ಮದ ಹೆಂಡ' ಎಂದು ಬಡವರಿಗೆ ನೀಡುತ್ತಾರೆ. ಪ್ರಪಂಚದಲ್ಲಿ ಅದೂ ಧರ್ಮವೆ ? ಅಣ್ಣ, ನೀವೇ ಮನಸ್ಸಿನಲ್ಲಿ ಯೋಚನೆಮಾಡಿ ನಿಷ್ಕರ್ಷೆಯಾಗಿ ಹೇಳು. ೧೮೪. ಕಂಡವರ ಹೆಂಡತಿಗೆ ಆಸೆಪಟ್ಟು ತಾಳಲು ಸಾಧ್ಯ ವಾಗದೆ ಅದಕ್ಕೆ ಅನುಕೂಲವಾಗಿ ತೋರುವ "ಧರ್ಮ ಇದೇ, ಎರಡನೆಯ ಧರ್ಮ ವಿಲ್ಲ" ಎಂದು ಹೇಳಿ ನಂಬಿಸಿ ನೆರೆಯುವುದು ಸದ್ಧರ್ಮವೆ ? ಕೇಳು. ೧೮೫. ಸಹಿಸಿ ಕೊಳ್ಳುವುದಕ್ಕೆ ಸಾಧ್ಯವಾಗದ ರೋಗವನ್ನು ಅನುಭವಿಸುತ್ತಿರುವವರು "ಅಣ್ಣ ! ನಿನ್ನ ಧರ್ಮ, ಕೊಲ್ಲು" ಎಂದರೆ ದಯೆಯಿಂದ ಇರಿದು ಕೊಲ್ಲುವುದೂ ಶ್ರೇಷ್ಠವಾದ ಉತ್ತಮಧರ್ಮವೆಂದು ಜ್ಞಾನಿಯು ನಂಬಬಹುದೆ ? ೧೮೬. ಪ್ರಪಂಚದಲ್ಲಿ ಕಳ್ಳತನವೂ ಕೊಲೆಯೂ ಪ್ರಸಿದ್ಧ ಪಾಪಗಳಾಗಿದ್ದೂ ಕೂಡ ಲೂಟಿಮಾಡಿ ತಂದ ಧನವನ್ನು ತಾವು ಬೇಟೆಯಲ್ಲಿ ಕೊಂದುತಂದ ಮಾಂಸವನ್ನೂ ತಮ್ಮತಮ್ಮಲ್ಲಿ ಧರ್ಮದಿಂದ ಹಂಚಿಕೊಡಿ ಯೆನ್ನುತ್ತಾರೆ. ಅದೂ ಧರ್ಮವಾಗುವುದೆ ? ೧೮೭. ಅರಸು ಎಂಬ ಹೆಸರು

ಅರಸೆಂಬಪೆಸರ್ ಪಗರಣ
ವರಸಂಗಂ ಧಾರಿಣೀಶ್ವರಂಗಂ ಕರಮಾ
ದರದಿಂದಕ್ಕುಮನಿತಱಿಂ
ಅರಸನದೊಂದಾಜ್ಞೆ ಬಗೆವೊಡಾತಂಗುಂಟೇ ೧೮೮

ಪಿಟ್ಟೆಂಬ ಪೆಸರ್ ಕಳವೆಯ
ಪಿಟ್ಟಿಂಗಂ ಭೂತಳಾಗ್ರದೊಳ್ಪುವಿಸೆ ಬೆಳ್
ವಿಟ್ಟಿಂಗಮಕ್ಕುಮಾದೊಡೆ
ಪಿಟ್ಟಿನೊಳಿರ್ಪೊಂದು ರುಚಿಯನದುತಳೆದಪುದೇ ೧೮೯

ಕಬ್ಬೆಂಬಭಿಧಾನಂ ಕಾ
ಡ್ಗಬ್ಬಂಗಂನೆಗಟ್ದಮೆಲ್ವಕಬ್ಬಿಂಗಂ ಕೇ.
ಳುರ್ಬರೆಯೊಳಕ್ಕುಮಾದೊಡೆ
ಕಬ್ಬಿನೊಳುಂಟಾದರುಚಿಯನದುತಳೆವಪುದೇ ೧೯೦

ಪೊನ್ನೆಂಬಪೆಸರ್ ಕನಕ
ಕ್ಕನ್ನಯುದಿಂಮದ್ದುಗುಣಿಕೆಗಂ ಸಮನಕ್ಕುಂ
ಪೊನ್ನೆಲ್ಲಿಗಮೆಸೆವಂತಿರೆ
ತಾನ್ನೆಱಿಸಂದಪುದೆಮದ್ದುಗುಣಿಕೆಯುಮಿಳೆಯೊಳ್ ೧೯೧

ನಾಟಕದ ರಾಜನಿಗೂ ದೇಶದ ರಾಜನಿಗೂ ಸಮನಾಗಿಯೇ ಅನ್ವಯಿಸುತ್ತದೆ. ಅಷ್ಟರಿಂದಲೇ ಅರಸನ ಒಂದು ಆಜ್ಞಾಶಕ್ತಿ ಆತನಿಗಿರುತ್ತದೆಯೆ ? ೧೮೮. ಹಿಟ್ಟು ಎಂಬ ಹೆಸರು ಅಕ್ಕಿಯಹಿಟ್ಟಿಗೂ ಬೆಳ್ವಿಟ್ಟಿ (?)ಗೂ ಅನ್ವಯಿಸುತ್ತದೆ. ಆದರೆ ಅದು ಅಕ್ಕಿಯ ಹಿಟ್ಟಿನ ರುಚಿಯನ್ನು ಪಡೆಯುವುದೆ ? ೧೮೯. ಕಬ್ಬು ಎಂಬ ಹೆಸರು ಕಾಡುಕಬ್ಬಿಗೂ ಪ್ರಸಿದ್ಧವಾದ ತಿನ್ನುವ ಕಬ್ಬಿಗೂ ಹೊಂದುತ್ತದೆ. ಆದರೆ ಕಾಡುಕಬ್ಬು ಕಬ್ಬಿನ ರುಚಿಯನ್ನು ಹೊಂದುತ್ತದೆಯೆ ? ಇಲ್ಲ. ೧೯೦. ಹೊನ್ನೆಂಬ ಹೆಸರು ಕನಕಕ್ಕೂ (ಮದ್ದುಗುಣಿಕೆ) ದತ್ತೂರ ಉಮ್ಮತ್ತಿಗಳಿಗೂ ಅನ್ವಯಿಸುತ್ತದೆ. ಆದರೆ ಹೊನ್ನು ಎಲ್ಲ ಕಡೆಗಳಲ್ಲಿಯೂ ಶೋಭಿಸುವಂತೆ ಪ್ರಪಂಚದಲ್ಲಿ ಮದ್ದುಗುಣಿಕೆ ಶೋಭಿಸುತ್ತದೆಯೆ? ಇಲ್ಲ. ೧೯೧. ಹಾಲು ಎಂಬ ಹೆಸರು ಪಸುವಿನ ಹಾಲಿಗೂ ನಾಯವಟದು (?)

ಪಾಲೆಂಬನಾಮಮಾವಿನ
ಪಾಲಿಂಗಂ ನಾಯವಟದ ಕಳ್ಳಿಯೊಳಾದಾ
ಪಾಲಿಂಗಮಕ್ಕುಮಾದೊಡೆ
ಪಾಲೊಳ್ಪಿಂ ಸವಿಯುಮದಱೊಳೇಂ ಸಮನಿಕುಮೇ ೧೯೨

ಗದ್ಯ॥ ತುಪ್ಪವೆಂಬ ಪೆಸರಾವಿನ ತುಪ್ಪಕ್ಕಂ ಗೇರತುಪ್ಪಕ್ಕಮುಂಟಪ್ಪೊಡಂ ತುಪ್ಪದಂತಿನಿದಕ್ಕುಮೇ ? ಕುದುರೆಯೆಂಬ ಪೆಸರ್ಬಿಸಿಲ್ಗುದುರೆಗಂ ಜಾತ್ಯಶ್ವಕ್ಕಮುಂಟಾದನಿತಱೊಳೆ ಕುದುರೆಯಂತಕ್ಕುಮೇ ಧರ್ಮವೆಂಬಪೆಸರ್ ಸದ್ಧರ್ಮಕ್ಕಂ ಕುಧರ್ಮಕ್ಕಂ ಸಮನಿಸುಗುಮ ನಿತಱೊಳೆ ಸದ್ಧರ್ಮದೊಳಾದೈಶ್ವರ್ಯಮಂ ಪಡೆಯಲಾರ್ಕುಮೇ ಪಡೆಯಕೂಡದದು ಕಾರಣದಿಂ ೧೯೩

ರಸಮಂ ಪೊರ್ದಿ ಸಮಂತು ಲೋಹನಿಕರಂ ಪೊನ್ನಪ್ಪವೋಲುರ್ವಿಯೊಳ್
ರಸಮೆಂಬೀ ಪೆಸರಿಂಗೆ ಕೇರರಸದೊಳ್ ಪೊನ್ನಕ್ಕುಮೇ ನೋಡ ಪೊ
ರ್ದಿಸಿ ಸದ್ಮರ್ಮಮನೇನು ನಂಬಿ ಸುಖಮಪ್ಪಂತಣ್ಣ ನೀ ನೋಡ ಭಾ
ವಿಸಿ ಪೊರ್ದಿದೊಡೆ ಕೊಲ್ವ ಧರ್ಮದೊಳದೇಂ ಕೈಸಾರ್ಗುಮೋ ತತ್ಸುಖಂ ೧೯೪

ಗದ್ಯ॥ ಮರುಳಪಯಣಕ್ಕೆ ತಱಗೆಲೆಯೆ ಸಂಗಡಿಗನೆಂಬಂತೆ ಪಾಪಿಯಪ್ಪಂಗೆ ಕುತ್ಸಿತಧರ್ಮಮೆ ಸದ್ಧರ್ಮಮಾಗಿ ತೋರ್ಕುಂ ೧೯೫

ಕಳ್ಳಿಯಹಾಲಿಗೂ ಅನ್ವಯಿಸುತ್ತದೆ. ಆದರೆ ಹಾಲಿನ ಗುಣ, ರುಚಿ, ಕಳ್ಳಿಯ ಹಾಲಿನಲ್ಲಿ ಲಭಿಸುತ್ತದೆಯೇ ? ೧೯೨. ತುಪ್ಪವೆಂಬ ಶಬ್ದ ಹಸುವಿನ ತುಪ್ಪಕ್ಕೂ ಗೇರತುಪ್ಪಕ್ಕೂ ಉಂಟು. ಆದರೆ ಅದು ತುಪ್ಪದಂತೆ ಸವಿಯಾಗುವುದೆ ? ಕುದುರೆಯೆಂಬ ಹೆಸರು ಬಿಸಿಲುಗುದುರೆಗೂ ಜಾತ್ಯಶ್ವಕ್ಕೂ ಆಗುತ್ತದೆ. ಅಷ್ಟರಿಂದಲೇ ಬಿಸಿಲ್ಗುದುರೆ ಕುದುರೆಯ ಹಾಗೆ ಆಗುತ್ತದೆಯೆ ? ಧರ್ಮವೆಂಬ ಹೆಸರು ಸದ್ಮರ್ಮಕ್ಕೂ ಕುಧರ್ಮಕ್ಕೂ ಅನ್ವಯಸುಸುತ್ತದೆ. ಅಷ್ಟು ಮಾತ್ರದಿಂದ ಉತ್ತಮ ಧರ್ಮದಿಂದಾಗುವ ಐಶ್ವರ್ಯವನ್ನು ಪಡೆಯಲು ಸಾಧ್ಯವಾಗದು. ಆದಕಾರಣ ೧೯೩. ಕೀಳು ಲೋಹಗಳು ರಸಸಂಪರ್ಕ ಹೊಂದಿ ಹೊನ್ನಾಗುವಂತೆ ಗೇರುರಸದಿಂದ ಹೊನ್ನಾಗುವುದೆ ? ನೋಡು, ಸದ್ಧರ್ಮವನ್ನು ಹೊಂದಿ, ಅದನ್ನು ನಂಬಿದರೆ ಲಭಿಸುವ ಸುಖವು, ಅಣ್ಣಾ ! ಕೊಲ್ಲುವ ಧರ್ಮದಲ್ಲಿ ಕೈವಶವಾಗುವುದೆ ? ೧೯೪. ಪಿಶಾಚನ ಪ್ರಯಾಣಕ್ಕೆ ತರಗೆಲೆಯೇ ಜತೆಗಾರನೆಂಬ ಹಾಗೆ ಪಾಪಿಯಾದವನಿಗೆ ನೀಚಧರ್ಮವೇ ಸದ್ಧರ್ಮವಾಗಿ ತೋರುವುದು. ೧೯೫. ಎಲ್ಲಾ ಸುಖಗಳನ್ನೂ ಅನುಭವಿಸಬೇಕೆಂಬ ಮನಸ್ಸಿದ್ದರೆ ತಡಮಾಡದೆ ಹೆಚ್ಚಾದ

ಎಲ್ಲೆಲ್ಲ ಸುಖಂಗಳೊಳಂ
ನಿಲ್ಲದೆ ನೆರೆದಿರ್ಪೆನೆಂಬ ಮನಮುಳ್ಳೊಡೆ ತ
ಳ್ಪಿಲ್ಲದೆ ಪಿರಿದಾದರದಿಂ
ಕೊಲ್ಲದ ಧರ್ಮಮನೆ ಪಿಡಿಗೆ ನಂಬುಗೆಯಿಂದಂ ೧೯೬

ಗದ್ಯ॥ ಆ ಕೊಲ್ಲದ ಧರ್ಮಂ ಜೈನಾಗಮದೊಳಲ್ಲದಱಿಯಲ್ಬಾರದಾ ಪರಮಾಗಮಮುಂ ನಿರ್ದೋಷಿಯಪ್ಪ ಪರಮಾತ್ಮನ ಮುಖಕಮಲದಿಂದಲ್ಲದೆ ಪೊಱಮಡದಾ ದೇವನೆಂತಪ್ಪನೆಂದೊಡೆ ೧೯೭

ಮರಣಂ ಚಿಂತೆ ಭಯಂ ಮದಂ ಮುಳಿಸು ಮೋಹಂ ಖೇದ ರೋಗಂ ಬೆಮ
ರ್ಜರೆ ನೀರಟ್ಕೆ ವಿಷಾದಮೂಟ ಜನನಂ ಲೋಭಂ ಮಹಾವಿಸ್ಮಯಂ
ಸ್ಮರಬಾಣಾಹತಿ ನಿದ್ರೆಯೆಂಬಿನಿತಂ ಗೆಲ್ದಾತನೇ ತಾಂ ಜಿನೇ
ಶ್ವರನಿಂದ್ರಾರ್ಚಿತಪಾದನಾತನೆ ವಲಂ ಸೌಖ್ಯಕ್ಕೆ ತಾಂ ಕಾರಣಂ ೧೯೮

ಗದ್ಯ॥ ಆ ಪರಮೇಶ್ವರನನಱಿವರೆತ್ತಾನುಮೊರ್ವರಪ್ಪರದೆಂತೆನೆ ೧೯೯

ಕಕ್ಕಿನ ಪವಳದ ಮಣಿಗಳ
ನಿಕ್ಕುವವರ್ಪಲರೊ ಮುತ್ತಿನೈಸರಮಂ ಕೇ
ಳಿಕ್ಕುವವರ್ಪಲರೊ ಕರಂ
ನಿಕ್ಕುವಮಾರೈದು ನೋೞ್ಪೊಡವನೀತಳದೊಳ್ ೨೦೦

ಆದರದಿಂದ ಕೊಲ್ಲದ ಧರ್ಮವನ್ನೇ ನಂಬಿಕೆಯಂದ ಹಿಡಿಯಬೇಕು. ೧೯೬. ಆ ಕೊಲ್ಲದ ಧರ್ಮ ಜೈನಾಗಮದಲ್ಲಿ ಅಲ್ಲದೆ ತಿಳಿಯಲು ಬರುವುದಿಲ್ಲ. ಆ ಪರಮಾಗಮವೂ ದೋಷ ರಹಿತನಾದ ಪರಮಾತ್ಮನ ಮುಖಕಮಲದಿಂದಲ್ಲದೆ ಹೊರ ಬೀಳದು. ಆ ದೇವನು ಎಂಥವನೆಂದರೆ ೧೯೭. ಮರಣ, ಚಿಂತೆ, ಭಯ, ಮದ, ಕೋಪ, ಮೋಹ, ವ್ಯಥೆ, ರೋಗ, ಬೆವರು, ಮುಪ್ಪು, ನೀರಡಿಕೆ, ವಿಷಾದ, ಊಟ, ಜನನ, ಆಸೆ, ಮಹಾ ಆಶ್ಚರ್ಯ ಕಾಮಬಾಣದಪೆಟ್ಟು, ನಿದ್ರೆ ಎಂಬಿವಿಷ್ಟನ್ನೂ ಗೆದ್ದವನೇ ಜಿನೇಶ್ವರನು. ಅವನ ಪಾದ ಗಳಿಗೆ ಇಂದ್ರನು ಪೂಜೆ ಸಲ್ಲಿಸುತ್ತಾನೆ. ಆತನೇ (ಜಿನ) ಸೌಖ್ಯಕ್ಕೆ ಕಾರಣ. ಖಂಡಿತ. ೧೯೮. ಒರಟಾದ ಮಣಿಗಳನ್ನೂ ಹವಳಗಳನ್ನೂ ಧರಿಸುವವರು ಹೆಚ್ಚೊ, ಮುತ್ತಿನ ಐದೆಳೆಯ ಸರಗಳನ್ನು ಧರಿಸುವವರು ಹೆಚ್ಚೊ ? ನಿಜವಾಗಿ ವಿಚಾರಮಾಡಿ ನೋಡಿದರೆ ಈ ಲೋಕದಲ್ಲಿ ? ೨೦೦. ನಿಜವಾಗಿ ತಾಳೆಯ ಓಲೆಗಳನ್ನು ಧರಿಸುವವರು ಹೆಚ್ಚು

ನಿಕ್ಕುವದಿಂ ತಾಳೋಲೆಯ
ನಿಕ್ಕುವವರ್ಪಲರೊ ನೋಡ ಪೊನ್ನೋಲೆಯುಮಂ
ಇಕ್ಕುವವರ್ಪಲರೊ ಮನ
ಕ್ಕಿಕ್ಕೆವಮಂ ಪೊರ್ದಲೀಯದಿದನಾರಯ್‍ನೀಂ ೨೦೧

ವರರತ್ನಮನಱಿವವರು
ಧರೆಯೊಳ್ ಕೀಳ್ಪಲರೊ ಕಲ್ಲುಮಂ ಪುಲ್ಲುಮನು
ಧರೆಯೊಳಱಿವವರನೇಕರೊ
ಪರಿಕಿಸಿ ನೋಡಣ್ಣ ನಿನ್ನ ಮನದೊಳ್‍ನಯದಿಂ ೨೦೨

ಮರನನಱಿವಂತು ಬಲ್ಲರೆ
ಸಿರಿಖಂಡವನಣ್ಣ ಪಗಿನನಱಿವಂತಿರೆ ಕ
ರ್ಪೂರಮಂ ಬಲ್ಲರೆ ಕುತ್ಸಿತ
ಸುರರಂ ನರರನಱಿವತೆಱದಿನಱಿವರೆ ಜಿನನಂ ೨೦೩

ಗದ್ಯ॥ ಆದಱಿಂ ಸುವಸ್ತುವನಱಿವವರುಂ ಸವುಸ್ತುವಂ ಕೊಡುವವರುಂ ಕೆಲಂಬರ್ ; ಕುವಸ್ತುವನಱಿವವರುಂ ಕುವಸ್ತುವಂ ಕೊಡುವವರುಂ ಪಲಂಬರಾದೊಡಂ ಸುವಸ್ತು ವಸ್ತು ಪರೀಕ್ಷಕರಿಂದಲ್ಲದಱಿಯಲ್ಬಾರದು, ಕುವಸ್ತು ವಾದೊಡೆ ಹಲಧರಗೋಪಾಲಾದಿಗಳಱಿತಕ್ಕೊಳಗಾದುದಱಿಂ ಸರ್ವಜ್ಞನುಂ ಸುವಸ್ತುವಪ್ಪುದಱಿಂ ವಸ್ತುಪುರುಷರ್ಗಲ್ಲದಱಿಯಲ್ಬಾರದು ೨೦೪

ಜನರೋ, ಹೊನ್ನಿನ ಓಲೆಯನ್ನು ಇಟ್ಟುಕೊಳ್ಳುವವರು ಹೆಚ್ಚು ಜನರೋ? ಮನಸ್ಸಿನಲ್ಲಿ ಮೋಸಕ್ಕೆ ಪ್ರವೇಶ ಮಾಡಿಸದೆ ಇದನ್ನು ನೀನು ವಿಚಾರ ಮಾಡಿ ನೋಡು. ೨೦೧. ಶ್ರೇಷ್ಠವಾದ ರತ್ನವನ್ನು ತಿಳಿಯ ಬಲ್ಲವರು ಈ ಲೋಕದಲ್ಲಿ ಅನೇಕರೋ, ಕಲ್ಲನ್ನೂ ಹುಲ್ಲನ್ನೂ ತಿಳಿಯುವವರು ಅನೇಕರೋ, ? ಅಣ್ಣ, ನಿನ್ನ ಮನಸ್ಸಿನಲ್ಲಿಯೇ ಪರೀಕ್ಷಿಸಿ ನೋಡು. ೨೦೨. ಉಳಿದ ಮರಗಳನ್ನು ಕಂಡು ತಿಳಿಯುವ ಹಾಗೆ ಶ್ರೀಗಂಧವನ್ನು ತಿಳಿಯಬಲ್ಲರೆ? ಗಿಡದ ಅಂಟನ್ನು ತಿಳಿಯುವಂತೆ ಕರ್ಪೂರವನ್ನು ತಿಳಿಯಬಲ್ಲರೆ ? ಅಲ್ಪರಾದ ದೇವರುಗಳನ್ನು ತಿಳಿಯುವ ಹಾಗೆ ಮನುಷ್ಯರು ಜಿನನನ್ನು ತಿಳಿಯ ಬಲ್ಲರೆ ? ೨೦೩. ಆದ್ದರಿಂದ ಶ್ರೇಷ್ಠ ಪದಾರ್ಥವನ್ನು ಬಲ್ಲವರೂ, ಅದನ್ನು ಕೊಡುವವರೂ ಕೆಲವೇ ಜನ. ಕೆಟ್ಟ ಪದಾರ್ಥವನ್ನು ಬಲ್ಲವರು, ಅದನ್ನು ಕೊಡ ಬಲ್ಲವರೂ ಹಲಬರಾದರೂ ವಸ್ತುಪರೀಕ್ಷಕರ ಸಹಾಯವಿಲ್ಲದೆ ಶ್ರೇಷ್ಠವಸ್ತುವನ್ನು ತಿಳಿದು ಕೊಳ್ಳಲು ಬರುವುದಿಲ್ಲ. ಕುವಸ್ತುವಾದರೋ ನೇಗಿಲು ಹಿಡಿದವರು, ದನಕಾಯುವವರ ತಿಳಿವಳಿಕೆಗೂ ಒಳಪಟ್ಟದ್ದಾದುದರಿಂದ, ಸರ್ವಜ್ಞನು ಸುವಸ್ತುವಾದುದರಿಂದ, ವಸ್ತು ಪರೀಕ್ಷೆಯನ್ನು ಬಲ್ಲವರಿಗೇ ಹೊರತು ಇತರರಿಗೆ ತಿಳಿಯಲು ಸಾಧ್ಯವಲ್ಲ. ೨೦೪. ಪರ

ಪರಮಾರ್ಥಂ ನಿರ್ದೋಷಿಯೆ
ಪರಮೇಶ್ವರನಾತನೆಂದುದಾಗಮಮಂತಾ
ಪರಮಾಗಮದರ್ಥಂ ವಿ
ಸ್ತರದಿಂದಂ ತತ್ತ್ವಮೆಂಬ ನಂಬುಗೆಯೆ ವಲಂ ೨೦೫

ಗದ್ಯ॥ ಸಮ್ಯಕ್ತ್ವಂ. ಆ ಸಮ್ಯಕ್ತ್ವಮೇಗೆಯ್ದುಂ ದೊರೆಕೊಳ್ಳದದು ಪುಣ್ಯದಿಂ ದೊರೆಕೊಂಡುದಪ್ಪೊಡನಂತಸುಖದೊಳ್ಕೂಡುಗುಮೆಂದು ವಣಿಗ್ವಂಶಲಲಾಮಂ ಪೇೞೆ, ವಸುಭೂತಿ ಕೇಳ್ದು ತಾಗಿ ಬಾಗಿದನಂತೆ ಮುನ್ನಿನ ದರ್ಪಂಗೆಟ್ಟು ಕದಡಿ ತಿಳಿದ ನೀರಂತೆ ಮನದೊಳ್ ನಿರ್ಮಳನಾಗಿ ಸಮ್ಯಗ್ದರ್ಶನಂ ದೊರೆಕೊಂಡುದಕ್ಕೆ ಮನದೊಳಾನಂದಂಬೆತ್ತು ಸಮ್ಯಕ್ತ್ವಚೂಡಾಮಣಿಯಂ ನಾನಾವಿಧದಿಂ ಪೊಗೞ್ದು ದರ್ಶನದೊಳ್ ದೃಢನಾಗಿರ್ದನನ್ನೆಗಮಿಭ್ಯಾನ್ವಯ ಪವಿತ್ರಂ ಮಱುದಿವಸಂ ಬೀಡನೆತ್ತಿ ಕತಿಪಯ ಪಯಣಂ ಭೋಗಿ ನಂದ್ಯಾವಲಿಯೆಂಬ ಪೆರಡವಿಯೊಳ್ ಬೀಡಂ ಬಿಡುವುದುಂ ೨೦೬

ನೆರೆದು ವನಚರರುಮೊರ್ಮೆಯೆ
ಭರವಶದಿಂ ತಾಗೆ ಸೆಟ್ಟಿಪಿರಿದಪ್ಪ ಬಲಂ
ಬೆರಸಿದಿರನದಿರದಣ್ಮಿಂ
ಕರಿಯೊಡ್ಡಂ ಸಿಂಹದೊಡ್ಡು ತಾಗುವತೆಱದಿಂ ೨೦೭

ಗದ್ಯ॥ ತಾಗಿ ಕಿಚ್ಚುಂ ಕಿಡಿಯುಮಾಗಿ ಕಾದುತ್ತಮಿರೆ ದೂರದೊಳಿರ್ದ ವಸುಭೂತಿಯುಂ ೨೦೮

ಮಾರ್ಥಂ, ಪರಮೇಶ್ವರನು ದೋಷರಹಿತನು. ಆತನು ಹೇಳಿದುದೇ ಆಗಮ. ಅಂಥ ಆಗಮದ ಅರ್ಥವೇ ತತ್ತ್ವವೆಂಬ ನಂಬಿಕೆಯೇ ಖಂಡಿತವಾಗಿಯೂ ಸಮ್ಯಕ್ತ್ವ. ೨೦೫. ಆ ಸಮ್ಯಕ್ತ್ವವು ಸುಲಭವಾಗಿ ಲಭಿಸುವುದಿಲ್ಲ. ಅದು ಪುಣ್ಯವಶದಿಂದ ಲಭಿಸಿದರೆ, ಅನಂತ ಸುಖವನ್ನುಂಟುಮಾಡುತ್ತದೆಯೆಂದು ವರ್ತಕ ಶ್ರೇಷ್ಠನು ಹೇಳಲು ಕೇಳಿ ವಸುಭೂತಿ ಸೋತವನಂತೆ, ಮೊದಲಿನ ದರ್ಪವನ್ನು ಕಳೆದುಕೊಂಡು ಕದಡಿ ಬಗ್ಗಡವಾಗಿದ್ದ ನೀರು ಮತ್ತೆ ತಿಳಿಯೂದ ಹಾಗೆ ಮನಸ್ಸಿನಲ್ಲಿ ಪರಿಶುದ್ಧನಾಗಿ ಸಮ್ಯಗ್ದರ್ಶನವುಂಟಾದುದಕ್ಕೆ ಮನಸ್ಸಿನಲ್ಲಿ ಆನಂದ ಹೊಂದಿ, ಸಮ್ಯಕ್ತ್ವಚೂಡಾಮಣಿಯನ್ನು ನಾನಾವಿಧವಾಗಿ ಹೊಗಳಿ ದರ್ಶನದಲ್ಲಿ–ಜೈನಧರ್ಮದ ನಂಬಿಕೆಯಲ್ಲಿ–ದೃಢನಾಗಿದ್ದನು. ಆವೇಳೆಗೆ ವರ್ತಕ ವಂಶಪವಿತ್ರನು (ದಯಾಮಿತ್ರಸೆಟ್ಟಿ) ಮರುದಿನ ಬೀಡನ್ನು ಎಬ್ಬಿಸಿ ಕೆಲವುದಿನ ಪ್ರಯಾಣ ಮಾಡಿ ನಂದ್ಯಾವಲಿಯೆಂಬ ದೊಡ್ಡ ಅಡವಿಯಲ್ಲಿ ಬೀಡುಬಿಟ್ಟನು. ೨೦೬. ಆಗ ಕಾಡು ಜನರು ಗುಂಪು ಕೂಡಿಕೊಂಡು ಇದ್ದಕ್ಕಿದ್ದಂತೆ ರಭಸದಿಂದ ಮೇಲೆ ಬೀಳಲು ಸೆಟ್ಟಿಯೂ ಅಂಜದೆ ತನ್ನ ಸೈನ್ಯದೊಡನೆ ಪರಾಕ್ರಮದಿಂದ ಆನೆಗಳ ರಾಶಿಯನ್ನು ಸಿಂಹಗಳ ಗುಂಪು ತಾಗುವ ಹಾಗೆ ೨೦೭. ಮೇಲೆಬಿದ್ದು ಮಹಾರೋಷದಿಂದ ಕಾದಾಡುತ್ತಿರಲು ದೂರದಲ್ಲಿದ್ದ ವಸುಭೂತಿಯನ್ನು ೨೦೮. ಆಯುಸ್ಸು ಮುಗಿದವರು ಯಾರೆಂಬುದನ್ನು ಅಂಬು

ಅಂಬಱಿಗುವನಾಯುತಪ್ಪಿದೊ
ಡೆಂಬೀ ನಾಣ್ಣುಡಿಯನಲ್ಲಿ ಪುಸಿ ಮಾಡದೆ ಕೂ
ರಂಬೊಂದು ಬಂದು ನಡೆ ನೋ
ವಿಂ ಬಿದ್ದಂ ಸಾವಪೊತ್ತನಾವಂ ಬಲ್ಲಂ ೨೦೯

ಗದ್ಯ॥ ಅಂತು ಬೀೞ್ವುದುಮತ್ತಮುಬ್ಬಿರ್ದ ಬೇಡರ ಗರ್ವದಗುರ್ವಂ ಕೆಡಿಸಿ ಕಾಳಗಮಂ ಗೆಲ್ದು ಬೀಡಂ ಪೊಕ್ಕು ನೊಂದಿರ್ದ ವಸುಭೂತಿಯಂ ಕಂಡು ಧರ್ಮಾಪಕ್ಷಪಾತದಿಂದೇೞು ಪಿಱಿದಪ್ಪುದಱಿಂ ಸನ್ಯಸನಮುಂ ಕೊಟ್ಟು ಪಂಚನಮಸ್ಕಾರಮುಂ ಪೇೞುತ್ತಿರ್ಪುದುಂ ಮತ್ತೆ ನಿಸದೆ ತನಗೆ ಜಿನನೆ ದೈವಮೆಂಬ ಭಾವನೆಯಿಂದ ವಸುಭೂತಿ ದಯಾಮೂಲಮಪ್ಪ ಧರ್ಮಮಂ ನೆನೆಯುತ್ತೆ ಮುಡಿಪಿ ದರ್ಶನ ಫಲದಿಂ ಸೌಧರ್ಮಕಲ್ಪದೊಳ್ ಮಣಿಪ್ರಭಾವಿಮಾನದೊಳ್ ಮಣಿಕುಂಡಲನೆಂಬ ದೇವನಾಗಿ ಪುಟ್ಟುವುದುಂ ೨೧೦

ಇದು ನಿನ್ನಿರ್ಪ ಮಹಾಪ್ರಭೋರ್ಜಿತವಿಮಾನಂ ನೂತ್ನಲಾವಣ್ಯದಿಂ
ದೊದವಿರ್ದೀ ದಿವಿಜಾಂಗನಾ ಸಮಿತಿ ಪೆಂಪಿಂ ನಿನ್ನ ಕಾಂತಾಜನಂ
ಮುದದಿಂದೀ ವಿಬುಧಾಳಿ ನಿನ್ನ ಪರಿವಾರಂ ದೇವ ಕೈಕೊಂಡು ಕಾ
ವುದು ನೀನೆಂದು ಸುರಾಳಿ ಬಿನ್ನವಿಸೆ ತದ್ದೇವಂ ಮಹಾಚೋದ್ಯದಿಂ ೨೧೧

(ಬಾಣ) ಬಲ್ಲದು ಎಂಬ ಗಾದೆಯನ್ನು ಇಲ್ಲಿ ಸುಳ್ಳು ಮಾಡದೆ ಹರಿತವಾದ ಒಂದು ಬಾಣ ಬಂದು ನಾಟಲು ನೋವಿನಿಂದ ಕೆಳಗೆ ಬಿದ್ದ. ಸಾಯುವ ಹೊತ್ತನ್ನು ಯಾವನು ಬಲ್ಲ? ೨೦೯. ಹಾಗೆ ಬೀಳಲಾಗಿ ಆತ್ತ ಸೆಟ್ಟಿಯು ಆ ಬೇಡರ ಹೆಚ್ಚಿದ ಕೊಬ್ಬನ್ನು ಅಡಗಿಸಿ, ಕಾಳಗದಲ್ಲಿ ಗೆದ್ದು ಬೀಡನ್ನು ಹೊಕ್ಕು ನೊಂದಿದ್ದ ವಸುಭೂತಿಯನ್ನು ಧರ್ಮಾಭಿಮಾನ ದಿಂದ, ಗಾಯ ದೊಡ್ಡದಾದ್ದರಿಂದ ಸನ್ಯಾಸ ದೀಕ್ಷೆಕೊಟ್ಟು ಪಂಚನಮಸ್ಕಾರಗಳನ್ನು ಹೇಳುತ್ತಿರಲು ಬೇರೇನೂ ಯೋಚಿಸದೆ ತನಗೆ ಜಿನನೇ ದೈವವೆಂಬ ಭಾವನೆಯಿಂದ ವಸು ಭೂತಿಯು ದಯಾಮೂಲವಾದ ಧರ್ಮವನ್ನು ಧ್ಯಾನಿಸುತ್ತ ಸತ್ತು ದರ್ಶನ (ಧರ್ಮದಲ್ಲಿ ನಂಬಿಕೆ)ದ ಫಲವಾಗಿ ಸೌಧರ್ಮ ಕಲ್ಪದಲ್ಲಿ ಮಣಿಪ್ರಭಾ ವಿಮಾನದಲ್ಲಿ ಮಣಿಕುಂಡಲ ನೆಂಬ ದೇವನಾಗಿ ಹುಟ್ಟಲು ೨೧೦. "ಮಹಾಪ್ರಭೊ! ಇದು ನೀನು ಇರುವ ಶ್ರೇಷ್ಠವಾದ ವಿಮಾನ, ನೂತನಲಾವಣ್ಯದಿಂದ ಕೂಡಿದ ಈ ದೇವತಾಸ್ತ್ರೀ ಸಮೂಹ ನಿನ್ನ ಕಾಂತಾ ಜನ. ಈ ದೇವಸಮೂಹ ನಿನ್ನ ಪರಿವಾರದವರು. ಸಂತೋಷದಿಂದ ಇವರನ್ನೆಲ್ಲ ಅಂಗೀ ಕರಿಸಿ ನೀನು ರಕ್ಷಿಸಬೇಕು" ಎಂದು ಸುರರ ಗುಂಪು ಬಿನ್ನವಿಸಲು ಆ ದೇವನು ಬಹಳ ಆಶ್ಚರ್ಯದಿಂದ ೨೧೧. ಆ ನಾರೀ ಸಮೂಹ ಯಾವುದು ? ಹೀಗೆ ಹೇಳುತ್ತಿರುವ

ಗದ್ಯ॥ ಆನಾರೀಲೋಕಮಾವುದೀ ಕೇಳಿಸುತ್ತಿರ್ದ ಪರಿಜನವಾರಿಂದು ಕುಱುಂಬನರಸು ಗಂಡಂತೆ ನೋಡುತ್ತುಮಿರ್ಪನ್ನೆಗಂ ಭವಪ್ರತ್ಯಯಜ್ಞಾನಂ ಪುಟ್ಟಿ ತಜ್ಞಾನದಿಂ ಪೆಱಗಣಭವ ಮನಱಿದು ಬೆಱಗಾಗಿ ೨೧೨

ಆನೆತ್ತ ದೇವಲೋಕದ
ನೂನಸುಖಾಸ್ಪದಮಿದೆತ್ತ ಬಗೆವೊಡಿದೆಲ್ಲಂ
ಮಾನಿತದರ್ಶನದಿಂದಂ
ತಾನಾದುದು ಭಾಪು ದರ್ಶನಂ ಕೇವಳಮೇ ೨೧೩

ಪುಸಿದೆನ್ನಂ ಪೊನ್ನಿಂ ಬಂ
ಚಿಸಿ ವೈಶ್ಯನುಪಾಯದಿಂದೆ ದರ್ಶನಮಂ ಬ
ಣ್ಣಿಸೆ ನಂಬಿ ದೇವನಾದೆಂ
ವಸುಧೆಗೆ ಸಮ್ಯಕ್ತ್ವಮುಳ್ಳಮನುಜನೆ ದೇವಂ ೨೧೪

ಆವಾವುಪಾಯದಿಂದಂ
ಜೀವಕ್ಕೊರಂತೆ ಧರ್ಮಮಂ ಪೇೞ್ದು ಸುಖ
ಕ್ಕಾವಗಮೆಯ್ದಿಪ ಪರದಱಿಂ
ಶ್ರಾವಕರಿಂ ರುಷಿಯರಿಂ ಕೃತಾರ್ಥರುಮೊಳರೇ ೨೧೫

ಗದ್ಯ॥ ಎಂದು ಮಹಾವಿಭೂತಿಯಿಂ ವಸುಭೂತಿಚರಾಮರಂ ಬಂದು ದಯಾಮಿತ್ರ ಸೆಟ್ಟಿಗೆ ಪೊಡಮಟ್ಟು, ನಿನ್ನ ಪ್ರಸಾದದಿಂದಾಂ ದೇವನಾದೆನೆಂದು ತನ್ನ ಮಹಿಮೆಯಂ ತೋಱಿ

ಪರಿವಾರದವರು ಯಾರೊ ! ಎಂದು ಕುರುಬನು ರಾಜತ್ವವನ್ನು ಕಂಡ ಹಾಗೆ ನೋಡುತ್ತ (ಭ್ರಮಿತನಾಗಿ) ಇರಲು ಭವಪ್ರತ್ಯಯಜ್ಞಾನ ಹುಟ್ಟಿತು. ಆದರಿಂದ ಹಿಂದಿನ ಜನ್ಮವನ್ನು ನೆನೆಸಿಕೊಂಡು ಆಶ್ಚರ್ಯ ಪಟ್ಟು ೨೧೨. ನಾನೆಲ್ಲಿ. ದೇವಲೋಕದ ಊನವಿಲ್ಲದ ಸುಖಾಶ್ರಯವಾದ ಈ ಸ್ಥಳವೆಲ್ಲಿ ? ಯೋಚಿಸಿದರೆ ಇದೆಲ್ಲ ಮಾನ್ಯವಾದ ದರ್ಶನದ ಮಹಿಮೆಯಿಂದ ಆದದ್ದು. ಭೇಷ್ ! ದರ್ಶನದ ಮಹಿಮೆ ಸಾಧಾರಣವೆ ? ೨೧೩. ಸುಳ್ಳಾಡಿ ಹೊನ್ನಿನ ಪ್ರಸ್ತಾಪದಿಂದ ನನ್ನನ್ನು ಮೋಸಪಡಿಸಿ ವೈಶ್ಯನು ಉಪಾಯವಾಗಿ ದರ್ಶನ ಮಹಿಮೆಯನ್ನು ವರ್ಣಿಸಲು ನಂಬಿ ನಾನು ದೇವನಾದೆ. ಸಮ್ಯಕ್ತ್ವವುಳ್ಳ ಮನುಷ್ಯನೇ ಲೋಕದಲ್ಲಿ ದೇವ. ೨೧೪. ಯಾವಯಾವ ಉಪಾಯದಿಂದಲಾದರೂ ಒಂದೇ ಸಮನಾಗಿ ಜೀವಿಗಳಿಗೆ ಧರ್ಮವನ್ನು ಹೇಳಿ ಯಾವಾಗಲೂ ಸುಖ ಪದವಿಗೆ ಕಳುಹಿಸುವುದರಿಂದ ಶ್ರಾವಕರಿಗಿಂತಲೂ ಋಷಿಯರಿಗಿಂತಲೂ ಧನ್ಯರುಂಟೆ ? ೨೧೫. ಎಂದು ಮಹಾ ವೈಭವದಿಂದ ವಸುಭೂತಿಯಾಗಿದ್ದ ಆ ದೇವನು ಬಂದು ದಯಾ ಮಿತ್ರ ಸೆಟ್ಟಿಗೆ ನಮಸ್ಕಾರಮಾಡಿ "ನಿನ್ನ ಅನುಗ್ರಹದಿಂದ ನಾನು ದೇವನಾದೆ." ಎಂದು ತನ್ನ

ದೇವಲೋಕಕ್ಕೆ ಪೋಗಿ ಪೋಡಶ ಕಲ್ಪಂಗಳ ನಂದೀಶ್ವರ ದ್ವೀಪದ ಮೇರುಗಿರಿಯ ಜ್ಯೋತಿರ್ಲೋಕದ ವ್ಯಂತರ ಲೋಕದ ಭವನಲೋಕದ ಮಣಿಕನಕಮಯಮಪ್ಪ ಕೃತ್ರಿಮ ಚೈತ್ಯಾಲಯಂಗಳಂ ದರ್ಶನವಿಶುದ್ಧಿಯಿಂದಿಂದ್ರಾದಿ ಪಂಚಕದೊಳ್ಪುಟ್ಟುವ ದೇವರುಮಂ ಕಂಡು ಬಲ್ಲಿತ್ತಂ ಕಬ್ಬಿರ್ಣನೊಳ್ ಕಟ್ಟಿಸಿದಂತೆ ಸಮ್ಯಕ್ತ್ವದೊಳ್ ದೃಢನಾಗಿ ೨೧೬

ಎಲ್ಲಿ ಜಿನಭವನವೊಳವಂ
ತಲ್ಲಿಯೆ ಮನದೆಱಕದೋಲಗಂ ಮುದದಿಂ ಮ
ತ್ತಲ್ಲಿಯೆ ಭೋಗಂ ನೆಲೆಯುಮ
ದಲ್ಲಿಯೆ ರಾಗಂ ಸುರಾಧಿಪಂಗತಿಶಯದಿಂ ೨೧೭

ಗದ್ಯ ॥ ಅಂತು ದೇವಲೋಕದ ಸುಖಮನೊಂದು ಸಾಗರೋಪಮ ಕಾಲಮನುಭವಿಸಿ ಬಂದಿಲ್ಲಿ ನಿನಗಂ ನಿನ್ನಗ್ರಮಹಿಷಿಗಂ ನಂದಶ್ರೀಗಮಭಯ ಕುಮಾರನಾಗಿ ಪುಟ್ಟಿ ವನಧಿಯಂತೆ ಗಂಭೀರನುಂ ದಿನಕರನಂತೆ ತೇಜಸ್ವಿಯುಂ, ಚಂದ್ರನಂತೆ ಸೌಮ್ಯನುಂ ಮನೋಜನಂತೆ ಸುಭಗನುಂ, ಸಕಲಶಾಸ್ತ್ರಪ್ರವೀಣನುಂ, ಜಾಣನುಮಾಗಿ, ಪ್ರತ್ಯಕ್ಷವಿರ್ದಪಂ; ಮೇಲೀತನುಂ ಮಹಾಮಂಡಲಿಕರ್ ತಪಂ ಬಡುವರೆಂಬಾದೇಶಮಂ ಕೇಳ್ದುತಪಂ ಒಟ್ಟು ಮುಡಿಪಿ ಸರ್ವಾರ್ಥಸಿದ್ಧಿಯೊಳ್ಪುಟ್ಟುವನೆಂದು ಗಣಧರ ಸ್ವಾಮಿಗಳ್ಪೇಟ್ಟುದುಂ, ದರ್ಶನದೊಳಾದ ಪ್ರತ್ಯಕ್ಷ ಫಲಮಂ ಕಂಡು ನಂಬಿ ೨೧೮

ಮಹಿಮೆಯನ್ನು ತೋರಿಸಿ ದೇವಲೋಕಕ್ಕೆ ಹೋಗಿ ಹದಿನಾರು ಕಲ್ಪಗಳ ನಂದೀಶ್ವರ ದ್ವೀಪದ ಮೇರು ಗಿರಿಯ ಜ್ಯೋತಿರ್ಲೋಕದ ವ್ಯಂತರಲೋಕದ, ಭವನಲೋಕದ. ಮಣಿಕನಕಗಳಿಂದ ತುಂಬಿದ ಕೃತಕ ಚೈತ್ಯಾಲಯಗಳನ್ನೂ, ದರ್ಶನವಿಶುದ್ಧಿಯಿಂದ ಇಂದ್ರಾದಿ ಪಂಚಕದಲ್ಲಿ ಹುಟ್ಟುವ ದೇವರುಗಳನ್ನೂ ನೋಡಿ ಬಲವಾದುದನ್ನು ಕಬ್ಬಿಣದಲ್ಲಿ ಕಟ್ಟಿಸಿದರೆಂಬಂತೆ ಸಮ್ಯಕ್ತ್ವದಲ್ಲಿ ದೃಢ ಮನಸ್ಸುಳ್ಳವನಾಗಿ ೨೧೬. ಎಲ್ಲಿ ಜಿನಭವನಗಳಿವೆಯೋ ಅಲ್ಲಿಯೇ ಮನಸ್ಸಿಗೆ ಸಂತೋಷ. ಪ್ರೀತಿ, ಅಲ್ಲಿಯೇ ಸಭೆ. ಅಲ್ಲಿಯೇ ಭೋಗ, ವಾಸವೂ ಅಲ್ಲಿಯೇ, ಆ ಸುರಾಧಿಪನಿಗೆ ಆ ಜಿನಾಲಯಗಳಿರುವೆಡೆಯಲ್ಲಿಯೇ ಆನಂದ. ೨೧೭. ಹಾಗೆ ದೇವಲೋಕದ ಸುಖವನ್ನು ಒಂದು ಸಾಗರೋಪಮಕಾಲ ಅನುಭವಿಸಿ ಬಂದು ಇಲ್ಲಿ ನಿನಗೂ ನಿನ್ನ ಅಗ್ರಮಹಿಷಿಯಾದ ನಂದಶ್ರೀಗೂ ಅಭಯ ಕುಮಾರನಾಗಿ ಹುಟ್ಟಿ, ಸಮುದ್ರದಂತೆ ಗಂಭೀರನೂ ಸೂರ್ಯನಂತೆ ತೇಜಸ್ವಿಯೂ ಚಂದ್ರನಂತೆ ಸೌಮ್ಯನೂ, ಮನ್ಮಥನಂತೆ ಸುಂದರನೂ, ಸಕಲ ಶಾಸ್ತ್ರಗಳಲ್ಲಿಯೂ ಪ್ರವೀಣನೂ ಜಾಣನೂ ಆಗಿ ಪ್ರತ್ಯಕ್ಷನಾಗಿದ್ದಾನೆ. ಅಲ್ಲದೆ ಈತನು ಮಹಾಮಂಡಲಿಕರು ತಪಸ್ಸಿಗಿಳಿಯುವರೆಂಬ ಸುದ್ದಿ ಕೇಳಿ ತಾನೂ ತಪಸ್ಸುಮಾಡಿ ಸತ್ತು ಸರ್ವಾರ್ಥಸಿದ್ಧಿ (ಲೋಕ)ಯಲ್ಲಿ ಹುಟ್ಟುವನೆಂದು ಗಣಧರಸ್ವಾಮಿಗಳು ಹೇಳಲು ದರ್ಶನದಿಂದಾದ ಪ್ರತ್ಯಕ್ಷ ಫಲವನ್ನು ಗಮನಿಸಿ ನಂಬಿ, ೨೧೮. ಹೆಚ್ಚಾದ ಸಂತೋಷದಿಂದ ತನಗೆ ಸಕಲ ಸಾಮಂತ

ಪಿರಿದು ಸಂತೋಷದಿಂದಂ ತನಗೆ ಸಕಲ ಸಾಮ್ರಾಜ್ಯಮುಂ ಕೈಗೆವಂದಂ
ತಿರೆ ಪೆರ್ಚಿದರೊಂದು ಮುಯ್ಯಿಲ್ಲದೆ ನಲಿದನನಂಗಾಂತಕಂ ಶೀಲರತ್ನಾ
ಭರಣಂ ತ್ರೈವಿದ್ಯ ಚಕ್ರೇಶ್ವರಂ ವಿಮಳ ಪದಾಂಭೋಜ ಭೃಂಗಂ ಜಿನಶ್ರೀ
ಚರಣಾಲಂಕಾರಶೀರ್ಷಂ ಸುಕವಿಜನಮನಃ ಪದ್ಮಿನೀರಾಜಹಂಸಂ ೨೧೯

ಇದು ನಿಖಿಳ ದಿವಿಜ ಪರಿವೃಢ ಮಕುಟತತಘಟಿತ ಮಣಿಗಣನಿಕರವಿಲುಳಿತ ಕಿರಣ ಚುಂಬನೀಯ ಪರಮ ಜಿನಚರಣಯುಗಳ ಸರಸೀರುಹಮತ್ತಮಧುಕರ ನಿರುಪಮ ಸಹಜಕವಿಜನಪಯಃಪಯೋಧಿಹಿಮಕರ ನುತ ಭಾವಯುತ ದಿಗಂಬರದಾಸ ನೂತ್ನ ಕವಿತಾವಿಳಾಸ ಶ್ರೀಮನ್ನಯಸೇನ ದೇವ ವಿರಚಿತಮಪ್ಪ ಧರ್ಮಾಮೃತದೊಳ್

## ಪ್ರಥಮಾಶ್ವಾಸಂ

ಜ್ಯವೂ ಸಿಕ್ಕಿದಂತೆ ಹೆಚ್ಚಿನ ಕಷ್ಟವಿಲ್ಲದೆ ಅನಂಗಾಂತಕ, ಶೀಲರತ್ನಾಭರಣ, ತ್ರೈವಿದ್ಯ ಚಕ್ರೇಶ್ವರ, ವಿಮಲಪದಕಮಲಭೃಂಗ, ಜಿನನ ಶ್ರೀಪಾದಗಳಿಗೆ ಅಲಂಕಾರವಾದ ಶಿರಸ್ಸುಳ್ಳವನು, ಸುಕವಿಜನರ ಮನಸ್ಸೆಂಬ ಪದ್ಮಿನಿಯಲ್ಲಿ ರಾಜಹಂಸನಾಗಿದ್ದ ಆ ದೇವನು ನಲಿದನು. ೨೧೯. ಇದು ಸಮಸ್ತ ದೇವತೆಗಳ ಶಿರಸಾಷ್ಟಾಂಗ ಪ್ರಣಾಮಗಳನ್ನು ಹೊಂದಿದ, ಜಿನಪಾದ ಕಮಲಗಳಲ್ಲಿ ತುಂಬಿಯಾದ, ನಿರುಪಮ ಸಹಜಕವಿಗಳೆಂಬ ಪಾಲ್ಗಡಲಿಗೆ ಚಂದ್ರನಾದ, 'ದಿಗಂಬರದಾಸ' 'ನೂತ್ನಕವಿತಾವಿಲಾಸ' ಎಂಬ ಬಿರುದುಗಳುಳ್ಳ ಶ್ರೀಮನ್ನಯಸೇನದೇವವಿರಚಿತವಾದ ಧರ್ಮಾಮೃತದಲ್ಲಿ ಪ್ರಥಮಾಶ್ವಾಸ.

# ದ್ವಿತೀಯಾಶ್ವಾಸಂ

ಶ್ರೀಗಿದುಮುಕುರಂ ಮುಕ್ತಿ
ಶ್ರೀಗಿದು ಲಾವಣ್ಯಮೆನಿಪ ದರ್ಶನರತ್ನಂ
ಬೇಗಂ ದೊರೆಕೊಳೆ ಪಿರಿದುಂ
ರಾಗಿಸಿದಂ ಸುಕವಿನಿಕರಪಿಕಮಾಕಂದಂ ೧

ಗದ್ಯ॥ ಅಂತನರ್ಘ್ಯಮಪ್ಪ ದರ್ಶನರತ್ನಮುಂ ಸಂಶಯಚೋರರ್ ಪುಗದಂತು ನಂಬುಗೆಯೆಂಬ ಬಲ್ಗಾಪನಿಕ್ಕಿ ಮನಮೆಂಬ ವಜ್ರದೋವರಿಯೊಳಿರಿಸಿ ೨

ಮಗಧಾವನೀಶ್ವರಂ ಕೈ
ಮುಗಿದುತ್ಸವದಿಂ ಮುನೀಂದ್ರವಂದ್ಯಕ್ರಮರಂ
ಜಗತೀಮಂಡನರಂ ಮಿ
ಕ್ಕಗಣಿತಗುಣಗಣರನರ್ತಿಯಿಂ ಗೌತಮರಂ ೩

ಗದ್ಯ॥ ಮುಂದಣ ನಿಶ್ಶಂಕೆಯ ಕಥೆಯುಂ ಬೆಸಗೊಳ್ವುದುಂ ಇಂತೆಂದು ಪೇಳ್ದರ್ ಅವಳ್ವಿತ್ತರಂತೆ ಕಾಡಿಗೆಯೆಚ್ಚುವರಂತೆ ಅಂದುಗೆಯಿಡುವರಂತೆ ಬತ್ತಂಗುಟ್ಟುವರಂತೆ ಕುದುರೆಯೇಱುವರಂತೆ ಮದುವೆಯ ಮನೆಯಂತೆ ಮೀಸೆಯಂ ತಿದ್ದುವರಂತೆ ಪೊಱೆಗಟ್ಟುವರಂತೆ ಉೞುವರಂತೆ

ಲಕ್ಷ್ಮಿಗೆ ಇದು ಕನ್ನಡಿ. ಮುಕ್ತಿಲಕ್ಷ್ಮಿಗೆ ಇದು ಲಾವಣ್ಯ, ಎಂದೆನ್ನಿಸುವ ದರ್ಶನ ರತ್ನವು ಬೇಗ ಲಭಿಸಲಾಗಿ ಸುಕವಿ ಸಮೂಹಗಳೆಂಬ ಕೋಗಿಲೆಗಳಿಗೆ ಮಾಕಂದನಾದ ಶ್ರೇಣಿಕನು ಬಹಳ ಹರ್ಷಪಟ್ಟನು ೧. ಹಾಗೆ ಅನರ್ಘ್ಯವಾದ ದರ್ಶನ ರತ್ನವನ್ನು ಸಂಶಯವೆಂಬ ಕಳ್ಳರು ಪ್ರವೇಶಿಸದ ಹಾಗೆ ನಂಬಿಕೆಯೆಂಬ ಬಲವಾದ ಕಾವಲನ್ನಿಟ್ಟು ಮನಸ್ಸೆಂಬ ವಜ್ರದ ಕೋಣೆಯಲ್ಲಿರಿಸಿ ೨. ಮಗಧರಾಜನು ಕೈಮುಗಿದು ಉತ್ಸಾಹದಿಂದ ಮುನೀಂದ್ರರಿಗೆ ವಂದನಾರ್ಹಪಾದಗಳುಳ್ಳವರಾದ ಜಗದಲಂಕಾರರಾದ ಉಳಿದ ಅಸಂಖ್ಯ ಗುಣಗಣಗಳನ್ನುಳ್ಳ ಗೌತಮರನ್ನು ೩. ಮುಂದಿನ ನಿಶ್ಶಂಕೆಯ ಕಥೆಯನ್ನು ಕೇಳಲು, ಅವರು ಹೀಗೆಂದು ಹೇಳಿದರು : ಅವಳಿ ಮಕ್ಕಳನ್ನು ಹೆತ್ತವರ ಹಾಗೆ, ಕಾಡಿಗೆಯನ್ನು ಹಚ್ಚುವವ (ಎರಡು ಕಣ್ಣಿಗೆ)ರಂತೆ, ಅಂದುಗೆ (ಎರಡು ಕಾಲುಗಳಿಗೆ) ಯಿಡುವವರ ಹಾಗೆ, ಬತ್ತವನ್ನು ಕುಟ್ಟುವ (ಇಬ್ಬರು ಸೇರಿ) ವರಹಾಗೆ, ಕುದುರೆಯೇರು (ಎರಡು ರಿಕಾಪುಗಳನ್ನು ಹಿಡಿದು) ವವರ ಹಾಗೆ, ಮದುವೆಯಮನೆ (ಮದವಣಿಗ ಮದವಣಗಿತ್ತಿ) ಯವರ ಹಾಗೆ ಮೀಸೆಯನ್ನು (ಎರಡು) ತಿದ್ದುವವರ ಹಾಗೆ ಹೊರೆಕಟ್ಟುವ (ಎರಡು ಕಟ್ಟು) ವರಹಾಗೆ ಉಳುವವರ (ಎರಡು ಎತ್ತು ಕಟ್ಟಿ) ಹಾಗೆ, ಬಂಡಿ (ಎರಡು ಗಾಲಿ) ಹೂಡುವವರ

ಬಂಡಿಹೂಡುವರಂತೆ ತೋರಣಂಗಟ್ಟುವರಂತೆ ಬಾಗಿಲ್ಮಾಡುವರಂತೆ ಸುರಗಗಿಟ್ಟುವವರಂತೆ ಅವುಳ್ವಡಿಗೇಱುವರಂತೆ ಕಾವಡಿಗಾಱನಂತೆ ಪಲ್ಲಂ ಸುಲಿವರಂತೆ ಮುನ್ನಿನ ದರ್ಶನಮುಂ ನಿಶ್ಶಂಕೆ ಯೆಂಬೆರಡುಮಂ ಲೇಸು ಮಾಡುವುದು ೪

ಶಂಕೆಯನೆ ಬಿಟ್ಟು ಮನದೊಳ್
ಕೊಂಕದೆ ಮಿಥ್ಯಾತ್ವಮೆಂಬ ಪೆರ್ಬುಲಿವಿಂಡಂ
ಸೋಂಕದೆ ಜಿನೇಂದ್ರ ಪದಯುಗ
ಪಂಕಜಮಂ ಪಿಡಿದನೆಯ್ದುಗುಂ ನಿರ್ವೃತಿಯಂ ೫

ಗದ್ಯ॥ ಇನ್ನದಱ ಮಹಿಮೆಯೆಂತೆಂದೊಡೆ ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ಕಾಶ್ಮೀರಮೆಂಬುದು ವಿಷಯಮಾ ವಿಷಯದೊಳ್ ೬

ಬಳಸಿದನಂದನವನದಿಂ
ಜಳರುಹಷಂಡಂಗಳಿಂ ತಟಾಕಂಗಳಿನು
ಜ್ಜ್ವಳಮಪ್ಪ ಜೈನಗೇಹಾ
ವಳಿಯಿಂ ಕರಮಲ್ಲಿಯೊಪ್ಪುಗುಂ ವಿಜಯಪುರಂ ೭

ಸುರಪತಿಸಮಾನವಿಭವಂ
ಸ್ಮರರೂಪಂ ರಿಪು ಕುಲಾಂತಕಂ ಜಿನಪದಸಂ
ಕರುಹ ಮಧುಪಂ ಗುಣಾಂಬುಧಿ
ಪರಹಿತನರಿಮಥನನೆಂಬನದನಾಳ್ವರಸಂ ೮

ಹಾಗೆ ಬಾಗಿಲು ಮಾಡುವವರ (ಬಾಗಿಲುವಾಡ ಮತ್ತು ಕದ) ಹಾಗೆ ಸುರಗಿ ಹೂ ಕಟ್ಟುವವರಂತೆ, (ಎರಡು ಹೂ ಜೋಡಿಸಿ ಕಟ್ಟುವ ವಾಡಿಕೆಯಿರಬಹುದು) ಜವಳಿವಡಿ (ಮಡಿಚುವ ಕದ)ವನ್ನು ಮಾಡುವವರ ಹಾಗೆ ಕಾವಡಿ (ಎರಡು ಕೊಡ)ಯನ್ನು ಹೊರು ವವರಂತೆ (ಅಡ್ಡೆ) ಹಲ್ಲುಜ್ಜುವವ (ಎರಡು ಸಾಲ)ರ ಹಾಗೆ ಮೊದಲಿನ ದರ್ಶನವೂ ನಿಶ್ಶಂಕೆಯೂ ಎಂಬ ಎರಡನ್ನೂ ಚೆನ್ನಾಗಿ ಮಾಡತಕ್ಕದ್ದು ೪. ಸಂಶಯವನ್ನೇ ಬಿಟ್ಟು ಮನಸ್ಸಿನಲ್ಲಿ ಚಲಿಸದೆ ಮಿಥ್ಯಾಧರ್ಮವೆಂಬ ಹೆಬ್ಬುಲಿಗಳ ಹಿಂಡನ್ನು ಮುಟ್ಟದೆ ಜಿನೇಂದ್ರಪಾದಯುಗಳಗಳೆಂಬ ಕಮಳವನ್ನೇ ಹಿಡಿದವನು ನಿರ್ವೃತಿ ಯನ್ನು ಹೊಂದುವನು ೫. ಇನ್ನು ಅದರ ಮಹಿಮೆ ಹೇಗೆಂದರೆ ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಕಾಶ್ಮೀರವೆಂಬ ಪ್ರಾಂತ್ಯ. ಆ ಪ್ರಾಂತ್ಯದಲ್ಲಿ ೬. ವಿಜಯಪುರ ವೆಂಬ ಮಹಾನಗರವು ಅನೇಕ ನಂದನವಗಳಿಂದಲೂ, ಕಮಲ ಸರೋವರಗಳಿಂದಲೂ ಕೆರೆ ಗಳಿಂದಲೂ ಮಹಾ ಪ್ರಕಾಶಮಾನವಾದ ಜೈನಗೃಹಗಳ ಸಮೂಹದಿಂದಲೂ ವಿಶೇಷ ವಾಗಿ ಶೋಭಿಸುತ್ತಿತ್ತು ೭. ದೇವೇಂದ್ರನಿಗೆ ಸಮಾನವಾದ ವೈಭವವುಳ್ಳವನೂ, ಮನ್ಮಥನಂಥ ರೂಪವುಳ್ಳವನೂ ಶತ್ರುಕುಲಗಳಿಗೆ ಯಮಸ್ವರೂಪನೂ, ಜಿನಸ್ವಾಮಿಯ ಪಾದ ಕಮಲಗಳಲ್ಲಿ ತುಂಬಿಯಂತಿರುವವನೂ (ಜಿನಭಕ್ತ), ಗುಣಸಮುದ್ರನೂ ಪರಹಿತ ಸಾಧಕನೂ ಆದ ಅರಿಮಥನನೆಂಬವನು ಆ ನಗರದ ರಾಜ ೮. ಕಮಲನಯನೆ, ಜಿನಪಾದ

ಸರಸಿರುಹನಯನೆ ಜಿನಪದ
ಸರೋಜ ಷಟ್ಪದೆ ಮನೋಜಗಜಗಾಮಿನಿ ಸುಂ
ದರ ಹೇಮಕುಂಭಕುಚೆ ಸೌಂ
ದರಿಯೆಂಬಳ್ ಪಟ್ಟದರಸಿಯಾ ಭೂಪತಿಯಾ ೯

ಆ ನೆಗಟ್ದರಿಮಥನಮ
ಹಾ ನರಪಂಗೆಂ ಸಮಸ್ತ ಗುಣನಿಳಯೆ ಸರೋ
ಜಾನನೆ ಸೌಂದರಿಗಂ ಭುವ
ನಾನಂದಂ ಪುಟ್ಟಿದಂ ಮಗಂ ಲಲಿತಾಂಗಂ ೧೦

ಗದ್ಯ॥ ಲಲಿತಾಂಗಂ ಶುಕ್ಲಪಕ್ಷದ ಚಂದ್ರನಂತೆ ಬಳೆಯುತ್ತುಮಿರ್ಪುದುಂ ತಾಯ್ಗಂ ತಂದೆಗ ಮಾತನೊಳ್ ಮೋಹಂ ತಿಣ್ಣಮಾಗೆ ೧೧

ಕೈಯೆತ್ತಿ ದುರ್ಜನಿಕ್ಕೆಗೆ
ಪೊಯ್ಯದೆ ದುರ್ಜನರೊಳಮ್ಮ ಕೂಡಿರವೇಡೆಂ
ದೊಯ್ಯನೆ ಶಿಕ್ಷಿಸಿ ಮುನಿಸಿಂ
ಬಯ್ಯದೆ ಪೊಲ್ಲಮೆಗೆ ಜಜಿಯಲಾಜದೆ ಪದಪಿಂ ೧೨

ಮಗನ ವಿನೋದಮಂ ಮಗನ ಮುದ್ದುಗಳಂ ಮಗನಾಡುವಾಟಮಂ
ಮಗನ ದುರುಕ್ತಿಯಂ ಮಗನ ದೂರ್ತುಗಳಂ ಮಗನೊಂದು ಕಯ್ತಮಂ
ಮಗನ ವಿಳಾಸಮಂ ಮಗನ ವೀರಮನೋಜೆಯನಾಗಳುಂ ಮುಗು
ಳ್ನಗೆವೆರಸಟ್ಕಜಿಂ ನಗುತೆ ನೋಡುತುಮಿಂತಿರುತಿರ್ದರಿರ್ವರುಂ ೧೩

ಸರೋಜಗಳಲ್ಲಿ ದುಂಬಿಯಾಗಿರುವವಳು, ಮನ್ಮಥಗಜಗಮನೆ, ಸುಂದರ ಹೇಮ ಕುಂಭಗಳಂಥ ಮೊಲೆಗಳುಳ್ಳವಳು, ಸೌಂದರಿ ಎಂಬವಳು ಆ ಭೂಪತಿಯ ಪಟ್ಟದ ಅರಸಿಯಾಗಿದ್ದಳು ೯. ಪ್ರಸಿದ್ಧನಾಗಿದ್ದ ಆ ಅರಿಮಥನ ಮಹಾರಾಜನಿಗೂ ಸಮಸ್ತಗುಣ ನಿಳಯಳಾದ ಕಮಲಮುಖಿ ಸೌಂದರಿಗೂ ಲಲಿತಾಂಗನೆಂಬ ಭುವನಾನಂದಕರನಾದ ಮಗ ಹುಟ್ಟಿದನು ೧೦. ಲಲಿತಾಂಗನು ಶುಕ್ಲಪಕ್ಷದ ಚಂದ್ರನಂತೆ ಬೆಳೆಯುತ್ತಿರಲು ತಾಯಿಗೂ ತಂದೆಗೂ ಅವನಲ್ಲಿ ಮೋಹ ಅತಿಶಯವಾಯಿತು ೧೧. ಅವನ ದುರ್ಜನಿಕೆಯನ್ನು ಕಂಡಾಗ ಕೈಯೆತ್ತಿ ಹೊಡೆಯದೆ, ದುರ್ಜನರ ಸಂಗಡ ಸೇರಬೇಡವೆಂದು ಅವನಿಗೆ ಬುದ್ಧಿ ಹೇಳಿ ಸಿಟ್ಟು ಮಾಡಿ ಬಯ್ಯದೆ, ಕೆಟ್ಟತನವನ್ನು ಕಂಡಾಗ ದಂಡಿಸಲಾರದೆ, ಪ್ರೀತಿಯಿಂದ ೧೨. ಮಗನ ವಿನೋದ, ಮಗನ ಮುದ್ದು, ಮಗನು ಆಡುವ ಆಟವನ್ನೂ, ಮಗನ ಕೆಟ್ಟಮಾತುಗಳನ್ನೂ ಅವನ ಧೂರ್ತಕೃತ್ಯಗಳನ್ನು ಅವನ ಚೇಷ್ಟೆ, ಲೀಲೆಗಳನ್ನೂ ಅವನ ಪರಾಕ್ರಮವನ್ನೂ ಓಜಸ್ಸನ್ನೂ ಯಾವಾಗಲೂ ಮುಗುಳುನಗೆಯಿಂದ ಕೂಡಿ ಅಕ್ಕರೆಯಿಂದ ನಗುತ್ತ ನೋಡುತ್ತ, ಇಬ್ಬರೂ ಹೀಗೆ ಹೊತ್ತು ಕಳೆದರು ೧೩. ಪುರಜನರನ್ನೂ

ಪುರಜನಮುಂ ಪರಿಜನಮುಂ
ಕರಮುಕ್ಕಿಂ ಪಿಡಿದು ತನ್ನಗೆಣೆಗಳ್ವಾನುಂ
ಪಂಭವಿಸಿ ಬಡಿಯಲರಸನು
ಮರಸಿಯುಃಮಟ್ಕಿರ್ತು ನೋಡುತಿರ್ಪರ್ನಗುತುಂ ೧೪

ಗದ್ಯ॥ ಅಂತು ಬೇವಂ ಪೊದಿರ್ದ ನೀರೆಂತು ಕಯ್ಪೆಯಕ್ಕುಮಾ ತೆರದಿಂ ದುರ್ಜನಸಂಗದಿಂದತಿ ಚಪಳನಾಗಿ ಸೊರ್ಕಿಂದಂ ಅಂಕುಶವಿಲ್ಲದ ಮದದಾನೆಯಂತೆ ಮೆಯ್ಯಱಿಯದೆ ೧೫

ಆಳವಟ್ಟದಟುಂ ಸೊರ್ಕುಂ
ಬಳಮುಂ ಜವ್ವನಮುಮೊದವೆ ತೀವ್ರತೆಯಿಂ ಸಂ
ಚಳಮತಿ ಬಿಡದಾರುಮನೊ
ಬ್ಬಳತವುಡಿಂಗಾಗದಂತು ಬಯ್ವಂ ಪೊಯ್ವಂ ೧೬

ಕಂಡವರೆದೆ ನಡುಗಲ್ಕಾಂ
ಮಿಂಡುಗಳಂ ಪಿಡಿದು ನಾಯುಮಂ ಪಂದಿಯುಮಂ
ಮಿಂಡರುಮಂ ಪೆಂಡಿರುಮಂ
ಗುಂಡೆಲ್ಲಂ ನೆರೆದು ನೋಡೆ ಕಾದಿಸುತಿರ್ಪಂ ೧೭

ಪುರದೊಳಗಣ ಸೂಳೆಯರೆ
ಲ್ಲರುಮಂ ಪಿಡಿದೆಟಿದು ತರಿಸಿ ಯಕ್ಷಿಯ ಮುಂದಾ
ದರದಿಂದಿರುಳೆಲ್ಲಂ ಜಾ
ಗರಮಿರಿಸುವನವನ ಸೊರ್ಕನಿನ್ನೇ ವೇಟ್ಟಿಂ ೧೮

ಸೇವಕ ಜನರನ್ನೂ ಬಹಳ ಜೋರಿನಿಂದ ಹಿಡಿದು ತನ್ನ ಗೆಳೆಯರೂ ತಾನೂ ಅಪಮಾನ ಗೊಳಿಸಿ ಹೊಡೆಯಲು ಅರಸನೂ ಅರಸಿಯೂ ಪ್ರೀತಿಯಿಂದ ನಗುತ್ತ ನೋಡುತ್ತಿದ್ದರು. ೧೪. ಹಾಗೆ ಬೇವಿನ ಗಿಡವನ್ನು ಹೊಂದಿದ ನೀರು ಹೇಗೆ ಕಹಿಯಾಗುವುದೋ ಆ ರೀತಿ ಯಲ್ಲಿ ದುರ್ಜನರ ಸಹವಾಸದಿಂದ ಅತಿ ಚಪಲಮನಸ್ಕನಾಗಿ ಕೊಬ್ಬಿನಿಂದ ಅಂಕುಶವಿಲ್ಲದ ಮದ್ದಾನೆಯಂತೆ ಮೈಮೇಲೆ ಎಚ್ಚರವಿಲ್ಲದೆ ೧೫. ಅಭ್ಯಾಸವಾದ ಪರಾಕ್ರಮ, ಕೊಬ್ಬು, ಬಲ, ಯೌವನವೂ ಒದಗಲು ಅತಿ ತೀಕ್ಷ್ಣವಾಗಿ ಆ ಚಂಚಲಚಿತ್ತನು ಯಾರನ್ನೂ ಬಿಡದೆ ಒಂದು ಬಳ್ಳಿತವುಡಿನ ಬೆಲೆಯೂ ಇರದವರಂತೆ ಬಯ್ಯುವನು, ಹೊಡೆಯುವನು ೧೬. ಕಂಡವರ ಎದೆ ಅಂಜಿಕೆಯಿಂದ ನಡುಗುವಂತೆ ತಾನು ಪುಂಡರನ್ನು ಹಿಡಿದು ನಾಯಿಗಳನ್ನೂ ಹಂದಿಗಳನ್ನೂ, ಮಿಂಡರನ್ನೂ ಹೆಂಗಸರನ್ನೂ ಪರಸ್ಪರ ಕಾದುವಂತೆ ಮಾಡಿ ಜನರೆಲ್ಲ ಗುಂಪು ಕೂಡಿ ನೋಡುತ್ತಿರಲು ತಾನೂ ನೋಡಿ ಸಂತಸಪಟ್ಟನು ೧೭. ಪಟ್ಟಣದಲ್ಲಿದ್ದ ಸೂಳೆಯರೆಲ್ಲರನ್ನೂ ಹಿಡಿದೆಳತರಿಸಿ ಯಕ್ಷಿಯ ಮುಂದೆ ಆದರದಿಂದ ರಾತ್ರಿಯೆಲ್ಲ ಜಾಗರಣೆ ಮಾಡಿಸುತ್ತಿದ್ದನು. ಅವನ ಸೊಕ್ಕನ್ನು ಏನೆಂದು ವರ್ಣಿಸೋಣ ? ೧೮.

ಮತ್ತಮುರ್ಕಿಂದಕ್ಕುಂದಲೆವಾಯ್ದು ತಾನುಂ ಮಿಂಡರ್ಗಳುಂ ನೆರೆದು ಪಿಡಿದು ೧೯

ತಿರಿದುಂಬ ತಿರಿಕರಂ ನಿ
ಷ್ಕರುಣದಿನಟ್ಟಿಯಟ್ಟಿ ಪಿಡಿದು ಸುಂಕಮನಿಕ್ಕೆಂ
ದರವರಿಸದೆ ಕಾಡುವನು
ರ್ವರೆಯುರಿವಿನವೂರೊ ಬಗೆವೊಡವನವೊಲಿಳೆಯೊಳ್ ೨೦

ಗದ್ಯ॥ ಮತ್ತಂ ಮಂತ್ರವಾದಿಯುಂ ಕಂಡ ಗ್ರಹದಂತೆ ತೆಲ್ಲಿಗರ್ ತಲ್ಲಣಿಸೆ ತೆಲ್ಲಿಗಗೇರಿಯುಂ ಪೊಕ್ಕು ೨೧

ಕೊಡದೆಣ್ಣೆಯೆಲ್ಲಮಂ ಕೂ
ಗಿಡೆ ದೂರ್ತಿಂ ಸೂಱೆಗೊಂಡು ಬಂದು ನಿತಾಂತಂ
ಸೊಡರಂ ಯಕ್ಷಿಯ ಮನೆಯೊಳ್
ತಡೆಯದೆ ಪೊತ್ತಿಸುವನೆಯ್ದೆ ಬೆಳಗಪ್ಪನೆಗಂ ೨೨

ಗದ್ಯ॥ ಮತ್ತೆ ಕಾಗೆಯುಂ ಕಂಡ ಕೋಗಿಲೆಯಂತೆ ಮಾಲೆಗಾಱರ್ ದೆಸೆಗೆಟ್ಟು ಪರಿಯೆ ಪೂವಿನ ಸಂತೆಯುಂ ಪೊಕ್ಕು ೨೩

ಸುರಗಿಮಲ್ಲಿಗೆ ಜಾಜಿಸಂಪಗೆ ಮೊಲ್ಲೆ ಕೇದಗೆ ಸಂದಪಾ
ದರಿಯ ಪೂಗಳನಾವಗಂ ನೆಱೆ ಸೂಱೆಗೊಂಡತಿದರ್ಪದಿ
ದಿರದೆ ತನ್ನೊಡನಿರ್ದಧೂರ್ತಜನಾಳಿಯುಂ ಸಲೆ ತಾನುಮೊ
ಪ್ಪಿರೆ ತುಱುಂಬಿ ವಿನೋದದಿಂ ನಗುವರ್ಕರುಳ್ಪಱಿವನ್ನೆಗಂ ೨೪

ಪುನಃ ರಭಸದಿಂದ ಅತಿಶಯವಾಗಿ ಮೇಲೆ ನುಗ್ಗಿ ತಾನೂ ಪುಂಡರೂ ಸೇರಿ ಹಿಡಿದು ೧೯. ಬಿಕ್ಕೆ ಎತ್ತಿ ಬದುಕುವ ತಿರುಕರನ್ನು ಕರುಣೆಯೇ ಇಲ್ಲದೆ ಅಟ್ಟಿ ಹಿಡಿದು ಹಿಂಸಿಸಿ 'ಸುಂಕ ಕೊಡಿ' ಎಂದು ಸ್ವಲ್ಪವೂ ಹಿಂತೆಗೆಯದೆ ಕಾಡಿಸತೊಡಗಿದನು ೨೦. ಮತ್ತೆ ಮಂತ್ರವಾದಿಯನ್ನು ಕಂಡ ಗ್ರಹದ ಹಾಗೆ ಗಾಣಿಗರು ತಲ್ಲಣಿಸುವಂತೆ ಗಾಣಿಗರ ಬೀದಿಯನ್ನು ಹೊಕ್ಕು ೨೧. ಕೊಡದಲ್ಲಿನ ಎಣ್ಣೆಯೆಲ್ಲವನ್ನೂ, ಅವರು ಗೋಳಿಡುತ್ತಿದ್ದರೂ, ಧೂರ್ತತನದಿಂದ ಸೂರೆಮಾಡಿ ತಂದು ಯಕ್ಷಿಯ ದೇವಾಲಯದಲ್ಲಿ ದೀಪಗಳನ್ನು ಹೊತ್ತಿಸಿ ಬೆಳಗಾಗುವ ತನಕ ಉರಿಸುತ್ತಿದ್ದನು ೨೨. ಹೂವಾಡಿಗರು ಕಾಗೆಯನ್ನು ಕಂಡ ಕೋಗಿಲೆಗಳ ಹಾಗೆ ಬೆದರಿ ದಿಕ್ಕೆಟ್ಟು ಓಡಲು ಪೂವಿನ ಸಂತೆಯನ್ನು ಹೊಕ್ಕು ೨೩. ಸುರಗಿ, ಮಲ್ಲಿಗೆ, ಜಾಜಿ, ಸಂಪಗೆ, ಮೊಲ್ಲೆ, ತಾಳೆ, ಪಾರಿಜಾತ ಮೊದಲಾದ ಹೂವುಗಳನ್ನು ಸಂಪೂರ್ಣವಾಗಿ ಲೂಟಿ ಮಾಡಿ ತೆಗೆದುಕೊಂಡು ತನ್ನ ಜತೆಯಲ್ಲಿದ್ದ ಧೂರ್ತಜನಸಮೂಹವೂ ತಾನೂ ಬೇಕಾದಷ್ಟು ಮುಡಿದುಕೊಂಡು, ಕರುಳು ಹರಿಯುವ ತನಕ ವಿನೋದದಿಂದ ನಗುತ್ತಾನೆ ೨೪. ಇನ್ನೂ ಹುಲಿಯನ್ನು ನೋಡಿದ ಹುಲ್ಲೆಗಳ ಗುಂಪು

ಗದ್ಯ॥ ಮತ್ತಂ ಪುಲಿಯಂ ಕಂಡ ಪುಲ್ಲೆಯ ಪಿಂಡಿನಂತೆ ಕಂಚುಗಾಱರ್ಭಯದಿಂ ಮನೆಯಂ ಬಿಟ್ಟು ಪೋಗೆ ಕಂಚುಗಾಱಗೇರಿಯಂ ಪೊಕ್ಕು ೨೫

ತಳಿಗೆ ಕನ್ನಡಿ ಸಿಪ್ಪು ಕಂಚಿನಸಟ್ಟುಗಂ ತೆಱುವಟ್ಟಲ
ಗ್ಗಳದ ಕೈಮುಳೆ ತಾಳವೊಪ್ಪುವಗಿಣ್ಣಲೆಂಬಿವನಾವಗಂ
ಕಳೆದುಕೊಂಡೊಡನಿರ್ದಧೂರ್ತಜನಕ್ಕೆ ಜೀವಿತಮೆಂದು ತ
ನ್ನೊಳೆ ವಿಚಾರಿಸಿ ನಿಚ್ಚಲುಂ ಕುಡುವಂ ನೃಪಾತ್ಮಜನರ್ತಿಯಿಂ ೨೬

ಗದ್ಯ॥ ಮತ್ತಂ ಸಿಂಹಮಂ ಕಂಡ ಕರಿಘಟೆಯಂತೆ ಕಂಡರ್ಬೆಗಡುಗೊಂಡು ನಿಂದ ನೆಲೆಯಂ ಬಿಟ್ಟೋಡೆ ನಿಷ್ಕರುಣದಿಂ ಬೆಂಕೊಂಡು ೨೭

ಕಳ್ಳಸಿಗಗೇರಿಯೊಳಗಣ
ಕಳ್ಳೆಲ್ಲಮನೆಟಿದು ತರಿಸಿಪೊಱಗಣ ಬನದೊಳ್
ಕಳ್ಳರ್ಗಂ ಧೂರ್ತರ್ಗಂ
ಭಿಲ್ಲರ್ಗಂ ಸೂಱೆಗೊಡುವನಿದುವೆ ವಿನೋದಂ ೨೮

ಗದ್ಯ॥ ಮತ್ತಂ ಬಗೆವಂದಗೊಡ್ಡಾಟಮನಾಡಲೆಂದು ದುರ್ಜನಪರಿವೃತನಾಗಿ ೨೯

ವರಭೂಷಣಮಂ ತೊಟ್ಟಿರ
ನೆರವಿಗೆ ಲೇಸಾಗಿ ತೊಡಿಸುವಂ ದಿವ್ಯಸ್ತ್ರೀ
ಯರನಟ್ಟಿ ಪಿಡಿದು ನೀರಂ
ತರಿಸುವನೋರಂತೆ ದೂರ್ತಿನಿಂ ಲಲಿತಾಂಗಂ ೩೦

ಅಂಜುವಂತೆ ಕಂಚುಗಾರರು ಭಯದಿಂದ ಮನೆಯನ್ನು ಬಿಟ್ಟು ಹೋಗಲು ಕಂಚುಗಾರರ ಕೇರಿಯನ್ನು ಹೊಕ್ಕು ೨೫. ತಳಿಗೆ, ಕನ್ನಡಿ, ಭರಣಿ, ಕಂಚಿನ ಸೌಟು, ತೆರೆದ ಬಟ್ಟಲು(?) ಶ್ರೇಷ್ಠವಾದ ಕೈತಟ್ಟೆ (ಸಿಬ್ಬಿತಟ್ಟೆ) ಗಿಂಡಿ, ಒಳಲೆ ಎಂಬಿವುಗಳನ್ನು ಎಳೆದುಕೊಂಡು ಯಾವಾಗಲೂ ಜತೆಗಿದ್ದ ಧೂರ್ತರಿಗೆ ಇದು ಜೀವಿತವೆಂದು ತನ್ನಲ್ಲಿಯೇ ಯೋಚಿಸಿ ರಾಜಪುತ್ರನು ಸಂತೋಷದಿಂದ ದಿನವೂ ಕೊಡುತ್ತಿದ್ದನು. ೨೬. ಇನ್ನು ಸಿಂಹವನ್ನು ಕಂಡ ಆನೆಗಳ ಹಿಂಡಿನಂತೆ ಕಂಡವರು, ಭಯಪಟ್ಟು ನಿಂತ ಸ್ಥಳವನ್ನು ಬಿಟ್ಟು ಓಡಿದರೆ, ನಿಷ್ಕರುಣೆಯಿಂದ ಬೆನ್ನಟ್ಟಿ ೨೭. ಹೆಂಡವನ್ನು ಇಳಿಸುವವರ (ಈಡಿಗರ) ಕೇರಿಯನ್ನು ಹೊಕ್ಕು ಹೆಂಡವನ್ನೆಲ್ಲ ಎಳತರಿಸಿ ಹೊರಗಿನ ಉದ್ಯಾನದಲ್ಲಿ ಕಳ್ಳರಿಗೂ ಪುಂಡರಿಗೂ ಭಿಲ್ಲರಿಗೂ ಸೂರೆಗೊಡುತ್ತಾನೆ. ಇದೇ ಅವನಿಗೆ ವಿನೋದ ೨೮. ಮತ್ತೆ ಮನಸ್ಸಿಗೆ ಬಂದ ಪುಂಡಾಟವನ್ನಾಡುವುದಕ್ಕೆಂದು ದುರ್ಜನರನ್ನು ಸುತ್ತ ಸೇರಿಸಿಕೊಂಡು ೨೯. ಶ್ರೇಷ್ಠವಾದ ಒಡವೆಗಳನ್ನು ದಾಸಿಯರ ಗುಂಪಿಗೆ ಅಂದವಾಗಿ ತೊಡಿಸುವನು; ಉತ್ತಮ ಸ್ತ್ರೀಯರನ್ನು ಅಟ್ಟಿ ಹಿಡಿದು ಅವರ ಕೈಲಿ ನೀರು ಹೊರಿಸುವನು. ಲಲಿತಾಂಗನು ತನ್ನ ಅತಿಯಾದ ಧೂರ್ತತನವನ್ನು ಮೆರೆದನು ೩೦. ಅಂದವಾದ ಕೊಳಗಳಲ್ಲಿಯೂ ಸುಂದರ

ಎಸೆವ ಕೊಳಂಗಳೊಳಂ ರಂ
ಜಿಸುವ ಮಹೋದ್ಯಾನ ರಮ್ಯವನಗಳೊಳಂ ಶೋ
ಭಿಸಿ ಪುರದಸೂಳೆಯುರ್ವೆರ
ಸಸಹಾಯಂ ಮನಕೆ ಬಂದವೊಲ್ ಕ್ರೀಡಿಸುವಂ ೩೧

ಗದ್ಯ॥ ಮತ್ತಮಾತಂಗೆ ಧೂರ್ತವಿನೋದವೆ ವಿನೋದಮಪ್ಪುದಱಿಂ ದುರ್ಜನ ಪರಿವೃತ
ನಾಗಿ ಬಂದಂಗಡಿಯಂ ಪುಗೆ ತೋಳನಂ ಕಂಡ ಕುಱಿವಿಂಡಿನಂತೆ ಪರದರ್ ಪರದುವೋಗೆ ೩೨

ದೂಸಿಗರಂಗಡಿಯಂ ಪೊ
ಕ್ಕಾಸುರಮಾಗೊದಱಿಪಿಡಿದು ಮಿಂಡುಂ ತಾನುಂ
ಲೇಸಪ್ಪ ವಸ್ತ್ರನಿಕರಮ
ನೋಸರಿಸದೆ ಸೂಱೆಗೊಂಡು ಚಾಗಂಗೆಯ್ವಂ ೩೩

ತಾನುಣ್ಣದ ಪೆಱರ್ಗಿಕ್ಕದ
ಪೇನಿಯ ಪಚ್ಚಡಿಕೆಯೆನಿಪ ಲೋಭಿಯಪೊನ್ನಂ
ತಾನೊಂದುಮುೞಿಯದಂತಿರೆ
ಹೀನಗುಣಂ ಕವರ್ದುಕೊಂಡು ಚಾಗಂಗೆಯ್ವಂ ೩೪

ಗದ್ಯ॥ ಮತ್ತಂ ಮಣಿಗಾಱರ ಪಸರಮಂ ಪೊಕ್ಕು ಓಡಲಿಂಬಿಲ್ಲದೆ ಕೈಗಳಂ ಮುಗಿದು ನಿಂದಿ
ರ್ದವರಂ ಲೆಕ್ಕಿಸದೆ ೩೫

ವಾದ ದೊಡ್ಡ ಉದ್ಯಾನಗಳಲ್ಲಿಯೂ ವನಗಳಲ್ಲಿಯೂ ಪಟ್ಟಣದ ಸೂಳೆಯರೊಡನೆ ಕೂಡಿ ಮನಸ್ಸಿಗೆ ತೋರಿದಂತೆ ವಿಹರಿಸುತ್ತಿದ್ದನು ೩೧. ಇನ್ನೂ ಅವನಿಗೆ ದೌರ್ಜನ್ಯದ ವಿನೋದವೇ ವಿನೋದವಾಗಲು, ದುರ್ಜನರಿಂದ ಕೂಡಿಕೊಂಡು ಹೋಗಿ ಅಂಗಡಿಯನ್ನು ಪ್ರವೇಶಿಸಲು ತೋಳವನ್ನು ಕಂಡ ಕುರಿಗಳ ಹಿಂಡಿನಂತೆ ವರ್ತಕರು ಚದರಿ ಹೋಗಲು ೩೨. ಸೀರೆ ವರ್ತಕರ ಅಂಗಡಿಯನ್ನು ಹೊಕ್ಕು ಭಯಂಕರವಾಗಿ ಕೂಗಿ ಹಿಡಿದು ತಾನೂ ತನ್ನ ಗುಂಪೂ ಉತ್ತಮವಾದ ವಸ್ತ್ರಗಳ ರಾಶಿಯನ್ನು ಲಕ್ಷ್ಯಮಾಡದೆ ಸೂರೆಗೊಂಡು ತ್ಯಾಗಮಾಡುವನು ೩೩. ತಾನೂ ತಿನ್ನದೆ ಬೇರೆಯವರಿಗೂ ಕೊಡದ ಹೇನಿನ ಹೊದಿಕೆಯೆನ್ನಿಸುವಂಥ ಲೋಭಿಯ ಹಣವನ್ನು ತಾನು ಒಂದೂ ಉಳಿಯದ ಹಾಗೆ ಹೀನಗುಣನಾದ ಲಲಿತಾಂಗನು ಲೂಟಿಮಾಡಿಕೊಂಡು ತ್ಯಾಗಮಾಡುವನು ೩೪. ಮತ್ತು ಮಣಿಗಾರರ ಅಂಗಡಿಯನ್ನು, ಹೊಕ್ಕು ಅವರು ಓಡಲು ದಾರಿಯಿಲ್ಲದೆ ಕೈಜೋಡಿಸಿ ನಮಸ್ಕರಿಸಿ ನಿಂತಿದ್ದರೂ ಲಕ್ಷ್ಯಮಾಡದೆ, ೩೫. ಶ್ರೇಷ್ಠವಾದ ಹವಳ, ಶಂಖ, ಮತ್ತು

ತಕ್ಕಿನ ಪವಳದಸಂಕೆಯು
ಟಕ್ಕೆಯು ಮಣಿಗಳನನೇಕಮಂ ಕೊಂಡವನುಂ
ಡೊಕ್ಕರಿಸದೆ ಕರುಣಿಸದಯು
ಶಕ್ಕಂಜದೆ ಸೂಱೆಗೊಳ್ವನವನುತ್ಸವದಿಂ ೩೬

ಮಸಗಿದನಿತುಂ ವಿಂಡುಂ ತಾನುಂ ಭಯಂಕರಮಾಗೆ ಬಂ
ದಸಗವೊಟ್ಟೆಯಂ ಪೊಕ್ಕೋವೋವೆಂದು ಕೂಗಿಡುವನ್ನೆಗಂ
ಕುಸಿಯದದಟಿಂ ವಸ್ತ್ರವ್ರಾತಂಗಳಂ ನೆಱೆಕೊಂಡು ಸಂ
ಕಿಸದೆ ತುಡುವಂ ತನ್ನಂ ಸುತ್ತಿರ್ದ್ದ ಧೂರ್ತಜನಕ್ಕವಂ ೩೭

ಸ್ಮರತಾಪಂ ಪೆಱಪಿಂಗೆ ಸೂಳೆಯರೊಳಂಗಂ ಪೊಂದಿ ಕೂಡಿರ್ದ ಗಂ
ಡರನಾಟಂದಲೆದಟ್ಟಿ ಪೊಯ್ದು ಕಳೆದೋರ್ಪಂದಾಂತೊಡಂ ತೂಳ್ದಿ ನಿ
ಷ್ಠುರ ಕೋಪಂ ಪಿಡಿದೊತ್ತಿ ಸೂಳೆಯರೊಳುಗ್ರಾಟೋಪದಿಂ ಬಲ್ಮೆಯಿಂ
ನೆರೆವಂ ಭೂಭುಜನಂದನಂ ಪಿರಿದರುಳ್ಳಳ್ಕಪ್ಪಿನಂ ದರ್ಪದಿಂ ೩೮

ಗದ್ಯ॥ ಮತ್ತಂ ಮಸಗಿರ್ದ ಸಿಂಗದಂತೆ ವಿಂಡುಗಳ್ ತಂಡತಂಡದಿಂ ಸುತ್ತಿಮುತ್ತಿ ಬರೆ ಬಂದೂರೊಳ್ ಕಂಡು ನಿಂದಿರ್ದರ್ನಿಂದಿರ್ದಲ್ಲಿಯೆ ಕುಳ್ಳಿರ್ದರ್ಕುಳ್ಳಿರ್ದಲ್ಲಿಯೆ ಕಂಪಿತರಂತೆ ಬಿಟ್ಟೋಡದಿರೆ ಸೂಳೆಗೇರಿಯಂ ಪೊಕ್ಕು ೩೯

ಬೆಲೆಬಾಳುವ ಅನೇಕ ಮಣಿಗಳನ್ನೂ ತೆಗೆದುಕೊಂಡು ಅವನೂ ಅದರಿಂದಾಗುವ ಅಪಯಶಸ್ಸಿಗೆ ಅಂಜದೆ ಸಂತೋಷದಿಂದ ಸೂರೆಗೊಳ್ಳುತ್ತಿದ್ದನು. ೩೬. ಅಷ್ಟು ಜನ ಪುಂಡರೂ ತಾನೂ ಭಯಂಕರವಾಗುವಂತೆ ವಿಜೃಂಭಿಸಿ, ಅಗಸರ ಕಡುವಿಗೆ (ಅಸಗವೊಟ್ಟೆ) ಹೊಕ್ಕು 'ಅಯ್ಯೋ' ಎಂದು ಕೂಗಿಟ್ಟುಕೊಂಡರೂ ಕುಗ್ಗದ ರಭಸದಿಂದ ಅವರು (ಒಗೆದಿಟ್ಟಿದ್ದ) ಬಟ್ಟೆಗಳ ಮೂಟೆಗಳನ್ನು ವಿಶೇಷವಾಗಿ (ಸಂಪೂರ್ಣವಾಗಿ) ತೆಗೆದುಕೊಂಡು ಶಂಕೆಯೇ ಇಲ್ಲದೆ ತೊಟ್ಟುಕೊಳ್ಳುವನು ; ತನ್ನ ಸುತ್ತ ಇದ್ದ ಪುಂಡಜನರಿಗೂ ತೊಡಿಸುವನು. ೩೭. ಕಾಮತಾಪವು ಹಿಮ್ಮೆಟ್ಟುವಂತೆ ಸೂಳೆಯರ ಅಂಗ ಸಂಗ ಮಾಡಿ ಕೂಡಿಕೊಂಡಿದ್ದ ಗಂಡಸರನ್ನು ಪೀಡಿಸಿ ಅಟ್ಟಿ ಹೊಡೆದು ಓಡಿಸಿ ಶತ್ರುರು ಎದುರಿಸಿದರೂ ಕಾದಿ ಸೋಲಿಸಿ ಕ್ರೂರಕೋಪದಿಂದ ಸೂಳೆಯರನ್ನು ಭಯಂಕರ ರಭಸದಿಂದ ಹಿಡಿದು ಬಲವಂತದಿಂದ ನೆರೆಯುತ್ತಾನೆ. ಆ ರಾಜನಂದನನು ಹಿರಿಯರ ಮನಸ್ಸಿಗೆ ಅಂಜಿಕೆಯಾಗುವಂತೆ ನಡೆಯುತ್ತಿದ್ದಾನೆ. ೩೮. ಮತ್ತು. ಸಿಟ್ಟುಗೊಂಡ ಸಿಂಹದಂತೆ ಪುಂಡರು ಗುಂಪುಗುಂಪಾಗಿ ಸುತ್ತಾಡಿ ಮುತ್ತುತ್ತ ಬರುತ್ತಿರುವಾಗ ಊರಲ್ಲಿ ಕಂಡು ನಿಂತಿದ್ದವರು ನಿಂತಿದ್ದಲ್ಲಿಯೇ ಕುಳಿತಿದ್ದವರು ಕುಳಿತಲ್ಲಿಯೇ ನಡುಕಹತ್ತಿ ಬಿಟ್ಟು ಓಡದೆ ಇದ್ದರೆ ಸೊಳೆಗೇರಿಯನ್ನು ಹೊಕ್ಕು ೩೯. ಸೂಳೆಯರು ಒಲಿದ ವಿಟರನ್ನು ಗಟ್ಟಿಯಾಗಿ ಕೂಗಿ ಗದ್ದಲಮಾಡಿ ಅಟ್ಟಿ

ಸೂಳೆಯರೊಲ್ವ ಬೋಜಂಗರ
ನಾಳಾಪದಿನಟ್ಟಿ ಕಳಿವನಬ್ಬಾನನೆಯರ್
ಕೇಳೊಲ್ಲದ ವಿಟರಂಕಡು
ಲೀಲೆಯಿನವರೊಡನೆ ನೆರೆಸುವಂ ದೂರ್ತಿಂದು ೪೦

ಈ ಕೇರಿಯ ಬೆಲೆವೆಣ್ಗಳ
ನಾಕೇರಿಯವಂದಿರೊಡನೆ ಕೂಡುವನಿರದಂ
ಆ ಕೇರಿಯ ಬೆಲೆವೆಣ್ಗಳ
ನೀ ಕೇರಿಯವಂದಿರೊಡನೆ ಕೂಡುವನದಟಂ ೪೧

ಕರಮುಱಿಯಟ್ಟಿ ದುಷ್ಟವಿಟ ಸಂಕುಲಮಂ ಪಿಡಿದೊರ್ವರಿಂದವೊ
ರ್ವರ ತಲೆಯಂ ಕಱುತ್ತರಿಸುತ್ತುಂ ಛಲದಿಂದಿರದೊರ್ವರಿಂದವೊ
ರ್ವರನಿಱಿಸುತ್ತೆ ತೂಕಿಱಿದು ಬೊಬ್ಬಿಱಿವಾಡುವನೊರ್ವರಿಂದವೊ
ರ್ವರನಱಿಯಟ್ಟಿ ಮೋದಿಸುತುಮೀ ತೆಱನಿಂ ನಗುತಿರ್ಪನಾವಗಂ ೪೨

ಗದ್ಯ॥ ಅಂತುರ್ಕಿ ಸೊರ್ಕಿಂದಕ್ಕುಂದಲೆವಾಯ್ದು ದೂರ್ತಿಂ ಕಣ್ಣಾಣದೆ ಸೂಳೆಗೇರಿಯಂ ಪೊಕ್ಕು ತಾಂ ಮಾೞ್ಪಬ್ಬರಕ್ಕೆ ಅಬ್ಬರಂ ಪಿರಿದಾಗೆ ಕಡೆಯ ಮನೆಯ ಕುಂಟಣಿಯೊರ್ವಳ್ ಸೆಜ್ಜೆಮನೆಯಂ ಪೊಕ್ಕು ೪೩

ತಡೆಯದೆ ಮಗಳೆಂದಳಿಯನ
ನಡುವಂ ತಳ್ಕೈಸಿಕೊಂಡು ಹಿತ್ತಲ ದೆಸೆಯೊಳ್
ಬಿಡದೋಡುವಾಕೆ ಕಾಣದೆ
ಕೆಡೆದಳ್ತಲ್ಲಣದಿನಾಗಳೆಂಜಲ ಕುಳಿಯೊಳ್ ೪೪

ಬಿಡುವನು. ಆ ಕಮಲ ಮುಖಿಯರು ಬಯಸದ ವಿಟರನ್ನು ನೋಡಿ ಅವರೊಡನೆ ಬಲವಂತದಿಂದ ಬೆರೆಯುವಂತೆ ಮಾಡಿ ವಿನೋದಿಸುವನು ೪೦. ಈ ಬೀದಿಯ ಸೂಳೆಯರನ್ನು ಆ ಬೀದಿಯ ಜನರೊಡನೆಯೂ ಆ ಬೀದಿಯ ಸೂಳೆಯರನ್ನು ಈ ಬೀದಿಯ ಜನರೊಡನೆಯೂ ನಿರ್ಬಂಧದಿಂದ ಸೇರುವಂತೆ ಮಾಡುವನು ೪೧. ಬಹಳವಾಗಿ ಹಿಂಸೆ ಮಾಡಿ ವಿಟ ಸಮೂಹವನ್ನು ಹಿಡಿದು ಒಬ್ಬರಿಂದೊಬ್ಬರ ತಲೆಯನ್ನು ಹೊಡೆಯಿಸುವನು, ಛಲದಿಂದ ಅವರು ಒಬ್ಬರೊಬ್ಬರೊಡನೆ ಇರಿದಾಡುವಂತೆ ಮಾಡುವನು. ತಾನೂ ಮೇಲೆ ಬಿದ್ದು ಇರಿದು ಆರ್ಭಟಮಾಡಿ ನಗುತ್ತಿದ್ದನು. ೪೨. ಹಾಗೆ ಹೆಚ್ಚಿದ ಕೊಬ್ಬಿನಿಂದ ಅತಿಶಯವಾಗಿ ಮೇಲೆ ಬಿದ್ದು ಧೂರ್ತತನದಿಂದ ತಲೆ ತಿರುಗಿ ಯಾರೂ ಲಕ್ಷ್ಯವಿಲ್ಲದೆ ಸೂಳೆಗೇರಿಯನ್ನು ಪ್ರವೇಶಿಸಿ ಅವರು ಮಾಡುವ ಅವಾಂತರದಿಂದ ಗದ್ದಲ ಹೆಚ್ಚಾಗಲು ಕೊನೆಯ ಮನೆಯ ಕುಂಟಣಿಯೊಬ್ಬಳು ಮಲಗುವ ಮನೆಯನ್ನು ಹೊಕ್ಕು ೪೩. ನಿದಾನಿಸದೆ ಮಗಳೆಂದು ಭಾವಿಸಿ ಅಳಿಯನ ನಡುವನ್ನು ತಬ್ಬಿಕೊಂಡು ಹಿತ್ತಿಲಕಡೆ ಒಂದೇಸಮನೆ ಓಡುತ್ತ ಗಾಬರಿಯಲ್ಲಿ ನೋಡದೆ ಎಂಜಲ ಗುಳಿಯಲ್ಲಿ ಬಿದ್ದಳು. ೪೪. ಮತ್ತೊಂದು

ಮತ್ತೊಂದೆಡೆಯೊಳೊರ್ವ ಪಂದೆಯುಪ್ಪ ವಿಟಂ ದೂರದಿಂದಬ್ಬರಮಂ ಕೇಳ್ದು ಸೂಳೆಯ ಕೆಲದಿಂದೆದ್ದೋಡುವಾಗಳ್ ಪಳುಕಿನ ಕಂಬದೊಳ್ ತನ್ನ ರೂಪಂ ಕಂಡು ಲಲಿತಾಂಗನೆಂದು ತಲ್ಲಣಿಸಿ ೪೫

ಇನ್ನಿತ್ತಲುಕ್ಕಿ ಬಂದೊಡೆ
ನಿನ್ನಾಣೆ ನರೇಂದ್ರ ಮುಳಿದು ಬಂದೊಡೆ ಕೊಲ್ಗೆ
ತ್ತಿನ್ನದೆ ನೀನಿನಿತೊಂದ
ಕ್ಕನ್ನೆಱೆ ಸೈರಸುವುದೆಂದು ಪೊಡೆಮಡುತಿರ್ದಂ ೪೬

ಗದ್ಯ॥ ಮತ್ತಮೊಂದೆಡೆಯೊಳೊರ್ವಂ ದೂರದಿಂ ಪಯಣಂ ಬಂದು ನಾಡೆಯುಂ ಬಳಲ್ದು ತಾನುಂ ತನ್ನ ವಲ್ಲಭೆಯುಂ ನಿದ್ರೆಗೆಯ್ಯುತ್ತಮಿರ್ದಂ ಲಲಿತಾಂಗನಿಂ ನೆರೆವನೆಯೊಳಾದ ಕಳಕಳ ರವಕ್ಕೆ ನಲ್ಲಳೆಚ್ಚತ್ತು ಪೊಱಗಂ ನೋಡಲೆಂದು ಬಂದು ಪಡುವೆಡೆಯುಂ ಕಾಣದೆ ಕರದಿಂ ತಡವರಿಸುತಿರೆ ತಾನುಮೆರ್ದು ಕಳ್ಳನೆಂದು ತೂಂಕಡಿಗಣ್ಣಿಂದಾಕೆಯ ಮುಂದಲೆಯ ನಡಸಿ ಪಿಡಿದು ೪೭

ಆನಿರ್ದೊಡೆ ಪೆಱತೇಂ ಗಡ
ತಾನದು ಪುಲಿಯಿರ್ದಮೆಳೆಯೆ ಬಗೆಯದೆ ಪೊಕ್ಕೈ
ನೀನಿಂದು ಸತ್ತೆಯೆಂದಾ
ದಾನನಮಂ ಪೊಯ್ದುನಡಸಿ ಸೊವಡಪ್ಪಿನೆಗಂ ೪೮

ಕಡೆಯಲ್ಲಿ ಒಬ್ಬ ಹೇಡಿಯಾದ ವಿಟನು ದೂರದಲ್ಲಿನ ಗದ್ದಲವನ್ನು ಕೇಳಿ ಸೂಳೆಯ ಪಕ್ಕದಿಂದ ಎದ್ದು ಓಡಿಹೋಗುವಾಗ ಸ್ಫಟಿಕದ ಕಂಬದಲ್ಲಿ ತನ್ನ ರೂಪವನ್ನು ನೋಡಿ, ಲಲಿತಾಂಗನೆಂದು ಭ್ರಾಂತಿಪಟ್ಟು ತಲ್ಲಣಕ್ಕೀಡಾಗಿ ೪೫. "ನರೇಂದ್ರನೆ ! ಇನ್ನು ಮೇಲೆ ಇತ್ತಕಡೆ ಬಂದೆನಾದರೆ ನನ್ನನ್ನು ಕೊಲ್ಲು. ಇಷ್ಟೊಂದಕ್ಕೆ (ಈಗ ಸೂಳೆ ಮನೆಗೆ ಬಂದದ್ದಕ್ಕೆ) ಸೈರಿಸುವುದು" ಎಂದು ಹೇಳುತ್ತ ಅಡ್ಡ ಬೀಳುತ್ತಿದ್ದನು. ೪೬. ಇನ್ನೊಂದು ಸ್ಥಳದಲ್ಲಿ ಒಬ್ಬನು ದೂರದಿಂದ ಪ್ರಯಾಣಮಾಡಿ ಬಂದು ಬಹಳ ಬಳಲಿ ತಾನೂ ತನ್ನ ಹೆಂಡತಿಯೂ ನಿದ್ದೆ ಮಾಡುತ್ತಿದ್ದು, ಲಲಿತಾಂಗನಿಂದ ನೆರೆಮನೆಯಲ್ಲಾದ ಕಲಕಲಶಬ್ದಕ್ಕೆ ಪ್ರಿಯಳು ಎಚ್ಚತ್ತು ಹೊರಗೆ ನೋಡುವುದಕ್ಕೆಂದು ಬಂದವಳು ಮತ್ತೆ ಮಲಗುವ ಕಡೆಗೆ ಹಿಂತಿರುಗಲು ದಾರಿಕಾಣದೆ ತಡವರಿಸುತ್ತಿದ್ದಾಗ ಅವಳ ಗಂಡನೂ ಎಚ್ಚತ್ತು ನಿದ್ದೆಗಣ್ಣಿನಿಂದ ಕಳ್ಳನೆಂದು ಭಾವಿಸಿ ಅವಳ ಮುಂದಲೆಯನ್ನು ಹಿಡಿದು ೪೭. 'ನಾನಿದ್ದರೆ ಅದು ಬೇರೇನೆಂದು ತಿಳಿದೆ ? ಅದು ಹುಲಿಯಿದ್ದ ಮೆಳೆಯೇ ಸರಿ. ಯೋಚಿಸದೆ ಹೊಕ್ಕಿರುವೆ ನೀನು ಈವೊತ್ತು ಸತ್ತೆ'ಯೆಂದು ಹೇಳುತ್ತ ಅವಳ ಮುಂದಲೆಯನ್ನು ಹಿಡಿದು ಮುಖಕ್ಕೆ ಹೊಡೆದನು ೪೮. ಇನ್ನೊಂದು ಕಡೆಯಲ್ಲಿ ಒಬ್ಬರ ದಾಸಿ "ಲಲಿತಾಂಗನು ಬಂದು

ಗದ್ಯ॥ ಮತ್ತಮೊಂದೆಡೆಯೊಳೊರ್ವರ ತೊಟ್ಟು ಲಲಿತಾಂಗಂ ಬಂದನಿನ್ನಾವಾತನ ತೋಟ ಪಿಂಗುವಿನಂ ನೆರೆವನೆಯೊಳಿರ್ದು ಬರ್ಪಮೇಟೆಮೆಂದು ತನ್ನಾಳ್ದಿಚ್ಚಿಯರಪ್ಪಬಧಿರೆಯರ್ಗಂ ಮೆಲ್ಲನೆ ಪೇಟ್ಟುದುಮವರ್ವಾನಿದು ಇಂತೆಂದರ್ ೪೯

ಪೊಲ್ಲಮೆಯಿಲ್ಲದೆ ಕಳವಿನಿ
ಸಿಲ್ಲದೆ ರಿಕ್ಕಟಮದೇಕೆ ಭೂಪಾಲಂ ನ
ಮ್ಮೆಲ್ಲರುಮಂ ಸೆಱೆವೊಯ್ದಪ
ನಿಲ್ಲಗೆ ನಾವಱಿಯವಲೆಗೆ ನೀಂ ಮಟ್ಟಮಿರಾ ೫೦

ಗದ್ಯ॥ ಮತ್ತೊಂದೆಡೆಯೊಳೊರ್ವಳ್ ಲಲಿತಾಂಗನ ಬರವಂ ಕಂಡು ತನ್ನ ಮಕ್ಕಳಪ್ಪ ಸೂಳೆಯರ್ಗೆ ಪರಿತಂದು ಪೇಟ್ಟುದುಮವರ್ತಾಯ ಮಾತಿಂಗೆ ಕಿನಿಸಿ ೫೧

ಪಳಿದಪರೆಂಬುದೇ ತಯೆಗೆ ಕೇರಿಯ ಸೂಳೆಯರೆಮ್ಮ ನಾವವ
ರ್ಗೆಳಿಯೆವೆ ಕೂಡುವ......
...ಪಲ್ದೆರದು ಪಾರುತುಮಿರ್ದೊಡೆವಾಯ್ದುರುಕ್ತಿಯಿಂ
ದೊಳಗಣ ಕಿವುಡಿಯರ್ ಪಿಡಿದುಕೊಂಡವಳಂ ಪೆಱಗಣ್ಗೆ ನೂಂಕಿದರ್ ೫೨

ಗದ್ಯ॥ ಮತ್ತಮೋಂದೆಡೆಯೊಳೊರ್ವಳ್ ಮುದುಗುಂಟಣಿ ಪೊಱಗೆ ನಿಂದು ದೆಸೆಯುಂ ನೋಡುವಾಕೆ ಲಲಿತಾಂಗನ ಬರವಂ ದೂರದೊಳೆ ಕಂಡೊಳಗೆ ಬಂದು ಮಗಳ್ಗೆ ಪೇಟೂಕ್ವಿಡವಳದಂ ಕೇಳದೆ ಮುನ್ನಿನ ಮುದುಬೋಜಂಗನಂ ಬರವೇಳ್ದಪಳೆಂದುರಿದೆದ್ದು ೫೩

ಇನ್ನು ಆತನ ಜಗಳ ನಿಲ್ಲುವವರೆಗೆ ನೆರೆಮನೆಯಲ್ಲಿದ್ದು ಬರೋಣ ಎಳಿ" ಎಂದು ತನ್ನ ಒಡತಿಯರಾದ ಕಿವುಡಿಯರಿಗೆ ಮೆಲ್ಲನೆ ಹೇಳುತ್ತಲೆ ಅವರು ಮುನಿಸಿಕೊಂಡು ಹೀಗೆಂದರು. ೪೯. ದೋಷವಿಲ್ಲದೆ, ಕಳವಿಲ್ಲದೆ ರಾಜನು ನಮ್ಮನ್ನು ಸುಮ್ಮನೆ ನಮ್ಮೆಲ್ಲರನ್ನೂ ಏತಕ್ಕೆ ಸೆರೆಗೆಕೊಂಡೊಯ್ಯುತ್ತಾನೆ ? ಲೇ ನೀನು ತೆಪ್ಪಗಿರೇ ೫೦. ಮತ್ತೊಂದು ಸ್ಥಳದಲ್ಲಿ ಲಲಿತಾಂಗನ ಬರುವಿಕೆಯನ್ನು ಕಂಡು ತನ್ನ ಮಕ್ಕಳಾದ ಸೂಳೆಯರ ಬಳಿಗೆ ಓಡಿಬಂದು ಹೇಳಲಾಗಿ ಅವರು ತಾಯಿಯ ಮಾತಿಗೆ ಕೋಪಗೊಂಡು ೫೧. [ಈ ಪದ್ಯದ ಪಾಠ ಸರಿಯಾಗಿಲ್ಲ] ಒಳಗಿದ್ದ ಕಿವುಡಿಯರು ಆ ಸೂಳೆಯ ಮಾತು ಸರಿಯಾಗಿ ಅರ್ಥವಾಗದೆ ಅವಳನ್ನು ಹೊರಕ್ಕೆ ನೂಕಿದರು ೫೨. ಇನ್ನೊಂದು ಕಡೆಯಲ್ಲಿ ಮುದುಕಿಯಾದ ತಲೆಹಿಡುಕಿಯೊಬ್ಬಳು ಹೊರಗೆ ನಿಂತು ದಿಕ್ಕುಗಳನ್ನು ನೋಡುತ್ತ ಲಲಿತಾಂಗನು ಬಂದುದನ್ನು ದೂರದಿಂದಲೇ ಗಮನಿಸಿ ಒಳಕ್ಕೆ ಬಂದು ಮಗಳಿಗೆ ಹೇಳಿದರೆ ಅವಳು ಅದನ್ನು ಕೇಳದೆ ಮೊದಲಿನ ಮುದುಕ ವಿಟನನ್ನು ಬರಹೇಳುವಳೆಂದು ಅರ್ಥಮಾಡಿಕೊಂಡು ಸಿಟ್ಟಿಗೆದ್ದು ೫೩. "ಗೊರಕೆ ಹೊಡೆದು ನಿಟ್ಟುಸಿರುಬಿಟ್ಟು ಸೀನುತ್ತ ಕೂಗುತ್ತ

ಕೊರೆದುಂ ಸುಯ್ದುಂ ಸೀಂತುಂ
ವೊರೆದುಂ ನಿದ್ರೆಯನೆ ಕಿಡಿಪ ಮುದುವೊರಸಂ ಮ
ತ್ತೆರಡಿಲ್ಲದೊಲ್ಲೆನೆಂದೊಡೆ
ಕರದಿಂ ಕಡುದೂರ್ತೆಯೆಂದು ಮೊಗಮಂ ಪೊಯ್ದಳ್ ೫೪

ಗದ್ಯ॥ ಮತ್ತಮಸಗವೊಲೆಯೊಳೊರ್ವಳಸಗನ ಪೆಂಡತಿ ಕುರುಡನಪ್ಪಸಗಂಗೆ ಲಲಿತಾಂಗಂ ಬಂದನೆಂದು ಪೇಳ್ದೊಡಾಯೆಡೆಗೆ ಬಂದನಕಟೆಂದು ತಡವರಿಸಿ ೫೫

ಪಟ್ಟಿರ್ದ ನಾಯ ನಡುವಂ
ಮೆಟ್ಟಿ ಕನಲ್ದೊಡನೆ ಮೇಲೆ ಪಾಯ್ದುದು ತಿನೆ ಬಾ
ಯ್ವಿಟ್ಟು ಲಲಿತಾಂಗನಿಱಿದಂ
ಕೆಟ್ಟೆನೆನುತ್ತೋಡುವಾತನಂ ಮತ್ತೊರ್ವಂ ೫೬

ಗದ್ಯ॥ ತಾಂ ಕಂಡು ದಿಟವೆಂದೆ ಬಗೆದು ಭಯದಿಂದೋಡುತ್ತಿರೆ ಕಾಡೊಳೊಂದು ಮರದ ಕೊಂಕುಗೋಂಬಾತನ ತುಱುಂಬಂ ಪಿಡಿದು ತಡೆಯೆ ಪೆಱಗಂ ನೋಡಲಣ್ಮದೆ ೫೭

ಬಿಡು ನಿನ್ನ ಧರ್ಮಮಿನ್ನಾಂ
ನುಡಿಯೆಂ ಮತ್ತೆಂಟು ಮಕ್ಕಳೊಳವೆನಗಾಂ ಸ
ತ್ತೊಡೆ ಪೆಱಗೀ ವೃಂದಮನ
ಪ್ಪೊಡೆ ಪೊರೆವರಿಲ್ಲ ಪಾಂ ದೇಸಿಗನೆಂ ೫೮

ನಿದ್ದೆಯನ್ನೇ ಹಾಳುಮಾಡುವ ಆ ಮುದಿಪಾರಿವಾಳವನ್ನು ನಿಸ್ಸಂಶಯವಾಗಿ ಒಲ್ಲೆ." ಎನ್ನಲು ಅವಳು ಕಡುಧೂರ್ತೆಯೆಂದು ಬೈದು ಕೈಯಿಂದ ಹೊಡೆದಳು ೫೪. ಅಗಸರ ಹೊಲೆಯಲ್ಲಿ ಒಬ್ಬ ಅಗಸನ ಹೆಂಡತಿ ಕುರುಡನಾದ ಅಗಸನಿಗೆ ಲಲಿತಾಂಗ ಬಂದನೆಂದು ಹೇಳಲು 'ಅಯ್ಯೋ ಇಲ್ಲಿಗೂ ಬಂದನೆ ?' ಎಂದು ತಡವರಿಸುತ್ತ, ೫೫. ಮಲಗಿದ್ದ ನಾಯಿಯ ಸೊಂಟವನ್ನು ಮೆಟ್ಟಲು ಅದು ಸಿಟ್ಟಾಗಿ ಒಡನೆಯೇ ಮೇಲೆ ನುಗ್ಗಿ ಕಚ್ಚಲು ಬಾಯಿಬಿಟ್ಟು, ಗಟ್ಟಿಯಾಗಿ 'ಲಲಿತಾಂಗನು ಇರಿದನು. ಕೆಟ್ಟೆ' ಎಂದು ಕೂಗಿ ಕೊಳ್ಳುತ್ತ ಓಡುತ್ತಿದ್ದನು. ಆತನನ್ನು ಮತ್ತೊಬ್ಬ ೫೬. ತಾನು ಕಂಡು ಅದು ನಿಜ ವೆಂದೇ ಯೋಚಿಸಿ ಭಯದಿಂದ ಓಡುತ್ತಿರಲು ಕಾಡಿನಲ್ಲಿ ಒಂದು ಮರದ ಡೊಂಕಾದ ಕೋಂಬೆಯು ಆತನ ಜುಟ್ಟನ್ನು ಹಿಡಿದು ತಡೆಯಲು ಹಿಂದೆ ನೋಡಲು ಧೈರ್ಯವಿಲ್ಲದೆ ೫೭. "ಬಿಡು, ನಿನ್ನ ಧರ್ಮ. ನಾನು ಹೇಳಲಾರೆ. ನನಗೆ ಎಂಟು ಮಕ್ಕಳಿವೆ. ನಾನು ಸತ್ತರೆ ಆಮೇಲೆ ಈ ಗುಂಪನ್ನು ಸಲಹುವವರಿಲ್ಲ ನಾನು ಪರದೇಶಿ. ೫೮. ಹೀಗೆ

ಗದ್ಯ॥ ಅಂತುರಿಯುತ್ತುಮಿರ್ದ ಲಲಿತಾಂಗನ ಪೊಲ್ಲಮೆಯಂ ಕಂಡು ಬುದ್ಧಿವಂತರಿಂತೆಂದರ್ ೫೯

ಅರಸನಮಗನುರ್ಕಿಂದು
ರ್ವರೆಯಂುರಿಪೊಡಮಾನೆಸೊರ್ಕಿಕೊಲ್ವೊಡೆ ಕಿಚ್ಚ
ಚ್ಚರಿಯಾಗಿ ತಾನೆ ಸುಡುವೊಡೆ
ಕರಮವನಡ್ಡೈಸಿ ತಾಗಿ ಮಾರ್ಕೊಳ್ವವರಾರ್ ೬೦

ಗದ್ಯ॥ ಮತ್ತಂ ಕೆಲಂಬರ್ ವಿವೇಕಿಗಳಿಂತೆಂದರ್ ೬೧

ಸುತನೆಂದು ಮನ್ನಿಪಂ ಕ್ಷಿತಿ
ಪತಿ ತುಪ್ಪದ ಕೊಡನಮೇಗಣಲಿಯಾತಂ ಗ
ರ್ವಿತನಾದನೆಂದೊಡವನು
ದ್ಧತಿಯಿಂದೀ ಮಹಿಯೊಳಂಜದಿರ್ಪವನಾವಂ ೬೨

ಗದ್ಯ॥ ಎಂದಿಂತು ಪೊಟಲೆಲ್ಲಮಲ್ಲೋಲ್ಲಕಲ್ಲೋಲವಾಗೆ ಕನಸಿನೊಳಂ ಲಲಿತಾಂಗನ ಭಯಮೆ ತಿಣ್ಣಮಾಗೆ, ಬೆಗಡುಗೊಂಡೆರಡು ಬೆಟ್ಟದನಡುವೆ ಪರಿವ ಪೆರ್ದೊಱೆಯಂತೆ ಮೂಗಂ ಬಾಯುಮಂ ಪಿಡಿದೊತ್ತಿದಂತೆ ಕರಮುಮ್ಮಳಿಸಿ ನೆರೆದೆಲ್ಲಮೊಂದಾಗಿ ರಾಜಮಂದಿರದ ಬಾಗಿಲ್ಗೆ ಬಂದು ಪುಯ್ಯಲಿಡುವುದುಮಾ ಪುಯ್ಯಲನೋಲಗದೊಳಿರ್ದರಿಮಥನಮಹಾರಾಜಂ ಕೇಳ್ದನಿಬರಂ ಬರವೇಳ್ದು ಪುಯ್ಯಲಿದೇನೆಂದು ಬೆಸಗೊಳ್ವುದುಂ ಬಿನ್ನಪಮೆಂದು ಕೈಮುಗಿದವರಿಂತೆಂದರ್ ೬೩

ಉರಿಯುತ್ತಿದ್ದ ಲಲಿತಾಂಗನ ಕೆಟ್ಟತನವನ್ನು ನೋಡಿ ಬುದ್ಧಿವಂತರು ಹೀಗೆಂದರು ೫೯. ಅರಸನ ಮಗನು ಕೊಬ್ಬಿನಿಂದ ದೇಶವನ್ನು ಉರಿಸುತ್ತಿದ್ದಾನೆ. ಆನೆ ಮದಿಸಿ ಕೊಲ್ಲ ಹೊರಟರೆ, ಕಿಚ್ಚು ಸುಡತೊಡಗಿದರೆ ಅವನ್ನು ಅಡ್ಡಿಪಡಿಸಿ ಪ್ರತಿಭಟಿಸುವವರು ಯಾರು ? ೬೦. ಮತ್ತೆ ಕೆಲವರು ವಿವೇಕಿಗಳು ಹೀಗೆಂದರು ೬೧. "ರಾಜನು ಲಲಿತಾಂಗನು ತನ್ನ ಮಗನೆಂದು ಮನ್ನಿಸುತ್ತಿದ್ದಾನೆ, ಅವನು ಈಗ ತುಪ್ಪದ ಕೊಡದಮೇಲಿನ ಇಲಿ ! ಅವನು ಗರ್ವಿತನಾಗಿದ್ದಾನೆಂದರೆ ಅವನ ಔದ್ಧತ್ಯದಿಂದ ಈ ದೇಶದಲ್ಲಿ ಹೆದರದೆ ಇರುವವನು ಯಾವನು ?" ೬೨. ಎಂದು ಹೀಗೆ ಪಟ್ಟಣವೆಲ್ಲ ಅಲ್ಲೋಲ ಕಲ್ಲೋಲವಾಗಲು ಕನಸಿನಲ್ಲಿಯೂ ಲಲಿತಾಂಗನ ಭಯವೇ ಹೆಚ್ಚಾಗಲು, ಗಾಬರಿಗೊಂಡು ಎರಡು ಬೆಟ್ಟಗಳ ನಡುವೆ ಹರಿಯುವ ದೊಡ್ಡ ತೊರೆಯ ಹಾಗೆ, ಮೂಗು ಬಾಯಿಗಳನ್ನು ಹಿಡಿದು ಒತ್ತಿದ ಹಾಗೆ ಬಹಳವಾಗಿ ದುಃಖಪಟ್ಟು ಎಲ್ಲರೂ ಒಂದಾಗಿ ಸೇರಿ ರಾಜಮಂದಿರದ ಬಾಗಿಲಿಗೆ ಬಂದು ಕೂಗಿಕೊಳ್ಳಲು ರಾಜಸಭೆಯಲ್ಲಿದ್ದ ಅರಿಮಥನ ಮಹಾರಾಜನು ಆ ಗದ್ದಲವನ್ನು ಕೇಳಿ ಎಲ್ಲರನ್ನೂ ಬರಹೇಳಿ "ಇದೇನು ಹುಯ್ಯಲು ?" ಎಂದು ಕೇಳಿದನು. ಆಗ ಅವರು 'ಬಿನ್ನಹ' ಎಂದು ಕೈಮುಗಿದು ಹೀಗೆ ಹೇಳಿದರು ೬೩. ಸ್ವಾಮಿ, ತಮ್ಮ ಮಗ ದಯೆಯಿಲ್ಲದೆ, ಭಯವಿಲ್ಲದೆ ಪುಂಡರ

ದೇವ ಭವತ್ಪುತ್ರಂ ಕರ
ಮೋವದೆ ಸಂಕಿಸದೆ ಮಿಂಡುವಡೆವೆರಸದಟಂ
ದೋವೋವೆಂದೆಳಱೆ ಜನಂ
ದಾವಾನಲನಂತೆ ಸುಡುವನಿರುಳುಂ ಪಗಲುಂ ೬೪

ಗದ್ಯ॥ ದೇವಾ ಮತ್ತಂ ನಿಮ್ಮ ಕುಮಾರನಿನಾದ ಪೊಟಲೊಳಗಣ ಮಹಾಭಯಮಂ ಪೇೞ್ವೊಡೆ, ೬೫

ಪೊಱಮಟ್ಟಂ ಲಲಿತಾಂಗನೆಂದೊಡಮವರ್ಬಳ್ಕುತ್ತುಮಳ್ಕುತ್ತೆ ಪೊ
ಚ್ಚಱಿಗೆಟ್ಟೋಡುವರಿರ್ವರೊಂದೆಡೆಯೊಳಂ ಮಾತಾಡಲಣ್ಮರ್ವಿಟ
ರ್ನೆಱೆಬೆರ್ಚಿಂ ಚೆಲೆವೆಂಡಿರೊಳ್ನುಡಿಯಲಣ್ಮರ್ಭೀತಿಯಿಂ ಬೀರಮಂ
ಮಱೆದುಂಪಾಡಿಸಲಣ್ಮರಂಕಮನವರ್ಬಿಟ್ಟೋಡಲಣ್ಮರ್ಭಟರ್ ೬೬

ಗದ್ಯ॥ ಮತ್ತಮಾತಂ ಮಾಡುವನಾಚಾರಮಂ ಪೇೞ್ವೊಡೆ ತಂಬುಳಿಗರನಂಬಲಿಯುಂ ಮಟ್ಟೆ ಗಟ್ಟುವರಂತೆ ಕೋಡಗಗಟ್ಟಂಕಟ್ಟಿ ಕಾಡುವಂ; ಚನ್ನಿಗರಂ ಮನ್ನಿಸಿಮೆಂದು ಬಡಿದು ಬಾಯ್ತೀವೆ ಪುಡಿಯಂ ಪೊಯ್ಯುವಂ, ಸೊಕ್ಕಿರ್ದರಮದಮಿಂತಲ್ಲದಃಡುಗದೆಂದು ಸಾಯೆ ಬಡಿಸುವಂ ; ಬಿರುದರ್ಗರಿದೆನಿಸುವ ಬಾಧೆಯುಂ ಮಾಡಿಸುವಂ; ವೀರರ ಪಡಪಂ ಪಾಱಿಸುವಂ; ಮಿಂಡರನಂಡಲೆದೇಳಿಸುವಂ ; ಬಂಟರಂ ಕೊಂಡಾಡುವರ ಗಂಟಲೊಳ್ನೇಣನಿಕ್ಕಿತೆಗೆಯಿಸುವಂ ; ಗಂಡರಂ

ಪಡೆಯನ್ನು ಕಟ್ಟಿಕೊಂಡು ರಭಸದಿಂದ ನುಗ್ಗಿ ಜನ ಅಯ್ಯೋ ಅಯ್ಯೋ ಎಂದು ಅಂಜಿ ಕೂಗಿಕೊಳ್ಳುತ್ತಿದ್ದರೂ ಕಾಡುಕಿಚ್ಚಿನ ಹಾಗೆ ಹಗಲು ರಾತ್ರಿಯೆನ್ನದೆ ಸುಡುತ್ತಿದ್ದಾನೆ ೬೪. ಸ್ವಾಮಿ, ನಿಮ್ಮ ಯುವರಾಜನಿಂದ ಪಟ್ಟಣದಲ್ಲಿ ಉಂಟಾಗಿರುವ ಮಹಾ ಭಯವನ್ನು ಹೇಳಬೇಕಾದರೆ ೬೫. 'ಲಲಿತಾಂಗನು ಹೊರಟಿದ್ದಾನೆ' ಎಂದರೆ ಜನ ಹೆದರಿಕೊಂಡು ಓಡುತ್ತಾರೆ. ಇಬ್ಬರು ಒಂದು ಕಡೆ ಸೇರಿ ಮಾತಾಡಲು ಅಂಜುವರು. ವಿಟರು ಹೆಚ್ಚಿನ ಭಯದಿಂದ ಸೂಳೆಯರೊಡನೆ ಮಾತನಾಡಲು ಅಂಜುವರು. ಭಟರು ವೀರಕಥೆಯನ್ನು ಮರೆತು ಕೂಡ ಹಾಡಿಸುವ ಧೈರ್ಯಮಾಡಲಾರರು, ಸ್ಥಳವನ್ನು ಬಿಟ್ಟು ಓಡಲೂ ಆರರು ೬೬. ಇನ್ನೂ ಆತನು ಮಾಡುವ ಅನಾಚಾರವನ್ನು ಹೇಳುವುದಾದರೆ ತಾಂಬೂಲ ಮಾರುವವರನ್ನು ಅಂಬಲಿಯನ್ನು ಬಾನೆಯಲ್ಲಿ ಹಾಕಿ ಕಟ್ಟುವಂತೆ ಕೋಡಗಗಟ್ಟು ಕಟ್ಟಿ ಕಾಡಿಸುವನು. ಸುಂದರ ಪುರುಷರನ್ನು ಮನ್ನಿಸಿರೆಂದು ಬಡಿದು ಬಾಯಿತುಂಬ ದೂಳು ಹೊಯಿಸುವನು. ಕೊಬ್ಬಿದವರ ಮದ ಹೀಗಲ್ಲದೆ ಹೋಗದೆಂದು ಸಾಯುಬಡಿಸುವನು, ಬಿರುದರಿಗೆ ಅಪೂರ್ವವಾದ ಹಿಂಸೆಯನ್ನೇ ಮಾಡಿಸುತ್ತಾನೆ. ವೀರರ ಸಂಪಾದನೆಯನ್ನು ಹಾರಿಸುತ್ತಾನೆ. ವಿಟರನ್ನು ಪೀಡಿಸಿ ಹಾಸ್ಯಮಾಡುತ್ತಾನೆ, ಶೂರರನ್ನು ಕೊಂಡಾಡು

ಕೊಂಡಾಡುವರ ಮುಂಡೆಯುನಣೆಸುವಂ ; ಬಲ್ಲರಂ ಕೊಲ್ಲದ ಕೊಲೆಯಿಂ ಬಾಧಿಪನಂತುಮಲ್ಲ ದೆಯುಂ ೬೭

ಮರುಳಪಡೆಯಂತೆ ಮಿಂಡ
ವೆರಸತಿಮುದದಿಂದೆ ಕೇರಿಕೇರಿಗಳೊಳ್ ಕೂ
ಗಿಡೆ ಪೆರ್ಚಿಸೊರ್ಕಿ ಪುಲ್ಗಳ
ನುರಿಪುತ್ತುಂ ಬಡಿಸುತಿರ್ಪನಿದುವೆ ವಿನೋದಂ ೬೮

ಗದ್ಯ॥ ಮತ್ತಂ ಕುಮಾರನ ಭಯಮಂ ಪೇೞ್ವೊಡೆ ಪಾರ್ವರಾರುಮೊಡೆಯರಿಲ್ಲದಂತೆ ನಡನಡುಗೆ, ಪರದರ್ದಳಿಯ ಮರದಂತಲ್ಲಾಡೆ, ದೂಸಿಗರ್ದೇಶಿಗರಂತೆ ಭಯಂಗೊಳೆ, ಬಳಿ ಗಾಱರಳವುಗೆಟ್ಟ ಕುದುರೆಯಂತೆ ನಿಲೆ, ಕಂಚುಗಾಱರ್ ಮಿಂಚುಗಂಡ ಶಿಶುವಿನಂತಂಜೆ, ರಾಜ ಕುಮಾರರ್ ಭೋಜನಂ ಬಡೆಯದವರಂತೆ ಬಡವಾಗೆ, ಒಕ್ಕಲಿಗರು ಸಾಕ್ಷಿಯಿಲ್ಲದೆ ಸಾಲಂ ಗೊಟ್ಟವರಂತೆ ಬೆಕ್ಕಸಂಬೆಱಗಾಗೆ, ಬಂಟರ್ ನಂಟರಂ ಕಂಡ ಬಡವರಂತೊಳಸಾರೆ, ಬಿರುದರ್ ಕರಿಗಿಕ್ಕಿದ ಕಳ್ಳನಂತೆ ಜರಿಯೆ, ಬೀರರ್ ದಾರಿಗೆಟ್ಟವರಂತೆ ಬೆದಱೆ, ಮಿಂಡರ್ ದಂಡಂದೆತ್ತೊಕ್ಕ ಲಿಗನಂತೆರ್ದೆಗಿಡೆ, ತೆಲ್ಲಿಗರ್ಬಿಲ್ಲಂಕಂಡ ಕಾಗೆಯಂತೆ ಚೆಲ್ಲವರಿಯೆ, ಸೂಳೆಯರ್ ಗಾಳದ ಮೀನಂ ತಳವಳಿಯೆ, ಮಣಿಗಾಱರ್ ಗುಣಂಗೆಟ್ಟ ಋಷಿಯಂತೆ ಚಿಂತಿಸೆ, ಕುಂಬಾಱರ್ ಸಂಬಳವಿಲ್ಲದ

ವ್ವವರ ಗಂಟಲಿಗೆ ಹಗ್ಗ ಹಾಕಿಸಿ ಎಳೆಸುತ್ತಾನೆ, ಪರಾಕ್ರಮಿಗಳನ್ನು ಹೊಗಳುವವರ ತಲೆಯ ಮೇಲೆ ಹೊಡೆಯಿಸುವನು, ತಿಳಿದವರನ್ನು ಕೊಲ್ಲದಿದ್ದರೂ ಕೊಂದಷ್ಟು ಗೋಳಾಡಿಸುತ್ತಾನೆ. ಹಾಗಲ್ಲದೆ ೬೭. ಪಿಶಾಚಸೈನ್ಯದಂತೆ ಮಿಂಡರೊಡಗೂಡಿ ಬಹಳ ಹರ್ಷದೀಂದ ಬೀದಿ ಬೀದಿಗಳಲ್ಲಿ ಜನ ಗೋಳಾಡುತ್ತಿರಲು, ಉಬ್ಬಿಕೊಬ್ಬಿ ಹುಲ್ಲನ್ನು ಉರಿಸುತ್ತ, ಜನರನ್ನು ಬಡಿಸುತ್ತ ಇರುತ್ತಾನೆ. ಇದು ಅವನಿಗೆ ವಿನೋದ. ೬೮. ಕುಮಾರನಿಂದಾದ ಭಯವನ್ನು ಇನ್ನೂ ಹೇಳುವುದಾದರೆ, ಬ್ರಾಹ್ಮಣರು ಯಾರೂ ರಕ್ಷಕರಿಲ್ಲದೆ ಗಡಗಡ ನಡುಗಲು, ವ್ಯಾಪಾರಿಗಳು ಹಳ್ಳದೊಳಗಿನ ಮರದಂತೆ ಅಲ್ಲಾಡಲು ಜವಳಿಯವರು ಪರದೇಶಿಗಳಂತೆ ಅಂಜಿಕೊಳ್ಳುವರು. ಬಳೆಗಾರರು ಶಕ್ತಿಗುಂದಿದ ಕುದುರೆ ಯಂತೆ ನಿಲ್ಲಲು, ಕಂಚುಗಾರರು ಮಿಂಚನ್ನು ಕಂಡ ಮಗುವಿನಂತೆ ಅಂಜಲು, ರಾಜ ಕುಮಾರು ಊಟವಿಲ್ಲದವರಂತೆ ಬಡಕಲಾಗಲು, ಒಕ್ಕಲಿಗರು ಸಾಕ್ಷಿಯಿಲ್ಲದೆ ಸಾಲಕೊಟ್ಟ ವರಹಾಗೆ ಗಾಬರಿಗೊಳ್ಳಲು, ಬಿರುದುಳ್ಳವರು ಆನೆಗೆ ಒಡ್ಡಿದ ಕಳ್ಳನ ಹಾಗೆ ಭೀತರಾಗಲು, ಸೂಳೆಯರು ಗಾಳದ ಮೀನಿನಂತೆ ಅಸಹಾಯರಾಗಲು, ಭಂಟರು ನಂಟರನ್ನು ಕಂಡ ಬಡ ವರ ಹಾಗೆ ಒಳಗೆ ಸೇರಿಕೊಳ್ಳಲು, ವೀರರು ದಾರಿತಪ್ಪಿದವರಂತೆ ಬೆದರಲು, ಮಿಂಡರು ದಂಡತೆತ್ತ ಒಕ್ಕಲಿಗನ ಹಾಗೆ ಧೈರ್ಯ ಕೆಡಲು, ಗಾಣಿಗರು ಬಿಲ್ಲನ್ನು ನೋಡಿದ ಕಾಗೆಯಂತೆ ದಿಕ್ಕುಗೆಟ್ಟು ಓಡಲು, ಮಣಿ ಮಾರುವವರು ಗುಣಹೀನರಾದ ಋಷಿಗಳಂತೆ ಚಿಂತಿಸಲು, ಕುಂಬಾರರು ಸಂಬಳವಿಲ್ಲದ ದಂಡಿನ ಆಳಿನ ಹಾಗೆ ಬೆಚ್ಚಲು, ಅಗಸರು ದಿಕ್ಕಿಲ್ಲದವರಂತೆ

ದಂಡಿನಾಳಂತೆ ಬೆರ್ಚಿ, ಅಸಗರ್ ದೆಸೆಗೆಟ್ಟರಂತೆ ಬಾಯ್ಬಿಡೆ, ಬೇಡರ್ಬೀಡಂ ಬಿಟ್ಟೋಡೆ, ಬೆಸದವರ್ ಬಸಮಲ್ಲದವರಂತಂಜಿ ಉಳಿಯೆ, ಧೂರ್ತರ್ ಮಾರ್ತಾಂಡನಂ ಕಂಡ ಮಂಜಿನಂತೆ ಪರಿಯೆ, ಬಚ್ಚರ್ ಕಿರ್ಚುಮುಟ್ಟಿದ ತುಪ್ಪದಂತೆ ಬಲ್ಪುಗಿಡೆ, ಜಂತಿಗರ್ ಸಂತತಿಗೆಟ್ಟರಂತಳಲೆ, ತಂಬುಲಿಗರ್ ನಂಬುಗೆಗೆಟ್ಟವರಂತೆ ಪೆಱಸಾರೆ, ಚೊಲ್ಲೆಯರ್ ಗಲ್ಲೆಯಂಬಲಿಯಂತೆ ನೆಲನಂ ಪತ್ತೆ, ಸರ್ವಾಂಗದ್ರೋಹರಂ ಕವರ್ವಂತೆ ಸರ್ವಸ್ವಾಪಹರಣಂಮಾಡಿ ತನ್ನೊಡನಿರ್ದ ೧೯

ಕಸವಿಂಗಂ ಕಳುಚಿಂಗಂ
ಡಸಿಕಿಂಗಂ ದೂರ್ತವಡೆಗಮತಿಚಪಳರ್ಗಂ
ಪುಸಿವರ್ಗಂ ಸಿತಗರ್ಗಂ
ವಸುಧೇಶ್ವರ ಕೇಳ ಕುಡುವನುರ್ಕಿಕುಮಾರಂ ೨೦

ಗದ್ಯ॥ ಮತ್ತಂ ಮನೆಮಾಡುವರಂತೆ ಮುಂದಿರ್ದೆಲ್ಲರಂ ಕವರೆನುತ್ತುಂ, ಪಯಣಂ ಬೋಪರಸಿಯಂತೆ ಕಂಡಕಂಡರಂತೊಳ್ದಟ್ಟಿ ಪಿಡಿಯೆನುತ್ತುಂ ಸಾಲಂ ಗೊಟ್ಟವರಂತೆ ಕಾಡಿ ಪೊಡೆಯೆನುತ್ತುಂ, ಬಡಗಿಯಂತುಳಿಯೆನುತ್ತುಂ ಸಾಲಿಗನಂತೇಱೆನುತ್ತುಂ, ಕಳನಂತೆ ಕೊಳ್ಳೆನುತ್ತುಂ ರಸವಾದಿಯಂತೆ ಕೊಲ್ಲೆನುತ್ತುಂ, ಕುತ್ತಂನುಳಿಯಾಟದಂತೆ ಕಟ್ಟೆನುತ್ತುಂ ಕೋಟೆಗಾಳಗದಂತೆ ಪತ್ತೆನುತ್ತುಂ, ಪೊಸತಾಗಿ ಬಂದೊಕ್ಕಲಿಗನಂತೆ ಮುಟ್ಟೆನುತ್ತುಂ, ಕುಳಿಯೊಳ್ಬಿರ್ದನಂತೆ ತೆಗೆಯೆ

ಬಾಯಿಬಿಡಲು, ಬೇಡರು ತಮ್ಮ ಬೀಡನ್ನು ಬಿಟ್ಟು ಓಡಲು, ಕೆಲಸದವರು ಕೈಲಾಗದವರಂತೆ ಅಂಜಿ ಸುಮ್ಮನಾಗಲು, ಧೂರ್ತರು ಸೂರ್ಯನನ್ನು ಕಂಡ ಮಂಜಿನ ಹಾಗೆ ಓಡಲು, ಹುಡುಗರು ಬೆಂಕಿ ತಗಲಿದ ತುಪ್ಪದಂತೆ ಶಕ್ತಿ ಗುಂದಲು ದಂತದ ವ್ಯಾಪಾರಿಗಳು ಮಕ್ಕಳನ್ನು ಕಳೆದುಕೊಂಡವರ ಹಾಗೆ ಅಳಲು, ತಾಂಬೂಲ ಮಾರುವವರು ನಂಬಿಕೆ ಕಳೆದುಕೊಂಡವರಂತೆ ಹಿಂದೆ ಸರಿಯಲು, ಕಂಚುಕಿಗಳು ಗೆಡ್ಡೆ ಕಟ್ಟಿದ ಗಂಜಿಯಂತೆ ನೆಲ ಹತ್ತಲು, ಸರ್ವಾಂಗ ದ್ರೋಹಿಗಳನ್ನು ಸೂರೆಮಾಡುವಂತೆ ಎಲ್ಲವನ್ನೂ ಅಪಹರಿಸಿ ತನ್ನ ಜತೆಯಲ್ಲಿದ್ದ ೧೯. ನೀಚರಿಗೂ ಮೋಸಗಾರರಿಗೂ ವಕ್ರರಿಗೂ, ಧೂರ್ತಸೈನ್ಯಕ್ಕೂ ಅತಿ ಚಪಲರಿಗೂ, ಸುಳ್ಳುಗಾರರಿಗೂ ಪೋಕರಿಗಳಿಗೂ ಹಂಚಿಬಿಡುವನು. ಮಹಾರಾಜನೇ ಕೇಳು ನಿನ್ನ ಕುಮಾರನು ೨೦. ಮನೆಮಾಡುವವರ ಹಾಗೆ ಮುಂದಿದ್ದೆಲ್ಲರನ್ನೂ ಸೂರೆ ಮಾಡೆನುತ್ತ, ಪ್ರಯಾಣ ಹೋಗುವ ರಾಣಿಯಂತೆ ಕಂಡ ಕಂಡವರನ್ನೆಲ್ಲ ಓಡಿಸಿ, ಅಟ್ಟಿ 'ಹಿಡಿ' ಎನ್ನುತ್ತ, ಸಾಲಕೊಟ್ಟವರ ಹಾಗೆ ಕಾಡಿಸಿ 'ಹೊಡೆ' ಎನ್ನುತ್ತ, ಬಡಗಿಯ ಹಾಗೆ 'ಉಳಿ' ಎನ್ನುತ್ತ, ಸಾಲಿಗನ ಹಾಗೆ ಕಾಡಿಸಿಕೊಳ್, ಎನ್ನುತ್ತ, ಕಳ್ಳನ ಹಾಗೆ ಹಿಡಿದುಕೊಳ್ಳೆನ್ನುತ್ತ, ರಸವಾದಿಯ ಹಾಗೆ 'ಕೊಲ್' ಎನ್ನುತ್ತ, ರೋಗಿಷ್ಟನ ಆಟದಂತೆ 'ಕಟ್ಟೆ' ಎನ್ನುತ್ತ ಕೋಟೆಯ ಯುದ್ಧದಲ್ಲಿನ ಹಾಗೆ 'ಹತ್ತು' ಎನ್ನುತ್ತ, ಹೊಸದಾಗಿ ಬಂದ ಒಕ್ಕಲಿಗನ ಹಾಗೆ 'ಮುಟ್ಟು' ಎನ್ನುತ್ತ, ಗುಣಿಯಲ್ಲಿ ಬಿದ್ದವರಂತೆ 'ಎತ್ತು' ಎನ್ನುತ್ತ, ಹಾಸ್ಯಗಾರ

ನುತ್ತುಂ, ನಗೆಗಾಱನಂತೆ ಕಾಡೆನುತ್ತುಂ, ಪಗೆಗಾಱನಂತೆ ಪಾಡೆನುತ್ತುಂ, ಪೊಲೆಯರಂತೆ ಕೊಯ್ಯೆನುತ್ತುಂ ಮಾದೆಗನಂತೆ ಮೆಟ್ಟೆನುತ್ತುಂ ತಿರಿಕನಂತಿಕ್ಕೆನುತ್ತುಂ ಮಾಸಾಳ್ಗಳಂತೆ ಬೀಡೆನುತ್ತುಂ ಪರಿಕಾಱರಂತೆ ಕಾಸೆನುತ್ತುಂ ಪಿತ್ತಾಧಿಕನಂತೆ ಬೀಸೆನುತ್ತುಂ ಬಿಕ್ಕಿಗನಂತೆ ತಿವಿಯೆನುತ್ತುಂ ತೊಱೆಯಂತಹೋರಾತ್ರಂ ಪರಿಯುತ್ತುಂ ಈ ಮಾರ್ಗದಿಂ ಬಾಧೆಯಂ ಮಾಡೆ ಪಳ್ಳಿಯಂ ಮನ್ನೆಯರಾಳ್ ಸುತ್ತಿರ್ದಂತೆ ಕುಱಿವಿಂಡಂ ತೋಳಂ ಪೊಕ್ಕಂತೆ ಗರ್ಭಿಣಿಯನೆಮ್ಮೆ ತಗುಳ್ದಂತೆ ತಾವರೆಗೊಳನಂ ಮಂಜು ಪೊಕ್ಕಂತೆ ಬಡವರ ಮನೆಯನರಸಾಳ್ ಪೊಕ್ಕಂತೆ ಗೂಗೆಯಂ ಕಾಗೆ ಸುತ್ತಿದಂತೆ ಪೂಮರನಂ ಕೋಡಗವೇಱಿದಂತೆ ಕಬ್ಬಿನ ತೋಟಮಂ ನರಿ ಪೊಕ್ಕಂತೆ ಬೆಳೆದ ಕಯ್ಯಂ ಕಿಚ್ಚು ತಗುಳ್ದಂತೆ ಪೂತ ಪುಣಿಸೆಯಂ ಗಾಳಿ ಪೊಕ್ಕಂತೆ ಕಂಚುಗಾಱನ ಪಸರಮನೆತ್ತು ಪೊಕ್ಕಂತೆ ಮದುವೆಯ ನೆರವಿಯಂ ಕಡಂದುಱು ಕವಿದಂತೆ ಪಂದೆಯಂ ಪೆಣಂ ತಗುಳ್ದಂತೆ ಗೋಷ್ಠಿಯಂ ಪಾವು ಪೊಕ್ಕಂತೆ ಬೀಡಂ ಕಳ್ಳರ್ಕವಿದಂತೆ ಪಸುಮಕ್ಕಳಂ ಗೂಳಿ ತಗುಳ್ದಂತೆ ಪತ್ತಿಯಂ ಕಿಚ್ಚುತಗುಳ್ದಂತೆ ಗೋವುವಿಂಡಂ ಪುಲಿ ಪೊಕ್ಕಂತೆ ಜೋಳದರಾಸಿಯಂ ಪೊನಲ್ಕವಿದಂತೆ ಬೆಲ್ಲದ ಪೇಱನಿಲಿ ಪೊಕ್ಕಂತೆ ಕಲಸುಗೂೞಂ ಕಾಗೆ ಸುತ್ತಿದಂತೆ ಬೆಳ್ಳಿಲಿಯ ಬಿಲದೊಳ್ ನೀರ್ಪೊಕ್ಕಂತೆ ಪೊೞಲೊಳಗಣ ಪ್ರಜೆಯೆಲ್ಲಮುಂ ಮಹಾಭಯ

ನಂತೆ 'ಕಾಡು' ಎನ್ನುತ್ತ ಹಗೆಯವರಂತೆ (ಪಾಡು) ಹಾಡು ಎನ್ನುತ್ತ, ಹೊಲೆಯರ ಹಾಗೆ 'ಕೊಯ್ಯಿ' ಎನ್ನುತ್ತ, ಮಾದಿಗನಂತೆ 'ಮೆಟ್ಟು' ಎನ್ನುತ್ತ ತಿರುಪೆಗಾರನ ಹಾಗೆ 'ಇಕ್ಕು' (ನೀಡು, ಹೊಡೆ) ಎನ್ನುತ್ತ, ಮುಖಂಡರ ಹಾಗೆ 'ಬೀಡು' (ಬೀಡಾರ, ಬಾಣ ಬಿಡು) ಎನ್ನುತ್ತ ಹರಿಕಾರರ ಹಾಗೆ 'ಕಾಸು' (ಚಿಲ್ಲರೆ ದುಡ್ಡು, ಕಾಯಿಸು) ಎಂದು ಕೂಗುತ್ತ, ಪಿತ್ತ ಹೆಚ್ಚಿದವನಂತೆ 'ಬೀಸು' (ಎಸೆ, ಪುಡಿಮಾಡು) ಎನ್ನುತ್ತ, ಕಟುಕನಹಾಗೆ 'ತಿವಿ' ಎನ್ನುತ್ತ, ನದಿಯ ಹಾಗೆ ಹಗಲೂ ಇರುಳೂ ಹರಿಯುತ್ತ, ಈ ರೀತಿಯಾಗಿ ಹಿಂಸೆ ಮಾಡುತ್ತ, ಪಾಳೆಯಗಾರರ ಆಳುಗಳು ಹಳ್ಳಿಗಳನ್ನು ಸುತ್ತುಗಟ್ಟಿದಂತೆ, ಕುರಿ ಮಂದೆಯನ್ನು ತೋಳ ಹೊಕ್ಕಹಾಗೆ, ಗೂಗೆಯನ್ನು ಕಾಗೆಗಳು ಮುತ್ತಿಗೆ ಹಾಕಿದ ಹಾಗೆ ಹೂಬಿಟ್ಟಮರವನ್ನು ಕೋತಿ ಹತ್ತಿದಂತೆ, ಕಬ್ಬಿನ ತೋಟಕ್ಕೆ ನರಿ ನುಗ್ಗಿದ ಹಾಗೆ, ಬೆಳೆದ ಹೊಲಕ್ಕೆ ಬೆಂಕಿ ಬಿದ್ದಹಾಗೆ. ಹೂಬಿಟ್ಟ ಹುಣಿಸೆಗೆ ಗಾಳಿ ಬೀಸಿದಂತೆ, ಮದುವೆಯ ಗುಂಪನ್ನು ಕಣಜ ಮುತ್ತಿದಂತೆ, ಹೇಡಿಯನ್ನು ಹೆಣ ತಾಕಿದಂತೆ, ಸಭೆಯೊಳಕ್ಕೆ ಹಾವು ಹೊಕ್ಕಂತೆ, ಬಿಡಾರವನ್ನು ಕಳ್ಳರು ಮುತ್ತಿದಂತೆ, ಹಸು ಮಕ್ಕಳನ್ನು ಗೂಳಿ ತಿವಿದಂತೆ, ಹತ್ತಿಗೆ ಬೆಂಕಿ ಬಿದ್ದಂತೆ, ಹಸುಗಳ ಮಂದೆಯನ್ನು ಹುಲಿ ಹೊಕ್ಕ ರೀತಿ, ಜೋಳದರಾಶಿಯನ್ನು ಪ್ರವಾಹ ಮುಚ್ಚಿಕೊಂಡಂತೆ, ಬೆಲ್ಲದ ಹೇರಿಗೆ ಇಲಿ ಹೊಕ್ಕಹಾಗೆ, ಕಲಸಿದ ಅನ್ನವನ್ನು ಕಾಗೆಗಳು ಸುತ್ತಿಕೊಂಡಂತೆ, ಬೆಪ್ಪು ಇಲಿಗಳ ಬಿಲದೊಳಕ್ಕೆ ನೀರು ಹರಿದಂತೆ, ಪಟ್ಟಣದೊಳಗಿನ ಪ್ರಜೆಗಳೆಲ್ಲರೂ ಮಹಾ ಭಯವೆಂಬ ಜ್ವರದಿಂದ ಪೀಡಿತರಾಗಿ

ಜ್ವರಂಗೊಂಡು ಕುಮಾರನಾಡುವಾಟಕ್ಕಂ ಮಾಡುವ ವಹಟಕ್ಕಂ ನಿಲಲುಂ ನಿತ್ತರಿಸಲು ಮಾಟಿ ವೆಮಗೆ ೭೧

ಬೆಸನಾವುದು ಧರಣೀಶ್ವರ
ಬೆಸಸೆನೆ ತನಯಂಗೆ ನಾಡೆಯುಂ ಮುನಿದು ನೃಪಂ
ಮಿಸುಗುವ ದಂತಮರೀಚಿಗ
ಳೆಸೆವಿನಮಂಬುನಿಧಿನಾದದಿಂದಂ ನುಡಿದಂ ೭೨

ನೀವಿದನೆಮಗಱಿಪಿರ್ಪು
ನ್ನೀ ವಾರ್ತೆಯನಱಿಯೆವಿದಱ ದೆಸೆಗಿನಿಸಾನುಂ
ನೀವಂಜಬೇಡ ಸುಖಮಿರಿ
ಮಾವಿದನೆಣಿಸುವರಲ್ಲಮತಿಶಯದಿಂದಂ ೭೩

ಗದ್ಯ॥ ಎಂದರಿಮಥನ ಮಹಾರಾಜಂ ಕಿಱಿಯ ಪಿರಿಯರೆನ್ನದೆ ಮನ್ನಣೆಯಿಂ ಕರ್ಪೂರ ಸಹಿತಂ ವೀಳೆಯಂಗೊಟ್ಟು ಪೋಗಲ್ವೇಟ್ಟು ಪ್ರಧಾನರ್ಗಂ ಸೌಂದರಿ ಮಹಾದೇವಿಗಮಿಂತೆಂದಂ ೭೪

ಇನಿಸುಂ ಮಾಣದೆ ದುಶ್ಶಾ
ಸನ ಶಕುನದಿವಾಕರಾತ್ಮಜರ್ ಕೂಡೆ ಸುಯೋ
ಧನನಳಿದನೆಂದೊಡೇಂ ದು
ರ್ಜನರಪ್ಪವರೊಡನೆ ಕೂಡಿ ಕೆಡದವರೊಳರೇ ೭೫

ಯುವರಾಜನು ಆಡುವ ಆಟ ಮತ್ತು ಮಾಡುವ ಕೆಲಸಗಳಿಗೆ ಸಹಿಸಿಕೊಂಡು ನಿಲ್ಲುವುದಕ್ಕಾಗಲಿ, ದಾಟಿಕೊಂಡು ಹೋಗುವುದಕ್ಕಾಗಲಿ ಶಕ್ತಿಯಿಲ್ಲ. ಇನ್ನು ನಮಗೆ ೭೧. ಏನು ಆಜ್ಞೆ? ಮಹಾರಾಜನೆ, ನಮಗೆ ಹೇಳಬೇಕು. ಎನ್ನಲು, ರಾಜನು ಮಗನ ಮೇಲೆ ಬಹಳ ಸಿಟ್ಟುಗೊಂಡು ಹೊಳೆಯುವ ದಂತಕಾತಿ ಶೋಭಿಸುತ್ತಿರಲು, ಸಮುದ್ರ ಘೋಷದಂಥ ಧ್ವನಿಯಲ್ಲಿ ಹೀಗೆಂದನು ೭೨. ನೀವು ಇದನ್ನುನಮಗೆ ಮುಂಚೆ ತಿಳಿಸಲಿಲ್ಲ. ನಾವು ಈ ಸುದ್ದಿಯನ್ನು ಇದುವರೆಗೆ ಕೇಳಿ ತಿಳಿಯೆವು. ಇನ್ನು ನೀವು ಅಂಜಬೇಡಿ, ಸುಖವಾಗಿರಿ. ನಾವು ಇದನ್ನು ಅತಿಶಯುವಾಗಿ ಭಾವಿಸುವುದಿಲ್ಲ ೭೩. ಎಂದು ಅರಿಮಥನ ಮಹಾರಾಜನು ಚಿಕ್ಕವರು ದೊಡ್ಡವರೆಂದು ಭೇದ ಮಾಡದೆ ಎಲ್ಲರಿಗೂ ಕರ್ಪೂರ ವೀಳೆಯುವನ್ನು ಕೊಟ್ಟು ಕಳುಹಿಸಿ ಪ್ರಧಾನರಿಗೂ ಸೌಂದರಿ ಮಹಾದೇವಿಗೂ ಹೀಗೆ ಹೇಳಿದನು. ೭೪. ಸ್ವಲ್ಪವೂ ತಪ್ಪದೆ ದುಶ್ಶಾಸನ ಶಕುನಿ ಕರ್ಣರ ಸಂಗಡ ಸದಾ ಸೇರಿಕೊಂಡಿದ್ದುದರಿಂದ ದುರ್ಯೋಧನ ನಾಶ ಹೊಂದಿದನೆಂದಾಗ ದುರ್ಜನರ ಒಡನಾಟದಿಂದ ಕೆಡದೆ ಇರುವವರು ಯಾರು? ೭೫. ಮೊದಲಿನಿಂದಲೂ ಹಂದಿಗಳ ಒಡನಾಡಿದ ಕರು (ಎಮ್ಮೆ, ಹಸು) ವು ಕೂಡ

ಮೊದಲಿಂ ಪಂದಿಗಳೊಡನಾ
ಡಿದ ಕಱುವುಂ ಪಂದಿಯಂತೆ ಪೇಲಂ ತಿಂಗೆಂ
ಬುದು ನಾಣ್ಣುಡಿ ತಾನದು ತ
ಪ್ಪದು ಸಿತಗರ ಕೂಟದಿಂದೆ ಕೆಡದವರೊಳರೇ ೨೬

ಆರಯ್ದು ನೋಡೆ ತೊಱೆಗಳ
ನೀರುಂ ವಾರಿಧಿಯ ನೀರ ಪೊರ್ದುಗೆಯಿಂದಂ
ಸಾರಂಗೆಟ್ಟುಪ್ಪಪ್ಪವೊ
ಲಾರುಂ ದುರ್ಜನರ ಕೂಟದಿಂದಂ ಕೆಡರೇ ೨೭

ಕಡುತಣ್ಪು ಕೆಟ್ಟು ಕಿಚ್ಚಿನೊ
ಳೊಡಗೂಡಿದ ನೀರ್ ಬಱಿಕ್ಕೆ ತೀವ್ರತೆಯಿಂ ಕೈ
ಸುಡುವಂತೆ ನೋಡೆ ದುರ್ಜನ
ರೊಡಗೂಡಿದ ಮಾನಿಸರ್ಗೆ ಸದ್ಗುಣಮುಂಟೇ ೨೮

ಗದ್ಯ॥ ಅದುಕಾರಣದಿಂ ಕುಮಾರನೊಳಾದ ದೂರ್ತೆಲ್ಲಮೆಮ್ಮಿಂದಾದುದಾ ತನೊಳ್ ದೋಷಮಿಲ್ಲೆಂತೆನೆ ೨೯

ಪುದಿದ ಸುತಮೋಹದಿಂದೋ
ದಿದೊಡಂ ಮುನಿಜನದ ಸಾರೆ ಬಸದಿಯೊಳಿರ್ದಾ
ಡಿದೊಡಮಿವನಲಸುಗೆಂದಾ
ನಿದನಱಿಯದೆ ದುಷ್ಟ ಕಷ್ಟರೊಡನಾಡಿಸಿದೆಂ ೩೦

ಹಂದಿಯ ಹಾಗೆ ಹೇಲನ್ನು ತಿನ್ನುವುದೆಂಬ ಗಾದೆಯ ಮಾತು ತಪ್ಪುವುದಿಲ್ಲ. ಪೋಕರಿ ಜನರ ಸಂಪರ್ಕದಿಂದ ಕೆಡದವರೂ ಇದ್ದಾರೆಯೆ ? ೨೬. ವಿಚಾರಮಾಡಿ ನೋಡಿದರೆ ನದಿಗಳ ಸಿಹಿನೀರು ಸಮುದ್ರದ ನೀರ ಸಂಪರ್ಕದ ದೆಸೆಯಿಂದ ತನ್ನ ರುಚಿಯನ್ನು ಕಳೆದುಕೊಂಡು ಉಪ್ಪಾಗುವ ಹಾಗೆ, ಯಾರಾದರೂ ಕೆಟ್ಟವರ ಸಹವಾಸದಿಂದ ಕೆಡದೆ ಇರುವರೆ ? ೨೭. ವಿಶೇಷವಾದ ಶೈತ್ಯವನ್ನು ಕಳೆದುಕೊಂಡು ಬೆಂಕಿಯ ಶಾಖದಿಂದ ಬಿಸಿಯಾದ ನೀರು ಕೈಯನ್ನು ಸುಡುವ ಹಾಗೆ ನೋಡಿದರೆ ದುರ್ಜನರ ಒಡನೆ ಸೇರಿದ ಮನುಷ್ಯರಿಗೆ ಸದ್ಗುಣವುಂಟೆ ? ೨೮. ಆದಕಾರಣ ಕುಮಾರನಲ್ಲಿ ಉಂಟಾಗಿರುವ ಧೂರ್ತತನವೆಲ್ಲ ನಮ್ಮಿಂದಲೇ ಆದದ್ದು. ಆತನಲ್ಲಿ ದೋಷವಿಲ್ಲ. ಹೇಗೆಂದರೆ ೨೯. ಹೆಚ್ಚಾದ ಸುತಮೋಹದಿಂದ ಅವನು ಓದಿದರೆ, ಮುನಿಜನರ ಜತೆಯಲ್ಲಿ ಬಸದಿಯಲ್ಲಿ ಓಡಾಡಿದರೆ, ಅವನು ಆಯಾಸಗೊಳ್ಳುವನೆಂದು, ನಾವು ಇದನ್ನು ತಿಳಿಯದೆ ಕೆಟ್ಟವರೊಡನೆಯೂ ನೀಚರೊಡನೆಯೂ ಆಡಲು ಬಿಟ್ಟೆವು. ೩೦. ಇಷ್ಟೊಂದು ಮೋಹ ನನಗೆ ಇವನ

ಇನಿತುಂ ಮೋಹಂ ಕೇಳೀ
ತನಮೇಲಿಂ ಪಿರಿದುಮೆನ್ನೊಳುಂಟಪ್ಪುದಱಿಂ
ದನಿಯಂತಿಕೆಯಿಂದೆ ನಡೆಸ
ಲ್ಕನಿತಾದುದು ಶಿಕ್ಷೆಗೆಟ್ಟ ಕಾರಣದಿಂದಂ ೮೧

ಕಸದೊಡನೆ ಕೂಡಿ ಪೆರ್ಚಿದ
ಸಸಿಯುಂ ಶಿಕ್ಷಿಸದ ಮಕ್ಕಳುಂ ಮಾಣದೆ ಚಿಂ
ತಿಸದೋದುಂ ಪಲವಂ ಭಾ
ವಿಸುತಿರ್ಪನ ತಪಮುಮೊಪ್ಪಲಾರ್ಕುಮೆ ಕಡೆಯೊಳ್ ೮೨

ಗದ್ಯ॥ ಮತ್ತಂ "ಪುತ್ರಂ ಚ ಶಿಷ್ಯಂಚ ತಾಡಯೇನ್ನತು ಲಾಲಯೇತ್" ಎಂಬ ಪೂರ್ವಾಚಾರ್ಯೋಕ್ತಿಯುಂ ಕೈಕೊಳ್ಳದೆ ಮೋಹದಾಕೆ ಪೋತಿಯಾದಳೆಂಬಂತೆ ಮಗನಂ ಕಿಱಿಯಂದಿಂ ತೊಡಗಿ ಶಿಕ್ಷಿಸದಿರ್ದುದಱಿನಿಂತಾಯ್ತೆಂದರಸಂ ತಲೆಯುಂ ತೂಗಿ ಬೆರಲಂ ಮಿಡಿದು ಲಲಿತಾಂಗನಂ ಬರಿಸಿ ಮುಂತೆ ಕುಳ್ಳಿರಿಸಿ ಬೞಿಕ್ಕಮಿಂತೆಂದಂ ೮೩

ಧರೆಯಂ ರಕ್ಷಿಸಿ ದುಷ್ಟರಂ ಜಡಿದು ಸದ್ಧರ್ಮಂಗಳಂ ಕಾಯ್ದು ತ
ಸ್ಕರರಂ ಬಾರಿಸಿ ಕಷ್ಟರಂ ಕೆಡಿಸಿ ದಂಡಂಗೊಂಡು ಮಿಂಡರ್ಕಳಂ
ಭರದಿಂ ಬಂಧಿಸಿ ಶಿಷ್ಟರಿಷ್ಟ ಫಲಮಂ ಸಂತೋಷದಿಂದಿತ್ತು ಧೂ
ರ್ತರ ಬೇರಂ ನೆಱೆ ಕಿತ್ತು ಪಾಲಿಪುದು ಧಾತ್ರೀಚಕ್ರಮಂ ಕ್ಷತ್ರಿಯಂ ೮೪

ಮೇಲೆ ಇದೆಯಾದ್ದರಿಂದ ನಿಯತವಾದ ಶಿಕ್ಷಣವಿಲ್ಲದೆ ಸಾಕಿದ್ದರಿಂದ ಇಷ್ಟು ಕೆಡಕಾಯಿತು ೮೧. ಕಸದ ಜತೆಸೇರಿ ಬೆಳೆದ ಸಸಿಯೂ ಶಿಕ್ಷೆಯಿಲ್ಲದ ಮಕ್ಕಳೂ, ಒಂದೇಸವುನಾಗಿ ಚಿಂತನ ಮಾಡದ ಓದುಗಾರಿಕೆಯೂ ಹಲವು ಭಾವನೆಗಳಿಗೆ ಮನಸ್ಸುಕೊಟ್ಟು ಮಾಡುವ ತಪಸ್ಸೂ ಕೊನೆಗೆ ಶೋಭಾಯಮಾನವಾಗುವುದಿಲ್ಲ. ೮೨. ಅಲ್ಲದೆ 'ಮಗನನ್ನೂ ಶಿಷ್ಯನನ್ನು ಹೊಡೆಯಬೇಕೇ ಹೊರತು ಲಾಲಿಸ (ಮುದ್ದಿಸ) ಬಾರದು' ಎಂಬ ಹಿಂದಿನ ಆಚಾರ್ಯರ ಮಾತಿನಂತೆ ನಡೆದುಕೊಳ್ಳದೆ, 'ಮೋಹದವಳು ಓತಿಯಾದಳು' ಎಂಬ ಹಾಗೆ (ಓತಿಕ್ಯಾತ ಸದಾ ತಲೆತೂಗುತ್ತಿರುವ ಹಾಗೆ ಮೋಹದ ತಾಯಿ ಮಗನ ಮಾತಿಗೆಲ್ಲ ಒಪ್ಪಿ ತಲೆತೂಗಿದಳೆಂಬ ಅಭಿಪ್ರಾಯ) ಮಗನನ್ನು ಚಿಕ್ಕಂದಿನಿಂದ ತೊಡಗಿ ಸರಿಯಾಗಿ ತಿದ್ದದೆ ಇದ್ದುದರಿಂದ ಇಷ್ಟಾಯಿತು, ಎಂದು ಅರಸನು ತಲೆಯನ್ನು ತೂಗಿ ಬೆರಳು ಮಿಡಿದು ಲಲಿತಾಂಗನನ್ನು ಬರಮಾಡಿ ಎದುರಿಗೆ ಕೂಡಿಸಿ ತರುವಾಯ ಹೀಗೆಂದನು : ೮೩. ರಾಜ್ಯವನ್ನು ಕಾಪಾಡಿ, ಕೆಟ್ಟವರನ್ನು ದಂಡಿಸಿ ಸದ್ಧರ್ಮವನ್ನು ಸಂರಕ್ಷಿಸಿ ಕಳ್ಳರನ್ನು ನಿವಾರಿಸಿ ನೀಚರನ್ನು ನಿಗ್ರಹಿಸಿ ದಂಡವನ್ನು ತೆಗೆದುಕೊಂಡು ಮಿಂಡರನ್ನು ಬೇಗನೆ ಬಂಧಿಸಿ ಶಿಷ್ಟ ಜನರ ಇಷ್ಟಫಲವನ್ನು ಸಂತೋಷದಿಂದ ಕೊಟ್ಟು ಧೂರ್ತರನ್ನು ಬೇರು ಸಹಿತ ಕಿತ್ತು (ಅವರಿಗೆ ಆಧಾರವಿಲ್ಲದಂತೆ ಮಾಡಿ) ಭೂಮಂಡಲವನ್ನು ಕ್ಷತ್ರಿಯನು ಸಂರಕ್ಷಿಸಬೇಕು ೮೪. ಮಗು

ಸಿಸುವಂ ತಾಯ್ಸುರ ಸೌಖ್ಯಮಂ ಬಯಸುವಂ ಚಾರಿತ್ರಮಂ ಶೀಲಮಂ
ವಸುವಂ ತಾಂ ಬಿಡದರ್ಥಲೋಭಿ ಸಸಿಯಂ ಶೂದ್ರಂ ತಳಾಱಿಂ ಸಮಂ
ತೊಸೆದೂರಂ ಗುಣಮಂ ಮಹಾಪುರುಷರೊಳ್ಪಂ ಶೌಚಿ ಕೇಳೆಂತು ರ
ಕ್ಷಿಸುವಂ ಮೋಹದಿನಂತೆ ರಕ್ಷಿಪುದು ಧಾತ್ರೀಚಕ್ರಮಂ ಕ್ಷತ್ರಿಯಂ ೮೫

ಶಸಿಕಿರಣಂಗಳೆಂತು ಕುಮುದಾಳಿಗಳಂ ರವಿರಶ್ಮಿಯೆಂತು ರಂ
ಜಿಸುವ ಸಹಸ್ರಪತ್ರ ನಿಕುರಂಬಮನೊಪ್ಪಲಲರ್ಚಿ ನಾಡೆ ಸಂ
ತಸಮನೆ ಮಾಳ್ಪುವಂತೆ ಖಳರೆಂದುದನೆನ್ನದೆ ತನ್ನ ಭೂಮಿಗಂ
ಮಿಸುಪ ವಚೋಂಶುವಿಂ ಮುದಮನೊಪ್ಪಿರೆ ಮಾಳ್ಪುದು ಧಾರಿಣೀಶ್ವರಂ ೮೬

ನಯಮುಳ್ಳುದಱಿಂ ಚಂದ್ರೋ
ದಯದೊಳ್ ಬೆಳಗುವುವು ತಾರೆ ಸೂರ್ಯೋದಯದೊಳ್
ಭಯದಿಂದದೃಶ್ಯಮಪ್ಪುವು
ನಿಯತಂ ಕೇಳ್ಮಗನೆ ತೀವ್ರತೆಯನೆಯ್ದುವರೇ ೮೭

ಎಳಿದರ ಪುಯ್ಯಲಂ ಕರೆ
ದಾಳೋಚಿಸಿ ತಿರ್ದಿ ಸಂತಸಂ ಬಡಿಸದೆ ಬ
ಲ್ಲಾಳಪ್ಪರ ಕೊರ್ವಂ ಜಡಿ
ದಾಳಾಪಂಗೆಯ್ದು ಕೆಡಿಸದಂ ನೃಪಸುತನೇ ೮೮

ವನ್ನು ತಾಯಿ ಕಾಪಿಡುಮತೆ, ದೇವಲೋಕ ಸೌಖ್ಯವನ್ನು ಬಯಸುವವನು ಚಾರಿತ್ರವನ್ನೂ, ಶೀಲವನ್ನೂ, ಧನಲೋಭಿ ಐಶ್ವರ್ಯವನ್ನೂ ಸಸಿಗಳನ್ನು ಶೂದ್ರ (ರೈತ)ನೂ, ತಳವಾರನು ತನ್ನ ಊರನ್ನು, ಮಹಾಪುರುಷರು ತಮ್ಮ ಗುಣವನ್ನೂ ಒಳ್ಳೆಯತನವನ್ನು ಶೌಚಿ (ಪ್ರಶಸ್ಥಮ) ಯೂ ಹೇಗೆ ಮೋಹದಿಂದ ಕಾಪಾಡಿಕೊಳ್ಳುವರೋ, ಹಾಗೆ, ಕ್ಷತ್ರಿಯನು ತನ್ನ ರಾಜ್ಯವನ್ನು ರಕ್ಷಿಸಿಕೊಳ್ಳಬೇಕು. ೮೫. ಚಂದ್ರಕಿರಣಗಳು ಕನ್ನೈದಿಲೆಗಳನ್ನೂ ಸೂರ್ಯಕಿರಣಗಳು ಕಮಲ ಸಮೂಹಗಳನ್ನೂ ಶೋಭಾಯಮಾನವಾಗಿ ಅರಳುವಂತೆ ಮಾಡಿ ವಿಶೇಷವಾದ ಸಂತೋಷವನ್ನು ನೀಡುವುವೋ ಹಾಗೆ ನೀಚರ ಮಾತನ್ನು ಒಪ್ಪದೆ ತನ್ನ ರಾಜ್ಯಜನಕ್ಕೆ ತನ್ನ ಮಾತುಗಳಿಂದ ರಾಜನಾದವನು ಸಂತೋಷವನ್ನುಂಟು ಮಾಡಬೇಕು. ೮೬. ಚಂದ್ರೋದಯದಲ್ಲಿ ನಕ್ಷತ್ರಗಳು ಬೆಳಗುತ್ತವೆ—ಚಂದ್ರಕಿರಣಗಳಲ್ಲಿ ನಯವಿರುವುದರಿಂದ. ಅವು ಸೂರ್ಯೋದಯದಲ್ಲಿ ಭಯದಿಂದ ಅದೃಶ್ಯವಾಗುತ್ತವೆ. ಇದು ನಿಷ್ಕರ್ಷೆ. ಮಗನೇ ಕೇಳು. ನೀನು ಹೀಗೆ ತೀವ್ರತೆಯನ್ನು ತಾಳಬಹುದೆ ? ೮೭. ಅಲ್ಪರ ಹುಯ್ಯಲನ್ನು ಕೇಳಿ ಅವರನ್ನು ಕರೆದು ಆಲೋಚಿಸಿ ತಿದ್ದಿ ಸಂತೋಷಪಡಿಸದೆ, ಬಲಿಷ್ಠರ ಕೊಬ್ಬನ್ನು ಹೆಚ್ಚಿಸಿ ಜನಹಿತವನ್ನು ಕೆಡಿಸುವವನು ರಾಜಪುತ್ರನೆ ? ೮೮. ಎಂಬ ಈ ರಾಜನೀತಿಯನ್ನು ನೀನು ತಿಳಿಯದೆ ಲೋಳಿಸರದ ಮೇಲೆ

ಗದ್ಯ॥ ಎಂಬೀ ರಾಜನೀತಿಯಂ ನೀನಱಿಯದೆ ಲೋಯಿಸರದ ಮೇಲೆ ಬಂಡಿ ಪರಿದಂತೆ ಪೊೞಲೆಲ್ಲಮಂ ನಿವಾಳಿವಟ್ಟಮಂ ಮಾಡಿದೆಯಾದೊಡೇನಾಯ್ತು, ಪೋದುದಿಂ ಪೋಗಲಿ. ಪೆಱಗನೆಣಿಸಲಾಗದು. ಮುಂದಣ್ಗ ೮೯

ಇಂದು ಮೊದಲಾಗೆ ನೀಂ ಸೊ
ರ್ಕಿಂದಂ ಪೊೞಲೊಳಗೆ ಕೀಳ ಬಾಧೆಗಳಂ ದೂ
ರ್ತಿಂದಂ ಮಾಡಿದೆಯಪ್ಪೊಡೆ
ಕಂದಾ ಕಡುಮುನಿವೆನೆನಗೆ ನೀಂ ಮಗನಲ್ಲಯ್ ೯೦

ಗದ್ಯ॥ ಮತ್ತಮೆಮ್ಮನ್ವಯ ಧರ್ಮಮಪ್ಪೊಡೆ ಶುದ್ಧಸ್ಫಟಿಕದ ದೋಣಿಯೊಳೆಱೆದ ಪಾಲಂತೆ ನಿರ್ಮಳಮಪ್ಪ ಜೈನಧರ್ಮಮದಂ ಚೆನ್ನಾಗಿ ತಿಳಿದು ಪಾಪಾನುರಾಗಮಂ ಪತ್ತುವಿಟ್ಟು ದುರ್ಜನರೊಡನಾಟಮಂ ಮಾಣ್ಬುದೆನ್ನಾಣೆಯೆಂದು ತನ್ನಂ ಮುಟ್ಟಿಸಿಕೊಂಡು ಮಗನ ಕದಪಂ ಕರ್ಚಿ ಪಸಾಯನಮಂ ಕೊಟ್ಟರಿಮಥನಮಹಾರಾಜಂ ಸಂತಸದಿನಿರ್ಪುದುಂ ೯೧

ತೆಂಗಿನ ಪೊಸನೇಣಿಂದಱು
ದಿಂಗಳ್ವರಮಡಸಿ ಕಂಬಿಯಿಂ ಕಟ್ಟಿದೊಡಂ
ತಾಂ ಗಡ ಬಿಟ್ಟೊಡೆ ಮತ್ತಂ
ಪಿಂಗದು ಡೊಂಕೆಂಬ ನಾಯಬಾಲದ ತೆಱದಿಂ ೯೨

ಚಕ್ರಹರಿದ ಹಾಗೆ ಪಟ್ಟಣವನ್ನೆಲ್ಲ ನಿವಾಳಿಪಟ್ಟ (ದೂಳಿಪಟ) ಮಾಡಿದೆ. ಆದುದಾಯಿತು; ಹಿಂದಿನದನ್ನು ನೆನೆಯಬಾರದು. ಮುಂದಕ್ಕೆ ೮೯. ಇಂದಿನಿಂದ ಮೊದಲುಗೊಂಡು ನೀನು ಕೊಬ್ಬಿನಿಂದ ನಗರದಲ್ಲಿ ಧೂರ್ತತನದಿಂದ ಹಿಂಸೆಗಳನ್ನು ಮಾಡಿದೆಯಾದರೆ, ಮಗುವೇ, ನಾನು ಬಹಳ ಸಿಟ್ಟಾಗುತ್ತೇನೆ. ನನಗೆ ನೀನು ಮಗನಲ್ಲ. ೯೦ ಅಲ್ಲದೆ ನಮ್ಮ ವಂಶದ ಧರ್ಮವಾದರೋ ಶುದ್ಧಸ್ಫಟಿಕದ ದೋಣಿಯಲ್ಲಿ ಹಾಕಿದ ಹಾಲಿನಂತೆ ನಿರ್ಮಲವಾದ ಜೈನಧರ್ಮ. ಅದನ್ನು ಚೆನ್ನಾಗಿ ತಿಳಿದುಕೊಂಡು ಪಾಪದ ಮೇಲಿನ ಪ್ರೀತಿಯನ್ನು ಕಳಚಿಕೊಂಡು ದುಷ್ಟರ ಒಡನಾಟವನ್ನು ಬಿಡತಕ್ಕದ್ದು. 'ನನ್ನಾಣೆ' ಎಂದು ನುಡಿದು ತನ್ನನ್ನು ಮುಟ್ಟಿಸಿಕೊಂಡು ಮಗನ ಕೆನ್ನೆಯನ್ನು ಕಚ್ಚಿ (ಮುದ್ದಿಟ್ಟು) ಉಡುಗೊರೆಯನ್ನು ಕೊಟ್ಟು ಅರಿಮಥನ ಮಹಾರಾಜನು ಸಂತೋಷದಿಂದಿರಲು ೯೧. ಹೊಸ ತೆಂಗಿನ ಹಗ್ಗದಿಂದ ಆರು ತಿಂಗಳವರೆಗೆ ಹಿಡಿದು ಕಂಬಿಯಲ್ಲಿ ಕಟ್ಟಿದರೂ ನಾಯಿಯ ಬಾಲ ಅದರ ಡೊಂಕನ್ನು ಬಿಡುವುದಿಲ್ಲವೆಂಬಂತೆ ೯೨. ಲಲಿತಾಂಗ ತಂದೆಯ ಮಾತನ್ನು ಮನ್ನಿಸದೆ ಪಟ್ಟಣದವರ

ಮನ್ನಿಸದೆ ತಂದೆಯುಂ ಪೊಟ
ಲಂನೆಱೆ ಕಾಡುತ್ತು ಮಱಲಿಸುತ್ತುಂ ದೂರ್ತಿಂ
ದಂ ನೃಪಸುತನಿರೆ ಮತ್ತಂ
ತನ್ನಾಣೆಯನುಱಿದುದರ್ಕೆ ಮುಳಿದು ನರೇಂದ್ರಂ ೯೩

ಗದ್ಯ॥ ಲಲಿತಾಂಗನಂ ಬರಿಸಿಕೊಂಡು ಮಗನೆ ಪಲ್ಲಿಂಗೆ ಪಾಲಂ ಬಿಟ್ಟೊಡೊಸಡೆಲ್ಲಮಂ ದೈವಂ ತಿಂದುದೆಂಬಂತೆ ಮೋಹದಿಂ ನೀಂ ಮಾಡಿದ ಪಲವು ಪೊಲ್ಲಮೆಗಳಂ ಸೈರಿಸಿರ್ದೊಡಂ, ನೀಂ ಕೊರ್ವಿ ಗಾಳಿಯೊಳ್ಕೂಡಿದ ಕಿರ್ಚಿನಂತೆ ದಳ್ಳುರಿದು ಪೊಟಲೊಳಗೆ ಮುನ್ನಿನೆಡೆಗೀಗಳುಂ ಪಿರಿದಬ್ಬರಮಂ ಮಾಡಿದೆಯಿಂತು ೯೪

ಕೆಟ್ಟಪೆಯೆಂದಾನೀಕ್ಷಿಸೆ
ನೆಟ್ಟನೆ ನೀನೆತ್ತಿಕೊಂಡ ಕಳ್ಳಂ ಬಾಯಂ
ಸುಟ್ಟೋಡಿದನೆಂಬಂತಿರೆ
ದುಷ್ಟಾ ನೀಂ ಮೀಱಿ ನೆಗೞ್ದಿಯೆನ್ನಾಣೆಯುಮಂ ೯೫

ಗದ್ಯ॥ ಮಕ್ಕಳಂ ಪಡೆವೆನೆಂದು ಮರ್ದಂ ಕುಡಿದ ಮಱುದಿವಸಕ್ಕೆ ಗಂಡಂ ಸತ್ತನೆಂಬಂತೆ ಮತ್ತಿನ ಮಕ್ಕಳನುದಾಸೀನಂಗೆಯ್ದು ನಿನಗೆ ರಾಜ್ಯಮಂ ಕುಡಲೆಂದಿರ್ದೆನ್ನ ಚಿತ್ತಕ್ಕೆ ಸಂತಾಪಮಂ ಮಾಡಿದೆಯಿನ್ನೆನ್ನಮೇಲೆ ಪೞಿಯುಂ ಪಾಪಮುಮಿಲ್ಲ ೯೬

ನ್ನೆಲ್ಲ ವಿಶೇಷವಾಗಿ ಕಾಡಿಸುತ್ತ ಧೂರ್ತತನವನ್ನು ಮಾಡುತ್ತಿದ್ದನು. ಅದನು ತಿಳಿದು ರಾಜನು ಮಗ ತನಾಜ್ಞೆಯನ್ನು ಪಾಲಿಸದೆ ಮುರಿದುದಕ್ಕೆ ಬಹಳ ಕೋಪಗೊಂಡನು ೯೩. ಗದ್ಯ॥ ಲಲಿತಾಂಗನನ್ನು ಮತ್ತೆ ಬರಮಾಡಿಕೊಂಡು ಹಲ್ಲಿಗೆ ಹಾಲು ಹಾಕಿದರೆ ಒಸಡೆಲ್ಲವನ್ನೂ ದೈವ ತಿಂದಿತು ಬಿಟ್ಟಿತೆಂಬ ಹಾಗೆ ನೀನು ಮಾಡಿದ ಅನೇಕ ಕೆಟ್ಟ ಕೃತ್ಯಗಳನ್ನು ನಿನ್ನ ಮೇಲಿನ ಮೋಹದಿಂದ ಸೈರಿಸಿಕೊಂಡಿದ್ದರೂ ನೀನು ಕೊಬ್ಬಿ ಗಾಳಿಯ ಸಂಗಡ ಸೇರಿದ ಬೆಂಕಿಯಂತೆ ಉರಿಸುತ್ತಿದ್ದೀಯೆ ! ಪಟ್ಟಣದಲ್ಲಿ ಮೊದಲಿಗಿಂತ ಈಗ ಹೆಚ್ಚಿನ ಅವಾಂತರ ಮಾಡಿದೆ. ೯೪. ನೀನು ಕೆಟ್ಟುಹೋಗುವೆಯೆಂದು ನಾನು ಯೋಚಿಸಿದರೆ, ಹಿಡಿದುಕೊಂಡ ಕಳ್ಳನು ಬಾಯನ್ನೇ ಸುಟ್ಟು ಓಡಿದನೆಂಬ ಹಾಗೆ, ದುಷ್ಟಾ ! ನೀನು ನನ್ನ ಅಪ್ಪಣೆಯನ್ನೂ ಮೀರಿ ನಡೆದುಕೊಂಡೆ ೯೫. ಮಕ್ಕಳನ್ನು ಪಡೆಯಬೇಕೆಂದು ಔಷಧಿಯನ್ನು ಕುಡಿದ ಮರುದಿನವೇ ಗಂಡ ಸತ್ತನೆಂಬ ಹಾಗೆ ಉಳಿದ ಮಕ್ಕಳನ್ನು ಉದಾಸೀನ ಮಾಡಿ ನಿನಗೇ ರಾಜ್ಯವನ್ನು ಕೊಡಬೇಕೆಂದಿದ್ದ ನನ್ನ ಮನಸ್ಸಿಗೆ ಸಂತಾಪವನ್ನು ಮಾಡಿದೆ. ಇನ್ನು ನನ್ನ ಮೇಲೆ ಯಾವ (ಹೊಣೆಯೂ ಇಲ್ಲ) ಅಪಕೀರ್ತಿಯೂ ಇಲ್ಲ ಪಾಪವೂ ಇಲ್ಲ ೯೬.

ಕಡು ಲೇಸೆಂದೋಡಂ ಪಿಡಿ
ದೊಡೆ ಕೈ ಮಸಿಯಪ್ಪ ಮಾರ್ಗದಿಂ ದುರ್ಜನರಂ
ಕಡುಮೋಹದಿನೊಳಕೊಂಡಿ
ರ್ದೊಡೆ ಕಿಡುಗುಂ ತನ್ನೊಳಾದ ಗುಣಮೆನಿತನಿತುಂ ೯೭

ಗದ್ಯ॥ ಅದು ಕಾರಣದಿಂ ದುರ್ಜನನಾಗಿರ್ದ ನಿನ್ನನೊಳಗೊಂಡಿರ್ದೆನಗಿಹದೊಳಿರ್ಪ ಕೀರ್ತಿಯುಂ ಪರದೊಳಪ್ಪ ಸದ್ಗತಿಯುಂ, ಕಿಡುಗುಮಿನ್ನೆನ್ನಾಳ್ವ ದೇಶದೊಳಿರದೆ ಪೊಱಮಟ್ಟು ಪೋಗೆಂದು ಜಡಿದು ನುಡಿದೊಡರಸನ ಮಾತಿಂಗೆ ಲಲಿತಾಂಗನೆಟ್ದು ಸೌಂದರಿ ಮಹಾದೇವಿಯಲ್ಲಿಗೆ ಬಂದು ತನ್ನ ದೇಶತ್ಯಾಗ ವೃತ್ತಾಂತಮಂ ಪೇೞೆ ಕೇಳ್ದಿಂತೆಂಗಳ್: ೯೮

ಜಗದೀಶಂ ಸ್ನೇಹದಿಂದಂ ಕಱುವೆ ಬಿಡುವುದೀಧೂರ್ತನೆಂದಾರ್ತನೇ ಕೈ
ಮುಗಿದಾನುಂ ಪುತ್ರಮಾಣೀಖಳರ ಕೆಳೆಯುನೆಂದಾರ್ತೆನೇ ಮಂತ್ರಿವರ್ಗಂ
ಮಿಗೆಯಾವೇನೆಂದೆವೆಂದಂತಿರೆ ನೆಱೆ ನೆಗೞೆಂದಾರ್ತರೇ ನಿನ್ನ ಸೊರ್ಕಿಂ
ಮಗನೇ ನೀಂ ಮಾಡಿಕೊಂಡೈ ನೃಪನ ಮುಳಿಸನಾನೇಗುವೆಂ ಕೂರ್ತು ಕಂದಾ ೯೯

ಕ್ಷಿತಿಪಂ ನಿನ್ನಸಮಸ್ತ ಪೊಲ್ಲಮೆಗಳಂ ಕಣ್ಣಾರೆಕಂಡುಂ ಮಹೋ
ನ್ನತಚಿತ್ತಂ ಸುತಮೋಹದಿಂ ಪಲವುಸೂೞೆನ್ನಾಣೆಮಾಣೆಂದೊಡಂ
ಸಿತಗಂಮಾಣದೆ ದುಷ್ಟಸಂಗತಿಯನೇಮಾ ಭೂಪನೆಂದಿರ್ಪೊರಂ
ಟುತನಂ ಕಣ್ಗಲಿವಾಯ್ತು ಪೆತ್ತನಗೆ ನೀಂ ಪೊಂಬಟ್ಟಮಂ ಕಟ್ಟಿದೈ ೧೦೦

ಬಹಳ ಚೆನ್ನಾಗಿದೆಯೆಂದು ಓಡನ್ನು ಹಿಡಿದರೆ ಕೈಮಸಿಯಾಗುವ ಹಾಗೆ ದುರ್ಜನರನ್ನು ಬಹಳ ಮೋಹದಿಂದ ಒಳಗೆ ಸೇರಿಸಿಕೊಂಡರೆ ತನ್ನಲ್ಲಿರುವ ಗುಣವೂ ಪೂರ್ಣವಾಗಿ ಕೆಡುತ್ತದೆ ೯೭. "ದುಷ್ಟನಾದ ನಿನ್ನನ್ನು ಸಹಿಸಿಕೊಂಡಿದ್ದ ನನಗೆ ಇಹಲೋಕದಲ್ಲಿರುವ ಕೀರ್ತಿಯೂ ಪರಲೋಕದಲ್ಲಿ ಆಗುವ ಸದ್ಗತಿಯೂ ಹಾಳಾಗುತ್ತವೆ. ಇನ್ನು ನೀನು ನಾನು ಆಳುವ ರಾಜ್ಯದಲ್ಲಿ ಇರದೆ ಹೊರಟುಹೋಗು" ಎಂದು ಗದರಿಸಿ ಹೇಳಲು ಅರಸನ ಮಾತಿಗೆ, ಲಲಿತಾಂಗ ಎದ್ದು ನೇರವಾಗಿ ಸೌಂದರಿ ಮಹಾದೇವಿಯ ಬಳಿಗೆ ಹೋಗಿ ತನ್ನ ದೇಶತ್ಯಾಗದ ಸುದ್ದಿ ಹೇಳಲು ಆಕೆ ಹೀಗೆಂದಳು. ೯೮ "ರಾಜನು ಪ್ರೇಮದಿಂದ 'ಮಗುವೆ, ಈ ಧೂರ್ತತನವನ್ನು ಬಿಡು' ಎಂದು ಹೇಳಿದರೆ ಕೇಳಿದೆಯಾ ? ನಾನೂ ಕೈ ಮುಗಿದು 'ಮಗನೆ, ಈ ನೀಚರ ಸ್ನೇಹಬಿಡು' ಎಂದು ಹೇಳಿದರೆ ಕೇಳಿದೆಯಾ ? ಮಂತ್ರಿಗಳು 'ನಾವು ಹೇಳಿದಂತೆ ನಡೆದುಕೊ' ಎಂದಾಗ ಕೇಳಿದೆಯಾ ? ನೀನು ಸೊಕ್ಕಿನಿಂದ ರಾಜಕೋಪವನ್ನು ಗಳಿಸಿಕೊಂಡೆ. ನಾನೇನು ಮಾಡಬಲ್ಲೆ ?" ೯೯. ರಾಜನು ನಿನ್ನ ಎಲ್ಲ ಕೆಡಕುಗಳನ್ನೂ ಕಣ್ಣು ತುಂಬ ನೋಡಿಯೂ ಉದಾತ್ತ ಮನಸ್ಕನಾದ್ದರಿಂದ ಮೋಹದಿಂದ ಹಲವು ಸಲ 'ನನ್ನಾಣೆ ಈ ನೀಚತ್ವವನ್ನು ಬಿಡು' ಎಂದು ಹೇಳಿದರೂ ದುಷ್ಟಸಹವಾಸವನ್ನು ಬಿಡದೆ 'ದೊರೆಯೇನು ಮಾಡಿಯಾನು ? .ಎಂಬ ಒರಟುತನ ವಿಪತ್ತಾಯಿತು. ಹೆತ್ತ ನನಗೆ ಹೊನ್ನ ಪಟ್ಟಿ ಕಟ್ಟಿದೆ" ! ೧೦೦. ಬಹಳವಾಗಿ ಕಾದರೂ ನೀರು ಮನೆ

ಕಡುಗಾಯ್ದುಂ ನೀರ್ಮನೆಯಂ
ಸುಡಲಱಿಗುಮೆ ಮಗನೆ ಮುಳಿಸಿನಿಂ ನಿಮ್ಮಯ್ಯಂ
ನುಡಿದನಿತಱಿಂದೆ ಕಳೆವನೆ
ಬಿಡುವುದು ದುರ್ಗುಣಮನಣ್ಣ ಪಿಡಿವುದು ಗುಣಮಂ ೧೦೧

ಗದ್ಯ॥ ಎಂದು ಸೌಂದರಿ ಮಹಾದೇವಿ ನುಡಿದ ನುಡಿಗಳಂ ಕೊಱಿವಾವು ಗಾರುಡಮಂ ೧೦೨
ಕೇಳದಂತೆ ಕೇಳದಿರೆ ಬೇಸತ್ತು

ಇಂಬಾಗಿ ತಂದೆಗಂ ತಾ
ಯ್ಗಂ ಬಗೆವೊಡೆ ನಚ್ಚಿದೆಮ್ಮೆ ಕೋಣನನೀದ
ತ್ತೆಂಬಂತೆ ಮಾಡಿದೈ ಗುಣ
ಮಂ ಬಗೆಯದೆ ಮಗನೆ ದುಷ್ಟ ಸಂಗತಿಯಿಂದಂ ೧೦೩

ಕಾಗೆಯ ಮಱಿಯೆಂದಱಿಯದೆ
ಕೋಗಿಲೆ ಕೈಗೊಂಡು ಕೂರ್ಮೆಯಿಂ ನಡಪಿದೊಡಂ
ಕಾಗಾಯೆಂದುದು ಮತ್ತಂ
ಕಾಗೆಗಳೊಡಗೂಡಿತೆಂಬವೊಲ್ನೀಂ ಮಗನೇ ೧೦೪

ಗದ್ಯ॥ ಕಳ್ಳಂ ಕುಡಿದರಂತೆ ಸೊರ್ಕಿ ದೊಗ್ಗಳೆಯಂತುಬ್ಬಿ. ಬಳೆವ ಮೊಲೆಯಂತೆ ಕೊಬ್ಬಿ ಎಳವೆಱೆಯಂತೆ ವಕ್ರನಾಗಿ ಸೂಳೆಯಂತೆ ಕಾಟಾಗಿ ಮುಳ್ಮೊನೆಯಂತೆ ಕ್ರೂರನಾಗಿ ಪಚ್ಚೋತಿಯಂತೆ ಪಲವುಂ ಬಣ್ಣವಾಗಿ ಬಾಗೆಯಂತೆ ನಿಸ್ಸಾರನಾಗಿ ಅಶೋಕೆಯಂತೆ ನಿಷ್ಫಲನಾಗಿ ತಱಿ

ಯನ್ನು ಸುಡುವುದುಂಟೆ ? ಮಗನೆ, ಕೋಪದಿಂದ ನಿಮ್ಮ ತಂದೆ ನುಡಿದಷ್ಟರಿಂದಲೇ ನಿನ್ನನ್ನು ಓಡಿಸಿಬಿಡುವನೆ ? ದುರ್ಗುಣವನ್ನು ಬಿಡು ; ಸದ್ಗುಣವನ್ನು ಹಿಡಿ ೧೦೧. ಎಂದು ಸೌಂದರಿಮಹಾದೇವಿಯು ನುಡಿದುದನ್ನು ಕೊಳೆ ಹಾವು ಗಾರುಡವನ್ನು ಕೇಳದ ಹಾಗೆ ಕೇಳದಿರಲು, ಬೇಸರಪಟ್ಟು ೧೦೨. ತಂದೆತಾಯಿಗಳಿಗೆ ಹಿತನಾಗಿ, ಯೋಚಿಸುವುದಾದರೆ, ನಂಬಿದ ಎಮ್ಮೆ ಕೋಣವನ್ನು ಈದಿತು ಎಂಬ ಹಾಗೆ ಮಾಡಿದೆ. ದುಷ್ಟಸಹವಾಸದಿಂದ ಗುಣವನ್ನು ಅಲಕ್ಷ್ಯಮಾಡಿದೆ ೧೦೩. ಕಾಗೆಯ ಮರಿಯೆಂಬುದನ್ನು ತಿಳಿಯದೆ ಕೋಗಿಲೆಯು ಅದನ್ನೆತ್ತಿಕೊಂಡು ಪ್ರೀತಿಯಿಂದ ಸಲಹಿದರೂ ಅದು ಕಾಕಾ ಎಂದು ಕೂಗಿ ಕಾಗೆಗಳ ಸಂಗಡ ಸೇರಿಕೊಂಡಿತೆಂಬ ಹಾಗೆ, ಮಗನೇ, ನೀನು ೧೦೪. ಗದ್ಯ॥ ಹೆಂಡ ಕುಡಿದವರ ಹಾಗೆ ಸೊಕ್ಕಿ ದಂಟಿನ ಹಾಗೆ ಉಬ್ಬಿ, ಬೆಳೆಯುವ ಮೊಲೆಯಂತೆ ಕೊಬ್ಬಿ, ಬಾಲಚಂದ್ರನಂತೆ ವಕ್ರ (ಸೊಟ್ಟ, ಅಡ್ಡದಾರಿ ಹಿಡಿದವ) ನಾಗಿ, ಸೂಳೆಯಂತೆ ಕೆಟ್ಟು, ಮುಳ್ಳಿನ ಮೊನೆಯ ಹಾಗೆ ಕ್ರೂರನಾಗಿ, ಊಸುರುಳ್ಳಿಯಂತೆ ಹಲವು ಬಣ್ಣವಾಗಿ (ಹಲವು ರೀತಿ ನಡೆದುಕೊಂಡು) ಬಾಗೆ ಗಿಡದಂತೆ ಸಾರವಿಲ್ಲದವನಾಗಿ, ಅಶೋಕದಂತೆ ಫಲವಿಲ್ಲದವನಾಗಿ (ಅಶೋಕದಲ್ಲಿ ಹೂವೇ ಹೊರತು ಹಣ್ಣಿಲ್ಲ) ಕತ್ತರಿಸದ

ಯುದವುರನಂತೆ ನೇರಿದನಲ್ಲದೆ ಬಡವನಂತೆ ಪುರುಳಿಲ್ಲದೆ, ಕಾಗೆಯಂತೆ ಮತಿಯಿಲ್ಲದೆ ರಂಡೆಯಂತೆ ಪತಿಯಿಲ್ಲದೆ, ಕಾಲ್ಗೆಟ್ಟನಂತೆ ಗತಿಗೆಟ್ಟು ಬೆಸನಿಯಂತೆ ಪೆಂಪುಬಿಟ್ಟು ಕುದುರೆಯಂತೆ ಕೀಲಂ ಕೈಕೊಂಡು ತೇಟಿನಂತೆಲ್ಲಾ ಪಳಿಗಮೊಳಗಾದ್ಯೆ ನಿನ್ನ ಕೇಡಿಂಗಳಲ್ಬಾರದು ನೀನಱಿವೆ ಯೆಂಬುದುಂ ವಿಜಯಪುರಮಂ ಪೊಱಮಟ್ಟು ಪೋಗಿ ನೇಪಾಳದೇಶಮಂ ಪೊಕ್ಕಲ್ಲಿ ೧೧೫

ಹಾವಿನನಂಜುಮನವರುಮ
ನೋವಿಸಿಸಂ ತೂಗಿ ನೋಡೆ ದುಷ್ಟತನಕ್ಕಾ
ಪಾವಿನ ಪಲ್ಲ ವಿಷಕ್ಕಂ
ಭಾವಿಸೆ ಮಿಗಿಲೆನಿಪ ಕಳ್ಳರೊಳ್ ಲಲಿತಾಂಗಂ ೧೧೬

ಕೂಡಿ ಕೆಳೆಗೊಂಡು ಬಿಡದೊಡ
ನಾಡಿ ನೃಪಾಚಾರಮೆಲ್ಲಮಂ ಮಱೆದೊಡನುಂ
ಡಾಡಿ ಕೆಟ್ಟುದೂರ್ತಿಂ
ನಾಡೆಯುಮವರೆಡೆಗೆ ತಾನೆ ಮಿಕ್ಕಂ ಧರೆಯೊಳ್ ೧೧೭

ಗದ್ಯ ॥ ಅಂತು ಮುನ್ನ ಬಂದ ಕಿವಿಯಿಂದಂ ಬಟಿಕಂ ಬಂದ ಕೋಡು ಕೂರಿತ್ತೆಂಬ ನಾಣ್ಣುಡಿಯಂತೆ ಮುನ್ನಿನ ಕಳ್ಳರೆಡೆಗೆ ತಾನೆ ಪ್ರಸಿದ್ಧನಾಗಿ ತನಗವರ್ಕರ್ೞ್ಮೆಯಿಂದುಪದೇಶಂ ಗೆಯ್ದಂಜನ ಘುಟಿಕೆಯುಂ ಸಾಧಿಸಿ ತದ್ಘುಟಿಕಾ ಪ್ರಯೋಗದಿಂದದೃಶ್ಯರೂಪಂ ಕೈಕೊಂಡು ಜಗ ಮೆಲ್ಲಮಂ ಮೊಟ್ಟನಾಗೆ ಕಳ್ವಂಜನಚೋರನೆಂಬ ಪೆಸರೆಸೆಯೆ ನೆಗಟ್ದು ೧೧೮

ಮರದಂತೆ ನೇರವಾಗಿರದೆ, ಬಡವನ ಹಾಗೆ ಪುರು (ಪುರುಳ್= ಹಣ, ಸತ್ವ, ಸಾರ) ಇಲ್ಲ ದವನಾಗಿ ಕಾಗೆಯ ಹಾಗೆ ಬುದ್ಧಿಯಿಲ್ಲದೆ, ರಂಡೆಯ ಹಾಗೆ ಗಂಡನಿಲ್ಲದೆ (ಒಡೆಯನಿಲ್ಲದ) ಕಾಲು ಕಳೆದುಕೊಂಡವನಂತೆ ಗತಿ (ಗಮನ) ಯನ್ನು ಕಳೆದುಕೊಂಡು, ವ್ಯಸನಿ (ಚಟ ವುಳ್ಳವ) ಯಂತೆ ಪೆಂಪನ್ನು ಕಳೆದುಕೊಂಡು, ಕುದುರೆಯ ಹಾಗೆ ಕೀಳನ್ನು (ಕೀಲು= ಕುದುರೆ ಬಾಯಲ್ಲಿಡುವ ಕಬ್ಬಿಣದ ಕಡ್ಡಿ, ಕೀಳುತನ) ಕೈಕೊಂಡು, ಚೇಳಿನಂತೆ ಎಲ್ಲಾ ದೂಷಣೆಗೂ ಗುರಿಯಾದೆ. ನಿನ್ನ ಕೆಡಕಿಗೆ ಅಳಬಾರದು. ನಿನಗೇ ಗೊತ್ತಿದೆ. ಎನ್ನಲು ಲಲಿತಾಂಗನು ವಿಜಯಪುರವನ್ನು ಬಿಟ್ಟು ಹೊರಟು ನೇಪಾಳ ದೇಶವನ್ನು ಹೊಕ್ಕು, ಅಲ್ಲಿ ೧೧೫. ಹಾವಿನ ವಿಷವನ್ನೂ ಅವರನ್ನೂ ತೂಗಿ ನೋಡಿದರೆ ಕೆಟ್ಟತನಕ್ಕೆ ಆ ಹಾವಿನ ಹಲ್ಲಿನ ವಿಷಕ್ಕಿಂತಲೂ ಹೆಚ್ಚೆನಿಸುವ ಕಳ್ಳರಲ್ಲಿ ೧೧೬, ಸೇರಿಕೊಂಡು ಸ್ನೇಹಿತನಾಗಿ ರಾಜವಂಶದ ಆಚಾರವನ್ನೆಲ್ಲ ಬಿಟ್ಟು ಕಳ್ಳರೊಡನೆ ಊಟ ಮಾಡಿ ಕೆಟ್ಟು ಧೂರ್ತತನದಲ್ಲಿ ಅವರಿಗಿಂತ ತಾನೇ ಮೀರಿಸಿದ ೧೧೭. ಹಾಗೆ ಮೊದಲು ಬಂದ ಕಿವಿಗಿಂತ ಆಮೇಲೆ ಬಂದ ಕೊಂಬು ಹರಿತವೆಂಬ ಗಾದೆಯಂತೆ ಮುಂಚಿನ ಕಳ್ಳರಲ್ಲಿ ತಾನೆ ಪ್ರಸಿದ್ಧನಾಗಿ ಅವರು ತನಗೆ ಪ್ರೀತಿಯಿಂದ ಉಪದೇಶಿಸಿದ ಅಂಜನ ಘುಟಿಕೆಯನ್ನು ಕಲಿತು ಸಾಧಿಸಿ, ಅದರ ಬಲದಿಂದ ಅದೃಶ್ಯರೂಪವನ್ನು ಹೊಂದಿ ಜಗತ್ತಿನಲ್ಲೆಲ್ಲ ಚೆನ್ನಾಗಿ ಕದಿಯುವ ಅಂಜನಚೋರನೆಂಬ ಹೆಸರನ್ನು ಹೊಂದಿ ಪ್ರಸಿದ್ಧನಾಗಿ ೧೧೮. ಕಳ್ಳತನ, ಜೂಜು,

ಕಳವುಂ ಜೂಜುಂ ಮಾಂಸದೆ
ಮಳಿನತೆಯುಂ ಮಾಪ್ಪುಬೇಂಟೆಯುಂ ಪರಸತಿಗ
ಳ್ಗೆಳಸುವುದಂ ಬ್ರತವಿಲ್ಲದೆ
ಬೆಲೆವೆಣ್ಣೊಡನಿರ್ಪುದೋತು ಕುಡಿವುದು ಕಳ್ಳಂ ೧೧೯

ಅಸುಗತಿಯನೆಯ್ದಿಸಲ್ಕವು
ವಿಸುಪ ಮರುಜ್ಜವದ ತುರಗವೆನಿಸುವ ಸಪ್ತ
ವ್ಯಸನಮನೆ ಬಿಡದೆ ಕೈಕೊಂ
ಡೆಸಗಿ ಸದಾಚಾರಮೆಲ್ಲಮಂ ನೆಱಿಮಱಿದಂ ೧೨೦

ಎಲ್ಲಿ ವಿನೋದಮೆಲ್ಲಿ ವಿಟರೆಲ್ಲಿ ಮನಂ ನಡುಗೆಲ್ಲಿ ದುಷ್ಟರಂ
ತೆಲ್ಲಿ ಕನಿಷ್ಠರೆಲ್ಲಿ ಗಣಿಕಾಜನಮೆಲ್ಲಿ ಪುಳಿಂದಗೋಷ್ಠಿ ಮ
ತ್ತೆಲ್ಲಿ ಜಡಾತ್ಮರೆಲ್ಲಿ ಚಪಳರ್ಕರದೆಲ್ಲಿ ವಿಶೇಷ ಕಳ್ಳರಂ
ತಲ್ಲಿಯೆ ರಾಗಮಲ್ಲಿಯೆ ಮಹೋತ್ಸವ ಮಲ್ಲಿಯೆ ತಾಣಮಾಗಳುಂ ೧೨೧

ಗದ್ಯ ॥ ಅಂತು ತನ್ನ ಮನಕ್ಕೆ ಬಂದಂತೆ ನೆಗಟುತ್ತುಂ ಕರಟದ ಕದಿರಂತೆ ತಿಱ್ಱನೆ ತಿರುಗುತ್ತು ಮೊಮ್ಮೆ ರಾಜಗೃಹಮೆಂಬ ಪುರಕ್ಕೆ ಬಂದು ತತ್ಪುರದ ಸೂಳೆಗೇರಿಯಂ ಪೊಕ್ಕುರುಮಂ ಮೆಚ್ಚದೆ ಪೋಗುತ್ತುಮಿರ್ದು ಮನಸಿಜನ ಕಯ್ಯ ಮಸೆದಸಿಯುನನುಕರಿಸುವ ಅನಂಗ ಸೌಂದರಿಯೆಂಬ

ಮಾಂಸ, ಮಾಲಿನ್ಯವನ್ನುಂಟು (ಪಾಪ) ಮಾಡುವ ಬೇಟೆ, ಪರರ ಹೆಂಡಿರಿಗೆ ಆಸೆ ಪಡುವುದು (ಬ್ರಹ್ಮಚರ್ಯ) ವ್ರತವನ್ನು ಬಿಟ್ಟು ಸೂಳೆಯರೊಡನಿದ್ದು ಹೆಂಡವನ್ನು ಕುಡಿಯುವುದು ೧೧೯. ದುರ್ಗತಿಯನ್ನು ಹೊಂದಿಸಲು ಇವು ವಾಯುವೇಗದ ಕುದುರೆಗಳೆನಿಸುವ ಸಪ್ತವ್ಯಸನಗಳನ್ನು ಬಿಡದೆ ಕೈಕೊಂಡು ನಡೆಸುತ್ತ ಸದಾಚಾರವನ್ನೆಲ್ಲ ಪೂರ್ತಿಯಾಗಿ ಮರೆತುಬಿಟ್ಟನು ೧೨೦. ಎಲ್ಲಿ ವಿನೋದ, ಎಲ್ಲಿ ವಿಟರು, ಮನಸ್ಸನ್ನು ಅಂಜಿಸುವಂಥ ದುಷ್ಟರು ಎಲ್ಲಿ, ಎಲ್ಲಿ ನೀಚರ ಸಹವಾಸ, ಎಲ್ಲಿ ಸೂಳೆಯರ ಗುಂಪು, ಎಲ್ಲಿ ಬೇಡರ ಗುಂಪು, ಬೇರೆಲ್ಲಿ ಜಡಾತ್ಮರು, ಎಲ್ಲಿ ಚಪಲಚಿತ್ತರು, ಅದೆಲ್ಲೆಲ್ಲಿ ವಿಶೇಷರಾದ ಕಳ್ಳರು, ಇರುತ್ತಿದ್ದರೋ ಅಲ್ಲಿಯೇ ಲಲಿತಾಂಗನಿಗೆ ಸಂತೋಷ. ಅಲ್ಲಿಯೇ ಅವನಿಗೆ ದೊಡ್ಡ ಉತ್ಸವ. ಅಂಥ ಸ್ಥಳದಲ್ಲಿ ಅವನಿಗೆ ಯಾವಾಗಲೂ ಸ್ಥಾನ ೧೨೧. ಹಾಗೆ ತನ್ನ ಮನಸ್ಸಿಗೆ ಬಂದ ಹಾಗೆ ಮಾಡುತ್ತ, ಚಿಪ್ಪಿನಲ್ಲಿ ತಿರುಗುವ ಕದಿರಿನಂತೆ, ತಿರ್ರನೆ ತಿರುಗುತ್ತ, ಒಂದು ಸಲ ರಾಜಗೃಹವೆಂಬ ಪಟ್ಟಣಕ್ಕೆ ಹೋಗಿ ಆ ಪಟ್ಟಣದ ಸೂಳೆಗೇರಿಯನ್ನು ಹೊಕ್ಕು ಯಾರನ್ನೂ ಮೆಚ್ಚದೆ ಹೋಗುತ್ತಿದ್ದಾಗ ಮನ್ಮಥನ ಕೈಯ್ಯಲ್ಲಿನ ಮಸೆದ ಕತ್ತಿಯನ್ನು ಹೋಲುವ ಅನಂಗ ಸೌಂದರಿಯೆಂಬ ಸೂಳೆಯನ್ನು ನೋಡಿ ನೋಟದಿಂದಲೇ

ಸೂಳೆಯುಂ ಕಂಡು ಕಣ್ಬೇಟಂಗೊಂಡೊತ್ತೆಗೊಟ್ಟಾಕೆಯು ಮೇಲೆ ಮೋಹಮುಂ ಸ್ನೇಹ ಮುಂ ತಿಣ್ಣಮಾಗೆ, ೧೧೨

ಓಪಳ ಕೂರ್ಮೆಯೊಳಬ್ಜ
ದ್ವೀಪದ ಗುಳ್ಳೆಯುವೊಲಗಲಲಾಱದೆ ಸಲೆ ನಿ
ಕ್ಷೇಪದ ಪೊನ್ನಂ ಕೈಕೊಂ
ಡೇಪೊತ್ತುಂ ನೋಡುತಿರ್ಪ ಪಾವಿನ ತೆಱದಿಂ ೧೧೩

ಗದ್ಯ ॥ ಇರುತಿರ್ದಾಕೆಯೆನಿತರ್ಥಮಂ ಬೇಡಿದೊಡನಿತುಮಂ ಪ್ರೀತಿಯಿಂ ಕೈದೆಗೆಯದೆರಡು ಗೇಳದೆಯನವರತಂ ಕುಡುತ್ತುವಿರ್ಪುದುಮಾತನೋರಂತೀವ ಕೊಡಿಂಗನಂಗಸೌಂದರಿ ಬೆಱ ಗಾಗಿ ತನ್ನೊಳಿಂತೆಂದಳ್. ೧೧೪

ಸುರಪತಿಯುಂ ಸಿರಿಯೊಳ್ಮ
ಚ್ಚರಿಸುವ ಧರಣೀಶರುತ್ತರಾಶಾಧಿಪನೊಳ್
ದೊರೆಯೆನಿಸುವ ವೈಶ್ಯಜಭ್ರಾ
ಸುರತೇಜರ್ವೀರ್ಕ್ಕ ಗಂಡರೆನ್ನ ಬೊಜಂಗರ್ ೧೧೫

ಗದ್ಯ ॥ ಅಂತಪ್ಪವರೊಳವೀತನೊಂದುದಾರತೆಯುಂ ಕನಸಿನೊಳಾದೊಡಂ ಕಂಡಱಿಯೆ ನೀತಂಗೆ ಪೊಱಗೆ ನಾಡಿಲ್ಲೊಳಗೆ ಭಂಡಾರಮಿಲ್ಲೀತಂಗೆ ಪೊನ್ನೆತ್ತಣಿಂ ಬರ್ಪುದಿದನಾರಯ್ವೆನೆಂದು ಪುಸಿಗೂರ್ಮೆಯಿಂದನೇಕ ಚಾಟುಕಾರದಿಂ ನಂಬಿಸಿ ಮೆಲ್ಲನೆ ಬೆಸಗೊಳ್ಬುದುಂ, ಮೈಮಱೆದು

ಪ್ರೇಮಿಸಿ ಮುಂಗಡ ಕೊಟ್ಟು ಆಕೆಯ ಮೇಲೆ ಮೋಹವೂ ಸ್ನೇಹವೂ ಹೆಚ್ಚಾಗಲು, ೧೧೩. ಪ್ರಿಯಳ ಪ್ರೇಮದಲ್ಲಿ ಅಬ್ಜದ್ವೀಪದ ಗುಳ್ಳೆಯ (ಶಂಖ ಮತ್ತು ಅದರೊಳಗಿನ ಹುಳು) ಹಾಗೆ ಅವಳನ್ನು ಬಿಟ್ಟಿರಲಾರದೆ ಬಚ್ಚಿಟ್ಟ ಬಂಗಾರವನ್ನು ಯಾವಾಗಲೂ ನೋಡುತ್ತಿರುವ ಹಾವಿನ ರೀತಿಯಾಗಿ ೧೧೩. ಇರುತ್ತಿದ್ದು ಆಕೆ ಎಷ್ಟು ಹಣವನ್ನು ಕೇಳಿದರೆ ಅಷ್ಟನ್ನು ಸಂತೋಷದಿಂದ ತಡವಿಲ್ಲದೆ, ಎರಡನೆಯ ಸಲ ಕೇಳಿಸಿಕೊಳ್ಳದೆ, ಸದಾ ಕೊಡುತ್ತ ಇರಲು ಆತನು ಒಂದೇ ಸಮನೆ ಕೊಡುವ ಕೊಡುಗೆಗೆ ಅನಂಗಸೌಂದರಿ ಬೆರಗಾಗಿ ತನ್ನಲ್ಲಿಯೇ ಹೀಗೆಂದುಕೊಂಡಳು : ೧೧೪. ಐಶ್ವರ್ಯದಲ್ಲಿ ದೇವೇಂದ್ರನನ್ನು ಮೀರಿಸುವ ರಾಜರೂ, ಉತ್ತರದಿಕ್ಕಿಗೆ ಒಡೆಯ (ಕುಬೇರ) ನೊಡನೆ ಸಮಾನತೆಯನ್ನು ಹೊಂದಿದವರೆನ್ನಿಸಿಕೊಂಡ ವೈಶ್ಯಜನ್ಮರೂ ಪ್ರಕಾಶವಾದ ತೇಜಸ್ಸುಳ್ಳ ಪ್ರಸಿದ್ಧ ವೀರರೂ ನನ್ನ ವಿಟರು ೧೧೫. ಅಂಥವರಲ್ಲಿಯೂ ಈತನ ಧಾರಾಳವನ್ನು ಕನಸಿನಲ್ಲಿಯೂ ಕಂಡಿಲ್ಲ. ಈತನಿಗೆ ಹೊರಗೆ ರಾಜ್ಯವಿಲ್ಲ ; ಒಳಗೆ ಭಂಡಾರವಿಲ್ಲ. ಈತನಿಗೆ ಬಂಗಾರ ಎಲ್ಲಿಂದ ಬರುತ್ತದೆ ? ಇದನ್ನು ವಿಚಾರಿಸುವೆನೆಂದು ಸುಳ್ಳು ಪ್ರೇಮದಿಂದ (ಪ್ರೇಮದ ನಟನೆ) ಅನೇಕ ಪ್ರಿಯವಾಕ್ಯಗಳಿಂದ, ನಂಬಿಸಿ ಮೆಲ್ಲಗೆ ಕೇಳಲಾಗಿ ಲಲಿತಾಂಗನು ಮೈ

ತನ್ನ ಕಳವಿನ ಮಾರ್ಗಮೆಲ್ಲಮಂ ಪೇೞೆ, ಕೇಳ್ದನಂಗಸೌಂದರಿ ಬೆಱಗಾಗಿರ್ಪುದುಂ ಮಱುದಿವಸ
ಮರಸನರಸಿಯರ್ಬೆರಸು ತೂರ್ಯತ್ರಯಮೊಪ್ಪೆ ಜಲಕ್ರೀಡೆಗೆ ಪೊಱಮಟ್ಟು ಪೋಗು
ತ್ತಿರೆ, ೧೧೬

ತರಣಿಯ ಕಿರಣಾವಳಿಗಂ
ಸರಸಿಜವೈರಿಯ ಮಯೂಖತತಿಗಂ ಮಿಗಿಲ
ಚ್ಚರಿ ಕಾಂತಿಯೆನಿಪ ಬೆಳಗಿಂ
ಸ್ಫುರಿಯಿಪ ಸದ್ರತ್ನನಿಕರದಿಂದೊಪ್ಪುವುದಂ ೧೧೭

ಗದ್ಯ ॥ ಪಟ್ಟದ ಮಹಾದೇವಿಯುರದೊಳೊಪ್ಪುತ್ತಿರ್ದ ಜ್ಯೋತಿಪ್ರಭಮೆಂಬ ಪದಕಮಂ
ಕಂಡನಂಗಸೌಂದರಿಯಾ ಪದಕದ ಮೇಲೆ ಪ್ರೀತಿಬಟ್ಟು ಅಂಜನಚೋರಂ ಘಟಿಕಾಪ್ರಯೋಗ
ದಿಂದದೃಶ್ಯರೂಪದಿಂ ಪೋಗಿ ಕಳ್ದು ತಂದು ಕುಡುವ ಸಮರ್ಥನೆಂಬುದಂ ತಾಂ ಬಲ್ಲಳಪ್ಪುದ
ಱಿಂದಾ ಪದಕಮನೆನಗೆ ಕೂರ್ತೆಯಪ್ಪೊಡೆ ಬೇಗದಿಂ ತಂದೀವುದೆಂದು ಲಲ್ಲೆಗೈದು ಪ್ರಾರ್ಥಿಸು
ವುದುಮದು ಪೊಱಗಾಗೆ ನೀನೇನಂ ತರವೇೞ್ದೊಡಂ ತಂದಿತ್ತಪೆನಿದೊಂದು ಮಾತ್ರಂ ಬೇಡದೇ
ಕೆನೆ, ೧೧೮

ಆಪದಕಂ ಬಂದೊಡೆ ಕೇ
ಳೇಪೊತ್ತುಂ ತೊಡಲೆವೇೞ್ಕುಮಱಿದೊಡೆ ನಿನ್ನಂ
ಭೂಪತಿ ಕೊಲ್ಗುಂ ಕವರುಗು
ಮೇಪಡಿಮಾತದಱ ಪಂಬಲಂ ಬಿಡು ನಯದಿಂ ೧೧೯

ಮರೆತು, ತನ್ನ ಕಳ್ಳತನದ ದಾರಿಯನ್ನೆಲ್ಲ ಹೇಳಿಬಿಟ್ಟನು. ಅದನ್ನು ಕೇಳಿ ಅನಂಗ ಸೌಂದರಿ ಆಶ್ಚರ್ಯಪಟ್ಟುಕೊಂಡಿರಲು, ಮರುದಿನ ರಾಜನು ರಾಣಿಯರೊಡನೆ ಕೂಡಿ ವಾದ್ಯಘೋಷದೊಡನೆ ಜಲಕ್ರೀಡೆಗೆ ಹೊರಟು ಹೋಗುತ್ತಿದ್ದಾಗ ೧೧೬. ಸೂರ್ಯನ ಕಿರಣಗಳಿಗೂ ಚಂದ್ರಕಿರಣಗಳಿಗೂ ಹೆಚ್ಚಾದ ಆಶ್ಚರ್ಯಕರವಾದ ಕಾಂತಿಯೆನಿಸುವ ಬೆಳಕಿನಿಂದ ಥಳಥಳಿಸುವ ಒಳ್ಳೆಯ ರತ್ನಸಮೂಹದಿಂದ ಶೋಭಿಸುವ ೧೧೭. ಜ್ಯೋತಿ ಪ್ರಭೆಯೆಂಬ ಪದಕವು ಪಟ್ಟದ ರಾಣಿಯ ಎದೆಯ ಮೇಲೆ ಇದ್ದುದನ್ನು ಕಂಡು ಅನಂಗ ಸೌಂದರಿ ಆ ಪದಕದ ಮೇಲೆ ಆಸೆಪಟ್ಟು, ಅಂಜನಚೋರನು ಘುಟಿಕಾ ಪ್ರಯೋಗದಿಂದ ಅದೃಶ್ಯರೂಪನಾಗಿ ಹೋಗಿ ಕದ್ದು ತಂದುಕೊಡಬಲ್ಲ ಸಮರ್ಥನೆಂಬುದನ್ನು ತಾನು ಬಲ್ಲವಳಾದುದರಿಂದ "ಆ ಪದಕವನ್ನು ನನಗೆ ಬೇಗನೆ ತಂದುಕೊಡಬೇಕು, ನೀನು ನನ್ನನ್ನು ಪ್ರೀತಿಸುವುದಾದರೆ" ಎಂದು ಲಲ್ಲೆಗರೆದು ಬೇಡಿಕೊಳ್ಳಲು "ಅದು ಹೊರತಾಗಿ ನೀನು ಏನನ್ನು ತರಹೇಳಿದರೂ ತಂದುಕೊಡುತ್ತೇನೆ. ಇದೊಂದು ಮಾತ್ರ ಬೇಡ. ಏಕೆಂದರೆ ೧೧೮. ಆ ಪದಕ ಬಂದರೆ ನೀನು ಅದನ್ನು ಯಾವಾಗಲೂ ಧರಿಸಲೇಬೇಕು. ಅದು ರಾಜನಿಗೆ ತಿಳಿದರೆ ಅವನು ನಿನ್ನನ್ನು ಕೊಲ್ಲಿಸಿ ಪದಕವನ್ನು ವಶಪಡಿಸಿಕೊಳ್ಳುತ್ತಾನೆ. ಅದೇನು ಮಾತು ? ಅದರ ಹಂಬಲನ್ನು ಒಳ್ಳೆಯತನದಿಂದ ಬಿಟ್ಟುಬಿಡು" ಎಂದನು;

ಗದ್ಯ॥ ಎಂಬುದುಮಂಜನಚೋರಂಗೆ ಮುಳಿದು ಪಾಸಿನ ಮೇಲಿಂ ನೆಲಕ್ಕೆ ಬೀಳಲೊದೆದು, ಕಾಲೊಳಂ ಕೈಯೊಳಂ ಮೂಡೆಗಟ್ಟುವಂತೆ ಮೋದಿ, ಕೋಪಾನಳನಿಂ ಕಣ್ಕಾಣದೆ ಕೆಲದೊಳಿರ್ದ ದಂತದ ಪಾವುಗೆಯಿಂದಮಿಟ್ಟು ೧೨೦

ತೊಡವೆನಗಪ್ಪೊಡೆ ಲಕ್ಕಂ
ಬಡೆವವು ಪಲವೊಳವು ನಂಬೆಯಪ್ಪೊಡೆ ನೋಡೀ
ಗಡೆ ಕೂರ್ಪೆಯೆಂದು ನಾಂ ಪೇ
ಟ್ದೊಡೆ ಗಂಡರ ಬೂತೆ ನುಡಿವುದೇ ಪೆಱಪೆಱತಂ ೧೨೧

ಸಿತಗೆಯೆ ನಾನೆಮ್ಮಬ್ಬೆಯ
ಮತಮಂ ಬಂಧುಗಳ ವಚನಮಂ ಮೀಱಿ ಮಹೋ
ನ್ನತಿಯಿಂ ನಿನ್ನೊಡನೋತಿ
ರ್ದತಿ ಚಪಳೆಗೆ ಭಾವಿಪಂದಿದಾವುದು ಚೋದ್ಯಂ ೧೨೨

ಎನ್ನೆಂದ ಮಾತನಂತಿಂ
ತೆನ್ನದೆ ತಡೆದಿರದೆ ಕೂಡುವಚ್ಚಿಗಮಂ ಕೇಳ್
ನಿನ್ನೊಡನಿರ್ದಬೊಜಂಗರ್
ನಿನ್ನಂತಿರೆ ಬಂಜರಲ್ಲರದಟರ್ಕಳವರ್ ೧೨೩

ಆದರೆ ಆ ಸೂಳೆ ಅಂಜನಚೋರನ ಮೇಲೆ ಸಿಟ್ಟಾಗಿ ಹಾಸಿಗೆಯ ಮೇಲಿನಿಂದ ಕೆಳಗೆ ಬೀಳುವಂತೆ ಒದ್ದು, ಕಾಲುಕೈಗಳಲ್ಲಿ ಮೂಟೆಗಟ್ಟುವಂತೆ ಹೊಡೆದು, ಕೋಪಾಗ್ನಿಯಿಂದ ಮೈಯರಿವಿಲ್ಲದೆ ಪಕ್ಕದಲ್ಲಿದ್ದ ದಂತದ ಪಾದುಕೆಯಿಂದ ಹೊಡೆದಳು ೧೨೦. ಲಕ್ಷ ಹೊನ್ನು ಬೆಲೆಯ ಒಡವೆಗಳು ನನಗೆ ಹಲವು ಇವೆ. ನೀನು ನಂಬಲಾರೆಯಾದರೆ ಈಗಲೇ ನೋಡು. ನೀನು ನನಗೆ ಒಲಿದವನೆಂದು ನಾನು ಹೇಳಿದರೆ ನಾಚಿಕೆಯಿಲ್ಲದ ಗಂಡೆ ! ನೀನು ಯಾವ ಯಾವುದೋ ಮಾತನ್ನು ಹೇಳುವೆಯಾ ? ೧೨೧. ನಾನು ಸೂಳೆಯೇ ಹೌದು. ಆದರೆ ನಾನು ನನ್ನ ತಾಯಿಯ ಅಭಿಪ್ರಾಯವನ್ನೂ ಬಂಧುಗಳ ಮಾತನ್ನೂ ಮೀರಿ ಬಹಳ ಮೆಚ್ಚಿಗೆಯಿಂದ ನಿನ್ನನ್ನು ಪ್ರೇಮಿಸಿದ್ದ ಅತ್ಯಂತ ಚಪಲೆಗೆ ಇದು ಯಾವ ವಿಚಿತ್ರ ? ೧೨೨. ನಾನು ಹೇಳಿದ ಮಾತಿನಂತೆ, ಹಾಗೆ, ಹೀಗೆ, ಎನ್ನದೆ ಸಾವಕಾಶ ಮಾಡದೆ ಅತಿಶಯವಾದ ಪ್ರೀತಿಯಿಂದ ಒಪ್ಪುವವರು ನನ್ನ ವಿಟಪುರುಷರು. ಅವರು ಶೂರರು. ನಿನ್ನ ಹಾಗೆ ನಿರರ್ಥಕರಲ್ಲ—ವಂಧ್ಯರಲ್ಲ—ಬಂಜರಲ್ಲ ('ಬಂಜೆ' ಎಂಬುದಕ್ಕೆ ಪುಲ್ಲಿಂಗ ರೂಪ ?) ೧೨೩. "ದನಕಾಯುವವನು ರಾಜನಾದರೆ ಕೊಡೆಯ

ಗದ್ಯ॥ ಎಡೆಯುನರಸಾದೊಡೆ ಕೊಡೆಯು ಕಾವು ಮೇಗಾದುದೆಂಬಂತೆ ದೇಸಿಗನಪ್ಪ ನಿನಗೆರಡಿಲ್ಲದ ಸ್ನೇಹಮಂ ಮಾಡಿ ಕೂಡಿರ್ದೆನಗೆ ಸಂತೋಷಮಂ ಮಾಡಿದೈ ಎಂದಾತನೆರಡಿಲ್ಲದೆ ಕೂರ್ತುದ ನಱಿದನಪ್ಪುದನಱಿದು ಕಡೆಗಣ್ಣ ನೋಟದೊಳ್ ಶೃಂಗಾರರಸಮುಂ ಮೆಲ್ನುಡಿಯೊಳ್ ಕಾರುಣ್ಯರಸಮುಮೊಡನೊಡನೆ ಪೆರ್ಚೆ ನುಡಿಯಲಿನ್ನುಮಿದಪಳೆಂದಂಜನಚೋರಂ ಭಯಂಗೊಂಡು ನಲ್ಲಳ ಪಾದಮಂ ತಲೆಯೊಳ್ ಪೊತ್ತುಕೊಂಡು ಎನ್ನ ಮುದ್ದೆ ಮುನಿಯದಿರಿದಾವ ಗಹನಂ ನಿನಗದಂ ತಂದೀವೆನಂಜದಿರೆಂದು ಸಂತಸಂಗೊಳಿಸಿ ಕಳ್ಳಂಗೆ ಬೆಳ್ದಿಂಗಳ್ ಸೊಗಸದೆಂಬ ನಾಣ್ನುಡಿಯಂ ನನ್ನಿ ಮಾಡಿ ಶುಕ್ಲಪಕ್ಷಂ ಪೋಪಿನಮಿರ್ದು ಕೃಷ್ಣಪಕ್ಷದಷ್ಟಮಿಯಂದು ೧೨೪

ತುಱಿಪದಿನಂಜನಮಂ ವಿ
ಸ್ತರದಿಂದಂ ಕಣ್ಣೊಳಚ್ಚಿಕೊಂಡಾದರದಿಂ
ಭರದಿಂದದೃಶ್ಯರೂಪಿಂ
ದರಮನೆಯಂ ಪೊಕ್ಕು ಪದಕಮಂ ಕೊಂಡಾಗಳ್ ೧೨೫

ಪೊಱಮಟ್ಟು ಪೆರ್ಚಿನಿಂ ಮೆ
ಯ್ಯಱಿಯದೆ ಬರೆ ರತ್ನದೀಪ್ತಿ ದೆಸೆದೆಸೆಗಲ್ಲಿಂ
ಮಿಱುಗೆ ರವಿಕಿರಣನಿಕರದ
ತೆಱದಿಂ ತೊಱಲುತ್ತುಮಿರ್ಪ ದಂಡಕನೆಂಬಾ ೧೨೬

ಕಾವು ಮೇಲಕ್ಕಾಯಿತು ! ಎಂಬಂತೆ ಪರದೇಶಿಯಾದ ನಿನಗೆ ಕೊರತೆಯಿಲ್ಲದ ಪ್ರೀತಿಯಿಂದ ಕೂಡಿದ ನನಗೆ ಸಂತೋಷವನ್ನು ಮಾಡಿದೆ. ಎಂದು ಆತನು ಭೇದವಿಲ್ಲದೆ ಪ್ರೀತಿಸಿದ್ದುದನ್ನು ಬಲ್ಲಳಾದ್ದರಿಂದ ಕಡೆಗಣ್ಣಿನ ನೋಟದಲ್ಲಿ ಶೃಂಗಾರ ರಸವನ್ನೂ ಮೃದುವಾಕ್ಯದಲ್ಲಿ ಕರುಣೆಯನ್ನೂ ಒಟ್ಟೊಟ್ಟಿಗೆ ಹೆಚ್ಚುವಂತೆ ಮಾತನಾಡಲು "ಇನ್ನು ಸಿಟ್ಟುಗೊಳ್ಳುತ್ತಾಳೆ" ಎಂದು ಅಂಜನಚೋರನು ಹೆದರಿ ಅವಳ ಪಾದಗಳನ್ನು ತಲೆಯ ಮೇಲೆ ಹೊತ್ತುಕೊಂಡು "ನನ್ನ ಮುದ್ದಿನವಳೆ, ಇದು ಯಾವ ದೊಡ್ಡ ಕಷ್ಟ ? ನಿನಗೆ ಅದನ್ನು ತಂದುಕೊಡುತ್ತೇನೆ. ಅಂಜಬೇಡ" ಎಂದು ಹೇಳಿ ಸಂತೋಷಪಡಿಸಿ ಕಳ್ಳನಿಗೆ ಬೆಳದಿಂಗಳು ಇಷ್ಟವಲ್ಲವೆಂಬ ಗಾದೆಯನ್ನು ನಿಜಮಾಡಿ ಶುಕ್ಲಪಕ್ಷ ಕಳೆದು ಹೋಗುವವರೆಗೆ ಕಾದಿದ್ದು ಕೃಷ್ಣಪಕ್ಷದ ಅಷ್ಟಮಿಯ ದಿನ ೧೨೪. ಬೇಗನೆ ಅಂಜನವನ್ನು ಹೆಚ್ಚಾಗಿ ಕಣ್ಣಿಗೆ ಹಚ್ಚಿಕೊಂಡು ಅಕ್ಕರೆಯಿಂದ ಅದೃಶ್ಯರೂಪವನ್ನು ಧರಿಸಿ ರಭಸದಿಂದ ಅರಮನೆಯನ್ನು ಪ್ರವೇಶಿಸಿ ಪದಕವನ್ನು ತೆಗೆದುಕೊಂಡನು. ೧೨೫. ಅಲ್ಲಿಂದ ಹೊರಟು ಉತ್ಸಾಹದಲ್ಲಿ ಮೈಮರೆತು ಬರುತ್ತಿರುವಾಗ ಆ ಪದಕದ ರತ್ನಗಳ ಪ್ರಕಾಶವು ದಿಕ್ಕುದಿಕ್ಕುಗಳಿಗೆಲ್ಲ ಸೂರ್ಯಕಿರಣಗಳಂತೆ ಮಿರುಗುಟ್ಟುತ್ತಿರಲು ನಗರದಲ್ಲಿ ತಿರುಗುತ್ತಿರುವ ದಂಡಕನೆಂಬ ತಳವಾರ ೧೨೬. ಅದನ್ನು ಕಂಡನು. ಆತನು ಅಂಜನ ವಿದ್ಯೆಗೆ

ಗದ್ಯ॥ ತಳಾಱಿಂ ಕಂಡಱಿದಾತನಂಜನ ವಿದ್ಯೆಯಂ ಕೆಡಿಸಿ ಬೆನ್ನಟ್ಟಿ ಬರೆ ಭಯದಿಂದಂಜನ ಚೋರಂ ಪದಕಮನೀಡಾಡಿಯಾಪುರದ ಕೋಂಟೆಯಂ ವಿದ್ಯಾಧರಕರಣದಿಂ ಲಂಘಿಸಿ ದೆಸೆಗೆಟ್ಟೋಡುವಾತನಂದು ಶ್ಮಶಾನ ಭೂಮಿಯೊಳಾಲದಮರದ ಕೆಳಗುರಿವ ಸೊಡರಂ ಕಂಡಲ್ಲಿಗೆ ಬಂದು ನಿಂದು ನೋಡುವಾಗಳಾಲದಮರದ ಕೊಂಬಿನೊಳ್ ನೂಱೊಂದು ಕಾಲ ನೆಲಪಂ ಕಟ್ಟಿ ನೆಲಪಿನ ಕೆಳಗೆ ೧೩೭

ಪರಶು ಬಿಲು ಕೊಂತಮುಸಿ ತೋ
ಮರ ಮುದ್ಗರ ಭಿಂಡಿವಾಳ ಚಕ್ರಂ ಶೂಲಂ
ಸುರಗಿ ಮೊದಲಾಗೆ ಮೂವ
ತ್ತೆರಡಾಯುಧಮಂ ಮಹೋತ್ಸವಂಬೆರಸಿನಿತಂ ೧೩೮

ಗದ್ಯ॥ ನಿಲಿಪಿ ಪೂಜಿಸಿ ನೆಲಪಿನ ಕಾಲಂ ಕೊಯ್ಯಲಣ್ಮದೇಱುತ್ತುಮಿೞಿಯುತ್ತುಮಿರ್ಪನಂ ಕಂಡಂಜನಚೋರನವನಂ ಪಿಡಿದು ನೀನಾರ್ಗೆ ನೀಂ ಸಾಧಿಸುವ ವಿದ್ಯೆಯ ಪೆಸರೇನಿದನುಪದೇಶಂಗೆಯ್ದರಾರ್ ಪೇೞ್ ಪೇೞದಂದು ನಿನ್ನನಿಲ್ಲಿ ಕೊಲ್ಲದೆ ಮಾಣೆನೆಂದು ಸುರಗಿಯಂ ಕಿೞ್ತು ಗಂಟಲ್ಗೆ ಪೂಡುವುದುಂ ಪ್ರಾಣಭಯದಿಂ ಬೆರ್ಚಿ ೧೩೯

ಪ್ರತಿಕ್ರಿಯೆ ಬಲ್ಲವನು. ಲಲಿತಾಂಗನ ಅಂಜನ ಮಹಿಮೆಯನ್ನು ಹೋಗಲಾಡಿಸಿ ಬೆನ್ನಟ್ಟಿ ಬರಲು ಅಂಜನಚೋರನು ಭಯದಿಂದ ಪದಕವನ್ನು ಬಿಸಾಟು ಪಟ್ಟಣದ ಕೋಟೆಯನ್ನು ವಿದ್ಯಾಧರಕರಣ ಶಕ್ತಿಯಿಂದ ಹಾರಿ ದಾಟಿ ದಿಕ್ಕೆಟ್ಟು ಓಡುತ್ತ ಆಹೊತ್ತು ಶ್ಚಶಾನ ಭೂಮಿಯು ಒಂದು ಆಲದ ಮರದ ಕೆಳಗೆ ಒಂದು ದೀಪ ಉರಿಯುತ್ತಿದ್ದುದನ್ನು ಕಂಡನು. ಆಗ ಅಲ್ಲಿಗೆ ಹೋಗಿ ನಿಂತು ನೋಡಲು ಆಲದ ಮರದ ಕೊಂಬಿಗೆ ನೂರೊಂದು ಕಾಲುಳ್ಳ ನೆಲುವನ್ನು ಕಟ್ಟಿ ಅದರ ಕೆಳಗೆ ೧೩೭. ಗಂಡುಗೊಡಲಿ, ಬಿಲ್ಲು, ಭರ್ಜಿ, ಕತ್ತಿ, ತೋಮರ, (ಈಟಿ) ಗದೆ, ಭಿಂಡಿವಾಳ, ಚಕ್ರಾಯುಧ, ಶೂಲ, ಸುರಗಿ ಮೊದಲುದ ಮೂವತ್ತೆರಡು ಆಯುಧಗಳನ್ನು ಬಹಳ ಉತ್ಸಾಹದಿಂದ ನಿಲ್ಲಿಸಿ ೧೩೮, ಅವುಗಳನ್ನು ಪೂಜೆಮಾಡಿ ನೆಲವಿನ ಕಾಲನ್ನು ಕತ್ತರಿಸಲು ಧೈರ್ಯಸಾಲದೆ ಅದರ ಮೇಲೆ ಏರುತ್ತ ಇಳಿಯುತ್ತಾ ಇದ್ದವನೊಬ್ಬನನ್ನು ಕಂಡು ಅಂಜನಚೋರನು ಅವನನ್ನು ಹಿಡಿದು "ನೀನು ಯಾರ ಮಗ ? ನೀನು ಸಾಧಿಸುತ್ತಿರುವ ವಿದ್ಯೆಯ ಹೆಸರೇನು ? ಇದನ್ನು ನಿನಗೆ ಉಪದೇಸ ಮಾಡಿದವರು ಯಾರು ? ಹೇಳು, ಹೇಳದಿದ್ದರೆ ನಿನ್ನನ್ನು ಇಲ್ಲಿಯೇ ಕೊಲ್ಲದೆ ಬಿಡುವುದಿಲ್ಲ" ಎಂದು ಕತ್ತಿಯನ್ನು ಕೊರಳಿಗೆ ಗುರಿಯಿಡಲು ಪ್ರಾಣ ಭಯವುಂಟಾಗಿ ೧೩೯. ಆತನು "ನನ್ನ ಹೆಸರು ವರಸೇನ. ಈ ವಿದ್ಯೆಗೆ ಗಗನಗಾಮಿನಿ

ಎನ್ನ ಪೆಸರ್ವರಸೇನಂ
ಸನ್ನುತಮಿಾ ವಿದ್ಯೆ ಗಗನಗಾಮಿನಿ ಪೆಸರಿಂ
ಮುನ್ನಿದನುಪದೇಶಂಗೆ
ಯ್ದನ್ನಣಿ ಜಿನದತ್ತಸೆಟ್ಟಿ ನಿರ್ಮಳಚರಿತಂ ೧೩೦

ಗದ್ಯ॥ ಎಂಬುದುಮಂಜನಚೋರಂ ವರಸೇನನ ಮಾತಿಂಗೆ ಮುಗುಳ್ನಗೆ ನಕ್ಕು ಸಕಲ ಸದ್ಗುಣ ನಿಳಯನುಂ ಸದ್ಧರ್ಮಜಲನಿಧಿ ಚಂದ್ರನುಂ ಸತ್ಯನಿಧಿಯುಂ ದಯಾನಿಧಿಯುಮೆನಿಸಿ ನೆಗಟ್ದ ಜಿನದತ್ತಸೆಟ್ಟಿಯೆ ಮಂತ್ರೋಪದೇಶಂಗೆಯ್ದನೆನೆ ನಿನಗೆ ಪಂದೆತನಮೆ ತಾನಾದೊಡಿನಿತಾನುಂ ಭಯಮಿಲ್ಲದೊರ್ಮೆಯೆ ನೆಲಪಿನ ಕಾಲೆಲ್ಲಮಂ ಕೊಯ್ವೆಂ ನೀನಾದೊಡೇಱುತ್ತುಮಿೞಿಯುತ್ತುಮಿಂತೇಕಿರ್ದಪೈ, ಭಯಂಬೇಡೆನೆ, ವರಸೇನನಿಂತೆಂದಂ :– ೧೩೧

ಎತ್ತಲಱಿವರ್ಮನುಷ್ಯ
ಚಿತ್ತಮನಾರಯ್ಯೆ ನಾನಿದಂ ಕೊಯ್ದಿಗ್ಗಿಂ
ಸತ್ತೊಡೆ ಬೞಿಕ್ಕೆ ಕನಸಿನ
ಬತ್ತಕ್ಕೆಚ್ಚತ್ತು ಗೋಣೆಯಾಂತಂತಕ್ಕುಂ ೧೩೨

ಗದ್ಯ ॥ ಸತ್ತುಕೊಳ್ವ ಸ್ವರ್ಗದಿಂ ಬರ್ದು ಕೊಳ್ವನರಕಂ ಲೇಸು ಎಂಬುದು ನಾಣ್ನುಡಿ. ಜೀವಮುಳ್ಳೊಡೆ ಹಾಡಿಕೊಂಡುಣಲಕ್ಕುಮೆಂಬ ನೀತಿಯಂ ಬಿಟ್ಟು ಮಾರಿಯಂ ಬಳಾರಿಯುಂ ಸಾಯ್ಗು ಮಾನಾದೊಡೊಲ್ಲೆನೆನೆ, ಲಲಿತಾಂಗಂ ತನ್ನಂತರಂಗದೊಳೀತೆಂದಂ. ಮುಗಿಲಂ ಮುಟ್ಟಿದುದಱ

ಯೆಂದು ಹೆಸರು. ಇನ್ನು ಇದನ್ನು ನನಗೆ ಉಪದೇಶ ಮಾಡಿದಾತನು ನಿರ್ಮಲ ಚರಿತ್ರನಾದ ಜಿನದತ್ತಸೆಟ್ಟಿ" ೧೩೦, ಎನ್ನುತ್ತಲೆ, ಅಂಜನಚೋರನು ವರಸೇನನ ಮಾತಿಗೆ ಮುಗುಳುನಗೆಬೀರಿ, "ಸಕಲ ಸದ್ಗುಣಕ್ಕೆ ಮನೆಯಂಥವನೂ ಸದ್ಧರ್ಮವೆಂಬ ಸಮುದ್ರಕ್ಕೆ ಚಂದ್ರನಂಥವನೂ ಸತ್ಯನಿಧಿ, ದಯಾನಿಧಿಯೂ ಆದ ಜಿನದತ್ತ ಸೆಟ್ಟಿಯೇ ಮಂತ್ರೋಪದೇಶ ಮಾಡಿದನೆಂದ ಮೇಲೆ ನಿನಗೆ ಹೇಡಿತನವೇ ? ನಾನಾದರೆ ಸ್ವಲ್ಪವೂ ಭಯವಿಲ್ಲದೆ ಈ ನೆಲಹಿನ ಕಾಲೆಲ್ಲವನ್ನೂ ಕೊಯ್ಯುತ್ತೇನೆ. ನೀನಾದರೆ ಹತ್ತುತ್ತ ಇಳಿಯುತ್ತ, ಹೀಗೇಕಿರುವೆ ? ಭಯ ಬೇಡ" ಎಂದು ಹೇಳಲು ವರಸೇನನು ಹೀಗೆಂದನು ; ೧೩೧. "ಮನುಷ್ಯರ ಮನಸ್ಸಿನೊಳಗಿನದನ್ನು ಯಾರು ಬಲ್ಲರು ? . ಅಪಮಾನದಿಂದ ನಾನು ವಿಚಾರವಿಲ್ಲದೆ ಇದನ್ನು ಕೊಯಿದು ಸತ್ತರೆ ಆಮೇಲೆ ಕನಸಿನಲ್ಲಿ ಕಂಡನೆಲ್ಲಿಗೆ ಎದ್ದ ಮೇಲೆ ಗೋಣಿ ಚೀಲಗಳನ್ನು ಹೊತ್ತ ಹಾಗೆ ಆದೀತು ೧೩೨. 'ಸತ್ತು ಪಡೆದುಕೊಳ್ಳುವ ಸ್ವರ್ಗಕ್ಕಿಂತ ಬದುಕಿ ಪಡೆಯುವ ನರಕ ಒಳ್ಳೆಯದು' ಎಂಬುದು ಗಾದೆ. ಜೀವವಿದ್ದರೆ ಹಾಡಿ ಬೇಡಿಕೊಂಡು ಬದುಕ ಬಹುದು ಎಂಬ ನೀತಿಯನ್ನು ಬಿಟ್ಟು, ಮಾರಿಯೂ ಮಹಾಕಾಳಿಯೂ ಸಾಯಲಿ, ನಾನೊಲ್ಲೆ" ಎನ್ನಲು ಲಲಿತಾಂಗನು ತನ್ನ ಮನಸ್ಸಿನೊಳಗೆ ಹೀಗೆಂದು ಕೊಂಡನು. "ಮೋಡವನ್ನು ಮುಟ್ಟಿದ ವಸ್ತುವಿನ ಉದ್ದವೆಷ್ಟು? ಮಕ್ಕಳನ್ನು

ನೀಳಮಂ, ಮಕ್ಕಳ್ಪೆತ್ತಳಮದುವೆಯಂ, ಪಟ್ಟಂಗಟ್ಟಿದನ ರಾಜ್ಯಮಂ, ಗೆಲ್ದಂಕದಗೆಲ್ಲಮಂ
ಮೋಕ್ಷಮನೆಯ್ದಿದನ ಪರ್ವತಮೆತ್ತಿದವನ ಸಾಹಸಮಂ, ಸಮುದ್ರಮಂ ಲಂಘಿಸಿದನಾರ್ಪಂ,
ಇಂದ್ರತ್ವಮಂ ಪಡೆದವನ ಜಿನಭಕ್ತಿಯುಂ ಕಾಮನನೊಲಿಸಿದವಳ ಸೊಬಗಂ ತ್ರಿಭುವನ
ವಿಜಯಿಯ ವೀರಮಂ ಚಕ್ರವರ್ತಿತ್ವಮನೆಯ್ದಿದನ ವಿದ್ಯೆಯುಮಂ ಬೆಸಗೊಂಬವನ ಬೆಳ್ಪನದಂತೆ ೧೩೩

ಜಿನದತ್ತಂ ಜಿನಪಾದಪದ್ಮ ಮಧುಪಂ ದುಷ್ಕರ್ಮ ದಾವಾಗ್ನಿ ಸ
ಜ್ಜನ ಚೂಡಾಮಣಿ ಸರ್ವಜೀವಹಿತನಿಂದ್ರಾದ್ರಿಕ್ಷಮಂ ನಿರ್ಮಳಂ
ವಿನಯಾಲಂಕೃತನಾಗಮಾನ್ವಿತನುದಾರಂ ಸತ್ಯವಾಕ್ಯಂ ಜಗ
ಜ್ಜನ ಸಂಸ್ತುತ್ಯನಣುವ್ರತೈಕನಿಳಯಂ ವಾತ್ಸಲ್ಯರತ್ನಾಕರಂ ೧೩೪

ಗದ್ಯ॥ ಒಂದಿಱುಂಪೆಯ ಪ್ರಾಣಕ್ಕಂ ತಪ್ಪದಾತಂ ನಿನ್ನ ಪ್ರಾಣಕ್ಕೆ ತಪ್ಪುವನೆ ? ತಪ್ಪಲ
ಱಿಯಂ. ನಾನಾ ತಳಾಱನ ಕೈಯೊಳ್ಸಾಯದಿಲ್ಲಿ ಪರಿಚ್ಛೇದಮಂ ಮಾಳ್ಪೆನೆಂದು ೧೩೫

ಕೊಡು ಮಂತ್ರಮನೆಲೆ ಬೇಗಂ
ಕುಡದಿರ್ದೊಡೆ ನಿನ್ನನಿಲ್ಲಿ ದೆಸೆವಲಿಗೆಯ್ವಂ
ತಡೆಯದೆನೆ ಪಂದೆಯಂ ಪಾ
ವಡರ್ದಂತಿರೆ ಬೆರ್ಚಿ ನಾಡೆಯುಂ ವರಸೇನಂ ೧೩೬

ಹೆತ್ತವಳಿಗೆ ಮದುವೆಯಾಯಿತೆ ? ಪಟ್ಟ ಕಟ್ಟಿದವನ ರಾಜ್ಯವೆಲ್ಲಿ ? ಗೆದ್ದ ಕುಸ್ತಿಯ
ಗೆಲವು ಹಾದೆ ? ಪರ್ವತವನ್ನೇ ಎತ್ತಿದವನ ಸಾಹಸವೆಷ್ಟು? ಸಮುದ್ರವನ್ನು ಹಾರಿದವನ
ಶಕ್ತಿಯೇನು? ಇಂದ್ರ ಪದವಿಯನ್ನು ಪಡೆದವನಿಗೆ ಜಿನಭಕ್ತಿಯಿತ್ತೆ? ಕಾಮನನ್ನು ಒಲಿಸಿ
ಕೊಂಡವಳು ಸೊಬಗುಳ್ಳವಳೆ ? ಮೂರು ಲೋಕಗಳನ್ನೂ ಗೆದ್ದವನು ವೀರನೆ ? ಚಕ್ರ
ವರ್ತಿಪದವಿಯನ್ನು ಪಡೆದವನು ವಿದ್ಯಾವಂತನೆ ? ಎಂದು ಕೇಳುವವನ ಬೆಪ್ಪುತನದಂತೆ
೧೩೩. ಜಿನದತ್ತನು ಜಿನಪಾದಪದ್ಮಗಳಲ್ಲಿ ತುಂಬಿ, ದುಷ್ಕರ್ಮಗಳನ್ನು ಸುಡುವ
ಕಾಳ್ಗಿಚ್ಚು, ಸಜ್ಜನಶ್ರೇಷ್ಠ, ಆತನು ಸರ್ವ ಜೀವಿಗಳ ಹಿತಚಿಂತಕ, ಮೇರು ಪರ್ವತದಂತೆ
ಕ್ಷಮೆಯುಳ್ಳವ. ನಿರ್ಮಲನು, ವಿನಯಶೀಲ. ಆಗಮಗಳನ್ನು ಬಲ್ಲವನು. ಉದಾರಿ.
ಸತ್ಯವಾಕ್ಯವುಳ್ಳವನು. ಜಗತ್ತಿನ ಜನರ ಸ್ತೋತ್ರಕ್ಕೆ ಪಾತ್ರನಾಗಿದ್ದಾನೆ. ಅಣುವ್ರತಕ್ಕೆ
ಮುಖ್ಯ ಆವಾಸದಂತೆ ಇರುವವನು. ಅವನು ವಾತ್ಸಲ್ಯಸಮುದ್ರ. ೧೩೪. ಅವನು
ಒಂದು ಇರುವೆಯ ಜೀವಕ್ಕೂ ಹಾನಿಮಾಡದವನು. ನಿನ್ನ ಪ್ರಾಣಕ್ಕೆ ಕೇಡು ಬಯಸುವು
ದಿಲ್ಲ. ನಾನು ಆ ತಳವಾರನ ಕೈಯಲ್ಲಿ ಸಿಕ್ಕು ಸಾಯದೆ ಇಲ್ಲಿಯೇ ನಿರ್ಧಾರಮಾಡಿ
ಕೊಳ್ಳುತ್ತೇನೆ. ೧೩೫. ಎಂದು ಯೋಚಿಸಿ, "ಬೇಗ ಮಂತ್ರವನ್ನು ಹೇಳಿಕೊಂಡು. ಇಲ್ಲ
ದಿದ್ದರೆ ಇಲ್ಲಿ ನಿನ್ನನ್ನು ದಿಗ್ಬಲಿ ಮಾಡುತ್ತೇನೆ." ಎನ್ನಲು ಹೇಡಿಯು ಮೇಲೆ ಹಾವು
ಹತ್ತಿದಂತೆ ಬೆದರಿ ವರಸೇನನು ೧೩೬. ಜಿನದತ್ತ ಸೆಟ್ಟಿಯು ಹಿಂದೆ ತನಗೆ ಹೇಗೆ

ಜನದತ್ತಸೆಟ್ಟಿ ಮುನ್ನಂ
ತನಗೆಂತಳವಡಿಸಿ ಪೇೞ್ದನಂತಾ ತೆಱದಿಂ
ಮನದ ಮಹಾಭಯದಿಂದಂ
ಜನಚೋರಂಗಱಿಯೆ ಪೇೞ್ ತಿಳಿದಾದರದಿಂ ೧೩೭

ಪರಮ ಜಿನೇಶ್ವರ ಪದಮಂ
ಸ್ಮರಿಯಿಸಿ ಜಿನದತ್ತಸೆಟ್ಟಿಗಾದರದಿಂದಂ
ಕರಯುಗಮಂ ಮುಗಿದುಂ ನಿ
ರ್ಭರಚಿತ್ತಂ ಪಂಚಪದಮನುಚ್ಚರಿಸುತ್ತುಂ ೧೩೮

ಎಱೆ ನೆಲಪಂ ಮನಂಬಿಡೆ
ತೋಱುವ ನೂಱೆಂಟು ತೆಱದ ನೆಲಪಿನ ಕಾಲಂ
ಕೀಱಡದೆ ಶಂಕೆಯಿಂದಂ
ಬೇಱೊಂದಂ ನೆನೆಯದನಿತುಮಂ ಲಲಿತಾಂಗಂ ೧೩೯

ಗದ್ಯ॥ ಚೆಕ್ಕನೆ ಕೊಯ್ವುದುಂ ಆಯುಧಾಗ್ರಮುಂ ಮುಟ್ಟೆವೆಂದು ತಾಗದೆ ಮೇಗಣ್ಗೆ ನೆಗೆಯೆ ತದ್ವಿದ್ಯಾದೇವತೆ ಮುಂದೆ ನಿಂದು ಕಯ್ಯಂ ಮುಗಿದು ಬೆಸಸು ಬೆಸಸೆನೆ ಲಲಿತಾಂಗಂ ಬೆಸನೇ ನೆನ್ನಂ ಸುಕವಿನಿಕರಪಿಕಮಾಕಂದನಲ್ಲಿಗೊಯ್ವುದೆಂಬುದುಂ ಅಂತೆಗೆಯ್ವೆನೆಂದು ಮೇರುಗಿರಿಯ ಭದ್ರಸಾಲ ನಂದನವನದೊಳಿರ್ದ ಜನದತ್ತನಂ ತೋಱಿ ನೆಲಕ್ಕಿೞಿಪಿ ವಿದ್ಯೆ ಪೋಪುದು ಮಂಜನಚೋರಂ ಮೇರುಗಿರಿಯುಂ ನೋಡಿ ೧೪೦

ಹೊಂದಿಸಿ ಹೇಳಿದನೋ, ಆ ರೀತಿಯಿಂದ, ಮನಸ್ಸಿನಲ್ಲಿ ಮಹಾಭಯದಿಂದ ಅಂಜನ ಚೋರನಿಗೆ ಎಲ್ಲವನ್ನೂ ತಿಳಿಯ ಹೇಳಿದನು, ಅವನು ಅದನ್ನು ಆದರದಿಂದ ೧೩೭. ಕಲಿತು ಕೊಂಡು ಪರಮ ಜಿನೇಶ್ವರನ ಪಾದವನ್ನು ಸ್ಮರಿಸಿ ಜಿನದತ್ತ ಸೆಟ್ಟಿಗೆ ಭಕ್ತಿಯಿಂದ ಕೈಜೋಡಿಸಿ ತುಂಬು ಮನಸ್ಸಿನಿಂದ ಪಂಚಪದವನ್ನುಚ್ಚರಿಸುತ್ತ ೧೩೮, ಆ ನೆಲುವನ್ನು ಹತ್ತಿ ಕಾಣಿಸಿದ ನೂರೆಂಟು ರೀತಿಯ ನೆಲವಿನ ಕಾಲುಗಳನ್ನೂ ಮನಃಪೂರ್ವಕವಾಗಿ, ಚೀರದೆ, ಅನುಮಾನಿಸದೆ, ಹಲವು ಯೋಚನೆಗಳಲ್ಲಿ ಮುಳುಗದೆ, ಒಂದೇ ಮನಸ್ಸಿನಿಂದ ಲಲಿತಾಂಗನು ಕತ್ತರಿಸಿಬಿಟ್ಟನು ೧೩೯. ಆ ನೆಲುವಿನ ಕಾಲುಗಳನ್ನೆಲ್ಲ 'ಚಕ್' ಎಂದು ಕೊಯ್ದುಬಿಡಲು ಕೆಳಗೆ ಹೂತಿದ್ದ ಆಯುಧಗಳ ಮೊನೆಯು ಬಳಿಗೆ ಬಂದು ಅದಕ್ಕೆ ತಾಕದೆ ಮೇಲಕ್ಕೆ ಹಾರಲು ಆ ವಿದ್ಯಾದೇವತೆ ಎದುರಿನಲ್ಲಿ ನಿಂತು ಕೈಮುಗಿದು 'ಹೇಳು ಹೇಳು' ಎನ್ನಲು, ಲಲಿತಾಂಗನು 'ಹೇಳುವುದೇನಿದೆ ? ನನ್ನನ್ನು ಸುಕವಿನಿಕರಪಿಕಮಾಕಂದ (ಜಿನದತ್ತ ಸೆಟ್ಟಿ) ನ ಬಳಿಗೆ ಕರೆದುಕೊಂಡು ಹೋಗು' ಎಂದು ಹೇಳುತ್ತಲೇ, 'ಹಾಗೆಯೇ ಮಾಡುತ್ತೇನೆ' ಎಂದು ಮೇರುಪರ್ವತದ ಭದ್ರಸಾಲನಂದನವನದೊಳಗಿದ್ದ ಜಿನದತ್ತ ನನ್ನು ತೋರಿಸಿ, ನೆಲಕ್ಕೆ ಇಳಿಸಿ ವಿದ್ಯೆ ಹೋಯಿತು. ಅಂಜನಚೋರನು ಮೇರು ಪರ್ವತವನ್ನು ನೋಡಿ ೧೪೦. 'ಬ್ರಹ್ಮನು ಎಷ್ಟೋ ಭಕ್ತಿಯಿಂದ ಯೋಚಿಸಿ ನೋಡಿ

ಏಂ ಭಕ್ತಿಯಿಂ ವಿಧಾತ್ರಂ
ತಾಂ ಭಾವಿಸಿ ನೋಡಿ ಮಾಡಲೆಳಸಿದ ಮಾನ
ಸ್ತಂಭಮೆನಿಸಿರ್ದುದೊಳ್ಪಿಂ
ಶುಂಭಚ್ಛೋಭಾಕರಂ ಸುರೇಶ್ವರ ಶೈಲಂ ೧೪೧

ಗದ್ಯ॥ ಎಂದು ಪೊಗೞ್ದು ೧೪೨

ಅಗಣಿತಮಪ್ಪ ಕೆಂದಳಿರಗೊಂದಣದಿಂ ತುಱುಗಿರ್ದ ಮಾವು ಸಂ
ಪಗೆ ಸುರಹೊನ್ನೆ ಮನ್ಮಥನ ಬೀಡಿನ ಕೆಂಗುಡಿಯೆಂಬ ಚೆಲ್ವಿನಿಂ
ಸೊಗಯಿಪ ಪಲ್ಲವ ಪ್ರಕರದಿಂ ನೆಱೆದೊಪ್ಪುವಶೋಕೆ ನಾಗಸಂ
ಪಗೆ ಹರಿಚಂದನಂ ಬಗೆಗೆ ವಂದುವು ಮೇರುನಗೋಪಕಂಠದೊಳ್ ೧೪೩

ಪಾಡುವ ತುಂಬಿಯಿಂ ಕುಕಿಲ್ವ ಕೋಗಿಲೆಯಿಂ ಕಡುರಮ್ಯಮಾಗಿರಲ್
ತೀಡುವ ದಕ್ಷಿಣಾನಿಳನಿನಕ್ಕರಿನೋತಿರದೊರ್ವರೊರ್ವರೊಳ್
ಕೂಡುವ ದೇವದಂಪತಿಗಳಿಂದೆಡೆಯಾಡುವ ಖೇಚರಾಳಿಯಿಂ
ದಾಡುವ ಕೇಕಿಯಿಂ ಮನಮನಿರ್ಕುಳಿಗೊಳ್ವುದು ನೋೞ್ಪಡೀ ಬನಂ ೧೪೪

ಗದ್ಯ॥ ಎಂದು ಮೆಚ್ಚಿ ಪೊಗೞುತ್ತುಮತಿರಮಣೀಯಮಪ್ಪ ನಂದನವನದೊಳ್ ಶುದ್ಧ ಸ್ಫಟಿಕದ ನೆಲಗಟ್ಟಿಂ ಪಚ್ಚೆಯ ಕಂಬಂಗಳಿಂ ಚಂದ್ರಕಾಂತದ ಬೋದಿಗೆಗಳಿಂ ಇಂದ್ರನೀಲದ ನಾಗವಟ್ಟಿಗೆಯಿಂ ವಜ್ರದ ಸೋಪಾನಂಗಳಿಂ ಪವಳದ ಕೀಲ್ಗಳಿಂ ಪೊನ್ನಕೇರ್ಗಳಿಂ ವೈಡೂರ್ಯದ

ಮಾಡಬಯಸಿದ ಮಾನಸ್ತಂಭದೋಪಾದಿಯಲ್ಲಿದೆ, ವಿಶೇಷವಾಗಿ ಹೊಳೆಯುವ ಶೋಭಾಯಮಾನವಾದ ಈ ಇಂದ್ರಪರ್ವತ' ೧೪೧. ಎಂದು ಹೊಗಳಿದನು. ೧೪೨. ಅತಿಶಯವಾದ ಕೆಂಪುಚಿಗುರಿನ ಗೊಂಚಲುಗಳಿಂದ ಒತ್ತಾಗಿದ್ದಮಾವು, ಸಂಪಗೆ, ಸುರಹೊನ್ನೆಗಳು ಮನ್ಮಥನ ಬೀಡಿನ ಕೆಂಪು ಬಾವುಟವೆಂಬಂತೆ ಅಂದವಾಗಿ ಶೋಭಾಯಮಾನವಾಗಿರುವ ಚಿಗುರಿನ ಗುಂಪಿನಿಂದ ಕೂಡಿ ಒಪ್ಪುವ ಅಶೋಕ, ನಾಗಸಂಪಗೆ, ಹರಿಚಂದನಗಳು ಅಂದವಾಗಿದ್ದುವು, ಆ ಮೇರುವಿನ ಸಮೀಪದಲ್ಲಿ ! ೧೪೩. ಹಾಡುವ ತುಂಬಿಗಳು, ಧ್ವನಿಮಾಡುವ ಕೋಗಿಲೆಗಳು, ಇವುಗಳಿಂದ ಬಹಳ ಮನೋಹರವಾಗಿರಲು ಬೀಸುವ ದಕ್ಷಿಣ ಮಾರುತದ ದೆಸೆಯಿಂದ ಆ ಬನದಲ್ಲಿ ದೇವದಂಪತಿಗಳು ಒಬ್ಬೊಬ್ಬರೂ ಬೇರೆ ಬೇರೆ ನಿಂತಿರದೆ ಒಟ್ಟಿಗೆ ಸೇರುತ್ತಿದ್ದರು. ಖೇಚರ ಸಮೂಹವನ್ನೂ ಅಲ್ಲಿ ಕಾಣಬಹುದಾಗಿತ್ತು. ಕುಣಿಯುವ ನವಿಲುಗಳಿಂದಲೂ ಮನಸ್ಸನ್ನು ಸೆರೆಹಿಡಿಯುತ್ತಿತ್ತು, ಆ ವನ. ೧೪೪. ಎಂದು ಆ ವನದ ಸೊಬಗನ್ನು ಮೆಚ್ಚಿಕೊಳ್ಳುತ್ತ ಬಹಳ ಸುಂದರವಾದ ನಂದನವನದಲ್ಲಿ ಶುದ್ಧ ಸ್ಫಟಿಕದ ನೆಲಗಟ್ಟು, ಪಚ್ಚೆಯ ಕಂಬಗಳು, ಚಂದ್ರಕಾಂತದ ಬೋದಿಗೆಗಳು, ಇಂದ್ರನೀಲ ಮಣಿಯ ನಾಗಪಟ್ಟಿಕೆ, ವಜ್ರದ ಸೋಪಾನಗಳು, ಹವಳದ ಕೀಲುಗಳು, ಚಿನ್ನದ ಗೋಡೆಗಳು, ವೈಡೂರ್ಯದ ಕದಗಳು ಸೂರ್ಯಕಾಂತದ ಬಾಗಿಲುವಾಡ

೧೪೪

ಪಡಿಗಳಿಂ ಸೂರ್ಯಕಾಂತದ ದ್ವಾರಬಂಧಂಗಳಿಂ ಪದ್ಮರಾಗದ ಕಲಶಂಗಳಿಂ ಪುಷ್ಯರಾಗದ ಮಕರ ತೋರಣಂಗಳಿಂ ಮುತ್ತಿನಸೂಸಕಂಗಳಿಂ ಮಾಣಿಕದ ಪ್ರತಿಮೆಗಳಿಂದೊಪ್ಪುವ ಕೃತ್ರಿಮ ಚೈತ್ಯಾಲಯಂಗಳಂ ಕಣ್ತಣಿವಿನಂ ನೋಡುತ್ತುಂ ಜಿನಪ್ರತಿಮೆಗಳಂ ಭಕ್ತಿಯಿಂ ಪಲತೆಱದರ್ಚನಾ ದ್ರವ್ಯಂಗಳಿಂದರ್ಚಿಸುತ್ತುಂ ಬಲಗೊಂಡುಂ ಪೊಡೆಮಡುವ ದೇವ ವಿದ್ಯಾಧರ ಸಮೂಹಮುಂ ನೋಡುತ್ತುಂ ಪೊಗಳುತ್ತುಂ ಉತ್ತಮ ವೈರಾಗ್ಯದ ಪೆರ್ಚುಗೆಯಂ ತಡೆಯದೆ ಸೆಟ್ಟಿಯನೆಯ್ದೆ ೧೪೫
ವಂದು

ಅಳಿನಿಕುರುಂಬಮಶೋಕೆಯ
ತಳಿರಂ ಮುಸುಕುವವೊಲಂಘ್ರಿಪಲ್ಲವಮಂ ಕುಂ
ತಳತತಿಗಳ್ಮುಸುಱೆ ಮಹೋ
ಜ್ವಳ ತೇಜಂ ವೈಶ್ಯಜಂಗೆ ತಾಂ ಪೊಡೆವಟ್ಟಂ ೧೪೬

ಗದ್ಯ॥ ಅಂತು ತನಗೆ ಪೊಡೆವಟ್ಟಂಜನಚೋರನಂ ಜಿನದತ್ತಸೆಟ್ಟಿ ನೋಡಿ ಬೆಱಗಾಗಿ ೧೪೭
ತನ್ನೊಳಿಂತೆಂದಂ

ಬಱಿದೆ ಕುಣಿವಂಗೆ ಮತ್ತಂ
ಪಱಿಯುವನುಂ ಕೂಡಿದಂತೆ ಧಾರಿಣಿಯಂ ಮು
ನ್ನಱಿಯಟ್ಟ ಕಳ್ವ ಕಳ್ಳಂ
ಗಱಿಕೆಯ ಸದ್ವಿದ್ಯೆಯಾರ ದೆಸೆಯಿಂದಾಯ್ತೋ ೧೪೮

ಗಳು, ಪದ್ಮರಾಗ ಶಿಲೆಯ ಕಳಶಗಳು, ಪುಷ್ಯರಾಗ ಮಕರ ತೋರಣಗಳು, ಮುತ್ತಿನ ಸೂಸಕ (ಹಣೆಯ ಮೇಲೆ ಧರಿಸುವ ಮುತ್ತಿನ ಒಡವೆ) ಗಳು, ಮಾಣಿಕ್ಯದ ಪ್ರತಿಮೆಗಳು ಇವುಗಳಿಂದ ಸುಂದರವಾದ ಜಿನಮಂದಿರಗಳನ್ನು ಕಣ್ಣುದಣಿಯುವ ಹಾಗೆ ನೋಡುತ್ತ, ಆ ಜಿನಪ್ರತಿಮೆಗಳನ್ನು ಹಲವು ಬಗೆಯ ಪೂಜಾಸಾಮಗ್ರಿಯಿಂದ, ಭಕ್ತಿಯಿಂದ ಪೂಜಿಸುತ್ತ ಪ್ರದಕ್ಷಿಣೆಮಾಡಿ ನಮಸ್ಕರಿಸುವ ದೇವರುಗಳು, ವಿದ್ಯಾಧರರು ಮೊದಲಾದವರ ಗುಂಪನ್ನು ನೋಡಿ ಮೆಚ್ಚುತ್ತ ಹೊಗಳುತ್ತ ಉತ್ತಮ ವೈರಾಗ್ಯದ ಹೆಚ್ಚಿಗೆಯನ್ನು ತಡೆಯದೆ ಸೆಟ್ಟಿಯ ಹತ್ತಿರಕ್ಕೆ ಸೇರಿ ೧೪೫. ದುಂಬಿಗಳ ಗುಂಪು ಅಶೋಕ ವೃಕ್ಷದ ಚಿಗುರನ್ನು ಮುತ್ತಿಕೊಳ್ಳುವ ಹಾಗೆ ಆ ಸೆಟ್ಟಿಯ ಪಾದಗಳನ್ನು ತನ್ನ ಮುಂಗೂದಲು ಮುಚ್ಚುವಂತೆ ಮಹಾತೇಜಸ್ಸಿನಿಂದ ಕೂಡಿ ಉಜ್ವಲನಾದ ಆ ಜಿನದತ್ತ ಸೆಟ್ಟಿಗೆ ಅಂಜನ ಚೋರನು ನಮಸ್ಕಾರಮಾಡಿದನು. ೧೪೬. ಹಾಗೆ ತನಗೆ ಅಡ್ಡಬಿದ್ದ ಅಂಜನ ಚೋರನನ್ನು ಕಂಡು ಜಿನದತ್ತಸೆಟ್ಟಿ ಆಶ್ಚರ್ಯಪಟ್ಟು ಮನಸ್ಸಿನಲ್ಲಿ ಹೀಗೆಂದುಕೊಂಡನು ೧೪೭. ಸುಮ್ಮನೆ ಕುಣಿಯುವವನಿಗೆ ತಮಟೆಯವನೂ ಸೇರಿಕೊಂಡ ಹಾಗೆ, ಭೂಮಂಡಲವನ್ನು ಮೊದಲೇ ಬಾಧಿಸಿ ಕದಿಯುವ ಕಳ್ಳನಿಗೆ ಪ್ರಸಿದ್ಧವಾದ ಸದ್ವಿದ್ಯೆ ಯಾರ ಮೂಲಕ ಲಭಿಸಿತೋ ! ೧೪೮. ಮೂಗಿನಿಂದ ನೆಲವನ್ನು ಉಳುವವನಿಗೆ ನೇಗಿಲನ್ನು ಕೊಟ್ಟರೆನ್ನು

ಗದ್ಯ॥ ಮೂಗಿನೊಳುಳುವಾತಂಗೆ ನೇಗಿಲಂ ಕೊಟ್ಟರೆಂಬಂತೆ ಗಾಳಿಯಂ ಮೆಲ್ವನ ಬಾಯ್ಗವಲಂ ಪೊಯ್ದರೆಂಬಂತೆ ಬಡಿದು ಕೊಲ್ವಂಗೆ ಸಾಲಂಗೊಟ್ಟರೆಂಬಂತೆ ಕೊಲಲ್ಬರ್ಪಂಗಿದಿರ್ವೋದರೆಂಬಂತೆ ಕವರಲ್ಬಂದಂಗೆ ಬಯಕೆಯಂ ತೋಱಿದರೆಂಬಂತೆ ಕಳಲ್ಬಂದಂಗೆ ಕೈಯೆಡೆಗೊಟ್ಟರೆಂಬಂತೆ ಪಿಡಿಯ ಬಂದಂಗೆ ಕೈನೀಡಿ ಕೊಟ್ಟರೆಂಬಂತೆ ಲೋಕದೊಳೀತಂ ಮಾಯಾ ವಿದ್ಯೆಯಪ್ಪಂ ಜನಘುಟಿಕೆಯಿಂ ಜನರ ಸರ್ವಸ್ವಮಂ ಕಳ್ವನೀತಂಗೆ ಗಗನಗಾಮಿನೀ ವಿದ್ಯೆ ಸಾಧ್ಯಮಾದುದೀತನಿನ್ನು ನಾಡೆಲ್ಲಮಂ ನಿವಾಳಿವಟ್ಟಂ ಮಾಡಿ ಕಳದೆ ಮಾಣನೆಂದು ಪಾಪಭೀರುತ್ವದಿಂ ಬೆರ್ಚಿ ಲಲಿತಾಂಗನ ಮೊಗಮಂ ನೋಡಿ ೧೪೯

ನಿನಗೆಂತುಬಂದುದೀಮೇ
ದಿನಿಪೂಜಿತಮಪ್ಪ ವಿದ್ಯೆ ಪೇೞೆಂಬುದುಮಂ
ಜನಚೋರನದಱಕಥೆಯಂ
ವಿನಯದಿನಂದಱಿಪಿ ಬೞಿಕಮಿಂತೆಂದಂ ೧೫೦

ಜಿನದತ್ತ ನಿನ್ನ ಮುಡಿಯಂ
ಜಿನವಚನಮೆ ತಿಬ್ಬಮೆಂದುನಂಬಿದಫಲಮಂ
ಮನವಾರೆ ಕಂಡೆನದಱಿಂ
ದೆನಗೆ ಶರಣ್ಣನರ ನಿಮ್ಮಚರಣಯುಗಂಗಳ್ ೧೫೧

ವಂತೆ, ಗಾಳಿಯನ್ನು ಮೆಲ್ಲುವವನ ಬಾಯಿಗೆ ಅವಲಕ್ಕಿ ಹಾಕಿದರೆಂಬಂತೆ, ಹೊಡೆದು ಕೊಲ್ಲುವವನಿಗೆ ಸಾಲವನ್ನು ಕೊಟ್ಟರೆಂಬಂತೆ, ಕೊಲ್ಲಲು ಬರುವವನಿಗೆ ಇದಿರಾಗಿ ಹೋಗುವಂತೆ, ಸೂರೆಮಾಡಲು ಬಂದವರಿಗೆ ಬಚ್ಚಿಟ್ಟಿದ್ದನ್ನು ತೋರಿಸಿದಂತೆ, ಕದಿಯಲು ಬಂದವನಿಗೆ ದಾನಕೊಟ್ಟ ಹಾಗೆ, ಹಿಡಿಯಲು ಬಂದವನಿಗೆ ಕೈನೀಡಿ ವಶವಾದಂತೆ, ಲೋಕದಲ್ಲಿ ಇವನು ಮಾಯಾ ವಿದ್ಯೆಯಾದ ಅಂಜನ ಘುಟಿಕೆಯಿಂದ ಜನರ ಸರ್ವಸ್ವವನ್ನೂ ಕದಿಯುತ್ತಿದ್ದಾನೆ. ಇವನಿಗೆ ಗಗನಗಾಮಿನೀವಿದ್ಯೆ ವಶವಾಗಿದೆ. ಇವನು ಇನ್ನು ದೇಶವೆಲ್ಲವನ್ನೂ ಧ್ವಂಸ (ನಿವಾಳಿಸಿದಂತೆ) ಮಾಡಿ ಕದಿಯದೆ ಬಿಡುವುದಿಲ್ಲವೆಂದು ಪಾಪಭಯಕ್ಕೆ ಹೆದರಿ ಲಲಿತಾಂಗನ ಮುಖವನ್ನು ನೋಡಿ ೧೪೯. "ನಿನಗೆ ಈ ಜಗತ್ಪೂಜ್ಯವಾದ ವಿದ್ಯೆ ಹೇಗೆ ಬಂತು ? ಹೇಳು" ಎನ್ನಲು ಅಂಜನಚೋರನು ಅವರ ಕಥೆಯನ್ನು ವಿನಯವಾಗಿ ತಿಳಿಸಿ ಆಮೇಲೆ ತಾನಾಗಿ ಹೀಗೆ ಹೇಳಿದನು ೧೫೦. "ಜಿನದತ್ತ, ನಿನ್ನ ಮಾತನ್ನು ಜಿನವಚನವೇ ಎಂದು ತೀವ್ರವಾಗಿ ನಂಬಿದ್ದರಿಂದ ಆದ ಫಲವನ್ನು ಕಂಡೆ ; ಮನವರಿಕೆಯಾಗಿದೆ. ಆದ್ದರಿಂದ ನನಗೆ ನಿಮ್ಮ ಮತ್ತು ಜಿನರ ಚರಣಗಳೇ ಶರಣು ೧೫೧. ಕರ್ಮ ಫಲದಿಂದ ನಾನು ಹಿಂದೆ ತಂದೆಯ ಪ್ರೇಮ

ಕರ್ಮೋದಯದಿಂ ಪೇದೆಯ
ಕೂರ್ಮೆಯುಮಂ ತಾಯಮಾತುಮಂ ಬಗೆಯದೆ ಸ
ದ್ಧರ್ಮಮುಮಂ ಬಿಸುಟುರ್ಕಿಂ
ದುರ್ಮತಿಯಾಂ ಖಳರಗೋಷ್ಠಿಯಿಂದಂ ಕೆಟ್ಟೆಂ ೧೫೨

ಮೊಱೆಯಱಿನೆಂಬಿವನೇನುಂ
ದಱಿಯೆಂ ಮತಿಗೆಟ್ಟುದುಷ್ಟಸಂಗತಿಯಿಂದಂ
ಮಱೆದುಗುಣಮೆಲ್ಲಮಂ ಮೆ
ಯ್ಯಱಿಯದೆಕೆಟ್ಟಾಡಿದೆಂ ಮಹಾಪಾತಕನೆಂ ೧೫೩

ತಡೆಯದೆ ಮುದದಿಂದಮೃತಂ
ಬಡೆದುಮುಣಲ್ಬಡೆಯರೆಂಬ ನಾಣ್ನುಡಿಯೆನ್ನೊಳ್
ದೃಢಮಾದುದು ಸದ್ಧರ್ಮಂ
ಬಡೆದುಂ ಮರುಳಾಗಿ ಕಾಲಮಂ ವೃಥಗಳೆದೆಂ ೧೫೪

ಗದ್ಯ॥ ಸೋಂಬನಂಗಡಿಯಂತೆ ಪಸರಮಿಲ್ಲದೆ, ಪುಱುಮುಟ್ಟಿದಸಸಿಯಂತೆ ನಯಮಿಲ್ಲದೆ, ಬಿಲ್ಲು ಬಿಟ್ಟನಂತೆ ಗುಣವಿಲ್ಲದೆ, ಸೂಳೆಯಂತೆ ಸಜ್ಜನಿಕೆಯಿಲ್ಲದೆ, ಬೂತಿನಂತೆ ಪೆಂಪಿಲ್ಲದೆ, ತೃಣದಂತೆ ಬಿಣ್ಪಿಲ್ಲದೆ, ಪಾಪಿಯಂತುತ್ತಮ ದಾನವಿಲ್ಲದೆ, ನ್ಯಾಯವಿಲ್ಲದರಸಿನೂರಂತೆ ಮರ್ಯಾದೆಯಿಲ್ಲದೆ, ಕಳ್ಳರಕೊಟ್ಟದಂತೆ ಧರ್ಮಮಿಲ್ಲದೆ. ಗಹ್ವರದಂತೆ ಸನ್ಮಾರ್ಗಮಿಲ್ಲದೆ, ಪುಟ್ಟುಗುರುಡ

ವನ್ನೂ ತಾಯಿಯ ಮಾತನ್ನೂ ಲಕ್ಷ್ಯಮಾಡದ, ಸದ್ಧರ್ಮವನ್ನು ಬಿಟ್ಟು ಕೊಬ್ಬಿನಿಂದ ಕೆಟ್ಟ ಬುದ್ಧಿಯ ನಾನು ನೀಚರ ಸಹವಾಸಕ್ಕೆ ಸಿಕ್ಕಿ ಕೆಟ್ಟುಹೋದೆ ೧೫೨. ನೆಂಟು, ಧರ್ಮ ಎಂಬವನ್ನು ನಾನು ಏನೇನೂ ಅರಿಯೆ. ಬುದ್ಧಿ ಕಳೆದುಕೊಂಡು ದುಷ್ಟರ ಸಹವಾಸದಿಂದ ಗುಣಗಳನ್ನೆಲ್ಲ ಮರೆತು ಮೈಮೇಲೆ ಎಚ್ಚರವಿಲ್ಲದೆ ಅನೇಕ ಕೆಟ್ಟ ಕೆಲಸಗಳನ್ನು ಮಾಡಿದೆ. ನಾನು ಮಹಾಪಾಪಿ ೧೫೩. ಅಮೃತ ಸಿಕ್ಕಿದ್ದರೂ ಸಂತೋಷದಿಂದ ಅಡ್ಡಿಯಿಲ್ಲದೆ ಅದನ್ನು ಸೇವಿಸುವ ಯೋಗವನ್ನು ಪಡೆಯಲಿಲ್ಲವೆಂಬ ಗಾದೆ ನನ್ನ ವಿಷಯದಲ್ಲಿ ದೃಢಪಟ್ಟಿದೆ ; ಸದ್ಧರ್ಮವನ್ನು ಪಡೆದುಕೊಂಡಿದ್ದರೂ ಹುಚ್ಚನಂತೆ ಕಾಲವನ್ನು ವ್ಯರ್ಥವಾಗಿ ಕಳೆದೆ. ೧೫೪ ಸೋಮಾರಿಯ ಅಂಗಡಿಯಂತೆ ಸರಕಿಲ್ಲದೆ, ಹುಳು ಮುಟ್ಟಿದ ಗಿಡದಂತೆ ನಯ (ಸೊಂಪು, ನ್ಯಾಯ) ವಿಲ್ಲದೆ, ಬಿಲ್ಲನ್ನು ಬಿಟ್ಟವನ ಹಾಗೆ ಗುಣ (ಬಿಲ್ಲಿನ ಹೆದೆಗೆ ಗುಣವೆಂದು ಹೆಸರು) ವಿಲ್ಲದೆ, ಸೂಳೆಯ ಹಾಗೆ ಸಜ್ಜನಿಕೆ (ಒಳ್ಳೆಯತನ, ವಂಶಗೌರವ) ಯಿಲ್ಲದೆ, ನಾಚಿಕೆಯಿಲ್ಲದವನಂತೆ ಗೌರವವಿಲ್ಲದೆ, ಹುಲ್ಲಿನಂತೆ ತೂಕವಿಲ್ಲದೆ, ಪಾಪಿಯಹಾಗೆ ಒಳ್ಳೆಯ ದಾನವಿಲ್ಲದೆ, ನ್ಯಾಯವಿಲ್ಲದ ರಾಜನ ಊರಿನಂತೆ ಮರ್ಯಾದೆ (ನಿಯಮ) ಯಿಲ್ಲದೆ ಕಳ್ಳರ ನೆಲಬೀಡಿನಂತೆ ಧರ್ಮವಿಲ್ಲದೆ, ಕೊಳ್ಳದಂತೆ ಒಳ್ಳೆಯ ದಾರಿಯಿಲ್ಲದೆ ಹುಟ್ಟುಕುರುಡನ ಹಾಗೆ ಏನನ್ನೂ ಕಾಣದೆ, ಕೆಟ್ಟುಹೋದೆ”ಎಂದು

ನಂತೇನುಮಂ ಕಾಣದೆ, ಕೆಟ್ಟೆನೆಂದು ತನ್ನಂ ತಾನೆ ನಿಂದಿಸಿಕೊಂಡು ಜಿನವಚನದೊಳಾದ ದೃಷ್ಟಾಂತ ಮುಮಂ. ಸಮ್ಯಕ್ತ್ವಚೂಡಾಮಣಿಯೊಳಾದ ಮಹಾಗುಣಮುಮಂ ಪೊಗೞ್ದು ಬೞಿಕಿಂತೆಂದಂ : ನಿಮಗೆ ಪಂಚನಮಸ್ಕಾರಮಲ್ಲದುೞಿದಮಂತ್ರಮುಮಂ ಆರ್ಹತ್ಪರಮೇಶ್ವರನಲ್ಲದುೞಿದ ದೈವ ಮುಮಂ ಕೈಕೊಳ್ವುವಲ್ಲ ; ಸಮ್ಯಕ್ತ್ವಚೂಡಾಮಣಿಯೆಂದು ಪ್ರಸಿದ್ಧರಾಗಿರ್ಪ ನಿಮಗೀ ವಿದ್ಯೆ ತಾನೆಂತು ಬಂದುದೆನೆ, ವಣಿಗ್ವಂಶಲಲಾಮನಿಂತೆಂದಂ : ೧೫೩

ನೀಂ ಪೇೞ್ದಂತುಟೆ ಜಿನನಿಂ
ದಂ ಪೆಱತೆನಗಿಷ್ಟದೈವಮಿಲ್ಲನುನಯದಿಂ
ಪೆಂಪಿನ ಪಂಚನಮಸ್ಕೃತಿ
ಯಿಂ ಪೆಱತೆನಗೊಂದುಮಿಲ್ಲ ವರಮಂತ್ರಂಗಳ್. ೧೫೪

ಗದ್ಯ॥ ಈ ಗಗನಗಾಮಿನಿಯೆಂಬ ವಿದ್ಯೆಯೆನಗೆ ಬಂದ ವೃತ್ತಾಂತಮಂ ಕಿಱಿದಿನೊಳೆ ಪೇೞ್ವೆನದೆಂತೆನೆ ೧೫೫

ಮುದದಿಂದಂ ಜನಪದಮೆಂ
ಬುದು ನಾಡಾ ನಾಡಿನೊಳಗೆ ನಾಡೆ ಬೆಡಂಗಿಂ
ಪುದಿದೊಪ್ಪಿರ್ದುದು ಬಹುಜನ
ದೊದವಿಂದಂ ಭೂಮಿತಿಲಕಮೆಂಬುದು ನಗರಂ ೧೫೬

ತನ್ನನ್ನು ತಾನೆ ನಿಂದಿಸಿಕೊಂಡು ಜಿನವಾಕ್ಯದಿಂದಾದ ದೃಷ್ಟಾಂತವನ್ನೂ ಸಮ್ಯಕ್ತ್ವ ಚೂಡಾಮಣಿಯಂಲ್ಲಿ (ಜಿನದತ್ತಸೆಟ್ಟಿಯಲ್ಲಿ) ಆದ ಮಹಾ ಗುಣವನ್ನೂ ಹೊಗಳಿ ಬಳಿಕ ಹೀಗೆಂದನು. "ನಿಮಗೆ ಪಂಚನಮಸ್ಕಾರ (ಅರ್ಹಂತ, ಆಚಾರ್ಯ, ಉಪಾಧ್ಯಾಯ, ಸಿದ್ಧ ಸರ್ವಸಾಧುಗಳು–ಈ ಜೈನಗುರುಗಳ ಸ್ತೋತ್ರ)ವಲ್ಲದೆ ಉಳಿದ ಮಂತ್ರಗಳೂ ಅರ್ಹತ್ಪರಮೇಶ್ವರನಲ್ಲದೆ ಮಿಕ್ಕ ದೇವರುಗಳೂ ಅಪೇಕ್ಷಿತವಲ್ಲ. ಸಮ್ಯಕ್ತ್ವ ಚೂಡಾಮಣಿ ಯೆಂದು ಹೆಸರುಗೊಂಡಿರುವ ನಿಮಗೆ ಈ ವಿದ್ಯೆ (ಗಗನಗಾಮಿನಿ) ಹೇಗೆ ಬಂದಿತು ?" ಎಂದು ಕೇಳಲು ಆ ವರ್ತಕವಂಶಾಲಂಕಾರನು ಹೀಗೆಂದನು : ೧೫೩. "ನೀನು ಹೇಳಿದ ಹಾಗೆ ಜಿನನಲ್ಲದೆ ನನಗೆ ಬೇರೆ ಇಷ್ಟ ದೈವವಿಲ್ಲ. ಶ್ರೇಷ್ಠವಾದ ಪಂಚನಮಸ್ಕೃತಿಯಲ್ಲದೆ ಬೇರೆ ಯಾವ ಒಂದು ಮಂತ್ರವೂ ನನಗೆ ಶ್ರೇಷ್ಠವಲ್ಲ ೧೫೪. ಈ ಗಗನಗಾಮಿನಿ ಯೆಂಬ ವಿದ್ಯೆ ನನಗೆ ಬಂದ ವೃತ್ತಾಂತವನ್ನು ಚಿಕ್ಕದಾಗಿಯೇ ಹೇಳುತ್ತೇನೆ. ಅದು ಹೇಗೆಂದರೆ ೧೫೫. ಜನಪದವೆಂಬುದು ನಾಡು. ಆ ನಾಡಿನಲ್ಲಿ ಬಹಳ ಅಂದದಿಂದಲೂ ಹೆಚ್ಚು ಜನರಿಂದಲೂ ಶೋಭಿಸುತ್ತಿದ್ದ ಪಟ್ಟಣ 'ಭೂಮಿತಿಲಕ' ಎಂಬ ನಗರ ೧೫೬.

ಗದ್ಯ॥ ಅದನಾಳ್ವಂ ನರಪಾಲನೆಂಬರಸನಾತನ ರಾಜಶ್ರೇಷ್ಠಿ ಸೌಂದರನೆಂಬನಾತನ ಭಾರ್ಯೆ ಸುನಂದೆಯೆಂಬಳಂತವರಿರ್ವರ್ಗಂ ಶ್ರೀವರ್ಮಂ ಜಯವರ್ಮಂ ಜಿನವರ್ಮಂ ಜಿನದತ್ತಂ ಜಿನದಾಸಂ ಧನ್ವಂತರಿಯೆಂಬೆಣ್ಬರ್ ಮಕ್ಕಳಾಗಿ ಬಳೆಯುತ್ತಿರೆ, ಆ ನರನಾಥನ ಪುರೋಹಿತಂ ಸೋಮಶರ್ಮನೆಂಬ ಬ್ರಾಹ್ಮಣಂಗಮಾತನ ಪೆಂಡತಿಯಗ್ಗಿಲೆಗಂ ವಿಶ್ವಾನುಲೋಮನೆಂಬ ಮಗನಾಗಿ ಬಳೆಯೆ ೧೫೯

ಕರಮಾದರದಿಂ ಧನ್ವಂ
ತರಿಗಂ ವಿಶ್ವಾನುಲೋಮದ್ವಿಜಂಗಂ ಸ್ನೇಹಂ
ಪಿರಿದಾಗೆ ಕೂರ್ಮೆಯಿಂದಿ
ರ್ವರುಮಿರ್ಪರ್ಪಾಲನೀರಕೂಟದ ತೆಱದಿಂ ೧೬೦

ಗದ್ಯ॥ ಆಂತಿರ್ವರುಂ ನಖಮಾಂಸಂಗಳಂತೆ ಸಂಪ್ರೀತಿಯಿಂ ಕೂಡಿ ಬಳೆಯುತ್ತುಂ, ದುರ್ಜನಸಂಸರ್ಗದಿಂ ಸಪ್ತವ್ಯಸನಪರರುಂ ದುಶ್ಚರಿತರುಮಾಗೆ, ಸೌಂದರಸೆಟ್ಟಿಯುಂ ಸೋಮಶರ್ಮನುಮೇಗೆಯ್ದುಂ ದುಷ್ಟತನಮಂ ನಿವಾರಿಸಲಾಱದೆಯರಸನ ಮುಂದೆ ತೊಱೆದು ಕಳವುದುಮವರಿರ್ವರುಂ ತಂದೆ ತಾಯ್ಗಳನಗಲ್ದಲ್ಲಿರ್ದು ೧೬೧

ಆ ನಗರವನ್ನು ಆಳುವ ದೊರೆ ನರಪಾಲನೆಂಬವನು. ಆತನ ರಾಜಶ್ರೇಷ್ಠಿ ಸೌಂದರ. ಅವನ ಹೆಂಡತಿ ಸುನಂದೆ. ಆ ದಂಪತಿಗಳಿಬ್ಬರಿಗೂ ಎಂಟು[1] ? ಜನ ಮಕ್ಕಳು ಹುಟ್ಟಿ ವೃದ್ಧಿಹೊಂದುತ್ತಿದ್ದರು ಶ್ರೀವರ್ಮ, ಜಯವರ್ಮ, ಜಿನವರ್ಮ, ಜಿನದತ್ತ, ಜಿನದಾಸ, ಧನ್ವಂತರಿ ಎಂಬವರೇ ಆ ಮಕ್ಕಳು. ಆ ರಾಜನ ಪುರೋಹಿತನಾದ ಸೋಮಶರ್ಮನೆಂಬ ಬ್ರಾಹ್ಮಣನಿಗೂ ಆತನ ಹೆಂಡತಿ ಅಗ್ಗಿಲೆಗೂ ವಿಶ್ವಾನುಲೋಮನೆಂಬ ಮಗ ಹುಟ್ಟಿ ವೃದ್ಧಿಹೊಂದುತ್ತಿದ್ದನು ೧೫೯. ಧನ್ವಂತರಿಗೂ ವಿಶ್ವಾನುಲೋಮನಿಗೂ ಹೆಚ್ಚಾದ ಪ್ರೀತಿಯುಂಟಾಯಿತು. ಆ ವೈಶ್ಯನಿಗೂ ಆ ಬ್ರಾಹ್ಮಣನಿಗೂ ಹಾಲು ನೀರುಗಳ ಬೆರಕೆಯಾದ ಹಾಗೆ ಅಭೇದವುಂಟಾಗಿ ಅವರು ಪರಸ್ಪರ ಸ್ನೇಹಿತರಾದರು. ೧೬೦. ಹಾಗೆ ಇಬ್ಬರೂ ಉಗುರು ಮತ್ತು ಮಾಂಸಗಳ ಹಾಗೆ ಪ್ರೀತಿಯಿಂದ ಕೂಡಿ ಬೆಳೆಯುತ್ತ ಕೆಟ್ಟವರ ಸಹವಾಸದಿಂದ ಜೂಜು, ಹೆಂಡ ಮೊದಲಾದ ಏಳು ದುಶ್ಚಟಗಳಿಗೆ ಬಿದ್ದು ಕೆಟ್ಟನಡತೆಯುಳ್ಳವರಾಗಲು ಸೌಂದರ ಸೆಟ್ಟಿಯೂ ಸೋಮಶರ್ಮನೂ ಏನು ಮಾಡಿದರೂ ಅವರ ದುಷ್ಟತನವನ್ನು ಬಿಡಿಸಲು ಸಾಧ್ಯವಾಗದೆ ಅರಸನ ಮುಂದೆ ಅವರನ್ನು ತೊರೆದುಬಿಟ್ಟರು. ಆಗ ಅವರಿಬ್ಬರೂ ತಂದೆತಾಯಿಗಳನ್ನು ಅಗಲಿ, ಅಲ್ಲಿಯೇ ಇದ್ದರು. ೧೬೧. ಅರಮನೆಯನ್ನು ಪ್ರವೇಶಿಸಿ ಅವರಿಬ್ಬರೂ

1. ಇಲ್ಲಿ ಆರು ಮಕ್ಕಳ ಹೆಸರುಗಳು ಮಾತ್ರ ಇವೆ.

ಅರಮನೆಯಂ ಪೊಕ್ಕವರಿ
ರ್ವರುಮೊಯ್ಯನೆ ಕಳ್ದು ದಿವ್ಯರತ್ನಂಗಳನೊ
ಪ್ಪಿರೆ ಪೊಱಮಡಲವರಂ ನಿ
ಷ್ಠುರಕೋಪಂ ಕಂಡು ಜಡಿದುಕೊಂಡು ತಳಾಱಂ ೧೬೨

ಅರಸಂಗೊಪ್ಪಿಸೆ ಭೂಪಂ
ಕರಮಲ್ಲದೆ ಮುನಿದು ಕೊಲೆಯನೊರ್ಮೆಗೆ ಮಾಣ್ದೆಂ
ನಿರುತಂ ನೀವಿರ್ವರುಮೀ
ಪುರದಿಂ ಪೊಱಮಟ್ಟು ಪೋಗಿಮಿರ್ದೊಡೆ ಕೊಲ್ವೆಂ ೧೬೩

ಗದ್ಯ॥ ಎಂಬುದುಮವರಿರ್ವರುಂ ತಮ್ಮ ಜನನಿಯರ ಪೆಂಡಿರ ಮೋಹದಿಂ ತಂದೆಯುಂ ಬಂಧುಗಳುಮಱಿಯದಂತಾಗೆ ಕಳ್ದು ಬಂದು ತಮ್ಮ ದೇಶತ್ಯಾಗಮನವರ್ಗಱಿಪೆ ೧೬೪

ಕಡುಮೋಹದಿನಾತ್ಮಜರಂ
ಬಿಡಲಾಱದೆ ನೆಱೆಯೆ ತೊಱೆದು ನಂಟರುಮಂ ನೇ
ರ್ಪಡೆ ಗಂಡರುಮಂ ತಾಮವ
ರೊಡವಂದರ್ಮೋಹದಿಂದೆ ಕಿಡದವರೊಳರೇ ೧೬೫

ಇನಿಯರ ಮೇಗಣ ಮೋಹದಿ
ನನುಜರ ಬಂಧುಗಳ ತಾಯು ತಂದೆಯು ಮಾತಂ
ಮನದೊಳ್ ಭಾವಿಸಲೊಲ್ಲದೆ
ವನಿತೆಯರುಂ ಗುಂಡರೊಡನೆ ಕೆಟ್ಟೊಡವಂದರ್ ೧೬೬

ಮೆಲ್ಲಗೆ ಕದ್ದು ದಿವ್ಯರತ್ನಗಳನ್ನು ತೆಗೆದುಕೊಂಡು ಹೊರಡಲು ಉಗ್ರಕೋಪದ ತಳವಾರನು ಗಮನಿಸಿ ಗದರಿಸಿ ಹಿಡಿದುಕೊಂಡನು ೧೬೨. ತಳವಾರನು ಅವರನ್ನು ರಾಜನಿಗೆ ಒಪ್ಪಿಸಲು ಆತನು ಬಹಳ ಸಿಟ್ಟಾಗಿ 'ಇದೊಂದು ಸಲ ಕೊಲೆ ಮಾಡಿಸದೆ ಬಿಟ್ಟಿದ್ದೇನೆ. 'ನೀವಿಬ್ಬರೂ ಈ ಊರಿನಿಂದ ಹೊರಟುಹೋಗಿ, ಇಲ್ಲಿದ್ದರೆ ತಪ್ಪದೆ ಕೊಲ್ಲಿಸುತ್ತೇನೆ' ಎಂದನು. ೧೬೩ ಆಗ ಅವರಿಬ್ಬರೂ ತಾಯಿಯರ ಮತ್ತು ಹೆಂಡಿರ ಮೋಹದಿಂದ ತಂದೆ ಮತ್ತು ಬಂಧುಗಳಿಗೆ ತಿಳಿಯದ ಹಾಗೆ ಕದ್ದುಹೋಗಿ ಅವರಿಗೆ ತಮ್ಮ ದೇಶತ್ಯಾಗದ ವಿಚಾರವನ್ನು ತಿಳಿಸಿದರು ೧೬೪. ತಾಯಿಯರು ಆ ಮಕ್ಕಳ ಮೇಲಿನ ಮೋಹದಿಂದ ಅವರನ್ನು ಬಿಡಲಾರದೆ ತಮ್ಮ ಗಂಡಂದಿರನ್ನೂ ನೆಂಟರನ್ನೂ ತೊರೆದು ಅವರ ಜತೆಯಲ್ಲಿ ಹೊರಟರು. ಮೋಹದಿಂದ ಕೆಡದವರಿದ್ದಾರೆಯೆ ? ೧೬೫ ಗಂಡಂದಿರ ಮೇಲಿನ ಮೋಹದಿಂದ ಸಹೋದರರ, ನಂಟರ ಮತ್ತು ತಂದೆತಾಯಿಗಳ, ಮಾತನ್ನೂ ಭಾವಿಸದೆ ಅವರ ಹೆಂಡಿರೂ ಗುಡಂದಿರೊಡನೆ ಹೊರಟುಬಿಟ್ಟರು ೧೬೬. ಹಾಗೆ ಅವರಿಬ್ಬರೂ

ಗದ್ಯ॥ ಅಂತಾಗಳಿರ್ವರುಂ ತಮ್ಮ ಪೆಂಡಿರುಂ ತಾಯ್ಗಳುಂಬೆರಸು ಗಜಪುರಕ್ಕೆ ಪೋಗಿ ಯಮದಂಡನೆಂಬ ತಳಾಱನಂ ಸಾರ್ದೊರ್ವೊರ್ವರಯ್ನೂರ್ವರ್ಗಂ ನಾಯಕರಾಗಿ ಪರದೇಶಂಗಳೊಳ್ ಕಳ್ದು ತಂದು ವಿಷಯ ಸುಖಂಗಳಂ ಸಲಿಸುತ್ತುಮಿರ್ದೊರ್ವಂ ವಿಶ್ವಾನುಲೋಮಂ ಧನ್ವಂತರಿಗಿಂತೆಂದಂ ೧೬೭

ಆನೊಂದಂಬೇಡಿದಪೆಂ
ನೀನದನೆನಗೀವುದಣ್ಣ ಮಾರ್ಕೊಳ್ಳದೆ ಪೋ
ನೀನೆನ್ನದೆ ಮುನಿಸಿಲ್ಲದೆ
ಮೋನಂಗೊಂಡಿರದೆ ಬಿಚ್ಚತಿಕ್ಕೆಯೊಳಿನಿಸಂ ೧೬೮

ಗದ್ಯ॥ ಆದಾವುದೆಂದೊಡೆ ನೀ ಮುನ್ನಿನಂತೆ ಮರುಳಾಗಿ ಬಸದಿಗೆ ಪೋಪುದುಮಂ ಋಷಿಯರೊಡನೆ ಮಾತಾಡುವುದುಮಂ ಮಾಣ್ಬುದೇಕೆಂದೊಡೆ ಎಮ್ಮ ಪಿರಿದಪ್ಪ ಭೋಗಕ್ಕಂತರಾಯಮಕ್ಕುಮದಱಿಂ ಮುನ್ನಮೆ ಪೇಟ್ದೆನೆಂದು ಕೈಯುಮಂ ಮುಗಿದು ಸೂರುಳ್ಗೊಂಡೊಡಂಬಡಿಸಿ ಸಂತಸದಿಂದಿರೆ ಕೆಲವುಂ ದಿವಸಂ ಕಳೆಯಲೊಂದು ದಿವಸಂ ೧೬೯

ಪುರದಿಂ ಪೊಱಮಟ್ಟಿರ್ವರು
ಮುರುಮುದದಿಂ ಕೆಱೆಗೆ ಪೋಗುತಿರೆ ಮದದಿಂದಂ
ಕರಿಯೊಂದು ಸೊರ್ಕಿ ಪಲರಂ
ನಿರಂಕುಶಂ ಮುಸಗಿ ಕೊಲುತೆ ಬರ್ಪವಸರದೊಳ್ ೧೭೦

ತಮ್ಮ ಹೆಂಡಿರನ್ನೂ ತಾಯಿಯರನ್ನೂ ಕರೆದುಕೊಂಡು ಗಜಪುರಕ್ಕೆ ಹೋಗಿ ಅಲ್ಲಿಯ ಮದಂಡನೆಂಬ ತಳವಾರನನ್ನು ಸೇರಿ ಒಬ್ಬೊಬ್ಬರು ಐನೂರು ಮಂದಿಗೆ ನಾಯಕರಾಗಿ ಪರದೇಶಗಳಿಂದ ಕದ್ದು ತಂದು ವಿಷಯ ಸುಖಗಳನ್ನು ಅನುಭವಿಸುತ್ತಿದ್ದರು. ಒಂದು ಸಲ ವಿಶ್ವಾನುಲೋಮನು ಧನ್ವಂತರಿಗೆ ಹೀಗೆ ಹೇಳಿದನು : ೧೬೭. ನಾನೊಂದನ್ನು ಕೇಳಿಕೊಳ್ಳುತ್ತೇನೆ. ಅದನ್ನು ನನಗೆ ನೀನು ಇದಿರಾಡದೆ, ತಿರಸ್ಕರಿಸದೆ, ಸಿಟ್ಟಾಗದೆ, ಮೌನ ವಹಿಸದೆ, ಧಾರಾಳವಾಗಿ ಕೊಡಬೇಕು" ೧೬೮. ಅದೇನೆಂದರೆ, ನೀನು ಮೊದಲಿನಂತೆ ಬಸದಿಗೆ ಹೋಗುವುದನ್ನೂ ಅಲ್ಲಿ ಋಷಿಗಳೊಡನೆ ಮಾತನಾಡುವುದನ್ನೂ ಬಿಡಬೇಕು' ಏಕೆಂದರೆ, ಅದರಿಂದ ನಮ್ಮ ಹೆಚ್ಚಿನ ಭೋಗಕ್ಕೆ ವಿಘ್ನವಾಗುತ್ತದೆ. ಆದ್ದರಿಂದ ಮೊದಲೇ ಹೇಳಿದ್ದೇನೆ." ಎಂದು ಕೈಮುಗಿದು ಒಪ್ಪಿಸಿ ಪ್ರತಿಜ್ಞೆಮಾಡಿ ಸಂತೋಷದಿಂದಿದ್ದನು. ಕೆಲವು ದಿನ ಕಳೆದಮೇಲೆ ಪಟ್ಟಣದಿಂದ ಹೊರಟು ಇಬ್ಬರೂ ಸಂತೋಷದಿಂದ ಕೆರೆಗೆ ಹೋಗುತ್ತಿರುವಾಗ, ಮದವೇರಿದ ಒಂದು ಆನೆ ನಿರಂಕುಶವಾಗಿ ಹಲವರನ್ನು ಕೊಲ್ಲುತ್ತ ನುಗ್ಗಿ ಬರುತ್ತಿತ್ತು. ೧೭೦. ಆಗ ಅದನ್ನು ಕಂಡು ಇಬ್ಬರೂ ಬಹಳ

ಕಂಡಿರ್ವರುಮೆಯ್ದೆ ಭಯಂ
ಗೊಂಡೋಡಲುಮತ್ತಲಿತ್ತಲೆಡೆಯಿಲ್ಲದೆ ವೇ
ತುಂಡಂ ಪಂತರೆ ಭೋಂಕನೆ
ಬೆಂಡಾಗಿ ಮಹಾಪ್ರತಿಜ್ಞರಿರ್ವರುಮಾಗಳ್ ೧೭೧

ಗದ್ಯ॥ ಕೆಲದೊಳಿರ್ದ ಸಹಸ್ರಕೂಟಮಂಡಿತಮೆಂಬ ಜಿನಾಲಯಮನೋಡಿ ಪೋಗಿ ಪೊಕ್ಕಾನೆಯ ಭಯಂ ಪಿಂಗುವಿನಮಿರ್ದು ಪೋಗಲೆಂದಿರ್ಪುದುಂ ಮಟ್ಟೆ ಪಿರಿದಾಗಿ ಬರೆ ಮಟೆಯುಂ ಪೋದ ಬಟಿಕ್ಕಂ ಪೋಪೆವೆಂದಿರ್ಪುದುಂ ನೇಸಱ್ ಪಡುವುದುಂ ಪುರದ ಬಾಗಿಲ ಪಡಿ ಕೀಱುವುದುಂ ಪೋಗಲ್ಕೂಡದೆ ಬಸದಿಯೊಳ್ ಧನ್ವಂತರಿ ವಿಶ್ವಾನುಲೋಮನ ಮುನ್ನಿನ ಸೂಳಂ ನೆನೆದು ಕಿವಿಯೊಳ್ ತೂಂತನಿಟ್ಟು ಪಟ್ಟಿರ್ದನನ್ನೆಗಂ ಪರ್ವೋಪವಾಸಮಿರ್ದ ಭವ್ಯ ಜನಕ್ಕೆ ೧೭೨

ವರಧರ್ಮರೆಂಬ ಮುನಿಪರ್
ದುರಿತಹರರ್ ಧರ್ಮಮಂ ಮನಂಬಿಡೆ ಪೇೞು
ತ್ತಿರೆ ಮೆಲ್ಲನೆ ಧನ್ವಂತರಿ
ಪದಪಿಂದೆೞ್ಚೆತ್ತುಮಿರ್ದನಿರ್ಪನ್ನೆವರಂ ೧೭೩

ಗದ್ಯ॥ ನೆಲದೊಳ್ಪಟ್ಟಿರ್ದ ವಿಶ್ವಾನುಲೋಮನಂ ತಡವರಿಸಿ ನೋಡಿ ಮರವಟ್ಟಿರ್ದನೆಂಬುದ ನಱಿದು ಕಿವಿಯ ತೂಂತಂ ಕಳೆದು ಮೆಲ್ಲನೆಟ್ಟು ಕುಳ್ಳಿರ್ದು ಕೇಳ್ವ ಪ್ರಸ್ತಾವದೊಳ್ ೧೭೪

ಭಯಪಟ್ಟು ಓಡುವುದಕ್ಕೆ ಎತ್ತಕಡೆಯೂ ದಾರಿಯಿಲ್ಲದೆ ಹೋಗಲು, ಆನೆ ಓಡಿಬರುತ್ತಿದ್ದುದನ್ನು ಕಂಡು ನಿಶ್ಶಕ್ತರಾಗಿ ಮಹಾ ಪ್ರತಿಜ್ಞೆ ಮಾಡಿಕೊಂಡಿದ್ದ ಅವರಿಬ್ಬರೂ ಆಗ ೧೭೧. ಪಕ್ಕದಲ್ಲಿದ್ದ ಸಹಸ್ರಕೂಟ ಮಂಡಿತ (ಸಾವಿರ ಗೋಪುರಗಳಿಂದ ಅಲಂಕೃತ) ವೆಂಬ ಜಿನಾಲಯಕ್ಕೆ ಓಡಿಹೋಗಿ ಹೊಕ್ಕರು. ಆನೆಯ ಭಯ ಕಳೆಯುವವರೆಗೆ ಅಲ್ಲಿದ್ದು ಆಮೇಲೆ ಹೋಗೋಣವೆಂದಿರಲು ಬಲವಾಗಿ ಜಡಿ ಮಳೆ ಹಿಡಿಯಿತು. ಮಳೆ ನಿಂತ ಮೇಲೆ ಹೋಗೋಣವೆಂದು ಯೋಚಿಸುತ್ತಿರಲು ಸೂರ್ಯ ಮುಳುಗಿದ; ಊರ ಹೆಬ್ಬಾಗಿಲನ್ನು ಹಾಕಿದರು, ಇನ್ನು ಊರೊಳಕ್ಕೆ ಹೋಗಲು ಸಾಧ್ಯವಾಗದೆ ಬಸದಿಯೊಳಗೆ ಧನ್ವಂತರಿ ವಿಶ್ವಾನುಲೋಮನ ಮೊದಲಿನ ಪ್ರತಿಜ್ಞೆಯನ್ನು ಸ್ಮರಿಸಿ ಕಿವಿಯಲ್ಲಿ ಹತ್ತಿಯಿಟ್ಟುಕೊಂಡು ಮಲಗಿದ್ದನು. ಆಗ ಪರ್ವದ ಉಪವಾಸ ಮಾಡುತ್ತಿದ್ದ ಭವ್ಯ ಜನರಿಗೆ (ಮೋಕ್ಷಕ್ಕೆ ಅರ್ಹರು) ೧೭೨. ವರಧರ್ಮರೆಂಬ ಮುನಿಶ್ರೇಷ್ಠರು ಮನಬಿಚ್ಚಿ ಧರ್ಮವನ್ನು ಹೇಳುತ್ತಿದ್ದರು. ಮೆಲ್ಲಗೆ ಧನ್ವಂತರಿ ಎದ್ದು ೧೭೩. ನೆಲದಮೇಲೆ ಮಲಗಿದ್ದ ವಿಶ್ವಾನುಲೋಮನನ್ನು ತಡವರಿಸಿ ನೋಡಿ ಅವನು ಮೈಮರೆತಿದ್ದನೆಂಬುದನ್ನು ತಿಳಿದು ಕಿವಿಯೊಳಗಿನ ಹತ್ತಿಯನ್ನು ತೆಗೆದು ಮೆಲ್ಲನೆ ಎದ್ದು ಕುಳಿತುಕೊಂಡು ಕೇಳತೊಡಗಿದನು ೧೭೪. ಆ ಸಮಯದಲ್ಲಿ "ಶ್ರೇಷ್ಠವಾದ ಧರ್ಮವನ್ನು ಸ್ಥಿರಚಿತ್ತದಿಂದ

ವರಧರ್ಮಮನುತ್ಸವದಿಂ
ಸ್ಥಿರಮನದಿಂ ಕೇಳಲೊಲ್ಲದಾತನೆ ಕಿಱಿಯಂ
ವರಧರ್ಮಮಂನಱಿವಿಂದಂ
ಸ್ಥಿರಮನನಾಗಱಿಯಲೊಲ್ಲದಾತನೆ ಬಱಿಯಂ ೧೭೫

ಗದ್ಯ॥ ಎಂಬುದುಂ ಕೇಳ್ದು ಕರ್ಮೋಪಶಮದಿಂದವರು ಸಾರ್ದನಗೊಂದು ವ್ರತಮಂ ದಯೆಗೆಯ್ಯಿಮೆಂಬುದುಂ ವರಧರ್ಮಭಟ್ಟಾರಕರ್ ದಿವ್ಯಜ್ಞಾನಿಗಳಪ್ಪುದಱಿಂದಾಸನ್ನಭವ್ಯನೆಂದಱಿದಃ ವಾತ್ಸಲ್ಯದಿಂ ನಿಚ್ಚಲುಂ ತಱಿಂಟ್ಟುದಲೆಯಂ ಕಂಡಲ್ಲದುಣವೇಡೆಂಬುದುಂ ಅಂತೆಗೆಯ್ವೆನೆಂದು ವ್ರತಮಂ ಕೈಕೊಂಡು ಮನೆಗೆ ಪೋಗಿ ಕೆಲವು ದಿವಸಮದೆ ರೀತಿಯೊಳಿರ್ದೊಂದು ದಿವಸಮುಣಲ್ಪಂದು ೧೭೬

ತೊಟ್ಟನೆ ನೆನೆದು ವ್ರತಮಂ
ಕೆಟ್ಟೆನೆನುತ್ತಂತೆ ತನ್ನ ಮನದೊಳ್ ಹೇವಂ
ಪುಟ್ಟೆ ಮುನಿ ಪೇಟ್ದ ಮಾತಂ
ಬಿಟ್ಟೊಡೆ ಪಿರಿದಪ್ಪ ದೋಷಮೆಂದಾದರದಿಂ ೧೭೭

ಗದ್ಯ॥ ನೆರೆಮನೆಯ ಕುಂಬಾಱಂ ತಱಿಂಟುದಲೆಯನಪ್ಪುದಱಿಂ ಮನೆಯೊಳಱಿಸಿ ಕಾಣದೆ ಮಣ್ಣ ಕುೞಿಗೆ ಪೋಗಿ ದೂರದೊಳಾತನ ಬೋಳಮಂಡೆಯಂ ಕಂಡು ಕಂಡೆನೆಂದು ಸಂತಸದಿಂ ಕೂಗಿ ಬರೆ, ಕಾಕತಾಳೀಯನ್ಯಾಯದಿಂದಾತಂ ತನ್ನ ಕಂಡ ನಿಕ್ಷೇಪಮಂ ಕಂಡನಕ್ಕುಮೆಂದಗಿದು ನಡುವಿರುಳಪ್ಪುದುಮಾತಂ ಕಂಡ ಪೊನ್ನಂ ತಂದೊಪ್ಪಿಸಿ ಕೈಮುಗಿದು ೧೭೮

ಕೇಳಬಯಸದವನೇ ಅಲ್ಪನು, ಧರ್ಮವನ್ನು ತಿಳಿದೂ ಅದರಲ್ಲಿ ಸ್ಥಿರವಾದ ಮನಸ್ಸನ್ನಿಡದವನೇ ಬರಿಯನು (ನಿರುಪಯುಕ್ತ)" ೧೭೫. ಎಂಬ ವರಧರ್ಮರ ಮಾತನ್ನು ಕೇಳಿ ಕರ್ಮದ ಉಪಶಮಕಾಲವಾದ್ದರಿಂದ ಧನ್ವಂತರಿಯು ಅವರನ್ನು ಸಮೀಪಿಸಿ "ನನಗೆ ಒಂದು ವ್ರತವನ್ನು ಅನುಗ್ರಹಿಸಿ" ಎನ್ನಲು ವರಧರ್ಮ ಭಟ್ಟಾರಕರು ದಿವ್ಯಜ್ಞಾನಿಗಳಾದ್ದರಿಂದ ಇವನು ಆಸನ್ನಭವ್ಯನೆಂದು ತಿಳಿದು ಅಭಿಮಾನದಿಂದ "ನಿತ್ಯವೂ ಬೋಳತಲೆಯವನನ್ನು ಕಂಡಲ್ಲದೆ ಊಟಮಾಡಬೇಡ" ಎಂದು ಹೇಳಲು ಹಾಗೇ ಮಾಡುವೆನೆಂದು ವ್ರತವನ್ನು ಹಿಡಿದು ಮನೆಗೆ ಹೋಗಿ ಕೆಲವು ದಿನ ಅದೇ ರೀತಿ ನಡೆದುಕೊಂಡು, ಒಂದು ದಿನ ಊಟಕ್ಕೆ ಬಂದಾಗ, ೧೭೬. ತಟ್ಟನೆ ವ್ರತ ನೆನಪಿಗೆ ಬಂತು. 'ಅಯ್ಯೋ ಕೆಟ್ಟೆ' ಎನ್ನುತ್ತ ತನ್ನ ಮನಸ್ಸಿನಲ್ಲಿ ಅಸಮಾಧಾನವುಂಟಾಗಲು, ಮುನಿ ಹೇಳಿದ ಮಾತನ್ನು ಬಿಟ್ಟರೆ, ಹೆಚ್ಚಿನ ದೋಷವೆಂದು ಯೋಚಿಸಿ ೧೭೭. ನೆರೆಮನೆಯ ಕುಂಬಾರನು ಬೋಳತಲೆಯವನೆಂಬುದನ್ನು ನೆನಸಿಕೊಂಡು ಅವನನ್ನು ಮನೆಯಲ್ಲಿ ಕಾಣದೆ ಮಣ್ಣಿನ ಗುಳಿಗೆ ಹೋಗಿ ದೂರದಿಂದ ಅವನ ಬೋಳತಲೆಯನ್ನು ಕಂಡು 'ಕಂಡೆ' ಎಂದು ಕೂಗಿ ಬಂದುಬಿಟ್ಟನು. ಆಗ ಕಾಕತಾಳೀಯ ನ್ಯಾಯದಂತೆ ಆತನು ತಾನು ಕಂಡ ನಿಕ್ಷೇಪ (ನಿಧಿ) ವನ್ನು ಕಂಡನಾದೀತು' ಎಂದು ಅಂಜಿ, ನಡುರಾತ್ರಿಯಾಗುತ್ತಲೂ ಅವನು ತಾನು ಕಂಡ ಬಂಗಾರವನ್ನು ತಂದು ಅವನಿಗೆ ಒಪ್ಪಿಸಿ ಕೈಮುಗಿದನು. ೧೭೮. "ನಾನು ಈ

ಆನೀಪೊನ್ನಂ ಕಾಣ್ಬುದು
ವಿೂ ನೀನೊಡನಡಸಿ ಕಂಡೆನೆಂದೊಡೆ ಭಯದಿಂ
ದಾಸಂಜಿತಂದುಕೊಟ್ಟೆಂ
ನೀನಱಿವೈ ಮುನಿದು ಕೊಲ್ವೊಡಂ ರಕ್ಷಿಪೊಡಂ ೧೭೯

ಎನೆ ಧನ್ವಂತರಿ ಮುನಿಯಂ
ನೆನೆದು ಮಹಾಹರ್ಷಚಿತ್ತದಿಂದಾವ್ರತಮಂ
ನೆನೆದು ಮುನಿಪತಿಯ ವಚನದಿ
ನಿನಿತಾದುದು ಪಡಪು ಸುವ್ರತಂ ಕೇವಳಮೇ ೧೮೦

ಗದ್ಯ॥ ಎಂದಾತಂಗೆ ಸಾಲ್ವನಿತು ಪೊನ್ನಂ ಕೊಟ್ಟು ಕಳುಪಿ ಮಱುದಿವಸಂ ಬಸದಿಗೆ ಬಂದು ವರಧರ್ಮ ಭಟ್ಟಾರಕರಂ ವಂದಿಸಿ ತನ್ನ ಲಾಭಮಂ ಪೇೞ್ದಿನಗಿನ್ನೊಂದು ವ್ರತಮಂ ದಯೆಗೆಯ್ಯಿ ಮೆಂದು ೧೮೧

ಕರಮುಗಿದು ಬೇಡ್ಪುದುಂ ಮುನಿ
ಪರನೆಂದಂ ಬೇಡ ಮಗನೆ ಪೆಸರಱಿಯದ ಭೂ
ಮಿರುಹಂಗಳ ಪಣ್ಗಳನಾ
ದರದಿಂ ಮೆಲಲೆಲ್ಲಿಯುಮಾದೊಡಂ ಪಸಿವಿಂದಂ ೧೮೨

ಗದ್ಯ॥ ಎಂಬುದುಂ ಮಹಾಪ್ರಸಾದಮಂತೆಗೆಯ್ವೆನೆಂದು ಪೊಡೆಮಟ್ಟು ಮನೆಗೆ ಬಂದು ಕೆಲವು ದಿವಸದ ಮೇಲೆ ವಿಶ್ವಾನುಲೋಮನುಂ ತಾನುಂ ತಂತಮ್ಮ ಬಲಂಬೆರಸು ಪರದೇಶಕ್ಕೆ

ಹೊನ್ನನ್ನು ಕಾಣುತ್ತಿದ್ದಾಗಲೇ ನೀನು ಒದಗಿಬಂದು 'ಕಂಡೆ' ಎನ್ನಲು ಭಯಪಟ್ಟು ಇದನ್ನು ತಂದುಕೊಟ್ಟೆ. ಇನ್ನು ನನ್ನನ್ನು ರಕ್ಷಿಸುವುದೋ ಮುನಿದು ಕೊಲ್ಲುವುದೋ, ನೀನೇ ಬಲ್ಲೆ" ೧೭೯. ಎಂದು ಹೇಳಲು ಧನ್ವಂತರಿ ಮುನಿಯನ್ನು ಸ್ಮರಿಸಿ ಆತನು ಹೇಳಿದ ವ್ರತವನ್ನು ಬಹಳ ಹರ್ಷದಿಂದ ನೆನೆಸಿಕೊಂಡು 'ಮುನಿಪತಿಯ ವಚನದಿಂದ ಈ ಲಾಭವೂ ಆಯಿತು, ವ್ರತವೂ ಆಯಿತು. ಒಳ್ಳೆಯ ವ್ರತ ಸಾಮಾನ್ಯವೆ ?" ೧೮೦. ಎಂದು ಅವನಿಗೆ ಸಾಕಾಗುವಷ್ಟು ಹೊನ್ನನ್ನು ಕೊಟ್ಟು ಕಳುಹಿಸಿ ಮಾರನೆ ದಿನ ಬಸದಿಗೆ ಹೋಗಿ ವರಧರ್ಮ ಭಟ್ಟಾರಕರಿಗೆ ತನ್ನ ಲಾಭವನ್ನು ತಿಳಿಸಿ ನಮಸ್ಕಾರಮಾಡಿ ನನಗೆ ಇನ್ನೊಂದು ವ್ರತವನ್ನು ಅನುಗ್ರಹಿಸಬೇಕೆಂದು ಕೈಮುಗಿದು ಬೇಡಿಕೊಳ್ಳಲು ಮುನಿವರನು "ಮಗನೆ, ಎಷ್ಟು ಹಸಿವಾಗಿದ್ದರೂ ಎಲ್ಲಿಯೂ ಹೆಸರು ತಿಳಿಯದ ಹಣ್ಣುಗಳನ್ನು ತಿನ್ನಬೇಡ" ಎಂದು ಹೇಳಿದನು. ೧೮೨. 'ಮಹಾ ಪ್ರಸಾದ' ಎಂದು ನುಡಿದು ಹಾಗೆಯೇ ಮಾಡುವೆನೆಂದು ಹೇಳಿ ನಮಸ್ಕರಿಸಿ ಮನೆಗೆ ಬಂದು ಕೆಲವು ದಿವಸದಮೇಲೆ ತಾನೂ ವಿಶ್ವಾನುಲೋಮನೂ ತಮ್ಮ ತಮ್ಮ ಸೈನ್ಯಗಳೊಡನೆ ಪರ

ಪೋಗಿ ಕಳ್ದು ಬಹುದ್ರವ್ಯಂ ಬಸಮಾದುದಱಿಂ ಪೆರ್ಚಿ ಮಗುೞ್ದು ಬರುತ್ತುಮೊಂದಡವಿಯೊಳ್ ಬೀಡಂಬಿಟ್ಟು ಕೈಯೊಳ್ ಸಂಬಳಮಿಲ್ಲದೆ ಮಱುಗಿ ಸೈರಿಸಲಾಱದೆ ಪಸಿವಿಂದಂ ತಮ್ಮ ಭೃತ್ಯರ್ಗೆ ಪೇೞಡವಿಯೊಳ್ ಪಣ್ಫಲಂಗಳನಱಸಿ ತನ್ನಿಮೆಂದು ಪೇೞ್ವುದುಮವರ್ಪೋಗಿ ೧೮೩

ಸಾರಂ ಕಂಪಿನೊಳಮ್ ಕ
ರ್ಪೂರಮುಮಂ ಗೆಲ್ವವೆನಿಸಿ ಕುಂಕುಮರುಚಿಯಿಂ
ದೋರಂತೊಪ್ಪುವಮ ಕಾಂ
ಚೀರಮಹೀರುಹದ ಪಣ್ಗಳಂ ಕಂಡರ್ ೧೮೪

ಗದ್ಯ॥ ಸಂತಸದಿಂ ತಿಱಿದು ತಂದು ಧನ್ವಂತರಿ ವಿಶ್ವಾನುಲೋಮರ ಮುಂದೆ ರಾಸಿಗೆಯ್ವುದುಂ ಆವಱ ಪೆಸರನಱಿಯದವನಪ್ಪುದಱಿಂ ಧನ್ವಂತರಿ ಮೆಲಲೊಲ್ಲದುಸಿರದಿರ್ಪುದುಂ ವಿಶ್ವಾನುಲೋಮನಿಂತೆಂದಂ ೧೮೫

ಆವಾವುಪಾಯದಿಂದಂ
ತಾವುಣ್ಣದೆ ಪೋಪುದಲ್ಲದುೞಿದರುಮಂ ನಾ
ನಾವಿಧ ಕಲ್ಪನೆಯಿಂದಂ
ಭಾವಿಸೆ ತಮ್ಮಂತು ದುಃಖಿತಂ ಮಾಡುಪುದೇ ೧೮೬

ದೇಶಕ್ಕೆ ಹೋಗಿ ಕದ್ದು ಬಹಳ ಧನ ಕೈವಶವಾದುದರಿಂದ ಉತ್ಸಾಹಗೊಂಡು ಹಿಂತಿರುಗುತ್ತ ದಾರಿಯಲ್ಲಿ ಒಂದು ದೊಡ್ಡ ಅರಣ್ಯದಲ್ಲಿ ಬೀಡುಬಿಟ್ಟು, ಕೈಯಲ್ಲಿ ಆಹಾರ ಪದಾರ್ಥಗಳಿಲ್ಲದೆ, ಹಸಿವಿನಿಂದ ಸಂಕಟಪಟ್ಟು ಸಹಿಸಲಾರದೆ ಕಂಗೆಟ್ಟು ತಮ್ಮ ಭೃತ್ಯರನ್ನು ಕರೆದು ಅಡವಿಯಲ್ಲಿ ಹಣ್ಣುಕಾಯಿಗಳನ್ನು ಹುಡುಕಿ ತನ್ನಿರೆಂದು ಹೇಳಿಕಳುಹಿಸಿದರು. ಅವರು ೧೮೩. ರಸವತ್ತಾದ, ವಾಸನೆಯಲ್ಲಿ ಪಚ್ಚಕರ್ಪೂರಕ್ಕಿಂತ ಶ್ರೇಷ್ಠವಾದ, ಕುಂಕುಮದ ಕಾಂತಿಯಿಂದ ಬಹಳವಾಗಿ ಶೋಭಿಸುವ ಕಾಂಚೀರ ವೃಕ್ಷದ ಹಣ್ಣುಗಳನು ಕಂಡರು ೧೮೪. ಸಂತೋಷದಿಂದ ಅವುಗಳನ್ನು ಕಿತ್ತುತಂದು ಧನ್ವಂತರಿ ವಿಶ್ವಾನುಲೋಮರ ಮುಂದೆ ರಾಶಿ ಮಾಡಿದರು. ಅವುಗಳ ಹೆಸರು ತಿಳಿಯದಾದ್ದರಿಂದ ಧನ್ವಂತರಿ ಅವನ್ನು ತಿನ್ನಲು ಇಷ್ಟಪಡಲಿಲ್ಲ. ಆಗ ವಿಶ್ವಾನುಲೋಮ ಮೌನದಿಂದಿದ್ದ ಗೆಳೆಯನಿಗೆ ಹೀಗೆ ಹೇಳಿದನು. ೧೮೫. "ಯಾವ ಉಪಾಯದಿಂದಲೋ ತಾವು ತಿನ್ನದೆ ಹೋಗುವುದಲ್ಲದೆ. ಉಳಿದವರನ್ನೂ ನಾನಾ ವಿಧವಾದ ಕಲ್ಪನೆಗಳಿಂದ ಹೀಗೆ ಬಾಧೆ ಪಡಿಸಬಹುದೆ ? ೧೮೬. ಸವಣರಂಥಾ ಧೂರ್ತರನ್ನು ಈ ಲೋಕದಲ್ಲಿಯೇ ಕಾಣೆ. ಆ ನೀಚರಾದವರ

ಗದ್ಯ॥ ಸವಣರಂತಪ್ಪ ಧೂರ್ತರನೀಲೋಕದೊಳ್ ಕಾಣೆನಾ ಕಾಕುಗಳಪ್ಪರ ಮಾತಂ ತಾನಾವ ನಿಶ್ಚಯಮೆಂದು ನುಡಿದೊಡಂ ಪಣ್ಣಂ ಮೆಲ್ಲದಿರ್ಪುದಱಿಂ ತಾನುಮೊಲ್ಲದಿರೆ ಭೃತ್ಯರೆಲ್ಲಂ ನೀಮಿರ್ವರುಂ ಸವಣ್ಮರುಳುಗೊಂಡು ಸಾಯಿಮೆಂದು ೧೫೭

ಪಸಿದಿರಲಾಱದೆ ಪಣ್ಣಂ
ಮಸಗಿ ಜಡರ್ತಿಂದು ಸಾಯೆ ಕಂಡಾಗಳ್ ಸಂ
ಕಿಸಿ ಬರ್ದುಕಿದೆಮೆಂದು ಮಿಗೆ ಸಂ
ತಸದಿಂ ತಂತಮ್ಮ ಭೃತ್ಯನಿಕರದ ಪೊನ್ನಂ ೧೫೮

ಗದ್ಯ॥ ತಾಮಿರ್ವರುಂ ಪಚ್ಚಿಕೊಂಡು ಪೊೞಲ್ಗೆವಂದು ಲಾಭದ ಪೆರ್ಚಿಂ ಬಸದಿಗೆ ಬಂದು ವರಧರ್ಮಭಟ್ಟಾರಕರಂ ಕಂಡು ತನ್ನ ಪಡಪುಮಂ ಸುವ್ರತದ ಫಲದಿಂ ಬರ್ದುಂಕಿದುದುಮಂ ಪೇೞ್ದಿನ್ನೊಂದು ವ್ರತಮಂ ಪಾಲಿಸಿಮೆಂಬುದುಂ ಪಿಟ್ಟಿನೆತ್ತುಮಂ ಬಂಡಿಯುಮಂ ತಿನವೇಡೆಂಬ ವ್ರತಮಂ ಕುಡೆ ಕೈಕೊಂಡು ಮನೆಗೆ ಪೋಗಿ ಕೆಲವು ದಿವಸಮಿರ್ದು ಒಂದು ದಿವಸಂ ೧೫೯

ತಾನುಂ ತತ್ಸಖನುಂ ಭೃ
ತ್ಯಾನೀಕಂಬೆರಸು ಪೋಗಿ ನಲ್ಗಳವಿಂದಂ
ತಾನಧಿಕಲಾಭಮಾದೊಡ
ನೂನಗುಣರ್ ಮಗುೞ್ದು ಲಾಭದಿಂದಂ ಬರುತುಂ ೧೬೦

ಮಾತು ಯಾವ ನಿಶ್ಚಯ?" ಎಂದು ಕೇಳಿದರೂ ಹಣ್ಣನ್ನು ತಿನ್ನದಿರಲು ವಿಶ್ವಾಸುಲೋಮನೂ ತಿನ್ನಲಿಲ್ಲ. ಆಗ ಭೃತ್ಯರು "ನೀವಿಬ್ಬರೂ ಸವಣ ಪಿಶಾಚ ಹಿಡಿದು ಸಾಯಿರಿ" ಎಂದು ೧೫೭. ಹಸಿದುಕೊಂಡಿರಲಾರದೆ ಆ ಹಣ್ಣುಗಳನ್ನು ಆಸೆಯಿಂದ ಆ ದಡ್ಡರು ತಿಂದು ಸಾಯಲು ನೋಡಿ "ಸಂದೇಹಪಟ್ಟು ಬದುಕಿದೆವು" ಎಂದು ಬಹಳ ಸಂತೋಷದಿಂದ ತಮ್ಮ ತಮ್ಮ ಭೃತ್ಯರ ಗುಂಪಿನ ಹೊನ್ನನ್ನೂ ೧೫೮. ತಾವಿಬ್ಬರೂ ಹಂಚಿಕೊಂಡು ಪಟ್ಟಣಕ್ಕೆ ಬಂದು ಹೆಚ್ಚಿದ ಲಾಭದಿಂದ ಸಂತೋಷಿಸಿ ಬಸದಿಗೆ ಹೋಗಿ ವರಧರ್ಮಭಟ್ಟಾರಕರನ್ನು ಕಂಡು ತನ್ನ ಲಾಭವನ್ನೂ ಸುವ್ರತದ ಫಲದಿಂದ ಬದುಕಿಕೊಂಡದ್ದನ್ನೂ ಹೇಳಿ ಇನ್ನೊಂದು ವ್ರತವನ್ನು ಕೊಡಬೇಕೆಂದು ಕೇಳಲು ಯಾವ ಸನ್ನಿವೇಶದಲ್ಲಿಯೂ ಹಿಟ್ಟಿನಲ್ಲಿ ಮಾಡಿದ ಎತ್ತನ್ನೂ ಬಂಡಿಯನ್ನೂ ತಿನ್ನಬೇಡವೆಂಬ ವ್ರತವನ್ನು ಕೊಡಲು ಅಂಗೀಕರಿಸಿ ಮನೆಗೆ ಹೋಗಿ ಕೆಲವು ದಿನ ಇದ್ದು, ಆಮೇಲೆ ಒಂದು ದಿನ ೧೫೯. ತಾನೂ ಆ ಸ್ನೇಹಿತನೂ ಭೃತ್ಯಸಮೂಹದೊಡನೆ ಹೋಗಿ ಒಳ್ಳೆಯ ಕಳ್ಳತನದಿಂದ ಅಧಿಕಲಾಭವಾಗಲು ಸಂಪೂರ್ಣ ಗುಣಶಾಲಿಗಳು ಮತ್ತೆ ಲಾಭದೊಡನೆ ಬರುತ್ತ ೧೬೦. ದೊಡ್ಡ

ಗದ್ಯ॥ ನಟ್ಟಡವಿಯ ನಡುವೆ ಪಸಿವುಂ ನೀರಟ್ಕೆಯುಂ ತಿಣ್ಣಮಾಗೆ ಬಂದವರ್ ಸಮೀಪ ದೊಳಿರ್ದ ನಾಗಾಲಯದ ಮುಂದಣ ತಾವರೆಗೊಳಕ್ಕೆ ನೀರ್ಗುಡಿಯಲೆಂದು ಪೋಗಿ ಮುನ್ನಿನ ದಿವಸಂ ನಾಡವರೆಲ್ಲಂ ಪೂಜಿಸಿ ಪೋದ ಪಿಟ್ಟನೆತ್ತುಮಂ ಬಂಡಿಯುಮಂ ತಂದು ತೋಱೆ ಧನ್ವಂತರಿ ಮೆಲಲೊಲ್ಲದಿರೆ ವಿಶ್ವಾನುಲೋಮನುಮೊಲ್ಲದಿರ್ಪನ್ನೆಗಂ ಭೃತ್ಯರನಿಬರುಂ ಸ್ವೈರಣೆ ಗೆಟ್ಟು ೧೯೧

ಇರುಳುರಗಂ ಪುತ್ತಿಂದಂ
ತ್ವರಿತದೆ ಪೊಱಮಟ್ಟು ಕಾಱಿ ವಿಷಮಂ ಪಿಟ್ಟಂ
ಪರಿದೆಂಜಲಿಸಲ್ವಿಷದು
ಬ್ಬರದಿಂ ಸಂಜುರುಳಿಯೆನಿಸಿ ಮೆಱೆಸಿತ್ತಾ ಪಿಟ್ಟಂ ೧೯೨

ಗದ್ಯ॥ ಮೆಲ್ದುಗತಪ್ರಾಣರಾದುದಂ ಕಂಡಚ್ಚರಿವಟ್ಟೆರ್ದೆಯುಂ ನೀವಿಕೊಂಡು ತಂತಮ್ಮ ಭಂಟರರ್ಥಮುಂ ತೆರಳ್ಚಿ ಕಟ್ಟಿಕೊಂಡು ಪೊಟಲ್ಗೆವಂದು ಪಡಪಿನ ಪೆರ್ಚುಗೆಗಚ್ಚರಿವಡುತ್ತೆ ಬಸದಿಗೆ ಹೋಗಿ ವರಧರ್ಮಭಟ್ಟಾರಕರಂ ವಂದಿಸಿ ಪ್ರಪಂಚಮೆಲ್ಲಮಂ ಬಿನ್ನಪಂಗೆಯ್ದು ನಿಮ್ಮಯ ಪ್ರಸಾದದಿಂದನೂನಮಪ್ಪಲಾಭಮಾದುದಿನ್ನೊಂದು ವ್ರತಮಂ ದಯೆಗೆಯ್ಯಿಮೆಂಬುದುಂ ೧೯೩

ಎರಡುಂ ಪರ್ವಂಗಳೊಳಂ
ಸ್ಥಿರಮಪ್ಪಷ್ಟಮಿಯೊಳಂ ಚತುರ್ದಶಿಯೊಳಮೋ
ಸರಿಸದೆ ಕರಮಳಿಪಿಲ್ಲದೆ
ಪರಿಹರಿವುದು ಮಗನೆ ಕಳ್ಳುಮಂ ಮಾಂಸಮುಮಂ ೧೯೪

ಅಡವಿಯ ನಡುವೆ ಹಸಿವು ಬಾಯಾರಿಕೆಗಳು ಹೆಚ್ಚಾಗಲು ಅವರು ಬಂದು ಹತ್ತಿರ ಇದ್ದ ನಾಗದೇವಾಲಯದ ಮುಂದಿದ್ದ ತಾವರೆ ಕೊಳಕ್ಕೆ ನೀರು ಕುಡಿಯಲು ಹೋಗಿ ಹಿಂದಿನ ದಿನ ಆ ಪ್ರಾಂತ್ಯದವರೆಲ್ಲ ಬಂದು ಪೂಜೆ ಮಾಡಿಹೋಗಿದ್ದ ಹಿಟ್ಟಿನ ಎತ್ತುಗಳನ್ನೂ ಬಂಡಿಗಳನ್ನೂ ತಂದು ತೋರಿಸಿದರು. ಆದರೆ ಧನ್ವಂತರಿ ಅವುಗಳನ್ನು ತಿನ್ನಲು ಒಪ್ಪಲಿಲ್ಲ; ವಿಶ್ವಾನುಲೋಮನೂ ಒಪ್ಪಲಿಲ್ಲ. ಆಗ ಆಳುಗಳು ಸ್ವೈರಣೆ ಕಳೆದುಕೊಂಡು ೧೯೧. ರಾತ್ರಿ ಹುತ್ತದಿಂದ ಹಾವು ಹೊರಟು ಬಂದು ವಿಷವನ್ನು ಕಾರಿ ಹಿಟ್ಟನ್ನು ತಿನ್ನಲು ಯತ್ನಿಸಿದಾಗ ಅದೆಲ್ಲ ವಿಷದೂಷಿತವಾಗಿತ್ತು. ವಿಷದ ಉಂಡೆಯೆನಿಸಿದ್ದ ಆ ಹಿಟ್ಟನ್ನು ೧೯೨ ಮೆದ್ದು ಸತ್ತುದನ್ನು ಕಂಡು ಆಶ್ಚರ್ಯಪಟ್ಟು ಎದೆಯುಂ ನೀವಿಕೊಂಡು ತಮ್ಮ ತಮ್ಮ ಭಂಟರ ಹಣವನ್ನು ಒಟ್ಟುಗೂಡಿಸಿ ಕಟ್ಟಿಕೊಂಡು ಪಟ್ಟಣಕ್ಕೆ ಬಂದು ತಮ್ಮ ಸಂಪಾದನೆಯ ಹೆಚ್ಚಳಕ್ಕೆ ಆಶ್ಚರ್ಯಪಡುತ್ತ ಬಸದಿಗೆ ಹೋಗಿ ವರಧರ್ಮಭಟ್ಟಾರಕರನ್ನು ವಂದಿಸಿ ಸಮಾಚಾರವನ್ನೆಲ್ಲ ಬಿನ್ನಹಮಾಡಿ "ನಿಮ್ಮ ಅನುಗ್ರಹದಿಂದ ಕೊರತೆಯಿಲ್ಲದ ಲಾಭವಾಯಿತು. ಇನ್ನೊಂದು ವ್ರತವನ್ನು ದಯಪಾಲಿಸಿ" ಎಂದನು ೧೯೩. "ಎರಡು ಪರ್ವಗಳಲ್ಲಿಯೂ ಅಷ್ಟಮಿ, ಚತುರ್ದಶಿಗಳಲ್ಲಿಯೂ ಬೇಸರಗೊಳ್ಳದೆ, ಆಸೆಪಡದೆ, ಮಗನೆ, ಹೆಂಡವನ್ನೂ ಮಾಂಸವನ್ನೂ ಬಿಟ್ಟುಬಿಡು" ೧೯೪. ಎಂದು ಭಟ್ಟಾರ

ಗದ್ಯ॥ ಎಂಬುದುಮಾ ವ್ರತಮಂ ಪೆಱತೊಂದುಮಂ ಬಗೆಯದೆ ಮುನಿವಚನಮಂ ನಿಶ್ಚಯದಿಂ ನಂಬಿ ಕರಮತಿಶಯದಿನೊಸೆದು ಕೈಕೊಂಡು ಸುಖದಿನಿರ್ದೊಂದು ದಿವಸಂ ೧೯೫

ಬರವೇೞ್ದು ವಿಶ್ವಾನುಲೋಮಂಗೆ ವಿ
ಸ್ತರದಿಂದೆಲ್ಲಮನೊಂದುಗುಂದದಱಿಪಿದೆರ್ೊಲಂತೆ ತಾಂ ರಾಗದಿಂ
ಕರೆದಾಗಳ್ ನಿಜತಂತ್ರಮಂ ಕನಕದಿಂ ತಾಂಬೂಲದಿಂ ವಸ್ತ್ರದಿಂ
ಪಿರಿದುಂ ಮನ್ನಿಸಿ ಪೋಪದೊಂದು ಸಮಕಟ್ಟಿಂ ಚೋರಸೈನ್ಯಾಧಿಪಂ ೧೯೬

ಗದ್ಯ॥ ಪೋಗಿ ಪರದೇಶಮಂ ಪೊಕ್ಕು ಕಳ್ದು ಕಳವಿನೊಳಾದ ಲಾಭದಿಂ ಮಗುಟ್ದು ಬರುತ್ತು ಮೊಂದು ಗಿರಿತಟದೊಳ್ ಬೀಡಂ ಬಿಟ್ಟು ೧೯೭

ಪಲವುಂ ದಿವಸಂ ಕಳ್ಳುಂ
ಪೊಲಸುಂ ದೊರೆಕೊಂಡುದಿಲ್ಲ ಪಯಣದ ಕಷದಿಂ
`ದೆಲೆ ನೋೞ್ಪೊಡೆ ಸಂಸಾರದ
ಫಲಮಾವುದೊ ಬಿಸುಟು ಕಳ್ಳುಮಂ ಮಾಂಸಮುಮಂ ೧೯೮

ಗದ್ಯ॥ ಎಂದು ವಿಶ್ವಾನುಲೋಮಂ ತನ್ನೈನೂರ್ವರ್ ಬಂಟರೊಳ್ ನಾಲ್ವರಂ ಕರೆದು ನೀವೀ ಪರ್ವತದ ತಟದೊಳಿರ್ದ ಬೇಡವಳ್ಳಿಗೆ ಪೋಗಿ ಕಳ್ಳಂ ಕೊಂಡು ಬನ್ನಿಮೆಂದಟ್ಟುವುದುಂ ಧನ್ವಂತರಿಯುಮಂತೆ ನಾಲ್ವರಂ ಕರೆದು ನೀವೀ ಬೇಡಕೊಟ್ಟದೊಳ್ ಮಾಂಸಮಂ ತನ್ನಿ

ಕರು ಹೇಳಿದರು. ಧನ್ವಂತರಿ ಅದನ್ನು ಕೇಳಿ ಆ ವ್ರತವನ್ನು ಬೇರೇನೂ ಯೋಚಿಸದೆ ಮುನಿವಾಕ್ಯವನ್ನು ದೃಢವಾಗಿ ನಂಬಿ ವಿಶೇಷವಾದ ಶ್ರದ್ಧೆಯಿಂದ ಅಂಗೀಕರಿಸಿ ಸುಖ ವಾಗಿದ್ದು, ಕೆಲವು ದಿನಗಳು ಕಳೆದಮೇಲೆ ೧೯೫. ವಿಶ್ವಾನುಲೋಮನನ್ನು ಬರಹೇಳಿ ತನ್ನ ಕಾರ್ಯಭಾರವನ್ನೆಲ್ಲ ವಿಸ್ತಾರವಾಗಿ ಒಂದನ್ನೂ ಬಿಡದೆ ತಿಳಿಸಿದ್ದು ವಿಶೇಷವಾಗಿ ಪ್ರೀತಿಯಿಂದ ತಾನು ಕರೆದಾಗ ತನ್ನ ಸೈನ್ಯದವರನ್ನು ಚಿನ್ನ, ತಾಂಬೂಲ, ವಸ್ತ್ರಾದಿ ಗಳಿಂದ ಮನ್ನಿಸಿ ಕಳವಿಗೆ ಹೋಗುವ ಒಂದು ಯೋಚನೆಯಿಂದ ಚೋರಸೈನ್ಯಾಧಿಪನು ೧೯೬. ಹೊರಟು ಪರದೇಶವನ್ನು ಹೊಕ್ಕು ಕಳ್ಳತನಮಾಡಿ ಅದರಿಂದ ದೊರೆತ ಲಾಭ ದಿಂದ ಸಂತೋಷಿಸಿ ಹಿಂತಿರುಗಿಬರುತ್ತ ಒಂದು ಬೆಟ್ಟದ ತಪ್ಪಲಲ್ಲಿ ಬೀಡುಬಿಟ್ಟನು. ೧೯೭. ಹಲವು ದಿನಗಳಿಂದ ಪ್ರಯಾಣದ ಕಾರಣದಿಂದ ಹೆಂಡವೂ ಮಾಂಸವೂ ಸಿಕ್ಕಲಿಲ್ಲ. ಹೀಗಾ ದರೆ ಹೆಂಡವನ್ನೂ ಮಾಂಸವನ್ನೂ ಬಿಟ್ಟು ಸಂಸಾರದಲ್ಲಿ ಫಲವೇನು ? ೧೯೮. ಎಂದು ವಿಶ್ವಾನುಲೋಮನು ತನ್ನ ಐನೂರು ಮಂದಿ ಬಂಟರಲ್ಲಿ ನಾಲ್ವರನ್ನು ಕರೆದು, "ನೀವು ಈ ಬೆಟ್ಟದ ಬುಡದಲ್ಲಿರುವ ಬೇಡರಹಳ್ಳಿಗೆ ಹೋಗಿ ಹೆಂಡವನ್ನು ತೆಗೆದುಕೊಂಡು ಬನ್ನಿ" ಎಂದು ಕಳುಹಿಸಿದನು. ಧನ್ವಂತರಿಯೂ ಹಾಗೆಯೇ ನಾಲ್ವರನ್ನು ಕರೆದು 'ನೀವು ಈ ಬೇಡರಹಳ್ಳಿಯಿಂದ ಮಾಂಸವನ್ನು ತನ್ನಿ" ಎಂದು ಕಳುಹಿಸಿದನು. ವಿಶ್ವಾನುಲೋಮನ

ಮೆಂದಟ್ಟುವುದುಂ ವಿಶ್ವಾನುಲೋಮನ ಮಾನಿಸರ್ ಪೋಗಿ ಕಳ್ಳಂ ಕೊಂಡು ಬರುತ್ತೆ ತಮ್ಮೊಳಿಂ
ತೆಂದರ್ ೧೯೯

ಇರದೀ ಕಳ್ಳೊಳ್ ವಿಷಮಂ
ಬೆರಸಿ ದಿಟಂ ಕೂರ್ಪರಂತೆ ನಾವೆಱೆದವರೆ
ಲ್ಲರುಮಂ ಕೊಂದಿಕ್ಕಿ ಬೞಿ
ಕ್ಕುರುಮುದದಿಂದವರ ಪೊಂಗಳಂ ಕೈಗೊಳ್ವಂ ೨೦೦

ಗದ್ಯ॥ ಎಂದು ತಮ್ಮೊಳ್ ಚರ್ಚಿಸಿ ಕಳ್ಳೊಳ್ ವಿಷಮಂ ಬೆರೆಯಿಸಿಕೊಂಡು ಬಂದರನ್ನೆಗ
ಮತ್ತಲ್ "ಪರಚಿಂತಾಗರೀಯಸೀ" ಎಂಬ ನಾಣ್ಣುಡಿಯಂತೆ ಧನ್ವಂತರಿಯ ಮಾನಿಸರುಂ ಪೋಗಿ
ಮಾಂಸಮಂ ಕೊಂಡು ಬರುತ್ತುಂ ತಮ್ಮೊಳಿಂತೆಂದರ್ ೨೦೧

ಅಡಗಿನೊಳು ಬೆರೆಸಿ ವಿಷಮಂ
ಕಡುಗೂರ್ಪಿಂದಿಕ್ಕಿ ಬಂಟರಂ ನಾಯಕರಂ
ಮುಡಿಪಿ ಪೆಱತೇನೊ ನಾಮುವ
ರೊಡವೆಗಳಂ ಪಚ್ಚಿಕೊಂಡು ಸುಖದಿಂ ಪೋಪಂ ೨೦೨

ಗದ್ಯ॥ ಎಂದು ಸಮಕಟ್ಟಿನಿಂ ವಿಷಮಂ ಮಾಂಸದೊಳಿಕ್ಕಿಕೊಂಡು ಬಂದೊಪ್ಪಿಸುವುದುಂ
ಅಂದಿನ ದಿವಸಂ ಚತುರ್ದಶಿಯಪ್ಪುದಱಿಂ ಕಳ್ಳುಮಂ ಮಾಂಸಮಂ ಧನ್ವಂತರಿ ಮೊಲ್ಲದಿರ್ಪುದುಂ
ವಿಶ್ವಾನುಲೋಮನುಮೊಲ್ಲದೆ ಬಿಡುವುದುಂ ೨೦೩

ಮನುಷ್ಯರು ಹೋಗಿ ಹೆಂಡವನ್ನು ತೆಗೆದುಕೊಂಡು ಬರುತ್ತ ತಮ್ಮಲ್ಲಿ ಹೀಗೆಂದುಕೊಂಡರು ೧೯೯. ತಡಮಾಡದೆ ಈ ಹೆಂಡದಲ್ಲಿ ವಿಷವನ್ನು ಕಲಸಿ ನಿಜವಾದ ಸ್ನೇಹಿತರಂತೆ ನಾವು ಕುಡಿಸಿದರೆ ಅವರೆಲ್ಲರನ್ನೂ ಕೊಂದುಹಾಕಿ ಆಮೇಲೆ ಬಹಳ ಸಂತೋಷವಾಗಿ ಅವರ ಹೊನ್ನುಗಳನ್ನು ಪಡೆದುಕೊಳ್ಳೋಣ" ೨೦೦. ಎಂದು ತಮ್ಮಲ್ಲಿಯೇ ಚರ್ಚಿಸಿ ಹೆಂಡದಲ್ಲಿ ವಿಷವನ್ನು ಬೆರೆಸಿಕೊಂಡು ಬಂದರು, ಆ ವೇಳೆಗೆ ಅತ್ತ "ಪರಚಿಂತೆ ದೊಡ್ಡದು" (ದೈವಚಿಂತೆ ದೊಡ್ಡದು) ಎಂಬ ಗಾದೆಯಂತೆ ಧನ್ವಂತರಿಯ ಮನುಷ್ಯರೂ ಹೋಗಿ ಮಾಂಸವನ್ನು ಕೊಂಡು ಕೊಂಡು ಬರುತ್ತ ತಮ್ಮಲ್ಲಿ ಹೀಗೆ ಯೋಚಿಸಿದರು; ೨೦೧. ಮಾಂಸದೊಳಗೆ ವಿಷವನ್ನು ಬೆರಸಿ ಬಹಳ ಸ್ನೇಹದಿಂದ ಅವರಿಗೆ ಬಡಿಸಿ ಬಂಟರನ್ನೂ ನಾಯಕರನ್ನೂ ಒಟ್ಟಿಗೆ ಕೊಂದು ಬಿಟ್ಟು ಆಮೇಲೆ ನಾವು ಅವರ ಒಡವೆಗಳನ್ನು ಹಂಚಿಕೊಂಡು ಸುಖವಾಗಿ ಹೋಗೋಣ ೨೦೨. ಎಂದು ಯೋಚಿಸಿ ಮಾಂಸದಲ್ಲಿ ವಿಷವನ್ನು ಹಾಕಿ ತಂದು ಒಪ್ಪಿಸಿದರು. ಆ ದಿನ ಚತುರ್ದಶಿಯಾದ್ದರಿಂದ ಧನ್ವಂತರಿ ಮಧುಮಾಂಸಗಳನ್ನು ಒಲ್ಲದೆ ತಿರಸ್ಕರಿಸಲು ಅವನಿಗಾಗಿ ವಿಶ್ವಾನುಲೋಮನೂ ಒಲ್ಲದೆ ಬಿಟ್ಟುಬಿಟ್ಟನು ೨೦೩. ಆಮೇಲೆ ಅವರು ಇವರಿಗೆ ವಿನಯದಿಂದ ಹೆಂಡವನ್ನು ಹುಯ್ಯಲಾಗಿ

ಇವರವರ್ಗೆ ಕಪಟದಿಂದಂ
ಸವಿನಯದಿಂದೆಱೆಯೆ ಕಳ್ಳನಾದರದಿಂ ಮ
ತ್ತವರಿವರ್ಗೆ ತಂದು ಪೊಲಸಂ
ಸವಿನಯದಿಂದಿಕ್ಕೆ ಕುಡಿದು ತಿಂದಂತಾಗಳ್ ೨೦೪

ಸಾವುದುಮವರ ಪೆಣಂಗಳ
ನೋವದ್ಭುತಮೆಂದು ನೋಡಿ ಸುವ್ರತದೊಳ್ಪಂ
ಭಾವಿಸಿ ನಗುತೆಂದಂ ಮುನಿ
ಸೇವನೆಯುಂ ಬಿಟ್ಟು ಪೆಱತು ಲಾಭಮುಮೊಳವೇ ೨೦೫

ಗದ್ಯ॥ ಎಂದವರ ದ್ರವ್ಯಂಗಳಂ ಕೊಂಡು ಪೋಗಲ್ ಆ ಮಱುದಿವಸಂ ಚೈತ್ಯಾಲಯಕ್ಕೆ ಬಂದು ಭಕ್ತಿಯಿಂ ವರಧರ್ಮಭಟ್ಟಾರಕಂ ವಂದಿಸಿ, ತನ್ನ ವೃತ್ತಾಂತ ಮೆಲ್ಲಮಂ ಪೇೞ್ದೆನಗಿನ್ನೊಂದು ವ್ರತಮಂ ಕರುಣಂಗೆಯ್ಯಿಮೆಂದು ಪ್ರಾರ್ಥಿಸುವುದುಂ, ನೀನಾವ ಪ್ರಾಣಿಗಾದೊಡಂ ಮುನಿವಲ್ಲಿ ಪೆಱಗೇೞಡಿಯುಂ ಪಿಂಗಿ ಬೞಿಕ್ಕಂ ನಿನ್ನ ಮೆಚ್ಚಿದಂತೆ ಮಾಡೆಂಬುದುಮಂತೆ ಗೆಯ್ವೆನೆಂದು ಕಳಿಂಗ ದೇಶಕ್ಕೆ ಪೋಗಿ ಕಳ್ದಾರು ತಿಂಗಳ್ವರಮಿರ್ದು ಬರುತ್ತುಂ, ಪೆಱರ ಪೆಂಡಿರ್ಗಮರ್ಥಕ್ಕಮಳಿಪಿ ಕಾಲಂ ಪೋದುದೆನಗೆ, ಎನ್ನ ಪೆಂಡಿರ್ಗಮರ್ಥಕ್ಕಮೆಳಸುವರಾರಾನುಮೊಳವೋ ಮೇಣಿಲ್ಲವೋ ಚೋದ್ಯಮನಿದನಾರಯಲ್ವೇೞ್ಕುಮೆಂದು ನಾಲ್ಕೆಂಟುದಿನಮಂ ಮನ್ನಿಸಿ ಗಜಪುರಮಂ ಪೊಕ್ಕು ವಿಳಾಸದಿನಿರ್ದೊಂದು ದಿನಂ ಪಯಣಂ ಬೋಪೆನೆಂದುಸಿರ್ದು ಪೊಱಮಟ್ಟು ಪೋಗಿ ಜಿನಮಂದಿರ

ಇವರು ಅವರಿಗೆ ಮಾಂಸವನ್ನು ಉಣಬಡಿಸಿದರು. ಅಂತೂ ಆಗ ಅವರೆಲ್ಲ ಕುಡಿದು ತಿಂದು ಸತ್ತರು ೨೦೪. ಹಾಗೆ ಸಾಯಲಾಗಿ ಅವರ ಹೆಣಗಳನ್ನು ನೋಡಿ ಇದೇನು ಅದ್ಭುತವೆಂದು ಇಬ್ಬರೂ ಅಚ್ಚರಿಪಟ್ಟು ಸುವ್ರತದ ಶ್ರೇಷ್ಠತೆಯನ್ನು ಕುರಿತು ಚಿಂತಿಸಿ ನಗುತ್ತ "ಮುನಿ ಸೇವನೆಗಿಂತ ಲಾಭಕರವಾದದ್ದು ಬೇರೆ ಉಂಟೆ ?" ಎಂದು ಧನ್ವಂತರಿ ನುಡಿದನು ೨೦೫. ಅವರ ಧನಗಳನ್ನೆಲ್ಲ ತೆಗೆದುಕೊಂಡು ಧನ್ವಂತರೀ ವಿಶ್ವಾನುಲೋಮರು ಊರಿಗೆ ಸೇರಿದರು. ಮಾರನೆಯ ದಿನ ಚೈತ್ಯ ಮಂದಿರಕ್ಕೆ ಹೋಗಿ ಭಕ್ತಿಯಿಂದ ವರಧರ್ಮ ಭಟ್ಟಾರಕರಿಗೆ ವಂದನೆ ಸಲ್ಲಿಸಿ ಧನ್ವಂತರಿ ತನ್ನ ಸುದ್ದಿಯನ್ನೆಲ್ಲ ಹೇಳಿ ನನಗೆ ಇನ್ನೊಂದು ವ್ರತವನ್ನು ಕೊಡಿರೆಂದು ಬೇಡಿದನು. ಅವರು, 'ನೀನಾವ ಪ್ರಾಣಿಯ ಮೇಲಾದರೂ ಸಿಟ್ಟಾದಾಗ ಏಳು ಹೆಜ್ಜೆ ಹಿಂದಿಟ್ಟು ಆ ಮೇಲೆ ನಿನಗೆ ತೋರಿದಂತೆ ಮಾಡು' ಎನ್ನಲಾಗಿ 'ಹಾಗೆಯೇ ಸರಿ' ಎಂದು ಒಪ್ಪಿ ಕಳಿಂಗದೇಶಕ್ಕೆ ಹೋಗಿ ಕದ್ದು ಆರು ತಿಂಗಳವರೆಗೆ ಇದ್ದು ಹಿಂತಿರುಗುತ್ತ, "ಹೆರರ ಹೆಂಡಿರಿಗೂ ಹಣಕ್ಕೂ ಆಸೆಪಟ್ಟು ನನ್ನ ಕಾಲವಾಗಿ ಹೋಯಿತು, ನನ್ನ ಹೆಂಡಿರಿಗೂ ಅರ್ಥಕ್ಕೂ ಆಸೆಪಡುವವರು ಯಾರಾದರೂ ಇರುವರೋ ಇಲ್ಲವೊ ? ಈ ವಿಷಯವನ್ನು ಪರೀಕ್ಷಿಸಬೇಕು" ಎಂದು ನಾಲ್ಕೆಂಟು ದಿನ ತಡೆದು ಗಜಪುರಕ್ಕೆ ಸೇರಿ ಆನಂದದಿಂದಿದ್ದು ಒಂದು ದಿನ ಪ್ರಯಾಣ ಹೋಗುವೆನೆಂದು ಹೇಳಿ ಹೊರಟು ಜಿನ

ದೊಳ್ ನಡುವಿರುಳಪ್ಪಿನಂ ಪೂಜಾವೈಭವಮಂ ನೋಡುತ್ತಿರ್ದು ತನ್ನ ಮನೆಗೆ ಬಂದು ಕವಾಟೋದ್ಘಾಟನ ವಿದ್ಯೆಯಿಂ ಪಡಿಯಂ ತೆಗೆದು ಮೆಲ್ಲನೊಳಪೊಕ್ಕು ನೋಟ್ಪಾಗಳ್ ಪಾಸಿನಮೇಲೆ ಪಟ್ಟಿರ್ದತಾಯುಮಂ ಪೆಂಡತಿಯುಮಮಂ ಕಂಡು ಪಾದರಿಗನೆಂದಿಱಿಯೆ ಬಂದು ವ್ರತಮಂ ನೆನೆದೇಡಿಯಂ ಪಿಂಗುವಿನಮೆಚ್ಚತ್ತುರ್ ಉಬ್ಬಸಮಪ್ಪುದತ್ತೆಯತ್ತತ್ತ ಸಾರಿಮೆಂದು . ಗರ್ಭಿಣಿಯಪ್ಪ ತನ್ನ ಪೆಂಡತಿ ಪೊದೆದ ಸೀರೆಯಂ ಕಳೆವುದುಮಿರ್ವರುಮಂ ಕಂಡು ಬೆಱಗಾಗಿ ೨೦೬

ಯತಿಮಂದ್ಯಂ ಕೊಟ್ಟೈದುಂ
ವ್ರತದೊಳಮೆನಗೆಯ್ದೆ ಲಾಭಮಾದುದು ಪಿರಿದು
ನ್ನತಿಯಿಂದಮೆಂದು ತನ್ನೊಳೆ
ಗತುಳಬಳಂ ಪೆರ್ಚಿ ನಚ್ಚಿ ಪೊಗೞ್ದಂ ಮುನಿಯಂ ೨೦೭

ಮುನಿಪತಿಕೊಟ್ಟಾ ಬ್ರತಮಂ
ನೆನೆಯದೆ ಕಡುಗೋಪದಿಂದಮಿಱಿದೊಡೆ ಪೆಱತೇಂ
ಜನನಿಯು ಗರ್ಭಿಣಿಯಪ್ಪೀ
ವನಿತೆಯುಮೊಡನಳಿವರೇಂ ಮಹಾಪಾತಕಮೋ ೨೦೮

ಗದ್ಯ॥ ಎಂದು ಮುನ್ನಿನ ನಾಲ್ಕು ವ್ರತದಿಂದಮುಮೀವ್ರತದ ಪಡಪೆ ಮಿಗಿಲದೆಂತೆಂದೊಡೆ, ೨೦೯

ಮಂದಿರದಲ್ಲಿ ಮಧ್ಯರಾತ್ರಿಯವರೆಗೆ ಪೂಜಾ ವೈಭವವನ್ನು ನೋಡುತ್ತಿದ್ದು ತನ್ನ ಮನೆಗೆ ಬಂದು ವಿದ್ಯಾಬಲದಿಂದ ಕದವನ್ನು ತೆರೆದು ಮೆಲ್ಲಗೆ ಒಳಹೊಕ್ಕು ನೋಡಿದನು. ಆಗ ಹಾಸಿಗೆಯ ಮೇಲೆ ಮಲಗಿದ್ದ ತಾಯಿಯನ್ನೂ ಹೆಂಡತಿಯನ್ನೂ ಕಂಡು ಜಾರನೆಂದು ಬಗೆದು ತಿವಿಯಲು ಹೋಗಿ ತಟ್ಟನೆ ತನ್ನ ವ್ರತವನ್ನು ಸ್ಮರಿಸಿಕೊಂಡು ಏಳು ಹೆಜ್ಜೆ ಹಿಂದಕ್ಕೆ ಹೋದನು. ಅಷ್ಟರಲ್ಲಿ ಎಚ್ಚತ್ತ ಅವನ ಹೆಂಡತಿ "ಅತ್ತೆ, ಉಬ್ಬಸವಾಗುತ್ತಿದೆ. ಅತ್ತ ಸರಿಯಿರಿ" ಎಂದು ನುಡಿದು ಹೊದ್ದಿದ್ದ ಸೀರೆಯನ್ನು ತೆಗೆಯಲು ಆಯಿಬ್ಬರನ್ನೂ ಕಂಡು ಬೆರಗಾಗಿ, ೨೦೬. 'ಯತಿಪೂಜ್ಯನು ಕೊಟ್ಟ ಐದು ವ್ರತಗಳಿಂದಲೂ ನನಗೆ ಹೆಚ್ಚಾದ ಲಾಭವಾಯಿತು, ಹೆಚ್ಚಿನ ಉನ್ನತಿಯಾಯಿತು' ಎಂದು ತನ್ನೊಳಗೇ ಆ ಬಲಶಾಲಿ ಉತ್ಸಾಹಗೊಂಡು ಮೆಚ್ಚಿ ಪ್ರೀತಿಯಿಂದ ಹೊಗಳಿ ಕೈಮುಗಿದನು ೨೦೭. "ಮುನಿಶ್ರೇಷ್ಠನು ಕೊಟ್ಟ ಆ ವ್ರತವನ್ನು ಸ್ಮರಿಸಿಕೊಳ್ಳದೆ ಹೆಚ್ಚಾದ ಕೋಪದಿಂದ ಇರಿದಿದ್ದರೆ, ಬೇರೇನಿದೆ ? ತಾಯಿಯೂ ಗರ್ಭಿಣಿಯಾದ ಈ ಹೆಂಡತಿಯೂ ಒಟ್ಟಿಗೆ ಸಾಯುತ್ತಿದ್ದರು. ಎಂಥ ಮಹಾ ಪಾತಕವಾಗಿ ಬಿಡುತ್ತಿತ್ತು?" ೨೦೮. ಮೊದಲಿನ ನಾಲ್ಕು ವ್ರತಗಳಿಗಿಂತ ಈ ವ್ರತದ ಲಾಭವೇ ಹೆಚ್ಚಿನದು. ಅದು ಹೇಗೆಂದರೆ ೨೦೯. ಮುಂದಿನ ಸದ್ಗತಿಯೂ ಈಗಿನ

ಮುಂದಣಸುಗತಿಯುಮೀಗಳಿ
ನೊಂದುಜ್ವಲಮಪ್ಪ ಜಸಮುಮೀವ್ರತದಿಂದಂ
ನಿಂದುದು ಮಿಕ್ಕಂದೀ ವಧೆ
ಯಿಂದಿಹಪರವೆರಡುಮೆನಗೆ ಕಿಡುವುದು ಪುಸಿಯೇ ೨೧೦

ಗದ್ಯ॥ ಎಂದು ಮನದೊಳಾದ ಹೇವದಿಂ ನಿಶ್ಚಟಗತಿಯುಪ್ಪುದುಂ ಪರಿಚ್ಛೇದಿಸಿ ತಂದರ್ಥಮೆಲ್ಲಮುಮಂ ತಾಯ್ಗಂ ಪೆಂಡತಿಗಂ ತಕ್ಕನಿತಂ ಕೊಟ್ಟುೞಿದುದಂ ಬಡಶ್ರಾವಕರ್ಗಂ ಜಿನಪೂಜೆಗಂ ಕೊಟ್ಟು ವರಧರ್ಮಭಟ್ಟಾರಕರಲ್ಲಿಗೆ ಬಂದು ಪೊಡೆಮಟ್ಟು ನಿಮ್ಮಡಿಯ ಪ್ರಸಾದದಿಂದೆನಗೆ ಮಹಾಪಾತಕಂ ಪಿಂಗಿಪೋದುದೆಂದು ಪೆಱಗಣವಾರ್ತೆಯೆಲ್ಲಮಂ ಪೇೞ್ದು ದೀಕ್ಷೆಯಂ ಪ್ರಸಾದಂಗೆಯ್ಯಿಮೆಂದೊಡಾಮುನೀಂದ್ರೋತ್ತಮರಿಂತೆಂದರ್ : "ಮಗನೆ, ಕೆಟ್ಟನೂಱುಂ ತಪಂಬಟ್ಟು ನೂಱು" ಎಂಬ ನಾಣ್ಣುಡಿಯುಂಟು. "ಪುಟ್ಟಿದೆಡೆಯ ಪೊನ್ನುಱುವುದು ; ಪೋದೆಡೆಯ ತಪಮುಱುವುದು" ಎಂಬುದಱಿಂ ನೀನಿಲ್ಲಿ ತಪಂ ಬಡಬೇಡ ; ಕೇಳೇಕಾಂತವಿಷಯದ ಧರಣೀಭೂಷಣಪರ್ವತದೊಳೆಮ್ಮ ಸಧರ್ಮಿಗಳ್ ಶ್ರೀವರ್ಮಭಟ್ಟಾರಕರಿರ್ಪರವರಲ್ಲಿಗೆ ಪೋಗಿ ದೀಕ್ಷೆಯುಂ ಕೊಳ್ಳೆಂಬುದುಮಂತೆಗೆಯ್ವೆನೆಂದು, ವಿಶ್ವಾನುಲೋಮನನೆನ್ನಲ್ಲಿಗಟ್ಟುವುದೆಂದು ತಾಯ್ಗೆ ಪೇೞ್ದು ಬಂದು ೨೧೧

ಉಜ್ವಲವಾದ ಯಶಸ್ಸೂ, ಈ ವ್ರತದಿಂದ ನಿಂತಿತು. ಇಲ್ಲದಿದ್ದರೆ ಈ ಕೊಲೆಯಿಂದ ಇಹಪರಗಳೆರಡೂ ನನಗೆ ಕಳೆದು ಹೋಗುತ್ತಿದ್ದುದು ಸುಳ್ಳೆ ? ೨೧೦. ಎಂದು ಮನಸ್ಸಿನಲ್ಲಿ ಹುಟ್ಟಿದ ನಾಚಿಕೆಯಿಂದ, ನಿಶ್ಚಲಗತಿಯನ್ನು ಹೊಂದಲು ನಿರ್ಧರಿಸಿ, ತಂದ ಹಣವನ್ನೆಲ್ಲ ತಾಯಿಗೂ ಹೆಂಡತಿಗೂ ತಕ್ಕಷ್ಟನ್ನು ಕೊಟ್ಟು, ಉಳಿದುದನ್ನು ಬಡವರಾದ ಜೈನ ಗೃಹಸ್ಥರಿಗೂ, ಜಿನ ಪೂಜೆಗೂ ಕೊಟ್ಟು ವರಧರ್ಮಭಟ್ಟಾರಕರಲ್ಲಿಗೆ ಬಂದು ನಮಸ್ಕರಿಸಿ "ನಿಮ್ಮ ಪಾದ ಪ್ರಭಾವದಿಂದ ನನಗೆ ಇಂದು ಮಹಾಪಾತಕ ತಪ್ಪಿಹೋಯಿತು." ಎಂದು ಹಿಂದಿನ ವೃತ್ತಾಂತವನ್ನೆಲ್ಲ ಹೇಳಿ ದೀಕ್ಷೆಯನ್ನು ಅನುಗ್ರಹಿಸಬೇಕೆಂದು ಬೇಡಲು ಆ ಮುನೀಂದ್ರೋತ್ತಮರು ಹೀಗೆಂದರು : "ವತ್ಸ, ಕೆಟ್ಟ ನೂಱುಂ ತಪಂಬಟ್ಟು ನೂಱು" (ನೂರು ತಪ್ಪುಗಳಿಗೆ ನೂರು ತಪಸ್ಸು ಮಾಡಬೇಕು ?) ಎಂಬ ಗಾದೆಯಿದೆ "'ಹುಟ್ಟಿದ ಸ್ಥಳದ ಹೊನ್ನು ಶ್ರೇಷ್ಠ ; ಹೋದ ಕಡೆಯ ತಪಸ್ಸು ಶ್ರೇಷ್ಠ' ಎಂಬುದರಿಂದ ನೀನು ಇಲ್ಲಿ ತಪಸ್ಸಿಗೆ ನಿಲ್ಲಬೇಡ. ಕೇಳು. ಏಕಾಂತವಿಷಯದ ಧರಣೀಭೂಷಣವೆಂಬ ಪರ್ವತದ ಮೇಲೆ ನಮ್ಮ ಸಧರ್ಮಿಗಳಾದ ಶ್ರೀವರ್ಮ ಭಟ್ಟಾರಕರಿರುವರು. ಅವರ ಬಳಿಗೆ ಹೋಗಿ ದೀಕ್ಷೆಯನ್ನು ಸ್ವೀಕರಿಸು," ಎಂದು ಹೇಳಲು, 'ಹಾಗೆಯೇ ಮಾಡುತ್ತೇನೆ' ಎಂದು ವಿಶ್ವಾನುಲೋಮನನ್ನು ತನ್ನ ಬಳಿಗೆ ಕಳಿಸಬೇಕೆಂದು ತಾಯಿಗೆ ತಿಳಿಸಿ ಬಂದು ೨೧೧,

ಆ ಗಿರಿಯನೆಯ್ದಿ ಬೇಗಂ
ಯೋಗೀಂದ್ರಂಗೆಱಗಿ ಕಾರ್ಯಮಂ ಪೇೞೆ ಮಹೋ
ದ್ಯೋಗಿಗೆ ಜಿನದೀಕ್ಷೆಯನಂ
ತಾಗಳೆ ದಯೆಗೆಯ್ಯೆ ಕೊಂಡು ತಪದೊಳ್ನಿಂದು ೨೧೨

ಗದ್ಯ॥ ಇತ್ತಲ್ವಿಶ್ವಾನುಲೋಮಂ ಧನ್ವಂತರಿಯ ಪೋಗನಾರಯ್ದಱಿಯೆ ಪೇೞೆ ಕೇಳ್ದು ಮಱುಗಿ ನಿಲಲಾಱದೆ ಎನಗೆನ್ನ ಕೆಳೆಯನ ಗತಿಯೆ ಗತಿಯೆಂದು ಬಂದು ಸಹಸ್ರಜಟಿಯೆಂಬ ತಾಪಸಂ ತೋಱೆ, ಸೂರ್ಯ ಪ್ರತಿಮೆಯಿಂದ ಧನ್ವಂತರಿಮುನಿಯುಂ ಮಾರ್ಗಮನಱಿಯದೆ ನುಡಿಸುವುದುಂ ನುಡಿಯದಿರೆ, ಎನ್ನೊಡನೆ ನುಡಿಯನೆಂದು ಮುನಿದು ಮಗುಳ್ದು ಬಂದಾ ತಾಪಸಂಗೆ ಶಿಷ್ಯನಾಗಿರೆ, ಮಱುದಿವಸಂ ಧನ್ವಂತರಮುನಿ ವಿಶ್ವಾನುಲೋಮನಲ್ಲಿಗೆ ಬಂದು ಸಂಭಾಷಣೆಯುಂ ಮಾಡೆ ಮಿಥ್ಯಾತ್ವಕರ್ಮದುದಯದಿಂ ಮುನ್ನಮೆನ್ನೊಡನೆ ನುಡಿಯದಿರ್ದನೆಂಬ ಕೋಪದಿಂ ಮೋನಂಗೊಂಡಿರೆ ವಾತ್ಸಲ್ಯರತ್ನಾಕರನಿಂತೆಂದಂ ೨೧೩

ಸಲೆ ನಿನ್ನ ತಪದ ಫಲಮುಮ
ನೆಲೆಸಖ ಕೇಳೆನ್ನ ತಪದ ಫಲಮುಮನುರ್ವೀ
ವಲಯಂ ಬಣ್ಣಿಸೆ ಕಡೆಯೊಳ್
ಫಲದಲ್ಲಿಯೆ ಕಾಣಲಕ್ಕುಮೆಂದಲ್ಲಿಂದಂ ೨೧೪

ಆ ಬೆಟ್ಟವನ್ನು ಬೇಗನೆ ಸೇರಿ, ಯೋಗೀಂದ್ರನಿಗೆ ನಮಸ್ಕಾರ ಮಾಡಿ ಬಂದ ಕೆಲಸವನ್ನು ಹೇಳಿದನು. ಆ ಮಹಾ ಪ್ರಯತ್ನಶೀಲನಿಗೆ ಆಗಲೇ ಜಿನದೀಕ್ಷೆಯನ್ನು ಅನುಗ್ರಹಿಸಲು, ಸ್ವೀಕರಿಸಿ ತಪಸ್ಸಿನಲ್ಲಿ ನಿಂತನು ೨೧೨. ಇತ್ತ ವಿಶ್ವಾನುಲೋಮನು ಧನ್ವಂತರಿಯ ಪ್ರಯಾಣವನ್ನು ವಿಚಾರಿಸಿ ತಿಳಿದುಕೊಂಡು ಸಂಕಟಪಟ್ಟು ತಡೆಯಲಾರದೆ "ನನಗೆ ನನ್ನ ಸ್ನೇಹಿತನ ಗತಿಯೇ ಗತಿ" ಎಂದು ಬಂದು, ಸಹಸ್ರಜಟಿ ಎಂಬ ತಾಪಸನು ತೋರಿಸಲಾಗಿ, ಸೂರ್ಯ ಪ್ರತಿಮೆನಿಂದ (ಸೂರ್ಯನ ಇದಿರಿಗೆ ಪ್ರತಿಮೆಯ ಹಾಗೆ ಅಲ್ಲಾಡದೆ ನಿಲ್ಲುವುದು)—ಧನ್ವಂತರಿ . ಮುನಿಯನ್ನು ದಾರಿ ತಿಳಿಯದೆ ಮಾತನಾಡಿಸಿದನು. ಆದರೆ ಅವನು ಮಾತನಾಡಲಿಲ್ಲ. 'ನನ್ನ ಸಂಗಡ ಮಾತನಾಡನೆಂದು' ಸಿಟ್ಟುಗೊಂಡು ಹಿಂತಿರುಗಿ ಬಂದು ಆ ತಾಪಸನಿಗೆ ಶಿಷ್ಯನಾದನು. ಮರುದಿನ ಧನ್ವಂತರಿಮುನಿಯು ವಿಶ್ವಾನುಲೋಮನ ಬಳಿಗೆ ಬಂದು ಸಂಭಾಷಣೆ ನಡೆಸಿದನು. ಆದರೆ ಮಿಥ್ಯಾತ್ವದ ಕರ್ಮದ ಉದಯವಾದ್ದರಿಂದ ಇವನು ಮುಂಚೆ ತನ್ನ ಸಂಗಡ ಮಾತನಾಡಲಿಲ್ಲವೆಂದು ಕೋಪಗೊಂಡು ಮೌನದಿಂದಿರಲು ವಾತ್ಸಲ್ಯ ರತ್ನಾಕರ (ಧನ್ವಂತರಿ ಮುನಿ) ನು ಹೀಗೆಂದನು : ೨೧೩. "ನಿನ್ನ ತಪಸ್ಸಿನ ಫಲವೂ ನನ್ನ ತಪಸ್ಸಿನ ಫಲವೂ ಕೊನೆಗೆ ಫಲದಲ್ಲಿಯೇ ಕಾಣಿಸಬೇಕು. ಸ್ನೇಹಿತನೇ! ಅದನ್ನು ಪ್ರಪಂಚವೇ ಹೊಗಳೀತು" ಎಂದು ನುಡಿದು ಅಲ್ಲಿಂದ

ಗದ್ಯ॥ ಬಂದುಗ್ರೋಗ್ರತಪಮಂ ಮಾಡಿ ಸಮಾಧಿಮರಣದಿಂ ಮುಡಿಪಿ ಧನ್ವಂತರಿ ಮುನಿನಾಥನಚ್ಯುತಕಲ್ಪದೊಳಮಿತಪ್ರಭನೆಂಬಹಮಿಂದ್ರದೇವನಾಗಿ ಪುಟ್ಟಿದಂ ; ವಿಶ್ವಾನುಲೋಮನುಂ ಸತ್ತು ವ್ಯಂತರಲೋಕದೊಳ್ ವಿದ್ಯುತ್ಪ್ರಭನೆಂಬ ವಾಹನದೇವನಾಗಿರ್ಪುದುಮೊರ್ಮೆ, ನಂದೀಶ್ವರ ದ್ವೀಪದೊಳಚ್ಯುತೇಂದ್ರಂ ವಿಶ್ವಾನುಲೋಮಚರನಪ್ಪ ವಿದ್ಯುತ್ಪ್ರಭವಾಹನದೇವನಂ ಕಂಡು ೨೧೫

ಕರೆವುದುಮಾತಂ ಭಯದಿಂ
ಪರಿತಂದತ್ಯಂತ ಭಕ್ತಿಯಿಂದಂ ಮೆಯ್ಯಿ
ಕ್ಕಿರೆ ನಕ್ಕು ದೇವರಾಜಂ
ಚರಣದಿನಾತನನೆತ್ತಿಬಳಿಕಿಂತೆಂದು ೨೧೬

ಗದ್ಯ॥ ವಿಶ್ವಾನುಲೋಮನಾಗಿರ್ದ ನೀಮೆಮ್ಮನಱಿವಿರೆ ಪೇಳಿಮೆನೆ, ವಾಹನದೇವನಱಿದು ಬೆಱಗಾಗಿರೆ, ಮತ್ತಮಿಂದ್ರಂ ಸೈರಿಸದೆ ನಿಮ್ಮೆಮ್ಮನೆಗಟ್ಟಿಯ ಫಲಮನವಧಾರಿಸಿಮೆಂದೇಳಿಸಿ ನುಡಿಯೆ, ನಿಮ್ಮಲ್ಲಿಯೆ ಒಳ್ಳಿದರೊಳರೆಂಬುದಲ್ಲೆಮ್ಮಲ್ಲಿಯುಮೊಳ್ಳಿದರೊಳರೆನ್ನಂ ನೋಡ ವೇಡೆನೆ ; ನಿಮ್ಮಲ್ಲಿಯೊಳ್ಳಿದರುಂಟಪ್ಪೊಡೆಮಗೆ ತೋಱಿಮೆಂಬುದುಂ ಕರಹಾಟದೇಶದ ಪಶ್ಚಿಮ ಭಾಗದೊಳಿರ್ಪ ಚಂದ್ರಿಕಾರಣ್ಯದೊಳಿರ್ದಜಮದಗ್ನಿಯೆಂಬ ಜಟಾಧಾರಿಯಂ ತೋಱಿ, ೨೧೭

ಆಪಾದಮಸ್ತಕಂಬರ
ಮೇಂ ಪಡಿಮಾತೆಯ್ದೆ ಬಳ್ಳಿಯುಂ ಪುತ್ತುಗಳುಂ
ವ್ಯಾಪಿಸಿದುವು ಲೋಕದೊಳೀ
ನ್ನೀಪಾಂಗಿಂ ತಪದೊಳೆಸಗುವನ್ನರುಮೊಳರೇ ೨೧೮

ಒಂದು ಮಹಾ ಉಗ್ರವಾದ ತಪಸ್ಸುಮಾಡಿ ಸಮಾಧಿ ಹೊಂದಿ ಅದರಲ್ಲಿಯೇ ಸತ್ತು, ಧನ್ವಂತರಿಯು ಅಚ್ಯುತಕಲ್ಪದಲ್ಲಿ ಅಮಿತಪ್ರಭನೆಂಬ ಅಹಮಿಂದ್ರ ದೇವನಾಗಿ ಹುಟ್ಟಿದನು ; ವಿಶ್ವಾನುಲೋಮನೂ ಸತ್ತು ವ್ಯಂತರಲೋಕದಲ್ಲಿ ವಿದ್ಯುತ್ಪ್ರಭನೆಂಬ ವಾಹನ ದೇವನಾಗಿರಲು ಒಂದು ಸಲ ನಂದೀಶ್ವರ ದ್ವೀಪದಲ್ಲಿ ಅಚ್ಯುತೇಂದ್ರನು ವಿಶ್ವಾನು ಲೋಮಚರನಾದ ವಿದ್ಯುತ್ಪ್ರಭವಾಹನ ದೇವನನ್ನು ನೋಡಿ ೨೧೫. ಕರೆದನು. ಆತನು ಭಯದಿಂದ ಓಡಿಬಂದು ಅತ್ಯಂತ ಭಕ್ತಿಯಿಂದ ನಮಸ್ಕರಿಸಲು, ನಕ್ಕು, ದೇವರಾಜನು ಪಾದದಲ್ಲಿ ಅವನನ್ನು ಹಿಡಿದೆತ್ತಿ ಬಳಿಕ ಹೀಗೆಂದನು ೨೧೬. "ವಿಶ್ವಾನುಲೋಮನಾಗಿದ್ದ ನೀವು ನಮ್ಮನ್ನು ಬಲ್ಲಿರಾ ? ಹೇಳಿ" ಎಂದನು. ವಾಹನದೇವನು ಬೆರಗುಗೊಂಡಿರಲು ಇಂದ್ರನು ಇನ್ನು ಸೈರಿಸದೆ, "ನಿಮ್ಮ ನಮ್ಮ ಕೆಲಸದ ಫಲವನ್ನು ಗಮನಿಸಿ" ಎಂದು ಹಾಸ್ಯಮಾಡಲು "ನಿಮ್ಮಲ್ಲಿಯೇ ಒಳ್ಳೆಯವರಿರುವರೆಂಬುದು ಸರಿಯಲ್ಲ ; ನಮ್ಮಲ್ಲಿಯೂ ಒಳ್ಳೆಯವರಿದ್ದಾರೆ. ನನ್ನನ್ನು ನೋಡಬೇಡ" ಎನ್ನಲು "ನಿಮ್ಮಲ್ಲಿ ಒಳ್ಳೆಯವರು ಇರುವುದಾದರೆ ತೋರಿಸಿ," ಎಂದಾಗ ಕರಹಾಟದೇಶದ ಪಶ್ಚಿಮಭಾಗದಲ್ಲಿನ ಚಂದ್ರಿಕಾ ರಣ್ಯದಲ್ಲಿದ್ದ ಒಬ್ಬ ಜಮದಗ್ನಿಯೆಂಬ ಜಟಾಧಾರಿಯನ್ನು ತೋರಿಸಿದನು. ೨೧೭. ಪಾದಗಳಿಂದ ತಲೆಯವರೆಗೂ, ಹೆಚ್ಚು ಮಾತೇನು, ಬಳ್ಳಿಗಳೂ ಹುತ್ತಗಳೂ ಹಬ್ಬಿದ್ದುವು. ಲೋಕದಲ್ಲಿ ಇನ್ನು ಈ ರೀತಿಯ ತಪಸ್ಸನ್ನು ಮಾಡುವವರಿದ್ದಾರೆಯೆ? ೨೧೮.

ಗದ್ಯ॥ ಎಂಬುದುಂ, ಕಡುಪೆರ್ಚಿಸಿಂದಿಂದ್ರನಿಂತೆಂದಂ ೨೧೯

ಬಡವನಸುಖಿಮುಂ ಪಂದೆಯ
ಕಡುನುಡಿಯುಂ ಮುಗಿಲನೆಬಲುವೋಪರ ಮುನಿಸುಂ
ಕಡುಮೂರ್ಖನತಪಮುಂ ನೋ
ಟ್ಕೊಡೆ ಶಾಶ್ವತಮೊಳ್ಪುಥಿರಸು ನಿಲಲಱಿದಪುವೇ ೨೨೦

ಗದ್ಯ॥ ಎಂದು ನಕ್ಕು ತಮ್ಮ ವಿದ್ಯೆಗಳಿಂ ನಿನ್ನ ತಪಸ್ವಿಯ ನಚ್ಚಿನತಪಮಂ ನೋಡು ನೋಡೆಂದೆರಡು ಗೀಜಗಪಕ್ಕಿಗಳಂ ವಿಗುರ್ವಿಸೆಯಾ ತಪಸಿಯ ಗಡ್ಡದೊಳವು ಗೂಡನಿಟ್ಟಪ್ಪುದುಂ ಮತ್ತೊಂದು ಗೀಜಗನವಱಲ್ಲಿಗೆ ಬಂದು ಮೇರುಗಿರಿಯೊಳ್, ವೈನತೇಯನ ಮದುವೆಗೆ ಬನ್ನಿ ಮೆನೆ, ಗರ್ಭಿಣಿಯಪ್ಪಗೀಜಗಂ ನಾನು ಬಂದಪೆನೆನೆ, ನೀಂ ಗರ್ಭಿಣಿ ಬರವೇಡೆನೆಯಾಪೆಣ್ಗೀಜಗಂ ಎನ್ನನಿಲ್ಲಿರಿಸಿಪೆಱತೊಂದು ದ್ವಿಜಾಂಗನೆಯೊಳ್ ನೆರೆದು ಸುಖದಿನಿರ್ಪಿರೆ ? ಬೇಡೆಮ್ಮೊಳಳಿತನಮೆನೆ, ನಿನ್ನ ಮೆಚ್ಚಿನ ಸೂರುಳಂ ಕೊಟ್ಟಪೆನೆನೆ ಪೆಣ್ಗೀಜಗಮಿಂತೆಂದುದು ೨೨೧

ಆನಲ್ಲದೆ ಪೆಱಪೆಱರಂ
ನೀನಳಿಪಿಂ ಮದನತಾಪದಿಂ ನೆರೆದೊಡೆ ಮ
ತ್ತೇನುಂ ಸೂರುಳನೊಲ್ಲೆಂ
ನೀನೀ ತಾಪಸನ ಪಡೆದ ಗತಿಯಂ ಪಡೆವೈ ೨೨೨

ಎಂದು ಕೇಳಲು, ಬಹಳ ಹೆಮ್ಮೆಯಿಂದ ಇಂದ್ರನು ಹೀಗೆಂದನು : ೨೧೯. ಬಡವನ ಸುಖ, ಹೇಡಿಯ ತೀಕ್ಷ್ಣವಾಕ್ಯ, ಮೋಡದ ನೆರಳು, ಪ್ರಿಯರ ಕೋಪ, ಮಹಾ ಮೂರ್ಖನ ತಪಸ್ಸು—ಇವೆಲ್ಲ ಶಾಶ್ವತವಾಗಿ ದೃಢವಾಗಿ ನಿಲ್ಲಬಲ್ಲುವೆ ? ೨೨೦. ಎಂದು ನಕ್ಕು, ತಮ್ಮ ವಿದ್ಯಾಬಲದಿಂದ, "ನಿನ್ನ ತಪಸ್ವಿಯ ಪ್ರೀತಿಯ ತಪಸ್ಸನ್ನು ನೋಡು ನೋಡು" ಎಂದು ಎರಡು ಗೀಜಗ ಹಕ್ಕಿಗಳನ್ನು ಮಾಯೆಯಿಂದ ಸೃಷ್ಟಿ ಮಾಡಲು ಅವು ಆ ತಪಸ್ವಿಯ ಗಡ್ಡದಲ್ಲಿ ಗೂಡು ಕಟ್ಟಿದುವು. ಮತ್ತೊಂದು ಗೀಜಗನು ಅವುಗಳ ಬಳಿಗೆ ಬಂದು "ಮೇರುಗಿರಿಯಲ್ಲಿ ಗರುಡನ ಮದುವೆಗೆ ಬನ್ನಿ" ಎನ್ನಲು ಗರ್ಭಿಣಿಯಾದ ಗೀಜಗ ನಾನು ಬರುತ್ತೇನೆಂದಿತು. "ನೀನು ಗರ್ಭಿಣಿ, ಬರಬೇಡ" ಎನ್ನಲು, ಆ ಹೆಣ್ಣು ಗೀಜಗವು "ನನ್ನನ್ನು ಇಲ್ಲಿ ನಿಲ್ಲಿಸಿ ಬಿಟ್ಟು ಬೇರೊಂದು ದ್ವಿಜಾಂಗನೆ (ಬ್ರಾಹ್ಮಣ ಸ್ತ್ರೀ, ಹೆಣ್ಣು ಹಕ್ಕಿ) ಯಲ್ಲಿ ನೆರೆದು ಸುಖದಿಂದಿರುವಿರೆ ? ನಮ್ಮಲ್ಲಿ ನೀಚತನ ಬೇಡ" ಎನ್ನಲು 'ನಿನಗೆ ಪ್ರೇಮ ಪ್ರತಿಜ್ಞೆಯನ್ನು ಹೇಳುತ್ತೇನೆ.' ಎಂದಾಗ ಹೆಣ್ಣು ಗೀಜಗ ಹೀಗೆಂದಿತು : ೨೨೧. "ನಾನಲ್ಲದೆ ಬೇರೆ ಬೇರೆಯವರನ್ನು ನೀನು ಆಸೆಯಿಂದ ಮದನತಾಪದಿಂದ ಕೂಡಿದರೆ ಮತ್ತೇನೂ ಪ್ರಮಾಣವನ್ನೊಲ್ಲೆ, ನೀನು ಈ ತಪಸ್ವಿಯು ಪಡೆಯುವ ಗತಿಯನ್ನು ಹೊಂದುವೆ" ೨೨೨. ಎಂದಿತು. ಆಗ

ಗದ್ಯ॥ ಎಂಬುದುಂ ಕೃತಕಗೀಜಗನೆರಡೆಱಂಕೆಯಿಂದೆರಡುಂ ಕಿವಿಗಳಂ ಮುಚ್ಚಿಕೊಂಡು ಪೊಲ್ಲದಂ ನುಡಿದೈ, ತಡೆಯದೆ ಈ ತಪಸ್ವಿಯ ಗತಿಗೆ ನೀನುಂ ನಿನ್ನನುಳ್ಳರುಂ ಪೋಗಿಮೆನೆ, ಜಮದಗ್ನಿ ಮುನಿ ಮುನಿದು ಪಕ್ಕಿಗಳಂ ಕರತಳದೊಳೊತ್ತಿಸೆದು ಕೊಲಲುದ್ಯೋಗಿಸುವುದುಂ ಅದೃಶ್ಯ ರೂಪದಿಂ ನೆಲಕ್ಕೆ ಪಾಯ್ದರೆ. ೨೨೩

ಪಕ್ಕಿಗಳಲ್ಲಿವು ದೈವಂ
ನಿಕ್ಕುವಮೆಂದಿರ್ದು ಭಕ್ತಿಪೂರ್ವಕಮಾಗಲ್
ಪಕ್ಕಿಗಳೆರಡಱ ಪಾದಯು
ಗಕ್ಕೆಱಗಿ ಪತಂಗ ನುಡಿದೆಯಾಂ ಪಾತಕನಂ ೨೨೪

ಗದ್ಯ॥ ಕೊಲಲ್ಬಗೆದೆಂ, ಕ್ಷಮೆಯಿಂದುಳಿದೆಂ ; ಕೇಳ್ಪೆ ಪೂರ್ವದೊಳಾಂ ರಾಜರ್ಷಿಯೀಗಳ ಪ್ಪೊಡೆ ಮಹಾತಪಸ್ವಿಯಾಂ ಪೋಪಗತಿಗೆ ನೀವೇತಕ್ಕೆ ಪೋಗಲೊಲ್ಲಿರೆಂಬುದುಂ, 'ಮಾಯಾದ್ವಿಜಂ' ಗಳಿಂತೆಂದರ್ ನೀನಪ್ಪೊಡೆ ಪುತ್ರಮುಖಮಂ ಕಾಣದೆ ತಪಮಂ ಕೈಕೊಂಡೈ "ಅಪುತ್ರಸ್ಯಗತಿರ್ನಾಸ್ತಿ" ಯೆಂಬುದಱಿಂ ನಿನ್ನ ಪೋಪಗತಿಯನೊಲ್ಲೆವೆನೆ, ನಿಶ್ಚಯಮೆಂದು ತನ್ನಂ ತಾನೆ ಬಯ್ದುಕೊಂಡು ಹಕ್ಕಿಗಳಂ ಬಲಗೊಂಡು ನಿಮ್ಮ ಧರ್ಮದಿಂ ಗತಿಗಂಡೆನೆಂದು ತಮ್ಮ ಮಾವನಪ್ಪ ಪೂತಿಮಹಾರಾಜ ನಲ್ಲಿಗೆ ಬಂದು ಕೂಸಂ ಬೇಡುತ್ತುಂ ಮದುವೆನಿಂದನತ್ತಲಚ್ಯುತೇಂದ್ರಂ ವಾಹನದೇವನ ಮೊಗಮಂ ನೋಡಿ ಮುಗುಳ್ನಗೆ ನಗುತ್ತಿಂತೆಂದಂ ; ೨೨೫

ಮಾಯಾ ಗೀಜಗನು ಎರಡು ರೆಕ್ಕೆಗಳಿಂದಲೂ ಕಿವಿಗಳನ್ನು ಮುಚ್ಚಿಕೊಂಡು "ಕೆಟ್ಟ ಮಾತನಾಡಿದೆ. ತಡವಿಲ್ಲದೆ ಈ ತಪಸ್ವಿಯ ಗತಿಗೆ ನೀನು ನಿನ್ನವರೂ ಹೋಗಿ" ಎನ್ನಲು ಜಮದಗ್ನಿಮುನಿಯು ಸಿಟ್ಟಾಗಿ ಆ ಹಕ್ಕಿಗಳನ್ನು ಕೈಯಿಂದ ಹೊಸೆದು ಕೊಲ್ಲಲು ಪ್ರಯತ್ನಿಸಲು ಅವು ಅದೃಶ್ಯವಾಗಿ ನೆಲಕ್ಕೆ ಹಾರಿದವು. 'ಇವು ಹಕ್ಕಿಗಳಲ್ಲ, ನಿಜವಾಗಿಯೂ ದೈವವೇ' ಎಂದು ಭಕ್ತಿಪೂರ್ವಕನಾಗಿ ಆ ಎರಡು ಹಕ್ಕಿಗಳ ಕಾಲುಗಳಿಗೆ ನಮಸ್ಕಾರ ಮಾಡಿ "ಏ ಪತಂಗ ! (ಹಕ್ಕಿಯೇ) ನೀನು ನುಡಿದಂತೆ ನಾನು ಪಾಪಿಯೇ ಸರಿ ೨೨೪. ನಿಮ್ಮನ್ನು ಕೊಲ್ಲಲು ಯೋಚಿಸಿದೆ. ಕ್ಷಮೆಯಿಂದ ಉಳಿದೆ. ಕೇಳಿರಿ. ಮೊದಲಿಗೆ ನಾನು ರಾಜಋಷಿ, ಈಗ ನಾನು ಮಹಾತಪಸ್ವಿ. ನಾನು ಹೋಗುವ ಗತಿಗೆ ನೀವೇಕೆ ಹೋಗಲೊಲ್ಲಿರಿ ?" ಎಂದು ಕೇಳಲು ಆ ಮಾಯಾಪಕ್ಷಿಗಳು ಹೀಗೆಂದುವು. "ನೀನಾದರೆ ಮಗನ ಮುಖವನ್ನು ಕಾಣದೆ ತಪಸ್ಸನ್ನು ಕೈಕೊಂಡೆ. "ಮಕ್ಕಳಿಲ್ಲದವರಿಗೆ ಸದ್ಗತಿಯಿಲ್ಲ" ಎನ್ನುವುದರಿಂದ ನೀನು ಹೋಗುವ ಗತಿ ನಮಗೆ ಬೇಡ, ನಿಶ್ಚಯ." ಎಂದು ಹಕ್ಕಿಗಳು ಹೇಳಿದುದನ್ನು ಕೇಳಿ ಜಮದಗ್ನಿ ತನ್ನನ್ನು ತಾನೆ ಬೈದುಕೊಂಡು ಆ ಹಕ್ಕಿಗಳಿಗೆ ಪ್ರದಕ್ಷಿಣೆಮಾಡಿ "ನಿಮ್ಮ ಧರ್ಮದಿಂದ ನಾನು ಗತಿಯನ್ನು ಕಂಡೆ" ಎಂದ ಹೇಳಿ ತನ್ನ ಮಾವನಾದ ಪೂತಿಮಹಾರಾಜನಲ್ಲಿಗೆ ಹೋಗಿ ಮಗಳನ್ನು ಕೇಳಿ ಮದುವೆಯಾದನು. ಅತ್ತ, ಅಚ್ಯುತೇಂದ್ರನು ವಾಹನದೇವನ ಮುಖವಂ ನೋಡಿ ಮುಗುಳುನಗೆ ಬೀರುತ್ತ ಹೀಗೆಂದನು. ೨೨೫.

ಪಲಕಾಲಂ ತಪದಿಂದಂ
ಚಲದಿಂ ಸಂದಿರ್ದ ನಿನ್ನ ನಚ್ಚಿನ ಮುನಿಯಂ
ತೊಲಗಿಸಿದೆನೊಂದು ವಚನದಿ
ನೆಲೆ ಕೇಳ್ಮಿಥ್ಯಾತ್ವದಲ್ಲಿ ಪುರುಳೇನುಂಟೇ ? ೨೨೬

ಎಱಗಲನಾ ಪೇಳಿರ್ದೊಡ
ಮೆಱಗುಗು ಮಱೆಯಲ್ಕೆಮೇಲೆ ಮತ್ತೆಱಗದು ಸಂ
ದಱಿಕೆಯ ಕರ್ಪೂರಮಿರ್ದೊಡ
ಮಱಿವಿಲ್ಲದ ಜಡರುಮದಱ ಸಮನಾಗಿರ್ಪರ್ ೨೨೭

ಗದ್ಯ॥ ಅದಱಿಂದಜ್ಞಾನಿಗಳಪ್ಪರ ತಪದೊಳ್ ಫಲಮಿಲ್ಲೆಂದು ಬಸಿಱಂ ಪೊಸೆದು ನಕ್ಕನಾ
ಗಮಾಭ್ಯಾಸಿಗಳಪ್ಪ ಮಹರ್ಷಿಯರಂತಿರ್ಕೆ. ಎಮ್ಮಲ್ಲಿ ಗೃಹಸ್ಥನಪ್ಪಾತನಂ ಕಿಡಿಸಿದೆಯಪ್ಪೊಡೆ
ಎಮ್ಮಂಬಿಟ್ಟಜ್ಞಾನಿಗಳಿಲ್ಲೆಂದು ನುಡಿದು ರಾತ್ರಿ ಪ್ರತಿಮಾಯೋಗದೊಳ್ನಿಂದನ್ನ ತೋಱಿದ
ಗೃಹಸ್ಥನಪ್ಪೀತನಂ ಕಿಡಿಸಿದೆಯಪ್ಪೊಡೆ ನೀನೆ ಪಿರಿಯನೆಂದನೆ ವಾಹನದೇವಂ ಮುನಿದು ೨೨೮

ಪೊಡೆವ ಸಿಡಿಲಿಂ ಮಿಂಚಿಂ ಭೋರೆಂದು ಬೀಸುವ ಗಾಳಿಯಿಂ
ಕೆಡೆವ ಮರದಿಂ ಪಾವಿಂ ಚೇಳಿಂದಿರುಂಪೆಗಳಿಂ ಮನಂ
ಗಡಿಪ ಪುಲಿಯಿಂ ರೌದ್ರಾಕಾರಂಗಳಿಂ ಬಿಡೆ ಪಾಯ್ವ ಬ
ಲ್ಪಡಿಗ ಮರುಳಿಂ ಕಿರ್ಚಿಂ ಕಾಡಾನೆಯಿಂದಳಿವಿಂಡಿನಿಂ ೨೨೯

ಬಹಳಕಾಲ ತಪಸ್ಸಿನಲ್ಲಿದ್ದು ಛಲದಿಂದ ಪ್ರಸಿದ್ಧನಾಗಿದ್ದ ನಿನ್ನ ನಂಬಿಕೆಯ ಮುನಿಯನ್ನು ನಾನು ಒಂದು ಮಾತಿನಿಂದ ಹೊರಡಿಸಿದೆ. ಕೇಳು. ಮಿಥ್ಯಾಧರ್ಮದಲ್ಲಿ ಸತ್ವವಿದೆಯೆ ? ೨೨೬. ನೊಣವು ಹೇಳಿದ್ದರೂ ಇಳಿಯುತ್ತದೆ. ಮೇಲೆ ಕರ್ಪೂರವೇ ಇದೆಯೆಂದು ತಿಳಿದರೂ ಅದು ಮತ್ತೆ ಮೇಲೇರಲಾರದು. ತಿಳಿವಳಿಕೆಯಿಲ್ಲದ ಅಜ್ಞಾನಿಗಳೂ ಅದರ ಸಮನಾಗಿರುವರು. ೨೨೭. ಆದ್ದರಿಂದ ಅಜ್ಞಾನಿಗಳಾದವರ ತಪಸ್ಸಿನಲ್ಲಿ ಫಲವಿಲ್ಲವೆಂದು ಹೊಟ್ಟೆ ಹೊಸೆದುಕೊಂಡು ನಕ್ಕು ಇನ್ನು ಆಗಮಾಭ್ಯಾಸಿಗಳಾದ ಮಹರ್ಷಿಗಳ ಮಾತು ಒತ್ತಟ್ಟಿಗಿರಲಿ, ನಮ್ಮಲ್ಲಿ ಗೃಹಸ್ಥನಾದವನನ್ನು ಕೆಡಿಸಿದೆಯಾದರೆ, ನಮ್ಮನ್ನು ಬಿಟ್ಟು ಬೇರೆ ಅಜ್ಞಾನಿಗಳಿಲ್ಲವೆಂದು ಹೇಳಿ ರಾತ್ರಿ ಪ್ರತಿಮಾಯೋಗದಲ್ಲಿ ನಿಂತ, ನಾನು ತೋರಿಸಿದ, ಈ ಗೃಹಸ್ಥನನ್ನು ಕೆಡಿಸಿದೆಯಾದರೆ ನೀನೇ ದೊಡ್ಡವನು." ಎಂದು ಹೇಳಲು ವಾಹನದೇವನು ಮುನಿಸಿಕೊಂಡು ೨೨೮. ಹೊಡೆಯುವ ಸಿಡಿಲು, ಮಿಂಚು. ಬಿರುಗಾಳಿ, ಬೀಳುವ ಮರ, ಹಾವು ಚೇಳು ಇರುವೆಗಳು–ಇವುಗಳಿಂದಲೂ ಧೈರ್ಯವನ್ನು ಕುಗ್ಗಿಸುವ ಹುಲಿಗಳಿಂದಲೂ ಭಯಂಕರ ರೂಪಗಳಲ್ಲಿ ಮೇಲೆ ನುಗ್ಗುವ ಧಾಂಡಿಗ ಪಿಶಾಚಗಳಿಂದಲೂ ಬೆಂಕಿಯಿಂದಲೂ, ಕಾಡಾನೆಗಳಿಂದಲೂ ದುಂಬಿಗಳ ಗುಂಪಿನಿಂದಲೂ ಹೆದರಿಸಲು ಯತ್ನಿಸಿದನು. ೨೨೯. ಗದರಿಸಿ 'ಹೋಗು ಹೋಗು' ಎನ್ನುತ್ತ ಕೈಯಿಂದ

ಜಡಿದು ಕರದಿಂ ಪೋಪೋ ಪೋಗೆಂದು ನೂಂಕುವ ಬೇಡರಿಂ
ಬಡಿಯಲೆಳಸಿಯುಲ್ ಪೊಯ್ಯಲ್ ಮೇಲ್ವೀಟ್ವ ರಾಕ್ಷಸ ತಂಡದಿಂ
ದಡದರ್ದು ತನುವಂ ಮುತ್ತಂ ಸುಗ್ಗಾಗೆ ತಿಂಬ ಕಡುಂದುಱುಂ
ಕೆಡೆವ ಮರದಿಂ ನೂಂಕುತ್ತೊತ್ತುತ್ತೆ ಬರ್ಪ ಪೊನಲ್ಗಳಿಂ ೨೩೦

ಗದ್ಯ॥ ಇವು ಮೊದಲಾದನೇಕೋಪಸರ್ಗಂಗಳಂ ಮಾಡಿಯುಂ ತೊಲಗಿಸಲಾಱದೆ ಧರ್ಮಮುಮಂ ದೇವರುಮಂ ತಿರಸ್ಕರಿಸಿಯುಂ ಬಂಧುಗಳ ರೂಪುಮಂ ಕೈಕೊಂಡು ಬಂದು ಮನೆಯನರಸಂ ಕವರ್ದಂ ಪಿರಿಯ ಮಗಂ ಸತ್ತನೆಂದುಮೋಗೆಯ್ದುಂ ತೊಲಗಿಸಲಾಱದೆ ಶ್ರಾವಕರ ಗುಣಮಿಂತುಟೆನಲ್ ಜ್ಞಾನಿಗಳಪ್ಪ ಮಹರ್ಷಿಯರ ಗುಣಮನಿಂತಿಂತೆಂದು ಬಣ್ಣಿಸಲ್ಬಾರದೆಂದು ಮೆಚ್ಚಿ ಮಿಥ್ಯಾತ್ವಮುಂ ಬಿಟ್ಟು ಸದ್ದೃಷ್ಟಿಯಾದನಚ್ಯುತೇಂದ್ರನೀ ಗಗನಗಾಮಿನೀ ವಿದ್ಯೆಯುಂ ಸಂತಸದಿಂದೆನಗೆ ೨೩೧

ಶಿವದ ಶಾಶ್ವತಮಪ್ಪ ಸೌಖ್ಯಮನೀಯಲಾರ್ಪ ಜಿನೇಶ್ವರ
ಪ್ರವರಪಾದದೊಳಲ್ಲದರ್ತಿಯುಮೆಯ್ದೆ ಪತ್ತಿದ ಮೋಹಮುಂ
ನಿಮಗಿಹತ್ರದ ಸೌಖ್ಯ ಹೇತುಗಳಪ್ಪ ಮಂತ್ರ ಕುವಿದ್ಯೆಯೊಂ
ಬಿವಱೊಳಿಲ್ಲಣಮೆಂಬುದುಂ ನೆಱೆ ಬಲ್ಲೆನಾದೊಡಮುಟ್ಕಱಿಂ ೨೩೨

ನೂಕುವ ಬೇಡರನ್ನು ಸೃಷ್ಟಿಸಿದನು ; ಬಡಿದು, ಕತ್ತರಿಸಿ ಹೊಡೆಯಲು ಮೇಲೆ ಬೀಳುವ ರಾಕ್ಷಸತಂಡವನ್ನೂ ಮೈಮೇಲೆ ಹತ್ತಿ ಕಚ್ಚುವ ಕಣಜಗಳನ್ನೂ ಮೇಲೆಯೇ ಬೀಳುವಂಥ ಮರಗಳನ್ನೂ ರಭಸದಿಂದ ನುಗ್ಗಿಬರುವ ಪ್ರವಾಹಗಳನ್ನೂ ಸೃಷ್ಟಿಸಿದನು. ೨೩೦. ಇವೇ ಮೊದಲಾದ ಅನೇಕ ಉಪಸರ್ಗ (ಹಿಂಸೆ)ಗಳನ್ನುಂಟುಮಾಡಿದರೂ ಅವನನ್ನು ಹೊರಡಿಸಲಾರದೆ, ಧರ್ಮವನ್ನೂ ದೇವರನ್ನೂ ತಿರಸ್ಕರಿಸಿ, ಬಂಧುಗಳ ರೂಪವನ್ನು ವಹಿಸಿ ಬಂದು 'ನಿನ್ನ ಮನೆಯನ್ನು ಅರಸ ಲೂಟಿಮಾಡಿದ, ಹಿರಿಯ ಮಗ ಸತ್ತ' ಎಂದು ಹೇಳಿ ಏನು ಮಾಡಿದರೂ ಅವನನ್ನು ಹೊರಡಿಸಲಾರದೆ "ಶ್ರಾವಕರ ಗುಣ ಇಂಥಾದ್ದೆಂದು ಹೇಳಲು ಇನ್ನು ಜ್ಞಾನಿಗಳಾದ ಮಹರ್ಷಿಯರ ಗುಣವನ್ನು ವರ್ಣಿಸುವುದು ಶಕ್ಯವಲ್ಲ." ಎಂದು ಮೆಚ್ಚಿ ಮಿಥ್ಯಾಧರ್ಮವನ್ನು ಬಿಟ್ಟು ಸಮ್ಯಗ್ದರ್ಶನ ಪಡೆದನು. ಆಗ ಅಚ್ಯುತೇಂದ್ರನು ಈ ಗಗನಗಾಮಿನೀ ವಿದ್ಯೆಯನ್ನು ಸಂತೋಷದಿಂದ ನನಗೆ ೨೩೧. "ಮಂಗಳವಾದ ಶಾಶ್ವತ ಸೌಖ್ಯವನ್ನು ಕೊಡಬಲ್ಲ ಜಿನೇಶ್ವರಶ್ರೇಷ್ಠರ ಪಾದಗಳಲ್ಲಿ ಅಲ್ಲದೆ ನಿಮಗೆ ಹೆಚ್ಚಿನ ಇಹ ಸೌಖ್ಯ ಕಾರಣಗಳಾದ ಮಂತ್ರಗಳಲ್ಲಿಯೂ ಕುವಿದ್ಯೆಗಳಲ್ಲಿಯೂ ನಿಮಗೆ ಆಸೆಯಾಗಲಿ ಮೋಹವಾಗಲಿ ಸ್ವಲ್ಪವೂ ಇಲ್ಲವೆಂಬುದನ್ನು ನಾನು ಪೂರ್ಣವಾಗಿ ಬಲ್ಲೆ. ಆದರೂ ಪ್ರೀತಿಯಿಂದ. ೨೩೨. ಅಕೃತ್ರಿಮವಾದ ಚೈತ್ಯಾಲಯವನ್ನು ಪರ್ವದಿನಗಳಲ್ಲಿ ನೋಗಿ

ಗದ್ಯ॥ ಅಕೃತ್ರಿಮ ಚೈತ್ಯಾಲಯಮಂ ಪರ್ವದಿನಂಗಳೊಳ್ ಪೋಗಿ ವಂದಿಸಲಕ್ಕುಮೆಂದು ಪೊಡೆಮಟ್ಟು ಪ್ರಾರ್ಥಿಸಿ ಕೊಟ್ಟು ತಾಂ ಬಂದ ವೃತ್ತಾಂತಮನಱಿಪಿ ಪೂಜಿಸಿ ದೇವಲೋಕಕ್ಕೆ ಪೋದನೆನಗೆ ಗಗನಗಾಮಿನೀ ವಿದ್ಯೆ ಬಂದುದಿಂತೀ ವಿದ್ಯೆಯನೆಮ್ಮ ದೇಗುಲದ ಪೂಣಿ ವರಸೇನಂಗೆ ವಾತ್ಸಲ್ಯದಿಂ ಕೊಟ್ಟೆನೆಂಬುದುಂ ಲಲಿತಾಂಗಂ ಬೆಱಗಾಗಿ ೨೩೩

ಆತಂ ದೇವಾಧೀಶ್ವರ
ನೀತಂ ಕಿಱುಕುಳ ಮನುಷ್ಯನೀತಂಗಾತಂ
ಪ್ರೀತಿಯೊಳೆಱಗಿದನೆಂದೊಡೆ
ಭೂತಳದೊಳ್ಧರ್ಮದಿಂದಮಗ್ಗಳಮುಂಟೇ ೨೩೪

ಜಿನದತ್ತಂ ಗುಣವಾರ್ಧಿ ತಪ್ಪಲಱಿಯಂ ಜೀವಾದಿಗಳ್ಗೆಂಬ ಭಾ
ವನೆಯಿಂದಾನಿನಿತೊಂದು ಪೆಂಪುವಡೆದೆಂ ದೇವಾಧಿದೇವಂ ಜಗ
ಜ್ಜನ ಪೂಜ್ಯಂ ಜಿನನಂ ಜಿನಾಗಮುಮಂ ನಿಶ್ಶಂಕೆಯಿಂ ನಂಬುವಾ
ತನ ಸೌಖ್ಯೋನ್ನತಿಯಂ ಮಹಾಮಹಿಮೆಯಂ ಪೇೞ್ವಣ್ಣೆಸಲ್ಪರ್ಕುಮೋ ೨೩೫

ಎಂದು ದರ್ಶನದೊಳ್ ನಿಶ್ಶಂಕನಾಗಿ ೨೩೬

ಕಡುದೂರ್ತಿಂ ಮುಂ ದುಷ್ಟರ
ಗಡಣಂಗೊಂಡಳಿವೆ ಸಾಲ್ಗು ಮಿನ್ನಳಿಪಿಂದಂ
ಪಿಡಿಯೆಂ ಖಳಸಂಸ್ತುತಿಯಂ
ಬಿಡುವೆಂ ಪಿಡಿವೆಂ ಜಿನೇಂದ್ರ ಪದಸರಸಿಜಮಂ ೨೩೭

ವಂದಿಸಲು ಅನುಕೂಲವಾಗುವುದೆಂದು ನಮಸ್ಕರಿಸಿ, ಪ್ರಾರ್ಥಿಸಿ ಕೊಟ್ಟು, ದೇವಲೋಕಕ್ಕೆ ಹೋದ. ನನಗೆ ಗಗನಗಾಮಿನೀ ವಿದ್ಯೆ ಬಂದದ್ದು ಹೀಗೆ. ಅದನ್ನು ನಮ್ಮ ದೇವಾಲಯದ ಹುಡುಗ ವರಸೇನನಿಗೆ ಮಮತೆಯಿಂದ ಕೊಟ್ಟೆ, ಎನ್ನುತ್ತಲೂ ಲಲಿತಾಂಗ ಆಶ್ಚರ್ಯಪಟ್ಟು ೨೩೩. "ಆತನು ದೇವರುಗಳ ಒಡೆಯ. ಈತನು ಅಲ್ಪಮನುಷ್ಯ. ಈತನಿಗೆ ಆತನು ಪ್ರೀತಿಯಿಂದ ನಮಸ್ಕರಿಸಿದನೆಂದರೆ ಭೂಮಿಯಮೇಲೆ ಧರ್ಮಕ್ಕಿಂತ ಹೆಚ್ಚಿನದು ಇದೆಯೆ ? ೨೩೪. 'ಜಿನದತ್ತನು ಗುಣಸಮುದ್ರನು ; ಜೀವಾದಿಗಳಿಗೆ ಅವನು ಕೆಡಕುಮಾಡುವುದಿಲ್ಲ' ಎಂಬ ಭಾವನೆಯಿಂದಲೇ ನಾನು ಇಷ್ಟೊಂದು ಅಧಿಕ್ಯವನ್ನು ಪಡೆದೆ. ಇನ್ನು ದೇವಾಧಿದೇವನೂ ಜಗಜ್ಜನ ಪೂಜ್ಯನೂ ಆದ ಜಿನನನ್ನೂ ಜಿನಾಗಮವನ್ನೂ ಸಂಶಯವಿಲ್ಲದೆ ನಂಬುವ ಆತನ ಉನ್ನತಸೌಖ್ಯವನ್ನೂ ಅತಿಶಯವಾದ ಮಹಿಮೆಯನ್ನೂ ವರ್ಣಿಸಲು ಸಾಧ್ಯವೇ? ೨೩೫. ಎಂದು ದರ್ಶನದಲ್ಲಿ ನಿಶ್ಶಂಕೆಯನ್ನು ಹೊಂದಿ, ೨೩೬. ಬಹಳ ಧೂರ್ತತನದಿಂದ ಮೊದಲು ದುಷ್ಟರ ಗುಂಪನ್ನು ಸೇರಿದ ವಿನಾಶವೇ ಸಾಕು. ಇನ್ನು ಆಸೆಯಿಂದ ನೀಚಸಂಪರ್ಕವನ್ನು ಹಿಡಿಯುವುದಿಲ್ಲ ; ಬಿಡುತ್ತೇನೆ. ಜಿನೇಂದ್ರನ ಪಾದಕಮಲಗಳನ್ನು ಹಿಡಿಯುತ್ತೇನೆ." ೨೩೭. ಎಂದು ತನ್ನ ವೈರಾಗ್ಯವು

ಗದ್ಯ॥ ಎಂದು ತನ್ನ ವೈರಾಗ್ಯಂ ಧನ್ವಂತರಿಯ ಕಥೆಯಿಂದಿರ್ಮಡಿಯಾಗೆ ಸಂಸಾರಭೋಗಕ್ಕೆ ಪೇಸಿ ದೇವರ್ಷಿಯರೆಂಬ ಚಾರಣರ್ಷಿಯರಲ್ಲಿ ಜಿನದೀಕ್ಷೆಯಂ ಕೈಕೊಂಡು ತತ್ಕ್ಷಣದೊಳೆ ಚಾರಣರ್ಧಿಯನೆಯ್ದಿ ಪನ್ನಿರ್ಚ್ಛರದ ತಪದೊಳುತ್ತರೋತ್ತರಂ ನೆಗಟ್ದು ಅಷ್ಟಾಪದಗಿರಿಯೊಳಷ್ಟ ವಿಧ ಕರ್ಮಂಗಳಂ ನಿರ್ಮೂಲವಾಗೆ ಕೆಡಿಸಿ ತ್ರಿಲೋಕ ಶಿಖರಿಶೇಖರನಾದನಿಂತು ೨೩೮

ಕೇಡಿಲ್ಲದೊಂದು ಸುಖಮಂ
ಮಾಡುವೊಡರ್ಹತ್ಪದಾಂಬುಜಾತಮೆ ಮಾಳ್ಕುಂ
ಮಾಡವು ಪೆಱವೆಂಬೀ ಬಗೆ
ಕೂಡಿದೊಡಾತಂ ಕೃತಾರ್ಥನಾತನೆ ಧನ್ಯಂ ೨೩೯

ಗದ್ಯ॥ ಎಂದು ಗೌತಮ ಸ್ವಾಮಿಗಳ್ ನಿಶ್ಶಂಕೆಯ ಕಥೆಯಂ ಪೇಳ್ದುದುಂ ೨೪೦

ಪಿರಿದೊಂದುತ್ಸಾಹದಿಂ ನಂಬುಗೆ ಮನದೊಳಗುರ್ವಾಗೆ ಕೈಗಣ್ಮಿ ಪೊಣ್ಮಿ
ತ್ತಿರೆ ಮಿಥ್ಯಾತ್ವಂ ಸಡಿಲ್ದೊರ್ವೆಯೆ ಪಱಿಪಡೆ ನಿರ್ವಾಣ ಸಾಮ್ರಾಜ್ಯಮಾಗಳ್
ದೊರೆಕೊಂಡಂತಾಗೆ ರಾಗಂಬೆರಸು ನಲಿದನಂದೆಯ್ದೆ ತ್ರೈವಿದ್ಯ ಲಕ್ಷ್ಮೀ
ಶ್ವರ ಪಾದಾಂಭೋಜಭೃಂಗಂ ಸುಕವಿಜನಮನಃಪದ್ಮಿನೀ ರಾಜಹಂಸಂ ೨೪೧

ಧನ್ವಂತರಿಯ ಕಥೆಯಿಂದ ಇಮ್ಮಡಿಯಾಗಲು ಸಂಸಾರಸುಖಕ್ಕೆ ಹೇಸಿ, ದೇವರ್ಷಿಯರ್ ಎಂಬ ಚಾರಣಋಷಿಗಳಲ್ಲಿ ಜಿನದೀಕ್ಷೆಯನ್ನು ಸ್ವೀಕರಿಸಿ ಆಕ್ಷಣದಲ್ಲಿಯೇ ಚಾರಣ ವೃದ್ಧಿಯನ್ನು ಹೊಂದಿ ಹನ್ನೆರಡು ರೀತಿಯ ತಪಸ್ಸುಗಳಲ್ಲಿ ಕ್ರಮಕ್ರಮವಾಗಿ ಪ್ರಸಿದ್ಧ ನ್ನಾಗಿ ಅಷ್ಟಾಪದಗಿರಿಯಲ್ಲಿ ಅಷ್ಟವಿಧಕರ್ಮಗಳನ್ನು ನಿರ್ಮೂಲವಾಗಿ ನಾಶಪಡಿಸಿ ಕೊಂಡು ತ್ರಿಲೋಕಪರ್ವತದ ಶಿಖರವನ್ನೇರಿದನು. ೨೩೮. ಹೀಗೆ, ನಾಶವಿಲ್ಲದ ಸುಖ ವನ್ನು' ಮಾಡಬೇಕಾದರೆ ಅರ್ಹಂತರ ಪಾದಕಮಲಗಳೇ ಮಾಡುತ್ತವೆ. ಬೇರೆಯವು ಮಾಡುವುದಿಲ್ಲ ಎಂಬ ಈ ಸಂಕಲ್ಪವುಂಟಾಯಿತು. ಆದರಿಂದ ಅವನು ಕೃತಾರ್ಥನಾದ, ಧನ್ಯನಾದ. ೨೩೯. ಹೀಗೆ ಗೌತಮಸ್ವಾಮಿಗಳು ನಿಶ್ಶಂಕೆಯ ಕಥೆಯನ್ನು ಹೇಳಲು ೨೪೦. ಹೆಚ್ಚಾದ ಉತ್ಸಾಹದಿಂದ ಮನಸ್ಸಿನಲ್ಲಿ ನಂಬಿಕೆ ವಿಶೇಷವಾಗಿ ಉಕ್ಕಿ ಹೊಮ್ಮು ತ್ತಿರಲು ಮಿಥ್ಯಾದರ್ಶನವು ಸಡಿಲವಾಗಿ ಒಂದೇ ಸಲ ಹರಿದುಹೋಗಲು ಮೋಕ್ಷ ಸಾಮ್ರಾಜ್ಯವೇ ಲಭಿಸಿದ ಹಾಗಾಗಿ ತ್ರೈವಿದ್ಯಲಕ್ಷ್ಮೀಶ್ವರನ ಪಾದಕಮಲಗಳಲ್ಲಿ ದುಂಬಿ ಯಂತಿರುವ, ಸುಕವಿಜನಮನಃಪದ್ಮಿನೀರಾಜಹಂಸನು ಆನಂದದಿಂದ ನಲಿದಾಡಿ ದನು. ೨೪೧.

ಇದು ನಿಖಿಲ ದಿವಿಜ ಪರಿವೃಢ ಮಕುಟತಟಘಟಿತ ಮಣಿನಿಕರವಿಲುಳಿತ ಕಿರಣ ಚುಂಬನೀಯ ಪರಮಜಿನಚರಣಯುಗಳ ಸರಸಿರುಹ ಮತ್ತಮಧುಕರ ನಿರುಪಮ ಸಹಜಕವಿಜನ ಪಯಃಪಯೋಧಿಹಿಮಕರನುತಭಾವಯುತ ದಿಗಂಬರದಾಸ ನೂತ್ನ ಕವಿತಾ ವಿಲಾಸ ಶ್ರೀಮನ್ನಯಸೇನದೇವವಿರಚಿತಮಪ್ಪ ಧರ್ಮಾಮೃತದೊಳ್ ದರ್ಶನ ಪ್ರಥಮಾಂಗವ್ಯಾವರ್ಣನಂ

## ದ್ವಿತೀಯಾಶ್ವಾಸಂ

ಇದು ಸಮಸ್ತದೇವತೆಗಳ ಶಿರಸಾಷ್ಟಾಂಗಪ್ರಣಾಮಗಳನ್ನು
ಹೊಂದಿದ ಜಿನನಪಾದಕಮಲಗಳಲ್ಲಿತುಂಬಿಯಾದ
ನಿರುಪಮ ಸಹಜಕವಿ, ಕವಿಗಳೆಂಬಪಾಲ್ಗಡಲಿಗೆ
ಚಂದ್ರನಾದ 'ದಿಗಂಬರದಾಸ' 'ನೂತ್ನಕವಿತಾ ವಿಳಾಸ' –
ಎಂಬ ಬಿರುದುಗಳುಳ್ಳ ಶ್ರೀಮನ್ನಯಸೇನದೇವ
ವಿರಚಿತವಾದ 'ಧರ್ಮಾಮೃತ'ದಲ್ಲಿ
ದರ್ಶನದ ಮೊದಲನೆಯ ಅಂಗದ ವಿವರಣೆಯಾದ ದ್ವಿತೀಯಾಶ್ವಾಸ

# ತೃತೀಯಾಶ್ವಾಸಂ

ಶ್ರೀಕಾಂತೆಯನೊಲಿಪ ಗುಣ
ಕ್ಕೀ ಕಮನೀಯ ಪ್ರಣೂತನಿಶ್ಶಂಕೆ ಲಸ
ತ್ಪ್ರಾಕಾರವೆಂದು ಪೆರ್ಚಿಂ
ಕೈಕೊಂಡಂ ಸುಕವಿನಿಕರಪಿಕಮಾಕಂದಂ ೧

ಅಂತಾಪ್ತಾಗಮ ಪದಾರ್ಥಂಗಳೊಳ್ ನಿಶ್ಶಂಕಮನನಾಗಿ ಮುಂದಣ ನಿಷ್ಕಾಂಕ್ಷೆಯ ಕಥೆಯುಂ ಬೆಸಸಿಮೆಂದು ಗೌತಮಗಣಧರರ್ಗೆ ಪೊಡೆವಟ್ಟು ಮುಕುಳಿತ ಕರಕಮಲನಾಗಿರ್ಪುದುಂ ಗೌತಮ ಗಣಧರಸ್ವಾಮಿಗಳಿಂತೆಂದು ಪೇಳ್ದರ್ : ತಂಬುಲದಂತೆ ಸಂಗೀತದಂತೆ ದಿವಸದಂತೆ ಮುತ್ತೊಗದಂತೆ ವಜ್ರದಂತೆ ಲೋಕದಂತೆ ವೀಣೆಯಂತೆ ಗಾಳಿಯಂತೆ ವಿಪ್ರರಂತೆ ಸಿದ್ಧರಂತೆ ತ್ರಿಸರದಂತೆ ದರ್ಶನಮುಂ ನಿಶ್ಶಂಕೆಯುಂ ನಿಷ್ಕಾಂಕ್ಷೆಯುಮೆಂಬ ಮೂಱಱೊಳಂ ಕೂಡಿ ಮಹೋತ್ಸಾಹದಿಂ ನಡೆವುದು. ಇನ್ನಾ ಕಥೆಯ ಮಹಿಮೆಯೆಂತಪ್ಪುದೆಂದೊಡೆ. ೨

ಶ್ರೇಣಿಕಮಹಾರಾಜನು (ಸುಕವಿನಿಕರಪಿಕಮಾಕಂದನು) ಲಕ್ಷ್ಮೀದೇವಿಯ ಅನುಗ್ರಹ ವನ್ನು ಪಡೆಯುವ ಗುಣಕ್ಕೆ, ಈಗ ಸುಂದರವಾಗಿ ಹೇಳಿದ ನಿಶ್ಶಂಕೆ ಶ್ರೇಷ್ಠವಾದ ಸುತ್ತು ಗೋಡೆ (ಪ್ರಾಕಾರ)ಯೆಂದು ಕೈಕೊಂಡನು. ೧. ಹಾಗೆ ಸ್ವಧರ್ಮದ ತತ್ವಗಳಲ್ಲಿ ಸಂಶಯ ವಿಲ್ಲದವನಾಗಿ ಮುಂದಿನ ನಿಷ್ಕಾಂಕ್ಷೆಯ ಕಥೆಯನ್ನು ಹೇಳಿರೆಂದು ಗೌತಮಗಣಧರರಿಗೆ ನಮಸ್ಕಾರಮಾಡಿ ಕೈಜೋಡಿಸಿಕೊಂಡು ನಿಲ್ಲಲು, ಗೌತಮಗಣಧರಸ್ವಾಮಿಗಳು ಹೀಗೆ ಹೇಳಿದರು: ತಾಂಬೂಲ (ಎಲೆ, ಅಡಿಕೆ, ಸುಣ್ಣ) ದ ಹಾಗೆ, ಸಂಗೀತ (ಗೀತ, ವಾದ್ಯ, ನೃತ್ಯ ಈ ಮೂರೂ ಸೇರಿದರೆ ಸಂಗೀತ)ದ ಹಾಗೆ, ದಿವಸ (ಮೂರು ಸಂಧ್ಯೆಗಳನ್ನುಳ್ಳದು)ದ ಹಾಗೆ ಮುತ್ತೊಗದ (ತೀರ್ಥಂಕರರಿಗೆ ಹಿಡಿಯುವ ಮುಕ್ಕೊಡೆ-ಮೂರು ಕೊಡೆಗಳಿಗೆ ಒಂದು ಹಿಡಿ) ಹಾಗೆ, ವಜ್ರ (ರತ್ನತ್ರಯಃಸಮ್ಯಜ್ಞಾನ, ದರ್ಶನ, ಚಾರಿತ್ರ)ದ ಹಾಗೆ, ಲೋಕ (ಅಧೋಲೋಕ, ಭೂಲೋಕ, ಊರ್ಧ್ವಲೋಕ)ದ ಹಾಗೆ, ವೀಣೆ (ತ್ರಿ.ಶತಿಯೆಂದು ಒಂದು ಬಗೆಯ ವೀಣೆಯ ಹೆಸರು; ಮೂರು ತಂತಿಗಳುಳ್ಳ ಒಂದು ಕಿನ್ನರೀ ಪ್ರಭೇದ)ಯ ಹಾಗೆ, ಗಾಳಿ (ತನುವಾತ, ಘನವಾತ, ಘನೋದಧಿ ಅಥವಾ ಅಪ್ ಬಹುಳ, ಎಂದು ಮೂರು ಬಗೆ)ಯ ಹಾಗೆ, ವಿಪ್ರರ (ಬ್ರಾಹ್ಮಣ, ಕ್ಷತ್ರಿಯ, ವೈಶ್ಯ) ಹಾಗೆ, ಸಿದ್ಧರ (ತೀರ್ಥಕರ ಕೇವಲಿ, ಗಣಧರ ಕೇವಲಿ, ಸಾಮಾನ್ಯ ಕೇವಲಿ ಎಂದು ಮೂರು ಬಗೆ) ಹಾಗೆ, ತ್ರಿಸರ (ಮೂರು ಸ್ವರಗಳು : ಉದಾತ್ತ ಅನುದಾತ್ತ ಮತ್ತು ಸ್ವರಿತಗಳೆಂಬ ವೇದಗಳಲ್ಲಿನ ಸ್ವರಗಳು, ಅಥವಾ ಷಡ್ಜ, ಮಧ್ಯಮ, ಗಾಂಧಾರ ಎಂಬ ರಾಗಗ್ರಾಮಗಳು, ಅಥವಾ ಮಂದ್ರ, ಮಧ್ಯ, ತಾರ ಎಂಬ ಮೂರು ಸ್ವರಗಳು)ದ ಹಾಗೆ, ದರ್ಶನ, ನಿಶ್ಶಂಕೆ ನಿಷ್ಕಾಂಕ್ಷೆ ಎಂಬ ಮೂರರಿಂದ ಕೂಡಿ ಬಹಳ ಉತ್ಸಾಹದಿಂದ ನಡೆದುಕೊಳ್ಳತಕ್ಕದ್ದು.

ಅಗಣಿತಮಪ್ಪ ಪೆರ್ಗೆಱೆಗಳಿಂ ನೆಱೆ ವಾರಿಜಷಂಡದೋಳಿಯಿಂ
ಸೊಗಯಿಸುತಿರ್ಪ ಕೆಯ್ವೊಲದಿನಾಡುವ ಗೋಕುಲದಿಂ ಕುಬೇರನಿಂ
ಮಿಗಿಲೆನಿಪೊಕ್ಕಲಿಂ ವಿಬುಧ ಸಂಕುಳದಿಂ ತಱುಗಿರ್ದ ನಂದನಾ
ಳಿಗಳಿನಳುಂಬಮುನ್ನತಿಯಿನಂಗಮಹೀವಳಯಂ ಧರಿತ್ರಿಯೊಳ್ ೩

ಗದ್ಯ॥ ಅಂತೊಪ್ಪುವಂಗ ವಿಷಯದೊಳ್ ಧರಾಂಗನೆಯ ಕೈಯ ಮಣಿದರ್ಪಣದಂತೆ ೪

ಸುತ್ತಿದ ನಂದನವನದಿಂ
ಮುತ್ತಿದ ಕೆಯ್ವೊಲದಿನೆಸೆವ ಪದ್ಮಾಕರದಿಂ
ದುತ್ತುಂಗ ಜಿನಾಲಯದಿಂ
ದುತ್ತಮ ಪುರಮೆನಿಸಿ ನೆಗೞ್ದ ಚಂಪಾಪುರದೊಳ್ ೫

ಜಿನಸಮಯವಾರ್ಧಿ ಸೋಮನಂ ವೈಶ್ಯವಂಶಲಲಾಮನುಮಪ್ಪ ಪ್ರಿಯದತ್ತನೆಂಬ ವಣಿಗ್ವಂಶಕುಲತಿಲಕನಪ್ಪನಾತನ ಮನೋಹರೆಯಂಗಮತಿಯೆಂಬಳಂತವರಿರ್ವರ್ಗಂ ಪ್ರಿಯ ನಂದನೆ ಗುಣಗಣಾಭರಣೆಯನಂತಮತಿಯೆಂಬಳ್ ೬

ಅತಿ ಚೆಲ್ವೆ ಬಗೆಗೆವಂದುದ
ನತಿಶಯದಿಂ ಪಲವು ಮಕ್ಕಳುಂ ತಾನುಂ ಸಂ
ತತಮುಂ ಮಹಿಮೆವೆರಸುತಾ
ಡುತುಮಿಾ ತೆಱದಿಂದೆ ಪೋಗೆ ಪಲವುಂ ದಿವಸಂ ೭

ಇನ್ನು ಆ ಕಥೆಯ ಮಹಿಮೆ ಎಂಥಾದ್ದೆಂಧರೆ ೨. ಅಸಂಖ್ಯಾತವಾದ ಹೆಗ್ಗೆರೆಗಳಿಂದಲೂ ತುಂಬಿದ ಕಮಲಸರೋವರಗಳಿಂದಲೂ ಶೋಭಾಯಮಾನವಾಗಿರುವ ಹೊಲಗದ್ದೆಗಳಿಂದಲೂ, ವಿಹರಿಸುವ ಗೋವುಗಳ ಸಮೂಹಗಳಿಂದಲೂ ಕುಬೇರನಿಗಿಂತ ಹೆಚ್ಚೆನಿಸುವ ಒಕ್ಕಲುಗಳಿಂದಲೂ ಪಂಡಿತ ಸಮೂಹದಿಂದಲೂ, ತುಂಬಿದ್ದ ಉದ್ಯಾನವನ ಸಮೂಹಗಳಿಂದಲೂ, ಅಂಗದೇಶವು ಭೂಮಿಯಮೇಲೆ ಅತ್ಯಂತ ಉನ್ನತಿಯನ್ನು ಹೊಂದಿದ್ದಿತು. ೩. ಹಾಗೆ ಶೋಭಿಸುವ ಅಂಗದೇಶದಲ್ಲಿ ಧರಾದೇವಿಯ ಕೈಯಲ್ಲಿರುವ ರನ್ನಗನ್ನಡಿಯಂತೆ ೪. ಚಂಪಾಪುರವೆಂಬ ನಗರವು ಹಲವು ಉದ್ಯಾನಗಳು, ಹೊಲಗದ್ದೆಗಳು, ಪದ್ಮ ಸರೋವರಗಳು, ದೊಡ್ಡಜಿನಮಂದಿರಗಳು ಮುಂತಾದುವುಗಳಿಂದ ಕೂಡಿ ಉತ್ತಮಪುರವೆನ್ನಿಸಿಕೊಂಡಿತ್ತು. ೫. ಅಲ್ಲಿ ಜೈನಧರ್ಮವೆಂಬ ಸಮುದ್ರಕ್ಕೆ ಚಂದ್ರನಂಥವನೂ ವೈಶ್ಯಕುಲಕ್ಕೆ ಅಲಂಕಾರನೂ ಆದ ಪ್ರಿಯದತ್ತನೆಂಬ ಸೆಟ್ಟಿ ಇದ್ದನು. ಆತನ ಹೆಂಡತಿ ಅಂಗಮತಿ, ಅವರಿಬ್ಬರಿಗೂ ಪ್ರಿಯಪುತ್ರಿ, ಗುಣಗಳೇ ಆಭರಣವಾಗಿ ಇರುವ ಅನಂತಮತಿಯೆಂಬುವಳು. ೬. ಬಹಳ ಚೆಲುವೆ, ತನ್ನ ಮನಸ್ಸಿಗೆ ಬಂದದನ್ನು ಬಹಳ ಉತ್ಸಾಹದಿಂದ ಹಲವು ಮಕ್ಕಳೂ ತಾನೂ ಸದಾ ವೈಭವದಿಂದ ಆಡುತ್ತ ಹಲವು ದಿವಸ ಕಳೆದು ಹೋದುವು. ೭. ಒಂದು ದಿನ ಅನಂತಮತಿಯೂ ಅವಳ ಜತೆಯಲ್ಲಿ ಆಡುವ

ಒಂದು ದಿವಸಮನಂತಮತಿಯೊಡನಾಡುವ ಮಕ್ಕಳೆಲ್ಲಂ ರಾಗದಿಂ ಮದುವೆಮಾಡುವೆ ವೆಂಬುದ್ಯೋಗದಿಂ ತರಿಸಿ ಬೊಂಬೆಯನೊಂದಂ ೮

ಲೀಲೆಯಿಂದುಡಿಸಿ ದಿವ್ಯವಸ್ತ್ರಮಂ
ಸೋಲೆ ಕತ್ತುರಿಯ ಬೊಟ್ಟನಿಟ್ಟು ಪೊ
ನ್ನೋಲೆಯಂ ತೊಡಿಸಿ ಚೆಲ್ವನಪ್ಪ ಪೂ
ಮಾಲೆಯಂ ಮುಡಿಯಿಸುತ್ತುಮರ್ತಿಯಿಂ ೯

ಇಂತು ನೆಱೆಯೆ ಪಸದನಂಗೊಳಿಸಿ ೧೦

ಮದುವಣಿಗನೆಂದು ಪಂಕಜ
ವದನೆಯ ಸಾಱಿರಿಸಿ ರಾಗವೊದವಿರೆ ಮನದೊಳ್
ಮುದದಿಂ ಕೈಪಱೆಗುಟ್ಟು
ತ್ತೊದವಿಂದಂ ಮಕ್ಕಳಾಡುತಿರ್ಪನ್ನೆವರಂ ೧೧

ಪ್ರಿಯದತ್ತಸೆಟ್ಟಿ ಬಸದಿಗೆ ದೇವರಂ ಕಾಣಲ್ಪೋಗುತ್ತೆ ಕಂಡು ಸಮೀಪಕ್ಕೆ ಬಂದು ಬೊಂಬೆಯ ಕೆಲದೊಳಿರ್ದ ಮಗಳನೆತ್ತಿಕೊಂಡು ಮುಂಡಾಡಿ ಕದಪಂ ಕರ್ಚಿ ಬೞಿಕ ಮಿಂತೆಂದಂ ೧೨

ಸ್ನೇಹದಿಂ ಗುಡಿಗಟ್ಟದೆ ಪೌರವರ್ಗಂಗಳ ತೂರ್ಯರವಂಗಳು
ತ್ಸಾಹದಿಂದಮದಿರ್ಪದೆ ನಂಟರ್ ಬಾರದೆ ಪಾವನರತ್ನಸಂ
ದೋಹದಿಂದೆಸೆವಂತು ವಿವಾಹಮಂ ಕರಮೊಪ್ಪಿರೆ ಮಾಡದಾಂ
ಮೋಹದಿಂ ನೆಱೆ ನೋಡದೆ ನೀನಾತ್ಮೇಶನನಟ್ಟಿಕೞ್ಕೊಳರ್ತಿಯಿಂ ೧೩

ಮಕ್ಕಳೂ ಎಲ್ಲರೂ ಆಸೆಯಿಂದ ಮದುವೆಮಾಡುವ ಆಟವನ್ನು ಕೈಕೊಂಡು ಪ್ರಯತ್ನ ಪೂರ್ವಕವಾಗಿ ಒಂದು ಬೊಂಬೆಯನ್ನು ತರಿಸಿ. ೮. ದಿವ್ಯವಸ್ತ್ರವನ್ನು ಉಡಿಸಿ ವಿನೋದಪಟ್ಟು, ನೋಡುವವರ ಕಣ್ಣುಸೋಲುವ ಹಾಗೆ ಕಸ್ತೂರಿಯ ತಿಲಕವನ್ನಿಟ್ಟು ಹೊನ್ನಿನ ಓಲೆಯನ್ನೂ ತೊಡಿಸಿ ಅಂದವಾದ ಹೂಮಾಲೆಯನ್ನು ಸಡಗರದಿಂದ ಮುಡಿ ಸುತ್ತ, ಹೀಗೆ ತುಂಬಾ ಅಲಂಕಾರಮಾಡಿ ೧೦. ಕೂಡಿಸಿ ಆ ಬೊಂಬೆಯನ್ನೇ ಮದ ವಣಿಗನೆಂದು ಹೇಳಿ ಅನಂತಮತಿಯ ಪಕ್ಕದಲ್ಲಿರಿಸಿ ಹೆಚ್ಚಿನ ಮನಃಪ್ರೀತಿಯಿಂದ ಚಪ್ಪಾಳೆ ತಟ್ಟುತ್ತ ಮಕ್ಕಳು ಆಡಿಕೊಳ್ಳುತ್ತಿದ್ದರು. ೧೧. ಆಗ ಪ್ರಿಯದತ್ತಸೆಟ್ಟಿಯು ಬಸದಿಗೆ ದೇವರ ದರ್ಶನಕ್ಕೆಂದು ಹೊರಟವನು ಮಗಳನ್ನು ಕಂಡು ಹತ್ತಿರಕ್ಕೆ ಬಂದು ಬೊಂಬೆಯ ಪಕ್ಕದಲ್ಲಿದ್ದ ಮಗಳನ್ನೆತ್ತಿಕೊಂಡು ಮುದ್ದಾಡಿ ಕೆನ್ನೆಯನ್ನು ಕಚ್ಚಿ ಆಮೇಲೆ ಹೀಗೆಂದನು. ೧೨. "ಮಮತೆಯಿಂದ ತೋರಣಾದಿಗಳನ್ನು ಕಟ್ಟದೆ ಮಂಗಳ ವಾದ್ಯ ಧ್ವನಿ ಮೊಳಗದೆ, ಬಾಂಧವರು ಬರದೆ ಅನೇಕಶ್ರೇಷ್ಠ ರತ್ನಸಮೂಹಗಳಿಂದ ಅಲಂಕರಿಸಿ ಒಪ್ಪುವ ರೀತಿಯಲ್ಲಿ ಮದುವೆಯನ್ನು ಮಾಡದೆ, ನಾನು ಆ ಉತ್ಸವವನ್ನೆಲ್ಲ ಪ್ರೀತಿ,

ಇಂತು ಕದ್ದು ಮದುವೆಯಪ್ಪುದುಚಿತಮಲ್ತೆಂದು ತ್ರಪ್ತರಿಯಾಡುತ್ತುಂ ಮುದ್ದಾಡಿ ಜಿನಾಲಯಕ್ಕೆ ಬಂದು ಸ್ವಾಮಿಯುಂ ಕಂಡು ಭಟ್ಟಾರಕರುಂ ವಂದಿಸಿ ನಿತ್ಯ ವ್ರತಮಂ ಕೈಕೊಂಡು ಕಿಱಿದು ಬೇಗಂ ಧರ್ಮಶ್ರವಣಂಗೆಯ್ದು ಬೞಿಕ್ಕಮಿಂತೆಂದಂ ೧೪

ನೋಡಿರೆ ಚೋದ್ಯಮನಕ್ಕನ
ಮಾಡಿದುದಂ ನಂಟರಱಿಯದಾನಱಿಯದೆ ಮುಂ
ಮಾಡದೆ ಜಿನಪೂಜೆಯನೊಡ
ನಾಡುವ ಕೂಸುಗಳುಮೆಯ್ದೆ ತಾನುಂ ಕಳವಿಂ ೧೫

ಗದ್ಯ॥ ಸಮಕಟ್ಟಿಂ ಮದುವೆಯಾದಳ್ ; ನಿಮ್ಮ ಗುಡ್ಡಿಗೆ ಬ್ರಹ್ಮಚರ್ಯವ್ರತಮಂ ಕುಡಿ ಮೆಂಬುದುಂ, ವರದತ್ತ ಭಟ್ಟಾರಕರ್ ನಗುತ್ತುಂ ನಿನಗಿಂದು ಮೊದಲಾಗೆ ಬ್ರಹ್ಮಚರ್ಯ ವ್ರತಮಂ ಕೊಟ್ಟೆವೆಂಬುದುಂ ಮಹಾಪ್ರಸಾದಮೆಂದು ಕೈಕೊಂಡು ತನ್ನ ಮನದೊಳಿಂತೆಂದಳ್ ೧೬

ಬಡವಂಗೊಪ್ಪುವ ರಾಜ್ಯಲಕ್ಷ್ಮಿ ಕುರುಡಂಗಕ್ಷಿದ್ವಯಂ ತೂಪದೊಳ್
ಕೆಡೆವಂಗಡ್ಡಯಿಪಡ್ಡಗೊಂಬು ರುಜೆಯೊಳ್ಕೀವಂಗೆ ದಿವ್ಯೌಷಧಂ
ಬಿಡದೀ ಸಂಸೃತಿಯೊಳ್ದುರೌಘವಶದಿಂ ಬೇವರ್ಗೆ ತತ್ಸುವ್ರತಂ
ಗಡ ಕೈಸಾರ್ದೊಡೆ ಭಾವಿಪಂದವನೆ ಧನ್ಯಂ ಭೂರಿಭೂಚಕ್ರದೊಳ್ ೧೭

ಯಿಂದ ನೋಡದೆ, ನೀನು ನಿನ್ನ ಪ್ರೀತಿ ಪಾತ್ರನನ್ನು ಹೀಗೆ ಕದ್ದು ಮದುವೆಯಾಗುವುದು ಉಚಿತವಲ್ಲ" ಎಂದು ತಮಾಷೆ ಮಾಡುತ್ತ ಮುದ್ದಾಡಿ ಜಿನಾಲಯವನ್ನು ಸೇರಿ ದೇವರ ದರ್ಶನ ಮಾಡಿ ನಿತ್ಯವ್ರತವನ್ನು ಆಚರಿಸಿ ಕೊಂಚ ಹೊತ್ತು ಧರ್ಮಶ್ರವಣಂ ಮಾಡಿ ಆಮೇಲೆ ಹೀಗೆಂದನು : ೧೪. ಈ "ವಿಚಿತ್ರವನ್ನು ನೋಡಿರಿ. ಈ ಅಕ್ಕ ನಂಟರಿಗೆ ತಿಳಿಯದೆ ನನಗೆ ಗೊತ್ತಾಗದೆ, ಮೊದಲು ಜಿನಪೂಜೆ ಮಾಡದೆ ತಾನೂ ತನ್ನ ಜತೆ ಆಡುವಮಕ್ಕಳೂ ಸೇರಿ. ೧೫. ಮದುವೆ ಮಾಡಿಕೊಂಡಳು. ಈ ನಿಮ್ಮ ಶಿಷ್ಯಳಿಗೆ ಬ್ರಹ್ಮಚರ್ಯವ್ರತವನ್ನು ಕೊಡಿರಿ" ಎನ್ನಲು ವರದತ್ತ ಭಟ್ಟಾರಕರು ನಗುತ್ತ "ನಿನಗೆ ಇಂದು ಮೊದಲುಗೊಂಡು ಬ್ರಹ್ಮಚರ್ಯ ವ್ರತವನ್ನು ಕೊಟ್ಟೆವು" ಎಂದು ಹೇಳಿದರು. 'ಮಹಾಪ್ರಸಾದ' ಎಂದು ನುಡಿದು ಆ ಮಗಳು ವ್ರತವನ್ನು ಹಿಡಿದು ಮನಸ್ಸಿನಲ್ಲಿ ಹೀಗೆ ಯೋಚಿಸಿದಳು. ೧೬. ಬಡವನಿಗೆ ರಾಜ್ಯಲಕ್ಷ್ಮಿ ಲಭಿಸಿದಂತೆ, ಕುರುಡನಿಗೆ ಕಣ್ಣು ಬಂದಂತೆ, ಬಾವಿಯಲ್ಲಿ ಬೀಳುವವನಿಗೆ ಅಡ್ಡವಾದ ಕೊಂಬೆ, ರೋಗದಲ್ಲಿ ನರಳುವವನಿಗೆ ದಿವ್ಯೌಷಧ, ಈ ಸಂಸಾರದಲ್ಲಿ ಪಾಪವಶದಿಂದ ನರಳುವವರಿಗೆ ಒಳ್ಳೆಯ ವ್ರತ, ಇವು ಲಭಿಸಿದರೆ ಪ್ರಪಂಚದಲ್ಲಿ ಅವನೇ ಧನ್ಯ. ೧೭ ವೃಕ್ಷಗಳ ಪೈಕಿ ಶ್ರೀಗಂಧ, ನಕ್ಷತ್ರಗಳಲ್ಲಿ ಚಂದ್ರ, ಪರ್ವತ ಸಮೂಹ

ತರುನಿಕರಂಗಳೊಳ್ಮಲಯಜಂ ಭಗಣಂಗಳೊಳಬ್ಜವೈರಿ ಭೂ
ಧರನಿಚಯಂಗಳೊಳ್ಸುರನಗಂ ದೃಷದಾಳಿಯೊಳ್ಸುರತ್ನಮು
ರ್ವರೆಗಧಿನಾಥರೊಳ್ನೆಗಟ್ದ ಚಕ್ರಿಗಳೆಯ್ದೆ ನಿಳಿಂಪರೊಳ್ಸುರೇ
ಶ್ವರನಿರವೆಂತುಟಂತುಟೆ ಧರಿತ್ರಿಯ ದೇವರೊಳಂ ಜಿನೇಶ್ವರಂ ೧೮

ಗದ್ಯ॥ ಇಂತಾರ್ಗಮಪೂರ್ವಮೆನಿಸಿದ ಜಿನೇಶ್ವರಂ ಮುನ್ನಿನ ಪುಣ್ಯೋದಯದಿಂದೆನಗೆ ಕುಲ ಸ್ವಾಮಿಯಾದಂ ; ಮತ್ತಂ ರೂಪುಂ ಸ್ನೇಹಮುಮುಳ್ಳಸ್ತ್ರೀಯುಂ ಕಾರುಣ್ಯಮುಂ ಕೋಡು ಮುಳ್ಳಾಳ್ದನುಂ ಬೆಳಸುಮಾಜ್ಞೆಯುಮುಳ್ಳದೇಶಮುಂ, ಪಾಲುಂಶೀಲಮುಮುಳ್ಳಾವುಂ, ನಿರ್ವೇಗಮುಂ ವ್ರತಮುಮುಳ್ಳತಪಮುಂ ಶ್ರೀಯುಮಾಯುವುಮುಳ್ಳಬಾಟುಂ, ಶಕ್ತಿಯುಂ ಭಕ್ತಿಯುಮುಳ್ಳ ದಾನಮುಂ ಚೆನ್ನುಂಪೊನ್ನುಂ ಉಳ್ಳ ಸೊಬಗುಂ, ಗಲ್ಲಮುಮದಟುಮುಳ್ಳತೇಜಮುಂ, ತೀರ್ಚುವ ಬುದ್ಧಿಯುಂ ಸತ್ವಮುಂ ಸಮ್ಯಗ್ದರ್ಶನಮುಂ ವ್ರತಮುಮುಳ್ಳ ಪುಣ್ಯಮಂ ಪಡೆಯಲರಿದದುಕಾರಣದಿಂ ೧೯

ಬಾಲತೆಯೊಳ್ದರ್ಶನಮುಂ
ಮೇಲೆನಿಪೀ ವ್ರತಮುಮೊಡನೆ ಸಂಭವಿಸಿದುವಾ
ನಾಲಸ್ಯದಿನಿವನುಟಿದೊಡೆ
ಮೇಲೆನಗಿಂತಪ್ಪಪುಣ್ಯದೊದವಾದಪುದೇ ೨೦

ದಲ್ಲಿ ಮೇರುಪರ್ವತ ಶಿಲೆಗಳಲ್ಲೆಲ್ಲ ಒಳ್ಳೆಯ ರತ್ನ, ರಾಜರಲ್ಲೆಲ್ಲ ಪ್ರಸಿದ್ಧ ಚಕ್ರವರ್ತಿಗಳು, ದೇವರುಗಳಲ್ಲಿ ಸುರೇಂದ್ರ—ಇವರು ಹೇಗೋ ಈ ಲೋಕದ ದೇವರುಗಳಲ್ಲೆಲ್ಲ ಜಿನೇಶ್ವರನು ಹಾಗೆ (ಶ್ರೇಷ್ಠ) ೧೮. ಹೀಗೆ ಯಾರಿಗೂ ಅಪೂರ್ವನಾದ ಜಿನೇಶ್ವರನು ಹಿಂದಿನ ಪುಣ್ಯಾಧಿಕ್ಯದಿಂದ ನನಗೆ ಮನೆದೇವರಾದನು; ಅಲ್ಲದೆ ರೂಪ ಸ್ನೇಹಗಳುಳ್ಳ ಸ್ತ್ರೀಯೂ, ಕಾರುಣ್ಯವೂ ದಾನವೂ ಉಳ್ಳ ರಾಜ, ಬೆಳೆಯೂ ಸುವ್ಯವಸ್ಥೆಯೂ ಉಳ್ಳದೇಶ, ಹಾಲೂ ಶೀಲವೂ ಉಳ್ಳಹಸು, (ತೊಂಡುದನವಲ್ಲ), ವೈರಾಗ್ಯವೂ ವ್ರತವೂ ಉಳ್ಳ ತಪಸ್ಸು, ಐಶ್ವರ್ಯವೂ ಆಯುಸ್ಸೂ ಉಳ್ಳಜೀವನ, ಶಕ್ತಿಭಕ್ತಿಗಳುಳ್ಳ ದಾನ, ಚೆಲುವೂ, ಹೊನ್ನೂ ಉಳ್ಳ ಅಂದ, ವಿಜಯವೂ ಪರಾಕ್ರಮವೂ ಉಳ್ಳ ತೇಜಸ್ಸು, ತೀರಿಸುವ ಬುದ್ಧಿಯೂ ಸತ್ವವೂ ಸಮ್ಯಗ್ದರ್ಶನವೂ ವ್ರತವೂ ಇರುವ ಪುಣ್ಯವನ್ನು ಪಡೆಯುವುದು ಅಸಾಧ್ಯ. ಆದಕಾರಣ ೧೯. ಬಾಲ್ಯದಲ್ಲಿಯೇ ದರ್ಶನವೂ ಶ್ರೇಷ್ಠವಾದ ಈ ವ್ರತವೂ ಒಟ್ಟಿಗೆ ಲಭಿಸಿವೆ. ನಾನು ಸೋಮಾರಿತನದಿಂದ ಇವುಗಳನ್ನು ಬಿಟ್ಟು ಬಿಟ್ಟರೆ ಆಮೇಲೆ ನನಗೆ ಇಂಥ ಪುಣ್ಯಾಧಿಕ್ಯವೊದಗುವುದೇ ? ೨೦. ಕೆರೆಯನ್ನು ಒಡೆದು ತೊರೆಯನ್ನು ತುಂಬುವ, ಮನೆಯನ್ನು ಒಡೆದು

ಗದ್ಯ॥ ಕೆಱೆಯನೊಡೆದು ತೊಱೆಯಂ ತೀವುವ, ಮನೆಯನೞಿದು ಬೇಲಿಯನಿಕ್ಕುವ, ಹಾಸನೞಿದು ಕಂಥೆಯಂ ಪೊಲಿಸುವ, ಮೆದೆಯಂ ಸುಟ್ಟಪರಳಂ ಕುಱುಕುವ, ತುಪ್ಪಮನೊಕ್ಕುಸಗಣಮಂ ಕೊಳ್ವ ಕಸ್ತೂರಿಯಂ ಬಿಸುಟು ಕಿಸಱಂಕೊಳ್ವ, ಬಂಡಾರಮಂ ಈಡಾಡಿ ಕಾಚಂ ಸವರಿಸುವ, ಬಟ್ಟೆಯಂ ಬಿಟ್ಟು ಕಾಡಂ ಪುಗುವ, ಕೆಯ್ಯಂಬಿಟ್ಟು ಪುಲ್ಲಂಕೊಳ್ವ, ಪೊನ್ನಂಬಿಟ್ಟು ಮಸಿಯಂ ಕಟ್ಟುವೆಗ್ಗನಂ ಪೋಲ್ವೆನೀ ದರ್ಶನಮಂ ವ್ರತಮುಮಂ ಬಿಟ್ಟೆನಪ್ಪೊಡೆಂದು ಮನಮಂ ತಿಬ್ಬಂ ಮಾಡಿ ೨೧

ಎಂದು ಮನದೊಳ್ಮಹೋತ್ಸವ
ದಿಂದಂ ಮುನಿಪತಿಗೆ ಭಕ್ತಿಯಿಂ ವಂದಿಸಿ ಪೆ
ರ್ಚಿಂದಂ ಗೃಹಕ್ಕೆ ಬೇಗಂ
ಬಂದು ಮನೋಮುದದಿನಂಬುಜಾನನೆಯಿರ್ದಳ್ ೨೨

ಗದ್ಯ॥ ಇರ್ಪುದುಂ ಮನೆಯವರೆಲ್ಲರ ಪ್ರಹಸನದಿಂದಂ ಬ್ರಹ್ಮಚಾರಿಯೆಂಬ ಪೆಸರೆ ಪ್ರಸಿದ್ಧಮಾಗೆ ೨೩

ಸಿಸುವಂ ತಾಯೊಕ್ಕಲಿಗಂ
ಸಸಿಯಂ ನೆಲನಂ ಮಹೀಭುಜಂ ಕಡುಲೋಭಂ
ಕಸವರಮಂ ಭೀತಂ ತ
ನ್ನಸುವಂ ನೆಱೆಶೀಲಮಂ ಮಹಾಸತಿಯಪ್ಪಳ್ ೨೪

ಗದ್ಯ॥ ರಕ್ಷಿಸುವಂದದಿ ೨೫

ಬೇಲಿಹಾಕುವ, ಹಾಸಿಗೆಯನ್ನು ಹರಿದು ಕಂತೆಯನ್ನು ಹೊಲಿಸುವ. ಪೈರಿನ ಮೆದೆಯನ್ನು ಸುಟ್ಟು ಅರಳನ್ನು ತಿನ್ನುವ, ತುಪ್ಪವನ್ನು ಚೆಲ್ಲಿ ಸಗಣಿಯನ್ನು ತೆಗೆದುಕೊಳ್ಳುವ, ಕಸ್ತೂರಿಯನ್ನು ಬಿಸಾಟು ಕೆಸರನ್ನು ತೆಗೆದುಕೊಳ್ಳುವ, ಭಂಡಾರವನ್ನು ತ್ಯಜಿಸಿ ಕಾಚನ್ನು ಜೋಡಿಸುವ, ದಾರಿಯನ್ನು ಬಿಟ್ಟು ಕಾಡನ್ನು ಪ್ರವೇಶಿಸುವ, ಗದ್ದೆಯನ್ನು ಬಿಟ್ಟು ಹುಲ್ಲನ್ನು ಹಿಡಿಯುವ, ಹೊನ್ನನ್ನು ಬಿಟ್ಟು ಮಸಿಯನ್ನು ಹಿಡಿಯುವ ದಡ್ಡನಂತೆ, ಈ ದರ್ಶನವನ್ನೂ ವ್ರತವನ್ನೂ ಬಿಟ್ಟೆನಾದರೆ ನಷ್ಟಪಡುತ್ತೇನೆ ಎಂದು ಮನಸ್ಸನ್ನು ಗಟ್ಟಿಮಾಡಿ ೨೧. ಮನಸ್ಸಿನಲ್ಲಿ ಮಹಾಸಂಭ್ರಮಪಟ್ಟು ಮುನಿಪತಿಗೆ ಭಕ್ತಿಯಿಂದ ನಮಸ್ಕಾರ ಮಾಡಿ ಉತ್ಸಾಹದಿಂದ ಮನೆಗೆ ಬಂದು ಆ ಕಮಲಮುಖಿ ಸಂತೋಷದಿಂದಿದ್ದಳು ೨೨. ಮನೆಯವರೆಲ್ಲರೂ ಹಾಸ್ಯದಿಂದ ಅವಳನ್ನು 'ಬ್ರಹ್ಮಚಾರಿ' ಎಂದು ಕರೆಯಲು ಅದೇ ವಾಡಿಕೆಗೆ ಬಂತು ೨೩. ಮಗುವನ್ನು ತಾಯಿ ರಕ್ಷಿಸುವಂತೆ, ಒಕ್ಕಲಿಗ ಸಸಿಯನ್ನೂ ರಾಜ್ಯವನ್ನು ದೊರೆಯೂ, ಮಹಾಲೋಭಿಯು ಬಂಗಾರವನ್ನೂ ಅಂಜಿದವನು ತನ್ನ ಪ್ರಾಣವನ್ನೂ ರಕ್ಷಿಸಿಕೊಳ್ಳುವ ಹಾಗೆ, ಮಹಾಪತಿವ್ರತೆ ತನ್ನ ಶೀಲವನ್ನು ಕಾಪಾಡಿಕೊಳ್ಳುವಂತೆ ೨೪. ೨೫. ಐದುವರ್ಷ ವಯಸ್ಸಿನಿಂದ ತೊಡಗಿ ಹನ್ನೆರಡು ವರ್ಷಗಳವರೆಗೆ ಅರಳಿದ ಕಮಲ

ಸನ್ನುತಗುಣಗಣನಿಳಯೆ ಮ
ಹೋನ್ನತೆ ಬಿಡದೈದುವರ್ಷದಿಂ ತೊಡಗಿ ಕರಂ
ಪನ್ನೆರಡಬ್ದಂವರೆಗಂ
ಭಿನ್ನಾಂಬುಜವದನೆ ರಕ್ಷಿಸುತ್ತುಂ ವ್ರತಮಂ ೨೬

ಗದ್ಯ॥ ಇರ್ದೊಂದು ದಿನಂ ಪೆಱಗಣನಂದನವನದೊಳ್ ಪೊೞ್ತುಪೋಗಿಂಗೆ ಪರಿಚಾರಕಿಯರುಂ ತನ್ನೊಡನಾಡುವ ಕುವರಿಯರುಂ ಬೆರಸುಪೋಗಿ ಮನಕ್ಕೆ ಬಂದ ಪೂವಿನಾಭರಣಮಂ ತೊಟ್ಟು ಚೂತಮಹೀಜದ ಕೆಳಗಣ ಪೊನ್ನುಯ್ಯಲನೇಱಿ ೨೭

ಅಳಿನಿನಾದಮುಮುಯ್ಯಲಧ್ವನಿಯುಂ ಮನೋಹರಮಪ್ಪಿನಂ
ಜಳಜನೇತ್ರೆಯರೊಯ್ಯನೊಯ್ಯನೆ ತೂಗುತುಂ ನೆರೆದೊಂದಿ ಕೋ
ಮಳನಿನಾದದಿನಾದಿದೇವರ ವಸ್ತುರೂಪ ಗುಣಸ್ತವಂ
ಗಳನೆ ಪಾಡೆ ವಿನೋದದಿಂ ತರಳಾಕ್ಷಿಯಾಡುತುಮಿರ್ಪಿನಂ ೨೮

ಗದ್ಯ॥ ವಿಜಯಾರ್ಧಪರ್ವತದ ದಕ್ಷಿಣಶ್ರೇಣಿಯ ಕಿನ್ನರಗೀತಮೆಂಬ ಪೊೞಲನಾಳ್ವ ಕುಂಡಲಮಂಡಿತನೆಂಬ ವಿದ್ಯಾಧರಂ ತನ್ನಗ್ರಮಹಿಷಿ ಸುಕೇಶಿನಿವೆರಸು ಆಕಾಶಮಾರ್ಗದೊಳ್ ಕಾಮವಿಹಾರಾರ್ಥಂ ಬರುತ್ತುಂ ಉಯ್ಯಲಾಡುತ್ತುಮಿರ್ಪನಂತಮತಿ ಕುಮಾರಿಯಂ ತೊಟ್ಟನೆ ಕಾಣ್ಬುದುಂ ೨೯

ದಂಥ ಮುಖವುಳ್ಳ ಆ ಗುಣ ಶ್ರೇಷ್ಠಳಾದ ಅನಂತಮತಿಯು ಬ್ರಹ್ಮಚರ್ಯವ್ರತವನ್ನು ರಕ್ಷಿಸಿಕೊಂಡಿದ್ದಳು. ೨೬. ಒಂದು ದಿನ ಹಿಂದಿನ ನಂದನೋದ್ಯಾನದಲ್ಲಿ ಹೊತ್ತುಹೋಗುವುದಕ್ಕೆಂದು ಸೇವಕಿಯರೂ ತನ್ನೊಡನಾಡಿಗಳಾದ ಕುಮಾರಿಯರೂ ಒಟ್ಟಿಗೆ ಹೋಗಿ ತಮಗೆ ಮೆಚ್ಚಿಗೆಯಾದ ಪುಷ್ಪಾಭರಣಗಳನ್ನು ಧರಿಸಿ ಮಾವಿನ ಮರದಕೆಳಗೆ ಹೊನ್ನುಯ್ಯಾಲೆಯನ್ನೇರಿ ೨೭. ದುಂಬಿಗಳ ಝೇಂಕಾರವೂ ಉಯ್ಯಾಲೆಯ ಸದ್ದೂ ಸೇರಿ ಬಹಳ ಹಿತವಾಗಿರಲು ಆ ಕಮಲಮುಖಿಯರು ಮೆಲ್ಲಮೆಲ್ಲಗೆ ತೂಗಿಕೊಳ್ಳುತ್ತ ಕೋಮಲಕಂಠ ಧ್ವನಿಯಲ್ಲಿ ಸಾಮೂಹಿಕವಾಗಿ ಆದಿದೇವರ ಕಥೆ, ರೂಪ, ಗುಣಗಳ ಸ್ತೋತ್ರಗಳನ್ನು ಹಾಡುತ್ತಿದ್ದರು. ೨೮. ಆಗ ವಿಜಯಾರ್ಧಪರ್ವತದ ದಕ್ಷಿಣಶ್ರೇಣಿಯ ಕಿನ್ನರಗೀತಮೆಂಬ ಪಟ್ಟಣವನ್ನು ಆಳುವ ಕುಂಡಲಮಂಡಿತನೆಂಬ ವಿದ್ಯಾಧರನು ತನ್ನ ಹಿರಿಯ ಹೆಂಡತಿ ಸುಕೇಶಿನಿಯನ್ನೂ ಜತೆಯಲ್ಲಿ ಕರೆದುಕೊಂಡು ಆಕಾಶಮಾರ್ಗದಲ್ಲಿ ಕಾಮವಿಹಾರಕ್ಕಾಗಿ ಬರುತ್ತ ಉಯ್ಯಾಲೆಯಾಡುತ್ತಿದ್ದ ಅನಂತಮತಿ ಕುಮಾರಿಯನ್ನು ತಟ್ಟನೆ ಕಾಣಲು ೨೯. ವಿರಹಾಗ್ನಿವ್ಯಾಪಿಸಿತು. ಆ ಖೇಚರರಾಜನು ಸುಡುವ ಜ್ವರ ಬಂದಂತೆ ಆಗ ದೇಹ

ವಿರಹಾನಲನಳುಱೆ ವಿಯು
ಚ್ಚರರಾಜಂ ನಿಲಿಸಲಾಱದೊಡಲಂ ದಾಹ
ಜ್ವರಮಾದರಂತೆ ಕಾಯ್ದುಂ
ದುರಿಯುತ್ತುಂ ಬೆಯ್ವ ಶೈಲಮಿರ್ಪತಿರ್ದಂ ೩೦

ಅರಲ ಸರಲೈದೆಂಬರ್ಕಾಮಂಗೆ ಲೋಕದ ಮಾನಿಸರ್
ತೊಲಗದರಲಂಬಾತಂಗೈದಪ್ಪೊಡೆನ್ನನೆ ಪೋಗದ
ಗ್ಗಲಿಸಿ ನಡುವಂಬೋವೋವತ್ಯದ್ಭುತಂ ಶತಕೋಟಿಗಂ
ಪಲವುಪಲವೆಂದಾಗಳ್ವಿದ್ಯಾಧರಂ ಮನಮಿಕ್ಕಿದಂ ೩೦

ಇವಳ ಕಡೆಗಣ್ಣೆಂಬೀ ಲೇಸಪ್ಪ ಕೂರ್ಪಿನ ಬಾಣದಿಂ
ದಿವಳಮುಖಮೆಂಬಗ್ಗಂಬೆತ್ತಿರ್ದಪೆಂಪಿನ ಚಕ್ರದಿಂ
ದಿವಳ ನಳಿತೋಳೆಂಬೀತೀವ್ರಾಸಿಯಿಂ ಸ್ಮರನಂಜಿಪಂ
ಕುವಿಟನದಟಂದೆನ್ನಂ ತಾನೊರ್ವನಂಜಿಸಲಾರ್ಪನೇ ೩೨

ಗದ್ಯ॥ ಎಂದು ಕಾಮಸಂತಾಪದಿಂ ಪಲುಂಬಿಪಂಬಲಿಸುತ್ತುಂ ಪೆಂಡತಿಯಪ್ಪ ಸುಕೇಶಿನಿ ತನ್ನೊಡನಿರ್ದಳಪ್ಪುದಱಿಂ ನೆಲಕ್ಕಿೞಿದು ಕುಮಾರಿಯಲ್ಲಿಗ್ಗೆ ಪೋಗಲಣ್ಮದೆ, ಕುದಿವಕೂಟಂತೆ ಕುದಿದು ದಗೆಯೇಱಿದ ಕೋಡಗದಂತೆ ಬೆಱಗಾಗಿ ಬಾಣತಿಸೂಳೆಯಂತೆ ಸಿಡಿಮಿಡಿಗೊಂಡು ತಳಾ ಱನಂಕಂಡ ಕಳ್ಳನಂತೆ ಕುಸಿದು ಪೇಳಿಗೆಯೊಳಗಣ ಪಾವಿನಂತುಮ್ಮಳಿಸಿ ಬೇಸಗೆಯ ಸೂರ್ಯನಂತೆ

ತಾಪವನ್ನು ತಾಳಿಕೊಳ್ಳಲಾರದೆ ದೇಹಶಾಖದಿಂದ ಬೇಯುವ ಬೆಟ್ಟದಂತೆ ಆದನು. ೩೦. "ಕಾಮನಿಗೆ ಐದು ಹೂಬಾಣಗಳೆಂದು ಲೋಕದ ಮನುಷ್ಯರು ಹೇಳುತ್ತಾರೆ. ಆತನಿಗೆ ಅಕ್ಷಯವಾದ ಐದು ಬಾಣಗಳಿದ್ದರೆ ಓವೋ ಆವನು ನನ್ನ ದೇಹದಲ್ಲಿಯೇ ನೂರು ಕೋಟಿಗಿಂತ ಬಹಳ ಹೆಚ್ಚಿನ ಬಾಣಗಳನ್ನು ಹೊಡೆಯುತ್ತಿದ್ದಾನೆ. ಇದು ಬಹಳ ಆಶ್ಚರ್ಯ" ಎಂದು ಆ ವಿದ್ಯಾಧರನು ಮನದಲ್ಲಿ ನೊಂದನು ೩೧. ಇವಳ (ಅನಂತಮತಿಯ) ಕಡೆಗಣ್ಣೆಂಬ ಈ ಶ್ರೇಷ್ಠವಾದ ಹರಿತವಾದ ಬಾಣದಿಂದ, ಇವಳ ಮುಖವೆಂಬ ಶ್ರೇಷ್ಠವೂ ಶಕ್ತಿಯುತವೂ ಆದ ಚಕ್ರಾಯುಧದಿಂದ, ಇವಳ ದೀರ್ಘಬಾಹುಗಳೆಂಬೀ ಹರಿತ ಖಡ್ಗದಿಂದ ಮನ್ಮಥ ಅಂಜಿಸುತ್ತಿದ್ದಾನೆ. ಅಲ್ಲದೆ, ಆ ಕುವಿಟನು ತಾನೊಬ್ಬನೇ ಪರಾಕ್ರಮದಿಂದ ನನ್ನನ್ನು ಅಂಜಿಸಲು ಶಕ್ತನೆ ? ೩೨. ಎಂದು ಕಾಮಸಂತಾಪದಿಂದ ಗೋಳಾಡಿ ಹಂಬಲಿಸುತ್ತ, ಹೆಂಡತಿಯಾದ ಸುಕೇಶಿನಿ ತನ್ನ ಪಕ್ಕದಲ್ಲಿಯೇ ಇದ್ದಳಾದ್ದರಿಂದ ಆಗಲೇ ನೆಲಕ್ಕೆ ಇಳಿದು ಆ ಕುಮಾರಿಯ ಬಳಿಗೆ ಹೋಗಲು ಧೈರ್ಯವಿಲ್ಲದೆ; ಬೇಯುವ ಅಕ್ಕಿಯಂತೆ ಕುದಿದು ಸಂಕಟಪಟ್ಟು ದಗೆಯೇರಿದ ಕೋತಿಯ ಹಾಗೆ ಬೆರಗಾಗಿ, ಬಾಣಂತಿಯಾದ ಸೂಳೆಯ ಹಾಗೆ ಸಿಡುಕುತ್ತ, ತಳವಾರನನ್ನು ಕಂಡ ಕಳ್ಳನಂತೆ ಕುಸಿದು, ಬುಟ್ಟಿಯೊಳಗಿನ ಹಾವಿನಂತೆ ಉಮ್ಮಳಿಸಿ, ಬೇಸಗೆಯ ಕಾಲದ

ಕಾಯ್ದು ಪಿರಿದಾಗಿ ತೆಱುವ ಒಕ್ಕಲಂತೆ ನೆಲನಂ ನೋಡಿ ನೀರ್ವಡೆಯದ ಗಿಡುವಿನಂತೆ ಮುಖಂ ಬಾಡಿ ಎಣ್ಣೆಮುಟ್ಟಿದ ಕುಂಬಳಕಾಯಂತೆ ಒಳಗೊಳಗೆ ಕೊೞೆತು ಕುದಿವ ನೀರಂತೆ ಮುಱುಗಿ ದರಿಯುಮರದಂತಲ್ಲಾಡಿ ಆನೆಯ ಪರಿಕಾಱನಂತೆ ಪಲವಂ ಚಿಂತಿಸಿ ಕಳನನೇಱಿದಂಕದವನಂತೆ ಚೆಱಗಂ ನೋಡಿ ಬಕವೇಸಿತನದಿಂದೊಡಲ ಸೂಡಿಂಗಿರಲಾಱದೆ ಪುಸಿಗೂರ್ಮೆಯಿಂದೋಪಳ ನಪ್ಪಿಕೊಂಡು ಮೆಲ್ಲನಿಂತೆಂದಂ : ೩೩

ಇತ್ತಲಪ್ಪೊಡೆ ನಮ್ಮ ಕಾಣದ ನಾಡುಗಳ್ಪಲವಿಲ್ಲ ಕೇ
ಳಿತ್ತಲೇವುದೊ ಪೊಕ್ಕು ನಾಳೆ ವಿನೋದದಿಂದೊಡನಿರ್ವರುಂ
ಮುತ್ತಿನಾಭರಣಂಗಳಂ ನೆಱೆತೊಟ್ಟು ಚೀನಮನುಟ್ಟು ಕೇ
ಳುತ್ತರಾಶೆಗೆ ಪೋಗಿ ಭೋಗಿಸುವಂ ಸುರೇಂದ್ರಗಿರೀಂದ್ರದೊಳ್ ೩೪

ಗದ್ಯ॥ ಎಂದು ಕೃತಕವಚನದಿಂ ನಂಬೆನುಡಿದು ಪೊೞಲ್ಗೆ ಪೋಗಿ ಮಂದಿರಮಂ ಪೊಕ್ಕು ನಲ್ಲಳಂ ವಂಚಿಸಿ ಪೋಪಬಗೆಯುಂ ನೆನೆದು, ಸುಕೇಶಿನಿಗೆ ಮಣಿಕುಂಡಲಮಂಡಿತನಿಂತೆಂದಂ : ೩೫

ನೀನಿಲ್ಲಿರಲ್ ಮೇರುನಗ
ಕ್ಕಾನೊರ್ವನೆ ಪೋಗಿಬಂದಪೆಂ ರಮಣೀಯ
ಸ್ಥಾನಂಗಳಿಡೆಯಱಿದೆಂ
ದಾ ನೀರೆಗೆ ಕೂರ್ಪನಂತೆ ನುಡಿದಾಖಚರಂ ೩೬

ಸೂರ್ಯನೋಪಾದಿಯಲ್ಲಿ ಕಾದು, ಹೆಚ್ಚಾಗಿ ತೆರಬೇಕಾದ ಒಕ್ಕಲಿಗನಂತೆ ನೆಲವನ್ನೇ ನೋಡುತ್ತ, ನೀರಿಲ್ಲದ ಗಿಡದಂತೆ ಮುಖಬಾಡಿ ಎಣ್ಣೆತಗಲಿದ ಕುಂಬಳ ಕಾಯಿಯಂತೆ ಒಳಗೇ ಕೊಳೆತು ಕುದಿವ ನೀರಿನ ಹಾಗೆ ಮರುಗಿ (ಸಂಕಟಪಟ್ಟು) ಹಳ್ಳದಲ್ಲಿನ ಮರದಂತೆ ಅಲ್ಲಾಡಿ ಆನೆಯ ಹರಿಕಾರನ ಹಾಗೆ' ಹಲವು ಯೋಚನೆಗಳಿಗೆ ಗುರಿಯಾಗಿ ಯುದ್ಧರಂಗವನ್ನೇರಿದ ವೀರನಂತೆ ಅಕ್ಕಪಕ್ಕಗಳನ್ನು ನೋಡಿ ಬಕವೇಷದಿಂದ ದೇಹತಾಪಕ್ಕೆ ತಾಳಲಾರದೆ ಸುಳ್ಳು ಪ್ರೀತಿಯ ನಟನೆಯಿಂದ ತನ್ನ ಪ್ರಿಯಳನ್ನು ಅಪ್ಪಿಕೊಂಡು ಹೀಗೆ ಹೇಳಿದನು ೩೩. "ಈಕಡೆ ನಾವು ಕಾಣದ ಪ್ರಾಂತಗಳು ಅನೇಕವಾಗಿಲ್ಲ: ಈಕಡೆ ಹೋಗಿ ಏನು ಲಾಭ ? ನಾಳೆ ವಿನೋದದಿಂದ ಇಬ್ಬರೂ ಜತೆಯಾಗಿ ಮುತ್ತಿನಾಭರಣಗಳನ್ನು ತೊಟ್ಟು ಚೀನಾಂಬರಗಳನ್ನುಟ್ಟು ಉತ್ತರ ದಿಕ್ಕಿಗೆ ಹೋಗಿ ದೇವೇಂದ್ರ ಪರ್ವತದ ಮೇಲೆ ವಿನೋದವಿಹಾರ ಮಾಡೋಣ" ೩೪. ಎಂದು ಮೋಸದ ಮಾತಿನಿಂದ ನಂಬಿಸಿ ಹೇಳಿ ಪಟ್ಟಣಕ್ಕೆ ಹಿಂತಿರುಗಿ ಮನೆಯನ್ನು ಸೇರಿ ತನ್ನ ಪ್ರಿಯಳನ್ನು ಮೋಸಪಡಿಸಿ ಹೊರಡುವ ಉಪಾಯವನ್ನು ಯೋಚಿಸಿ ಸುಕೇಶಿನಿಗೆ ಕುಂಡಲ ಮಂಡಿತನು ಹೀಗೆಂದನು ೩೫. ''ನೀನು ಇಲ್ಲಿದ್ದರೆ ಮೇರು ಪರ್ವತಕ್ಕೆ ನಾನೊಬ್ಬನೇ ಹೋಗಿ ಸುಂದರ ಸ್ಥಾನಗಳನ್ನು ಪತ್ತೆಮಾಡಿಕೊಂಡು ಬರುತ್ತೇನೆ. ಎಂದು ಆ ಸುಂದರಿಗೆ ಪ್ರೇಮಿಕನ ಹಾಗೆ ಮಾತನಾಡಿ ಆ ಖೇಚರನು ೩೬. ವಿಮಾನಪತ್ತಿ ಪಟ್ಟಣದಿಂದ

ವಿಮಾನವನೇಱಿ ಪುರಮಂ ಪೊಱಮಟ್ಟು ಬಡಗಣ ದೆಸೆಗೆ ತನ್ನ ಪೋಗಂ
ತೋಱಿ ಕಿಱಿದೆಡೆಯಂ ಪೋಗಿ ಮಗುಳ್ದು ತೆಂಕಮುಖನಾಗಿ ಮರುಜ್ಜವದಿಂ
ಚಂಪಾಪುರಕ್ಕೆ ಬಂದುಯ್ಯಲನೇಱಿರ್ದನಂತಮತಿಯಂ ತನ್ನ ವಿಮಾನ
ದೊಳೇಱಿಸಿಕೊಂಡು ಆಕಾಶಕ್ಕೆ ನೆಗೆದು ಕನ್ಯೆಯ ರೂಪಂ ನೋಡಿ ೩೭

ಎಳಲತೆಯಿನೆ ಬಿದಿ ಲೋಕಮ
ನಳಲಿಸಲೆಂದರ್ಪಿವಟ್ಟು ವನಿತಾರೂಪಂ
ಗಳಯಿಸಿದನಱಿದೆನಲ್ಲದೊ
ಡುಳಿದಂತಂಗನೆಯರಿಂತು ಚೆಲ್ವೆಯರೊಳರೇ ೩೮

ಕಂತುವಿನಾರಾಧಿಪ ದೈ
ವಂ ತಡೆಯದೆ ಕಾಮನಿಸುವ ಸರಲೆನಿಸಿರ್ದಾ
ಕಾಂತೆ ದೊರೆಕೊಂಡಳೆನಗೆ
ನ್ನಂತಾವಂ ಸ್ತ್ರೀಗೆ ನೋಂತವಂ ಖೇಚರರೊಳ್ ೩೯

ಗದ್ಯ॥ ಮತ್ತಂ ಲೋಕದೊಳ್ನೋಡದ ಪೆಂಡಿರಿಲ್ಲ ಆಡುಮುಟ್ಟದ ಗಿಡುವಿಲ್ಲ ; ಈ ಕಾಂತೆ ಯಂತೆ ಚೆಲ್ವೆಯಂ ಕನಸಿನೊಳಪ್ಪೊಡಂ ಕಂಡಱಿಯೆಂ. ೪೦

ಹೊರಟು ಕೊಂಚ ದೂರ ಉತ್ತರಕ್ಕೆ ಹೋಗಿ ಆಮೇಲೆ ದಕ್ಷಿಣಕ್ಕೆ ತಿರುಗಿ ಚಂಪಾಪುರ ವನ್ನು ತಲಪಿ ಉಯ್ಯಾಲೆಯನ್ನೇರಿದ್ದ ಅನಂತಮತಿಯನ್ನು ತನ್ನ ವಿಮಾನಕ್ಕೆ ಹತ್ತಿಸಿ ಕೊಂಡು ಆಕಾಶಕ್ಕೆ ಹಾರಿ ಕನ್ಯೆಯ ರೂಪವನ್ನು ನೋಡಿದನು ೩೭. "ಸೃಷ್ಟಿಕರ್ತನು ಈ ಲೋಕವನ್ನು ಸಂಕಟ ಪಡಿಸುವುದಕ್ಕೆಂದೇ ಈ ವನಿತೆಯ ರೂಪವನ್ನು ಸೃಷ್ಟಿಸಿದನು. ಎಳೆಯ ಬಳ್ಳಿಯಿಂದ ಇವಳನ್ನು ಮಾಡಿರಬೇಕು. ಈಗ ತಿಳಿಯಿತು. ಇಲ್ಲದಿದ್ದರೆ ಅಂಗನೆಯರಿಗೆ ಇಂಥಾ ಚೆಲುವು ಉಂಟೆ ? ೩೮. ಮನ್ಮಥನ ಆರಾಧ್ಯದೇವತೆ ಇರ ಬೇಕು, ಇವಳು, ಮನ್ಮಥನು ಹೊಡೆಯುವ ಬಾಣವೆನ್ನಿಸುವಂಥ ಈ ಕಾಂತೆ ನನಗೆ ಲಭಿಸಿದಳು. ಖೇಚರರಲ್ಲಿ ನನ್ನ ಹಾಗೆ ಸ್ತ್ರೀಭಾಗ್ಯವನ್ನು ಪಡೆದುಕೊಂಡವರು ಯಾರಿದ್ದಾರೆ? ೩೯. ಅಲ್ಲದೆ ಲೋಕದಲ್ಲಿ ನಾನು ನೋಡದಿರುವ ಹೆಂಗಸರಿಲ್ಲ. ; ಆಡು ಮುಟ್ಟದ ಗಿಡವಿಲ್ಲ. ಆದರೆ ಈ ಕಾಂತೆಯ ಹಾಗೆ ಸುಂದರಿಯನ್ನು ಕನಸಿನಲ್ಲಿಯೂ ನೋಡಿ ಅರಿಯೆ ೪೦. ಲಕ್ಷ್ಮಿಯಲ್ಲಿನ ಶ್ರೇಷ್ಠವಾದ ರೂಪವನ್ನೂ ಇಂದ್ರನ ಕಾಂತೆ

ಸಿರಿಯೊಳೊಪ್ಪುವ ರೂಪನಿಂದ್ರನ ಕಾಂತೆಯೊಳ್ಕಡು ಚೆಲ್ವನಂ
ಬುರುಹದೊಳ್ಮುಖಬಿಂಬಮಂ ಶಿಶುಚಂದ್ರನೊಳ್‌ನೊಸಲಂ ಮೃಗೇ
ಶ್ವರನೊಳ್ನಡುವಂ ಮನೋಜನ ಬಾಣದೊಳ್ಬೆರಲಂ ಮನೋ
ಹರಿಯಿವಳ್ಸೆಱೆಗೊಂಡಳೋ ನೆಱೆ ಸೂಱೆಗೊಂಡಳೊ ಪೇೞಿದಂ ೪೧

ಗದ್ಯ॥ ಎಂದು ಕುಮಾರಿಯ ಹಾವಭಾವವಿಲಾಸವಿಭ್ರಮಂಗಳಂ ನೋಡಿ ತನ್ನೊಳ್ ಪೊಗೞುತ್ತುಂ ಮನದೊಳ್ ಸಂತಸದಂತಮನೆಯ್ದಿ ನೋಡುತ್ತುಮಿರ್ಪನ್ನೆಗಮನಂತಮತಿ ಕುಮಾರಿ ೪೨

ನಯದಿಂ ಜಿನೇಂದ್ರ ಚರಣ
ದ್ವಯಮಂ ಚಿತ್ತದೊಳೆ ನಿಲಿಸಿ ಶೌಚಕ್ಕೆನಗಿಂ
ನಿಯತಂ ವೇಳೆಯೆನುತ್ತುಂ
ಭಯದಿಂದಂ ನೋಡೆ ನಾಡೆ ನಡುಗುತ್ತಿರ್ದಳ್ ೪೩

ಗದ್ಯ॥ ಅಂತು ಪೆಣನಂ ಕಂಡ ಪಂದೆಯಂತೆಯಂಜುತ್ತುಂ ರೌದ್ರನಂ ಕಂಡ ಸಾಧುವಿನಂತೆ ಮಿಡುಕಲಣ್ಮದೆ ನೆಲನಂ ನೋಡುತ್ತುಂ ಚಿಟ್ಟಿದನಪ್ಪರಸಿನ ನಾಡಂತೆ ಬೆಬ್ಬಳಿಸುತ್ತುಂ ಎಱೆಯ ಕೆಱೆಯಂತೆ ಮೊಗಂ ನೀರೋಡುತ್ತುಂ ಮಕ್ಕಳಂತೆ ವಿಮಾನಮಂ ಬಿಡದೆ ಪತ್ತುತ್ತುಂ ಮಹಾ ಮಂತ್ರಿಯಂತೆ ವ್ರತರಕ್ಷಣೋಪಾಯಮಂ ಚಿಂತಿಸುತ್ತುಂ ಬೋಜಂಗಂಗೆ ಬೇಸತ್ತ ಸೂಳೆಯಂತೆ

ಶಚಿಯಲ್ಲಿನ ವಿಶೇಷ ಚೆಲುವನ್ನೂ, ಕಮಲದಲ್ಲಿ ಮುಖ ಬಿಂಬವನ್ನೂ ಬಾಲಚಂದ್ರ ಮಂಡಲದಿಂದ ಹಣೆಯನ್ನೂ ಸಿಂಹದ ನಡುವನ್ನೂ ಮನ್ಮಥನ ಬಾಣಗಳಿಂದ ಬೆರಳು ಗಳನ್ನೂ ಈ ರಮಣಿಯು ಸೆರೆಹಿಡಿದಳೊ, ಸೂರೆ ಮಾಡಿಕೊಂಡಳೊ" ೪೧. ಎಂದು ಆ ಕುಮಾರಿಯ ಹಾವ ಭಾವ ವಿಲಾಸ ವಿಭ್ರಮಗಳನ್ನು ನೋಡಿ ತನ್ನೊಳಗೇ ಹೊಗಳಿ ಕೊಳ್ಳುತ್ತ, ಮನಸ್ಸಿನನಲ್ಲಿ ಸಂತೋಷದ ತುಟ್ಟತುದಿಯನ್ನೇರಿ,ಅವಳನ್ನೇ ನೋಡುತ್ತಿರಲು ಆ ಕುಮಾರಿ ೪೨. ಭಕ್ತಿಯಿಂದ ಜಿನೇಂದ್ರನ ಪಾದಗಳನ್ನೇ ಧ್ಯಾನಿಸುತ್ತ, 'ನನಗೆ ಇನ್ನು ಶೌಚಕ್ಕೆ ವೇಳೆಯಾಯಿತು' ಎಂದು ಭಯದಿಂದ ಸುತ್ತಲೂ ನೋಡಿ ನಡುಗುತ್ತಿದ್ದಳು. ೪೩. ಹಾಗೆ ಹೆಣವನ್ನು ಕಂಡ ಹೇಡಿಯ ಹಾಗೆ ಹೆದರಿಕೊಂಡು, ಕ್ರೂರಿಯನ್ನು ನೋಡಿದ ಸಾಧುವಿನಂತೆ ಅಲ್ಲಾಡಲು ಧೈರ್ಯ ಸಾಲದೆ, ನೆಲವನ್ನೇ ನೋಡುತ್ತ ಕಠಿಣ ಚಿತ್ತನಾದ ದೊರೆಯ ರಾಜ್ಯದಂತೆ ಭೀತಿಯಿಂದ ಮರುಳುಗೊಂಡು, ಎರೆನೆಲದ ಕೆರೆಯಂತೆ ಮುಖ ದಲ್ಲಿ ನೀರು ಸುರಿಯುತ್ತ (ಬೆವರುತ್ತ) ಮಕ್ಕಳಂತೆ ವಿಮಾನವನ್ನು ಬಿಡದೆ ಹತ್ತಿಕೊಂಡು ದೊಡ್ಡ ಮಂತ್ರಿಯ ಹಾಗೆ ವ್ರತವನ್ನು ಕಾಪಾಡಿಕೊಳ್ಳುವ ಉಪಾಯವನ್ನು ಕುರಿತು ಯೋಚಿಸುತ್ತ, ವಿಟನ ಮೇಲೆ ಬೇಸರಗೊಂಡ ಸೂಳೆಯ ಹಾಗೆ ವಿಮಾನದ ಒಂದು

ವಿಮಾನದೊಂದೆಸೆಯುಂ ಸೆಮ್ಮುತ್ತುಂ ಮುಳ್ಮುಗದ ಕೆಳಗಿರ್ದ ಲತೆಯಂತೋಸರಿಸುತ್ತುಂ ಸುಂಕಿಗನಂ ಕಂಡ ಭಂಡಮುಳ್ಳನಂತೆ ಸಂಕಿಸುತ್ತುಂ ಆಜ್ಞಾಪರನಪ್ಪರಸಿನಂತೆ ಮನಮಂ ಸಂತೈಸುತ್ತುಂ ಕೂರ್ಪರಂ ನೆನೆವಂತೆ ಜಿನಾಗಮಮಂ ಭಾವಿಸುತ್ತುಂ ಭಯಮುಳ್ಳ ಬಟ್ಟೆಯಂ ಪೋಪರಂತೆ ಇರ್ಕೆಲನಂ ನೋಡುತ್ತುಂ ಕ್ಷಮಾನ್ವಿತೆಯುಂ ಸಾಗರದಂತೆ ಗಂಭೀರೆಯುಮಾಗಿರ್ಪುದುಮತ್ತಲ್ ೪೪

ಶತಪತ್ರಾನನೆ ಖಚರನ
ಸತಿ ಕೂರ್ಪುದಱಿಂದೆ ಖೇಚರೇಂದ್ರನೊಳಾದಾ
ಕೃತಕಮನಱಿಯದೆ ತಡೆದಂ
ಪತಿಯಿದನಾರಯ್ವೆನೆಂದು ಮನದಾದರದಿಂ ೪೫

ಗದ್ಯ॥ ಅವಳೋಕಿನೀ ವಿದ್ಯೆಯಂ ನೆನೆದು ಬರಿಸಿ ಮದ್ವಲ್ಲಭನೇಂ ಕಾರಣದಿಂ ತಡೆದನೋ ಬೇಗವಾರಯ್ದು ಬರ್ಪುದೆಂದು ಪೇೞ್ವುದುಂ ಪೋಗಿ ಖಚರನಿರ್ದೆಡೆಯನಱಿದು ಬಂದು ತದ್ವೃತ್ತಾಂತಮನೊಂದುಗುಂದದಂತೆ ಪೇೞ್ವುದುಂ ಸುಕೇಶಿನಿ ಕೇಳ್ದು ತುಂಬುರುಗೊಳ್ಳಿಯುಂ ಕಂಬದೊಳ್ಪೊಯ್ದಂತೆ ಸಿಡಿಲ್ದು ಕಿಡಿಕಿಡಿವೋಗಿ ೪೬

ಪಕ್ಕವನ್ನೇ ಒರಗಿಕೊಳ್ಳುತ್ತ, ಮುಳ್ಳು ಗಿಡಿದ ಕೆಳಗಿರುವ ಬಳ್ಳಿಯಂತೆ ಪಕ್ಕಕ್ಕೇ ಸರಿಯುತ್ತ, ಸರಕುಳ್ಳವನು ಸುಂಕದವನ್ನು ಕಂಡ ಹಾಗೆ ಅನುಮಾನಿಸುತ್ತ, ಆಜ್ಞಾಪರನಾದ ರಾಜನ ಹಾಗೆ ಮನಸ್ಸನ್ನು ಶಾಂತಗೊಳಿಸಿಕೊಳ್ಳುತ್ತ (ಧೈರ್ಯ ಮಾಡುತ್ತ) ಪ್ರೀತಿಸುವವರನ್ನುಸ್ಮರಿಸುವ ಹಾಗೆ ಜಿನಾಗಮವನ್ನು ಧ್ಯಾನಿಸುತ್ತ, ಭಯಾಸ್ಪದವಾದ ದಾರಿಯಲ್ಲಿ ಹೋಗುವವರ ಹಾಗೆ ಎರಡು ಕಡೆಯೂ ನೋಡುತ್ತ ಅನಂತಮತಿಯು ಕ್ಷಮಾಯುಕ್ತಳೂ ಸಮುದ್ರದಂತೆ ಗಂಭೀರಳೂ ಆಗಿದ್ದಳು ೪೪. ಅತ್ತ ಖೇಚರ ಶ್ರೇಷ್ಠನ ಹೆಂಡತಿ ಅವನನ್ನು ಪ್ರೀತಿಸುವವಳಾದ್ದರಿಂದ ಅವನಲ್ಲಿ ಅಂದು ಉಂಟಾಗಿದ್ದ ಕೃತ್ರಿಮವನ್ನು ತಿಳಿಯದೆ "ನನ್ನ ಗಂಡ ಏಕೋ ತಡಮಾಡುತ್ತಿದ್ದಾನೆ. ಇದೇಕೆಂದು ವಿಚಾರ ಮಾಡಬೇಕು" ಎಂಬ ಪ್ರೀತಿಯಿಂದ ಆ ಕಮಲಮುಖಿಯು. ೪೫. ತನಗೆ ವಶವಾಗಿದ್ದ ಅವಲೋಕಿನೀ ವಿದ್ಯೆಯನ್ನು ಜ್ಞಾಪಿಸಿಕೊಂಡು, ಕರೆದು, "ನನ್ನ ವಲ್ಲಭನು, ಆದಾವ ಕಾರಣದಿಂದ ಈ ರೀತಿ ತಡೆದಿದ್ದಾನೆಯೆಂಬುದನ್ನು ವಿಚಾರಿಸಿಕೊಂಡು ಬೇಗ ಬಾ" ಎಂದಳು. ಆ ವಿದ್ಯೆ ಕೂಡಲೇ ಹೋಗಿ ಖೇಚರನಿದ್ದ ಸ್ಥಳವನ್ನು ತಿಳಿದು ಬಂದು ಅವನ ಸುದ್ದಿಯನ್ನೆಲ್ಲವನ್ನು ಏನೂ ಬಿಡದೆ ಹೇಳುತ್ತಲೂ ಸುಕೇಶಿನಿ ಕೇಳಿ ತುಂಬುರು ಕೊಳ್ಳಿಯನ್ನು ಕಂಬದಲ್ಲಿ ಹೊಡೆದರೆ ಹೇಗೋ ಹಾಗೆ ಸಿಡಿದು ಸಿಟ್ಟಾಗಿ ಕಿಡಿಕಾರುತ್ತ. ೪೬. "ನನ್ನನ್ನು ಅಸಡ್ಡೆ ಮಾಡಿ ಹೋದ ಖೇಚರನನ್ನೂ ಅವನನ್ನು ಪ್ರೀತಿಸುವ

ಕರಮೆನ್ನನುಱದೆ ಪೋದಂ
ಬರಚರನುಮನವನ ಕೂರ್ಪವನಿತೆಯುಮಂ ಚಿ
ಚ್ಚರದಿಂ ಕೊಲ್ಲದೆ ಮಾಣ್ದೊಡೆ
ಧರೆಯೊಳ್ ಖೇಚರಿಯೆಲ್ಲ ನಾಂ ಗೀಚರಿಯೆಂ ೪೭

ಗದ್ಯ॥ ಎಂದು ರೌದ್ರರೂಪೆಯುಂ ಪಾಪಿಯುಮಪ್ಪುದಱಿಂ ವಜ್ರದಂಡಮನುರದೊಳ ಮರ್ಚಿಕೊಂಡು ಕಿಟ್ಟಿ ಬಾಳ್ವಿರಸು ಬರ್ಪಾಕೆಯಂ ದೂರದೊಳೆ ಕಂಡು ಬೆಗಡುಗೊಂಡು ಕುಂಡಲ ಮಂಡಿತಂ ಬೇಗದಿಂ ಪರ್ಣಲಘುವಿದ್ಯೆಯುಂ ಬರಿಸಿ ನೀನೀ ಕನ್ನೆಯುಂ ನೆಲಕ್ಕಿೞಿಪಿ ಬರ್ಪು ದೆಂಬುದುಂ ತದ್ವಿದ್ಯಾ ದೇವತೆ ೪೮

ವನಜಾನನೆಯಂ ಪಿಡಿದೊ
ಯ್ಯನೆ ವಸುಮತಿಗಿೞಿಪಿ ಭೀಮವನಮೆಂಬ ಮಹಾ
ವನದೊಳಗೆ ಸೊಗಯಿಸುವ ಮಾ
ವಿನ ವನದೊಳಗಿರಿಸಿ ಮರಳಿ ಪೋಪುದುಮಾಗಳ್ ೪೯

ಗದ್ಯ॥ ಪಾಪಿಯ ಮುಖದಂತೆ ಕತ್ತಲಿಪ ಕೊಳಂಗಳಿಂ ಕೋಪಿಯ ಹೃದಯದಂತುರಿವ ಕಾಟ್ಗಿಚ್ಚಿನಿಂ ಕೊಂಡೆಯನಂತೆ ಪತ್ತುವ ಚಕ್ಕಡಿನಿಂ ಕಡುಘಾತಕನಂತೆ ನೋಯಿಸುವ ಪೊನ್ನೊಣಂಗಳಿಂ ಲಜ್ಜೆಗೆಟ್ಟ ಪೆಣ್ಗಳಂತೆ ಮೇಲ್ವಾಯ್ವ ಪೆರ್ಬುಲಿವಿಂಡಿಂ ಧೀರನ ಪೆಂಡಿರಂತೆ

ಹೆಣ್ಣನ್ನೂ ಬೇಗನೆ ಕೊಲ್ಲದೆ ಬಿಟ್ಟರೆ ನಾನು ಖೇಚರಿಯಲ್ಲ —ಗೀಚರಿ" ಎಂದು ನಿರ್ಧರಿಸಿಕೊಂಡಳು ೪೭. ಮಹಾಕ್ರೂರರೂಪೆಯೂ ಪಾಪಿಯೂ ಆದುದರಿಂದ ವಜ್ರದಂಡವೆಂಬ ಆಯುಧವನ್ನು ಎದೆಯಲ್ಲಿ ಜೋಡಿಸಿಕೊಂಡು, ಕಿತ್ತ ಖಡ್ಗದೊಡನೆ; ಬರುತ್ತಿದ್ದ ಆಕೆಯನ್ನು ದೂರದಿಂದಲೇ ನೋಡಿ ಭಯಪಟ್ಟು ಕುಂಡಲಮಂಡಿತನು ಬೇಗನೆ ಪರ್ಣಲಘುವಿದ್ಯೆ (ಯಾವ ವಸ್ತುವನ್ನೇ ಆದರೂ ಒಂದು ಹಗುರವಾದ ಎಲೆ ಯಂತೆ ಸುಲಭವಾಗಿ ಕ್ಷೇಮವಾಗಿ ಕೆಳಕ್ಕೆ ಇಳಿಸುವ ಒಂದು ವಿದ್ಯೆ)ಯನ್ನು ಬರಮಾಡಿ "ಈ ಕನ್ಯೆಯನ್ನು ನೆಲದ ಮೇಲಕ್ಕೆ ಇಳಿಸಿ ಬಾ" ಎಂದು ಹೇಳಿದನು. ಆ ವಿದ್ಯೆಯ ದೇವತೆ ೪೮. ಅನಂತಮತಿಯನ್ನು ಎತ್ತಿಕೊಂಡು ಮೆಲ್ಲನೆ ಭೂಮಿಗೆ ಇಳಿಸಿ ಭೀಮ ವನವೆಂಬ ಮಹಾ ಕಾಡಿನಲ್ಲಿ ರಂಜಿಸುವ ಮಾವಿನತೋಪಿನ ಮಧ್ಯೆ ಇಳಿಸಿ ಹಿಂತಿರುಗಿ ಹೋಯಿತು. ೪೯. ಆಗ ಆ ಕನ್ಯೆ, ಪಾಪಿಯ ಮುಖದ ಹಾಗೆ ಕತ್ತಲಿಸುವ ಕೊಳ ಗಳಿಂದ (ನೀರು ಬಹಳ ಆಳವಾಗಿದ್ದುದರಿಂದ ಕಪ್ಪಗೆ ಕಾಣುತ್ತಿತ್ತೆಂದು ಭಾವ) ಕೋಪಿಷ್ಠನ ಹೃದಯದಂತೆ ಉರಿಯುವ ಕಾಳ್ಕಿಚ್ಚಿನಿಂದ, ಚಾಡಿಕೋರನಂತೆ ಹತ್ತುವ ರೆಕ್ಕೆಹುಳಗಳಿಂದಲೂ, ಕ್ರೂರ ಘಾತಕನಂತೆ ನೋಯಿಸುವ ದೊಡ್ಡ ನೊಣಗಳಿಂದಲೂ ನಾಚಿಕೆಯಿಲ್ಲದ ಹೆಣ್ಣುಗಳ ಹಾಗೆ ಮೇಲೆ ಬೀಳುವ ಹೆಬ್ಬುಲಿಗಳ ಹಿಂಡಿನಿಂದಲೂ ಧೀರನ ಹೆಂಡಿರಂತೆ ಬಾಯಿ ಬಿಡುವ ಸೀಳು ನಾಯಿಗಳಿಂದಲೂ, ಬಡಸೂಳೆಯ ಹಾಗೆ

ಬಾಯ್ವಿಡುವ ಸೀರ್ನಾಯ್ಗಳಿಂ ಬಡಸೂಳೆಯಂತೆ ಬಿಳಿಯ ದಂತಂಗಳಿಂದೊಪ್ಪುವಾನೆಗಳಿಂ ಮಹಾದಾನಿಯ ಕೋಡಿನಂತೆ ಪಲವು ಕೋಡಿನಿಂದೊಪ್ಪುವ ಸಾರಂಗವಿಂಡಿನಿಂ ಬಲ್ಲಿದರೊಡ್ಡಿನಂತೆ ಮಾರ್ಮಲೆವ ಕಾಡೆಮ್ಮೆಗಳಿಂ ಜಿನದ್ರೋಹರ ನರಕಗಮನಮಂ ತೋರ್ಪಂತೆ ಗಿರಿಶಿಖರದಿಂದಿಟಿವ ನೀರ ಧಾರಗಳಿಂ ಕ್ರೂರನ ಮನದಂತೆ ಪೊಗೆವ ದೆಸೆಗಳಂ ಬಿಂಬಿಮ್ಮೆಂಬ ಪೇರಡವಿಯುಂ ನೋಡಿ ೫೦

ಜಳಜಮುಖಿ ನಾಡೆಯುಂ ತ
ಲ್ಲಳದಿಂ ಭೋರೆಂದು ಸುಯ್ದು ತನ್ನಂ ದುಃಖಾ
ನಳನಳುರೆ ತನ್ನೊಳೀದಳ್
ಫಲಮಾದುದು ಮುನ್ನಮೆನ್ನ ಮಾಡಿದ ಕರ್ಮಂ ೫೧

ನಡೆದೊಡೆ ಕಾಲ್ನೊಂದಪುದೆಂ
ದಡಿಗಡಿಗಾರಯ್ದು ತಡೆಯಿಮೆಂದಾಳಿಯರಂ
ಜಡಿವಾ ಜನನಿಯು ಮಯ್ಯನು
ಕಡು ಮೋಹೋದಯದಿನೀಗಳೆಲ್ಲಿರ್ದಪರೋ ೫೨

ಪರಿಚಾರಕಿಯರನೊಪ್ಪಿರೆ
ಕರಮಕ್ಕನ ಮನಮನಱಿದು ಬೆಸಗೆಯ್ವುದು ಚೆ
ಚ್ಚರಮೆಂದು ಪೇಟ್ವ ಮತ್ಸೋ
ದರರಾನಿರಲಿತ್ತಲತ್ತಲಾರ್ಗೆಂದಪರೋ ೫೩

ಬಿಳಿಯ ದಂತಗಳಿಂದೊಪ್ಪುವಾನೆಗಳಿಂದಲೂ, ಮಹಾದಾನಿಯ ದಾನದಂತೆ (ಕೋಡು) ಅನೇಕ ಕೊಂಬುಗಳಿಂದ ಕೂಡಿದ ಸಾರಂಗಗಳಿಂದಲೂ, ಬಲಿಷ್ಠರ ಗುಂಪಿನಂತೆ ಮೇಲೆ ಬೀಳುವ, ಪ್ರತಿಭಟಿಸುವ ಕಾಡೆಮ್ಮೆಗಳಿಂದಲೂ, ಜಿನದ್ರೋಹಿಗಳು ನರಕಕ್ಕೆ ಹೋಗುವುದನ್ನು ತೋರಿಸುವ ಹಾಗೆ ಗಿರಿಶಿಖರಗಳಿಂದ ಇಳಿಯುವ ನೀರಿನ ಧಾರೆಗಳಿಂದಲೂ, ಕ್ರೂರನ ಮನಸ್ಸಿನಂತೆ ಹೊಗೆಯಾಡುವ ದಿಕ್ಕುಗಳಿಂದಲೂ ಬಿಮ್ಮೆನ್ನುವ ದೊಡ್ಡ ಅಡವಿಯನ್ನು ನೋಡಿದಳು. ೫೦. ಆ ಸುಂದರಿಯು ಬಹಳ ಗಾಬರಿಯಿಂದ ನಿಟ್ಟುಸಿರು ಬಿಟ್ಟು ದುಃಖಾಗ್ನಿಯು ತನ್ನನ್ನು ಸುಡುತ್ತಿರಲು ಮನಸ್ಸಿನಲ್ಲಿಯೇ "ನಾನು ಹಿಂದೆ ಮಾಡಿದ ಕರ್ಮ ಈಗ ಫಲಿಸಿತು" ಎಂದುಕೊಂಡಳು ೫೧. ನಡೆದರೆ ಕಾಲು ನೋಯುವುದೆಂದು ಪದೇ ಪದೇ ಜತೆಗಾತಿಯರನ್ನು 'ತಡೆಯಿರಿ' ಎಂದು ಗದರಿಸುತ್ತಿದ್ದ ಆ ತಾಯಿಯೂ ವಿಶೇಷವಾದ ಮೋಹದಿಂದ ಕಾಪಿಡುತ್ತಲಿದ್ದ ತಂದೆಯೂ ಈಗ ಎಲ್ಲಿರುವರೊ! ೫೨. "ಅಕ್ಕನ ಮನಸ್ಸಿನ ಅಭಿಲಾಷೆಯನ್ನು ತಿಳಿದು ಕೆಲಸಮಾಡಿ" ಎಂದು ಪರಿಚಾರಕಿಯರಿಗೆ ವಿವೇಕ ಹೇಳುತ್ತಿದ್ದ ನನ್ನ ಸಹೋದರರು ನಾನು ಇಲ್ಲಿರುವಾಗ ಈಗ ಯಾರಿಗೆ ಹೇಳುವರೋ ? ೫೩. ಮಕ್ಕಳು, ತಂದೆ, ಸ್ನೇಹಿತರು, ಇಷ್ಟರು ಬಂಧು

ತನಯುತರ್ಕಾಯ್ತಂದೆ ಸುಹೃ
ಜ್ಜನವಿಪ್ಪರ್ಬಂಧುವರ್ಗಮಜ್ಜಂ ಪಜ್ಜಂ
ತನುಜರ್ಕಾಂತೆಯರೊಡವು
ಟ್ಟಿನವರ್ ಬೇಱೆಂಬ ಜಿನಮತಂ ತಪ್ಪುಗುಮೇ ೫೪

ತಂತ್ರಂ ಬಹುವಿಧಮಪ್ಪಱಿ
ಮಂತ್ರಂ ನಾನಾ ಪ್ರಕಾರದಿಂದಿರ್ಪ ಮಹಾ
ಯಂತ್ರಂ ಕೇಡಡಸಿದೊಡವು
ಜಂತ್ರದ ಕೀಲ್ಕಳಚಿದಂತೆ ಕಳಕುಳಮಕ್ಕುಂ ೫೫

ಕರಿಸಂದೋಹಂಗಳಶ್ವ ಪ್ರತತಿಗಳದಟಿಂದಿರ್ದ ಬಲ್ಲಾಳ್ಗಳುರ್ವೀ
ಧರಮಂ ಪೊಕ್ಕಿರ್ದ ಬಲ್ಕೋಂಟೆಗಳಕಟಕಟಾ ತಮ್ಮ ರಕ್ಷಿಪ್ಪುವೇಂ ನಿ
ಷ್ಠುರಕೋಪಂ ಕಾಲರಾಜಂ ಮುಸಗಿ ಕೊಲೆ ದಿಟಂ ಧರ್ಮಮೊಂದಲ್ಲದನ್ಯರ್
ಶರಣಿಲ್ಲೆಂಬೀ ಜಿನೇಂದ್ರೋದಿತ ವಚನಮನಾಂ ನಿಶ್ಚಯಂ ಕಂಡೆನೀಗಳ್ ೫೬

ಕಡುಗೂರ್ಪೆಮ್ಮಬ್ಬೆ ತಾನೆಲ್ಲಿದಳೊದವಿದ ಮೋಹೋದಯಂ ಪೆರ್ಚೆ ಮುದ್ದಿಂ
ನಡಸುತ್ತಿರ್ಪಯ್ಯನೋವೆಲ್ಲಿದನನುಸಯದಿಂದೊಂದಿ ಕೂಡಿರ್ಪನಂಟ
ರ್ಗಡೆಗೊಂಡಾನಂದದಿಂದಾಡುವ ಪರಿಜನಮಿನ್ನೆಲ್ಲಿದರ್ಭಾವಿಪಂದೆ
ನ್ನೊಡನಾರುಂ ಬಾರರೀ ಪೇರಡವಿಗೆ ದುರಿತಾಟೋಪದಿಂದಾನೆ ಪಂದೆಂ ೫೭

ಗಳು, ಅಜ್ಜ, ಮುತ್ತಜ್ಜ, ಹೆಂಡಿರು, ಒಡಹುಟ್ಟಿದವರು, ಎಲ್ಲರೂ ಬೇರೆಯೆಂದು ಹೇಳುವ ಜಿನನ ಅಭಿಪ್ರಾಯವು ಸುಳ್ಳಾಗುವುದೆ ? ೫೪. ತಂತ್ರವಿದ್ಯೆ ಅನೇಕ ಬಗೆಯಾದ ನೀಚ (ನಶ್ವರ)ವಾದ ಮಂತ್ರಗಳು, ನಾನಾ ಪ್ರಕಾರವಾಗಿ ಇರುವ ಮಹಾಯಂತ್ರವು ಕೇಡು ಸಂಭವಿಸಿದಾಗ ಅವೆಲ್ಲವೂ ಯಂತ್ರದ ಕೀಲನ್ನು ಕಳಚಿ ಹಾಕಿದಂತೆ ಅಸ್ತವ್ಯಸ್ತವಾಗಿ ಹೋಗುತ್ತವೆ. ೫೫. ಆನೆಗಳ ಸೈನ್ಯಗಳು, ಕುದುರೆ ಸೈನ್ಯಗಳು, ಪರಾಕ್ರಮದಿಂದ ಕೂಡಿದ ಪದಾತಿವೀರರೂ ಬೆಟ್ಟಗಳ ಮೇಲೆ ನಿರ್ಮಿಸಿಕೊಂಡಿರುವ ಬಲವಾದ ಕೋಟೆಗಳೂ, ಅಯ್ಯೋ, ನಮ್ಮನ್ನು ರಕ್ಷಿಸಬಲ್ಲುವೆ ? ಕ್ರೂರ ಕೋಪಿಯಾದ ಯಮಧರ್ಮನೆಂಬ ರಾಜನು ಸಿಟ್ಟಾಗಿ ಕೊಲ್ಲುವಾಗ ದಿಟವಾಗಿಯೂ ಧರ್ಮವೊಂದೇ ಹೊರತು ಬೇರೆ ದಿಕ್ಕಿಲ್ಲ, ಎಂಬ ಜಿನೇಂದ್ರರ ಮಾತನ್ನು ನಾನು ಈಗ ನಿಶ್ಚಯವಾಗಿ ಮನಗಂಡೆ ೫೬. ಬಹಳವಾಗಿ ಪ್ರೀತಿಸುವ ನನ್ನ ತಾಯಿ ಈಗೆಲ್ಲಿರುವಳೊ ! ಹೆಚ್ಚಾದ ಮೋಹದಿಂದ ಮುದ್ದಾಗಿ ಸಲಹುತ್ತಿದ್ದ ನನ್ನ ತಂದೆ ಈಗ ಎಲ್ಲಿದ್ದಾನೆಯೊ ! ವಿಶ್ವಾಸ ಸ್ನೇಹಗಳಿಂದ ಹೊಂದಿಕೊಂಡು ಜತೆಯಲ್ಲಿರುತ್ತಿದ್ದ ನೆಂಟರು, ಸ್ನೇಹದಿಂದ ಕೂಡಿ ಆಡುವ ಪರಿಜನ ಇನ್ನೆಲ್ಲಿ ? ಯೋಚಿಸಿದರೆ ನಮ್ಮ ಜತೆಗೆ ಯಾರೂ ಬರುವುದಿಲ್ಲ. ಈ ದೊಡ್ಡ ಕಾಡಿಗೆ ನನ್ನ ಪಾಪದ ಆಧಿಕ್ಯದ ದೆಸೆಯಿಂದ ನಾನೇ ಬಂದೆ. ೫೭. ಸ್ವರ್ಗದಲ್ಲಿ ಹುಟ್ಟಿ ಭೋಗ

ದಿವದೊಳ್ ಭೋಗಿಪ್ಪೊಡಂ ಮಹಾನರಕದೊಳ್ ದುಃಖಾಗ್ನಿಯಿಂ ಬೆಯ್ವೊಡಂ
ನವೆಯುತ್ತಿರ್ಪೊಡವೆನ್ನ ಕೂಡಿ ತಿರಿಕವ್ರಾತಂಗಳೊಳ್ ನಾಡೆ ಸಂ
ಭವಮಾಗಿರ್ಪೊಡೆ ಮತ್ತಮಾ ಮನುಜರೊಳ್ ಪುಟ್ಟಿರ್ಪೊಡಂ ಜೀವನು
ತ್ಸವದಿಂದೊರ್ವನೆ ಬೆಯ್ಗುಮೆಂಬ ಜಿನರ ಶ್ರೀವಾಕ್ಯಮಂ ನಂಬಿದೆಂ ೫೮

ಧರೆ ರಾಜ್ಯಂ ರೂಪು ವೀರಂ ಮಹಿಮೆ ತನುವಿಲಾಸಂ ಬಲಂ ಜೀವಿತಶ್ವಂ
ಸಿರಿ ಸೌಭಾಗ್ಯಂ ಯೌವನವಮಳವು ಬಳಂ ಸೌಖ್ಯಮೆಂದಿಂತಿವೆಲ್ಲಂ
ಸುರಚಾಪಾಕಾರದೇದಂ ದರಿಯವಃಹಿಜದಂದಂ ಕರಂ ಕಪ್ಪಮೆಂದುಂ
ಸ್ಥಿರಮಲ್ಲೆಂಬೊಂದು ಜೈನೋಕ್ತಿಯು ಮಹಿಮೆಯನಿಂದಾನೆ ಕಣ್ಣಾರೆ ಕಂಡೆಂ ೫೯

ಗದ್ಯ॥ ಎಂದು ಧ್ರುವಮಂ ಭಾವಿಸಿ ೬೦

ಸಿರಿವಂತನಾಗಿಯುಂ ಸಿರಿ
ಪರಿಹರಿಪುದುಮೊರ್ವ ಬಡವನಾಗಿಯು ಮತ್ತಾ
ದರದಿಂ ಕುಮಾರನಾಗಿಯು
ಮಿರದೊರ್ವಯೆ ವೃದ್ಧನಾಗಿಯುಂ ತಿರಿತರ್ಕುಂ ೬೧

ಕಡುಸುಖಿಯಾಗಿಯುಮೊರ್ವಯೆ
ಕಡು ದುಃಖಿಯುಮಾಗಿ ವೀರನಾಗಿಯುಂ ಮತ್ತಂ
ಕಡು ಪಂದೆಯಾಗಿಯುಂ ಬಿಡ
ದೊಡನಘವಶದಿನಿಂತು ಸುಟಿಪಂ ಜೀವಂ ೬೨

ವನ್ನು ಅನುಭವಿಸುವುದಾದರೂ, ಮಹಾನರಕದಲ್ಲಿ ದುಃಖವೆಂಬ ಬೆಂಕಿಯಲ್ಲಿ ಬೇಯು ಬೇಕಾದರೂ ನನ್ನೊಡನೆ ತಿರ್ಯಕ್ ಗತಿಯಲ್ಲಿ ಹುಟ್ಟಿ ನರಳಬೇಕಾದರೂ ಪುನಃ ಮಾನವಜನ್ಮದಲ್ಲಿ ಜನಿಸುವುದಾದರೂ ಜೀವನು ತಾನೊಬ್ಬನೇ ಬೇಯುವನೆಂಬ ಜಿನೇಶ್ವರ ಸ್ವಾಮಿಯ ದಿವ್ಯವಾಕ್ಯವನ್ನು ನಂಬಿದೆ. ೫೮. ಭೂಮಿ, ರಾಜ್ಯ, ರೂಪ, ವೀರ, ಮಹಿಮೆ, ದೇಹಸೌಂದರ್ಯ, ಬಲ, ಐಶ್ವರ್ಯ, ಸೌಭಾಗ್ಯ, ಧನ, ಜೀವಿತ ಸೌಖ್ಯ, ಯೌವನ, ಸಾಮರ್ಥ್ಯ ಎಂಬಿವೆಲ್ಲವೂ ಕಾಮನಬಿಲ್ಲಿನ ಹಾಗೆ, ಹಳ್ಳದೊಳಗಿನ ಮರದಂತೆ ಚಂಚಲ-ನಶ್ವರ ಎಂಬ, ಅವು ಎಂದಿಗೂ ಸ್ಥಿರವಲ್ಲವೆಂಬ ಜೈನಸ್ವಾಮಿಯ ಮಾತನ್ನು ಇವೊತ್ತು ನಾನೇ ಕಣ್ಣಾರೆ ಕಂಡೆ ೫೯. ಎಂದು ಶಾಶ್ವತತ್ವನ್ನು ಕುರಿತು ಯೋಚಿಸಿ ೬೦. ಹಣಗಾರನಾಗಿದ್ದರೂ ಒಂದು ಕಾಲಕ್ಕೆ ಅದು ಕಳೆದುಹೋಗುತ್ತದೆ. ಬಡವನಾಗಿದ್ದೂ ಒಮ್ಮೆ ಸಿರಿಬರಬಹುದು. ಯುವಕನಾಗಿದ್ದವನೇ ವೃದ್ಧನಾಗಿ ತಿರುಗುತ್ತಾನೆ. ೬೧ ಜೀವನು ಪಾಪವಶನಾಗಿ ಒಮ್ಮೆ ಮಹಾ ದುಃಖಿಯಾಗಿ, ಒಮ್ಮೆ ಬಹಳ ಸುಖಿಯಾಗಿ, ವೀರನಾಗಿಯೂ ಒಮ್ಮೆ ಹೇಡಿಯಶಾಗಿಯೂ ಬದುಕಿನಲ್ಲಿ ಸುಳಿಯುತ್ತಿರುತ್ತಾನೆ. ೬೨ ಅನಂತಮತಿಯು ಸಂಸಾರದಲ್ಲಿ ಉಂಟಾಗುವ ಅನೇಕ

ಎಂದು ಸಂಸಾರದೊಳಾದ ನಾನಾ ಪ್ರಕಾರದ ದುಃಖಂಗಳಂ ಭಾವಿಸಿ ೬೩

ಒಡಲಿದಱಿಂದಮುಂ ಬಗೆದು ನೋಟ್ಟೊಡೆ ಪೇಲ ಪಣಂಬೆ ಉತ್ತಮಿ
ರ್ಪೆಡೆ ನರದಾಗರಂ ಮಿದುಳಪುತ್ತು ಕಷಾಯದ ರಾಶಿ ಮೂಳೆಯೊಂ
ದಡಗಿನ ಪುಂಜದಿಂ ತೊವಲಿನೆಲ್ವಿನಮುಗ್ಗದ ನೆತ್ತಱಿಂ ಮನಂ
ಬಿಡೆ ಸಮೆದಿರ್ದ ಪೆರ್ಮನೆ ಶರೀರಮಿದಂ ಪಿಡಿವಂದಮಾವುದೋ ೬೪

ಗದ್ಯ॥ ಎಂದು ಶರೀರದೊಳಾದಶುಚಿತ್ವಮುಂ ನೆನೆದು ಮೈದೆಸೆಗೆ ನಾಡೆಯುಂ ಪೇಸಿ ನರಕ
ದೊಳ್ ಜೀವಂಗಳ್ಗಪ್ಪ ದುಃಖಿಗಳನಿಂತೆಂದು ಬಗೆದಳ್ ೬೫

ಕಿಱಿಕಿಱಿದಾಗಿರೆ ಮೈಯ್ಯಂ
ಕೊಱಿಕೊಱಿದುಂ ಪುರ್ಗಿಯುಟ್ಟು ಕದಪು ಕೈಯಿಂ
ದಿಱಿದಿಱಿದು ನಿಷ್ಠುರರ್ಪ್ಪೆ
ಯ್ಮಱುಗುವಿನಂ ಪಿಡಿದು ಬಡಿದು ಕಿಚ್ಚಿನೊಳಿಡುವರ್ ೬೬

ಗರಗಸದಿಂದ ಮಿಗೆ ನಿ
ಷ್ಕರುಣಿಗಳೊಡನಿಕ್ಕಿ ನೆತ್ತಿಯಿಂದಂ ಪಾದಂ
ಬರೆಗಂ ಸೀಳ್ದಾ ಭಾಗಮು
ನುರಿವೆಣ್ಣೆಯೊಳಿಕ್ಕಿ ಚೆಗೆಸುವರ್ಮಱುಗುವಿನಂ ೬೭

ರೀತಿಯ ದುಃಖಿಗಳನ್ನು ಕುರಿತು ಚಿಂತಿಸಿದಳು ೬೩. ಈ ಶರೀರದ ಸ್ವರೂಪವನ್ನು ಕುರಿತು ವಿಚಾರ ಮಾಡಿದರೆ ಇದು ಹೇಲಿನ ಬಣಬೆ, ರೋಗದ ನೆಲೆ, ನರಗಳ ಮನೆ, ಮಿದುಳಿನ ಹುತ್ತ, ಕಷಾಯಗಳ ಒಂದು ರಾಶಿ. ಎಲುಬು, ನೆತ್ತರು, ಮಾಂಸಗಳ ಒಂದು ಕಂತೆ—ಇವೆಲ್ಲವುಗಳಿಂದ ರಚಿಸಿದ ಒಂದು ದೊಡ್ಡಮನೆ ; ಈ ಶರೀರವನ್ನು ರಕ್ಷಿಸಿ ಕೊಳ್ಳುವ ದಾರಿ ಯಾವುದೋ ! ೬೪. ಶರೀರದಲ್ಲಿ ಇರುವ ಅಶುಚಿತ್ವವನ್ನು ನೆನೆದು, ದೇಹದ ವಿಷಯಕ್ಕೆ ಬಹಳ ಅಸಹ್ಯಪಟ್ಟುಕೊಂಡು, ನರಕದಲ್ಲಿ ಜೀವಿಗಳಿಗಾಗುವ ದುಃಖ ಗಳನ್ನು ಹೀಗೆ ಯೋಚಿಸಿದಳು : ೬೫. ದೇಹವನ್ನು ಸಣ್ಣ ಸಣ್ಣದಾಗಿ ಕೊಯ್ದು ಕೊಯ್ದು ಸುಟ್ಟು ಕೆನ್ನೆಯನ್ನು ಕೈಯಿಂದ ಕೊಯ್ದು ಕೊಯ್ದು ಕ್ರೂರಾತ್ಮರು ದೇಹ ಕುದಿಯು ವಂತೆ ಹಿಡಿದು ಬಡಿದು ಬೆಂಕಿಗೆ ಹಾಕಿ ಸುಡುತ್ತಾರೆ. ೬೬ ಬಹಳ ನಿಷ್ಕರುಣಿಗಳಾದ ಭಟರು ಗರಗಸದಿಂದ ಒಟ್ಟಿಗೆ ತಲೆಯಿಂದ ಪಾದಗಳವರೆಗೂ ಉದ್ದಕ್ಕೆ ಸೀಳಿ ಆ ಭಾಗ ಗಳನ್ನು ಸುಡುವ ಎಣ್ಣೆಯಲ್ಲಿ ಹಾಕಿ ಕುದಿಸುವರು ೬೭. ಉಪ್ಪು, ಇಂಗು, ಸಾಸವೆ,

ಉಪ್ಪಿಲ್ಲಣೆಂಗು ಸಾಸವೆ
ತಪ್ಪಿಲ್ಲದ ಮೆಣಸು ಸುಂಟಿ ಪೊಸಸುಣ್ಣಮಿವಂ
ಚಪ್ಪರಿಸಿ ಬಡಿದು ಮೆಯ್ಯಂ
ಸೋಪ್ಪಾಗಿರೆಪೋದಿಪೂಸುವರ್ ನಿರ್ದಯೆಯಿಂ ೬೮

ನಾರೆತ್ತುವತೆಱದಿಂ ಕೈ
ಯಾರೆ ಕಱಕಿಲ್ದಾದರ್ಚಿಪೊಯ್ದು ಮೆಯ್ದೊಗಳ ತೊವಲಂ
ಕ್ರೂರತನದಿಂದಮೆತ್ತುವ
ರೋರಂತೊಱಲುವಿನಮಂಜಿಬಾಯ್ವಿಡುವಿನೆಗಂ ೬೯

ಗದ್ಯ॥ ಮತ್ತಂ ಬಾರಿಬಾರಿಗೆ ಗಾಣದೊಳಿಟ್ಟು ಪಿಟುದುಂ, ನೋಡೆನೋಡೆಗಾಣದೊಳಿಕ್ಕಿ ತೆಗೆದುಂ, ಪುಯ್ಯಲಡೆ ಸುಡೆವೊತ್ತಿಸಿಯುಂ, ಸಂದುಸಂದುಗಳೊಳ್ ಸೂಜಿಯಂ ಪೆಟ್ಟಿಯುಂ, ಒಡಲೊಳುಳಿಗಳಂ ಸೇರಿಸಿಯುಂ, ನಾಲಗೆಯಂ ಪೆಡತಲೆಯೊಳುರ್ಚಿಯುಂ, ಮೆಯ್ಯಂಕಿಱಿಕಿಱಿದಾಗಿ ಕತ್ತರಿಸಿ ಬಾಯೊಳ್ತುಱುಂಕಿಯುಂ, ದೆಸೆದೆಸೆಗೆ ಸೀಳ್ದಿಡಾಡಿಯುಂ, ದಾಯೊಳಗೆ ದಸಿಯಂ ಪೆಟ್ಟಿಯುಂ, ಪೆಡಗಯ್ಯಂ ಕಟ್ಟಿಕಿಚ್ಚಿನೊಳ್ಪೊರಳ್ಚಿಯುಂ, ಬಸಿಱನಿಬ್ಬಗಿಮಾಡಿ ಕುದಿದೆಣ್ಣೆಯಂ ಪೊಯ್ದುಂ, ಮಿಡಿಯೆರಡುಮಂ ಕುಂಟಾಗೆಕೊಯ್ದುಂ, ಬಳಱುವಿನಂ ಗಂಟಲಂಮುಱಿದುಂ, ಪೆಳಱುವಿನಂಜಡಿದುಂ, ಬಾಳೊಳ್ಪೊಯ್ದುಂ, ಪುಣ್ಣೊಳ್ಲೋಹರಸಮುಂ ಪೊಯ್ದುಂ,

ಮೆಣಸು, ಶುಂಠಿ, ಹೊಸ ಸುಣ್ಣ ಇವನ್ನು ಬಡಿದು ನುಣ್ಣಗೆ ಮಾಡಿ ದೇಹವನ್ನು ಮೆತ್ತಗಾಗುವಂತೆ ಹೊಡೆದು ನಿರ್ದಯೆಯಿಂದ ಮೈಗೆ ಲೇಪಿಸುವರು ೬೮. ಕತ್ತಾಳೆ ಮುಂತಾದುವುಗಳಿಂದ ನಾರು ತೆಗೆಯುವ ಹಾಗೆ ದೇಹದ ಚರ್ಮವನ್ನು ಕ್ರೌರ್ಯದಿಂದ ಒಂದೇ ಸಮನಾಗಿ ಹೊಡೆದು ಕಡಿದು ತೆಗೆಯುವರು—ಅಂಜಿ ಬಾಯಿ ಬಿಟ್ಟು ಅತ್ತರೂ ಲಾಭವಿಲ್ಲ. ೬೯ ಅಲ್ಲದೆ ಪುನಃ ಪುನಃ ಗಾಣಕ್ಕೆ ಹಾಕಿ ಹಿಂಡಿ, ನೋಡುತ್ತಿರುವಂತೆಯೇ ಗಾಣದಲ್ಲಿ ಹಾಕಿ ತೆಗೆದು, ಹುಯ್ಯಲಿಡುವಂತೆ ಸುಟ್ಟು ಸಂದು ಸಂದುಗಳಲ್ಲಿಯೂ ಸೂಜಿಗಳನ್ನು ಚುಚ್ಚಿಸಿಯೂ ಶರೀರದೊಳಕ್ಕೆ ಉಳಿಗಳನ್ನು ಸೇರಿಸಿ, ನಾಲಗೆಯನ್ನು ಹೆಡತಲೆಗೆ ಚುಚ್ಚಿಸಿ, ದೇಹವನ್ನು ಸ್ವಲ್ಪ ಸ್ವಲ್ಪವಾಗಿ ಕೊಯ್ದು ಬಾಯಲ್ಲಿ ತುರುಕಿ, ದಿಕ್ಕು ದಿಕ್ಕುಗಳಿಗೆ ಸೀಳಿ ಬಿಸಾಟು ಬಾಯೊಳಕ್ಕೆ ಗೂಟವನ್ನು ಪೆಟ್ಟಿಯೂ, ಕೈಗಳನ್ನು ಹಿಂದಕ್ಕೆ ಕಟ್ಟಿ ಬೆಂಕಿಯಲ್ಲಿ ಹೊರಳಿಸಿ, ಹೊಟ್ಟೆಯನ್ನು ಎರಡು ಭಾಗಮಾಡಿ ಕುದಿಸಿದ ಎಣ್ಣೆಯನ್ನು ಹೊಯಿದು, ಹಿಮ್ಮಡಿಗಳೆರಡನ್ನೂ ಸಣ್ಣದಾಗಿ ಕೊಯ್ದು, ಕೂಗಿಕೊಳ್ಳುವಂತೆ ಗಂಟಲನ್ನು ತಿರುಚಿ, ಅಂಜಿ ಅರಚುವಂತೆ ಗದರಿಸಿ, ಕತ್ತಿಯಲ್ಲಿ ಹೊಡೆದು, ಹುಣ್ಣಿನಲ್ಲಿ ಕಾದ (ಕರಗಿದ) ಕಬ್ಬಿಣವನ್ನು ಹೊಯ್ದು ಕಣ್ಣಿನಲ್ಲಿ ಕೆಂಡವನ್ನಿಟ್ಟು ಮೂಗುಬಾಯಿ

ಕಣ್ಣೊಳ್ ಕೆಂಡಮನಿಟ್ಟುಂ, ಮೂಗುಂಬಾಯುಮುಸಿರ್ವಿಡುಕಗುಡದೆ ಪಿಡಿದುಂ ಬಾಚಿಯಿಂ ತಡಂಗಡಿದುಂ ಕೊಂತದಿಂ ತಗುಳ್ದಿಱಿದುಂ ಖಡ್ಗದಿಂ ಪೊಣೆಸಿ ಪೊಯ್ದುಂ, ಬೆಟ್ಟೇರುಗಳಿಂ ಪರಿತಂದಿಟ್ಟುಂ, ಪರಸಿನೊಳೆರ್ದೆಯುಂ ಸೀಳ್ದುಂ, ಗಜಂಗಳಿಂದಿಕ್ಕಿಮೆಟ್ಟಿಸಿಯುಂ. ಸೈಱಿಸಲಾಱದೆ, ಪುಲಿವಿಂಡುಗಳಂ ಬಿಟ್ಟುಂ, ಸೀರ್ನಾಯ್ಗಳಿಂ ದಂಡಿಸಿಯು, ಪೆರ್ನೊಣಂಗಳಿಂತಗಳ್ದುರಿಸಿಯುಂ, ಕಾವಲಿಯೊಳಿಕ್ಕಿ ವಾಟಿಸಿಯುಂ, ಇಂತನೇಕ ವಿಧದ ದಂಡನೆಗಳಿಂ ದಂಡಿಸಿಯುಂ, ಸೈಱಿಸಲಾಱದೆ ಅಱಿಸಿನದಂತೆ ಮೆಯ್ವತ್ತಿಪಿಣೆವರ್, ಕಾಱಿಯಂತೆ ಕೊಱಲಂ ಪತ್ತಿಕೊಯ್ವರ್, ಗರಗಸದಂತೆ ಮೆಯ್ಯಂ ಕೊಱೆವರ್, ಪಣಿಗೆಯಂತೆ ತಲೆಯಂಪತ್ತಿ ತೆಗೆವರ್, ಮೊಲೆಯಂತೆರ್ದೆಯಂ ಪತ್ತಿ ನೆತ್ತಱಂ ಕುಡಿವರ್, ಉಗುರಂತೆ ಬೆರಲಂಪತ್ತಿಕೀಳ್ವರ್, ನಿಱಿಯಂತೆ ತೊಡೆಯಂಪತ್ತಿಯುಡಿವರ್, ಪೊಱೆಯಂತೆ ಮೊಣಕಾಲಂ ಪತ್ತಿಮುಱಿವರ್, ಸೀರೆಯಂತೆ ನಡುವಂ ಪತ್ತಿ ನೆಲಕ್ಕಿಕ್ಕುವರ್, ಬಾಸೆಯಂತೆ ಬಸಿಱಂ ಪತ್ತಿ ಕರುಳನುಗಿವರ್, ಕೂಸಿನಂತೆ ಮೊಲೆಯಂ ಪತ್ತಿತಿಂಬರ್, ತಿಲಕದಂತೆ ನೊಸಲಂ ಪತ್ತಿಕಡಿವರ್, ಓಲೆಯಂತೆ ಕಿವಿಯಂ ಪತ್ತಿ ತಿಂಬರ್ ಕೇಶದಂತೆ ಬೆನ್ನಂಪತ್ತಿ ಬಾರನುರ್ಚುವರ್ ಮಲ್ಲರಂತೆ ಬರಿಯಂ ಪತ್ತಿ ಕಳಲೆಗಟ್ಟುವರ್ ಪೇಸಂತೆ ತಲೆಯಂಪತ್ತಿ ಪಲ್ಕಡಿವರ್

ಗಳನ್ನು ಉಸಿರಾಡದ ಹಾಗೆ ಕಟ್ಟಿ ಬಾಳ್ಚಿಯಿಂದ ಬಿಟ್ಟು ಬಿಟ್ಟು ಕೆತ್ತುತ್ತ, ಭರ್ಜಿಯಿಂದ ಜೋರಾಗಿ ತಿವಿದು ಕತ್ತಿಯಿಂದ ಜೋರಾಗಿ ಹೊಡೆದು, ಎತ್ತರದಿಂದ ಓಡಿಬಂದು ಹೊಡೆದೂ, ಗಂಡಂಗೊಡಲಿಯಿಂದ ಎದೆಯನ್ನು ಸೀಳಿ, ಆನೆಗಳಿಂದ ಹೊಡೆದು ತುಳಿಸಿಯೂ ಸೈರಿಸಲಾರದೆ ಹುಲಿವಿಂಡುಗಳನ್ನು ಬಿಟ್ಟು, ಸೀಳುನಾಯಿಗಳಿಂದ ಹಿಂಸೆಪಡಿಸಿಯೂ, ದೊಡ್ಡ ನೊಣಗಳಿಂದ ಬಲವಾಗಿ ಕಚ್ಚಿಸಿ, ಕಾವಲಿಯಲ್ಲಿ ಹಾಕಿ ಹುರಿದು, ಹೀಗೆ ಅನೇಕ ವಿಧದ ಶಿಕ್ಷೆಗಳಿಂದ ದಂಡಿಸಿಯೂ ಸೈರಿಸಲಾರದೆ ಅರಿಸಿನದ ಹಾಗೆ ಮೆಯ್ಯನ್ನು ಒತ್ತಿ ಹಿಳಿಯುವರು ಕಾರೆಮುಳ್ಳಿನ ಹಾಗೆ ಕೊರಳನ್ನು ಹತ್ತಿ ತಿವಿಯುವರು, ಗರಗಸದ ಹಾಗೆ ದೇಹವನ್ನು ಕೊರೆಯುವರು, ಬಾಚಣಿಗೆಯಂತೆ ತಲೆಯನ್ನು ಹತ್ತಿ ಎಳೆಯುವರು, ಮೊಲೆಯ ಹಾಗೆ ಎದೆಯನ್ನು ಹತ್ತಿ ರಕ್ತವನ್ನು ಕುಡಿಯುತ್ತಾರೆ, ಉಗುರಿನ ಹಾಗೆ ಬೆರಳನ್ನು ಹತ್ತಿ ಕೀಳುವರು. ನಿರಿಯಂತೆ ತೊಡೆಯನ್ನು ಹತ್ತಿ ಹೊಡೆಯುವರು, ಹೊರೆ (ಭಾರ)ಯ ಹಾಗೆ ಮೊಳಕಾಲನ್ನು ಹತ್ತಿ ಮುರಿಯುವರು. ಸೀರೆಯ ಹಾಗೆ ನಡುವನ್ನು ಹತ್ತಿ ನೆಲಕ್ಕೆ ಕೆಡುವುತ್ತಾರೆ, ಬಾಸೆಯ ಹಾಗೆ ಹೊಟ್ಟೆಯನ್ನು ಹತ್ತಿ ಕರುಳನ್ನು ಕೀಳುವರು, ಕೂಸಿನ ಹಾಗೆ ಮೊಲೆಯನ್ನು ಹತ್ತಿ ಕಚ್ಚುವರು, ತಿಲಕದ ಹಾಗೆ ಹಣೆಯನ್ನು ಹತ್ತಿ ಕಡಿಯುವರು. ಓಲೆಯ ಹಾಗೆ ಕಿವಿಯನ್ನು ಹತ್ತಿ ಕಚ್ಚಿ ತಿನ್ನುವರು, ಕೂದಲಿನ ಹಾಗೆ ಬೆನ್ನಮೇಲೆ ಬಿದ್ದು ಚರ್ಮದ ಬಾರನ್ನು ಸೀಳುವರು, ಜಟ್ಟಿಗಳ ಹಾಗೆ ಪಕ್ಕವನ್ನು ಹಿಡಿದು ಹೆಡಮುರಿಗೆ ಕಟ್ಟುವರು, ಹೇನಿನ ಹಾಗೆ ತಲೆಗೆ ಹತ್ತಿ ಹಲ್ಲು ಕಡಿಯುವರು, ಗೋರಂಟಿಯಂತೆ

ತೇರಣದಂತೆ ತಳವಂ ಪತ್ತಿ ಕತ್ತರಿಸುವರ್ ಕಂಕಣದಂತೆ ಮುಂಗೈಯುಂ ಪತ್ತಿ ಕೊಱೆವರ್ ಕಾಡಿಗೆಯಂತೆ ಕಣ್ಣಂ ಪತ್ತಿ ಬೆರಲೊಳಿಱಿವರ್ ಕಂಪಿನಂತೆ ಮೂಗಂಪತ್ತಿ ಕೊಯ್ವರ್ ತಂಬುಲದಂತೆ ಪಲ್ಲಂ ಪತ್ತಿ ತಿವಿವರ್ ಸವಿಯಂತೆ ನಾಲಗೆಯುಂ ಪತ್ತಿ ಮೆಲ್ವರ್ ಕೆರ್ಪಿನಂತೆ ಕಾಲಂ ಪತ್ತಿ ಕಡಿವರ್ ಅಂದುಗೆಯಂತೆ ಮೇಗಾಲಂ ಪತ್ತಿ ಸೊಪ್ಪುಗುಟ್ಟುವರು. ಕುಪ್ಪಸದಂತೆ ಬೆನ್ನಂಪತ್ತಿ ಕೆತ್ತುವರ್ ಸಿಪ್ಪಿಗನಂತೆ ಪೊಲಿವರ್. ಕಮ್ಮಾಱನಂತೆ ಕಾಸಿಬಡಿವರ್ ಮೇದನಂತೆ ಸೀಳ್ವರ್ ಬಡಗಿಯಂತೆ ಕೆತ್ತುವರ್ ಅಗಸನಂತೆ ಬೀಸಿ ಪೊಯ್ವರ್ ಒಕ್ಕಲಿಗನಂತೆ ಮೆಟ್ಟಿ ಪರಗುವರ್ ಅಂಕದಂತೆ ಕುತ್ತುವರ್ ಮಲ್ಲರಂತೆ ಪೋಱುವರ್ ಲೇಖಕನಂತೆ ಕೆಸುವರ್ ಮಾದಿಗನಂತೆ ಬಾರೆತ್ತುವರ್ ನಾಯಂತೆ ಕಚ್ಚಿತೆಗೆವರ್ ಗೂಳಿಯಂತೆ ತಗುಳ್ದಿಱಿವರ್ ಗಜದಂತಿಕ್ಕಿಮೆಟ್ಟುವರ್ ರಕ್ಕಸರಂತಡಸಿ ನುಂಗುವರ್ ಕಾಳಗದಂತೆ ತಳ್ತಿಱಿವರ್ ಬಿರುದಂಕದಂತೆ ಪೋಗದೆ ಕಾದುವರ್ ಜಿಗುಳೆಯಂತೆ ನೆತ್ತರಂ ಕುಡಿವರ್ ಮಾಂಸಾಹಾರಿಯಂತೆ ತಿಂಬರ್ ನರಿಯಂತೆ ಕರುಳಂ ತೆಗೆವರ್ ತಗುಣೆಯಂತೆ ಮೆಯ್ಯಂ ತಿಂಬರ್ ಪುಲಿಯಂತೆ ಗಂಟಲಂ ತಿಂಬರ್ ಜಂತಿನಂತೆ ಬಸಿಱಂ ತಿಂಬರ್ ಪಂದಿಯಂ ತೆತ್ತುವರ್ ಗುಲ್ಮದಂತೊತ್ತುವರ್ ಪೊಱೆಕಾಱನಂತೆ ಬಿಗಿದುಕಟ್ಟುವರ್ ಗುಡಿಯನೆತ್ತುವರಂತೆ

ಅಂಗೈಯನ್ನು ಹತ್ತಿ (ಗೋರಂಟಿ ರಸವನ್ನು ಅಲಂಕಾರಕ್ಕೆ ಕೈಕಾಲುಗಳಿಗೆ ಹಚ್ಚಿಕೊಳ್ಳುತ್ತಿದ್ದುದು ರೂಢಿ) ಕತ್ತರಿಸುವರು. ಕಂಕಣ (ಬಳೆ)ದ ಹಾಗೆ ಮುಂಗೈಯನ್ನು ಹತ್ತಿ ಕೊರೆಯುವರು, ಕಾಡಿಗೆಯಂತೆ ಕಣ್ಣನ್ನು ಹತ್ತಿ ಬೆರಳಿನಲ್ಲಿ ತಿವಿಯುವರು. ಸುವಾಸನೆಯಂತೆ ಮೂಗಿಗೆ ಹತ್ತಿ ಕೊಯ್ಯುವರು, ತಾಂಬೂಲದ ಹಾಗೆ ಹಲ್ಲನ್ನು ಹತ್ತಿ ತಿವಿಯುವರು. ರುಚಿಯ ಹಾಗೆ ನಾಲಿಗೆಯನ್ನು ಏರಿ ಮೆಲ್ಲುವರು, ಚಪ್ಪಲಿಯಂತೆ ಪಾದವನ್ನು ಹತ್ತಿ ಕಡಿಯುವರು, ಅಂದುಗೆಗಳಂತೆ ಮೇಗಾಲನ್ನು ಹತ್ತಿ ಸೊಪ್ಪಾಗುವಂತೆ ಕುಟ್ಟುವರು, ಕುಪ್ಪಸದಂತೆ ಬೆನ್ನನ್ನು ಹತ್ತಿ ಕೆತ್ತುತ್ತಾರೆ, ಚಿಪ್ಪಿಗನಂತೆ ಹೊಲಿಯುತ್ತಾರೆ, ಕಮ್ಮಾರನ ಹಾಗೆ ಕಾಸಿ ಕುಟ್ಟುತ್ತಾರೆ, ಮೇದರವನಂತೆ ಸೀಳುವರು, ಬಡಗಿಯ ಹಾಗೆ ಕೆತ್ತುತ್ತಾರೆ, ಅಗಸನಂತೆ ಬೀಸಿ ಒಗೆಯುತ್ತಾರೆ, ಒಕ್ಕಲಿಗನ ಹಾಗೆ ಮೆಟ್ಟಿ ಹರಗುತ್ತಾರೆ. ಅಂಕುಶದ ಹಾಗೆ ಚುಚ್ಚುವರು, ಜಟ್ಟಿಗಳ ಹಾಗೆ ಹೋರಾಡುವರು. ಲೇಖಕ(ಬರೆಹಗಾರ)ನಂತೆ ಕೊರೆಯುವರು, (ತಾಳೆಗರಿಯ ಮೇಲೆ ಕಂಟದಿಂದ ಬರೆಯುವಾಗ ಸ್ವಲ್ಪ ಕೊರೆಯಬೇಕಾಗುತ್ತಿತ್ತು) ಮಾದಿಗನಂತೆ ಚರ್ಮವನ್ನು ಸೀಳುವರು, ನಾಯಿಯಂತೆ ಕಚ್ಚಿ ತೆಗೆಯುವರು, ಗೂಳಿಗಳ ಹಾಗೆ ನುಗ್ಗಿ ಇರಿಯುವರು, ಆನೆಗಳ ಹಾಗೆ ತುಳಿದು ಬಿಡುವರು. ರಾಕ್ಷಸರ ಹಾಗೆ ಹಿಡಿದು ನುಂಗುವರು, ಯುದ್ಧದಲ್ಲಿನಂತೆ ತಾಗಿ ಇರಿಯುವರು. ಬಿರುದಿನ ಕಾಳಗದಂತೆ ಹಿಮ್ಮೆಟ್ಟದೆ ಕಾದುವರು, ಜಿಗಣೆಯ ಹಾಗೆ ರಕ್ತವನ್ನು ಹೀರುವರು, ಮಾಂಸವನ್ನು ತಿನ್ನುವರಂತೆ ಕಚ್ಚಿ ತಿನ್ನುವರು, ನರಿಗಳ ಹಾಗೆ ಕರುಳನ್ನು ಕೀಳುವರು, ತಗಣೆಯ ಹಾಗೆ ಮೈಯನ್ನು ಕಚ್ಚುವರು. ಹುಲಿಯಂತೆ ಗಂಟಲನ್ನೇ ಕಚ್ಚುವರು, ಜಂತಿನ ಹುಳುವಿನಂತೆ ಹೊಟ್ಟೆಯನ್ನು ಕಡಿದು ತಿನ್ನುವರು, ಹಂದಿಯ ಹಾಗೆ ಎಬ್ಬಿಸುತ್ತಾರೆ, ಪ್ಲೀಹ ರೋಗ (sbleen)ದಂತೆ ಹಿಡಿದು ಒತ್ತುವರು, ಹೊರೆಕಾರನ ಹಾಗೆ ಬಿಗಿದು ಕಟ್ಟುತ್ತಾರೆ,

ಗೂಂಟಮಂ ಪೆಟ್ಟುವರ್ ಪರ್ದಿನಂತೆ ಕೀಱ್ವರ್. ತೇೞಿನಂತೆ ನೋಯಿಸುವರ್ ಕೋೞಿಯಂತೆ ಕೆದಕುವರ್ ಸಿಡಿಲಂತೆ ಪೊಡೆವರಂತುಮಲ್ಲದೆ ೭೦

ಅಲ್ಲಲ್ಲಿಗೆ ತೇೞೋಳಿಗ
ಳಲ್ಲಲ್ಲಿಗೆ ಕೂರಿತಪ್ಪ ಕಂಟಕತತಿ ಮ
ತ್ತಲ್ಲಲ್ಲಿಗೆ ತೀವ್ರಾಯುಧ
ಮಲ್ಲಲ್ಲಿಗೆ ಪರಿಯುತಿರ್ಪಿಱುಂಪೆಯ ತೊಂಡಲ್ ೭೧

ಅಲ್ಲಲ್ಲಿಗೆ ಕಾೞ್ಗಿಚ್ಚುಗ
ಳಲ್ಲಲ್ಲಿಗೆ ಪತ್ತಿಕಡಿವ ತುಂಬಿಗಳುಂ ಮ
ತ್ತಲ್ಲಲ್ಲಿಗೆ ಮುಳ್ವಟ್ಟೆಗ
ಳಲ್ಲಲ್ಲಿಗೆ ಸುತ್ತಿಮುತ್ತಿತಿಂಬ ಕಡಂದುಱು ೭೨

ಅಲ್ಲಲ್ಲಿಗೆ ಸುಣ್ಣದ ಪೊನ
ಲಲ್ಲಲ್ಲಿಗೆ ರಾಸಿಗೆಯ್ವ ಕೆಂಡಂಗಳ್ಮ
ತ್ತಲ್ಲಲ್ಲಿಗೆ ತೀವ್ರಾಯುಧ
ಮಲ್ಲಲ್ಲಿಗೆ ಪರಿವ ಲೋಹ ನರಕದೊಳೆಲ್ಲಂ ೭೩

ಗದ್ಯ॥ ಮತ್ತಂ ಪಾತಕಜೀವಂಗಳ್ ಎಳ್ಳಿನಂತೆ ಗಾಣಕ್ಕೆವಂದು ಕಳ್ಳರಂತೆ ಶೂಲಕ್ಕೆವಂದು ಪುಳ್ಳಿಯಂತೆ ಕಿಚ್ಚಿಂಗೆ ವಂದು ಕರ್ಬೊನ್ನದಂತೆ ಇರ್ಕುಳಿಗೆವಂದು ಕಬ್ಬಿನಂತೆ ಕಡಿಹಕ್ಕೆ

ಧ್ವಜವನ್ನು ಎತ್ತುವವರಂತೆ ಗೂಟವನ್ನು ಬಡಿಯುತ್ತಾರೆ, ಹದ್ದುಗಳಂತೆ ಕೀಳುತ್ತಾರೆ, ಚೇಳುಗಳ ಹಾಗೆ ಕಚ್ಚಿ ನೋಯಿಸುತ್ತಾರೆ, ಕೋಳಿಗಳ ಹಾಗೆ ಕೆದಕುತ್ತಾರೆ, ಸಿಡಿಲಿನಂತೆ ಹೊಡೆಯುವವರು ೭೦. ಅಷ್ಟೇ ಅಲ್ಲದೆ ಅಲ್ಲಲ್ಲಿಗೆ ಚೇಳುಗಳ ಸಾಲುಗಳು, ಅಲ್ಲಲ್ಲಿ ಹರಿತವಾದ ಮುಳ್ಳುಗಳ ರಾಶಿ, ಮತ್ತು ಅಲ್ಲಲ್ಲಿಗೆ ಕ್ರೂರವಾದ ಆಯುಧಗಳು, ಅಲ್ಲಲ್ಲಿ ಹರಿಯುತ್ತಿರುವ ಇರುವೆಗಳ ಸಾಲುಗಳು ೭೧. ನಡುನಡುವೆ ಕಾಳ್ಕಿಚ್ಚುಗಳು, ಅಲ್ಲಲ್ಲಿ ಮೇಲೆ ಬಿದ್ದು ಕಡಿಯುವ ದುಂಬಿಗಳು, ಇನ್ನೂ ಅಲ್ಲಲ್ಲಿ ಮುಳ್ಳು ತುಂಬಿದ ದಾರಿಗಳು, ಅಲ್ಲಲ್ಲಿ ಸುತ್ತಿ ಮುತ್ತಿಗೆ ಹಾಕಿ ಕಚ್ಚುವ ಕಣಜದ ಹುಳುಗಳು ೭೨. ಅಲ್ಲಲ್ಲಿ ಸುಣ್ಣದ ಪ್ರವಾಹಗಳು, ಅಲ್ಲಲ್ಲಿ ರಾಸಿ ಮಾಡಿದ ಕೆಂಡಗಳು, ಅಲ್ಲಲ್ಲಿ ದಾರಿಯ ಉದ್ದಕ್ಕೂ ಹರಿತವಾದ ಆಯುಧಗಳು, ನಡುನಡುವೆ ಹರಿಯುತ್ತಿರುವ ಲೋಹರಸಗಳು (ಕರಗಿದ ಕಬ್ಬಿಣ) ಹೀಗೆ ನರಕದಲ್ಲೆಲ್ಲ ಕಡೆಗಳಲ್ಲಿಯೂ ಯಾತನಾಮಯವಾಗಿದೆ. ೭೩. ಅಲ್ಲದೆ ಪಾಪ ಮಾಡಿದ ಜೀವಗಳು, ಎಳ್ಳಿನಹಾಗೆ ಗಾಣದೊಳಕ್ಕೆ ಸೇರಿ, ಕಳ್ಳರಂತೆ ಶೂಲಕ್ಕೇರಿ, ಪುಳ್ಳಿಗಳಂತೆ ಬೆಂಕಿಗೆ ಸಿಕ್ಕಿ, ಕಬ್ಬಿಣದಂತೆ ಇಕ್ಕಳಕ್ಕೆ ಸಿಕ್ಕಿ, ಕಬ್ಬಿನ ಹಾಗೆ ಕಡಿತವನ್ನು ಅನುಭವಿಸಿ,

ವಂದು ದ್ರೋಹಿಯಂತೆ ದಂಡನೆಗೆವಂದು ಲೋಭಿಯಂತೆ ನಿಗ್ರಹಕ್ಕೆವಂದು ಕುಸುಱಿಯಂತೆ ಕಟ್ಟುಂಗೆವಂದು ಪುಲ್ಲಂತೆ ಸೂಡಿಂಗೆವಂದು ಕುಂಬಾರನಮಣ್ಣಿನಂತೆ ಮಿದಿಹಕ್ಕೆವಂದು ಧಾನ್ಯದಂತೆ ಹಗೇಹಕ್ಕೆವಂದು ನಾರಂತೆ ಹೊಸೆಹಕ್ಕೆವಂದು ಮೊಲನಂತೆ ಬಡಿಹಕ್ಕೆವಂದು ಮುಡಿಯಂತೆ ಮುರಿಹಕ್ಕೆವಂದು ಎಲೆಯಂತರಿಹಕ್ಕೆವಂದು ತಪ್ತಮಾಂಸದಂತೆ ಕುದಿವೆಣ್ಣೆಗೆವಂದು ಸತ್ತರಮನೆಯಂತೆ ಅಟಲಿಂಗೆವಂದು ಪರ್ದಿನಂತೆ ಕಂಡಕ್ಕೆವಂದು ಮುಡಿಸೀರೆಯಂತೆ ಗಟ್ಟಣೆಗೆ ವಂದು ಮೈಲಗೆಯಂತೊಗೆಹಕ್ಕೆವಂದು ಹಕ್ಕಲಂತೆ ಬಡಿಹಕ್ಕೆವಂದು ಮುಯ್ಯಿಲ್ಲದೊಕ್ಕಲಂತೆ ಬಡುಗುಲಿಗೆವಂದು ಬೇಡನಂತೀಡಿಂಗೆವಂದು ಬಿಲ್ಗಾಱನಂತೆ ಬೆಟ್ಟೇಱಿಂಗೆವಂದು ತಿಱ್ಱನೆ ತಿರಿವುವಿಂತು ೭೪

ಕಿಲಕಿಲವು ನಾಯ್ಗಳುರ್ಕಿಂ
ತೊಲಗದೆ ಪಾಯ್ದುಗಿದು ತಗೆದು ತಿನೆಯುಂ ಮತ್ತಂ
ಕೆಲಕೆಲವು ವಾಯ್ಗಳೊರ್ಮೆಯೆ
ಮಲೆದಿಱ್ಱನೆ ಪೊಯ್ದು ಕಚ್ಚಿ ತಿನೆ ಪೆರ್ಗರುಳಂ ೭೫

ಪಿರಿದಪ್ಪರೆಯಂ ಕೊರಲೊಳ್
ಭರದಿಂದಂ ಕಟ್ಟಿಮೆಟ್ಟಿ ಕೊಳ್ಗೆಸರೊಳ್ ನಿ
ಷ್ಠುರದಿಕ್ಕಿಮೆಟ್ಟಿಪುಳುಗಳ್
ಕರಮೆಲ್ಲೆಡೆ ಪತ್ತಿ ಬಗಿದು ತಿನೆ ಮೆಯ್ಯೆಡಗಂ ೭೬

ದ್ರೋಹಿಗಳಂತೆ ದಂಡನೆಗೆ ಒಳಗಾಗಿ, ಲೋಭಿಯಂತೆ ಹಿಂಸೆಗೊಳಗಾಗಿ, ಕುಸುರಿಗಳಂತೆ ಕಟ್ಟಿಗೊಳಪಟ್ಟು, ಹುಲ್ಲಿನಂತೆ ಸುಡಿಸಿಕೊಂಡು, ಕುಂಬಾರನ ಮಣ್ಣಿನ ಹಾಗೆ ಮಿದಿಸಿಕೊಂಡು ಧಾನ್ಯದ ಹಾಗೆ ಹಗೇವಿಗೆ ಬಿದ್ದು ನಾರಿನಂತೆ ಹೊಸೆಯಿಸಿಕೊಂಡು ಮೊಲಗಳ ಹಾಗೆ ಬಡಿತಕ್ಕೆ ಗುರಿಯಾಗಿ, ತಲೆಗೂದಲಿನಂತೆ ತಿರುಚುವಿಕೆಗೆ ಗುರಿಯಾಗಿ, ಎಲೆಗಳಂತೆ ಕೊಯಿಸಿಕೊಂಡು ಸುಟ್ಟಮಾಂಸದಂತೆ ಕುದಿಯುವ ಎಣ್ಣೆಗೆ ಬಿದ್ದು, ಸತ್ತವರ ಮನೆಯಂತೆ ದುಃಖಕ್ಕೆ ಗುರಿಯಶಾಗಿ, ಹದ್ದುಗಳಂತೆ ಮಾಂಸಖಂಡಗಳಿಗೆ ಬಂದು, ಮಡಿಬಟ್ಟೆಗಳಂತೆ ಕಟ್ಟಿಸಿಕೊಂಡು, ಮೈಲಿಗೆಬಟ್ಟೆಗಳಂತೆ ಒಗೆತಕ್ಕೆ ಸಿಕ್ಕಿ, ಹಕ್ಕಲುಗಳಂತೆ ಬಡಿತಕ್ಕೆ ಸಿಕ್ಕಿ (ಹಕ್ಕಲು–ಧಾನ್ಯವನ್ನು ಒಕ್ಕುವಸ್ಥಳ) ನೆರವಿಲ್ಲದ ಒಕ್ಕಲಿಗನಂತೆ ಬಡತನಕ್ಕೆ ಸಿಕ್ಕಿ, ಬೇಡನ ಹಾಗೆ ಗುರಿಗೆ ಸಿಕ್ಕಿ (ಈಡು, ಹೊಡೆತ, ಗುರಿ) ಬಿಲ್ಲುಗಾರನ ಹಾಗೆ ದೊಡ್ಡ ಪೆಟ್ಟಿಗೆ ಸಿಕ್ಕು ತಿರ್ರೆಂದು ತಿರುಗುತ್ತಿರುವುವು. ೭೪. ಹೀಗೆ ಕೆಲವು ನಾಯಿಗಳು ಉಬ್ಬಿನಿಂದ ಹಿಂದೆಗೆಯದೆ ಮೇಲೆ ಹಾಯ್ದು ಕಚ್ಚಿ ಕಿತ್ತು ತಿನ್ನುತ್ತಿರಲು ಇನ್ನು ಕೆಲವು ನಾಯಿಗಳು ಒಟ್ಟಿಗೆ ಮೇಲೆ ಬಿದ್ದು ರಪ್ಪನೆ ಹೊಡೆದು ಕರುಳನ್ನು ರಭಸದಿಂದ ಕಿತ್ತುತಿನ್ನುತ್ತವೆ. ೭೫ ದೊಡ್ಡ ಬಂಡೆಯನ್ನು ಕೊರಳಿಗೆ ಕಟ್ಟಿ, ತುಳಿದು, ಕೊಚ್ಚೆ ಕೆಸರಿನಲ್ಲಿ ಕ್ರೂರವಾಗಿ ಹೊಡೆದು ತುಳಿದು, ಹುಳುಗಳು ಎಲ್ಲ ಕಡೆಗಳಲ್ಲಿಯೂ ವಿಶೇಷವಾಗಿ ಹತ್ತಿ ಬಗಿದು ದೇಹಮಾಂಸವನ್ನು ತಿನ್ನಲು ೭೬. ಹೊರಗೆ ಹೊರಟರೆ ಹಕ್ಕಿಗಳು ಅಟ್ಟಿಕೊಂಡು

ಪೊಱಮಟ್ಟುಪಱಿಯೆ ಪಕ್ಕಿಗ
ಳಱಿಯಟ್ಟಿ ಮಿಗೆ ತಗುಳ್ದು ವಜ್ರತುಂಡದಿನೋಱಂ
ತಿಱಿಯೆ ಬಿಡದಲ್ಲಗಲ್ಲಿಗೆ
ಮಱುಗುತ್ತಂ ಬೆಂದು ನೊಂದು ಪೆಳಱುತ್ತಿರ್ಪರ್ ೭೭

ಗದ್ಯ॥ ಮತ್ತಂ ಗ್ರಹದಂತೆ ಪುಯ್ಯಲಿಡುವರ್ ತುಂಬಿಯಂತಾಱಡಿಗೊಳ್ವರ್ ಕೊಳ್ಪಟ್ಟರಂತೆೞಲ್ವರ್ ನ್ಯಾಯಮಿಲ್ಲದನೂರಂತೆ ಮೊಱೆಯಿಡುವರ್ ತುಳುನಾಡ ಸತ್ರಮನೆಯಂತೆ ಪಟಯಿಸುವರ್ ಕುತ್ತಂ ಬಡೆದವರಂತೆ ಬೀೞ್ವರ್ ಬಡಗೊಂದೆಯಂತೆ ದಡದಡಿಸುವರ್ ಪಾವಿನಂತೆ ಪೊರಳ್ವರ್ ನೊಂದ ಕರಡಿಯಂತೆ ಮೇಲ್ವಾಯ್ವರ್, ಪುಣ್ಸಡಿಸಿಕೊಳ್ವರಂತೆ ಮಿಡುಮಿಡು ಮಿಡುಕುವರ್, ಬಡಿವೆತ್ತರಂತೆ ಸುಯ್ವರ್, ಕೆಟ್ಟೊಕ್ಕಲಂತೆ ನಿಲಲಾಱದೆ ನಡುಗುವರ್, ಕಂಪವಾತ ರೋಗಿಗಳಂತೆ ಕಂಪಿಸುವರ್, ತೊನ್ನನಂತೆ ರಸಿಗೆ ಸುರಿಸುವರ್, ಪೆಱವರಂತೇಟಲಾಱೆವೆಂಬರ್, ಇಂತು ನರಕದೊಳಾವೆಡೆಯೊಳ್ ನೋಱ್ಪಡಂ, ೭೮

ಎಂದವಧಿ ತೀರ್ಗುಮದು ತೀ
ರ್ವಂದುವರಂ ಮಾಣದೆಲ್ಲಿಯುಂ ಪಾಪಿಗಳಂ
ಕುಂದದೆ ನಾರಕರೀ ವಿಧ
ದಿಂದಂ ಬಾಧಿಸುತುಮಿರ್ಪರಿರುಳುಂ ಪಗಲುಂ ೭೯

ಬಂದು ಹೆಚ್ಚಾಗಿ ತಾಕಿ ತಮ್ಮ ವಜ್ರದಂಥ ಕೊಕ್ಕುಗಳಿಂದ ಒಂದೇ ಸಮನಾಗಿ ತಿವಿಯಲು, ಯತ್ನವಿಲ್ಲದೆ ಸಂಕಟಪಡುತ್ತ ಬೇದು ನೊಂದುಕೊಂಡು ಅಲ್ಲಿಂದಿಲ್ಲಿಗೆ ಭಯದಿಂದ ತಿರುಗುವರು ೭೭. ಅಲ್ಲದೆ ಗ್ರಹ (ಪಿಶಾಚ) ದಂತೆ ಕೂಗಿ ಕೊಳ್ಳುವರು, ದುಂಬಿಯು ಹಾಗೆ ಅಪಾಂತರಪೆಬ್ಬಿಸುತ್ತಲಿರುವರು. ಸೆರೆಸಿಕ್ಕವರಂತೆ ಸಂಕಟ ಪಡುವರು, ನ್ಯಾಯವಿಲ್ಲದವನ ಊರಿನ ಹಾಗೆ ಮೊರೆಯಿಡುತ್ತಾರೆ, ತುಳುನಾಡಿನಲ್ಲಿ ಸತ್ತ ಮನೆಯು ಹಾಗೆ ಗೋಳಿಡುವರು, ರೋಗ ಬಂದವರಂತೆ ಬೀಳುವರು, ಬಡಕಲು ಎತ್ತಿನಂತೆ ನಡುಗುವರು, ಹಾವಿನ ಹಾಗೆ ಹೊರಳುವರು. ನೋವು ತಿಂದ ಕರಡಿಯು ಹಾಗೆ ಮೇಲೆ ನುಗ್ಗುವರು, ಹುಣ್ಣನ್ನು ಸುಡಿಸಿಕೊಳ್ಳುವವರಂತೆ (ದಾಹಚಿಕಿತ್ಸೆ-ಬರೆಹಾಕುವುದು) ಅಸಹಾಯಕರಾಗಿ ಒದ್ದಾಡುವರು, ಹೊಡೆತ ಬಿದ್ದವರಂತೆ ನಿಟ್ಟುಸಿರು ಬಿಡುವರು, ಕೆಟ್ಟ (ಕಳೆದುಕೊಂಡ) ಒಕ್ಕಲಿನಂತೆ ನಿಲ್ಲಲಾರದೆ ನಡುಗುವರು, ಅದಿರುವಾಯುರೋಗ ಬಂದವರ ಹಾಗೆ ನಡುಗುವರು, ತೊನ್ನುಳ್ಳವರಂತೆ ರಸಿಕೆಯನ್ನು ಸುರಿಸುವರು, ಹೆಳವರ ಹಾಗೆ ಏಳಲಾರೆವೆನ್ನುವರು, ಹೀಗೆ ನರಕದಲ್ಲಿ ಯಾವ ಸ್ಥಳದಲ್ಲಿ ನೋಡಿದರೂ. ೭೮. ಎಂದು ಅವಧಿ ತೀರುವುದೋ, ಅಂದಿನ ವರೆಗೆ ನಾರಕರು, ಪಾಪಿಗಳನ್ನು ಬಿಡದೆ ಈ ಬಗೆಯಿಂದ ಹಗಲೂ-ರಾತ್ರಿ ಒಂದೇ ಸಮನಾಗಿ ಹಿಂಸಿಸುತ್ತ ಇರುವರು. ೭೯. ನದಿಯೆಂದು ನೀರಿನ ಆಸೆಯಿಂದ ಸಮೀಪಿಸಿದರೆ ಆ

ತೊಱೆಯೆಂದು ಸಾರೆ ಮಾಯದ
ತೊಱೆಗಳ್ಕಾಯ್ದೆಣ್ಣೆಯಾಗಿ ಪತ್ತಿ ಸುಡಲ್ಕೆ
ಯ್ಯಱಿಯದೆ ಕರ್ಬುನದಂತಿರೆ
ನೆಱೆ ಬೆಯ್ಯುತ್ತಿಂತು ಮಱುಗುವರ್ ಪಲವುದಿನಂ ೮೦

ಬನಮೆಂದು ಪೊರ್ದೆ ಮಾಯದ
ವನಮೆಂತುಂ ಪೋಗಲೀಯದಂಬಿನ ಸರಿಯಂ
ಘನಮಾಗಿ ಸುರಿಯೆ ದುಃಖದಿ
ನೆನಿತಾನುಂ ಕಾಲಮಿರ್ಪರೋವ್ವೋಯೆನುತುಂ ೮೧

ಮರನೆಂದು ಪೋಗಿ ಸಾರ್ವುದು
ಉರಿಗಳ ನಾಲಗೆಗಳಂತೆ ಮರದೆಲೆಯೆಲ್ಲಂ
ಪಿರಿದಪ್ಪ ಚೇೞ ರೂಪಿಂ
ದರೆಯಟ್ಟಿ ಮುಟ್ಟಿ ಕಡಿವುವು ಮುಳಿಸಿಂ ೮೨

ಗದ್ಯ॥ ಮತ್ತಂ ಇಲಿಯು ಬೆಕ್ಕಿನ, ಪುಲಿಯುಪುಲ್ಲೆಯ, ತಳಾಱನ ಕಳ್ಳನ, ನವಿಲ ಪಾವಿನ, ಸಿಂಗದಾನೆಯ, ನಾಯುಮೊಲದ, ಕುದುರೆಯ ಕೋಣನ, (ಮುಳಿಸಿಂ) ನಾಯ್‌ನಾಯೊಳ್, ಕೋಣಂ ಕೋಣನೊಳ್, ಕೋೞಿ ಕೋೞಿಯೊಳ್, ಆನೆಯಾನೆಯೊಳ್ ಮೂರ್ಖಂ ಮೂರ್ಖನೊಳ್, ತಗರ್‌ತಗರೊಳ್, ಮಲ್ಲರ್ ಮಲ್ಲರೊಳ್, . ತಾಗುವಂತೆ ಕಿಚ್ಚುಂಕಿಡಿಯುಮಾಗಿ, ತಂತಮ್ಮೊಳ್ ತಾಗಿ ದುಃಖಂ ಬಡುವರೆಂದು ನರಕದೊಳಾದ ಮಹಾದುಃಖಮಂ ಭಾವಿಸಿ ೮೩

ಮಾಯೆಯ ತೊರೆಗಳು ಕಾದ ಎಣ್ಣೆಯಾಗಿ ಮೈಹತ್ತಿ ಸುಡಲು ಪರವಶರಾಗಿ, ಕಬ್ಬಿಣದ ಹಾಗೆ ಬೇಯುತ್ತ, ಹಲವುದಿನ ಹೀಗೆ ಕುದಿಯುವರು. ೮೦ ವನವೆಂದು ಹತ್ತಿರ ಹೋದರೆ ಆ ಮಾಯಾವನ, ಹೇಗೂ ಹೋಗಗೊಡದೆ ಬಾಣಗಳ ಮಳೆಯನ್ನು ಅತಿಶಯವಾಗಿ ಸುರಿಸಲು, ದುಃಖದಿಂದ, ಅಯ್ಯೋ ಎಷ್ಟು ಕಾಲವಿರುವರೋ! ೮೧. ಮರವೆಂದು ಹೋದರೆ ಅಗ್ನಿಯ ಜ್ವಾಲೆಗಳಂತೆ ಮರದ ಎಲೆಗಳೆಲ್ಲ ದೊಡ್ಡದಾದ ಚೇಳಿನ ರೂಪದಿಂದ ರಭಸದಿಂದ ಅಟ್ಟಿಸಿಕೊಂಡು ಹೋಗಿ ಸಿಟ್ಟಿನಿಂದ ಕಡಿಯುವುವು. ೮೨ ಅಲ್ಲದೆ ಇಲಿಬೆಕ್ಕುಗಳಂತೆ, ಹುಲಿಜಿಂಕೆಗಳಂತೆ ತಳವಾರ ಕಳ್ಳರಂತೆ, ನವಿಲುಹಾವುಗಳಂತೆ ಸಿಂಹ ಮತ್ತು ಆನೆಗಳಂತೆ, ನಾಯಿ ಮೊಲಗಳ ಹಾಗೆ. ಕುದುರೆ ಕೋಣ (ಅಶ್ವಮಹಿಷನ್ಯಾಯ)ಗಳಂತೆ, ಸಿಟ್ಟಿನಿಂದ ನಾಯಿಗಳು. ಕೋಣಗಳು, ಟಗರುಗಳು, ಜಟ್ಟಿಗಳು. ಮೂರ್ಖರು ತಮ್ಮತಮ್ಮಲ್ಲಿ ಜಗಳ ಕಾಯುವಂತೆ, ಕಿಚ್ಚುಕೆಂಡಗಳನ್ನೇ ಕಾರುತ್ತ, ಕಾಳಗ ಮಾಡಿ ದುಃಖಪಡುವರೆಂದು ನರಕದಲ್ಲಿ ಉಂಟಾಗುವ ಮಹಾದುಃಖವನ್ನು ಕುರಿತು ಚಿಂತಿಸಿದಳು. ೮೩. ಆ ದುಃಖದ

ಆ ದುಃಖದೆಡೆಗೆ ಭಾವಿಪೊ
ಡೀ ದುಃಖಂ ಪಿರಿದೆ ಕರ್ಮವಶದಿಂದಾನಿಂ
ತಾದೆಂ ಕೇಳೆನಗಿಂ ಜಿನ
ಪಾದಮೆ ಶರಣೆಂದು ಕನ್ನೆ ನಿಶ್ಚಯಿಸುತ್ತುಂ ೮೪

ಕರಿ ಬನಮಂ ಮದಾಳಿ ವನಜಾಕರಮಂ ಶಿಶು ತಾಯನೊಲ್ದಗಂ
ಡರನಬಲಾಜನಂ ನೆನೆವ ಮಾರ್ಗದಿನಿಂದ್ರ ನರೇಂದ್ರ ವಂದ್ಯನಂ
ಪರಮ ಜಿನೇಂದ್ರನಂ ನೆನೆಯುತಂ ಜಿನಪೂಜೆಯನಾಗಳುಂ ಸವಿ
ಸ್ತರದೊಳೆ ಕೇಳಿ ಭಾವಿಸುತೆ ಮಾಡುತೆ ಜೈನಗುಣಸ್ತವಂಗಳಂ ೮೫

ಗದ್ಯ॥ ಅಂತಿರ್ಪಕನ್ನೆಗಂ ೮೬

ಕರಿಘಟೆಯುಂ ಮೃಗೇಂದ್ರತತಿಯುಂ ಪುಲಿವಿಂಡುಗಳುಂ ಮೃಗಂಗಳುಂ
ಶರಭ ಸಮೂಹಮುಂ ಹರಿವಿರೋಧಿಗಳುಂ ಫಣಿಯುಂ ನವಿಲ್ಗಳುಂ
ಪುರುಡಿಪ ಕಾಗೆಯುಂ ನಲಿವ ಕೋಗಿಲೆಯುಂ ತೊಱೆದೆಯ್ದೆ ವೈರಮಂ
ನೆರೆದೊಡನಿರ್ದವಂಬುರುಹಲೋಚನೆಯಿರ್ದ ವನಾಂತರಾಳದೊಳ್ ೮೭

ಗದ್ಯ॥ ಅಂತು, ಪಗೆ ಕೆಳೆಯಿಲ್ಲದೆಲ್ಲಾ ಮೃಗಂಗಳುಂ ಮಿತ್ರತ್ವದೊಳಿರೆ, ವನದೊಳ್ ಶಾಂತಿ
ರಸಮೆಸೆಯೆ ಕುಮಾರಿಯಿರ್ಪುದುಂ ಶಂಖಪುರದೊಳಿರ್ಪ ವನಚರನುಂ ಬೇಡಿತಿಯುಂ, ೮೮

ವಿಷಯವನ್ನು ಯೋಚಿಸಿದರೆ ಈ ದುಃಖ ದೊಡ್ಡದೆ ? ಕರ್ಮವಶದಿಂದ ಹೀಗಾದೆನು. 'ಇನ್ನು ನನಗೆ ಜಿನಪಾದಗಳೇ ಶರಣು' ಎಂದು ಆ ಕನ್ಯೆಯು ನಿಶ್ಚಯಿಸಿಕೊಂಡಳು ೮೪. ಆನೆ ಎಲ್ಲಿದ್ದರೂ ಕಾಡನ್ನೇ ಧ್ಯಾನಿಸುವ ಹಾಗೆ ಮದಿಸಿದ ದುಂಬಿಗಳು ಸರೋಜ ಸಮೂಹ (ಕಮಲಾಕರ)ವನ್ನುಳ್ಳ ಸರೋವರನ್ನೇ ಧ್ಯಾನಿಸುವಂತೆ ಮಗು ತಾಯಿಯನ್ನು, ಸ್ತ್ರೀಯರು ತಮ್ಮ ಪ್ರಿಯರಾದ ಗಂಡಂದಿರನ್ನು, ಧ್ಯಾನಿಸುವಂತೆ, ಇಂದ್ರರಿಗೂ ನರೇಂದ್ರರಿಗೂ ಪೂಜ್ಯರಾದ ಜಿನೇಂದ್ರನನ್ನೇ ಧ್ಯಾನಿಸುತ್ತ ಯಾವಾಗಲೂ ಜಿನಪೂಜೆಯನ್ನು ವಿಸ್ತಾರವಾಗಿ ಕೇಳಿ, ಜೈನಗುಣಸ್ತೋತ್ರಗಳನ್ನು ಸಂಭಾವಿಸುತ್ತ ಇದ್ದಳು. ೮೫ ಹಾಗೆ ಇರುತ್ತಿದ್ದಾಗ ೮೬. ಅನಂತಮತಿ ಇದ್ದ ಆ ವನಭಾಗದಲ್ಲಿ ಆನೆ ಮತ್ತು ಸಿಂಹಗಳು ತಮ್ಮ ವೈರವನ್ನು ಮರೆತವು. ಹುಲಿವಿಂಡುಗಳೂ ಜಿಂಕೆಗಳೂ ಶರಭಗಳೂ ಸಿಂಹಗಳೂ ಹಾವೂ ನವಿಲುಗಳೂ, ಕಾಗೆ ಕೋಗಿಲೆಗಳೂ ತಮ್ಮ ಪರಸ್ಪರ ವೈರವನ್ನು ಒಟ್ಟು ಬಟ್ಟಿಗೆ ಸೇರಿ ವಾಸವಾಗಿ ಇರತೊಡಗಿದವು. ೮೭. ಹಾಗೆ ದ್ವೇಷ, ಸ್ನೇಹ, ಎಂಬುದಿಲ್ಲದೆ, ಎಲ್ಲಾ ಪ್ರಾಣಿಗಳೂ ಮೈತ್ರಿಯಿಂದರಲು ಆ ವನದಲ್ಲಿ ಶಾಂತಿ ನೆಲೆಸಲು ಅನಂತಮತಿ ಅಸಹಾಯಳಾಗಿ ಇದ್ದಳು. ೮೮. ಆಗ ಶಂಖಪುರದ ನಿವಾಸಿಗಳಾದ ಒಬ್ಬ ಬೇಡನೂ ಬೇಡಿತಿಯೂ

ಪೊಲಕಾಗಿ ಬರುತುಮೊರ್ಮೆಯೆ
ಲಲಿತಾಂಗಿಯು ನೊರ್ಮೆಯೆ, ಕಂಡು ದೇವತೆ ನಮ್ಮಂ
ತೊಲಗಿದೊಡೆ ಪಿಡಿದು ಕೊಲ್ಗುಂ
ದೆಲೆಮಿಡುಕದೆ ನಿಂದು ಪೊರ್ದಿ ಬಂದಾದರದಿಂ ೬೯

ಗದ್ಯ ॥ ತಮ್ಮ ಪೊತ್ತು ತಂದಿಪ್ಪೆಯ ಪೂವುಮಂ ಬೇಳದ ಪಣ್ಣುಮಂ ಕನ್ನೆಯ ಮುಂದೆ ಪೊಯ್ದು ಪೊಡೆಮಟ್ಟು ಪೋಗಿ ತಮ್ಮಾಳ್ದನಪ್ಪ ಬೇಡರಸಂಗೆ ದೇವತೆ ಬಂದು ಭೀಮವನದೊಳಿರ್ದಳಲ್ಲಿಗೆ ಪೋಗಿ ನಿಮ್ಮ ಬೇಟ್ಪ ವರಮಂ ಬೇಡಿಕೊಳ್ಳಿಮೆಂದು ಬಿನ್ನಪಂಗೆಯ್ವುದುಂ, ೭೦

ಬೇಡರಸುಂ ಕೇಳ್ದಾಗಳೆ
ನೀಡಿಲ್ಲದೆ ತದ್ವನಕ್ಕೆ ಬಂದಾ ಸತಿಯಂ
ನೋಡಿ ಯೆಮೆಯಿಕ್ಕುವುದಱಿಂ
ನಾಡೆಯುಮೀವನಿತೆ ದೇವಕನ್ನಿಕೆಯಲ್ಲಂ ೭೧

ಗದ್ಯ॥ ಎಂದೇಱಿಯುಂ ಮಿಱಿಯೆಯುಂ ನೋಡಿ ತಾನಾಕೆಗಾಸಕ್ತನಾಗಿ ಕನ್ನೆಯನರಮನೆಗೊಡಗೊಂಡು ಪೋಗಿ ತನ್ನ ಮಹಿಮೆಯುಂ ಸಿರಿಯುಮಂ ತೋಱಿ ಮೆಲ್ಲನೆ ೭೨

ಹೊಲಕ್ಕೆಂದು ಹೊರಟುಬರುತ್ತ ಹಠಾತ್ತಾಗಿ ಸುಂದರಿಯಾದ ಕನ್ಯೆಯನ್ನು ಗಮನಿಸಿ "ಈಕೆ ದೇವತೆ, ನಾವು ಹಾಗೆಯೇ ಹೊರಟುಹೋದರೆ ಹಿಡಿದು ಕೊಂದಾಳು" ಎಂದು ರೆಪ್ಪೆ ಹೊಡೆಯದೆ ಭಕ್ತಿಯಿಂದ ನೋಡುತ್ತ ಆಕೆಯ ಸಮೀಪಕ್ಕೆ ಹೋಗಿ ಆದರದಿಂದ ೬೯. ತಾವು ಹೊತ್ತು ತಂದಿದ್ದ ಇಪ್ಪೆಯ ಹೂವನ್ನೂ ಬೇಲದ ಹಣ್ಣುಗಳನ್ನು ಕನ್ಯೆಯ ಮುಂದೆ ಹೊಯಿದು, ನಮಸ್ಕರಿಸಿ, ಹೋಗಿ ತಮ್ಮ ಒಡೆಯನಾದ ಬೇಡರ ಅರಸನಿಗೆ 'ಯಾರೋ ದೇವತೆ ಬಂದು ಭೀಮ ವನದಲ್ಲಿ ಇದ್ದಾಳೆ, ಹೋಗಿ ನಿಮಗೆ ಬೇಕಾದ ವರವನ್ನು ಕೇಳಿಕೊಳ್ಳಿ' ಎಂದು ಬಿನ್ನವಿಸಿದರು ೭೦. ಅದನ್ನು ಕೇಳಿ ಆ ಬೇಡರಸನು ತಡವಿಲ್ಲದೆ ಆ ವನಕ್ಕೆ ಬಂದು ಆ ಸತಿಯನ್ನು ನೋಡಿ, "ಎವೆಯಿಕ್ಕುವುದರಿಂದ ಈ ವನಿತೆ ದೇವಕನ್ನಿಕೆಯಲ್ಲ" ೭೧. ಎಂದು ಗ್ರಹಿಸಿ ಅವಳನ್ನು ಮೇಲೆ, ಕೆಳಗೆ, ನೋಡಿ, ಅವಳಲ್ಲಿ ತನಗೆ ಆಸಕ್ತಿ ಹುಟ್ಟಲು ಕನ್ಯೆಯನ್ನು ಅರಮನೆಗೆ ಕರೆದುಕೊಂಡು ಹೋಗಿ ತನ್ನ ಮಹಿಮೆಯನ್ನೂ ಐಶ್ವರ್ಯವನ್ನೂ ತೋರಿಸಿದನು. ೭೨. ಆಮೇಲೆ

ನಿನ್ನಂತೆ ನೋಂತ ಸತಿಯಾ
ರೆನ್ನಂತಪ್ಪ ಪ್ರತಾಪಿಯಂ ಪಡೆದೈ ರೂ
ಪೋನ್ನತಿಯಿನೆನುತೆ ಮೊಣದೆ
ತನ್ನಲ್ಲಿಗೆ ಕರೆವುದುಂ ತಳೋದರಿ ಮನದೊಳ್ ೯೩

ಬೆಱಗಾಗಿ ಚಿಂತೆಯಿಂ ಬಾ
ಯ್ಬಱಬಱಬತ್ತುತ್ತುಮೋವೋ ಕೊಂಡೀ ವ್ರತಮಂ
ತೊಱೆವುದಱಿಂ ಸಾವುದು ಕರ
ಮುಱುವುದು ಚಿಃ ಕಷ್ಟಮೆಂದು ನಿಶ್ಚಲಮತಿಯಿಂ ೯೪

ಗದ್ಯ॥ ಮೋನಂಗೊಂಡು ಪಂಚನಮಸ್ಕಾರಮಂ ಜಪಿಸುತ್ತುಮುಸಿರದಿರ್ಪುದುಂ ಕಿರಾತರಾಜನೆನಿತಾನುಂ ತೆಱದಿಂದೊಡಂಬಡಿಸಲಾಱದೆ ಮುಳಿದು ಕಿಡಿಕಿಡಿಯಾಗಿ ಮೀಸೆಯಂ ಕಡಿದು ೯೫

ಕೂಸೆಂಬುದು ತಪ್ಪದು ನಿ
ನ್ನಾಸೆಯೊಳಿಂ ನಿನಗೆ ಸಕಲರಾಜ್ಯಶ್ರೀಯಂ
ಲೇಸಾಗಿ ಮಾಡದಿರ್ದೊಡೆ
ದೇಸಿಗತನದಿಂದೆ ನಮೆವುದೊಂದನೆ ಬಗೆವೌ ೯೬

ಅವನು ಮೆಲ್ಲನೆ "ನನ್ನಂಥ ಪ್ರತಾಪಿಯನ್ನು ಪಡೆದೆ. ನಿನ್ನ ಹಾಗೆ ಪುಣ್ಯವತಿಯರು ಯಾರು ? ನಿನ್ನ ರೂಪೋನ್ನತಿಯನ್ನು ಕಂಡೆ" ಎಂದು ನುಡಿದು ಅವಳನ್ನು ತನ್ನಲ್ಲಿಗೆ ಕರೆದನು, ಆಗ ಆ ಹೆಣ್ಣು ತನ್ನ ಮನಸ್ಸಿನಲ್ಲಿ ಗಾಬರಿಗೊಂಡು ಚಿಂತೆಯಿಂದ ಬಾಯಿಬತ್ತಿ ಹೋಗುತ್ತಿರಲು. "ಓವೋ ! ಹಿಡಿದ ಈ ನನ್ನ ವ್ರತವನ್ನು ಬಿಡುವುದಕ್ಕಿಂತ ಸಾಯುವುದೇ ಬಹಳ ಉತ್ತಮ." ಎಂದು ನಿಶ್ಚಲಮತಿಯುಳ್ಳವಳಾಗಿ ಮೌನವಹಿಸಿ ೯೪. ಪಂಚನಮಸ್ಕಾರವನ್ನು ಜಪಿಸುತ್ತ, ಮಾತನಾಡದಿರಲು ಕಿರಾತರಾಜನು ಎಷ್ಟೋ ಬಗೆಯಿಂದ ಅವಳನ್ನು ಒಪ್ಪಿಸಲು ಪ್ರಯತ್ನಿಸಿ, ಸಾಧ್ಯವಾಗದೆ, ಸಿಟ್ಟಾಗಿ ಕಿಡಿಕಾರುತ್ತ. ಮೀಸೆ ಕಡಿದು, ೯೫. "ನೀನು ಇನ್ನೂ ಹುಡುಗಿ, ಸುಳ್ಳಲ್ಲ, ನಿನ್ನ ಮೇಲಿನ ಆಸೆಯಿಂದ ನಾನು ನಿನಗೆ ಸಮಸ್ತ ರಾಜ್ಯೈಶ್ವರ್ಯವನ್ನೂ ಶ್ರೇಷ್ಠವಾಗಿ ಕೊಡಲಿದ್ದೇನೆ. ಅದನ್ನು ಬಿಟ್ಟು ಪರದೇಶಿಯಾಗಿ ನವೆಯುವುದೊಂದನ್ನೇ ಯೋಚಿಸುವೆಯಾ ?" ೯೬. ಎಂದು ಕೋಪದಿಂದ ಹೊಡೆದು "ನಾನು

ಗದ್ಯ॥ ಎಂದು ಮಸಗಿ ಬಡಿದೊರ್ವೆಯೆ ನಿನಗೆ ಮುನಿವನಲ್ಲಿಂದಿನಿರುಳಿನೊಳಗೆ ನಿನ್ನ ಮನಮಂ ಸೈತುಮಾಡು. ಮಾಡದೊಱಂಟುತನಮಂ ಮಾಡಿದೆಯಪ್ಪೊಡೆ ನಿನಗೆ ತಕ್ಕ ವಿಧಿಯಂ ನಾಳೆ ಮಾೞ್ಪೆನೆಂದು ಬಲ್ಕಾಪಂ ಪೇೞ್ದು ಪೋದನನ್ನೆಗಮಿತ್ತಲ್ ಉವರಿ ೯೭

ಪಿಡಿದೀವ್ರತಮಂ ನಾಂ ಸಾ
ಪೊಡೆ ಸಾವೆಂ ಬಿಡುವೆನಲ್ಲವೆಂದೊಡೆ ಮೂರ್ಖಂ
ಮಡಿಪದೆ ಮಾಣಂ ಬಲ್ಪಿಂ
ಪಿಡಿವೆಂ ಜಿನಪದಮನಿದುವೆ ಕಜ್ಜಂ ಪೆಱತೇಂ ೯೮

ಗದ್ಯ॥ ಎಂದಾಲೋಚಿಸಿ ಕಳೆಯಬಾರದುಪಸರ್ಗಮಿದು ಪಿಂಗುವಿನಮಾಹಾರ ಶರೀರ ನಿವೃತ್ತಿಯೆಂದು ಪರಿಚ್ಛೇದಿಸಿರ್ಪುದುಂ ಯಕ್ಷಿಗಾಸನಕಂಪಮಾಗೆ ಬಂದು ಕನ್ನೆಯ ಮನಮಂ ನೋಡಲೆಂದು ಕಿರಾತರಾಜನ ರೂಪುಗೊಂಡು ೯೯

ವನರುಹಮುಖಿಯಲ್ಲಿಗೆ ತೊ
ಟ್ಟನೆ ಪಿರಿದಪ್ಪೊಂದುಲೀಲೆಯಿಂ ಬಂದೊಡನಿ
ರ್ದನಿಬರುಮೊಡನೆಸೆದಿರೆ ತ
ನ್ನನೆ ಪೊಗೞುತ್ತಿರ್ಪಿನಂ ಕಿರಾತಂ ನುಡಿದಂ ೧೦೦

ನಿನಗೆ ಒಂದೇ ಸಲಕ್ಕೆ ಸಿಟ್ಟಾಗುವುದಿಲ್ಲ, ಇಂದಿನ ರಾತ್ರಿಯೊಳಗೆ ನಿನ್ನ ಮಾನಸ್ಸನ್ನು ಸರಿಪಡಿಸಿಕೋ, ಹಾಗಿಲ್ಲದೆ ಒರಟುತನವನ್ನೇ ಮಾಡಿದೆಯಾದರೆ ನಿನಗೆ ತಕ್ಕ ಶಿಕ್ಷೆಯನ್ನು ನಾಳೆ ಮಾಡುವೆನು" ಎಂದು ನುಡಿದು ಬಲವಾದ ಕಾವಲು ಹಾಕಿ ಹೊರಟುಹೋದನು ೯೭. ಇತ್ತ, ಆ ಮಗಳು "ನಾನು ಈ ವ್ರತವನ್ನು ಹಿಡಿದು ಸತ್ತರೂ ಚಿಂತೆಯಿಲ್ಲ ; ವ್ರತವನ್ನು ಬಿಡಲೊಲ್ಲೆ. ಈ ಮೂರ್ಖನು ಕೊಲ್ಲದೆ ಬಿಡುವುದಿಲ್ಲ. ಜಿನಪಾದಗಳನ್ನೇ ಬಲವಾಗಿ ಹಿಡಿಯುತ್ತೇನೆ. ಬೇರೇನು ಕೆಲಸ ?" ಎಂದು ಆಲೋಚಿಸಿ ೯೮. "ಇದು ಕಳೆಯಲಾಗದ ಉಪಸರ್ಗ. (ಹಿಂಸೆ) ಇದು ಕಳೆಯುವತನಕ ಆಹಾರ, ಶರೀರ–ಇವುಗಳ ನಿವೃತ್ತಿಯೇ ಸರಿ" ಎಂದು ನಿರ್ಧರಿಸಿಕೊಂಡಿದ್ದಳು. ಆಗ ಯಕ್ಷಿಗೆ ಆಸನಕಂಪವಾಯಿತು. ಆಕೆ ಕನ್ಯೆಯ ಮನಸ್ಸನ್ನು ಪರೀಕ್ಷಿಸಬೇಕೆಂದು ಬಗೆದು ಕಿರಾತರಾಜನ ರೂಪವನ್ನು ಧರಿಸಿ ಬಂದಳು. ೯೯ ಆ ಮಾಯಾಕಿರಾತನು ಕಮಲ ಮುಖಿಯ ಬಳಿಗೆ ತಟ್ಟನೆ ಮಹಾಲೀಲೆಯಿಂದ ಬಂದನು. ಅವನ ಜತೆಯಲ್ಲಿದ್ದವರೆಲ್ಲ ಅವನನ್ನೇ ಹೊಗಳುತ್ತಿರಲು ಅವನು ಹೀಗೆಂದನು ೧೦೦, "ರತಿ, ರಂಭೆ, ತಿಲೋತ್ತಮೆ,

ರತಿ ರಂಭೆ ತಿಲೋತ್ತಮೆ ಭಾ
ರತಿಯೆಂಬಿವರ ದೊರೆಗೆ ಮಿಗಿಲೆನಿಸಿದ ಮ
ತ್ಸತಿಯರ್ಪಲರಿರ್ದಪರು
ನ್ನತಿಯಿಂದಂ ನಂಬೆಯಪ್ಪೊಡಂ ನೀನಿವರಂ ೧೦೧

ನೋಡೆಂದು ತನ್ನ ಕೃತಕದಿಂ ಪಡೆದೊಳ್ಪೆಂಡಿರಂ ತೋಱಿ ಮತ್ತಂ ೧೦೨

ರೂಪಿಲ್ಲೆನಗೆನ್ನೆಂಬೊಡೆ
ರೂಪಿಂ ಪ್ರತ್ಯಕ್ಷಕಾಮದೇವನೆ ನಾನಿಂ
ಚಾಪಳನಯನೆ ಮನೋಹರ
ರೂಪೆ ಮನೋಮುದದಿನೆನ್ನ ರೂಪಂ ನೋಡಾ ೧೦೩

ಗದ್ಯ॥ ಎಂದು ತನ್ನ ವಿಗುರ್ವಿಸಿದ ಕಾಮರೂಪಂ ತೋಱಿ ಸಿರಿಬರೆ ಮೊಳಕಾಲನೊಡ್ಡಿದರೆಂಬಂತೆಲೆ ಮರುಳೆ ಭಾವಿಪೊಡೆನ್ನೊಳಾವಕೊಱತೆಯಾಗಿರ್ದುದಂತಿಂತೆನ್ನದೆನಗೊಡಂಬಡುವುದೆಂಬುದುಮನಂತಮತಿ ತನ್ನೊಳ್ ೧೦೪

ಜಿನಪಾದಭಕ್ತಿಯಿಂ ನೆ
ಟ್ಟನೆ ಮೋಕ್ಷಶ್ರೀ ಲತಾಂಗಿ ದೊರೆಕೊಳ್ಗಿನೆ ಮ
ತ್ತಿನ ಸಿರಿಯುಂ ಗಿರಿಯುಂ ನೆ
ಟ್ಟನೆ ಸುಖಮುಂ ಗಿಖಮುಮಪ್ಪುದಾವುದು ಗಹನಂ ೧೦೫

ಭಾರತಿಯೆಂಬಿವರಿಗೆ ಸರಿಮಿಗೆಲೆನಿಸುವಂಥ ಹಲವರು ಹೆಂಡಿರು ನನಗಿದ್ದಾರೆ. ಅದನ್ನು ನೀನು ನಂಬಲಾರೆಯಾದರೆ ನೀವು ಇವರನ್ನು ೧೦೧ ನೋಡು," ಎಂದು ತಾನು ಕೃತಕವಾಗಿ ಸೃಷ್ಟಿಸಿದ್ದ ಒಳ್ಳೆಯ ಹೆಂಗಸರನ್ನು ತೋರಿಸಿದನು ೧೦೨. ಅಲ್ಲದೆ "ನನಗೆ ರೂಪವಿಲ್ಲವೆನ್ನುವೆಯಾದರೆ, ನಾನು ರೂಪದಲ್ಲಿ ಪ್ರತ್ಯಕ್ಷ ಕಾಮದೇವನೇ ಹೌದು, ಎಲೌ ಚಪಲ ನಯನೆ ! ಮನೋಹರೆ, ರೂಪವತಿ ! ನೀನೀಗ ಸಂತೋಷಚಿತ್ತದಿಂದ ನನ್ನ ರೂಪವನ್ನು ನೋಡು" ಎಂದು ಹೇಳಿ ತಾನು ಮಾಯಾಶಕ್ತಿಯಿಂದ ಸೃಷ್ಟಿಮಾಡಿದ್ದ ಕಾಮದೇವನ ರೂಪವನ್ನು ತೋರಿಸಿ, "ಐಶ್ವರ್ಯ ಬಂದರೆ ಮೊಣಕಾಲನ್ನು ಒಡ್ಡಿದರು" ಎಂಬ ಹಾಗೆ ಎಲೌ ಹುಚ್ಚಿ, ನನ್ನಲ್ಲಿ ಯಾವ ಕೊರತೆಯಿದೆ ? ಹಾಗೆ, ಹೀಗೆ, ಎನ್ನದೆ (ಪ್ರತಿ ಮಾತನಾಡದೆ) ನನ್ನನ್ನು ಒಪ್ಪಿಕೊ" ಎಂದು ಹೇಳಿದನು ೧೦೪. ಆಗ ಅನಂತಮತಿ ತನ್ನಲ್ಲಿ, 'ಜಿನಪಾದಭಕ್ತಿಯಿಂದ ಮೋಕ್ಷಲಕ್ಷ್ಮಿಯೇ ಲಭಿಸುವುದೆನ್ನುವಾಗ ಉಳಿದ ಸಿರಿಗಿರಿಗಳೂ, ಸುಖಗಿಖಗಳೂ ಆಗುವುದು ಯಾವ ದೊಡ್ಡ ವಿಚಾರ ?' ೧೦೫. ಎಂದು ಸದ್ಭಾವನೆ

ಗದ್ಯ॥ ಎಂದು ಶುಭಭಾವನೆಯಿಂದವಱ ಮೇಲೆಳ್ಳನಿತುಮಪ್ಪ ಮನಮಿಲ್ಲದೆ ಪಂಚಪದಂಗಳಂ ನೆನೆಯುತ್ತುಂ ಮಱುಮಾತುಗುಡದಿರ್ಪುದುಂ ಯಕ್ಷಿ ಮೆಚ್ಚಿ ತನ್ನ ದಿವ್ಯ ಸ್ವರೂಪಮಂ ತೋಱ ೧೧೬

ಜಿನನಾಥನಿಷ್ಟದೈವಂ
ನಿನಗಂ ಮತ್ತೆನಗಮೆಂಬ ಕಡುಮೋಹದಿನೀ
ವನಚರನಿಂದುಪಸರ್ಗಂ
ನಿನಗಾದುದನಱದು ಪಿಂಗಿಸಲ್ವೇಡಿ ಕರಂ ೧೧೭

ಗದ್ಯ॥ ಬೇಗಂ ಬಂದೆನಿದಕ್ಕಂಜವೇಡೆಂದು ಸಂತೈಸಿ ಪೋಗಿ ಮೆಯ್ಮಱೆದೊಱಗಿದ ಕಿರಾತರಾಜನ ತಲೆಯಂ ಪೊಯ್ದು ವನನಂಜಿಸಲ್ವೇಡಿ ರೌದ್ರರೂಪಂ ವಿಗುರ್ವಿಸಿ ತೋಱ ೧೧೮

ಆನಪ್ಪೊಡೆ ದೇವತೆಯೆಂ
ನೀನಱಯದೆ ಕೊರ್ವಿ ಚಪಳತನದಿಂದೆನ್ನಂ
ಮಾನಿಸೆಯೆ ಗೆತ್ತು ನುಡಿದೈ
ನಾನಾ ವಿಧದಿಂದಮಾದೊಡೇನಾಯ್ತಿನ್ನುಂ ೧೧೯

ಗದ್ಯ॥ ನಿನ್ನ ಪೊಲ್ಲಮೆಯುಂ ಕೈಕೊಳ್ಳೆನೆನ್ನಂ ನಾಳೆ ಪೂಜಿಸಿ ಪೊಡೆಮಟ್ಟು ನೀನುಂ ನಿನ್ನ ಪರಿಜನಮುಂ ಕಾಂತಾರಮಂ ಪೊಱಮಡಿಸಿ ಬೇಗಮಯೋಧ್ಯಾಪುರದ ಬಟ್ಟೆಯಂ ತೋಱ

ಯಿಂದ, ಅವುಗಳಮೇಲೆ ಎಳ್ಳಷ್ಟೂ ಮನಸ್ಸಿಲ್ಲದೆ ಪಂಚಪದಗಳನ್ನು ಸ್ಮರಿಸುತ್ತ ಉತ್ತರವನ್ನೇ ಕೊಡದಿದ್ದುದನ್ನು ಮೆಚ್ಚಿ ಯಕ್ಷಿಯು ತನ್ನ ಮಾಯಾಕಿರಾತ ರೂಪವನ್ನು ಕೈಬಿಟ್ಟು ತನ್ನ ನಿಜವಾದ ದಿವ್ಯರೂಪವನ್ನು ತೋರಿಸಿ ೧೧೬. "ನಿನಗೂ ನನಗೂ ಜಿನನಾಥನೇ ಇಷ್ಟದೈವ. ಈ ಮೋಹದಿಂದ, ನಿನಗೀಗ ಈ ಬೇಡನಿಂದ ಒದಗಿರುವ ಉಪಸರ್ಗವನ್ನು ಕಳೆಯಲೆಂದು ಬಂದೆ. ೧೧೭ ನೀನು ಇದಕ್ಕೆ ಅಂಜಬೇಡ" ಎಂದು ಹೇಳಿ ಅವಳನ್ನು ಸಂತೈಸಿ ಹೋಗಿ ಮೈಮರೆತು ಬಿದ್ದುಕೊಂಡಿದ್ದ ಆ ಕಿರಾತರಾಜನ ತಲೆಯನ್ನು ಒದ್ದು, ಅವನನ್ನು ಹೆದರಿಸಲು ಬಯಸಿ ಮಾಯೆಯಿಂದ ರೌದ್ರರೂಪವನ್ನು ತೋರಿಸಿ ೧೧೮. "ನಾನಾದರೋ ದೇವತೆ. ನೀನು ಅದನ್ನು ತಿಳಿದುಕೊಳ್ಳದೆ ನನ್ನನ್ನು ಮನುಷ್ಯಮಾತ್ರಳೆಂದು ತಿಳಿದು ಕೊಬ್ಬಿ ಚಪಲತೆಯಿಂದ ನಾನಾವಿಧವಾಗಿ ಮಾತನಾಡಿದೆ. ಆದರೆ ಏನಾಯಿತು ? ೧೧೯. ಇನ್ನು ನಿನ್ನ ನೀಚತನವನ್ನು ಸಹಿಸುವುದಿಲ್ಲ. ನೀನೂ ನಿನ್ನ ಪರಿಜನರೂ ನಾಳೆ ನನ್ನನ್ನು ಗೌರವದಿಂದ ಕಾಡಿನಿಂದ ಹೊರಕ್ಕೆ ಕರೆದುಕೊಂಡುಹೋಗಿ ಅಯೋಧ್ಯಾಪಟ್ಟಣದ ದಾರಿಯನ್ನು ತೋರಿಸಿ ಹಿಂತಿರುಗತಕ್ಕದ್ದು.

ಮಗುಟ್ಟುವದಲ್ಲದಂದು ನಿನಗೆ ನೀನೆಯಱಿವೆಯೆಂದು ದೇವಿಯು ದೃಶ್ಯಮಪ್ಪುದುಂ ಬೆರ್ಚಿ ಯಾಗಳೆಚ್ಚತ್ತು ೧೧೦

ಭಯದಿಂ ಕನಸಲ್ಲಿದು ನಿ
ಶ್ಚಯಮೆಂದಳ್ಕಳ್ಕಿ ನೋಡಿ ಮನೆಯೊಳ್ತಾಂ ಶಂ
ಕೆಯಿನಾಗಳ್ಪರಿಜನಮಂ
ನಯದಿಂ ಬರವೇಟ್ಟುಪೇಟ್ಟು ಬೆಳಗಾದಾಗಳ್ ೧೧೧

ಗದ್ಯ॥ ಬಂದು ಕಿರಾತ ರಾಜನಾ ಕನ್ನೆಯ ಪಾದಂಗಳಂ ಪಲತೆಱದಿಂದರ್ಚಿಸಿ ಬಿಜಯಂ ಗೆಯ್ವುದೆಂದು ಕೈಮುಗಿದು ಪುಲ್ವಟ್ಟೆಯಿಂ ಪೇರಡವಿಯಂ ಪೊಱಮಡಿಸಿ ಕಿಱಿದುಂ ದೂರಂ ಪೋಗಿ ಇದೆ ತೋರ್ಪುದಯೋಧ್ಯೆಯ ಬಟ್ಟೆಯೆಂದು ತೋಱಿ ಮಗುಟ್ದು ಪೋದನಿತ್ತಲನಂತ ಮತಿ ಬಂದೊಂದು ಬಸದಿಯೊಳ್ ದೇವರಂ ವಂದಿಸುತ್ತಿರ್ಪನ್ನೆಗಮಯೋಧ್ಯಾಪುರದಿಂ ಪುಷ್ಪಕ ನೆಂಬೊರ್ವಂ ೧೧೨

ವರವೈಶ್ಯನಂದನಂ ವಿ
ಸ್ತರದಿಂದಂ ಪರದುಪೋಪ ಸಮಕಟ್ಟಂ ಮಾ
ಣ್ದಿರದೆ ಪಿರಿದಪ್ಪ ತಂತ್ರಂ
ಬೆರಸು ಮನೋಮುದದಲ್ಲಿ ನಿಂದಾದರದಿಂ ೧೧೩

ಹಾಗೆ ಮಾಡದಿದ್ದರೆ ನಾಳೆ ನಿನಗೇ ತಿಳಿಯುತ್ತದೆ." ಎಂಬುದಾಗಿ ಹೇಳಿ ದೇವಿ ಅದೃಶ್ಯ ಳಾದಳು. ಆ ಬೇಡನಿಗೆ ಭಯವೇ ಆಯಿತು. ಅವನು ತಟ್ಟನೆ ಎಚ್ಚರ ಹೊಂದಿದನು. ೧೧೦. ಭಯದಿಂದ ತಾನು ಕಂಡದ್ದು ಕನಸಲ್ಲವೆಂದೂ ನಿಜವೆಂದೂ ಭಾವಿಸಿ ಹೆದರಿ ಹೆದರಿ ನೋಡುತ್ತ ಮನೆಯಲ್ಲಿ ಅನುಮಾನದಿಂದ, ಪರಿಜನರನ್ನು ಬರಹೇಳಿ ಬೆಳಿಗ್ಗೆ ೧೧೧. ಅವನು ಬಂದು ಆ ಕನ್ಯೆಯ ಪಾದಗಳನ್ನು ಹಲವು ಬಗೆಯಿಂದ ಪೂಜಿಸಿ "ಬಿಜಯಂ ಮಾಡಬೇಕು" ಎಂದು ಕೈಮುಗಿದು ಕೇಳಿಕೊಂಡು ಕಾಡಿನ ಕೀಳುದಾರಿಯಿಂದ ಹೊರಗೆ ಕರೆತಂದು ಕೊಂಚದೂರ ಹೋಗಿ "ಇದೇ ಅಯೋಧ್ಯೆಗೆ ಹೋಗುವ ದಾರಿ" ಎಂದು ತೋರಿಸಿ ಹಿಂತಿರುಗಿಹೋದನು. ಇತ್ತ ಅನಂತಮತಿಯು ಬಂದು ಒಂದು ಬಸದಿಯಲ್ಲಿ ದೇವರಿಗೆ ನಮಸ್ಕಾರ ಮಾಡುತ್ತಿದ್ದಳು. ಆಗ ಅಯೋಧ್ಯಾಪಟ್ಟಣದಿಂದ ಪುಷ್ಪಕನೆಂಬ ಒಬ್ಬ ೧೧೨. ವೈಶ್ಯಪುತ್ರನು ದೊಡ್ಡದಾಗಿ ವ್ಯಾಪಾರಕ್ಕೆಂದು ಹೊರಡುವ ಉದ್ದೇಶ ದಿಂದ ದೊಡ್ಡ ಪರಿವಾರದೊಡನೆ ಹೊರಟುಬಂದು ಆ ಬಸದಿಯಲ್ಲಿ ನಿಂತಿದ್ದನು ೧೧೩.

ಗದ್ಯ॥ ದೇವರಂ ಬಂದಿಸುತಿರ್ದನಂತಮತಿಯುಂ ಕಂಡು ಧರ್ಮವಾತ್ಸಲ್ಯದಿಂ ಬೀಡಿಂಗೊಡ ಗೊಂಡು ಪೋಗಿಯುಚಿತ ಪ್ರತಿಪತ್ತಿಯುಂ ಮಾಡಿ ತದನಂತರಂ ನಿಮ್ಮ ದೇಶವಾವುದು, ಊರಾವುದು, ತಂದೆ ಯಾರೆಂದು ಬೆಸಗೊಳ್ವುದುಂ ೧೧೪

ಕ್ಷಮೆಯೆ ಕೆಳೆಯುಂ ಶೀಲಂ ಪುತ್ರಂ ಸದಾಚರಿತಂ ಧನಂ
ವಿಮಳದಯೆ ತಾಯ್ಸತ್ಯಂ ಪಜ್ಜಂ ಗುಣಂಗಳ್ ಸೋದರರ್
ಕ್ರಮದೆ ತನಯಳ್ ತತ್ವಂ ಸಮ್ಯಕ್ತ್ವಮೊಪ್ಪುವ ತಂದೆ ಸಂ
ಯಮನೆ ಭವನಂ ದೇಶಂ ಮೋಕ್ಷಂ ಜಿನೋಕ್ತಿಯೆ ಪಟ್ಟಣಂ ೧೧೫

ಗದ್ಯ॥ ಎಂಬೀ ನುಡಿಯಿಂದೀಕನ್ನೆ ದರ್ಶನವಿಶುದ್ಧೆಯೆಂದು ಮೆಚ್ಚಿ ಮನೆಗೊಡ ಗೊಂಡು ಬಂದು ತನ್ನ ಭಾರ್ಯೆ ಗುಣವತಿಗೀ ಬಾಲೆಯುಂ ನಿನ್ನ ಮಗಳೆಂದು ಭಾವಿಸಿಯಾಂ ಮಗುಟ್ದು ಬರ್ಪಿನಂ ಪ್ರಯತ್ನದಿಂ ನಡೆಪುವುದೆಂದೊಪ್ಪಿಸಿ ಪುಷ್ಪಕಂ ಮಗುಟ್ದು ಪೋಪುದುಂ ಗುಣವತಿ ಕನ್ನೆಯುಂ ನೋಡಿ ೧೧೬

ಸುರವನಿತೆಯಾನುಮಂಬರ
ಚರಿಯಾನುಂ ಕೃತಕದಿಂದಮಿಾ ರೂಪಿಂ ಮೆ
ಯ್ಗರೆದಿರ್ದಳಲ್ಲದಿಂದಿನ
ನರವನಿತೆಯರಿನ್ನರೊಳರೆ ರೂಪಿಂ ಚೆಲ್ವಿಂ ೧೧೭

ಅವನು ದೇವರಿಗೆ ನಮಸ್ಕಾರ ಮಾಡುತ್ತಿದ್ದ ಅನಂತಮತಿಯನ್ನು ನೋಡಿ ಧರ್ಮಾಭಿಮಾನದಿಂದ ಅವಳನ್ನು ತನ್ನ ಬಿಡಾರಕ್ಕೆ ಕರೆದುಕೊಂಡುಹೋಗಿ ಉಚಿತವಾದ ಮರ್ಯಾದೆಗಳನ್ನು ಮಾಡಿ ಆಮೇಲೆ ಮಾತಿಗೆ ತೊಡಗಿ, ನಿಮ್ಮ ದೇಶ ಯಾವುದು ? ಊರು ಯಾವುದು, ತಂದೆ ಯಾರು, ಎಂದು ವಿಚಾರಿಸಿದನು. ೧೧೪ "ಕ್ಷಮೆಯೇ ಸ್ನೇಹಿತ, ಶೀಲವೇ ಮಗ, ಸದಾಚಾರವೇ ಧನ, ಶುದ್ಧವಾದ ದಯೆಯೇ ತಾಯಿ, ಸತ್ಯವೇ ಮುತ್ತಜ್ಜ, ಗುಣಗಳು ಸಹೋದರರು, ಕ್ರಮವಾದ ತತ್ವವೇ ಮಗಳು. ಸಮ್ಯಕ್ತ್ವವೇ ಒಪ್ಪುವ ತಂದೆ, ಸಂಯಮವೇ (ಇಂದ್ರಿಯನಿಗ್ರಹ, ಮನೋನಿಗ್ರಹ) ಮನೆ. ಮೋಕ್ಷವೇ ದೇಶ, ಜಿನೋಕ್ತಿಯೇ ಪಟ್ಟಣ" ೧೧೫. ಎಂಬ ಈ ಮಾತಿನಿಂದ ಈ ಕನ್ಯೆ ದರ್ಶನ ವಿಶುದ್ಧೆಯೆಂದು ತಿಳಿದು ಮೆಚ್ಚಿಕೊಂಡು ತನ್ನ ಮನೆಗೆ ಕರೆದುಕೊಂಡುಹೋಗಿ ತನ್ನ ಹೆಂಡತಿಗೆ ಅವಳನ್ನು ಪರಿಚಯಮಾಡಿಸಿ "ಈ ಬಾಲೆಯನ್ನು ನಿನ್ನ ಮಗಳಂತೆ ಬಗೆದು, ನಾನು ಹಿಂತಿರುಗಿ ಬರುವತನಕ ಎಚ್ಚರಿಕೆಯಿಂದ ಸಲಹಬೇಕೆಂದು ಹೇಳಿ ಒಪ್ಪಿಸಿ ಪುಷ್ಪಕನು ಮತ್ತೆ ಹೊರಟುಹೋದನು. ಗುಣವತಿಯಾದ ಆಕೆ ಅನಂತಮತಿಯನ್ನು ನೋಡಿ ೧೧೬. ದೇವತಾಸ್ತ್ರೀಯಾಗಲಿ ಖೇಚರಸ್ತ್ರೀಯಾಗಲಿ, ಮಾಯೆಯಿಂದ ಮೈಮರೆಸಿಕೊಂಡು ಬಂದಿದ್ದಾಳೆ. ಇಲ್ಲದಿದ್ದರೆ ಇಂದಿನ ಮಾನವಸ್ತ್ರೀಯರಲ್ಲಿ ಇಂಥ ರೂಪವುಳ್ಳವರು ಇರುತ್ತಾರೆಯೆ ? ೧೧೭. ಎಂದು ದುರ್ಬಲವಾದ ಕಣ್ಣುಳ್ಳವರು ಸೂರ್ಯನನ್ನು

ಗದ್ಯ॥ ಎಂದು ಅಱಿಗಣ್ಣವರಾದಿತ್ಯನಂ ನೋೞ್ಪಂತೆ ಕನ್ನೆಯರೂಪನನಗಿದುನೋಡಿ ಮನದೊಳಂಜಿ, ೧೧೮

ಎನಗಪ್ಪೊಡೆ ಮುನ್ನಿನ ಜ
ವ್ವನಮುಂ ಲಾವಣ್ಯಮುಂ ವಿಳಾಸಮುಮಿಲ್ಲೀ
ವನಿತೆಯಿರಲೋವೊ ಪೆರ್ಗಣ
ಮನಿಕ್ಕಿ ಪುನೆಮಾಡುವಂದಮಕ್ಕುಂ ಕಡೆಯೊಳ್ ೧೧೯

ಗದ್ಯ॥ ಎಂದು ತನ್ನ ಪುಲುಕುಮನದಿಂದಿರಿಸಿಕೊಳ್ಳಲಣ್ಮದೆ ವ್ಯಾಳಿಯೆಂಬ ಕುಂಟಣಿಗೆ ಮಾಱುವುದುಮಾಕೆ ಸಹಸ್ರ ಪೊನ್ನಂಕೊಟ್ಟು ಮನೆಗೊಡಗೊಂಡು ಪೋಪುದುಂ ಕುಮಾರಿ ತನ್ನೊಳ್ ೧೨೦

ಖಳಕರ್ಮೋದಯದಿಂದಂ
ಗಳಿಯಿಸುವೀ ದುಃಖಮೆನ್ನನೆನಿತೊಂದಿದೊಡಂ
ಚಳಮಾಗೆನೆನ್ನ ಪಿಡಿದು
ಜ್ವಳ ಸುವ್ರತಕೋವೊ ಭಂಗಮಂ ಮಾಡುವೆನೇ ೧೨೧

ಗದ್ಯ॥ ಎನುತ್ತುಂ ವ್ರತದೊಳ್ ದೃಢೆಯಾಗಿರ್ಪುದುಂ ವ್ಯಾಳಿ ಪತ್ತೆಂಟು ದಿವಸಂ ಪೋದಿಂ ಬೞಿಯುಂ ಮೆಲ್ಲನೆ ಕನ್ನೆಗಿಂತೆಂದಳ್ ೧೨೨

ನೋಡುವ ಹಾಗೆ ಕನ್ಯೆಯ ರೂಪವನ್ನು ನೋಡಿ ಅಂಜಿ ೧೧೮. "ನನಗಾದರೋ ಮೊದಲಿನ ಯೌವ್ವನ ಲಾವಣ್ಯವಿಲಾಸಗಳಿಲ್ಲ. ಈ ವನಿತೆ ಇಲ್ಲಿದ್ದರೆ, ಓಹೋ ಹೆಗ್ಗಣವನ್ನು ಒಳಗಿಟ್ಟು ಮನೆಕಟ್ಟುವ ರೀತಿಯಾಗುತ್ತದೆ" ೧೧೯. ಎಂದು ತನ್ನ ಹುಳುಕು ಮನಸ್ಸಿನಿಂದ ಅವಳನ್ನು ಮನೆಯಲ್ಲಿ ನಿಲ್ಲಿಸಿಕೊಳ್ಳಲು ಧೈರ್ಯವಿಲ್ಲದೆ, ವ್ಯಾಳಿಯೆಂಬ ಒಬ್ಬ ಕುಂಟಣಿಗೆ ಅವಳನ್ನು ಸಾವಿರ ಹೊನ್ನುಗಳಿಗೆ ಮಾರಿಬಿಟ್ಟಳು. ಅವಳು ಆ ಕನ್ಯೆಯನ್ನು ಮನೆಗೆ ಕರೆದುಕೊಂಡು ಹೋದಳು. ಅನಂತಮತಿಯು ತನ್ನಲ್ಲಿಯೇ ಹೀಗೆ ಯೋಚಿಸಿದಳು ೧೨೦. "ನನ್ನ ನೀಚಕರ್ಮಫಲವಾಗಿ ಒದಗಿರುವ ದುಃಖವೆಷ್ಟೇ ಆದರೂ ನಾನು ಹಿಡಿದ ವ್ರತವನ್ನು ಎಂದಿಗೂ ಬಿಡುವುದಿಲ್ಲ. ಆ ಸುವ್ರತಕ್ಕೆ ಎಂದಿಗಾದರೂ ಭಂಗವನ್ನುಂಟು ಮಾಡುವೆನೆ ?" ಹೀಗೆ ಯೋಚಿಸುತ್ತ ವ್ರತದಲ್ಲಿ ದೃಢಭಾವ ಹೊಂದಿರಲು, ಆ ವ್ಯಾಳಿಯು ಹತ್ತೆಂಟು ದಿನಗಳು ಕಳೆದಮೇಲೆ ಮೆಲ್ಲನೆ ಅನಂತಮತಿಗೆ ಹೀಗೆ ಹೇಳಿದಳು ೧೨೨. "ಹುಚ್ಚಳಹಾಗೆ ತಲೆಯನ್ನು ಕೆದರಿಕೊಂಡಿರಬೇಡ, ಉತ್ಸಾಹದಿಂದ

ಮರುಳಂತೆ ಮರುಳೆ ತಲೆಯಂ
ಪರಘಿರದೆ ಮನೋನುರಾಗದಿಂ ಮುಡಿ ಮುಡಿಯಂ
ಪರವಶಮಾದರ ತೆಱದಿಂ
ದಿಂದೆ ಸರೋಜಾಕ್ಷಿ ನಲ್ಮೆಯಿಂ ನುಡಿ ಪೆಱರೊಳ್ ೧೨೩

ಒಲ್ಲದಿರ್ದೊಡವೊಲ್ವರಂತಿರೆ ನೋಟ್ಪುದನ್ಯರ ಚಿತ್ತಮಂ
ಮೆಲ್ಲಮೆಲ್ಲನೆ ನೋಟದಿಂ ನಗೆಯಿಂದಮಿರ್ಕುಳಿಗೊಳ್ವುದಂ
ತಲ್ಲಿಗಲ್ಲಿಗೆ ತರ್ಪುದಂ ನೆಱೆಮಾಡಿ ಮೆಲ್ವಚನಂಗಳಿಂ
ಚಲ್ಲವಾಡುವುದಾರೊಳಾದೊಡವೊಲ್ವಳೀ ವಧುವೆಂಬಿನಂ ೧೨೪

ತರಳಲೋಚನೆ ಮುಂಗುಚಂಗಳೊಳಾದ ಚೆಲ್ವುಗಳಂ ಮುಖಾಂ
ಬುರುಹದೊಂದು ವಿಲಾಸಮಂ ನಳಿತೋಳ ಭಂಗಿಗಳಂ ಪದಾಂ
ಬುರುಹಪಲ್ಲವಮಂ ಕುರುಳ್ಗಳೊಳಾದದೊಂದು ಬೆಡಂಗನೊ
ಪ್ಪಿರೆ ವಿಟರ್ಗನುರಾಗಮಾಗೆ ಸರೋರುಹಾನನೆ ತೋಱು ನೀಂ ೧೨೫

ಕುರುಳ ಪಂತಿಗಳಂ ಮನಂಬಿಡೆ ತಿರ್ದು ಚಂದನಪಂಕಮಂ
ಸರಸಿಜಾನನೆ ಪೂಸು ಮೆಚ್ಚುವ ಪೊನ್ನ ಮುತ್ತಿನನೇಕವಾ
ಭರಣಮಂ ತುಡು ದಿವ್ಯವಸ್ತ್ರಮನರ್ತಿಯಿಂದುಡು ರಾಗದಿಂ
ಸುರಗಿಯಂ ಮುಡಿ ರೂಪನೇತಕೆ ಕುಂದಿಪಾ ಮರುಳಂದದಿಂ ೧೨೬

ನಿನ್ನ ಮುಡಿಯನ್ನು ಕಟ್ಟಿಕೊ. ಮೈಮರೆತವರ ರೀತಿಯಾಗಿ ಇದ್ದುಬಿಡದೆ, ಓ ಕಮಲ ನೇತ್ರೆ, ಇತರರೊಡನೆ ಸಂತೋಷದಿಂದ ಮಾತನಾಡು ೧೨೩. ಒಲವಿಲ್ಲದಿದ್ದರೂ ಇತರರನ್ನು ಒಲಿದವರ ಹಾಗೆ ನೋಡುವುದು. ಇತರರ ಚಿತ್ತವನ್ನು ಉಪಾಯವಾಗಿ ನೋಟದಿಂದಲೂ, ನಗೆಯಿಂದಲೂ, ಆಕರ್ಷಿಸಿ ಸೆರೆಹಿಡಿಯ ತಕ್ಕದ್ದು, ಈ ಹೆಣ್ಣು ಯಾರೊಡನೆಯಾದರೂ ಪ್ರೀತಿಯಿಂದಿರುವಳೆಂದು ತೋರುವ ರೀತಿಯಲ್ಲಿ ಎಲ್ಲ ರೊಡನೆಯೂ ಮೃದುವಚನಗಳನ್ನಾಡುತ್ತ ಅಲ್ಲಿಗಲ್ಲಿಗೆ ಹೋಗಿಬಂದು ಎಲ್ಲರೊಡನೆಯೂ ಸರಸವಾಡಬೇಕು ೧೨೪. ಚಂಚಲನೇತ್ರೆ ! ಕುಚಗಳ ಮುಂಭಾಗಗಳಲ್ಲಿ ಮೂಡಿದ ಚೆಲು ವನ್ನೂ ಮುಖಕಮಲದೊಂದು ವಿಲಾಸವನ್ನೂ ಉದ್ದನೆಯ ತೋಳುಗಳ ಭಾವಭಂಗಿ ಗಳನ್ನೂ ಕಮಲದಂಥ ಪಾದಪಲ್ಲವಗಳನ್ನೂ ಕುರುಳುಗಳ ಅತಿಶಯವಾದ ಬೆಡಗನ್ನೂ ವಿಟಜನರಿಗೆ ಒಪ್ಪುವಂತೆ, ಅವರಿಗೆ ಅನುರಾಗವುಂಟಾಗುವ ಹಾಗೆ ನೀನು ತೋರಿಸು. ೧೨೫. ಮುಂಗೂದಲ ಪಂತಿಗಳನ್ನು ಚೆನ್ನಾಗಿ ಮನವೊಪ್ಪುವಂತೆ ತಿದ್ದಿಕೋ. ಶ್ರೀಗಂಧದ ಲೇಪವನ್ನು ಹಚ್ಚಿಕೋ. ನಿನಗೆ ಮೆಚ್ಚಿಗೆಯಾದ ಕನಕಾಭರಣಗಳನ್ನು ಧರಿಸಿಕೋ. ದಿವ್ಯನಾದ ವಸ್ತ್ರವನ್ನು ಉಡು. ಸಂತೋಷದಿಂದ ಸುರಗಿಯ ಹೂಗಳನ್ನು ಮುಡಿದು ಕೋ. ನಿನ್ನ ರೂಪವನ್ನೇಕೆ, ಹುಚ್ಚಿಯ ಹಾಗೆ ಕುಂದಿಸುತ್ತೀಯೆ ? ೧೨೬, ರೂಪವಿಲ್ಲ

ರೂಪಿಲ್ಲದೊಡಂ ಕೆಲಬರ
ಸಹಾಯದಿಂ ಬಱಿದೆ ತೊನೆದು ಕಿಮ್ಮನೆ ವಿಟಸಂ
ದೋಹಮನೊಲಿಸುವರೆಂದೊಡೆ
ರೂಹಂ ಪಡೆದೇಕೆ ಮರುಳೆ ನೀಂ ವ್ಯರ್ಥಗಳೆವೈ ೧೨೭

ಕರೆವುದು ಕೆಲಕೆಲಬರ ನೆಱೆ
ನೆರೆವುದು ಭಾವಿಪ್ಪೊಡೊಂದೆ ನರರೊಳ್ ಭಾಗ್ಯಂ
ಮರುಳೆ ಸುರಸೂಳೆ ಧರೆಯೊಳ್
ಪರಗೆರ್ಗೆಂತೆ ಮನಕ್ಕೆವಂದ ಭೋಗವುದಾರ್ಗಂ ೧೨೮

ಪೊಸದುಡುಗೆ ನಿಚ್ಚನಿಚ್ಚಂ
ಪೊಸಗಂಡರ್ ಚೆಲ್ವರಪ್ಪ ಪೊಸವಸ್ತ್ರಂ ಭಾ
ವಿಸುವಂದು ಮೆಯ್ಸುಖಂ ರಂ
ಜಿಸೆ ಬೆಲೆವೆಣ್ಗಕ್ಕುಮುೞಿದ ಸತಿಯರ್ಗೆಂತೋ ೧೨೯

ಗದ್ಯ॥ ಆದು ಕಾರಣದಿಂ ಮಿಾವುದುಣ್ಬುದುಡುವುದು ಮೋನದಿಂದಿರವೇಡೆಂದು ಬುದ್ಧಿ ವೇೞೆ ಕನ್ನೆ ತನ್ನೊಳ್ ನಕ್ಕು ೧೩೦

ದಿದ್ದರೂ ಕೆಲವರು ಅಸಹಾಯಕರಾಗಿ ಸುಮ್ಮನೆ ಬಳುಕಾಡುವುದರಿಂದಲೇ ವಿಟ ಸಮೂಹವನ್ನು ಸುಲಭವಾಗಿ ಒಲಿಸುವರೆನ್ನುವಾಗ ರೂಪವನ್ನು ಪಡೆದೂ ದಡ್ಡಳೆ, ನಿನ್ನ ಸೌಂದರ್ಯವನ್ನು ಏತಕ್ಕೆ ವ್ಯರ್ಥವಾಗಿ ಕಳೆಯುತ್ತಿಯೋ ? ೧೨೭. ಕೆಲಕೆಲವರನ್ನು ಕರೆಯಬೇಕು ; ಕರೆದು ಅವರೊಡನೆ ನೆರೆಯಬೇಕು, ಯೋಚಿಸಿದರೆ ಮನುಷ್ಯರಲ್ಲಿ ಅದೊಂದೇ ಭಾಗ್ಯ, ಮರುಳೆ, ನೀನು ಭೂಲೋಕಕ್ಕೆ ಬಂದ ಸುರಸೂಳೆ (ಅಪ್ಸರೆ) ಯಂತಿರುವೆ. ಲೋಕದಲ್ಲಿ ಮನಸ್ಸಿಗೆ ಬಂದ ಭೋಗ, (ಸೂಳೆಯರಿಗಲ್ಲದೆ) ಬೇರೆ ಯಾರಿಗಿದೆ ? ೧೨೮. ನಿತ್ಯ ನಿತ್ಯವೂ ಹೊಸ ಒಡವೆಗಳು, ಸುಂದರರಾದ ಹೊಸ ಗಂಡಂದಿರು, ಹೊಸ ವಸ್ತ್ರ ! ಯೋಚಿಸಿ ನೋಡುವಾಗ ದೇಹಸುಖ ರಂಜಿಸುತ್ತಿರುವುದು–ಇದೆಲ್ಲ ಸೂಳೆಯರಿಗೆ ಲಭಿಸುವುವೇ ಹೊರತು ಉಳಿದ ಹೆಂಗಸರಿಗೆ ಉಂಟೆ ? ೧೨೯. ಆದ ಕಾರಣ, ನೀನು ಸ್ನಾನಮಾಡು, ಒಳ್ಳೆಯ ವಸ್ತ್ರಗಳನ್ನು ಉಟ್ಟುಕೊ, ಮೌನದಿಂದ ಇರಬೇಡ." ಎಂದು 'ಆ ಕುಂಟಿಣಿಯು ಬುದ್ಧಿ ಹೇಳಲು ಆ ಕನ್ಯೆ, ಅನಂತಮತಿಯು ತನ್ನೊಳಗೇ ನಕ್ಕು ೧೩೦. ಸೂಳೆಯರು ಸಾಮಾನ್ಯರಲ್ಲ, ಅವರು ಭೂಮಂಡಲವನ್ನೂ

ಧರಣೀಚಕ್ರಮುಮಂ ವಿಯತ್ತಳಮುಮಂ ಗಂಟಿಕ್ಕುವರ್ಮಿಂಚಿನ
ಚ್ಚರಿಯುಪ್ಪಂತಿರದೊಂದುಮಾಡಿ ಸಮೆವರ್ ಕಲ್ಲಲ್ಲಿ ನಾರೆತ್ತುವರ್
ತ್ವರಿತಂ ಬಿಸ್ಸಣದಿಂ ಬೆಸಿಲ್ಗುದುರೆಯಂ ತಂದೇಱುವರ್ ಮೇರುವಂ
ಭರದಿಂದಂ ಪಿಡಿದೆತ್ತುವರ್ ಮಳಲೊಳಂ ನೀರ್ಮಾಡುವರ್ ಜೋಡೆಯರ್ ೧೩೧

ಗದ್ಯ॥ ಕುಂಟಣಿಯೆಂಬಳ್ ಸಾಮಾನ್ಯೆಯಲ್ಲಳದಱಿಂದಿವಳಿನ್ನೇನೆಂದೊಡಮೆನಗೆ ಮೌನದಿಂದಿರ್ಪುದೆ ಬುದ್ಧಿಯೆಂದುಸಿರದಿರೆ ಕೆಲವು ದಿನವಾಗೆಯುಂ ಬಾಯಂಬಡಿದೊಡಂಬಡಿಸಲಾಱದೆ ೧೩೨

ಹರಿಣಾಕ್ಷಿ ನುಡಿಯಳೆಂತುಂ
ಮರುಳಾಗದೆ ಬೇಗನೊಯ್ದು ಕುಡುವೆಂ ಭೂಪಂ
ಗುರುಮುದದಿನರ್ಥಲಾಭಂ
ಪಿರಿದಕ್ಕುಂ ಭೂಮಿಪಾಲನುಂ ಕರಮೊಸೆಗುಂ ೧೩೩

ಗದ್ಯ॥ ಎಂದಾ ಪುರಮನಾಳ್ವ ಸಿಂಹರಥನೆಂಬರಸನಲ್ಲಿಗೊಯ್ದು ಸ್ತ್ರೀರತ್ನಮಂ ದೇವರ್ಗೆ ಪಾಗುಡಂ ತಂದೆನೆಂದೊಪ್ಪಿಸುವುದುಮರಸಂ ವ್ಯಾಳಿಗೆ ಸಾಲ್ವನಿತು ಪೊನ್ನಂ ಕೊಟ್ಟು ಕನ್ನೆಯ ರೂಪಂ ಭಾವಿಸಿ ನೋೞ್ಪುದುಂ ೧೩೪

ಆಕಾಶವನ್ನೂ ಗಂಟಿಕ್ಕುವರು. ಅವರು ಮಿಂಚುಗಳನ್ನು ಒಂದು ಮಾಡಿ ಕಟ್ಟುವರು, ಕಲ್ಲಿನಲ್ಲಿ ನಾರನ್ನು ತೆಗೆಯುತ್ತಾರೆ. ಅವರ ಬಿನ್ನಾಣದಿಂದ ಬಿಸಿಲ್ಗುದುರೆಯನ್ನೇ ಹತ್ತಿ ತ್ವರಿತವಾಗಿ ಹೋಗಲುಳ್ಳವರು. ಮೇರುಪರ್ವತವನ್ನು ರಭಸದಿಂದ ಹಿಡಿದು ಮೇಲಕ್ಕೆತ್ತುವರು. ಇವರು ಮರಳಿನಲ್ಲಿ ನೀರನ್ನು ಹೊರಡಿಸುವರು ! ೧೩೧. "ಈತಲೆಹಿಡುಕಿ ಸಾಮಾನ್ಯಳಲ್ಲ. ಆದ್ದರಿಂದ ಇವಳೇನು ಹೇಳಿದರೂ ಮೌನದಿಂದಿರುವುದೇ ನನಗೆ ಬುದ್ಧಿವಂತಿಕೆ" ಎಂದು ಮಾತನಾಡದೆ ಇದ್ದುಬಿಟ್ಟಳು. ಕೆಲವು ದಿನ ಕಳೆಯಿತು, ಆದರೆ ಅವಳು ಬಾಯಿಬಡಿದು ಅನಂತಮತಿಯನ್ನು ಒಪ್ಪಿಸಲು ಅಸಮರ್ಥಳಾಗಿ ೧೩೨. "ಈ ಸುಂದರಿ ಹೇಗೂ ಮಾತನಾಡಳು. ಇವಳಿಗೆ ದೊರೆ ಮರುಳಾಗದೆ ಇರನು. ನನಗೂ ಹೆಚ್ಚಿನ ಅರ್ಥಲಾಭವಾಗುತ್ತದೆ, ಅರಸನೂ ಅನುಗ್ರಹಿಸುತ್ತಾನೆ, ಆದ್ದರಿಂದ ಇವಳನ್ನು ಅರಸನಿಗೆ ಒಪ್ಪಿಸುತ್ತೇನೆ" ಎಂದು ಯೋಚಿಸಿ ಅವಳು ಆ ಪುರದ ದೊರೆ ಸಿಂಹರಥನ ಬಳಿಗೆ ಕರೆದೊಯ್ದು "ದೇವರವರಿಗೆ ಈ ಸ್ತ್ರೀರತ್ನವನ್ನು ಕಾಣಿಕೆಯಾಗಿ ತಂದಿದ್ದೇನೆ" ಎಂದು ಒಪ್ಪಿಸಿದಳು, ಅರಸನು ಆ ವ್ಯಾಳಿಗೆ ಬೇಕಾದಷ್ಟು ಧನಕೊಟ್ಟು ಕನ್ಯೆಯ ರೂಪವನ್ನು ದೃಷ್ಟಿಸಿ ನೋಡಿದನು. ೧೩೪. ಆಗ

ಶತದಳಮುಖಿಯಂ ಮಱೆಗೊಂ
ಡತನು ಕರಂ ಮುಳಿದು ಪೂವಿನಂಬುಗಳಿಂ ಸಂ
ತತಮಾರ್ದು ಪೋಗದಿಸುವುದು
ಮತಿಗೆಟ್ಟುಳ್ಳುಳ್ಕಿ ಸೆಡೆದು ನೋಡಿದಂ ಮಹೀಶಂ ೧೩೫

ಸೈರಿಸಲಾಱದೆ ೧೩೬

ಧರೆಗಂ ಭಂಡಾರಕ್ಕಂ
ಪರಿಜನಕಂ ಭೃತ್ಯಸಂಕುಳಕ್ಕಂ ಮತ್ತ
ನ್ನರಸಿಯರ್ಗಮೀಪುರಕ್ಕಂ
ನಿರುತಂ ನೀನೊಡೆಯಳಾಗಿ ಸುಖಮಿರ್ ನಯದಿಂ ೧೩೭

ಲಲನೆಯರಿಕ್ಕೆ ಚಾಮರಮನಂದಣಮಂ ಪದಪಿಂದಮೇಱಿ ಭೂ
ತಳದೊಳಗುರ್ವೆ ಪರ್ವೆ ಕರಮೊಪ್ಪಿರೆ ಪಾಡುವ ಗೇಯದೊಂದು ಮೆ
ಲ್ಲುಲಿ ಕಿವಿಯಂ ಪಳಂಚಲೆಯೆ ಮಂತ್ರಿಗಳುಂ ನೃಪರುಂ ಕುಮಾರರುಂ
ಸಲೆ ಬೆಸಗೆಯ್ಯೆ ನೀನೆನಗೆ ವಲ್ಲಭೆಯಾಗಿರು ರಾಜ್ಯಲಕ್ಷ್ಮಿವೋಲ್ ೧೩೮

ಎಂದು ನುಡಿದು ಕಯ್ಯಂ ಪಿಡಿದು ತಲೆಯ ಮೇಲಿಟ್ಟುಕೊಂಡು ೧೩೯

ಉಸಿರದಿರವೇಡ ಕಾಮಂ
ಮಸಗಿ ಕನಲ್ದುರ್ದು ಕುಸುಮಸಾಯಕದಿಂ ಸೈ
ರಿಸದೆಚ್ಚಪನೆನ್ನಂ ಸಂ
ಕಿಸದಿನಿಸುಂ ನುಡಿದು ಕಿಡಿಸು ನೀನವನೇಸಂ ೧೪೦

ಆ ಕಮಲಮುಖಿಯು ಮರೆಯಲ್ಲಿದ್ದು ಮನ್ಮಥನು ಹೂವಿನಂಬುಗಳನ್ನು ಕೋಪದಿಂದ ಅಬ್ಬರಿಸಿ ಪ್ರಯೋಗಿಸಿದನು, ಆ ರಾಜನು ಮತಿಗೆಟ್ಟು ಅಂತರಂಗದಲ್ಲಿ ಅಂಜಿ ಸೆಡೆದು ನೋಡದನು ೧೩೫. ಇನ್ನು ಸಹಿಸಲಾರದೆ ಅವನು ೧೩೬. "ರಾಜ್ಯಕ್ಕೂ ಕೋಶಕ್ಕೂ ಪರಿಜನಭೃತ್ಯಸಮೂಹಕ್ಕೂ ಇನ್ನೂ ನನ್ನ ಅರಸಿಯರಿಗೂ ಈ ಪಟ್ಟಣಕ್ಕೂ ಎಲ್ಲ ಕಾಲಕ್ಕೂ ನೀನು ಒಡೆಯಳಾಗಿ ಸುಖವಾಗಿರು. ನೀನು ಅಂದಣವನ್ನೇರಿ ಹೋಗುವಾಗ ಹೆಂಗಸರು ಚಾಮರವನ್ನು ಹಾಕುವರು. ಪರಿವಾರದವರು ಹಾಡುವ ಸಂಗೀತದ ಮೃದು ಧ್ವನಿ ಕಿವಿಗೆ ಬೀಳುತ್ತಿರಲು, ಮಂತ್ರಿಗಳೂ, ಸಾಮಂತರೂ, ಯುವರಾಜರೂ ಎಲ್ಲರೂ ಅಂಜಿಕೆಯಿಂದ ನಿನಗೆ ಸೇವೆ ಸಲ್ಲಿಸುವರು. ನೀನು ರಾಜ್ಯಲಕ್ಷ್ಮಿಯಂತೆ ನನಗೆ ವಲ್ಲಭೆಯಾಗಿರು" ೧೩೮. ಎಂದು ಹೇಳಿ ಅವಳ ಕೈಯನ್ನು ಹಿಡಿದು ತನ್ನ ತಲೆಯಮೇಲಿಟ್ಟುಕೊಂಡು ೧೩೯. "ಮಾತನಾಡದಿರಬೇಡ, ಕಾಮನು ವಿಜೃಂಭಿಸಿ ಕೋಪದಿಂದ ಅಬ್ಬರಿಸಿ ಹೂಬಾಣಗಳಿಂದ ನನ್ನನ್ನು ಒಂದೇ ಸಮನೆ ಹೊಡೆಯುತ್ತಿದ್ದಾನೆ. ಶಂಕೆಪಡದೆ ನೀನು ಅವನ ಹೊಡೆತವನ್ನು ತಪ್ಪಿಸು ; ಮಾತನಾಡು ೧೪೦. ಕಾಮನು ಸ್ವಲ್ಪವೂ

ಆಯುಂಗಿಡೆ ಕಾಮಂ ಕೈ
ಗಾಯದೆ ನಿಂದಾರ್ದು ಮುತ್ತಿ ಕೊಂದಪನೆಲೆ ನೀ
ನೀಯವಸರದೊಳ್ ಕಾಯುತೆ
ಬಾಯೊಳ್ ತಂಬುಲಮನಿಕ್ಕು ಮದಗಜಗಮನೇ ೧೪೧

ಗದ್ಯ॥ ಎಂದನೇಕ ಮೆಲ್ನುಡಿಗಳಿಂದೊಡಂಬಡಿಸಲಾಱದೆ ೧೪೨

ಎಳವಿದಿರಂದಮಂ ತನು ಸರೋರುಹದಂದಮನಾನನಂ ಮಹೋ
ಜ್ವಳಲತೆಯಂದಮಂ ನಿಮಿರ್ದತೋಳ್ಮಿಸುಪಾಲದ ಪಣ್ಣಿನಂದಮಂ
ಪೊಳೆವಧರಂ ಕರಂ ನೆಱೆಯೆ ಪೋಲ್ವುದಱಿಂದರವಿಂದವಕ್ತ್ರೆ ಕೋ
ಮಳೆ ಕಡುಗಾಡಿಕಾರ್ತಿ ಮರವಾನಿಸೆಯೆಂಬುದನುಂಟುಮಾಡಿದೌ ೧೪೩

ಗದ್ಯ॥ ಎಂದೊದವಿದ ಕೂರ್ಮೆಯಿಂ ನೋಯೆ ನುಡಿಯಲಾಱದೆ ಸರಸದಿಂ ನುಡಿವುದುಂ ಅನಂತಮತಿ ತನ್ನೊಳಿಂತೆಂದಳ್ ೧೪೪

ಚಂದನಂಗಳ ಪುಳ್ಳಿಯಿಂದಡುವಂತೆ ಜೋಳದ ಕೂಳನಾ
ನಂದದಿಂ ಕಡಿದೊಟ್ಟಿಸುಟ್ಟು ಸುರೇಂದ್ರಭೂಮಿರುಹಂಗಳಂ
ತಂದು ಸಾವೆಯನಲ್ಲಿ ಬಿತ್ತುವರಂತೆ ಮೋಕ್ಷದ ಸೌಖ್ಯಮಂ
ಕುಂದದೀವ ಮಹಾವ್ರತಂಗಳನೇವೊ ನಾಂ ಬಿಡಲಾರ್ಪೆನೇ ೧೪೫

ದಯೆಯಿಲ್ಲದೆ, ಕೈತಡೆಯದೆ ನನ್ನ ಶಕ್ತಿಗುಂದುವ ಹಾಗೆ ಆರ್ಬ್ಬರಿಸಿ ಕೊಲ್ಲುತ್ತಿದ್ದಾನೆ. ಎಲೌ, ನೀನು ಮದಗಜಗಮನೆ, ಈ ಸಮಯದಲ್ಲಿ ನೀನು ನನ್ನನ್ನು ರಕ್ಷಿಸು, ಬಾಯಲ್ಲಿ ತಾಂಬೂಲವನ್ನಿಡು" ೧೪೧. ಎಂದು ಅನೇಕ ಮೃದುವಾಕ್ಯಗಳಿಂದ ಅವಳನ್ನು ಒಪ್ಪಿಸಲಾರದೆ ೧೪೨. "ದೇಹ ಎಳೆಬಿದಿರಿನ ಅಂದವನ್ನೂ, ಮುಖ ಕಮಲದಂದವನ್ನೂ ನಿನ್ನ ತೋಳುಗಳು, ಸುಪ್ರಕಾಶವಾದ ಲತೆಯ ಅಂದವನ್ನು ಹೊಳೆವ ತುಟಿಗಳು ಆಲದ ಹಣ್ಣಿನಂದವನ್ನೂ ವಿಶೇಷವಾಗಿ ಹೋಲುತ್ತಿರುವುದರಿಂದ ಕಮಲಮುಖಿಯೇ, ಅಂದಗಾತಿಯೇ, ಮರವಾನಿಸೆ (ಮರದಿಂದ ಆದ ಮನುಷ್ಯಳು) ಎಂಬುದನ್ನು ನಿಜಮಾಡಿದೆ. ೧೪೩. ಹೆಚ್ಚಾದ ಪ್ರೀತಿಯಿಂದ, ಅವಳ ಮನಸ್ಸು ನೋಯುವಂತೆ ಮಾತನಾಡಲಾರದೆ. ಸರಸದಿಂದ ಹೇಳಲು ಅನಂತಮತಿ ಮನಸ್ಸಿನಲ್ಲಿ ಹೀಗೆಂದುಕೊಂಡಳು ೧೪೪. ಶ್ರೀಗಂಧದ ಪುಳ್ಳೆಗಳಿಂದ ಜೋಳದ ಕೂಳನ್ನು ಬೇಯಿಸುವಂತೆ, ದೇವಲೋಕದ ಕಲ್ಪವೃಕ್ಷಗಳನ್ನು ಕಡಿದು ರಾಶಿಹಾಕಿ ಸುಟ್ಟು, ಆ ಬಯಲಿನಲ್ಲಿ ಸಾವೆಯನ್ನು ಬಿತ್ತುವವರಂತೆ, ಮೋಕ್ಷದ ಸೌಖ್ಯವನ್ನು ತಪ್ಪದೆ ಕೊಡುವ ಮಹಾವ್ರತಗಳನ್ನು ನಾನು ಬಿಡಬಲ್ಲೆನೆ ? ೧೪೫. ಹಾಲನ್ನು ಒಲ್ಲದೆ ನಾಯಿಕಳ್ಳಿಯ ಹಾಲನ್ನು ಕುಡಿಯುವವನೂ ರಾಜವರ್ಗ

ಪಾಲನೊಲ್ಲದೆ ನಾಯಿಗಳ್ಳಿಯ ಪಾಲನುಣ್ಬಸು ವೊಲ್ದು ಭೂ
ಪಾಲವರ್ಗಮನೊಲ್ಲದುದ್ಧತವೃತ್ತಿಯಿಂ ಕಡುರಾಗದಿಂ
ಕೀಳನೋಲಗಿಪಾತನುಂ ಜಿನಧರ್ಮಮಂ ಬಿಸುಟರ್ತಿಯಿಂ
ಪಾಳಿಪಾತನುಮಿಂದ್ರಿಯಂಗಳ ಭೋಗಮಂ ಮರುಳಲ್ಲನೇ ೧೪೬

ಸಿರಿಯ ಮಹಿಮೆಗೆ ರೂಪಿನೇಟಿಗೆ ಮುಯ್ಯನಾಂತಟಿಬುದ್ಧಿಯಿಂ
ಸ್ಥಿರಮಿದೆಂದು ಮನುಷ್ಯಜನ್ಮಮನಣ್ಣ ನಂಬಿ ಜಡರ್ ಕಿಲರ್
ಪರಮಧರ್ಮಮನುತ್ತಮ ವ್ರತಸಂಕುಳಂಗಳನೊಲ್ಲದೋ
ಸರಿಸಿ ಭೋಂಕನೆ ಸತ್ತುನಾರಕದುಃಖಮಂ ನೆಱಿ ತಾಳ್ದುವರ್ ೧೪೭

ಬಿಸುಟು ಧರ್ಮಮನೊಲ್ಲದಗ್ಗಳಮಪ್ಪಸುವ್ರತಮಂ ಮನಂ
ಕುಸಿದು ಜೈನರ ಪೇಟ್ಕಿಗಂಜಿ ವಿಶೇಷ ಸಚ್ಚರಿತಕ್ಕೆ ಸಂ
ಕಿಸಿ ಜಿನೋಕ್ತಿಗೆ ಕಾಮಿಯಪ್ಪವರಿಂದ್ರಿಯಂಗಳನೆಯ್ದೆ ಪೆ
ರ್ಚಿಸಿ ವಿನೋದದಿನೆಯ್ದುವರ್ ನರಕಂಗಳಂ ಕಡೆಯೊಳ್ಪಲರ್ ೧೪೮

ಗದ್ಯ॥ ಮುಗಿಲಂತಸ್ಥಿರಮಪ್ಪ ಗಾಳಿಯಂತೆ ನಿರ್ಣರಮಪ್ಪ ಮೞಲೇರಿಯಂತೆ ಲಯಮಪ್ಪ ಕಬ್ಬುವದ ಕಡಲೆಯಂತೆ ಬೆಟ್ಟಿತಪ್ಪ ಸುಣ್ಣದಂತೆ ತೀವ್ರಮಪ್ಪ ಕತ್ತರಿವಾಟಿಯಂತೆ ಸಾರಲರಿದಪ್ಪ ರಾಜಕನ್ಯೆಯಂತೆ ಬಯಸಲರಿದಪ್ಪ ಮುಳ್ಳುಳ್ಳ ಬಟ್ಟೆಯಂತೆ ನಡೆಯಲರಿದಪ್ಪ ರಕ್ಕಸಿ

ವನ್ನು ಮೆಚ್ಚದೆ ಕೊಬ್ಬಿದ ಸ್ವಭಾವದಿಂದ ನೀಚರನ್ನು ಪ್ರೀತಿಯಿಂದ ಓಲೈಸುವವನೂ ಜಿನಧರ್ಮವನ್ನು ಬಿಟ್ಟು ಸಂಭ್ರಮದಿಂದ ಇಂದ್ರಿಯಭೋಗಗಳನ್ನು ಅನುಭವಿಸ ಬಯಸುವವನೂ ಹುಚ್ಚರಲ್ಲವೆ ? ೧೪೬. ಐಶ್ವರ್ಯದ ಮಹಿಮೆ, ರೂಪಿನ ಆಧಿಕ್ಯ, ಇವುಗಳಿಗೆ ಸಡಗರಪಟ್ಟು, ನೀಚಬುದ್ಧಿಯಿಂದ ಇದು ಸ್ಥಿರವೆಂದು ಮನುಷ್ಯಜನ್ಮ ವನ್ನು ನಂಬಿ ಕೆಲವರು ಬುದ್ಧಿಹೀನರು ಕೆಡುತ್ತಾರೆ. ಶ್ರೇಷ್ಠವಾದ ಜೈನಧರ್ಮ ವನ್ನೂ ಉತ್ತಮ ವ್ರತ ಸಮೂಹಗಳನ್ನೂ ಒಲ್ಲದೆ ಅಲಕ್ಷ್ಯಮಾಡಿ ತಟ್ಟನೆ ಸತ್ತು ಹೆಚ್ಚಾಗಿ ನರಕ ದುಃಖವನ್ನು ಅನುಭವಿಸುವರು. ೧೪೭. ಧರ್ಮವನ್ನು ಬಿಟ್ಟು ಶ್ರೇಷ್ಠವಾದ ಒಳ್ಳೆಯ ವ್ರತಗಳನ್ನು ಅನುಸರಿಸದೆ ಮನಸ್ಸು ಕುಗ್ಗಿ ಜೈನರ ಹೇಳಿಕೆ ಗಳಿಗೆ ಅಂಜಿ, ಹೆಚ್ಚಿನ ಒಳ್ಳೆಯ ನಡೆವಳಿಕೆಯಲ್ಲಿ ಶಂಕೆಪಟ್ಟು ಜಿನೋಕ್ತಿಯನ್ನು ಅನುಸರಿಸದೆ ಕಾಮಿಗಳಾದವರು ಇಂದ್ರಿಯಗಳನ್ನು ಹೆಚ್ಚಿಸಿ (ಕೊಬ್ಬಿಸಿ) ಕೊನೆಗೆ ತಮ್ಮ ವಿನೋದಗಳಿಂದಲೇ ನರಕಕ್ಕೆ ಹೋಗುವರು. ೧೪೮. ಮೋಡದಂತೆ ಅಸ್ಥಿರವಾದ, ಗಾಳಿಯಂತೆ ಚಂಚಲವಾದ ಮರಳಿನಕಟ್ಟೆಯಂತೆ ಲಯಹೊಂದುವ, ಕಬ್ಬಿಣದ ಕಡಲೆಯ ಹಾಗೆ ಕಠಿಣವಾದ, ಸುಣ್ಣದಂತೆ ಬಿಸಿಯಾದ (ತೀಕ್ಷ್ಣ) ಕತ್ತರಿಬಾಳೆಯ ಹಾಗೆ ಹತ್ತಿರ ಹೋಗಲು ಅಸಾಧ್ಯವಾದ, ರಾಜಕನ್ಯೆಯಂತೆ ಬಯಸಲು ಅಸಾಧ್ಯವಾದ, ಮುಳ್ಳಿರುವ ದಾರಿಯಂತೆ ನಡೆಯಲು ಸಾಧ್ಯವಾಗದ, ರಕ್ಕಸಿಯಂತೆ ಅನುಭವಿಸಲು ಆಗದ, ನಡು

ಯಂತನುಭವಿಸಲರಿದಪ್ಪ ನಡುವಗಲಾದಿತ್ಯನಂತೆ ನೋಡಲರಿದಪ್ಪ ಸುರಚಾಪದಂತೆ ಕ್ಷಣಿಕಮಪ್ಪ ಬಯಲ್ವೊನಲಂತೆ ಕಿಡುವಂತಪ್ಪ ಪರಿವಂಬಿನಂತೆ ಕಡಿದಪ್ಪ ಬಿದಿರಡವಿಯಂತೆ ಪುಗಲರಿದಪ್ಪ ಸಮುದ್ರದಂತೆ ದಾಂಟಲರಿದಪ್ಪ ಕಿಚ್ಚಿನಂತೊಳಗೊಳಲರಿದಪ್ಪ ಬಲ್ಲಿದನಾಜ್ಞೆಯಂತೆ ಮೀಱಲರಿ ದಪ್ಪ ಚಕ್ರದಂತೆ ತಪ್ಪಿಸಲರಿದಪ್ಪ ಸೂಜಿಯಮೊನೆಯಂತೆ ಕೂರಿತಪ್ಪ ಕಾಳಿಗದಂತೆ ಪುಗಲರಿದಪ್ಪ ಮಸಣದಂತಿರಲರಿದಪ್ಪ ಬಿಸಿಲ್ಗುದುರೆಯಂತೆ ಮಾಯಮಪ್ಪ ಇಂದ್ರಜಾಲಿಕನಂತೆ ಬಹುಪ್ರಕಾರ ಮಪ್ಪ ಪೊಲಸಿನಂತಶುಚಿಯಪ್ಪ ವಾತದಂತೆ ನಡುಕಮಪ್ಪ ನೀರಿನಂತೆ ಕಟ್ಟಲರಿದಪ್ಪ ಮೋಕ್ಷ ದಂತಱಿಯಲರಿದಪ್ಪ ಸಂಕ್ರಾಂತಿಯಂತೆ ನಿಟ್ಟಿಸಲರಿದಪ್ಪ ಮರುಳಂತೆ ಕೊಂಡಾಡಲರಿದಪ್ಪ ಕೊಡದ ನೀರಂತೆ ಪೆರ್ಚಿಸಲರಿದಪ್ಪ ಸಂಸಾರಮಂ ನಂಬಿ ದರ್ಶನಮುಮಂ ವ್ರತಮುಮಂ ಕೆಡಿಸು ವುದೆಗ್ಗಿಕೆಯೆಂದು ವ್ರತಪರಿರಕ್ಷಣೋಪಾಯಮಂ ಚಿಂತಿಸುತಿರ್ದಳಿರ್ಪನ್ನೆಗಂ ೧೪೯

ಕಡುಚಪಳತೆಯಂ ಬಿಟ್ಟೆ
ನ್ನೊಡಗೂಡೊಡಗೂಡದಂದು ದೆಸೆವಲಿಗೆಯ್ವೆಂ
ತಡೆಯದೆನೆ ಕನ್ನೆ ತಾಂ ನಡು
ನಡುಗುತ್ತುಂ ಜಿನರ ಪದಮನುೞ್ಕೆ ಪೆರ್ಚಿವಿಡಿದಳ್ ೧೫೦

ಹಗಲಿನ ಸೂರ್ಯನಂತೆ ನೋಡುವುದಕ್ಕೆ ಅಸಾಧ್ಯವಾದ, ಇಂದ್ರಧನುಸ್ಸಿನಂತೆ ಕ್ಷಣಿಕವಾದ ಬಯಲು ಪ್ರವಾಹದಂತೆ ಕೆಟ್ಟು ಹೋಗುವ, ಹಾರುವ ಅಂಬಿನಂತೆ ಕ್ರೂರವಾದ, ಬಿದಿರು ಮೆಳೆಯಂತೆ ಪ್ರವೇಶಿಸಲು ಅಸಾಧ್ಯವಾದ, ಸಮುದ್ರದಂತೆ ದಾಟಲು ಸಾಧ್ಯವಾಗದ, ಬೆಂಕಿ ಯಂತೆ ಮುಚ್ಚಿಟ್ಟುಕೊಳ್ಳಲಾಗದ, ಬಲಿಷ್ಠನ ಆಜ್ಞೆಯಂತೆ ಮೀರಲು ಅಸಾಧ್ಯವಾದ ಚಕ್ರಾಯುಧದಂತೆ ತಪ್ಪಿಸಲು ಆಗದ, ಸೂಜಿಯ ತುದಿಯಂತೆ ಹರಿತವಾದ, ಕಾಳಗದಂತೆ ಮಧ್ಯೆ ಪ್ರವೇಶಿಸಲು ಅಸಾಧ್ಯವಾದ, ಶ್ಮಶಾನದಂತೆ ಇರುವುದು ಅಸಾಧ್ಯವಾದ, ಬಿಸಿಲುಗು ದುರೆಯಂತೆ ಮಾಯವಾಗುವಂಥ, ಇಂದ್ರಜಾಲಿಕನಂತೆ ಹಲವು ವಿಧವಾದ, ಹೊಲಸಿನಂತೆ ಅಶುಚಿಯಾದ, ವಾತರೋಗದಂತೆ ನಡುಕವನ್ನುಂಟು ಮಾಡುವ, ನೀರಿನಂತೆ ಕಟ್ಟಲು ಅಸಾಧ್ಯವಾದ, ಮೋಕ್ಷದ ಹಾಗೆ ತಿಳಿಯಲು ಅಸಾಧ್ಯವಾದ, ಸಂಕ್ರಾಂತಿಯಂತೆ ನೋಡಲು ಸಾಧ್ಯವಾಗದ, ಪಿಶಾಚದಂತೆ ಕೊಂಡಾಡಲು ಅಸಾಧ್ಯವಾದ ಕೊಡ ದಲ್ಲಿನ ನೀರಿನಂತೆ ಹೆಚ್ಚಿಸಲು ಆಗದ ಈ ಸಂಸಾರವನ್ನು ನಂಬಿಕೊಂಡು ದರ್ಶನ ವನ್ನೂ ವ್ರತವನ್ನೂ ಕೆಡಿಸಿಕೊಳ್ಳುವುದು ದಡ್ಡತನವೆಂದು ಭಾವಿಸಿ ವ್ರತವನ್ನು ಕಾಪಾಡಿಕೊಳ್ಳುವ ಉಪಾಯವನ್ನು ಕುರಿತು ಚಿಂತಿಸುತ್ತಿದ್ದಳು, ೧೪೯. ಆಗ ಆ ಸಿಂಹರಥನು "ಚಪಲ ಚಿತ್ತವನ್ನು ಬಿಟ್ಟು ಇನ್ನು ನನ್ನನ್ನು ಕೂಡು. ಹಾಗೆ ಕೂಡ ದಿದ್ದರೆ ನಿನ್ನನ್ನು ದಿಗ್ಬಲಿ ಮಾಡುತ್ತೇನೆ" ಎಂದನು. ಆ ಕನ್ಯೆ ಹೆದರಿಕೆಯಿಂದ ನಡುಗುತ್ತ ಜಿನಪಾದಗಳನ್ನು ಮನಸ್ಸಿನಲ್ಲಿ ಸೆರೆಹಿಡಿದಳು. "ರಾಜನ ಕೋಪ ಹೆಚ್ಚು, ಅಸಡ್ಡೆ

ಅರಸನ ಕೋಪಂ ಪಿರಿದೋ
ಸರಿಸದೆ ಮಾರ್ಕೊಳ್ಳದಾಗದೆನ್ನದೆ ಪಲವಂ
ಸ್ಮರಿಯಿಸದೆ ಕೂಡು ಕೂಡದೊ
ಡರವರಿಸುವನಲ್ಲನಕ್ಕ ಕೊಲ್ಲದೆ ಮಾಣಂ ೧೫೧

ಆರ ಮಗಳೆಂದು ಭೂಭುಜ
ನಾರಯ್ಯದೆ ನಿನ್ನನರಸಿಮಾಡಿದನೆಂಬೀ
ಕಾರುಣ್ಯಂ ಕೇವಳಮೇ
ಧಾರಿಣಿ ಬೆಸಗೆಯ್ಯೆ ಬಾಳ್ವುದಿದು ಬೇವಸಮೇ ೧೫೨

ಗದ್ಯ॥ ಎಂದು ಕಂಡಕಂಡವರೆಲ್ಲಂ ಗಲ್ಲಂಗುರಿಗೊಳೆ ನವಿಲ್ ಕಾರ್ಗಾಲಮಂ ಹಂಸೆ ಸರೋವರಮಂ ಮದದಾನೆ ಬನಮಂ ಪಸುಗೂಸು ಮೊಲೆಯಂ ಪೆಣ್ಗೂಸು ತವರ್ಮನೆಯಂ ತುಂಬಿ ತಾವರೆಯಂ ಕಱು ಕೆಚ್ಚಲಂ ನಲ್ಲಳ್ ನಲ್ಲನಂ ವ್ಯವಹಾರಿ ಪಡಪಂ ಕೊಡಗೂಸು ಮದುವೆಯಂ ಬೆಳಸುಳ್ಳಂ ಮೞೆಯುಂ ನೆನೆವಂತು ಜಿನಪಾದಾಂಭೋಜಂಗಳಂ ನೆನೆಯುತ್ತುಂ ಪರಿಚ್ಛೇದಿಸಿರ್ದಳಿರ್ಪುದುಂ ಸಿಂಹರಥಮಹಾರಾಜಂ ಮುನಿದು ಆಪ್ತಾಳಾಯಿಲರ್ಕಂ ಬರವೇಳ್ದೀ ಚಪಳೆಯಂ ಸಾಯೆ ಮೋದಿಯೆಂಬುದುಂ ೧೫೩

ಮಾಡದೆ, ವಿರೋಧಿಸದೆ, ಆಗದೆಂದು ತಿರಸ್ಕರಿಸದೆ, ಬೇರೆ ಹಲವನ್ನು ನೆನೆಸದೆ ಕೂಡು; ಕೂಡದಿದ್ದರೆ ರಾಜನು ಕ್ಷಮಿಸುವವನಲ್ಲ. ಅವನು ಕೊಲ್ಲದೆ ಬಿಡುವುದಿಲ್ಲ. ೧೫೧ ನೀನು ಯಾರ ಮಗಳೆಂದು ಕೂಡ ವಿಚಾರಿಸದೆ ರಾಜನು ನಿನ್ನನ್ನು ಅರಸಿಯಾಗಿ ಮಾಡಿಕೊಳ್ಳ ಬಯಸಿದ ಈ ಕಾರುಣ್ಯ ಸಾಮಾನ್ಯವೆ? ಪ್ರಪಂಚವೇ ಸೇವೆ ಮಾಡುತ್ತಿರುವಂತೆ ಬಾಳುವುದು ಬೇಸರವೆ?". ೧೫೨ ಎಂದು ಕಂಡ ಕಂಡವರೆಲ್ಲರೂ ಕೆನ್ನೆ ತಿವಿದು ಬುದ್ಧಿ ಹೇಳಲು ನವಿಲು ಮಳೆಗಾಲವನ್ನೂ ಹಂಸೆ ಸರೋವರವನ್ನೂ ಮದ್ದಾನೆ ವನವನ್ನೂ ಹಸುಮಗು ಮೊಲೆಯನ್ನೂ ಹೆಣ್ಣುಮಕ್ಕಳು ತವರುಮನೆಯನ್ನೂ ದುಂಬಿ ತಾವರೆಯನ್ನೂ ಕರು ಕೆಚ್ಚಲನ್ನೂ ಪ್ರೇಯಸಿ ಪ್ರಿಯನನ್ನೂ, ವ್ಯಾಪಾರಿ ಲಾಭವನ್ನೂ ಕನ್ಯೆ ಮದುವೆಯನ್ನೂ, ಬೆಳಸನ್ನಿಟ್ಟಿರುವವನು ಮಳೆಯನ್ನೂ ಧ್ಯಾನಿಸುವ ಹಾಗೆ, ಅನಂತಮತಿಯು ಜಿನಪಾದ ಕಮಲಗಳನ್ನು ಧ್ಯಾನಿಸುತ್ತ ನಿರ್ಧಾರದಿಂದ ಇದ್ದಳು. ಆಗ ಸಿಂಹರಥನು ಸಿಟ್ಟುಗೊಂಡು ನಂಬಿಕೆಯ ಸೇವಕರನ್ನು ಬರಹೇಳಿ 'ಈ ಚಪಲೆಯನ್ನು ಸಾಯ ಬಡಿಯಿರಿ' ಎಂದನು. ೧೫೩

ಕಟ್ಟನೆ ಕಟಿಯುವರಾಗಳೆ
ಗಟ್ಟನೆ ಪರಿತಂದು ಮೂಣದಚ್ಚುಳಕೋಲಿಂ
ತಿಟ್ಟನೆ ತಿರಿಪಿ ದುರಾತ್ಮರ್
ಚಟ್ಟನೆ ಕೆನ್ನೆತ್ತರೊಗೆಯೆ ತೊಲಗದೆ ಬಡಿದರ್ ೧೫೪

ಮುಳಿಸಿಂದೊಡನೊಡನೆ ಛಳಿ
ಲ್ಛಳಿಲೆನೆ ಸೂಳಾಯ್ತುರಟ್ಟಿಪೊಯ್ವುದುಮೊಗಳ್
ಕಳವಳಿಸದೆ ಚೆಂಬೀಟದೆ
ಮುಳಿಸಿಲ್ಲದೆ ಕನ್ನೆ ಮಂದರಾದ್ರಿವೊಲಿರ್ದಳ್ ೧೫೫

ಕ್ಷೋಣೀಶನ ಬೆಸದಿಂ ಕ
ಣ್ಗಾಣದೆ ಸೂಳಾಯ್ತುರಟ್ಟಿ ಮೋದುತ್ತಿರಲುಂ
ಮಾಣದೆ ಜಿನೇಂದ್ರಪದಮಂ
ಜಾಣೆ ಮಹೋತ್ಸಾಹದಿಂದೆ ನೆನೆಯುತ್ತಿರ್ದಳ್ ೧೫೬

ಶರಣೆನಗೀಯವಸರದೊಳ್
ಪರಮಜಿನೇಶ್ವರಪದಾಂಬುಜಾತಮೆ ಪೆಱತಿಂ
ಶರಣಿಲ್ಲೆಂದುಱೆ ಪಿಡಿದಳ್
ಸುರುಳಿಲ್ಲದೆ ಬಂದಿವಿಡಿವವೋಲ್ಜಿನಪದಮಂ ೧೫೭

ಅರಸನು ಅಪ್ಪಣೆ ಮಾಡುತ್ತಲೆ ಕರ್ರಗಿದ್ದ ಆ ಸೇವಕರು ತಟ್ಟನೆ ಓಡಿಬಂದು ಬಾರುಕೋಲಿನಿಂದ ಗರ್ರನೆ ತಿರುಗಿಸುತ್ತ ಆ ದುರಾತ್ಮರು ಅವಳನ್ನು ಕೆಂಪಗೆ ರಕ್ತ ಚಿಮ್ಮುವ ಹಾಗೆ ಬಿಡದೆ ಹೊಡೆದರು. ೧೫೪. ಕೋಪದಿಂದ ಮತ್ತೆ ಮತ್ತೆ ಛಳ್ ಛಳ್ ಎಂದು ಸದ್ದಾಗುವಂತೆ ಆ ಸರದಿಯ ಸೇವಕರು ಅಟ್ಟಿ ಹೊಡೆದರು; ಆಗ ಅನಂತಮತಿಯು ಸ್ವಲ್ಪವೂ ಕಳವಳಪಡದೆ, ಮೊರೆಯಿಡದೆ, ಕೋಪವಿಲ್ಲದೆ ಮಂದರಾದ್ರಿಯ ಹಾಗೆ ಸ್ವಲ್ಪವೂ ಚಲಿಸದೆ ನಿಂತಿದ್ದಳು. ೧೫೫. ರಾಜನ ಅಪ್ಪಣೆಯಂತೆ ಭಟರು ನೋಡದೆ ಹೊಡೆಯುತ್ತಿರಲು ಬಿಡದೆ ಆ ಜಾಣೆ ಜಿನೇಂದ್ರ ಪಾದಗಳನ್ನು ಬಹಳ ಉತ್ಸಾಹದಿಂದ ಧ್ಯಾನಿಸುತ್ತಿದ್ದಳು. ೧೫೬. ಈ ಸಮಯದಲ್ಲಿ "ನನಗೆ ಪರಮ ಜಿನೇಶ್ವರಸ್ವಾಮಿಯ ಪಾದಕಮಲವೇ ಗತಿ ; ಬೇರೆ ಶರಣಿಲ್ಲ", ಎಂದು ಅಂಜಿಕೆಯಿಲ್ಲದೆ, ಕುಗ್ಗದೆ, ಬಂದಿಯಾಗಿ ಹಿಡಿದುಕೊಳ್ಳುವಂತೆ ಜಿನಪಾದಗಳನ್ನು ಹಿಡಿದು ನಂಬಿದಳು ೧೫೭. ಆ ರೀತಿಯಾಗಿ ತನ್ನ ಯಾತನೆಯನ್ನು ಲೆಕ್ಕಿಸದೆ,

ಗದ್ಯ॥ ಅಂತು ತನ್ನೊಂದು ನೋವಂ ಬಗೆಯದೆ ವ್ರತಂ ಕೆಟ್ಟಪುದೆಂಬ ನೋವೆ ಪಿರಿದಾಗೆ ವ್ರತಮಂ ರಕ್ಷಿಪ್ಪುದಱಿಂ ಸಾವಂ ನಿಶ್ಚಯಿಸಿ ದೇಹಾಭಿಲಾಷೆಯಂ ಬಿಟ್ಟು ಪಂಚನಮಸ್ಕಾರಮಂ ಜಪಿಸುತ್ತಿರ್ದಳನ್ನೆಗಂ ಆ ಪುರದ ನಗರದೇವತೆಗಳ್ಗಾಸನಕಂಪಮಾಗೆ ಬೇಗಮಱಿದು ನೆರೆದು ಬಂದನಂತಮತಿಯಂ ಕಂಡು ದೃಢವ್ರತೆಯೆಂದಱಿದು ಕೈಮುಗಿದು ನಾನಾ ಪ್ರಕಾರದಿಂ ಪೊಗೞ್ದು ಮತ್ತಮಿಂತೆಂದರ್ ೧೫೮

ನಿಲ್ಲೋ ಕುಮಾರಿ ತಲ್ಲಣ
ಮಿಲ್ಲದೆ ಮುಳಿಸಿಲ್ಲದೊಂದೆ ಮನದಿಂದಂ ನೋ
ವಿಲ್ಲದೆ ಪದಪಿಂ ತ್ರಿಭುವನ
ವಲ್ಲಭನಂ ನೆನೆವ ಮಹಿಮೆಯಿದು ಕೇವಳಮೇ ೧೫೯

ಧನಮುಳ್ಳನುಮಂ ಬಿಡದೊ
ಯ್ಯನೆ ಸಾಯದೆ ಬಂದಿವಿಡಿದವಂ ಬಾೞ್ಗೆಂ
ದನವರತಂ ಜಿನರಂ ಪಿಡಿ
ದ ನರಂಗೆರಡುಂಟೆ ಬಗೆವೊಡಿನ್ನೀ ಜಗದೊಳ್ ೧೬೦

ನರೆಬಂದನಿತಱಿಂ ಕೊಳೆ ನರರ್
ಪಿರಿಯರೆ ಜಿನನಾಥಸೇವೆಯುಳ್ಳಮನುಷ್ಯರ್
ಧರೆಯೊಳ್ ಕೂಸಾದೊಡಮವ
ರೆರಡಿಲ್ಲದೆ ಪಿರಿಯರವರೆ ಧನ್ಯರ್ ಮಾನ್ಯರ್ ೧೬೧

ವ್ರತ ಹಾಳಾಗುವುದೆಂಬ ನೋವೇ ಹೆಚ್ಚಾಗಲು ವ್ರತವನ್ನು ಕಾಪಾಡಿಕೊಳ್ಳುವುದರಿಂದ ಸಾವು ಬರುವುದೆಂದು ನಿಶ್ಚಯಿಸಿ ದೇಹದ ಮೇಲಿನ ಆಸೆಯನ್ನು ಬಿಟ್ಟು ಪಂಚ ನಮಸ್ಕಾರಗಳನ್ನು ಜಪಿಸುತ್ತ ಇದ್ದಳು. ಆ ವೇಳೆಗೆ ಆ ಪಟ್ಟಣದಲ್ಲಿದ್ದ ನಗರಾಭಿಮಾನಿ ದೇವತೆಗಳಿಗೆಲ್ಲ ಆಸನಕಂಪವಾಯಿತು. ಅವರೆಲ್ಲ ಬೇಗ ತಿಳಿದು ಒಟ್ಟಾಗಿ ಬಂದು ಅನಂತಮತಿಯನ್ನು ಕಂಡು, ದೃಢವ್ರತೆಯೆಂಬುದನ್ನು ತಿಳಿದು ಕೈಮುಗಿದು ನಾನಾವಿಧ ವಾಗಿ ಹೊಗಳಿದರು. ೧೫೮. ಆ ದೇವತೆಗಳು ಅರಸನನ್ನೂ ಅವನ ಸೇವಕರನ್ನೂ ತಡೆದು "ಈ ಕುಮಾರಿ ತಲ್ಲಣವಿಲ್ಲದೆ, ಸಿಟ್ಟಿಲ್ಲದೆ, ಒಂದೇ ಮನಸ್ಸಿನಿಂದ ನೋವಿಲ್ಲದೆ ಉತ್ಸಾಹ ದಿಂದ ಮೂರು ಲೋಕಗಳ ಒಡೆಯನಾದ ಜಿನೇಶ್ವರನನ್ನು ಸ್ಮರಿಸುವ ಈ ಮಹಿಮೆ ಸಾಮಾನ್ಯವೆ ? ೧೫೯. ಧನವಿರುವವನನ್ನೂ ಬಿಡದೆ, ತಟ್ಟನೆ ಸಾಯದೆ, 'ಬಂದಿ ಹಿಡಿದವನು ಬದುಕಲಿ' ಎಂದು ಅನವರತವೂ ಜಿನರನ್ನೇ ಹಿಡಿದು ಧ್ಯಾನಿಸುವ ಮನುಷ್ಯ ರಿಗೆ ಈ ಜಗತ್ತಿನಲ್ಲಿ ಇನ್ನು ಭೇದವುಂಟೆ ? ೧೬೦. ನರೆ ಬಂದಷ್ಟರಿಂದಲೇ ಮನುಷ್ಯರು ಹಿರಿಯರಾಗುವರೆ ? ಜಿನನಾಥನ ಸೇವೆ ಮಾಡುತ್ತಿರುವ ಮನುಷ್ಯರು ಲೋಕದಲ್ಲಿ ಹಸು ಮಕ್ಕಳಾದರೂ ಅವರು ಸಂದೇಹವಿಲ್ಲದೆ ಹಿರಿಯರು. ಅವರೇ ಧನ್ಯರು, ಅವರೇ ಮಾನ್ಯರು ೧೬೧. ಕಿವಿ ಹಿರಿಯದಾದರೂ ಬಲದ ದೃಷ್ಟಿಯಿಂದ ನೋಡಿದರೆ ಅದಕ್ಕೆ

ಪಿರಿದು ಕಿವಿ ಕೋಡಿನಂತಿರೆ
ಪಿರಿದಪ್ಪುದೆ ಬಲ್ಪಿನೆಡೆಗೆ ಜಿನಸೇವನೆಯು
ಳ್ಳರೆ ಕಿಱಿಯರಾದೊಡಂ ಕೇ
ಟ್ಪಿರಿಯರಿವರ್ ಕಿಱಿಯರೆಂತುಮದನೊಲ್ಲದವರ್ ೧೬೨

ಪಾಲಲ್ಲದೆ ಪಿರಿದಪ್ಪುದೆ
ಮೇಲಪ್ಪುದೆ ತುಪ್ಪದೆಡೆಗೆ ಧರ್ಮಮನೊಲ್ವಾ
ಕೀಳುಂ ಮೇಲದನೊಲ್ಲದ
ಮೇಲುಂ ಕೀಳಕ್ಕುಮಲ್ಲಿ ಸಂದೆಯಮುಂಟೆ ೧೬೩

ಬಱಿಯೆ ಜಿನಭಕ್ತಿಯಲ್ಲಿದು
ತಱಿಸಲ್ವುವು ನೆಱಿಯೆ ಪೆಂಪುಮಾರ್ಪುಂ ಮನದೊಂ
ದಱಿವುಂ ವ್ರತದುನ್ನತಿಯುಂ
ಪೆಱತೇನೀ ಕನ್ನೆಯಧಿಕಗುಣಯುತೆಯಕ್ಕುಂ ೧೬೪

ಗದ್ಯ॥ ಎಂದು ಪೊಗೞ್ದು ಕನ್ನೆಯ ನೋವೆಲ್ಲಮನರಸನ ಪಟ್ಟದರಸಿಯರ ಪರಿಜನದ ಕುಮಾರರ ಪ್ರಧಾನರ ಮೇಲಿಕ್ಕುವುದುಂ ೧೬೫

ಎಲ್ಲರ ಮೆಯ್ಗಳೊಳಂ ತಳು
ವಿಲ್ಲದೆ ಬಾಸುೞ್ಗಳೊಗೆಯೆ ಕಡು ನೋವಿಂದಂ
ಪಲ್ಲಂ ಗಿಡಿಗಿರಿದಳುತ್ತುಂ
ನಿಲ್ಲದೆ ನೆತ್ತರನೆ ಕಾಱಿ ಕೆಡೆದರ್ ನೆಲದೊಳ್ ೧೬೬

ಕೋಡಿನಷ್ಟು ಹಿರಿಮೆ ಬರುವುದೆ ? ಜಿನಸೇವೆಯುಳ್ಳವರು ಚಿಕ್ಕವರಾದರೂ ಅವರೇ ಹಿರಿಯರು. ಅದನ್ನು ಒಲ್ಲದವರೇ ಕಿರಿಯರು ೧೬೨. ಹಾಲಿಗಿಂತ ದೊಡ್ಡದೆ, ತುಪ್ಪ ? ಆದರೆ ಅದು ಗುಣದಿಂದ ಮೇಲು. ಧರ್ಮವನ್ನು ಒಲಿದ ಕೀಳಿನವರೇ ಮೇಲು. ಅದನ್ನು ಒಲ್ಲದ ಮೇಲಿನ ಅಂತಸ್ತಿನವರೇ ಕೀಳಾಗುತ್ತಾರೆ. ಇದರಲ್ಲಿ ಸಂದೇಹವುಂಟೆ ? ೧೬೩. ಇಲ್ಲಿ ಬರಿಯ ಜಿನಭಕ್ತಿ ಮಾತ್ರವಲ್ಲ, ಇದು ಮನೋನಿರ್ಧಾರ, ಅತಿಶಯವಾದ ಪೆಂಪು–ಹೆಮ್ಮೆ–ಧರ್ಮದಲ್ಲಿ ಮನಸ್ಸಿನ ಆರ್ಪು (ಶಕ್ತಿ) ಜ್ಞಾನ, ವ್ರತಾಚರಣೆಯಲ್ಲಿ ಘನತೆ–ಇವೆಲ್ಲ ಇವೆ. ಬೇರೇನು ? ಈ ಕನ್ಯೆ ಹೆಚ್ಚಿನ ಗುಣವತಿಯಾಗಿದ್ದಾಳೆ. ಆದ್ದರಿಂದ ಎಲ್ಲರ ಗೌರವಕ್ಕೂ ಅರ್ಹಳು" ೧೬೪. ಎಂದು ಹೊಗಳಿ ಕನ್ಯೆಯು ನೋವನ್ನೆಲ್ಲ ಅರಸನ ಪಟ್ಟದರಾಣಿಯರ, ಸೇವಕರ, ಯುವರಾಜರ, ಮತ್ತು ಪ್ರಧಾನರ ಮೇಲೆ, ಇಕ್ಕಲು ೧೬೫ ಎಲ್ಲರ ದೇಹಗಳಲ್ಲಿಯೂ ತಡವಿಲ್ಲದೆ ಬಾಸುಂಡೆಗಳು ಮೂಡಿದವು. ಅವರು ಬಹಳ ನೋವಿನಿಂದ ಹಲ್ಲುಕಡಿದು ಅಳುತ್ತ ಒಂದೇ ಸಮನೆ ರಕ್ತ ಕಾರುತ್ತ ಕೆಳಗೆ ಬಿದ್ದರು. ೧೬೬.

ನೋವಿಂಗಿನಿಸಿರಲಾಱದೆ
ಸಾವಾಯ್ತೆಂದಳ್ಕಿ ಬೆಚ್ಚಿ ಗೋಳಿಟ್ಟಳುತೋ
ವೋವೆಂದು ಧೈರ್ಯವಿಲ್ಲದೆ
ಭೂವಳಯಾಧಿಪನ ಮುಂದೆ ಪೊರಳುತ್ತಿರ್ದರ್ ೧೬೭

ಧರಣೀಶಂ ತಾಂ ನೋವಿಂ
ಗಿರಲಾಱದೆ ನೊಂದು ನಡುಗಿ ತಲ್ಲಣದಿಂದಂ
ಸೊರೆಯೊಳಗಿಲಿ ಪೊಕ್ಕಂತಿರೆ
ಪರಿವರಿದಲ್ಲಲ್ಲಿಗುರುಳುತಿರ್ದಂ ಭಯದಿಂ ೧೬೮

ಗದ್ಯ॥ ಅಂತು ಜ್ವರಮಾದಂತೆ ಕುಂಬಿಳ್ಕುವರಸನುಮಂ ಮಗುವಿನಂತೆ ಪೊರಳ್ವರಸಿಯರುಮಂ ನರಡಾದೆತ್ತಿನಂತೆ ನಾಲಗೆಯನುರ್ಚುವ ಪರಿಜನಮುಮಂ ಕುಂದದಾವಿನಂತೆ ಕಾಲಂಬಡಿವ ಪುರ ಜನಮುಮಂ ಮೈಲಾರದ ಗೊರವನಂತೆ ತಂತಮ್ಮನೆ ಬಡಿದುಕೊಳ್ವಚ್ಚುಳಾಯಿಲರುಮಂ ಕೊರಲ್ಬಿ ಗಿದ ಕಱುವಿನಂತೆ ಗೋಳಿಡುವ ವಿಳಾಸಿನಿಯರುಮಂ ಕಱು ಸತ್ತೆಮ್ಮೆಯಂತೊಱಲುವ ಕುಮಾರ ರುಮಂ ಜನ್ಮಾಭಿಷೇಕದಂದಿನ ಮಂದರದಂತಿರ್ದ ಕುಮಾರಿಯುಮಂ ನಗರದೇವತೆಗಳ್ ಕಂಡು ಕಯ್ಯಂ ಪೊಯ್ದು ಕಳಕಳಿಸಿ ನಕ್ಕು ೧೬೯

ನೋವಿಗೆ ಸ್ವಲ್ಪವೂ ಸಹಿಸಲಾರದೆ "ಅಯ್ಯೋ ಸಾವೇ ಬಂತು!" ಎಂದು ಅಂಜಿ ಗೋಳಾಡಿ ಅಳುತ್ತ ಧೈರ್ಯವಿಲ್ಲದೆ ರಾಜನ ಮುಂದೆ ಬಿದ್ದು ಹೊರಳುತ್ತಿದ್ದರು. ೧೬೭. ರಾಜನು ತಾನೂ ನೋವಿಗೆ ತಡೆದುಕೊಳ್ಳಲಾರದೆ ನೊಂದು ಗಾಬರಿಯಿಂದ ಗಡಗಡನೆ ನಡುಗುತ್ತ ಸೋರೆಯೊಳಕ್ಕೆ ಇಲಿ ಹೊಕ್ಕ ಹಾಗೆ ಹರಿದಾಡಿ ಭಯದಿಂದ ಅಲ್ಲಿಂದಿಲ್ಲಿಗೆ ಉರುಳಾಡುತ್ತಿದ್ದನು. ೧೬೮. ಹಾಗೆ ಜ್ವರ ಬಂದವರಂತೆ ಅಡ್ಡಬೀಳುವ ರಾಜನನ್ನೂ, ಮಗುವಿನ ಹಾಗೆ ಹೊರಳುವ ರಾಣಿಯರನ್ನೂ ರೋಗ ತಟ್ಟಿದ ಎತ್ತಿನಂತೆ ನಾಲಗೆಯನ್ನು ಹೊರ ಚಾಚುವ ಪರಿಜನರನ್ನೂ ನರಳುವ ಹಸುವಿನಂತೆ ಕಾಲುಬಡಿಯುವ ಪುರಜನರನ್ನೂ, ಮೈಲಾರದ ಗೊರವನ ಹಾಗೆ ತಮ್ಮನ್ನೇ ಬಡಿದುಕೊಳ್ಳುತ್ತಿರುವ ಬಾರುಕೋಲು ಹಿಡಿದ ಆಳುಗಳನ್ನೂ ಕೊರಳು ಬಿಗಿದ ಕರುವಿನ ಹಾಗೆ ಗೋಳಿಡುತ್ತಿರುವ ವಿಳಾಸಿನೀಜನರನ್ನೂ, ಕರು ಸತ್ತ ಎಮ್ಮೆಯ ಹಾಗೆ ಅರಚುತ್ತಿರುವ ಯುವರಾಜರನ್ನೂ ಜನ್ಮಾಭಿಷೇಕ (ಅರ್ಹಂತ ಶಿಶುವಿಗೆ ಹುಟ್ಟುತ್ತಲೂ ಇಂದ್ರ ಮಂದರ ಪರ್ವತಕ್ಕೊಯ್ದು ಕ್ಷೀರಾಭಿಷೇಕ ಮಾಡುತ್ತಾನೆ)ವಾಗುವ ಹೊತ್ತಿನ ಮಂದರ ಪರ್ವತದ ಹಾಗೆ ಇದ್ದ ಅನಂತಮತೀ ಕುಮಾರಿಯನ್ನೂ ಆ ನಗರ ದೇವತೆಗಳು ಕಂಡು ಕೈ ತಟ್ಟಿ ಗಹಗಹಿಸಿ ನಕ್ಕರು. ೧೬೯.

ಆವಾವ ನೋವು ಬಂದೊಡ
ಮಾವಾವ ಪರೀಷಹಂಗಳಡಸಿದೊಡಂ ಮ
ತ್ತೋವೋಯೆನ್ನದೆ ಜಿನಪದ
ಭಾವನೆಯಿಂದಿರ್ಪ ಜೈನರಿಂ ಮಿಗಿಲೊಳರೇ ೧೭೦

ಕೇಡಾದುದೆಂದು ಬೆಚ್ಚದೆ
ಬಾಡದೆ ಬೆಂಬೀಟದಂಜಿ ಚಿಂತಿಸದೆರಡಂ
ಮಾಡದೆ ಮನಮಂ ಶುಭದೊಳ್
ಕೂಡಿರ್ಪ ಜಿನಾಗಮಜ್ಞರಿಂ ಮಿಗಿಲಾವಂ ೦೭೧

ಏಗೆಯ್ವುದೆಂದು ನೆಗಟದೆ
ರಾಗಮನೊಡರಿಸುವ ಬುದ್ಧಿಯಿಲ್ಲದೆ ಪಾಪೋ
ದ್ಯೋಗಮನೆ ಬಿಸುಟು ಧರ್ಮೋ
ದ್ಯೋಗದೊಳಡರಿರ್ಪ ಜೈನರಣ್ಣ ವಿದಗ್ಧರ್ ೧೭೨

ಕಿಡುವೊಡಲಂ ಧನಮಂ ಬಿ
ಟ್ಟೊಡರಿಸಿ ಸದ್ಧರ್ಮಮಂ ಮಹಾ ದುಷ್ಕೃತಮಂ
ಕಿಡಿಸಿ ನಿರಂತರ ಸುಖಮಂ
ಪಡೆವೊಡೆ ಕೇಳ್ ಜೈನರಲ್ಲದಾರ್ವಸುಮತಿಯೊಳ್ ೧೭೩

ಯಾವ ಯಾವ ನೋವು ಬಂದರೂ ಯಾವ ಯಾವ ಪರೀಷಹ (ಸಂಕಟ)ಗಳು ಮೇಲ್ಬಾಯ್ದು ಬಂದರೂ ಆಯ್ಯೋ ಎನ್ನದೆ ಜಿನಪದಧ್ಯಾನದಲ್ಲಿಯೇ ಇರುವ ಜೈನರಿಗಿಂತ ಹೆಚ್ಚಿನವರು ಇದ್ದಾರೆಯೇ? ೧೭೦, ಕೆಡಕಾಯಿತೆಂದು ಭಯಪಡದೆ, ಕಾಂತಿಹೀನನಾಗದೆ ಸೋಲದೆ, ಹೆದರಿ ಎರಡನೆ ಚಿಂತೆ ಮಾಡದೆ ಮನಸ್ಸನ್ನು ಶುಭದಲ್ಲಿಯೇ ಸೇರಿಸಿರುವ ಜಿನಾಗಮಜ್ಞರಿಗಿಂತ ಹೆಚ್ಚಿನವನು ಯಾರು? ೧೭೧. ಏನು ಮಾಡುವುದೆಂದು ಉದಾಸೀನ ಮಾಡದೆ, ಆಸೆ ಮಾಡುವ ಮನಸ್ಸಿಲ್ಲದೆ, ಪಾಪದ ಕೆಲಸವನ್ನೇ ಬಿಟ್ಟು, ಧರ್ಮೋದ್ಯೋಗದಲ್ಲಿಯೇ ತೊಡಗಿರುವ ಜೈನರೇ ಪಂಡಿತರು. ೧೭೨. ನಶ್ವರವಾದ ಶರೀರವನ್ನೂ ಧನವನ್ನೂ ಬಿಟ್ಟು, ಸದ್ಧರ್ಮವನ್ನು(ಜೈನಧರ್ಮ)ಆಚರಿಸಿ ಮಹಾಪಾಪವನ್ನು ನಾಶಪಡಿಸಿ ನಿರಂತರ ಸುಖವನ್ನು ಪಡೆಯಬೇಕಾದರೆ ಈ ಭೂಮಿಯಲ್ಲಿ ಜೈನರಲ್ಲದೆ ಬೇರೆ ಯಾರಿಗೆ ಸಾಧ್ಯ? ೧೭೩, ದೇವಜನ್ಮವೂ ಮೋಕ್ಷವೂ ಲಭಿಸುವುದಾದರೆ ಧರ್ಮದಿಂದ

ಸುರಗತಿಯುಂ ನಿರ್ವೃತಿಯುಂ
ದೊರೆಕೊಳ್ವೊಡೆ ಧರ್ಮದಿಂದೆ ದೊರೆಕೊಳ್ಗೆಂದಾ
ದರದಿಂ ಧರ್ಮದೊಳೆಸಗುವ
ಪರಮಗುಣಂ ಜೈನರಲ್ಲಿ ನೆಲಸಿದುದಲ್ತೇ ೧೭೪

ಸಿರಿಯೊಂದೊದವಂ ಜವ್ವನ
ಭರಮುಂ ನಚ್ಚಿರ್ದು ಕೆಡುವರೀ ಕನ್ನೆಯವೋಲ್
ಸುರಗತಿಯುಂ ನಿರ್ವೃತಿಯುಂ
ಪರಮಾರ್ಥಂ ಪಡೆಯಲರ್ಪರೇ ಜಡಮತಿಗಳ್ ೧೭೫

ಗದ್ಯ॥ ಎಂದು ದೇವದುಂದುಭಿಗಳೆಸೆಯೆ ಜಯ ಜಯ ನಿನಾದದಿಂ ಪುಷ್ಪವೃಷ್ಟಿಯುಂ ಸುರಿದು ತಮ್ಮ ರೂಪಂ ತೋಱಿ ಜನವೆಲ್ಲಮಾಶ್ಚರ್ಯಂಬಡೆ ಕುಮಾರಿಗೆ ಪೊಡಮಟ್ಟುಪಸರ್ಗಮಂ ಪಿಂಗಿಸಿ ಪೋದರ್. ಇತ್ತಲ್ ಸಿಂಹರಥ ಮಹಾರಾಜನುಂ ಪುರಜನಂಗಳುಂ ಜಿನಭಕ್ತಿಯೊಳಾದ ಮಹಾಮಹಿಮೆಯುಂ ಕಂಡು ಅನಂತಮತಿ ಕುಮಾರಿಯುಂ ಪೂಜಿಸಿ ಪೊಡೆಮಟ್ಟು ಸಕಲರುಂ ಶ್ರಾವಕವ್ರತಮಂ ಕೈಕೊಂಡು ಸಮ್ಯಕ್ತ್ವ ಸಮನ್ವಿತರಾದರ್ ಅನಂತಮತಿಯುಂ ರಾಜಶ್ರೇಷ್ಠಿ ಯಪ್ಪ ಜಿನೇಂದ್ರದತ್ತನುಂ ಮನ್ನಣೆಯಿಂ ತನ್ನ ಮನೆಗೊಡಗೊಂಡು ಪೋಗಲೆಂದಿರ್ಪನ್ನೆಗಂ ೧೭೬

ಲಭಿಸಲಿ ಎಂದು ಆದರದಿಂದ ಧರ್ಮವನ್ನು ನಂಬಿ ಆಚರಿಸುವ ದೊಡ್ಡ ಗುಣವು ಜೈನರಲ್ಲಿ ನೆಲೆಯಾಗಿ ಇರುವುದಲ್ಲವೇ? ೧೭೪. ಐಶ್ವರ್ಯದ ಆಧಿಕ್ಯವನ್ನೂ ಯೌವನದ ರಭಸ ವನ್ನೂ ನಂಬಿಕೊಂಡು ಕೆಡುವವರು ಅನೇಕರು. ಅಜ್ಞಾನಿಗಳು ಈ ಕನ್ಯೆಯ ಹಾಗೆ ದೇವ ಜನ್ಮವನ್ನೂ ಮೋಕ್ಷವನ್ನೂ ಖಂಡಿತವಾಗಿ ಪಡೆಯಲು ಸಮರ್ಥರೇ? ೧೭೫. ಎಂದು ದೇವ ದುಂದುಭಿಗಳು ಮೊಳಗುತ್ತಿರಲು ಜಯಜಯ ಧ್ವನಿ ಮಾಡುತ್ತ ಪುಷ್ಪವೃಷ್ಟಿ ಯನ್ನು ಸುರಿದು ತಮ್ಮ ನಿಜರೂಪವನ್ನು ತೋರಿಸಿ ಜನರೆಲ್ಲ ಆಶ್ಚರ್ಯಪಡುತ್ತಿರಲು ಅನಂತಮತಿಗೆ ಅಡ್ಡಬಿದ್ದು ಅವಳಿಗಾದ ಹಿಂಸೆಯನ್ನು ಹೋಗಲಾಡಿಸಿ ಹೊರಟು ಹೋದರು. ಇತ್ತ ಸಿಂಹರಥಮಹಾರಾಜನೂ ಪುರಜನಗಳೂ ಜಿನಭಕ್ತಿಯಿಂದ ಆದ ಮಹಾಮಹಿಮೆಯನ್ನು ಕಂಡು ಅನಂತಮತೀಕುಮಾರಿಯನ್ನು ಪೂಜಿಸಿ ಅಡ್ಡಬಿದ್ದು ಎಲ್ಲರೂ ಜೈನರಾಗಿ ಗೃಹಸ್ಥವ್ರತವನ್ನು ಅಂಗೀಕರಿಸಿ ಸಮ್ಯಕ್ತ್ವವನ್ನು ಹೊಂದಿದರು. ಅನಂತಮತಿಯನ್ನು ರಾಜಶ್ರೇಷ್ಠಿಯಾದ ಜಿನೇಂದ್ರದತ್ತನು ಮನ್ನಣೆಯಿಂದ ತನ್ನ ಮನೆಗೆ ಕರೆದುಕೊಂಡು ಹೋಗಬೇಕೆಂದಿದ್ದನು ೧೭೬. ಆಗ ನಾನಾ ವಿಧವಾದ

ನಾನಾ ವಿಧದರ್ಚನೆಯಿಂ
ದಾ ನಾರಿಯು ಪಾದಪದ್ಮಮಂ ಪೂಜಿಸಿ ನೀ
ನಾನಂದಮೂರ್ತಿ ದಿವಿಜಾಂ
ಗನೆ ನೀಂ ಕೈಕೊಂಡು ರಕ್ಷಿಸೆಮ್ಮಂ ದಯೆಯಿಂ ೧೭೭

ಗದ್ಯ॥ ಎಂದರಸನುಂ ಸಕಲ ಪರಿಜನಂಬೆರಸು ಪೂಜಿಸಿ ಬಂಡಾರದ ಪೊನ್ನೆಲ್ಲಮಂ ಮುಂದೆ ರಾಸಿಮಾಡುವುದುಂ ಒಂದುಮಂ ಕೈಕೊಳಲೊಲ್ಲದೆ ಮನದೊಳೆ ನಕ್ಕು ಧರ್ಮದೊಳಂ ದೃಢರಪ್ಪು ದೆಂದರಮನೆಯುಂ ಪೊಱಮಟ್ಟು ಬರ್ಪಳಂ ಧರ್ಮವಾತ್ಸಲ್ಯದಿಂ ರಾಜಶ್ರೇಷ್ಠಿಯುಪ್ಪ ಜಿನೇಂದ್ರ ದತ್ತಂ ಮನ್ನಣೆಯಿಂ ತನ್ನ ಮನೆಗೊಡಗೊಂಡು ಪೋಗಿ ನೀನೆನಗೆ ತಾಯ ಸಮಾನಳಾಗಿ ಸುಖ ಮಿರ್ಪುದೆಂದು ಪ್ರಾರ್ಥಿಸುವುದುಂ ಅಂತೆಗೆಯ್ವೆನೆಂದು ಮನೆಯೊಳಗಿರದೆ ಸೆಟ್ಟಿಯ ದೇಹಾರಮಂ ಪೊರ್ದಿ ಕಮಲಶ್ರೀಗಂತಿಯರಂ ಸಾರ್ದು ೧೭೮

ಪರತತ್ವ ವಿಚಾರದಿನ
ಚ್ಚರಿಯಾಗೆ ಜಿನೇಂದ್ರ ಭಕ್ತಿಯಿಂ ಸಂದ ಮಹಾ
ಪುರುಷರ ಕಥೆಗಳ ಕೇಳ್ವಿಯಿ
ನರವಿಂದದಳಾಕ್ಷಿ ಪಲವುಮೊಳ್ನೋಂಪಿಗಳಂ ೧೭೯

ಪೂಜೆಗಳಿಂದ ಆ ನಾರಿಯ ಪಾದಪದ್ಮಗಳನ್ನು ಪೂಜಿಸಿ "ನೀನು ಆನಂದ ಸ್ವರೂಪಳು; ನೀನು ದೇವತಾಸ್ತ್ರೀ. ನೀನು ನಮ್ಮನ್ನು ಅನುಗ್ರಹದಿಂದ ಕಾಪಾಡು" ೧೭೭. ಎಂದು ಹೇಳಿ ಅರಸನೂ ಅವನ ಸಮಸ್ತ ಪರಿವಾರದವರೊಡನೆ ಪೂಜೆಮಾಡಿ ಭಂಡಾರದಲ್ಲಿನ ಹೊನ್ನೆಲ್ಲವನ್ನೂ ಅವಳೆದುರಿನಲ್ಲಿ ರಾಶಿ ಹಾಕಲು ಒಂದನ್ನೂ ಸ್ವೀಕರಿಸಲೊಲ್ಲದೆ ಮನ ಸ್ಸಿನಲ್ಲಿಯೇ ನಕ್ಕು ಧರ್ಮದಲ್ಲಿ ದೃಢರಾಗಿರೆಂದು ಹೇಳಿ ಅರಮನೆಯಿಂದ ಹೊರಟು ಬರುತ್ತಿದ್ದವಳನ್ನು ಧರ್ಮವಾತ್ಸಲ್ಯದಿಂದ ಮನ್ನಣೆ ಮಾಡಿ ತನ್ನ ಮನೆಗೆ ಕರೆದು ಕೊಂಡು ಹೋಗಿ "ನೀನು ನನಗೆ ತಾಯಿಯ ಸಮಾನಳಾಗಿ ಸುಖದಿಂದಿರು" ಎಂದು ಪ್ರಾರ್ಥಿಸಿಕೊಳ್ಳಲು 'ಹಾಗೆಯೇ ಆಗಲಿ' ಎಂದು ನುಡಿದು ಮನೆಯಲ್ಲಿ ನಿಲ್ಲದೆ ಸೆಟ್ಟಿಯ ದೇವಾಲಯವನ್ನು ಸೇರಿ ಕಮಲಶ್ರೀಗಂತಿಯವರನ್ನು ಸಮೀಪಿಸಿದಳು ೧೭೮. ಪರ ತತ್ವವಿಚಾರದಿಂದ ಆಶ್ಚರ್ಯಕರವಾಗಿ ಜಿನೇಂದ್ರಭಕ್ತಿಯಿಂದ ಪ್ರಸಿದ್ಧರಾದ ಮಹಾ ಪುರುಷರ ಕಥೆಗಳ ಕೇಳುವಿಕೆಯಿಂದ ಆ ಕಮಲದಳನೇತ್ರೆಯು ಹಲವು ಒಳ್ಳೆಯ ವ್ರತ ಗಳನ್ನು ೧೭೯. ಬೇಸರವಿಲ್ಲದೆ ಮನಸ್ಸಿನಲ್ಲಿ ಚಿಂತಿಸಿಕೊಂಡು ಬೇರೆ ಯಾವುದನ್ನೂ

ಅಲಸದೆ ಮನದೊಳ್ ಚಿಂತಿಸಿ
ಪಲುಂಬಿ ಪಂಬಲಿಸದಿಸಿಸನಪ್ಪೊಡವೊಂದು
ಮ್ಮುಳಿಸದೆ ಭೋಗಂಗಳ ಪಂ
ಬಲನೊಲ್ಲದೆ ಜನರನೆಯ್ದೆ ಪಂಬಲಿಸುತ್ತುಂ ೧೪೦

ಗದ್ಯ॥ ಇರೆ ಜಿನೇಂದ್ರದತ್ತನು ಮಾತನ ವಲ್ಲಭೆ ವಸುದೇವಿಯುಮರಸನುಮರಸಿಯರುಮೆಮ್ಮ ಗುರುವೆಂದು ಕೊಂಡಾಡುತ್ತಿರೆ ಕಾಲಮಂ ಕಳೆಯುತ್ತುಮಿರ್ಪುದುಮತ್ತಂ ಚಂಪಾಪುರದೊಳ್ ಪ್ರಿಯದತ್ತಸೆಟ್ಟಿಯುಮಂಗಮತಿಯುಂ ಬಂಧುವರ್ಗಮುಮನಂತಮತಿಯ ಪೋಗಿಂಗೆ ವಿಸ್ಮಯಂ ಬಟ್ಟು ೧೪೧

ತರುಣಿಯ ರೂಪಿಂಗಾರುಂ
ಸರಿದೊರೆಯೆನಿಪನ್ನರಿಲ್ಲ ಧಾರಿಣಿಯೊಳ್ಪಂ
ಕರುಹಾನನೆಯಂ ವಿದ್ಯಾ
ಧರನೊರ್ವಂ ಬೇಗಮುಯ್ದನಾಗಲೆವೇಟ್ಕುಂ ೧೪೨

ಗದ್ಯ॥ ಅಲ್ಲದಂದಿಂತು ನೋಡೆನೋಡೆ ಅದೃಶ್ಯಮೆಂತಾದಳೆಂದು ಪ್ರಿಯದತ್ತಸೆಟ್ಟಿ ಸೈರಿಸಲಾಱದೆ ೧೪೩

ನಿನ್ನ ರೂಪನೆ ನೋಡಿ ಬಾಳುವೆನಾಗಳುಂ ಮನದರ್ತಿಯಿಂ
ನಿನ್ನ ಮುದ್ದನೆ ನಚ್ಚಿ ಮೆಚ್ಚುವೆನಾಗಳುಂ ಪ್ರಿಯಚಿತ್ತದಿಂ
ನಿನ್ನಮೆಲ್ಪಚನಂಗಳಂ ನೆಱೆ ಕೇಳ್ದು ಮುಯ್ಯನೆ ಮಾಡುವೆಂ
ನಿನ್ನಗಲ್ಕೆಯೊಳೆಂತು ಸೈರಿಸುವೆಂ ಸರೋಜದಳಾನನೇ ೧೪೪

ಹಂಬಲಿಸದೆ ಸ್ವಲ್ಪವಾದರೂ ಧಾವಂತವಿಲ್ಲದೆ ಭೋಗೋಪಭೋಗಗಳ ಆಸೆಯನ್ನೇ ಇಟ್ಟುಕೊಳ್ಳದೆ ಜಿನೇಶ್ವರನನ್ನೇ ವಿಶೇಷವಾಗಿ ಧ್ಯಾನಿಸಿದಳು ೧೪೦. ಹಾಗೆ ಧ್ಯಾನಿಸುತ್ತ ಇರುವಾಗ ಜಿನೇಂದ್ರದತ್ತನೂ ಅವನ ಹೆಂಡತಿ ವಸುದೇವಿಯೂ ಅರಸನೂ ಅರಸಿಯರೂ ನಮ್ಮ ಗುರುವೆಂದು ಹೊಗಳುತ್ತಿದ್ದರು. ಹೀಗೆ ಕಾಲ ಕಳೆಯುತ್ತಿರಲು ಅತ್ತ ಕಡೆ ಚಂಪಾಪುರದಲ್ಲಿ ಪ್ರಿಯದತ್ತಸೆಟ್ಟಿಯೂ ಆತನ ಹೆಂಡತಿ ಅಂಗಮತಿಯೂ ಬಂಧುವರ್ಗದವರೂ ಅನಂತಮತಿ ಕಳೆದುಹೋದುದಕ್ಕೆ ಆಶ್ಚರ್ಯಪಟ್ಟು ೧೪೧. "ತರುಣಿಯ ರೂಪಕ್ಕೆ ಲೋಕದಲ್ಲಿ ಇನ್ನು ಯಾರೂ ಸರಿ ಬರುತ್ತಿರಲಿಲ್ಲ. ಆ ಕಮಲಮುಖಿಯನ್ನು ಯಾವನೋ ಒಬ್ಬ ವಿದ್ಯಾಧರನು ಹೊತ್ತುಕೊಂಡು ಹೋಗಿರಬೇಕು. ೧೪೨. ಹಾಗಲ್ಲದಿದ್ದರೆ ಇದ್ದಕ್ಕಿದ್ದಂತೆ ಮಾಯವಾದದ್ದು ಹೇಗೆಂದು ಯೋಚಿಸಿ ಪ್ರಿಯದತ್ತಸೆಟ್ಟಿ ದುಃಖವನ್ನು ತಾಳಿಕೊಳ್ಳಲಾರದೆ ಹೀಗೆ ಹಲುಬಿ ಗೋಳಾಡಿದನು; "ಓ ಕಮಲಲೋಚನೆ ! ನಿನ್ನ ರೂಪವನ್ನೇ ನೋಡಿ ಜೀವಿಸುತ್ತೇನೆ. ಮನಃಪ್ರೀತಿಯಿಂದ ನಿನ್ನ ಮುದ್ದನ್ನೇ ಮೆಚ್ಚುವೆನು. ಯಾವಾಗಲೂ ನಿನ್ನ ಪ್ರಿಯಚಿತ್ತದ ಮೃದುವಚನಗಳನ್ನು ಹೆಚ್ಚಾಗಿ ಕೇಳಿ ಸಂಭ್ರಮ ಪಡುತ್ತೇನೆ. ನಿನ್ನ ಅಗಲಿಕೆಯನ್ನು ಹೇಗೆ ಸೈರಿಸಲಿ ? ೧೪೪.

ನಿನ್ನುಡುವ ವಸ್ತ್ರಚಯಮುಂ
ನಿನ್ನುನ್ನತಿವೆತ್ತ ಪಲವು ರನ್ನದ ತೊಡವಂ
ನಿನ್ನಾಡುವೆಡೆಗಳಂ ಮಾ
ನೋನ್ನತೆ ನೆನೆನೆನೆದು ದೇಹಮುರಿದಪ್ಪುದಿನ್ನುಂ ೧೮೫

ಒಡನುಣಲಾರಂ ಕರೆವೆಂ
ತೊಡೆಗಳನನುನಯದಿನಾರನೇಱಿಸಿಕೊಳ್ವೆಂ
ಕಡುಗೂರ್ಮೆಯಿನಾರಂ ಮೆ
ಲ್ನುಡಿಯಿಂ ಮುದ್ದಾಡಿಪೆಂ ಸರೋರುಹವದನೇ ೧೮೬

ಜಿನಪೂಜೆಗಳಂ ಮಾಡದೆ
ಮುನಿಗಳ್ಗಾಹಾರದಾನಮಂ ಮಾಡದೆ ಭೋಂ
ಕನೆ ಪೋಗಲಾಗ ಮಗಳೇ
ಮನಕತಮಂ ಮಾಡಿ ಪೆತ್ತವರ್ಮಱುಗುವಿನಂ ೧೮೭

ಸಿರಿಗೆನ್ನೊಡನಾರ್ದೊರೆ ಸರಿ
ಕರಮಿಂತಪ್ಪೆನಗೆ ಪುಟ್ಟಿಯುಂ ಮಗಳೆ ವಸುಂ
ಧರೆ ಪೊಗೞೆ ದಾನಮಂ ನೀಂ
ಜಿನಪೂಜೆಯನೊಲ್ದು ಮಾಡದುಸಿರದೆ ಪೋಪಾ ೧೮೮

ಗದ್ಯ॥ ಎಂದು ಪೊಳ್ಮರನಂ ಕಿಚ್ಚಳುರ್ವಂತೆ ದುಃಖಾಗ್ನಿ ತನ್ನಂ ಸುಡೆ ಪ್ರಿಯದತ್ತಸೆಟ್ಟಿ ಪಲಯಿಸಿ ಮಾಣ್ಬುದುಮಂಗಮತಿ ೧೮೯

ನೀನು ಉಡುತ್ತಿದ್ದ ಸೀರೆಗಳನ್ನೂ ನಿನ್ನ ಶ್ರೇಷ್ಠವಾದ ಹಲವು ರತ್ನದ ಆಭರಣಗಳನ್ನೂ ನೀನಾಡುತ್ತಿದ್ದ ಸ್ಥಳಗಳನ್ನೂ ನೆನೆಸಿಕೊಂಡು ಈಗಲೂ ನನ್ನ ದೇಹ ಉರಿಯುತ್ತಿದೆ ೧೮೫. ಜತೆಯಲ್ಲಿ ಊಟ ಮಾಡಲು ಯಾರನ್ನು ಕರೆಯಲಿ ? ಎತ್ತಿ ತೊಡೆಗಳ ಮೇಲೆ ಯಾರನ್ನು ಕೂಡಿಸಿಕೊಳ್ಳಲಿ ? ಪ್ರೇಮಾತಿಶಯದಿಂದ ಯಾರನ್ನು ಮೆಲ್ನುಡಿಗಳಿಂದ ಮುದ್ದಾಡಿಸಲಿ ? ೧೮೬. ಜಿನಪೂಜೆಗಳನ್ನು ಮಾಡದೆ, ಮುನಿಗಳಿಗೆ ಆಹಾರದಾನವನ್ನು ಮಾಡದೆ, ಹೀಗೆ ತಟ್ಟನೆ ಹೋಗಬೇಡ, ಮಗಳೇ, ಮನಸ್ಸಿನಲ್ಲಿ ಸಿಟ್ಟು ಮಾಡಿಕೊಳ್ಳಬೇಡ. ಹೀಗೆ ಮಾಡಿದರೆ ಹೆತ್ತ ತಾಯಿತಂದೆಗಳು ಸಂಕಟಪಡುತ್ತಾರೆ. ೧೮೭. ಐಶ್ವರ್ಯದಲ್ಲಿ ನನಗೆ ಸರಿ ಯಾರು ? ಇಂಥ ನನಗೆ ಮಗಳಾಗಿ ಹುಟ್ಟಿಯೂ ಲೋಕ ಹೊಗಳುವಂತೆ ದಾನವನ್ನೂ ಜಿನಪೂಜೆಯನ್ನೂ ಸಂತೋಷದಿಂದ ಮಾಡದೆ ಹೇಳದೆ ಹೋಗುವೆಯಾ ?" ೧೮೮. ಎಂದು ಪೊಳ್ಳುಮರವನ್ನು ಬೆಂಕಿ ವ್ಯಾಪಿಸುವ ಹಾಗೆ ದುಃಖಾಗ್ನಿಯು ತನ್ನನ್ನು ಸುಡುತ್ತಿರಲು ಪ್ರಿಯದತ್ತಸೆಟ್ಟಿಯು ಹಳವಿಸಿ ಸುಮ್ಮನಾದನು. ಆಗ ಅಂಗಮತಿಯು ೧೮೯. "ಪರಮಜಿನಸ್ವಾಮಿಗಳವರ ಪೂಜೆಯನ್ನು

ಪರಮಜಿನೇಂದ್ರಪೂಜೆಗಳನಚ್ಚರಿಯಾಗಿರೆ ಮಾಡಿ ಬಂಧುಗ
ಳ್ನೆರೆದೊಡಗೂಡಿ ನೋಡೆ ಪಱಿ ಭೋರೆನೆ ಬಾರಿಸೆ ಪೊನ್ನತೋರಣಂ
ಕರಮುಮದೊರ್ಪ್ಪುಕಟ್ಟೆ ಗುಡಿಗಟ್ಟಿ ವಿವಾಹಮನರ್ತಿವೆಟ್ಟು ಪಂ
ಕರುಹದಳಾಕ್ಷಿಗಾಗಿಸುತೆ ನೋಟ್ಪನಿತಂ ನೆಱಿನೋಂತೆನಿಲ್ಲೆ ನಾಂ ೧೯೦

ಬಸದಿಗೆ ಪೋಗಿ ದಿವ್ಯಮುನಿಪುಂಗವರಂ ಮನದರ್ತಿಯಿಂದೆ ಬಂ
ದಿಸಿ ಜಿನನಾಥನಂ ಸ್ತುತಿಶತಂಗಳಿನಾದರದಿಂದೆ ಕೊರ್ತು ಬ
ಣ್ಣಿಸಿ ಮನೆಗಾಗಳಂತೆ ಪರಿತಂದವರೆಂದುದನರ್ತಿವೆಟ್ಟು ರಾ
ಗಿಸಿ ಕೊರಲಪ್ಪಿ ಪೇಟ್ವ ವಿಮಳಾಂಗಿಯನಾನಿರದೆಲ್ಲಿ ಕಾಣ್ಬೆನೋ ೧೯೧

ಗದ್ಯ॥ ಎಂದು ಪಲಯಿಸಿ

ಲತೆಯಂ ತತ್ತರಳಾಕ್ಷಿಯಂಗಮೆನುತುಂ ನೀರೇಜಪತ್ರಂಗಳಂ
ಸತತಂ ಕನ್ನೆಯ ನೇತ್ರಯುಗ್ಮಮೆನುತಂ ಮತ್ತಾಳಿಸಂದೋಹಮಂ
ಮತಿಗೆಟ್ಟಾಕೆಯ ಕುಂತಳಂಗಳೆನುತುಂ ನಾನಾ ಪ್ರಕಾರಂಗಳಿಂ
ಸುತೆಯಿಂದಾ ವನಮೆಲ್ಲಮಂ ಮನದ ನೋವಿಂ ನಾಡೆಯುಂ ನೋಡಿದಳ್ ೧೯೨

ಗದ್ಯ॥ ಅಂತು ದುಃಖಾಗ್ನಿಯಿಂ ಬೆಂದುಪೋಗಿ ಪಲಯಿಸುವಂಗಮತಿಯುಮಂ ಪ್ರಿಯದತ್ತ ಸೆಟ್ಟಿಯುಮಂ ವರದತ್ತಭಟ್ಟಾರಕರ್ ಬಂದು ಸಂತೈಸಿ ಧರ್ಮಮನಿಂತೆಂದು ಪೇಟ್ದರ್ ೧೯೩

ವೈಭವದಿಂದ ಮಾಡಿ ಬಂಧುಗಳು ಸೇರಿ ಒಟ್ಟುಗೂಡಿ ನೋಡುತ್ತಿರುವಾಗ ತಂಬಟೆಗಳು ಭೋರೆನ್ನುತ್ತಿರಲು, ಹೊನ್ನಿನ ತೋರಣವು ಬಹಳವಾಗಿ ಹೊಳೆಯುತ್ತಿರಲು ಧ್ವಜಗಳನ್ನು ಏರಿಸಿ ವಿವಾಹವನ್ನು ಸಂಭ್ರಮದಿಂದ ಮಗಳಿಗೆ ಮಾಡುವಷ್ಟನ್ನು ನಾನು ಪಡೆದುಕೊಂಡು ಬರಲಿಲ್ಲ ೧೯೦. ಬಸದಿಗೆ ಹೋಗಿ ಮುನಿಶ್ರೇಷ್ಠರಿಗೆ ಮನಃಪೂರ್ವಕವಾಗಿ ಪ್ರೀತಿಯಿಂದ ವಂದಿಸಿ ಜಿನೇಶ್ವರನನ್ನು ಸ್ತೋತ್ರಮಾಡಿ ಪ್ರೀತಿಯಿಂದ ವರ್ಣಿಸಿ ಮನೆಗೆ ಬಂದು ಅವರು ಹೇಳಿದುದನ್ನು ಸಂಭ್ರಮಪಟ್ಟು ಪ್ರೀತಿಯಿಂದ ಕೊರಳನ್ನು ಕಟ್ಟಿಕೊಂಡು ಹೇಳುವ ಆ ವಿಮಳಾಂಗಿಯನ್ನು ನಾನಿನ್ನೆಲ್ಲಿ ಕಾಣುವೆನು?" ೧೯೧. ಎಂದು ಗೋಳಾಡಿ ಬಳ್ಳಿಯನ್ನು ಆ ಚಂಚಲಾಕ್ಷಿಯ ಶರೀರವೆನ್ನುತ್ತ ಕಮಲಪತ್ರಗಳನ್ನು ಆ ಕನ್ಯೆಯ ಕಣ್ಣುಗಳೆಂದೂ, ಮದಹತ್ತಿದ ದುಂಬಿಗಳ ಸಮೂಹವನ್ನು ಆಕೆಯ ಮುಂಗುರುಳುಗಳೆಂದೂ ಭ್ರಮಿಸುತ್ತ ಆಕೆ ಆ ವನವನ್ನೆಲ್ಲ ತನ್ನ ಮಗಳನ್ನು ಕಾಣುವ ತವಕದಿಂದ ಹುಡುಕಿದಳು ೧೯೨. ಹಾಗೆ ದುಃಖದಿಂದ ಬೆಂದು ಹೋಗಿ ಪಲುಬುತ್ತಲಿದ್ದ ಅಂಗಮತಿಯನ್ನೂ ಪ್ರಿಯದತ್ತಸೆಟ್ಟಿಯನ್ನೂ ವರದತ್ತ ಭಟ್ಟಾರಕರು ಬಂದು ಸಮಾಧಾನಪಡಿಸಿ ಹೀಗೆಂದು ಧರ್ಮವನ್ನು ಹೇಳಿದರು ೧೯೩. "ಐರಾವತವೇ ಅವನ ಏರುವ ಆನೆ, ವಜ್ರಾ

ಸುರಗಜೇಂದ್ರಮೆ ವಾರಣಂ ಪಿಡಿವಾಯುಧಂ ವರವಜ್ರಮ
ಚ್ಚರಿ ಸುರಾಳಿಯೆ ಸಂದ ಜೀವಿತದಾಳ್ಗಳಿರ್ಕೆಯ ಕೋಟೆಯೊ
ಪ್ಪಿರೆ ನೆಗಟ್ತಿಯ ಸ್ವರ್ಗಮೀದೊರೆಯೂರ್ಧ್ವಲೋಕದ ಚಕ್ರಿಗಂ
ಮರಣಮಾಗದೆ ಮಾಣದೆಂದೊಡೆ ಗೆಲ್ವನಾವನೊ ಮೃತ್ಯುವಂ ೧೯೪

ನರರುಂ ಖೇಚರರುಂ ಸುರಪ್ರತತಿಯುಂ ಪೂಣ್ದಾಳ್ವಿಸಂ ಗೆಯ್ವರು
ರ್ವರೆ ಷಟ್ಖಂಡಮಿಭಾಳಿಗಂ ಕುದುರೆಗಂ ಸ್ತ್ರೀಸಂಕುಳಕ್ಕಂ ನಿಜಾ
ದರದಿಂ ಮೇರೆಗಳಿಲ್ಲ ನಿಪ್ಪಧಿಕಲಕ್ಷ್ಮೀವಲ್ಲಭಂ ಚಕ್ರಿಗಂ
ಮರಣಂ ಬಾರದೆ ಮಾಣದೆಂದೊಡುೞಿದರ್ಗೆಲ್ವನ್ನರಾರ್ ಮೃತ್ಯುವಂ ೧೯೫

ಗದ್ಯ॥ ಎಂಬುದುಮವರ ವಚನಮೆಂಬಮೃತದಿಂ ತಮ್ಮ ದುಃಖಾಗ್ನಿ ನಂದೆ ಕೆಲವಾನುಂ ದಿವಸಂ ಪೋಗೆ ಪ್ರಿಯದತ್ತಸೆಟ್ಟಿ ಮಗಳಾಡುವೆಡೆಗಳಂ ನೋಡಿ ಕಡುನೋವಿಂ ಸೈರಿಸದುಮ್ಮಳಿಸಿ ನಂಟರ್ಗಱಿಪಲೊಲ್ಲದಾ ಪುರದಿಂ ಪೊಱಮಟ್ಟು ಕತಿಪಯದಿನಂಗಳಿಂದಯೋಧ್ಯೆಗೆ ಬಂದು ಜಿನೇಂದ್ರದತ್ತಸೆಟ್ಟಿಯ ಮನೆಯಂ ಪೊಕ್ಕು ತನ್ನ ತಂಗೆಯಪ್ಪ ವಸುದೇವಿಗನಂತಮತಿಯ ಪ್ರಪಂಚಮಂ ಪೇಳ್ವುದುಂ ೧೯೬

ಯುಧವೇ ಅವನ ಶಸ್ತ್ರ. ಅಪ್ಸರೆ ಮತ್ತು ದೇವತೆಗಳೇ ಅವನ ಜೀತದ ಆಳುಗಳು. ವಾಸದ ದುರ್ಗ, ಸ್ವರ್ಗ. ಇಂಥ ಊರ್ಧ್ವಲೋಕದ ಚಕ್ರವರ್ತಿಗೂ ಸಾವು ತಪ್ಪದೆಂದ ಮೇಲೆ ಮೃತ್ಯುವನ್ನು ಗೆಲ್ಲಬಲ್ಲವನು ಯಾವನು ? ೧೯೪. ಮಾನವರೂ ಖೇಚರರೂ ದೇವಸಮೂಹವೂ ಸೇವೆ ಮಾಡುವವರು, ಷಟ್ಖಂಡ ಭೂಭಾಗವೇ ರಾಜ್ಯ, ಗಜಸೇನೆ ಅಶ್ವಸೇನೆಗಳಿಗೂ, ಅವನ ಸ್ತ್ರೀ ಸಮೂಹಕ್ಕೂ ಮೇರೆಗಳಿಲ್ಲವೆನಿಸುವಂಥ ಶ್ರೇಷ್ಠನಾದ ಲಕ್ಷ್ಮೀವಲ್ಲಭಚಕ್ರವರ್ತಿಗೂ ಮರಣ ಬಾರದೆ ತಪ್ಪುವುದಿಲ್ಲವೆಂದ ಮೇಲೆ ಮೃತ್ಯುವನ್ನು ಗೆಲ್ಲಬಲ್ಲ ಬೇರೆಯವರು ಯಾರಿದ್ದಾರೆ ?" ೧೯೫. ಎಂದು ಹೇಳಲು ಅವರ ವಚನಾಮೃತದಿಂದ ತಮ್ಮ ದುಃಖಾಗ್ನಿಯು ನಂದಲು ಕೆಲವು ದಿನ ಹೋದ ಮೇಲೆ ಪ್ರಿಯದತ್ತ ಸೆಟ್ಟಿ ಮಗಳು ಆಡುವ ಸ್ಥಳಗಳನ್ನು ನೋಡಿ ಹೆಚ್ಚಾದ ದುಃಖವನ್ನು ಸೈರಿಸಲಾರದೆ ಸಂಕಟಪಟ್ಟು ತಮ್ಮ ನೆಂಟರಿಗೂ ತಿಳಿಸದೆ ಅಲ್ಲಿಂದ ಹೊರಟು ಕೆಲವು ದಿನ ಪ್ರಯಾಣ ಮಾಡಿ ಅಯೋಧ್ಯೆಯನ್ನು ಸೇರಿ ಜಿನೇಂದ್ರದತ್ತಸೆಟ್ಟಿಯ ಮನೆಯನ್ನು ಹೊಕ್ಕು ತನ್ನ ತಂಗಿಯಾದ ವಸುದೇವಿಗೆ ಅನಂತಮತಿಯ ಕಥೆಯನ್ನು ವಿಸ್ತಾರವಾಗಿ ಹೇಳುತ್ತಲೇ ೧೯೬. ಅವರು ಹಠಾತ್ತಾಗಿ ಕೇಳಿದ ಈ ಸುದ್ದಿಯಿಂದ ಮನಸ್ಸು ಕೆಟ್ಟು ಮಹಾ

ತೊಟ್ಟನೆ ಕೊಳೆ ಕೇಳ್ದುಮನಂ
ಗೆಟ್ಟುಮಹಾದುಃಖದಿಂದಮಿರಲಾಱದೆ ಬಾ
ಯ್ವಿಟ್ಟೊಳಱಿ ನೊಂದು ಸೈರಣೆ
ಗೆಟ್ಟಟ್ಟಳ್ಳಿನೆದು ನೆನೆದು ಕನ್ನೆಯಗುಣಮಂ ೧೯೭

ಗದ್ಯ॥ ಅಂತು ದುಃಖಾನಳಂ ಸುಡೆ ಕಡುನೋವಿಂವಱುತ್ತುಮಿರ್ಪ ತಂಗೆಯುಂ ಧರ್ಮಶ್ರವಣ ದಿಂದೆಂತಾನುಂ ಮಾಣಿಸಿ ಮಱುದಿವಸಂ ದೇಹಾರಕ್ಕೆ ದೇವರಂ ಕಾಣಲೆಂದು ಬಂದು ದೇಹಾರದ ಮುಂದಣಾ ೧೯೮

ಸುರಮಹೀರುಹದೋಳಿಯಿಂ ಸಹಕಾರಭೂಜನಿಕಾಯದಿಂ
ಸಂಸಿಜಾಕರದಿಂ ಲತಾಭವನಂಗಳಿಂ ಧ್ವಜದಿಂ ಫಲೋ
ತ್ಕರದಿನಿಂದ್ರವಿಮಾನದಿಂ ಹರಿಚಂದನಂಗಳ ಜೊಂಪದಿಂ
ಸುರನಗಂಗಳ ಪಂಕ್ತಿಯಿಂದೆಸೆದಿರ್ದ ಪೂವಿನಮಾಳೆಯಿಂ ೧೯೯

ಗದ್ಯ॥ ರಮಣೀಯಮಪ್ಪ ರಂಗವಲಿಯಂ ಕಂಡೀ ಹಸ್ತಕೌಶಲಮನಂತಮತಿಗಕ್ಕುಮುಱಿ ದರ್ಗಾಗದಕಾರಣಮಿಲ್ಲಿರ್ಪಾಕೆಯೆ ನಿಕ್ಕುವಮನಂತಮತಿಯಕ್ಕುಮೆಂದು ನೋಡಲ್ಕೆ ೨೦೦

ಘೋರೆಂದು ಸುಯ್ದು ಮನದೊಳ್
ದೂರಿಸಿ ಹಂಬಲಿಸಿ ಮಱುಗಿ ಚಿಂತಿಸಿ ನೆನೆದಂ
ಘೋರುಹಮುಖಿಯಂ ಮನ್ಮಥ
ವಾರಣಗಮನೆಯನನಂತಮತಿಯಂ ಸುತೆಯಂ ೨೦೧

ದುಃಖದಿಂದ ಇರಲಾರದೆ ಬಾಯಿಬಿಟ್ಟು ಗಟ್ಟಿಯಾಗಿ ಅತ್ತು, ನೊಂದು ಕನ್ಯೆಯ ಗುಣ ವನ್ನು ಪುನಃ ಪುನಃ ಸ್ಮರಿಸಿಕೊಂಡು ಸೈರಣೆ ಕಳೆದು ಅತ್ತಳು ೧೯೭. ಹಾಗೆ ದುಃಖಾಗ್ನಿಯು ಸುಡುತ್ತಿರಲು ಬಹಳ ವ್ಯಥೆಯಿಂದ ಅಳುತ್ತಿದ್ದ ತಂಗಿಯನ್ನು ಧರ್ಮಶ್ರವಣದಿಂದ ಸಂತೈಸಿ ಮರುದಿನ ದೇವರ ದರ್ಶನಕ್ಕೆಂದು ದೇವಾಲಯಕ್ಕೆ ಬಂದು ಅದರ ಮುಂದುಗಡೆ ಇಟ್ಟಿದ್ದ ರಂಗೋಲಿಯನ್ನು ಕಂಡನು ೧೯೮. ಕಲ್ಪವೃಕ್ಷಗಳ ಸಾಲಿನಿಂದ, ಮಾವಿನ ಮರಗಳ ಸಮೂಹದಿಂದ, ಸರೋವರದಿಂದ, ಬಳ್ಳಿಮನೆಗಳಿಂದ, ಬಾವುಟಗಳಿಂದ ಹಣ್ಣು ಗಳ ಹೆಚ್ಚಳದಿಂದ, ಇಂದ್ರವಿಮಾನ, ಹರಿಚಂದನಗಳ ಗೊಂಚಲು, ದೇವಪರ್ವತಗಳ ಸಾಲು ಇವುಗಳಿಂದ ಶೋಭಿಸುತ್ತಿದ್ದ ಹೂವಿನಮಾಲೆಯಿಂದ ೧೯೯. ಸುಂದರವಾದ ರಂಗ ವಲ್ಲಿಯನ್ನು ಗಮನಿಸಿ ಈ ಕರಕುಶಲತೆ ಅನಂತಮತಿಗೆ ಸಾಧ್ಯ, ಉಳಿದವರಿಗೆ ಆಗದು,) ಆ ಕಾರಣದಿಂದ ಇಲ್ಲಿ ಇರುವಾಕೆಯೇ ಅನಂತಮತಿಯಿರಬಹುದೆಂದು ಭಾವಿಸಿದನು ೨೦೦. ಗಭಸದಿಂದ ನಿಟ್ಟುಸಿರು ಬಿಡುತ್ತ ಮನಸ್ಸಿನಲ್ಲಿಯೇ ಬಹಳವಾಗಿ ದುಃಖಿಸಿ ಹಂಬಲಿಸಿ ಕದಿದು ಕಳವಳಪಟ್ಟು ಮಗಳನ್ನು ಸ್ಮರಿಸಿಕೊಂಡು ಅತ್ತನು ೨೦೧. ಅಳುತ್ತಿದ್ದ

ಗದ್ಯ॥ ಅಱುತಿರ್ಪಣ್ಣನಂ ವಸುದೇವಿ ಕಂಡು ನೀವಿದೇಕೞ್ತಪಿರೆಂದು ಬೆಸಗೊಳ್ವುದುಂ ಪ್ರಿಯದತ್ತಸೆಟ್ಟಿಯೆಂದನಿಂದಾನುಂಡೂಟಮುಂ ನಿಮ್ಮ ದೇಹಾರದ ಮುಂದಣ ರಂಗವಲಿಯು ಮನಂತಮತಿಯ ಹಸ್ತಕುಶಲತೆಯುಂ ಪೋಲ್ತುವಪ್ಪುದಱಿಂ ಮಗಳಂ ನೆನೆದೞಲಾಯ್ತೆಂಬುದುಂ ದೇಹಾರದೊಳಿರ್ದ ಕುಮಾರಿಯುನೊಡಗೊಂಡು ಬಂದು ತೋರ್ಪುದುಂ ೨೦೨

ಸುತೆಯುಪ್ಪುದನಱಿದು ಮಹೋ
ನ್ನತಿಯಿಂ ದುಃಖಾಗ್ನಿಪೋಗೆ ಮನದೊಳ್ ಲೋಕ
ತ್ರಿತಯಮನಾಳ್ದಂತೆ ವಣಿ
ಕ್ಪತಿ ಬರತೆಗೆದಪ್ಪಿಕೊಂಡು ಮೋಹೋದಯದಿಂ ೨೦೩

ಗದ್ಯ॥ ತೊಡೆಯುನೇಱಿಸಿಕೊಂಡು ಕದಪಂ ಕರ್ಚಿಬಡವಂಗೆ ಕಡಾರಂ ಕೈಸಾರ್ದಂತಾನುಂ ತಿಱಿದುಂಬವಂಗೆ ರಾಜ್ಯಂ ದೊರೆಕೊಂಡಂತಾನುಂ ಮಗಳಂ ನೋಡಿ ಪಿರಿದಪ್ಪ ಸಂತೋಷದಿಂ ೨೦೪

ವನಜಾನನೆ ನಿನ್ನಂ ಕಂ
ಡೆನಗೀಗಳ್ಮನದ ನೋವು ಪೋದುದು ಮುನ್ನಂ
ಮನಕತದಿಂ ಕಣ್ಗೆಟ್ಟಪೊ
ಲನವರತಂ ಬೆಂದುನೊಂದು ಮಱುಗುತ್ತಿರ್ದೆಂ ೨೦೫

ಅಣ್ಣನನ್ನು ಕಂಡು ವಸುದೇವಿ ನೀವಿದೇಕೆ ಅಳುವಿರೆಂದು ಕೇಳಿದಳು, ಆಗ ಪ್ರಿಯದತ್ತ ಸೆಟ್ಟಿ ಅಂದು ತಾನು ಉಂಡ ಊಟವೂ ದೇವಾಲಯದ ಮುಂದಿನ ರಂಗೋಲಿಯೂ ಅನಂತಮತಿಯ ಹಸ್ತಕೌಶಲವನ್ನು ಹೋಲುತ್ತಿದ್ದುದರಿಂದ ಮಗಳನ್ನು ನೆನೆದು ಅಳು ಬಂತೆಂದು ಹೇಳಲು ದೇವಾಲಯದಲ್ಲಿದ್ದ ಕುಮಾರಿಯನ್ನು ಕರೆತಂದಳು ೨೦೨. ಅವಳು ತನ್ನ ಮಗಳೇ ಎಂಬುದನ್ನು ತಿಳಿದು ತನ್ನ ದುಃಖ ನಿವೃತ್ತಿಯಾಗಲು ಮನಸ್ಸಿನಲ್ಲಿ ಮೂರು ಲೋಕಗಳನ್ನೂ ಆಳಿದ ಹಾಗೆ ಹರ್ಷಪಟ್ಟು ಆ ವೈಶ್ಯಶ್ರೇಷ್ಠನು ಪರಮಾನಂದದಿಂದ ಅವಳನ್ನು ಅಪ್ಪಿಕೊಂಡನು ೨೦೩. ಅನಂತಮತಿಯನ್ನು ಅಕ್ಕರೆಯಿಂದ ತನ್ನ ತೊಡೆಯಮೇಲೆ ಕೂಡಿಸಿಕೊಂಡು ಕೆನ್ನೆಯನ್ನು ಕಚ್ಚಿ ಬಡವನಿಗೆ ಕೊಪ್ಪರಿಗೆ (ನಿಧಿ) ಕೈಸೇರಿದ ಹಾಗೆಯೂ ತಿರಿದು ಉಣ್ಣುವವನಿಗೆ ರಾಜ್ಯ ಸಿಕ್ಕಿದ ಹಾಗೆಯೂ ಆಗಿ ಮಗಳನ್ನು ನೋಡಿ ಮಹಾ ಸಂಭ್ರಮಪಟ್ಟನು ೨೦೪. "ಕಮಲಮುಖಿ! ನಿನ್ನನ್ನು ಕಂಡದ್ದರಿಂದ ನನಗೆ ಈಗ ಮನಸ್ಸಿನ ನೋವು ಹೋಯಿತು. ಈ ಮುಂಚೆ ಮನಸ್ಸಿನ ದುಃಖದಿಂದ ಕಂಗೆಟ್ಟು ಅನವರತವೂ ಬೆಂದು ಕುದಿಯುತ್ತಿದ್ದೆ ೨೦೫;

ಮಗಳೇ ನೀನಿಲ್ಲದೆ ಮನೆ
ಒಗೆವಂದೆನಗಟ್ಟಿತಿಂಬ ಪಟುವಾದುದು ನೋ
ವಗಣಿತಮಪ್ಪುದಱಿಂದ
ಲ್ಲಿಗೆ ದುಃಖಕ್ಕಂಜಿ ಪಳ್ಳಿಬಂದಾನಿರ್ದೆಂ ೨೦೬

ಗದ್ಯ॥ ತನ್ನ ದುಃಖಮನಱಿಯೆಯುಂ ತೆಱಿಯೆಯುಂ ಪೇೞ್ವುದುಮನಂತಮತಿಯುಂ ೨೦೭

ಮಾಣದೆ ಕಡುನೋವಿಂ ಕ
ಣ್ಣಾಗಣದೆ ಬಾಷ್ಪಾಂಬು ನೆಗೆಯೆ ಸೈರಣೆಗೆಟ್ಟ
ಕ್ಷೂಣಗುಣೆ ಕುಟಿಲ ಕುಂತಳೆ
ಜಾಣೆ ಮನೋಭವಮದೇಭಗಾಮಿನಿ ಬೇಗಂ ೨೦೮

ಗದ್ಯ॥ ತನ್ನಂ ಕುಂಡಲಮಂಡಿತ ಖೇಚರನೊಯ್ದುದು ಮೊದಲಾಗೆ ಜಿನೇಂದ್ರದತ್ತನ ದೇಹಾರಮಂ ಪೊರ್ದಿದುದುಮಂ ನಡುವೆಡೆಯೊಳಾದ ತತ್ಪ್ರಪಂಚಮೆಲ್ಲಮುಮಂ ಪೇೞೆ ಸವಿಸ್ತರಂ ಕೇಳ್ದು ಪ್ರಿಯದತ್ತಸೆಟ್ಟಿ ಬೆಱಗಾಗಿ ೨೦೯

ಪಿರಿದಪ್ಪಾಪತ್ತೆಲ್ಲಮ
ನರವಿಂದದಳಾಕ್ಷಿ ಬಿದಿರಗಂಟುಂ ಕಡಿವಂ
ತಿರೆ ಕಡಿದು ಬರ್ದುಕಿ ಬಂದೈ
ದೊರೆ ನಿನಗಾರ್ಪುಣ್ಯದೇೞ್ಗೆಯೊಳ್ಪೇೞ್ಮಗಳೇ ೨೧೦

ಮಗಳೇ, ನೀನಿಲ್ಲದೆ ಮನೆ ನನ್ನಪಾಲಿಗೆ ಅಟ್ಟಿಸಿಕೊಂಡು ಬಂದು ಕಚ್ಚುವ (ದುಷ್ಟಜಂತುಗಳುಳ್ಳ) ಕಾಡಿನಂತಾಯಿತು. ನೋವು ಮಿತಿಮೀರಿತು. ಆದ್ದರಿಂದ ನಾನು ಆ ದುಃಖಕ್ಕೆ ಹೆದರಿ ಇಲ್ಲಿಗೆ ವಲಸೆ ಬಂದಿದ್ದೇನೆ" ೨೦೬. ಎಂದು ತನ್ನ ದುಃಖವನ್ನು ಮುಚ್ಚುಮರೆಯಿಲ್ಲದೆ ಸ್ಪಷ್ಟವಾಗಿ ಹೇಳಿದನು. ೨೦೭. ಅನಂತಮತಿಯೂ ತಪ್ಪದ ಮನೋವೇದನೆಯಿಂದ ಕಣ್ಣೀರು ಸುರಿಯುತ್ತಿರಲು ಆ ಸಂಪೂರ್ಣ ಗುಣಶಾಲಿನಿ ಕುಂಡಲ ಮಂಡಿತನೆಂಬ ಖೇಚರನು ತನ್ನನ್ನು ಹೊತ್ತುಕೊಂಡು ಹೋದುದು ಮೊದಲುಗೊಂಡು ಜಿನೇಂದ್ರದತ್ತನ ದೇವಾಲಯವನ್ನು ಸೇರುವವರೆಗಿನ ವೃತ್ತಾಂತವನ್ನೂ ವಿಸ್ತಾರವಾಗಿ ಹೇಳಿದಳು. ಅದನ್ನೆಲ್ಲ ಕೇಳಿ ಪ್ರಿಯದತ್ತಸೆಟ್ಟಿ ಬೆರಗಾದನು ೨೦೯. "ದೊಡ್ಡ ದೊಡ್ಡ ಆಪತ್ತುಗಳನ್ನೆಲ್ಲ ಬಿದಿರ ಗಂಟನ್ನು ಕಡಿಯುವ ಹಾಗೆ ಕಡಿದು ಬದುಕಿ ಬಂದೆಯಮ್ಮಾ ! ಪುಣ್ಯಾಧಿಕ್ಯದಲ್ಲಿ ಮಗಳೇ ನಿನಗೆ ಯಾರು ಸರಿಯಾದಾರು?" ೨೧೦. ಎಂದು ಮಗಳ ದುಃಖವನ್ನು ಶಮನಗೊಳಿಸು

ಗದ್ಯ॥ ಎಂದು ಮಗಳ ದುಃಖಮನಾಱೆ ನುಡಿದು ಪಿರಿದುಮುತ್ಸಾಹದಿಂ ಜಿನಾಭಿಷೇಕ ಪೂಜೆಯುಂ ಮಾಡಿ ಪತ್ತೆಂಟು ದಿವಸಂ ಪೋದಿಂ ಬೞಿಕ್ಕಂ ಒಂದು ದಿವಸಂ ಮಗಳಂ ನೋಡಿ ೨೧೧

ಇನ್ನಿರಲಾಗದು ಜವ್ವನ
ಮುನ್ನೞೆದುದು ಮೃಗನಿಭಾಕ್ಷಿಗಂಬುಜಮುಖಿಗೆಂ
ದುನ್ನತಚಿತ್ತಂ ಮದುವೆಯ
ನಿನ್ನೀಕೆಗೆ ಮಾಡವೇೞ್ಕುಮೆಂದುತ್ಸವದಿಂ ೨೧೨

ಗದ್ಯ॥ ತನ್ನ ಸೋದರಳಿಯಂ ಶ್ರುತಸಾಗರಂಗೆ ಕುಡಲ್ವೇಡಿ ಬಂಧುಗಳೆಲ್ಲರ ಬೞಿಗಟ್ಟಿ ವಿವಾಹಮಂಟಪಮಂ ತಳಿರ ಕಾವಣಮುಮಂ ಮಾಡೆ ೨೧೩

ಪೊಳೆವ ದುಕೂಲದ ಗುಡಿಯುಂ
ಮಳಯಜದೆಳದಳಿರ ತೋರಣಂಗಳ್ ಮುಕ್ತಾ
ವಳಿಯುಂ ಪೊಸ ರಂಗವಲಿಯು
ವಿಳಸಿತವಾಗಿರ್ದುವೆತ್ತಲುಂ ತದ್ಗೃಹದೊಳ್ ೨೧೪

ಗದ್ಯ॥ ಮತ್ತಂ ಜಿನಾಭಿಷೇಕಕ್ಕೆ ಬಂದಿಕ್ಷುರಸ ಕ್ಷೀರ ದಧಿ ಘೃತಕುಂಭಂಗಳಾದಿ ಘಟಗಳುಮಂ ಬಳಗಜವಳಿಗೆಂದು ಬಂದ ಚೀನ ದುಕೂಲದ ಹಾರಾವಳಿಯ ಪಲವು ದಿಂಡುಗಳುಮಂ ಯಾಚಕ

ಮಾತೆ ನುಡಿದು ಹೆಚ್ಚಿನ ಉತ್ಸಾಹದಿಂದ ಜಿನಾಭಿಷೇಕವನ್ನೂ ಪೂಜೆಯನ್ನೂ ಮಾಡಿಸಿ ಹತ್ತೆಂಟು ದಿನಗಳು ಕಳೆದಮೇಲೆ ಒಂದು ದಿನ ಮಗಳನ್ನು ನೋಡಿ ೨೧೧. "ಇನ್ನು ತಡಮಾಡಬಾರದು. ಯೌವನವು ಪ್ರಾಪ್ತವಾಯಿತು. ಈ ಅಂಬುಜ ಮುಖಿಗೆ ಮದುವೆಯನ್ನು ಮಾಡಬೇಕು" ಎಂದು ಯೋಚಿಸಿ ಆ ಉನ್ನತ ಚಿತ್ತನು ಸಂಭ್ರಮಪಟ್ಟನು ೨೧೨. ತನ್ನ ಸೋದರಳಿಯನಾದ ಶ್ರುತಸಾಗರನಿಗೆ ಕೊಡಲು ಬಯಸಿ ಬಂಧುಗಳೆಲ್ಲರಿಗೂ ಹೇಳಿಕಳುಹಿಸಿ, ವಿವಾಹ ಮಂಟಪವನ್ನು ತಳಿರು ತೋರಣಾದಿಗಳಿಂದ ಅಲಂಕರಿಸಿ ೨೧೩. ಹೊಳೆಯುವ ರೇಷ್ಮೆಯ್ನ ಧ್ವಜಗಳನ್ನೂ ಶ್ರೀಗಂಧದ ಎಳೆಯ ಚಿಗುರಿನ ತೋರಣಗಳನ್ನೂ ಮುತ್ತಿನ ಹಾರಗಳನ್ನೂ ಹೊಸ ಹೊಸ ರಂಗವಲ್ಲಿಗಳನ್ನೂ ಆ ಮನೆಯಲ್ಲಿ ಎಲ್ಲ ಕಡೆಗಳಲ್ಲಿಯೂ ಸಿದ್ಧಪಡಿಸಿ ಅಲಂಕಾರ ಮಾಡಿದರು. ೨೧೪. ಅಲ್ಲದೆ ಜಿನಾಭಿಷೇಕಕ್ಕೋಸ್ಕರ ತರಿಸಿಟ್ಟಿದ್ದ ಕಬ್ಬಿನ ರಸ, ಹಾಲು, ಮೊಸರು, ತುಪ್ಪ, ಮೊದಲಾದುವು ತುಂಬಿದ್ದ ಕುಂಭಗಳನ್ನೂ ಬಳಗದ ವರಿಗೆ ಕೊಡಲು ತರಿಸಿದ್ದ ಜವಳಿಯಾದ ಚೀನಾಂಬರಗಳನ್ನೂ ಹಾರಾವಳಿಗಳ ಹಲವು ಕಟ್ಟುಗಳನ್ನು ಯಾಚಕ ಸಮೂಹಕ್ಕೆ ಬೇಡಿದುದನ್ನು ಕೊಡುವ ಸಲುವಾಗಿ ಒಟ್ಟು

ಕೋಟಿಗೆ ಬೇಡಿದುದನೀಯಲೆಂದು ಪೂಜಿಸಿದಂ ಪೊನ್ನರಾಶಿಯುಮನನಂತಮತಿ ನೋಡಿ ತಂದೆಯ
ನಿದೇನೆಂದು ಬೆಸಗೊಳ್ವುದುಮಿಂತೆಂದಂ ೨೧೫

ಪಿರಿದುತ್ಸವದಿಂದುಱೆ ಜೇಂ
ಕರಿಸಿ ಬುಧರ್ನಚ್ಚಿ ಮೆಚ್ಚಿ ಬಣ್ಣಿಸೆ ಕರಮಾ
ದರದಿಂ ನಂಟರ್ಜೀಯೆನೆ
ಸರಸಿಜಮುಖಿ ನಿನ್ನ ಮದುವೆಯಂ ಮಾಡಿದಪೆಂ ೨೧೬

ಗದ್ಯ॥ ಎಂಬುದುಮನಂತಮತಿ ಮುಗುಳ್ನಗೆ ನಕ್ಕು ತಂದೆಗೀತೆಂದಳ್ ೨೧೭

ವಿಮಳ ಜಿನೇಂದ್ರಸಾಕ್ಷಿಯೊಳು ನೀಮೆನಗಂ ಕಿಱಿಯಂದು ಮಿಕ್ಕ ಸಂ
ಯಮಜಲರಾಶಿಯಪ್ಪ ವರದತ್ತಮುನೀಶ್ವರರಿಂದೆ ಬ್ರಹ್ಮಚ
ರ್ಯಮನನುರಾಗದಿಂ ಕೊಡಿಸಿದಿರ್ಮಱೆಯಲ್ಕಮಗಾಗದಾನುಮ
ಶ್ರಮದೊಳೆ ತಾಳ್ದಿದೆಂ ಮುದದಿನೀಯೆಡೆಯೊಳ್ಕಿಡಿಸಲ್ಕೆ ತಕ್ಕುದೇ ೨೧೮

ಎಂಬುದುಮಾಗಳ್ ವೈಶ್ಯಕು
ಲಾಂಬರರವಿ ಮಗಳ ಮಾತಿನಂದಕ್ಕೆ ಕರಂ
ತಾಂ ಬೆಱಗಾಗಿ ಮಹಾ ನೋ
ವಿಂ ಬೈದುಂ ಸುಯ್ದು ವಿಧಿಯ ಮನದಟಲಿಂದಂ ೨೧೯

ಗೂಡಿಸಿದ್ದ ಹೊನ್ನಿನ ರಾಶಿಯನ್ನೂ ನೋಡಿ ಅನಂತಮತಿಯು 'ಇದೇನು ?' ಎಂದು ತನ್ನ ತಂದೆಯನ್ನೂ ಕೇಳಿದಳು. ಆಗ ಅವನು ಹೀಗೆ ಹೇಳಿದನು :—"ಬುಧರು ಹೊಗಳಿ ಮೆಚ್ಚುವ ರೀತಿಯಲ್ಲಿ, ಬಹಳ ಆದರೋಪಚಾರಗಳಿಂದ ನೆಂಟರು ಸಂತೋಷ ಪಡುವಂತೆ, ಮಗಳೇ, ನಿನ್ನ ಮದುವೆಯನ್ನು ಮಾಡುತ್ತೇನೆ" (೨೧೫-೨೧೬) ತಂದೆ ಹೀಗೆನ್ನಲು ಅನಂತಮತಿ ಮುಗುಳುನಗೆಯನ್ನು ಬೀರಿ ತಂದೆಗೆ ಹೀಗೆ ಹೇಳಿದಳು :
೨೧೭. ಜಿನೇಂದ್ರಸ್ವಾಮಿಗಳ ಸಾಕ್ಷಿಯಾಗಿ, ದೇವಸನ್ನಿಧಿಯಲ್ಲಿಯೇ, ನೀವು ನನಗೆ ಮಹಾ ಸಂಯಮಸಮುದ್ರರಾದ (ಮಹಾ ತಪಸ್ವಿಗಳಿಂದ) ವರದತ್ತ ಭಟ್ಟಾರಕರೆಂಬ ಮುನೀಶ್ವರರಿಂದ ಬ್ರಹ್ಮಚರ್ಯ ವ್ರತವನ್ನು ಪ್ರೀತಿಯಿಂದ ಕೊಡಿಸಿದಿರಿ. ಅದನ್ನು ನೀವು ಮರೆಯಲಾಗದು. ನಾನು ಅಂದು ಯಾವ ಶ್ರಮವೂ ಇಲ್ಲದೆ ಸಂತೋಷ ದಿಂದಲೇ ವ್ರತವನ್ನು ಧರಿಸಿದೆ. ಅಂಥ ವ್ರತವನ್ನು ಈಗ ಹೀಗೆ ಕೆಡಿಸಲು ಸಾಧ್ಯವೆ ?"
೨೧೮. ಅನಂತಮತಿ ಹೀಗೆನ್ನಲು ಕೇಳಿ ವೈಶ್ಯಕುಲಾಕಾಶಕ್ಕೆ ಸೂರ್ಯನೋಪಾದಿ ಯಲ್ಲಿದ್ದ ಆ ಸೆಟ್ಟಿಯು ಮಗಳ ಮಾತಿಗೆ ಬಹಳ ಆಶ್ಚರ್ಯಪಟ್ಟು ಬಹಳ ಮನೋ ಯಾತನೆಯಿಂದ ವಿಧಿಯನ್ನು ಬೈದು ನಿಟ್ಟುಸುರಿಟ್ಟು ಹೀಗೆಂದನು :— ೨೧೯:

ನೋಡ ಮರುಳ್ಮಗಳೆ ದಿಟಂ
ಮಾಡುವುದೆಗ್ಗಲ್ತೆ ನಿನ್ನನಕ್ಕರೊಳಾಂ ಮು
ದ್ದಾಡಿಸೆ ಮುನಿ ಸನ್ನಿಧಿಯೊ
ಳ್ಕಾಡಿದುದುಂ ಛಾಂದಸಿಕ್ಕೆಯೊಂದೊದವಿಂದಂ ೨೨೦

ಗದ್ಯ॥ ಎಂಬುದುಮನಂತಮತಿ ತಂದೆಗಿಂತೆಂದಳ್ : ೨೨೧

ತಿರಿದುಂಬಂಗೆ ನಿಧಾನಂ
ದೊರೆಕೊಳೆ ಕಡೆಗಣಿಸಿ ಪೋದೊಡಂ ಸಂಸೃತಿಯೊಳ್
ತಿರಿವ ನರಂಗಂ ಧರ್ಮಂ
ದೊರೆಕೊಳೆ ಕಡೆಗಣಿಸಿ ಬಿಟ್ಟೊಡಂ ಸುಖಮುಂಟೇ ೨೨೨

ಕುರುಡಂಗೆ ಪುಣ್ಯದಿಂ ಕ
ಣ್ದೊರೆಕೊಳ್ವವೊಲೀ ಮಹೋಗ್ರ ಸಂಸಾರದೊಳಂ
ವರಧರ್ಮಮದೆಂತಾನುಂ
ದೊರೆಕೊಂಡೊಡೆ ನೆಗಟಲೊಲ್ಲದಾತನೆ ಗಾಂಪಂ ೨೨೩

ಸನ್ನುತ ಜಿನಧರ್ಮಂ ನೆಱೆ
ತನ್ನಿಂದಂ ತಾನೆ ಬಂದೊಡೊಲ್ಲದೆ ಬಿಡುವಾ
ತಂ ನೆಱೆ ಪೋಲ್ಕುಂ ಜಗದೊಳ್
ಪೊನ್ನಂಬಂ ನೀರೊಳೆಚ್ಚು ಕಿಡಿಸುವ ಮರುಳಂ ೨೨೪

"ಹುಚ್ಚು ಮಗಳೆ, ನಾನು ನಿನ್ನ ಮೇಲಿನ ಅಕ್ಕರೆಯಿಂದ ಸ್ವಾಮಿಗಳ ಬಳಿ ವಿನೋದ
ದಿಂದ ಕಾಡಿಸಲು ಹೇಳಿದ ಮಾತನ್ನು ಛಾಂದಸತನದಿಂದ ಹೀಗೆ ನಿಜ ಮಾಡಲು
ಹೊರಡುವುದು ದಡ್ಡತನವಲ್ಲವೆ ?'' ೨೨೦. ಹೀಗೆ ತಂದೆ ಕೇಳಲು ಅನಂತಮತಿ
ಹೀಗೆಂದಳು ; ತಿರುಪೆಬೇಡಿ ಊಟಮಾಡುವವನಿಗೆ ನಿಕ್ಷೇಪ ಲಭಿಸಿದಾಗ ಅಸಡ್ಡೆಮಾಡಿ
ಹೋದರೆ ಹೇಗೋ ಸಂಸಾರದಲ್ಲಿ ತಿರುಗುವ ಮಾನವನಿಗೆ ಧರ್ಮವು ಲಭಿಸಿದಾಗ
ಅಲಕ್ಷ್ಯಮಾಡಿ ಹೋದರೂ ಹಾಗೆಯೇ ದಡ್ಡತನ. (೨೨೧-೨೨) ಕುರುಡನಿಗೆ ಪುಣ್ಯ
ವಶದಿಂದ ಕಣ್ಣು ಲಭಿಸುವ ಹಾಗೆ ಈ ಮಹಾ ಕ್ರೂರ ಸಂಸಾರದಲ್ಲಿ ಶ್ರೇಷ್ಠವಾದ
ಧರ್ಮವು ಅದು ಹೇಗೋ ಲಭಿಸಿದರೆ ಆಚರಿಸಲ್ಲೊಲ್ಲದವನೇ ದಡ್ಡ ೨೨೩. ಶ್ರೇಷ್ಠ
ವಾದ ಜಿನಧರ್ಮವು ತಾನಾಗಿ ಬಂದಾಗ ಒಲ್ಲದೆ ಬಿಡುವವನಿಗೆ ಹೋಲುವವನು
ಹೊನ್ನಿನ ಬಾಣವನ್ನು ನೀರೊಳಕ್ಕೆ ಎಸೆದು ಹಾಳುಮಾಡುವ ಹುಚ್ಚನೊಬ್ಬನೇ.
೨೨೪. ಪರಿಶುದ್ಧವಾದ ಧರ್ಮವು ಲಭಿಸಿದಾಗ ಅದನ್ನು ಮೆಚ್ಚದೆ ಬಿಡುವ

ಸದಮಳ ಧರ್ಮಂ ದೊರೆಕೊಳೆ
ಲದನೊಲ್ಲದೆ ಮತ್ತೆ ಬಿಡುವ ಜಡಮತಿ ಪೋಲ್ಕುಂ
ಮುದದಿಂದೋಲಗದೊಳ್ಪಡೆ
ದುದನಿಂಬಿನೊಳಿರಿಸುವಲ್ಲಿ ಕಿಡಿಸುವ ಮರುಳಂ ೨೨೫

ಗದ್ಯ॥ ಅದುಕಾರಣದಿಂ ಧರ್ಮದಿನನಂತಸುಖಮಕ್ಕುಮೆಂಬುದಂ ಅಧರ್ಮದಿನನಂತದುಃಖಮಕ್ಕುಮೆಂಬುದಂ ಸಂಸಾರ ಸುಖಮಲ್ಪಮೆಂಬುದಂ ನೀಮಿಂಬಾಗಿ ಬಲ್ಲಿರಿಂತು ಬಲ್ಲೊಡಮೆನ್ನ ಮೇಲಣ ಮೋಹದಿಂದೀ ಮಾತಂ ನುಡಿವಿರಾದೊಡಂ ಧರ್ಮಾಭಿಪ್ರಾಯಮನಱಿವ ನೀಮೆಮಗಿದಂ ನುಡಿಯಲಾಗದೆಂಬುದುಂ ಮಗಳೊಳಾದ ಕಡುಮೋಹದಿಂ ಪ್ರಿಯದತ್ತಸೆಟ್ಟಿ ಇಂತೆಂದಂ ೨೨೬

ಮದಗಜಗಾಮಿನಿ ಮಾಣಿ
ಕ್ಯದ ಮುತ್ತಿನ ಪೊನ್ನ ಪದ್ಮರಾಗದ ವೈಡೂ
ರ್ಯದ ಜಿನಚೈತ್ಯಾಲಯಮಂ
ಮುದದಿಂದಂ ಪಲವನರ್ತಿಯಿಂ ಮಾಡಿಸು ನೀಂ ೨೨೭

ಪೊಂಗಳಸದಿಂದೆ ಪಲವು ಬೆ
ಡಂಗಿನ ರೂಪಾರದಿಂದ ಮೊಪ್ಪುವ ಜಿನಗೇ
ಹಂಗಳನನೇಕಮಂ ಪಲ
ಮಂ ಗಟಪದೆ ಮಾಡಿಸರ್ತಿಯಿಂ ವನಜಮುಖೀ ೨೨೮

ಮೂರ್ಖನು ಸಭೆಯಲ್ಲಿ ಸಂತೋಷ ಪೂರ್ವಕವಾಗಿ ಪಡೆದುಕೊಂಡದ್ದನ್ನು ಇಂಬಿಟ್ಟುಕೊಳ್ಳುವಾಗ ಕೆಡಿಸುವ ಮೂರ್ಖನನ್ನು ಹೋಲುತ್ತಾನೆ. ೨೨೫. ಆದಕಾರಣ ಧರ್ಮದಿಂದ ಅನಂತಸುಖವಾಗುವುದೆಂಬುದನ್ನೂ ಅಧರ್ಮದಿಂದ ಅನಂತದುಃಖವಾಗುವುದೆಂಬುದನ್ನೂ, ಸಂಸಾರ ಸುಖವು ಅಲ್ಪವಾದದ್ದೆಂಬುದನ್ನೂ ನೀವು ಚೆನ್ನಾಗಿ ಬಲ್ಲಿರಿ. ಹೀಗೆ ತಿಳಿದಿದ್ದರೂ ನನ್ನ ಮೇಲಿನ ಮೋಹದಿಂದ ಈ ಮಾತನ್ನು ನುಡಿಯುತ್ತಿರುವಿರಿ. ಆದರೂ ಧರ್ಮದ ಅಭಿಪ್ರಾಯವನ್ನು ತಿಳಿದ ನೀವು ನನಗೆ ಇದನ್ನು ಹೇಳಬಾರದು." ಎಂದು ನುಡಿಯಲು ಮಗಳ ಮೇಲಿನ ಹೆಚ್ಚಿನ ಮೋಹದಿಂದ ಪ್ರಿಯದತ್ತಸೆಟ್ಟಿ ಹೀಗೆಂದನು : ೨೨೬. ಮದ್ದಾನೆಯ ನಡಿಗೆಯುಳ್ಳವಳೆ, ನೀನು ಮಾಣಿಕ್ಯ, ಮುತ್ತು, ಹೊನ್ನು, ಪದ್ಮರಾಗ, ವೈಡೂರ್ಯಗಳಿಂದ ಜಿನಚೈತ್ಯಾಲಯಗಳನೇಕವನ್ನು ಸಂತೋಷದಿಂದ ಕಟ್ಟಿಸು ೨೨೭. ಚಿನ್ನದ ಕಳಗಳನ್ನು ಹಾಕಿದ ಹಲವು ಅಂದವಾದ ಶಿಲ್ಪಗಳಿಂದ ಶೋಭಿಸುವ ಜಿನಮಂದಿರಗಳನ್ನು ಸದ್ದಿಲ್ಲದೆ ಕಟ್ಟಿಸು ೨೨೮.

ಪಾಲಿಂದಂ ಮೊಸರಿಂದಂ
ಮೇಲೆನಿಸುವ ತುಪ್ಪದಿಂದಮಡುಗೆಗಳಿಂದಂ
ಲೀಲೆಯೊಳೆ ಮುನಿಕದಂಬಮಂ
ನೋಲಾಡಿಸು ಮಗಳೆ ನಿನ್ನ ಕಣ್ತಣಿವಿನೆಗಂ ೨೨೯

ಗದ್ಯ॥ ಮದುವೆಯಾಗಲೆವೇಟ್ಕುಮೆಂದು ಮೇಲುದಂ ಪಾಸಿಬೇಡುವುದುಂ ಅನಂತಮತಿ ನಕ್ಕು ನೀಂ ಮುಂ ಪೇಟ್ದನಿತುಂ ಪುಣ್ಯಕ್ಕೆ ಕಾರಣಮಕ್ಕುಮಾದೊಡಂ ಎನ್ನ ಕೈಕೊಂಡ ವ್ರತಮನೇಗೆಯ್ದುಂ ಕಿಡಿಸುವೆನಲ್ಲೆಂದು ಮಱುಮಾತಿಂಗೆಡೆಯಿಲ್ಲದಂತು ನುಡಿವುದುಂ ಪ್ರಿಯದತ್ತಸೆಟ್ಟಿ ಮಗಳ ಪರಿಚ್ಛೇದಮನಱಿದುಸಿರದಿರ್ದನನ್ನೆಗಂ ಮಾವನಪ್ಪ ಜಿನೇಂದ್ರದತ್ತಸೆಟ್ಟಿಯುಮತ್ತೆಯಪ್ಪ ಸುದತ್ತೆಯುಂ ಬಂದೀತೆಂದರ್ ೨೩೦

ಬೇಡ ಕಡುಮೂರ್ಖತನಮಂ
ಮಾಡದೆ ಪಿಡಿಯಚ್ಚುವಿಡಿದು ಮುನ್ನಿನ ಮಾತಂ
ನೋಡದೆ ಛಲಮಂ ಕೈಕೊಂ
ಡಾಡದೆ ನೀಂ ಮಗಳೆ ಮದುವೆಯಾಗಲೆವೇಟ್ಕುಂ ೨೩೧

ಗದ್ಯ॥ ಎಂಬುದುಮನಂತಮತಿ ಮಾವಗಮತ್ತೆಗಂ ಇಂತೆಂದಳ್ : ೨೩೨

ಹಾಲಿನಿಂದಲೂ ಮೊಸರಿನಿಂದಲೂ ಶ್ರೇಷ್ಠವಾದ ತುಪ್ಪದಿಂದಲೂ ಅಡುಗೆಗಳನ್ನು ಮಾಡಿಸಿ ನಿನ್ನ ಕಣ್ಣು ದಣಿಯುವ ಹಾಗೆ ಮುನಿ ಸಮೂಹಗಳಿಗೆ ಆನಂದವಾಗಿ ಊಟ ಮಾಡಿಸು ೨೨೯. ನೀನು ಮದುವೆಯಾಗಲೇಬೇಕು" ಎಂದು ಉತ್ತರೀಯವನ್ನು ಹಾಸಿ ಬೇಡಿಕೊಳ್ಳಲು ಅನಂತಮತಿಗೆ ನಗು ಬಂತು. "ನೀವು ಮುಂಚೆ ಹೇಳಿದುದಷ್ಟೂ ಪುಣ್ಯ ಸಂಪಾದನೆಗೆ ಕಾರಣವಾಗುವುದು. ಆದರೂ ನಾನು ಅಂಗೀಕರಿಸಿದ ವ್ರತವನ್ನು ಏನು ಮಾಡಿದರೂ ಕೆಡಿಸಿಕೊಳ್ಳುವವಳಲ್ಲ." ಎಂದು ಪ್ರತ್ಯುತ್ತರಕ್ಕೆ ಅವಕಾಶವಿಲ್ಲದ ಹಾಗೆ ನುಡಿದುಬಿಟ್ಟಳು. ಪ್ರಿಯದತ್ತಸೆಟ್ಟಿ ಮಗಳ ನಿರ್ಧಾರವನ್ನು ತಿಳಿದುಕೊಂಡು ಮೌನ ವಹಿಸಿದನು. ಆಗ ಮಾವನಾದ ಜಿನೇಂದ್ರದತ್ತನೂ ಅತ್ತೆಯಾದ ಸುದತ್ತೆಯೂ ಬಂದು ಹೀಗೆ ಹೇಳಿದರು ೨೩೦. "ಹೆಚ್ಚಾದ ಹಟಮಾಡಬೇಡ. ಮೂರ್ಖತನದಿಂದ ಪಟ್ಟುಹಿಡಿದು ಆಡಿದ ಮಾತನ್ನೇ ಆಡಬೇಡ. ಹಿಂದಿನ ಒಂದು ಮಾತನ್ನೇ ಪ್ರಧಾನವಾಗಿ ಗಮನದಲ್ಲಿಟ್ಟು ಕೊಳ್ಳಬೇಡ. ಮಗಳೆ, ನೀನು ಮದುವೆಯಾಗಲೇಬೇಕು" ೨೩೧. ಹೀಗೆ ಹೇಳಲು ಅನಂತಮತಿಯು ಮಾವನಿಗೂ ಅತ್ತೆಗೂ ಹೀಗೆಂದಳು ೨೩೨. 'ಇದು ಸಾರ, ಇದು

ಸಾರಮಸಾರಮಿದೆಂದು ವಿ
ಚಾರಿಸಿ ಕೈಕೊಂಡು ಕಿಡಿಸಲಾರ್ಪುದೆ ಚೀ ನಿ
ಷ್ಕಾರಣಮದಱಿಂದನ್ಯರ್
ಬಾರಿಸೆ ಮಾಣ್ಬುದು ಮಾವ ಕಂಚಿನ ದನಿಯೋ ೨೩೩

ಪಿಡಿದೀಸುವ್ರತಮಂ ಮ
ಧ್ಯೆಡೆಯೊಳ್ ಕಿಡಿಸುವೆನೆ ಕಿಡಿಸಲಱಿಯೆಂ ಬಗೆವಂ
ದುಡುವಿನ ನಾಲಗೆಯಂತಿರೆ
ದೃಢವ್ರತಗೊಂದಲ್ಲದೆರಡು ನಾಲಗೆಯೊಳವೇ ೨೩೪

ಗದ್ಯ॥ ಎಂಬುದುಮವರ್ ಮಾತುಗುಡದಿರೆ ಕುಮಾರಿ ಪ್ರಿಯದತ್ತಸೆಟ್ಟಿ ಮೊದಲಾಗೆ ಬಂಧುಗಳೆಲ್ಲರುಮನೊಡಂಬಡಿಸಿ ಜಿನಪೂಜೆಯುಂ ಮಾಡಿ ವರದತ್ತಭಟ್ಟಾರಕರೆ ಗುರುಗಳಾಗೆ ಕಮಳ ಶ್ರೀಗಂತಿಯರಲ್ಲಿ ಜಿನದೀಕ್ಷೆಯಂ ಕೈಕೊಂಡು ೨೩೫

ಮನದೊಳಿರತ್ರೆಯ ಸುಖಮಂ
ನೆನೆಯದೆ ಜಿನಚರಣಕಮಲಮಂ ನಂಬುಗೆಯಿಂ
ದನವರತಂ ಮಱಿಯದೆ ಭೋಂ
ಕನೆ ಸೆಡೆಯದೆ ತಪದೊಳಾದ ನೋವಿಂಗಿನಿಸು ೨೩೬

ಅಸಾರ' ಎಂದು ವಿಚಾರಮಾಡಿ ಕೈಕೊಂಡ ವ್ರತವನ್ನು ನಿಷ್ಕಾರಣವಾಗಿ ಕೆಡಿಸಲು ಸಾಧ್ಯವೆ? ಚೀ ಇತರರು ತಡೆದರೆ ನಿಲ್ಲಿಸುವುದಕ್ಕೆ ಅದೇನು ಕಂಚಿನ ಧ್ವನಿಯೆ ? ೨೩೩. ಹಿಡಿದ ಈ ಒಳ್ಳೆಯವ್ರತವನ್ನು ಮಧ್ಯದಲ್ಲಿ ಭಂಗಗೊಳಿಸುವೆನೆ ? ನನ್ನಿಂದ ಆಗದು; ದೃಢವ್ರತವುಳ್ಳವನಿಗೆ ಉಡುವಿನ ನಾಲಗೆಯಂತೆ ಒಂದಲ್ಲದೆ ಎರಡು ನಾಲಿಗೆಗಳಿರುವುವೆ?" ೨೩೪. ಎನ್ನಲು ಅವರು ಮಾತನಾಡದೆ ಇರಲು ಕುಮಾರಿಯು ಪ್ರಿಯದತ್ತ ಸೆಟ್ಟಿಯೇ ಮೊದಲಾದ ಎಲ್ಲ ಬಂಧುಗಳನ್ನೂ ಒಪ್ಪಿಸಿ ಜಿನಪೂಜೆಯನ್ನು ಮಾಡಿ ವರದತ್ತ ಭಟ್ಟಾರಕರೇ ಗುರುಗಳಾಗಲು ಕಮಲ ಶ್ರೀಗಂತಿಯವರಲ್ಲಿ ಜಿನದೀಕ್ಷೆಯನ್ನು ಸ್ವೀಕರಿಸಿದಳು ೨೩೫ ಅನಂತಮತಿಯು ಮನಸ್ಸಿನಲ್ಲಿ ಐಹಿಕ ಸುಖವನ್ನು ನೆನಸಿಕೊಳ್ಳದೆ ಜಿನಚರಣಕಮಲವನ್ನು ನಂಬಿಕೆಯಿಂದ ಅನವರತವೂ ಮರೆಯದೆ ತಟ್ಟನೆ ಹಿಂದೆಗೆಯದೆ, ಅಂಜದೆ, ಕಷ್ಟಕ್ಕೆ ಸ್ವಲ್ಪವೂ ಹಿಂತೆಗೆಯದೆ ತಪಸ್ಸನ್ನಾಚರಿಸಿದಳು. ೨೩೬. ಬೇರೆಯ ನಶ್ವರವಾದ ಅಲ್ಪಸುಖ

ಪೆಱವಟ್ಟಿಸುಖಮುಮಂ ಮನದೊಳ್
ಮಱೆದುಂ ಚಿಂತಿಸದೆ ಶಂಕೆಯಿಂ ಮಿಥ್ಯಾತ್ವ
ಕ್ಕಿಱಿಗದೆ ಮುನಿಸೊಸಗೆಗಳಂ
ತೊಱೆದು ಕಷಾಯಂಗಳಂ ಮನಂ ಬಿಡೆ ಬಿಡುತ್ತುಂ ೨೩೭

ಪರಮಾಗಮಮುಮಂ ಕರ್ಮದ
ಪರಿಣತಿಯುಂ ಮುನ್ನದೊಳ್ಪಿನಿಂ ನೆಗಟ್ದ ಮಹಾ
ಪುರುಷರ ಕಥೆಗಳುಮಂ ತಾಂ
ಸ್ಮರಿಸುತ್ತುಂ ಪೊಟ್ತುಗಳೆಯುತೀ ತೆಱದಿಂದಂ ೨೩೮

ಖಳಕರ್ಮರಾಜನೊದವಿದ
ಬಳಮಂ ಕೆಡಿಸಲ್ಕೆವೇಡಿ ತೊಟ್ಟಿರ್ದಾ ಕ
ತ್ತಳಮಂ ಪೋಲ್ತುದು ನೋಡಲ್
ಮಳವೋರಂತಮರ್ದು ಕೂಡೆ ಸರ್ವಾಂಗಮುಮಂ ೨೩೯

ಆಂ ಬೇಱೆ ದೇಹಮಪ್ಪೊಡೆ
ತಾಂ ಬೇಱೆಂದೆಂಬ ನಿಶ್ಚಯಂ ಮಿಗೆ ಮೋಹಾ
ಡಂಬರಮನುಱಿದು ತನುವಂ
ಪಂಬಲಿಸದೆ ಮೋಕ್ಷಸುಖಮನಪೇಕ್ಷಿಸುತ್ತುಂ ೨೪೦

ಗಳನ್ನು ಮನಸ್ಸಿನಲ್ಲಿ ಮರೆತೂ ಚಿಂತಿಸದೆ ಅನುಮಾನದಿಂದ ಮಿಥ್ಯಾತ್ವಕ್ಕೆ ಸೋಲದೆ ಕೋಪ ಉತ್ಸಾಹಗಳನ್ನು ತ್ಯಜಿಸಿ ಮನಸ್ಸಿನಲ್ಲಿ ಯಾವ ಕಷಾಯಗಳಿಗೂ ಎಡೆಗೊಡದೆ (ಕರ್ಮಫಲವನ್ನು ಹೆಚ್ಚು ಮಾಡುವಂಥ ನಾಲ್ಕು ಬಗೆಯ ದೋಷಗಳು) ಜೈನಾಗಮವನ್ನೂ ಕರ್ಮದ ಪರಿಪಾಕವನ್ನೂ, ಹಿಂದೆ ಒಳ್ಳೆಯತನದಿಂದ ಪ್ರಸಿದ್ಧರಾದ ಮಹಾಪುರುಷರ ಕಥೆಗಳನ್ನೂ ಸ್ಮರಿಸುತ್ತ ಕಾಲಕ್ಷೇಪ ಮಾಡಿದಳು ೨೩೭–೨೩೮. ನೀಚನಾದ ಕರ್ಮರಾಜನ ಒದಗಿದ ಬಲವನ್ನು ಕೆಡಿಸಲು ಬಯಸಿ ತೊಟ್ಟುಕೊಂಡಿದ್ದ ಕವಚವನ್ನು ಹೋಲುವಂತೆ ಅನಂತಮತಿಯ ದೇಹವನ್ನೆಲ್ಲ ಮಲವು ಮೆತ್ತಿಕೊಂಡಿತು. (ಅನಂತಮತಿ ಮಲಧಾರಿಣಿಯಾದಳು) ೨೩೯ 'ನಾನು ಬೇರೆ, ದೇಹವೇ ಬೇರೆ' ಎಂಬ ನಿರ್ಧಾರವು ದೃಢತರವಾಗಿ, ಮೋಹಾಧಿಕ್ಯವನ್ನು ಕಳೆದುಕೊಂಡು ದೇಹಸೌಖ್ಯದ ಹಂಬಲವೇ ಇಲ್ಲದೆ ಮೋಕ್ಷಸುಖವನ್ನು ಅಪೇಕ್ಷಿಸಿದಳು. ೨೪೦ ನಶ್ವರವಾದ ದೇಹವನ್ನು ನಂಬದೆ ಕ್ಷಣಿಕವಾದ ನೀಚಸುಖ

ಆಟಿಯೊಡಲಂ ನಂಬದೆ ಮಿಗೆ
ಯಟಿಸೊಗಮಂ ಪಗೆಯ ಕಂಡತೆಱದಿಂ ಕಾಣು
ತ್ತ್ರುಟಲಿಂ ಪಲವುಪವಾಸಂ
ಗಳಿನೋವದೆ ದೇಹಮಂ ಕರಂ ಕುಸಿಯಿಸುತುಂ ೨೪೧

ಗದ್ಯ॥ ತಪದೊಳುತ್ತರೋತ್ತರಂ ನೆಗಟ್ದು ಕಡೆಯೊಳ್ ಸಮಾಧಿವಿಧಿಯಿಂ ಶರೀರಮಂ ಬಿಸುಟು ಪನ್ನೆರಡನೆಯ ಸಹಸ್ರಾರ ಕಲ್ಪದೊಳ್ ಪದಿನೆಂಟು ಸಾಗರೋಪಮಾಯುಷ್ಯಕ್ಕೊಡೆಯಂ ಸುಕಾಂತನೆಂಬ ಮಹತ್ತರದೇವನಾಗಿ ಪುಟ್ಟಿದಳಿಂತು ೨೪೨

ದುರಿತವಿರೋಧಿಸೇನೆಯನದಿರ್ಕಿಱಿದಗ್ಗದ ಮೋಕ್ಷಲಕ್ಷ್ಮಿಯೊ
ಳ್ನೆರೆವೆನಮೋಘಮೆಂಬ ಪುರುಷಂ ಮನದೊಳ್ತೊಡರಿಲ್ಲದಾಗಳುಂ
ಪರಮಜಿನೇಂದ್ರಪಾದದೊಳ್ಕಾಂಕ್ಷಿತನಪ್ಪದು ಮತ್ತಮೆಲ್ಲಿಯುಂ
ಪರಿಹರಿಸಿರ್ಕೆ ತತ್ವಮನೆ ಭಾವಿಸುತಂ ಪರಮವ್ರತಂಗಳಿಂ ೨೪೩

ಚತುರ್ಗತಿಗಳೊಳಾದ ಸುಖಮೆಂಬನಿತುಮಂ ಬಿಟ್ಟು ಮೋಕ್ಷಸುಖಮನೆ ಬಯಸುವುದೆಂದು ನಿಷ್ಕಾಂಕ್ಷೆಯ ಕಥೆಯಂ ಗಣಧರದೇವರ್ಪೇಟ್ ೨೪೪

ಗಳನ್ನು ಹಗೆಗಳನ್ನು ಕಂಡ ಹಾಗೆ ಕಾಣುತ್ತ, ಕಷ್ಟದಿಂದ ಅನೇಕ ಉಪವಾಸಗಳನ್ನು ಮಾಡಿ ದೇಹದಂಡಿಸಿ ಅನಂತಮತಿಯು ಕಠಿನವಾದ ತಪಸ್ಸನ್ನು ಆಚರಿಸಿದಳು. ೨೪೧ ತಪಸ್ಸನ್ನು ಹೆಚ್ಚುಮಾಡಿಕೊಳ್ಳುತ್ತ ಕೊನೆಯಲ್ಲಿ ಸಮಾಧಿವಿಧಿಯಂತೆ ಶರೀರವನ್ನು ತ್ಯಜಿಸಿ ಹನ್ನೆರಡನೆಯ ಸಹಸ್ರಾರ ಕಲ್ಪದಲ್ಲಿ ಹದಿನೆಂಟು ಸಾಗರೋಪಮವಾದ ಆಯುಷ್ಯವುಳ್ಳ ಸುಕಾಂತನೆಂಬ ಮಹತ್ತರದೇವನಾಗಿ ಹುಟ್ಟಿದಳು. ೨೪೨ ಪಾಪವೆಂಬ ವಿರೋಧಿಸೇನೆಯನ್ನು ಎದುರಿಸಿ ಯುದ್ಧಮಾಡಿ ಶ್ರೇಷ್ಠವಾದ ಮೋಕ್ಷಲಕ್ಷ್ಮಿಯಲ್ಲಿ ತಪ್ಪದೆ ಸೇರುವೆನೆಂಬ ಪುರುಷನು ಮನಸ್ಸಿನಲ್ಲಿ ಕೊಂಚವೂ ಅಡ್ಡಿಯಿಲ್ಲದೆ ಯಾವಾಗಲೂ ಪರಮಜಿನೇಂದ್ರಸ್ವಾಮಿಯ ಪಾದಗಳಲ್ಲಿ ಅಕಾಂಕ್ಷೆಯಿಟ್ಟಿರಬೇಕು. ಪರಮವ್ರತಗಳನ್ನು ಆಚರಿಸಿ ಜಿನತತ್ವವನ್ನೇ ಭಾವಿಸುತ್ತ ಮಿಕ್ಕ ಯೋಚನೆಗಳನ್ನು ತ್ಯಜಿಸಬೇಕು. ನಾಲ್ಕುಗತಿ (ದೇವ, ಮಾನವ. ನಾರಕ, ತಿರ್ಯಕ್)ಗಳಲ್ಲಿ ಲಭಿಸುವ ಸುಖವೆಂಬುದೆಲ್ಲವನ್ನೂ ಬಿಟ್ಟು ಮೋಕ್ಷಸುಖವನ್ನೇ ಬಯಸುವುದೆಂದು ನಿಷ್ಕಾಂಕ್ಷೆಯ ಕಥೆಯನ್ನು ಗಣಧರ ದೇವರು ಹೇಳಿದರು. ೨೪೩–೪೪

ಪಿರಿದುಂ ಸಂತುಷ್ಟನಾದಂ ಮದನಶರಭಭೇರುಂಡನುದ್ಯದ್ಗುಣಂ ಮಂ
ದರಧೈರ್ಯಂ ವಾಗ್ವಧೂವಲ್ಲಭನಮಳಯಶೋರಾಶಿ ಸಮ್ಯಕ್ತ್ವರತ್ನಾ
ಭರಣಂ ತ್ರೈವಿದ್ಯಚಕ್ರೇಶ್ವರವಿಮಳಪದಾಂಭೋಜಭೃಂಗಂ ಜಿನಶ್ರೀ
ಚರಣಾಲಂಕಾರಶೀರ್ಷಂ ಸುಕವಿಜನಮನಃಪದ್ಮಿನೀ ರಾಜಹಂಸಂ ೨೪೫

ಗದ್ಯ॥ ಇದು ನಿಖಿಳದಿವಿಜಪರಿವೃಢಮಕುಟತಟಘಟಿತಮಣಿನಿಕರಲುಳಿತಕಿರಣ ಚುಂಬನೀಯ ಪರಮಜಿನ ಚರಣಯುಗಳ ಸರಸಿರುಹ ಮತ್ತಮಧುಕರನಿರುಪಮಸಹಜಕವಿಜನಪಯಃಪಯೋಧಿಹಿಮಕರ ನಿತಭಾವಯುತ ದಿಗುಂಬರದಾಸ ನೂತ್ನಕವಿತಾವಿಳಾಸ ಶ್ರೀಮನ್ನಯಸೇನ ದೇವವಿರಚಿತಮಪ್ಪ ಧರ್ಮಾಮೃತದೊಳ್ ದರ್ಶನದ್ವಿತೀಯಾಂಗವ್ಯಾವರ್ಣನಂ

## ತೃತೀಯಾಶ್ವಾಸಂ

ಮನ್ಮಥನೆಂಬ ಶರಭಕ್ಕೆ ಭೇರುಂಡನಂಥವನೂ, ಮಂದರದಂತೆ ಧೀರನೂ ವಾಗ್ವಧೂ ವಲ್ಲಭ, ಪರಿಶುದ್ಧಯಶೋರಾಶಿಯೂ, ಸಮ್ಯಕ್ತ್ವವೇ ರತ್ನಾಭರಣವಾಗಿ ಉಳ್ಳವನೂ ತ್ರೈವಿದ್ಯಚಕ್ರೇಶ್ವರನ ಪಾದಕಮಲಗಳಲ್ಲಿ ದುಂಬಿಯಂತಿರುವವನೂ ಜಿನನ ಶ್ರೀಚರಣಗಳಿಗೆ ತಲೆಯನ್ನೇ ಅಲಂಕಾರವಾಗಿಸಿದ (ಜಿನಪಾದಗಳನ್ನು ವಂದಿಸುವವನು) ವನೂ ಆದ ಸುಕವಿಜನಮನಃಪದ್ಮಿನೀರಾಜಹಂಸನು ಬಹಳ ಸಂತೋಷಪಟ್ಟನು. ೨೪೫

ಇದು ಸಮಸ್ತ ದೇವತೆಗಳ ಶಿರಸಾಷ್ಟಾಂಗ ಪ್ರಣಾಮಗಳನ್ನು ಹೊಂದಿದ ಜಿನಪಾದ ಕಮಲಗಳಲ್ಲಿ ತುಂಬಿಯಾದ, ನಿರುಪಮ ಸಹಜ ಕವಿಗಳೆಂಬ ಪಾಲ್ಗಡಲಿಗೆ ಚಂದ್ರನಾದ 'ದಿಗಂಬರದಾಸ' 'ನೂತ್ನಕವಿತಾ ವಿಲಾಸ' ಎಂಬ ಬಿರುದುಗಳನ್ನು ಧರಿಸಿದ ಶ್ರೀಮನ್ನಯ ಸೇನ ದೇವ ವಿರಚಿತವಾದ 'ಧರ್ಮಾಮೃತ' ದಲ್ಲಿ ತೃತೀಯಾಶ್ವಾಸ.

# ಚತುರ್ಥಾಶ್ವಾಸಂ

ಶ್ರೀನಿರ್ವಾಣಶ್ರೀಗಿದು
ತ್ಞಾನಗ್ಗದ ತೊಡವೆನಿಪ್ಪ ನಿಷ್ಕಾಂಕ್ಷೆಯುನ
ತ್ಯಾನಂದದಿನಱಿದಂ ವಿಬು
ಧಾನಂದಂ ಸುಕಪಿಕನಿಕರಪಿಕವಾಕಂದಂ ೧

ಗದ್ಯ॥ ಅಂತು ನಿಷ್ಕಾಂಕ್ಷೆಯ ಕಥೆಯಂ ಲೇಸಾಗಱಿದು ಮತ್ತಂ ಗಣಧರ ಸ್ವಾಮಿಗಳ್ಗೆ ಮಗಧ ನಾಯಕಂ ಪೊಡೆಮಟ್ಟು ಕೈಗಳಂ ಮುಗಿದು ಮುಂದಣ ನಿರ್ವಿಚಿಕಿತ್ಸೆಯ ಕಥೆಯನೆನಗೆ ನಿಮ್ಮಡಿ ಗಳಱಿವಂತಾಗೆ ಬೆಸಸುವುದೆಂಬುದುಂ ಮೋಕ್ಷಲಕ್ಷ್ಮಿಯ ಲಾವಣ್ಯೋತ್ಕರ್ಷಮೆನಿಪ ನಿರ್ವಿಚಿಕಿತ್ಸೆ ಯುನಿಂತೆಂದು ಪೇಟ್ವರ್: ಪದ್ಯದಂತೆ ಮಂಟಪದಂತೆ ದ್ವಾರಬಂಧದಂತೆ ಶ್ರುತಯಂತ್ರದಂತೆ ವಸ್ತ್ರ ದಂತೆ ಮಂದರದಂತೆ ಶ್ರೀಮಂಚದಂತೆ ರಾಜನೀತಿಯಂತೆ ಧರ್ಮದಂತೆ ದಾನದಂತೆ ದರ್ಶನಮುಂ ನಿಶ್ಶಂಕೆಯುಂ ನಿಷ್ಕಾಂಕ್ಷೆಯುಂ ನಿರ್ವಿಚಿಕಿತ್ಸೆಯುಮೆಂಬ ನಾಲ್ಕು ಗುಣಂಗಳಿಂ ಕೂಡಿ ಶುದ್ಧ ಚಿತ್ತದಿಂ ನಡೆವುದು ೨

ಶ್ರೀಮೋಕ್ಷಲಕ್ಷ್ಮಿಗೆ ಇದು ಶ್ರೇಷ್ಠವಾದ ಒಡವೆ (ಅಲಂಕಾರ)ಯೆನ್ನಿಸಿಕೊಳ್ಳುವ ನಿಷ್ಕಾಂಕ್ಷೆ (ಅಪೇಕ್ಷೆಯಿಲ್ಲದಿರುವಿಕೆ) ಯನ್ನು ಪಂಡಿತರಿಗೆ ಆನಂದಪ್ರದನಾದ, ಸುಕವಿಗ ಳೆಂಬ ಕೋಗಿಲೆಗಳಿಗೆ ಮಾವಿನಂತೆ ಇರುವ, ಮಗಧರಾಜನು ಆನಂದದಿಂದ ಕೇಳಿ ತಿಳಿ ದನು. ೧ ಹಾಗೆ ನಿಷ್ಕಾಂಕ್ಷೆಯ ಕಥೆಯನ್ನು ಚೆನ್ನಾಗಿ ತಿಳಿದುಕೊಂಡು ಪುನಃ ಗಣಧರ ಸ್ವಾಮಿಗಳಿಗೆ ಮಗಧರಾಜನು ನಮಸ್ಕರಿಸಿ "ಮುಂದಿನ ನಿರ್ವಿಚಿಕಿತ್ಸೆಯ ಕಥೆಯನ್ನು ನಮಗೆ ಅರ್ಥವಾಗುವಂತೆ ಅಪ್ಪಣೆಕೊಡಿಸಬೇಕು" ಎಂದು ಕೇಳಿಕೊಳ್ಳಲು ಸ್ವಾಮಿಗಳು ಮೋಕ್ಷಲಕ್ಷ್ಮಿಯ ಲಾವಣ್ಯದ ಹೆಚ್ಚಳವೆನ್ನಿಸಿಕೊಳ್ಳುವಂಥ ನಿರ್ವಿಚಿಕಿತ್ಸೆಯನ್ನು ಹೀಗೆಂದು ಹೇಳಿದರು : ಪದ್ಯ (ನಾಲ್ಕು ಪಾದಗಳುಳ್ಳದ್ದು) ದಂತೆ' ಮಂಟಪ (ನಾಲ್ಕು ಪಾರ್ಶ್ವಗಳುಳ್ಳದ್ದು) ದಂತೆ ದ್ವಾರಬಂಧ (ನಾಲ್ಕು ಭಾಗಗಳಿಂದ ಕೂಡಿದ ಬಾಗಿಲುವಾಡ) ದಂತೆ, ಶ್ರುತಯಂತ್ರ (ಪ್ರಥಮಾನುಯೋಗ, ಚರಣಾನು ಯೋಗ, ಕರಣಾನು ಯೋಗ ಎಂಬ ನಾಲ್ಕು ಭಾಗಗಳಿಂದ ಕೂಡಿದ್ದು) ದಂತೆ, ವಸ್ತ್ರ (ನಾಲ್ಕು ಅಂಚುಗಳುಳ್ಳದ್ದು) ದಂತೆ, ಮಂದರ (ನಾಲ್ಕು ನಂದೀಶ್ವರ ದೀಪಾರಾಧನೆಗಳು) ದಂತೆ. ಶ್ರೀಮಂಚ (ನಾಲ್ಕು ಕಾಲುಗಳುಳ್ಳದ್ದು) ದಂತೆ, ರಾಜನೀತಿ (ಸಾಮ, ದಾನ, ಭೇದ, ದಂಡ) ಯಂತೆ, ಧರ್ಮ (ಸಮ್ಯಗ್ದರ್ಶನ, ಜ್ಞಾನ, ಚಾರಿತ್ರ ಮತ್ತು ತಪ) ದಂತೆ, ದಾನ (ಆಹಾರದಾನ, ಅಭಯದಾನ, ಭೈಷಜ್ಯದಾನ ಮತ್ತು ಶಾಸ್ತ್ರದಾನ ಎಂದು ನಾಲ್ಕು ಬಗೆ) ದಂತೆ, ದರ್ಶನ. ನಿಶ್ಶಂಕೆ, ನಿಷ್ಕಾಂಕ್ಷೆ, ನಿರ್ವಿಚಿಕಿತ್ಸೆ ಎಂಬ ನಾಲ್ಕು ಗುಣಗಳಿಂದ ಶುದ್ಧ ಚಿತ್ತರಾಗಿ ನಡೆಯಬೇಕು. ೨. ನಿರ್ವಿಚಿಕಿತ್ಸೆಯಿಂದ ಜೈನಧರ್ಮದ ತತ್ವಗಳನ್ನು ತಿಳಿದು

ನಿರ್ವಿಚಿಕಿತ್ಸೆಯೊಳಱಿದಾ
ತರ್ವರೆ ಕೈಕೊಂಡು ಬಣ್ಣಿಸಲ್ಕೆಗಟ್ದ ನರಂ
ನಿರ್ವಾಣಪದದೊಳಿರಿಸುವ
ಸರ್ವಜ್ಞಶ್ರೀಗೆ ಪೊತ್ತುವೊದಲಿಗನಕ್ಕುಂ ೩

ಗದ್ಯ॥ ಇನ್ನದಱ ಪೆಂಪಂ ಪೇೞ್ವೊಡೆ ೪

ಭರತಕ್ಷ್ಮಾವನಿತೆಗೆ ಪಂ
ಕರುಹಭವಂ ನಚ್ಚಿ ಮೆಚ್ಚಿ ಮಾಡಿದ ಮಣಿ ನೂ
ಪುರಮೆನಿಸಿ ಶೋಭೆಯಿಂದಂ
ಕರಮೊಪ್ಪುವುದಿಂದ್ರಕಚ್ಛೆಯೆಂಬುದು ವಿಷಯಂ ೫

ಗದ್ಯ॥ ಆ ವಿಷಯದೊಳ್ ೬

ಪೊಱವೊಟಲ ಶೋಭೆಯಿಂ ಸು
ತ್ತಿಱಿದಿರ್ದ ಜಿನೇಂದ್ರಭವನದೋಳಿಗಳಿಂ ಪೆ
ರ್ಗೆಱೆಗಳ ಚೆಲ್ವಿಂ ಫಲದಿಂ
ತುಱುಗಿದ ತರುನಿಕರದಿಂದವೊಪ್ಪುವ ವನದಿಂ ೭

ಗದ್ಯ॥ ಅಂತೊಪ್ಪುವುದು ರೌರವಪುರವಾ ಪುರಮನಾಳ್ವನೊದ್ದಾಯನ ಮಹಾರಾಜನೆಂಬ ಮಹಾಮಂಡಳಿಕನಾತಂ ೮

ಶರಣೆಂದಂಗೆ ಪಯೋಧಿಯನ್ನನದಟಿಂ ಮಾಱಾಂತು ಕೈಕೊಳ್ಳದಿ
ರ್ದರಿಭೂಪರ್ಗೆ ಗಜಾರಿಯನ್ನನಳಿಪಿಂ ಕಯ್ಯೊಡ್ಡಿತ ಮರ್ತ್ಯರ್ಗೆ ಭಾ
ಸುರ ಕಲ್ಪದ್ರುಮದನ್ನನೂರ್ಜಿತಯಶಂಭೂಪೋನ್ನತಂ ಧೈರ್ಯಮಂ
ದರನುದ್ಯದ್ಗುಣವಂತರಾಜರ ಮನೋಜಂ ಭೂರಿಭೂಮಿಾಯುತಂ ೯

ಕೊಂಡಂ ಪ್ರಪಂಚ ಮೆಚ್ಚುವಂತೆ ಬಾಳುವ ಮಾನವನು ಮೋಕ್ಷಪದವಿಯಲ್ಲಿ ನಿಲ್ಲಿಸುವ ಸರ್ವಜ್ಞತಾಭಾಗ್ಯಕ್ಕೆ ಅಗ್ರಗಣ್ಯನಾಗುವನು ೩. ಇನ್ನು ಅದರ ಹೆಚ್ಚಳವನ್ನು ಹೇಳುವುದಾದರೆ, ಭಾರತ ಭೂದೇವಿಗೆ ಬ್ರಹ್ಮನು ಮೆಚ್ಚಿ ಪ್ರೀತಿಯಿಂದ ಮಾಡಿಟ್ಟ ರತ್ನಖಚಿತವಾದ ಪಾದಾಭರಣವೆನ್ನಿಸಿಕೊಂಡು ವಿಶೇಷವಾದ ಅಂದದಿಂದ ಒಪ್ಪುವ ರಾಜ್ಯ ಇಂದ್ರಕಚ್ಛವೆಂಬ ನಾಡು. ಆ ನಾಡಿನಲ್ಲಿ ೪-೬ ಪಟ್ಟಣದ ಹೊರಗಣ ಅಂದ, ಸುತ್ತಲೂ ಒತ್ತಾಗಿ ಇದ್ದ ಜಿನಾಲಯಗಳಿಂದ, ಹೆಗ್ಗೆರೆಗಳ ಚೆಲುವಿನಿಂದ, ಹಣ್ಣುಗಳಿಂದ ತುಂಬಿದ ವೃಕ್ಷಗಳಿಂದ ಕೂಡಿದ ಉದ್ಯಾನಗಳಿಂದ ೭. ರೌರವಪುರವು ಶೋಭಿಸುತ್ತಿತ್ತು. ಅದರ ದೊರೆ ಒದ್ದಾಯನ ಮಹಾರಾಜನೆಂಬುವನು ಒಬ್ಬ ಮಹಾಮಂಡಲಿಕ ೮ ಆತನು ಶರಣಾಗತನಿಗೆ ಕ್ಷೀರಸಮುದ್ರದಂಥವನು ಪರಾಕ್ರಮದಿಂದ ಎದುರಿಸಿದವನಿಗೆ ಸಿಂಹದಂಥವನು; ಆಸೆಯಿಂದ ಕೈಯೊಡ್ಡಿದವನಿಗೆ ಕಲ್ಪವೃಕ್ಷ, ಆ ರಾಜನು ಬಹಳ ಕೀರ್ತಿಶಾಲಿ. ಅವನು ಧೈರ್ಯದಲ್ಲಿ ಮಂದರಪರ್ವತದಂಥವನು; ಮಹಾಗುಣಶಾಲಿ, ರಾಜಮನ್ಮಥ; ವಿಸ್ತಾರವಾದ ರಾಜ್ಯವುಳ್ಳವನು ೯. ಪರಮಜಿನೇಶ್ವರನ ಪೂಜೆಯನ್ನು ಆ ದೊರೆ ಬಹಳ ಭಕ್ತಿ

ಪರಮಜಿನಪೂಜೆಯಂ ನಿ
ರ್ಭರತರ ಭಕ್ತಿಯೊಳೆ ಮಾಡುವೆಡೆಗೀತನೊಳಾ
ಭರತೇಶ್ವರನುಂ ದೊರೆಯೇಂ
ದೊರೆಯಾಗಿರನೆಂದು ಪೊಗಟ್ದು ಕೊನೆವುದು ಲೋಕಂ ೧೦

ಸೊಗಯಿಪ ದರ್ಶನದೊಳ್ಸಲೆ
ಮಿಗಿಲೆನಿಪ ಸನತ್ಕುಮಾರ ಚಕ್ರಿಗಮಂ ತಾ
ಸಗರಾಧಿಪಂಗಮಿಾತನೆ
ಮಿಗಿಲೆಂದೋರಂತೆ ಪೊಗಟುತಿರ್ಪುದು ಭುವನಂ ೧೧

ನೆಗಟ್ದ ಚತುರ್ವಿಧ ದಾನ
ಕ್ಕಗಣಿತಗುಣನೀತನಿಂದೆ ಶ್ರೇಯಾಂಸಂ ತಾಂ
ಮಿಗಿಲಿಲ್ಲವೆಂದು ಪೊಗಟ್ವುದು
ಜಗತೀಚಕ್ರಂ ನಿರಂತರಂ ಪದಪಿಂದಂ ೧೨

ಗದ್ಯ॥ ಅಂತು ಪೊಗಟ್ಕೆವೆತ್ತ ಒದ್ದಾಯನ ಮಹಾರಾಜಂಗೆ ಪಟ್ಟದರಸಿ ಪ್ರಭಾವತಿ ಯೆಂಬಳ್ ೧೩

ವರಗುಣದೊಳ್ಸುರೇಂದ್ರವಧುವಿಂಗೆಸೆವಿರ್ಮಡಿ ಜೈನಭಕ್ತಿಯೊಳ್
ವರವಧುವಪ್ಪ ರೋಹಿಣಿಗೆ ಮುಮ್ಮಡಿ ರೂಪಿನೊಳಬ್ಜವಾಸೆಗಂ
ಪರಿಣತರಪ್ಪವರ್ಗೆದು ನೋಟ್ಪೊಡೆ ನಾಲ್ಮಡಿ ಶೀಲದೇಟ್ಗೆಯೊಳ್
ಧರಣಿಜೆಗಂ ಸಹಸ್ರಮಡಿ ಭಾವಿಪೊಡಗ್ಗಳವಿಾ ಧರಿತ್ರಿಯೊಳ್ ೧೪

ಯಿಂದ ಮಾಡುತ್ತಿದ್ದನು. 'ಅದರಲ್ಲಿ ಆ ಭರತ ಚಕ್ರವರ್ತಿ ಅವನಿಗೆ ಸಮಾನನೆನಿಸಿಯಾನೆ'? ಎನಿಸಲಾರ' ಎಂದು ಪ್ರಪಂಚವೇ ಹೊಗಳುತ್ತಿತ್ತು ೧೦. ಜೈನಧರ್ಮದ ಅರಿವಿನಲ್ಲಿ ಆತನು ಆ ಪುರಾತನ ಸನತ್ಕುಮರಚಕ್ರವರ್ತಿಗಿಂತ ಹೆಚ್ಚಿನವನು ; ಆ ಸಗರಚಕ್ರವರ್ತಿ ಗಿಂತ ದೊಡ್ಡವನು, ಎಂದು ಭೂಮಂಡಲವೇ ಆತನನ್ನು ಹೊಗಳುತ್ತಿತ್ತು ೧೧. ಪ್ರಸಿದ್ಧವಾದ ನಾಲ್ಕು ಬಗೆಯ ದಾನ (ಶಾಸ್ತ್ರದಾನ, ಅಭಯ ಪ್ರಧಾನ, ಭೈಷಜ್ಯದಾನ ಅನ್ನದಾನ) ಗಳಿಗೆ ಮಹಾ ಗುಣಶಾಲಿಯಾದ ಈತನಿಗಿಂತ ಹೆಚ್ಚಿನ ಶ್ರೇಯೋವಂತ ನಿನ್ನೊಬ್ಬನಿಲ್ಲವೆಂದು ಜಗತ್ತೇ ಇವನನ್ನು ಪ್ರೀತಿಯಿಂದ ಹೊಗಳುತ್ತದೆ ೧೨. ಹಾಗೆ ಹೊಗಳಿಕೆಯನ್ನು ಹೊಂದಿದ ಒಡ್ಡಾಯನ ಮಹಾರಾಜನಿಗೆ ಪಟ್ಟದ ರಾಣಿ ಪ್ರಭಾವತಿ ಯೆಂಬಾಕೆ ೧೩. "ಆಕೆ ಶ್ರೇಷ್ಠ ಗುಣದಲ್ಲಿ ದೇವೇಂದ್ರ ಪತ್ನಿಗಿಂತ ಇಮ್ಮಡಿ ಗುಣವಂತಳು, ಜೈನಭಕ್ತಿಯಲ್ಲಿ ರೋಹಿಣಿಗೆ ಮೂರರಷ್ಟು ದೊಡ್ಡವಳು. ರೂಪದಲ್ಲಿ ಲಕ್ಷ್ಮಿಗೆ ನಾಲ್ಮಡಿ ಹಿರಿಯಳು. ಶೀಲದ ಆಧಿಕ್ಯದಲ್ಲಿ ಸೀತಾದೇವಿಗಿಂತ ಸಾವಿರಪಾಲು ಶ್ರೇಷ್ಠ" ೧೪.

ಗದ್ಯ॥ ಎನಿಸಿ ನೆಗೞ್ತೆವಡೆದ ಪ್ರಭಾವತೀದೇವಿ ಮೊದಲಾಗೆಣ್ಬಾಸಿರ್ವರರಸಿಯರೊಳ್ ಕೂಡಿ ಸುಖಸಂಕಥಾವಿನೋದದಿಂದೊದ್ದಾಯನ ಮಹೀವಲ್ಲಭಂ ರಾಜ್ಯಂಗೆಯ್ಯುತ್ತುಮಿರ್ಪುದು ಮೊರ್ಮೆ ಸೌಧರ್ಮಕಲ್ಪದೊಳ್ ಸೌಧರ್ಮೇಂದ್ರಂ ಸುಧರ್ಮೆಯೆಂಬ ಸಭೆಯೊಳ್ ೧೫

ಸುರವಿಳಾಸಿನಿಯರ್ ಮನೋಹರರೂಪೆಯರ್ ಗಜಯಾನೆಯರ್
ತರಳಲೋಚನೆಯರ್ ವಿದಗ್ಧೆಯರಿಕ್ಕೆ ಚಾಮರಮಂ ಸುರರ್
ಸುರುಚಿರಾಭರಣಂಗಳೊಪ್ಪೆ ಮನೋಜಸನ್ನಿಭನರ್ತಿಯಿಂ
ನೆರೆದು ಕುಳ್ಳಿರೆ ಸುತ್ತಲುಂ ರಸಗೀತಮುಣ್ಮೆ ಪೊದೞ್ಕೆಯಿಂ ೧೬

ಗದ್ಯ॥ ಅಂತೋಲಗಂಗೊಟ್ಟಿರ್ದ ಸುರರಾಜಂಗೆ ಸಮಸ್ತ ದಿವಿಜನಿಕಾಯಮುಂ ವಿನಯ ವಿನಮಿತರಾಗಿ ಕೈಗಳಂ ಮುಗಿದು ಬಿನ್ನಪಮೆಂದಿಂತೆಂದರ್ : ೧೭

ನಿರುಪಮ ಮುಕ್ತಿಶ್ರೀಗಾ
ಭರಣಮಿದೆನಿಸಿರ್ದ ಜೀವಹಿತಮಂ ನುತಮಂ
ಪರಮ ಜಿನಾಗಮಮಂ ದೇ
ವರೆ ಬಲ್ಲಿರಿ ಪೆಱರ್ಗಮಱಿಯಲೇಂ ಮೊಗ್ಗಾಯ್ತೇ ೧೮

ಎಂಬ ಕೀರ್ತಿಪಡೆದ ಪ್ರಭಾವತೀದೇವಿ ಮೊದಲುಗೊಂಡು ಎಂಟು ಸಾವಿರ ರಾಣಿಯರ ಸಂಗಡ ಕೂಡಿ ಸುಖಸಲ್ಲಾಪಗಳಲ್ಲಿದ್ದು ಒದ್ದಾಯನ ಮಹಾರಾಜನು ರಾಜ್ಯವಾಳುತ್ತ ಇರಲು ಒಂದು ಸಲ ಸೌಧರ್ಮಕಲ್ಪದಲ್ಲಿ ಸೌಧರ್ಮೇಂದ್ರನು 'ಸುಧರ್ಮೆ' ಎಂಬ ಸಭೆಯಲ್ಲಿ ೧೫. ಸುಂದರಿಯರಾದ ಸುರಸ್ತ್ರೀಯರು, ಚಂಚಲಾಕ್ಷಿಯರು, ಪಂಡಿತೆಯರು, ಚಾಮರಹಾಕುತ್ತಿರುವಾಗ ಸುಂದರವಾದ ಆಭರಣಗಳನ್ನು ಧರಿಸಿ ಆ ಮನ್ಮಥಸದೃಶನು ಸಂಭ್ರಮದಿಂದ ಕುಳ್ಳಿರಲು ಸುತ್ತ ಸುರಸ ಸಂಗೀತ ಕೇಳುತ್ತಿತ್ತು ೧೬. ಹಾಗೆ ಸಭೆಯಲ್ಲಿ ಕುಳಿತಿದ್ದ ಸುರರಾಜನಿಗೆ ಸಮಸ್ತದೇವರುಗಳೂ ವಿನಯದಿಂದ ತಲೆಬಾಗಿಸಿ ಕೈಜೋಡಿಸಿ ಹೀಗೆ ಬಿನ್ನಹಮಾಡಿದರು. "ಹೋಲಿಕೆಯೇ ಇಲ್ಲದ ಮೋಕ್ಷಲಕ್ಷ್ಮಿಗೆ 'ಇದು ಆಭರಣ' ಎನ್ನಿಸಿಕೊಳ್ಳುವ ಜೀವಹಿತಕರವಾದ ಶ್ರೇಷ್ಠವಾದ ಜಿನಾಗಮವನ್ನು ಸ್ವಾಮಿಯವರೇ ಬಲ್ಲಿರಿ. ಇತರರಿಗೆ ಅದನ್ನು ತಿಳಿದುಕೊಳ್ಳಲು ಸುಲಭ ಸಾಧ್ಯವೆ ? ೧೭–೧೮

ಗದ್ಯ॥ ಅದುಕಾರಣಂ ದೇವರೆಮಗೆ ಸದ್ಧರ್ಮಮಂ ತಿಳಿವಂತಾಗೆ ಬೆಸಸಲ್ವೇಟ್ಕುಮೆಂಬುದುಂ ಅಮರರಾಜಂ ಸುಖನಿಧಾನ ದೀಪವರ್ತಿಯೆನಿಪ ಸದ್ಧರ್ಮಮನಿಂತೆಂದು ಪೇಟ್ದಂ ೧೯

ವರಸದ್ಧರ್ಮಮೆ ಜೀವೋ
ತ್ಕರಕ್ಕೆ ಶರಣನ್ಯ ವಸ್ತುಗಳ್ನಿಶ್ಚಯದಿಂ
ಶರಣಲ್ಲಮೆಂಬುದಂ ವಿ
ಸ್ತರದಿಂದಂ ತಿಳಿದು ಧರ್ಮಮಂ ಪಿಡಿಗೆ ಬುಧಂ ೨೦

ಪುಸಿವವರಂ ಕೊಲ್ವವರಂ
ಬೆಸನಿಗಳಂ ಕಳ್ಳರಪ್ಪರಂ ಕಂಡೊಡೆ ಸಂ
ಕಿಸುವರ್ ಪುರುಷರ್ ಪಾಪಂ
ವಸುಮತಿಯೊಳ್ಕಷ್ಟಮೆಂದು ಸಾಱುವತೆಱದಿಂ ೨೧

ಪಿರಿದಪ್ಪ ತಪದೊಳೊಡಲಂ
ವರಧರ್ಮದೊಳರ್ಥಮೆಲ್ಲಮಂ ತವಿಸುವರಂ
ಧರೆನಚ್ಚಿಮೆಚ್ಚಿ ಬಣ್ಣಿಪು
ದೆರಡಿಲ್ಲದೆ ಧರ್ಮಮೊಳ್ಳಿತೆಂದಱಿಪುವವೋಲ್ ೨೨

ಗದ್ಯ॥ ಅದು ಕಾರಣದಿಂ ಸ್ವರ್ಗಾಪವರ್ಗಸುಖಕ್ಕೆ ಧರ್ಮಮೆ ಕಾರಣಮೆಂಬುದುಮಂ ನರಕತಿರ್ಯಗ್ಗತ್ಯಾದಿಮಹಾದುಃಖಕ್ಕೆ ಪಾಪಮೆ ಕಾರಣಮೆಂಬುದುಮಂ ನೀವಱಿದುಮಱಿಗೆ ೨೩

ಆದಕಾರಣ ದೇವರವರು ನಮಗೆ ಸದ್ಧರ್ಮವನ್ನು ತಿಳಿಯುವ ಹಾಗೆ ಹೇಳಬೇಕು." ಹೀಗೆನ್ನಲು ಅಮರರಾಜನು ಸುಖವೆಂಬ ನಿಕ್ಷೇಪವನ್ನು ತೋರಿಸುವ ದೀಪದ ಬತ್ತಿಯೆಂದೆನ್ನಿಸಿಕೊಳ್ಳುವ ಸದ್ಧರ್ಮವನ್ನು ಹೀಗೆ ಹೇಳಿದನು ೧೯. [ವಿ. ಸೂ. ಮಂತ್ರಿಸಿದ ದೀಪವನ್ನು ಬಚ್ಚಿಟ್ಟ ಸಧಿಯಿರುವ ಕಡೆ ಒಯ್ದರೆ ಅದು ಕೆಳಮುಖವಾಗಿ ಉರಿಯುವುದು] 'ಜೀವ ಸಮೂಹಕ್ಕೆ ಶ್ರೇಷ್ಠವಾದ ಸದ್ಧರ್ಮವೇ ಶರಣು ; ಇತರ ವಸ್ತುಗಳಲ್ಲ' ಎಂಬುದನ್ನು ಚೆನ್ನಾಗಿ ತಿಳಿದುಕೊಂಡು ವಿವೇಕಿಯು ಧರ್ಮವನ್ನು ಹಿಡಿಯಲಿ ೨೦. ಸುಳ್ಳಾಡುವವರನ್ನೂ ಕೊಲ್ಲುವವರನ್ನೂ ದುಶ್ಚಟಗಳುಳ್ಳವರನ್ನೂ ಕಳ್ಳರಾದವರನ್ನೂ ನೋಡಿದರೆ ಜನ ಶಂಕೆಪಡುತ್ತಾರೆ- ಲೋಕದಲ್ಲಿ ಪಾಪವು ನೀಚವೆಂದು ಸಾರಿ ಹೇಳುವಂತಿದೆ–ಈ ಶಂಕೆ ! ೨೧. ಹೆಚ್ಚಾದ ತಪಸ್ಸಿನಲ್ಲಿ ದೇಹವನ್ನು ಸವೆಸಿ ತನ್ನ ಧನವನ್ನೆಲ್ಲ ಧರ್ಮಕಾರ್ಯದಲ್ಲಿ ವೆಚ್ಚಮಾಡುವವರನ್ನು ಲೋಕ ಪ್ರೀತಿಯಿಂದ ಮೆಚ್ಚಿ ಹೊಗಳುತ್ತದೆ. ಇದರಿಂದ ಧರ್ಮವು ನಿಸ್ಸಂಶಯವಾಗಿ ಒಳ್ಳೆಯದೆಂದು ತಿಳಿಸುತ್ತದೆ ೨೨. ಆದಕಾರಣ ಸ್ವರ್ಗ, ಮೋಕ್ಷ, ಸುಖಕ್ಕೆ ಧರ್ಮವೇ ಕಾರಣವೆಂದೂ ನರಕ, ತಿರ್ಯಗ್ಗತಿ ಮೊದಲಾದ ಮಹಾ ದುಃಖಗಳಿಗೆ ಪಾಪವೇ ಕಾರಣವೆಂದೂ ನೀವು ಚೆನ್ನಾಗಿ ತಿಳಿಯಿರಿ. ೨೩. ಯೋಚಿಸಿದರೆ, ಹೊಲೆಯರು ಕೆಟ್ಟ ಕುಲದವರು. ಅವರು ಶುದ್ಧವಾದ ವೃತ್ತಿ

ಪೊಲೆಯರ್ ಭಾವಿಸುವೊಡೆ ದು
ಷ್ಕುಲರನುಪಮ ಶುದ್ಧವೃತ್ತಿಯೊಳ್ನಡೆವೊಡೆ ಭೂ
ತಲಮೆಲ್ಲಂ ಬಣ್ಣಿಸುವುದು
ಕುಲದಿಂದಂ ಧರ್ಮಮಧಿಕಮೆಂದಱಿಪುವವೋಲ್ ೨೪

ಕುಲಮುಳ್ಳಂ ಚಾರಿತ್ರ
ಕ್ಕಲಸಿ ಮಹಾವ್ಯಸನಿಯಾಗಿ ನಡೆವೊಡೆ ಧರಣೀ
ವಲಯಂ ಮುನಿವುದು ಧರ್ಮಂ
ಕುಲದಿಂದಂ ಪೂಜ್ಯಮೆಂದು ಸಾಱುವ ತೆಱದಿಂ ೨೫

ಗದ್ಯ॥ ಅದು ಕಾರಣದಿಂ ಪೊಲ್ಲಮೆಯೊಳೊಂದದೆ ಚಾರಿತ್ರದೊಳ್ ಕೂಡಿ ನೆಗಳ್ದ ಧರ್ಮಮ ಸದ್ಧರ್ಮಂ ಪೊಲ್ಲಮೆಯೊಳೊಂದಿ ದುಶ್ಚಾರಿತ್ರದೊಳ್ಕೂಡಿ ಸಲ್ವ ಧರ್ಮಮೆ ಕುಧರ್ಮಮೆಂಬುದು ಮನೀ ನುಡಿಗಳಿಂದಱಿಗೆ ೨೬

ಪೆಸರುಂ ರೂಪುಂ ನುಡಿಯುಂ
ವಸುಮತಿಯೊಳ್ ಕೀಳ ಮಾನಿಸರ್ಗೆಲ್ಲಂ ಭಾ
ವಿಸುವೊಡೆ ಸಮಾನಮನಿತಱೊ
ಳೆ ಸಮಾನರೆ ಮನುಜರಣ್ಣ ಕೀೞ್ಮೇಲಿಲ್ಲಾ ೨೭

ಗದ್ಯ॥ ಅನ್ವಯದಿಂದಡಂಗಱಿಯದೆ ಬರುತ್ತಿರ್ಪ ಶುದ್ಧಚಾರಿತ್ರದಿಂದವರ್ ವಿಪ್ರಾದಿ ಮೇಲ್ಜಾತಿಗಳ್ ದುರಾಚಾರದಿಂದಿವರ್ಕಿರಾತಾದಿಕೀೞ್ಜಾತಿಗಳೆಂದಱಿವಂತೆ ಸದಾಚಾರರಪ್ಪ ಮಹಾತಪೋಧ

ಯಲ್ಲಿ ನಡೆದುಕೊಂಡರೆ ಅವರನ್ನು ಲೋಕವೇ ಹೊಗಳುತ್ತದೆ. ಆದ್ದರಿಂದ ಕುಲಕ್ಕಿಂತ ಧರ್ಮ ಹೆಚ್ಚೆಂದು ತಿಳಿಯಬೇಕು ೨೪. ಕುಲವುಳ್ಳವನು ಒಳ್ಳೆಯ ನಡತೆಯನ್ನೊಲ್ಲದೆ ದುರ್ವ್ಯಸನಕ್ಕೆ ಬಿದ್ದರೆ, ಜನರೆಲ್ಲ ಅವನ ಮೇಲೆ ಸಿಟ್ಟಾಗುವರು. ಆದ್ದರಿಂದ ಧರ್ಮ ಕುಲಕ್ಕಿಂತ ಪೂಜ್ಯವೆಂದು ಸ್ಪಷ್ಟವಾಗುತ್ತದೆ ೨೫. ಆದಕಾರಣ ನೀಚತನಕ್ಕೆ ಸೇರದೆ ಚಾರಿತ್ರವನ್ನು ಕಾಪಾಡಿಕೊಂಡು ಮಾಡಿದ ಧರ್ಮವೆ ಸದ್ಧರ್ಮ ; ನೀಚನತನ ನೀಚ ಚಾರಿತ್ರದಿಂದ ಕೂಡಿ ಮಾಡುವ ಧರ್ಮವೇ ಕೆಟ್ಟಧರ್ಮವೆಂದು ಈ ಮಾತುಗಳಿಂದ ತಿಳಿಯಬೇಕು ೨೬. ಹೆಸರು, ರೂಪ, ಮಾತು–ಇವು ಮನುಷ್ಯರಿಗೆಲ್ಲ ಸಮಾನ. ಆದ್ದರಿಂದ ಅವುಗಳಲ್ಲಿ ಮನುಜರೆಲ್ಲ ಪರಸ್ಪರ ಸಮಾನರು ; ಕೀಳು, ಮೇಲು ಎಂಬುದಿಲ್ಲ. ೨೭. ವಂಶಪಾರಂಪರ್ಯವಾಗಿ ಭಂಗವಿಲ್ಲದೆ ನಡೆದು ಬರುತ್ತಿರುವ ಶುದ್ಧಚಾರಿತ್ರದಿಂದ ಇವರು ವಿಪ್ರಾದಿ ಮೇಲುಜಾತಿಗಳವರು, ದುರಾಚಾರದಿಂದ ಇವರು ಕೀಳುಜಾತಿಗಳವರು ಎಂದು ತಿಳಿಯುವ ಹಾಗೆ ಸದಾಚಾರವುಳ್ಳ ಮಹಾ ತಪಸ್ವಿಗಳು ಮತ್ತು ಅವರ ಭಕ್ತರಾದ

ನರ ತದ್ಭಕ್ತರಪ್ಪ ಗೃಹಸ್ಥರ ನಡೆವಳಿಗಳುಮಂ ದುರಾಚಾರರಪ್ಪ ತಪೋಧನಲಿಂಗಿಗಳ ತದ್ಭಕ್ತರಪ್ಪ ಗೃಹಸ್ಥರ ನಡೆವಳಿಗಳುಮಂ ಕಂಡಿದು ಮೋಕ್ಷಕ್ಕೆ ಕಾರಣಮಪ್ಪ ಧರ್ಮಮೆಂದಱಿಗೆ ೨೮

ಒಸಗೆಗಮುತ್ಸಾಹಕ್ಕಂ
ಸಸಿಯುದಯಂ ರಂಜಿಪಂತೆ ಕಳ್ಳಂಗಂ ದು
ರ್ವ್ಯಸನಿಗಮಾತೆಱದಿಂ ರಂ
ಜಿಸಲಕ್ಕುಮೆ ಬಗೆದು ನೋೞ್ಪೊಡವನೀತಳದೊಳ್ ೨೯

ಗದ್ಯ॥ ಸಕಲಸುಖಕ್ಕೆ ನೆಲೆಯಾದ ಸದ್ದೃಷ್ಟಿಗೆ ರಂಜಿಸುವ ಸದ್ಧರ್ಮಂ ಬಹುವಿಧಮಾಗಿರ್ಪ ನರಕದುಃಖಂಗಳನನುಭವಿಸಲ್ವೇಡಿರ್ಪ ಕುದೃಷ್ಟಿಗೆಂತಾನುಂ ರಂಜಿಸಲಾಱದು ೩೦

ಕನ್ನಡಿಯಂ ತೋಱಿದೊಡ
ತ್ಯುನ್ನತಸಲ್ಲಕ್ಷಣಂಗೆ ಮುನಿಸಾಗದು ಮ
ತ್ತೆನ್ನದೆ ಮೂಕೊಱೆಯಂಗಾ
ಕನ್ನಡಿಯಂ ತೋಱೆ ಬಡಿವನಿಱಿವಂ ಕೊಲ್ವಂ ೩೧

ಗದ್ಯ॥ ಅಂತು ನಿಷ್ಪಾಪಂಗೆ ಸದ್ಧರ್ಮಂ ರುಚಿಯಾಗಿರ್ಕುಂ ಮಹಾಪಾತಕಿಗೆ ಕೈಪೆಯಾಗಿರ್ಕುಂ ೩೨

ಜರಗನೊಯ್ಯನೆ ಕರ್ಚಿ ರಾಶಿಯ ಮಣ್ಣೊಳೊಪ್ಪುವ ಪೊನ್ನನ
ಚ್ಚರಿಯೆನಲ್ಕೆಱೆ ಕಾಣ್ಬವೊಲ್ಮತಿವಂತರುಂ ಮರುಳಾಗಿ ಮ
ಚ್ಚರಿಸದಾಪ್ತನನೈದಿ ತತ್ತ್ವಮನಂತೆ ಧರ್ಮಮನಾಗಳೊ
ಪ್ಪಿರೆ ವಿಚಾರಿಸಿ ನೋಡಿ ನಂಬುಗೆಯಿಂದೆ ಮಾೞ್ಪುದು ಧರ್ಮಮಂ ೩೩

ಗೃಹಸ್ಥರ ನಡೆವಳಿಕೆಯನ್ನೂ ದುರಾಚಾರಿಗಳಾದ ತಪಸ್ವಿ ವೇಷಧಾರಿಗಳ ಮತ್ತು ಅವರ ಗೃಹಸ್ಥರ ನಡೆವಳಿಕೆಯನ್ನೂ ಗಮನಿಸಿ 'ಇದು ಮೋಕ್ಷಕ್ಕೆ ಕಾರಣವಾಗುವ ಧರ್ಮ' ಎಂದು ತಿಳಿಯಿರಿ. ೨೮. ಉತ್ಸವ, ಸಂತೋಷಗಳಿಗೆ ಚಂದ್ರೋದಯ ಮೆಚ್ಚಿಗೆ ಆಗುತ್ತದೆ. ಆದರೆ ಹಾಗೆ ಕಳ್ಳರಿಗೂ ಕೆಟ್ಟ ವ್ಯಸನಗಳುಳ್ಳವರಿಗೂ ಮೆಚ್ಚಿಗೆಯಾಗುವುದಿಲ್ಲ ೨೯. ಎಲ್ಲ ಸುಖಗಳಿಗೂ ನೆಲೆಯಾಗಿರುವ ಒಳ್ಳೆಯ ದೃಷ್ಟಿಯುಳ್ಳವನಿಗೆ ಸದ್ಧರ್ಮವು ಪ್ರಿಯವಾಗುತ್ತದೆ ; ಅನೇಕ ಬಗೆಯ ನರಕ ದುಃಖಗಳನ್ನು ಹೊಂದಬೇಕಾಗಿರುವ ಕುದೃಷ್ಟಿಯುಳ್ಳವನಿಗೆ ಅದು ಹೇಗೂ ರುಚಿಸುವುದಿಲ್ಲ. ೩೦. ಮಹಾ ಲಕ್ಷಣವಂತನಾದ ಸುರೂಪಿಗೆ ಕನ್ನಡಿಯನ್ನು ತೋರಿಸಿದರೆ ಸಿಟ್ಟು ಬರುವುದಿಲ್ಲ. ಹಾಗಿಲ್ಲದೆ ಮೂಗು ಹೋದವನಿಗೆ ಆ ಕನ್ನಡಿಯನ್ನು ತೋರಿಸಿದರೆ ಹೊಡೆದು, ತಿವಿದು, ಕೊಲ್ಲುವಷ್ಟು ಕೋಪ ಬರುತ್ತದೆ. ೩೧. ಹಾಗೆಯೇ ಪಾಪವಿಲ್ಲದವನಿಗೆ ಸದ್ಧರ್ಮ ರುಚಿಯಾಗುವುದು; ಮಹಾಪಾತಕಿಗೆ ಕಹಿಯಾಗಿರುವುದು. ೩೨. ಚಿನ್ನದ ಅದಿರನ್ನು ಚೆನ್ನಾಗಿ ತೊಳೆದು ಒಂದು ರಾಸಿ ಮಣ್ಣಿನಲ್ಲಿ, ಬಿದ್ದಿರುವ ಚಿನ್ನವನ್ನು ಕಾಣುವ ಹಾಗೆ ಬುದ್ಧಿವಂತರು ದಡ್ಡರಾಗದೆ (ಮೋಸಹೋಗದೆ) ಆಪ್ತರನ್ನು ಕಂಡು ತತ್ತ್ವವನ್ನೂ ಧರ್ಮವನ್ನೂ ಮನಸ್ಸಿಗೆ ಒಪ್ಪುವಂತೆ ಚರ್ಚಿಸಿ ತಿಳಿದು ನಂಬಿಕೆಯಿಂದ ಆಚರಿಸಬೇಕು. ೩೩. ದಯೆಯೇ ಮೂಲಾಧಾರವಾಗಿರುವ ಒಳ್ಳೆಯ

ಗದ್ಯ॥ ದಯಾಮೂಲಮಾದ ಸದ್ಧರ್ಮದೊಳಾದ ನೆಗೞ್ತೆಗಃಱದಲಸರಪ್ಪವರ್ ತಮ್ಮ ಮೆಯ್ಯ ಸುಖಕ್ಕೆ ಪಾಪಹೇತುಗಳಪ್ಪ ಕುಧರ್ಮಮಂ ಪೇೞ್ದು ಪೆಱರಂ ಮರುಳ್ಮಾಡಿ ಧರ್ಮ ಮೆಂದು ನೆಗೞಿಸುವರದು ಕಾರಣಮಾರಯ್ದು ನೋಡವೇೞ್ಕುಂ ೩೪

ಪಿತ್ತಳೆಯ ತೊಡವು ಪೊಲೆಯ
ರ್ಗುತ್ತಮಮೆನಿಸಿರ್ದ ಪೊನ್ನತೊಡವೆನಿಸುವವೋಲ್
ಚಿತ್ತದೊಳುತ್ಸಾಹದಿನ
ತ್ಯುತ್ತಮಮಾಗಿರ್ಕುಮಘಯುತರ್ಗಂ ಪಾಪಂ ೩೫

ಗದ್ಯ॥ ಅದಱಿಂ ಪಾಪಹೇತುವಪ್ಪ ದುರ್ಮಾರ್ಗಮಂ ಪಿಡಿಯಲ್ಕುವಿಡಿಯದೆ ಪರದರೆಂತು ಕಿಸುಗೆಟ್ಟುಮಂ ಕಳ್ಳಚ್ಚುಮಂ ಕಂಚುಮಂ ಮಾಣ್ದೊರೆಗಂ ತೂಕಕ್ಕಂ ಬರ್ಪ ಪೊನ್ನಂ ಕೊಳ್ವರಂತೆ ಸುಖಹೇತುವಪ್ಪ ಸನ್ಮಾರ್ಗದೊಳ್ನೆಗೞ್ವುದು ೩೬

ನಡೆವೆಡೆಯೊಳ್ಪಡುವೆಡೆಯೊಳ್
ಮಡಿಸೀರೆಯನೆಂತು ದೂಳಿ ದಿನದಿನದೊಳ್ ನೋ
ಟ್ಪೊಡೆ ಪೊರ್ದುಗಂತೆ ಚಪಳರ
ನಡೆನುಡಿಯೆಂಬಿವಱೊಳೊಂದುಗುಂ ಪಾಪಚಯಂ ೩೭

ಧರ್ಮದ ಪಾಲನೆಗೆ ಶಕ್ತರಾಗದೆ ಸೋಮಾರಿಗಳಾದವರು ತಮ್ಮ ದೇಹಸುಖಕ್ಕೋಸ್ಕರ ಪಾಪಕ್ಕೆ ನಿಮಿತ್ತಗಳಾಗುವಂಥ ಕೆಟ್ಟ ಧರ್ಮವನ್ನು ಹೇಳಿ ಇತರರನ್ನು ಮೋಸಪಡಿಸಿ ಅದೇ ಧರ್ಮವೆಂದು ಅವರಿಂದ ಮಾಡಿಸುವರು. ಆದ್ದರಿಂದ (ಧರ್ಮವನ್ನು) ಚೆನ್ನಾಗಿ ವಿಚಾರ ಮಾಡಿ ನೋಡಬೇಕು. ೩೪. ಹಿತ್ತಾಳೆಯ ಒಡವೆಗಳು ಹೊಲೆಯರಿಗೆ ಉತ್ತಮವಾದ ಹೊನ್ನಿನ ಒಡವೆಯೆಂದೆನ್ನಿಸುವ ಹಾಗೆ ಪಾಪಚಿತ್ತರಿಗೆ ಮನದ ಉತ್ಸಾಹದಿಂದ ಪಾಪಕಾರ್ಯ ಅತ್ಯುತ್ತಮವೆಂದು ತೋರುತ್ತದೆ. ಆದ್ದರಿಂದ ಪಾಪಕ್ಕೆ ಕಾರಣವಾಗುವಂಥ ದುರ್ಮಾರ್ಗವನ್ನು ಬಲವಾಗಿ ಪಟ್ಟುಹಿಡಿಯದೆ ವ್ಯಾಪಾರಿಗಳು ಹೇಗೆ ತಾಮ್ರ ಮಿಶ್ರವಾದ ಲೋಹವನ್ನೂ ಕಳ್ಳಮುದ್ರೆ ಹೊಂದಿದ ಖೋಟಾನಾಣ್ಯಗಳನ್ನೂ ಕಂಚನ್ನು ಬಿಟ್ಟು ಒರೆಹಚ್ಚುವುದಕ್ಕೂ ತೂಕ ಮಾಡುವುದಕ್ಕೂ ಸಾಧ್ಯವಾದ ಚಿನ್ನವನ್ನೇ ಕೊಳ್ಳುವರೋ ಹಾಗೆಯೇ ಸುಖವುಂಟುಮಾಡುವ ಸನ್ಮಾರ್ಗದಲ್ಲಿಯೇ ನಡೆದುಕೊಳ್ಳುವುದು. ಓಡಾಡುವಾಗ, ಮಲಗುವ ಸ್ಥಳದಲ್ಲಿ, ಮಡಿಯಾದ ಬಟ್ಟೆಗೆ ಹೇಗೆ ದಿನದಿನವೂ ದೂಳು ಹತ್ತುವುದೋ ಹಾಗೆಯೇ ಚಪಲಚಿತ್ತರ ನಡೆನುಡಿಗಳಿಂದ ಪಾಪಸಮೂಹವುಂಟಾಗುತ್ತಿರುತ್ತದೆ. ೩೭. ಹೊದ್ದುಕೊಂಡವನಿಗೆ ತಿಳಿಯದ ಹಾಗೆಯೇ ಮಡಿಬಟ್ಟೆ ಧೂಳಿ

ಗದ್ಯ॥ ಪೊದೆದಾತನಱಿಯದಂತೆ ಪೊದೆದ ಮಡಿ ಬಟ್ಟೆಯುಂ ಧೂಳಿಯೊಳ್ ಮಾಸಿಯಗಸನ ಬಾರಿಯೊಳ್ಬಿದ್ದು ನಿಗ್ರಹಕ್ಕೊಳಗಪ್ಪಂತೆ ಚಪಳರ್ ಜಿನತಪಸ್ವಿಗಳಂ ಜಿನತತ್ತ್ವಮನಿಂತುಟಿಂತು ಟೆಂದು ಬಾಯ್ಗೆವಂದಂತಣಕಚಣಕಂಗಡೆದು ನಗೆನಗೆಯೊಳ್ ಪಾಪಮಂ ಪೊರ್ದಿ ನಾರಕಬಾಧೆ ಗೊಳಗಾಗಿ ಪಲಕಾಲಂ ದುಃಖಂಬಡುವರ್ ೩೮

ಕಿಸುವಂ ಮೂಲಿಕೆಯುಂ ಪೊ
ರ್ದಿಸೆ ನಗೆಯೊಳೆ ಹೇಮಮಪ್ಪತೆಱದಿಂದಂ ಸಂ
ಕಿಸದೆ ವರಧರ್ಮದೊಳ್ ಕೂ
ರ್ತೆಸಗುವ ನರನುಂ ವಿಶೇಷಸುಖಿಯಾಗಿರ್ಕುಂ ೩೯

ಗದ್ಯ॥ ಬಾಳೆ ಪಣ್ಗನಿದಪ್ಪುದೆಂತು ಸಹಜಂ ಸಕ್ಕರೆಗೆ ಸಿಹಿಯಾಗಿರ್ಪುದೆಂತು ಸಹಜಂ ಮಾವಿನ ಪಣ್ಗೆ ರುಚಿಯಪ್ಪುದೆಂತು ಸಹಜಂ ಅಂತೆ ಚಕ್ರವರ್ತಿಯ ದೇವೇಂದ್ರನ ಸರ್ವಜ್ಞನ ಪದವಿಯ ನೆಯ್ದುವ ಪುರುಷಂಗೆ ಸದ್ಧರ್ಮದೊಳಾದ ನಿರ್ದೋಷಿಯಪ್ಪ ದೇವನೊಳಾದ ದಿವ್ಯಮುನಿ ಗಳೊಳಾದ ಪ್ರೀತಿಯುಂ ಕೊಂಡಾಟಮುಂ ಭಕ್ತಿಯುಂ ಸಹಜಮಾಗಿರ್ಕುಂ ; ಬೇವಿಂಗೆ ಕೈಪೆ ಯೆಂತು ಸಹಜಂ ಅಣಲೆಗೆ ತೊಗರೆಂತು ಸಹಜಂ ಸುಂಟಿಗೆ ಕಾರಮೆಂತು ಸಹಜಂ ತಾನಂತೆ ಬಡತನದ ಪೀಡೆಯುಂ ಸದ್ಧರ್ಮದೊಳಾದ ಮುನಿಸುಂ ದೂಷಣಮುಂ ಔದಾಸೀನ್ಯಮುಂ ನರಕ ದುಃಖದೆಡೆಗೆ ಸಲ್ವ ಪುರುಷಂಗೆ ಸಹಜಮಾಗಿರ್ಕುಂ ೪೦

ನಿಂದ ಮಾಸಿ ಅಗಸನ ಕೈಗೆ ಸಿಕ್ಕಿ ಕಷ್ಟಕ್ಕೆ ಒಳಗಾಗುವ ಹಾಗೆ ಚಪಲರು ಜೈನ ತಪಸ್ವಿ ಗಳನ್ನೂ, ಜಿನತತ್ತ್ವವನ್ನೂ 'ಹೀಗೆ, ಹಾಗೆ' ಎಂದು ಬಾಯಿಗೆ ಬಂದ ಹಾಗೆ ಕುಚೇಷ್ಟೆ ಮಾಡಿ ನಗುನಗುತ್ತ ಪಾಪವನ್ನು ಗಳಿಸಿಕೊಂಡು ನರಕ ಬಾಧೆಗೊಳಗಾಗಿ ಹಲವು ಕಾಲ ದುಃಖಪಡುತ್ತಾರೆ. ೩೮. ತಾಮ್ರವನ್ನೂ ಮೂಲಿಕೆಯನ್ನೂ ನಗುತ್ತಲೇ ಹೊಂದಿಸಿ ದರೂ ಬಂಗಾರವಾಗುವ ಹಾಗೆ ಮನುಷ್ಯನು ಅನುಮಾನಪಡದೆ ಶ್ರೇಷ್ಠವಾದ ಧರ್ಮದಲ್ಲಿ ಪ್ರೇಮದಿಂದ ನಡೆದುಕೊಂಡರೆ ಬಹಳ ಸುಖಿಯಾಗಿರುವನು. ೩೯. ಬಾಳೆಹಣ್ಣಿಗೆ ಸವಿ ಯಾಗಿರುವುದು ಹೇಗೆ ಸಹಜವೋ ಸಿಹಿಯಾಗಿರುವುದು ಸಕ್ಕರೆಗೆ ಹೇಗೆ ಸಹಜವೋ, ರುಚಿಯೆನಿಸುವುದು ಮಾವಿನಹಣ್ಣಿಗೆ ಹೇಗೆ ಸ್ವಭಾವವೋ, ಹಾಗೆಯೇ ಚಕ್ರವರ್ತಿ, ದೇವೇಂದ್ರ, ಅಥವಾ ಸರ್ವಜ್ಞನ ಪದವಿಯನ್ನು ಹೊಂದುವ ಮನುಷ್ಯನಿಗೆ ಸದ್ಧರ್ಮದ ವಿಷಯಕ್ಕೂ ನಿರ್ದೋಷಿಯಾದ ದೇವನ ವಿಷಯಕ್ಕೂ ದಿವ್ಯಮುನಿಗಳ ವಿಷಯಕ್ಕೂ ಪ್ರೀತಿಯಿರುವುದು, ಹೊಗಳಿಕೆ, ಭಕ್ತಿ–ಎಲ್ಲವೂ ಸಹಜವಾಗಿರುತ್ತದೆ. ಬೇವಿಗೆ ಕಹಿ ಹೇಗೆ ಸಹಜ, ಅಳಲೆಗೆ ಒಗರು ಹೇಗೆ ಸಹಜ, ಶುಂಠಿಗೆ ಕಾರ ಹೇಗೆ ಸಹಜ, ಹಾಗೆ ಬಡತನದ ಕಾಟವೂ ಸದ್ಧರ್ಮದ ಮೇಲೆ ಉಂಟಾದ ಸಿಟ್ಟೂ ದೂಷಣೆಯೂ ಅಸಡ್ಡೆಯೂ ನರಕ ದುಃಖದ ಕಡೆಗೆ ಹೋಗುವ ಮನುಷ್ಯನಿಗೆ ಸಹಜವಾಗಿರುತ್ತದೆ. ೪೦. ಬೋಳಿಸಿದ

ಬೋಳಾದ ತಲೆಯ ರೋಮಂ
ಮೇಲೆನಿಸದ ಬೆರಲ ಮುಱಿದ ಸೆಳ್ಳುಗುರುಂ ಸ
ಲ್ಲೀಲೆಯೊಳೆ ಬಳೆವ ತೆಱದಿಂ
ಕೋಲಾಹಲಮಿಲ್ಲದೊದವುತಿರ್ಕುಂ ಪಾಪಂ ೪೧

ಗದ್ಯ॥ ಬೋಳಮಂಡೆಯ ರೋಮಮುಂ ಮುಱಿದುಗುರುಂ ಮೆಲ್ಲನಾರುಮಱಿಯದಂತೆ ದಿವಸಕ್ರಮದಿಂ ಬಳೆದು ತುಱುಂಬುಂ ಸೆಳ್ಳುಗುರುಮಪ್ಪಂತೆ ದುರ್ಜನರುಂ ಪಾಪಿಗಳುಂ ಧರ್ಮದ್ರೋಹಿಗಳುಂ ತಮ್ಮನಱಿಯಲೀಯದೆ ದಿವಸಕ್ರಮದಿಂ ಬಳೆದ ಪಾಪದಿಂದಂ ಮಹಾನರಕದೊಳ್ಬಿರ್ದು ಬಹುದುಃಖಮನುಣ್ಬರ್ ೪೨

ಸಸಿಯುಂ ಕೌಂಗಿನ ತೆಂಗಿನ
ಸಸಿಯುಂ ನೆಱೆ ಬೆಳೆದು ಮೇಲೆ ಫಲಮಂ ಕುಡುವಂ
ತೆ ಸಮಂತು ಧರ್ಮಮುಂ ಸಂ
ತಸಮಂ ಮೇಲೆಯ್ದೆಮಾಡುಗುಂ ಕ್ರಮದಿಂದಂ ೪೩

ಗದ್ಯ॥ ದಿನದಿನಕ್ಕಿನಿತಿನಿತು ಬೆಳೆದುದೆಂದೊರ್ವರ್ಗಮಱಿಯಬಾರದುದಾಗಿಯುಂ ಬೆಳೆದು ಫಲಮಂ ಕೊಡುವ ಕಯ್ಯ ಕೌಂಗಿನ ತೆಂಗಿನ ತೋಂಟದಂತೆ ದಾನಪೂಜೆಯೊಳ್ ಕೂಡಿದ ಸದ್ಧರ್ಮಂ ಪ್ರತ್ಯಕ್ಷಫಲಮಂ ತೋಱದುದಾಗಿಯುಂ ನಿಂದು ಮೇಲೆ ಮೇಲೆ ಫಲಮಂ ಕುಡುಗುಂ ೪೪

ತಲೆಯ ಕೂದಲೂ ಬೆರಳಿನ ಮುರಿದ ಉಗುರೂ ಸುಲಭವಾಗಿಯೇ ಮತ್ತೆ ಬೆಳೆಯುವ ಹಾಗೆ ಪಾಪ ಹೆಚ್ಚುತ್ತ ಇರುತ್ತದೆ ೪೧. ಬೋಳುತಲೆಯ ಕೂದಲೂ ಮುರಿದ ಉಗುರೂ ಯಾರಿಗೂ ತಿಳಿಯದಂತೆ ದಿನದಿನಕ್ಕೆ ಬೆಳೆದು ತುರುಬೂ ಸೆಳ್ಳುಗುರೂ ಆಗುವ ಹಾಗೆ ದುರ್ಜನರೂ ಪಾಪಿಗಳೂ ಧರ್ಮದ್ರೋಹಿಗಳೂ ತಮಗೆ ತಿಳಿಯದಂತೆ ಕ್ರಮ ಕ್ರಮವಾಗಿ ಬೆಳೆದ ಪಾಪದಿಂದ ಮಹಾನರಕದಲ್ಲಿ ಬಿದ್ದು ಬಹಳ ದುಃಖವನ್ನು ಅನುಭವಿಸುತ್ತಾರೆ. ೪೨. ಅಡಿಕೆ ತೆಂಗುಗಳ ಸಸಿಗಳೂ ಆಕಾಶದಲ್ಲಿನ ಚಂದ್ರನೂ ಬೆಳೆದು ದೊಡ್ಡವಾಗಿ ಆಮೇಲೆ ಫಲವನ್ನು ಕೊಡುವ ಹಾಗೆ ಧರ್ಮವೂ ಕ್ರಮಪ್ರಕಾರ ಬೆಳೆದು ಹೆಚ್ಚಾದ ಸಂತೋಷವನ್ನುಂಟುಮಾಡುತ್ತದೆ ೪೩. ದಿನದಿನವೂ ಇಷ್ಟು ಬೆಳೆಯಿತೆಂದು ಒಬ್ಬರಿಗೂ ತಿಳಿಯಲು ಬರುವುದಿಲ್ಲವಾದರೂ ಬೆಳೆದು ಫಲಕೊಡುವ ಬತ್ತ, ಅಡಿಕೆ, ತೆಂಗಿನ, ತೋಟದಂತೆ ದಾನ ಮತ್ತು ಪೂಜೆಗಳಿಂದ ಕೂಡಿದ ಸದ್ಧರ್ಮವು ಪ್ರತ್ಯಕ್ಷ ಫಲವನ್ನು ತೋರಿಸದಿದ್ದರೂ ಆಮೇಲೆ ಹೆಚ್ಚಿನ ಫಲವನ್ನು ಕೊಡುತ್ತದೆ. ೪೪. ಜೀವಕ್ಕೆ ದುಃಖ

ಕೂರ್ಮೆಯೊಳಲಸದೆ ಜೀವ
ಕ್ಕಾರ್ಮಂ ಪೆಱತಿಲ್ಲ ದುಃಖದಿಂದೆತ್ತುವ ಸ
ದ್ಧರ್ಮಮೆ ಹಿತಮೆಂದೇಳಿಸ
ದೊರ್ಮೊದಲಱಿದಾತ್ಮ ಧರ್ಮಮಂ ಪಿಡಿಗೆ ಬುಧಂ ೪೫

ಗದ್ಯ॥ ಆ ಧರ್ಮದೊಳ್ ನೆಗಟ್ಟ ಭವ್ಯನೆಂತಪ್ಪನೆಂದೊಡೆ ಕುದುರೆಯಂತೆ ಕೀೞಂ ಕೈಕೊಳ್ಳದೆ ಗ್ರಹದಂತೆ ಮಂತ್ರಕ್ಕೆಱಗದೆ ಕಟ್ಟರಸನಂತೆ ತಂತ್ರಕ್ಕಾಸೆಗೆಯ್ಯದೆ ಮಾಸದಂತೆ ಪಕ್ಷಮಿಲ್ಲದೆ ದೀಪವರ್ತಿಯಂತೆ ಪೊಂಗೆಱಗದೆ ಅೞಿಚಾಗಿಯಂತೆ ಪೊಗೞ್ತೆಗಾಸೆಗೆಯ್ಯದೆ ಬೆಸದವರಂತೆ ಮುಯ್ಯಂ ನೋಡದೆ ತೇರಂಟೆಯಂತೆ ಕುಮತಕ್ಕೆ ಸೂಱುಳದೆ ಒಸಲಿಯಂತೆ ಪೊಲ್ಲಮೆಯುಂ ಪಿಡಿಯದೆ ತೊಱೆಯಂತೊರ್ಮೆ ಪೆರ್ಚಿ ಮತ್ತೊರ್ಮೆ ಕುಂದದೆ ಚಂದ್ರನಂತೆ ಕಳಂಕನಾಗದೆ ಮಕ್ಕಳಂತೆ ಕಂಡ ಕಂಡವಕ್ಕೆಱಗದೆ ಗಿಳಿಯಂತೆ ಪೆಱರ ಶಿಕ್ಷೆಯಂ ಕಲಿಯದೆ ಕೋಗಿಲೆಯಂತೊರ್ಮೆ ನುಡಿದೊರ್ಮೆ ಮಾಣದೆ ಬಹುರೂಪಿಯಂತೆ ಪೊತ್ತಿಂಗೊಂದಂದಮಾಗದೆ ಕಬ್ಬಿನ ತೋಂಟದಂತೆ ನಿಸ್ಸಾರನಾಗದೆ ಪಾದರಿಗನಂತೆ ಪಲರಮುಂದೆ ನಾಣ್ಚದೆ ಲೋಭಿಯಪ್ಪರಸಿನಂತವಿಚಾರಿಯಾಗದೆ ಶ್ರುತಮಿಲ್ಲದ ಲಿಂಗಿಯಂತೆ ಮೂರ್ಖನಾಗದೆ ದೂರವಂದೆಯಂತೆ ತಲ್ಲಣಿಸದೆ ತುಂಬಿಯಂತೆ ರಸಜ್ಞನುಂ ಭಂಡಾರದ

ದಿಂದ ಎತ್ತಿ ರಕ್ಷಿಸುವ ಒಳ್ಳೆಯ ಧರ್ಮವಲ್ಲದೆ ಬೇರೆ ಆಶ್ರಯವಿಲ್ಲ, ಅದೇ ಹಿತವೆಂಬು ದನ್ನು ಅರಿತು ಪ್ರೀತಿಯಿಂದ, ಸೋಮಾರಿತನ ಮಾಡದೆ ವಿವೇಕಿಯು ಸದ್ಧರ್ಮವನ್ನು ಬಲವಾಗಿ ಹಿಡಿಯಲಿ. ೪೫. ಆ ಧರ್ಮದಲ್ಲಿ ಪ್ರಸಿದ್ಧನಾದ ಭವ್ಯನು ಎಂಥವನಾಗುವ ನೆಂದರೆ, ಕುದುರೆಯ ಹಾಗೆ ಕೀಳ (ಕುದುರೆಬಾಯಿಗಿಡುವ ಕಬ್ಬಿಣ) ನ್ನು ಅಂಗೀಕರಿಸದೆ ಪಿಶಾಚದಂತೆ ಮಂತ್ರಕ್ಕೆ ಬಗ್ಗದೆ, ಪ್ರಬಲರಾಜನಂತೆ ಸೈನ್ಯಕ್ಕೆ ಆಸೆಪಡದೆ, ಮಾಸದಂತೆ ಪಕ್ಷಪಾತವಿಲ್ಲ (ತಿಂಗಳಲ್ಲಿ ಎರಡು ಪಕ್ಷಗಳು) ದೆ, ದೀಪದ ಬತ್ತಿಯಂತೆ ಹೊನ್ನಿಗೆ ಬಾಗದೆ (ನಿಕ್ಷೇಪವಿರುವ ಸ್ಥಳದ ಮೇಲೆ ದೀಪ ಕೆಳಮುಖನಾಗಿ ಉರಿಯುತ್ತದೆ) ನೀಚನಾದ ತ್ಯಾಗಿಯಂತೆ ಹೊಗಳಿಕೆಗೆ ಆಸೆಪಡದೆ ಬೋಯಿಗಳಂತೆ ಪಕ್ಕದವರ ಹೆಗಲನ್ನು ನೋಡದೆ ತೇರಂಟೆ (?) ಯಂತೆ ಕೆಟ್ಟ ಧರ್ಮಕ್ಕೆ ಶಪಥ ಮಾಡದೆ, ಜರಡಿಯಂತೆ ಕೆಟ್ಟುದನ್ನು ಹಿಡಿ ಯದೆ, ನದಿಯಂತೆ ಒಂದು ಸಲ ಹೆಚ್ಚಿ ಇನ್ನೊಂದು ಸಲ ತಗ್ಗದೆ, ಚಂದ್ರನ ಹಾಗೆ ಕಳಂಕ ಹೊಂದದೆ ಮಕ್ಕಳ ಹಾಗೆ ಎಲ್ಲಕ್ಕೂ ಆಸೆಪಡದೆ, ಗಿಳಿಯಹಾಗೆ ಇತರರ ಶಿಕ್ಷಣವನ್ನೇ ಕಲಿ ಯದೆ ಕೋಗಿಲೆಯಂತೆ ಒಂದು ಸಲ ಮಾತನಾಡಿ ಇನ್ನೊಮ್ಮೆ ಮೌನವಹಿಸದೆ (ಊಸು ರುಳ್ಳಿ) ಬಹುರೂಪಿಯು ಹಾಗೆ ಒಂದೊಂದು ಹೊತ್ತಿನಲ್ಲಿ ಒಂದೊಂದು ರೂಪವಾಗದೆ, ಕಬ್ಬಿನ ತೋಟದಂತೆ ನಿಸ್ಸಾರನಾಗದೆ (ಸಾರ–ತೊಗಟೆ) ಹಾದರದವನಂತೆ ಹಲವರ ಮುಂದೆ ಅವಮಾನ ಪಡದೆ, ಜಿಪುಣನಾದ ರಾಜನಂತೆ ವಿಚಾರಹೀನನಾಗದೆ, ತಿಳಿವಳಿಕೆಯಿಲ್ಲದ (ಶಾಸ್ತ್ರವರಿಯದ) ಭಕ್ತನಂತೆ ಮೂರ್ಖನಾಗದೆ, ದೂರಕ್ಕೆ ಹೆದರುವವನಂತೆ ತಲ್ಲಣಿಸದೆ (ಭಯಪಡದೆ) ದುಂಬಿಯು ಹಾಗೆ ರಸಜ್ಞನೂ ಭಂಡಾರದಲ್ಲಿನ ಚಿನ್ನದಂತೆ ಶುದ್ಧನೂ,

ಪೊನ್ನಂತೆ ಶುದ್ಧನುಂ ಬೆಟ್ಟದಂತೆ ಸ್ಥಿರನುಂ ಮದದಾನೆಯಂತೆ ಮಹಾದಾನಿಯುಂ ಸ್ಫಟಿಕದಂತೆ ನಿರ್ಮಳನುಂ ಬಿಲ್ಲಂತೆ ಗುಣಧರನುಂ ಸುಕವಿಯಂತೆ ಕುಮಾರ್ಗದೂರನುಂ ಮಾಣಿಕಭಟ್ಟನಂತೆ ಪರೀಕ್ಷಕನುಂ ಮಹಾಕ್ಷತ್ರಿಯನಂತೆ ವಿಚಾರಪರನುಂ ದೇವರಂತೆ ಸುಮನನುಂ ಪಾರ್ಥನಂತೆ ಧರ್ಮಪ್ರಿಯನುಂ ಸಂಯಮಿಯಂತೆ ದಯಾಪರನುಂ ಕವಿಯಂತೆ ಯತಿಪ್ರಿಯನುಂ ಸಾಗರದಂತೆ ನಿಸ್ಸಾರದೂರನುಂ ನಿಚ್ಚಗಲಿಯಂತೆ ಧರ್ಮದೊಳ್ ನಿಶ್ಶಂಕನುಮಪ್ಪುದು. ೪೭

ಇವರಿಂ ಸ್ತ್ರೀವಶ್ಯಮಕ್ಕಿನ್ನಿವರಿನೆನಗೆ ಮಂತ್ರೋಪದೇಶಂಗಳಕ್ಕಿ
ನ್ನಿವರಿಂ ದಿವ್ಯಂಫಲಿಕ್ಕಿನ್ನಿವರಿನೆನಗೆ ದಿವ್ಯೋಪದೇಶಂಗಳಕ್ಕಿ
ನ್ನಿವರಿಂದೀಕಾರ್ಯಮಕ್ಕಿನ್ನಿವರಿನೆನಗೆ ಪೊನ್ನಕ್ಕುಮೆಂದಟ್ಕಱಿಂ ಮಾ
ಡುವ ದಾನಂ ದಾನಮಲ್ಲಂತದು ಬಗೆವೊಡೆ ಮುಯ್ಯಂಧುಗಳ್ಗೀವುದಕ್ಕುಂ ೪೭

ಕೂಟಿರ್ದಂತಱಗಂಜಿಯುಂ ಕುಡಿವ ಪೊನ್ನಿರ್ದಂತೆ ಕರ್ಗಲ್ಲನ
ತ್ಯಾಳಾಪಂ ಬಗೆಗೆಟ್ಟುಕೊಳ್ವ ಧರಣೀಸಾಮ್ರಾಜ್ಯಮಿರ್ದಂತೆ ಬಂ
ದಾಳಾಗಿರ್ಪ ವಿಭೂತಿಯುಂ ಬಿಸುಟು ಭೈಕ್ಷಂಗೊಂಡು ತಾನುಣ್ಬ ಬೆ
ಳ್ಳಾಳಂ ಪೋಲನೆ ಮಂತ್ರವೈದ್ಯದಳಿಪಿಂ ಕೇಡೆಯ್ದಪಂ ಧರ್ಮಮಂ ೪೮

ಬೆಟ್ಟದಂತೆ ಅಚಂಚಲನೂ ಮದ್ದಾನೆಯಂತೆ ಮಹಾದಾನಿ (ಮದೋದಕಕ್ಕೆ ದಾನವೆಂದೂ ಹೆಸರು) ಯೂ ಸ್ಫಟಿಕದ ಹಾಗೆ ನಿರ್ಮಲನೂ ಬಿಲ್ಲಿನಂತೆ ಗುಣ (ಬಿಲ್ಲಿನ ಹಗ್ಗಕ್ಕೆ ಗುಣ ವೆಂದು ಹೆಸರು) ವುಳ್ಳವನೂ ಒಳ್ಳೆಯ ಕವಿಯಂತೆ ಕೆಟ್ಟಮಾರ್ಗದಿಂದ ದೂರನೂ ಮಾಣಿಕ್ಯಭಟ್ಟನ ಹಾಗೆ ಪರೀಕ್ಷೆ ಮಾಡುವವನೂ ಮಹಾಕ್ಷತ್ರಿಯನಂತೆ ವಿಚಾರಾ ಸಕ್ತನೂ, ದೇವರುಗಳಂತೆ ಸುಮನಸ್ಕನೂ (ಸುಮನ–ದೇವ) ಪಾರ್ಥನ ಹಾಗೆ ಧರ್ಮ (ಧರ್ಮರಾಯ) ದಲ್ಲಿ ಪ್ರೀತಿಯುಳ್ಳವನೂ, ತಪಸ್ವಿಯಂತೆ ದಯಾಪರನೂ ಕವಿಯಂತೆ ಯತಿ (ಪದ್ಯದಲ್ಲಿ ನಿಲ್ಲಿಸುವ ಸ್ಥಳ) ಪ್ರಿಯನೂ ಸಾಗರದಂತೆ ನಿಸ್ಸಾರ(?) ದೂರನೂ ನಿತ್ಯ ಶೂರನಂತೆ ಧರ್ಮದಲ್ಲಿ ಶಂಕೆಯಿಲ್ಲದವನೂ ಆ ತಕ್ಕದ್ದು. ೪೭. ಇವರಿಂದ ನನಗೆ ಸ್ತ್ರೀ ವಶಳಾಗಿ, ಇವರಿಂದ ನನಗೆ ಮಂತ್ರೋಪದೇಶವಾಗಲಿ, ಇನ್ನು ಇವರಿಂದ ನನಗೆ ದಿವ್ಯ (ಪರೀಕ್ಷೆ) ಫಲಿಸಲಿ, ಇವರಿಂದ ನನಗೆ ಚಿನ್ನ ಸಿಕ್ಕಲಿ, ಎಂದು ಆಸೆಯಿಂದ ಮಾಡುವ ದಾನ ದಾನವಲ್ಲ. ಹಾಗೆ ಯೋಚಿಸಿದರೆ ಅದು ನೆಂಟರಿಗೆ ಕೊಡುವ ಮುಯ್ಯಿಯಂತೆ ಆಗು ವುದು ೪೭. ಅನ್ನವಿದ್ದೂ ಆರೆಗಂಜಿಯನ್ನು ಕುಡಿಯುವ, ಹೊನ್ನು ಇದ್ದರೂ ಕಗ್ಗ ಲ್ಲನ್ನು ಬಹಳ ಚರ್ಚೆಯಿಂದ ಕೊಳ್ಳುವ, ಭೂಮಿಯ ಒಡೆತನವೇ ಇದ್ದರೂ ಬೇರೆ ಕಡೆ ಬಂದು ಆಳುಕೆಲಸಮಾಡುವ, ವೈಭವವನ್ನು ತ್ಯಜಿಸಿ ಭಿಕ್ಷೆಬೇಡಿ ಉಣ್ಣುವ, ಬೆಪ್ಪನನ್ನು ಹೋಲುತ್ತಾನೆ—ಮಂತ್ರದಿಂದ, ವೈದ್ಯದ ಆಸೆಯಿಂದ ಧರ್ಮಕ್ಕೆ ಕೇಡು ಮಾಡುವ ವನು. ೪೮. ಮಳೆ ಬಂದರೆ ಕೆರೆ ತೊರೆಗಳು ಸುಲಭವಾಗಿ ತುಂಬಿ ಕೋಡಿ ಹರಿಯುವ

ಮಱೆಯುಳ್ಳೊಡೆ ಕೆಱೆತೊಱೆಗ
ಳ್ವಿಳಾಸದಿಂ ತೀವಿ ಕೋಡಿವರಿವಂತವನೀ
ತಳದೊಳ್ ಪುಣ್ಯಂ ತನಗ
ಗ್ಗಳಮುಳ್ಳೊಡೆ ತನಗೆ ತಾನೆ ಬಾರದೆ ಸಿರಿಯುಂ ೪೯

ಗದ್ಯ॥ ಮತ್ತಂ ಕಾವಿಲ್ಲದೆ ಕೊಡೆವಿಡಿವೆನೆಂಬಂತೆ ಬಂದಿಗೆಯಿಲ್ಲದೆ ಸುರಗಿವಿಡಿವೆನೆಂಬಂತೆ ನಾಡುವಿಡಿಯದರಸುಗೆಯ್ವೆನೆಂಬಂತೆ ಮಾತಱಿಯದೆ ಬಿನ್ನಪಂಗೆಯ್ವೆನೆಂಬಂತೆ ಸುರಗಿಯಿಲ್ಲದೆ ಕಳ ನೇಱುವೆನೆಂಬಂತೆ ಮಡಕೆಯಿಲ್ಲದಡುವೆನೆಂಬಂತೆ ಸೂಳೆಯಿಲ್ಲದೆ ಬೋಜಂಗರಂ ಕರೆವೆನೆಂಬಂತೆ ಮುನ್ನಿನ ಭವದೊಳಾದ ಜಿನಪೂಜೆಯಿಂ ದಾನದಿಂ ವ್ರತದಿಂ ತಪದಿಂದಾದ ಪುಣ್ಯಮಿಲ್ಲದೆ ಸಿರಿ ಯುಮಂ ಪೊನ್ನುಮಂ ಸುಖಮುಮಂ ಆಯುಷ್ಯಮುಮಂ ಮಂತ್ರತಂತ್ರವೈದ್ಯಂಗಳಿಂ ಪಡೆವೆನೆಂದು ದೆಸೆಗಿಡಲ್ವೇಡ ಮಱುಗಿದೊಡಂ ಫಲಮಿಲ್ಲಂ ೫೦

ಆ ರಾಮಾಧೀಶರುಂ ಪಾಂಡವರಖಿಳಮಹೀವಲ್ಲಭರ್ ಕರ್ಮದಿಂ ಸಂ
ದಾರಣ್ಯಂಬೊಕ್ಕು ಕಾಂತಾಪರಿಭವದಟಲಿಂ ಬೆಂದು ನೊಂದಿರ್ದರಂತಾ
ಭೂರಾಮಾಧೀಶ್ವರರ್ಕೇಳಱಿಯರೆ ನಯದಿಂ ಮಂತ್ರಮಂ ವೈದ್ಯಮಂ ನೀ
ನೋರಂತೇಕಣ್ಣ ಬಾಳ್ವಾಸೆಯೊಳೆಱಗಿದಪೈ ಕರ್ಮದಿಂ ಬಲ್ಲಿತುಂಟೇ ೫೧

ಹಾಗೆ ಭೂಮಿಯಮೇಲೆ ಪುಣ್ಯವಿದ್ದರೆ ಐಶ್ವರ್ಯವು ತನಗೆ ತಾನೆ ಬರುವುದಿಲ್ಲವೆ? ೪೯. ಕೊಡೆಯನ್ನು ಕಾವಿಲ್ಲದೆ ಹಿಡಿಯುವೆನೆಂಬಂತೆ, ಬಿಂದಿಗೆಯಿಲ್ಲದೆ ಸುರಗಿ (ಕತ್ತಿ)ಯನ್ನು ಹಿಡಿಯುವೆನೆಂಬುತೆ, ದೇಶವಿಲ್ಲದೆ ರಾಜ್ಯವಾಳುವೆನೆಂಬ ಹಾಗೆ, ಮಾತೇ ತಿಳಿಯದೆ ಬಿನ್ನಹಮಾಡುವಂತೆ, ಕತ್ತಿಯಿಲ್ಲದೆ ಕಾಳಗಕ್ಕಿಳಿಯುವೆನೆಂಬ ಹಾಗೆ, ಮಡಕೆ (ಪಾತ್ರೆ) ಯಿಲ್ಲದೆ ಅಡಿಗೆ ಮಾಡುವೆನೆಂಬಂತೆ, ಸೂಳೆಯಿಲ್ಲದೆ ವಿಟರನ್ನು ಕರೆಯುವೆನೆಂಬ ಹಾಗೆ, ಹಿಂದಿನ ಜನ್ಮದಲ್ಲಿ ಸಂಪಾದಿಸಿದ–ಜಿನಪೂಜೆ, ದಾನ, ತಪಸ್ಸುಗಳಿಂದ ಆದ ಪುಣ್ಯವಿಲ್ಲದೆ ಐಶ್ವರ್ಯವನ್ನೂ ಧನವನ್ನೂ ಸುಖವನ್ನೂ ಪಡೆಯುವೆನೆಂದು ಬಗೆದು ದಿಕ್ಕೆಡಬೇಡ ; ಸಂಕಟಪಟ್ಟರೂ ಪ್ರಯೋಜನವಿಲ್ಲ ೫೦. ಶ್ರೀರಾಮನೂ ಪಾಂಡವರೂ ಸಮಸ್ತ ಭೂಮಂಡಲದ ಒಡೆಯರು. ಆದರೂ ಕರ್ಮವಶದಿಂದ ಅರಣ್ಯ ಸೇರಿ ಹೆಂಡತಿಯ ಅಪಮಾನದ ದುಃಖದಲ್ಲಿ ಬೆಂದು ನೊಂದರು. ಆ ರಾಜ್ಯಾಧಿಪತಿಗಳಿಗೆ ಮಂತ್ರ, ವೈದ್ಯ ಗಳು ತಿಳಿದಿರಲಿಲ್ಲವೆ ? ನೀನು ಬದುಕುವ ಆಸೆಯಿಂದ, ಅಣ್ಣ, ಏತಕ್ಕೆ ಸೋಲುವೆ ? ಕರ್ಮಕ್ಕಿಂತ ಬಲಿಷ್ಠವಾದದ್ದುಂಟೆ ? ೫೧. ಹಿಂದಿನಕಾಲದ ಸಗರ, ಭರತ, ಧ್ರುವ

ಆ ಸಗರೇಶನಾ ಭರತನಾ ದ್ರುಮಸೇನನುದಾರವೀರದಿಂ
ದೀಸಕಲೋರ್ವಿಯಂ ತನಗೆ ಮಾಡಿದ ಪೆಂಪಿನ ಚಕ್ರವರ್ತಿ ಶಾಂ
ತೀಶರಿವರ್ಗೆದಿವ್ಯಸುಖಮಾದುದು ಮುನ್ನಿನ ಪುಣ್ಯದೇಳ್ಗೆಯಿಂ
ಭಾಸುರ ಪುಣ್ಯಮಂ ನೆರಪೆ ಪುಣ್ಯಮೆ ತಾರದೆ ಸರ್ವಸೌಖ್ಯಮಂ ೫೨

ಗದ್ಯ॥ ಇಂತು ಮಂತ್ರೌಷಧಂಗಳಿಂ ಕಾವೊಡಮಾಯುಷ್ಯಮಿಲ್ಲದವರಂಗೆ ಸಫಲಮಾಗವಂತೆ ಮಂತ್ರದಿಂ ಗ್ರಹಂ ಪೋಪುದೆಂಬೀ ನುಡಿಯಂ ನಂಬದೆ ಪುಣ್ಯಮೊಂದೆ ಕಾರಣಂ ಪುಣ್ಯದಿಂ ಮಿಗಿಲಪ್ಪುದೊಂದುಮಿಲ್ಲೆಂದು ಶಾಶ್ವತಸುಖಮನೀವ ಸದ್ಧರ್ಮದೊಳ್ ಬುದ್ಧಿಯಂ ನಿಶ್ಚಯಂಗೆಯ್ದಿರ್ಪುದು ಮಣಿಮಂತ್ರೌಷಧಂಗಳೊಳಪ್ಪಾಶೆಯಂ ಬಿಡುವುದು ೫೩

ಏನಾನುಮನುದ್ದೇಶಿಸ
ದಾನಂದಂ ಬೆರಸು ಭಕ್ತಿಪೂರ್ವಕದಿಂದಂ
ತಾನೊಸೆದು ಮಾಳ್ಪ ದಾನಂ
ತಾನದು ಮುಂದಣ್ಗೆ ಕುಡುವುದಕ್ಷಯಸುಖಮಂ ೫೪

ಗದ್ಯ॥ ರಾಜ್ಯಕ್ಕೆ ಚತುರಂಗಮುಂ ಮಂತ್ರಕ್ಕೆ ಚತುರ್ವಿಧೋಪಾಯಮುಮೊಪ್ಪುವಂತಾ ದಾನಕ್ಕೆ ಶಾಸ್ತ್ರಾದಿ ದಾನಚತುಷ್ಟಯಮೊಪ್ಪುಗುಮಿಂತು ೫೫

ಸೇನರು, ವಿಶೇಷ ಪರಾಕ್ರಮದಿಂದ ಈ ಭೂಮಂಡಲವನ್ನೆಲ್ಲ ಗೆದ್ದ ಹೆಮ್ಮೆಯ ಚಕ್ರವರ್ತಿ ಶಾಂತೀಶರು, ಇವರಿಗೆಲ್ಲ ದಿವ್ಯಸುಖ ಲಭಿಸಿದ್ದು ಹಿಂದಿನ ಪುಣ್ಯದ ಹೆಚ್ಚಳದಿಂದಲೇ, ಆದ್ದರಿಂದ ಶ್ರೇಷ್ಠವಾದ ಪುಣ್ಯವನ್ನು ಕೂಡಿಟ್ಟರೆ ಅದೇ ಸರ್ವಸೌಖ್ಯವನ್ನೂ ತರುತ್ತದೆ ೫೨. ಹೀಗೆ ಮಂತ್ರೌಷಧಗಳಿಂದ ಕಾಪಾಡುವುದಾದರೂ ಆಯುಸ್ಸಿಲ್ಲದವರಿಗೆ ಫಲಕಾರಿಯಾಗವು. ಹಾಗೆಯೇ ಮಂತ್ರದಿಂದ ಗ್ರಹ ಹೋಗುವುದೆಂಬ ಈ ಮಾತನ್ನು ನಂಬದೆ ಪುಣ್ಯವೊಂದೇ ಕಾರಣ. ಪುಣ್ಯಕ್ಕಿಂತ ಹೆಚ್ಚಿನದು ಒಂದೂ ಇಲ್ಲ. ಎಂದೂ ಶಾಶ್ವತ ಸುಖವನ್ನು ಕೊಡುವ ಸದ್ಧರ್ಮದಲ್ಲಿ ಬುದ್ಧಿಯನ್ನು ನಿಶ್ಚಲವಾಗಿರಿಸುವುದು; ಮಣಿಮಂತ್ರೌಷಧಗಳಲ್ಲಿನ ಆಸೆಯನ್ನು ಬಿಡುವುದು. ೫೩. ೫೪. ಏನನ್ನಾದರೂ ಉದ್ದೇಶ ಪಡದೆ ಆನಂದದಿಂದ, ಭಕ್ತಿಪೂರ್ವಕವಾಗಿ ತಾನು ಪ್ರೀತಿಯಿಂದ ಮಾಡುವ ದಾನವು ಮುಂದಕ್ಕೆ ಅಕ್ಷಯ ಸುಖವನ್ನು ಕೊಡುತ್ತದೆ, ರಾಜ್ಯಕ್ಕೆ ಚತುರಂಗ ಸೈನ್ಯವೂ ಮಂತ್ರಾಲೋಚನೆಗೆ ನಾಲ್ಕುವಿಧ (ಸಾಮ, ದಾನ, ಬೇಧ, ದಂಡ)ವಾದ ಉಪಾಯಗಳೂ ಶೋಭಿಸುವ ಹಾಗೆ ಆ ದಾನದಲ್ಲಿ ಶಾಸ್ತ್ರಾದಿದಾನಚತುಷ್ಟಯವು ಶೋಭಿಸುತ್ತದೆ. ೫೫. ಹೀಗೆ ಪರಮಾಗಮದಿಂದ ಹೊರತು ಪರಲೋಕ ಸದ್ಗತಿ

ಪರಮಾಗಮದಿಂದಲ್ಲದೆ
ಪರತ್ರೆಯಂ ಪಡೆವುಪಾಯಮಿಲ್ಲದಱಿಂದಂ
ಪರಶಾಸ್ತ್ರಂ ಮಿಗಿಲೆಂದಾ
ದರದಿಂ ಮಾಡುವುದು ಶಾಸ್ತ್ರದಾನಮನಳಿಪಿಂ ೪೬

ಶ್ರುತವನಿತೆಯು ಮುಕ್ತಿಶ್ರೀ
ಸತಿಯಲ್ಲಿಗೆ ಬೇಗಮುಯ್ವ ದೂದವಿಯೆಂಬೀ
ಮತಮನಱಿದೋತು ಮಾಡುವು
ದತಿಶಯದಿಂ ಶಾಸ್ತ್ರದಾನಮಂ ಪದಪಿಂದಂ ೪೭

ಶ್ರುತಭಾವನೆಯೊಳಮತಿಮನ
ದ್ಯುತಿ ನಿರ್ಮಲಮನದಿನಘಹರಂ ತದ್ದುರಿತ
ಕ್ಷತಿಯಿಂ ಕೈವಲ್ಯ ಶ್ರೀ
ಸತಿ ಸಾರ್ಗುಂ ಶಾಸ್ತ್ರದಾನದುನ್ನತಿ ಕಿಱಿದೇ ೪೮

ಏಗೆಟ್ಟಿತ್ತೆನ್ನದೆ ಮನ
ಮೋಗಡಿಸದೆ ತೀರದಾಱಿನೆಂದುಡುಗದೆ ನಿ
ರ್ವೇಗಂ ಚಿತ್ತದೊಳಣಮಿನಿ
ಸಾಗದೆ ತಾಂ ಮಾಟ್ಪುದನ್ನದಾನಮನಱಿವಿಂ ೪೯

ಯನ್ನು ಪಡೆಯುವ ದಾರಿಯಿಲ್ಲ. ಆದ್ದರಿಂದ ಶಾಸ್ತ್ರವೇ ಹೆಚ್ಚೆಂದು ಆದರದಿಂದ ಆಸೆಪಟ್ಟು ಶಾಸ್ತ್ರದಾನವನ್ನು ಮಾಡಬೇಕು. ೪೬. ಮೋಕ್ಷಲಕ್ಷ್ಮಿಯೆಂಬ ಹೆಂಗಸಿನ ಬಳಿಗೆ ಬೇಗನೆ ಕರೆದುಕೊಂಡು ಹೋಗುವ ದೂತಿ ಶಾಸ್ತ್ರ ವನಿತೆ. ಈ ತತ್ವವನ್ನು ತಿಳಿದು ಪ್ರೀತಿಯಿಂದ ಶಾಸ್ತ್ರದಾನವನ್ನು ಹೆಚ್ಚಾಗಿ ಮಾಡಬೇಕು. ೪೭. ಶಾಸ್ತ್ರ ಚಿಂತನೆಯಿಂದ ಬುದ್ಧಿ ಚುರುಕಾಗಿ ಮನಸ್ಸು ನಿರ್ಮಲವಾಗುತ್ತದೆ. ನಿರ್ಮಲ ಮನಸ್ಸಿನಿಂದ ಪಾಪ ಪರಿಹಾರ. ಆ ಪಾಪವಿನಾಶದಿಂದ ಕೈವಲ್ಯ (ಮೋಕ್ಷ) ಸತಿಯು ಸಮೀಪಿಸುತ್ತಾಳೆ. ಅಂಥ ಶಾಸ್ತ್ರದಾನದ ಹಿರಿಮೆ ಸ್ವಲ್ಪವೆ ? ೪೮. 'ಏನು ಕೆಟ್ಟಿತು' ಎಂದು ಅಸಡ್ಡೆ ಮಾಡದೆ, ಅಸಹ್ಯಪಡದೆ, 'ತೀರಿಕೆಯಿಲ್ಲ, ಆಗದು' ಎಂದು ಹೇಳಿ ಬಿಟ್ಟುಬಿಡದೆ ಮನಸ್ಸಿನಲ್ಲಿ ಸ್ವಲ್ಪವೂ ವೈರಾಗ್ಯ ತೋರದೆ ತಿಳಿವಳಿಕೆಯಿಂದ ಅನ್ನದಾನ ಮಾಡಬೇಕು. ೪೯. ಒಬ್ಬ ಮುನಿಗೆ ಬಹಳ ಆದರದಿಂದ ಅನ್ನವನ್ನು ಕೊಟ್ಟುದರ ಫಲವಾಗಿ

ಕರಮಾದರದಿಂದನ್ನಮ
ನುರುಮುನಿಯೊರ್ವಂಗೆಕೊಟ್ಟು ತತ್ಫಲದಿಂದಂ
ಶಿರಿಷೇಣನೃಪತಿ ಶಾಂತೀ
ಶ್ವರನಾದಂ ನೋೞ್ಪೊಡನ್ನದಾನಂ ಕಿಱಿದೇ ೬೦

ತನ್ನವರೆನ್ನವರೆನ್ನದೆ
ಸನ್ನುತಮತಿಯಾಗಿ ಸಕಲಜೀವಂಗಳುಮಂ
ತನ್ನಂ ರಕ್ಷಿಸುವಂತಿರೆ
ಬಿನ್ನಣವೇನಱಿದು ರಕ್ಷಿಪುದು ಸತ್ಪುರುಷಂ ೬೧

ನೆಗಟ್ದಭಯದಾನಫಲದಿಂ
ಮೃಗನಯನೆವಿದಗ್ಧೆಸಂದ ರುಕ್ಮಿಣಿ ಲೋಕಂ
ಪೊಗೞೆ ಕಡುಜಸಮನಾಂತಳ್
ಜಗತೀವಳಯಕ್ಕೆ ಸೌಖ್ಯಭಾಜನೆಯಾದಳ್ ೬೨

ಉಕ್ಕಿವಮಿಲ್ಲದೆ ಮನದೊಳ್
ಕೊಕ್ಕರಿಸದೆ ಪೆಱರ ಮೇಲೆ ನೆವಮಿಕ್ಕದೆ ಕೈ
ಮಿಕ್ಕೊಳ್ಪಿಂ ಚಾತುರ್ವ
ರ್ಣ್ಯಕ್ಕಂ ಮಾಡುವುದು ರುಜೆಗೆ ದಿವ್ಯೌಷಧಮಂ ೬೩

ಫಲಮಿನ್ನೌಷಧದಾನದ
ಫಲದಿಂ ತೀರ್ಥಕರನಪ್ಪಪುಣ್ಯಂ ಬೇಗಂ
ಫಲಿಯಿಸಿತು ವಿಷ್ಣುಗದಱಿಂ
ದಲಸದೆ ಭೈಷಜ್ಯದಾನಮಂ ಮಾಳ್ಕಱಿವಂ ೬೪

ಶಿರಿಷೇಣ ರಾಜನು ಶಾಂತೀಶ್ವರನಾದನು. ಆದ್ದರಿಂದ ಅನ್ನದಾನ ಸಣ್ಣದಲ್ಲ. ೬೦. ಇವರು ನನ್ನವರು, ಅವರು ಅನ್ಯರು, ಎಂದೆನ್ನದೆ ಸತ್ಪುರುಷನು ಸಕಲ ಪ್ರಾಣಿಗಳನ್ನೂ ತನ್ನನ್ನೇ ರಕ್ಷಿಸಿಕೊಳ್ಳುವ ಹಾಗೆ ವಿವೇಕದಿಂದ ಕಾಪಾಡಬೇಕು. ೬೧. ಶ್ರೇಷ್ಠವಾದ ಅಭಯದಾನದ ಫಲವಾಗಿ ಸುಂದರಿಯೂ ಪಂಡಿತೆಯೂ ಆದ ರುಕ್ಮಿಣಿ ಲೋಕವೇ ಹೊಗಳುವಂತೆ ಹೆಚ್ಚಿನ ಯಶಸ್ಸನ್ನು ಗಳಿಸಿದಳು. ಅವಳು ಜಗತ್ತಿಗೇ ಸೌಖ್ಯ ಪಾತ್ರಳಾದಳು. ೬೨ ಮೋಸವಿಲ್ಲದೆ, ಮನಸ್ಸಿನಲ್ಲಿ ಅಸಹ್ಯಪಡದೆ ಇತರರ ಮೇಲೆ ತಪ್ಪು ಹೊರಿಸದೆ ಹೆಚ್ಚಾದ ಒಳ್ಳೆಯ ತನದಿಂದ ನಾಲ್ಕು ವರ್ಣಗಳವರಿಗೂ ರೋಗಕ್ಕೆ ಔಷಧ ಮಾಡಬೇಕು. ೬೩ ಇನ್ನು ಔಷಧ ದಾನದ ಫಲ: ವಿಷ್ಣುವಿಗೆ ಔಷಧದಾನದ ಮಹಿಮೆಯಿಂದ ತೀರ್ಥಂಕರನಾಗುವ ಪುಣ್ಯ ಬೇಗನೆ ಫಲಿಸಿತು. ಆದ್ದರಿಂದ ಬೇಸರಗೊಳ್ಳದೆ ಭೈಷಜ್ಯ (ಚಿಕಿತ್ಸೆ) ದಾನವನ್ನು ತಿಳಿವಳಿಕೆಯುಳ್ಳವನು ಮಾಡಲಿ, ೬೪. ಅತ್ಯಂತ ಹೆಚ್ಚಿನ

ಪರಮಾಯುಂ ಶ್ರೀಯ ಪೆಂಪುಂ ವನಿತೆಯರೊಲವುಂ ಕೀರ್ತಿಯುಂ ಧೈರ್ಯಮುಂ ಸುಂ
ದರರೂಪುಂ ವೀರಮುಂ ಭೋಗಮುಮೆಸೆವ ಮಹಾವೀರ್ಯಮುಂ ಚಾಗಮುಂ ವಿ
ಸ್ತರದಿಂ ಸದ್ಬುದ್ಧಿಯುಂ ತೇಜಮುಮಳವು ಮಹೈಶ್ವರ್ಯಮುಂ ದಿವ್ಯಸೌಖ್ಯೋ
ತ್ಕರಮುಂ ಸದ್ದಾನದಿಂದಂ ನರರ್ಗೆ ಸಮನಿಸಂ ಸಂತತೋತ್ಸಾಹದಿಂದಂ ೬೫

ಹೀನಾಯುಂ ಕಷ್ಟರೂಪುಂ ಬಡತನದೊದವುಂ ಕುತ್ಸಮುಂ ಪೀಡೆಯುಂ ವಿ
ಜ್ಞಾನಂಗೆಟ್ಟಿರ್ಪುದುಂ ಕೂಳ್ಪಡೆಯದೆ ಮಱುಗುತ್ತಿರ್ಪುದುಂ ಲೋಗರಿಂದೊಂ
ದಾನಂದಂಗೆಟ್ಟು ಚಿಂತಿಪ್ಪುದುಮನವರತಂ ಪೆಂಡಿರಿಂ ಮಕ್ಕಳಿಂ ಸ
ನ್ಮಾನಂಗೆಟ್ಟಿರ್ಪುದುಂ ಕೂಡುಗುಮೊದವಿದ ಪೂರ್ವಾರ್ಜಿತಾಘೌಘದಿಂದಂ ೬೬

ಗದ್ಯ॥ ಎಂದಿಂತುಕಿಱಿದಿನೊಳೆ ಧರ್ಮಮಂ ಪೇೞೆ ಕೇಳ್ದಱಿದು ಸಂತಸಂಬಟ್ಟು ದೇವನಿ
ಕುರುಂಬಂ ಸೌಧರ್ಮೇಂದ್ರಂಗೆ ಪೊಡೆಮಟ್ಟು ಬಿನ್ನಪಮೆಂದಿಂತೆಂದರ್ ೬೭

ಅರಿದು ನೆಗೞ್ತೆಗೆ ಫಲದೊಳ್
ಪಿರಿದಕ್ಷಯಲಕ್ಷ್ಮಿಯಿರ್ಪನೆಲೆಯೆನಿಸಿರ್ದೀ
ನಿರುಪಮ ನಿರ್ವಿಚಿಕಿತ್ಸೆಯೆ
ಯರಿದು ಗುಣಂಗಳೊಳಗೆ ಬಗೆವೊಡೆ ಜಗದೊಳ್ ೬೮

ಆಯುಸ್ಸೂ, ಐಶ್ವರ್ಯದ ಹೆಚ್ಚಳವೂ, ಸ್ತ್ರೀಯರ ಪ್ರೇಮವೂ ಕೀರ್ತಿಯೂ ಧೈರ್ಯವೂ, ಒಳ್ಳೆಯ ರೂಪವೂ, ವೀರ ಗುಣವೂ ಭೋಗವೂ ಮಹಾ ಪರಾಕ್ರಮವೂ, ದಾನಬುದ್ಧಿಯೂ ಹೆಚ್ಚಾದ ಸದ್ಬುದ್ಧಿಯೂ ತೇಜಸ್ಸೂ, ಶಕ್ತಿ, ಮಹೈಶ್ವರ್ಯವೂ ದಿವ್ಯಸೌಖ್ಯಾತಿಶಯವೂ ಒಳ್ಳೆಯ ದಾನದಿಂದ ಮನುಷ್ಯರಿಗೆ ಲಭಿಸುತ್ತದೆ ೬೫. ಅಲ್ಪಾಯುಸ್ಸೂ, ಕುರೂಪವೂ, ಬಡತನದ ಹೆಚ್ಚಿಗೆಯೂ ರೋಗವೂ, ಪೀಡೆಯೂ ವಿಜ್ಞಾನಹೀನನಾಗಿರುವುದೂ, ಅನ್ನ ಲಭಿಸದೆ ಸಂಕಟಪಡುತ್ತಿರುವುದೂ, ಅನ್ಯರಿಂದ ಆನಂದ ಕಳೆದುಕೊಂಡು ಚಿಂತಿಸುವುದೂ ಸದಾ ಹೆಂಡಿರು ಮಕ್ಕಳಿಂದ ಸನ್ಮಾನ ಕಳೆದುಕೊಳ್ಳುವುದೂ ಪೂರ್ವಜನ್ಮದಲ್ಲಿ ಸಂಪಾದಿಸಿದ ಪಾಪದ ಹೆಚ್ಚಳದಿಂದ ನಡೆಯುತ್ತದೆ. ೬೬. ಮಾಡುವುದಕ್ಕೆ ಕಷ್ಟ ; ಫಲದಲ್ಲಿ ದೊಡ್ಡದು. ಅಕ್ಷಯ ಲಕ್ಷ್ಮಿಯಿರುವ ನೆಲೆಯೆನಿಸಿಕೊಂಡಿರುವ ಈ ಅನುಪಮವಾದ ನಿರ್ವಿಚಿಕಿತ್ಸೆ (ಧರ್ಮದಲ್ಲಿ ಸಂಶಯತಾಳದಿರುವುದು)ಯೇ ಗುಣಗಳಲ್ಲೆಲ್ಲ ಬಹಳ ಕಷ್ಟ ಸಾಧ್ಯವಾದದ್ದು ೬೮. ಆದಕಾರಣ ಕಲಿಕಾಲ

ಗದ್ಯ॥ ಅದು ಕಾರಣದಿಂ ಕಲಿಕಾಲಮಹೋರಗವಿಷಪೂರಿತಮುಂ ಸದ್ಧರ್ಮನಿವಾರಿತ ಮುಮಪ್ಪ ಭರತಕ್ಷೇತ್ರದೊಳ್ ಗುಣಹೀನರೆಯಲ್ಲದೆ ಗುಣವಂತರುಂ ಪಾಪಹರರುಂ ಪ್ರಚುರ ಮಿಲ್ಲದೊಡಂ ನಿರ್ವಿಚಿಕಿತ್ಸೆಯೊಳ್ ನೆಗಟ್ದವರಂ ದೇವರೆಮಗೆ ಬೆಸಸಿಮೆನೆ ದಿವಿಜರಾಜನಿಂತೆಂದಂ ೯೯

ರೌರವಪುರೇಶನಮಳನು
ದಾರಂ ಜಿನಪಾದಪದ್ಮಮಧುಪಂ ಸತ್ಯಾ
ಧಾರಂ ಧರಣೀಸ್ತುತ್ಯಂ
ಚಾರುಚರಿತ್ರಂ ನೃಪಾನ್ವಯೈಕಪವಿತ್ರಂ ೭೦

ಗದ್ಯ॥ ಒದ್ದಾಯನ ಮಹಾರಾಜನೀಗಳಾ ಭರತಕ್ಷೇತ್ರದೊಳ್ ಪ್ರಸಿದ್ಧನೆಂಬುದುಂ ಅಮರ ಸಮಿತಿ ಮೆಚ್ಚಿ ಕೈಗಳಂ ಮುಗಿದು ನಾನಾ ಪ್ರಕಾರದಿಂ ಪೊಗೆಟುತಿರ್ಪುದುಮವರೊಳ್ ವಾಸವ ನೆಂಬ ದೇವಂ ದೇವೇಂದ್ರನ ಮಾತಿಂಗೆ ಬೆಱಗಾಗಿ ೭೧

ನಿಶ್ಚಯಗುಣರೊಳರೆಂಬುದಿ
ದಾಶ್ಚರ್ಯಂ ಭರತಭೂಮಿಯೊಳ್ ಸುರಪತಿ ತಾಂ
ನಿಶ್ಚಲಗುಣಗಳನಲ್ಲದೆ
ದುಶ್ಚರಿತರನಘಸಮೇತರಂ ಪೊಗಟ್ದಪನೇ ೭೨

ಗದ್ಯ॥ ಪೊಗಟಲಱಿಯಂ ಭರತಕ್ಷೇತ್ರದೊಳೀಗಳಪ್ಪೊಡೆ ಕುದೃಷ್ಟಿಗಳನಲ್ಲದೆ ಸದ್ದೃಷ್ಟಿಗಳಂ ಕಾಣಲರಿದು ಚಂಚಲಚಿತ್ತರನಲ್ಲದೆ ದೃಢಚಿತ್ತರಂ ಪಡೆಯಲರಿದು ಕುಮಾರ್ಗಾನುರಾಗಿಗಳನಲ್ಲದೆ

ವೆಂಬ ಮಹಾ ಸರ್ಪನ ವಿಷತುಂಬಿದ, ಸದ್ಧರ್ಮನಿವಾರಣೆಯಾಗಿರುವ ಭರತಕ್ಷೇತ್ರದಲ್ಲಿ ಗುಣಹೀನರೇ ಅಲ್ಲದೆ ಗುಣವಂತರೂ ಪಾಪಹರರೂ ಪಸಿದ್ಧರಾಗಿಲ್ಲದಿದ್ದರೂ ನಿರ್ವಿ ಚಿಕಿತ್ಸೆಯಲ್ಲಿ ನಡೆದು ಪ್ರಸಿದ್ಧರಾದವರ ಕಥೆಯನ್ನು ದೇವರವರು ನಮಗೆ ಹೇಳಿರೆನ್ನಲು ದೇವರಾಜನು ಹೀಗೆಂದನು : ೯೯. "ರೌರವಪುರದ ಒಡೆಯನು ಶುದ್ಧನು, ಉದಾರಿ, ಜಿನಪಾದಪದ್ಮಗಳಲ್ಲಿ ತುಂಬಿಯಂತಿರುವವನು, ಸತ್ಯಾಧಾರನು. ಲೋಕದ ಸ್ತೋತ್ರಕ್ಕೆ ಪಾತ್ರ. ರಾಜವಂಶದಲ್ಲಿ ಅತ್ಯಂತ ಪವಿತ್ರನೂ ಸುಂದರಚರಿತ್ರೆಯುಳ್ಳವನೂ ಆಗಿದ್ದಾನೆ ೭೦. ಒದ್ದಾಯನ ಮಹಾರಾಜನು ಈಗ ಭರತಕ್ಷೇತ್ರದಲ್ಲಿ ಪ್ರಸಿದ್ಧನು" ಎಂದು ಹೇಳಲು ದೇವಸಮೂಹ ಮೆಚ್ಚಿ ಕೈಮುಗಿದು ನಾನಾ ರೀತಿಯಿಂದ ಹೊಗಳು ತ್ತಿರಲಾಗಿ, ಅವರಲ್ಲಿ ವಾಸವನೆಂಬ ದೇವನು ದೇವೇಂದ್ರನ ಮಾತಿಗೆ ಆಶ್ಚರ್ಯಪಟ್ಟು ೭೧, "ಭರತ ಭೂಮಿಯಲ್ಲಿ ನಿಶ್ಚಿತಗುಣವುಳ್ಳವರಿದ್ದಾರೆಂಬುದು ಆಶ್ಚರ್ಯ, ಇಂದ್ರನು ನಿಶ್ಚಲ ಗುಣವುಳ್ಳವರನ್ನಲ್ಲದೆ ಅನ್ಯರನ್ನು ಹೊಗಳುವುದಿಲ್ಲ. ಭರತಕ್ಷೇತ್ರದಲ್ಲಿ ಈಗಲಾದರೆ ಕುಧರ್ಮಿಗಳನ್ನಲ್ಲದೆ ಸದ್ದೃಷ್ಟಿಯುಳ್ಳವರನ್ನು ಕಾಣಲಾಗದು ; ಚಂಚಲಚಿತ್ತರೇ ಹೊರತು ದೃಢಚಿತ್ತರು ಸಿಕ್ಕುವುದಿಲ್ಲ. ದುರ್ಮಾರ್ಗದಲ್ಲಿ ಆಸಕ್ತರೇ ಹೆಚ್ಚು. ಸನ್ಮಾರ್ಗ

ಸನ್ಮಾರ್ಗಾಮರ್ಗಿಗಳಂ ಕೇಳಲ್ಬಾರದು. ವಿಚಾರಿಸುವೊಡಿಂದ್ರನ ನುಡಿಗೆನಗೆ ವಿಸ್ಮಯಮಾದಪುದಿದ ನಾರಯ್ದು ನೋಡವೇಟ್ಕುಮೆಂದು ದೇವಲೋಕದಿಂ ರೌರವಪುರಕ್ಕವತರಿಸಿ ಋಸಿರೂಪಂ ಕೈಕೊಂಡು ೬೩

ಬಡವಾಗಿರ್ದೊಡಲೇಟ್ಗಿಗೆಟ್ಟ ಸಡು ನೀರ್ ಭೋರೆಂದು ಪಾಯ್ವಕ್ಷಿ ನೋ
ಟಕ್ಕೊಡೆ ಕೀವಿಂ ಕೊಟೆಯಿಂ ಮಹಾರಸಿಗೆಯಿಂ ಪೊಂಗಿರ್ದ ಪುಣ್ಗಿಂಟಿಂಗಾ
ಲೊಡೆದೋರಂತಿರೆ ಸೋರ್ವ ರಕ್ತಮಧಿಕಂ ಕಂದಿರ್ದ ಮೆಯ್ತೊನ್ನಿನಿಂ
ದುಡುಗಿರ್ದಂಘ್ರಿಕರದ್ವಯಾಂಗುಲಿಚಯಂ ಕುಂದಿರ್ದಹೀನಸ್ವರಂ ೬೪

ಗದ್ಯ॥ಮತ್ತಮೊಱತೆಯಂತೆ ಮೆಯ್ಯಿಂದೊಱೆವ ರಸಿಗೆಯುಂ ದುರ್ಜನನನುಡಿಯಂತೆ ಕೊಂಕ ಪರಿದ ಜಡೆಗಳುಂ ಕುಟಿಲನ ಚಿತ್ತದಂತೆ ಬಹು ಪ್ರಕಾರವಾದ ಮೆಯ್ಬಣ್ಣಮುಂ ಒಂಟೆಯ ಕೊರಲಂತೆ ನೀಳ್ದ ಕೊರಲುಂ ನೀತಿವಿದನಲ್ಲದರಸಿನ ನಾಡಂತೆ ಅಸಿಯವಾದ ಕಾಲ್ಗಳುಂ ಊದುವ ತಿದಿಯಂತೆ ಪೊಂಗಿರ್ದ ಪುಣ್ಗಳುಂ ಮುಖರೋಗದವರಂತೆ ಬಿಡದೆ ಸುರಿವ ಶ್ಲೇಷ್ಮಮುಂ ಅಱೆಗಣ್ಣವರಂತೆ ಕೊಟೆಗಣ್ಗಳುಂ ಮಾಗಿಯ ದೇಸಿಗನಂತೆ ಬೂದಿವೆರಸಿರ್ದೊಡಲುಂ ಎಱೆಯ ಕೆಱೆಯಂತೆ ಬತ್ತಿರ್ದ ಗಲ್ಲಮುಂ ಆನೆ ಮೆಟ್ಟಿದ ಸಂಬಳಿಗೆಯಂತೆ ಬತ್ತಿದ ಮೂಗುಂ ಪೊಲಿಯಪಣ್ಣಂತೆ ಪೊಱವಾಯ್ವ

ಸತ್ಪುರು ವಿರಳ. ಇಂದ್ರನ ಮಾತುಗಳನ್ನು ಗಮನಿಸಿದರೆ ನನಗೆ ಆಶ್ಚರ್ಯವಾಗುತ್ತಿದೆ. ಇದನ್ನು ಪರೀಕ್ಷಿಸಿ ನೋಡಬೇಕು.' ಎಂದು ದೇವಲೋಕದಿಂದ ರೌರವಪುರಕ್ಕೆ ಇಳಿದಂ ಋಷಿರೂಪವನ್ನು ಸ್ವೀಕರಿಸಿದನು ೬೩. ಬಡಕಲು ಶರೀರ, ಕಣ್ಣಿನಿಂದ ನೀರು ಭೋರೆಂದು ಹರಿಯುತ್ತಿತ್ತು. ಕಿವಿಯಿಂದ ಕೀವು ಸೋರುತ್ತ ಕೊಳೆ, ರಸಿಕೆ; ಊದಿದ್ದ ಕಣ್ಣುಗಳು, ಉಬ್ಬಿದ್ದ ಹುಣ್ಣುಗಳು, ಕುಂಟುಕಾಲು, ಒಂದೇ ಸಮನಾಗಿ ಸೋರುವ ರಕ್ತ, ಕಂದಿಹೋಗಿದ್ದ ಮೈಯಿ, ತೊನ್ನಿನಿಂದ ಶಿಥಿಲವಾಗಿದ್ದ ಪಾದ ಹಸ್ತಗಳು, ಹೀನವಾದ ಕುಗ್ಗಿದ ಧ್ವನಿ ೬೪. ಇಷ್ಟೇ ಅಲ್ಲದೆ ಚಿಲುಮೆಯಿಂದ ಸುರಿ ಯುವಂತೆ ಮೈಯಿಂದ ಸೋರುತ್ತಿದ್ದ ರಸಿಕೆ, ಕೆಟ್ಟವನ ಮಾತಿನಂತೆ ಸೊಟ್ಟಗೆ ಹರಿದ ಜಡೆಗಳು, ಕುಟಿಲ ಮನಸ್ಕನ ಚಿತ್ತದಂತೆ ಬಹು ರೀತಿಯಾದ ದೇಹದ ಬಣ್ಣ, ಒಂಟೆಯ ಕತ್ತಿನಂತೆ ಉದ್ದಕ್ಕೆ ಚಾಚಿಕೊಂಡ ಕೊರಳು, ನೀತಿವಂತನಲ್ಲದ ರಾಜನ ದೇಶದಂತೆ ಕೃಶವಾದ ಕಪ್ಪುಕಾಲುಗಳು, ಊದುವ ತಿದಿಯ ಹಾಗೆ ಊದಿ ಕೊಂಡಿದ್ದ ಹುಣ್ಣುಗಳು, ಬಾಯಿರೋಗದವರ ಹಾಗೆ ಬಿಡದೆ ಸುರಿಯುತ್ತಿರುವ ಶ್ಲೇಷ್ಮ, ನೇತ್ರರೋಗಿಗಳಂತೆ ಕೊಳೆಯಾದ ಕಣ್ಣುಗಳು, ಮಾಗಿಯ ಕಾಲದ ಭಿಕ್ಷುಕನಂತೆ ಬೂದಿ ಬಳಿದುಕೊಂಡ ದೇಹ, ಎರೆಭೂಮಿಯ ಕೆರೆಯಂತೆ ಬತ್ತಿದಗಲ್ಲ, ಆನೆ ತುಳಿದ ಪೆಟ್ಟಿಗೆ ಯಂತೆ ಬತ್ತಿದ ಮೂಗು, ಪೂಲಿಯ ಹಣ್ಣಿನಂತೆ ಹೊರ ಚೆಲ್ಲುವ ಕೀವು, ಮುದುಕರಂತೆ

ಕೀವುಂ ಮುದುಕರಂತೆ ಲೋಳೆಸುರಿವ ಬಾಯುಂ ಕೀವುಗಿವಿಯರಂತೆ ಕೀವು ಸುರಿವ ಕಿವಿಯುಂ ಬೇತಾಳನಂತೊಳಸಾರ್ದ ಬಸಿಱುಂ ಪಡಿಕೆಯಂತೆ ನಾಱುತಿರ್ಪ ಪೆರ್ಬುಣ್ಗಳುಂ ಕೆಮ್ಮುಳ್ಳವರಂತೆ ಮೇಲೆತ್ತುವ ಶ್ವಾಸಮುಂ ಗುಡಿಲಂತೆ ಬಾಗಿದ ಬೆನ್ನುಂ ಪುಟ್ಟನಂತೆ ಬೆರಲ್ಗಳಿಲ್ಲದ ತಳಮುಂ ಅದ್ಭುತಮಾಗೆ ಮೂಱುಲೋಕದ ಭೀಭತ್ಸಮನೆಲ್ಲಮನೊಂದು ಮಾಡಿ ವಿಧಾತ್ರಂ ರೂಪುಮಾಡಿದ ೭೫
ನೆಂಬಂತೆ ಹೀನರೂಪಂ ಕೈಕೊಂಡು

ನೊಳಗಳ್ಮುಸುಂಕಿ ಮಾಣದೆ
ಬಳಸಿಯುಮೋರಂತೆ ಸುತ್ತಿ ನೆಱೆ ದುರ್ಗಂಧ
ಕ್ಕಳಸಿ ಮುನಿಪತಿಯನಗಲದೆ
ಸುೞಿವುವು ಜುಮ್ಮೆಂದು ಕಂಡವರ್ಪೇಸುವಿನಂ ೭೬

ಗದ್ಯ॥ ಅಂತು ವಿಗುರ್ವಿಸಿದ ಕಿಸುಕುೞರೂಪಿಂ ಕೃತಕರ್ಷಿಯಾಗಿ ರೌರವಪುರದೊಳಗೆ ಚಾಂದ್ರಗತಿಯಿಂ ಚರಿಗೆವರ್ಪುದುಂ ಕಂಡಕಂಡವರೆಲ್ಲಂ ಜಂತೆತ್ತಿದರಂತೋಕರಿಸುತ್ತುಂ ಬಯಕೆವೆಂಡಿರಂತುಗುೞುತ್ತುಂ ನೀರೊಳಗೆ ಮುೞುಂಗುವರಂತೆ ಮೂಗಂಮುಚ್ಚಿಕೊಳ್ಳುತ್ತುಂ ಬೆಳೆದ ಕಯ್ಯಂತೆ ತಲೆಯಂ ತೂಗುತ್ತುಂ ಅಳಿಯನಂ ಕಂಡತ್ತೆಯಂತೆ ತೊಲಗುತ್ತುಂ ಋಷಿಯರಂತೆ ಕೊಕ್ಕರಿಸುತ್ತುಂ ಓಡಿಬಂದ ಬಂಟನಂ ಕಂಡೊಡೆಯನಂತೆ ಛೀ ಎನುತ್ತುಂ ದಾಳಿಯಂ ಕಂಡರಂತೆ ಮಗು

ಜೊಲ್ಲು ಸುರಿಯುವ ಬಾಯಿ, ಕೀವು ಸುರಿಯುತ್ತಿರುವ ಕಿವಿ, ಭೇತಾಳನ ಹಾಗೆ ಹತ್ತಿಕೊಂಡ ಹೊಟ್ಟೆ, ಅಮೇಧ್ಯದ ಗುಳಿಯಂತೆ ನಾರುತ್ತಿರುವ ದೊಡ್ಡ ಹುಣ್ಣುಗಳು, ಕೆಮ್ಮುಳ್ಳವರ ಹಾಗೆ ಊರ್ಧ್ವ ಶ್ವಾಸ, ಗುಡಿಸಲಂತೆ ಬಗ್ಗಿದ ಬೆನ್ನು, ಹುಟ್ಟಿನಂತೆ (ಮರದ ಸೌಟು) ಬೆರಳಿಲ್ಲದ ಕೈಗಳು, ಆಶ್ಚರ್ಯವಾಗುವಂತೆ ಮೂರು ಲೋಕಗಳ ಅಸಹ್ಯವನ್ನೆಲ್ಲ ಒಂದುಗೂಡಿಸಿ ಬ್ರಹ್ಮನು ಒಂದು ಆಕಾರ ಮಾಡಿದನೆಂಬ ಹಾಗೆ ಹೀನ ರೂಪವನ್ನು ಧರಿಸಿದನು ೭೫. ನೊಣಗಳು ಸುತ್ತಿ ಮುತ್ತಿ ದುರ್ಗಂಧಕ್ಕೆ ಆಸೆಪಟ್ಟು ಆ ಮುನಿಪತಿಯನ್ನು ಬಿಡದೆ 'ಜುಂ' ಎನ್ನುತ್ತ ನೋಟಕರಿಗೆ ಅಸಹ್ಯವಾಗುವಂತೆ ಸುಳಿಯುತ್ತಿದ್ದುವು ೭೬. ಹಾಗೆ ಮಾಯಾರೂಪವನ್ನು ಧರಿಸಿ ಕಪಟಋಷಿಯಾಗಿ ರೌರವ ಪಟ್ಟಣದಲ್ಲಿ ಭೇದವಿಲ್ಲದೆ ಭಿಕ್ಷೆಗೆ ಬರಲು ನೋಡಿದವರೆಲ್ಲ (ಅಸಹ್ಯಪಟ್ಟುಕೊಂಡರು.) ಜಂತುಹುಳು ಹೆಚ್ಚಾದವರಂತೆ ಓಕರಿಸಿದರು. ಬಯಕೆ ಹುಟ್ಟಿದ ಹೆಂಗಸರಂತೆ ಉಗುಳಿದರು. ನೀರಿನಲ್ಲಿ ಮುಳುಗುವವರ ಹಾಗೆ ಮೂಗು ಮುಚ್ಚಿಕೊಂಡರು. ಬೆಳೆದ ಗದ್ದೆಯಂತೆ ತಲೆಯನ್ನಲ್ಲಾಡಿಸಿದರು. ಅಳಿಯನನ್ನು ನೋಡಿದ ಅತ್ತೆಯಂತೆ ಹೊರಟು ಹೋದರು. ಋಷಿಗಳಂತೆ ಅಸಹ್ಯಪಟ್ಟರು, ಹಿಮ್ಮೆಟ್ಟಿ ಓಡಿಬಂದ ಶೂರನನ್ನು ಕಂಡ ಒಡೆಯನ ಹಾಗೆ 'ಛೆ' ಎಂದರು ; ದಾಳಿಯನ್ನು ಕಂಡವರ

ಟ್ಟೋಡುತ್ತುಂ ಬಲ್ಪಗೆಯಂ ಕಂಡಂತೆ ಮೊಗಂದಿರಿಪುತ್ತುಂ ಮುದುಪಬೋಜಂಗಸಂ ಕಂಡ ಬೆಳ್ವೆಣ್ಣನಂತೊಳಸಾರುತ್ತುಂ ಪೊಲ್ಲಮನೆಯು ಸೆಱೆಯಂತುಮ್ಮಳಿಸುತ್ತುಂ ವೃದ್ಧನ ಕುತ್ತಮನೋವುವ ತರುಣಿಯಂತೆ ಪೇಸುತ್ತುಂ ಪೇಳಿಗೆಯೊಳಿರ್ದ ಪಾವಿನಂತೆ ದುರ್ಗಂಧಕ್ಕೆ ಮಿಡುಕುತ್ತುಂ ಪಗರಣಮಂ ನೋಡುವರಂತೆ ನಗುತ್ತುಮಿಂತೆಂದರ್ ೭೭

ಈ ತೊನ್ನಂಗೀಕಪ್ಪಂ
ಗೀ ತೊಡವಿದೇಕೆ ಬಗವೊಡೆ ಮೆಯ್ಗ್ಗ
ಟ್ಟಾತಂಗೆ ಕೂಟನಾವಂ
ಪ್ರೀತಿಯೊಳಿಕ್ಕಿದಪನೆಂದು ತಮ್ಮೊಳ್ನಗುತುಂ ೭೮

ಗದ್ಯ॥ ಇಂತಿರ್ಪಿನಂ ನೆರೆದ ನೆರವಿಯುಂ ಕಳಿದು ಕಿಱಿದಂತರಮಂ ಬರಲೆಡೆಯೊಳೊರ್ವಂ ಜಾತಿಮೂಢನಿಂತೆಂದಂ ೭೯

ಒಡಲೆಲ್ಲಂ ಕೆಟ್ಟುದು ಮೆಯ್
ಬಡವಾದುದು ಕಾಲಕೈಯ ಬೆರಲೆಲ್ಲಂ ತ
ಮ್ಮೆಡೆಯಿಂ ಪೋದುವು ಪೇಟ್ಸ
ತ್ತೊಡೆ ಪುಟ್ಟರೆ ತನಗಿದೇಕೆ ಬಾಟ್ಕೆಯ ಮೋಹಂ ೮೦

ಗದ್ಯ॥ ಎನುತುಮಿರ್ಪುದುಂ ದುರ್ಗತಿಸಮನ್ವಿತಂಗೆ ಯೀಮಾತು ತಕ್ಕುದೆಂದು ನಗುತ್ತುಂ ಬರೆ ಪಚ್ಚಪಸಿಯೆಗ್ಗರೆಲ್ಲಂ ನೆರೆದಿಂತೆಂದರ್ ೮೧

ಹಾಗೆ ಹಿಂತಿರುಗಿ ಓಡಿದರು. ಬಲಿಷ್ಠ ಶತ್ರುವನ್ನು ಕಂಡಾತೆ ಮುಖ ತಿರುಗಿಸಿಕೊಂಡರು. ಮುದಿವಿಟನನ್ನು ನೋಡಿದ ಸೂಳೆಯಂತೆ ಮನೆಯೊಳಕ್ಕೆ ಸೇರಿದರು. ಕೆಟ್ಟ ಮನೆಯಲ್ಲಿ ಸೆರೆಸಿಕ್ಕವರಂತೆ ವ್ಯಥೆಪಟ್ಟರು ; ಮುದುಕನ ರೋಗಕ್ಕೆ ಉಪಚರಿಸುವ ಯುವತಿಯಂತೆ ಅಸಹ್ಯಪಟ್ಟರು ; ಬಟ್ಟೆಯೊಳಗಿದ್ದ ಹಾವಿನಂತೆ ದುರ್ವಾಸನೆಗೆ ಮಿಡುಕಿದರು. ಕೆಲವರು ಹಗರಣವನ್ನು ನೋಡುವವರ ಹಾಗೆ ನಗುತ್ತ ಹೀಗೆಂದರು ೭೭. "ಈ ತೊನ್ನನಿಗೆ, ಈ ನೀಚನಿಗೆ, ಈ ತೊಡಿಗೆಯೇಕೆ ? ಈ ಹೀನಶರೀರನಿಗೆ ಯಾವನು ತಾನೆ ಪ್ರೀತಿಯಿಂದ ಅನ್ನವನ್ನು ನೀಡಿ ಬಡಿಸುತ್ತಾನೆ ?" ಎಂದು ತಮ್ಮಲ್ಲಿಯೇ ನಕ್ಕರು ೭೮. ಹೀಗಿರಲು ಸೇರಿದ್ದ ಗುಂಪೆಲ್ಲವನ್ನೂ ದಾಟಿ ಸ್ವಲ್ಪ ದೂರ ಬರಲು ಮಧ್ಯದಲ್ಲಿ ಒಬ್ಬ ಹುಟ್ಟುದಡ್ಡ ಹೀಗೆಂದನು. ೭೯. "ಶರೀರವೆಲ್ಲ ಕೆಟ್ಟು ಹೋಗಿದೆ. ಮೈ ಬಡವಾಗಿದೆ. ಕಾಲುಗಳಲ್ಲಿಯೂ ಕೈಗಳಲ್ಲಿಯೂ ಬೆರಳುಗಳೆಲ್ಲ ತಮ್ಮ ಸ್ಥಳಗಳಿಂದ ಹೋಗಿ ಬಿಟ್ಟಿವೆ. ಸತ್ತರೆ ಮತ್ತೆ ಹುಟ್ಟರೆ ? ಇವನಿಗೆ ಈ ಬದುಕಿನ ಮೋಹ ಏತಕ್ಕೊ !" ೮೦ ಹೀಗೆನ್ನುತ್ತಿದ್ದರೆ ದುರ್ಗತಿಯಿಂದ ಕೂಡಿದವನಿಗೆ ಈ ಮಾತು ಯೋಗ್ಯವಾದುದೆಂದು ನಗುತ್ತ ಮುಂದೆ ಬರಲು ಶುದ್ಧ ದಡ್ಡರೆಲ್ಲ ಸೇರಿ ಹೀಗೆಂದರು. ೮೧. "ಇವನಿಗೇಕೆ ಈ ದುಃಖ ?

ಈ ದುಃಖಂ ತನಗೇಕೆ ಪೇಟ ಮನಸಂ ಸ್ಥೈರ್ಯಂಬಟ್ಟು ಬಾಳ್ವಾಸೆಯಿಂ
ಬಂದಂಬಿಟ್ಟು ವಿಮೋಹಮಂ ಬಿಸುಟು ಕಣ್ಣಂ ಮುಚ್ಚಿ ವೀರರ್ಕಳಿ
ನ್ನಾದಂ ಬಣ್ಣಿಸೆ ಕಿಚ್ಚನಿಕ್ಕಿ ಜಲಮಂ ಮೇಣಕ್ಕೆಪಾಯ್ದುಣ್ಮೆ ಸ
ತ್ತೀ ದುಃಖಾಗ್ನಿಯನೋವೊ ನೀಗದಿರಲಿಂದೀಬಾಳ್ಕೆಮೇಣ್ಬಟ್ಟಮೋ ೮೨

ಗದ್ಯ॥ ಎಂಬ ಮಾತಂ ಕೇಳ್ದು ಸಂಸಾರಸಮುದ್ರದೊಳೋಲಾಡುವವರ್ಗೀ ವಚನಮೆ ಪೂಜ್ಯ ಮೆಂದು ಪೋಗುತ್ತಿರೆ ವಿಚಾರಪರರಪ್ಪವರಿಂತೆಂದರ್ ೮೩

ಪಸಿವುಂ ನೀರಟ್ಕೆಯುಂ ದುರ್ವ್ಯಸನಮುಮಧಿಕಂ ಪೆರ್ಚುಗುಂ ತೊನ್ನರಪ್ಪ
ರ್ಗೆ ಸಮಂತೀಜೈನಮಾರ್ಗಂ ಕರಮರಿದದನಿಂತೋವೊ ತಾಳ್ದಿರ್ದಮತ್ತಂ
ಪಸಿವಂ ನೀರಟ್ಕೆಯಂ ದುರ್ವ್ಯಸನಮುಮನಣಂ ಧೈರ್ಯದಿಂ ನಾಡೆಯುಂ ಸೈ
ರಿಸಿ ಶುದ್ಧಾಚಾರದಿಂದಂ ನಡೆವ ಗುಣದೊಳೀ ಯೋಗಿನಾಥಂ ಕೃತಾರ್ಥಂ ೮೪

ಗದ್ಯ॥ ಎಂದು ನುಡಿದ ಮಾತಂ ಕೇಳ್ದು ಕರ್ಮೋಪಶಮಮುಳ್ಳವರ್ಗುಚಿತಮಿದು ಮೇಣಲ್ಲ ವೆಂದು ಮೆಲ್ಲಮೆಲ್ಲನೆ ನಡೆಯೆ ಜಾತಕರುಣರ್ಗಳಿಂತೆಂದರ್ ೮೫

ಕುರುವೊಂದೇಟಲ್ ಮೊದಲಾ
ಗಿರೆ ಸೈರಿಸಬಾರದೀ ಮಹಾಪುರುಷಂ ನಿ
ಷ್ಠುರಮಪ್ಪೀ ಪೆರ್ಗುತ್ತದ
ನಿರೋಧಮಂ ತಾಳ್ದಿ ಮುಲುಗದೆಂತಿರ್ದಪನೋ ೮೬

ಮನಸ್ಸನ್ನು ದೃಢಪಡಿಸಿಕೊಂಡು ಬದುಕುವ ಆಸೆಯ ಬಂಧನವನ್ನು ಬಿಟ್ಟು ಹೆಚ್ಚಾದ ಮೋಹವನ್ನು ಕಳೆದುಕೊಂಡು ಕಣ್ಣು ಮುಚ್ಚಿ ವೀರರಂತೆ ಬೆಂಕಿಗೋ ನೀರಿಗೋ ಬಿದ್ದು ಧೈರ್ಯದಿಂದ ಸತ್ತು ಈ ದುಃಖವನ್ನು ಕಳೆದುಕೊಳ್ಳದೆ ಇರುವುದಕ್ಕೆ ಈ ಜೀವನವೇನು ಇವನಿಗೆ (ಶಾಶ್ವತವಾದ) ಪಟ್ಟವೇ ? ೮೨. ಹೀಗೆಂಬ ಮಾತುಗಳನ್ನು ಕೇಳುತ್ತ ಕಪಟ ಋಷಿಯು 'ಸಂಸಾರವೆಂಬ ಸಮುದ್ರದಲ್ಲಿ ಮುಳುಗಿ ತೇಲುತ್ತಿರುವವರಿಗೆ ಈ ಮಾತೇ ಪೂಜ್ಯ' ಎಂದುಕೊಂಡು ಹೋಗುತ್ತಿದ್ದನು. ಆಗ ವಿಚಾರಶೀಲರು ಹೀಗೆ ನುಡಿದರು : ೮೩. ಹಸಿವು, ನೀರಡಿಕೆ, ದುರ್ವ್ಯಸನ–ಇವು ತೊನ್ನುರೋಗಿಗಳಿಗೆ ಹೆಚ್ಚುತ್ತವೆ. ಶ್ರೇಷ್ಠ ವಾದ ಈ ಜೈನಪಂಥವು ಬಹಳ ಕಷ್ಟ, ಅದನ್ನು ಹೀಗೆ ಧರಿಸಿದ್ದು, ಓಹೋ ! ಹಸಿವು ನೀರಡಿಕೆಗಳನ್ನೂ ದುರ್ವ್ಯಸನಗಳನ್ನೂ ಮಹಾಧೈರ್ಯದಿಂದ ಸಹಿಸಿಕೊಂಡು ಶುದ್ಧಾ ಚಾರದಲ್ಲಿ ನಡೆಯುವ ಗುಣದಲ್ಲಿ ಈ ಯೋಗಿನಾಥನು ಕೃತಾರ್ಥ (ಧನ್ಯ) ನಾಗಿದ್ದಾನೆ: ೮೪. ಹೀಗೆಂದು ಹೇಳಿದ ಮಾತನ್ನು "ಕೇಳಿ ಕರ್ಮಉಪಶಮವಾದವರಿಗೆ ಇದು ಉಚಿತ." ಎಂದು ಮೆಲ್ಲಗೆ ನಡೆಯುತ್ತಿರಲು ಸಹಜಕರುಣಾಶಾಲಿಗಳು ಹೀಗೆಂದರು: ೮೫. ಒಂದು ಕುರು ಎದ್ದರೆ–ಏಳಲು ಮೊದಲಾದರೆ–ಸಹಿಸಲು ಸಾಧ್ಯವಲ್ಲ. ಈ ಮಹಾ ಪುರುಷನು ಕ್ರೂರವಾದ ಈ ದೊಡ್ಡ ರೋಗದ ಹಿಂಸೆಯನ್ನು ಸಹಿಸಿಕೊಂಡು ಸಂಕಟಪಡದೆ ಅದು ಹೇಗೆ ಇರುವನೋ ! ೮೬. ಹೀಗೆ ನುಡಿದು ಕೈಮುಗಿದವರನ್ನು ನೋಡಿ ದೇವ

ಗದ್ಯ॥ ಎಂದು ಕೈಮುಗಿದವರಂ ಕಂಡು ದೇವಗತಿಗೆ ಸಲ್ವಂತಪ್ಪೀ ಲಘುಕರ್ಮಿಗಳ್ಗೀ ವಚನಮೆ ಬರ್ಕುಮೆಂದು ಪೋಗೆ ಶ್ರಾವಕರೊಡನಾಡುವರಿಂತೆಂದರ್ ೮೭

ಈ ರುಜೆಯೊಂದು ವೇದನೆಗೆ ಬೆಚ್ಚದೆ ಕಾಂಕ್ಷಿಸಿ ತನ್ನ ಮೆಚ್ಚಿದಾ
ಹಾರಮುಮಕ್ಕೆ ಬಂದೊಡರೆ ಪಲ್ಬಿಱಿದೋವದೆ ಕಂಡಕಂಡರಂ
ಸೈರಣೆಗೆಟ್ಟು ಬೇಡದೆ ಜಿನಾಗಮದೋಜೆಯೆ ೞಿಲೋಜೆದಪ್ಪದೀ
ವೀರನ ವೀರವೃತ್ತಿಯೊಳವಂ ನೆಱೆ ಬಣ್ಣಿಸಲಾರ್ಪನಾವನೋ ೮೮

ಗದ್ಯ॥ ಎಂದು ಬಣ್ಣಿಸುವವರಂ ಕಂಡು ನೇರಿದರ ನೀತಿ ಸುರಲೋಕವೆಂಬುದು ತಪ್ಪದೆ ನುತ್ತುಂ ಪೋಗೆ ಮುಂದೆಡೆಯೊಳೊರ್ವ ದುರ್ಜನರೊಡನಾಡುವ ಚಪಳನಿಂತೆಂದಂ ೮೯

ಲೋಕದೊಳಾಂ ಕಾಣದರಿ
ಲ್ಲೀ ಕುತ್ತುಂ ಪೊರ್ದಿ ನವೆವ ಮಾನಿಸರಂ ಕೇ
ಳೀ ಕಷ್ಟನಂದದಿಂ ಮೆ
ಯ್ಯಾಕಾರಂಗೆಟ್ಟು ನವೆವರಂ ಕಂಡಱಿಯೆಂ ೯೦

ಗದ್ಯ॥ ಎಂಬುದುಂ ದುರ್ಜನಸಂಗತಿಯುಪ್ಪೀತಂಗೀ ನುಡಿಯೆ ಸೇವ್ಯಮೆಂದು ನುಡಿಯೆ ಋಷಿಯರ ಮಾರ್ಗಮನಱಿದವರಿಂತೆಂದರ್ ೯೧

ಜನ್ಮಕ್ಕೆ ಹೋಗುವಂಥವರಿಗೆ ಈ ತಗ್ಗಿದ ಕರ್ಮವುಳ್ಳವರಿಗೆ ಈ ಮಾತೇ ಬರುವುದೆಂದು ಹೋಗುತ್ತಿದ್ದ ಆ ಕಪಟ ಋಷಿಯನ್ನು ಕಂಡು ಜೈನ ಗೃಹಸ್ಥರ ಒಡನಾಡಿಗಳು ಹೀಗೆಂದರು : ೮೭. ಈ ರೋಗದ ಹೆಚ್ಚಿನ ನೋವಿಗೆ ಅಂಜದೆ, ತಾನು ಮೆಚ್ಚಿದ ಆಹಾರವು ಬಂದರೂ ಅರ್ಥ ಹಲ್ಲು ಕಿರಿದು ಆಶಿಸದೆ ಸೈರಣೆ ಕಳೆದುಕೊಂಡು ಅನ್ಯರನ್ನು ಬೇಡದೆ. ಜಿನಶಾಸ್ತ್ರದ ಕ್ರಮದಲ್ಲಿ ಸ್ವಲ್ಪವೂ ತಪ್ಪದೆ ಇರುವ ಈ ವೀರನ ವೀರವೃತ್ತಿಯ ಹಿರಿಮೆಯನ್ನು ವರ್ಣಿಸಬಲ್ಲವನು ಯಾರೋ ! ೮೮. ಹಲವು ವಿಧವಾಗಿ ವರ್ಣಿಸುವವರನ್ನು ಕಂಡು ಧರ್ಮಮಾರ್ಗಿಗಳ ನೀತಿಯೇ ಸ್ವರ್ಗವೆಂಬುದು ತಪ್ಪುವುದಿಲ್ಲವೆನ್ನುತ್ತ ಹೋಗುತ್ತಿರಲು ಮುಂದೆ ಸ್ವಲ್ಪ ದೂರದಲ್ಲಿ ದುರ್ಜನರ ಒಡನಾಡಿಯಾದ ಒಬ್ಬ ಚಪಲನು ಹೀಗೆಂದನು : ೮೯. ಲೋಕದಲ್ಲಿ ಈ ರೋಗ ಬಂದು ಕೃಶಿಸುತ್ತಿರುವ ಮನುಷ್ಯರನ್ನು ನಾನು ಅನೇಕರನ್ನು ನೋಡಿದ್ದೇನೆ. ಆದರೆ ಈ ನೀಚನ ಹಾಗೆ ದೇಹದ ಆಕಾರವೇ ಕೆಟ್ಟುಹೋಗಿ ಸವೆದವರನ್ನು ಕಾಣೆ. ೯೦. ಆ ಮಾತನ್ನು ಕೇಳಿ ಆ ಕಪಟಋಷಿಯು ದುರ್ಜನಸಹವಾಸಿಯಾದ ಈತನಿಗೆ ಈ ಮಾತೇ ಸರಿಯೆಂದು ಹೊರಟನು. ಆಗ ಋಷಿಗಳ ರೀತಿಯನ್ನು ತಿಳಿದವರು ಹೀಗೆಂದರು: ೯೧. ಜನ ಕರುಣೆಯಿಂದ ಈ

ಕರುಣಿಸಿ ರೋಗರೀ ರುಜೆಗೆ ಮರ್ದುಗಳಂ ಮನವೋತು ಮಾೞ್ಪೊಡಂ
ಕರಮರಿದಣ್ಣ ನಾಮಱಿವೆವೀಮುನಿಪುಂಗವರೊಂದು ಮಾರ್ಗಮಂ
ಕರಮತಿ ಭಕ್ತಿಯಿಂ ನಿಲದೆಯುಣ್ಬುದು ನೂರ್ಮೆಯುಮಂತೆ ಸಾವೊಡಂ
ಪರಿಹರಿಸಲ್ಕೆವೇೞ್ಕುಮಳಿಪಿಲ್ಲದೆ ನೋಡ ಸಮಸ್ತವಸ್ತುವಂ ೯೨

ಗದ್ಯ॥ ಎಂದು ಪೇೞ್ವುದುಮವರಂ ಕೃತಕರ್ಷಿ ನೋಡಿ ನೀರತಡಿ ಕೆಸಱಕ್ಕುಮೆಂಬುದು ತಪ್ಪದೆಂದು ಪೊಗೞುತ್ತಿರೆ ಬುದ್ಧಿವಂತರ್ಕಂಡಿಂತೆಂದರ್ ೯೩

ಮಾತೇಂ ಕಡು ದುಃಖಿತನ
ಪ್ರೀತಂ ಮೊದಲಾದ ಜೈನಮಾರ್ಗಮನೆಂತುಂ
ಭೂತಳದೊಳ್ಬಿಡನೆನಲುಪ
ಮಾತೀತಂ ಜೈನರಿಂದಮಗ್ಗಳರೊಳರೇ ೯೪

ಗದ್ಯ॥ ಮತ್ತೊಂದೆಡೆಯೊಳ್ ಜಡಮತಿಗಳಿಂತೆಂದರ್ : ೯೫

ಆದರದಿಂದೀ ಮುನಿಪಂ
ಪೋದೊಡಮೀಪುರದೊಳಿವರ ತನುವಿನ ದುರ್ಗಂ
ಧೋದಯಮಱುದಿಂಗಳ್ಗಂ
ಪೋದಪುದೆ ಪೋಗಲಱಿಯದೆನುತ್ತುಂ ನಕ್ಕರ್ ೯೬

ಗದ್ಯ॥ ಮತ್ತೊಂದೆಡೆಯೊಳ್ ಶೂನ್ಯಹೃದಯರಿಂತೆಂದರ್ ೯೭

ರೋಗಕ್ಕೆ ಮದ್ದುಗಳನ್ನು ಮನಃಪ್ರೀತಿಯಿಂದ ಮಾಡಿದರೂ ಬಹಳ ಕಷ್ಟ. ನಾವು ಈ ಮುನಿಶ್ರೇಷ್ಠರ ರೀತಿಯನ್ನು ಚೆನ್ನಾಗಿ ಬಲ್ಲೆವು. ವಿಶೇಷವಾದ ಭಕ್ತಿಯಿಂದ ಎಲ್ಲವನ್ನೂ ಅನುಭವಿಸುವರು. ನೂರನೆಯ ಸಲವಾದರೂ, ಹಾಗೆಯೇ. ಸಾಯುವುದಾದರೂ ಸಮಸ್ತ ವಸ್ತುಗಳನ್ನೂ ಆಸೆಪಡದೆ ತ್ಯಜಿಸಿಬಿಡುವರು. ೯೨. ಹೀಗೆ ಹೇಳುತ್ತಿದ್ದವರನ್ನು ಆ ಋಷಿ ನೋಡಿ 'ನೀರಿನ ದಡ ಕೆಸರಾಗುವುದೆಂಬುದು ತಪ್ಪುವುದಿಲ್ಲ !" ಎಂದು ಹೊಗಳಿದನು. ಬುದ್ಧಿವಂತರು ನೋಡಿ ಹೀಗೆಂದರು : ೯೩. 'ಹೆಚ್ಚು ಮಾತು ಏತಕ್ಕೆ ? ಮಹಾದುಃಖಿತನಾದ ಈತನು ಮೊದಲು ಲಭಿಸಿದ ಜೈನಧರ್ಮದ ಮಾರ್ಗವನ್ನು ಹೇಗೂ ಈ ಜೀವನದಲ್ಲಿ ಬಿಡುವುದಿಲ್ಲ. ಈತನು ಹೋಲಿಕೆಯೇ ಇಲ್ಲದವನು. ಜೈನರಿಗಿಂತ ಶ್ರೇಷ್ಠರಿದ್ದಾರೆಯೆ ?" ೯೪. ಮತ್ತೊಂದು ಸ್ಥಳದಲ್ಲಿ ದಡ್ಡರು ಹೀಗೆ ಹೇಳಿದರು: ೯೫. "ಈ ಋಷಿಶ್ರೇಷ್ಠನು ವಿಶ್ವಾಸದಿಂದ ಈ ಪಟ್ಟಣವನ್ನು ಬಿಟ್ಟು ಹೊರಟು ಹೋದರೂ ಈತನ ದೇಹದ ಅತಿಶಯವಾದ ದುರ್ವಾಸನೆಯು ಆರು ತಿಂಗಳಿಗಾದರೂ ಹೋಗಲು ಸಾಧ್ಯವೆ ? ಹೋಗಲಾರದು" ಎಂದು ಹೇಳಿ ನಕ್ಕರು. ೯೬. ಇನ್ನೊಂದು ಸ್ಥಳದಲ್ಲಿ ಶೂನ್ಯಹೃದಯರು (ಮರುಕವಿಲ್ಲದವರು) ಹೀಗೆ ನುಡಿದರು. ೯೭. ರೋಗಗ

ವ್ಯಾಧಿಯೊಳೆಲ್ಲಂ ಕುಷ್ಠ
ವ್ಯಾಧಿಯೆ ಕಡು ಕಷ್ಟಮಿದಱ ವೇದನೆಯೆಂಬಾ
ಬೋಧಿಯೊಳಗಿರ್ದದೇನಂ
ಸಾಧಿಸಲಿರ್ದಪನೊ ಬಿಡದೆ ಜೀವಮನೀತಂ ೯೮

ಗದ್ಯ॥ ಮತ್ತೊಂದೆಡೆಯೊಳ್ ಬದ್ಧ ಮಿಥ್ಯಾದೃಷ್ಟಿಗಳಪ್ಪವರಿಂತೆಂದರ್ ೯೯

ಶ್ರಾವಕರಪ್ಪವರ್ ನೆರೆದು ನಿಶ್ಚಯದಿಂ ಮುನಿಗಳ್ಗೆ ಕೊರ್ತು ನಾ
ನಾ ವಿಧ ಭಕ್ಷ್ಯದಿಂ ಪಲವು ಬಾಡುಗಳಿಂ ತಿಳಿದುಪ್ಪದಿಂ ಸಮಂ
ತಾವಗಮಾವರೊಳ್ಕಣಿಸನೆಂಬಭಿಲಾಷೆಯೊಳೀ ರುಜಾನ್ವಿತಂ
ಭಾವಿಸಿಕೊಂಡನೀ ತಪಮೆಂದು ಜಡರ್ನುಡಿಯುತ್ತುಮಿರ್ಪಿನಂ ೧೦೦

ಗದ್ಯ॥ ಅನಂತಕಾಲಮುಂ ದುಃಖಭಾಜನರಪ್ಪವರ್ಗಮಿಾ ಮಾತು ಮಾರ್ಗಮೆಂದು ಪೋಗುತ್ತುಮಿರ್ಪನು ಮೊರ್ವನಟಿಶ್ರಾವಕಂ ಕಂಡು, ೧೦೧

ಬಾಯೊಳ್ ತಂಬುಲಮಿರ್ದಪು
ದೀಯೆಡೆಯೊಳ್ ಕಿರ್ಪುಗಾಲೊಳಿರ್ದಪೆನೆಂದಾ
ಮಾಯಾವಿ ನಿಲಿಸಲಾಱದು
ಪಾಯದಿನೊಳಸಾರ್ದು ಪೊಕ್ಕನೊಂದಂಗಡಿಯಂ ೧೦೨

ಗದ್ಯ॥ ಮತ್ತೊರ್ವಂ ಸಂಶಯುಶ್ರಾವಕಂ ಕಂಡು ೧೦೩

ಳೊಳಗೆಲ್ಲ ಕುಷ್ಠರೋಗವೇ ಬಹಳ ನೀಚವಾದುದು. ಇದರ ಯಾತನೆಯೆಂಬ ಸಮುದ್ರ ದಲ್ಲಿದ್ದುಕೊಂಡು ಜೀವವನ್ನು ಬಿಡದೆ ಈತನು ಅದೇನನ್ನು ಸಾಧಿಸಲಿದ್ದಾನೆ ? ೯೮. ಬೇರೊಂದು ಸ್ಥಳದಲ್ಲಿ ಮಿಥ್ಯಾಧರ್ಮಾಸಕ್ತಿಯಲ್ಲಿಯೇ ಬದ್ಧರಾದ ಜನ ಹೀಗೆಂದರು: ೯೯. ಜೈನಗೃಹಸ್ಥರು (ಶ್ರಾವಕರು) ಸೇರಿ ಮುನಿಗಳಿಗೆ ಖಂಡಿತವಾಗಿಯೂ ಪ್ರೀತಿಯಿಂದ ನಾನಾವಿಧವಾದ ಭಕ್ಷ್ಯಗಳಿಂದ ಹಲವು ಬಗೆಯ ವ್ಯಂಜನಗಳೊಡನೆ ತಿಳಿಯಾದ ತುಪ್ಪದಿಂದ ಕೂಡಿದ ಸವಿಯಾದ ಊಟವನ್ನು ಯಾವಾಗಲೂ ಕೊಡುತ್ತಿರುವರೆಂಬ ಅಭಿ ಲಾಷೆಯಿಂದ ಈ ರೋಗಗ್ರಸ್ತನು ಈ ತಪಸ್ವಿ ವೇಷವನ್ನು ಮೆಚ್ಚಿ ಧರಿಸಿದನೆಂದು ಹೇಳು ತ್ತಿದ್ದರು. ೧೦೦. ಎಲ್ಲ ಕಾಲಕ್ಕೂ ದುಃಖಕ್ಕೆ ಪಾತ್ರರಾಗುವಂಥವರಿಗೆ ಈ ಮಾತು ಸರಿ ಯೆಂದು ಭಾವಿಸಿ ಋಷಿಯು ಹೋಗುತ್ತಿದ್ದನು. ಆಗ ಒಬ್ಬ ಕೀಳು ಗೃಹಸ್ಥನು ಆತನನ್ನು ನೋಡಿದನು. ೧೦೧, 'ಬಾಯಲ್ಲಿ ತಾಂಬೂಲವಿದೆ, ಈಗ ಕಾಲಲ್ಲಿ ಚಪ್ಪಲಿ ಮೆಟ್ಟಿದ್ದೇನೆ, ಎಂದು ಹೇಳಿಕೊಂಡು ಆ ಮಾಯಾವಿಯು ತಪಸ್ವಿಯನ್ನು ಭಿಕ್ಷಕ್ಕೆ ನಿಲ್ಲಿಸಲಾರದೆ (ಆಹ್ವಾ ನಿಸಲಾರದೆ) ಒಳಗೆ ಸೇರಿ ಒಂದು ಅಂಗಡಿಯನ್ನು ಹೊಕ್ಕನು. ೧೦೨. ಮತ್ತೊಬ್ಬ ಸಂಶಯ ಸ್ವಭಾವದ ಜೈನನು ಋಷಿಯನ್ನು ನೋಡಿದನು. ೧೦೩. "ನಾನು ನನ್ನ ಹೆಂಡ

ಕರಮೆನ್ನ ಸತಿಯ ಮುಂದಾಂ
ಪರಮಶ್ರಾವಕನೆಂದುಃ ಬೀಱುವೆನಿವರು
ಭರದಿಂ ನಿಲಿಸದೊಡೆನ್ನಂ
ವರವಧು ನಗುಗೆಂದು ಕಾಣನೆಂಬಂತಿರ್ದಂ ೧೦೪

ಗದ್ಯ॥ ಮತ್ತೊರ್ವಂ ಮಿಶ್ರಶ್ರಾವಕಂ ಕಂಡು ೧೦೫

ಲಲನೆಗೆ ನೀನೀ ಮುನಿಯಂ
ನಿಲಿಸೆನೆ ನಾನಱಿಯೆನೋವೊ ನೀನೇ ಮುನಿಯಂ
ನಿಲಿಸೆಂದಿರ್ವರುಮೊಗಳ್
ಕಲಹಂಗೆಯ್ಯುತ್ತುಮಿರ್ಪುದುಂ ಮುನಿ ಪೋದಂ ೧೦೬

ಗದ್ಯ॥ ಮತ್ತೊಂದೆಡೆಯೊಳೊರ್ವಂ ಪೊಸಶ್ರಾವಕಂ ಕಂಡು ೧೦೭

ಆ ಮನೆಯವರಾ ಮನೆಯವ
ರೀ ಮನೆಯವರಟ್ಟೆ ನಾರ್ಪ ದುರ್ಗಂಧಕ್ಕಿಂ
ತೀ ಮುನಿಯಂ ನಿಲಿಸಿದರಿ
ಲ್ಲೀ ಮಾತೊ ನಾನುಮಾಱೆನೆಂದೊಳಗುಟಿದಂ ೧೦೮

ಗದ್ಯ॥ ಮತ್ತೊರ್ವಂ ಕೇಳ್ವಿಯಿಲ್ಲದ ಶ್ರಾವಕಂ ಕಂಡು ೧೦೯

ತಿಯ ಮುಂದೆ ಉತ್ತಮ ಶ್ರಾವಕನೆಂದು ಹೇಳಿಕೊಳ್ಳುತ್ತೇನೆ. ಇವರನ್ನು ಶ್ರದ್ಧೆಯಿಂದ ಕರೆಯದಿದ್ದರೆ ನನ್ನ ಹೆಂಡತಿ ನನ್ನನ್ನು ಕಂಡು ನಗುತ್ತಾಳೆ" ಎಂದು ಕಾಣದವನ ಹಾಗೆ ಇದ್ದು ಬಿಟ್ಟನು. ೧೦೪. ಪತ್ತೊಬ್ಬ ಮಿಶ್ರಸ್ವಭಾವದ ಶ್ರಾವಕನು ನೋಡಿ ೧೦೫ "ಈ ಮುನಿಯನ್ನು ನೀನು ಊಟಕ್ಕೆ ನಿಲ್ಲಿಸು" ಎಂದನು. ಆವಳು, "ನನಗೆ ತಿಳಿಯದು. ನೀನೆ ಮುನಿಯನ್ನು ನಿಲ್ಲಿಸು" ಎಂದಳು. ಇಬ್ಬರೂ ಹೀಗೆ ಜಗಳವಾಡುತ್ತಿರುವಾಗ ಮುನಿಯು ಮುಂದಕ್ಕೆ ಹೊರಟು ಹೋದನು ೧೦೬. ಮತ್ತೊಂದು ಸ್ಥಳದಲ್ಲಿ ಒಬ್ಬ ಹೊಸಶ್ರಾವಕನು ಆ ಕೃತಕ ಋಷಿಯನ್ನು ಕಂಡನು. ೧೦೭. "ಈ ಮುನಿಯು ದೇಹದ ದುರ್ಗಂಧಕ್ಕೆ ಅಸಹ್ಯಪಟ್ಟು ಆ ಮನೆಯವರು, ಈ ಮನೆಯವರು, ಎಲ್ಲರೂ ಅಟ್ಟಿಬಿಡಲು ಈ ಮುನಿಯನ್ನು ಇಲ್ಲಿ ನಿಲ್ಲಿಸಿದರೆ ಹೇಗೆ? ಏನು ಮಾತೊ! ನಾನೂ ನಿಲ್ಲಿಸಲಾರೆ'' ಎಂದು ಕೊಂಡು ಒಳಗೆ ಇದ್ದುಬಿಟ್ಟನು. ೧೦೮. ಮತ್ತೊಬ್ಬ ಜೈನತತ್ವಶಾಸ್ತ್ರದ ಕೇಳ್ವಿಯಿಲ್ಲದ ಗೃಹಸ್ಥನು ಈ ಮುನಿಯನ್ನು ನೋಡಿ ಅವನನ್ನು ಪ್ರೀತಿಯಿಂದ ಚರಿಗೆಗೆಂದು ನಿಲ್ಲಿಸ ಲಾರದೆ ತಾನೂ ತನ್ನ ಪ್ರಿಯಳನ್ನು ಕರೆದು ''ಇವರನ್ನು ನಿಲ್ಲಿಸು" ಎಂದು ಹೇಳಿದನು. ಆದರೆ ಆ ಕಮಲವಾಖಿಯು ಆಗ ಹಿತ್ತಿಲ ಕಡೆಗೆ ಓಡಿಹೋದಳು. ೧೦೯-೧೧೦

ಮುನಿಪನ ಬರವಂ ದೂರದೊ
ಳನುನಯದಿಂ ಕಂಡು ನಿಲಿಸಲಾಱದ ತಾಂ ತ
ನ್ನನಿಯಳನಿವರಂ ನಿಲಿಸೆನೆ
ವನಜಾನನೆ ಪಿತ್ತಲತ್ತಲೋಡಿದಳಾಗಳ್ ೧೧೦

ಗದ್ಯ॥ ಮತ್ತೊರ್ವಂ ಯಶೋರ್ಥಿಶ್ರಾವಕಂ ಕಂಡು ೧೧೧

ನೆರೆವನೆಯಾತನೆನ್ನೊಡನುದಾರಗುಣಕ್ಕೆ ಜಸಕ್ಕೆ ನಾಡೆ ಮ
ಚ್ಚರಿಸಿತುಮಿರ್ಪನೀ ಮುನಿಯನಾಂ ಕರಮಾದರದಿಂದೆ ತಾಂಗಲೋ
ಸರಿಸದೊಡಟ್ಟೆ ದೂಱುಗುಮವಂ ಮನೆಗೀಗಳೆ ಬಾರನನ್ನೆಗಂ
ತ್ವರಿತದೆ ಪೋಪೆನೆಂದುಣಿಸುಮಂ ಬಿಸುಟೋಡಿದನಾತ್ಮಗೇಹದಿಂ ೧೧೨

ಗದ್ಯ॥ ಮತ್ತೊರ್ವನಱಿತಕ್ಕೆ ಬೀಗುವ ವೃಥಾಶ್ರಾವಕಂ ಕಂಡು ೧೧೩

ಅಱಿವವರೆನ್ನನೊಂದೆ ಕೊರಲಿಂ ಪೊಗೞ್ವರ್ ಧರೆಗೆಲ್ಲಮಾನುಮಿ
ನ್ನಱಿಕೆಯ ಜೈನನೆಂ ನಿಲಿಸಲೊಲ್ಲದೆ ಮಾಣ್ದುೞಿದಿರ್ದನಪ್ಪೊಡಾ
ನಿಱಿಸದ ಕಪ್ಪನೆಂದುಲಿವರಿಲ್ಲಿಗುಪಾಯಮಿದೆಂದು ಬುದ್ಧಿಯಿಂ
ಪೊಱಮಡದಿರ್ದನಾತ್ಮಗೃಹದಿಂ ಕಳಿದಾ ಮುನಿ ಪಿಂಗಿ ಪೋಪಿನಂ ೧೧೪

ಗದ್ಯ॥ ಮತ್ತೊರ್ವಳು ಶ್ರಾವಕಿಯಿಂತೆಂದಳ್ ೧೧೫

ಮತ್ತೊಬ್ಬ ಕೀರ್ತಿಕಾಮುಕನಾದ ಶ್ರಾವಕನು ನೋಡಿದನು. ೧೧೧ ಪಕ್ಕದ ಮನೆಯವನು ಔದಾರ್ಯ, ಯಶಸ್ಸು ಮುಂತಾದ ವಿಷಯಗಳಲ್ಲಿ ನನ್ನ ಮೇಲೆ ಬಹಳ ಮತ್ಸರಪಡು ತ್ತಿರುತ್ತಾನೆ. "ನಾನು ಈಗ ಈ ಮುನಿಯನ್ನು ಬಹಳ ಆದರದಿಂದ ನಿಲ್ಲಿಸಿದರೆ-ನಿಲ್ಲಿಸಲು ಹಿಂತೆಗೆಯದಿದ್ದರೆ ಅವನು ನನ್ನನ್ನು ಬಹಳವಾಗಿ ದೂರುತ್ತಾನೆ. ಅವನು ಈಗಲೇ ಮನೆಗೆ ಬರುವುದಿಲ್ಲ. ಅಲ್ಲಿಯ ತನಕ ಬೇಗನೆ ಹೊರಟುಹೋಗುತ್ತೇನೆ" ಎಂದು ಯೋಚಿಸಿ ಊಟವನ್ನು ಬಿಟ್ಟು ತನ್ನ ಮನೆಯಿಂದ ಓಡಿಹೋದನು. ೧೧೨. ಮತ್ತೊಬ್ಬನು ತನ್ನ ಪಾಂಡಿತ್ಯಕ್ಕೆ ಅಹಂಕಾರ ಪಡುವ ವೃಥಾಶ್ರಾವಕ (ಶ್ರಾವಕ ಧರ್ಮವನ್ನು ನಡೆಸದವನು)ನು ಈ ಮುನಿಯನ್ನು ಕಂಡನು. ೧೧೩. ತಿಳಿದವರೆಲ್ಲ ನನ್ನನ್ನು ಏಕವಾಕ್ಯದಿಂದ ಹೊಗಳು ತ್ತಾರೆ. ಪ್ರಪಂಚಕ್ಕೆಲ್ಲ ನಾನು ಪ್ರಸಿದ್ಧನಾದ ಜೈನನಾಗಿದ್ದೇನೆ. ಈ ಮುನಿಯನ್ನು ನಾನು ಈಗ ನಿಲ್ಲಿಸದೆ ಬಿಟ್ಟರೆ ಇವನು ಮುನಿಗೆ ಭಿಕ್ಷೆ ನೀಡಲೊಲ್ಲದ ಅಲ್ಪನೆಂದು ಎಲ್ಲರೂ ಹೇಳುವರು. ಇದಕ್ಕೆ ಏನು ಉಪಾಯವೆಂದು ಯೋಚಿಸಿ ಬುದ್ಧಿವಂತಿ ಕೆಯನ್ನು ಬಳಸಿ ಆ ಮುನಿ ದಾಟಿಹೋಗುವತನಕ ಮನೆಯಿಂದ ಹೊರಕ್ಕೆ ಹೊರ ಡಲಿಲ್ಲ ೧೧೪. ಮತ್ತೊಬ್ಬಳು ಶ್ರಾವಕಿ "ನಾನು ಶ್ರಾವಕನ ಹೆಂಡತಿ, ಶ್ರಾವಕನಾ

ಶ್ರಾವಕನ ಸತಿಯೆ ನಾನುಂ
ಶ್ರಾವಕನಪ್ಪವನ ಮಗಳೆಯುಃಗ್ರೋಗ್ರತೆಯಿಂ
ದೇವರೆನಿಪಿವರ ಕಂಡೆಂ
ಭಾವಿಸುವಂದಿನಿಸು ಪೇಸು ತಪಮಂ ಕಾಣೆಂ ೧೧೬

ಗದ್ಯ॥ ಮತ್ತಮೇನುಮಿಲ್ಲದ ನಿಜಶ್ರಾವಕಿ ಕಂಡು ಇಂತೆಂದಳ್ ೧೧೭

ಓದಿನೊಳಂ ರೂಪಿನೊಳಂ
ಬಾದೇಂ ನಮ್ಮೂರೊಳಿರ್ದ ಮುನಿಗಳವೋಲೀ
ಮೇದಿನಿಯೊಳೊಳರೆ ಮುನಿವರ
ರೀ ದೀನನ ತೆಱದಿನಟ್ಟಿಕೊಳೆ ನಾರ್ತಪರೇ ೧೧೮

ಗದ್ಯ॥ ಮತ್ತೊರ್ವಂ ಪ್ರವೀಣನಪ್ಪ ಬಡಶ್ರಾವಕನಿಂತೆಂದಂ ೧೧೯

ಒಡಲೆಂತುಂ ಕಿಡಲಿರ್ದುದು
ಕಿಡುವೊಡಲಂ ತವಿಸಿ ಕಿಡದ ಮುಕ್ತಿಶ್ರೀಯುಂ
ಪಡೆಯಲ್ಕೀ ಜಿನರೂಪಂ
ದೃಢಮನದಿಂ ಪಿಡಿವೊಡಱಿವರಿವರೆ ಕೃತಾರ್ಥರ್ ೧೨೦

ಗದ್ಯ॥ ಮತ್ತೊರ್ವಂ ಬರ್ದಿನ ಶ್ರಾವಕಂ ಕಂಡಂ ಇಂತೆಂದು ೧೨೧

ದವನ ಮಗಳೇ. ಅನೇಕ ಉಗ್ರೋಗ್ರ ತಪಸ್ಸುಮಾಡಿದ ಮುನಿಗಳನ್ನು ಕಂಡೆ. ಆದರೆ ಇಷ್ಟು ಹೇಸಿಕೆಯ ಮುನಿಯನ್ನು ಕಾಣೆ" ಎಂದುಕೊಂಡಳು ೧೧೬. ಇನ್ನೊಬ್ಬ ಸುಂದರಿಯಾದ ಶ್ರಾವಕಿಯು ಆತನನ್ನು ನೋಡಿ "ನಮ್ಮೂರಿನ ಮುನಿಗಳ ಹಾಗೆ ಓದಿನಲ್ಲಿಯೂ ರೂಪದಲ್ಲಿಯೂ ಶ್ರೇಷ್ಠರು ಈ ಲೋಕದಲ್ಲಿದ್ದಾರೆಯೆ ? ಈ ದೀನನ ಹಾಗೆ ದುರ್ವಾಸನೆಯಿಂದ ನಾಱುವವರುಂಟೆ ?" ಎಂದಳು ೧೧೭-೧೧೮. ಇನ್ನೊಬ್ಬ ಕುಶಲಿಯಾದ ಬಡವನಾದ ಶ್ರಾವಕನು ಮುನಿಯನ್ನು ಕಂಡು "ದೇಹ ಹೇಗೂ ನಾಶವಾಗುವುದು. ನಶಿಸುವ ದೇಹವನ್ನು ಕೆಡಿಸಿ ಕಿಡದಂಥ ಮೋಕ್ಷ ಲಕ್ಷ್ಮಿಯನ್ನು ಪಡೆಯಲು ಈ ಜಿನರೂಪ (ಸನ್ಯಾಸಿ)ವನ್ನು ದೃಢಮನಸ್ಸಿನಿಂದ ಹಿಡಿಯಲು ಬಲ್ಲವರಿವರೇ ಧನ್ಯರು" ಎಂದುಕೊಂಡನು ೧೧೯-೧೨೦. ಬೇರೊಬ್ಬ ಜಾಣ ಶ್ರಾವಕನು ಈ ಕೃತಕ ಋಷಿಯನ್ನು ನೋಡಿ ಹೀಗೆಂದುಕೊಂಡನು: ೧೨೧. ಈ ರೂಪದಿಂದಲ್ಲದೆ

ಈ ರೂಪಿಂದಲ್ಲದೆ ಸಂ
ಸಾರದೊಳೊದವಿರ್ದ ದುಃಖಮಂ ಗೆಲಲರಿದೆಂ
ದಾರಯ್ದು ಜೈನರೂಪಂ
ಧೀರತೆಯಿಂ ಧರಿಸಿದಂ ಧರಾಧರಧೈರ್ಯಂ ೧೨೨

ಗದ್ಯ॥ ಮತ್ತೊಂದೆಡೆಯೊಳ್ ನೆರೆದಿರ್ದ ನೀತಿವಿದರ್ಕಳಿಂತೆಂದರ್ ೧೨೩

ಅರಸರೊಳಪ್ಪ ಬಾಧೆಗಳಿನಿಷ್ಟರಗಲ್ಕೆಯಿನೊಲ್ಲೆನೆಂಬ ಪೆಂ
ಡಿರ ದೆಸೆಯಿಂ ದರಿದ್ರತೆಯಿನೊತ್ತುವ ಕುತ್ತದಿನೆಂತುಮಕ್ಕುಮ
ಚ್ಚರಿಯೆ ಮಹೋಗ್ರ ದುಃಖತತಿ ಕರ್ಮಫಲೋದಯದಿಂದಮೀ ಮಹಾ
ಪುರುಷನೆ ಧನ್ಯನೀರುಜೆಯೊಳೀ ತಪಮಂ ನೆಱೆ ತಾಳ್ದಿದೋಜೆಯಿಂ ೧೨೪

ಗದ್ಯ॥ ಎಂದು ನಾನಾ ಪ್ರಕಾರದಿಂ ನುಡಿವ ಬಹುಜನದ ಮಾತುಗಳುಮಂ ಪಲವುಂ ತೆಱದ ಪರಿಣಾಮಂಗಳುಮಂ ಕಂಡು ಕೇಳ್ದು ಕೃತಕರ್ಪಿ ತನ್ನೊಳಿಂತೆಂದಂ ೧೨೫

ಮರನೆಂಬೀ ಪೆಸರೆಲ್ಲಾ
ತರುಗಳ್ಗಂ ತಾಂ ಸಮಾನಮನಿತಱೊಳೆಲ್ಲಾ
ತರುಗಳ ಪಣ್ಣುಂ ಪೆಸರಂ
ತಿರೆ ನೋಡ ಸಮಾನಮಾಗಲಱಿಗುಮೆ ಸವಿಯೊಳ್ ೧೨೬

ಸಂಸಾರದಲ್ಲಿ ಉಂಟಾಗುವ ದುಃಖವನ್ನು ಗೆಲ್ಲುವುದು ಅಸಾಧ್ಯ. ಇದನ್ನು ವಿಚಾರಮಾಡಿ ಧೈರ್ಯದಿಂದ ಈ ಪರ್ವತೋಪಮ ಧೈರ್ಯಶಾಲಿ ಈ ಜೈನ ರೂಪವನ್ನು ಧರಿಸಿದ್ದಾನೆ ೧೨೨. ಬೇರೊಂದು ಸ್ಥಳದಲ್ಲಿ ಗುಂಪುಕೂಡಿದ್ದ ನೀತಿಜ್ಞರು ಹೀಗೆ ಹೇಳಿದರು ೧೨೩. ರಾಜರಿಂದ ಉಂಟಾಗುವ ಬಾಧೆಗಳಿಂದ, ಬೇಕಾದವರ ಅಗಲಿಕೆಯಿಂದ, ಒಲ್ಲೆನೆಂಬ ಹೆಂಡಿರ ನಿಮಿತ್ತದಿಂದ, ಬಡತನದಿಂದ, ಯಾತನಾಮಯವಾದ ರೋಗದಿಂದ, ಹೇಗೂ ಲೋಕದಲ್ಲಿ ಮಹಾ ಕ್ರೂರವಾದ ದುಃಖಪರಂಪರೆಯುಂಟಾಗುವುದು ಅಚ್ಚರಿಯೇನಲ್ಲ; ಅದು ಕರ್ಮಫಲದಿಂದ ಸಂಭವಿಸುತ್ತದೆ. ಈ ರೋಗದಲ್ಲಿಯೂ ಈ ತಪಸ್ಸನ್ನು ಕೈಕೊಂಡಿರುವ ಈ ಪುರುಷನೇ ಧನ್ಯನು ೧೨೪. ಎಂದು ಹಲವು ಬಗೆಯಾಗಿ ಮಾತನಾಡುವ ಅನೇಕ ಜನರ ಮಾತುಗಳನ್ನೂ ಹಲವು ವಿಧದ ಪರಿಣಾಮಗಳನ್ನೂ ಕಂಡು, ಕೇಳಿ, ಕೃತಕಋಷಿಯು ತನ್ನಲ್ಲಿಯೇ ಹೀಗೆಂದುಕೊಂಡನು ೧೨೫. "ಮರವೆಂಬ ಹೆಸರು ಎಲ್ಲ ವೃಕ್ಷಗಳಿಗೂ ಸಮಾನ, ಹಣ್ಣೆಂಬ ಹೆಸರೂ ಎಲ್ಲಕ್ಕೂ ಸಮಾನ; ಅಷ್ಟರಿಂದ ಎಲ್ಲಾ ಗಿಡಗಳ ಹಣ್ಣುಗಳೂ ಸವಿಯಲ್ಲಿ ಸಮಾನವಾಗುವುವೆ ? ೧೨೬. ಬಾಳೆಯ ಹಣ್ಣಿನ

ಬಾಳೆಯ ಪಣ್ಣದೊಂದು ರುಚಿ ನೇರಿಲ ಪಣ್ಣೊಳಗುಂಟೆ ಭಾವಿಪಂ
ದೀಳೆಯ ಪಣ್ಣದೊಂದು ರುಚಿ ಮಾವಿನ ಪಣ್ಣೊಳಗುಂಟೆ ಸಂದ ಕಿ
ತ್ತೀಳೆಯ ಪಣ್ಣದೊಂದು ರುಚಿ ಬೇವಿನ ಪಣ್ಣೊಳಗುಂಟೆ ತಾನಣಂ
ತಾಳಫಲಂಗಳೊಂದು ರುಚಿ ತುಂಬುರಪಣ್ಣೊಳಗುಂಟೆ ಲೋಕದೊಳ್ ೧೨೭

ಗದ್ಯ॥ ಅಂತು ಮಾನಿಸರ್ಗೆ ಮಾನಿಸರೆಂಬ ಪೆಸರ್ ಸಮಾನಮಾಡೊಡಂ ಮಾತುಗಳುಂ ಪರಿಣಾಮಮುಂ ಬೇಱೆ ಬೇಱೆಯಕ್ಕುಮದಱಿಂ ೧೨೮

ಪಾದಱಿಯದೊಂದು ಕುಸುಮಾ
ಮೋದಂ ಪೊರ್ದಲ್ಕೆ ನೀರ್ ಸುಗಂಧಮದಕ್ಕುಂ
ಬಾದೇಂ ಬೇವಿನ ಕುಸುಮಾ
ಮೋದಂ ಪೊರ್ದಲ್ಕೆ ಕಯ್ಪಿಯಕ್ಕುಂ ತೋಯಂ ೧೨೯

ಗದ್ಯ॥ ಅಂತೆ ಲೋಕದ ಜೀವಂಗಳ್ಗಂ ಶುಭಕರ್ಮದ ಪೊರ್ದುಗೆಯಿಂ ಸುಬುದ್ಧಿಯುಮಶುಭ ಕರ್ಮದ ಪೊರ್ದುಗೆಯಿಂ ದುರ್ಬುದ್ಧಿಯುಮಕ್ಕುಮೆಂದು ತನ್ನೊಳೆ ಭಾವಿಸುತ್ತುಂ ೧೩೦

ಪರಮ ಜಿನೇಶ್ವರಚರಣಾಂ
ಬುರುಹದ್ವಯ ಮತ್ತಮಧುಪನೊದ್ದಾಯನ ಭೂ
ವರವಲ್ಲಭನರಮನೆಗಾ
ಗಿರೆ ಕೃತಕ ಮುನೀಂದ್ರನೊಯ್ಯನೊಯ್ಯನೆ ನಡೆದಂ ೧೩೧

ಒಂದು ರುಚಿ ನೇರಲೆ ಹಣ್ಣಿನೊಳಗಿದೆಯೆ ? ಈಳೆಯ ಹಣ್ಣಿನ ಒಂದು ರುಚಿ ಮಾವಿನ ಹಣ್ಣಿನಲ್ಲಿ ಇರುವುದೆ ? ಪ್ರಸಿದ್ಧವಾದ ಕಿತ್ತಳೆಯ ಹಣ್ಣಿ (ನಿಂಬೆ, ಕಿತ್ತಿಳೆ, ಹೇರಿಳೆ ಮುಂತಾದ ಹಣ್ಣುಗಳ ಜಾತಿಗೆ ಈಳೆಯೆಂದು ಹೆಸರು)ನ ಒಂದು ರುಚಿ ಬೇವಿನ ಹಣ್ಣಿನೊಳಗಿದೆಯೆ ? ತಾಳೆ ಹಣ್ಣಿನ ಒಂದು ರುಚಿ ಕಾಡುಮಾವಿನ ಹಣ್ಣಿನಲ್ಲಿರುವುದೆ ? ೧೨೭ ಹಾಗೆ ಮನುಷ್ಯರಿಗೆಲ್ಲ ಮನುಷ್ಯನೆಂಬ ಹೆಸರು ಅನ್ವಯಿಸುತ್ತದೆ. ಆದರೂ ಮಾತುಗಳೂ ಪರಿಣಾಮವೂ ಬೇರೆ ಬೇರೆಯಾಗುತ್ತವೆ. ೧೨೮ ಆದ್ದರಿಂದ ಪಾದರಿಯ ಹೂವಿನ ಪರಿಮಳ ಸೇರಿದರೆ ನೀರು ಸುವಾಸನೆಯಾಗುತ್ತದೆ. ಹೆಚ್ಚೇನು, ಬೇವಿನ ಹೂವಿನ ಪರಿಮಳವನ್ನು ಹೊಂದಲು ನೀರು ಕಹಿಯಾಗುತ್ತದೆ ೧೨೯. ಹಾಗೆಯೇ ಲೋಕದ ಜೀವಿಗಳಿಗೂ ಶುಭಕರ್ಮದ ಸಂಬಂಧದಿಂದ ಸುಬುದ್ಧಿಯೂ ಅಶುಭ ಕರ್ಮದ ಸಂಬಂಧದಿಂದ ದುರ್ಬುದ್ಧಿಯೂ ಆಗುವುದು" ಎಂದು ತನ್ನಲ್ಲಿಯೇ ಚಿಂತಿಸುತ್ತ ೧೩೦. ಪರಮ ಜಿನೇಶ್ವರ ಪಾದಕಮಲಗಳಲ್ಲಿ ಮದಿಸಿದ ದುಂಬಿಯಾಗಿರುವ (ಮಹಾ ಭಕ್ತನಾಗಿರುವ) ಒದ್ದಾಯನ ಮಹಾರಾಜ ಶ್ರೇಷ್ಠನ ಅರಮನೆಯ ಕಡೆಗೆ ಆ ಕಪಟ ಮುನೀಂದ್ರನು ಮೆಲ್ಲಗೆ ನಡೆದನು ೧೩೧. ಆ ವೇಳೆಗೆ ಶ್ರೇಷ್ಠವಾದ ರತ್ನದೀಪಗಳು ಅತಿಶಯವಾಗಿ

ಗದ್ಯ॥ ಅನ್ನೆಗಂ ೧೩೨

ವರರತ್ನದ ದೀವಿಗೆಗಳ್
ಕರಮಲ್ಲದೆ ತೊಳಗಿ ಬೆಳಗಿ ಮಿಂಚು ಸುತ್ತಂ
ಪರಪಿದವೊಲೆಸೆಯೆ ನಾನಾ
ವಿರಚನೆಯಿಂದೊಪ್ಪಿ ತೋರ್ಪ ಸಿಂಹಾಸನದೊಳ್ ೧೩೩

ಇದು ಪೂರ್ವಾಚಲಮಲ್ಲದಿನ್ನಿದು ಸುರೇಂದ್ರಾಶಾದ್ರಿ ಭಾವಿಪ್ಪೊಡಿ
ನ್ನಿದು ನೋಡೊಪ್ಪುವ ಮೂಡಲಲ್ಲದಿದು ತಾಂ ಮೂಡಲ್ಮನೋರಾಗದಿಂ
ದಿದನೇಱಿರ್ದವನಲ್ಲನಂಬುಜಸಖಂ ಪ್ರತ್ಯಕ್ಷಶೀತಾಂಶು ಕೇ
ಳಿದನೇಱಿದವನರ್ಕನೆಂದೆನಿಸಿ ತಾಂ ಸೌಂದರ್ಯದಿಂ ಭೂಭುಜಂ ೧೩೪

ಗದ್ಯ॥ ಆವಷ್ಟಂಭದೊಳ್ ಕುಳ್ಳಿರೆ ೧೩೫

ತೊಳಗುವ ಶಶಿಮಂಡಲಮಂ
ಬಳಸಿದ ತಾರಾಳಿಯಂತೆ ಸುತ್ತಿರ್ದುದು ಭೂ
ತಳಪತಿಯಂ ನೃಪಸುತರುಂ
ವಿಳಾಸದಿಂ ಮಕುಟಬದ್ಧರುಂ ಪಂಡಿತರುಂ ೧೩೬

ತೊಳಗುತ್ತ ಸುತ್ತಲೂ ಮಿಂಚುಗಳನ್ನು ಹರಡಿದ ಹಾಗೆ ಬೆಳಕಿನಿಂದ ವಿರಾಜಿಸುತ್ತಿದ್ದ, ನಾನಾ ಅಲಂಕಾರಗಳಿಂದ ಕೂಡಿದ ಸಿಂಹಾಸನದ ಮೇಲೆ ದೊರೆ ಕುಳಿತಿದ್ದನು ೧೩೨-೧೩೩. ಆ ಸಿಂಹಾಸನ, ನೋಡುವವರಿಗೆ "ಇದು ಪೂರ್ವದಿಕ್ಕಿನ ಬೆಟ್ಟ ಅಲ್ಲ, ಇದು ದೇವೇಂದ್ರನ ದಿಕ್ಕು, ಭಾವಿಸಿದರೆ ಇದು ಒಪ್ಪುವ ಮೂಡಲಲ್ಲ, ಇದು ತಾನು ಮನೋನುರಾಗದಿಂದ ಮೂಡುವುದಕ್ಕೆಂದು ಕಮಲಮಿತ್ರನು ಏರಿದ್ದಾನೆ, ಅಲ್ಲ, ಅಲ್ಲ, ಇವನು ಪ್ರತ್ಯಕ್ಷ ಶೀತ ಕಿರಣ (ಚಂದ್ರ) ಕೇಳು. ಇದನ್ನ ಏರಿರುವವನು ಅರ್ಕ (ಸೂರ್ಯ)" ಎಂದೆನ್ನಿಸಿ ರಾಜನು ವೈಭವದಿಂದ ಕುಳಿತಿದ್ದನು (ನೋಟಕರಿಗೆ ಅವನು ಸೂರ್ಯನೆ, ಚಂದ್ರನೆ, ಎಂಬ ಭ್ರಾಂತಿಯುಂಟಾಗುತ್ತಿತ್ತೆಂದು ಭಾವ) ೧೩೪–೧೩೫. ಹೊಳೆಯುವ ಚಂದ್ರಮಂಡಲವನ್ನು ಸುತ್ತುಗಟ್ಟಿರುವ ನಕ್ಷತ್ರ ಸಮೂಹದಂತೆ ರಾಜನನ್ನು ರಾಜಪುತ್ರರೂ ಕಿರೀಟಧಾರಿಗಳಾದ ಸಾಮಂತರೂ ಪಂಡಿತರೂ ಸುತ್ತುಗಟ್ಟಿಕುಳಿತಿದ್ದರು ೧೩೬. ಅಂತಃಪುರದ

ಮುತ್ತಿನ ಹಾರವೊಪ್ಪೆ ಕುಚಮಂಡಲದೊಳ್ ಪೊಸಜಾದಿ ಚೆಲ್ವನೀ
ಯುತ್ತಿರೆ ದೇಸಿಯಿಂ ನಿಮಿರ್ದ ಸೋರ್ಮುಡಿಯೊಳ್ ನೊಸಲಲ್ಲಿ ಶೋಭನಂ
ಬೆತ್ತಿರೆ ಚಾರುಚಂದನದ ಬೊಟ್ಟು ದುಕೂಲಮುಮರ್ಕವೆತ್ತು ಚೆ
ಲ್ವಿತ್ತಿರೆ ಪೆಂಡವಾಸದೊಳುಪೆಂಡಿರಲಂಕೃತಿಯಿಂದಮಿರ್ಪಿನಂ ೧೩೭

ನಾರಂಗಸ್ತನೆಯರ್ ಮನೋಹರೆಯರಂಭೋಜಾಕ್ಷಿಯರ್ ಬಿಂಕದಿಂ
ದೋರಂತೊಪ್ಪಿ ವಿಳಾಸಮಂ ಮೆಱೆಯುತುಂ ಲಾವಣ್ಯಮಂ ಬೀಱುತುಂ
ಹಾರಾದ್ಯಾಭರಣಂಗಳಿಂ ವಿವಿಧ ವಸ್ತ್ರಾನೀಕದಿಂದಂ ಚಮ
ತ್ಕಾರಂ ಕೈಮಿಗೆ ಪೊನ್ನ ಚಾಮರಮನುರ್ವೀವಲ್ಲಭಂಗಿಕ್ಕಿದರ್ ೧೩೮

ಪಡೆವಳನಾಗೆ ಹಾರಮುಮದೊಪ್ಪುವ ಪೆರ್ಮೊಲೆ ತಂತ್ರವಾಗೆ ಪೊಂ
ದೊಡವಿನೊಳಾದ ನಿಸ್ವನಮೆ ದುಂದುಭಿಯಾಗೆ ವಿಳಾಸಲೋಚನಂ
ಕಡುಪಿನ ಬಾಣಮಾಗೆ ಧನುವಾಗೆ ನೆಗಟ್ಟಿಯ ಪುರ್ವು ಮೇಲುದುಂ
ಗಡ ಗುಡಿಯಾಗೆ ಕಾಂತೆಯರಸಂಗನ ಪೆರ್ವಲದಂತಿರೊಪ್ಪಿದರ್ ೧೩೯

ಕೊಸಗಿನ ಪೂವಿನೊಂದು ರುಚಿಯಂ ತನು ತುಂಬಿಯ ಬಂಬಲಂ ಕುರು
ಳ್ಪೊಸದಳಿರಂದಮಂ ಕರತಳಂ ದನಿ ಕೋಗಿಲೆಯಂ ಮುಗುಳ್ಗಳಂ
ಮಿಸುಗುವ ದಂತಪಂಕ್ತಿ ಲತೆಯಂ ನಳಿತೋಳ್ನಿಱಿ ಪೋಲ್ತುನಾಡೆ ರಂ
ಜಿಸುವ ವಿಳಾಸಿನೀನಿಕರದಿಂ ಪೊಸಸುಗ್ಗಿ ವೊಲಿರ್ದುದೋಲಗಂ ೧೪೦

ಕಾಂತೆಯರು ಅಲ್ಲಿ ಅಲಂಕಾರ ಭೂಷಿತರಾಗಿ ವಿರಾಜಮಾನರಾಗಿದ್ದರು, ಅವರ ಕುಚಗಳ ಮೇಲೆ ಮುತ್ತಿನಹಾರಗಳು ಶೋಭಿಸುತ್ತಿದ್ದುವು. ಸುಂದರವಾಗಿ ಕಟ್ಟಿದ ಸೋರ್ಮುಡಿಯಲ್ಲಿ ಹೊಸ ಜಾಜಿ ಚೆಲುವನ್ನು ನೀಡುತ್ತಿತ್ತು. ಹಣೆಯ ಮೇಲೆ ಸುಂದರವಾದ ಚಂದನದ ಚುಕ್ಕೆ ಶೋಭನವಾಗಿತ್ತು. ರೇಷ್ಮೆವಸ್ತ್ರಗಳನ್ನು ಧರಿಸಿದ ಅಂತಃಪುರದ ಹೆಂಗಸರು ಶೋಭಿಸುತ್ತಿದ್ದರು. ಕಿತ್ತಿಳೆಯಂಥ ಸ್ತನಗಳುಳ್ಳ ಮನೋಹರೆಯರು, ಕಮಲಾಕ್ಷಿಯರು ಬಿಂಕದಿಂದ, ವಿಳಾಸವನ್ನು ಮೆರೆಯುತ್ತ, ಲಾವಣ್ಯವನ್ನು ಹೊರಚೆಲ್ಲುತ್ತ ಶೋಭಿಸುತ್ತಿದ್ದರು. ಹಾರಗಳೇ ಮೊದಲಾದ ಅನೇಕ ಅಭರಣಗಳನ್ನು ಧರಿಸಿ ವಿಧವಿಧವಾದ ವಸ್ತ್ರಸಮೂಹದಿಂದ ಬಂಗಾರದ ಚಾಮರ ಗಳನ್ನು ಹಿಡಿದು ರಾಜವಲ್ಲಭನಿಗೆ ಗಾಳಿ ಹಾಕುತ್ತಿದ್ದರು ೧೩೭–೧೩೮. ಹಾರವೇ ದಳ ವಾಯಿ, ಒಪ್ಪುವ ಪೆರ್ಮೊಲೆಯೇ ಸೈನ್ಯ, ಹೊನ್ನಿನ ಒಡವೆಗಳ ಶಬ್ದವೇ ದುಂದುಭಿ ಧ್ವನಿ, ಸುಂದರವಾದ ಕಣ್ಣುಗಳೇ ಬಾಣಗಳು, ಹುಬ್ಬು ಶ್ರೇಷ್ಠವಾದ ಬಿಲ್ಲು, ಮೇಲು ವಸ್ತ್ರವೇ ಧ್ವಜ ! ಹೀಗೆ ಅರಸನ ಸುತ್ತ ಇದ್ದ ಕಾಂತೆಯರು ಮನ್ಮಥನ ದೊಡ್ಡ ಸೈನ್ಯ ದಂತೆ ಶೋಭಿಸಿದರು ೧೩೯. ಬೆಟ್ಟದಾವರೆ ಹೂವಿನ ಒಂದು ಪರಿಮಳವುಳ್ಳ ಮೈ, ಕುರುಳುಗಳು ದುಂಬಿಗಳ ಸಮೂಹ, ಹೊಳೆಯುವ ಹಲ್ಲಿನ ಸಾಲು ಮೊಗ್ಗುಗಳು, ಅಂಗೈ ಗಳು ಹೊಸ ಚಿಗುರು, ಧ್ವನಿ ಕೋಗಿಲೆಯ ಸ್ವರ, ಉದ್ದನೆಯ ತೋಳುಗಳು ಬಳ್ಳಿಗಳು, ಹೀಗೆ ವಿಶೇಷವಾಗಿ ರಂಜಿಸುತ್ತಿದ್ದ ಆ ಸ್ತ್ರೀ ಸಮೂಹದಿಂದ ಕೂಡಿ ಆ ರಾಜ ಸಭೆಯು ಹೊಸ ಸುಗ್ಗಿಯನ್ನು ಹೋಲುತ್ತಿತ್ತು ೧೪೦. ಸುಂದರ ವಿಶಾಲವಾದ ಕಣ್ಣುಗಳು

ಚಾರು ವಿಶಾಲಲೋಚನಯುಗಂ ಕಣೆಯಂ ಪೊಲೆ ಚಕ್ರಮಂ ಕಚಂ
ಸಾರಮೆನಿಪ್ಪ ಚೆಂಬರಿಗೆಯಂ ನಳಿತೋಳಸಿಯಂ ಸಮಂತು ಪೋ
ಲ್ತಾ ರಮಣೀನಿಕಾಯದಿನನಂಗನ ನಚ್ಚಿನ ದಿವ್ಯ ಶಸ್ತ್ರಭಂ
ಡಾರದ ಗೇಹಮಂ ನೆಱೆಯೆ ಪೋಲ್ತುದು ಭೂಪನಿತೇಶನೋಲಗಂ ೧೪೧

ನಿಱಿದಲೆ ನೀಳ್ದಪುರ್ವು ನಳಿತೋಳ್ನಿಡುಗಣ್ ಸುಲಿಪಲ್ ಘನಸ್ತನಂ
ತುಱುಗೆಮೆ ಕೋಮಲಾಂಗಮಳವಟ್ಟ ಕುರುಳ್ಪವಳಾಧರಂ ಕರಂ
ಮಿಱುಗುವ ದಂತಪಂಕ್ತಿನಯನಂ ಗೆಡೆಗೊಂಡ ಮುಖಂ ನಖಂ ಕಚಂ
ನೆಱೆ ರಮಣೀಯಮಾಗೆ ರಮಣೀನಿಕರಂ ನೆರೆದಿರ್ದುದೊಪ್ಪದಿಂ ೧೪೨

ಬೆರಲೊಳು ರತ್ನಮುದ್ರಿಕೆ ವಿರಾಜಿಸೆ ಕಂಠದೊಳೊಪ್ಪೆ ಮುತ್ತಿನೈ
ಸರಮಳವಟ್ಟು ಹಸ್ತಯುಗದೊಳ್ ಮಣಿಕಂಕಣಮೆಯ್ದೆ ಶೋಭಿಸು
ತ್ತಿರೆ ಕಟಿಸೂತ್ರಮೊಪ್ಪೆ ಕಟಿಯೊಳ್ ತಲೆಯೊಳ್ ನೆಱೆ ಚೆಲ್ವ ಪೂಗಳೊ
ಪ್ಪಿರೆ ಗಣಿಕಾಜನಂ ಸ್ಮರನ ದೀಹದ ಪುಲ್ಲೆಯೊಲಿರ್ದುದೊಪ್ಪದಿಂ ೧೪೩

ಪೂಸಿದದೊಂದು ಕುಂಕುಮಮೆ ತಾಂ ತಿಮಿರಾಗೆ ಲಲಾಟಪಟ್ಟದೊಳ್
ಭಾಸುರಮಪ್ಪದೊಂದು ತಿಲಕಂ ತಿಲಕಕ್ಕೆಣೆಯಾಗೆ ಸೆಳ್ಳುಗುರ್
ದೇಸಿಯಿನೊಪ್ಪುವೆತ್ತುಮರ್ದ ಕೂರಲಗಾಗೆ ವಿಳಾಸದಿಂದಮಿ
ರ್ದಾಶಶಿವಕ್ತ್ರೆಯರ್ನೆಗಟ್ದ ಕಾವನ ಮಾಸವಳಂಬೊಲೊಪ್ಪಿದರ್ ೧೪೪

ಬಾಣಗಳನ್ನೂ ಮೊಲೆ ಚಕ್ರಾಯುಧವನ್ನೂ ಜಡೆ ಸಾರವೆನಿಸಿದ ಚಿನ್ನದ ಗುರಾಣಿಯನ್ನು ಉದ್ದನೆಯ ತೋಳುಗಳು ಕತ್ತಿಯನ್ನೂ ಚೆನ್ನಾಗಿ ಹೋಲುತ್ತ ರಮಣೀ ಸಮೂಹದಿಂದ ಮನ್ಮಥನ ದಿವ್ಯ ಶಸ್ತ್ರಗಳ ಭಂಡಾರದ ಮನೆಯನ್ನು ಹೋಲುತ್ತಿತ್ತು, ಆ ರಾಜನ ಮಹಾ ಸಭೆ ! ೧೪೧. ಸುಂದರವಾದ ತಲೆ, ಉದ್ದನೆಯ ಹುಬ್ಬು, ದೀರ್ಘವಾದ ತೋಳುಗಳು, ಶುಭ್ರವಾದ ಹಲ್ಲು, ದೊಡ್ಡ ಮೊಲೆ, ದಟ್ಟವಾದ ಕೂದಲಿನ ರೆಪ್ಪೆ, ಕೋಮಲ ಶರೀರ, ಹೊಂದಿಕೆಯಾದ ಮುಂಗುರುಳು, ಹವಳದಂಥ ತುಟಿ, ಬಹಳ ಹೊಳೆಯುವ ಹಲ್ಲಿನ ಸಾಲು, ಕಣ್ಣುಗಳ ಜತೆಗೂಡಿದ (ಹೊಂದಿಕೆಯಾದ) ಮುಖ, ಉಗುರು, ತಲೆಗೂದಲು ಇವೆಲ್ಲ ಬಹಳ ಸುಂದರವಾಗಿದ್ದು ರಮಣಿಯರ ಸಮೂಹ ಶೋಭಿಸುತ್ತಿತ್ತು ೧೪೨. ಬೆರಳಿನಲ್ಲಿ ರತ್ನದ ಉಂಗುರ ವಿರಾಜಿಸಲು ಕೊರಳಲ್ಲಿ ಮುತ್ತಿನ ಐದೆಳೆಯ ಸರ, ಕೈಗೆ ರತ್ನಕಂಕಣ, ಸೊಂಟದಲ್ಲಿ ಒಪ್ಪುವ ಕಟಿಸೂತ್ರ, ತಲೆಯ ಮೇಲೆ ಹಲವು ಅಂದದ ಹೂಗಳು, ಒಪ್ಪುತ್ತಿರಲು ವೇಶ್ಯೆಯರು ಮನ್ಮಥನ ಬೇಟೆಯ ಹುಲ್ಲೆಗಳೋ ಪಾದಿಯಲ್ಲಿ ಶೋಭಿಸುತ್ತಿದ್ದರು ೧೪೩. ಹಚ್ಚಿಕೊಂಡ ಪಚ್ಚಕರ್ಪೂರವೇ (ಕುಂಕುಮಕೇಸರಿ) ತಿಮಿರು ಆಗಲು ಹಣೆಯ ಪಟ್ಟದಲ್ಲಿ ಪ್ರಕಾಶಮಾನವಾದ ಒಂದು ತಿಲಕವು ಒಂದು ಚಿತ್ರಕ್ಕೆ ಹೋಲಿಕೆಯಾಗಲು ಸೆಳ್ಳುಗುರು ಅಂದದಿಂದ ಕೂಡಿದ ಹರಿತವಾದ ಕತ್ತಿಯಾಗಲು ವಿಲಾಸದಿಂದ ಆ ಚಂದ್ರಮುಖಿಯರು ಮನ್ಮಥನ ಮಹಾ ಪ್ರಭಾವದವರಂತೆ ರಾರಾಜಿಸುತ್ತಿದ್ದರು ೧೪೪. ಕಾಂತಿಯುಕ್ತವಾದ ದೊಡ್ಡ

ಪೊಳೆವ ವಿಶಾಲಲೋಚನದ ಮುತ್ತಿನ ಹಾರದ ಬೆಳ್ಪು ನೀಲಕುಂ
ತಳದ ಪೊದಟ್ದ ಕಾಡಿಗೆಯಕಪ್ಪಧರಂಗಳ ಪಾಣಿ ಪಲ್ಲವಂ
ಗಳ ಗೆಡೆಗೊಂಡ ಕೆಂಪು ಕರವೊಪ್ಪಿರೆ ಶೋಭೆಯಿನೊಪ್ಪುವಾಳ್ದಕೋ
ಮಳೆಯರನಂಗರಾಜನ ವಿನೋದದ ಚಿತ್ರಪಟಂಬೊಲೊಪ್ಪಿದರ್ ೧೪೫

ಧರಣೇಂದ್ರನೋಲಗಕ್ಕಂ
ಸುರಪತಿಯೊಡ್ಡೋಲಗಕ್ಕಮಿದು ಮಿಗಿಲೆಂಬೋಲ್
ಕರವೊಪ್ಪಿದುರ್ದುದು ಸಭೆಯಾ
ತರಳಾಕ್ಷಿಯರಿಂ ಪೊದಟ್ದು ನೂರ್ಮಡಿ ಚೆಲ್ವಂ ೧೪೬

ರಸದ ಮುಟೆ ಕರೆದಪುದು ಸಂ
ತಸದಿಂ ಮಾಣದೆ ರಸಾಯನದ ಕೂಪದೊಳೆಂ
ಬೆಸಕದಿನಸದಳಮೆಸೆದುದು
ರಸಗೀತಂ ವಸುಮತೀಶನಾಸ್ಥಾಯಿಕೆಯೊಳ್ ೧೪೭

ಇವು ಮತ್ತೇಭಂಗಳುದ್ದಂ ನುಡಿಯದೆ ಭಯದಿಂದಟ್ಟಿದಂ ಮಾಳವಂ ಮ
ತ್ತಿವು ಜಾತ್ಯಶ್ವಂಗಳುರ್ಕಂ ಬಿಸುಟು ವಿನಯದಿಂದಟ್ಟಿದಂ ಪಲ್ಲವಂ ಮ
ತ್ತಿವು ನಾನಾರತ್ನಮುಂ ಮುಂ ತೊಟೆದ ಮಹಿಮೆಯಿಂದಟ್ಟಿದಂ ಚೌಳಿಕಂ ತಾ
ನಿವು ಕಾಶ್ಮೀರೇಶನೊಲ್ದಟ್ಟಿದ ನಿರುಪಮ ವಸ್ತ್ರೋತ್ಕರಂ ದಿವ್ಯವಸ್ತ್ರಂ ೧೪೮

ಕಣ್ಣುಗಳ ಮತ್ತು ಮುತ್ತಿನ ಹಾರಗಳ ಬಿಳುಪು, ಕಪ್ಪನೆಯ ತಲೆಗೂದಲಿನ ಮತ್ತು ಹೆಚ್ಚಾದ ಕಾಡಿಗೆಯ ಕಪ್ಪು, ತುಟಿಗಳ ಮತ್ತು ಅಂಗೈಗಳ ಹೊಂದಿಕೆಯಾದ ಕೆಂಪು, ಇವೆಲ್ಲ ಚೆನ್ನಾಗಿ ಒಪ್ಪುತ್ತಿರಲು ಆ ಕೋಮಲೆಯರು ಮನ್ಮಥರಾಜನ ವಿನೋದದ ಚಿತ್ರಪಟದಂತೆ ಶೋಭಿಸುತ್ತಿದ್ದರು. ೧೪೫. ಆ ಶೇಷರಾಜನ ಸಭೆಗೂ ದೇವೇಂದ್ರನ ಸಭೆಗೂ 'ಇದು ಹೆಚ್ಚು' ಎಂಬ ಹಾಗೆ ಆ ಸಭೆಯು ಆ ಚಂಚಲಾಕ್ಷಿಯರಿಂದ ನೂರರಷ್ಟು ಚೆಲುವಿನಿಂದ ಕೂಡಿದ್ದಿತು. ೧೪೬. ರಸಾಯನದ ಬಾವಿಯೊಳಗೇ ರಸದ ಮಳೆ ಸುರಿಯುವುದೆಂಬ ಮಾತಿನಂತೆ ಸುಂದರವಾದ ಆ ರಾಜಸಭೆಯಲ್ಲಿ ರಸಮಯವಾದ ಸಂಗೀತವು ಅಸದೃಶವಾಗಿ ಕೇಳಿಬರುತ್ತಿತ್ತು. ೧೪೭. ಆ ರಾಜಸಭೆಯಲ್ಲಿ ದೌವಾರಿಕರು ಎದ್ದುನಿಂತು ಹೀಗೆ ಬಿನ್ನವಿಸುತ್ತಿದ್ದರು : "ಇವು ಮದ್ದಾನೆಗಳು, ಹೆಚ್ಚು ಮಾತನಾಡದೆ ಮಾಳವ ರಾಜನು ಭಯದಿಂದ ತಮ್ಮಲ್ಲಿಗೆ ಕಳುಹಿಸಿಕೊಟ್ಟಿದ್ದಾನೆ. ಇವು ಜಾತಿಯ ಕುದುರೆಗಳು. ಪಲ್ಲವರಾಜನು ಗರ್ವವನ್ನು ಬಿಟ್ಟು ವಿನಯದಿಂದ ಇವನ್ನು ಕೊಟ್ಟು ಕಳುಹಿಸಿದ್ದಾನೆ. ಚೋಳದೇಶದ ರಾಜನು ವೈಭವದ ಗರ್ವವನ್ನು ಬಿಟ್ಟು ಈ ನಾನಾ ರತ್ನಗಳನ್ನು ಕಳುಹಿಸಿದ್ದಾನೆ. ಇವು ಕಾಶ್ಮೀರರಾಜನು ಪ್ರೀತಿಯಿಂದ ಕಳುಹಿಸಿದ ಶ್ರೇಷ್ಠವಾದ ವಸ್ತ್ರಸಮೂಹ

ಗದ್ಯ॥ ಎಂದು ಪರದೇಶಾಧೀಶ್ವರರಟ್ಟಿದ ಕಪ್ಪಮುಮಂ ಬಂದ ದೂತರುಮಂ ತೋಱಿ ಬಿನ್ನಪಂಗೆಯ್ವ ದೌವಾರಿಕರಿಂದಮೆಸೆದುದು ; ಮತ್ತಂ ೧೪೯

ಮನಸಿಜರಾಜಂ ನೋಟಕ
ಜನಕ್ಕೆ ಲೇಸಾಗಿ ಠಕ್ಕನಿಕ್ಕಿದನೆಂಬಂ
ತನವರತಂ ರಂಜಿಸಿದುವು
ಜನಪತಿಯೋಲಗದೊಳಾದ ಪಲವುಂ ನೃತ್ಯಂ ೧೫೦

ವಾರಸ್ತ್ರೀನಿಕುರುಂಬದಿಂ ಮಕುಟಬದ್ಧಾನೀಕದಿಂ ಭವ್ಯರಿಂ
ಭೂರಾಮಾಧಿಪರಿಂ ಬುಧಪ್ರತತಿಯಿಂ ಸಾಮಂತರಿಂ ಜಾಣರಿಂ
ಶೂರರ್ಧೀರರುದಾರರಪ್ಪ ಪಲಬರ್ಚಾತುರ್ಯದಿಂ ವೀರರಿಂ
ದೋರಂತೊಪ್ಪಿದುದುನ್ನತಿಕ್ಕೆಯೊದವಿಂ ಭೂಪಾಲನೊಡ್ಡೋಲಗಂ ೧೫೧

ಗದ್ಯ॥ ಅಂತಮರೇಂದ್ರ ಲೀಲೆಯಿಂದೊಡ್ಡೋಲಗಂಗೊಟ್ಟಿರ್ದೊದ್ದಾಯನ ಮಹಾರಾಜಂ ತನಗೆ ಮುಕ್ತಿಶ್ರೀಯಟ್ಟಿದ ದೂತನಂತೆ ಬರ್ಪ ಕೃತಕರ್ಷಿಯಂ ಕಂಡು ೧೫೨

ಮನದೊಳ್ ರಾಗಂ ಭೋಂಕನೆ
ತನಗಾಗಳ್ ಪುಟ್ಟೆ ಹಸ್ತಕಮಲದ್ವಯಮಂ
ಜನನಾಥಂ ಮುಗಿದು ಮುನೀಂ
ದ್ರನನಿದಿರ್ಗೊಳಲೆಂದು ಭಕ್ತಿಪೂರ್ವಕದಿಂದಂ ೧೫೩

೧೪೮. "ಹೀಗೆಂದು ಹೇಳುತ್ತ ಅವುಗಳನ್ನು ತಂದ ದೂತರನ್ನೂ ಪರದೇಶಗಳ ರಾಜರು ಕಳುಹಿಸಿದ ಕಪ್ಪಕಾಣಿಕೆಗಳನ್ನೂ ಅರಸನಿಗೆ ತೋರಿಸುತ್ತಿದ್ದರು. ೧೪೯. ಆ ರಾಜನ ಸಭೆಯಲ್ಲಿ ನಡೆಯುತ್ತಿದ್ದ ಹಲವು ನೃತ್ಯಗಳು ಮನ್ಮಥ ರಾಜನು ನೋಡುವ ಜನಕ್ಕೆರನ್ನುಬಹಳ ಚೆನ್ನಾಗಿ ಮರುಳುಗೊಳಿಸುತ್ತಿರುವನೆಂಬಂತೆ ತೋರುತ್ತಿದ್ದವು. ೧೫೦. ಸೂಳೆಯರ ಗುಂಪಿನಿಂದಲೂ ಕಿರೀಟಬದ್ಧರ ಸಮೂಹದಿಂದಲೂ ಭವ್ಯರಿಂದಲೂ ಭೂಸ್ವಾಮಿಗಳಿಂದಲೂ, ಪಂಡಿತಪ್ರವರರಿಂದಲೂ, ಸಾಮಂತರಿಂದಲೂ ಜಾಣರಿಂದಲೂ, ಶೂರರೂ ಧೀರರೂ ಆದ ಹಲವರು ಚತುರರಿಂದಲೂ ವೀರರಿಂದಲೂ ಕೂಡಿ ಆ ಭೂಪಾಲಕನ ಒಡ್ಡೋಲಗವು ವಿಶೇಷವಾಗಿ ಶೋಭಿಸುತ್ತಿತ್ತು. ೧೫೧. ಹಾಗೆ ದೇವೇಂದ್ರನೋಪಾದಿಯಲ್ಲಿ ಸಭೆಯಲ್ಲಿ ಕುಳಿತುಕೊಂಡಿದ್ದ ಒದ್ದಾಯನ ಮಹಾರಾಜನು ತನಗೆ ಮೋಕ್ಷಲಕ್ಷ್ಮಿಯು ಅಟ್ಟಿದ ದೂತನ ಹಾಗೆ ಬರುತ್ತಿದ್ದ ಕಪಟ ಋಷಿಯನ್ನು ನೋಡಿದನು. ೧೫೨. ಮನಸ್ಸಿನಲ್ಲಿ ತಟ್ಟನೆ ಸಂತೋಷ ಹುಟ್ಟಿತು. ಅವನು ಎರಡು ಕೈಗಳನ್ನೂ ಜೋಡಿಸಿ ಮುನಿಶ್ರೇಷ್ಠನನ್ನು ಇದಿರುಗೊಳ್ಳಲೆಂದು ಭಕ್ತಿಯಿಂದ ಹೊರಟನು. ೧೫೩. ರೇಷ್ಮೆಯ ಬಟ್ಟೆಯು

ಗದ್ಯ॥ ದುಕೂಲವಸ್ತ್ರದುತ್ತರಾಸನಂಬೆರೆಸಿ ಇದಿರಾಗಿ ಬಂದು ೧೫೪

ವರಮುಕ್ತಿಶ್ರೀಯಲ್ಲಿಗೆ
ಭರವಶದಿಂದೇಱಲೆಂದು ನಿಚ್ಚಣಿಗೆಯನೊ
ಪ್ಪಿರೆ ಪಿಡಿವ ಮಾೞ್ಕೆಯಿಂದಂ
ನರೇಶ್ವರಂ ಪಿಡಿದನಾ ಮುನೀಂದ್ರನ ಕಾಲಂ ೧೫೫

ಗದ್ಯ॥ ತಾಂ ಗುಣನಿಧಾನ ದೀಪವರ್ತಿಯಪ್ಪುದಱಿಂ ಗುಣನಿಳಯನ ಪಾದಕ್ಕೆಱಗಿ ಪೊಡೆ ಮಟ್ಟು ನಿಲಿಸಿ ರಾಗದಿನೊಡಗೊಂಡುಬಂದುಚ್ಚಾಸನದೊಳ್ಕುಳ್ಳಿರಿಸುವುದುಂ ೧೫೬

ನಿಲಲಾಱದೆ ದುರ್ಗಂಧ
ಕ್ಕಲಸಿ ಕೆಲರ್ಜಗುಳ್ದು ಪೋದರವನಿಪನಲ್ಲಿಂ
ತೊಲಗಿದೊಡೆ ಕೊಲ್ಗುಮೆಮ್ಮಂ
ಮುಳಿದೆಂದುಂ ಕೆಲಬರಂಜಿ ಪೋಗದೆ ನಿಂದರ್ ೧೫೭

ಮೂಗೊಡದಂತಿರೆ ತಲೆಯಂ
ಬಾಗಿ ಕೆಲರ್ನೋಡಲಾಱದಿರ್ದರ್ಮನದೊಳ್
ರಾಗಂಗೆಟ್ಟು ಕೆಲಂಬರ್
ಮೂಗಂಮುಚ್ಚಿರ್ದರಾಱದುಮ್ಮಳಿಸುತ್ತುಂ ೧೫೮

ಗದ್ಯ॥ ಮತ್ತಂ ದುರ್ಗಂಧಕ್ಕಿರಲಾಱದೆ ಲೆಂಕರ್ ದಂಡಂಗೊಂಡರಂತೆ ಶಂಕಿಸುತ್ತುಂ ಪೆಱಪಿಂಗೆ ಪರಿಚಾರಕಿಯರಿರಲಾಱದೆ ನುಸುಳ್ದೊಡೆ ಬಾಣಸಿಗರಿದೇನ್ನಾಣಪುತ್ತೆಂದು ಪೋಗೆ ಕರವಳರಿ

ಹೊದಿಕೆಯುಳ್ಳ ಉತ್ತಮಾಸನದೊಡನೆ ಮುನಿಗೆ ಇದಿರಾಗಿ ಹೋಗಿ ಶ್ರೇಷ್ಠವಾದ ಮೋಕ್ಷಲಕ್ಷ್ಮಿಯಲ್ಲಿ ಭರವಸೆಯಿಂದ ಏರಿಹೋಗಲೆಂದು ಏಣಿಯನ್ನು ಹಿಡಿಯುವಂತೆ ಆ ರಾಜನು ಆ ಮುನೀಂದ್ರನ ಕಾಲನ್ನು ಹಿಡಿದನು. ೧೫೫. ತಾನು ಗುಣವೆಂಬ ನಿಕ್ಷೇಪಕ್ಕೆ ಸೋಲುವ ದೀಪವರ್ತಿಯಾದುದರಿಂದ ಗುಣನಿಲಯನಾದ ಆ ಮುನಿಯ ಪಾದಗಳಿಗೆ ಬಾಗಿ ನಮಸ್ಕರಿಸಿ ಆತನನ್ನು ನಿಲ್ಲಿಸಿ ಪ್ರೀತಿಯಿಂದ ಜತೆಯಲ್ಲಿ ಕರೆದುಕೊಂಡು ಬಂದು ಉನ್ನತಾಸನದಲ್ಲಿ ಕುಳ್ಳಿರಿಸಿದನು. ೧೫೬. ಆ ಮುನಿಯ ದೇಹದ ದುರ್ನಾತಕ್ಕೆ ಅಸಹ್ಯ ಪಟ್ಟು ಅಲ್ಲಿ ನಿಲ್ಲಲಾರದೆ ಕೆಲವರು ಜಾರಿ ಹೋದರು. ಅಲ್ಲಿಂದ ಹೊರಟುಹೋದರೆ ರಾಜನು ಸಿಟ್ಟುಗೊಂಡು ತಮ್ಮನ್ನು ಕೊಲ್ಲುವನೆಂದು ಹೆದರಿ ಕೆಲವರು ಹೋಗದೆ ನಿಂತರು. ೧೫೭. ಮೂಗು ಒಡೆಯುವಂತಿದ್ದುದರಿಂದ ತಲೆಬಾಗಿಸಿ ಕೆಲವರು ನೋಡಲು ಅಶಕ್ತರಾಗಿ ಮನಸ್ಸಿನ ಉತ್ಸಾಹ ಕಳೆದುಕೊಂಡು ಕೆಲವರು ಸಂಕಟ ಪಡುತ್ತ ಮೂಗು ಮುಚ್ಚಿಕೊಂಡು ನಿಂತಿದ್ದರು. ೧೫೮. ದುರ್ವಾಸನೆಯನ್ನು ತಾಳಿಕೊಂಡು ನಿಲ್ಲಲಾರದೆ ಸೇವಕರು ಶಿಕ್ಷಿಸಲ್ಪಟ್ಟವರಂತೆ ಅನುಮಾನಿಸುತ್ತ ಹಿಂದೆ ಸರಿದರು. ಸೇವಕಿಯರು ನಿಲ್ಲ ಲಾರದೆ ನುಸುಳಿಕೊಂಡು ಮರೆಯಾದರು. ಅಡಿಗೆಯವರು ಇದೇನು ನಾಚಿಕೆಯ ಹುತ್ತ ವೆಂದು ಹೊರಟು ಹೋದರು. ಖಡ್ಗಧಾರಿಗಳು 'ಇದು ಅಸಾಧ್ಯವಾಯಿತು' ಎಂದು

ದಾಯ್ತೆಂದು ಪಿಂಗೆ ಡವಕೆಯವರ್ ಶ್ರಮಂಗೊಂಡ ಪಾತ್ರದಂತುಮ್ಮಳಿಸೆ ಚಾಮರಿಯದರ್ಗೆ ಮಂ ಪೊಕ್ಕಕಣ್ಣಂತೆ ನೋಡಲಾಱದಿರೆ ಅರಸಿಯರ್ ಪರವಶಮಾದರಂತೆ ಕೀರ್ಗಳಂ ನೆಮ್ಮೆ ವಲ್ಲಭೆಯರ್ ಪೊಲ್ಲಗೆಯ್ದರಂತುಸಿರದೆ ಕುಳ್ಳಿರೆ ವಿಳಾಸಿನಿಯರ್ ವಿಳಾಸಂಗೆಟ್ಟರಂತೆ ಕುಂದೆ ನಾರಿಯರ್ ವಾರಿಸಲಾಱದಕ್ಕರಿಗರಂತೆ ಮಿಸುಕೆ ಸಂತೋಷದಾಳಿಯರ್ ತೂಂತುಪೋದ ಪರವಿಯಂತೆ ಬಿಟ್ಟು ಪರಿಯೆ ಪ್ರಭಾವತೀಮಹಾದೇವಿ ತನ್ನೊಳಿಂತೆಂದಳ್ ೧೯೯

ವರರತ್ನಂ ಪೇಲೊಳ್ ಬಿ
ದ್ದಿರೆಯದು ಪೊಲ್ಲೆಂದು ಬಿಸುಡಲಪ್ಪುದೆ ತಪದೊಳ್
ಪಿರಿಯರೆನಿಸಿದರ ರುಜೆಗೋ
ಸರಿಸುವುದೆ ಜಿನೇಂದ್ರಮಾರ್ಗದೊಳಗಂ ಬಲ್ಲಂ ೧೬೦

ಗದ್ಯ॥ ಎಂದು ತನ್ನ ಮನದೊಳ್ ಕೊಕ್ಕರಿಕೆಯಿಲ್ಲದೆ ದರಿದ್ರಂ ನಿಧಾನಮಂ ಕಂಡಂತೆ ಸಂತೋಷದಿಂದೊರ್ವಳೆ ನಿಲ್ವುದುಂ ಸಮ್ಯಕ್ತ್ವ ಚೂಡಾಮಣಿ ನವವಿಧಪುಣ್ಯದೊಳಂ ಸಪ್ತ ಗುಣಂಗಳೊಳಂ ನೆರೆದು ಮುನಿಗಾಹಾರದಾನಮಂ ಕುಡುವುದುಂ ಕಂಠಪ್ರಮಾಣಮುಂಡು ೧೬೧

ಕಣ್ಮರೆಯಾದರು. ಪೀಕದಾನಿಯವರು ಶ್ರಮಪಟ್ಟವಾದ್ಯಗಾರರಂತೆ ಸಂಕಟಪಟ್ಟರು. ಚಾಮರದವರು ಹೊಗೆಹೊಕ್ಕಕಣ್ಣಿನ ಹಾಗೆ ನೋಡಲಾರದೆ ಹೋದರು. ರಾಣಿಯರು ಮೈಮರೆತವರ ಹಾಗೆ ಗೋಡೆಗಳನ್ನು ಆತುಕೊಂಡರು. ಪ್ರೇಯಸಿಯರು ತಪ್ಪುಮಾಡಿದವರಂತೆ ಮಾತಿಲ್ಲದೆ ಕುಳಿತಿದ್ದರು. ವಿಳಾಸಿನಿಯರು ಸೊಗಸುಗೆಟ್ಟವರಂತೆ ಕುಗ್ಗಿದರು. ಹೆಂಗಸರು ತಡೆಯಲಾರದ ಅಕ್ಕರಿಗರಂತೆ ಮಿಸುಗುತ್ತಿದ್ದರು. ಸಂತೋಷದ ಕೆಳದಿಯರು ತೂತುಬಿದ್ದ ಮಡಕೆಯಂತೆ ಬಿಟ್ಟೋಡಿದರು. ಆಗ ಪ್ರಭಾವತೀ ಮಹಾದೇವಿಯು ಹೀಗೆಂದುಕೊಂಡಳು ೧೯೯. "ಶ್ರೇಷ್ಠವಾದ ರತ್ನವು ಹೇಲಿನಲ್ಲಿ ಬಿದ್ದಿರಲು 'ಅದು ಹೊಲ್ಲ' ಯೆಂದು ಬಿಸಾಡುವುದಕ್ಕೆ ಆಗುವುದೆ? ತಪಸ್ಸಿನಲ್ಲಿ ಹಿರಿಯರೆನಿಸಿದವರ ರೋಗಕ್ಕೆ ಅಸಹ್ಯಪಡುವುದು ಜಿನೇಂದ್ರಮಾರ್ಗದ ರಹಸ್ಯವನ್ನು ಬಲ್ಲವರಿಗೆ ಸರಿಯೆ?" ೧೬೦. ಹೀಗೆ ತನ್ನ ಮನಸ್ಸಿನಲ್ಲಿ ಅಸಹ್ಯವಿಲ್ಲದೆ ಬಡವನು ನಿಧಿಯನ್ನು ಕಂಡ ಹಾಗೆ ಸಂತೋಷದಿಂದ ಒಬ್ಬಳೇ ನಿಂತಿದ್ದಳು. ಸಮ್ಯಕ್ತ್ವ ಚೂಡಾಮಣಿಯಾದ ಮಹಾರಾಜನು ಒಂಬತ್ತು ಪುಣ್ಯಗಳಲ್ಲಿಯೂ (ಅವಾಹನ, ಪಾದ್ಯ, ಆಸನ, ಅರ್ಚನ, ವಂದನೆ, ಮನಃಶುದ್ಧಿ, ವಾಕ್‌ಶುದ್ಧಿ, ಕಾರ್ಯಶುದ್ಧಿ, ಏಷಣಾಶುದ್ಧಿ) ಏಳುಗುಣಗಳಲ್ಲಿಯೂ(ಸಮ್ಯಗ್ದರ್ಶನ, ನಿರ್ದುಷ್ಟಕರ್ಮ, ಶೀಲ, ಉದ್ಯೋಗಾರ್ತ, ಗುರುಭಕ್ತ, ಪ್ರವಚನಕುಶಲ ಬುದ್ಧಿಪ್ರೌಢಿಮೆ)ಕೂಡಿ ಮುನಿಗೆ ಆಹಾರ ದಾನ ಮಾಡಿದನು. ಮುನಿ ಕಂಠದವರೆಗೆ ಉಂಡ. ೧೬೧. ಶರೀರಯಾತನೆಯಿಂದ ಕಣ್ಣು

ಮಱುಗೆ ಶರೀರಂ ಕಣ್ಗಳ್
ಪೊಱಮಡೆ ಮೇಲ್ವಾಸಮೆತ್ತೆ ಸೆಡೆದಳ್ಕೆ ಬಲಂ
ಪೞಿವಡೆ ಜೊಮ್ಮನೆ ಜೋಲ್ದಂ
ತೆಱಪಂ ಪಾರ್ದಿರದೆ ತಡೆಯದೊರ್ಮೆಯೆ ಮುನಿಪಂ ೧೬೨

ಕರಮಲ್ಲದೆ ದುರ್ಗಂಧಂ
ಪಿರಿದಾಗೆ ನಗಾಗ್ರದಿಂದೆ ಧಾರಾಜಲಮು
ರ್ವರೆಗಿೞಿವಂತೋವೆಂದೋ
ಕರಿಸಿ ನರೇಶ್ವರನ ಮೇಲೆ ಕಾಱಿದನಾಗಳ್ ೧೬೩

ಗದ್ಯ॥ ಅಂತು ಕಾಱುವುದುಂ ೧೬೪

ಶಿರದಿಂದಂ ಮುಖದಿಂದಂ
ಕೊರಲಿಂದಂ ಕುಚಯುಗಂಗಳಿಂದಂ ಪಾದಂ
ಬರೆಗಂ ಪೆರ್ವೊನಲಾತಿರೆ
ಪರಿತಂದುದು ಮುಚ್ಚಿ ಮುಸುಱಿಕೊಂಡವನಿಪನಂ ೧೬೫

ಕೊೞೆಯುಂ ಬಣ್ಬಂ ಲೋಳೆಯು
ಮಳವಲ್ಲದ ವಜ್ರಲೇಪದಂತಿರೆ ಧಾತ್ರೀ
ತಳಪತಿಯ ಮೆಯ್ಯೊಳೆಲ್ಲಂ
ತಳಿಪಂ ತಳಿದಂತೆ ಕೂಡಿ ಪತ್ತಿತ್ತಾಗಳ್ ೧೬೬

ಗದ್ಯ॥ ಅಂತು ತನಗೆ ಸುಗತಿವನಿತೆ ಮೋಕ್ಷಪದಕ್ಕಡ್ಡಮಾದ ಕರ್ಮರಾಜನೊಡ್ಡಂ ಕಿಡಿಸಿ ಬಂದೆನ್ನೊಳ್ ಬೇಗಂ ನೆರೆಗೆಂದು ತನ್ನ ಕೂರ್ಮೆಯಿಂದಟ್ಟಿದ ವಜ್ರಕತ್ತಳದಂತಿರ್ದ ಲೋಳೆಗೆ ಕೊಕ್ಕರಿಸದೆ ಮುನಿಪತಿಗೆ ಛರ್ದಿಯಾದುದಕ್ಕಿನಾಡೆಯುಂ ಮನದೊಳ್ ನೊಂದು ೧೬೭

ಗುಡ್ಡೆ ಸಿಕ್ಕಿಕೊಂಡು ಮೇಲು ಹೊದಿಕೆಗಳನ್ನು ತೆಗೆಯಲು ತಡವಿಲ್ಲದೆ ತಡೆಯಲಾರದೆ ಆ ಮುನಿಶ್ರೇಷ್ಠನು ತಟ್ಟನೆ ರಾಜನಮೇಲೆ ಕಾರಿಕೊಂಡನು. ಅವನ ತಲೆಯಿಂದ ಕಾಲಿನ ವರೆಗೆ ಬೆಟ್ಟದ ಮೇಲಿಂದ ಧುಮುಕುವ ಧಾರಾಜಲದಂತೆ ವಾಂತಿ ಆವರಿಸಿತು (೧೬೨– ೧೬೩) ಹಾಗೆ ಕಾರಿಕೊಳ್ಳಲು ತಲೆಯಿಂದ ಮೈಮೇಲೆಲ್ಲ ದೊಡ್ಡ ಹೊಳೆಯಂತೆ ಹರಿದು ರಾಜನನ್ನು ಆ ವಾಂತಿ ಮುಚ್ಚಿಮುಸುರಿಕೊಂಡಿತು. ೧೬೪–೧೬೫. ಕೊಳೆ, ಲೋಳೆ, ಒಜ್ಜೆ, ಎಲ್ಲವೂ ಶಕ್ತಿಮೀರಿದ ವಜ್ರದ ಲೇಪದಂತೆ ಅರಸನ ಮೈಗೆಲ್ಲ ಮೆತ್ತಿಕೊಂಡಿತು. ೧೬೬. ಹಾಗೆ ತನಗೆ ಸುಗತಿಯೆಂಬ ಹೆಣ್ಣು ಮೋಕ್ಷಪದವಿಗೆ ಅಡ್ಡವಾಗಿರುವ ಕರ್ಮ ರಾಜನ ಸೈನ್ಯವನ್ನು ನಾಶಪಡಿಸಲು ಬಂದು ತನ್ನಲ್ಲಿ ಬೇಗೆ ನೆರೆಯಲಿ ಎಂದು ಪ್ರೀತಿ ಯಿಂದ ಕಳುಹಿಸಿದ ಅಂಗರಕ್ಷಕಕವಚದ ಹಾಗಿದ್ದ ಆಲೋಳೆಗೆ ಅಸಹ್ಯಪಟ್ಟುಕೊಳ್ಳದೆ ಮುನಿಶ್ರೇಷ್ಠನಿಗೆ ವಾಂತಿಯಾದುದಕ್ಕೆ ಮನಸ್ಸಿನಲ್ಲಿ ಬಹಳವಾಗಿ ನೊಂದುಕೊಂಡನು.೧೬೭.

ಕೆಟ್ಟೆಂ ಮುನೀಂದ್ರನಿಚ್ಛೆಯ
ನೊಟ್ಟಜೆಯಿಂದಱಿಯದೇಂ ಮಹಾಪಾತಕನೋ
ತೊಟ್ಟನೆ ಕೊಳಲೆನ್ನಿಚ್ಛೆಗೆ
ನೆಟ್ಟನೆ ಬಡ್ಡಿಸಿದೊಡಿನಿತು ನೋವಾಯ್ತೀಗಳ್ ೧೬೮

ಗದ್ಯ॥ ಎಂದು ತನ್ನಂತಾನೆ ನಿಂದಿಸಿಕೊಂಡು ತಡವರಿಸಿ ಬೀೞ್ವ ಮುನಿನಾಥನಂ ಬೀೞಲಿಯದೆ ತರ್ಕೈಸಿಕೊಂಡು ಕಣ್ಗಳಂ ತಳಂಗಳಿಂದಂ ನೀವಿ ಮೆಯ್ಯೊಳಾದ ಲೋಳೆಯೆಲ್ಲಮಂ ತೊಳೆದು ಕಳೆದು ೧೬೯

ಪಿರಿದಪ್ಪ ಶ್ರಮದಿಂ ನಿ
ತ್ತರಿಸದೆ ತಲೆತಿರ್ಗಿ ಮಱುಗಿ ಮೇಲುಸಿರಿಟ್ಟು
ರ್ವರೆಗೆ ಕೆಡೆದುರುಳ್ವ ಮುನಿಪನ
ನರಸಂ ತಾಳಿರ್ದನೊಂದು ಜಾವಂಬರೆಗಂ ೧೭೦

ಅಂತಿರ್ದು ಶ್ರಮಂ ಪೋದಿಂಬೞಿಕ್ಕಮೊಯ್ಯನೆ ಮಾಯಾಋಷಿಯುಂ ತಾನುಂ ಪ್ರಭಾವತೀ ಮಹಾದೇವಿಯುಂ ಮಜ್ಜನದ ಮನೆಗೊಯ್ದು ಬಿಸಿನೀರಿಂ ಮೆಯ್ಯೆಲ್ಲಮಂ ಕರ್ಚಿ ಮೆಯ್ಯನೀರಂ ದುಕೂಲಾಂಬರದಿಂ ತೊಡೆದು ಕಳೆದು ೧೭೧

ಪಿರಿದಪ್ಪದೊಂದು ಮಣೆಯೊಳ್
ವರಮುನಿಯಂ ತಂದು ಕುಳ್ಳಿರಿಸಿ ನೃಪನೆಂದಂ
ಪಿರಿದಪ್ಪ ಕ್ಲೇಶಂ ನಿಮ
ಗಿರದೆನ್ನಿಂ ಪಾಪಕರ್ಮನಿಂದಾಯ್ತು ನಿಸಂ ೧೭೨

ಕೆಟ್ಟೆ, ಮುನಿಶ್ರೇಷ್ಠನ ಇಷ್ಟವನ್ನು ಸರಿಯಾಗಿ ತಿಳಿದುಕೊಳ್ಳದೆ, ಮಹಾಪಾತಕನಾದ ನಾನು ನನ್ನ ಇಷ್ಟದ ಪ್ರಕಾರ ಊಟಕ್ಕೆ ಬಡಿಸಿದೆ. ಆತುರದಲ್ಲಿ ನೀಡಿದ್ದರಿಂದ ಮುನಿಗೆ ಇಷ್ಟು ನೋವಾಯಿತು" ೧೬೮. ಎಂದು ಆತ್ಮನಿಂದೆ ಮಾಡಿಕೊಂಡು ತಡವರಿಸಿ ಬೀಳುತ್ತಿದ್ದ ಮುನಿಶ್ರೇಷ್ಠನನ್ನು ಬೀಳಗೊಡದೆ ತಬ್ಬಿಕೊಂಡು ಅವನ ಕಣ್ಣುಗಳನ್ನು ಅಂಗೈಗಳಿಂದ ಒರಸಿ ಮೈಮೇಲೆ ಬಿದ್ದಿದ್ದ ಲೋಳೆಯನ್ನೆಲ್ಲವನ್ನೂ ತೊಳೆದು ತೆಗೆದನು. ೧೬೯. ಹೆಚ್ಚಾದ ಶ್ರಮದಿಂದ ಸಹಿಸಲಾರದೆ ನಿಲ್ಲಲಾರದೆ ತಲೆ ತಿರುಗಿ ಸಂಕಟದಿಂದ ಮೇಲುಸಿರುಬಿಡುತ್ತ ನೆಲದ ಮೇಲೆ ಬೀಳುತ್ತಿದ್ದ ಮುನಿಯನ್ನು ಒಂದು ಜಾವದ ವರೆಗೂ ಅರಸನು ತಾಳಿಕೊಂಡು ಹಿಡಿದು ನಿಂತಿದ್ದನು ೧೭೦. ಹಾಗೆ ನಿಂತಿದ್ದು ಶ್ರಮವಾರಿದಮೇಲೆ ಮೆಲ್ಲನೆ ಆ ಮಾಯಾ ಋಷಿಯನ್ನು ತಾನೂ ಪ್ರಭಾವತಿ ಮಹಾದೇವಿಯೂ ಸ್ನಾನದ ಮನೆಗೆ ಕರೆದುಕೊಂಡುಹೋಗಿ ಬಿಸಿನೀರಿನಿಂದ ದೇಹವನ್ನೆಲ್ಲ ತೊಳೆದು, ಮೈಮೇಲಿನ ತೇವವನ್ನು ಉತ್ತಮವಾದ ಪೆತ್ತನೆಯ ಬಟ್ಟೆಯಿಂದ ಒರಸಿದರು ೧೭೧. ದೊಡ್ಡದಾದ ಒಂದು ಮಣೆಯ ಮೇಲೆ ಆ ಮುನಿಶ್ರೇಷ್ಠನನ್ನು ಕರೆತಂದು ಕೂಡಿಸಿ ರಾಜನು ತನ್ನಿಂದ ಆತನಿಗೆ ಹೆಚ್ಚಿನ ಕ್ಲೇಶವಾಯಿತೆಂದು ಹೇಳಿ ಕ್ಷಮೆ ಕೇಳಿ ವಿನಯದಿಂದ ಅಡ್ಡಬಿದ್ದನು, ಪ್ರಭಾವತೀ ಮಹಾದೇವಿಯು ಸ್ನಾನಮಾಡಿ ದಿವ್ಯನಾದ

ಗದ್ಯ॥ ಎಂದು ಏನೆಯದಿಂ ಪೊಡೆಮಟ್ಟು ಪ್ರಭಾವತೀ ಮಹಾದೇವಿ ಮಜ್ಜನಂಬೊಕ್ಕು ದಿವ್ಯವಸ್ತ್ರಮನುಟ್ಟು ಮಗುಟ್ದುಬಂದು ಕೃತಕರ್ಪಿಯ ಕಾಲನೊತ್ತುತ್ತುಮಿಂತೆಂದಳ್ ೧೭೩

ತನುವಂ ಭಾವಿಸುವೊಡವೆ
ಳ್ಳನಿತುಂ ಶುಚಿಯಲ್ಲಮಶುಚಿದೇಹಮನಿದನಿ
ನ್ನನುಪಮಮೆಂದೆನಲಾಗದು
ಜಿನಮತದೊಳ್ಪೊಂದಿಯಱಿವಿನೊಳ್ನೆಗಟ್ದ ನರಂ ೧೭೪

ಗದ್ಯ॥ ಪುತ್ತಂ ಮಾಡುವ ಒಱಲೆಯಂತೆ ಪಾಪಮಂ ನೆರಪುವುದು ಕಿರ್ಚಿನಂತೆ ಪೊರ್ದಿದರಂ ಕಿಡಿಸುವುದು ಪಂದೆಯಂತೆ ಪೆಱನುಟಿಪುದು ಬಡತನದಂತೆ ಬಗೆದುದನೀಯದು ಪುಣ್ಣಿನಂತೆ ನೋವಂ ಮಾಟ್ಪುದು. ಗ್ರಹದಂತೆ ಪೀಡೆಯಂ ಮಾಟ್ಪುದು ಬಸಿಱ ಕುತ್ತದಂತೆ ನವೆಯಿಸುವುದು ಪಂದಿಯಂತೆ ಱೊಪ್ಪಂಗೊಳ್ಪುದು ಕೃಷ್ಣಪಕ್ಷದಂತೆ ಶುಭಮನೊಲ್ಲದು ಪಗೆಯಂತೆ ಭಯಮಂ ಮಾಟ್ಪುದು ಕೂಸಿನಂತೆ ಕೂಡದುದಂ ಬಯಸುವುದು ಪುಲ್ಲ ಕಿಚ್ಚಿನಂತೆ ಸ್ಥಿರಮಲ್ಲದು ; ಪೊಟ್ಟಿನಂತೆ ನಿಲಿಸಲರಿದಪ್ಪುದು. ತೊಱೆಯಂತೆ ಪಾಯಲರಿದಪ್ಪುದು ಗಾಳಿಯಂತೆ ಪಿಡಿಯಲರಿದಪ್ಪುದು. ಪೊಲೆಗೇರಿಯಂತೆ ಮೂಳೆಯ ಮಯಮಪ್ಪುದು ಕರ್ಪಿನಂತೆ ತೊಗಲನುಳ್ಳುದು ಬೀಣೆಯಂತೆ ನರದೊಳ್ ಕೂಡಿದುದು ತಿಪ್ಪೆಯಂತೆ ಪೇಸುಪತಮಪ್ಪುದು ಪಡಿಕೆಯಂತೆ ದುರ್ಗಂಧಮಪ್ಪುದು ಕೋಟೆಯಂತೆ ಕ್ರಿಮಿಪ್ರಿಯನಪ್ಪುದು ಜಿಗುಟೆಯಂತೆ ನೆತ್ತರ ಪ್ರಿಯನಪ್ಪುದು

ವಸ್ತ್ರವನ್ನು ಉಟ್ಟುಕೊಂಡು ಮತ್ತೆ ಬಂದು ಮಾಯಾ ಋಷಿಯ ಕಾಲುಗಳನ್ನು ಒತ್ತುತ್ತ ಹೀಗೆಂದಳು ೧೭೩. ಯೋಚಿಸಿದರೆ ದೇಹ ಸ್ವಲ್ಪವೂ ಶುಚಿಯಲ್ಲ. ಜಿನಮತದಲ್ಲಿ ಸೇರಿ ತಿಳಿವಳಿಕೆಯುಳ್ಳ ಮನುಷ್ಯನು ಅಶುದ್ಧವಾದ ಈ ದೇಹವನ್ನು ಅನುಪಮವೆಂದೇನೂ ಹೇಳುವಂತಿಲ್ಲ. ಹುತ್ತವನ್ನು ಕಟ್ಟುವ ಗೆದ್ದಲಿನಂತೆ ಪಾಪವನ್ನು ಕೂಡಿಡುವುದು, ಬೆಂಕಿಯಂತೆ ಆಶ್ರಯ ಕೊಟ್ಟವರನ್ನೇ ಕೆಡಿಸುವುದು, ಹೇಡಿಯಹಾಗೆ ಹಿಂದೆ ಉಳಿಯುವುದು. ಬಡತನದಂತೆ ಯೋಚಿಸಿದ್ದನ್ನು ಕೊಡಲಾರದು, ಹುಣ್ಣಿನ ಹಾಗೆ ನೋವನ್ನುಂಟುಮಾಡುವುದು, ಪಿಶಾಚದಂತೆ ಕಾಟವನ್ನು ಕೊಡುವುದು, ಹೊಟ್ಟೆಯ ರೋಗದಂತೆ ಕೃಶವಾಗಿಸುವುದು, ಹಂದಿಯ ಹಾಗೆ ನೆಲೆಬೇಡುವುದು, ಕೃಷ್ಣಪಕ್ಷದಂತೆ ಶುಭಕ್ಕೆ ಒಲಿಯದುದು, ಶತ್ರುವಿನಂತೆ ಭಯವನ್ನುಂಟುಮಾಡುವುದು, ಎಳೆಮಗುವಿನಂತೆ ಅಸಾಧ್ಯವಾದದ್ದನ್ನೆಲ್ಲ ಕೇಳುವುದು, ಹುಲ್ಲಿನ ಬೆಂಕಿಯಂತೆ ಅಸ್ಥಿರವಾದದ್ದು. ಹೊತ್ತಿನಂತೆ ನಿಲ್ಲಿಸಲಾಗದ್ದು ನದಿಯಂತೆ ದಾಟಲಾಗದ್ದು. ಗಾಳಿಯಂತೆ ಹಿಡಿಯಲು ಅಸಾಧ್ಯವಾದದ್ದು. ಹೊಲೆಗೇರಿಯಂತೆ ಮೂಳೆಯಿಂದ ತುಂಬಿದ್ದು, ಚಪ್ಪಲಿಯಂತೆ ತೊಗಲನ್ನುಳ್ಳದು. ವೀಣೆಯ ಹಾಗೆ ನರಗಳಿಂದ ಕೂಡಿದ್ದು, ತಿಪ್ಪೆಯ ಹಾಗೆ ಅಸಹ್ಯಕರವಾದದ್ದು, ಕೋಳಿಯಂತೆ ಇದಕ್ಕೆ ಕ್ರಿಮಿಗಳಲ್ಲಿ ಪ್ರೀತಿ. ಅಮೇಧ್ಯದ ಗುಂಡಿಯಂತೆ ದುರ್ನಾತವುಳ್ಳದ್ದು. ಜಿಗಣೆಯಂತೆ ರಕ್ತ

ನೊಳವಿನಂತೆ ಶ್ಲೇಷ್ಮಪ್ರಿಯುವಪ್ಪುದು ಪಶುವಿನಂತೆ ಮೂತ್ರಪ್ರಿಯನಪ್ಪುದು ತೊನ್ನಿನಂತೆ ರಸಿಗೆಯುನುಳ್ಳುದು ಸೊಂಬನಂತೆ ಅಲಸಮಪ್ಪುದು ಮೂರ್ಖನಂತಪ್ಪುದಂ ಮಾಡದು ಬೆಟ್ಟೇಱು ಕಾಱನಂತೆ ಧರ್ಮಮನೊಲ್ಲದು ಪಿಶಾಚಿಯಂತೊಳ್ಳಿತ್ತಂ ಮಾಡದು ಪೆಣನಂತೆ ಬಾರ್ತೆಯುಲ್ಲದು ಮೂಳಿಯಂತೆ ಭಂಡಮಲ್ಲದು ಪೊಲೆಯನಂತೆ ವರ್ಣಕ್ಕೆ ಸಲ್ಲದು ಕೆಡುವ ಭಂಡದಂತೆ ಮಾಱುವೋಗದು ಪೇನಂತೆ ಪತ್ತುವಿಡದು. ಒಣಗಿನಂತೆ ನೇರಿತಲ್ಲದು ; ಬಗೆವಂದೀ ಶರೀರಂ ಕಷ್ಟಮಿದಂ ಬಿಟ್ಟು ರತ್ನತ್ರಯ ಭಾವನೆಯಿಂ ಸ್ವಸ್ವರೂಪದೊಳ್ ಕೂಡುವುದೆಂದು ಧರ್ಮಮಂ ಪೇಟ್ದರಸಿನಂದಕ್ಕೆ ವಾಸವಂ ವಿಸ್ಮಯಂಬಟ್ಟು ತನ್ನೊಳಿಂತೆಂದಂ ೧೭೫

ಸುರಪತಿಯು ಪೊಗಟ್ತೆಗಮಿಾ
ನರನಾಥಂ ಸಚ್ಚರಿತ್ರದೊಳ್ ಭಾವಿಪೊಡು
ರ್ವರೆಯೊಳ್ ನೂರ್ಮಡಿ ಪಿರಿಯಂ
ಧರಣೇಂದ್ರನುಮಿವನ ಗುಣಮನಾರ್ಪನೆ ಪೊಗಟಲ್ ೧೭೬

ಗದ್ಯ॥ ಎಂದು ಪೊಗಟ್ದು ೧೭೭

ಪರಮ ಜಿನ ಚರಣ ಸೇವನೆ
ವೆರಸಿರ್ದವನಂತ್ಯಕಾಲದೊಳ್ ಕಷ್ಟಕಳೇ
ವರಮಂ ಬಿಸುಟ್ಟು ದಿವ್ಯ
ಸ್ವರೂಪನಪ್ಪಂತು ವಾಸವಂ ತತ್ ಕ್ಷಣದೊಳ್ ೧೭೮

ಪ್ರಿಯವಾದದ್ದು, ನೋಣದಂತೆ ಶ್ಲೇಷ್ಮದಲ್ಲಿ ಪ್ರೀತಿ ಈ ಶರೀರಕ್ಕೆ ದನದಂತೆ. ಮೂತ್ರಪ್ರಿಯ, ತೊನ್ನು ರೋಗದಂತೆ ರಸಿಕೆಯುಳ್ಳದ್ದು. ಮೂರ್ಖನ ಹಾಗೆ ಯೋಗ್ಯವಾದದ್ದನ್ನು ಮಾಡುವುದಿಲ್ಲ. ಕ್ರೂರಿಯಾದ ಯೋಧನಂತೆ (?) ಧರ್ಮಕ್ಕೆ ಒಲಿಯದು, ಪಿಶಾಚಿಯ ಹಾಗೆ ಒಳ್ಳೆಯದನ್ನು ಮಾಡುವುದಿಲ್ಲ, ಹೆಣದಂತೆ ನಿರುಪಯುಕ್ತ ಮೂಳೆಯ ಹಾಗೆ ಬೆಲೆಬಾಳದು, ಹೊಲೆಯನಂತೆ ಜಾತಿಗೆ ಸಲ್ಲದು. ಕೆಟ್ಟು ಹೋಗುವ ಸರಕಿನ ಹಾಗೆ ಮಾರಾಟವಾಗದು. ಹೇನಿನಂತೆ ಬಿಡದೆ ಕಟ್ಟಿಕೊಳ್ಳುವುದು, ಅಲ್ಪನಂತೆ ನೇರವಾಗಿರದು, ಯೋಚಿಸಿದರೆ ಈ ಶರೀರವು ನೀಚವು. ಇದನ್ನು ಬಿಟ್ಟು ರತ್ನತ್ರಯ ಚಿಂತನೆಯಿಂದ ಸ್ವಸ್ವರೂಪದಲ್ಲಿ ಸೇರಿಕೊಳ್ಳುವುದೆಂದು ಧರ್ಮವನ್ನು ಹೇಳಿದ ಅರಸನ ರೀತಿಗೆ ವಾಸವನು ಆಶ್ಚರ್ಯಪಟ್ಟು ತನ್ನಲ್ಲಿಯೇ ಹೀಗೆಂದುಕೊಂಡನು. ೧೭೫. ದೇವೇಂದ್ರನ ಹೊಗಳಿಕೆಗಿಂತ ಈ ರಾಜನು ಸಚ್ಚರಿತ್ರದಲ್ಲಿ ನೂರುಪಟ್ಟು ದೊಡ್ಡವನು; ಈತನ ಗುಣವನ್ನು ಆ ಧರಣೇಂದ್ರನು ಕೂಡ ಹೊಗಳಲು ಶಕ್ತನಲ್ಲ. ೧೭೬. ಹೀಗೆ ಹೊಗಳಿ ಪರಮಜಿನನ ಚರಣಸೇವೆಯಿಂದ ಕೂಡಿದವನು ಅಂತ್ಯಕಾಲದಲ್ಲಿ ಅಲ್ಪವಾದ ಈ ಕಳೇಬರವನ್ನು ಬಿಸುಟು ದೇವಯೋಗ್ಯವಾದ ಸ್ವರೂಪವನ್ನು ಹೊಂದುವ ರೀತಿಯಲ್ಲಿ ಆಕ್ಷಣವೇ ವಾಸವನು ತನ್ನ ಮಾಯಾರೂಪವನ್ನು ಬಿಟ್ಟನು. ೧೭೭–೧೭೮. ದೇಹ

ಗದ್ಯ॥ ಕೃತಕ ರೂಪಮಂ ಬಿಟ್ಟು ೧೭೯

ತನುರುಚಿ ಮಂದರಾಚಳದ ಪೊಂಗೆಣೆಯಾಗಿ ಪಳಂಚಿ ಮಿಂಚೆ ಸೂ
ರ್ಯನ ಕಿರಣಂಬೊಲೊಪ್ಪೆ ಪೊಳೆವಾಭರಣಾವಳಿ ದಿವ್ಯವಸ್ತ್ರಮಿಂ
ಬಿನೊಳಮರ್ದೊಪ್ಪಿ ಶೋಭಿಸೆ ಸುರೇಶ್ವರನಾಗಳೆ ದಿವ್ಯಮಪ್ಪ ಮು
ನ್ನಿನ ನಿಜದೇಹಮಂ ನೆಱೆಯೆ ತಾಳ್ದು ನರೇಂದ್ರನ ಮುಂದೆ ನಿಲ್ವುದುಂ ೧೮೦

ಗದ್ಯ॥ ಒದ್ದಾಯನ ಮಹಾರಾಜಂ ಮುನ್ನಿನ ಋಷಿರೂಪಮಂ ಬೞಿಕ್ಕಿನ ದಿವ್ಯ ಸ್ವರೂಪಮಂ ತೊಟ್ಟನೆ ಕಂಡು ವಿಸ್ಮಯಮಂ ಬಟ್ಟಿರ್ಪುದುಂ ತದ್ದೇವನಿಂತೆಂದಂ ೧೮೧

ಸುರರಾಜನ ಸಭೆಯೊಳ್ ದೇ
ವರತಂಡಂ ದರ್ಶನದ ತೃತೀಯಾಂಗದೊಳಾರ್
ಭರತಕ್ಷೇತ್ರದೊಳೊಳ್ಳಿದ
ರೆರಡಿಲ್ಲದೆ ದೇವ ಪೇೞ್ವುದೆನೆ ದೇವೇಂದ್ರಂ ೧೮೨

ಗದ್ಯ॥ ಒದ್ದಾಯನ ಮಹಾರಾಜನೊಳ್ಳಿದನೆಂದು ಕೊಂಡು ತೊಸೆದು ೧೮೩

ಪೊಗೞೆ ಸುರಸಮಿತಿ ನೆಱೆ ಕೈ
ಮುಗಿವುದುಮೆನಗಮರಪತಿಯ ಮಾತಿಂಗೆ ಕರಂ
ಜಗತೀವಿಸ್ಮಯಮುಮಂ ಕೈ
ಮಿಗೆ ನಿನ್ನಂ ನೋಡಲೆಂದು ಬಂದೆಂ ದಿವದಿಂ ೧೮೪

ಕಾಂತಿಯು ಮಂದರಪರ್ವತದ ಹೊನ್ನಿಗೆ ಎಣೆಯಾಗಿ ಹೊಳೆದು ಮಿಂಚುತ್ತಿರಲು ಅವನ ಹೊಳೆಯುವ ಆಭರಣ ಸಮೂಹವು ಸೂರ್ಯಕಿರಣಗಳನ್ನು ಹೋಲುತ್ತಿರಲು ದಿವ್ಯ ವಸ್ತ್ರವು ಅಂದವಾಗಿ ಮೆರೆಯುತ್ತಿರಲು ಸುರೇಶ್ವರನು ಆಗಲೇ ದಿವ್ಯವಾದ ಮುಂಚಿನ ನಿಜ ದೇಹವನ್ನು ಧರಿಸಿ ರಾಜನ ಮುಂದೆ ನಿಂತನು. ೧೮೦. ಬದ್ದಾಯನಮಹಾರಾಜನು ಹಿಂದಿನ ಋಷಿರೂಪವನ್ನೂ ಆ ಮೇಲಿನ ಸ್ವರೂಪವನ್ನೂ ತಟ್ಟನೆ ಕಂಡು ಆಶ್ಚರ್ಯ ಪಡುತ್ತಿದ್ದನು. ಆಗ ಆ ದೇವನು ಹೀಗೆ ಹೇಳಿದನು: ೧೮೧. ಸುರರಾಜನ ಸಭೆಯಲ್ಲಿ ದೇವರುಗಳ ಗುಂಪು ದರ್ಶನದ ಮೂರನೆಯ ಅಂಗ(ನಿರ್ವಿಚಿಕಿತ್ಸೆ)ದಲ್ಲಿ ಭರತಖಂಡದಲ್ಲಿ ಯಾರು ಶ್ರೇಷ್ಠರು? ಸಂಶಯವಿಲ್ಲದಂತೆ ಹೇಳಬೇಕೆಂದು ಕೇಳಿಕೊಳ್ಳಲು ದೇವೇಂದ್ರನು ಬದ್ದಾಯನ ಮಹಾರಾಜನು ಶ್ರೇಷ್ಠನೆಂದು ಹೇಳಿ ಹೊಗಳಿದನು. ೧೮೨–೮೩ "ಹಾಗೆ ಹೇಳಿದಾಗ ದೇವಸಮೂಹವು ಒಪ್ಪಿ ಕೈಮುಗಿಯಿತು, ನನಗೆ ಅಮರಪತಿಯ ಮಾತು ಕೇಳಿ ಬಹಳ ಆಶ್ಚರ್ಯವಾಯಿತು ಈ ಜಗದಾಶ್ಚರ್ಯವನ್ನು ಪರಿಶೀಲಿಸುವ ಇಚ್ಛೆಯಲಾಗಿ ನಿನ್ನನ್ನು ನೋಡುವುದಕ್ಕೋಸ್ಕರ ಸ್ವರ್ಗದಿಂದ ಬಂದೆ." ೧೮೪. "ನನ್ನ ಹೆಸರು

ಗದ್ಯ॥ ಎನ್ನಪೆಸರ್ವಾಸವನೆಂಬುದು ಸಕಲಗುಣಂಗಳೊಳಂ ನೀನಾ ಸೌಧರ್ಮೇಂದ್ರನ ಪೊಗಟ್ತೆಗಂ ಸಾಸಿರ್ವಡಿ ಮಿಗಿಲ್, ನಿನ್ನ ಗುಣಮನಾರಯ್ವೆನೆಂಬಾತಂ ಚಾಮೀಕರ ಶೈಲಮಂ ಗುದ್ದಲಿಯಿಂದಗುಟ್ಟು ಕಿಡೆಯೆನೂಂಕುವೆನೇಬೆಗ್ಗನಂ ಪೋಲ್ಕುಮೆಂದು ಪಲತೆಱದಿಂ ಸ್ತುತಿಯಿಸಿ ಪ್ರಭಾವತೀ ಮಹಾದೇವಿಯ ಮೊಗಮಂ ನೋಡಿ ೧೮೫

ಎನಿಸುಜ್ಜ್ವಳಮೆಂದೊಡೆ ಚಂ
ದ್ರನತೇಜಂ ರವಿಯ ತೇಜಮಂ ಗೆಲ್ಗುಮೆ ಪೆ
ಣ್ಣಿನಿತೊಳ್ಳಿದಳಾದೊಡೆ ಪುರು
ಷನೊಳಾದ ಮಹಾಗುಣಂಗಳಂ ಪೋಲ್ವಳೇ ೧೮೬

ಗದ್ಯ॥ ಅದು ಕಾರಣದಿಂ ಪ್ರಭಾವತೀ ಮಹಾದೇವಿಯ ಗುಣಮಂ ಮತ್ತಿನ ವನಿತೆಯರೊಳ್ ಪೋಲಿಸಲ್ಬಾರದು ೧೮೭

ನರಪತಿ ಕೇಳೀ ವನಿತೆಯ
ಪರಮಗುಣಂಗಳನೆ ನೆಱೆಯೆ ಬಣ್ಣಿಪೆನೆಂಬಂ
ದುರಗಾಧಿಪತಿಗಮರಿದೆನೆ
ನರರಾರ್ತಪರೆಂದು ನುಡಿವುದೊಂದೆಗ್ಗಲ್ತೇ ೧೮೮

ಗದ್ಯ॥ ಅದೆಂತೆಂದೊಡೆ ಈ ಪುಣ್ಯಮೂರ್ತಿಗೆ ಶೀಲವತಿಯೆಂಬೀ ಪೆಸರ್ ಪ್ರಸಿದ್ಧಮಾದ ಪ್ರಪಂಚಮೆಲ್ಲಮಂ ಲೇಸಾಗಿ ಪೇಟ್ದಪೆಂ ಕೇಳಿಮೆಂದಿಂತೆಂದಂ ೧೮೯

ವಾಸವನೆಂದು, ಎಲ್ಲ ಗುಣಗಳಲ್ಲಿಯೂ ನೀನಂ ಆ ಸೌಧರ್ಮೇಂದ್ರನು ಹೊಗಳಿದುದಕ್ಕಿಂತ ಸಾವಿರಪಾಲು ಹೆಚ್ಚಿನವನು. ನಿನ್ನ ಗುಣವನ್ನು ಪರೀಕ್ಷಿಸುವೆನೆಂಬವನು ಮೇರು (ಬಂಗಾರದ) ಪರ್ವತವನ್ನು ಗುದ್ದಲಿಯಿಂದ ಅಗೆದು ಕೆಡಹುವೆನೆಂಬ ದಡ್ಡನನ್ನು ಹೋಲುತ್ತಾನೆ." ಎಂದು ಹಲವು ರೀತಿಯಿಂದ ಹೊಗಳಿ ಪ್ರಭಾವತೀ ಮಹಾದೇವಿಯ ಮುಖವನ್ನು ನೋಡಿ, ೧೮೫. "ಎಷ್ಟು ಉಜ್ವಲವಾದರೆ ಮಾತ್ರ, ಚಂದ್ರನ ತೇಜಸ್ಸು ಸೂರ್ಯನ ಪ್ರಕಾಶವನ್ನು ಗೆಲ್ಲುತ್ತದೆ? ಹೆಣ್ಣೆಷ್ಟು ಶ್ರೇಷ್ಠಳಾದರೂ ಪುರುಷನಲ್ಲಿರುವ ಮಹಾಗುಣಗಳನ್ನು ಹೋಲುವಳೆ? ಆ ಕಾರಣದಿಂದ ಪ್ರಭಾವತೀ ಮಹಾದೇವಿಯ ಗುಣವನ್ನು ಬೇರೆಯ ಹೆಂಗಸರೊಡನೆ ಹೋಲಿಸಬಾರದು. ರಾಜನೇ, ಕೇಳು ಈ ಹೆಂಗಸಿನ ಹಿರಿಯ ಗುಣಗಳನ್ನೇ ಸಂಪೂರ್ಣವಾಗಿ ವರ್ಣಿಸುವೆನೆಂದು ಹೇಳುವುದು ಆ ಆದಿಶೇಷನಿಗೇ ಅಸಾಧ್ಯವೆನ್ನುವಾಗ ಮನುಷ್ಯರು ಶಕ್ತರೆನ್ನುವುದು ದಡ್ಡತನವಲ್ಲವೆ? ೧೮೬-೧೮೭-೧೮೮. ಅದು ಹೇಗೆಂದರೆ ಈ ಪುಣ್ಯಮೂರ್ತಿಗೆ ಶೀಲವತಿಯೆಂಬ ಹೆಸರು ಪ್ರಖ್ಯಾತವಾದ ವೃತ್ತಾಂತವನ್ನೆಲ್ಲ ಚೆನ್ನಾಗಿ ಹೇಳುವೆನು, ಕೇಳಿರೆಂದು ಹೀಗೆಂದನು: ೧೮೯. ಪರದೇಶಗಳ ರಾಜರನ್ನು ಯುದ್ಧದಲ್ಲಿ ಹೋರಾಡಿ ಗೆದ್ದು ಕಪ್ಪ

ಪರದೇಶಾಧೀಶ್ವರರು
ಧುರದೊಳ್ ತಳ್ತಿಱಿದು ಕಪ್ಪಮಂ ಕೊಳಲೆಂದೋ
ಸರಿಸದೆ ಸೆಡೆದಿರದೆ ಮಹೀ
ಶ್ವರ ನೀನದಟಿಂದಮೆತ್ತಿ ಪೋಪುದುಮಿತ್ತಲ್ ೯೦

ಗದ್ಯ॥ ನಾರಾಯಣದತ್ತೆಯೆಂಬಳ್ ಪ್ರಭಾವತೀ ಮಹಾದೇವಿಯ ಬಾಲ್ಯ ಕಾಲದ ಕೆಳದಿ ಕಿಱಿಯಂದೆ ರಂಡೆಯಾಗಿ ತರ್ಕಶಾಸ್ತ್ರಂಗಳನೋದಿ ಪಂಡಿತೆಯೆಂದು ಪೆಸರನಿಟ್ಟುಕೊಂಡು ಬ್ರಹ್ಮಚಾರಿಣಿಯಾಗಿ ಶಾಪಾನುಗ್ರಹ ಸಮರ್ಥೆಯರೆನ್ನಂ ಬಿಟ್ಟು ಪೆಱರೊರ್ವರುಮಿಲ್ಲೆಂದು ತನ್ನಂ ತಾನೆ ಲೋಕದೊಳಗುರ್ವು ಮಾಡಿಕೊಂಡಿರೆ ೯೧

ನಾಡವರೆಲ್ಲಂ ನೆರೆದುಂ
ನೀಡಿರದಟ್ಕರ್ತು ಭಕ್ತಿಪೂರ್ವಕದಿಂ ಕೊಂ
ಡಾಡೆ ಗುರುವೆಂದು ಧರೆಯೊಳ್
ಕೂಡೆ ಮಹಾರೂಢಿಯಾಗೆ ಪೆಂಪೊದವುವಿನಂ ೯೨

ಸುತ್ತಲುಮಿರ್ದೊಂದು ದಿವಸಂ ಪ್ರಭಾವತೀಮಹಾದೇವಿಯ ತನ್ನ ಕಿಱಿಯಂದಿನ ಕೆಳೆತನಮಂ ನೆನೆದು ತನ್ನೊಳಿಂತೆಂದಳ್ ೯೩

ವಿನಯದಿನವಳ ಶ್ರಾವಕ
ತನಮಂ ಲೇಸಾಗಿ ಕಿಡಿಸಿ ತೀಪಿ ಬಟಿಕ್ಕಾ
ವನಿತೆಯನೇಗೆಯ್ದುಂ ಮ
ಲ್ಲನೆ ನಯದಿಂದೆನ್ನ ಧರ್ಮದೊಳ್ಪತ್ತಿಸುವೆಂ ೯೪

ವನ್ನು ಸ್ವೀಕರಿಸಲೆಂದು ಹಿಂಜರಿಯದೆ, ಉದಾಸೀನನಾಗಿರದೆ, ರಾಜನೇ! ನೀನು ಪರಾಕ್ರಮದಿಂದ ದಂಡೆತ್ತಿ ಹೋದೆ. ೯೦. ಇತ್ತ ನಾರಾಯಣದತ್ತೆಯೆಂಬ ಪ್ರಭಾವತೀ ದೇವಿಯ ಬಾಲ್ಯದ ಗೆಳತಿಯು, ಚಿಕ್ಕತನದಲ್ಲಿ ರಂಡೆಯಾಗಿ, ತರ್ಕಶಾಸ್ತ್ರಗಳನ್ನು ಓದಿ ಪಂಡಿತೆಯೆಂದು ಹೆಸರಿಟ್ಟುಕೊಂಡು ಬ್ರಹ್ಮಚಾರಿಣಿಯಾಗಿ ಶಾಪಾನುಗ್ರಹ ಸಮರ್ಥಳು ತಾನಲ್ಲದೆ ಬೇರೆ ಯಾರೊಬ್ಬರೂ ಇಲ್ಲವೆಂದು ಲೋಕದಲ್ಲಿ ತಾನೇ ತನ್ನ ಆಧಿಕ್ಯವನ್ನು ಹೇಳಿಕೊಂಡಿದ್ದಳು ೯೧. ಅವಳ ಈ ಪ್ರಚಾರವನ್ನು ಕೇಳಿ ನಂಬಿದ ನಾಡಿನ ಪ್ರಜೆಗಳೆಲ್ಲರೂ ಸೇರಿ ತಡವಿಲ್ಲದೆ ಒಲಿದು ಭಕ್ತಿಪೂರ್ವಕವಾಗಿ ಕೊಂಡಾಡಿದರು. ಆದರಿಂದ ಅವಳಿಗೆ ದೇಶದಲ್ಲಿ ಗುರುವೆಂಬ ಕೀರ್ತಿ ಹಬ್ಬಿತು ೯೨. ಅವಳು ಒಂದು ದಿನ ತನ್ನ ಬಾಲ್ಯದ ಗೆಳತಿಯಾದ ಪ್ರಭಾವತೀ ಮಹಾದೇವಿಯನ್ನು ಸ್ಮರಿಸಿಕೊಂಡು ತನ್ನಲ್ಲಿಯೇ ಹೀಗೆಂದು ಕೊಂಡಳು: ೯೩. "ವಿನಯದಿಂದ ಅವಳ ಶ್ರಾವಕ ತನವನ್ನು (ಜೈನಧರ್ಮ) ಪೂರ್ತಿಯಾಗಿ ಕೆಡಿಸಿ ಅವಳನ್ನು ಆ ಮೇಲೆ ಉಪಾಯವಾಗಿ ನನ್ನ ಧರ್ಮದಲ್ಲಿ ಸೇರಿಸುತ್ತೇನೆ." ೯೪. ಎಂದು ಪ್ರತಿಜ್ಞೆಮಾಡಿ ರೌರವಪುರಕ್ಕೆ ಬಂದಳು. ಅಲ್ಲಿ ಅರಮನೆಯ

ಗದ್ಯ॥ ಎಂದು ಪೊಣ್ದು ರೌರವಪುರಕ್ಕೆ ಮಂದರಮನೆಯ ಬಾಗಿಲೊಳ್ನಿಂದು ಪಡಿಯರನಂ ಕರೆದು ನಿಮ್ಮ ಬಾಲಸಖಿಯಪ್ಪ ನಾರಾಯಣದತ್ತೆ ನಿಮ್ಮಂ ಕಾಣಲೆಂದು ಬಂದಳೆಂದು ಪ್ರಭಾವತೀ ಮಹಾದೇವಿಗೆ ಪೇೞಿಮೆಂಬುದುಂ ಅವರ್ಪೋಗಿ ಪೊಡೆಮಟ್ಟು ಭಿನ್ನಪಮೆಂದಿಂತೆಂದರ್ : ೧೯೫

ಅಣುಗಿನ ಕೆಳದಿಯೆ ನಾಂ ಸ
ದ್ಗುಣಿಯೆನಿಸಿದ ನಿಮ್ಮ ರಾಜಪತ್ನಿಯ ನಾರಾ
ಯಣದತ್ತೆಯೆಂಬೆನೆನ್ನಂ
ಕ್ಷಣದಿಂದೊಯ್ದಿನ್ನ ನಿಮ್ಮ ಕಾಣಿಸವೇೞ್ಕುಂ ೧೯೬

ಗದ್ಯ॥ ಎಂಬುದುಂ ಮುನ್ನಮೆ ತಂದು ಕಾಣಿಸಲಣ್ಮದೆ ದೇವಿಯಲ್ಲಿಗೆ ವಂದೆಮಗೆ ಬೆಸನಾವುದು ಎನೆ, ಪ್ರಭಾವತೀಮಹಾದೇವಿ ನಾರಾಯಣದತ್ತೆ ಮುನ್ನಿನಂತೆ ಶ್ರಾವಕಿಯೆಂದು ಧರ್ಮ ವಾತ್ಸಲ್ಯದಿಂ ತಂದು ಕಾಣಿಸಿಮೆಂಬುದುಂ ಪಡಿಯರರ್ ತಂದು ಕಾಣಿಸುವುದುಂ ಅರಸಿ ನಾರಾಯಣದತ್ತೆಯ ಮಿಥ್ಯಾವೇಷಮಂ ಕಂಡು ಮನ್ನಿಸದುದಾಸೀನಂ ಗೆಯ್ದಿರ್ಪುದುಂ ನಾರಾಯಣದತ್ತೆ ಮುನಿದು, ೧೯೭

ಉರಗನ ವಿಷಮೇಱಿದರುಂ
ಸಿರಿಯುಳ್ಳರು ಮದ್ದುಗುಣಿಕೆಯುಂ ತಿಂದವರುಂ
ಪಿರಿದುಂ ಪಿತ್ತಾಧಿಕರುಂ
ಧರೆಯೊಳ್ ಮೆಯ್ಯಱಿಯರೆಂಬ ನುಡಿ ತಪ್ಪುಗುಮೇ ೧೯೮

ಬಾಗಿಲ ಬಳಿ ನಿಂತು ದ್ವಾರಪಾಲಕನನ್ನು ಕರೆದು "ನಿಮ್ಮ ಬಾಲ್ಯ ಸ್ನೇಹಿತೆಯಾದ ನಾರಾಯಣದತ್ತೆಯು ನಿಮ್ಮನ್ನು ಕಾಣುವ ಸಲುವಾಗಿ ಬಂದಿದ್ದಾಳೆ, ಎಂದು ತಿಳಿಸಿ" ಎಂದು ಪ್ರಭಾವತೀ ಮಹಾದೇವಿಗೆ ಹೇಳಿ ಕಳುಹಿಸಲು ಅವರು ಹೋಗಿ ನಮಸ್ಕಾರ ಮಾಡಿ ಹೀಗೆ ಬಿನ್ನವಿಸಿದರು. ೧೯೫. "ಚಿಕ್ಕಂದಿನ ಕೆಳದಿ ನಾನು, ಸದ್ಗುಣಿಯೆನ್ನಿಸಿಕೊಂಡ ನಿಮ್ಮ ರಾಜಪತ್ನಿಯುನ್ನು ನೋಡಬೇಕು. ಕೂಡಲೆ ನಾರಾಯಣದತ್ತೆಯೆಂಬ ನನ್ನನ್ನು ಕರೆದೊಯ್ದು ರಾಣಿಯ ದರ್ಶನ ಮಾಡಿಸಬೇಕು." ಎಂದು ಹೇಳಿದಳು ೧೯೬. ಆದರೆ ಮೊದಲೇ ಕರೆತಂದು ಕಾಣಿಸುವುದಕ್ಕೆ ಧೈರ್ಯ ಸಾಲದೆ ದೇವಿಯವರಲ್ಲಿಗೆ ಬಂದೆವು. ನಮಗೆ ಏನಪ್ಪಣೆ ? " ಪ್ರಭಾವತೀ ದೇವಿಯು ನಾರಾಯಣದತ್ತೆ ಹಿಂದಿನಂತೆ ಜೈನ ಗೃಹಸ್ಥಳೆಂದು ಭಾವಿಸಿ ಧರ್ಮವಾತ್ಸಲ್ಯದಿಂದ "ಕರೆತನ್ನಿ" ಎಂದಳು. ದ್ವಾರಪಾಲಕರು ಅವಳನ್ನು ಪ್ರವೇಶಮಾಡಿಸಿ ರಾಣಿಗೆ ಭೇಟಿ ಮಾಡಿಸಿದರು. ಅರಸಿ ನಾರಾಯಣದತ್ತೆಯ ಪೊಳ್ಳುವೇಷವನ್ನು ನೋಡಿ ಮನ್ನಿಸದೆ ಉದಾಸೀನದಿಂದಿದ್ದಳು. ಅದಕ್ಕೆ ಅವಳು ಸಿಟ್ಟಾದಳು ೧೯೭. "ಹಾವಿನ ವಿಷ ಏರಿದವರೂ ಐಶ್ವರ್ಯವುಳ್ಳವರೂ ವಿಷದ ಮೂಲಿಕೆಯನ್ನು ತಿಂದವರೂ ಬಹಳ ಪಿತ್ತ ಕೆರಳಿದರೂ ಮೈಮೇಲೆ ಎಚ್ಚರವಿಲ್ಲದವರೆಂಬ ಮಾತು ತಪ್ಪುವುದೆ ? ೧೯೮. ನೀನು ನನಗೆ ಬಾಲ್ಯದ ದಿನಗಳಲ್ಲಿ ತೋರುತ್ತಿದ್ದ ಗೌರವವನ್ನು ಇಂದು

ನೀನೆನಗೆ ಬಾಲ್ಯಕಾಲದೊಳ್ ಮಾಡುವ ಮನ್ನಣೆಯನೀಗಳ್ ಸಿರಿಯಿಂದುದಾಸೀನಂಗೆಯ್ದಿಯೆಂಬುದುಮರಸಿ ಮಱುಮಾತುಗುಡಲೊಲ್ಲದುಸಿರದಿರ್ಪುದುಂ ಕೆಲದೊಳಿರ್ದ ವಿದಗ್ಧ ಸೌಂದರಿಯೆಂಬ ವಿಳಾಸಿನಿ ಅರಸಿಯ ಮನಮನಱಿದು ಆಕೆಯ ಬಾಸೆಯೊಳಿಂತೆಂದಳ್ : ೧೯೯

ವಾರಿಜಷಂಡಮಂ ಪದೆದು ಪೊರ್ದುವವೊಲ್ ಕಳಹಂಸೆ ತಿಪ್ಪೆಯಂ
ಸಾರಮಿದೆಂದು ಪೊರ್ದುಗುಮೆ ತಾರಗೆಗಳ್ಮೆಱೆವಿಂದುವಂ ಸವಿ
ಸ್ತಾರ ದೊಳೊಂದುವಂತೆ ಪದೆದೊಂದುಗುಮೇ ರವಿಯಂ ಸುಧರ್ಮದೊಳ್
ಧೀರರೆನಿಪ್ಪರುಂ ಮರುಳೆ ಪೊರ್ದುವರೇ ಜಡರಂ ದುರಾತ್ಮರಂ ೨೦೦

ಎಂಬುದು ಮಾಕೆಯ ಮಾತಿಂಗೆ ನಾಡೆಯುಂ ಸಿಗ್ಗಾಗಿ ತನ್ನನೆಲೆಗೆ ಪೋಗಿ ಪ್ರಭಾವತೀ ಮಹಾದೇವಿಯ ಶ್ರಾವಕತ್ವಮಂ ಕಿಡಿಸುವ ಉಪಾಯಮಂ ಚಿಂತಿಸಿ ತನ್ನೊಳಿಂತೆಂದಳ್ ೨೦೧

ಕೇರಳ ಮಂಡಲಾಧಿಪತಿಯಪ್ಪೊಡೆ ಜೈನನುದಗ್ರನಪ್ಪ ಕಾ
ಶ್ಮೀರ ಮಹೀಶನಪ್ಪೊಡೆ ಜನೇಶ್ವರ ಧರ್ಮದೊಳೊಳ್ಪಿದಂ ಗುಣಾ
ಧಾರನುದಾರನಂಗಧರಣೇಶ್ವರನಪ್ಪೊಡೆ ಜೈನಮಾರ್ಗದೊಳ್
ಸಾರನಪೂತಿಪಾಂಡ್ಯ ಧರಣೇಶ್ವರನಪ್ಪೊಡೆ ಧರ್ಮತತ್ಪರಂ ೨೦೨

ನಿನ್ನ ಐಶ್ವರ್ಯಮದದಿಂದ ಉದಾಸೀನ ಮಾಡಿದೆ." ಎಂದಳು. ಅರಸಿಯು ಅವಳಿಗೆ ಉತ್ತರ ಹೇಳಲಿಷ್ಟವಿಲ್ಲದೆ ಮಾತನಾಡದೆ ಮೌನದಿಂದಿದ್ದಳು. ಆಗ ಪಕ್ಕದಲ್ಲಿದ್ದ ವಿದಗ್ಧ ಸೌಂದರಿಯೆಂಬ ವಿಳಾಸಿನಿಯು ರಾಣಿಯ ಇಂಗಿತವನ್ನು ಅರಿತುಕೊಂಡು ಆಕೆಯ ಮಾತಿನಲ್ಲಿ ಹೀಗೆ ಹೇಳಿದಳು ೧೯೯. ಕಮಲ ಸರೋವರವನ್ನು ಆಸೆಯಿಂದ ಸೇರುವ ಕಲಹಂಸೆಯು ತಿಪ್ಪೆಯನ್ನು ಸಾರವೆಂದು ಭಾವಿಸಿ ಸೇರುತ್ತದೆಯೆ ? ನಕ್ಷತ್ರಗಳು ಹೊಳೆಯುವ ಚಂದ್ರನನ್ನು ವಿಶೇಷವಾಗಿ ಹೊಂದುವಂತೆ ಸೂರ್ಯನನ್ನು ಆಸೆಯಿಂದ ಸೇರುವುವೆ ? ಸದ್ಧರ್ಮದಲ್ಲಿ ತಿಳಿವಳಿಕೆಯುಳ್ಳವರು ದಡ್ಡರನ್ನೂ ದುರಾತ್ಮರನ್ನೂ ಸೇರುವರೆ ? ಇಲ್ಲ." ೨೦೦. ಹೀಗೆ ಹೇಳಲು ಆಕೆಯ ಮಾತಿಗೆ ಬಹಳ ಅವಮಾನವಾಗಿ ನಾರಾಯಣದತ್ತೆ ತನ್ನ ಸ್ಥಳಕ್ಕೆ ಹೋಗಿ ಪ್ರಭಾವತೀ ಮಹಾದೇವಿಯ ಶ್ರಾವಕತ್ವವನ್ನು ಕೆಡಿಸುವ ಉಪಾಯವನ್ನು ಯೋಚಿಸಿ ತನ್ನಲ್ಲಿಯೇ ಹೀಗೆಂದುಕೊಂಡಳು ೨೦೧. ಕೇರಳ ದೇಶದ ದೊರೆಯಾದರೋ ಜೈನ. ಉದಗ್ರನಾದ ಕಾಶ್ಮೀರ ರಾಜನೂ ಜಿನೇಶ್ವರ ಧರ್ಮದಲ್ಲಿ ಶ್ರೇಷ್ಠ. ಗುಣವಂತನೂ ಉದಾರನೂ ಆದ ಅಂಗರಾಜನಾದರೋ ಜೈನ ಮಾರ್ಗದಲ್ಲಿ ಶ್ರೇಷ್ಠನು, ಅಪರಿಶುದ್ಧನಾದ ಪಾಂಡ್ಯರಾಜನೂ ಧರ್ಮಾಸಕ್ತ ೨೦೨. ಇನ್ನು

ಗದ್ಯ॥ ಮತ್ತಮುೞಿದ ದೇಶಾಧೀಶ್ವರರುಂ ಧರ್ಮಾನುರಾಗಿಗಳಲ್ಲದೆ ಪರಾಂಗನಾಪೇಕ್ಷಿಕರಲ್ಲರವರಲ್ಲಿಗೆ ಪೋದೊಡಮೆನ್ನೆತ್ತಿಕೊಂಡ ಕಾರ್ಯಂ ತೀರದು ಮಾಳವೇಶ್ವರನಪ್ಪ ಚಂಡಪ್ರದ್ಯೋತನಿಂ ತೀರ್ಗುಮಾತಂ ೨೦೩

ಸ್ತ್ರೀಯೆಂಬೀ ಪೆಸಱಿಂ ಪೆಣ್
ನಾಯೊದೊಡಮೊಲ್ವ ಕಪ್ಪನೀ ಪ್ರತ್ಯಕ್ಷ
ಸ್ತ್ರೀಯುಂ ಸುರವಧುವಂ ಪೋ
ಲ್ವೀ ಯುವತಿಯನಱಿದೊಡೊಲ್ಲೆನೆಂಬವನಲ್ಲಂ ೨೦೪

ಎಂದು ಪ್ರಭಾವತಿಯ ರೂಪಂ ಪಟದೊಳ್ ಸವಿಸ್ತರಂ ಬರೆದುಕೊಂಡುಜ್ಜಯಿನಿಗೆ ಪೋಗಿ ಚಂಡಪ್ರದ್ಯೋತಂಗೆ ತೋಱುವುದುಮಾತಂ ಕಂಡು ೨೦೫

ಮಸೆದಲರ ಪೊಳೆವ ಬಾಣದಿ
ವಸದಳಮೊಡನೊಡನೆ ಸೆರಗುವಾರ್ದೊರ್ಪುಯೆ ಸೈ
ರಿಸದಿರೆ ಮನೋಜ ರಾಜಂ
ವಸುಧೇಶಂ ಗಂಡುಗೆಟ್ಟು ಬೆಂಡಾಗಿರ್ದಂ ೨೦೬

ಇರ್ದಿದಾರ ರೂಪು ನೀಮಿದನಿಲ್ಲಿಗೇಂ ಕಾರಣಂ ತಂದಿರೆನೆ, ನಾರಾಯಣದತ್ತೆ ನೃಪನೊಲವನಱಿದಿಂತೆಂದಳ್ ೨೦೭

ಉಳಿದ ದೇಶಗಳ ರಾಜರೂ ಧರ್ಮಪ್ರೇಮಿಗಳು. ಅಲ್ಲದೆ ಅವರು ಪರರ ಹೆಂಡಿರನ್ನು ಅಪೇಕ್ಷೆ ಪಡುವವರಲ್ಲ. ಅವರಲ್ಲಿಗೆ ಹೋದರೂ ನಾನು ಕೈಕೊಂಡ ಕಾರ್ಯವು ನೆರವೇರುವುದಿಲ್ಲ. ಮಾಳವೇಶ್ವರನಾದ ಚಂಡಪ್ರದ್ಯೋತನಿಂದ ಈ ಕೆಲಸ ನಡೆಯುತ್ತದೆ ೨೦೩. ಆತನು ಹೆಂಗಸು ಎಂಬ ಹೆಸರಿನಲ್ಲಿ ಹೆಣ್ಣು ನಾಯಿಗಾದರೂ ಒಲಿಯುವಂಥ ಅಲ್ಪ. ಅವನು ದೇವತಾಸ್ತ್ರೀಯನ್ನು ಹೋಲುವ ಈ ಪ್ರತ್ಯಕ್ಷ ಸ್ತ್ರೀಯನ್ನು ಕಂಡರೆ ಬೇಡವೆನ್ನುವವನಲ್ಲ" ೨೦೪. ಹೀಗೆ ಯೋಚಿಸಿ ಪ್ರಭಾವತಿಯ ರೂಪವನ್ನು ಪಟದ ಮೇಲೆ ವಿಶದವಾಗಿ ಚಿತ್ರಿಸಿಕೊಂಡು ಉಜ್ಜಯಿನಿಗೆ ಹೋಗಿ ಚಂಡಪ್ರದ್ಯೋತನಿಗೆ ತೋರಿಸಿದಳು. ಆತನು ಆ ಚಿತ್ರಪಟವನ್ನು ನೋಡಿ ಒಲಿದನು ೨೦೫. ಹರಿತವಾದ ಪುಷ್ಪಬಾಣಗಳಿಂದ ಅಸಾಧ್ಯವಾಗಿ ಹಿಂದೆ ಹಿಂದೆಯೇ ಮನ್ಮಥ ರಾಜನು ಹೊಡೆಯಲು ಆ ರಾಜನು ಗಂಡು ಹೋಗಿ ಬೆಂಡಾಗಿಬಿಟ್ಟ! ೨೦೬. ಬೆಂಡಾಗಿ "ಇದು ಯಾರ ರೂಪ? ಇಲ್ಲಿಗೆ ಏನು ಕಾರಣ ತಂದಿರಿ?" ಎಂದನು. ನಾರಾಯಣದತ್ತೆ ಆ ರಾಜನ ಮನಸ್ಸನ್ನರಿತು ಹೀಗೆ ಹೇಳಿದಳು ೨೦೭ "ರೌರವಪುರದ ರಾಜನ ಹೆಂಡತಿಯ ರೂಪ, ಇದು. ರಾಜನೇ, ಯೋಚಿ

ಕೌರವ ಪುರಾಧಿನಾಥನ
ನಾರಿಯ ರೂಪಿದು ಮಹೀಶ ಭಾವಿಸುವಂದಾ
ನಾರಿ ಮನೋಜನ ಸತಿಗಂ
ಶ್ರೀರಮಣಿಗಮಿಂದ್ರವನಿತೆಗಂ ಮಿಗಿಲಪ್ಪಳ್ ೨೦೮

ನಿನಗಾಕೆ ಪ್ರಾಣವಲ್ಲಭೆಯಾಗಲೆವೇಳ್ಕುಂ ನಿನಗೆ ತಕ್ಕಳೆಂಬುದನಱಿಪಲೆಂದು ಬಂದೆನೆಂಬುದುಂ ನಾರಾಯಣದತ್ತೆಗಂಗಚಿತ್ತಮಂ ಕೊಟ್ಟು ಸಂತಸಂ ಬಡಿಸುವುದುಂ ತನ್ನ ಬಗೆ ತೀರ್ದುದೆಂದು ರಾಗಿಸಿ ಶಕುನವೆಂದು ಸೆಱಗಂ ಗಂಟಿಕ್ಕಿಕೊಂಡು ಮಾಳವೇಶ್ವರಂಗಿಂತೆಂದಳ್ ೨೦೯

ಪಲವೇನೊದ್ದಾಯನ ಭೂ
ಲಲನೇಶನುಮೂರೊಳಿಲ್ಲ ಪಿರಿದುಂ ನೀಂ ಪೆ
ರ್ವಲದಿಂದಲ್ಲಿಗೆ ಪೋದೊಡೆ
ಲಲಿತಾಂಗಿ ಮನೋನುರಾಗದಿಂ ಕೈಸಾರ್ಗುಂ ೨೧೦

ಗದ್ಯ ॥ ಇಂದು ನಾಳೆಯೆಂದೆಣಿಸದಯಿರ್ದೆಯಪ್ಪೊಡೆ ಒದ್ದಾಯನ ಮಹಾರಾಯನನ್ನೆಗಂ ಬರ್ಪನಾತಂ ಬಂದನಪ್ಪೊಡೆ ನಿನಗಾ ಸ್ತ್ರೀರತ್ನಂ ದೊರೆಕೊಳ್ಳಳೆಂಬುದುಂ ಆ ಮಾತಿಂಗೆ ಬಡಂಬಟ್ಟಿನ್ನೇಳಿಸಿರ್ಪುದುಚಿತಮಲ್ಲೆಂದು ಚತುರ್ಬಲಂವೆರಸೆತ್ತಿ ಕತಿಪಯ ಪ್ರಯಾಣಂಗಳಿಂ ಬಂದು ಕೌರವ ಪುರಮಂ ಮೂಱು ಸೂಳಾಗಿ ಮುತ್ತಿಕೊಂಡು ಸಾಳಂಕಾರನೆಂಬ ತನ್ನ ಪೆರ್ಗಡೆಯುಂ ಬರಿಸಿ ಪ್ರಭಾವತಿಯಲ್ಲಿಗಟ್ಟುವುದುಂ ಅವಂ ಬಂದಿಂತೆಂದಂ : ೨೧೧

ಸಿದರೆ ಆ ಹೆಂಗಸು ಮನ್ಮಥನ ಹೆಂಡತಿ ರತಿಗೂ ಆ ಲಕ್ಷ್ಮೀರಮಣಿಗೂ ಇಂದ್ರಪತ್ನಿಗೂ ಹೆಚ್ಚಿನವಳು ೨೦೮. ನಿನಗೆ ಆಕೆ ಪ್ರಾಣವಲ್ಲಭೆಯಾಗಲೇಬೇಕು. ಅವಳು ನಿನಗೆ ತಕ್ಕವಳೆಂಬುದನ್ನು ತಿಳಿಸುವುದಕ್ಕೋಸ್ಕರ ಬಂದೆ." ಎಂದು ಹೇಳಿದಳು. ಆ ರಾಜನು ನಾರಾಯಣ ದತ್ತೆಗೆ ಪಾರಿತೋಷಕವನ್ನು ಕೊಟ್ಟು ಸಂತೋಷಪಡಿಸಿದನು. ಅವಳು ತನ್ನ ಸಂಕಲ್ಪ ಕೈಗೂಡಿತೆಂದು ಸೆರಗುಗಂಟು ಹಾಕಿಕೊಂಡು (ದೃಢವಾಗಿ ನಂಬಿ) ಮಾಳವೇಶ್ವರನ ಸಂಗಡ ಹೀಗೆ ಹೇಳಿದಳು ೨೦೯. "ಹೆಚ್ಚೇನು, ಒದ್ದಾಯನ ಮಹಾರಾಜನೂ ಈಗ ಊರಿನಲ್ಲಿಲ್ಲ. ನೀವು ಈಗ ದೊಡ್ಡ ಸೈನ್ಯದೊಡನೆ ಅಲ್ಲಿಗೆ ಹೋದರೆ ಆ ಲಲಿತಾಂಗಿಯು ನಿನಗೆ ಮನೋನುರಾಗದಿಂದ ಕೈಸೇರುವಳು. ೨೧೦. ಇವತ್ತು, ನಾಳೆ ಎಂದು ಲಕ್ಷ್ಯ ಮಾಡದೆ ಇದ್ದೆಯಾದರೆ ಆ ವೇಳೆಗೆ ಒದ್ದಾಯನ ಮಹಾರಾಜನು ಬರುತ್ತಾನೆ. ಅವನು ಬಂದನೆಂದರೆ ನಿನಗೆ ಆ ಸ್ತ್ರೀ ರತ್ನ ಲಭಿಸುವುದಿಲ್ಲ" ಆ ಮಾತಿಗೆ ಒಪ್ಪಿ, ಇನ್ನು ಅಲಕ್ಷ್ಯದಿಂದಿರುವುದು ಸರಿಯಲ್ಲವೆಂದು ಚತುರಂಗಸೈನ್ಯದೊಡನೆ ಹೊರಟು ಕೆಲವು ಪ್ರಯಾಣಗಳನ್ನು ಮಾಡಿ ಕೌರವಪುರವನ್ನು ಸೇರಿ ಮೂರು ಸಾಲುಗಳಲ್ಲಿ ಮುತ್ತಿಗೆ ಹಾಕಿ (ಪಟ್ಟಣವನ್ನು) ವಶಪಡಿಸಿಕೊಂಡು, ಸಾಳಂಕಾರ ಎಂಬ ತನ್ನ ಹೆಗ್ಗಡೆಯನ್ನು ಕರೆಸಿ ಪ್ರಭಾವತಿಯ ಬಳಿಗೆ ಕಳುಹಿಸಿದನು. ೨೧೧. ಅವನು ಬಂದು ಹೀಗೆ ಹೇಳಿದನು "ನಮ್ಮ ಅರಸನಾದ ಮಾಳವ

ಎಮ್ಮರಸಂ ಮಾಳವಪತಿ
ಸಮ್ಮತಮಪ್ಪಂತು ನಿಮಗೆ ಸುಖಮಪ್ಪಂತಿ
ನ್ನೆಮ್ಮಂ ನಿಮ್ಮಡಿಯಲ್ಲಿಗೆ
ತಾಂ ಮುದದಿಂದಟ್ಟಿದಂ ಮಹೋತ್ಸವದಿಂದಂ ೨೧೨

ಅಂತಿಂತೆನ್ನದೆ ಪಲವಂ
ಚಿಂತಿಸದೆ ಪೊಡರ್ಪನುಡುಗಿ ನಿಮಗಂ ತಮಗಂ
ಸಂತಸದಿಂ ಸುಖಮ
ಪ್ಪಂತಿರೆ ಕೈಕೊಳ್ವುದೆಮ್ಮ ನುಡಿಯಂ ನಯದಿಂ ೨೧೩

ಗದ್ಯ ॥ ಎಂದೊರ್ಮೆಯೆ ತಮ್ಮ ಕಾರ್ಯಮಂ ಪೇಳದೆ ವಿನಯದಿಂದುಚಿತವಚನಂಗಳಿಂ ನುಡಿದು ಬಳಿಯಂ ತಮ್ಮರಸನ ಮಹಿಮೆಯನಿಂತೆಂದು ಪೊಗಳ್ದಂ : ೨೧೪

ಸಿರಿಗೆಮ್ಮರಸಂ ಮಘವನ
ದೊರೆಯರುಮಂ ಭರತರಾಜನನ್ನರುಮಂ ಖೇ
ಚರಪತಿಯನ್ನರುಮಂ ದೇ
ವರಾಜನನ್ನರುಮನೇಳಿದಂ ಗೆಯ್ದಿರ್ಪಂ ೨೧೫

ಅನುಪಮ ಭರತಾಧೀಶ್ವರ
ನನುಜನುಮಂ ಸಂದ ಕಾಮದೇವನುಮಂ ರೂ
ಪಿನೊಳಾದಂ ಭಂಗಿಸಿ ತ
ಜ್ಜನಪಂ ಕೈಕೊಳ್ಳನಾವನಂ ಬಣ್ಣಿಪೊಡಂ ೨೧೬

ಪತಿಗೆ ಸಮ್ಮತವಾಗುವಂತೆ, ನಿಮಗೆ ಸುಖವಾಗುವಂತೆ ನನ್ನನ್ನು ನಿಮ್ಮ ಪಾದದ ಬಳಿಗೆ ಕಳಿಹಿಸಿದನು ೨೧೨. 'ಹಾಗೆ, ಹೀಗೆ' ಎನ್ನದೆ, ಹಲವು ವಿಧವಾಗಿ ಯೋಚಿಸದೆ ಅಹಂಕಾರವನ್ನು ಬಿಟ್ಟು ನಿಮಗೂ ಅವರಿಗೂ ಸಂತೋಷದಿಂದ ಸುಖವಾಗುವ ಹಾಗೆ ನಮ್ಮ ನುಡಿಯನ್ನು ಸೌಜನ್ಯದಿಂದ ಒಪ್ಪಿಕೊಳ್ಳಬೇಕು ೨೧೩. ತಟ್ಟನೆ ತಮ್ಮ ಕೆಲಸವನ್ನು ಹೇಳದೆ ವಿನಯದಿಂದ ಉಚಿತ ವಾಕ್ಯಗಳಿಂದ ನುಡಿದು ಆಮೇಲೆ ತಮ್ಮ ರಾಜನ ಮಹಿಮೆಯನ್ನು ಹೀಗೆ ಹೊಗಳಿದನು ೨೧೪. "ಐಶ್ವರ್ಯದಲ್ಲಿ ನಮ್ಮ ರಾಜನು ದೇವೇಂದ್ರನ ಸಮಾನರನ್ನೂ ಭರತರಾಜನಂಥವರನ್ನೂ ಖೇಚರ (ಆಕಾಶ ಸಂಚಾರಿ) ರಾಜನಂಥವರನ್ನೂ ದೇವರಾಜನಂಥವರನ್ನೂ ತಿರಸ್ಕಾರ ಮಾಡಿದ್ದಾನೆ ೨೧೫. ಹೋಲಿಕೆಯೇ ಇಲ್ಲದ ಭರತಚಕ್ರವರ್ತಿಯ ತಮ್ಮನನ್ನೂ ಪ್ರಸಿದ್ಧನಾದ ಕಾಮದೇವನನ್ನೂ ರೂಪದಲ್ಲಿ ವಿಶೇಷವಾಗಿ ಸೋಲಿಸಿ ಆ ರಾಜನು ಯಾರನ್ನೇ ಹೊಗಳಿದರೂ ಒಪ್ಪಿಕೊಳ್ಳನು ೨೧೬. ದೇವ

ಸುರಭೂರುಹಮುಮನಗ್ಗದ
ಸುರಭಿಯುಮಂ ಚಾಗಗುಣದೊಳೆಮ್ಮರಸಂ ತ್ರ
ಸ್ತರಿಯಾಡುವನೆಂದೊಡೆ ಪೋ
ಲ್ವರಾರೊ ಮತ್ತಿನ ಮಹೀಭುಜರ್ಲೋಭಾತ್ಮರ್ ೨೧೭

ಪರದೇಶಾಧೀಶ್ವರರೆ
ಮ್ಮರಸನ ಪೆಸರ್ಗೊಂಡೊಡಳ್ಕಿ ಭಯದಿಂದಂ ಬೆ
ಳ್ದೆರಲೆವೊಲೋಡುವರಾತನ
ಬಿರುದಂ ಮಾರ್ಕೊಳ್ವ ಗಂಡರಾರ್ ವಸುಮತಿಯೊಳ್ ೨೧೮

ಗದ್ಯ॥ ಎಂದು ಪೊಗಟ್ಬುದುಂ ಪ್ರಭಾವತಿ ಮಹಾದೇವಿ ನಕ್ಕು "ಬಹುರತ್ನಾ ವಸುಂಧರಾ" ಎಂದು ಲೋಕದೊಳ್ ಕವಿಗಳುಂ ಚಾಗಿಗಳುಂ ಒರ್ವರೊರ್ವರ್ಗೆ ನಿಡಿಯರ್ಗೆ ನಿಡಿಯರೊಳರ ದೇನಪೂರ್ವಮನ್ನೆಗಂ ನಿಮ್ಮಬಂದ ಕಾರ್ಯಮಂ ಪೇಟ್ಬಮೆನೆ ಪೆರ್ಗಡೆಗಳಿಂತೆಂದರ್ ೨೧೯

ತರಳಾಕ್ಷಿ ನಿಮ್ಮರೂಪಂ
ಬರೆಯುತ್ತುಂ ಪಟದೊಳೆಮ್ಮ ಮಹಿಪತಿಗದನ
ಚ್ಚರಿಯಾಗಿ ತೋಱುವುದುಮೆ
ಮ್ಮರಸನದಂ ಕಂಡು ಸೋಲ್ತು ವಿರಹಾನಳನಿಂ ೨೨೦

ಲೋಕದ ಕಲ್ಪವೃಕ್ಷವನ್ನೂ ಶ್ರೇಷ್ಠವಾದ ಕಾಮಧೇನುವನ್ನೂ ತ್ಯಾಗಗುಣದಲ್ಲಿ ನಮ್ಮ ಅರಸನು ಹಾಸ್ಯಮಾಡುವನೆಂದರೆ ಲೋಭಾತ್ಮರಾದ ಉಳಿದರಾಜರಲ್ಲಿ ಆತನನ್ನು ಹೋಲ ಬಲ್ಲವರು ಯಾರಿದ್ದಾರೆ? ೨೧೭. ಇತರ ದೇಶಗಳ ರಾಜರು ನಮ್ಮ ರಾಜನ ಹೆಸರು ಹೇಳಿ ದರೆ ಅಂಜಿ ಭಯಪಟ್ಟು ಜಿಂಕೆಯ ಹಾಗೆ ಓಡುತ್ತಾರೆ. ಆತನ ಬಿರುದನ್ನು ಎದುರಿಸುವ ಗಂಡುಗಲಿಗಳು ಈ ಭೂಮಿಯ ಮೇಲೆ ಯಾರಿದ್ದಾರೆ ? " ೨೧೮. ಎಂದು ಹೊಗಳ ಲಾಗಿ, ಪ್ರಭಾವತೀ ಮಹಾದೇವಿಯು ನಕ್ಕು "ಬಹು ರತ್ನಾವಸುಂಧರಾ, ಎಂದು ಲೋಕದಲ್ಲಿ ಹೇಳುವುದುಂಟು. ಕವಿಗಳಲ್ಲಿಯೂ ತ್ಯಾಗಿಗಳಲ್ಲಿಯೂ ಒಬ್ಬರಿಗಿಂತ ಒಬ್ಬರು ದೊಡ್ಡವರು ಇರುವರು. ನಿಡಿಯರಿಗಿಂತ ನಿಡಿಯರಿದ್ದಾರೆ. ಅದೇನು ಹೊಸ ವಿಷಯ ? ಈಗ ನೀವು ಬಂದ ಕೆಲಸವನ್ನು ಹೇಳಿ" ಎನ್ನಲು ಹೆಗ್ಗಡೆಗಳು ಹೀಗೆ ಹೇಳಿದರು: ೨೧೯. ಚಂಚಲಾಕ್ಷಿ (ನಾರಾಯಣದತ್ತೆ) ಯು ನಿಮ್ಮ ರೂಪವನ್ನು ಬಟ್ಟೆಯ ಮೇಲೆ ಬರೆದು ತಂದು ನಮ್ಮ ರಾಜನಿಗೆ ಅದನ್ನು ತೋರಿಸಿದಳು. ಅದು ಆಶ್ಚರ್ಯವನ್ನುಂಟು ಮಾಡಲು ನಮ್ಮ ಅರಸನು ಅದಕ್ಕೆ ಸೋತು (ಆಕರ್ಷಿತನಾಗಿ) ವಿರಹಾಗ್ನಿಯಿಂದ ಬೆಂದು ನೊಂದನು. ೨೨೦. ತಾನು ಪ್ರತಾಪಶಾಲಿಯಾದ್ದರಿಂದ ದಂಡೆತ್ತಿ ಬಂದನು ; ಇಲ್ಲಿ ಸಹಾಯ ಬಯ

ಗದ್ಯ॥ ಬೆಂದು ನೊಂದು ತಾಂ ಪ್ರತಾಪಿಯಪ್ಪುದಱಿಂದೆತ್ತಿ ಬಂದನಿಲ್ಲಿ ಸೆರಗಂ ಪಾರ್ವಗಂಡನಲ್ಲ ನಿಮ್ಮಡಿ ಮತ್ತೊಂದಂ ಬಗೆಯದೆ ಬೇಗಮೆಮ್ಮರಸಂಗೆ ಮನೋನಯನವಲ್ಲಭೆಯಾಗಿರ್ಪುದೆನೆ ಪ್ರಭಾವತಿಯಿಂತೆಂದಳ್ : ೨೨೧

ಪರವನಿತೆಗೆಱಗಿದಾತಂ
ಗುರುಮುದದಿಂ ನೋಡ ಕೈದು ಬೆಸಕೆಯ್ಯದು ನಿ
ಷ್ಠುರತೆಯಿನೆಂದೊಡೆ ಛೀ ಸ
ತ್ಪುರುಷಂ ಪರವನಿತೆಗೆಱಗೆ ಪರವನಿತೆ ವಲಂ ೨೨೨

ಗದ್ಯ॥ ಅದು ಕಾರಣದಿಂ ನಿಮ್ಮರಸಪ್ಪೊಡೆ ಮಹಾಪುರುಷನಿಂತಪ್ಪುದಕ್ಕೆ ಬಯಸಲಾಗದು ಎಂಬುದುಮವರಿಂತೆಂದರ್ ೨೨೩

ದಿವದೊಳ್ ಭೋಗಿಪೆನೆಂದೀ
ಭವದ ಮಹಾಸೌಖ್ಯಮೆಲ್ಲಮಂ ಕಿಡಿಸಿ ಶರೀ
ರವನೊಕ್ಕು ಕುದಿದು ಕಿಮ್ಮನೆ
ಸವಣಮರುಳ್ಗೊಳ್ಳದರಸಿ ಸುಖಮನೆ ಬಗೆಯಾ ೨೨೪

ಗದ್ಯ॥ ಎಂಬುದುಂ ಪ್ರಭಾವತಿಯಿಂತೆಂದಳ್ ೨೨೫

ಖಳರಂ ಪಾದರಿಗರನೀ
ಗಳೆ ನೋಡಿರೆ ಕಂಡೊಡಡಸಿ ಜಡಿವರ್ಬಡಿವರ್
ಮುಳಿಸಿಂ ಕೊಲ್ವರ್ ನರಕ
ಕ್ಕಿೞಿವುದನಿಂಬಾಗಿ ತೋಱಿ ಸಾಱುವ ತೆಱದಿಂ ೨೨೬

ಸುವ ಗಂಡನಲ್ಲ; ನಿಮ್ಮ ಪಾದ, ಮತ್ತೊಂದು ಯೋಚನೆ ಮಾಡದೆ ಬೇಗನೆ ನಮ್ಮರಸನಿಗೆ ನಯನವಲ್ಲಭೆಯೂ ಮನೋವಲ್ಲಭೆಯೂ ಆಗಬೇಕು" ಎಂದು ಹೇಳಲು ಪ್ರಭಾವತಿಯು ನಕ್ಕು ಹೀಗೆ ಹೇಳಿದಳು: ೨೨೧. "ಪರವನಿತೆಗೆ ಆಸೆಪಟ್ಟವನಿಗೆ ಆಯುಧ ಕೆಲಸಮಾಡುವುದಿಲ್ಲ; ಅವನ ಕತ್ತಿ ವಿಧೇಯವಾಗಿರುವುದಿಲ್ಲ. ಖಂಡಿತವಾಗಿ ನುಡಿದರೆ, ಛೀ ಸತ್ಪುರುಷನು ಪರವನಿತೆಗೆ ಸೋತರೆ ಅವನಿಗೆ ಪರಗತಿಯು ಅಷ್ಟಕ್ಕಷ್ಟೇ. ಖಂಡಿತ. ಆದ್ದರಿಂದ ನಿಮ್ಮ ರಾಜನು, ಮಹಾಪುರುಷನು, ಇಂಥಾದ್ದಕ್ಕೆ ಆಸೆಪಡಬಾರದು" ಎಂದವಳು ನುಡಿಯಲು ಹೆಗ್ಗಡೆಗಳು ಹೀಗೆಂದರು: ೨೨೨-೨೨೩. ಸ್ವರ್ಗದಲ್ಲಿ ಭೋಗಿಸುವೆನೆಂದು ಈ ಜನ್ಮದ ಮಹಾಸೌಖ್ಯವನ್ನೆಲ್ಲವನ್ನೂ ಹಾಳುಮಾಡಿಕೊಂಡು ಶರೀರವನ್ನು ಕೊರಗಿಸಿ ಸಂಕಟಪಟ್ಟು ವೃಥಾ ಸವಣರ ಹುಚ್ಚಿಗೆ ಸಿಕ್ಕದೆ ಸುಖವನ್ನೇ ಯೋಚಿಸು ೨೨೪. ಎಂದು ಅವರು ಹೇಳಲು ಪ್ರಭಾವತಿಯು "ನೀಚರನ್ನೂ ಹಾದರದವರನ್ನೂ ಈಗಲೇ ಹಿಡಿದು ಗದರಿಸಿ ಹೊಡೆಯುತ್ತಾರೆ; ಕೋಪದಿಂದ ಕೊಲ್ಲುತ್ತಾರೆ. ಅದಂ ನರಕಕ್ಕೆ ಇಳಿಯುವುದನ್ನು ಚೆನ್ನಾಗಿ ತೋರಿಸುವಂತೆ ಕಾಣುತ್ತದೆ ೨೨೫-೨೨೬. ಆದ್ದರಿಂದ ಹಾದರ

ಗದ್ಯ॥ ಅದಱಿಂ ಪಾದರಂ ಕಪ್ಪಮೆನೆ ಪೆರ್ಗಡೆಗಳಿಂತೆಂದರ್ ೨೨೭

ತಡೆಯದೆ ನೀನೆಮ್ಮರಸನ
ನೊಡಗೂಡೊಡಗೂಡಲೊಲ್ಲದೊಂದಕ್ಕೊಂದಂ
ನುಡಿಯುತ್ತಿರ್ದೊಡೆ ಕಡೆಯೊಳ್
ಕಡುಚಪಳನ ಗೋಣಿ ಬಱಿದೆಯಾದಂತಕ್ಕುಂ ೨೨೮

ಎನೆ ಪ್ರಭಾವತೀ ಮಹಾದೇವಿಯಿಂತೆಂದಳ್ : ೨೨೯

ಮರಣಕ್ಕಂಜದೆ ಗುಣಮಂ
ಪರಿಹರಿಸದೆ ಶೀಲರತ್ನಮಂ ರಕ್ಷಿಸಿ ಸ
ತ್ತರ ಸಾವು ಸಾವೆ ಶೀಲಮ
ನುರವಣೆಯಿಂ ಬಿಟ್ಟ ಖಳರ ಬಾೞಂ ಬಾೞ್ಕೇ ೨೩೦

ಗದ್ಯ॥ ಎನೆ ಸಾಳಂಕಾರನಿಂತೆಂದಂ ೨೩೧

ಉಡುವುದು ದಿವ್ಯಾಂಬರಮಂ
ತುಡುವುದು ಭೂಷಣಮನುಣ್ಬುದೊಳ್ಳುಣಿಸಂ ತಾಂ
ಪಡೆದೊಡೆ ದೊರೆಕೊಂಡೊಡಮಂ
ಬಿಡುವದದೇಂ ಕೇಳ್ ಪರತ್ರೆಯಂ ಕಂಡವರಾರ್ ೨೩೨

ಬಹಳ ನೀಚವಾದದ್ದು" ಎಂದಳು. ಅದಕ್ಕೆ ಆ ಹೆಗ್ಗಡೆಗಳು ಸಾವಕಾಶ ಮಾಡದೆ ನೀನು ನಮ್ಮ ರಾಜನನ್ನು ಕೂಡು. ಹಾಗೆ ಒಡಗೂಡಲು ಇಷ್ಟಪಡದೆ ಮಾತಿಗೆ ಮಾತು ಉತ್ತರ ಹೇಳುತ್ತ ಇದ್ದರೆ ಕೊನೆಯಲ್ಲಿ ಮಹಾ ಚಪಲಚಿತ್ತನ ಗೋಣಿ ಬರಿಯದಾದ ಹಾಗೇ ಆಗುತ್ತದೆ ೨೨೭-೨೨೮. (ತೂತಿನ ಚೀಲದಲ್ಲಿ ಬತ್ತ ತುಂಬಿಕೊಂಡು ಸುಂಕ ತಪ್ಪಿಸಿಕೊಳ್ಳಲು ಬಳಸು ದಾರಿಯಲ್ಲಿ ಹೋದ ಬುದ್ಧಿಹೀನನಿಗೆ ಕೊನೆಗೆ ಖಾಲಿ ಚೀಲವುಳಿಯಿತು) ಆಗ ಪ್ರಭಾವತೀ ದೇವಿಯು ಹೀಗೆ ಉತ್ತರಕೊಟ್ಟಳು ೨೨೯. ಸಾವಿಗೆ ಹೆದರದೆ ಗುಣವನ್ನು ಕೈಬಿಡದೆ ಶೀಲವೆಂಬ ರತ್ನವನ್ನು ಕಾಪಾಡಿಕೊಂಡು ಸತ್ತಂಥವರ ಸಾವು ಸಾವೆ ? ರಭಸದಿಂದ ಶೀಲವನ್ನು ಕೈಬಿಟ್ಟ ನೀಚರ ಬದುಕು ಒಂದು ಬದುಕೆ ? ೨೩೦. ಅದಕ್ಕೆ ಸಾಳಂಕಾರನು "ದಿವ್ಯ ವಸ್ತ್ರಗಳನ್ನು ಉಟ್ಟುಕೊಳ್ಳುವುದು ಆಭರಣಗಳನ್ನು ತೊಡುವುದು. ಒಳ್ಳೆಯ ಊಟವನ್ನು ಪಡೆದಾಗ ಅವುಗಳನ್ನು ಅನುಭವಿಸುವುದು. ಬಿಡುವುದು, ಏನು ವಿವೇಕ ? ಕೇಳು, ಪರಲೋಕವನ್ನು ಕಂಡವರು ಯಾರಿದ್ದಾರೆ ?" ೨೩೧,

ಗದ್ಯ॥ ಎನೆ ಸಮ್ಯಕ್ತ್ವ ರತ್ನಾಕರೆಯಿಂತೆಂದಳ್ ೨೩೩

ಕುರುಡಂ ಮುಂದಿರ್ದಿಭಮುಮ
ನೆರಡಿಲ್ಲದೆ ಕಾಣದಂತೆ ದುರಿತೋದಯದಿಂ
ನರಕಂಬೊಗಲಿರ್ದವರುಂ
ಪರತ್ರೆಯಂ ಕಾಣರೇಂಬುದಚ್ಚರಿಯೋ ೨೩೪

ಗದ್ಯ॥ ಅದು ಕಾರಣದಿಂದಱನಿಲ್ಲ ಜೀವನಿಲ್ಲ ಪರತ್ರೆಯಿಲ್ಲೆಂಬ ಜಡರ ನುಡಿ ಪ್ರಮಾಣಮಲ್ಲೆಂಬುದುಂ ಪೆರ್ಗಡೆಗಳಿಂತೆಂದರ್ , ೨೩೫

ಜಳಜಮುಖಿ ಪಲವು ಮಾತಂ
ಗಟಿಪದೆ ಮದ್ವಲ್ಲಭಂಗೆ ವಲ್ಲಭೆಯಾಗೀ
ಪೊಟಲಂ ನಾಡಂ ಕಿಡಿಸದೆ
ಕಳಕುಳಮಂ ಪ್ರಜೆಗೆ ಮಾಡದೀಗಳೆ ಬೇಗಂ ೨೩೬

ಪರಿಸುಗುಮಿಲ್ಲಿ ಭೋರ್ಗರೆವ ನೆತ್ತರ ಪೆರ್ಪೊನಲಂ ಧಗದ್ಧಗಂ
ದುರಿಸುಗುಮುಗ್ರ ಕೋಪಶಿಖಿಯಿಂ ಪುರಮೆಲ್ಲಮನಟ್ಟ ಮೆಟ್ಟ ಸಂ
ಗರದೊಳನೇಕರಂ ತಱಿದು ಖಂಡದೊಳಿಂಡೆಯನಾಡುಗುಂ ಮನೋ
ಹರೆ ಬಿಡು ನಿನ್ನ ದರ್ಪಮನವಂಗಿದಿರಾಗಿ ಬರ್ದುಂಕುವನ್ನರಾರ್ ೨೩೭

ಗದ್ಯ॥ ಎಂದು ಭಯಮುಮಂ ತೋಱಿ ನುಡಿಯೆ ವನಿತಾರತ್ನೆಯಿಂತೆಂದಳ್ ೨೩೮

ಅದಕ್ಕೆ ಸಮ್ಯಕ್ತ್ವ ಸಮುದ್ರಳಂತಹ ಪ್ರಭಾವತಿಯು "ಕುರುಡನು ಎದುರಿಗಿದ್ದ ಆನೆಯನ್ನು ನಿಸ್ಸಂಶಯವಾಗಿಯೂ, ಕಾಣಲಾರ. ಹಾಗೆಯೇ ಪಾಪಾಧಿಕ್ಯದಿಂದ ನರಕವನ್ನು ಪ್ರವೇಶಿಸಲುಳ್ಳವರು ಪರಲೋಕವನ್ನು ಕಾಣರೆಂಬುದೇನಾಶ್ಚರ್ಯವೇ ? ೨೩೩–೨೩೪. ಆದ ಕಾರಣ, ಧರ್ಮವಿಲ್ಲ, ಜೀವನಿಲ್ಲ, ಪರಲೋಕವಿಲ್ಲ ಎಂಬ ಅಜ್ಞಾನಿಗಳ ಮಾತು ಪ್ರಮಾಣವಲ್ಲ." ಎಂದಳು. ಅದಕ್ಕೆ ಹೆಗ್ಗಡೆಗಳು ಮತ್ತೆ ಹೀಗೆಂದರು : "ಕಮಲಮುಖಿ ! ನೀನು ಅನೇಕ ಮಾತುಗಳನ್ನು ಹರಟದೆ ನಮ್ಮ ಒಡೆಯನಿಗೆ ಪ್ರೇಯಸಿಯಾಗಿ ಈ ಪಟ್ಟಣವನ್ನೂ ನಾಡನ್ನೂ ಕೆಡಿಸದೆ, ಪ್ರಜೆಗಳಿಗೆ ಅಶಾಂತಿಯನ್ನುಂಟು ಮಾಡದೆ ಈಗಲೇ ಎಚ್ಚರವಹಿಸು. ನಮ್ಮ ರಾಜನಿಗೆ ಸಿಟ್ಟು ಬಂದರೆ ಅವನನ್ನು ಇದಿರಿಸಿ ಬದುಕಬಲ್ಲವರಿಲ್ಲ. ಅವನು ಇಲ್ಲಿ ಭೋರೆಂದು ಶಬ್ದಮಾಡುತ್ತ ಹರಿಯುವ ರಕ್ತಪ್ರವಾಹಗಳನ್ನೇ ಹರಿಸುತ್ತಾನೆ ; ಪಟ್ಟಣವನ್ನೆಲ್ಲ ಧಗಧಗನೆ ಸುಟ್ಟುಬಿಡುತ್ತಾನೆ. ಯುದ್ಧದಲ್ಲಿ ಅನೇಕರನ್ನು ಕಡಿದು ಕತ್ತರಿಸಿ ತರಿದು ಮಾಂಸಖಂಡಗಳನ್ನು ಚೆಲ್ಲಾಡುತ್ತಾನೆ" ಎಂದು ಭಯಪಡಿಸಿ ಮಾತನಾಡಲು ಆ ವನಿತಾರತ್ನಳು ಹೀಗೆಂದಳು : ೨೩೮. "ಸೀತೆಯನ್ನು ಹೊತ್ತುಕೊಂಡು ಹೋಗಿ ಲಂಕಾರಾಜನಂಥ ಶೂರರೂ

ಧರಣಿಜೆಯನುಯ್ದು ಲಂಕಾ
ಪುರೇಶನಂತಪ್ಪ ಗಂಡರುಂ ಸತ್ತರ್ ನಿ
ತ್ತರಿಸದೆನೆ ಕೇಳ ಮತ್ತಿನ
ಧರೆಯರಸರ್ ಪರವಧೂಪ್ರಿಯರ್ ಬಟ್ದಪರೇ ೨೩೯

ಗದ್ಯ॥ ಎಂಬುದುಂ ಸಾಳಂಕಾರಂ ಮುನಿದು ಎನ್ನಮಾತಂ ಕೇಳಲೊಲ್ಲದ ಫಲವಂ ತಡೆಯದೆ ಕಾಣ್ಪೈಯೆಂದು ಪೊಱಮಟ್ಟು ಪೋದನನ್ನೆಗಮುಗ್ರಸೇನನೆಂಬ ದಂಡಾಧಿಪಂ ಕೋಂಟೆಯಂ ಬಲಿದು ಕಾದುವ ಸವಕಟ್ಟಂದಿರ್ಪುದುಂ ಪ್ರಭಾವತೀ ಮಹಾದೇವಿ ೨೪೦

ಪಿರಿದುಂ ಬಲಸ್ಥನವನೀ
ಧುರದೊಳ್ ನಿಲ್ವನ್ನರಿಲ್ಲ ಮದ್ವಲ್ಲಭನುಂ
ಪರದೇಶದೊಳಿರ್ದಪನಿಂ
ದರಿದಾಯ್ತೆಂದಳ್ಕಿ ಕಾಂತೆ ತಳವೆಳಗಾದಳ್ ೨೪೧

ಗದ್ಯ॥ ಆನೀಗಳ್ ಜಿನಪೂಜೆಯಂ ಮಾಡಿ ಘೋರೋಪಸರ್ಗಮಿದು ಪಿಂಗುವಿನಂ ಆಹಾರ ಶರೀರ ನಿವೃತ್ತಿಯೆಂದು ಕೈಯನಿಕ್ಕಿಕೊಂಡಿರ್ದಳನ್ನೆಗಂ ೨೪೨

ಪೊನ್ನವಿಮಾನಮನೇಱಿ ಮ
ಹೋನ್ನತಿಯಿಂ ದೇವಲೋಕದಿಂ ಮೇರುನಗ
ಕ್ಕುನ್ನಯದಿಂದಂ ಪೋಗುತೆ
ಸನ್ನುತ ಜಿನಭವನಮೆಲ್ಲಮಂ ಪೂಜಿಸಿದೆಂ ೨೪೩

ನಿರ್ವಹಿಸಲಾರದೆ ಸತ್ತರು. ಇನ್ನು ಉಳಿದ ರಾಜರು ಪರವಧುಗೆ ಆಸೆಪಟ್ಟು ಬದುಕುವರೆ ?" ೨೩೯. ಈ ಮಾತು ಕೇಳಿದ ಸಾಳಂಕಾರನು ಸಿಟ್ಟಾಗಿ "ನನ್ನ ಮಾತನ್ನು ಕೇಳಲೊಪ್ಪದ ಫಲವನ್ನು ಕೂಡಲೆ ಕಾಣುವೆ"ಯೆಂದು ಹೇಳಿ ಹೊರಟು ಹೋದನು. ಆ ವೇಳೆಗೆ ಉಗ್ರಸೇನನೆಂಬ ದಂಡನಾಯಕನು ಕೋಟೆಯನ್ನು ಬಲಪಡಿಸಿ ಯುದ್ಧ ಮಾಡುವ ಪ್ರಯತ್ನದಲ್ಲಿದ್ದನು. ೨೪೦. ಆಗ ಪ್ರಭಾವತೀದೇವಿಯು "ಇವನು ಬಹಳ ದೊಡ್ಡ ಸೈನ್ಯವುಳ್ಳವನು. ಇವನೊಡನೆ ಯುದ್ಧದಲ್ಲಿ ನಿಲ್ಲಬಲ್ಲಂಥ ವರು ಈಗ ಇಲ್ಲಿ ಇಲ್ಲ. ನನ್ನ ಸ್ವಾಮಿಯೂ ಪರದೇಶದಲ್ಲಿ ಇದ್ದಾನೆ. ಈ ಹೊತ್ತು ಇದು ಅಸಾಧ್ಯವಾಯಿತು" ಎಂದು ಹೆದರಿ ಆ ಕಾಂತೆ ಗಾಬರಿಗೊಂಡಳು. ೨೪೧. ನಾನು ಈಗ ಜಿನಪೂಜೆಯನ್ನು ಮಾಡಿ ಘೋರವಾದ ಈ ಉಪಸರ್ಗವು ಕಳೆಯುವವರೆಗೆ ಆಹಾರ ಶರೀರ ನಿವೃತ್ತಿಯೆಂದು ಕೈಕಟ್ಟಿಕೊಂಡಿದ್ದಳು. ೨೪೨. ಆ ವೇಳೆಗೆ ನಾನು ಭಂಗಾರದ ವಿಮಾನವನ್ನೇರಿ ಮಹಾ ವೈಭವದಿಂದ ದೇವಲೋಕದಿಂದ ಮೇರುಪರ್ವತಕ್ಕೆ ನೇರವಾಗಿ ಹೋಗುತ್ತ ಶ್ರೇಷ್ಠವಾದ ಜಿನಭವನಗಳನ್ನೆಲ್ಲ ಪೂಜಿಸಿದೆ ೨೪೩. ಆಮೇಲೆ

ಗದ್ಯ॥ ಪೂಜಿಸಿ ಮತ್ತಂ ನಂದೀಶ್ವರದ್ವೀಪಮಂ ಕಾಣಲೆಂದು ಭಕ್ತಿಯಿಂ ಪೋಗುತ್ತಿರಲೆನ್ನ ವಿಮಾನಮೀ ಪುರದ ಮೇಲೆ ಪೋಗದೆ ಕೀಲಿಸಿ ನಿಲ್ವುದುಂ ಅವಧಿಲೋಚನದಿನೀ ಸತಿಗಾದುಪಸರ್ಗಮಂ ನಱಿದು ೨೪೪

ಮುಳಿಸಾಗೆ ಮಾಳವೇಶನ
ಬಳಮೆಲ್ಲಮನುಯ್ದು ಪುಡುಕುನೀರಟ್ಟುವೆನೆಂ
ಬಳವಾಗಿ ಮತ್ತೆ ಮಾಣ್ದೆಂ
ತಿಳಿದಾಂ ಸದ್ದೃಷ್ಟಿಯಪ್ಪ ಕಾರಣದಿಂದಂ ೨೪೫

ಗದ್ಯ॥ ಅಂತು ಕರುಣಿಸಿ ಚಂಡಪ್ರದ್ಯೋತನ ಬಲಮೆಲ್ಲಮಂ ಮಹಾವಾಯು ತೆಱೆಗಳೆಯನೆತ್ತುವಂತೆತ್ತಿಕೊಂಡುಯ್ದುಜ್ಜಯಿನಿಯ ಮಹಾಕಾಳದೊಳಿರಿಸಿ ೨೪೬

ಈ ರಮಣಿಯ ಶೀಲಮನಿದ
ನಾರಯ್ವೆಲ್ವೇಟ್ಕುಮೆಂದು ತದ್ಭೂಮಿಪನಾ
ಕಾರಮನೆಕೊಂಡು ಪುರಮಂ
ವಾರಿಧಿಯೊಲ್ಸುತ್ತಿ ಮುತ್ತಿಕೊಂಡುಗ್ರತೆಯಿಂ ೨೪೭

ಗದ್ಯ॥ ಪೊಟಲೆಲ್ಲಮಂ ಮಾಯಾನಿದ್ರೆಯೊಳಿಕ್ಕಿ ಚತುರಂಗಬಲಮಂ ವಿಗುರ್ವಿಸಿ ಕೋಂಟೆಯಂ ಕೊಂಡು ೨೪೮

ನಂದೀಶ್ವರ ದ್ವೀಪವನ್ನು ಕಾಣುವ ಉದ್ದೇಶದಿಂದ ಭಕ್ತಿಯಿಂದ ಹೋಗುತ್ತಿದ್ದೆ; ಆಗ ನನ್ನ ವಿಮಾನ ಈ ಪಟ್ಟಣದ ಮೇಲೆ ಹೋಗದೆ ಬಿಗಿದು ಕಟ್ಟಿದಂತೆ ನಿಂತು ಬಿಟ್ಟಿತು. ಅವಧಿಜ್ಞಾನದಿಂದ ಈ ಸತಿಗೆ ಆದ ಈ ಉಪಸರ್ಗ (ಹಿಂಸೆ) ವನ್ನು ತಿಳಿದು ೨೪೪. ಸಿಟ್ಟು ಬಂತು. ಮಾಳವ ರಾಜನ ಸೈನ್ಯವನ್ನೆಲ್ಲ ಒಯ್ದು ಕುದಿಯುವ ನೀರಿನಲ್ಲಿ ಅದ್ದುವ ಆಸೆ ಹುಟ್ಟಿತು. ಆದರೆ ಸದ್ದೃಷ್ಟಿಯುಳ್ಳವನಾದ್ದರಿಂದ ಮತ್ತೆ ಆ ಯೋಚನೆಯನ್ನೇ ಕೈಬಿಟ್ಟೆ ೨೪೫. ಹಾಗೆ ಕರುಣೆ ತೋರಿ ಚಂಡಪ್ರದ್ಯೋತನ ಸೈನ್ಯವನ್ನೆಲ್ಲ ಬಿರುಗಾಳಿ ತರಗೆಲೆಗಳನ್ನು ಎತ್ತುವ ಹಾಗೆ ಎತ್ತಿಕೊಂಡು ಹೋಗಿ ಉಜ್ಜಯಿನಿಯ ಮಹಾಕಾಳದ ಬಳಿ ನಿಲ್ಲಿಸಿದೆ ೨೪೬. ಈ ರಮಣಿಯ ಶೀಲವನ್ನು ಪರೀಕ್ಷಿಸಬೇಕೆಂದು ಆ ರಾಜನ ಆಕಾರವನ್ನೇ ಧರಿಸಿ ಈ ಪಟ್ಟಣವನ್ನು ಸಮುದ್ರದ ಹಾಗೆ ಉಗ್ರವಾಗಿ ಮುತ್ತಿಗೆ ಹಾಕಿ ಪಟ್ಟಣವನ್ನೆಲ್ಲ ಮಾಯಾನಿದ್ರೆಯಲ್ಲಿಟ್ಟು ಚತುರಂಗ ಸೈನ್ಯವನ್ನು ಮಾಯೆಯಿಂದ ಕಲ್ಪಿಸಿ ಕೋಟೆಯನ್ನು ವಶಪಡಿಸಿಕೊಂಡು

ಉರಿವಂತೆ ಪುರವರಂ ಸಂ
ಗರದೊಳ್ ಕೆಡೆವಂತೆ ಪೆರ್ಬಲಂ ಬೀದಿಗಳೊಳ್
ಪರಿವಂತೆ ರಕ್ತಮವನಿಪ
ನರಮನೆಯಂ ಸುಟ್ಟು ಸೂಱೆಗೊಳ್ವಂತೆ ಭಟರ್ ೨೪೯

ಗದ್ಯ॥ ಚಮತ್ಕಾರಮಂ ಮಾಡಿ ಭಯಮುಮದ್ಭುತಮುಮಾಗೆ ಪ್ರಭಾವತೀ ಮಹಾದೇವಿಯಲ್ಲಿಗೆವಂದು ಮುಂದೆ ನಿಂದಿರ್ದು ೨೫೦

ಎನಗಿದಿರಾಂಪವರಾರ್ಮೇ
ದಿನಿಯೊಳ್ ನಾಂ ಮುನಿದೊಡಂ ಜವಂ ಮುಳಿದೊಡಮು
ರ್ಬಿನೊಳಾಂತು ಸೆಣಸಿ ಕಾದುವ
ಜನಪಂಗೆಂಟೆರ್ದೆಯೆ ಮರುಳೆ ನೀನೆತ್ತಱಿದೌ ೨೫೧

ಗದ್ಯ॥ ಮತ್ತಂ ನಿನ್ನ ಪ್ರಾಣವಲ್ಲಭನಪ್ಪೊದ್ದಾಯನ ಮಹಾರಾಜನ ಬಿಂಕಮಂ ಸುಂಕಂಗೊಂಡು ವೀರಮಂ ದೂರಂಮಾಡಿ ಬೆಳ್ಳರಳೆಯಂ ಬೆಂಗೊಂಡಂತೆ ತಗುಳ್ದು ಪಿಡಿದುಕೊಂಡು ಕೋಡಗಗಟ್ಟು ಗಟ್ಟಿತಂದೆಂ; ನಂಬೆಯಪ್ಪೊಡೆ ಯಿವನಂ ನೋಡೆಂದೆನೆ ಕಾಂತೆ ೨೫೨

ಎನ್ನಾಣ್ಮನದಟನುಡುಗಿಸು
ವನ್ನರ್ಪೆಱರೊಳರೆ ಗಂಡರವನೀತಳದೊಳ್
ಪನ್ನಗನೀ ಕಡುದುರ್ಜನ
ನೆನ್ನಂ ನುಡಿಸಲ್ಕೆ ವೇಡಿಮಱುಗಿಪನಱಿಪೆಂ ೨೫೩

ಪಟ್ಟಣ ಉರಿಯುವ ಹಾಗೆ, ದೊಡ್ಡ ಸೈನ್ಯ ಯುದ್ಧದಲ್ಲಿ ಬೀಳುವ ಹಾಗೆ, ಬೀದಿಗಳಲ್ಲಿ ರಕ್ತ ಹರಿಯುವ ಹಾಗೆ, ರಾಜನ ಅರಮನೆಯನ್ನು ಸುಟ್ಟು ಭಟರು ಸೂರೆಗೊಳ್ಳುವ ಹಾಗೆ ೨೪೯. ಚಮತ್ಕಾರವನ್ನು ಮಾಡಿ, ಭಯವೂ ಬೆರಗೂ ಆಗುವಂತೆ ಮಾಯೆಯನ್ನು ಕಲ್ಪಿಸಿದೆ. ಪ್ರಭಾವತೀ ಮಹಾದೇವಿಯಲ್ಲಿಗೆ ಬಂದು ಮುಂದೆ ನಿಂತಿದ್ದು ೨೫೧. "ನನಗೆ ಇದಿರು ನಿಲ್ಲುವವರು ಯಾರು ? ಈ ಪ್ರಪಂಚದಲ್ಲಿ ನಾನು ಸಿಟ್ಟಾದರೂ ಯಮಧರ್ಮರಾಯನು ಸಿಟ್ಟಾದರೂ ಧೈರ್ಯದಿಂದ ಎದುರಿಸಿ ಕೆಣಕಿ ಕಾದಾಡುವ ರಾಜನಿಗೇನು ಎಂಟೆದೆಗಳಿವೆಯೇ ? ಮರುಳೆ ? ನೀನೇನು ಬಲ್ಲೆ ? ಅಲ್ಲದೆ ನಿನ್ನ ಗಂಡನಾದ ಒದ್ದಾಯನ ಮಹಾರಾಜನ ಗರ್ವವನ್ನು ನಾಶಪಡಿಸಿ, ಪರಾಕ್ರಮವನ್ನು ಹೋಗಲಾಡಿಸಿ ಅಂಜಿದ ಜಿಂಕೆಯನ್ನು ಬೆನ್ನಟ್ಟುವಂತೆ ಅಟ್ಟಿ ಹಿಡಿದು ಕೋತಿಯನ್ನು ಕಟ್ಟಿದ ಹಾಗೆ ಕಟ್ಟಿ ತಂದಿದ್ದೇನೆ. ನಿನಗೆ ನಂಬಿಕೆಯಾಗದಿದ್ದರೆ ಇವನನ್ನು ನೋಡು" ಎಂದು ಹೇಳಲು ಆ ಕಾಂತೆಯು ಹೀಗೆ ಯೋಚಿಸಿದಳು ೨೫೨. "ನನ್ನ ಸ್ವಾಮಿಯ ಶೌರ್ಯವನ್ನು ಕಳೆಯಬಲ್ಲ ಗಂಡಸರು ಈ ಲೋಕದಲ್ಲಿ ಇರುವರೆ ? ಈ ಮಹಾ ಕೆಟ್ಟವನು ಹಾವಿನಂಥವನು, ನನ್ನನ್ನು ಮಾತನಾಡಿಸಲೆಂದು ಹೀಗೆ ಸಂಕಟಪಡಿಸುತ್ತಾನೆ. ಬಲ್ಲೆ" ೨೫೩. "ಇವನ ಸಂಗಡ ಮಾರಿಯೂ ಬಳಾರಿಯೂ ಮಾತನಾಡಲಿ;

ಗದ್ಯ॥ ಈತನೊಡನೆ ಮಾರಿಯುಂ ಬಳಾರಿಯುಂ ಸುಡಿಗೆ ಘೂನೇಸಂ ಮಾಡಿದೊಡಮೆನ್ನ ಶೀಲಮನೇಗೆಯ್ದುಂ ಕಿಡಿಸುವೆನಲ್ಲೆಂದು ಪರಮ:ಜಿನಚರಣಮನೆ ಮನದೊಳ್ ತಾಳ್ದಿ ಪಂಚ ನಮಸ್ಕಾರಮನೋದುತ್ತುಂ ಮುನ್ನಿನ ಮಹಾಪುರುಷರ ಕಥೆಗಳಂ ಭಾವಿಸುತ್ತುಮಿರೆ ೨೫೪

ನಿನ್ನುರಿಪದಿಂದೆ ಪುರವರ
ಮುನ್ನಾಡುಂ ಕೆಟ್ಟುಪೊಟ್ಟನಾದುದು ಮತ್ತಂ
ನಿನ್ನಾಣ್ಮಂಗೀವಿಧಿಯಾ
ಯ್ತಿನ್ನಿರವೇಡೆನ್ನೊಳಟ್ಟುಳಿಂದಂ ಕೂಡಾ ೨೫೫

ಆನಳಿಪುವನ್ನರೊಳರೇ
ಮಾನಿನಿಯರ್ನಿನ್ನ ಪುಣ್ಯದಿಂದಂ ನೀರೇ
ಜಾನನೆಯಾಂ ದೊರೆಕೊಂಡೆಂ
ಹೀನತೆಯಂ ಬಿಸುಡು ಮೋಹದಿಂ ಕೂಡೆನ್ನೊಳ್ ೨೫೬

ಪತಿ ಬಂದಪನೆಂಬಾಸೆಯೊ
ಳತಿಶಯದಿಂದಿರ್ಪೆಯಪ್ಪೊಡಂ ನಿನ್ನ ಮಹೀ
ಪತಿಯುಮನಾಂ ಪಿಡಿದೆಂ ಸಿತ
ಮತಮಂ ಬಿಟ್ಟೆನ್ನೊಳಕ್ಕಿಱಿಂದಂ ಕೂಡಾ ೨೫೭

ಏನು ಮಾಡಿದರೂ ನಾನು ನನ್ನ ಶೀಲವನ್ನು ಕೆಡಿಸಿಕೊಳ್ಳುವವಳಲ್ಲ" ಎಂದು ಯೋಚಿಸಿ ಪರಮ ಜಿನನ ಪಾದಗಳನ್ನೇ ಮನಸ್ಸಿನಲ್ಲಿ ಧರಿಸಿ ಪಂಚನಮಸ್ಕಾರಗಳನ್ನು ಹೇಳಿ ಕೊಳ್ಳುತ್ತ ಹಿಂದಿನ ಮಹಾಪುರುಷರ ಕಥೆಗಳನ್ನು ಸ್ಮರಿಸುತ್ತ ಇದ್ದಳು ೨೫೪. "ನಿನ್ನ ಉರಿತ (ಹಟ)ದಿಂದ ಈ ಪಟ್ಟಣವೂ ನಾಡೂ ಕೆಟ್ಟು ಹಾಳಾಯಿತು. ಅಲ್ಲದೆ ನಿನ್ನ ಗಂಡನಿಗೂ ಈ ಗತಿಯಾಯಿತು. ಇನ್ನು ತಡಮಾಡಬೇಡ. ನನ್ನೊಡನೆ ಪ್ರೀತಿಯಿಂದ ಸೇರು ೨೫೫. ನಾನು ಆಸೆಪಡುವಂಥ ಮಾನವ ಸ್ತ್ರೀಯರಿವರೆ ? ಕಮಲಮುಖಿ, ನಾನು ನಿನಗೆ ನಿನ್ನ ಪುಣ್ಯದಿಂದ ಲಭಿಸಿದ್ದೇನೆ, ನಿನ್ನ ಹೀನತನವನ್ನು ಬಿಡು, ಮೋಹ ದಿಂದ ನನ್ನೊಡನೆ ಕೂಡು ೨೫೬. ಗಂಡ ಬರುವನೆಂಬ ಆಸೆಯಿಂದ ಧೈರ್ಯದಿಂದಿರುವೆ ಯಾದರೆ ನಿನ್ನ ಆ ರಾಜನನ್ನು ನಾನು ಹಿಡಿದಿದ್ದೇನೆ. ಕೆಟ್ಟ ಮತ (ಸಿತಮತ?) ವನ್ನು ಬಿಟ್ಟು ನನ್ನಲ್ಲಿ ಅಕ್ಕರೆಯಿಂದ ಕೂಡಿಕೊ ೨೫೭. ಪ್ರಾಯದ ವಯಸ್ಸಿನಲ್ಲಿ ಮೆಚ್ಚಿದ

ತರುಣವಯಸಿನೊಳ್ ಮೆಚ್ಚಿದ
ಪುರುಷರೊಳೊಡಗೂಡಿ ಕಾಲಮಂ ಕಳೆಯದೆ ಪಂ
ಕರುಹಾಕ್ಷಿ ಶೀಲಮಂ ಪಿಡಿ
ದುರಿವರಿಯಿಂ ಬಂದ ಸುಖಮನೆಡೆಯೊಳ್ ಕಿಡಿಪಾ ೨೫೮

ಗದ್ಯ॥ ಎಂದು ನಾನಾಪ್ರಕಾರದಿಂ ನುಡಿದೊಡಂ ಮಾರ್ನುಡಿಯದಿರೆ ಮೆಚ್ಚಿ ಮನದೊಳ್ ಪೊಡೆಮಟ್ಟೆನ್ನ ದಿವ್ಯ ಸ್ವರೂಮಂ ತೋರ್ಪಿ ನಿಮ್ಮುಪಸರ್ಗಂ ಪೋಯ್ತು ಕೈಯನೆತ್ತಿಕೊಳ್ಳೆಂದು ಪುರದೊಳಗಣ ಮಾಯಾನಿದ್ರೆಯಂ ಮಾಣಿಸಿ ವಿಗುರ್ವಣೆಯನುಡುಗಿಸಿ ಸುರತರು ಕುಸುಮದಿಂ ಪೂಜಿಸಿ ಶೀಲವತಿಯೆಂಬ ಮಾಂಗಲ್ಯನಾಮವನಿಟ್ಟು ದೇವಲೋಕಕ್ಕೆ ಪೋದನೀ ವನಿತಾರತ್ನಂ ಕೇವಳಮಲ್ಲೆಂದು ಪೊಗಟ್ದು ತದನಂತರಂ ೨೫೯

ವಿವಿಧ ರತುನಂಗಳಿಂದೊ
ಪ್ಪುವ ಸಿಂಹಾಸನಮನಾಗಳಾಕ್ಷಣದಿಂ ತ
ದ್ದಿವಿಜಂ ಮಾಡಿ ಧರಿತ್ರೀ
ರಮಣನನರಸಿಯುಮನಿರಿಸಿ ಪಿರಿದುತ್ಸವದಿಂ ೨೬೦

ಅರಲ ಮಳೆ ಕರೆಯೆ ಭೋರೆನೆ
ಸುರದುಂದುಭಿ ಮೊಟಗೆ ತೆಂಕಣೆಲರೆಸಗೆ ಮನೋ
ಹರಮಾಗೆ ಮೃದು ನಿನಾದಂ
ಕರಮೆಸೆದಿರೆ ಪಾಡೆ ದೇವಿಯರ್ಮಂಗಳಮಂ ೨೬೧

ಪುರುಷರ ಸಂಗಡ ಕೂಡಿ ಹೊತ್ತು ಕಳೆಯದೆ, ಕಮಲಾಕ್ಷಿ ! ನೀನು ಶೀಲವನ್ನು ಹಿಡಿದು ಬಂದ ಸೌಖ್ಯವನ್ನು ಉರಿಸಿ ಕೆಡಿಸುವೆಯಾ?" ೨೫೮. ಎಂದು ನಾನಾ ರೀತಿಯಿಂದ ಮಾತನಾಡಿದರೂ ಪ್ರತಿ ಮಾತನ್ನೇ ಆಡದೆ ಇರಲು, ಮೆಚ್ಚಿ ಮನಸ್ಸಿನಲ್ಲಿಯೇ ಅಡ್ಡ ಬಿದ್ದು ನನ್ನ ದಿವ್ಯ ಸ್ವರೂಪವನ್ನು ತೋರಿಸಿ "ನಿಮಗೆ ಒದಗಿದ್ದ ಉಪಸರ್ಗ ಹೋಯಿತು. ಇನ್ನು ಕೈಯನ್ನು ಎತ್ತಿಕೊಳ್ಳಿ" ಎಂದು ಹೇಳಿ ಪಟ್ಟಣದೊಳಗಿನ ಮಾಯಾ ನಿದ್ರೆಯನ್ನು ತಪ್ಪಿಸಿ ಮಾಯಾ ಸೃಷ್ಟಿಯನ್ನು ಕಳೆದು ಕಲ್ಪವೃಕ್ಷದ ಹೂವುಗಳಿಂದ ಪೂಜೆಮಾಡಿ 'ಶೀಲವತಿ' ಎಂಬ ಮಾಂಗಲ್ಯನಾಮ (ಮಂಗಳಕರವಾದ ಹೆಸರು) ವನ್ನಿಟ್ಟು ದಿವ್ಯಲೋಕಕ್ಕೆ ಹೋದೆ. ಈ ವನಿತಾರತ್ನಳು ಸಾಧಾರಣಳಲ್ಲ." ಎಂದು ಹೊಗಳಿ ಆ ಮೇಲೆ ೨೫೯. ವಿವಿಧ ರತ್ನಗಳಿಂದ ಶೋಭಿಸುವ ಸಿಂಹಾಸನವನ್ನು ಆಗಲೇ ಆ ಕ್ಷಣದಲ್ಲಿಯೇ ಆ ದೇವನು ಮಾಡಿ ರಾಜನನ್ನೂ ರಾಣಿಯನ್ನೂ ಬಹಳ ಉತ್ಸವದಿಂದ ಅದರ ಮೇಲೆ ಕುಳ್ಳಿರಿಸಿದನು, ೨೬೦. ಪುಷ್ಪವೃಷ್ಟಿ ಸುರಿಯಲು, ಭೋರೆಂದು ದೇವ ದುಂದುಭಿಗಳು ಮೊಳಗುತ್ತಿರಲು ದಕ್ಷಿಣದ ಗಾಳಿ ಬೀಸಲು ಮನೋಹರವಾದ ಮೃದುನಿನಾದಗಳುಂಟಾಗಿ ದೇವತಾ ಸ್ತ್ರೀಯರು ಮಂಗಳವನ್ನು ಹಾಡುತ್ತಿರಲು ೨೬೧. ಸುಂದರ ರತ್ನಗಳಿಂದ ಶೋಭಿಸುವ

ಸುರುಚಿರರತ್ನದಿನೊಪ್ಪುವ
ಸುರರ ವಿಮಾನಂಗಳೊಂದು ತಿಂತಿಣಿಯಿಂದಂ
ಬರಮೆಲ್ಲಂ ತೀವಿರ್ದುದು
ನರನಾಥನ ಕೀರ್ತಿಲತೆಯ ಪೂಗಳ ತೆಱದಿಂ ೨೬೨

ಗದ್ಯ॥ ಅಂತು ಜನವೆಲ್ಲಂ ಬೆಱಗಾಗೆ ಜಿನಭಕ್ತಿಯೆಂಬ ಬೆಳಸಿನ ರಾಶಿಯಂ ತೋರ್ಪಂತೆ ಪಾಲ ಸಮುದ್ರದ ನೀರಿಂದಭಿಷೇಕಂ ಮಾಡಿ ಪೂಜಿಸಿ ಸಮ್ಯಕ್ತ್ವಚೂಡಾಮಣಿಯುಂ ವಾತ್ಸಲ್ಯ ರತ್ನಾಕರನುಂ ಸುಕವಿನಿಕರಪಿಕಮಾಕಂದನುಂ ಸಹಜಕವಿಮನೋಹರೋದ್ಯಾನ ಕಳಕಂಠಕಂಠನುಮೆಂಬೀಪ್ರಶಸ್ತನಾಮಂಗಳನಿಟ್ಟು ತಣಿಯುಂಡ ಭೂತದಂತೆ ಪಲತೆಱದ ಪೊಗಟ್ತೆಗಳಿಂ ಪೊಗಟ್ದು ವಾಸವಂ ದಿವಿಜನಿವಾಸಕ್ಕೆ ಪೋದನಿಂತು ೨೬೩

ಪುರುಷರತ್ನಂ ಪುರಾತನ
ಚರಿತಂ ಜಿನಚರಣಕಮಲಭೃಂಗಂ ಸತ್ಯಾ
ಭರಣಂ ದಯಾಂಬುನಿಧಿ ಮಂ
ದರ ಧೈರ್ಯಂ ನೃಪಕಿರೀಟಘಟ್ಟಿತಚರಣಂ ೨೬೪

ಧರೆ ಕೊಂಡು ಕೊನೆದು ಬಣ್ಣಿಪು
ದಱಿದೆ ಗುಣೋನ್ನತಿಯಿನೀ ಮಹಾತ್ಮಂ ಧರೆಗ
ಚ್ಚರಿಯಾಗೆ ಭಕ್ತಿಯಿಂದಂ
ಸುರರಿಂದಂ ಪೂಜೆವಡೆದನಿನ್ನರುಮೊಳರೇ ೨೬೫

ದೇವ ವಿಮಾನಗಳ ಸಮೂಹದಿಂದ ಆಕಾಶವೆಲ್ಲ ತುಂಬಿಹೋಗಿರಲು ರಾಜನ ಕೀರ್ತಿಯೆಂಬ ಬಳ್ಳಿಯ ಹೂಗಳಂತೆ ಕಾಣುತ್ತಿದ್ದುವು, ಆ ವಿಮಾನಗಳು ೨೬೨. ಹಾಗೆ ಜನರೆಲ್ಲ ಬೆರಗುಗೊಂಡಿರಲು ಜಿನಭಕ್ತಿಯ ಬೆಳೆಯ ರಾಶಿಯನ್ನು ತೋರುವ ಹಾಗೆ ಹಾಲು ಕಡಲಿನ ನೀರಿನಿಂದ ಅಭಿಷೇಕಮಾಡಿ ಪೂಜಿಸಿ ಸಮ್ಯಕ್ತ್ವ ಚೂಡಾಮಣಿಯೂ ವಾತ್ಸಲ್ಯ ಸಮುದ್ರನೂ ಸುಕವಿಗಳೆಂಬ ಕೋಗಿಲೆಗಳಿಗೆ ಮಾವಿನಂಥವನೂ ಸಹಜ ಕವಿ ಮನೋಹರೋದ್ಯಾನದ ಕೋಗಿಲೆ, ಎಂಬೀ ಪ್ರಶಸ್ತಿಯ ಹೆಸರುಗಳನ್ನಿಟ್ಟು ತೃಪ್ತಿಯಾಗಿ ಉಂಡ ಭೂತದ ಹಾಗೆ ಹಲವು ರೀತಿಯ ಹೊಗಳಿಕೆಗಳನ್ನು ಹೊಗಳಿ, ವಾಸವನು ದೇವಲೋಕಕ್ಕೆ ಹೋದನು. ೨೬೩. "ಹೀಗೆ ಪುರುಷರತ್ನನೂ ಪುರಾತನಚರಿತನೂ, ಜಿನಚರಣಕಮಲಗಳಲ್ಲಿ ದುಂಬಿಯಂತಿರುವವನೂ ಸತ್ಯವೇ ಆಭರಣವಾಗಿ ಉಳ್ಳವನೂ, ದಯಾ ಸಮುದ್ರನೂ ಮಂದರದಂತೆ ಧೀರನೂ ರಾಜರ ಕಿರೀಟಗಳು ತಾಕಿದ ಚರಣವುಳ್ಳವನೂ" ೨೬೪. ಎಂದು ಲೋಕ ಕೊಂಡಾಡಿ ವರ್ಣಿಸುವುದು ಆಶ್ಚರ್ಯವೆ ? ಗುಣೋನ್ನತಿಯಿಂದ ಈ ಮಹಾತ್ಮನು ಲೋಕಕ್ಕೆ ಆಶ್ಚರ್ಯವಾಗುವಂತೆ ಭಕ್ತಿಯಿಂದ, 'ದೇವತೆಗಳಿಂದ ಪೂಜೆಯನ್ನು ಪಡೆದ; ಇಂಥವರೂ ಇದ್ದಾರೆಯೇ ?' ೨೬೫. ಎಂದು ಒದ್ದಾಯಿನ

ಗದ್ಯ॥ ಎಂದೊದ್ಪಾಯನ ಮಹಾರಾಜನಂ ಲೋಕಮೆಲ್ಲಂ ಒಂದೆ ಕೊರಲೊಳ್ ಕೊಂಡಾಡೆ ಸದ್ಗುಣದೊಳ್ ಕೂಡಿ ಪಲಕಾಲಂ ರಾಜ್ಯಂಗೆಯ್ದೊಂದುದಿವಸಂ ತನ್ನೊಳಿಂತೆಂದಂ ೨೬೬

ಮತಿಗೆಟ್ಟಿನ್ನೆವರಂ ಸಂ
ಸೃತಿಯೊಳ್‌ನಾಂ ತೊಡರ್ದು ಮುಟ್ಟುಗೆಟ್ಟಿರ್ದೆಂ ಸಂ
ಸೃತಿಯುಂ ಬಿಟ್ಟಂ ನಾಂ ನಿ
ರ್ವೃತಿಯಂ ಸಾಧಿಸುವುಪಾಯಮಂ ಚಿಂತಿಸುವೆಂ ೨೬೭

ತನುವಪ್ಪೊಡೆ ನಿಲ್ಲದು ಜ
ವ್ವನಮಪ್ಪೊಡೆ ನೀರ ಬೊಬ್ಬುಳಿಕೆ ಕಡುಗೂರ್ಪಂ
ಗನೆಯರ್ ನಂಟರ್ ತನುಭವ
ರನುಜಾದಿಗಳಪ್ಪರೇ ಶರಣ್ಸಾವೆಡೆಯೊಳ್ ೨೬೮

ಗದ್ಯ॥ ಎಂದು ಬಗೆದು ಸಂಸಾರಕ್ಕೆ ಪೇಸಿ ವೈರಾಗ್ಯಂ ಪುಟ್ಟೆ ತನ್ನ ಪಿರಿಯ ಮಗನಪ್ಪರಿಂಜಯಂಗೆ ರಾಜ್ಯಾಭಿಷೇಕಂ ಮಾಡಿ ಧರಾಭಾರಮನೊಪ್ಪಿಸಿ ೨೬೯

ಧರೆಯಂ ನೋಯಿಸದಿರ್ ಜಿನೇಶ್ವರ ಪದಾಂಭೋಜಾತಮಂ ಭಾವಿಸು
ತ್ತಿರು ಜೈನಾಗಮದೋಜೆಯಿಂ ನಡೆ ಬುಧವ್ರಾತಕ್ಕೆ ಲೇಸಾಗು ಮಾ
ಣ್ದಿರದಿರ್ಧರ್ಮಮನುಗ್ರರಂ ಪಿಡಿಯದಿರ್ ಧೂರ್ತಾದಿ ದೋಷಂಗಳಂ
ಭರದಿಂ ಪೊರ್ದದಿರೊಲ್ದು ಮಾಡು ಮುನಿಸಂದೋಹಕ್ಕೆ ನೀನರ್ತಿಯಂ ೨೭೦

ಮಹಾರಾಜನನ್ನು ಲೋಕವೆಲ್ಲ ಒಂದೇ ಕೊರಳಿನಿಂದ ಕೊಂಡಾಡಲು ಸದ್ಗುಣವಂತನಾಗಿ ಹಲವುಕಾಲ ರಾಜ್ಯಭಾರಮಾಡಿ ಒಂದು ದಿನ ತನ್ನಲ್ಲಿಯೇ ಹೀಗೆ ಯೋಚಿಸಿದನು : ೨೬೬. "ಇಲ್ಲಿಯವರೆಗೆ ಬುದ್ಧಿಗೆಟ್ಟು ಸಂಸಾರದಲ್ಲಿ ಸಿಕ್ಕಿಕೊಂಡು ಅಪ್ರಯೋಜಕನಾಗಿದ್ದೇನೆ. ಸಂಸಾರವನ್ನು ಬಿಟ್ಟು ಇನ್ನು ನಾನು ಮೋಕ್ಷವನ್ನು ಸಾಧಿಸುವ ಉಪಾಯವನ್ನು ಯೋಚಿಸುತ್ತೇನೆ. ದೇಹವಾದರೆ ನಿಲ್ಲುವುದಿಲ್ಲ; ಸ್ಥಿರವಲ್ಲ. ಯೌವನವಾದರೋ ನೀರ ಮೇಲಿನಗುಳ್ಳೆ. ಬಹಳ ಪ್ರೀತಿಸುವ ಸ್ತ್ರೀಯರು, ಬಂಧುಗಳು, ಮಕ್ಕಳು, ತಮ್ಮಂದಿರು ಮೊದಲಾದವರು ಸಾಯುವಾಗ ಶರಣಾಗುವರೆ ?'' ೨೬೮. ಹೀಗೆ ಯೋಚಿಸಿ ಸಂಸಾರಕ್ಕೆ ಅಸಹ್ಯಪಟ್ಟು ವೈರಾಗ್ಯಹುಟ್ಟಲು ತನ್ನ ಹಿರಿಯ ಮಗನಾದ ಅರಿಂಜಯನಿಗೆ ರಾಜ್ಯಾಭಿಷೇಕಮಾಡಿ ರಾಜ್ಯಭಾರವನ್ನು ಒಪ್ಪಿಸಿದನು ೨೬೯. "ರಾಜ್ಯದ ಪ್ರಜೆಗಳನ್ನು ನೋಯಿಸಬೇಡ. ಜಿನೇಶ್ವರ ಪಾದವನ್ನು ಧ್ಯಾನಿಸುತ್ತಿರು. ಜೈನಾಗಮದ ಕ್ರಮದಲ್ಲಿ ನಡೆದುಕೊ, ಪಂಡಿತ ಸಮೂಹಕ್ಕೆ ಒಳ್ಳೆಯವನಾಗು. ಧರ್ಮವನ್ನು ಬಿಟ್ಟಿರಬೇಡ. ಉಗ್ರ (ಕ್ರೌರ್ಯ) ಮಾರ್ಗವನ್ನು ಹಿಡಿಯಬೇಡ. ಧೂರ್ತತನವೇ ಮೊದಲಾದ ದೋಷಗಳನ್ನು ಸೇರಬೇಡ, ಮುನಿಗಳಿಗೆ ನೀನು ಪ್ರೀತಿಯನ್ನುಂಟು

ಗದ್ಯ॥ ಎಂದಪ್ಪೈಸಿ ರಾಜ್ಯಮಂ ಕೊಟ್ಟವ ದಕ್ಕಂ ತೊಱೆವಂತೆ ತೊಱೆದು ವೀರಸ್ವಾಮಿಯ ಪಾದಮೂಲದೊಳ್ ಜಿನದೀಕ್ಷೆಯಂ ಕೈಕೊಂಡುಗ್ರೋಗ್ರ ತಪಶ್ಚರಣದಿಂದಷ್ಟವಿಧ ಕರ್ಮಂಗಳಂ ನಿರ್ಮೂಲಂ ಮಾಡಿ ನಿಶ್ರೇಯಸಶ್ರೀಯೊಳ್ ಕೂಡಿದಂ. ಶೀಲವತೀ ಮಹಾದೇವಿಯುಂ ಸುವ್ರತ ಗಂತಿಯರಲ್ಲಿ ದೀಕ್ಷೆಯಂ ಕೈಕೊಂಡು ಕರಮರಿದೆನಿಸುವ ತಪದೊಳ್ ನೆಗೞ್ದು ಸನ್ಯಸನ ವಿಧಿಯಿಂ ಮುಡಿಪಿ ಬ್ರಹ್ಮಕಲ್ಪದೊಳ್ ಪತ್ತು ಸಾಗರೋಪಮ ಕಾಲಮಾಯುಷ್ಯಕವೊಡೆಯ ಮಹರ್ಧಿಕ ದೇವನಾಗಿ ಪುಟ್ಟಿದಳ್ ೨೭೧

ಅದಱಿಂ ನಿರ್ವಿಚಿಕಿತ್ಸೆಯೆ
ವಿದಿತಂ ಕೈವಲ್ಯಸತಿಗೆ ತಿಲಕಂ ಸೌಖ್ಯಾ
ಭ್ಯುದಯಂ ಸಮಸ್ತ ದುಷ್ಕೃತ
ಮದೇಭ ಕೇಸರಿ ಗುಣಕ್ಕೆ ರತ್ನದ ಕಲಶಂ ೨೭೨

ಗದ್ಯ॥ ಎಂದು ನಿರ್ವಿಚಿಕಿತ್ಸೆಯೊಳಾದ ಫಲಮಂ ಗಣಧರ ಸ್ವಾಮಿಗಳ್ ಪೇೞ್ದುದುಂ ೨೭೩

ಧರಣೀಸ್ತುತ್ಯಂ ಗುಣಾಂಭೋನಿಧಿ ಜಿನಚರಣಾಂಭೋಜಮತ್ತಾಳಿ ಧಾತ್ರೀ
ಧರ ಧೈರ್ಯಂ ವಾಗ್ವಧೂವಲ್ಲಭನಮಳಯಶಂ ನಿರ್ವಕಳಂ ನಿಷ್ಕಷಾಯಂ
ವರಭವ್ಯಾಂಭೋಜ ಸೂರ್ಯಂ ನಿರುಪಮನೊಸೆದಂ ಕೇಳ್ದು ತ್ರೈವಿದ್ಯ ಚಕ್ರೇ
ಶ್ವರ ಪಾದಾಂಭೋಜ ಭೃಂಗಂ ಸುಕವಿಜನಮನಃಪದ್ಮಿನೀರಾಜಹಂಸಂ ೨೭೪

ಮಾಡು" ಎಂದು ಒಪ್ಪಿಸಿ ರಾಜ್ಯವನ್ನು ಕೊಳೆಯುವ ಮರದ ತುಂಡೊಂದನ್ನು ತೊರೆಯುವ ಹಾಗೆ ತೊರೆದು, ವೀರಸ್ವಾಮಿಗಳ ಪಾದಸನ್ನಿಧಿಯಲ್ಲಿ ಜಿನದೀಕ್ಷೆಯನ್ನು ಸ್ವೀಕರಿಸಿ ಉಗ್ರತರವಾದ ತಪಸ್ಸಿನಿಂದ ಅಷ್ಟವಿಧ ಕರ್ಮಗಳನ್ನು ಬೇರುಸಹಿತ ನಾಶ ಪಡಿಸಿ ನಿಶ್ರೇಯಸಶ್ರೀಯಲ್ಲಿ ಸೇರಿದನು. ಶೀಲವತೀ ಮಹಾದೇವಿಯೂ ಸುವ್ರತ ಗಂತಿಯರವರಲ್ಲಿ ದೀಕ್ಷೆಯನ್ನು ಸ್ವೀಕರಿಸಿ ಬಹಳ ಕಷ್ಟವೆನಿಸುವ ತಪಸ್ಸಿನಲ್ಲಿ ಪ್ರಸಿದ್ಧಳಾಗಿ ಸನ್ಯಾಸವಿಧಿಯಿಂದ ಸತ್ತು ಬ್ರಹ್ಮಕಲ್ಪದಲ್ಲಿ ಹತ್ತು ಸಾಗರೋಪಮ ಕಾಲದ ಆಯುಷ್ಯಕ್ಕೆ ಒಡೆಯನಾದ ಮಹರ್ಧಿಕದೇವನಾಗಿ ಹುಟ್ಟಿದಳು. ೨೭೧. ಆದರಿಂದ ನಿರ್ವಿಚಿಕಿತ್ಸೆಯೇ ಕೈವಲ್ಯವೆಂಬ ಸುದತಿಗೆ ತಿಲಕದಂತೆ. ಅದು ಸೌಖ್ಯವನ್ನು ಮೇಲ್ಮೆಯನ್ನೂ ಕೊಡುತ್ತದೆ. ಸಮಸ್ತ ಪಾಪಗಳೆಂಬ ಮದ್ದಾನೆಗಳಿಗೆ ಅದು ಸಿಂಹ! ಗುಣಗಳಿಗೆ ಅದು ರತ್ನಕಳಶ ೨೭೨. ಹೀಗೆ ನಿರ್ವಿಚಿಕಿತ್ಸೆಯಿಂದಾದ ಫಲವನ್ನು ಗಣಧರ ಸ್ವಾಮಿಗಳು ಹೇಳಿದರು ೨೭೩. ಲೋಕವೇ ಹೊಗಳಿದ ಗುಣಸಮುದ್ರನೂ, ಜಿನಪಾದ ಕಮಲಗಳಲ್ಲಿನ ಮತ್ತಭೃಂಗನೂ, ಪರ್ವತದಂಥ ಧೈರ್ಯವುಳ್ಳವನು, ವಾಗ್ವಧುವಿಗೆ ಪ್ರಿಯನು, ಶುದ್ಧ ಯಶಸ್ಸುಳ್ಳವನೂ ಎಲ್ಲ ಕಷಾಯಗಳನ್ನೂ ಕಳೆದುಕೊಂಡು ಶುದ್ಧ ನಾದವನು ಉತ್ತಮ ಭವ್ಯರೆಂಬ ಕಮಲಗಳಿಗೆ ಸೂರ್ಯ (ಭವ್ಯರಿಗೆ ಸಂತೋಷಮಾಡು ವವನೂ ನಿರುಪಮನೂ ತ್ರೈವಿದ್ಯಚಕ್ರೇಶ್ವರ ಪಾದಕಮಲ ಭೃಂಗನೂ, ಸುಕವಿಜನ ಮನಃ ಪದ್ಮಿನೀರಾಜಹಂಸನೂ ಆದ ಮಗಧರಾಜನು ಸಂತೋಷಪಟ್ಟನು.

ಗದ್ಯ॥ ಇದು ನಿಖಿಲದಿವಿಜಪರಿವೃಢಮಕುಟತಟಘಟಿತಮಣಿ ಕಿರಣವಿಲುಳಿತ ಚುಂಬನೀಯ ಪರಮ ಜಿನಚರಣಯುಗಳ ಸರಸಿರುಹ ಮತ್ತಮಧುಕರ ನಿರುಪಮ ಸಹಜ ಕವಿಜನ ಮನಃಪಯಃ ಪಯೋಧಿ ಹಿಮಕಿರನುತ ಭಾವಯುತ ದಿಗಂಬರದಾಸ ನೂತ್ನ ಕವಿತಾವಿಳಾಸ ಶ್ರೀಮನ್ನಯಸೇನ ದೇವವಿರಚಿತಮಪ್ಪ ಧರ್ಮಾಮೃತದೊಳ್ ದರ್ಶನ ತೃತೀಯಾಂಗ ವ್ಯಾವರ್ಣನಂ

ಚತುರ್ಥಾಶ್ವಾಸಂ

ಇದು ಸಮಸ್ತ ದೇವಮುಖಂಡರ ಕಿರೀಟ ಮಣಿ ಕಿರಣಗಳು ಬಿದ್ದು
ಚುಂಬನೀಯವಾದ ಪರಮಜಿನನ ಚರಣಗಳೆಂಬ ಕಮಲಗಳ
ಮದಿಸಿದದುಂಬಿ, ನಿರುಪಮ ಸಹಜಕವಿ ಜನರ ಮನಸ್ಸೆಂಬ
ಪಾಲ್ಗಡಲಿಗೆ ಚಂದ್ರನಾದಂಥ ಸ್ತುತ್ಯ ಭಾವಗಳಿಂದ ಕೂಡಿದ
ದಿಗಂಬರದಾಸ ನೂತ್ನ ಕವಿತಾವಿಳಾಸ ಶ್ರೀಮತ್
ನಯಸೇನ ದೇವನಿಂದ ವಿರಚಿತವಾದ
ಧರ್ಮಾಮೃತದಲ್ಲಿ
ನಾಲ್ಕನೆಯ ಆಶ್ವಾಸ

# ಪಂಚಮಾಶ್ವಾಸಂ

ಶ್ರೀಮನ್ನಿರ್ವಿಚಿಕಿತ್ಸೆಯ
ಮಾಮ್ಮೆಯೆ ಮೋಕ್ಷದಲ್ಲಿಗುಯ್ಯಲ್ ಸಾಲ್ಗುಂ
ದೇಮಾತೊ ಮನದೊಳೊಸೆದಂ
ಶ್ರೀ ಮಹಿತಂ ಸುಕವಿನಿಕರಪಿಕಮಾಕಂದಂ ೧

ಗದ್ಯ॥ ಅಂತು ನಿರ್ವಿಚಿಕಿತ್ಸೆಯೊಳಾದ ಫಲಮಂ ಲೇಸಾಗಿ ಅಱಿದು ಮತ್ತಂ ಗೌತಮಸ್ವಾಮಿಗಳ್ಗೆ ಮಗಧನಾಯಕಂ ಪೊಡೆಮಟ್ಟು ಮುಂದಣಮೂಢದೃಷ್ಟಿಯ ಕಥೆಯಂ ನಿಮ್ಮಡಿ ಬೆಸಸಲ್ವೇಟ್ಕು ಮೆನೆ ಗಣಧರಸ್ವಾಮಿಗಳ್ ನಿರ್ವಾಣ ಶ್ರೀವನಿತೆಯ ಕುಚದೊಳಲಂಕರಿಸಿರ್ದ ಹಾರಯಷ್ಟಿಯಿ ದೆನಿಸುವ ಅಮೂಢದೃಷ್ಟಿಯ ಕಥೆಯನೀತೆಂದು ಪೇಳ್ದರ್ : ಜಿನರಂತೆ ಸಿಂಹದಂತೆ ಗರುಡನಂತೆ ಕಾಮನಂತೆ ಭೋಜನಂತೆ ಕರ್ಮಭೂಮಿಯಂತೆ ಮನುಷ್ಯರಂತೆ ಸಂಯತನಂತೆ ಮಹಾವ್ರತಂ ಗಳಂತೆ ಪಾಂಡುಕುಲದಂತೆ ಜ್ಯೋತಿರ್ಲೋಕದಂತೆ ವ್ಯಾಕರಣದಂತೆ ಜೋಯಿಸದಂತೆ ಸಪ್ತಮ

ಶ್ರೀಮಶ್ನಿರ್ವಿಚಿಕಿತ್ಸೆಯ ಮಹಾಮಹಿಮೆಯೇ ಮೋಕ್ಷಕ್ಕೆ ಕರೆದೊಯ್ಯಲು ಸಾಕೆಂದು ಸುಕವಿನಿಕರಪಿಕಮಾತಂದನು ಮನಸ್ಸಿನಲ್ಲಿ ಬಗೆದನು ೧. ಹಾಗೆ ನಿರ್ವಿಚಿಕಿತ್ಸೆ ಯಲ್ಲಿ ಉಂಟಾದ ಫಲವನ್ನು ಚೆನ್ನಾಗಿ ತಿಳಿದುಕೊಂಡು ಮತ್ತೆ ಗೌತಮ ಸ್ವಾಮಿಗಳಿಗೆ ಮಗಧರಾಜನು ನಮಸ್ಕಾರ ಮಾಡಿ ಮುಂದಿನ ಅಮೂಢ ದೃಷ್ಟಿತ್ವದ ಕಥೆಯನ್ನು ಹೇಳಬೇಕೆಂದು ಕೇಳಿದನು. ಗಣಧರ ಸ್ವಾಮಿಗಳು ನಿರ್ವಾಣ ಲಕ್ಷ್ಮಿಯೆಂಬ ವನಿತೆಯ ಕುಚದ ಮೇಲಿನ ಅಲಂಕಾರವಾದ ಮುತ್ತಿನ ಹಾರವಿದೆಂದೆನಿಸುವ ಅಮೂಢದೃಷ್ಟಿಯ ಕಥೆಯನ್ನು ಹೇಳತೊಡಗಿದರು. ಜಿನರಂತೆ (ಅರ್ಹತ, ಸಿದ್ಧ, ಸಾಧು, ಆಚಾರ್ಯ, ಉಪಾಧ್ಯಾಯ, ಎಂಬ ಪಂಚಪರಮೇಷ್ಠಿಗಳು) ಸಿಂಹ (ಪಂಚಾಸ್ಯ)ದಂತೆ ಗರುಡ ನಂತೆ (?) ಕಾಮ (ಪಂಚಬಾಣ)ನ ಹಾಗೆ, ಭೋಜನಂತೆ (?) ಕರ್ಮ ಭೂಮಿ (ಪಂಚ ಭರತಕ್ಷೇತ್ರಗಳು)ಯ ಹಾಗೆ, ಮನುಷ್ಯ (ಪಂಚ ಜನ : ಪಂಚಭೂತಗಳಿಂದ ಜನಿಸಿ ದವನು)ನಂತೆ, ಸಂಯತ (ಪಂಚೇಂದ್ರಿಯಗಳನ್ನು ದಮನಮಾಡಿದನು) ನಂತೆ, ಮಹಾವ್ರತ (ಐದು ಅಣುವ್ರತಗಳೇ ಮಹಾವ್ರತಗಳು) ಗಳಂತೆ, ಪಾಂಡುಕುಲ (ಪಂಚ ಪಾಂಡವರು) ದಂತೆ, ಜ್ಯೋತಿರ್ಲೋಕ (ರಾಹುಕೇತುಗಳು ಮತ್ತು ಸೂರ್ಯಚಂದ್ರರನ್ನು ಉಳಿದ ಐದು ಗ್ರಹಗಳು. ಇವಕ್ಕೆ ವಕ್ರಗತಿಯುಂಟು) ದಂತೆ, ವ್ಯಾಕರಣ (ಜೈನೇಂದ್ರವ್ಯಾಕರಣಕ್ಕೆ ಐದು ಅಧ್ಯಾಯಗಳು)ದ ಹಾಗೆ, ಜೋಯಿಸ)ದ (ತಿಥಿ, ವಾರ, ನಕ್ಷತ್ರ, ಯೋಗ, ಕರಣ ಎಂಬ ಐದು ಅಂಗಗಳುಳ್ಳದ್ದು) ಹಾಗೆ, ಸಪ್ತಮ

ತೀರ್ಥಕರ ಧರಣೇಂದ್ರನಂತೆ ದರ್ಶನಮುಂ ನಿಶ್ಶಂಕೆಯುಂ ನಿಷ್ಕಾಂಕ್ಷೆಯುಂ ನಿರ್ವಿಚಿಕಿತ್ಸೆಯುಂ ಅಮೂಢ ದೃಷ್ಟಿತ್ವಮೆಂಬಯ್ದಱೊಳಂ ಕೂಡಿ ಶೋಭಿಸುವುದು. ೨

ಮೂಢತೆಯಂ ಬಿಟ್ಟುಪೆಱರ್
ಮಾಡುವ ಡೊಂಬಿಂಗೆ ಬೇಗಮೆಱಗದೆ ಮೂರ್ಖರ್
ಮಾಡುವುದಂ ಲೇಸೆನ್ನದೆ
ಕೂಡುವುದಾರಯ್ದಮೂಢ ದೃಷ್ಟಿಯೊಳಱಿವಂ ೩

ಗದ್ಯ॥ ಇನ್ನದಱ ಮಹಿಮೆಯೆಂತೆಂದೊಡೆ ೪

ಧರಣೀವನಿತೆಯು ತೊಟ್ಟಾ
ಭರಣಮೆನಿಪಾ ಮಡಂಬ ಖರ್ವಡದಿಂದಂ
ಪುರದಿಂ ಖೇಡಾದಿಗಳಿಂ
ಕರಮೆಸೆವುದು ಶೂರಸೇನಮೆಂಬಾ ವಿಷಯಂ

ಗದ್ಯ॥ ಆ ವಿಷಯದೊಳ್ ೫

ಅನುಪಮದೇವವಿಮಾನಮಿ
ದೆನಿಸುವ ಜಿನಭವನದೋಳಿಯಿಂ ಸುತ್ತಿದ ಪಂ
ದನವನದ ಶೋಭೆಯಿಂದಿಂ
ದ್ರನಪುರದಂತೊಪ್ಪುತಿರ್ಕುಮತಿಶಯದಿಂದಂ ೬

ಗದ್ಯ॥ ಉತ್ತರಮಧುರೆಯೆಂಬುದು ಪುರಮದನಾಳ್ವಂ ವರುಣನೆಂಬ ಮಹಾ ಮಂಡಳಿಕನಾತನ ಪಟ್ಟದರಸಿ ರೇವತಿಯೆಂಬಳ್ ೭

ತೀರ್ಥಕರ ಧರಣೇಂದ್ರನಂತೆ,(ಸುಪಾರ್ಶ್ವತೀರ್ಥಂಕರರಿಗೆ ಐದು ಹೆಡೆಗಳುಳ್ಳ ಧರಣೇಂದ್ರ) ದರ್ಶನ, ನಿಶ್ಶಂಕೆ, ನಿಷ್ಕಾಂಕ್ಷೆ, ನಿರ್ವಿಚಿಕಿತ್ಸೆ ಮತ್ತು ಅಮೂಢ ದೃಷ್ಟಿತ್ವವೆಂಬ ಐದರಿಂದಲೂ ಕೂಡಿ ಶೋಭಿಸುವುದು ೨. ಮೌಢ್ಯವನ್ನು ಬಿಟ್ಟು ಇತರರು ಮಾಡುವ ಡಂಭಾಚಾರಕ್ಕೆ ಒಲಿಯದೆ ಮೂರ್ಖರು ಮಾಡುವುದನ್ನು ಶ್ರೇಷ್ಠವೆಂದೆನ್ನದೆ ಅಮೂಢ ದೃಷ್ಟಿಯಲ್ಲಿ ಪರೀಕ್ಷಿಸಿ ಜ್ಞಾನವನ್ನು ಪಡೆಯಬೇಕು ೩. ಇನ್ನು ಅದರ ಮಹಿಮೆ ಹೇಗೆಂದರೆ ಭೂದೇವಿಯು ಧರಿಸಿದ ಆಭರಣವಿದೆಂದು ತೋರುವ ಮಡಂಬ ಖರ್ವಡ ಪಟ್ಟಣ ಖೇಡ ಮೊದಲಾದವುಗಳಿಂದ ಕೂಡಿ ಶೂರಸೇನವೆಂಬ ದೇಶವು ವಿಶೇಷವಾಗಿ ಶೋಭಿಸುತ್ತಿತ್ತು ೪. ಆ ದೇಶದಲ್ಲಿ ಇದು ಹೋಲಿಕೆಯೇ ಇಲ್ಲದ ದೇವವಿಮಾನವೆಂದು ಎನಿಸಿಕೊಳ್ಳುವಂಥ ಜಿನಭವನಗಳ ಸಾಲಿನಿಂದ, ಸುತ್ತಲೂ ಇದ್ದ ಉದ್ಯಾನವನಗಳ ಅಂದದಿಂದ ಇಂದ್ರನ ಪಟ್ಟಣದಂತೆ ಅತಿಶಯವಾಗಿ ರಾರಾಜಿಸುತ್ತಿದ್ದ ರಾಜಧಾನಿ ಉತ್ತರ ಮಧುರೆಯೆಂಬ ಪಟ್ಟಣ. ಅದನ್ನು ಆಳುವವನು ವರುಣನೆಂಬ ಮಹಾಮಂಡಳಿಕನು. ಆತನ ಪಟ್ಟದರಸಿ ರೇವತಿ (೫-೬-೭) ಜಿನಪಾದ ಭಕ್ತಿಯಲ್ಲಿ ಇಂದ್ರನ ಹೆಂಡತಿಗೆ ಸಮಾ

ಜಿನಪದ ಭಕ್ತಿಯೊಳಿಂದ್ರನ
ವನಿತೆಯ ಪಾಸಟಿ ಪತಿವ್ರತಾ ಗುಣದೊಳ್ ರಾ
ಮನಸತಿಯ ದೊರೆ ವಿಳಾಸದೊ
ಳನಂಗನಂಗನೆಗೆ ಬಗೆವೊಡೆನೆ ಧಾರಿಣಿಯೊಳ್ ೮

ಗದ್ಯ॥ ಎನಿಸಿ ನೆಗಟ್ತ್ರಿವಡೆದ ಸದ್ಗುಣಾಭರಣೆಯಂ ಅಪರಿಮಿತ ಜಿನಭಕ್ತಿಯುಮಾಗಿ ರೇವತೀ ಮಹಾದೇವಿ ಸುಖಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತುಮಿರೆ, ವಿಜಯಾರ್ಧಪರ್ವತದ ದಕ್ಷಿಣಶ್ರೇಢಿಯ ಮೇಘಕೂಟಮೆಂಬ ಪುರಮಂ ೯

ಧರಣೀಸಂಸ್ತುತ್ಯಂ ಖೇ
ಚರಪೂಜ್ಯಪದಂ ಜಿನೇಂದ್ರಪದಸರಸಿಜಷ
ಟ್ಚರಣಂ ದಯಾಳು ಸದ್ಗುಣ
ಭರಣಂ ಚಂದ್ರಾಭನೆಂಬನದನಾಳ್ವಂ ೧೦

ಗದ್ಯ॥ ಆತನ ಪಟ್ಟದರಸಿ ಸುಮತಿ ಮಹಾದೇವಿಯೆಂಬಳಾ ಯಿರ್ವರ್ಗಂ ಚಂದ್ರಶೇಖರನೆಂಬ ಮಗನಾಗೆ, ಆತನ ವಿನೋದವೆ ವಿನೋದಮಾಗೆ ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯು ತ್ತುಮಿರ್ದು ಚಂದ್ರಾಭ ಮಹೀರಾಜನೊಂದು ದಿವಸಂ ೧೧

ನೆರೆದ ವಿಯಚ್ಚರೇಶ್ವರರ ಖೇಚರಿಯರ್ಕಳ ಭಂಗಿ ಚೆಲ್ವುವೆ
ತ್ತಿರೆ ಬಳಸಿರ್ದ ನಾಯಕರ ವೀರರ ರೂಪು ಮಹೋನ್ನತಿಕ್ಕೆವೆ
ತ್ತಿರೆ ನಯದಿಂದಮಿರ್ದ ನುತ ನೃತ್ಯನಿಕಾಯದ ಗಾನದೊಳ್ಪುಬಿ
ತ್ತರದಿನಗುರ್ವಿನಿಂ ಸೊಗಸುತ್ತಿರೆ ಶೋಭಿಸುತಿರ್ಪ ಮಾಡದೊಳ್ ೧೨

ನಳು ; ಆ ರೇವತಿದೇವಿ ಸೌಂದರ್ಯದಲ್ಲಿ ಮನ್ಮಥನ ಅಂಗನೆ ರತಿದೇವಿಗೆ ಸಮಾನ ೮. ಹೀಗೆನ್ನಿಸಿಕೊಂಡು ಪ್ರಸಿದ್ಧಳಾದ,-ಸದ್ಗುಣಗಳೇ ಆಭರಣಗಳಾಗಿ ಉಳ್ಳವಳೂ ಅಪರಿಮಿತ ಜಿನಭಕ್ತಿಯುಳ್ಳವಳೂ ಆಗಿ ರೇವತೀ ಮಹಾದೇವಿ ಸುಖವಾಗಿ ಕಾಲಕ್ಷೇಪ ಮಾಡುತ್ತ ರಾಜ್ಯವಾಳುತ್ತಿರಲು ವಿಜಯಾರ್ಧ ಪರ್ವತದ ದಕ್ಷಿಣ ಶ್ರೇಣಿಯ ಮೇಘಕೂಟವೆಂಬ ಪಟ್ಟಣದಲ್ಲಿ ೯. ಲೋಕವೇ ಹೊಗಳುತ್ತಿದ್ದ ಖೇಚರರಿಗೆ ಪೂಜ್ಯವಾದ ಪಾದಗಳುಳ್ಳ ವನೂ ಜಿನೇಂದ್ರನ ಪಾದಕಮಲಗಳಲ್ಲಿ ದುಂಬಿಯಾಗಿರುವ (ಪಾದಭಕ್ತ) ವನೂ ದಯಾಳುವೂ ಸದ್ಗುಣಾಲಂಕೃತನೂ ಆದ ಚಂದ್ರಾಭನೆಂಬವನು ಆಳುತ್ತಿದ್ದನು ೧೦. ಆತನ ಪಟ್ಟದರಾಣಿ ಸುಮತಿಯೆಂಬ ಮಹಾದೇವಿ. ಆ ಇಬ್ಬರಿಗೂ ಚಂದ್ರಶೇಖರ ನೆಂಬ ಮಗ ಹುಟ್ಟಿದನು. ಆತನ ವಿನೋದವೇ ವಿನೋದವಾಗಲು ಸುಖ ಸಂಕಥಾ ಕಾಲಕ್ಷೇಪದಲ್ಲಿ ರಾಜ್ಯಭಾರಮಾಡುತ್ತಿದ್ದು ಚಂದ್ರಾಭ ಮಹಾರಾಜನು ಒಂದು ದಿನ ೧೧. ಸೇರಿದ್ದ ಖೇಚರೇಶ್ವರರೂ ಖೇಚರಿಯರೂ ಕೂಡಿ ಸುತ್ತ ಕುಳಿತಿದ್ದ ವೀರ ನಾಯಕರ ರೂಪವು ಮಹಾ ಅತಿಶಯವಾಗಿರಲು ನೃತ್ಯಗಾಯನಗಳು ಸ್ವಾರಸ್ಯವಾಗಿ ನಡೆಯುತ್ತಿರಲು ರಾಜಸಭೆಯಲ್ಲಿ ವಿಶೇಷವಾದ ಆನಂದ ವೈಭವ ಮೆರೆಯುತ್ತಿತ್ತು ೧೨.

ತೀರ್ಥಕರ ಧರಣೇಂದ್ರನಂತೆ ದರ್ಶನವುಂ ನಿಶ್ಶಂಕೆಯುಂ ನಿಷ್ಕಾಂಕ್ಷೆಯುಂ ನಿರ್ವಿಚಿಕಿತ್ಸೆಯುಂ ಅಮೂಢ ದೃಷ್ಟಿತ್ವಮೆಂಬಯ್ದಱೊಳಂ ಕೂಡಿ ಶೋಭಿಸುವುದು. ೨

ಮೂಢತೆಯಂ ಬಿಟ್ಟುಪೆಱರ್
ಮಾಡುವ ಡೊಂಬಿಂಗೆ ಬೇಗಮೆಱಗದೆ ಮೂರ್ಖರ್
ಮಾಡುವುದಂ ಲೇಸೆನ್ನದೆ
ಕೊಡುವುದಾರಯ್ದುಮೂಢ ದೃಷ್ಟಿಯೊಳಱಿವಂ ೩

ಗದ್ಯ॥ ಇನ್ನದಱ ಮಹಿಮೆಯೆಂತೆಂದೊಡೆ ೪

ಧರಣೀವನಿತೆಯು ತೊಟ್ಟಾ
ಭರಣಮಿದೆನಿಪಾ ಮಡಂಬ ಖರ್ವಡದಿಂದಂ
ಪುರದಿಂ ಖೇಡಾದಿಗಳಿಂ
ಕರಮೆಸೆವುದು ಶೂರಸೇನಮೆಂಬಾ ವಿಷಯಂ

ಗದ್ಯ॥ ಆ ವಿಷಯದೊಳ್ ೫

ಅನುಪಮದೇವವಿಮಾನವಿ
ದೆನಿಸುವ ಜಿನಭವನದೋಳಿಯಿಂ ಸುತ್ತಿದ ವಂ
ದನವನದ ಶೋಭೆಯಿಂದಿಂ
ದ್ರನಪುರದಂತೊಪ್ಪುತಿರ್ಕುಮತಿಶಯದಿಂದಂ ೬

ಗದ್ಯ॥ ಉತ್ತರಮಧುರೆಯೆಂಬುದು ಪುರಮದನಾಳ್ವಂ ವರುಣನೆಂಬ ಮಹಾ ಮಂಡಳಿಕನಾತನ ಪಟ್ಟದರಸಿ ರೇವತಿಯೆಂಬಳ್ ೭

ತೀರ್ಥಕರ ಧರಣೇಂದ್ರನಂತೆ,(ಸುಪಾರ್ಶ್ವತೀರ್ಥಂಕರರಿಗೆ ಐದು ಹೆಡೆಗಳುಳ್ಳ ಧರಣೇಂದ್ರ) ದರ್ಶನ, ನಿಶ್ಶಂಕೆ, ನಿಷ್ಕಾಂಕ್ಷೆ, ನಿರ್ವಿಚಿಕಿತ್ಸೆ ಮತ್ತು ಅಮೂಢ ದೃಷ್ಟಿತ್ವವೆಂಬ ಐದರಿಂದಲೂ ಕೂಡಿ ಶೋಭಿಸುವುದು ೨. ಮೌಢ್ಯವನ್ನು ಬಿಟ್ಟು ಇತರರು ಮಾಡುವ ಡಂಭಾಚಾರಕ್ಕೆ ಒಲಿಯದೆ ಮೂರ್ಖರು ಮಾಡುವುದನ್ನು ಶ್ರೇಷ್ಠವೆಂದೆನ್ನದೆ ಅಮೂಢ ದೃಷ್ಟಿಯಲ್ಲಿ ಪರೀಕ್ಷಿಸಿ ಜ್ಞಾನವನ್ನು ಪಡೆಯಬೇಕು ೩. ಇನ್ನು ಅದರ ಮಹಿಮೆ ಹೇಗೆಂದರೆ ಭೂದೇವಿಯು ಧರಿಸಿದ ಆಭರಣವಿದೆಂದು ತೋರುವ ಮಡಂಬ ಖರ್ವಡ ಪಟ್ಟಣ ಖೇಡ ಮೊದಲಾದವುಗಳಿಂದ ಕೂಡಿ ಶೂರಸೇನವೆಂಬ ದೇಶವು ವಿಶೇಷವಾಗಿ ಶೋಭಿಸುತ್ತಿತ್ತು ೪. ಆ ದೇಶದಲ್ಲಿ ಇದು ಹೋಲಿಕೆಯೇ ಇಲ್ಲದ ದೇವವಿಮಾನವೆಂದು ಎನಿಸಿಕೊಳ್ಳುವಂಥ ಜಿನಭವನಗಳ ಸಾಲಿನಿಂದ, ಸುತ್ತಲೂ ಇದ್ದ ಉದ್ಯಾನವನಗಳ ಅಂದದಿಂದ ಇಂದ್ರನ ಪಟ್ಟಣದಂತೆ ಅತಿಶಯವಾಗಿ ರಾರಾಜಿಸುತ್ತಿದ್ದ ರಾಜಧಾನಿ ಉತ್ತರ ಮಧುರೆಯೆಂಬ ಪಟ್ಟಣ. ಅದನ್ನು ಆಳುವವನು ವರುಣನೆಂಬ ಮಹಾಮಂಡಳಿಕನು. ಆತನ ಪಟ್ಟದರಸಿ ರೇವತಿ (೫–೬.೭) ಜಿನಪಾದ ಭಕ್ತಿಯಲ್ಲಿ ಇಂದ್ರನ ಹೆಂಡತಿಗೆ ಸಮಾ

ಜಿನಪದ ಭಕ್ತಿಯೊಳಿಂದ್ರನ
ವನಿತೆಯ ಪಾಸಟಿ ಪತಿವ್ರತಾ ಗುಣದೊಳ್ ರಾ
ಮನಸತಿಯ ದೊರೆ ವಿಳಾಸದೊ
ಳನಂಗನಂಗನೆಗೆ ಬಗೆವೊಡೆನೆ ಧಾರಿಣಿಯೊಳ್ ೮

ಗದ್ಯ॥ ಎನಿಸಿ ನೆಗಟ್ತೆವಡೆದ ಸದ್ಗುಣಾಭರಣೆಯುಂ ಅಪರಿಮಿತ ಜಿನಭಕ್ತೆಯುಮಾಗಿ ರೇವತೀ ಮಹಾದೇವಿ ಸುಖಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತುಮಿರೆ, ವಿಜಯಾರ್ಧಪರ್ವತದ ದಕ್ಷಿಣಶ್ರೇಢಿಯ ಮೇಘಕೂಟಮೆಂಬ ಪುರಮಂ ೯

ಧರಣೀಸಂಸ್ತುತ್ಯಂ ಖೇ
ಚರಪೂಜ್ಯಪದಂ ಜಿನೇಂದ್ರಪದಸರಸಿಜಷ
ಟ್ಚರಣಂ ದಯಾಳು ಸದ್ಗುಣ
ಭರಣಂ ಚಂದ್ರಾಭನೆಂಬನದನಾಳ್ವಂ ೧೦

ಗದ್ಯ॥ ಆತನ ಪಟ್ಟದರಸಿ ಸುಮತಿ ಮಹಾದೇವಿಯೆಂಬಳಾ ಯಿರ್ವರ್ಗಂ ಚಂದ್ರಶೇಖರನೆಂಬ ಮಗನಾಗೆ, ಆತನ ವಿನೋದಮೆ ವಿನೋದಮಾಗೆ ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತುಮಿರ್ದು ಚಂದ್ರಾಭ ಮಹೀರಾಜನೊಂದು ದಿವಸಂ ೧೧

ನೆರೆದ ವಿಯಚ್ಚರೇಶ್ವರರ ಖೇಚರಿಯರ್ಕಳ ಭಂಗಿ ಚೆಲ್ವುವೆ
ತ್ತಿರೆ ಬಳಸಿರ್ದ ನಾಯಕರ ವೀರರ ರೂಪು ಮಹೋನ್ನತಿಕ್ಕೆವೆ
ತ್ತಿರೆ ನಯದಿಂದಮಿರ್ದ ನುತ ನೃತ್ಯನಿಕಾಯದ ಗಾನದೊಳ್ಪುಬಿ
ತ್ತರದಿನಗುರ್ವಿನಿಂ ಸೊಗಸುತ್ತಿರೆ ಶೋಭಿಸುತಿರ್ದ ಮಾಡದೊಳ್ ೧೨

ನಳು ; ಆ ರೇವತಿದೇವಿ ಸೌಂದರ್ಯದಲ್ಲಿ ಮನ್ಮಥನ ಅಂಗನೆ ರತಿದೇವಿಗೆ ಸಮಾನ ೮. ಹೀಗೆನ್ನಿಸಿಕೊಂಡು ಪ್ರಸಿದ್ಧಳಾದ,-ಸದ್ಗುಣಗಳೇ ಆಭರಣಗಳಾಗಿ ಉಳ್ಳವಳೂ ಅಪರಿಮಿತ ಜಿನಭಕ್ತಿಯುಳ್ಳವಳೂ ಆಗಿ ರೇವತೀ ಮಹಾದೇವಿ ಸುಖವಾಗಿ ಕಾಲಕ್ಷೇಪ ಮಾಡುತ್ತ ರಾಜ್ಯವಾಳುತ್ತಿರಲು ವಿಜಯಾರ್ಧ ಪರ್ವತದ ದಕ್ಷಿಣ ಶ್ರೇಣಿಯ ಮೇಘಕೂಟವೆಂಬ ಪಟ್ಟಣದಲ್ಲಿ ೯. ಲೋಕವೇ ಹೊಗಳುತ್ತಿದ್ದ ಖೇಚರರಿಗೆ ಪೂಜ್ಯವಾದ ಪಾದಗಳುಳ್ಳವನೂ ಜಿನೇಂದ್ರನ ಪಾದಕಮಲಗಳಲ್ಲಿ ದುಂಬಿಯಾಗಿರುವ (ಪಾದಭಕ್ತ) ವನೂ ದಯಾಳುವೂ ಸದ್ಗುಣಾಲಂಕೃತನೂ ಆದ ಚಂದ್ರಾಭನೆಂಬವನು ಆಳುತ್ತಿದ್ದನು ೧೦. ಆತನ ಪಟ್ಟದರಾಣಿ ಸುಮತಿಯೆಂಬ ಮಹಾದೇವಿ. ಆ ಇಬ್ಬರಿಗೂ ಚಂದ್ರಶೇಖರನೆಂಬ ಮಗ ಹುಟ್ಟಿದನು. ಆತನ ವಿನೋದವೇ ವಿನೋದವಾಗಲು ಸುಖ ಸಂಕಥಾ ಕಾಲಕ್ಷೇಪದಲ್ಲಿ ರಾಜ್ಯಭಾರಮಾಡುತ್ತಿದ್ದು ಚಂದ್ರಾಭ ಮಹಾರಾಜನು ಒಂದು ದಿನ ೧೧. ಸೇರಿದ್ದ ಖೇಚರೇಶ್ವರರೂ ಖೇಚರಿಯರೂ ಕೂಡಿ ಸುತ್ತ ಕುಳಿತಿದ್ದ ವೀರ ನಾಯಕರ ರೂಪವು ಮಹಾ ಅತಿಶಯವಾಗಿರಲು ನೃತ್ಯಗಾಯನಗಳು ಸ್ವಾರಸ್ಯವಾಗಿ ನಡೆಯುತ್ತಿರಲು ರಾಜಸಭೆಯಲ್ಲಿ ವಿಶೇಷವಾದ ಆನಂದ ವೈಭವ ಮೆರೆಯುತ್ತಿತ್ತು ೧೨.

ಗದ್ಯ॥ ಪಿರಿದನುರಾಗದಿಂ ಖೇಚರರಾಜಂ ದೆಸೆಗಳಂ ಮಹೋತ್ಸವದಿಂದಂಬರಚರರಂ ನೋಡುತ್ತುಂ ನಿರುತಂ ಸಂಗೀತವಿದ್ಯೆಯುಮಂ ಕೇಳುತ್ತುಂ ಇರ್ದು ತನ್ನೋಲಗದ ಚೆಲ್ವಿಂಗೆ ತನ್ನ ಮೂವೆಡ್ಡಮಾಗಿ ರಾಗಿಸಿ ನೋಡಿ ಖಚರರಾಜನೆನ್ನಂ ಬಿಟ್ಟಾರೆಂದು ಮನದೊಳ್ ಪೆರ್ಚಿ ತೊಟ್ಟನೆ ಯಾಕಾಶಮಂ ನೋಡುವುದುಂ ೧೩

ಕರಿಘಟೆಯೊಡ್ಡಿನಂತೆ ಮೃಗಸಂಕುಲದಂತೆ ಘಟಂಗಳಂತೆ ಕೇ
ಸರಿಗಳ ಪಿಂಡಿನಂತೆ ವನದಂತೆ ನವಿಲ್ಗಳ ತಂಡದಂತೆ ಕೇ
ಸುರಿಗಳ ಬೆಂಬಲಂತೆ ಶರಭಾವಳಿಯಂತೆ ಮನುಷ್ಯರಂತೆ ವಾ
ನರಚಯದಂತೆ ಗೋನಿವಹದಂತೆಸೆದೊಪ್ಪುವ ಮಾಡದಂದಮಂ ೧೪

ಗದ್ಯ॥ ನಾನಾ ಪ್ರಕಾರದ ಮುಗಿಲೊಡ್ಡಂ ಚಂದ್ರಾಭಮಹಾರಾಜಂ ಕಂಡು ಮಹಾ ವಿಸ್ಮಯಂ ಬಟ್ಟು ಕಣ್ಣೆವೆಯಿಕ್ಕದೆ ನೋಡುತ್ತುಮಿರ್ಪನ್ನೆಗಂ ೧೫

ಸ್ಥಿರಮಲ್ಲದು ಕೇಳಂಬರ
ಚರಪತಿ ಸಂಸಾರ ಸೌಖ್ಯಮೀಯಂದದಿನೆಂ
ದರಸಂಗೆ ಪೇಳ್ವತೆಱದಿಂ
ಕರಗಿದವಾಕ್ಷಣವೆ ಮೇಘದೊಡ್ಡುಗಳನಿತುಂ ೧೬

ಗದ್ಯ॥ ಅಂತು ಮುಗಿಲೊಡ್ಡು ನೋಡೆ ನೋಡೆ ಕರಗುವುದುಮಂ ವಿಯಚ್ಚರ ರಾಜಂ ಕಂಡು ಮನದೊಳ್ ವೈರಾಗ್ಯಂ ಪುಟ್ಟಿ ತನ್ನೊಳಿಂತೆಂದಂ ೧೭

ಖೇಚರರಾಜನು ಬಹಳ ಪ್ರೇಮದಿಂದ ಆಕಾಶಸಂಚಾರಿಗಳನ್ನು ನೋಡುತ್ತ ಸಂಗೀತ ವಿದ್ಯೆಯನ್ನು ಕೇಳುತ್ತ ಇದ್ದು ತನ್ನ ರಾಜಸಭೆಯ ಸೌಂದರ್ಯಕ್ಕೆ ತಾನು ಮುಮ್ಮಡಿ ಅಂದವಾಗಿ ಸಂತೋಷಿಸಿ ನೋಡಿ ತನ್ನನ್ನು ಬಿಟ್ಟರೆ ಇನ್ನು ಬೇರೆ ಖೇಚರ ರಾಜನು ಇನ್ನು ಯಾರು ? ಎಂದು ಮನಸ್ಸಿನಲ್ಲಿ ಉಬ್ಬಿ ತಟ್ಟನೆ ಆಕಾಶವನ್ನು ನೋಡಿದನು. ೧೩. ಆಗ ಆಕಾಶದಲ್ಲಿ ಮೋಡಗಳ ಆಟ ನಡೆದಿತ್ತು. ಆನೆಗಳ ಹಿಂಡಿನ ಹಾಗೆ, ಜಿಂಕೆ ಗಳ ಗುಂಪಿನ ಹಾಗೆ, ಕೊಡಗಳಂತೆ, ಸಿಂಹಗಳ ಹಿಂಡಿನಂತೆ, ಅರಣ್ಯದಂತೆ, ನವಿಲುಗಳ ಗುಂಪಿನಂತೆ, ಕೆಂಪನೆಯ ಜ್ವಾಲೆಗಳ ಸಮೂಹದಂತೆ ಶರಭಗಳ ಗುಂಪಿನ ಹಾಗೆ, ಮನುಷ್ಯ ರಂತೆ, ಕೋತಿಗಳ ಸಮೂಹದಂತೆ, ಹಸುಗಳ ಮಂದೆಯಂತೆ, ಅಂದವಾದ ಉಪ್ಪರಿಗೆ ಗಳಂತೆ, ನಾನಾ ರೀತಿಯ ಮೋಡಗಳ ರಾಶಿಯನ್ನು ಚಂದ್ರಾಭ ಮಹಾರಾಜನು ನೋಡಿ ಬಹಳ ಆಶ್ಚರ್ಯಪಟ್ಟು ಕಣ್ಣುರೆಪ್ಪೆ ಹೊಡೆಯದೆ ನೋಡುತ್ತಿದ್ದು ಬಿಟ್ಟನು. ೧೪–೧೫ "ಸಂಸಾರ ಸೌಖ್ಯ ಶಾಶ್ವತವಲ್ಲ. ಅದೂ ಈ ರೀತಿಯೇ" ಎಂದು ಅರಸನಿಗೆ ಹೇಳುವ ರೀತಿಯಲ್ಲಿ ಆ ಮೋಡಗಳ ರಾಶಿಗಳು ಎಲ್ಲ ಕರಗಿ ಹೋದವು ೧೬. ಹಾಗೆ ಮೋಡಗಳ ಗುಂಪು ನೋಡನೋಡುತ್ತಿರುವಂತೆಯೇ ಕರಗಲಾಗಿ ಖೇಚರರಾಜ ಕಂಡು ಮನಸ್ಸಿನಲ್ಲಿ ವೈರಾಗ್ಯ ಹುಟ್ಟಿ ತನ್ನಲ್ಲಿಯೇ ಹೀಗೆ ಭಾವಿಸಿಕೊಂಡನು ೧೭. ಐಶ್ವರ್ಯ ಕಾಮನ ಬಿಲ್ಲಿ

ಸಿರಿ ಸುರಚಾಪದಂತೆ ಪೊಸಜವ್ವನಮಿದ್ದಿಲ ಬೂದಿಯಂತೆ ಪೆಂ
ಡಿರ ಸುಖಮುಣ್ಮಿಪೊಣ್ಣುವ ಬಯಲ್ದೊಱೆಯಂತೆ ವಿಭೂತಿ ಮಂಜಿನಂ
ತರಸಿನೊಳಾದ ಪೆಂಪಿನ ಮಹೋನ್ನತಿಗಳ್ ಮಳಲೇರಿಯಂತೆ ಮೆಯ್
ದರಿಯ ಮಹೀಜದಂತೆ ಕಿಡಲಲ್ಲದೆ ತಾಂ ಸ್ಥಿರಮಾಗಲಾರ್ಕುಮೇ ೧೮

ಆರಲೆಯ ಕಿಚ್ಚಿನಂತೆ ಧನಮಾಯು ವಸಂತದ ಶೋಭೆಯಂತೆ ಪೆ
ರ್ದೆರೆಗಳ ಬಂಬಲಂತೆ ಸೊಬಗೊಡ್ಡಿದ ಮೇಘಸಮೂಹದಂತೆ ನಂ
ಟರ ಕಡುಗೂರ್ಪೆ ಪಣ್ತ ಮರನಂತೆ ವಿಳಾಸದಗುರ್ತಮೈಮೆಯು
ಬ್ಬರಮದು ನೀರ ಬೊಬ್ಬುಳಿಕೆಯಂತೆ ನಿರಂತರಮಲ್ಲದೆಲ್ಲಿಯುಂ ೧೯

ಗದ್ಯ ॥ ಎಂದು ಸಂಸಾರದನಿತ್ಯತೆಯುಂ ಭಾವಿಸಿ ಭೋಗೋಪಭೋಗಂಗಳ್ಗೆ ಪೊಲ್ಲದುಗೆ
ಯ್ದೊಲ್ಲದ ಪೆಂಡತಿಗೆ ಪೇಸಿದಂತೆ ಪೇಸಿ ೨೦

ಪರಮಾರ್ಥಂ ಭಾವಿಸುವೊಡೆ
ಕರಮಂತಾ ಸ್ಪರ್ಶನೇಂದ್ರಿಯೋನ್ನತಿಯಿಂದಂ
ಕರಿಪತಿಗಳ್ ಮೊದಲಾಗಿರೆ
ನರರ್ಗಂ ಬಸಮಾಗಿ ಕಟ್ಟುವಟ್ಟುವು ಜಗದೊಳ್ ೨೧

ನಂತೆ ಹೊಸ ಯೌವನ ಇದ್ದಿಲಿನ ಬೂದಿಯಂತೆ, ಹೆಂಡಿರ ಸುಖವು ಉಕ್ಕಿ ಹರಿಯುವ ಬಯಲು ತೊರೆಯ ಹಾಗೆ, ವೈಭವ ಮಂಜಿನ ಹಾಗೆ. ರಾಜತ್ವದಲ್ಲಿ ಆದ ಅತಿಶಯದ ಮಹಾ ವೈಭವ ಮರಳಲ್ಲಿ ಕಟ್ಟಿದ ಕೆರೆಗಳಂತೆ, ಮೈ (ದೇಹ) ಹಳ್ಳದೊಳಗಿನ ಮರದಂತೆ. ಇವು ನಾಶಹೊಂದುವುವೇ ಹೊರತು ಸ್ಥಿರವಾಗಬಲ್ಲುವೆ ? ೧೭-೧೮. ಧನ ಹತ್ತಿಗೆ ಹತ್ತಿಕೊಂಡ ಬೆಂಕಿಯ ಹಾಗೆ. ಆಯುಸ್ಸು ವಸಂತಕಾಲದ ಅಂದದ ಹಾಗೆ. ದೊಡ್ಡ ಅಲೆಗಳ ಹಾಗೆ, ಸೌಂದರ್ಯ, ಬಂಧುಗಳ ಹೆಚ್ಚಿನ ಪ್ರೀತಿ, ಒಟ್ಟುಗೂಡಿದ ಮೇಘಗಳ ಗುಂಪಿನಂತೆ. ವಿಲಾಸದ ಆಧಿಕ್ಯವು ಹಣ್ಣುಬಿಟ್ಟ ಮರದ ಹಾಗೆ, ಮಹಿಮೆಯ ಉಬ್ಬರವು ನೀರಗುಳ್ಳೆಗಳಂತೆ, ಎಂದೂ ಸ್ಥಿರವಲ್ಲ ೧೯. ಎಂದು ಈ ಸಂಸಾರವು ಅಶಾಶ್ವತವೆಂಬುದನ್ನು ಭಾವಿಸುತ್ತ ಭೋಗಪರಂಪರೆಗೆ, ಕೆಡುಕುಮಾಡಿ ಒಲ್ಲದ ಹೆಂಡತಿಗೆ ಹೇಸುವಂತೆ ಅಸಹ್ಯಪಟ್ಟು ೨೦. ಪರಮಾರ್ಥವನ್ನು ಕುರಿತು ಚಿಂತಿಸಿದರೆ ಅಷ್ಟೇ. ಆ ಸ್ಪರ್ಶೇಂದ್ರಿಯದ ಔನ್ನತ್ಯದ ದೆಸೆಯಿಂದ ಗಜಪತಿಗಳು (ಸಲಗಗಳು) ಕೂಡ ಮನುಷ್ಯರಿಗೆ ವಶವಾಗಿ ಕಟ್ಟುಬಿದ್ದುವು ೨೧. ಹೆಚ್ಚಾದ ಕಣ್ಣಿನ ಪ್ರೀತಿಯಿಂದ ತಿಳಿಯದೆ ಬುದ್ಧಿ ಕಳೆದುಕೊಂಡು

ನೆಱೆ ನಯನೇಂದ್ರಿಯದೆಱಕದಿ
ನಱಿಯದೆ ಮತಿಗೆಟ್ಟು ಬಿರ್ದು ಸಾವುವು ಸೊಡರೊಳ್
ಮಱುಗಿ ಪತಂಗಾವಳಿಯೇನೆ
ಕುಱಿಯಲ್ಲನೆ ಕಣ್ಣಸೋಲಮಂ ಸಲ್ಲಿಸುವಂ ೨೨

ಮುಂದಣ ಮೃಗವಂ ಕಣ್ದೋ
ರ್ಕೆಂದು ಕೊರಲ್ನೋಡ ಗೀತರವದಿಂ ತಾವುಂ
ಪೊಂದುವುವು ಸಾರ್ದ ಮೃಗಚಯ
ಮೆಂದೊಡೆ ಶ್ರೋತ್ರದ ಸುಖಕ್ಕೆ ಪದೆವನೆ ಗಾಂಪಂ ೨೩

ಮರನಂ ಭೇದಿಸುವುವು ಷ
ಟ್ಚರಣಂ ಗಂಧಕ್ಕೆ ಸೋಲ್ತು ತಾವರೆಯೆಸಳಂ
ಭರದಿಂ ಭೇದಿಸಲಾಱದೆ
ಪಿರಿದಪ್ಪತಿಮೋಹದಿಂದಮಳಿವುವು ಧರೆಯೊಳ್ ೨೪

ರಸನೇಂದ್ರಿಯ ವಶದಿಂ ಸ್ವೈ
ರಿಸಲಾಱದೆ ಗಾಳದೆರೆಗೆ ಪಾಯ್ದಳಿವುವು ಮೀ
ನಸಹಾಯಮೆಂದೊಡಕ್ಕಟ
ವಸುಮತಿಯೊಳ್ ಜಿಹ್ವೆ ಕಿಡಿಸದಾರಂ ಪದಪಿಂ ೨೫

ಪತಂಗಗಳು ದೀಪದಲ್ಲಿ ಬಿದ್ದು ಸಾಯುವ ಹಾಗೆ ಕಣ್ಣಿನ ಆಕರ್ಷಣೆಗೆ ಒಳಗಾಗುವವನು ಕುರಿಯಲ್ಲವೆ ? ೨೨. ಮುಂದಿನ ಮೃಗವನ್ನು ಕಣ್ಣು ತೋರಿಸಲೆಂದು ಕೊರಳನ್ನೆತ್ತಿ, ಸಂಗೀತ ಶಬ್ದದಿಂದ ಆಕರ್ಷಿತವಾಗಿ ಮುಂದೆ ಹೋಗಿ ಮೃಗಗಳು ಸಾಯುವುವು, ಎಂಬಾಗ ಕಿವಿಯ ಸುಖಕ್ಕೆ ಆಸೆಪಡುವವನೇ ದಡ್ಡ ೨೩. ದುಂಬಿಗಳು ಮರವನ್ನು ಭೇದಿಸುವುವು. ಆದರೆ ಸುವಾಸನೆಗೆ ಸೋತು ತಾವರೆಯ ಎಸಳನ್ನು ರಭಸದಿಂದ ಭೇದಿಸಲಾರದೆ ಅತಿಯಾದ ಮೋಹಕ್ಕೆ ಒಳಗಾಗಿ ಸಾಯುವುವು ೨೪. ನಾಲಗೆಯ ವಶದಿಂದ ಸ್ವೈರಿಸಲಾರದೆ ಮೀನುಗಳು ಗಾಳಕ್ಕೆ ಸಿಕ್ಕಿರುವ ಹುಳುಗಳಿಗಾಗಿ ನುಗ್ಗಿ ಅಸಹಾಯವಾಗಿ ಸಾಯುವುವು. ಅಯ್ಯೋ ! ಈ ಭೂಮಿಯಮೇಲೆ ನಾಲಗೆ ತನ್ನ ಆಸೆಯಿಂದ ಯಾರನ್ನು ತಾನೆ ಕೆಡಿಸಲಾರದು ? (ನಾಲಗೆಯ ಚಪಲಕ್ಕೆ ಬಿದ್ದು ಜೀವಿಗಳು ಕೆಡುವುವೆಂದು ಭಾವ) ೨೫.

ಒಂದೊಂದು ಜೀವಿಯಿಂದ್ರಿಯ
ವೊಂದೊಂದಱಿನಳಿವುದೆಂದೊಡೈದಿಂದ್ರಿಯಮುಂ
ಸಂದಿಸಿ ಕೂಡಿರ್ದ ನರಂ
ಸಂದೆಯಮೇಂ ಕಿಡುವುದಱಿವುದವನೀತಳದೊಳ್ ೨೬

ಗದ್ಯ॥ ಎಂದಿಂದ್ರಿಯಂಗಳ ದೆಸೆಗೆ ನಾಡೆಯುಂ ಬಯಂಗೊಂಡು ೨೭

ಸಿಂಬುಳ ನಾಳಿ ಮೂಗುಗುಟಿ ಪೆರ್ದೊಱಿಬಾಯ್ ಮಲದಾಗರಂ ಬಸಿರ್
ತಾಂ ಬಗೆವಂದ ಕಿಳ್ಳ ಮಡು ಕಣ್ಕಿವಿ ಕೊಗ್ಗಿಯ ಪುತ್ತು ಚರ್ಮದಿಂ
ದಂ ಬಳಸಿರ್ದ ಕೋಂಟೆ ತನು ಕೀವಿನ ನೆತ್ತರ ತಿಪ್ಪೆ ಬೀವಿನಿಂ
ದಂ ಬಿಗಿದಿರ್ದ ಪೆರ್ನೆಣದ ಖಂಡದ ಮಾಂಸದ ತಾಣಮಲ್ಲವೇ ೨೮

ಗದ್ಯ॥ ಎಂದು ಶರೀರದೊಳಾದ ಅಶುಚಿತ್ವಮಂ ಭಾವಿಸಿ ಸಂಸಾರಕ್ಕೆ ಪಿರಿದುಂ ನಿರ್ವೇಗಮಾಗೆ ೨೯

ಪಿರಿದುಂ ಕೋಪದಿನಟ್ಟಿ ತಿಂಬ ಪುಲಿಯುಂ ಬಾರ್ಬಟ್ಟೆಯೊಳ್ಕಂಡವೋಲ್
ಭರದಿಂದಟ್ಟಿ ತಗುಳ್ದು ಕೊಲ್ವ ಕರಿಯುಂ ಮಾರ್ವಟ್ಟೆಯೊಳ್ಕಂಡವೋಲ್
ಕರಮುಂತೊರ್ವೆಯೆ ಪಾಯ್ವ ಸೀರ್ಕರಡಿಯುಂ ತದ್ಗೇಹದೊಳ್ಕಂಡವೋಲ್
ಸಿರಿಗಂ ಮೈವೆಗಮುನ್ನತಿಕ್ಕೆಗಮಣಂ ಭೋಗಕ್ಕಮೇನಾಸೆಯೋ ೩೦

ಒಂದೊಂದು ಪ್ರಾಣಿಯು ಒಂದೇ ಇಂದ್ರಿಯದಿಂದಲೇ ಸಾಯುವುದೆಂದಾಗ ಐದು ಇಂದ್ರಿಯಗಳೂ ಸೇರಿಕೊಂಡಿರುವ ಮನುಷ್ಯ ಕೆಡುವುದು, ಸಾಯುವುದು, ಸಂದೇಹವೆ ? ೨೬. ಎಂಥು ಇಂದ್ರಿಯಗಳ ವಿಷಯಕ್ಕೆ ಬಹಳ ಭಯಪಟ್ಟು ೨೭. ಮೂಗು ಸಿಂಬಳದ ನಾಳ, ಬಾಯಿ ಉಗುಳಿನ ದೊಡ್ಡ ತೊರೆ, ಹೊಟ್ಟೆ ಮಲದ ಆಶ್ರಯ, ಯೋಚಿಸಿದರೆ, ಕಣ್ಣು ಕಿಳ್ಳದ ಮಡು(?)ಕಿವಿ ಕೊಗ್ಗಿಯ ಹುತ್ತ, ದೇಹ ಚರ್ಮದಿಂದ ಸುತ್ತಿರುವ ಕೋಟೆ ದೇಹ ಕೀವು ನೆತ್ತರುಗಳ ತಿಪ್ಪೆ ; ನರಗಳಿಂದ ಬಿಗಿದಿರುವ ಕೊಬ್ಬಿನ ಮಾಂಸಖಂಡದ ಸ್ಥಾನ ವಲ್ಲವೆ ? ೨೮. ಎಂದು ಶರೀರದಲ್ಲಿನ ಅಶುಚಿತ್ವವನ್ನು ಯೋಚಿಸಿ ಸಂಸಾರಕ್ಕೆ ಬಹಳ ವಿರಕ್ತಿಯುಂಟಾಗಲು ೨೯. ಹೆಚ್ಚಾದ ಕೋಪದಿಂದ ಅಟ್ಟಿ ತಿನ್ನುವ ಹುಲಿಯನ್ನು ರಾಜ ಮಾರ್ಗದಲ್ಲಿ ಕಂಡ ಹಾಗೆ, ರಭಸದಿಂದ ಅಟ್ಟಿಸಿ ತಾಗಿ ಕೊಲ್ಲುವ ಆನೆಯನ್ನು ಮಾರುದಾರಿಯಲ್ಲಿ ಕಂಡಂತೆ ವಿಶೇಷವಾಗಿ ಮೇಲೆ ನುಗ್ಗುವ ರೋಷಗೊಂಡ ಕರಡಿ ಯನ್ನು ಅದರ ಗುಹೆಯಲ್ಲಿಯೇ ಕಂಡಹಾಗೆ, ಐಶ್ವರ್ಯಕ್ಕೂ ಮಹಿಮೆಗೂ ಔನ್ನತ್ಯಕ್ಕೂ ಹೆಚ್ಚಾದ ಭೋಗಕ್ಕೂ ಆಸೆಯೆ ? ೩೦. ಹಾಗೆ ಸಂಸಾರದಲ್ಲಿ ಲಭಿಸುವ ಸುಖಕ್ಕೆ

ಗದ್ಯ ॥ ಅಂತು ಸಂಸಾರದೊಳಾದ ಸುಖಕ್ಕೆ ನಾಡೆಯುಂ ಭಯಸ್ಥನಾಗಿ ಪಿರಿಯ ಮಗನಪ್ಪ ಚಂದ್ರಶೇಖರನಂ ಬರಿಸಿ ಮುಂದೆ ಕುಳ್ಳಿರಿಸಿ ಚಂದ್ರಪ್ರಭಮಹಾರಾಜನಿಂತೆಂದಂ . . ೩೧

ಸಿರಿಯಿಂದಂ ಮೆಯ್ಯಱಿಯದೆ
ಪರತ್ರೆಯುಂ ಕಿಡಿಸಿ ರಾಜ್ಯಮೋಹೋದಯದಿಂ
ಮರುಳಾಗಿ ಮಂದಬುದ್ಧಿಯಿ
ನೆರಡಿಲ್ಲದೆ ಕೆಟ್ಟೆನಿನ್ನವರೆಗಂ ಮಗನೇ . ೩೨

ಗದ್ಯ ॥ ಇನ್ನೆನಗೆ ಮುಕ್ತಿಶ್ರೀಯನೊಲಿಸುವ ಜಿನರೂಪಂ ಶರಣಪ್ಪುಗಲ್ವೇಟ್ಕುಮೀ ಖೇಚರ ರಾಜ್ಯಭಾರಮಂ ಕೈಕೊಳ್ಳೆಂಬುದುಂ ಕುಮಾರನಿಂತೆಂದಂ ೩೩

ಕೇಡಿಲ್ಲದ ನಿರ್ವೃತಿಯೊಳ್
ಕೂಡುವುದಂ ದೇವರೆತ್ತಿಕೊಂಡೆನಗಟ್ಟಿಪಂ
ಮಾಡುವುದಂ ದುರ್ಗತಿಯೊಳ್
ಕೂಡುವುದಂ ರಾಜ್ಯಭಾರಮಂ ದಯೆಗೆಯ್ವಾ ೩೪

ಬಗೆದು ನೋಡಿ ಲೇಸಪ್ಪ ವಸ್ತುವನೊಲ್ದೀವರಕ್ಕಱಿಂ ಕೂರ್ಪವರ್
ಜಗದ ಮಾನಿಸರ್ಪೊಲ್ಲದಂ ಕುಡುವರೆ ಕೂರ್ಪವರ್ಗೆ ಕುಡರೆಂದುಂ ದೇವರ್
ಮಿಗಿಲೆನಿಸಿರ್ಪ ನಿರಂತರ ಸುಖಮನಾರ್ಜಿಸುವ ಕಜ್ಜಮನೆತ್ತಿಕೊಂಡೆ
ನಗೆ ತರಳ ರಾಜ್ಯಮಂ ದುರ್ಗತಿಗೊಯ್ವುದಂ ದುಷ್ಕರ್ಮ ಹೇತುವಂ ಕುಡಲ
ಪ್ಪುದೇ ೩೫

ವಿಶೇಷ ಭಯವುಳ್ಳವನಾಗಿ ಹಿರಿಯಮಗನಾದ ಚಂದ್ರಶೇಖರನನ್ನು ಬರಮಾಡಿ ಎದುರಿಗೆ ಕೂಡಿಸಿಕೊಂಡು ಚಂದ್ರಾಭ ಮಹಾರಾಜನು ಹೀಗೆ ಹೇಳಿದನು : ೩೧. "ಐಶ್ವರ್ಯದಿಂದ ಮೈಮೇಲೆ ಎಚ್ಚರವಿಲ್ಲದೆ ಪಾರಲೌಕಿಕ ಸದ್ಗತಿಯನ್ನು ಕಳೆದುಕೊಂಡು ರಾಜ್ಯ ಮೋಹಾಧಿಕ್ಯದಿಂದ ಮರುಳುಗೊಂಡು ಮಂದಬುದ್ಧಿಯಿಂದ ಖಂಡಿತವಾಗಿ ಕೆಟ್ಟುಹೋದೆ ೩೨. ಮಗನೇ ! ಇನ್ನು ನಾನು ಮುಕ್ತಿಯನ್ನು ಒಲಿಸಿಕೊಳ್ಳಲು ಜಿನರೂಪಕ್ಕೆ ಶರಣುಹೋಗಬೇಕು. ಈ ಖೇಚರರಾಜ್ಯಭಾರವನ್ನು ನೀನು ಸ್ವೀಕರಿಸು" ಇದನ್ನು ಕೇಳಿ ಯುವರಾಜನು "ನಾಶವಿಲ್ಲದ ನಿರ್ವಾಣ ಸುಖದಲ್ಲಿ ಸೇರುವುದನ್ನು ದೇವರವರು ಆರಿಸಿಕೊಂಡಿರಿ. ನನಗೆ ನಾಶವನ್ನುಂಟುಮಾಡುವ, ದುರ್ಗತಿಯಲ್ಲಿ ಸೇರಿಸುವಂಥ ರಾಜ್ಯಭಾರವನ್ನು ದಯಪಾಲಿಸುವಿರಾ ? ೩೩-೩೪. ಪ್ರೀತಿಯುಳ್ಳವರು ಯೋಚಿಸಿ ನೋಡಿ ಶ್ರೇಷ್ಠವಾದ ವಸ್ತುವನ್ನು ಒಲಿದು ಅಕ್ಕರೆಯಿಂದ ಕೊಡುತ್ತಾರೆ. ಜಗತ್ತಿನ ಮನುಷ್ಯರು ಪ್ರೀತಿಪಾತ್ರರಿಗೆ ಕೆಟ್ಟದ್ದನ್ನು ಕೊಡುವರೆ ? ಕೊಡರು. ದೇವರವರು ಹೆಚ್ಚಿನದಾದ ಶಾಶ್ವತ ಸುಖವನ್ನು ಸಂಪಾದಿಸುವ ಕಾರ್ಯವನ್ನು ಕೈಕೊಂಡು ನನಗೆ ಚಂಚಲವಾದ ರಾಜ್ಯವನ್ನು ದುರ್ಗತಿಗೆ ಒಯ್ಯುವುದೂ, ದುಷ್ಕರ್ಮನಿಮಿತ್ತವೂ ಆದುದನ್ನು ಕೊಡಬಹುದೆ?" ೩೫,

ಗದ್ಯ॥ ಅದು ಕಾರಣದಿಂ ದೇವರೆನ್ನ ಮೇಲೆ ಮೋಹಮುಂ ಸ್ನೇಹಮುಮುಳ್ಳೊಡೆ ಶಾಶ್ವತಸುಖಮನೀವ ತಪಶ್ರೀಯುಂ ದಯೆಗೆಯ್ವುದಲ್ಲದೆ ನರಕಗತಿಗುಯ್ವ ರಾಜ್ಯಶ್ರೀಯುಂ ದಯೆಗೆಯ್ಯವೇಡೆಂಬುದುಂ ವಿಯಚ್ಚರರಾಜನಿಂತೆಂದಂ ೩೭

ನಿನ್ನೆಂದುದೆ ಕಾರ್ಯಂ ಮ
ತ್ತೆನ್ನದೆ ಕೈವಲ್ಯಲಕ್ಷ್ಮಿಯುಂ ಬಯಸುವವಂ
ಗುನ್ನತಿಯಿಂದಾದೊಡೆ ಮೇ
ಣೇನೆಂಬುದನಂತುಮಿಂತುಮೆನ್ನದೆ ಕೇಳಿಂ ೩೭

ಗದ್ಯ॥ ಎಂದು ಪ್ರಿಯಾತ್ಮಜಂಗೆ ಕರಕಮಳಮಂ ಮುಗಿದು ೩೮

ಈ ವಿಯಚ್ಚರ ರಾಜ್ಯಮಂ ಪ್ರತಿಪಾಲಿಸಲ್ಮಗನೊರ್ವನಂ
ಭೂವಧೂಪ್ರಿಯನಂ ಮನೋಹರ ರೂಪನಂ ಪಡೆದಿಂ ಬಳಿ
ಕ್ಕೀ ವಿಯಚ್ಚರ ರಾಜ್ಯಭಾರಮನಾ ಕುಮಾರವರಂಗೆ ಕೊ
ಟ್ಟಾವಗಂ ಬಳಿಕಾರ್ತು ಮಾಳ್ಪುದು ಘೋರವೀರತಪಂಗಳಂ ೩೯

ಗದ್ಯ॥ ಎಂದಾ ಪ್ರಧಾನರುಂ ತಾನುಂ ಮೃದುವಚನಂಗಳಿಂ ಲಲ್ಲೆಗೆಯ್ದಿಂತಾನುಮೊಡಂಬಡಿಸಿ ಕುಮಾರಂಗೆ ಪಟ್ಟಮುಂ ಕಟ್ಟಿ ಧರಾಭಾರಮಂ ಕೊಟ್ಟು ಮಗನ ಮೊಗಮಂ ನೋಡಿ ೪೦

ಆದಕಾರಣ ದೇವರವರು ನನ್ನ ಮೇಲೆ ಮೋಹ ಸ್ನೇಹಗಳಿದ್ದರೆ ಶಾಶ್ವತ ಸುಖವನ್ನು ಕೊಡುವ ತಪೋಲಕ್ಷ್ಮಿಯನ್ನು ಅನುಗ್ರಹಿಸುವುದಲ್ಲದೆ ನರಕಗತಿಗೆ ಕರೆದೊಯ್ಯುವ ರಾಜ್ಯಲಕ್ಷ್ಮಿಯನ್ನು ಕೊಡಬೇಡಿ" ಎಂದನು. ಆಗ ಖೇಚರರಾಜನು ೩೬. "ನೀನು ಹೇಳಿದುದೇ ಕಾರ್ಯ. ಮರುಮಾತು ಹೇಳದೆ ಕೈವಲ್ಯ ಲಕ್ಷ್ಮಿಯನ್ನು ಬಯಸುವವನೇ ಆದರೆ ಔನ್ನತ್ಯದಿಂದ ಏನು ಹೇಳುವೆನೋ ಆದನ್ನು ಕೇಳಿ. ಹಾಗೆ, ಹೀಗೆ ಎನ್ನಬೇಡಿ" ಎಂದು ತನ್ನ ಮಗನಿಗೆ ಕೈಗಳನ್ನು ಮುಗಿದು ೩೭-೩೮. "ಈ ಖೇಚರರಾಜ್ಯವನ್ನು ಪರಿಪಾಲಿಸಲು ರಾಜ್ಯಪ್ರಿಯನಾದ, ಮನೋಹರರೂಪನಾದ ಒಬ್ಬ ಮಗನನ್ನು ಪಡೆದು ಇನ್ನುಮೇಲೆ ಈ ಖೇಚರ ರಾಜ್ಯಭಾರವನ್ನು ಆ ಕುಮಾರ ಶ್ರೇಷ್ಠನಿಗೆ ಕೊಟ್ಟು ಆಮೇಲೆ ಧಾರಾಳವಾಗಿ ಘೋರವೀರ ತಪಸ್ಸುಗಳನ್ನು ಮಾಡತಕ್ಕದ್ದು" ಎಂದು ತಾನೂ ಆ ಪ್ರಧಾನರೂ ಮೃದುವಾಕ್ಯಗಳಿಂದ ಪ್ರೀತಿಯ ಮಾತುಗಳನ್ನಾಡಿ ಹೇಗೋ ಒಪ್ಪಿಸಿ ಕುಮಾರನಿಗೆ ಪಟ್ಟವನ್ನು ಕಟ್ಟಿ ರಾಜ್ಯಭಾರವನ್ನು ಕೊಟ್ಟು ಮಗನನ್ನು ಕುರಿತು ಹೀಗೆ ಹೇಳಿದನು ೪೦. "ಸುಂದರ ಚರಿತ್ರನಾಗು, ಗುಣವಂತನಾಗು, ಧರ್ಮದಲ್ಲಿ ಸದಾಚಾರನಿರತ

ಚಾರುಚರಿತ್ರನಪ್ಪುದು ಗುಣಾನ್ವಿತನಪ್ಪುದು ಧರ್ಮದೊಳ್ಸದಾ
ಚಾರನೆನಿಪ್ಪುದುಜ್ಜ್ವಲ ಜಿನೇಂದ್ರಪದದ್ವಯ ಭಕ್ತನಪ್ಪುದಿ
ನ್ನಾರುಮನುರ್ಕಿ ಸೊರ್ಕಿ ಸಲೆ ನೋಯಿಸದಿರ್ಪುದು ಜೈನಯೋಗಿವೃಂ
ದಾರಕರಲ್ಲಿ ಭಕ್ತಿಭರದಿಂ ನೆಱೆ ತೋಱುವುದುತ್ತರೋತ್ತರಂ ೪೧

ಗದ್ಯ॥ ಮತ್ತಂ 'ದೇವ ನೀಂ ಕೊಟ್ಟ ಕುನ್ನಿ ಬೆಳೆವೆಳೆಯೆನಾಯಾಯ್ತೆಂ'ಬ ನಾಣ್ನುಡಿಯಂ ನನ್ನಿ ಮಾಡದೆ ತಾವರೆಯೆಲೆಯ ಮೇಲಣ ನೀರಂತೆ ಸಂಸಾರದೊಳಪ್ಪ ದುಃಖಮುಂ ಪಾಪಮಂ ಪೊರ್ದದೆ ಸಿಪ್ಪಿನೊಳ್ ಪುಟ್ಟಿಯುಂ ಮುತ್ತು ಸಿಪ್ಪಿಂದಂ ತಾಂ ಭಿನ್ನನೆಂತಂತೆ ನೀನುಮೆನ್ನಿಂದಂ ಸಕಲಗುಣಂಗಳೊಳಂ ಧರ್ಮದೊಳಂ ರಾಜನೀತಿಯೊಳಂ ಜಿನಭಕ್ತಿಯೊಳಂ ಮಿಗಿಲಪ್ಪುದೆಂದು ಬೇಡಿಕೊಂಡು ಬುದ್ಧಿವೇೞ್ದು ೪೨

ತುಟಿಲಾಳ್ಮನ್ನಿಸದಾಳ್ದನಂ ಸುಚರಿತಂ ದುಷ್ಕರ್ಮಮಂ ಸಜ್ಜನರ್
ಪಟಿಯಂ ಜಾರೆಯನಾಯುಮುಳ್ಳ ಪುರುಷಂ ನಿರ್ದ್ರವ್ಯನಂ ಸೂಳೆಯರ್
ಖಳನಂ ಧರ್ಮಪರರ್ ವಿಶೇಷಮತಿಮಂ ಮಿಥ್ಯಾತ್ವಮಂ ಧಾರಿಣೀ
ತಳದೊಳ್ ಕೇಳ್ಬಿಡುವಂತೆ ರಾಜ್ಯದಳಿಪಂ ಬಿಟ್ಟಂ ಖಗಾಧೀಶ್ವರಂ ೪೩

ಗದ್ಯ॥ ಅಂತು ಸಕಲರಾಜ್ಯಮುಮಂ ತೊಱೆದು ಪುರದಿಂ ಪೊಱಮಟ್ಟು ವಿಮಾನಾರೂಢನಾಗಿ ಪಾಂಡ್ಯದೇಶದ ದಕ್ಷಿಣ ಮಧುರೆಗೆ ಬಂದು ಪೊಱವೊಟಲೊಳ್ ನಿಂದು ೪೪

ನಾಗು, ದಿವ್ಯವಾದ ಜಿನಸ್ವಾಮಿಯ ಪಾದಯುಗಳಗಳಲ್ಲಿ ಭಕ್ತನಾಗು, ಯಾರನ್ನೂ ಕೊಬ್ಬಿನಿಂದ, ಉಬ್ಬಿನಿಂದ ಹೆಚ್ಚಾಗಿ ನೋಯಿಸಬೇಡ, ಜೈನಯೋಗಿ ಬೃಂದಾರಕರಲ್ಲಿ ವಿಶೇಷವಾದ ಭಕ್ತಿಯನ್ನು ತಾಳಬೇಕು. ಅದು ಉತ್ತರೋತ್ತರವಾಗಿ ಹೆಚ್ಚಲಿ. ೪೧. ಅಲ್ಲದೆ "ನೀನು ಕೊಟ್ಟ ಕುನ್ನಿ ಬೆಳೆದು ಬೆಳೆದು ನಾಯಿಯಾಯಿತು" ಎಂಬ ಗಾದೆಯನ್ನು ನಿಜ ಮಾಡದೆ ತಾವರೆ ಎಲೆಯ ಮೇಲಿನ ನೀರಿನ ಹಾಗೆ ಸಂಸಾರದಲ್ಲಿ ಆಗುವ ದುಃಖವನ್ನೂ ಪಾಪವನ್ನೂ ಹೊಂದದೆ ಚಿಪ್ಪಿನಲ್ಲಿ ಹುಟ್ಟಿಯೂ ಆ ಚಿಪ್ಪಿನಿಂದ ಬೇರೆ ಹೇಗೋ ಹಾಗೆ ನೀನು ಎಲ್ಲ ಗುಣಗಳಲ್ಲಿಯೂ ಧರ್ಮದಲ್ಲಿಯೂ ರಾಜನೀತಿಯಲ್ಲಿಯೂ ನನಗಿಂತ ಹೆಚ್ಚಾಗತಕ್ಕದ್ದು" ಎಂದು ಕೇಳಿಕೊಂಡು ಬುದ್ಧಿ ಹೇಳಿದನು ೪೨. ಮನ್ನಣೆಮಾಡದ ಸ್ವಾಮಿಯನ್ನು ಯುದ್ಧವೀರನು ಬಿಡುವಂತೆ, ಸುಚರಿತ್ರನು ದುಷ್ಕರ್ಮವನ್ನೂ ಸಜ್ಜನರು ಅಪಕೀರ್ತಿಯನ್ನೂ ಆಯುಸ್ಸುಳ್ಳ ಪುರುಷನು ಜಾರೆಯನ್ನೂ ಸೂಳೆಯರು ದ್ರವ್ಯವಿಲ್ಲದವನನ್ನೂ, ನೀಚನನ್ನು ಧರ್ಮಪರರು, ಹೆಚ್ಚಿನ ಜ್ಞಾನವುಳ್ಳವನು ಮಿಥ್ಯಾಧರ್ಮವನ್ನೂ ಬಿಡುವಂತೆ ಖೇಚರರಾಜನು ರಾಜ್ಯದ ಆಸೆಯನ್ನು ಬಿಟ್ಟನು ೪೩. ಹಾಗೆ ಸಕಲ ರಾಜ್ಯವನ್ನೂ ತೊರೆದು ಬಿಟ್ಟು ಪಟ್ಟಣದಿಂದ ಹೊರಟು ವಿಮಾನಹತ್ತಿ ಪಾಂಡ್ಯದೇಶದ ದಕ್ಷಿಣ ಮಧುರೆಗೆ ಬಂದು ಪುರದ ಹೊರಸುತ್ತಿನಲ್ಲಿ ನಿಂತು ನಗರವನ್ನು

ವಿಳಿರ್ಪ ಪತಾಕೆಯಿಂ ಕುಳಿರ್ಪನಂದನದಿಂ ತಳರ್ಪಂಚೆಯಿಂ ಬೆಡಂ
ಗಳವಡೆ ರತ್ನದೀಧಿತಿಯೊಳೊಂದಿ ಪಳಂಚುವ ಬಳ್ಳಿವಾಡದಿಂ
ಕಳಸದ ಮತ್ತವಾರಣದ ಶೋಭೆಗಳಿಂ ಕಡುರಯ್ಯಮಪ್ಪ ನಿ
ರ್ಮಳ ಜಿನಮಂದಿರಂಗಳ ವಿಳಾಸಮನಚ್ಚರಿವಟ್ಟು ನೋಡಿಪಂ ೪೫

ಗದ್ಯ॥ ಅಂತು ನೋಡುತ್ತುಂ ಭಕ್ತಿಭರತೆಯಿಂ ಕಯ್ಯಂ ಮುಗಿದು ಪೊಟಲೊಳಗೆ ಪೊಕ್ಕು ಮೆಲ್ಲ ಮೆಲ್ಲನೆ ಬರುತ್ತುಂ ೪೬.

ಕಿವಿವರಮೆಯ್ದೆ ನೀಳ್ದ ಕಡೆಗಣ್ ಕರಮಕ್ಕಱನೀಯೆ ರಾಗಮಂ
ವಿವಶಿಸೆಪುರ್ವಿನುರ್ಪು ಸುಲಿಪಲ್ ಮನಮಂ ಸರೆಗೆಯ್ಯೆ ಸೋಲಮಂ
ಸುವಿಟ ಜನಕ್ಕೆ ಮಾಡೆ ವದನಾಂಬುರುಹಂ ಜಿನನೋಲಗಕ್ಕೆ ಬ
ರ್ಪ ವನಜಪತ್ರನೇತ್ರೆಯರನಾ ಖಚರಂ ಮನವೊಲ್ದು ನೋಡಿದಂ ೪೭

ತರಳ ವಿಶಾಲಲೋಚನದ ಬೆಳ್ಪು ಕುರುಳ್ಗಳ ಚೆಲ್ವು ಭೂಷಣೋ
ತ್ಕರದ ಬೆಡಂಗು ತೆಳ್ವಸಿಱ ಭಂಗಿ ಕುಚಂಗಳ ತೋರ್ಪು ಕಣ್ಗೆವಂ
ದಿರೆ ವಿಟರಂ ಪಡಲ್ವಡಿಸಲೆಂದು ಮನೋಜನ ದಾಟಿ ಬರ್ಪವೊಲ್
ಪರಮ ಜಿನೇಂದ್ರನೋಲಗಕ್ಕೆ ಬರ್ಪ ವಿದಗ್ಧೆಯರೊಪ್ಪಿ ತೋಱದರ್ ೪೮

ನೋಡಿದನು ೪೪. ಹಾರಾಡುವ ಬಾವುಟಗಳಿಂದ ತಣ್ಣನೆಯ ಉದ್ಯಾನವನಗಳಿಂದ ಓಡಾಡುವ ಹಂಸಗಳಿಂದ, ಬೆಡಗಿನಿಂದ ಕೂಡಿ ರತ್ನಪ್ರಕಾಶದಿಂದ ಕೂಡಿ ಹೊಳೆಯುವ ಬಳ್ಳಿವನೆಗಳಿಂದ ಕಳಶದ ಮದ್ದಾನೆಗಳ ಶೋಭೆಯಿಂದ, ಕಡುರಮ್ಯವಾದ ನಿರ್ಮಳ ಜಿನಾಲಯಗಳ ಸೊಗಸನ್ನು ಆಶ್ಚರ್ಯದಿಂದ ನೋಡಿದನು ೪೫. ಹಾಗೆ ನೋಡುತ್ತ ಭಕ್ತಿಭಾರದಿಂದ ಕೈಮುಗಿದು ಪಟ್ಟಣದೊಳಗೆ ಪ್ರವೇಶಿಸಿ ಮೆಲ್ಲಗೆ ಬರುತ್ತ ೪೬. ಜಿನನೋಲಗಕ್ಕೆ ಬರುತ್ತಿದ್ದ ವಿಶಾಲನೇತ್ರೆಯರಾದ ವಿಳಾಸಿನಿಯರನ್ನು ಮನಸ್ಸಂತೋಷದಿಂದ ಕಂಡನು. ಕಿವಿಯವರೆಗೆ ಚಾಚಿಕೊಂಡ ಕಡೆಗಣ್ಣುಗಳು ಬಹಳ ಅಕ್ಕರೆಯನ್ನುಂಟುಮಾಡಲು ಹುಬ್ಬಿನುಬ್ಬು ಪ್ರೇಮವಿವಶತೆಯನ್ನುಂಟು ಮಾಡುವಂತಿತ್ತು. ಶುಭ್ರವಾದ ಹಲ್ಲುಗಳು ನೋಟಕರ ಮನಸ್ಸನ್ನು ಸೆರೆಹಿಡಿಯುತ್ತಿದ್ದುವು. ವಿಟಜನರಿಗೆ ಆಕರ್ಷಣೆಯನ್ನುಂಟುಮಾಡಿದ ಅಂಬುರುಹವದನೆಯರು ಜಿನಮಂದಿರಕ್ಕೆ ಹೋಗುತ್ತಿದ್ದರು: ೪೭. ಚಂಚಲವಾದ ವಿಶಾಲನೇತ್ರಗಳ ಬಿಳುಪು, ಕುರುಳುಗಳ ಚೆಲುವು, ಆಭರಣಗಳ ಬೆಡಗು, ತೆಳುಹೊಟ್ಟೆಯ ರೀತಿ, ಮೊಲೆಗಳ ತೋರಿಕೆ, ಆಕರ್ಷಕವಾಗಿರಲು ವಿಟರನ್ನು ಸೋಲಿಸಲು ಮನ್ಮಥನು ದಾಳಿ ಬರುವ ಹಾಗೆ ಪರಮಜಿನನ ಮಂದಿರಕ್ಕೆ ಬರುತ್ತಿದ್ದ ಸೊಗಸುಗಾತಿಯರನ್ನು (ಪಂಡಿತೆಯರನ್ನು) ಖೇಚರರಾಜನು ನೋಡಿದನು. ೪೮

ಗದ್ಯ॥ ಅಂತು ಜಿನಾಧೀಶ್ವರನೋಲಗಕ್ಕೆ ಬರ್ಪ ವಿಲಾಸಿನಿಯರಂ ನೋಡುತ್ತುಂ ಸಂತೋಷ
ದಿಂ ಬರುತ್ತುಂ ೪೯

ಪೊನ್ನ ತೋರಣಮಿಂದ್ರನೀಲದ ರಂಗವಾದನಯುಂ ಗುಡೀ (?)
....ನೀಲಮೇಘಮನೊಪ್ಪಿ ಮುತ್ತಿನ ಸೂಸಕಂ
ಚೆನ್ನಮಾಗಿರೆ ತಾರೆಯುಂ ನೆಱೆ ಪೋಲೆ ಜೈನಗೃಹಂಗಳ
ತ್ಯುನ್ನತಿಕ್ಕೆಯನಾಳ್ದುವಂ ಬರದಂತೆ ರಂಜಿಸಿ ನಾಡೆಯುಂ ೫೦

ಕನಕದ ತೋರಣಮುಂ ಮು
ತ್ತಿನ ತೊಳಗುವ ರಂಗವಲ್ಲಿಯುಂ ಪಂಚ ಮಹಾ
ಧ್ವನಿನಾದಮುಮೊಳ್ಪೂಜೆಯು
ಮನವರತಂ ಬಸದಿಯೋಳಿಯೊಳ್ ರಂಜಿಸುಗುಂ ೫೧

ಗದ್ಯ॥ ಮತ್ತಮಮರಲೋಕದಿಂ ತತ್ಪುರಮಂ ನೋಡಲೆಂದು ಧರೆಗವತರಿಸಿ ತಂತಮ್ಮ ವಿಮಾನಂಬೆರಸಿರ್ದರೆನಿಸಿ ತರತರದಿಂದಿರ್ದ ಜಿನಾಲಯದೋಳಿಗಳಮವರ ಮುಂದಣ ನಾನಾ ರತ್ನರಚಿತಮಪ್ಪ ಬಾಗಿಲ್ವಾಡಂಗಳಂ ಅವಱ ಮುಂದಣ ಚಂದ್ರಾದಿತ್ಯರ ಬೆಳಗಿನೊಳ್ ಮಚ್ಚರಿಸಿ ತೊಳಗುವ ಮಕರತೋರಣಂಗಳಂ ಚೀನ ಮಹಾ ಚೀನದ ಮಹಾಧ್ವಜಂಗಳಂ ಪಚ್ಚೆಯ ಪವಳದ ಶೋಭೆವೆತ್ತ ಸೋಪಾನಂಗಳಂ ಮೋಕ್ಷಶ್ರೀಯ ಸಿಂಹಾಸನಮೆನಿಪ ಪ್ರಾಕಾರಂಗಳಂ ನೋಡುತ್ತುಮಿರ್ಪನ್ನೆಗಂ ೫೨

ಹಾಗೆ ಜಿನಾಧೀಶ್ವರನ ಸಭೆಗೆ ಬರುವ ಸೊಗಸುಗಾತಿಯರನ್ನು ನೋಡುತ್ತ ಸಂತೋಷ ದಿಂದ ಬರುತ್ತಿರುವಾಗ ೪೯. ಚಿನ್ನದ ತೋರಣ, ಇಂದ್ರನೀಲದ ವೇದಿಕೆ, ಮುತ್ತಿನ ಹಾರಗಳು, ಅಂದವಾಗಿರಲು ನಕ್ಷತ್ರ ರಾಶಿಯನ್ನು ಹೆಚ್ಚಾಗಿ ಹೋಲುತ್ತಿರಲು, ಜೈನ ಗೃಹಗಳು ಅತಿ ವೈಭವವನ್ನು ಹೊಂದಿ ಚೆನ್ನಾಗಿ ರಂಜಿಸುತ್ತಿದ್ದುವು ೫೦. ಚಿನ್ನದ ತೋರಣಗಳೂ, ಹೊಳೆಯುವ ಮುತ್ತಿನ ರಂಗೋಲಿಗಳೂ ಪಂಚಮಹಾವಾದ್ಯ ನಿನಾದ ಗಳೂ ಒಳ್ಳೆಯ ಜಿನಪೂಜೆಯೂ ಸದಾ ಬಸದಿಗಳೊಳಗೆ ಶೋಭಿಸುತ್ತಿದ್ದುವು. ೫೧. ಅಲ್ಲದೆ ಆ ಪಟ್ಟಣವನ್ನು ನೋಡುವ ಆಸೆಯಿಂದ ದೇವಲೋಕದಿಂದ ಭೂಮಿಗೆ ಇಳಿದು ತಮ್ಮ ತಮ್ಮ ವಿಮಾನಗಳಿಂದ ಕೂಡಿರುವರೆನ್ನುವಂತೆ ಸಾಲುಸಾಲಾಗಿದ್ದ ಜಿನಾಲಯಗಳ ಸಮೂಹವನ್ನೂ ಅವುಗಳ ಮುಂದಿನ ಬಗೆಬಗೆಯ ರತ್ನಗಳಿಂದ ಮಾಡಿದ ಬಾಗಿಲುವಾಡ ಗಳನ್ನೂ ಅವುಗಳ ಮುಂದಿನ ಚಂದ್ರಸೂರ್ಯರ ಬೆಳಕಿನಲ್ಲಿ ಮತ್ಸರ ತಾಳಿ ಹೊಳೆಯುವ ಮಕರತೋರಣಗಳನ್ನೂ ಚೀನ, ಮಹಾ ಚೀನಗಳಿಂದ ಬಂದಿದ್ದ ಧ್ವಜಗಳನ್ನು ಪಚ್ಚೆ ಹವಳಗಳ ಕಾಂತಿಯಿಂದ ಕೂಡಿದ ಸೋಪಾನಗಳಿಂದಲೂ ಮೋಕ್ಷದೇವತೆಯ ಸಿಂಹಾಸನವೆನ್ನಿಸುವ ಪ್ರಾಕಾರಗಳನ್ನು ನೋಡುತ್ತ ಇರುವ ವೇಳೆಗೆ ೫೨. ಆ

ತುರಗದಳಂಗಳಿರ್ಕೆಲದೊಳಂ ಬರೆ ಮುಂದೆ ಮಹಾವಿಭೂತಿಯಿಂ
ಪರಿಯೆ ಪತಾಕೆಗಳ್ ನೃಪಕುಮಾರಕರೋಜೆಯಿನೆಯ್ದೆ ಸುತ್ತಲುಂ
ಬರೆ ತಟ[3] ತಳ್ತನಂದನವನಾಕೃತಿಯಂತಿರೆ ತೂರ್ಯನಾದಮೊ
ಪ್ಪಿರೆ ಗಣಿಕಾಳಿ ಚಾಮರಮನಿಕ್ಕೆ ಸುರಾಧಿಪನಂತೆ ಲೀಲೆಯಿಂ ೫೩

ಗದ್ಯ॥ ತತ್ಪುರಾಧೀಶ್ವರನಪ್ಪ ಚಿತ್ರವಾಹನ ಮಹಾರಾಜಂ ತನಗೆಲ್ಲ ಜಿನಾಲಯಂಗಳುಂ ಕಾಣ್ಬುದು ನಿತ್ಯವ್ರತಮಿರ್ಪುದರಿಂ ಜಿನಭವನಂಗಳೆಲ್ಲಮಂ ಪೂಜಿಸುತ್ತ ಬಂದು ಭೂತಹಿತಮೆಂಬ ತಮ್ಮನ್ವಯದ ಬಸದಿಯನೆಯ್ದೆ ೫೪

ಕರಮಾದರದಿಂ ಬಡವಂ
ಗುರುಮುದದಿಂ ಪೊನ್ನ ರಾಶಿ ದೊರೆಕೊಂಡಂತಾ
ಧರಣೀನಾಥಂ ಭಕ್ತಿಯ
ಭರದಿಂ ಬಲವಂದು ಮೂಱು ಸೂೞ್ ಜಿನಗೃಹಮಂ ೫೫

ಗದ್ಯ॥ ನಿಸಿಧ್ಧಿಯಿಂದೊಳಗಂ ಪೊಕ್ಕು ೫೬

ಇರುವಂತಿ ಜಾಜಿ ಪಾದರಿ
ಸರಸಿರುಹಂ ಸುರಗಿ ಮೊಲ್ಲೆ ಪೊಸ ಸಂಪಗೆಯಾ
ಅರಲಿಂ ಭಕ್ತಿಯಿನಾತಂ
ಪರಮ ಜಿನೇಶ್ವರನ ಪಾದಮಂ ಪೂಜಿಸಿದಂ ೫೭

ಪಟ್ಟಣದ ದೊರೆ ಚಿತ್ರವಾಹನನು ಆ ಮಾರ್ಗವಾಗಿ ಬಂದನು. ಎರಡು ಪಕ್ಕಗಳಲ್ಲಿಯೂ ಕುದುರೆ ಸವಾರರು ಬರುತ್ತಿದ್ದರು. ಮುಂದುಗಡೆ ಬಹಳ ವೈಭವದಿಂದ ಪತಾಕೆಗಳು ಹಾರಾಡುತ್ತಿದ್ದವು. ರಾಜಪುತ್ರರು ಸಾಲಾಗಿ ಬರುತ್ತಿದ್ದರು. ಅವರೆಲ್ಲರ ಸುತ್ತ ಛತ್ರಿ ಹಿಡಿದ ಭಟರು ಬರುತ್ತಿರಲು ನಂದನವನದ ಆಕೃತಿಯಂತೆ ತೋರುತ್ತಿತ್ತು. ವಾದ್ಯ ಘೋಷ ಕೇಳಿಸುತ್ತಿತ್ತು, ಸೂಳೆಯರ ಗುಂಪು ದೊರೆಗೆ ಚಾಮರ ಹಾಕುತ್ತಿತ್ತು. ದೇವೇಂದ್ರನಂತೆ ಲೀಲಾ ವಿಭೂತಿಯನ್ನು ಮೆರೆಯುತ್ತ ಅರಸನು ಪರಿವಾರ ಸಮೇತನಾಗಿ ಬರುತ್ತಿದ್ದನು. ಎಲ್ಲ ಜಿನಾಲಯಗಳನ್ನೂ ನೋಡುವುದು ಆ ದೊರೆಯ ನಿತ್ಯವ್ರತ. ಆದರಿಂದ ಜಿನಮಂದಿರಗಳಲ್ಲೆಲ್ಲ ಪೂಜೆಯನ್ನು ಸಲ್ಲಿಸುತ್ತ ಬಂದು ತಮ್ಮ ವಂಶದ ಬಸದಿಯಾದ "ಭೂತಹಿತ"ವನ್ನು ಸೇರಿದನು ೫೪. ಬಡವನಿಗೆ ಹೊನ್ನಿನ ರಾಶಿ ಸಿಕ್ಕಿದರೆ ಎಷ್ಟು ಆನಂದವೋ ಆ ಬಸದಿಗೆ ಬಂದದ್ದು ಆ ದೊರೆಗೆ ಅಷ್ಟು ಆನಂದವಾಗಿತ್ತು. ಭಕ್ತಿಯಿಂದ ಮೂರುಸಲ ಪ್ರದಕ್ಷಿಣೆಮಾಡಿ ನಿಸಿದಿಗೆಯನ್ನು ದಾಟಿ ಒಳಹೊಕ್ಕನು (೫೫–೫೬) ಇರವಂತೆ, ಜಾಜಿ ಪಾದರಿ, ತಾವರೆ, ಸುರಗಿ, ಮೊಲ್ಲೆ, ಸಂಪಗೆ ಮೊದಲಾದ ಹೂಗಳನ್ನು ಭಕ್ತಿಯಿಂದ ಆತನು ಪರಮಜಿನೇಶ್ವರನ ಪಾದಗಳಿಗೆ ಪೂಜೆಮಾಡಿದನು. ೫೭. ಅಲ್ಲದೆ ಅನೇಕ ರತ್ನದ ಮಣಿಹಾರಗಳಿಂದಲೂ ಬಂಗಾರದ ಹೂವುಗಳನ್ನು ಕಟ್ಟಿದ

ಗದ್ಯ॥ ಮತ್ತಂ ಪಲವು ರತುನದ ಮಣಿಹಾರಂಗಳಿಂದಂ ಚಾಮೀಕರ ಪುಷ್ಪಮಾಲೆಗಳಿಂದಂ ಮುತ್ತಿನ ಲಂಬಣಂಗಳಿಂದಂ ತಾನೆ ತನ್ನ ಕಯ್ಯಾರೆ ಪೂಜಿಸಿ ಬೞಿಕ್ಕಂ ೫೮

ಸುರರಾಜಂ ಪರಮ ಜಿನೇ
ಶ್ವರನಂ ತನ್ನೊಂದು ಭಕ್ತಿಯಿಂದೋಲಗಿಪಂ
ತಿರೆ ಪಾಂಡ್ಯಾನ್ವಯ ಕುವಲಯ
ಶರನಿಧಿನಂದನನುಮೊಪ್ಪಿ ಚೆಲ್ವಪ್ಪಿನೆಗಂ ೫೯

ಸುರಿದಪುದು ರಸದ ಮೞೆ ಭೋ
ರ್ಗರೆದು ರಸಾಯನದ ಪೆರ್ವೊನಲ್ಪರಿದಪುದ
ಚ್ಚರಿಯಾಗಮೃತದ ತೊಱೆಯು
ಬ್ಬರಮಾಗಲ್ ತೀವಿ ಬಂದುದೆನಿಪತಿಶಯದಿಂ ೬೦

ಗದ್ಯ॥ ಕಿಱಿದು ಬೇಗಮೋಲಗಂಗೊಟ್ಟಿರ್ದು ತದನಂತರಂ ತ್ರೈಲೋಕ್ಯಮಾಂಗಲ್ಯನಂ ಕಣ್ಣಾರೆ ನೋಡಿ ಮನದ ಪೆರ್ಚಿಂದಂ ಕರಕಮಲಂಗಳಂ ಮುಗಿದು ನಿಂದಿರ್ದು ೬೧

ಶ್ರೀಯ ನಿಮಿರ್ಕೆಗಂ ಸುಖದಳುರ್ಕೆಗಮುನ್ನತ ಕೀರ್ತಿಗಂ ಯಶ
ಶ್ರೀಯೊದವಿಂಗಮೊಪ್ಪುವಳವಿಂಗೆ ಮಹಾಬಳ ಕಂತು ಸದ್ವಚ
ಶ್ರೀಯೊದವಿಂಗ ಮಾಳ್ಪೊಡೆ ಪೂಜಿಸು ನಿರ್ಮಳನಾಗಿ ನಿರ್ವೃತಿ
ಶ್ರೀ ಯುವತೀಶನಪ್ಪ ದುರಿತಾರಿ ಚತುರ್ಮುಖ ಶಾಂತಿನಾಥನಂ ೬೨

ಮಾಲೆಗಳಿಂದಲೂ ಮುತ್ತಿನ ಕುಚ್ಚುಗಳಿಂದಲೂ ರಾಜನು ತನ್ನ ಕೈಗಳಿಂದಲೇ ತೃಪ್ತಿಯಾಗಿ ಕೈಸೋಲುವಂತೆ ಪೂಜಿಸಿದನು ೫೮. ದೇವೇಂದ್ರನು ಪರಮಜಿನೇಶ್ವರನನ್ನು ತನ್ನ ವಿಶಿಷ್ಟಭಕ್ತಿಯಿಂದ ಸೇವಿಸುವ ಹಾಗೆ ಪಾಂಡ್ಯವಂಶವೆಂಬ ಕ್ಷೀರಸಮುದ್ರದ ನಂದನನು (ಚಂದ್ರ) ಶೋಭಾಯಮಾನವಾಗಿ ಜಿನನ ಓಲಗದಲ್ಲಿದ್ದನು ೫೯. ಆಗ ರಸದ ಮಳೆಯೋ ಸುರಿಯುತ್ತಿದೆಯೋ, ಭೋರೆಂದು ಶಬ್ದಮಾಡುತ್ತಾ ರಸಾಯನದ ದೊಡ್ಡಹೊಳೆ ಹರಿದು ಬರುತ್ತಿದೆಯೋ, ಅಮೃತದ ತೊರೆಯು ಉಬ್ಬರವಾಗಿ ತುಂಬಿ ಬಂದಿತೋ ಎಂಬ ಅತಿಶಯವಾದ ಶಾಂತಭಾವ ಆಗ ಬಸದಿಯಲ್ಲಿ ವ್ಯಾಪಿಸಿತ್ತು. ೬೦. ಕೊಂಚ ಹೊತ್ತು ಸಭೆಯಲ್ಲಿದ್ದು ಆಮೇಲೆ ತ್ರೈಲೋಕ್ಯ ಮಾಂಗಲ್ಯನಾದ ಜಿನಸ್ವಾಮಿಯನ್ನು ಕಣ್ಣುತುಂಬಾ ನೋಡಿ ಮನಸ್ಸಿನ ಆನಂದದಿಂದ ಕಮಲದಂಥ ಕೈಗಳನ್ನು ಜೋಡಿಸಿಕೊಂಡು ನಿಂತು ಜಿನಸ್ತೋತ್ರ ಮಾಡಿದನು: ೬೧. "ಐಸಿರಿಯ ಆಧಿಕ್ಯ, ಸುಖದ ಹೆಚ್ಚಿಗೆ, ಹೆಚ್ಚಿನಕೀರ್ತಿ, ಯಶೋಲಕ್ಷ್ಮಿಯ ಉನ್ನತಿಗೂ ಸಾಮರ್ಥ್ಯ, ಮಹಾಬಲ, ಸದ್ವಚೋಲಕ್ಷ್ಮಿ ಇವುಗಳನ್ನೆಲ್ಲ ಅಪೇಕ್ಷಿಸುವುದಾದರೆ, ನಿರ್ವೃತಿಲಕ್ಷ್ಮಿಯ ಒಡೆಯ ಪಾಪವೈರಿ ಚತುರ್ಮುಖ ಶಾಂತಿನಾಥನನ್ನು ಪೂಜೆಮಾಡು. ೬೨. ಮನೋಹರೆಯರು, ಸುಂದರನೋಟ

ಚಾರುವಿಲಾಸ ನೇತ್ರೆಯರನುತ್ಪಲಗಂಧಿಯರಂ ಮನೋಹರಾ
ತಾರೆಯರಂ ವಿದಗ್ಧ ಸುರಸುಂದರಿಯರ್ಕಳನಾಗಳುಂ ಸವಿ
ಸ್ತಾರದೊಳೊಂದಿ ಭೋಗಿಸುವೆನೆಂಬೊಡೆ ಪೂಜಿಸು ಕೂಡೆ ನಿರ್ವೃತಿ
ಶ್ರೀರಮಣೀಶನಪ್ಪ ದುರಿತಾರಿ ಚತುರ್ಮುಖ ಶಾಂತಿನಾಥನಂ ೬೩

ಚೋಳನ ಮೇಲೆ ನೀಡಿ ಕರಮಂ ಪದಪಲ್ಲವಮಂ ಕಳಿಂಗ ಭೂ
ಪಾಲನ ಮೇಲೆ ನೀಡಿ ಮಗಧಾವನಿಪಾಲಕನಂ ಮಲಂಗಿಸಲ್
ಲೀಲೆಯೊಳಿರ್ಪೆನೆಂಬ ಮನಮುಳ್ಳೊಡೆ ಪೂಜಿಸು ದೇವಪಾಲ ಭೂ
ಪಾಲಕ ವಂದ್ಯನಪ್ಪ ದುರಿತಾರಿ ಚತುರ್ಮುಖ ಶಾಂತಿನಾಥನಂ ೬೪

ಆದರದಿಂದ ಮುಯ್ದು ಪರಿಚಾರಕರಿತ್ತವಧಾರಿಸೆಂದು ಹಾ
ರಾದಿ ದುಕೂಲಮಾದಿ ವರಭೂಷಣಮಂ ಸುಕವಸ್ತ್ರಮಂ ಮಹಾ
ಹ್ಲಾದದಿನುಟ್ಟು ತೊಟ್ಟು ಸುಖಮಿರ್ಪೊಡೆ ಪೂಜಿಸು ನಚ್ಚಿಮೆಚ್ಚಿ ಕೂ
ರ್ತಾದರದಿಂದಮೊಲ್ದು ದುರಿತಾರಿ ಚತುರ್ಮುಖ ಶಾಂತಿನಾಥನಂ ೬೫

ಭೋಗಕೆ ರೂಪಿನುನ್ನತಿಗಮಿಂದ್ರ ನರೇಂದ್ರ ಮಹಾವಿಭೂತಿಗಂ
ಚಾಗದ ವೀರದೇಟಗ್ಗಮನಂತ ಸುಖಕ್ಕಮಿಳಾತಳಕ್ಕಗು
ರ್ವಾಗೆ ಜಸಕ್ಕಮಾಟಪೊಡೆ ಪೂಜಿಸು ನಿಶ್ಚಲನಾಗಿ ನಿರ್ವೃತಿ
ಶ್ರೀಗಧಿನಾಥನಪ್ಪ ದುರಿತಾರಿ ಚತುರ್ಮುಖ ಶಾಂತಿನಾಥನಂ ೬೬

ವುಳ್ಳ ಉತ್ಪಲಗಂಧಿಯರು, ಸುಂದರಿಯರು, ಪಂಡಿತೆಯರಾದ ದೇವಸುಂದರಿಯರನ್ನು ಯಾವಾಗಲೂ ಹೊಂದಿ ಭೋಗಿಸುವೆನೆಂಬಾಸೆಯಿದ್ದರೆ ದುರಿತವೈರಿಯಾದ ಚತುರ್ಮುಖ ಶಾಂತಿನಾಥನನ್ನು ಪೂಜಿಸು. ೬೩. ಚೋಳನ ಮೇಲೆ ಕೈಹಾಕಿ ಗೆದ್ದು, ಕಳಿಂಗ ರಾಜನ ಮೇಲೆ ಕಾಲುಚಾಚಿ, ಮಗಧರಾಜನನ್ನು ಸೋಲಿಸಿಬಿಡಬೇಕೆಂಬ ಮನಸ್ಸಿದ್ದರೆ ಪಾಪಪರಿಹಾರಕ ಚತುರ್ಮುಖಶಾಂತಿನಾಥನನ್ನು ಪೂಜಿಸು. ಅವನು ದೇವಪಾಲಕರಿಗೂ ಭೂಪಾಲಕರಿಗೂ ವಂದ್ಯನು. ೬೪. ಪರಿಚಾರಕರು ಆದರದಿಂದ ವಿಶೇಷವಾಗಿ ಹಾರ ಮೊದಲಾದ ಭೂಷಣಗಳನ್ನೂ ದುಕೂಲವಸ್ತ್ರಗಳನ್ನೂ 'ಇತ್ತಲಾಲಿಸಿ' ಎಂದು ಒಪ್ಪಿಸುತ್ತಿರಲು ಶ್ರೇಷ್ಠವಾದ ವಸ್ತ್ರಗಳನ್ನೂ ದೊಡ್ಡ(ಅನರ್ಘ)ಆಭರಣಗಳನ್ನೂ ಧರಿಸಿ ಸುಖವಾಗಿರಲು ಬಯಸುವಿರಾದರೆ ಮೆಚ್ಚಿ ಪ್ರೀತಿಯಿಂದ ದುರಿತಾರಿಯಾದ ಚತುರ್ಮುಖಶಾಂತಿನಾಥನ ಪೂಜೆಮಾಡು. ೬೫ ಭೋಗ,ರೂಪ, ಪದವಿ, ಇಂದ್ರನರೇಂದ್ರರಿಗಿರುವಂಥ ವೈಭವ, ತ್ಯಾಗ, ವೀರದಹೆಚ್ಚಳ, ಅನಂತಸುಖ, ಇವುಗಳಿಗೆ ಆಸೆಪಡುವಿರಾದರೆ, ಭೂಮಂಡಲಕ್ಕೇ ಭಯಾಶ್ಚರ್ಯವಾಗುವಂಥ ಯಶಸ್ಸನ್ನು ಬಯಸುವಿರಾದರೆ, ನಿಶ್ಚಲಚಿತ್ತನಾಗಿ ಮೋಕ್ಷಲಕ್ಷ್ಮಿಗೆ ಅಧಿನಾಥನಾದ, ಪಾಪವೈರಿಯಾದ, ಚತುರ್ಮುಖಶಾಂತಿನಾಥನನ್ನು ಪೂಜೆಮಾಡು, ೬೬, ಭೂಲೋಕದಲ್ಲಿ ಸಮಸ್ತತಿರ್ಯಕ್ ಗತಿಗಳಲ್ಲಿ ವಿಶೇಷವಾಗಿ

ಧಾರಿಣಿಯೊಳ್ಪಮಸ್ತ ತಿರಿಕಂಗಳೊಳಂ ನೆಱೆ ಪುಟ್ಟಿ ಸತ್ತು ಸಂ
ಸಾರಸಮುದ್ರದೊಳ್ತಿರಿಯದಿಂದ್ರವಿಭೂತಿಯೊಳಿರ್ಪೆನೆಂಬೊಡಾ
ಚಾರದೊಳೊಂದಿ ಶುದ್ಧಮನದಿಂ ನೆಱೆ ಪೂಜಿಸು ಕೂರ್ತು ನಿರ್ವೃತಿ
ಶ್ರೀರಮಣನಪ್ಪ ದುರಿತಾರಿ ಚತುರ್ಮುಖ ಶಾಂತಿನಾಥನಂ ೬೭

ನೋವಿನೊಳಿರ್ಕುಟಱೊಳ್ಪಳಿವ ಕಿರ್ಚಿನೊಳಿಕ್ಕುವ ಸೀಳ್ವ ಪೋೞ್ವ ಕೊ
ಯ್ದೋವದೆ ಬೈವ ಪೊಯ್ವ ನರಕಂಗಳ ದುಃಖದೊಳೊಂದದಾಗಳುಂ
ದೇವವಿಭೂತಿಯೊಳ್ನೆರೆವೆನೆಂಬೊಡೆ ಪೂಜಿಸು ಕೂರ್ತು ನಿರ್ವೃತಿ
ಶ್ರೀ ವನಿತೇಶನಪ್ಪ ದುರಿತಾರಿ ಚತುರ್ಮುಖ ಶಾಂತಿನಾಥನಂ ೬೮

ಆದಿಯನಾದಿಗೊಂಡು ಬಹುದುಃಖಮನೂಡುವ ಕರ್ಮವೃಕ್ಷಮಂ
ಭೇದಿಸಿ ವೈರಿ ಮೋಹಮನಡರ್ತಿಱಿದುನ್ನತಿವೆತ್ತ ಮೋಕ್ಷ ಲ
ಕ್ಷ್ಮೀ ದಯಿತೇಶನಾಗಿ ಸುಖಮಿರ್ಪೊಡೆ ಪೂಜಿಸು ಕೂರ್ತು ನಿರ್ವೃತಿ
ಶ್ರೀ ದಯಿತೇಶನಪ್ಪ ದುರಿತಾರಿ ಚತುರ್ಮುಖ ಶಾಂತಿನಾಥನಂ ೬೯

ಗದ್ಯ॥ ಎಂದು ಸ್ತುತಿ ಶತಸಹಸ್ರಂಗಳಿಂ ಚತುರ್ಮುಖ ಶಾಂತಿನಾಥನಂ ಸ್ತುತಿಯಿಸಿ ಸಮಸ್ತ ಗುಣ ಭಟ್ಟಾರಕರಂ ವಂದಿಸಿ ನಿತ್ಯವ್ರತಂಗಳಂ ಕೈಕೊಂಡು ಸಿದ್ಧಸೇಸೆಯುಂ ಕೊಂಡು ಕಿಱಿದು ಬೇಗಂ ಧರ್ಮಮಂ ಕೇಳ್ದು ಚಿತ್ರವಾಹನ ಮಹಾರಾಜಂ ತನ್ನರಮನೆಗೆ ಪೋದನಿತ್ತಲ್

ಹುಟ್ಟಿ, ಸತ್ತು, ಸಂಸಾರಸಮುದ್ರದಲ್ಲಿ ಅಲೆಯದ ಹಾಗೆ ಮಹಿಮೆ ಗಳಿಸಬಯಸುವಿರಾದರೆ, ಮೋಕ್ಷಲಕ್ಷ್ಮಿಗೆ ರಮಣನಾದ ಪಾಪವೈರಿ ಚತುರ್ಮುಖಶಾಂತಿನಾಥನನ್ನು ಪೂಜಿಸಿ. ೬೭. ನೋವಿಗೆ ಗುರಿಮಾಡುವ, ಬಂಧನದಲ್ಲಿ, ಹೆಚ್ಚುವ ಬೆಂಕಿಯಲ್ಲಿ ಹಾಕುವ, ಸೀಳುವ, ಹೋಳು ಮಾಡುವ, ಕೊಯಿದು ಲಕ್ಷ್ಯಮಾಡದೆ ಬೈದುಹೊಡೆಯುವ ನರಕಗಳ ದುಃಖದಲ್ಲಿ ಸಿಕ್ಕಿಕೊಳ್ಳದೆ ಯಾವಾಗಲೂ ದೇವವೈಭವದಲ್ಲಿ ಸೇರಿರಬೇಕೆಂದರೆ ಮೋಕ್ಷಶ್ರೀವನಿತೆಗೆ ಗಂಡನಾದ ಪಾಪಪರಿಹಾರಕ ಚತುರ್ಮುಖಶಾಂತಿನಾಥನನ್ನು ಪ್ರೀತಿಯಿಂದ ಪೂಜಿಸು. ೬೮. ಮನೋರೋಗಗಳಿಂದ ತೊಡಗಿ ಬಹಳ ದುಃಖಗಳನ್ನುಂಟುಮಾಡುವ ಕರ್ಮವೆಂಬ ಮರವನ್ನು ಕತ್ತರಿಸಿ ವೈರಿಗಳ ಸೈನ್ಯವನ್ನು ಮೇಲೆಬಿದ್ದು ಇರಿದು ಔನ್ನತ್ಯವನ್ನು ಹೊಂದಿದ ಮೋಕ್ಷಲಕ್ಷ್ಮಿಯೆಂಬ ಪ್ರೇಯಸಿಗೆ ಗಂಡನಾಗಿ ಸುಖವಾಗಿರಬೇಕಾದರೆ ನಿರ್ವೃತಿ ಶ್ರೀದಯಿತೆಗೆ ಒಡೆಯನಾದ ಪಾಪಪರಿಹಾರಕನಾದ ಚತುರ್ಮುಖಶಾಂತಿನಾಥನನ್ನು ಪ್ರೀತಿಯಿಂದ ಪೂಜಿಸು." ೬೯. ಎಂದು ನೂರು ಸಾವಿರ(ಅನೇಕ) ಸ್ತೋತ್ರಗಳಿಂದ ಚತುರ್ಮುಖಶಾಂತಿನಾಥನನ್ನು ಹೊಗಳಿ ಎಲ್ಲಾ ಗುಣಭಟ್ಟಾರಕರನ್ನೂ ವಂದಿಸಿ ನಿತ್ಯವ್ರತಗಳನ್ನು ಸ್ವೀಕರಿಸಿ ಸಿದ್ಧಾಕ್ಷತೆಗಳನ್ನು ಪಡೆದುಕೊಂಡು ಕೊಂಚ ಹೊತ್ತು ಧರ್ಮಶ್ರವಣ ಮಾಡಿ ಚಿತ್ರವಾಹನ ಮಹಾರಾಜನು ತನ್ನ ಅರಮನೆಗೆ ಹೋದನು. ಇತ್ತ ಚಂದ್ರಾಭ

ಚಂದ್ರಾಭ ಮಹಾರಾಜಂ ಪಾಂಡ್ಯ ಕುಲಚೂಡಾಮಣಿಯ ಸಮ್ಯಕ್ತ್ವಕ್ಕೆ ಮೆಚ್ಚಿ ತನ್ನೊಳಿಂತೆಂದಂ ೭೦

ಕುಲದೊಳ್ಪಾಂಡ್ಯ ಮಹೀಶರಲ್ತೆ ಪಿರಿಯರ್ಭೂಪಾಲರೊಳ್ಮತ್ತಮಾ
ಕುಲಜರ್ಗಗ್ಗದ ಪೊಂಗೆ ಕಂಪೆನಿಪವೊಲ್ ದೇವಂ ಜಿನಾಧೀಶ್ವರಂ
ಕುಲದೈವಂ ಗಡಮೆಂದೊಡಿಂ ನೆಱೆಯೆ ಭಾಪಮ್ಮಮ್ಮ ಬಣ್ಣಿಪ್ಪರಾ
ರೆಲೆ ಭಾವಿಪ್ಪೊಡೆ ಪಾಂಡ್ಯದೇಶಜರೆ ಧನ್ಯರ್ ನೋಡೆ ಭೂಚಕ್ರದೊಳ್ ೭೧

ಗದ್ಯ॥ ಎಂದು ಮತ್ತಂ ೭೨

ಈ ನರೇಶ್ವರ ಧರ್ಮಬುದ್ಧಿಯುಮಂ ವ್ರತಂಗಳ ಪೆಂಪುಮಂ
ಹೀನಮಪ್ಪ ನೆಗಱ್ತೆಯೊಳ್ ಖತಿಯುನ್ನತಿಕ್ಕೆಯ ಗುಣ್ಪುಮಂ
ತಾನೆ ಕೇಳದೆ ಪೇೞ್ಗುಮೋಳಿಯೊಳೊಪ್ಪುವೀ ಜಿನಬಿಂಬಮೆಂ
ದಾ ನರೇಶ್ವರನಲ್ಕಱಿಂ ಪೊಗೞ್ದಂ ಮಹೀವಳಯೇಶನಂ ೭೩

ಗದ್ಯ॥ ಎಂದು ಪೊಗೞ್ದು ಪುರದ ಮಹಿಮೆಗೆ ಆಶ್ಚರ್ಯಂಬಟ್ಟು ೭೪

ನೋಡದಿರನ್ಯಕಾಂತೆಯರುಮಂ ಪದೆದಲ್ಕಱಿನಂತೆ ಪೆರ್ಚಿ ಮಾ
ತಾಡದಿರೊಂದುಮಂ ಮಱೆದು ಪೆರ್ಬುಸಿಯುಂ ದುರಿತಾನ್ವಿತರ್ಕಳೊಳ್
ಕೂಡದಿರೆಂಬ ಮಾತುಗಳನಲ್ಲದೆ ಕೇಳ್ಕುದೃಷ್ಟಿಯೆಂದು ಮಾ
ತಾಡಿಸಬಾರದೀ ಪುರದೊಳೆಂದೊಡೆ ಧರ್ಮಮನೇನನೆಂಬೆನೋ ೭೫

ಗದ್ಯ॥ ಎಂದು ಪುರದೊಳಾದ ಸತ್ಪುರುಷರುಮಂ ಪೊಗೞ್ದು ೭೬

ಮಹಾರಾಜನು ಪಾಂಡ್ಯವಂಶ ಚೂಡಾಮಣಿಯ ಸಮ್ಯಕ್ತ್ವವನ್ನು ಮೆಚ್ಚಿ ಹೀಗೆ ಭಾವಿಸಿದನು: ೭೦. "ಪಾಂಡ್ಯರಾಜರಲ್ಲವೆ ಭೂಮಿಯ ಮೇಲೆ ಕುಲದಲ್ಲಿ ಹಿರಿಯರು? ಅಲ್ಲದೆ ಆ ಕುಲಜರಿಗೆ ಶ್ರೇಷ್ಠವಾದ ಹೊನ್ನಿಗೆ ಸುವಾಸನೆಯೆನ್ನಿಸುವಂತೆ ಜಿನಾಧೀಶ್ವರೇ ದೇವರು, ಕುಲದೈವ, ಹೀಗೆಂದ ಮೇಲೆ ಪಾಂಡ್ಯರಾಜನ ವೈಭವವನ್ನು ಪೂರ್ಣವಾಗಿ ವರ್ಣಿಸಬಲ್ಲವರು ಯಾರು? ಪಾಂಡ್ಯ ದೇಶದ ಜನರೇ ಧನ್ಯರು" ಹೀಗೆಂದು ಹೊಗಳಿದನು. ೭೧-೭೨. ಈ ರಾಜನ ಧರ್ಮಬುದ್ಧಿ, ವ್ರತಗಳ ಹೆಚ್ಚಳ, ಹೀನಕಾರ್ಯದಲ್ಲಿ ಕ್ರೋಧಾಧಿಕ್ಯ, ಮತ್ತು ಗುಣವನ್ನು ಈ ಸಾಲಾಗಿರುವ ಜಿನಬಿಂಬಗಳು ತಾವೇ ಯಾರೂ ಕೇಳದೆಯೇ ಹೇಳುತ್ತಿಲ್ಲವೆ! ಎಂಬಂದಾಗಿ ಆ ರಾಜನನ್ನು ಅಕ್ಕರೆಯಿಂದ ಹೊಗಳಿದನು. ೭೩. ಹೀಗೆಂದು ಹೊಗಳಿ ಪಟ್ಟಣದ ಮಹಿಮೆಗೆ ಆಶ್ಚರ್ಯಪಟ್ಟು ೭೪. ಅನ್ಯಸ್ತ್ರೀಯರನ್ನು ನೋಡಬೇಡ; ಆಸೆಪಟ್ಟು ಅಕ್ಕರೆಯಿಂದ ಮಾತನಾಡಿಸಬೇಡ, ಹುಸಿಯಿಂದಲೂ ದುರಿತ(ಪಾಪ)ಗಳಿಂದಲೂ ಕೂಡಿದವರೊಡನೆ ಮರೆತು ಕೂಡ ಏನೂ ಮಾತನಾಡಬೇಡ. ಅಂಥವರ ಸಂಗಡ ಸೇರಬೇಡ ಎಂಬ ಮಾತುಗಳಲ್ಲದೆ ಯಾರನ್ನೂ ಈ ನಗರದಲ್ಲಿ ಕುದೃಷ್ಟಿಯವರೆಂದು ಭಾವಿಸಿ ಮಾತನಾಡಿಸಬಾರದೆಂದಮೇಲೆ ಈ ನಗರದ ಧರ್ಮವನ್ನು ಏನೆಂದು ಹೊಗಳಲಿ?. ೭೬. ಜಿನಭಕ್ತಿಯಲ್ಲಿ ಈತನೇ ದೈವನೆಂದು ಭಾವಿಸಿ ಜಗತ್ತಿನ ಜನರು

ಜಿನಭಕ್ತಿಯೊಳುರ್ವಿಯೊಳೀ
ತನೆ ಬಗೆವೊಡೆ ದೇವನೆಂದು ಕೈಕೊಂಡು ಜಗ
ಜ್ಜನವೊಲ್ದು ಪೊಗೞೆ ಪಡೆದಂ
ಜನಾಧಿಪಂ ಪಾಂಡ್ಯದೇವನೆಂಬೀ ಪೆಸರಂ ೭೯

ಗದ್ಯ ॥ ಮನದಕ್ಕಱಿಂ ಚಿತ್ರವಾಹನಮಹಾರಾಜನಂ ಪೊಗೞ್ದು ಜಿನಭವನಮಂ ತ್ರಿಃಪ್ರದಕ್ಷಿಣಂಗೆಯ್ದು ನಿಷಿದ್ಧಿಯೊಳಗಂ ಪೊಕ್ಕು ದರ್ಶನಸ್ತುತಿಯಂ ಪೇೞ್ದು ಮುನಿಗುಪ್ತ ಭಟ್ಟಾರಕರಂ ಬಂದಿಸಿ ಪರಿವಿಡಿಯಿಂದುೞಿದ ಮುನಿವರರಂ ಬಂದಿಸಿ ಕುಳ್ಳಿರ್ದು ೭೮

ಮುನಿಕುಲ ಸರೋಜತರಣಿಗೆ
ಜಿನಸಮಯಾಂಬರ ನಿಶಾಕರಂಗನುಪಮಸ
ಜ್ಜನವಂದಿತಂಗೆ ದುರ್ಗುಣ
ವನನಿಧಿಬಡಬಾನಲಂಗೆ ಖಚರಾಧೀಶಂ ೭೯

ವಿನಯವಿನಮ್ರಮುಖನಾಗಿ ಕೈಮುಗಿದಿರ್ದು ತನ್ನ ಬಂದ ಕಾರ್ಯಮಂ ಪೇೞ್ವುದುಂ ಮುನಿಗುಪ್ತಭಟ್ಟಾರಕರಿಂತೆಂದರ್ ೮೦

ಮಗನೆ ತಪಂ ಪೊಗ್ಗಲ್ಲದು
ಜಗದೊಳ್ ವೈರಾಗ್ಯಮಿಲ್ಲದಂಗಾತಪಮು
ಬ್ಬೆಗಮಂ ಮಾಡುಗುಮಲ್ಲದೆ
ಖಗೇಶ ಪೆಱತೊಂದು ಸೌಖ್ಯಮಂ ಮಾಡುಗುಮೇ ೮೧

ಪ್ರೀತಿಯಿಂದ ಹೊಗಳಲು ಈ ರಾಜನು ಪಾಂಡ್ಯದೇವನೆಂಬ ಹೆಸರನ್ನು ಹೊಂದಿದ್ದಾನೆ. ೭೭. ಎಂದು ಮನಸ್ಸಿನ ಪ್ರೀತಿಯಿಂದ ಚಿತ್ರವಾಹನ ಮಹಾರಾಜನು ಹೊಗಳುತ್ತ ಜಿನಭವನಕ್ಕೆ ಮೂರು ಸಲ ಪ್ರದಕ್ಷಿಣೆ ಮಾಡಿ ನಿಷಿಧಿಯೊಳಕ್ಕೂ ಪ್ರವೇಶಿಸಿ ದರ್ಶನಸ್ತುತಿಯನ್ನೂ ಹೇಳಿ ಗುಪ್ತರೆಂಬ ಭಟ್ಟಾರಕರಿಗೆ ವಂದನೆಗಳನ್ನು ಸಲ್ಲಿಸಿ ಕ್ರಮಪ್ರಕಾರವಾಗಿ ಉಳಿದ ಮುನಿಶ್ರೇಷ್ಠರನ್ನೂ ವಂದಿಸಿ ಕುಳಿತುಕೊಂಡು ೭೮. ಆ ಮುನಿಕುಲ ಕಮಲಗಳಿಗೆ, ಸೂರ್ಯನಂತೆ ಇದ್ದ. ಸಜ್ಜನರ ವಂದನೆಗೆ ಪಾತ್ರನಾದ ಜಿನಧರ್ಮವೆಂಬ ಆಕಾಶಕ್ಕೆ ಚಂದ್ರನಂಥ ಅನುಪಮನಾದ, ದುರ್ಗುಣಗಳೆಂಬ ಸಮುದ್ರಕ್ಕೆ ಬಡಬಾಗ್ನಿ ಸ್ವರೂಪನಾಗಿದ್ದ ಭಟ್ಟಾರಕನಿಗೆ ಖೇಚರರಾಜನು, ೭೯. ವಿನಯದಿಂದ ಬಾಗಿ ಕೈಮುಗಿದು ತಾನು ಬಂದ ಕೆಲಸವನ್ನು ತಿಳಿಸುತ್ತಲೇ ಮುನಿಗುಪ್ತ ಭಟ್ಟಾರಕರು ಹೀಗೆ ಹೇಳಿದರು. ೮೦. ಮಗನೆ, ತಪಸ್ಸು ಸುಲಭವಾದುದಲ್ಲ. ಜಗತ್ತಿನಲ್ಲಿ ವೈರಾಗ್ಯವಿಲ್ಲದವನಿಗೆ ಆ ತಪಸ್ಸು ಬಹಳ ಸಂಕಟವನ್ನುಂಟು ಮಾಡುತ್ತದೆ. ಅಲ್ಲದೆ ಖೇಚರರಾಜ, ಅದು ಬೇರೊಂದು ಸೌಖ್ಯವನ್ನು ನೀಡುವುದಿಲ್ಲ. ೮೧. ಹಿಡಿಯುನ್ನು ಬಿಡಿಸಲು ಹೋದ ಪಿಶಾಚಿ ಖಂಡುಗದಷ್ಟು ಎಣ್ಣೆ

ಗದ್ಯ॥ ಪಿಂಡಿಯುಂ ಬಿಡಿಸಪೋದ ಮರುಳ್ ಖೇಡುಗೆಣ್ಣೆಯನಾಂತು ಬಂದುದೆಂಬ ನಾಣ್ಣುಡಿಯಂತೆ ಮರ್ಕಟವೈರಾಗ್ಯದಿಂ ಶ್ರುತಿವಿಹೀನರಪ್ಪವರ್ ಸ್ವರ್ಗಾಪವರ್ಗ ಸುಖಮಂ ಬಯಸಿ ಜಿನದೀಕ್ಷೆಯಂ ಕೈಕೊಂಡು ತಪದ ಜೀವಸಕ್ಕಾಱದೆ ಪ್ರಚ್ಛನ್ನದೋಷಿಗಳಾಗಿ ಮಱುಭವದೊಳ್ಪಿರಿದಪ್ಪ ದುಃಖಮಂ ಪೊರ್ದುವರದಱಿಂ ೮೨

ನೀರುಂ ಪುಳ್ಳಿಯುಂ ಕಿಚ್ಚು ಮ
ದಾರಯ್ವೊಂದಡುವ ಲಲನೆಯುಂ ಮಡಕೆಯುಂ ವಿ
ಸ್ತಾರದೊಳೊಲೆಯುಮಿವೆಲ್ಲ ಮ
ದೋರಂತೊಡಗೂಡೆ ಕೂಟನಡುವಂತೆ ವಲಂ ೮೩

ಗದ್ಯ ॥ ಅದೆಂತೆಂದೊಡಷ್ಟಾವಿಂಶತಿಮೂಲಗುಣಮುಂ ಪದಿಮೂಱು ತೆಱದ ಚಾರಿತ್ರಮುಂ ದರ್ಶನಮುಂಬೆರಸು ಮೋಕ್ಷಮುಂ ಸಾಧಿಸುವುದು ೮೪

ಇವಱೊಳಗೊಂದು ಗುಣಂ ಹೀ
ನವಾಗೆ ಕೈವಲ್ಯಮಿಲ್ಲ ಕೇಳದಱಿಂ ಭೂ
ಭವನದೊಳದಕ್ಕೆ ತಪದೊಳ್
ವಿವೇಕಿಯೆನಿಸಿದನೆ ನೆಗಟ್ಟುದನಿತುಂ ಗುಣದೊಳ್ ೮೫

ಗದ್ಯ ॥ ಅದೆಂತೆಂದೊಡೆ ನೀರನುಂ ಪುಳ್ಳಿಯುಮಂ ಅಕ್ಕಿಯುಮಂ ಆಡುವನುಮಂ ಕಿಚ್ಚು ಮನೊಲೆಯುಮಂ ಮಡಕೆಯುಮಂ ಕೂಡಿಸುವಲ್ಲಿ ಇವಱೊಳವೊಂದಿಲ್ಲದೊಡಂ ಕೂಟಾಗದೆ

ಯನ್ನು ಹೊತ್ತು ಬಂದಿತು ಎಂಬ ಗಾದೆಯಂತೆ ಮರ್ಕಟವೈರಾಗ್ಯದಿಂದ(ಚಪಲಚಿತ್ತನ ವಿರಕ್ತಿ) ಶಾಸ್ತ್ರಹೀನರಾದವರು ಸ್ವರ್ಗಮೋಕ್ಷಗಳ ಸುಖವನ್ನು ಬಯಸಿ ಜಿನದೀಕ್ಷೆಯನ್ನು ಸ್ವೀಕರಿಸಿ ತಪಸ್ಸಿನ ಜೀವನಕ್ಕೆ ಶಕ್ತನಾಗದೆ ಪ್ರಚ್ಛನ್ನದೋಷಿ(ಗುಟ್ಟಾಗಿದೋಷಿ)ಗಳಾಗುತ್ತಾರೆ, ಅಂಥವರಿಗೆ ಮುಂದಿನ ಜನ್ಮದಲ್ಲಿ ಹೆಚ್ಚಾದ ದುಃಖ ಬರುತ್ತದೆ. ೮೨. ಆದ್ದರಿಂದ ನೀರು, ಸೌದೆ, ಬೆಂಕಿ, ಅಡಿಗೆಮಾಡುವ ಹೆಂಗಸೂ ಮಡಕೆಯೂ ಅನುಕೂಲವಾದ ಒಲೆಯೂ ಇವೆಲ್ಲ, ಒಟ್ಟಿಗೆ ಸಿಕ್ಕಿದರೆ ಅನ್ನವನ್ನು ಬೇಯಿಸುವಂತೆ ೮೩. ಇಪ್ಪತ್ತೆಂಟು ಮೂಲ ಗುಣಗಳೂ ಹದಿಮೂರು ಬಗೆಯ ನಡೆವಳಿಕೆಗಳೂ ದರ್ಶನವೂ ಸೇರಿ ಮೋಕ್ಷವನ್ನು ಸಾಧಿಸಬೇಕು ೮೪. ಇವುಗಳಲ್ಲಿ ಒಂದು ಗುಣ ಕಡಿಮೆಯಾದರೂ ಕೈವಲ್ಯ ಸಿಕ್ಕುವುದಿಲ್ಲ. ಆದ್ದರಿಂದ ಈ ಪ್ರಪಂಚದಲ್ಲಿ ಎಲ್ಲ ಗುಣಗಳನ್ನೂ ಪಡೆದುಕೊಂಡು ವಿವೇಕಿಯಾದವನೇ ತಪಸ್ಸಿಗೆ ನಿಲ್ಲಬಹುದು ೮೫. ಅದು ಹೇಗೆಂದರೆ ನೀರನ್ನೂ ಸೌದೆಯನ್ನೂ ಅಕ್ಕಿಯನ್ನೂ ಅಡಿಗೆಯವನನ್ನೂ ಬೆಂಕಿಯನ್ನೂ ಒಲೆಯನ್ನೂ ಮಡಕೆಯನ್ನೂ ಒಟ್ಟುಗೂಡಿಸುವಾಗ ಇವುಗಳಲ್ಲಿ ಒಂದರ ಕೊರತೆಯಾದರೂ ಅನ್ನವಾಗದೆ ಕೆಟ್ಟುಹೋಗುವುದು.

ಕಿಡುವಂತೆ ಮೂಲಗುಣಂಗಳೊಳೊಂದು ಗುಣಮಾದೊಡಂ ಹೀನಮಾದೊಡೆ ಕೈವಲ್ಯ ಸುಖಂ ಸಮನಿಸಲಱಿಯದು ೮೬

ಮೂಲಗುಣಮಾದಿ ಸಕಲಗು
ಪಾಳಿಯೊಳಂ ಕಿಡದೆ ನೆಗಟ್ವುದೇಗೆಟ್ಟತ್ತೆಂ
ದೇೞಿಸಿಯೊಂದಱೊಳಂ
ಕೀೞಾದೊಡೆ ತನಗೆ ಪರದ ಸುಖಮದು ಕಿಡುಗುಂ ೮೭

ಪಲವುಂ ಶಾಸ್ತ್ರಮನೋದಿದ
ಬಲದಿಂ ಮೆಯ್ವೆರ್ಚಿ ಗರ್ವದಿಂ ಧರ್ಮದ ಪಂ
ಬಲನುೞಿದು ಪಿರಿಯರಪ್ಪರ
ನೆಲೆಯಂ ಕೈಕೊಳ್ಳದುದ್ಧತಂ ಮುನಿಯಲ್ಲಂ ೮೮

ತನಗೆ ಸೊಗಯಿಸದ ವಸ್ತುಗೆ
ಳನಿತುಮನಿಂಬಾಗೆ ತೋಱಿದು ಪುಱುಡಿಸಿ ಪೆಱನಾ
ವನೊ ಪೊಲ್ಲಮೆಂದೊಡಂತಾ
ತನುಮಂ ಕೈಕೊಳ್ಳದಾತನುಂ ಮುನಿಯಲ್ಲಂ ೮೯

ಕೂಸುಗಳಂ ಮುದ್ದಾಡಿಸಿ
ದೇಸಿಯ ಮಾತುಗಳನಾಡಿ ಪರ್ಚಿಸಿ ಪೆಱರಂ
ಲೇಸಾಗಿ ತನಗೆ ಜೊತ್ತಿಸು
ವಾಶಾಪರನೈದಲಾಱನುರು ನಿರ್ವೃತಿಯಂ ೯೦

ಹಾಗೆ ಮೂಲ ಗುಣಗಳಲ್ಲಿ ಒಂದು ಗುಣಹೀನವಾದರೂ ಕೈವಲ್ಯಸುಖ ಸಂಪ್ರಾಪ್ತಿಯಾಗುವುದಿಲ್ಲ ೮೬. ಮೂಲಗುಣಗಳನ್ನು ಮೊದಲು ಮಾಡಿಕೊಂಡು ಸಕಲ ಗುಣ ಸಮೂಹದಲ್ಲಿಯೂ ಕೆಡದೆ ಮಾಡಬೇಕು. "ಏನು ಕೆಟ್ಟುಹೋಯಿತು ?" ಎಂದು ತಿರಸ್ಕಾರಮಾಡಿ ಒಂದರಲ್ಲಿ ಕೀಳಾದರೆ ಅಂಥವನಿಗೆ ಪರಲೋಕದ ಸುಖವು ನಾಶವಾಗುವುದು ೮೭. ಹಲವು ಶಾಸ್ತ್ರಗಳನ್ನು ಓದಿದ ಬಲದಿಂದ ಮೈಕೊಬ್ಬಿ ಗರ್ವಪಟ್ಟು ಧರ್ಮದ ಹಂಬಲನ್ನು ಬಿಟ್ಟು ಹಿರಿಯರಾದವರ ಸಿದ್ಧಾಂತವನ್ನು ಅಂಗೀಕರಿಸದವನು ಕೊಬ್ಬಿದ (ಉದ್ಧತ)ವನೇ ಹೊರತು. ಮುನಿಯಲ್ಲ ೮೮. ತನಗೆ ಮೆಚ್ಚಿಗೆಯಾಗದ ಪದಾರ್ಥಗಳಷ್ಟನ್ನೂ ಸಂತೋಷವಾಗಿ ತೋರೆದು ಬೇರೆಯುವನು ಯಾರೋ ಸ್ಪರ್ಧೆಯಿಂದ 'ಇದು ಕೆಟ್ಟದ್ದು' ಎಂದರೆ ಅದನ್ನು ಕೈಕೊಳ್ಳದವನು (ಕೇಳಿ ಅದನ್ನು ವಿಮರ್ಶಿಸದವನು) ಮುನಿಯಲ್ಲ ೮೯. ಮಕ್ಕಳನ್ನು ಮುದ್ದಾಡಿ ಆಡಿಸುತ್ತ ಚಮತ್ಕಾರದ ಮಾತುಗಳಾಡಿ, ಉಬ್ಬಿಸಿ ಇತರರನ್ನು ತನ್ನ ಸಂಗಡ ಜತೆಮಾಡಿಕೊಂಡು ಆಶ್ರಯ ಮಾಡುವ ಆಶಾಪರನು ಶ್ರೇಷ್ಠವಾದ ಮೋಕ್ಷವನ್ನು ಹೊಂದಲಾರನು ೯೦. ಜತೆಯ

ಒಡನೆಯು ಋಷಿಯುಂ ಕಳೆದೋ
ಗಡಿಸದೆ ಗೃಹಪತಿಗಮವನ ಪೆಂಡತಿಗಂ ನೇ
ರ್ಪಡೆ ಪೆಱರನಟ್ಟಿ ದೂಷಿಸಿ
ನುಡಿವ ದಿಗಂಬರನವೋಘಮೆಯ್ದಂ ಸುಖಮಂ ೯೧

ತಡೆಯದೆ ಜಿನಪೂಜೆಗಳಂ
ಕಿಡಿಸಿ ಮನಂಪೆರ್ಚಿ ತನ್ನ ಪಕ್ಷದ ಮನೆಗ
ಳ್ಗಡಿಗಡಿಗಟ್ಟುವ ಮುನಿಪಂ
ಕಿಡುಗುಂ ಮೇಲಪ್ಪ ದೇವನಿಳಯದ ಸುಖಮಂ ೯೨

ನೀನೆಮ್ಮ ಗುಡ್ಡನೈ ಪೆಱ
ತೇನೆಂಬುದು ಪೆಱರ್ಗೆ ಭಕ್ತಿ ಮಾಡಲ್ವೇಡಂ
ದೇನೊ ಬಿಡೆ ಜಡಿದು ಮಾಣಿಪ
ಹೀನಗುಣಂಗೆಱಗಲಾಗದಱಿವುಳ್ಳ ನರಂ ೯೩

ಉಗುರಂ ಮಸೆಯಿಸಿ ಗುರುಮಂ
ಬಗೆಯದೆ ಜಿನವಚನ ರಚನೆಯಂ ಮಱೆಯಿಸಿ ಕೆ
ಮ್ಮಗೆ ತಮ್ಮಿಚ್ಛೆಗೆ ಕಥೆಯಂ
ಬಗೆಗೊಳ್ಗಿಂತಂತೆ ಪೇಟ್ವನುಂ ಮುನಿಯಲ್ಲಂ ೯೪

ಋಷಿಯುನ್ನು ಘೀನೈಸಿ ಅಲ್ಲಗಳೆಯದೆ, ಗೃಹಸ್ಥನಿಗೂ ಅವನ ಹೆಂಡತಿಗೂ ತನ್ನಲ್ಲಿ ಸ್ನೇಹವಾಗುವಂತೆ ಇತರರನ್ನು ಕಳುಹಿಸಿ ದೂಷಿಸುವ ಮಾತುಗಳನ್ನಾಡುವ ದಿಗಂಬರ (ಜೈನಯತಿ)ನು ಖಂಡಿತವಾಗಿ ಸುಖವನ್ನು ಹೊಂದಲಾರ ೯೧. ಜಿನಪೂಜೆಗಳಿಗೆ ವಿಘ್ನ ಮಾಡಿ ಸಾವಕಾಶವಿಲ್ಲದೆ ಮನವುಬ್ಬಿ ತನ್ನ ಕಡೆಯುವರ ಮನೆಗಳಿಗೆ ಹೇಳಿ ಕಳುಹಿಸುವ ಮುನಿಯು ಮೇಲೆ ದೇವಲೋಕದ ಸುಖವನ್ನು ಕಳೆದುಕೊಳ್ಳುತ್ತಾನೆ ೯೨, "ನೀನು ನಮ್ಮ ಶಿಷ್ಯನಯ್ಯ ! ಬೇರೇನು 'ಹೇಳಲಿ, ಇತರರಲ್ಲಿ ನೀನು ಭಕ್ತಿಮಾಡಬೇಡ"ವೆಂದು ಗದರಿಸಿ ನುಡಿಯುತ್ತ ಅವರನ್ನು ಇತರ ಮುನಿಗಳಿಂದ ಬಿಡಿಸುವ ಹೀನ ಗುಣದವನಿಗೆ ಜ್ಞಾನವಂತನಾದ ಮನುಷ್ಯನು ಒಲಿಯಬಾರದು. ೯೩. ಉಗುರನ್ನು ಮಸೆದು ಗುರು ವನ್ನು ಲೆಕ್ಕಿಸದೆ ಜಿನವಾಕ್ಯದರ್ಥವನ್ನು ಮರೆಸಿ ಸುಮ್ಮನೆ ತಮ್ಮ ಆಸೆಗೆ ತಕ್ಕಂತೆ ಮನವೊಲಿಸುವ ಕಥೆ ಹೇಳುವವನೂ ಮುನಿಯಲ್ಲ ೯೪. ತನ್ನ ಕಡೆಯುವರ

ತನ್ನಯ ಸಮುದಯಮಂ ಪೊಗ
ೞ್ವನ್ನೆಱೆ ಕೈಕೊಂಡು ಪೆಱರ ಸಮುದಾಯಮನ
ತ್ಯನ್ನತಿಗಿಡೆ ಪೞಿಯುತ್ತಿ
ರ್ಪನ್ನಂ ನರಕಕ್ಕಮಿೞಿಗುಮೆಂಬುದು ಸತ್ಯಂ ೯೫

ಪೆಱರೊಳ್ಳಿದರಾದೊಡಮೇ
ತಱ ತಪಸಿಗಳೆಂದು ಪೞಿವನುಂ ತನ್ನವರಂ
ಪೆಱತೇಂ ದುರ್ಜನರಾದೊಡ
ಮುಱೆ ಮನದೊಳಿರ್ಕ್ಕೆರ್ತು ಪೊಗೞ್ವನುಂ ಮುನಿಯಲ್ಲಂ ೯೬

ಮೆಲ್ಲನೆ ಚರ್ಚಿಸಿ ನೀನಿವ
ರ್ಗಲ್ಲದೆ ಬೆಸಗೆಯ್ಯವೇಡ ಪೆಱರಿವರಿಂ ಬಿ
ಟ್ಟೊಳ್ಳಿವರಾರೀ ಧರೆಯೊಳ
ಗಿಲ್ಲೆಂದುಱೆ ನಚ್ಚಿಪಾತನುಂ ಮುನಿಯಲ್ಲಂ ೯೭

ಬಗೆವಂದೀ ಬಾಡೀ ಕೂ
ೞಗಣಿತ ರುಚಿಯಾದುವಕ್ಕ ನಿನ್ನಂತಾರೀ
ಜಗದೊಳಡಬಲ್ಲರೆನ್ನುತೆ
ಮಿಗೆ ಪೊಗೞ್ದುಂಬವನೆ ಋಷಿಯರೊಳ್ ಬೂತೆನಿಕಂ ೯೮

ಗುಣವನ್ನು ಹೊಗಳುತ್ತ ಇತರರ ಗುಣವನ್ನು ಪ್ರಯತ್ನಪೂರ್ವಕವಾಗಿ ತನ್ನ ಘನತೆಯನ್ನು ಮರೆತು ದೂಷಿಸುತ್ತಿರುವವನು ನರಕಕ್ಕೆ ಇಳಿಯುವನೆಂಬುದು ಸತ್ಯ ೯೫. ಬೇರೆಯವರು ಒಳ್ಳೆಯವರಾದರೂ 'ಏತರ ತಪಸ್ವಿಗಳು' ? ಎಂದು ಹಳಿಯುವವನೂ ತನ್ನವರು ದುರ್ಜನರಾಗಿದ್ದರೂ ಪ್ರೀತಿಯಿಂದ ಅವರನ್ನು ಹೊಗಳುವವನೂ ಮುನಿಯಲ್ಲ ೯೬. ಉಪಾಯವಾಗಿ ಚರ್ಚೆ ಹೂಡಿ "ನೀನು ಇವರಿಗಲ್ಲದೆ ಸೇವೆ ಮಾಡಬೇಡ. ಇವರನ್ನು ಬಿಟ್ಟರೆ ಇನ್ನು ಬೇರೆ ಯಾರೂ ಒಳ್ಳೆಯವರಿಲ್ಲ" ಎಂದು ಬಹಳವಾಗಿ ಒಲಿಸಿಕೊಳ್ಳುವವನೂ ಮುನಿಯಲ್ಲ. ೯೭. ಯೋಚಿಸಿದರೆ, "ಈ ವ್ಯಂಜನ, ಈ ಅನ್ನ, ಬಹಳ ರುಚಿಯಾಗಿವೆಯಕ್ಕಾ! ನಿನ್ನಹಾಗೆ ಅಡಿಗೆ ಮಾಡಬಲ್ಲರು ಈ ಜಗತ್ತಿನಲ್ಲಿ ಬೇರೆ ಯಾರಿದ್ದಾರೆ ?" ಎಂದು ಹೆಚ್ಚಾಗಿ ಹೊಗಳುತ್ತ ಊಟ ಮಾಡುವವನು ಋಷಿಗಳಲ್ಲಿ ಅಲ್ಪನೆನಿಸುವನು. (ನಾಚಿಕೆಗೆಟ್ಟವ) ೯೮. ಅಲ್ಲದೆ, ಋಷಿಗಳ ಗುಣವನ್ನು

ಗದ್ಯ॥ ಮತ್ತಂ ಋಷಿಯರ ಗುಣಮಂ ಪೇೞ್ವೊಡೆ :—ಪಾದರಿಗೆಯ ದೂದವಿಯಂತೆ ಪೆಱರಂ ಸಂಕೇತಂಗೊಳಿಸದೆ ಮನ್ನೆಯರಾಳಂತೆ ಕೋಳಿಂಗಾಸೆಗೆಯ್ಯದೆ ಬಯಲ ನೀರಂತೆ ಮಾರ್ಗಂ ಬಿಟ್ಟು ನಡೆಯದೆ ಕೊಣನಂತೆ ಇರ್ದ ಸಮುದಾಯಮಂ ಕದಡದೆ ಕರಡಿಯಂತೆ ಪಿರಿಯರ ನುಡಿಗೆಡೆವಾಯದೆ ಪುಲ್ಲೆಯಂತೆ ಗುಣವಂತರ ಕೂಟಕ್ಕೆ ಬೆದರದೆ ಒಡೆದ ಪಾಲಂತೆ ಮೂಲಗುಣಂಕಿಡೆದೆ ನೀರೊಳ್ಪೊಕ್ಕೆಣ್ಣೆಯಂತೆ ಪೆಱರ ದೋಷಮಂ ಪರಪದೆ ಪುಲಿಯ ಬಾಲದಂತೆ ಗುರುವಚನಮಂ ಮೀಱದೆ ಮುಗಿಲಂತೆ ಪೊತ್ತಿಗೊಂಡು ಬಣ್ಣಮಾಗದೆ ಕೋಡಗದಂತೆ ಕಂಡ ಕಂಡವರನೇಳಿಸದೆ ದೇಸಿಗನಂತೇಕಾಕಿಯಾಗದೆ ತೊಱೆಯೊಳ್ಮಿಂದನಂತೆ ಪರೀಷಹಕ್ಕೆ ನಡುಗದೆ ಬೂತಿನಂತೆ ಪೆಱರವಗುಣಮಂ ದೂಱದೆ ಸೂಳೆಯಂತೆ ಚೆನ್ನಂ ಮೆಱೆಯದೆ ಬಾಲಕನಂತೆ ಪೊಲ್ಲಮಂ ಪಿಡಿಯದೆ ಪಚ್ಚೆಯ ಕಟ್ಟಿಗೆಯಂತೆ ಖಳರ ನುಡಿಗಳ್ಳಾಡದೆ ಇೞಿವೊಲದ ನೀರಂತೆ ಕುಪಥಕ್ಕೆಱಗದೆ ಪುತ್ತಿನಂತೆ ತಪದೊಳ್ಮೇಲಸಿಯನಾಗದೆ ಕಱೆಯದ ಮರನಂತೆ ವಕ್ರನಾಗದೆ ಬಾಲೆಯಂತೆ ತಪದ ಕ್ಲೇಶಕ್ಕೆ ಬೆಂಡಾಗದೆ ಸಂಜೆಯಂತೆ ಪೊಲ್ಲ ವಸ್ತುವಿನೊಳ್ ರಾಗಿಯಾಗದೆ ಉಕ್ಕಿನಂತತಿನಿಷ್ಠುರನಾಗದೆ ಪೞೆಯ ಸೀರೆಯಂತೆ ಗುಣದೊಳ್ ನೂನಮಾಗದೆ ಕಾಗೆಯಂತೆ ಗೋತ್ರ ಕಲಹಮಂ ಮಾಡದೆ ತೊೞ್ತಿನಂತೆ ಪೆಱರ ವಶಮಾಗದೆ ಕೂಲಿಯ ಬಂಟನಂತೆ

ಹೇಳುವುದಾದರೆ, ಹಾದರಗಿತ್ತಿಯ ದೂತಿಯಂತೆ ಇತರರನ್ನು ಸಂಕೇತಕ್ಕೆ (ಒಪ್ಪಂದ) ಸಿಕ್ಕಿಸದೆ, ಪಾಳೆಯಗಾರರ ಆಳಿನಂತೆ ಲೂಟಿಗೆ ಆಸೆಪಡದೆ, ಬಯಲಿನ ನೀರಿನ ಹಾಗೆ ದಾರಿಬಿಟ್ಟು ನಡೆಯದೆ, ಕೋಣದ ಹಾಗೆ ಇದ್ದಗುಂಪನ್ನು ಅಶಾಂತಿಗೀಡುಮಾಡದೆ, ಕರಡಿಯಂತೆ ಹಿರಿಯರ ಮಾತಿಗೆ ಮಧ್ಯೆ ನುಗ್ಗದೆ, ಜಿಂಕೆಯಹಾಗೆ ಗುಣ (ಬಿಲ್ಲಿನ ಹಗ್ಗ) ವಂತರ ಸಂಘಕ್ಕೆ ಹೆದರದೆ, ಒಡೆದ ಹಾಲಿನಂತೆ ಸಹಜವಾದ ಮೂಲಗುಣವನ್ನು ಕಳೆದುಕೊಳ್ಳದೆ, ನೀರಿನಲ್ಲಿ ಬಿದ್ದ ಎಣ್ಣೆಯ ಹಾಗೆ ಇತರರ ದೋಷವನ್ನು ಹರಡದೆ, ಹುಲಿಯ ಬಾಲದಂತೆ ಗುರುವಾಕ್ಯವನ್ನು ಮೀರದೆ, ಮೋಡದಂತೆ ಹೊತ್ತಿಗೊಂದು ಬಣ್ಣವನ್ನು ಹೊಂದದೆ, ಕೋತಿಯಂತೆ ಕಂಡವರನ್ನೆಲ್ಲ ಅಣಕಿಸದೆ. ಭಿಕ್ಷುಕನ ಹಾಗೆ ಒಬ್ಬಂಟಿಗನಾಗದೆ, ನದಿಯಲ್ಲಿ ಸ್ನಾನ ಮಾಡಿದವನಹಾಗೆ ಕಷ್ಟ (ಪರೀಷಹ)ಕ್ಕೆ ನಡುಗದೆ, ಅಲ್ಪನಂತೆ ಇತರರ ದೋಷಗಳನ್ನು ದೂರದೆ ಸೂಳೆಯಹಾಗೆ ಸೌಂದರ್ಯವನ್ನು ಪ್ರದರ್ಶನ ಮಾಡದೆ, ಹುಡುಗನಂತೆ ಕೆಟ್ಟುದನ್ನು ಹಿಡಿಯದೆ, ಊರು ಗೋಲಿನಂತೆ (?) ನೀಚರ ಮಾತಿಗೆ ಅಲುಗಾಡದೆ, ತಗ್ಗುನೆಲ (ಇಳಿಜಾರು)ದ ನೀರಿನಂತೆ ಕೆಟ್ಟದಾರಿಗೆ ಇಳಿಯದೆ ಹುತ್ತದಂತೆ ತಪಸ್ಸಿನಲ್ಲಿ ಹೊರಗೆ ಕೃಶನಾಗದೆ, ಕತ್ತರಿಸದ ಮರದಂತೆ ಸೊಟ್ಟನಾಗದೆ, ಹುಡುಗಿಯ ಹಾಗೆ ತಪಸ್ಸಿನ ಕಷ್ಟಕ್ಕೆ ಬೆಂಡಾಗದೆ, ಸಂಜೆಯಹಾಗೆ ಕೆಟ್ಟವಸ್ತುವಿನಲ್ಲಿ ರಾಗ (ಕೆಂಬಣ್ಣ, ಪ್ರೇಮ) ವುಳ್ಳವನಾಗದೆ, ಉಕ್ಕಿನಹಾಗೆ ಬಹಳ ನಿಷ್ಠುರ (ಗಟ್ಟಿ, ಕ್ರೂರ) ನಾಗದೆ, ಹಳೆಯ ಸೀರೆಯಂತೆ ಗುಣ (ದಾರ)ದಲ್ಲಿ ಕೊರತೆಯಾಗದೆ, ಕಾಗೆಯ ಹಾಗೆ ಇತರರಿಗೆ ಹಿಂಸೆಯನ್ನು ಮಾಡದೆ, ನಾಯಿಯಂತೆ ವಂಶದವರ (ಸ್ವಜಾತಿಯ)ಲ್ಲಿ ಜಗಳ ಮಾಡದೆ ತೊತ್ತಿನಹಾಗೆ ಇತರರ ವಶವಾಗದೆ, ಕೂಲಿಯ ಆಳಿನಂತೆ ಬೆಲೆಯನ್ನು ಎದುರು

ಬೆಲೆಯುಂ ಪಾರದ ಧಾೞಿಕಾಱನಂತಟ್ಟಿಟ್ಟವೋಗದೆ ರಾಜಪುತ್ರನಂತೆ ಲೀಲೆಯುಂ ಮಱೆಯದೆ ಸೂೞೆವೆಂಡತಿಯಂತೊಲ್ದೊಲಿಸದೆ ಗ್ರಹದಂತೆ ಬೇಡಿಕೊಂಡುಣ್ಣದೆ, ಮಕ್ಕಳಂತೆ ಕಾಡಿಯುಣ್ಣದೆ ಅರಸಾಳಿನಂತೆ ನೋಯಿಸಿಯುಣ್ಣದೆ, ಸೂಱೆಗಾಱನಂತೆ ಪೆಱರಂ ಕ್ಲೇಶಂಗೊಳಿಸದೆ ಬಟ್ಟೆಗುತ್ತನಂತೆ ಉಪವಾಸಮಂ ತೋಱಿ ಕಾಡದೆ ಭಟ್ಟನಂತೊಂದೊಂದಂ ತೋಱಿ ಬಯ್ಯದೆ, ವೈದ್ಯನಂತೆ ಕುತ್ತಮಂ ತೋಱಿ ಮುನಿಯದೆ ತೊೞಿಯಂತೆ ಮಳಮಂ ತೋಱಿ ಬೆರ್ಚಿಸದೆ ಕಿರ್ಚನಂತೆ ಅಡಕಮಂ ತೋಱಿ ನಂಬಿಸದೆ ದಾೞಿಯಂತೆ ಡಾಹಮಂ ಮಾಡಿ ಕಿಡಿಸದೆ ಪೊಟಲಂ ಪುಗುವುಡುವಿನಂತೆ ಜಿನೇಂದ್ರ ಮತಮಂ ಪತ್ತುವಿಕ್ಕದೆ ಬಡವನಂತೆ ಮನ್ನಣೆಗಾಸೆಗೆಯ್ಯದೆ ವ್ಯಂತರನಂತಱಿಪೂಜೆಗೆಱಗದೆ ದ್ರೋಹರಂತೆ ಗುಜುಗುಜುಗೊಳ್ಳದೆ ಪೆರ್ಗಣದಂತೆ ಪೊಸಖುಷಿಗೆ ಗುಱುಗುಱಿಸದೆ ಪುಲಿಯಂತೆ ಪೆಱರ್ಗುಪದ್ರವಂ ಮಾಡದೆ ಮಱಕುಟವಕ್ಕಿಯಂತೆ ಬಾಯುಂ ಬಡಿಯದೆ ತುಂಬಿಯಂತೆ ಕುಸುಮಪ್ರಿಯನಾಗದೆ ತರಗೆಲೆಯಂತೆ ಅಲ್ಲಲ್ಲಿಗೆ ಪಾರದೆ ತಳಾಱನಂತೆ ಪೆಱರ ಪೊಲ್ಲಮೆಯುಂ ಪಾರದ ಸೂೞೆಯ ಮನೆಯ ಗಿಳಿಯನಂತೆ ತನ್ನನೊಲ್ಲದವರಂ ಪೞಿದು ಒಲ್ವರಂ ಪೊಗೞದೆ ಪಾವಿನಂತೆ ಗೀತಕ್ಕೆಱಗದೆ ಪುಲುಬೂತಿನಂತೆ ಕಂಡರನೇನಾನುಮಂ ಬೇಡು

ನೋಡದೆ ದಾಳಿಕಾರನ ಹಾಗೆ ಅಟ್ಟಿಸಿಕೊಂಡು ಹೋಗದೆ, ರಾಜಪುತ್ರನಂತೆ ವಿನೋದವನ್ನು ಮರೆಯದೆ, ಸರದಿಯ ಹೆಂಡತಿ[1] (?) ಯಂತೆ ಒಲಿದು ಒಲಿಸದೆ, ಭೂತದಂತೆ ಬೇಡಿಕೊಂಡು ತಿನ್ನದೆ, ಮಕ್ಕಳ ಹಾಗೆ ಕಾಡಿಸಿ ತಿನ್ನದೆ, ಅರಸನ ಆಳಿನಹಾಗೆ ಇತರರನ್ನು ನೋಯಿಸಿ ಉಣ್ಣದೆ, ಬಟ್ಟೆಯ ರೋಗಿಯಂತೆ (ದಾರಿಯಲ್ಲಿ ಸಿಕ್ಕುವ ರೋಗಿಯೂ) ಉಪವಾಸವೆಂದು ಹೇಳಿಕೊಂಡು ಕಾಡಿಸದೆ, ಭಟ್ಟನಹಾಗೆ ಒಂದೊಂದನ್ನೂ ತೋರಿಸಿ ಬೈಯದೆ ವೈದ್ಯನಂತೆ ರೋಗವನ್ನು ತೋರಿಸಿ ಸಿಟ್ಟುಗೊಳ್ಳದೆ, ಹೊಲೆಯಂತೆ ಕೊಳೆಯನ್ನು ತೋರಿಸಿ ಅಂಜಿಸದೆ, ಕಿಚ್ಚಿನಂತೆ ಅಡಕವನ್ನು ತೋರಿಸಿ ಮೋಸಮಾಡದೆ, ದಾಳಿಯಹಾಗೆ ಸೇಡು ತೀರಿಸಿಕೊಂಡು ಕೆಡಿಸದೆ, ಪಟ್ಟಣವನ್ನು ಪ್ರವೇಶಿಸುವ ಉಡುವಿನಂತೆ ಜಿನೇಂದ್ರಮತವನ್ನು ಕಳಚಿಬಿಡದೆ, ಬಡವನಂತೆ ಮನ್ನಣೆಗೆ ಆಸೆಪಡದೆ, ಪಿಶಾಚನಂತೆ ನೀಚ ಪೂಜೆಗೆ ಸೋಲದೆ, ದ್ರೋಹಿಗಳಂತೆ ಗುಸುಗುಸು ರಹಸ್ಯಮಾಡದೆ ಹೆಗ್ಗಣದಂತೆ ಹೊಸ ಖುಷಿಗಳನ್ನು ಕಂಡು 'ಘರ್'ಎನ್ನದೆ, ಹುಲಿಯಂತೆ ಬೇರೆಯವರಿಗೆ ಹಿಂಸೆಮಾಡದೆ ಮರಕುಟಿಗನ ಹಕ್ಕಿಯಂತೆ ಬಾಯಿಬಡಿಯದೆ, ತುಂಬಿಯಂತೆ ಹೂಗಳಿಗೆ ಆಸೆಪಡದೆ, ತರಗೆಲೆಯಂತೆ ಅಲ್ಲಲ್ಲಿಗೆ ಹಾರದೆ (ಚಂಚಲನಾಗದೆ) ತಳವಾರನಂತೆ ಇತರರ ಕೆಟ್ಟದ್ದನ್ನೇ ಗಮನಿಸದೆ, ಸೂಳೆಯ ಮನೆಯ ಗಿಳಿಯ ಹಾಗೆ ತನಗೆ ಒಲಿಯದವರನ್ನು ಬೈದು ಒಲಿದವರನ್ನು ಹೊಗಳದೆ, ಹಾವಿನಂತೆ ಹಾಡಿಗೆ ಸೋಲದೆ, ಅಲ್ಪನಾದ ಮಾನಗೇಡಿಯಂತೆ ಇತರರಲ್ಲಿ ಏನನ್ನಾದರೂ ಬೇಡುತ್ತಿರದೆ, ಇರುವೆಯ ಹಾಗೆ ಕಂಪಿಗೆ ಸೋಲದೆ;

---

[1] ಬಹು ಪತ್ನೀಕರಲ್ಲಿ ಸರದಿಯಂತೆ ಪತಿಪತ್ನಿಗಳ ಸಮಾಗಮದ ಕಲ್ಪನೆಯಿರಬಹುದು.

ತ್ತಿರದೆ, ಇಱುಂಪೆಯಂತೆ ಕೆಂಪಿಗೆಱಗದೆ ಗಾಣದೆತ್ತಿನಂತೆ ನಿಯಮಂಗೆಟ್ಟು ತೊಟಲುತ್ತಿರದೆ ಆಲದ ಬಿಟಲಂತೆ ನೆಲಕ್ಕೆಱಗದೆ ಮರದ ಬಿಟಲಂತೆ ಪೊಂಗೆಱಗದೆ ಬಿಲ್ಲಾಳನಂತೆ ನಾರಿಗಾಸೆ ಮಾಡದೆ ಹಂಸೆಯಂತೆ ಸಾರಗ್ರಾಹಿಯುಂ, ಶರತ್ಕಾಲದ ತೊಱೆಯಂತೆ ನಿರ್ಮಳನುಂ, ಸಹಸ್ರಕಿರಣನಂತೆಲ್ಲರ್ಗಮೇಕರೂಪನುಂ, ತಂಗಾಳಿಯಂತೆ ಮೃದುಗಮನನುಂ, ಸಮುದ್ರದಂತೆ ನಿಸ್ಸಾರದೂರನುಂ, ಕೌಂಗಿನಂತೆ ವಕ್ರಗುಣರಹಿತನುಂ ಭಯದ ಬಟ್ಟೆಯೊಳ್ಪೋಪನಂತೆ ಸಂಸಾರಭೀತನುಂ, ತಂತ್ರಪಾಲನಂತೆ ಗುಣಪಾಲನುಂ ಬಲ್ಕೋಂಟೆಯಂತೆ ಮಿಥ್ಯಾತ್ವಕ್ಕಭೇದ್ಯನುಂ ಮುತ್ತಿನ ಸತ್ತಿಗೆಯಂತೆಲ್ಲಾ ದೆಸೆಯೊಳ್ ಸೇವ್ಯನುಂ ಪಡೆವಳನಂತೆ ಸಂವರಣಕಾಱನುಂ ಸತ್ಪುರುಷನಂತೆ ನಿರ್ಮತ್ಸರನುಂ ಶರ್ಕರೆಯಂತೆ ನಿಷ್ಕಷಾಯನುಂ ಕರುಣಾಳುವಪ್ಪರಸಿನಂತೆ ತ್ರಿದಂಡವರ್ಜಿತನುಂ ಮುಗಿಲಿಯಂತೆ ಸಕಲ ಜೀವನನುಂ ಯುದ್ಧಸನ್ನದ್ಧನಂತೆ ವೀರನುಂ ಬುದ್ಧಿಶಾಲಿಯಂತಾರೈಕೆಯುಳ್ಳನುಂ ದೂರದರ್ಶಿಯಂತೆ ಮೇಲನಱಿವವನುಂ ಬಲ್ಮಂತ್ರಿಯಂತೆ ಪ್ರಮಾದರಹಿತನುಂ ಮಂದರದಂತೆ ಕ್ಷಮಾನ್ವಿತನುಂ ಕುತ್ತಂಗುಳಿಯಂತೆ ಹಿತಾಹಾರನುಂ ಚಂದ್ರನಂತೆ ಶಾಂತರೂಪನುಂ ವಿವಾಹಕಾಲದಂತೆ ಶುಭೋದಯನುಂ ಮಂಗಲಚರಿತನಂತೆ ಕಲ್ಯಾಣವಚನನುಂ

ಗಾಣದ ಎತ್ತಿನಂತೆ ನಿಯಮತಪ್ಪಿ ತಿರುಗುತ್ತಿರದೆ, ಆಲದ ಬಿಳಲಿನ ಹಾಗೆ ನೆಲಕ್ಕೆ ಇಳಿಯದೆ, ಮರದ ಬಿಳಿಲಿನಂತೆ ಪೂನ್ನಿಗೆ ಇಳಿಯದೆ, ಬಿಲ್ಲುಗಾರನ ಹಾಗೆ ನಾರಿಗೆ (ಹೆಂಗಸು, ಹಗ್ಗ) ಆಸೆಪಡದೆ, ಹಂಸದಹಾಗೆ ಸಾರಗ್ರಾಹಿಯೂ, ಶರತ್ಕಾಲದ ಹೊಳೆಯಂತೆ ಪರಿಶುದ್ಧನೂ ಸೂರ್ಯನಂತೆ ಎಲ್ಲರಿಗೂ ಒಂದೇ ರೂಪವಾಗಿರುವವನೂ ತಂಗಾಳಿಯಹಾಗೆ ಮೆಲ್ಲಗೆ ಸಂಚರಿಸುವವನೂ ಸಮುದ್ರದಹಾಗೆ ನಿಸ್ಸಾರ (ಮರದ ತೊಗಟೆ-ಸಾರವಿಲ್ಲದ್ದು) ದಿಂದ ದೂರನೂ, ಅಡಿಕೆಯಂತೆ ವಕ್ರಗುಣವಿಲ್ಲದವನೂ (ಅಡಿಕೆಮರ ನೇರ) ಭಯದ ದಾರಿಯಲ್ಲಿ ಹೋಗುವವನಂತೆ ಸಂಸಾರದ ವಿಷಯದಲ್ಲಿ ಅಂಜುವವನೂ, ತಂತ್ರಪಾಲನಂತೆ (ಸೇನಾಧಿಪ) ಗುಣಪಾಲಕನೂ ಬಲವಾದ ಕೋಟೆಯಂತೆ ಮಿಥ್ಯಾತ್ವಕ್ಕೆ ಅಭೇದ್ಯನೂ, ಮುತ್ತಿನ ಛತ್ರಿಯಂತೆ ಎಲ್ಲ ದಿಕ್ಕುಗಳಲ್ಲಿಯೂ ಸೇವ್ಯನೂ, ಸೇನಾನಿಯಂತೆ ಸನ್ನದ್ಧತೆಯಲ್ಲಿ ಆಸಕ್ತನೂ ಸತ್ಪುರುಷನ ಹಾಗೆ ಹೊಟ್ಟೆಕಿಚ್ಚಿಲ್ಲದವನೂ ಸಕ್ಕರೆಯಂತೆ ಕಷಾಯ (ಕಹಿ) ಯಿಲ್ಲದವನೂ ದಯಾಶಾಲಿಯಾದ ರಾಜನಂತೆ ತ್ರಿದಂಡ (ಮೂರುದಂಡ-ಸನ್ಯಾಸಿಯ ಕೈಯಲ್ಲಿನ ಕೋಲು)ವಿಲ್ಲದವನೂ, ಮಳೆಯಹಾಗೆ ಸಕಲರಿಗೂ ಜೀವಸ್ವರೂಪ, ಯುದ್ಧಸನ್ನದ್ಧನಂತೆ ವೀರನೂ ಬುದ್ಧಿಶಾಲಿಯಹಾಗೆ ವಿಚಾರವುಳ್ಳವನೂ, ದೂರದರ್ಶಿಯಂತೆ ಮುಂದಿನದನ್ನು ತಿಳಿಯುವವನು, ದೊಡ್ಡ ಮಂತ್ರಿಯಂತೆ ತಪ್ಪು ಮಾಡದವನೂ (ಎಚ್ಚರತಪ್ಪದವನು) ಮಂದರ ಪರ್ವತದಂತೆ ಕ್ಷಮೆಯುಳ್ಳವನೂ ರೋಗಗ್ರಸ್ತನಂತೆ ಹಿತವಾದ ಆಹಾರ ಸ್ವೀಕರಿಸುವವನೂ, ಚಂದ್ರನಂತೆ ಶಾಂತರೂಪಿಯೂ, ವಿವಾಹಕಾಲದಂತೆ ಶುಭೋದಯನೂ ಮಂಗಳಚರಿತ್ರನಂತೆ ಶುಭವಾಕ್ಯಗಳನ್ನಾಡುವವನು, ನೀತಿಪರನಂತೆ ಲೋಕಸ್ವರೂಪ

ನೀತಿಪರನಂತೆ ಲೋಕಸ್ವರೂಪಜ್ಞನುಂ ದಂಡು ನಡೆಯಿಸುವನಂತೆ ದೇಶಜ್ಞನುಂ ಅವಧಿಜ್ಞಾನಿಯಂತೆ ಸಕಲಾಂತರಂಗಜ್ಞನುಂ ಮನೆವೆರ್ಗಡೆಯಂತೆ ಬೇಸಜಂ ಮಾಡದವನುಂ ಬಾಣಸಿಗನಂತೆ ಪೆಱರಿಚ್ಛೆಯನಱಿವನುಂ ಗಜವಾಹಕನಂತೆ ಮುಂದಱಿವನುಂ ತುರಗಾರೂಢನಂತೆ ಬಟ್ಟೆಯನಱಿವವನುಂ ಪಱುಗೋಲನೇಱಿದನಂತಡಕವುಳ್ಳನುಂ ರಾಜಸೇವಕನಂತಡಕವಂತನುಮಪ್ಪುದು ೯೯

ಮುನಿಯದಿರ್ಪುದು ಧರ್ಮದೊಳ್ ದೃಢನಪ್ಪುದಾಗಮಮಂದಮಂ
ನೆನೆಯುತಿರ್ಪುದು ಪೊಲ್ಲರೊಳ್ಕೆಳೆಗೊಳ್ಳದಿರ್ಪುದು ಶಿಷ್ಯರೊಳ್
ವಿನಯಮಂ ಪ್ರತಿಪಾಲಿಸಿರ್ಪುದು ಜೀವರಕ್ಷಕನಪ್ಪುದಾಗಮ
ಮನೋವದೆ ಮೆಚ್ಚಿ ಚರ್ಚಿಸದಿರ್ಪುದೂಯ್ಯನೆ ಪಾಪದೊಳ್ ೧೦೦

ಜಿನವಚನಮೆಂತುಟಂತುಟು
ಮನನುಯದಿಂ ಪೇಳದಂತೆ ತನ್ನಿಚ್ಛೆಗೆ ಕ
ಮ್ಮನೆ ತಟ್ಟಗಟಿಪಿ ಪೆಱರಂ
ತನಗೆ ವಶಂಮಾಳ್ಪನೆಯ್ದುಗುಂ ದುರ್ಗತಿಯಂ ೧೦೧

ಪೆಱರವಗುಣಮಂ ಕಂಡೊಡೆ
ಯಱಿಯಟ್ಟಿ ತಗುಳ್ದು ದೂಱವೇಡವರಱಿವರ್
ಪೆಱರೇಗೆಯ್ದೊಡಮೇಂ ತಾಂ
ಕಱಿಪಱಿಯಣಮಿಲ್ಲದಂತು ನೆಗೆಟ್ವುದು ಮುನಿಪಂ ೧೦೨

ವನ್ನರಿತವನೂ ದಂಡನ್ನು (ಸೈನ್ಯ) ನಡೆಸುವವನಂತೆ ದೇಶಬಲ್ಲವನೂ, ಅವಧಿಜ್ಞಾನಿಯ ಹಾಗೆ ಎಲ್ಲರ ಅಂತರಂಗ ಬಲ್ಲವನೂ, ಮನೆಯ ಹೆಗ್ಗಡೆಯಂತೆ ಬೇಸರಪಡಿಸದವನೂ, ಅಡಿಗೆಯವನಂತೆ ಇತರರ ಇಷ್ಟವನ್ನು ತಿಳಿಯುವವನೂ, ಆನೆ ಸವಾರನಂತೆ ಮುಂದಿನ ದಾರಿಬಲ್ಲವನೂ, ಕುದುರೆಯೇರಿದವನಂತೆ ದಾರಿಬಲ್ಲವನೂ, ಹರಿಗೋಲನ್ನು ಹತ್ತಿದವರಂತೆ ಅಡಕವಾಗಿರುವವನೂ ರಾಜಸೇವಕನಂತೆ ಅಡಕವಂತನೂ ಆಗತಕ್ಕದ್ದು ೯೯. ಸಿಟ್ಟಾಗದಿರುವುದು, ಧರ್ಮದಲ್ಲಿ ಸ್ಥಿರನಾಗಿರುವುದು, ಆಗಮದ ರೀತಿಯನ್ನು ಸ್ಮರಿಸುತ್ತಿರುವುದು, ಕೆಟ್ಟವರಲ್ಲಿ ಗೆಳೆಯರಾಗದಿರುವುದು. ಶಿಷ್ಯರಲ್ಲಿ ವಿನಯವನ್ನು ಕಾಪಾಡಿಕೊಂಡಿರುವುದು, ಜೀವರಕ್ಷಕನಾಗುವುದು. ಪಾಪದ ವಿಷಯವನ್ನು ಕುರಿತು ಆಗಮವನ್ನು ಲಕ್ಷಿಸದೆ ಚರ್ಚೆಮಾಡದಿರತಕ್ಕದ್ದು. ೧೦೦. ಜಿನವಚನವೆಷ್ಟೋ ಅಷ್ಟನ್ನೂ ಸಂತೋಷದಿಂದ ಹೇಳದೆ ಅದನ್ನು ತನ್ನ ಇಷ್ಟಕ್ಕೆ ಸರಿಯಾಗಿ ಮಾರ್ಪಡಿಸಿ, ಹರಟಿ ಇತರರನ್ನು ತನಗೆ ವಶಪಡಿಸಿಕೊಳ್ಳುವವನು ದುರ್ಗತಿಯನ್ನು ಹೊಂದುತ್ತಾನೆ. ೧೦೧. ಇತರರಲ್ಲಿ ದೋಷವನ್ನು ಕಂಡರೆ ಬಾಧಿಸಿ ಮೇಲೆಬಿದ್ದು ಆಕ್ಷೇಪಿಸಬೇಡ. ಅವರು ಅರಿತುಕೊಳ್ಳುತ್ತಾರೆ. ಇತರರು ಏನು ಮಾಡಿದರೂ ತಾನು ಸ್ವಲ್ಪವೂ ಮುಚ್ಚುಮಱಿಯಿಲ್ಲದೆ ಕಳಂಕವಿಲ್ಲದಹಾಗೆ ಮುನಿಯಾದವನು ನಡೆದುಕೊಳ್ಳಬೇಕು. ೧೦೨. ಹೊಲೆಯರು ಬಡಿಯುವ

ಗದ್ಯ॥ ಪೊಲೆಯರ್ಬಡಿವ ಪಱಿಯೊಜೆಗಾಡುವ ಪಗರಣಿಗರಂ ಕಂಡರ್ನಗುವರಲ್ಲದೆಯು ವರಾಟಕ್ಕೆ ಲಕ್ಷಣಮಂ ನೋಡರ್ ; ಕೃತ್ಯದೊಳ್ ಪರೀಕ್ಷೆಯಂ ಮಾಡ್ಪಂತೆ ಮಿಥ್ಯಾಜ್ಞಾನಿಗಳ ಕುಹೇತುದೃಷ್ಟಾಂತಕ್ಕಳಿಗಿ ದುಶ್ಚಾರಿತ್ರದೊಳ್ನೆಗಟ್ತರಲ್ಲಿಯು ದೋಷಮಂ ಪಾರರ್ ; ತತ್ವ ದೊಳ್ ದೃಢರಾಗಿ ಸದಾಚಾರದೊಳ್ನೆಗಟ್ವರೆಲ್ಲಿ ಗುಣದೋಷಮನಱಿಸುವರದಱಿಂ ೧೦೩

ಭಾವಿಸುವೊಡಂತರಂಗಂ
ಕೇವಳಮೇ ಸಾಲ್ಗುಮೊಂದೆ ಬಹಿರಂಗಮುನಿ
ನ್ನೇವುದಣಮೆಂದು ಬಿಡುವಾ
ಗಾವಿಲನಾರ್ತಪನೆ ಕಿಡಿಸಲಘಸಂತತಿಯಂ ೧೦೪

ನೆಱೆ ಬಹಿರಂಗಮೆ ಸಾಲ್ಗುಂ
ದಱಿಯದೆ ಪೆರ್ಚಿಂದಮಂತರಂಗದ ದೆಸೆಯಂ
ಮಱೆದು ಮತಿಗೆಟ್ಟು ಮಾಡುವ
ಕುಱಿ ತಾನಾರ್ತಪನೆ ಕಿಡಿಸಲಘಸಂತತಿಯಂ ೧೦೫

ಗದ್ಯ॥ ಅದಱಿಂದಂತರಂಗದೊಳಂ ಬಹಿರಂಗದೊಳಂ ಕೂಡಿ ನೆಗಟ್ವ ಬುದ್ಧಿವಂತನೆ ಸಕಲ ಕರ್ಮಮಂ ಕಿಡಿಸಿಟ್ಟು ಶಾಶ್ವತಸುಖಮಂ ಪೊರ್ದುಮಂತೆರಡಕ್ಕಮಾಱದೊಂದಱೊಳೆ

ತಮಟೆಯ ತಾಳಕ್ಕೆ ಕುಣಿವ ಹಗರಣದ ಪಾತ್ರಧಾರಿಗಳನ್ನು ಕಂಡವರು ನಗುವರೇ ಹೊರತು ಅವರ ನಾಟ್ಯಕ್ಕೆ ಲಕ್ಷಣವನ್ನು ಗಮನಿಸುವುದಿಲ್ಲ. ಕೆಲಸದಲ್ಲಿ ಪರೀಕ್ಷೆಮಾಡು ವಂತೆ ಮಿಥ್ಯಾಜ್ಞಾನಿಗಳ ಕುತರ್ಕದೃಷ್ಟಾಂತಕ್ಕೆ ಸೋತು ಕೆಟ್ಟ ನಡತೆಗೆ ಬೀಳರು, ಅಂಥ ವರ ದೋಷವನ್ನೂ ಗಮನಿಸರು ; ತತ್ವದಲ್ಲಿ ದೃಢರಾಗಿ ಸದಾಚಾರದಲ್ಲಿ ನಡೆಯುವವರ ಗುಣದೋಷಗಳನ್ನು ಗಮನಿಸುವರು ೧೦೩. ಆದ್ದರಿಂದ ವಿಚಾರ ಮಾಡಿದರೆ 'ಅಂತರಂಗ ವೆಂಬುದು ಸಾಮಾನ್ಯವೆ ? ಅದು ಒಂದೇ ಸಾಕು, ಇನ್ನು ಬಹಿರಂಗದ ಮಾತೇಕೆ ?' ಎಂದು ಬಿಡುವ ಆ ದಡ್ಡನು ಪಾಪಸಮೂಹವನ್ನು ಹಾಳುಮಾಡಿಕೊಳ್ಳಬಲ್ಲನೆ ? ೧೦೪. 'ಬಹಿರಂಗದ ಆಚಾರವೇ ಸಾಕು' ಎಂದು ಅರಿಯದೆ ಉಬ್ಬಿ ಅಂತರಂಗದ ರೀತಿಯನ್ನು ಮರೆತು ಬುದ್ಧಿಯಿಲ್ಲದೆ ಮಾಡುವ ಕುರಿಮನುಷ್ಯನು, ಪಾಪಪರಂಪರೆಯನ್ನು ಕೆಡಿಸ ಲಾರ ೧೦೫. ಆದರಿಂದ ಅಂತರಂಗ ಬಹಿರಂಗಗಳೆರಡರಲ್ಲಿಯೂ ಕೆಲಸಮಾಡುವ ಬುದ್ಧಿ ವಂತನೇ ಸಮಸ್ತಕರ್ಮವನ್ನೂ ಕಿತ್ತುಹಾಕಿ ಶಾಶ್ವತ ಸೌಖ್ಯವನ್ನು ಹೊಂದುವನು. ಹಾಗೆ ಆ ಎರಡಕ್ಕೂ ಶಕ್ತನಾಗದೆ ಒಂದರಲ್ಲಿ ಮಾತ್ರ ನಡೆದುಕೊಂಡು ನಿರಂತರಸುಖವನ್ನು ಪಡೆಯುವೆನೆಂಬ ಬುದ್ಧಿಹೀನನು ಒಂದೇ ಗಾಲಿಯಲ್ಲಿ ರಥವನ್ನು ನಡೆಸುವೆನೆಂಬ,

ನೆಗಟ್ದು ನಿರಂತರ ಸುಖಮಂ ಪಡೆವೆನೆಂಬ ನಿರ್ಬುದ್ಧಿಯೊಂದೆ ಗಾಲಿಯೊಳ್ ರಥಮಂ ನಡೆಯಿ ಸುವೆನೆಂಬ, ನೀರಿಲ್ಲದೆ ಕೂಟನಡುವೆನೆಂಬ, ಕಾವಿಲ್ಲದೆ ಕೊಡಲಿಯೊಳ್ ಮರನಂ ಕಡಿವೆನೆಂಬ ಭಾರ್ಯೆಯಿಲ್ಲದೆ ಮಗನಂ ಪಡೆವೆನೆಂಬ, ಕೈದುವಿಲ್ಲದಿಱಿವೆನೆಂಬ, ನಾರಿಲ್ಲದೆ ಪೂಗಟ್ಟುವೆನೆಂಬ ಪೆರ್ಗಾವಿಲನಂ ಪೋಲ್ಕುವಿಂತು ೧೦೭

ಲೇಸು ಬಹಿರಂಗವಿಲ್ಲದೊ
ಡಾಸೆಯದೇನಂತರಂಗಮುಂ ತನಗಿನಿಸುಂ
ಲೇಸಾಗಲಱಿಯದೆಂತೆನೆ
ತ್ರಾಸಿನ ಕೊಡನೊಂದು ಬಿರ್ದೊಡೊಂದುಳಿದಪುದೇ ೧೦೭

ಎನಿಸು ಬಲಮುಳ್ಳವಂ ಘೋಂ
ಕನೆ ಪರಿಯಲ್ಕಾರದೊಂದೆ ಕಾಲಿಂದಂ ತಾ
ನೆನಿತಱಿದೊಡವೊಂದಂಗದೊ
ಳನಘಶ್ರೀವಧುವ ನೆರೆಯಲೆಂತುಂ ನೆಱೆಯಂ ೧೦೮

ಗದ್ಯ॥ ಆದಱಿಂದೊಂದನೆ ಪಿಡಿದು ಕರ್ಮಮಂ ಗೆಲ್ವೆನೆಂದು ಗಾವಿಲತನದಿಂದಿರದೆ ಬಹಿರಂಗ ದೊಳಮಂತರಂಗದೊಳಂ ಕೂಡಿ ನೆಗಟ್ದು ದುರಿತಮುಂ ಕಿಡಿಸಿ ನಿರ್ಮಳನಪ್ಪುದು ೧೦೯

ಕರಮೊಳ್ಳಿದನಿವನೆಂದೊ
ರ್ವರ ಶಿಷ್ಯನ ನೂಱಿ ತೋಱಿ ನುಡಿದೊಯ್ಯನೆ ಮು
ಣ್ದರೆದೊಯ್ದು ದೀಕ್ಷೆಗುಡುವಂ
ಪರಮಾರ್ಥಂ ಸುೞಿಗುಮುಗ್ರ ಸಂಸೃತಿವನದೊಳ್ ೧೧೦

ನೀರಿಲ್ಲದೆ ಅನ್ನವನ್ನು ಮಾಡುವೆನೆನ್ನುವ, ಕಾವಿಲ್ಲದೆಯೇ ಕೊಡಲಿಯಿಂದ ಮರವನ್ನು ಕಡಿಯುವೆನೆನ್ನುವ, ಹೆಂಡತಿಯಿಲ್ಲದೆ ಮಗನನ್ನು ಪಡೆಯುವೆನೆಂಬ, ಕತ್ತಿಯಿಲ್ಲದೆ ಯುದ್ಧ ಮಾಡುವೆನೆಂಬ, ನಾರು ಇಲ್ಲದೆ ಹೂ ಕಟ್ಟುವೆನೆಂಬ ದೊಡ್ಡ ಗಾಂಪನನ್ನು ಹೋಲು ತ್ತಾನೆ ೧೦೬. ಅಂತು ಬಹಿರಂಗವಿಲ್ಲದಿದ್ದರೆ ಅಂತರಂಗದಲ್ಲಿಯೂ ತನಗೆ ಸ್ವಲ್ಪವೂ ಒಳ್ಳೆಯದಾಗುವುದಿಲ್ಲ ; ತಕ್ಕಡಿಯ ಒಂದು ಕೊಡ ಬಿದ್ದರೆ ಇನ್ನೊಂದು ಉಳಿಯು ವುದೇ ? ೧೦೭. ಎಷ್ಟು ಬಲವುಳ್ಳವನೂ ಒಂದೇ ಕಾಲಿನಿಂದ ವೇಗವಾಗಿ ಓಡಲು ಸಾಧ್ಯವಾಗುವುದಿಲ್ಲ. ಹಾಗೆಯೇ ತಾನು ಎಷ್ಟು ತಿಳಿದರೂ ಒಂದೇ ಅಂಗದಲ್ಲಿ ಪಾಪ ದೂರನಾಗಿ ಮೋಕ್ಷ ಲಕ್ಷ್ಮಿಯನ್ನು ಸೇರುವುದಕ್ಕೆ ಸಮರ್ಥನಾಗುವುದಿಲ್ಲ ೧೦೮. ಆದ ರಿಂದ ಒಂದನ್ನೇ ಹಿಡಿದು ಕರ್ಮವನ್ನು ಗೆಲ್ಲುವೆನೆಂದು ದಡ್ಡತನದಿಂದ ಇದ್ದುಬಿಡದೆ ಅಂತರಂಗ ಬಹಿರಂಗಗಳೆರಡರಲ್ಲಿಯೂ ಒಟ್ಟಿಗೆ ಪ್ರಯತ್ನಮಾಡಿ ಪಾಪವನ್ನು ನಾಶ ಪಡಿಸಿ ಪರಿಶುದ್ಧನಾಗತಕ್ಕದ್ದು. ೧೦೯. 'ಇವನು ಬಹಳ ಒಳ್ಳೆಯವನು' ಎಂದು ಇನ್ನೊಬ್ಬರ ಶಿಷ್ಯನನ್ನು ಎತ್ತಿತೋರಿಸಿ ಹೊಗಳಿ ತಡಮಾಡದೆ ಕರೆದು ದೀಕ್ಷೆಕೊಡು ವವನು ಸಂಸಾರಾರಣ್ಯದಲ್ಲಿ ಸುಳಿಯುತ್ತಿರುತ್ತಾನೆ. ಇದು ಪರಮಾರ್ಥ ೧೧೦.

ಏನುಮನಱಿಯದ ಮುನಿಪಂ
ಹೀನಗುಣಂ ಬಂದು ದೀಕ್ಷೆವೇಡಿದೊಡವನು
ತಾನಳಿಪಿಂ ಕೈಕೊಳ್ಳದೆ
ನೂಂಕಂ ನಿಱಿಸುವುದು ಮುನ್ನಿನಂದದೊಳವನಂ ೧೧೧

ಮುನ್ನಿನ ಕುಲಮುಂ ಸಿರಿಯುಂ
ತನ್ನೂರಂ ತನ್ನ ಪೆಂಡಿರು ಮಕ್ಕಳುಮಂ
ತನ್ನ ಮಹಿಮೆಗಳನಳಿಪಿಂ
ದಂ ನೆನೆಯುತ್ತಿರ್ಪ ದುರ್ಜನಂ ಮುನಿಯಲ್ಲಂ ೧೧೨

ತಾಂ ಪೊಲ್ಲಮೆಯಿಲ್ಲದೊಡಂ
ಗಾಂಪರನುತ್ಸಾಹರನಳಿಪರಂ ಕಂಡೊಡೆ ಕೇಳ್
ಪೆಂಪಿಂದಮಿರದೆ ಭಯದಿಂ
ಕಂಪಿಸಿ ಕ್ಷಮೆಗೊಂಡು ನೆಗೞ್ವದಧಿಕನೆನಿಪ್ಪಂ ೧೧೩

ಎಮ್ಮೃಷಿ ಯೆಮ್ಮ ಜಿನಗೃಹ
ಮೆಮ್ಮೊಡವೆಗಳೆಮ್ಮ ಗುಡ್ಡರೆಮ್ಮರ್ಥಂ ಮ
ತ್ತೆಮ್ಮನೆಲನೆಂದು ಮಾಣದೆ
ಕೆಮ್ಮನೆ ದೆಸೆಗೆಟ್ಟು ನುಡಿವ ಮುನಿ ಮುನಿಯಲ್ಲಂ ೧೧೪

ಮುನ್ನಂ ವ್ರತಮಿತ್ತವರಂ
ತಮ್ಮಳಿಪಿಂ ಪೞಿದು ಕಿಡಿಸಿ ಪೂರ್ವವ್ರತಮಂ
ಮನ್ನಣೆಯಿಂ ವ್ರತಮಂ ಕುಡು
ವಂ ನರಕಕ್ಕಿೞಿದು ಪೋಪುದೇನಚ್ಚರಿಯೋ ೧೧೫

ಏನನ್ನೂ ತಿಳಿಯದ ಮುನಿಪಾಲಕನಲ್ಲಿಗೆ ಹೀನಗುಣನೊಬ್ಬನು ಬಂದು ದೀಕ್ಷೆ ಕೇಳಿದರೆ ಅವನನ್ನು ತಾನು ಆಸೆಯಿಂದ ಸ್ವೀಕರಿಸದೆ ಅವನನ್ನು ಮೊದಲಿನ ರೀತಿಯಲ್ಲಿಯೇ ನಿಲ್ಲಿಸಬೇಕು ೧೧೧. ಹಿಂದಿನ ಕುಲ, ಐಶ್ವರ್ಯ, ತನ್ನ ಊರು, ತನ್ನ ಹೆಂಡಿರು ಮಕ್ಕಳು ಮತ್ತು ತನ್ನ ಮಹಿಮೆಗಳು—ಇವನ್ನೆಲ್ಲ ಆಸೆಯಿಂದ ಸ್ಮರಿಸಿಕೊಳ್ಳುತ್ತಿರುವವನು ದುರ್ಜನನೇ ಹೊರತು ಮುನಿಯಲ್ಲ. ೧೧೨. ತಾನು ಕೆಟ್ಟವನಲ್ಲದಿದ್ದರೂ ದಡ್ಡರನ್ನೂ ಉತ್ಸಾಹಿಗಳನ್ನೂ, ಆಸೆಪಡುವವರನ್ನೂ ಕಂಡರೆ ಹೆಮ್ಮೆಯಿಂದ ಸುಮ್ಮನಿರದೆ, ಭಯದಿಂದ ನಡುಗಿ ಅಧಿಕ (ಶ್ರೇಷ್ಠ)ನಾದವನು ಕ್ಷಮೆತೋರಿ ನಡೆದುಕೊಳ್ಳಬೇಕು ೧೧೩. 'ನಮ್ಮ ಋಷಿ, ನಮ್ಮ ಜಿನಗೃಹ, ನಮ್ಮ ಒಡವೆಗಳು, ನಮ್ಮ ಶಿಷ್ಯರು, ನಮ್ಮ ಧನ, ಮತ್ತು ನಮ್ಮ ನೆಲೆ,' ಎಂದು ಬಿಡದೆ ಒಂದೇ ಸಮನೆ ದಿಕ್ಕೆಟ್ಟು ನುಡಿಯುವ ಮುನಿ ಮುನಿಯಲ್ಲ. ೧೧೪. ಮೊದಲು ವ್ರತಗಳನ್ನು ಉಪದೇಶಿಸಿದವರನ್ನು, ತಮ್ಮ ಆಸೆಯಿಂದ ದೂಷಿಸಿ ಹಿಂದಿನ ವ್ರತವನ್ನು ಹಾಳುಮಾಡಿ ಮನ್ನಣೆ ಪಡೆದುಕೊಂಡು ಇತರರಿಗೆ ವ್ರತದೀಕ್ಷೆಯನ್ನು ಕೊಡುವ ಮನುಷ್ಯನು ನರಕಕ್ಕೆ ಇಳಿದು ಹೋಗುವುದೇನಾಶ್ಚರ್ಯವೆ ? ೧೧೫.

ಜಿನಭವನಮೆಲ್ಲಮಂ ಸ
ಜ್ಜಿನಚೈತ್ಯಾವಳಿಗಳೆಲ್ಲಮಂ ದಿವ್ಯತಪೋ
ಧನರೆಲ್ಲರುಮಂ ಸಮನಾ
ಗನವರತಂ ಕಾಣ್ಬ ಮುನಿಯೆ ಮುನಿವರನೆನಿಪಂ ೧೧೬

ರಾಗದ್ವೇಷಂ ತನಗುಂ
ಟಾಗೆ ತಪಂಬಟ್ಟು ನಮೆವನವನಿನಿಸಾನುಂ
ರಾಗದ್ವೇಷಂ ತನ್ನಿಂ
ಪೋಗೆ ತಪಂಬಟ್ಟು ನಮೆಯುನವನಿನಿಸಾನುಂ ೧೧೭

ಬಿಡದ ಪರಿಗ್ರಹಭರದೊಳ್
ತೊಡರ್ದುಂ ನಿರ್ಗ್ರಂಥನಾಗಿಯುಂ ಸಗ್ರಂಥಂ
ತೊಡರ್ದಂ ಪರಿಗ್ರಹ ಭರಮಂ
ಬಿಡುವಂ ಸಗ್ರಂಥನಾಗಿಯುಂ ನಿರ್ಗ್ರಂಥಂ ೧೧೮

ಗದ್ಯ ॥ ಅದು ಕಾರಣದಿಂದೆ ತಪವೆಂಬುದು ಸಾಮಾನ್ಯಮಲ್ಲದು ; ನೀನುಂ ನಿನ್ನಮುನ್ನಿನ ವಿದ್ಯಾಧರರಾಜ್ಯಮಂ ಕೈಕೊಂಡು ಸುಖದಿನಿರೆಂಬುದುಂ. ಚಂದ್ರಾಭಮಹಾರಾಜಂ ಮುನಿಗುಪ್ತ ಭಟ್ಟಾರಕರ್ಗಿಂತೆಂದಂ ೧೧೯

ಜಿನಭವನಗಳೆಲ್ಲವನ್ನೂ ಶ್ರೇಷ್ಠವಾದ ಜಿನಚೈತ್ಯಾಲಯ (ಗುರುಗಳ ಸಮಾಧಿಯುಳ್ಳ ಮಂದಿರ)ಗಳೆಲ್ಲವನ್ನೂ ದಿವ್ಯ ತಪೋಧನರೆಲ್ಲರನ್ನೂ ಎಲ್ಲ ಕಾಲಗಳಲ್ಲಿಯೂ ಸಮಾನ ವಾಗಿ ಕಾಣುವ ಮುನಿಯೇ ಮುನಿವರನೆನ್ನಿಸಿಕೊಳ್ಳುವನು. ೧೧೬. ಪ್ರೀತಿ ಹಗೆತನಗಳು ತನಗೆ ಉಂಟಾಗುತ್ತಿದ್ದರೂ ತಪಸ್ಸಿಗೆ ತೊಡಗಿ ಸವೆಯುವವನು ಸ್ವಲ್ಪವಾದರೂ ತನ್ನ ರಾಗದ್ವೇಷಗಳು ತನ್ನನ್ನು ಬಿಟ್ಟುಹೋದರೆ ಅವನು ತಪಸ್ಸಿಗಿಳಿದು ದೇಹ ಸವೆಸಿದ್ದು ಸಾರ್ಥಕ ೧೧೭. ತಪ್ಪದ ಆಸ್ತಿಯ ಭಾರದಲ್ಲಿ ಸಿಕ್ಕಿಕೊಂಡು ನಿರ್ಗ್ರಂಥನಾಗಿದ್ದರೂ ಅಂಥವನು ಸಗ್ರಂಥನೇ, ಯಾವನು ಅಂಥ ಆಸ್ತಿಯ ಭಾರದ ತೊಡಕನ್ನು ಪರಿ ತ್ಯಾಗ ಮಾಡುವನೋ ಅವನು ಸಗ್ರಂಥನಾಗಿದ್ದರೂ ನಿಜವಾಗಿಯೂ ನಿರ್ಗ್ರಂಥನೇ. ೧೧೮. [ವಿ. ಸೂ. ನಿರ್ಗ್ರಂಥ= ದಿಗಂಬರ ; ವಿರಕ್ತ ಜೈನಸನ್ಯಾಸಿ.] "ಆದಕಾರಣ ತಪಸ್ಸೆಂಬುದು ಸಾಮಾನ್ಯವಲ್ಲ. ನೀನೂ ನಿನ್ನ ಮುನ್ನಿನ ವಿದ್ಯಾಧರರಾಜ್ಯವನ್ನು ಅಂಗೀಕರಿಸಿ ಸುಖವಾಗಿರು" ಎಂದು ಹೇಳುತ್ತಲೂ ಚಂದ್ರಾಭ ಮಹಾರಾಜನು ಮುನಿಗುಪ್ತ ಭಟ್ಟಾರಕರಿಗೆ ಹೀಗೆ ಹೇಳಿದನು : ೧೧೯, "ಎಷ್ಟು ಹಸಿವೆಯಾದರೂ

ಎನಿತು ಪಸಿವಾದೊಡಂ ಪೇ
ೞನಿಯೊಳ್ಕಾಱಿರ್ದಕೂೞನುಂಬರೆ ನರರಾಂ
ಮನವೊಸೆದು ಬಿಟ್ಟ ರಾಜ್ಯಾಂ
ಗನೆಯುಂ ಕೈಕೊಳ್ವನಲ್ಲೆನೆಂತುಂ ಮುನಿಪಾ ೧೨೦

ಗದ್ಯ ॥ ಎಂಬುದುಂ 'ಮುನೀಂದ್ರೋತ್ತಮಂ ವಿಯಚ್ಚರರಾಜಂ ನುಡಿದ ಪರಿಚ್ಛೇದಕ್ಕಂ ಮನದ ವೈರಾಗ್ಯಕ್ಕಂ ಮೆಚ್ಚಿ ಮನಃಪೂರ್ವಕಂ ಪರಿಗ್ರಹಮೆಲ್ಲಮಂ ತೊಱೆ ಬೇಗಮೆಂಬುದುಂ ಗುರುಸನ್ನಿಧಿಯೊಳ್ ಪರಿಗ್ರಹಮೆಲ್ಲಮಂ ತೊಱೆದು ಕೆಲವು ವಿದ್ಯೆಗಳಂ ತೊಱೆಯದಿರೆ ಮುನಿಗುಪ್ತ ಭಟ್ಟಾರಕರವಱೊಳಳಿಪು ನಿನಗೇತಕ್ಕೆನೆ ಗಗನಚರಾಧೀಶನಿಂತೆಂದಂ ೧೨೧

ಮನದರ್ತಿ ಪೋಪಿನಂ ಮೇ
ರುನಗದಕೃತ್ರಿಮ ಜಿನಾಲಯಂಗಳನಾನಿಂ
ತನವರತಂ ನೋಡುವ ಭಾ
ವನೆ ಪೋಗದು ತಿಬ್ಬವಿನ್ನಮದು ಕಾರಣದಿಂ ೧೨೨

ಗದ್ಯ ॥ ಕೆಲವು ವಿದ್ಯೆಗಳಂ ಬಿಡಲಾಱೆನೆಂಬುದುಂ ಮುನಿಪತಿ ನಕ್ಕು ನಿನಗನ್ನೆಗಂ ಮಹಾವ್ರತಂಗಳ ತೊಡರ್ಪುವೇಡಣುವ್ರತಧಾರಿಯಾಗಿರ್ಪುದೆಂಬುದುಂ ಅವೆಂತಪ್ಪುವವಱಸ್ವರೂಪಮಂ ಬೆಸಸಿಮೆನೆ, ಗುಣೋತ್ತಮರಿಂತೆಂದು ಪೇೞ್ದರ್ ೧೨೩

ಲೋಕದಲ್ಲಿ ಕಾರಿಕೊಂಡ ಅನ್ನವನ್ನು ಉಣ್ಣುವರೆ ? ನಾನು ಮನಃಪೂರ್ವಕವಾಗಿ ಸಂತೋಷದಿಂದ ಬಿಟ್ಟ ರಾಜ್ಯವೆಂಬ ಅಂಗನೆಯನ್ನು ಹೇಗೆ ತಾನೆ ಕೈಗೊಳ್ಳಲಿ ?" ೧೨೦, ಅರಸನು ಹೀಗೆಂದು ಹೇಳಿದ ಕೂಡಲೆ ಮುನೀಂದ್ರೋತ್ತಮನು ಖೇಚರರಾಜನ ಮಾತಿನಿಂದ ವ್ಯಕ್ತವಾದ ನಿರ್ಧಾರಕ್ಕೂ ಅವನ ಮನಸ್ಸಿನ ವೈರಾಗ್ಯಕ್ಕೂ ಮೆಚ್ಚಿ "ಮನಃಪೂರ್ವಕವಾಗಿ ನಿನ್ನೆಲ್ಲ ಆಸ್ತಿಯನ್ನೂ ಬೇಗನೆ ತೊರೆದು ಬಿಡು" ಎಂದರು. ಆಗ ಚಂದ್ರಾಭನು ಗುರುಸನ್ನಿಧಿಯಲ್ಲಿ ತನ್ನ ಸಂಪತ್ತನ್ನೆಲ್ಲ ತೊರೆದನಾದರೂ ಕೆಲವು ವಿದ್ಯೆಗಳನ್ನು ಮಾತ್ರ ತೊರೆಯಲಿಲ್ಲ. ಅದನ್ನು ಮುನಿಗುಪ್ತ ಭಟ್ಟಾರಕರು ಗ್ರಹಿಸಿ "ಅವುಗಳ ಮೇಲೆ ಆಸೆ ನಿನಗೇಕೆ ?" ಎಂದರು. ಆದಕ್ಕೆ ಖೇಚರರಾಜನು ಹೀಗೆ ಉತ್ತರ ಹೇಳಿದನು : ೧೨೧ "ಮನಸ್ಸಿನ ಆಸೆ ಹೋಗುವಂತೆ ಮೇರುಪರ್ವತದ ಅಕೃತ್ರಿಮ ಜಿನಾಲಯಗಳನ್ನು ಹೀಗೆ ಸದಾ ನೋಡುವ ತೀವ್ರ ಸಂಕಲ್ಪ ಹೋಗದು. ಆ ಕಾರಣದಿಂದ ಕೆಲವು ವಿದ್ಯೆಗಳನ್ನು ಬಿಡಲಾರೆ." ಹೀಗೆ ನುಡಿದುದನ್ನು ಕೇಳಿ ಮುನಿಶ್ರೇಷ್ಠನು ನಕ್ಕು, "ಅಲ್ಲಿಯವರೆಗೆ ನಿನಗೆ ಮಹಾವ್ರತಗಳ ಗೊಡವೆ ಬೇಡ. ಅಣುವ್ರತಧಾರಿಯಾಗಿ ಇರುವುದು" ಎಂದನು. ಅವು ಎಂಥವೆಂಬುದನ್ನೂ ಅವುಗಳ ಸ್ವರೂಪವನ್ನೂ ಹೇಳಬೇಕೆಂದು ಕೇಳಿಕೊಳ್ಳಲು ಗುಣೋತ್ತಮರಾದ ಮುನಿಗುಪ್ತರು ಹೀಗೆ ಹೇಳಿದರು : ೧೨೩. ಪರಮದರ್ಶನ ವಿಶುದ್ಧಿ,

ಪರಮದರ್ಶನವಿಶುದ್ಧತೆ
ನಿರುಪಮಮುನಿಸಿರ್ದ ಪಂಚಗುರುಪದಯುಗಮಂ
ಕರುಪಮವರಭಕ್ತಿ ಭಾವಿಪೊ
ಡುರುಸಂಸ್ಕೃತಿ ದೇಹಭೋಗವಿಮವಜಿ ವಿರಾಗಂ ೧೨೪

ಗದ್ಯ ॥ ನೆಲದ ಬೆಟ್ಟನಂತೆ ಸಮುದ್ರದ ಜಲದಂತೆ, ಪಗಲಾದಿತ್ಯನಂತೆ, ನಕ್ಷತ್ರದ ಚಂದ್ರನಂತೆ, ಮೇರುವಿನ ಕರ್ಮಭೂಮಿಯಂತೆ, ಸ್ತ್ರೀಯರ ಮೊಲೆಯಂತೆ, ಪುರುಷರ ಮೀಸೆಯಂತೆ, ಆವಿನ ಕೆಚ್ಚಲಂತೆ, ಗಜದ ದಂತದಂತೆ ಬೆಂಕಿಯುಷ್ಣದಂತೆ, ತಾವರೆಯ ಸೂರ್ಯನಂತೆ, ನೆಯ್ದಿಲ ಚಂದ್ರನಂತೆ ಸ್ತ್ರೀರತ್ನದ ಚಕ್ರವರ್ತಿಯಂತೆ, ನೀರಪಾಲಂತೆ, ನಖದಮಾಂಸದಂತೆ ಪೂವಿನ ಕಂಪಿನಂತೆ ತುಪ್ಪುಟ ಬಣ್ಣದಂತೆ, ತಾಯ ಶಿಶುವಿನಂತೆ ಕರುವಿನೆಳಗಂದಿನಂತೆ, ಲೋಭಿಯ ಪೊನ್ನಂತೆ, ಪಂಚಪರಮೇಷ್ಠಿಗಳೊಳಪ್ಪಪತ್ತುಗೆವೆರಸು ; ಪಿರಿದು ತೆತ್ತೊಕ್ಕಲಂತೆ, ಗಂಡನೊಲ್ಲದ ಸ್ತ್ರೀಯಂತೆ, ಪಂದೆಯಂ ಕಂಡಾಳ್ದನಂತೆ, ಪಾದರಿಗೆಯಂ ಕಂಡ ಗಂಡನಂತೆ ಬೇಸಗೆಯೊಳ್ಪಯಣಂ ಬೋಪರಂತೆ, ದೂರಕ್ಕೆ ಪೊಱಿವೆರಸು ಪೋಪರಂತೆ, ಪೊಗೆಯೊಳಿರ್ದರಂತೆ ಬಡವನ ಮಗಳಂತೆ, ಪಡಪಾಳಿ ಸತ್ತಮನೆಯಂತೆ, ಪ್ರಭುಕೆಟ್ಟ ನಾಡಂತೆ, ಸಂಸಾರದ ಶರೀರದ ಭೋಗದಮೇಲೆ ಬೇಸಱಂ ; ಬೆಕ್ಕಂ ಕಂಡಿಲಿಯಂತೆ, ಪಾವಂ ಕಂಡ ಕಪ್ಪೆಯಂತೆ, ಕಳ್ಳನಂ ಕಂಡ ಪಥಿಕನಂತೆ, ಪರ್ದಂ ಕಂಡ ಪಾವಿನಂತೆ,

ಹೋಲಿಕೆಗೆ ಹೊರತಾದ ಪಂಚಗುರುಗಳ ಪಾದಕಮಲಗಳಲ್ಲಿ ಭಕ್ತಿ, ಮತ್ತು ಸಂಸಾರ ದೇಹ ಭೋಗಗಳಲ್ಲಿ ಪ್ರೀತಿ(ಆಸೆ)ಯಿಲ್ಲದಿರುವಿಕೆ ೧೨೪. ನೆಲದ ಗಟ್ಟಿತನದಂತೆ ಸಮುದ್ರದ ನೀರು, ಹಗಲು ಸೂರ್ಯ, ನಕ್ಷತ್ರದ ಚಂದ್ರ, ಮೇರುವಿನ ಕರ್ಮ ಭೂಮಿ, ಸ್ತ್ರೀಯರ ಮೊಲೆ, ಪುರುಷರ ಮೀಸೆ, ಹಸುವಿನ ಕೆಚ್ಚಲು, ಆನೆಯ ದಂತ, ಬೆಂಕಿಯಬಿಸಿ, ತಾವರೆಯ ಸೂರ್ಯ, ನೆಯ್ದಿಲಿನ ಚಂದ್ರ, ಸ್ತ್ರೀರತ್ನದ ಚಕ್ರವರ್ತಿ, ನೀರಿನಹಾಲು, ಉಗುರಿನ ಮಾಂಸ, ಹೂವಿನ ಪರಿಮಳ, ತುಪ್ಪುಳದ ಬಣ್ಣ, ತಾಯಿಯ ಮಗು, ಕರುವಿನ ತಾಯಿ ಹಸುವಿನಂತೆ (ಎಳಗಂದಿ= ಹೊಸದಾಗಿ ಕರು ಹಾಕಿದ ಹಸು) ಜಿಪುಣನ ಹೊನ್ನಿನಂತೆ, ಪಂಚಪರಮೇಷ್ಠಿಗಳಲ್ಲಾದ ಪ್ರೀತಿಯಸಂಬಂಧದಿಂದ ಕೂಡಿ ; ಹೆಚ್ಚಾಗಿ ತೆತ್ತ ಒಕ್ಕಲು, ಗಂಡ ಮೆಚ್ಚದ ಹೆಂಗಸು, ಹೇಡಿಯನ್ನು ಕಂಡ ಒಡೆಯ, ಹಾದರಗಿತ್ತಿಯನ್ನು ಕಂಡ ಗಂಡ, ಬೇಸಗೆಯಲ್ಲಿ ಪ್ರಯಾಣ ಹೋಗುವವರು, ಹೊರೆಹೊತ್ತು ದೂರ ಹೋಗುವವರು, ಹೊಗೆಯಲ್ಲಿ ಇದ್ದವರು, ಬಡವನ ಮಗಳು, ಸಂಪಾದನೆ ಮಾಡುವವನು ಸತ್ತಮನೆ, ಪ್ರಭುಕೆಟ್ಟದೇಶ, ಇವುಗಳಂತೆ, ಸಂಸಾರದ, ಶರೀರದ ಭೋಗ—ಗಳ ಮೇಲೆ ಬೇಸರವೂ ; ಬೆಕ್ಕನ್ನು ಕಂಡ ಇಲಿ, ಹಾವನ್ನು ಕಂಡ ಕಪ್ಪೆ, ಕಳ್ಳನನ್ನು ಕಂಡ ದಾರಿಹೋಕ, ಹದ್ದನ್ನು ಕಂಡ ಹಾವು, ತಳವಾರನನ್ನು ಕಂಡ ದ್ರೋಹಿ, ಕೋಣನನ್ನು

ತಳಾಱನಂ ಕಂಡದ್ರೋಹನಂತೆ, ಕೋಣನಂ ಕಂಡ ಕುದುರೆಯಂತೆ, ನಾಯಂ ಕಂಡ ಬೆಕ್ಕಿನಂತೆ, ಪುಲಿಯಂ ಕಂಡ ಪುಲ್ಲೆಯಂತೆ, ಇಹಲೋಕದ ಪರಲೋಕದ ಮರಣದ ಕುತ್ತದ ಪಱರೆನಗಿಲ್ಲೆಂಬ ಮೆಯ್ಗೆ ಮಱೆಯಿಲ್ಲೆಂಬ, ತೊಟ್ಟನೆಡಸುವ ಸಪ್ತಭಯಂಗಳ್ಗೆ, ನಡುಗದುದುಂ ; ರಕ್ಕಸಿಯು ಮಾನಿಸಂ, ಸಿಂಹಮನಾನೆ, ಲೋಗರೇ ಶಿಶು, ಮರುಳನಂ ಬುದ್ಧಿಶಾಲಿ, ದುಶ್ಚರಿತ್ರನಂ ಸದಾಚಾರಂ, ಕಳ್ಳನಂ ಸದ್ಧರ್ಮಂ, ವ್ಯಸನಿಯಂ ಜಿತೇಂದ್ರಿಯಂ, ಪೊರ್ದದಂತೆ, ಜೂಜುಂ ಬೇಂಟೆಯುಂ ಕಳ್ಳುಂ ಪೊಂಸಮುಂ ಕುತ್ಸಿತ ವೇಶ್ಯೆಯುಂ ಪರದಾರಮುಂ ಕಳವುಮೆಂಬ ಸಪ್ತವ್ಯಸನಂಗಳಂ ಪೊರ್ದದಿರ್ಪುದುಂ ; ಕುಡುವ ಬೊಜಂಗನಂ ಪಡೆದ ಕುಂಟಣಿಯಂತೆ ಸಿರಿವಂತನ ಕಯ್ಯಂಪಿಡಿದ ಬಡವೆಯಂತೆ, ನಾಡುವಡೆದ ಪಸಾಯಿತನಂತೆ, ತೇಜಂ ಬಡೆದರಸಿನಂತೆ, ಮನ್ನಣೆವಡೆದ ಕೀೞ್ಜಾತಿಯಂತೆ ಪೂಜೆ ವಡೆದ ವ್ಯಂತರಿಯಂತೆ, ಗೆಲ್ಲಂ ಪಡೆದ ಪೇಡಿಯಂತೆ, ಜವ್ವನಂಪಡೆದ ಮುದುಪನಂತೆ, ನಿಶ್ಶಂಕಾದ್ಯಷ್ಟಗುಣಂಗಳೊಳಾದ ಮಹಾಪ್ರೀತಿಯಂ, ಮದ್ದುಗುಣಿಕೆಯಂ ತಿಂದರಂತೆ, ಪಿತ್ತಂ ತಲೆಗೇಱಿದರಂತೆ. ಮರುಳ್ಗೊಂಡರಂತೆ ಶಾಶ್ವತಂ ಬಡೆದರಂತೆ ಜವನೊಳೋಲೆಯುಂಡಿಗೆಯುಂ ತಂದರಂತೆ, ಕಳ್ಗುಡಿದರಂತೆ ಸ್ವೇಚ್ಛಾಮರಣಗಳಂತೆ, ಸಾವಿಲ್ಲದರ ಬಸಿಱೊಳ್ಬಂದಂತೆ, ಜ್ಞಾನೈಶ್ವರ್ಯ ಪೂಜಾ ಕುಲ ಬಲ ತಪ ರೂಪ ಜಾತಿಯೆಂಬೆಂಟು ಮದಂಗಳೊಳ್ಪೊರ್ದುಗೆಯಿಲ್ಲದುದುಂ; ಕೋಣ

ಕಂಡ ಕುದುರೆ[1], ನಾಯಿಯನ್ನು ಕಂಡ ಬೆಕ್ಕು, ಹುಲಿಯನ್ನು ಕಂಡ ಜಿಂಕೆ,—ಇವುಗಳಂತೆ ಇಹಲೋಕ ಪರಲೋಕಗಳ, ಮರಣ, ರೋಗ ನಾಶ, ತನಗೆ ಇತರರು ಗತಿಯಿಲ್ಲವೆಂಬ, ದೇಹಕ್ಕೆ ರಕ್ಷಣೆಯಿಲ್ಲೆಂಬ, ಹಟಾತ್ತಾಗಿ ಒದಗುವ ಸಪ್ತಭಯಗಳಿಗೆ, ನಡುಗದಿರುವುದೂ, ರಕ್ಕಸಿಯನ್ನು ಮನುಷ್ಯ, ಸಿಂಹವನ್ನು ಆನೆ, ಕಂಡವರನ್ನು ಹಸುಳೆ, ದಡ್ಡನನ್ನು ಬುದ್ಧಿಶಾಲಿ, ಕೆಟ್ಟ ನಡತೆಯುವನನ್ನು ಸದಾಚಾರದವ, ಕಳ್ಳನನ್ನು ಧರ್ಮಪರ, ವ್ಯಸನಗ್ರಸ್ತನನ್ನು ಜಿತೇಂದ್ರಿಯನೂ, ಸೇರದೆ ಇರುವಂತೆ ಜೂಜು, ಬೇಟೆ, ಹೆಂಡ, ಮಾಂಸ, ನೀಚಳಾದ ಸೂಳೆ, ಪರರ ಹೆಂಡತಿಯ ಆಸೆ, ಕಳ್ಳತನ, ಎಂಬ ಏಳು ದುರ್ವ್ಯಸನಗಳನ್ನು ಸೇರದಿರುವುದೂ ; ಕೊಡುವ ವಿಟನನ್ನು ಪಡೆದ ಕುಂಟಣಿಯ ಹಾಗೆ, ಐಶ್ವರ್ಯವಂತನ ಕೈ ಹಿಡಿದ ಬಡವ, ರಾಜ್ಯ ಪಡೆದ ರಾಜಾಶ್ರಿತ, ತೇಜಸ್ಸನ್ನು ಪಡೆದ ರಾಜ, ಮನ್ನಣೆಯನ್ನು ಹೊಂದಿದ ಕೀಳು ಜಾತಿಯವನು, ವಿಜಯವನ್ನು ಪಡೆದ ಹೇಡಿ, ಯೌವನ ಹೊಂದಿದ ಮುದುಕ,—ಇವರಂತೆ ನಿಶ್ಶಂಕೆಯೇ ಮೊದಲಾದ ಅಷ್ಟಗುಣಗಳಲ್ಲಿ ಉಂಟಾದ ಅತ್ಯಂತ ಪ್ರೀತಿಯೂ, ಮದ್ದು ಗುಣಿಕೆಯನ್ನು ತಿಂದವರು, ಪಿತ್ತ ತಲೆಗೇರಿದವರು, ದೆವ್ವ ಹಿಡಿದವರು, ಮೋಕ್ಷ ಪಡೆದವರು ಯಮನಿಂದ ಓಲೆಯನ್ನು ಉಡಿಗೆ (ಪಾಸ್‌ಪೋರ್ಟ್) ಯನ್ನು ತಂದವರು, ಹೆಂಡ ಕುಡಿದವರು, ಇಚ್ಛಾಮರಣವುಳ್ಳವರು, ಅಮರರ ಹೊಟ್ಟೆಯಲ್ಲಿ ಹುಟ್ಟಿದವರು, ಇವರೆಲ್ಲರ ಹಾಗೆ ಜ್ಞಾನ, ಐಶ್ವರ್ಯ ಪೂಜೆ, ಕುಲ, ಬಲ,

---

[1] 'ಅಶ್ವಮಹಿಷನ್ಯಾಯ'ದಂತೆ ಕೋಣಕ್ಕೂ ಕುದುರೆಗೂ ಸಹಜ ವೈರ

ಹಾವಂ ಕಳ್ವಪೆಂಡಿರ ಪಿಸುಣನಪ್ಪೊಡವುಟ್ಟಿದರಂ ತಿಂಬನಾಯುಂ ಪೆಂಡಿರ್ಗಳಿಪುವ ಬಂಟನಂ ಕವರ್ಸುವ ನಂಟನಂ ಗೇಟು ಮಾಡುವಂತೆ, ಮಿಥ್ಯಾದೈವಂ ಮಿಥ್ಯಾಲಯುಂ ಮಿಥ್ಯಾತಪಂ ಮಿಥ್ಯಾತಪಸ್ವಿ ಮಿಥ್ಯಾಜ್ಞಾನಿ ಮಿಥ್ಯಾವ್ರತಮೆಂಬೀಷಡಾಯತನ ಸೇವೆಯುಂ ಗೇಟು ಮಾಡುವುದುಂ; ಅಡವಿಯ ಕೊಳನಂ ನೆಗಳ ಬಾವಿಯಂ ಬಡಬಾಗ್ನಿಯಂ ಪೋಲ್ವ ಮಿಥ್ಯಾತ್ವಮುಮಂ; .ಜಾರೆಯ ಮಗನಂ ಗಡಿಯ ನಾಯಕನಂ, ನಂಬಿಸಿ ಕೊಲ್ವವನಂ ಪೋಲ್ವ ಸಮ್ಯಙ್ಮಿಥ್ಯಾತ್ವಮುಮಂ ಬ್ರಾಹ್ಮಣನೊಡನಿರ್ದ ಸೂಳೆವೆಂಡತಿ ಪಡಪಿದ ಮಗನಂ, ಪ್ರಜೆ ಪರಿವಾರಂ ಪಿಡಿಯದರಸಂ ಪೋಲ್ವ ಸಮ್ಯಕ್ತ್ವ ಪ್ರಕೃತಿಯಂ ಪರಿಹರಿಪುದುಂ; ಕೆಟ್ಟ ರಾಜ್ಯಂ ಕೈಸಾರ್ದನಂತೆ ಸಂವೇಗದೊಳಂ ಬಟ್ಟೆಯೊಳ್ ಬಂಡಮುಂ ಕೊಳ್ವಟ್ಟನಂತೆ ನಿರ್ವೇಗದೊಳಂ, ಪೊಲ್ಲದಂ ಮಾಡಿದ ಸೂಚಿಯಂತೆ ನಿಂದೆಯೊಳಂ ಬಡಿಹದ ಮಕ್ಕಳಂತೆ ಅಳಲ್ವೆಯೊಳಂ ನೀರ್ಮುಟ್ಟಿದ ಕೆಂಡದಂತುಪಶಮದೊಳಂ, ಕೂರ್ಪಪೆಂಡಿರಕೂಟದಂತೆ, ಪಂಚಪರಮೇಷ್ಠಿಗಳೊಳಪ್ಪ ಭಕ್ತಿಯೊಳಂ, ಮಾಗಿಯೊಳ್ಮಿಂದರಂತನುಕಂಪೆಯೊಳಂ ಅಳಿಯನಂ ಕಂಡ ಮಾವನಂತೆ ವಾತ್ಸಲ್ಯದೊಳಂ ನೆರೆದಿರ್ಪುದುಂ ; ದೇವರೊಳಾದ ಶಂಕೆಯುಂ ಭೋಗದೊಳಪ್ಪ ಕಾಂಕ್ಷೆಯುಂ, ಶರೀರದೊಳಪ್ಪ ನಿರ್ವಿಚಿಕಿತ್ಸೆಯುಂ ನಿರ್ದೋಷಿಯ

ತಪಸ್ಸು, ರೂಪ, ಜಾತಿ, ಎಂಬ ಈ ಎಂಟು ಮದಗಳ ಸ್ಪರ್ಶವಿಲ್ಲದಿರುವುದೂ ; ಕೊಲ್ಲುವ ಹಾವು, ಕದಿಯುವ ಹೆಂಡಿರು, ಚಾಡಿಕೋರನಾದ ಸಹೋದರರು, ಕಚ್ಚುವ ನಾಯಿ, ಹೆಂಡರಿಗೆ ಆಸೆಪಡುವ ಭಂಟ, ಲೂಟಿಮಾಡಿಸುವ ನಂಟ,—ಇವರನ್ನೆಲ್ಲ ದೂರ ಮಾಡುವಂತೆ, ಮಿಥ್ಯಾದೈವ, ಮಿಥ್ಯಾಮಂದಿರ, ಮಿಥ್ಯಾತಪಸ್ಸು, ಮಿಥ್ಯಾತಪಸ್ವಿ, ಮಿಥ್ಯಾಜ್ಞಾನಿ, ಮಿಥ್ಯಾವ್ರತ, ಎಂಬೀ ಷಡಾಯತನ (ಆರರ ಗುಂಪು) (ಜೈನಧರ್ಮವಲ್ಲದ್ದೆಲ್ಲ ಮಿಥ್ಯೆಯೆಂದು ಇಲ್ಲಿ ಭಾವ) ಸೇವೆಯನ್ನು ದೂರ ಮಾಡುವುದೂ ಅಡವಿಯ ಕೊಳ, ಮೊಸಳೆಯುಳ್ಳ ಬಾವಿ, ಬಡಬಾಗ್ನಿ—ಇವುಗಳನ್ನು ಹೋಲುವ ಮಿಥ್ಯಾತ್ವವನ್ನು ; ಸ್ವೈರಿಣಿಯ ಮಗನನ್ನೂ ಗಡಿಯ ನಾಯಕನನ್ನು ನಂಬಿಸಿ ಮೋಸದಿಂದ ಕೊಲ್ಲುವನನ್ನು, ಹೋಲುವ ಸಮ್ಯಕ್ ಮಿಥ್ಯಾತ್ವವನ್ನು, ಬ್ರಾಹ್ಮಣನ ಜತೆಯಲ್ಲಿದ್ದ ಸೂಳೆವೆಂಡತಿ (ಮದುವೆಯಿಲ್ಲದೆ ಇರಿಸಿಕೊಂಡವಳು ?) ಸಾಕಿದ ಮಗನನ್ನು, ಪ್ರಜೆ ಪರಿವಾರಗಳು ಹಿಡಿಯದ ರಾಜನನ್ನೂ ಹೋಲುವ ಸಮ್ಯಕ್ತ್ವಪ್ರಕೃತಿಯನ್ನು[1] ಕಳೆದು ಬಿಡುವುದೂ ; ಕಳೆದು ಹೋದ ರಾಜ್ಯ ಕೈಸೇರಿದವನ ಹಾಗೆ, ಆನಂದದಲ್ಲಿಯೂ ದಾರಿಯಲ್ಲಿ ಸರಕೆಲ್ಲ ಕೊಳ್ಳೆ ಕೊಟ್ಟವನಂತೆ ದುಃಖದಲ್ಲಿಯೂ, ಕೆಟ್ಟದ್ದನ್ನು ಮಾಡಿದ ಸೂಚಿಯಂತೆ (?) ನಿಂದೆಗೂ ಏಟುತಿಂದ ಮಕ್ಕಳಂತೆ ಅಳಲುವಿಕೆಯಲ್ಲಿಯೂ ನೀರು ಮುಟ್ಟಿದ ಕೆಂಡದಂತೆ ಉಪಶಾಂತಿಯಲ್ಲಿಯೂ, ಪ್ರೀತಿಸುವ ಹೆಂಡಿರ ಸೇರುವಿಕೆಯಲ್ಲಿಯೂ, ಪಂಚಪರಮೇಷ್ಠಿಗಳಲ್ಲಿ ಉಂಟಾದ ಭಕ್ತಿಯಲ್ಲಿಯೂ ಮಾಗಿಯ ಕಾಲದಲ್ಲಿ ಸ್ನಾನಮಾಡಿದವರಂತೆ ಅನುಕಂಪೆ (ದಯೆ, ನಡುಕ)ಯಲ್ಲಿಯೂ, ಅಳಿಯನನ್ನು ಕಂಡ ಮಾವನಂತೆ ಅಭಿಮಾನದಲ್ಲಿಯೂ ಸೇರಿರುವುದೂ ; ದೇವರಲ್ಲಿ ಆದ ಅನುಮಾನ,

---

[1] ಶುದ್ಧಿಯಲ್ಲಿ ಮಲಿನತೆಯನ್ನುಂಟುಮಾಡುವುದು.

ಪ್ಪಾತನಂ ಪೊಗೞ್ವಲ್ಲಿ ಅನ್ಯದೃಷ್ಟಿ ಪ್ರಶಂಸೆಯುಂ, ಸದೋಷಿಯಪ್ಪಾತನಂ ಪೊಗೞ್ವಲ್ಲಿ ಅನ್ಯದೃಷ್ಟಿ ಸಂಸ್ತವನಮುಮೆಂಬ ಪಂಚಾತಿಚಾರದೊಳಂ ಕೂಡದುದುಂ; ಒಂದನೆಯ ದಾರ್ಶನಿಕನೆಂಬ ಶ್ರಾವಕಂಗಕ್ಕುಂ ೧೨೫

ಪರಮಜಿನನಾತ್ಮನಂತಾ
ಪರಮೇಶ್ವರನೆಂದುದಾಗಮಂ ನಿರ್ಗ್ರಂಥಂ
ಪರಮತಪಂ ಧರ್ಮಂ ದಯೆ
ವೆರಸಿದುದೆಂದಿಂತು ನಂಬುವುದೆ ಸಮ್ಯಕ್ತ್ವಂ ೧೨೬

ತತ್ಸಮ್ಯಕ್ತ್ವಂಬೆರಸು ಮ
ಹೋತ್ಸವದಿಂ ಬೆಸನಮೇೞುಮಂ ಬಿಸುಟುೞ್ಕೆ ನಿ
ರ್ಮತ್ಸರದಿಂ ಸದ್ಗುಣದೊಳ್
ವಾತ್ಸಲ್ಯಮನುಂಟುಮಾಡಿ ಕರಮಾದರದಿಂ ೧೨೭

ಕ್ರೂರತೆಯಿಂ ಪ್ರಾಣಿಗಳಂ
ಧಾರಿಣಿಯೊಳ್ಕೊಲ್ಲವೆಂತುಮುಗ್ರತೆಯಿಂ ನಿ
ಷ್ಕಾರಣಮಱಿಯದೆ ಕೊಂದೊಡ
ಮಾರಯ್ಯದೆ ಕೊಂದೆನೆಂದು ಮನದೊಳ್ನೋವಂ ೧೨೮

ವ್ರತಮಂ ಕೊಳದಿರ್ದೊಡಮ
ವ್ರತಿಯಾಗಂ ಕ್ಷಿತಿಯೊಳೆಸೆವ ಕುಲಬಲ ಸಂಪ
ತ್ಪ್ರತತಿಯೊಳಮಿರ್ದು ಸಜ್ಜನ
ಮತದೊಳ್ದಾರ್ಶನಿಕನೆಂಬನೊಂದನೆಯಾತಂ ೧೨೯

ಭೋಗದ ಆಸೆ, ಶರೀರದಲ್ಲಿ ಆಗುವ ನಿರ್ವಿಚಿಕಿತ್ಸೆ, ನಿರ್ದೋಷಿಯಾದವನನ್ನು ಹೊಗಳುವಾಗ ಅನ್ಯದೃಷ್ಟಿಯ ಪ್ರಶಂಸೆಯೂ, ದೋಷಯುಕ್ತನನ್ನು ಹೊಗಳುವಾಗ ಅನ್ಯರ ದೃಷ್ಟಿಯ ಸ್ತೋತ್ರವೂ ಎಂಬ ಐದು ಅತಿಚಾರಗಳಲ್ಲಿ ಸೇರದಿರುವುದೂ ; ಒಂದನೆಯ ದಾರ್ಶನಿಕನೆಂಬ ಶ್ರಾವಕನಿಗೆ ಆಗುತ್ತದೆ. ೧೨೫. "ಪರಮಜಿನೇಶ್ವರನೇ ಆತ್ಮ. ಅಂತು ಆ ಪರಮೇಶ್ವರನು ಹೇಳಿದ್ದೇ ಆಗಮ. ದಿಗಂಬರ ತಪಸ್ಸೇ, ಪರಮ ತಪಸ್ಸು. ಧರ್ಮ ದಯೆಯಿಂದ ಕೂಡಿದ್ದು" ಎಂದು ನಂಬುವುದೇ ಸಮ್ಯಕ್ತ್ವ ೧೨೬. ಆ ಸಮ್ಯಕ್ತ್ವದಿಂದ ಕೂಡಿ ಮಹೋತ್ಸವದಿಂದ ಏಳು ವ್ಯಸನ (ಕೆಟ್ಟ ಚಟಗಳು)ಗಳನ್ನು ಬಿಟ್ಟು ನಿರ್ಮತ್ಸರತೆಯಿಂದ, ಸದ್ಗುಣದಲ್ಲಿ ಅಭಿಮಾನವನ್ನುಂಟುಮಾಡುವುದು ೧೨೭. ಕ್ರೂರತೆಯಿಂದ ಪ್ರಾಣಿಗಳನ್ನು ಈ ಜಗತ್ತಿನಲ್ಲಿ ಹೇಗೂ, ಎಂದೂ ಕೊಲ್ಲನು. ಉಗ್ರತೆಯಿಂದ ನಿಷ್ಕಾರಣವಾಗಿ ತಿಳಿಯದೆ ಕೊಂದರೂ ವಿಚಾರಮಾಡದೆ ಕೊಂದೆನೆಂದುಮನಸ್ಸಿನಲ್ಲಿ ನೊಂದುಕೊಳ್ಳುವನು. ೧೨೮. ವ್ರತವನ್ನು ಹಿಡಿಯದಿದ್ದರೂ, ಅವ್ರತಿಯಾಗಿದ್ದರೂ, ಲೋಕದಲ್ಲಿರುವ ಕುಲಬಲ ಸಂಪತ್ಪ್ರತತಿಯೊಳಗಿದ್ದರೂ, ಶ್ರೇಷ್ಠವಾದ ಜಿನಮತದಲ್ಲಿ ಗೌರವವುಳ್ಳ ದಾರ್ಶನಿಕನೆಂಬವನು ಒಂದನೆಯವನು ೧೨೯. ಶ್ರೇಷ್ಠವಾದ ಸಮ್ಯಕ್ತ್ವದಿಂದ ಕೂಡಿ ಪ್ರಪಂಚ

ವರಸಮ್ಯಕ್ತ್ವಂಬೆರಸು
ವ್ವರೆಯೊಳ್ ಶಲ್ಯತ್ರಯಂಗಳಂ ತೊಱೆದು ಸದಾ
ಚರಿತನಿವನೆನಿಸಿ ಗುಣಮಂ
ಧರಿಯಿಸಿ ಪೆಱಗಿಕ್ಕಿ ಪಂಚವಿಂಶತಿಮಲಮಂ ೧೩೦

ಗದ್ಯ॥ ಬಸಿಱೊಳಿರ್ದಂಬಿನಂತೆ ಮನೆಯೊಳಿರ್ದ ಪಾವಿನಂತೆ ಕೂಟೂಳಗಿರ್ದ ನಂಜಿನಂತೆ, ಪೊಲ್ಲಮೆಯಂ ಮಾಡುವ ಮಿಥ್ಯಾಶಲ್ಯಂ ಮಾಯಾಶಲ್ಯಂ ನಿಧಾನಶಲ್ಯಮೆಂಬ ಮೂಱುಂ ಶಲ್ಯಂಗಳಿಂ ಪಿಂಗಿದಂ, ನಿಧಾನದಂತೆ ರಾಜ್ಯದಂತೆ ಕೂರ್ಪರ ಕೂಟದಂತೆ ಪಗೆವರ ಕೇಡಿನಂತೆ ಸ್ಥಿರಮಪ್ಪ ಜವ್ವನದಂತೆ ಸೊಗಯಿಸುವ, ಕೊಲ್ಲದ, ಪುಸಿಯದ, ಕಳ್ಳದ, ಪರಸ್ತ್ರೀಯರ್ಗೆಱಗದ, ನಿಯಮಿತ ಪರಿಗ್ರಹಮೆಂಬ ಪಂಚಾಣುವ್ರತಂಗಳ ಕೂಟಮನುಳ್ಳ, ದುಃಖಭಾಜನಮಲ್ಲದ ಶೀಲಸಪ್ತಕದೊಳ್ಕೂಡಿದಂ ಬಂಧ ವಧಚ್ಛೇದಾತಿಭಾರಾರೋಪಣಾನ್ನಪಾನ ನಿರೋಧಮೆಂಬೀ ಕೊಲ್ಲದ ವ್ರತದೈದತಿಚಾರದೊಳಂ, ಮಿಥ್ಯೋಪದೇಶ ರಹೋಭ್ಯಾಖ್ಯಾನ ಕೂಟಲೇಖನ ಕ್ರಿಯಾನ್ಯಾಸಾಪಹಾರಸಾಕಾರ ಮಂತ್ರಭೇದಮೆಂಬ ಪುಸಿಯದ ವ್ರತದೈದತಿಚಾರದೊಳಂ, ಸ್ತೇನಪ್ರಯೋಗ ತದಾಹೃತಾದಾನ ವಿರುದ್ಧ ರಾಜ್ಯಾತಿಕ್ರಮ ಹೀನಾಧಿಕಮಾನೋನ್ಮಾನ ಪ್ರತಿರೂಪಕ ವ್ಯವಹಾರಮೆಂಬ ಕಳದ ವ್ರತದೈದತಿಚಾರದೊಳಂ, ಪರವಿವಾಹಕರಣೇತ್ವರಿಕಾಪರಿಗ್ರಹಾ ಪರಿಗೃಹೀತಾ

ದಲ್ಲಿ ಶಲ್ಯತ್ರಯಗಳನ್ನು ತ್ಯಜಿಸಿ ಸದಾಚರವುಳ್ಳವನಾಗಿ ಗುಣವಂತನಾಗಿ ಇಪ್ಪತ್ತೈದಂ ಮಲ(ದೋಷ)ಗಳನ್ನು ಹಿಮ್ಮೆಟ್ಟಿಸಿ ೧೩೦. ಹೊಟ್ಟೆಯಲ್ಲಿರುವ ಬಾಣದಂತೆ, ಮನೆಯೊಳಗಿರುವ ಹಾವಿನಂತೆ, ಅನ್ನದೊಳಗೆ ಸೇರಿದ ವಿಷದಂತೆ, ಕೆಟ್ಟದ್ದನ್ನು ಮಾಡುವ ಮಿಥ್ಯಾಶಲ್ಯ, ಮಾಯಾಶಲ್ಯ, ನಿಧಾನಶಲ್ಯ, ಎಂಬ ಮೂರು ಶಲ್ಯಗಳನ್ನು ಹೋಗಲಾಡಿಸಿ ಕೊಂಡವನು ನಿಧಾನ (ಬಚ್ಚಿಟ್ಟಿದ್ದ ಧನ), ರಾಜ್ಯ, ಪ್ರೀತಿಸುವವರ ಸಂಗ, ಹಗೆಗಳಿಗಾದ ಕೇಡು. ಸ್ಥಿರವಾದ ಜವ್ವನ,—ಇವುಗಳಂತೆ ಸುಖವನ್ನುಂಟುಮಾಡುವ, ಕೊಲ್ಲದ, ಸುಳ್ಳಾಡದ, ಕದಿಯದ, ಪರರ ಹೆಂಗಸರಿಗೆ ಸೋಲದ, ನಿಯಮಿತ ಪರಿಗ್ರಹ, ಎಂಬ ಪಂಚ ಅಣುವ್ರತಗಳ ಸಂಬಂಧವುಳ್ಳ, ದುಃಖಕ್ಕೆ ಪಾತ್ರವಲ್ಲದ ಶೀಲ ಸಪ್ತಕ (ಏಳುಶೀಲ)ದಲ್ಲಿ ಕೂಡಿದವನು ; ಬಂಧನ, ಕೊಲೆ, ಅಂಗಗಳನ್ನು ಕತ್ತರಿಸುವುದು ಅತಿಭಾರವನ್ನು ಹೊರಿಸುವುದು, ಅನ್ನ ಪಾನಗಳಿಗೆ ಅಡ್ಡಿಮಾಡುವುದು ಎಂಬ ಈ ಕೊಲ್ಲದ ವ್ರತದ ಐದು ಅಕ್ರಮ ನಡೆವಳಿಕೆಯಲ್ಲಿಯೂ ಕಪಟಧರ್ಮದ ಉಪದೇಶ, ಸ್ತ್ರೀಪುರುಷರ ಏಕಾಂತವನ್ನು ಪ್ರಕಟಿಸುವುದು, ಸುಳ್ಳು ಕಾಗದಗಳನ್ನು ಬರೆಯುವುದು, ನ್ಯಾಸವಾಗಿ ಇಟ್ಟಿದ್ದ ಹಣವನ್ನು ಇಲ್ಲವೆನ್ನುವುದು ಅಥವಾ ಕಡಿಮೆ ಮೊತ್ತ ಹೇಳುವುದು, ಮುಖ ಸಂಜ್ಞೆ ಮೊದಲಾದವುಗಳಿಂದ ಇತರರ ಮನಸ್ಸನ್ನು ತಿಳಿದು ಪ್ರಕಟಿಸುವುದು,- ಇವು ಹುಸಿಯದ ವ್ರತದ ಐದು ಅತಿಚಾರಗಳಲ್ಲಿಯೂ ಇತರರಿಂದ ಕಳ್ಳತನ ಮಾಡಿಸುವುದು, ಕಳವಿನ ವಸ್ತುವನ್ನು ತೆಗೆದುಕೊಳ್ಳುವುದು, ರಾಜ್ಯ ಪಲ್ಲಟ ಕಾಲದಲ್ಲಿ ಹೆಚ್ಚು

ಗಮನಾನಂಗ ಕ್ರೀಡಾಕಾಮತೀವ್ರಾಭಿನಿವೇಶಮೆಂಬ ಪರಸ್ತ್ರೀಗೆಜಿಗದ ವ್ರತದ ಐದತಿಚಾರದೊಳಂ ಕ್ಷೇತ್ರ ವಾಸ್ತು ಹಿರಣ್ಯ ಸುವರ್ಣಧನಧಾನ್ಯ ದಾಸೀದಾಸ ಕುಪ್ಯಭಾಂಡಾತಿಕ್ರಮಮೆಂಬ ಪರಿಮಿತ ಪರಿಗ್ರಹದ್ವೈದತಿಚಾರದೊಳಂ, ಊರ್ಧ್ವಾಧಸ್ತಿರ್ಯಗ್ವ್ಯತಿಕ್ರಮಕ್ಷೇತ್ರ ವೃದ್ಧಿಸ್ಮೃತ್ಯಂತರಾದಾನ ಮೆಂಬ ದಿಗ್ವಿರತಿವ್ರತದೈದತಿಚಾರದೊಳಂ, ಆನಯನ ಪ್ರೇಷ್ಯಪ್ರಯೋಗ ಶಬ್ದರೂಪಾನುಪಾತ ಪುದ್ಗಲಕ್ಷೇಪಮೆಂಬ ದೇಶವಿರತಿವ್ರತದೈದತಿಚಾರದೊಳಂ, ಕಂದರ್ಪಕೌತ್ಕುಚ್ಯಮೌಖರ್ಯಾಸಮೀಕ್ಷ್ಯಾಧಿಕರಣೋಪಭೋಗ ಪರಿಭೋಗಾನರ್ಥಕ್ಯಮೆಂಬನರ್ಥದಂಡವಿರತಿವ್ರತದೈದತಿಚಾರದೊಳಂ ಕಾಯದುಃಪ್ರಣಿಧಾನ ವಾಗ್ದುಃಪ್ರಣಿಧಾನಮನೋದುಃಪ್ರಣಿಧಾನಾನಾದರಸ್ಮೃತ್ಯನುಪಸ್ಥಾನಮೆಂಬ

ಬೆಲೆಬಾಳುವ ವಸ್ತುಗಳನ್ನು ಕಡಿಮೆ ಬೆಲೆಗೆ ಕೊಳ್ಳುವುದು, ಅಳತೆ ತೂಕಗಳಲ್ಲಿ ಮೋಸ ಮಾಡುವುದು, ಕೃತ್ರಿಮ ಸುವರ್ಣಾದಿಗಳನ್ನು ವಂಚನೆಯಿಂದ ಮಾರುವುದು, ಎಂಬ ಕಳವಿಲ್ಲದ ವ್ರತದ ಐದು ಅತಿಚಾರಗಳಿಂದಲೂ, ಕನ್ಯಾದಾನಾದಿ ಪರವಿವಾಹ ಕಾರ್ಯವೂ ಪರಪುರುಷ ಗಮನಶೀಲೆ (ಇತ್ವರಿಕಾ)ಯಾದ ಸ್ತ್ರೀಯನ್ನು ಸೇರುವುದು, ಮದುವೆಯಾಗ ದವಳು, ಸೂಳೆ, ವಿಧವೆ ಮೊದಲಾದವರಲ್ಲಿ ಸೇರುವುದು, ಕಾಮಕ್ರೀಡೆ, ಅತಿಯಾದ ಕಾಮನಾಭಿಲಾಷೆ ಎಂಬಿವೈದು ಪರಸ್ತ್ರೀಗೆ ಆಸೆ ಪಡದ ವ್ರತದ ಅತಿಚಾರಗಳಲ್ಲಿಯೂ, ಹೊಲಗದ್ದೆಗಳೆಂಬ ಕ್ಷೇತ್ರ, ಬಂಗಾರ, ಧನಧಾನ್ಯಗಳು, ಮನೆಗಳು, ದಾಸದಾಸೀ ಜನಗಳು ಬಟ್ಟೆಬರೆ, ಚಂದನಲೇಪನಾದಿಗಳಲ್ಲಿ ಅಳತೆ ಮೀರುವುದು, ಇವು ಪರಿಗ್ರಹ ಪರಿಮಿತಿಯೆಂಬ ವ್ರತದ ಐದು ಅತಿಚಾರಗಳಿಂದಲೂ, ಕ್ಷೇತ್ರವೃದ್ಧಿಲೋಭದ ದೆಸೆಯಿಂದ ನಿರ್ಣೀತ ವಾದ ದಿಗ್ವಿಭಾಗಗಳನ್ನು ಮೀರಿ ಆಕ್ರಮಿಸುವುದು, (ದಿಣ್ಣೆ, ಗುಡ್ಡಗಳನ್ನು ಹಿಡಿಯುವುದು ಊರ್ಧ್ವ ಅತಿಕ್ರಮಣ, ಬಾವಿ ಅಗೆಸುವುದು ಮುಂತಾದ್ದು ಅಧೋಮಾರ್ಗದ ಅತಿಕ್ರ ಮಣ, ನೆಲದಮೇಲೆ ಮೇರೆಗಳನ್ನು ಮೀರುವುದು ತಿರ್ಯಗತಿ ಕ್ರಮಣ) ಎಂಬ ದಿಗ್ವಿರತ ವ್ರತದ ಐದು ಅತಿಚಾರಗಳೊಳಗೂ, ಬೇರೆಯವರ ಕ್ಷೇತ್ರಗಳ ಮೇಲಿನ ವಸ್ತುಗಳನ್ನು ತರಿಸಿಕೊಳ್ಳುವುದು ಆನಯನ, ಇದಕ್ಕೆ ಬಳಸುವ ಪ್ರೇಷ್ಯಪ್ರಯೋಗ, ಶಬ್ದಾನುಪಾತ, ರೂಪಾನುಪಾತ, ಪುದ್ಗಲ ಕ್ಷೇಪ, ಎಂಬ ಐದೂ ದೇಶವಿರತಿ ವ್ರತದ ಅತಿಚಾರಗಳಿಂದಲೂ, ಅಶಿಷ್ಟವಾಕ್ಯವನ್ನು ಬಳಸುವುದು, ಇತರರ ಚೇಷ್ಟೆಗಳನ್ನು ಪರಿಹಾಸ ಮಾಡುವುದು, ಹುರುಳಿಲ್ಲದ, ಅಪ್ರಯೋಜಕ ಕಾರ್ಯಗಳನ್ನು ಮಾಡುವುದು, ಪರಪೀಡಾವಚನಗಳನ್ನು ನುಡಿಯುವುದು, ಅಗ್ನಿವಿಷಕ್ಷಾರಾದಿಗಳನ್ನು ಕೊಡುವುದೇ ಮೊದಲಾದ ಅಸಮೀಕ್ಷಾದಿ ಕರಣ ಎಂಬ ಅನರ್ಥದಂಡ ವಿರತಿವ್ರತದ ಅತಿಚಾರಗಳಿಂದಲೂ ಶರೀರದ ಅವಯವ ಗಳಲ್ಲಿ ಅಡಕವಿಲ್ಲದಿರುವುದು, ಕಾಯದುಷ್ಪ್ರಣಿಧಾನ, ಅಕ್ಷರಸಂಸ್ಕಾರ ಭಾವಾರ್ಥಗಳಲ್ಲಿ ಗಮನವಿಡದಿರುವುದು ವಾಗ್ದುಷ್ಪ್ರಣಿಧಾನ, ಕ್ರೋಧಾವೇಶದಿಂದ ಸಾಮಾಯಿಕ ವಿಷಯ ಗಳಲ್ಲಿ ಮನಸ್ಸಿಡದಿರುವುದು ಮನೋದುಷ್ಪ್ರಣಿಧಾನ, ಅನಾದರ, ವಿಸ್ಮೃತಿ-ಎಂಬೀ ಐದು ಸಾಮಾಯಿಕ ಶಿಕ್ಷಾವ್ರತದ ಅತಿಚಾರಗಳಿಂದಲೂ, ನೋಡದೆ, ವಿಚಾರಮಾಡದೆ

ಸಾಮಾಯಿಕಶಿಕ್ಷಾವ್ರತದಯ್ದತಿಚಾರದೊಳಂ, ಅಪ್ರವೇಕ್ಷಿತಾ ಪ್ರಮಾರ್ಜಿತೋತ್ಸರ್ಗಾಪ್ರಮಾರ್ಜಿತಾದಾನಾ ಪ್ರತ್ಯವೇಕ್ಷಿತಾಪ್ರಮಾರ್ಜಿತ ಸಂಸ್ತರೋಪಕ್ರಮಣಾನಾದರ ಸ್ಮೃತ್ಯನುಪಸ್ಥಾನಮೆಂಬ ಪ್ರೋಷಧೋಪವಾಸಮೆಂಬ ಶಿಕ್ಷಾವ್ರತದಯ್ದತಿಚಾರದೊಳಂ, ಸಚ್ಚಿತ್ತಾಹಾರ ಸಚ್ಚಿತ್ತ ಸಂಬಂಧಾಹಾರ ಸಚ್ಚಿತ್ತಸಮ್ಮಿಶ್ರಾಹಾರಾಭಿಷವಾಹಾರ ದುಷ್ಪಕ್ವಾಹಾರಮೆಂಬುಪಭೋಗ ಪರಿಭೋಗ ಪ್ರಮಾಣಮೆಂಬ ಶಿಕ್ಷಾವ್ರತದಯ್ದತಿಚಾರದೊಳಂ, ಸಚ್ಚಿತ್ತ ನಿಕ್ಷೇಪ ಸಚ್ಚಿತ್ತಾಭಿಧಾನ ಪರವ್ಯಪದೇಶ ಮಾತ್ಸರ್ಯ ಕಾಲಾತಿಕ್ರಮಮೆಂಬ ತಿಥಿಸಂವಿಭಾಗ ಶಿಕ್ಷಾವ್ರತದೈದತಿಚಾರದೊಳಂ ಭಂಡಾರದ ಸೇನಬೋವನಂತೆ ರಾಣಿವಾಸದ ಪೆರ್ಗಡೆಯಂತೆ, ಪೊನ್ನಧ್ಯಕ್ಷಮಾದನಂತೆ ಬೆಳೆಗೆಯ್ಯಂ ರಕ್ಷಿಸುವನಂತೆ, ಮದಗಜಮನೇಱುವನಂತೆ, ಬಿನ್ನಪಂಗೆಯ್ವನಂತೆ ತೊಱೆಯನೀಸುವನಂತೆ, ಕೆಟ್ಟನಾಡಂ ಸಂತವಿಡುವನಂತೆ, ಮೂರ್ಖರ ಭರಮಂ ತಿರ್ದುವನಂತೆ, ರತ್ನಾಭರಣಮಂ ತೊಟ್ಟು

ಉತ್ಸರ್ಜನ ಮಾಡುವುದು, ಅವಿಚಾರದಿಂದ ಆಚಾರ್ಯಾದಿಗಳ ಪೂಜಾ ಸಾಮಗ್ರಿಗಳನ್ನೂ ತನ್ನ ಗಂಧಮಾಲ್ಯಾದಿಗಳನ್ನೂ ಕೊಳ್ಳುವುದು, ರತ್ನಕಂಬಳಿ ಮೊದಲಾದವನ್ನು ಸರಿಯಾಗಿ ನೋಡದೆ ಹಾಸುವುದು, ಹಸಿವು ಬಾಯಾರಿಕೆಗಳ ನಿಮಿತ್ತದಿಂದ ಆವಶ್ಯಕ ಕ್ರಿಯೆಗಳಲ್ಲಿ ಅನಾದರ ತೋರುವುದು. ಚಿಂತಾಂತರವ್ಯಗ್ರತೆಯಿಂದ ಮರೆಯುವುದು, ಈ ಪ್ರೋಷಧೋಪವಾಸವೆಂಬ ಶಿಕ್ಷಾವ್ರತದ ಐದು ಅತಿಚಾರಗಳಿಂದಲೂ, ಚೇತನಾದ್ರವ್ಯವಾದದ್ದು ಸಚ್ಚಿತ್ತಾಹಾರ, ಅಂಥ ದ್ರವ್ಯದಿಂದ ಕೂಡಿದ್ದು ಸಚಿತ್ತಸಂಬಂಧಾಹಾರ, ಇವೆಲ್ಲವುಗಳಿಂದ ಕೂಡಿದ್ದು ಸಚಿತ್ತಸಂಮಿಶ್ರಾಹಾರ, ಧಾನ್ಯ, ಆಮ್ಲ ಮೊದಲಾದ ದ್ರವಪದಾರ್ಥಗಳಿಂದ ಕೂಡಿದ್ದು ಅಭಿಷವಾಹಾರ, ಅಪಕ್ವ ಅತಿಪಕ್ವರೂಪದ ಆಹಾರ ದುಃಪಕ್ವಾಹಾರ, ಈ ಪಂಚವಿಧ ಆಹಾರಗಳನ್ನು ಸೇವಿಸುವುದರಿಂದ ಇಂದ್ರಿಯ ಪುಷ್ಟಿಯೂ ವಾತಾದಿ ಪ್ರಕೋಪವೂ ಆಗುವುವು. ಅದಕ್ಕೆ ಪ್ರತೀಕಾರ ಮಾಡುವಾಗ ಪಾಪಲೇಪವಾಗುವುದು. ಆದ್ದರಿಂದ ಜಿನಮುನಿಗಳು ಆ ಆಹಾರವನ್ನು ಸೇವಿಸ ಕೂಡದು. ಇದು ಉಪಭೋಗ ಪರಿಭೋಗ ಪರಿಮಾಣವ್ರತಾತಿಚಾರವಾಗುವುದು. ಸಚಿತ್ತವೆನಿಸಿದ ಪದ್ಮಪತ್ರಾದಿಗಳ ಮೇಲೆ ಪಾತ್ರೆಗಳನ್ನು ಇರಿಸುವುದು, ಪಾತ್ರೆಗಳ ಮೇಲೆ ಅಂಥ ಎಲೆಗಳಿಂದ ಮುಚ್ಚುವುದು, ಬೇರೆ ದಾತೃಗಳು ಕೊಟ್ಟವುಗಳನ್ನೇ ತಾನು ಕೊಡುವುದು, ಜಿನಮುನಿಗಳ ಚರಿಗೆಗೆ ಮುಂಚೆ ತಾನು ಊಟಮಾಡುವುದು, ಎಂಬ ಈ ಐದು ಅತಿಥಿ ಸಂವಿಭಾಗದ ಶಿಕ್ಷಾವ್ರತದ ಐದು ಅತಿಕ್ರಮ ನಡೆಯಲ್ಲಿಯೂ ; ಭಂಡಾರದ ಶಾನುಭೋಗನಂತೆ, ರಾಣಿವಾಸದ ಹೆಗ್ಗಡೆಯಂತೆ, ಹೊನ್ನಿನ ಅಧ್ಯಕ್ಷನಾದಂತೆ, ಬೆಳೆದ ಗದ್ದೆಯನ್ನು ಕಾಪಾಡುವವನಂತೆ, ಮದ್ದಾನೆಯನ್ನೇರುವವನ ಹಾಗೆ, ಬಿನ್ನಹ ಮಾಡುವವನಂತೆ, ಹೊಳೆಯನ್ನು ಈಜುವವನ ಹಾಗೆ, ಕೆಟ್ಟದೇಶವನ್ನು ಸರಿಪಡಿಸುವವನಂತೆ, ಮೂರ್ಖರ ರಭಸವನ್ನು ತಿದ್ದುವವರಂತೆ, ರತ್ನದ ಒಡವೆಗಳನ್ನು ಧರಿಸಿಕೊಂಡು

ಬಟ್ಟೆವೋಪನಂತೆ ಚಕ್ರವರ್ತಿಯ ಬಾಗಿಲಂ ಕಾವನಂತೆ, ನಯಮುಂ ಬುದ್ಧಿಯುಮಾಱ್ಕೆಯುಂ ಬೆರಸು ನಡೆವಾತಂ ೧೩೧

ಅತ್ತಿಯ ಬಸರಿಯ ಗೋಳಿಯ
ಮತ್ತರಳಿಯ ವಟದ ಪಣ್ಣನಡಗಂ ಜೇನಂ
ಬಿತ್ತರಮದ್ಯಮನಾಗೆಂ
ಬುತ್ತಮಸಂಸೇವ್ಯ ಮೂಲಗುಣಮೀಯೆಂಟುಂ ೧೩೨

ಪಂದೋಲ್ನೆತ್ತರ್ಕೀವಡ
ಗಂದಿನ ತಾಂ ತೊಱೆದ ವಸ್ತು ಸತ್ತಕ್ರಿಮಿಗಳ್
ಸಂದಸ್ಥಿಯೆಂಬಿವೇೞುಂ
ಕುಂದದೆ ಮುಟ್ಟಲ್ಪಡಕ್ಕುಮರ್ಹನ ಮತದಿಂ ೧೩೩

ಗದ್ಯ॥ ಮೂಲಗುಣಮೆಂಟಱೊಳಂ ಕೂಡಿ ಸಪ್ತಾಂತರಾಯಂಗಳಂ ಪಿಂಗಿಸಿ ಪಂಚಾಣುವ್ರತದೊಳೊಳ್ಪಿದನೆನಿಸಿ ಗುಣವ್ರತತ್ರಯದೊಳಂ ನೆರೆದು ಶಿಕ್ಷಾವ್ರತಚತುಷ್ಟಯದೊಳವೊಸಗಿ ಧರ್ಮಶಾಲ್ಯಂಕುರಕ್ಕೆಡೆಯೆನಿಪ ಅಱುವತ್ತತಿಚಾರಮುಮಂ ಪಿಂಗಿಸಿ ನೆಗೞ್ವಾತನೆರಡನೆಯ ವ್ರತಿಕನೆಂಬ ಶ್ರಾವಕನಕ್ಕುಂ ೧೩೪

ಪ್ರಯಾಣ ಹೋಗುವವರಂತೆ, ಚಕ್ರವರ್ತಿಯ ಬಾಗಿಲನ್ನು ಕಾಯುವವನ ಹಾಗೆ, ವಿನಯವೂ ಬುದ್ಧಿಯೂ, ಎಚ್ಚರಿಕೆಯೂ ಕೂಡಿ ನಡೆಯುವವನು ೧೩೧. ಅತ್ತಿ, ಬಸರಿ, ಗೋಳಿ, ಅರಳಿ, ಆಲ–ಈ ಮರಗಳ ಹಣ್ಣನ್ನೂ ಮಾಂಸವನ್ನೂ ಜೇನನ್ನೂ ಹೆಚ್ಚಾದ ಕೆಂಡವನ್ನೂ 'ಆಗದು' ಎಂಬ ಉತ್ತಮವೂ ಸಂಸೇವನಾರ್ಹವೂ ಆದ ಈ ಎಂಟು ಮೂಲ ಗುಣಗಳು. ೧೩೨. ಹಸಿಯ ತೊಗಲು, ರಕ್ತ, ಕೀವು, ಮಾಂಸ, ಅಂದಿನ ತಾವು ತೊರೆದ ವಸ್ತು, ಸತ್ತ ಹುಳುಗಳು, (ಹೆಚ್ಚಾದ) ಮೂಳೆ ಎಂಬ ಈ ಏಳೂ ಅರ್ಹಂತನ ಮತದಂತೆ ಮುಟ್ಟ ಬಾರದವು ೧೩೩. ಮೂಲಗುಣಗಳೆಂಟರಿಂದ ಕೂಡಿಕೊಂಡು, ಏಳು ವಿಘ್ನಗಳನ್ನು ಕಳೆದು, ಐದು ಅಣು ವ್ರತಗಳಲ್ಲಿ ಒಳ್ಳೆಯವನೆನ್ನಿಸಿಕೊಂಡು, ಮೂರು ಗುಣವ್ರತಗಳಿಂದೂ ಸೇರಿ ನಾಲ್ಕು ಶಿಕ್ಷಾವ್ರತಗಳನ್ನು ಆಚರಿಸಿ ಧರ್ಮವೆಂಬ ನೆಲ್ಲಿನ ಮೊಳಕೆಗೆ ಆಶ್ರಯವೆನಿಸುವ, ಅರವತ್ತು ಅತಿಚಾರಗಳನ್ನು ಕಳೆದು ಆಚರಿಸುವವನು ಎರಡನೆಯ ವ್ರತಿಕನೆಂಬ ಶ್ರಾವಕನಾಗುವನು ೧೩೪. ಶುದ್ಧ ಜೀವನ

ಸ್ಥಿರನಾಗಿ ಶುದ್ಧವೃತ್ತಿಯೊ
ಳಿರವರಿಸದೆ ಪೆಱಗೆ ಪೇೞ್ದ ಸುವ್ರತಮನಿತುಂ
ಬೆರಸು ದಯೆವೆರಸು ರಾಗಂ
ಬೆರಸು ಸದಾಚಾರನಾಗಿ ನಿರ್ಮಲಮನದಿಂ ೧೩೫

ಗದ್ಯ॥ ಸಮತೆವೆರಸು ಕರ್ಮರಾಜನಂ ಕಯ್ವಾರಂಗೊಂಡು ಮೋಹರಾಜನಟ್ಟಿದ ತಂತ್ರಮೆನಿಸುವ ಮೂವತ್ತೆರಡುಂ ದೋಷಂಗಳಂ ಪತ್ತುವಿಟ್ಟು ಮೆಚ್ಚಿಲ್ಲದೆ ಜಡನಾಗಿ ದೇವಗುರುಗಳಂ ಪೊರ್ದದೆ ಪೆಱರ್ಗೆ ಪೀಡೆಯಂ ಮಾಡುತ್ತುಂ ಮೆಯ್ಯಂ ತೂಗುತ್ತುಂ ಉನ್ಮತ್ತ ಚೇಷ್ಟೆಯಿಂದೆರೆಯಂ ತಿಂದ ಮೀನಂತೆ ಪೊಟೆಯುತ್ತುಂ ಪೊಲ್ಲಮನನಾಗಿ ಕಯ್ಯಂ ತಳ್ತಿಱಿದು ಪೆಱರ್ಗಂಜಿ ಪೆಱರನೆವದಿಂ ಪೆಂಪು ಕಾರಣಮಾಗೆ ಗುರುಗಳಂ ಕಳ್ದು ಗುರುಗಳ್ಗೆ ಪ್ರತಿಕೂಲನಾಗಿ ಗೃಹಂ ಮೊದಲಾಗೆ ಶಲ್ಯಂ ಬೆರಸು ನುಡಿಯುತ್ತುಂ ಪೆಱರನೇಡಿಸುತ್ತುಂ ನೊಸಲನೆತ್ತುತ್ತುಂ ಕಂಪಿಸುತ್ತುಂ ಋಷಿಯರಂ ಕಂಡು ಕಾಣಲೀಯದೆ ಸಂಘನಿರೋಧದಿಂ ಕಯ್ಯಂಬಿಟ್ಟು ಪಡಪು ಕಾರಣಮಾಗೆ ಮೇಲ್ವಡೆವೆನೆಂದು ಕುಂದಿಸಿ ಪೆರ್ಚಿಸಿ ಸನ್ನೆಗೆಯ್ಯುತ್ತುಂ ಪೊಲ್ಲ ದನಿಯಿಂ ಗೀತಂ ಮಾಡುತ್ತುಮಿರ್ಪುದೆಂಬೀ ಮೂವತ್ತೇಡು ದೋಷಂಗಳಂ ಪಿಂಗಿ, ಮೂಱುಂ ಪೊತ್ತುಂ ದೇವರಂ ವಂದಿಸುವಂ ; ಮತ್ತಂ ಕುದುರೆಗಾಲಿಕ್ಕುತ್ತುಂ ಲತೆಯಂತೆ ಬಳ್ಕುತ್ತುಂ ನೆಮ್ಮಿಕೇರಂ ಮಲಂಗಿ ಮಾಳಿಗೆಯಂ ಪೊತ್ತು

ದಲ್ಲಿ ಸ್ಥಿರವಾಗಿ ನಿಂತು ಹಿಂಜರಿಯದೆ, ಹಿಂದೆ ಹೇಳಿದ ಸುವ್ರತಗಳೆಲ್ಲವನ್ನು ಕೂಡಿ ದಯಾಶಾಲಿಯಾಗಿ ಪ್ರೀತಿಯಿಂದ ಸದಾಚಾರವುಳ್ಳವನಾಗಿ ನಿರ್ಮಳ ಮನಸ್ಸಿನಿಂದ ಸಮಬುದ್ಧಿಯನ್ನು ಹೊಂದಿ ಕರ್ಮರಾಜನನ್ನು ಹೊಗಳಿ ಮೋಹರಾಜನು ಕಳುಹಿಸಿದ ಸೈನ್ಯವೆನಿಸುವ ಮೂವತ್ತೆರಡು ದೋಷಗಳನ್ನು ಕಳಚಿಬಿಟ್ಟು, ಮೆಚ್ಚುಗೆಯಿಲ್ಲದೆ ಜಡನಾಗಿ, ದೇವಗುರುಗಳನ್ನು ಸೇರದೆ, ಇತರರಿಗೆ ಕಾಟವನ್ನು ಮಾಡುತ್ತ ತೂಗಾಡಿಸುತ್ತ, ವಿಶೇಷವಾಗಿ ಮದಿಸಿದವನ ಚೇಷ್ಟೆಯಿಂದ, ಎರೆಯನ್ನು ತಿಂದ ಮೀನಿನ ಹಾಗೆ ಹೊಳೆಯುತ್ತ, ಕೆಟ್ಟಮನಸ್ಸಿನವನಾಗಿ ಕೈಮಾಡಿ ಇರಿದು ಬೇರೆಯವರಿಗೆ ಹೆದರಿ ಇತರರ ನೆಪದಿಂದ, ಹಿರಿಮೆಯ ಕಾರಣದಿಂದ, ಗುರುಗಳಿಂದ ಕಳ್ಳತಪ್ಪಿಸಿಕೊಂಡು, ಅವರಿಗೆ ವಿರೋಧಿಯಾಗಿ, ಮನೆ ಮೊದಲಾಗಿ ಶಲ್ಯದಿಂದ ಕೂಡಿ ನುಡಿಯುತ್ತ ಇತರರನ್ನು ಹಾಸ್ಯ ಮಾಡುತ್ತ, ಹಣೆಯನ್ನೆತ್ತುತ್ತ ನಡುಗುತ್ತ, ಋಷಿಗಳನ್ನು ಕಂಡೂ, ಕಾಣಗೊಡದೆ ಸಂಘದ ಅಡ್ಡಿಯಿಂದ ಕೈಬಿಟ್ಟು ಸಂಪಾದನೆಯೇ ಕಾರಣವಾಗಲು, ಮೇಲ್ಮೆಯನ್ನು ಹೊಂದುವೆನೆಂದು ಕುಗ್ಗಿಸಿ, ಹೆಚ್ಚಿಸಿ, (ತೆಗಳಿ, ಹೊಗಳಿ) ಮಾತನಾಡುತ್ತ, ಸೈಗೆ ಮಾಡುತ್ತ, ಕೆಟ್ಟ ಧ್ವನಿಯಿಂದ ಹಾಡುತ್ತ, ಇರುವುದೆಂಬ ಈ ಮೂವತ್ತೆರಡು ದೋಷಗಳನ್ನೂ ಕಳೆದುಕೊಂಡು ಮೂರು ಹೊತ್ತೂ ದೇವರನ್ನು ವಂದಿಸುವವನು, ಮತ್ತು ಕುದುರೆಯಂತೆ ಕಾಲು ಎತ್ತಿ ಇಟ್ಟು ನಡೆಯುತ್ತ, ಬಳ್ಳಿಯಂತೆ ಬಳುಕುತ್ತ, ಗೋಡೆಯನ್ನು ಒರಗಿಕೊಂಡು ಮಲಗಿ, ಮಾಳಿಗೆಯನ್ನು (?) ಹೊತ್ತು ಗುಹ್ಯನಿರೋಧಕನಾಗಿ, ಸಂಕೋಲೆ

ಗುಹ್ಯ ನಿರೋಧನಾಗಿ ಸಂಕಲೆಯೊಳಿರ್ದಂತೆ ನೇಲ್ದು ಕೊರಲನತ್ತಿ ಮೊಲೆಯಂ ನೋಡುತ್ತುಂ ಕಾಗೆಯಂತೆ ಕಡೆಗಣ್ಣೊಳೆ ನೋಡುತ್ತುಂ ಕಟಿಬಿಟ್ಟ ಕುದುರೆಯಂತೆ ಬಾಯಂ ಪೊಳಕಿಸುತ್ತುಂ ಕೊರಲಂ ನೀಡಿ ಕಯ್ಯಂಪಿಡಿದು ತಲೆಯಂ ತೂಗುತ್ತುಂ ಸನ್ನೆದೋಱುತ್ತುಂ ಬೆರಲನಾಡಿಸುತ್ತುಂ ಪುರ್ವಿಕ್ಕುತ್ತುಂ ಸೊಕ್ಕಿದರಂತೆ ಮರುಳ್ಗೊಂಡವರಂತೆ ದೆಸೆಯಂ ನೋಡುತ್ತುಂ ಕೊರಲಂ ಕುಸಿಯುತ್ತುಮುತ್ತರಿಸಿದ ಕುದುರೆಯಂತೆ ಮೋಱೆಯಂ ನೆಗಪುತ್ತುಂ ಮೆಯ್ಯಂ ಮುಟ್ಟುತ್ತುಂ ಕೊರಲಂ ತಿರಿಪುತ್ತುಂ ಭೋಗಂಗಳಂ ಚಿಂತಿಸುತ್ತುಂ ಕಣ್ಸನ್ನೆಗೆಯ್ಯುತ್ತುಂ ಪರವಶಮಾದರಂತೆ ಜಡನಾಗುತ್ತುಮಿರಲಾಗದೆಂಬೀ ಮೂವತ್ತೆರಡು ದೋಷಂಗಳಿಂ ಪಿಂಗಿ ಕಾಯೋತ್ಸರ್ಗಂ ಮಾಡುವ ಶುದ್ಧಬುದ್ಧಿಯಿಂ ಮೂಱುಂ ಪೊೞ್ತಿನೊಳಂ ದೇವತಾಸ್ತವವಿಧಿಯೊಳೆಸಗುವಾತಂ ಮೂಱನೆಯ ಶ್ರಾವಕಂ ಸಾಮಾಯಿಕನೆಂಬಂ ೧೩೬

ತಿಂಗಳ್ ನಾಲ್ಕುಂ ಪರ್ವದಿ
ನಂಗಳೊಳಂ ಪೆಱಗೆ ಪೇೞ್ದ ಗುಣಮನಿತಱೊಳಿಂ
ಪಿಂಗದುಪವಾಸಯುತನು
ತ್ತುಂಗಂ ಬಾಪೆಂದು ಧಾತ್ರಿ ಕೈಮುಗಿವಿನೆಗಂ ೧೩೭

ಉಪವಾಸದೊಳ್ನೆಗಟ್ದಂ ಪ್ರೋಷಧೋಪವಾಸನೆಂಬ ನಾಲ್ಕನೆಯ ಶ್ರಾವಕನಕ್ಕುಂ ೧೩೮

ಯಲ್ಲಿದ್ದವರ ಹಾಗೆ ನೇತಾಡಿ, ಕೊರಳನ್ನೆತ್ತಿ ಮೊಲೆಯನ್ನು ನೋಡುತ್ತ ಕೀಳನ್ನು ಬಾಯಿಗಿಟ್ಟ ಕುದುರೆಯಂತೆ ಬಾಯನ್ನು ಅಗಿಯುವಂತೆ ಅಲುಗಾಡಿಸುತ್ತ, ಕಾಗೆಯ ಹಾಗೆ ಕಡೆಗಣ್ಣಿನಿಂದ ನೋಡುತ್ತ, ಕತ್ತುಚಾಚಿ, ಕೈನೀಡಿ, ತಲೆತೂಗುತ್ತ ಸಂಜ್ಞೆ ಮಾಡುತ್ತ, ಬೆರಳುಗಳನ್ನು ಕುಣಿಸುತ್ತ, ಹುಬ್ಬುಹಾರಿಸುತ್ತ, ಕೊಬ್ಬಿದವರಂತೆ, ದೆವ್ವ ಹಿಡಿದವರಂತೆ, ದಿಕ್ಕುಗಳನ್ನು ನೋಡುತ್ತ, ಕೊರಳನ್ನು ಕುಗ್ಗಿಸುತ್ತ, ದಾಟಿದ ಕುದುರೆಯ ಹಾಗೆ ಮೋರೆಯನ್ನು ಎತ್ತುತ್ತ, ಮೈಯನ್ನು ಮುಟ್ಟುತ್ತ, ಕೊರಳನ್ನು ತಿರುಗಿಸುತ್ತ, ಕೈಯನ್ನಲ್ಲಾಡಿಸುತ್ತ ಹಲ್ಲು ಕಡಿಯುತ್ತ, ಪರವಶರಾದವರಂತೆ ಜಡನಾಗುತ್ತ, ಇರಬಾರದೆಂಬ ಈ ಮೂವತ್ತೆರಡು ದೋಷಗಳನ್ನು ಕಳೆದುಕೊಂಡು, ದೇಹತ್ಯಾಗಮಾಡುವ ಶುದ್ಧ ಬುದ್ಧಿಯಿಂದ ಮೂರು ಹೊತ್ತೂ ದೇವರ ಸ್ತೋತ್ರ ವಿಧಿಯಂತೆ ಮಾಡುವವನು ಮೂರನೆಯ ಶ್ರಾವಕ ಸಾಮಾಯಿಕನೆಂಬುವನು ೧೩೬. ತಿಂಗಳ ನಾಲ್ಕು ಪರ್ವದಿನಗಳಲ್ಲಿಯೂ ಹಿಂದೆ ಹೇಳಿದ ಗುಣಗಳೆಲ್ಲವನ್ನೂ ಹೊಂದಿ, ಬಿಡದೆ ಉಪವಾಸ ಮಾಡುತ್ತ ಲೋಕ 'ಭಾಪು, ಶ್ರೇಷ್ಠನು' ಎಂದು ಹೊಗಳಿ ಕೈಮುಗಿಯುವಂತೆ ಆಚರಿಸುವವನು 'ಪ್ರೋಷಧೋಪವಾಸ' ಎಂಬ ನಾಲ್ಕನೆಯ ಶ್ರಾವಕನಾಗುತ್ತಾನೆ. (೧೩೭-೮) ಹಿಂದಿನ ಗುಣಸಹಿತನಾಗಿ ಒಳ್ಳೆಯತನವನ್ನು ಮರೆಯದೆ ದಯೆಯಿಂದ

ಪೆಱಗಣವುಸಹಿತವೊಳ್ಪಿಂ
ಮಱೆಯದೆ ದಯೆವೆರಸು ಪಸಿಯವಸ್ತುಗಳಂ ತಾಂ
ಮಱೆದುಂ ಕೊಳಲೊಲ್ಲದವಂ
ಪೆಱತೇಂ ಸಚ್ಚಿತ್ತನೆಂಬನೈದನೆಯಾತಂ ೧೪೯

ಇರುಳಲ್ಲದೆ ಪಗಲೊಳ್ಪೆಂ
ಡಿರ ಸೇವೆಯನೆಯ್ದೆಬಿಟ್ಟು ಮುಂ ಪೇಟ್ದಗುಣಂ
ಬೆರಸಿರ್ದಾಶ್ರಾವಕನು
ರ್ವರೆಯೊಳ್ ತಾಂ ರಾತ್ರಿಭಕ್ತನಾಱನೆಯಾತಂ ೧೫೦

ದುರಿತದ ಕಟ್ಟೆ ದುರ್ಗತಿಯ ಬಟ್ಟೆ ಕಳಂಕದ ಮೊಟ್ಟೆ ದುಃಖದಾ
ಗರಮಿವರೆಂದು ಕಾಮಿನಿಯರೊಂದುಪಭೋಗಮನೆಯ್ದೆ ಬಿಟ್ಟು ಸ
ಚ್ಚರಿತದೊಳಾರ್ತು ಕೂರ್ತೆಸಗುವುತ್ತಮ ಸದ್ಗುಣನಲ್ತೆ ಧಾತ್ರಿಗ
ಚ್ಚರಿ ಸಕಲೈಕಪುಣ್ಯನಿಧಿ ದುರ್ಗುಣದೂರನುದಾರನುತ್ತಮಂ ೧೫೧

ಗದ್ಯ॥ ಬ್ರಹ್ಮಚಾರಿಯೆಂಬೇೞನೆಯ ಶ್ರಾವಕಂ ೧೫೨

ಆರಂಭದದೆಸೆಯಂ ಬಿ
ಟ್ಟೋರಂತಿರೆ ಪೆಱಗೆ ಪೇಟ್ದಗುಣಮನಿತಱೊಳಂ
ಸಾರಮಿದೆನಿಸಿ ನಡೆವವ
ನಾರಂಭನಿವೃತ್ತನೆಂಟನೆಯಾತಂ ೧೫೩

ಕೂಡಿ ಹಸಿಯ ವಸ್ತುಗಳನ್ನು ತಾನು ಮರೆತು ಸಹ, ಸ್ವೀಕರಿಸಬಯಸದವನು ಸಚ್ಚಿತ್ತನೆಂಬ ಐದನೆಯ ಶ್ರಾವಕನು ೧೪೯. ರಾತ್ರಿಯಲ್ಲದೆ ಹಗಲು ಹೆಂಡಿರ ಸಹವಾಸವನ್ನು ಬಿಟ್ಟು ಮುಂಚೆ ಹೇಳಿದ ಗುಣಗಳಿಂದ ಕೂಡಿರುವ ಶ್ರಾವಕನು ಲೋಕದಲ್ಲಿ ರಾತ್ರಿಭಕ್ತನೆಂಬ ಆರನೆಯ ಶ್ರಾವಕ ೧೫೦. "ಪಾಪದ ಕಟ್ಟೆ, ದುರ್ಗತಿಯ ದಾರಿ, ಕಳಂಕದ ಮೂಟೆ, ದುಃಖದ ಮನೆ,–ಇವರು" ಎಂದು ಕಾಮಿನಿಯರ ಉಪಭೋಗವನ್ನು ಸಂಪೂರ್ಣವಾಗಿ ತ್ಯಜಿಸಿ ಸಚ್ಚರಿತ್ರೆಯಲ್ಲಿ ಸಾಮರ್ಥ್ಯದಿಂದಲೂ ಪ್ರೀತಿಯಿಂದಲೂ ನಡೆಯುವ ಉತ್ತಮ ಸದ್ಗುಣಿಯು ಧಾತ್ರಿಗೆ ಆಶ್ಚರ್ಯ, ಸಕಲ ಪುಣ್ಯಗಳ ನಿಧಿ, ಅವನು ದುರ್ಗುಣ ದೂರನು, ಶ್ರೇಷ್ಠನು, ೧೫೧. ಬ್ರಹ್ಮಚಾರಿಯೆಂಬ ಏಳನೆಯ ಶ್ರಾವಕ. ೧೫೨. ಪ್ರಾರಂಭ ದೆಸೆಯನ್ನು ಬಿಟ್ಟು ಒಂದೇ ಸಮನಾಗಿ ಹಿಂದೆ ಹೇಳಿದ ಗುಣಗಳೆಲ್ಲದರಲ್ಲಿಯೂ 'ಇದುಸಾರ' ಎಂದೆನ್ನುವಂತೆ ನಡೆಯುವವನು ಆರಂಭನಿವೃತ್ತ, ಎಂಬ ಎಂಟನೆಯ ಶ್ರಾವಕ ೧೫೩. ಶ್ರದ್ಧೆಯಿಂದ ಮುಂಚೆ ಹೇಳಿದ ಗುಣಗಳಿಂದ ಕೂಡಿ

ಭರದಿಂ ಮುಂ ಪೇಲ್ದಗುಣಂ
ಬೆರಸು ಪರಿಗ್ರಹದ ಚಿಂತೆಯಂ ಬಿಟ್ಟು ಸದಾ
ಚರಿತನೆನಿಪಂ ಪರಿಗ್ರಹ
ವಿರತಂ ಪಾಪಾದ್ರಿವಜ್ರನೊಂಬತ್ತನೆಯಂ ೧೪೪

ಅನುಮತಿಯೆಂಬಂ ತಾಂ ಪ
ತ್ತನೆಯಾತಂ ತನಗೆ ಪೇಲ್ದ ಮಾರ್ಗಮನೆಂದುಂ
ಮನವೊಸೆದು ಸೇವಿಸದೆ ಮು
ನ್ನಿನ ಗುಣದೊಳ್ಕೂಡಿ ನೆಗಲ್ವನುನ್ನತಿಯಿಂದಂ ೧೪೫

ತನ್ನಂ ಕುಱುತ್ತು ಮಾಡಿ
ದನ್ನಮನೌಷಧಮನೊಲ್ಲನುತ್ಸವದಿಂದಂ
ಮುನ್ನಿನ ಗುಣದೊಳ್ಕೂಡಿ
ರ್ಪನ್ನೆಱೆಯುದ್ದಿಷ್ಟವಿರತ ಪನ್ನೊಂದನೆಯಂ ೧೪೬

ಗದ್ಯ॥ ಇಂತು ದಾರ್ಶನಿಕಂ ವ್ರತಿಕಂ ಸಾಮಾಯಿಕಂ ಪ್ರೋಷಧೋಪವಾಸಂ ಸಚ್ಚಿತ್ತವಿರತಂ ರಾತ್ರಿಭಕ್ತಂ ಬ್ರಹ್ಮಚಾರಿ ಆರಂಭನಿವೃತ್ತಂ ಪರಿಗ್ರಹವಿರತಂ ಎಂದು ಶ್ರಾವಕಸ್ಥಾನಂ ಪನ್ನೊಂದಕ್ಕುಮೆಂದು ಮುನೀಂದ್ರೋತ್ತಮರ್ ಪೇೞೆ ಖೇಚರ ರಾಜಂ ೧೪೭

ಅನುಪಮಮೆನಿಸುವ ಪನ್ನೊಂ
ದನೆಯುಮಹಾಶ್ರಾವಕತ್ವಮಂ ದಯೆಯಿಂದಂ
ಮುನಿಪತಿ ದಯೆಗೆಯ್ವುದು ಮ
ತ್ತೆನಗೆನೆ ಖೇಚರನ ನುಡಿಗೆ ಮೆಚ್ಚಿ ಮುನೀಂದ್ರಂ ೧೪೮

ಪರಿಗ್ರಹ (ಸಂಗ್ರಹ ಶೇಖರಣೆ)ದ ಚಿಂತೆಯನ್ನು ಬಿಟ್ಟು ಸದಾಚಾರಪರನಾಗಿ ಇರುವಂಥವನು ಪರಿಗ್ರಹವಿರತನೆಂಬ, ಪಾಪಪರ್ವತಕ್ಕೆ ವಜ್ರಾಯುಧನಾದ ಒಂಬತ್ತನೆಯ ಶ್ರಾವಕ. ೧೪೪. 'ಅನುಮತಿ' ಎಂಬವನು ಹತ್ತನೆಯವನು. ಅವನು ತನಗೆ ಹೇಳಿದ ಮಾರ್ಗವನ್ನು ಎಂದೂ ಮನಃಪ್ರೀತಿಯಿಂದ ಸೇವಿಸದೆ ಮುಂಚಿನಗುಣಗಳಿಂದ ಕೂಡಿ ಶ್ರೇಷ್ಠನಾಗಿ ನಡೆದುಕೊಳ್ಳುವನು ೧೪೫. ತನ್ನ ಉದ್ದೇಶದಿಂದಲೇ ಮಾಡಿದ್ದ ಅನ್ನವನ್ನು ಔಷಧವನ್ನು ತೆಗೆದುಕೊಳ್ಳದವನು, ಸಂತೋಷದಿಂದ ಹಿಂದಿನ ಗುಣಗಳಿಂದ ಕೂಡಿರುವವನು ಉದ್ದಿಷ್ಟವಿರತನೆಂಬ ಹನ್ನೊಂದನೆಯ ಶ್ರಾವಕ ೧೪೬. ಹೀಗೆ ದಾರ್ಶನಿಕ, ವ್ರತಿಕ, ಸಾಮಾಯಿಕ, ಪ್ರೋಷಧೋಪವಾಸ, ಸಚ್ಚಿತ್ತವಿರತ, ರಾತ್ರಿಭಕ್ತ, ಬ್ರಹ್ಮಚಾರಿ, ಆರಂಭನಿವೃತ್ತ, ಪರಿಗ್ರಹವಿರತ, ಎಂಬುದಾಗಿ ಶ್ರಾವರ ಸ್ಥಾನಗಳು ಹನ್ನೊಂದು ಇವೆ. ಹೀಗೆಂದು ಮುನೀಂದ್ರ ಶ್ರೇಷ್ಠರು ಹೇಳಿದರು. ಆಗ ಖೇಚರರಾಜನು, "ಅನುಪಮವಾದ ಹನ್ನೊಂದನೆಯ ಮಹಾ ಶ್ರಾವಕತ್ವವನ್ನು ದಯೆಯಿಂದ, ಎಲೈ ಮುನಿಪತಿಯೇ ನನಗೆ ಅನುಗ್ರಹ ಮಾಡಬೇಕು," ಎಂದು ಬೇಡಿಕೊಂಡನು. ಖೇಚರನ ಮಾತನ್ನು ಮುನೀಂದ್ರನು ಮೆಚ್ಚಿಕೊಂಡನು ೧೪೭–೪೮. ಭಟ್ಟಾರಕರು ಕರುಣೆಯಿಂದ

ಗದ್ಯ॥ ಕಾರುಣ್ಯಂಗೆಯ್ವುದುಂ ಪಿರಿದುಮಾದರದಿಂದುಪಾಸಕರ ನೆಗಟ್ತೆಯೊಳಿರಿದೆನಿಸುವ ಏಕಾದಶಸ್ಥಾನಮಂ ಕೈಕೊಂಡು ಉತ್ತರೋತ್ತರಮಪ್ಪಾಗೆ ನೆಗಟುತ್ತುಂ ಪಲಕಾಲಂ ಗುರುಪಾದಸೇವೆಯೊಳಿರ್ದೊಂದು ದಿವಸಂ ಶೂರಸೇನ ವಿಷಯದುತ್ತರಮಧುರೆಯ ಜಿನಾಲಯಂಗಳಂ ಬಂದಿಸುವೆನೆಂಬ ಬಗೆಪುಟ್ಟಿ ತನ್ನೊಳಿಂತೆಂದಂ ೧೪೯

ಗುರುವಚನಮನುಲ್ಲಂಘಿಸಿ
ಚರಿಯಿಸಲಣಮಾಗದಂತೆ ಪಿರಿದುಂ ಸುಖಮಂ
ಪರದೊಳ್ ಲೇಸಾಗಿರೆ ಚೆ
ಚ್ಚರದಿಂದಿಂ ಪಡೆವೆನೆಂಬ ಶಿಷ್ಯಂ ಜಗದೊಳ್ ೧೫೦

ಗದ್ಯ॥ ಅದು ಕಾರಣದಿಂ ಗುರುಗಳನೊಡಂಬಡಿಸಿದೊಡಲ್ಲದಾವ ಕಾರ್ಯಮುಮಂ ನೆಗಟಲ್ಬಾರದೆಂದು ಮುನಿಗುಪ್ತಭಟ್ಟಾರಕರ್ಗೆ ವಿನಯದಿಂ ವಂದಿಸಿ ಕೈಗಳಂ ಮುಗಿದು ಮೆಲ್ಲನೆ ನಿಜಸ್ಥಾನದೊಳಿರ್ದಱಿಪುವುದುಮವರ್ ತಮ್ಮೊಳಿಂತೆಂದರ್ ೧೫೧

ಸ್ಥಿರನಾಗಿಗುಣದೊಳೆಸಗುವ
ನರನುಂ ವೈರಾಗ್ಯಮುಳ್ಳನುಂ ಲಜ್ಜಿತನುಂ
ಪಿರಿದಱಿವಾತನುಮುರ್ವರೆ
ಚರಿಯಿಸುವೊಡಮುೞಿವರಲ್ಲರುತ್ತಮಗುಣಮಂ ೧೫೨

ಶ್ರಾವಕತ್ವವನ್ನು ದಯಪಾಲಿಸಿದರು. ಖೇಚರ ರಾಜನು ಉಪಾಸಕರ ಜೀವನದಲ್ಲಿ ಅಪೂರ್ವವೆನಿಸಿಕೊಳ್ಳುವ ಏಕಾದಶಸ್ಥಾನವನ್ನು ಬಹಳ ಆದರದಿಂದ ಕೈಕೊಂಡು ದಿನದಿನಕ್ಕೆ ಹೆಚ್ಚು ಹೆಚ್ಚಾಗಿ ಆಚರಿಸುತ್ತ, ಬಹಳಕಾಲ ಗುರುಗಳ ಪಾದಸೇವೆಯಲ್ಲಿದ್ದು ಒಂದು ದಿನ ಶೂರಸೇನ ದೇಶದ ಉತ್ತರ ಮಧುರೆಯ ಜಿನಾಲಯಗಳಿಗೆ ಹೋಗಿ ವಂದಿಸಬೇಕೆಂಬ ಸಂಕಲ್ಪ ಹುಟ್ಟಲು, ತನ್ನಲ್ಲಿಯೇ ಹೀಗೆಂದುಕೊಂಡನು ೧೪೯. ಗುರುವಾಕ್ಯವನ್ನು ಮೀರಿ ನಡೆಯುವುದು ಸ್ವಲ್ಪವೂ ಸರಿಯಲ್ಲ. ಹಾಗೆ ಮಾಡಿದರೆ ಸುಖವಾಗದು, ಪರಲೋಕದಲ್ಲಿ ತಪ್ಪದೆ ಸದ್ಗತಿಯನ್ನು ಪಡೆಯುವೆನೆಂಬ ಶಿಷ್ಯನು ಗುರುವಾಕ್ಯವನ್ನು ಮೀರಕೂಡದು ೧೫೦. ಆದ್ದರಿಂದ ಗುರುಗಳನ್ನು ಒಪ್ಪಿಸಿದಲ್ಲದೆ ಯಾವ ಕೆಲಸವನ್ನೂ ಮಾಡಬಾರದೆಂದು ಯೋಚಿಸಿ, ಮುನಿಗುಪ್ತ ಭಟ್ಟಾರಕರಿಗೆ ವಿನಯದಿಂದ ವಂದನೆಮಾಡಿ ಕೈಜೋಡಿಸಿ ಮೆಲ್ಲಗೆ ಉಚಿತ ಸ್ಥಾನದಲ್ಲಿದ್ದುಕೊಂಡು ತನ್ನ ಉದ್ದೇಶವನ್ನು ತಿಳಿಸಿದನು. ಅದನ್ನು ಕೇಳಿ ಅವರು ಹೀಗೆ ಯೋಚಿಸಿದರು ೧೫೧. ಗುಣದಲ್ಲಿ ಸ್ಥಿರನಾಗಿ ನಿಂತ ಮಾನವನೂ ವೈರಾಗ್ಯ, ಲಜ್ಜೆಗಳುಳ್ಳವನೂ ದೊಡ್ಡತನವನ್ನು ತಿಳಿಯುವವನೂ ಭೂಸಂಚಾರ ಮಾಡಿದರೂ ಉತ್ತಮ ಗುಣವನ್ನು ಬಿಡುವುದಿಲ್ಲ. ೧೫೨. ಖೇಚರನ ಗುಣವನ್ನು

ಗದ್ಯ॥ ಎಂದಾತನ ಗುಣಮನಱಿದರಪ್ಪುದಱಿಂ ಪೋಗಿ ತೀರ್ಥವಂದನೆಯಂ ಮಾಡಿ ಬನ್ನಿಮೆಂ
ದಿಂತೆಂದರ್ ೧೫೩

ಗುಣಿಗಳನಲ್ಲದೆ ನೀಂ ದು
ರ್ಗುಣರಂ ಪೊರ್ದದಿರ ಲೋಗರೇನಾನುಮನೊಂ
ದಣಕದಿನೆಂದೊಡೆ ಮನದೊಳ್
ಸೆಣೆಯದಿರೊಳ್ಪಪದೊಳರ್ತಿಗುಂದದಿರಿನಿಸುಂ ೧೫೪

ಗದ್ಯ॥ ಎಂದು ಪೋಗಲ್ವೇಟ್ಟು ವರುಣಮಹಾರಾಜನರಸಿಯಪ್ಪರೇವತೀಮಹಾದೇವಿಗೆ
ಪರಕೆಯಂ ಉಂಡುರುಳಿಭಟ್ಟಾರಕಗೆ ಪ್ರತಿವಂದನೆಯುಮಂ ಮಱೆಯದೆ ಪೇಟ್ವುದೆನೆ ಗುರುಗಳ
ಮಾತಿಂಗೆ ಬ್ರಹ್ಮಚಾರಿ ನಕ್ಕು ನಿಮಗಾಪುರದ ಶ್ರಾವಕರುಂ ಭವಸೇನಾಚಾರ್ಯರ್ಮೊದಲಾದ
ಯ್ನೂರ್ವರ್ ಮುನಿಗಳುಮಿರ್ದಂತೆಯೀ ರೇವತೀಮಹಾದೇವಿಯು ಬಡವಟ್ಟುರ್ದುಂಡುರುಳಿ
ಭಟ್ಟಾರಕರಮೇಲೆ ಕಡುಮೋಹಮೇಕೆಂಬುದುಮವರ ಸಂಬಂಧಮೆಲ್ಲಮಂ ನಿಮಗೆ ಬೆಸಗೊಳ್ವ
ಗಸಣಿಬೇಡೆನೆ ಮತ್ತಂ ಪೂಣದೆ ಕಿಱಿದುಬೆಸಗೊಳೆ ಮುನೀಂದ್ರನಿಂತೆಂದಂ ೧೫೫

ಬೇವಿನ ಗಿಡುವಂ ತಂದಿ
ಟ್ಟಾವಿನ ನೊಱೆವಾಲನೆಱೆದು ನಡಪಿದೊಡಂ ಕೇಳ್
ಬೇವಿಂಗೆ ಕೈಪೆ ಪಿಂಗದು
ಭೂವಳಯದೊಳೆಂಬ ತೆಱದಿನಾ ಪುರದವರುಂ ೧೫೬

ಅವರು ಅರಿತವರಾಗಿದ್ದುದರಿಂದ "ಹೋಗಿ ತೀರ್ಥವಂದನೆಯನ್ನು ಮಾಡಿ ಬನ್ನಿ" ಎಂದು ನುಡಿದು ಪುನಃ ಹೀಗೆ ಹೇಳಿದರು : ೧೫೩. "ಗುಣಶಾಲಿಗಳನ್ನಲ್ಲದೆ ದುರ್ಗುಣಿಗಳನ್ನು ನೀನು ಸೇರದೆ ಇರು. ಜನರು ಏನಾದರೂ ಒಂದು ಮಾತನ್ನು ಅಣಕದಿಂದ ಆಡಿದರೆ ಅದನ್ನು ಮನಸ್ಸಿನಲ್ಲಿ ಜಗ್ಗಿ ಸಿಟ್ಟಾಗಬೇಡ. ತಪಸ್ಸಿನಲ್ಲಿ ಸ್ವಲ್ಪವೂ ಪ್ರೀತಿ ಕುಗ್ಗದೆ ನಡೆದುಕೊ" ೧೫೪. ಹೀಗೆಂದು ಹೇಳಿ ಕಳಹಿಸಿ ವರುಣ ಮಹಾರಾಜನ ಅರಸಿಯಾದ ರೇವತೀ ಮಹಾದೇವಿಗೆ ಹರಕೆಯನ್ನೂ ಉಂಡುರುಳಿ ಭಟ್ಟಾರಕರಿಗೆ ಪ್ರತಿವಂದನೆಯನ್ನೂ ಮರೆಯದೆ ಹೇಳಿರೆಂದು ನುಡಿಯಲು ಗುರುಗಳ ಮಾತಿಗೆ ಬ್ರಹ್ಮಚಾರಿ ನಕ್ಕು "ನಿಮಗೆ ಆ ಪುರದ ಶ್ರಾವಕರೂ, ಭವಸೇನಾಚಾರ್ಯರೇ ಮೊದಲಾದ ಐನೂರು ಮಂದಿ ಮುನಿಗಳೂ ಇದ್ದಂತೆ ಈ ರೇವತೀ ಮಹದೇವಿ ಮತ್ತು ಬಡಕಲಾದ ಉಂಡುರುಳಿ ಭಟ್ಟಾರಕರಮೇಲೆ ಕಡುಮೋಹ ಏಕೆ ?" ಎಂದನು. ಆಗ ಮುನಿಯು "ಅವರ ಸಂಬಂಧವನ್ನೆಲ್ಲ ಕೇಳುವ ಗೊಡವೆ ನಿಮಗೆ ಬೇಡ." ಎನ್ನಲು ಪುನಃ ಬಿಡದೆ ಸ್ವಲ್ಪ ಕೇಳಲು ಮುನಿಶ್ರೇಷ್ಠನು ಹೀಗೆ ಉತ್ತರ ನೀಡಿದನು: ೧೫೫. "ಬೇವಿನ ಸಸಿಯನ್ನು ತಂದು ನೆಟ್ಟು ಹಸುವಿನ ನೊರೆಹಾಲು ತಂದು ಹೊಯ್ದು ಸಾಕಿದರೂ ಬೇವಿಗೆ ಕಹಿಹೋಗುವುದಿಲ್ಲ. ಆ ಪುರದವರೂ ಹಾಗೆಯೇ ೧೫೬. ಸತ್ಯವಾದ ಧರ್ಮವನ್ನು ಕೇಳಿದರೂ ಆ ಜನ

ಗದ್ಯ॥ ಸತ್ಯಮೆನಿಸುವ ಧರ್ಮಮಂ ಕೇಳ್ದೊಡಂ ಸಂಶಯತುಲಾರೋಢರಪ್ಪುದಱಿಂ ಪರಕೆಯುಮಂ ವಂದನೆಯುಮಂ ಪೇೞ್ದಿಲ್ಲೆನೆ ಬ್ರಹ್ಮಚಾರಿ ಬೆಱಗಾಗಿ ೧೫೭

ಕನಸುಂತರಿಕ್ಷಮುಂಗ
ಧ್ವನಿ ಕಾರೇಳು ಕಲಿಸಲಕ್ಷಣಂ ಮತ್ತಂ ಮೇ
ದಿನಿಕಂಪಮೆಂಬವಪ್ಪಂ
ಗನಿಮಿತ್ತಂ ಬಗೆವೊಡವರ್ಗೆ ಶುದ್ಧಗೆಯಲ್ತೇ (?) ೧೫೮

ಗದ್ಯ॥ ಆದಱಿಂದಿವರಱಿಯದ ವಿಷಯಮಿಲ್ಲಪ್ಪುದಱಿಂದಿವರ ಮಾತೇಗೆಯ್ದುಂ ತಪ್ಪಲಱಿಯದೆಂದು ನಿಶ್ಚಯಿಸಿ ಗುರುಗಳಂ ಬಂದಿಸಿ ಬೀೞ್ಕೊಂಡು, ವಿದ್ಯೆಯಿಂ ವಿಗುರ್ವಿಸಿದ ರತ್ನತ್ರಯವಿರಾಜಿತಮಪ್ಪ ಪೊನ್ನವಿಮಾನಮನೇಱಿ ಗಗನಮಾರ್ಗದಿಂದುತ್ತರ ಮಧುರೆಗೆ ಬಂದು ಧರೆಗವತರಿಸಿ ಬ್ರಹ್ಮಚಾರಿಯಾಗಿ ಭವಸೇನಾಚಾರ್ಯರಲ್ಲಿಗೆ ಬಂದು ೧೫೯

ಪಿರಿದಪ್ಪ ಖ್ಯಾತಿಗೆ ನೀ
ವಿರೆ ನೋಂತವರಾರೊ ಜಗದೊಳದಱಿಂ ನಿಮ್ಮಂ
ಪಿರಿದರ್ತಿವೆರಸು ನೋಡುವ
ಭರವಸದಿಂ ಪಾಂಡ್ಯದೇಶದಿಂದಂ ಬಂದೆಂ ೧೬೦

ಗದ್ಯ॥ ಎಂಬುದುಂ ಭವಸೇನಾಚಾರ್ಯರ್ ಬ್ರಹ್ಮಚಾರಿಯ ವಚನಕ್ಕೆ ಸಂತೋಷಂಬಟ್ಟಿರ್ಪುದುಂ ಬ್ರಹ್ಮಚಾರಿ ಭವಸೇನಾಚಾರ್ಯರ ಸಮ್ಯಕ್ತ್ವಮಂ ನೋಡಲೆಂದು ಮೂಱುಂ ನಾಲ್ಕುಂ ದಿವಸಂ ಪೋದಿಂಬೞಿಕ್ಕೊಂದು ದಿವಸಂ ೧೬೧

ಸಂಶಯವೆಂಬ ತಕ್ಕಡಿಯನ್ನು ಏರಿದ್ದಾರೆ. ಆದ್ದರಿಂದ ಹರಕೆಯನ್ನೂ ವಂದನೆಯನ್ನೂ ನಾವು ಹೇಳಲಿಲ್ಲ." ಇದನ್ನು ಕೇಳಿ ಬ್ರಹ್ಮಚಾರಿ ಬೆಱಗಾದನು ೧೫೭.* ಆದ್ದರಿಂದ ಇವರು ತಿಳಿಯದ ವಿಚಾರವಿಲ್ಲ. ಆದಕಾರಣ ಇಂದು ಏನೇ ಆದರೂ ಇವರ ಮಾತಿಗೆ ತಪ್ಪಬಾರದು ; ಎಂದು ನಿಶ್ಚಯಮಾಡಿಕೊಂಡು ಗುರುಗಳನ್ನು ವಂದಿಸಿ ಅಪ್ಪಣೆಪಡೆದು ಹೊರಟು ವಿದ್ಯಾಬಲದಿಂದ ಮಾಯಾಸೃಷ್ಟಿಯ ರತ್ನತ್ರಯದಿಂದ ವಿರಾಜಿಸುತ್ತಿದ್ದ ಬಂಗಾರದ ವಿಮಾನವನ್ನು ಹತ್ತಿ ಆಕಾಶಮಾರ್ಗವಾಗಿ ಉತ್ತರ ಮಥುರೆಗೆ ಹೋಗಿ ಸೇರಿದನು. ಅಲ್ಲಿ ಭೂಮಿಯ ಮೇಲಕ್ಕೆ ಇಳಿದು ಬ್ರಹ್ಮಚಾರಿಯಾಗಿ ಭವಸೇನಾಚಾರ್ಯರಲ್ಲಿಗೆ ಹೋದನು ೧೫೯. "ದೊಡ್ಡದಾದ ಖ್ಯಾತಿಗೆ ನಿಮ್ಮಹಾಗೆ ಪಾತ್ರರಾದವರು ಈ ಜಗದಲ್ಲಿ ಯಾರಿದ್ದಾರೆ ? ಆದ್ದರಿಂದ ನಿಮ್ಮನ್ನು ಕಾಣಬೇಕೆಂಬ ದೊಡ್ಡ ಆಸೆಯಿಂದ, ಭರವಸೆ ತೊಟ್ಟು ಪಾಂಡ್ಯದೇಶದಿಂದ ಬಂದಿದ್ದೇನೆ" ಎಂದು ಹೇಳಿದನು ೧೬೦. ಅವನು ಹೀಗೆ ನುಡಿಯಲು ಭವಸೇನಾಚಾರ್ಯರು ಬ್ರಹ್ಮಚಾರಿಯ ಮಾತಿಗೆ ಸಂತೋಷಪಟ್ಟು ಕುಳಿತಿರಲು, ಬ್ರಹ್ಮಚಾರಿಯು ಭವಸೇನಾಚಾರ್ಯರ ಸಮ್ಯಕ್ತ್ವವನ್ನು ನೋಡಬೇಕೆಂದು ಮೂರು ನಾಲ್ಕು ದಿನ ಕಳೆದ ಬಳಿಕ ಒಂದು ದಿನ ೧೬೧. ಬ್ರಹ್ಮಚಾರಿಯು ಭವ

---

*೧೫೮ನೆಯ ಪದ್ಯ ಸ್ಪಷ್ಟವಾಗಿಲ್ಲ. ಅದರಲ್ಲಿ ಗುರುಗಳ ಜ್ಞಾನಾಧಿಕ್ಯದ ಸ್ತೋತ್ರ ಇದೆ.

ಮರುಳಿಂಗಟ್ಟುದನುಂಡರೋ ಬಗೆವೊಡಂ ತಾವುಂ ಮರುಳ್ಗೊಂಡರೋ
ಪರಮುಂಟೆಂಬುದನಾರು ಬಲ್ಲರಱಿವಿಂ ನಿಷ್ಕಾರಣಂ ಶ್ರಾವಕ
ರ್ಕರುಳಂ ಕಟ್ಟಿ ವಿಶೇಷಮಪ್ಪಧನಮಂ ಸಂಕ್ಲೇಶದಿಂ ಪೆತ್ತು ವಿ
ಸ್ತರದಿಂ ಭೋಗಿಸಲೊಲ್ಲದೇಕೆ ಕಿಡುವರ್ನಿರ್ಬುದ್ಧಿಯಿಂ ಧರ್ಮದೊಳ್ ೧೬೨

ಗದ್ಯ॥ ಎಂದು ಭವಸೇನಾಚಾರ್ಯರಂ ಬೆಸಗೊಳ್ವುದುಂ ಮೆಲ್ಲನೆ ನಕ್ಕು ಧರ್ಮದಿಂ ಪರತ್ರೆಯೊಳ್ ಸುಖಮುಂಟೆಂಬುದಾಗಮದೊಳ್ ಪೇೞ್ದಿರ್ಪುದಲ್ಲದಾವಱಿಯೆವೆಂಬುದುಂ ಬ್ರಹ್ಮಚಾರಿ ನಕ್ಕು ತನ್ನೊಳ್ ಮತ್ತಂ ೧೬೩

ತ್ರಸಮಂ ವಿದ್ಯೆಗಳಿಂ ವಿಗುರ್ವಿಸಿ ಬೞಿಕ್ಕಂ ತತ್ತ್ರಸವ್ರಾತಮಂ
ಮಿಸುಕಲ್ಕೀಯದೆ ಮೆಟ್ಟಿ ನಿಷ್ಕರುಣದಿಂದಲ್ಲಿರ್ದವರ್ಪ್ರಾಣಿಗು
ಬ್ಬಸಮಂ ಮಾಡದಿರೆಂದೊಡಾಮುನಿಯನೀ ಜೀವಂಗಳುಂ ಜೀವಮೇಂ
ಬೆಸಸಿಂ ನಿಶ್ಚಯಮೆಂದೊಡಾವಱಿಯೆವೆಂತೆಂಬರ್ಮುನೀಂದ್ರೋತ್ತಮರ್ ೧೬೪

ಗದ್ಯ॥ ಮತ್ತಮಪ್ರಾಶ್ಯನೀರಮಂ ಗುಂಡಿಯೊಳ್ತೀವಿತಂದು ಕುಡುವುದು ಮುಸಿರದಿರೆ ನಕ್ಕು
೧೬೫

ಸೇನಾಚಾರ್ಯರ ಬಳಿಗೆ ಹೋಗಿ "ಪಿಶಾಚಕ್ಕೆಂದು ಮಾಡಿದ ಅಡಿಗೆಯನ್ನು ಉಂಡರೋ ಅಥವಾ ತಾವೂ ಪಿಶಾಚಗ್ರಸ್ತರಾದರೋ, ಪರಲೋಕವಿದೆಯೆಂಬುದನ್ನು ಯಾರುಬಲ್ಲರು? ಈ ತಿಳಿವಿನಿಂದ ಶ್ರಾವಕರು ದಂಡವಾಗಿ ಹೊಟ್ಟೆ ಕಟ್ಟಿ ಹೆಚ್ಚು ಹಣವನ್ನು ಶ್ರಮದಿಂದ ಸಂಪಾದಿಸಿ ಯಥೇಷ್ಟವಾಗಿ ಭೋಗಪಡದೆ, ಬುದ್ಧಿಯಿಲ್ಲದೆ ಏಕೆ ಕೆಡುತ್ತಾರೆ ? ೧೬೨. ಎಂದು ಭವಸೇನಾಚಾರ್ಯರನ್ನು ಕೇಳಲು ಅವರು ಮೆಲ್ಲನೆ ನಕ್ಕು, "ಧರ್ಮದಿಂದ ಪರಲೋಕದಲ್ಲಿ ಸುಖವುಂಟೆಂದು ಆಗಮದಲ್ಲಿ ಹೇಳಿದೆ. ಅಷ್ಟಲ್ಲದೆ ನಾವು ಬೇರೆ ಅರಿಯೆವು" ಎಂದರು. ಬ್ರಹ್ಮಚಾರಿ ನಕ್ಕು, ಮತ್ತೆ ಹೀಗೆ ಕೇಳಿದನು : "ಪ್ರಾಣಿಸಮೂಹವನ್ನು ವಿದ್ಯಾಬಲದಿಂದ ಮಾಯೆಗೆ ಸಿಕ್ಕಿಸಿ ಆಮೇಲೆ ಆ ಪ್ರಾಣಿ ಸಮೂಹವನ್ನು ಮಿಸುಕಗೊಡದೆ ನಿಷ್ಕರುಣೆಯಿಂದ ತುಳಿದು ಅಲ್ಲಿದ್ದವರು 'ಪ್ರಾಣಿಗೆ ಉಬ್ಬಸವನ್ನು ಮಾಡದೆ ಇರು' ಎಂದರೆ ಆ ಮುನಿಯನ್ನು 'ಈ ಜೀವಗಳೂ ಜೀವವೇ ? ನಿಶ್ಚಯವಾಗಿ ಹೇಳಿ' ಎಂದರೆ 'ನಾವು ಅರಿಯೆವು' ಎಂದು ಮುನೀಂದ್ರೋತ್ತಮರು ಹೇಳಿದರು. ಅಲ್ಲದೆ ಕುಡಿಯಬಾರದ ನೀರ (ಹೆಂಡ) ವನ್ನು ಗಿಂಡಿಯಲ್ಲಿ ತುಂಬಿ ತಂದುಕೊಟ್ಟರೂ ಮಾತನಾಡದಿರಲು, ನಕ್ಕು ೧೬೩-೧೬೫. ನೀರೊಳಗೆ, ಗಾಳಿಯಲ್ಲಿ, ಬೆಂಕಿ, ಭೂಮಿಯಲ್ಲಿಯೂ

ನೀರೊಳ್ಗಾಳಿಯೊಳಗ್ನಿಯೊಳ್ಧರಣಿಯೊಳ್ಜೀವಂಗಳುಂಟೆಂಬರಾ
ನೀರೊಳ್ಗಾಳಿಯೊಳಗ್ನಿಯೊಳ್ಧರಣಿಯೊಳ್ಜೀವಂಗಳಂ ಕಂಡರಿ
ನ್ನಾರೀ ಲೋಕದೊಳಿಲ್ಲ ಜೀವನೊಳವೋ ಮೇಣಿಲ್ಲವೋ ಪೇಳಿನೀ
ವಾರಯ್ದೆನ್ನನಗೆಂದೊಡಾವಱಿಯೆವೋದಂತೆಂಬುದಾಶ್ಚರ್ಯದಿಂ ೧೬೬

ಗದ್ಯ॥ ಎಂಬುದುಮವರ ಮಾತಿಂಗಮಾಗಮದೊಳಾದ ವಿಶ್ವಾಸಕ್ಕಂ ತಲೆಯಂ ತೂಗಿ ೧೬೭

ರಸಗೀತಂ ಪೊಣ್ಮೆ ತೂರ್ಯಧ್ವನಿಗಳೆಸೆಯೆ ಸದ್ರಾಗದಿಂ ತುಪ್ಪದಿಂದಂ
ಮೊಸರಿಂನಂ ಕ್ಷೀರದಿಂದಂ ಮುಂದಿನಭಿಷವಂ ಮಾಡುವರ್ಭಕ್ತಿಯಿಂ ಭ
ವ್ಯಸಮೂಹಂ ವೀತರಾಗಂಗಿದಱೊಳೆ ಫಲಮೇನೆಂದು ತತ್ಸಾಧುವಂ ಸಂ
ತಸದಿಂದಂ ಕೇಳೆ ನಾವೇನಱಿವೆವು ಮುನಿಪರ್ಪುಣ್ಯಮುಂಟೆಂದು ಪೇಳ್ವರ್ ೧೬೮

ಗದ್ಯ॥ ಎಂದು ತಾವರೆ ನೀರಂ ಪೊರ್ದದಂತೆ, ಪೊಲೆಯರ್ಕುಲಜರಂ ಪೊರ್ದದಂತೆ ಪಲ್ ತಾಳುಗೆಯಂ ಪೊರ್ದದಂತೆ, ಪುರ್ಬು ಕಿವಿಯಂ ಪೊರ್ದದಂತೆ ಮುಗಿಲ್ನೆಲನಂ ಪೊರ್ದದಂತೆ, ನಕ್ಷತ್ರಂ ಮೇರುವಂ ಪೊರ್ದದಂತೆ, ಪತಂಗಂ ಸೂರ್ಯನಂ ಪೊರ್ದದಂತೆ, ಆಪ್ತಾಗಮ ಪದಾರ್ಥಂಗಳೊಳ್ ಪೊರ್ದುಗೆಯಿಲ್ಲದಿರೆ ಬ್ರಹ್ಮಚಾರಿ ತನ್ನೊಳಿಂತೆಂದಂ ೧೬೯

ಜೀವಗಳು ಇರುವುವೆನ್ನುವರು. ಆದರೆ ಆ ನೀರು ಗಾಳಿ ಬೆಂಕಿಗಳಲ್ಲಿ, ಮಣ್ಣಿನಲ್ಲಿ, ಜೀವಗಳನ್ನು ಯಾರು ಕಂಡಿದ್ದಾರೆ ? ಈ ಲೋಕದಲ್ಲಿ ಇಲ್ಲ. ಜೀವವೆಂಬುದು ಇದೆಯೋ ಇಲ್ಲವೋ ? ನೀವು ನನಗೆ ವಿಚಾರಮಾಡಿ ಹೇಳಿ" ಎಂದು ಕೇಳಿದನು. ಅದಕ್ಕೆ ಆಚಾರ್ಯರು "ನಮಗೆ ತಿಳಿಯದು. ಶಾಸ್ತ್ರ ಹಾಗೆ ಹೇಳುತ್ತಿದೆ" ಎಂದು ಉತ್ತರ ಹೇಳಿದರು ೧೬೬. ಅವರ ಮಾತಿಗೆ ಬ್ರಹ್ಮಚಾರಿ ನಕ್ಕನು, ಆದರೆ ಆಗಮದಲ್ಲಿ ಅವರಿಗಿದ್ದ ನಂಬಿಕೆಗೆ ಮೆಚ್ಚಿ ತಲೆ ದೂಗಿದನು ೧೬೭, ವೀತರಾಗನಾದ ಜೀನೇಶ್ವರನಿಗೆ ಭವ್ಯರೆಲ್ಲ ಸೇರಿ ಸುರಸಸಂಗೀತ, ವಾದ್ಯಘೋಷಗಳ ನಡುವೆ ಉತ್ಸಾಹದಿಂದ ತುಪ್ಪ, ಮೊಸರು, ಹಾಲುಗಳಿಂದ ಅಭಿಷೇಕ ಮಾಡುತ್ತಾರೆ. ಇದರಿಂದ ಏನು ಫಲ ? ಎಂದು ಆ ಸಾಧುಪುರುಷನನ್ನು ಕೇಳಲು, "ನಾವೇನು ಬಲ್ಲೆವು ? ಮುನಿಶ್ರೇಷ್ಠರು ಪುಣ್ಯ ವುಂಟೆಂದು ಹೇಳುವರು." ಎಂದು ಅವರು ನಿರ್ಲಿಪ್ತರಾಗಿ ಉತ್ತರ ಹೇಳಿದರು. ೧೬೮. ತಾವರೆ ನೀರನ್ನು ಹೊಂದದಂತೆ ಹೊಲೆಯರು ಕುಲಜರನ್ನು ಸೇರದಂತೆ, ಹಲ್ಲು ತಾಳುಗೆ ಯನ್ನು ಅಂಟದಂತೆ, ಹುಬ್ಬು ಕಿವಿಯನ್ನು ತಾಕದಂತೆ, ಮೋಡ ನೆಲವನ್ನು ಸೇರದಂತೆ ನಕ್ಷತ್ರವು ಮೇರುವನ್ನು ಅಂಟದಂತೆ, ಪತಂಗವು ಸೂರ್ಯನನ್ನು ಸ್ಪರ್ಶಿಸದಂತೆ ಆ ಭಟ್ಟಾರಕರಿಗೆ ಆಪ್ತಾಗಮ ಪದಾರ್ಥಗಳಲ್ಲಿ ಹೊಂದಿಕೆಯಿರಲಿಲ್ಲ. ಅದನ್ನು ಬ್ರಹ್ಮಚಾರಿ

ವನರುಹಮಂ ಸಜಿಯೊಳ್ ಬೇ
ವಿನ ಗೊಟ್ಟೆಯೊಳಿನಿದನರ್ಕದೊಳ್ ತಂಪಂ ಮೇ
ದಿನಿಯೊಳಭವ್ಯರೊಳೊಳ್ಪಂ
ಘನಮಾಗಿರಲಜಿಸಿ ತೊೞಲುವಾತನೆ ಗಾಂಪಂ ೧೭೦

ಕಿಸುವಿಂ ಜಿನರೂಪಂ ಮಾ
ಡಿಸಿ ಪೂಜಿಸೆಯುಂ ಕಿಲುಂಬು ಮಾಣದ ತೆಱದಿಂ
ವಸುಧೆಯೊಳಭವ್ಯರುಂ ಭಾ
ವಿಸುವೊಡೆ ಜಿನರೂಪನೆಯ್ದಿಯುಂ ಪೊಲ್ಲನಿಪರ್ ೧೭೧

ಗದ್ಯ॥ ಅದಱಿಂ "ಸಂಸ್ಕಾರಶತೇನಾಪಿ ನಗುಂಡ: ಕುಂಕುಮಾಯತೇ" ಎಂಬ ವಾಕ್ಯಾರ್ಥದಂತೆ ಮಿಥ್ಯಾದೃಷ್ಟಿಗಳುಮಭವ್ಯರುಂ ತಮ್ಮನೆನಿತು ಸಮಱಿದೊಡಂ ನಡೆದೊಡಂ ಪ್ರಸಿದ್ಧರಾದೊಡಂ ನಿರಂತರ ಸುಖಪ್ರಾಪ್ತರಲ್ಲೆಂಬುದಂ ತನ್ನೊಳ್ ಬಗೆಯುತ್ತುಂ ಉಂಡುರುಳಿ ಭಟ್ಟಾರಕರ ಸಮ್ಯಕ್ತ್ವಮಂ ನಾರಯ್ವೆಂದು ಅವರಲ್ಲಿಗೆ ಬಂದು ಅವರ್ನೋಡೆನೋಡೆ ೧೭೨

ತಡೆಯದೆ ವಿದ್ಯೆಗಳಿಂದಾ
ಗಡೆ ತಗುಣೆಯನಿಱುಪೆಯ ನೊಣಂಗಳನೊಪ್ಪಂ
ಬಡೆದಿರ್ದ ಪಸಿಯ ಪುಲ್ಗಳ
ನುಡುಗದೆ ತಾಂ ಪಡೆದು ಪಲವುಮಂ ತತ್ಕ್ಷಣದೊಳ್ ೧೭೩

ಗ್ರಹಿಸಿಕೊಂಡ ೧೬೯. ಆಮೇಲೆ ಬ್ರಹ್ಮಚಾರಿ ಹೀಗೆ ಯೋಚಿಸಿದನು : "ಕಮಲವನ್ನು ಕಮ್ಮರಿಯಲ್ಲಿ, ಬೇವಿನ ಬೀಜದಲ್ಲಿ ಸಿಹಿಯನ್ನು, ಸೂರ್ಯನಲ್ಲಿ ತಂಪನ್ನು, ಈ ಲೋಕದ ಅಭವ್ಯರಲ್ಲಿ ಒಳ್ಳೆಯತನವನ್ನೂ ವಿಶೇಷವಾಗಿ ಬಯಸಿ ಹುಡುಕುತ್ತ ಆಯಾಸಪಡುವವನೇ ದಡ್ಡ ೧೭೦. ತಾಮ್ರದಿಂದ ಜಿನರೂಪವನ್ನು ಮಾಡಿಸಿ ಪೂಜಿಸಿದರೂ ಕಿಲುಬು ತಪ್ಪದು. ಅದರಂತೆಯೇ ಈ ಲೋಕದಲ್ಲಿ ಅಭವ್ಯರು ಒಂದು ವೇಳೆ ಜಿನರೂಪವನ್ನು ಹೊಂದಿದರೂ ಕೆಟ್ಟ ಎನಿಸುವರು. ಆದ್ದರಿಂದ ನೂರು ಸುಸ್ಕಾರಗಳಿಂದಲೂ ಮಣ್ಣಿನ ಉಂಡೆ ಕುಂಕುಮವಾಗದು ಎಂಬ ಮಾತಿನಂತೆ ಮಿಥ್ಯಾದೃಷ್ಟಿಗಳವರೂ ಅಭವ್ಯರೂ ತಮ್ಮನ್ನು ಎಷ್ಟು ಸವರಿಸಿಕೊಂಡು ನಡೆದರೂ, ಪ್ರಸಿದ್ಧರಾದವರೂ ನಿರಂತರ ಸುಖವನ್ನು ಪಡೆಯುವುದಿಲ್ಲವೆಂಬುದನ್ನು ತನ್ನಲ್ಲಿಯೇ ಯೋಚಿಸಿಕೊಳ್ಳುತ್ತ, ಉಂಡುರುಳಿ ಭಟ್ಟಾರಕರ ಸಮ್ಯಕ್ತ್ವವನ್ನು ಪರೀಕ್ಷಿಸಬೇಕೆಂದು ಅವರನ್ನು ನೋಡಿದನು. ೧೭೨ ಖೇಚರನು ತನ್ನ ವಿದ್ಯಾಬಲದಿಂದ ಆಗಲೇ ತಗಣೆಗಳನ್ನೂ ಇರುವೆಗಳನ್ನೂ ನೊಣಗಳನ್ನೂ ಚೆನ್ನಾಗಿ ಕಾಣುವ ಹಸಿಯ ಹುಲ್ಲನ್ನೂ ಸೃಷ್ಟಿಸಿ ೧೭೩. ಅವುಗಳನ್ನು ನಿರ್ದಯೆಯಿಂದ ಕೊಲ್ಲುತ್ತ ಹುಲ್ಲನ್ನು

ಇಱುಂಪೆಗಳಂ ಮೆಟ್ಟುತ್ತುಂ
ಪಱಿಯುತ್ತುಂ ಪಸಿಯಪುಲ್ಗಳಂ ತಗುಣೆಗಳಂ
ಪೆಱತೇನೊರಸುತ್ತುಂ ಮೆ
ಯ್ಯಱಿಯದೆ ಕೊಲುತುಂ ನೊಣಂಗಳಂ ನಿರ್ದಯೆಯಿಂ ೧೭೪

ಗದ್ಯ॥ ಇರ್ಪುದುಮದನುಂಡುರುಳಿಭಟ್ಟಾರಕರ್ಕಂಡು ತಮ್ಮೊಳಿಂತೆಂದರ್ ೧೭೫

ಇದು ಪೇಲಿದು ಮೆಯ್ನೀರೆಂ
ಬುದನಱಿಯದೆ ಮೆಯ್ಗೆ ಪೂಸಿಕೊಳ್ವುವು ಮಕ್ಕಳ್
ಪದಪಿಂದೆ ಮತ್ತೆಮಿಥ್ಯಾ
ತ್ವದ ಪುದುವಿಂ ಖಳರುಮಶುಭಕರ್ಮಂಗಳುಮಂ ೧೭೬

ಗದ್ಯ॥ ಶುಭಕರ್ಮಂಗಳೆಂದು ನೆಗಟ್ವುದಾವುದು ಚೋದ್ಯಮೆಂದು ಬಗೆದಾತನೊಳಾದ ನಿಷ್ಕರುಣತೆಗೆ ನಾಡೆಯುಂ ಕೊಕ್ಕರಿಸಿ ಬ್ರಹ್ಮಚಾರಿಯಲ್ಲಿಗೆ ಮೆಲ್ಲನೆ ಪೋಗಿ ಮೃದುವಚನಗಳಿಂದಿಂತೆಂದರ್ ೧೭೭

ದಯೆಯಿಲ್ಲದ ಸದ್ಧರ್ಮಮು
ನಯಮಿಲ್ಲದ ಸತಿಯುಮಾತ್ಮನಿಲ್ಲದ ತನುವುಂ
ಜಯಮಿಲ್ಲದ ಕಾಳಗಮುಂ
ಪ್ರಿಯಮಿಲ್ಲದ ಬಿರ್ದುಮೊಪ್ಪಲಾಱವು ಜಗದೊಳ್ ೧೭೮

ಒರೆಸುತ್ತ ಇರುಂವೆಗಳನ್ನು ತುಳಿಯುತ್ತ ಹಸಿಯ ಹುಲ್ಲುಗಳನ್ನು ಹರಿದು ಸೀಳುತ್ತ ಮೈಮೇಲೆ ಎಚ್ಚರವಿಲ್ಲದವನಂತೆ ನಡೆದುಕೊಳ್ಳುತ್ತಿದ್ದನು. ಅದನ್ನೆಲ್ಲ ಉಂಡುರುಳಿ ಭಟ್ಟಾರಕರು ಗಮನಿಸಿದರು. ಅವರು ಆಗ ಹೀಗೆ ಯೋಚಿಸಿದರು : ೧೭೩–೧೭೫. "ಎಳೆ ಮಕ್ಕಳು ಇದು ಹೇಲು, ಇದು ಮೈನೀರು, ಎಂಬುದು ತಿಳಿಯದೆ ತಮ್ಮ ಮೈಗೆ ಬಳಿದುಕೊಳ್ಳುವುವು. ಅದರಲ್ಲಿ ಅವಕ್ಕೆ ಉತ್ಸಾಹ ಹಾಗೆಯೇ ಮಿಥ್ಯಾತ್ವದುಬ್ಬಿನಿಂದ ನೀಚರು ಅಶುಭ ಕರ್ಮಗಳನ್ನು ಶುಭಕರ್ಮಗಳಂತೆಯೇ ಭಾವಿಸಿ ಆಚರಿಸುವುದರಲ್ಲಿ ಆಶ್ಚರ್ಯವೇನಿದೆ ?" ಹೀಗೆ ಹೋಚಿಸಿ ಆತನಲ್ಲಿ ಕಾಣುತ್ತಿದ್ದ ನಿಷ್ಕರುಣೆಗೆ ಬಹಳವಾಗಿ ಜುಗುಪ್ಸೆಪಟ್ಟು, ಬ್ರಹ್ಮಚಾರಿಯ ಬಳಿಗೆ ಹೋಗಿ ಮೃದು ವಾಕ್ಯಗಳಿಂದ ಹೀಗೆ ಹೇಳಿದರು: ೧೭೬–೧೭೭. "ದಯೆಯಿಲ್ಲದ ಒಳ್ಳೆಯ ಧರ್ಮವೂ ವಿನಯವಿಲ್ಲದ ಹೆಂಡತಿಯೂ ಆತ್ಮನಿಲ್ಲದ ದೇಹವೂ ಜಯವಿಲ್ಲದ ಕಾಳಗವೂ ಪ್ರೀತಿಯಿಲ್ಲದ ಔತಣವೂ ಜಗತ್ತಿನಲ್ಲಿ ಶೋಭಿಸುವುದಿಲ್ಲ. ೧೭೮. ಜಿನಧರ್ಮ ಈ ಜೀವಸಮೂಹಕ್ಕೆ ಆಶ್ರಯ, ಆತ್ಮಹಿತ

ಜಿನಧರ್ಮಮೆಂಬುದಿದು ಜೀ
ವನಿಕಾಯಕ್ಕಾರ್ಮಮಾತ್ಮಹಿತಮಘಕುಲಜೀ
ವನಿಧಿ ಬಡಬಾನಲಂ ಸ
ಜ್ಜನವಂದ್ಯಂ ಸುವ್ರತೈಕನಿಧಿ ಗುಣನಿಳಯಂ ೧೭೯

ಜನನಿ ಸಹೋದರರಿಷ್ಟರ್
ವನಿತೆ ಸುತರ್ತಂದೆ ಕೆಳೆಯರೆಂಬಿನಿಬರುಮೇಂ
ಮನವೊಲ್ದು ಮಹಾಜಿನರೂ
ಪನೆ ಪೊರ್ದಿದೆಯೆಂದೊಡಖಿಳಭೂಮಂಡಲದೊಳ್ ೧೮೦

ಗದ್ಯ॥ ಇನ್ನು ನಿನ್ನಂತು ಧನ್ಯರುಂ ಮಾನ್ಯರುಮಿಲ್ಲದಱಿಂದೆ ಕೇವಲ ವೀರದಿಂ ಜಿನರೂಪಂ ಪೊರ್ದಿದೆಯಿನ್ನಲಸನಾಗದೆ ಗುಣವಂತರಂ ಪೊರ್ದಿ ಪರಮಾಗಮಮನೋದುವುದು ೧೮೧

ಪರಮಾಗಮದಿಂದಲ್ಲದೆ
ನಿರುತಂ ಸದ್ಧರ್ಮಮಱಿಯಬಾರದು ಧರ್ಮಂ
ದೊರೆಕೊಂಡೊಡಲ್ಲದಕ್ಷಯ
ಸಿರಿಯುಂ ಕೈಸಾರಲಱಿಯದತಿಶಯದಿಂದಂ ೧೮೨

ಗದ್ಯ॥ ಅದು ಕಾರಣದಿಂದಾಗಮಮನೋದುವುದು ; ಪರಮಾಗಮಮನೋದಿದೊಡಲ್ಲದೆ ದಯಾಮೂಲಮಪ್ಪ ಧರ್ಮಮನಱಿಯಲ್ಬಾರದು; ನೀಂ ನಿರ್ದಯರಂತೆ ಜೀವಂಗಳ್ಗೆ ಬಾಧೆಯುಂ ಮಾಡವೇಡೆನೆ ಬ್ರಹ್ಮಚಾರಿಯಿಂತೆಂದಂ ೧೮೩

ಪಾಪಸಮೂಹವೆಂಬ ಸಮುದ್ರಕ್ಕೆ ಇದು ಬಡಬಾಗ್ನಿ. ಸಜ್ಜನರಿಗೆ ಇದು ವಂದನೀಯವಾದದ್ದು. ಸುವ್ರತಗಳೇ ನಿಧಿ, ಜೈನಧರ್ಮಕ್ಕೆ. ಇದು ಗುಣಗಳ ಮನೆ ೧೭೯. ತಾಯಿ, ಒಡಹುಟ್ಟಿದವರು, ಹೆಂಡತಿಮಕ್ಕಳು, ತಂದೆ, ಗೆಳೆಯರು, ಎಂಬಿಷ್ಟು ಜನರೂ ಇದ್ದು ಏನು ? ಮನಃಪೂರ್ವಕವಾಗಿ ಮಹಾ ಜಿನರೂಪವನ್ನೇ ಹೊಂದಿದೆ. ಇನ್ನು ಸಮಸ್ತ ಭೂಮಂಡಲದಲ್ಲಿ ನಿನ್ನ ಹಾಗೆ ಧನ್ಯರೂ ಮಾನ್ಯರೂ ಇಲ್ಲ. ಆದ್ದರಿಂದ ಕೇವಲ ವೀರತ್ವದಿಂದ ಜಿನರೂಪವನ್ನು ಹೊಂದಿರುವೆ. ಇನ್ನು ಆಲಸ್ಯಮಾಡದೆ ಗುಣವಂತರನ್ನು ಸೇರಿ ಪರಮಾಗಮವನ್ನು ಓದು. ಪರಮಾಗಮದಿಂದ ಹೊರತು ಖಂಡಿತವಾಗಿಯೂ ಸದ್ಧರ್ಮವನ್ನು ತಿಳಿಯುವುದು ಸಾಧ್ಯವಲ್ಲ, ಧರ್ಮ ಲಭಿಸಿದ ಹೊರತು ಅಕ್ಷಯ ಸಂಪತ್ತು ಲಭಿಸುವುದಿಲ್ಲ. ಆದಕಾರಣ ಆಗಮವನ್ನು ಓದು ; ಪರಮಾಗಮವನ್ನು ಓದಿದ ಹೊರತು ದಯಾಮೂಲವಾದ ಧರ್ಮವನ್ನು ತಿಳಿದುಕೊಳ್ಳಲು ಸಾಧ್ಯವಲ್ಲ ; ನೀನು ನಿರ್ದಯರ ಹಾಗೆ ಜೀವಿಗಳಿಗೆ ಬಾಧೆಯನ್ನುಂಟುಮಾಡಬೇಡ" ಎಂದು ಭಟ್ಟಾರಕರು ನುಡಿಯಲು ಬ್ರಹ್ಮಚಾರಿ ಅದನ್ನು ಒಪ್ಪದೆ ಹೀಗೆ ಉತ್ತರ ಹೇಳಿದನು ೧೮೦–೧೮೩. "ದೇಹವನ್ನು ತಪಸ್ಸಿನಿಂದ ಕೃಶಮಾಡಿಕೊಂಡು ಹೆಂಡಿರನ್ನು

ತನುವಂ ತಪದೊಳ್ಕುಂದಿಸಿ
ವನಿತೆಯರಂ ತೊಱೆದಿಹತ್ರೆಯೊಳ್ಸುಖಮಂ ಕೆಂ
ಮನೆ ಕಿಡಿಸಿ ಮೇಲೆ ಸುಖಮಂ
ಮನದೊಳ್ಬಯಸುವನೆ ಗಾಂಪನದನಾರಱಿವರ್ ೧೮೪

ಗದ್ಯ॥ ಎಂಬುದುಂ ಉಂಡುರುಳಿಭಟ್ಟಾರಕರಿಂತೆಂದರ್ ೧೮೫

ನೆಱೆ ನಿನ್ನಬೆನ್ನನೇನೆಂ
ದಱಿಯೈ ನೀನಿನಿತಱಿಂದೆ ಬೆನ್ನಿಲ್ಲೆಂಬಾ
ಪಱೆವಾಯ್ತನದಿಂದೇನೆಂ
ದಱಿಯದೆ ಗಟಪ್ಪುವರ ನುಡಿಗಳಂ ಕೈಕೊಳ್ವಾ ೧೮೬

ನೀಂ ನಿನ್ನ ಕಣ್ಣ ಪಾಪೆಯ
ನುನ್ನತಿಯಿಂದಱಿಯದನಿತಱಿಂ ಪಾಪೆಗಳಿ
ಲ್ಲೆನ್ನಲ್ಕಕ್ಕುಮೆ ಗುಣಮಂ
ಭಿನ್ನಗುಣರ್ಕಾಂಬದನಿತಱಿಂದಿಲ್ಲೆಂಬಾ ೧೮೭

ನೀಂ ನಿನ್ನ ತಾಯ ಬಸಿಱೊಳ್
ನೀನಿರ್ದುದನೀಗಳಱಿಯೆಯೆಂಬನಿತಱೊಳಂ
ಮಾನಿತಗುಣ ಪುಸಿಯೆಂಬಾ
ನೀನಱಿಯದೊಡನಿತಱಿಂ ಪರತ್ರೆಯುಮಿಲ್ಲಾ ೧೮೮

ಗದ್ಯ॥ ಎಂಬುದುಂ ಬ್ರಹ್ಮಚಾರಿಯಿಂತೆಂದಂ ೧೮೯

ಬಿಟ್ಟು ಇಹಲೋಕದ ಸುಖವನ್ನು ಸುಮ್ಮನೆ ಹಾಳುಮಾಡಿಕೊಂಡು ಮೇಲಿನ ಲೋಕದಲ್ಲಿ ಸುಖಕ್ಕೆ ಮನಸ್ಸಿನಲ್ಲಿ ಆಸೆಪಡುವವನೇ ದಡ್ಡ, ಅದನ್ನು ಯಾರು ಬಲ್ಲರು ?" ಬ್ರಹ್ಮಚಾರಿಯ ಮಾತಿಗೆ ಉಂಡುರುಳಿ ಭಟ್ಟಾರಕರು ಮತ್ತೆ ಹೀಗೆ ಹೇಳಿದರು. ೧೮೪-೫. "ನಿನ್ನ ಬೆನ್ನನ್ನು ನೀನು ಅರಿಯೆ. ಅದು ಹೀಗಿದೆಯೆಂಬುದು ನಿನಗೆ ತಿಳಿದಿಲ್ಲ. ಅಷ್ಟರಿಂದ ನಿನಗೆ ಬೆನ್ನಿಲ್ಲವೆಂಬ ಬಾಯಿಹರಕುತನದಿಂದ ಏನು ಫಲ ? ತಿಳಿಯದೆ ಹರಟುವವರ ಮಾತುಗಳನ್ನು ಒಪ್ಪುವೆಯಾ ? ನೀನು ನಿನ್ನ ಕಣ್ಣಿನ ಪಾಪೆಯನ್ನು ಚೆನ್ನಾಗಿ ತಿಳಿಯದಷ್ಟರಿಂದ ಆ ಪಾಪೆಗಳೇ ಇಲ್ಲವೆನ್ನಲಾದೀತೆ ? ಗುಣಹೀನರು ಗುಣವನ್ನು ಒಪ್ಪದ್ದರಿಂದ ಗುಣವೇ ಇಲ್ಲವೆನ್ನುವೆಯಾ ? (೧೮೬-೧೮೭) ನೀನು ನಿನ್ನ ತಾಯಿಯ ಹೊಟ್ಟೆಯಲ್ಲಿದ್ದುದು ಈಗ ನಿನಗೆ ತಿಳಿಯದು. ಗುಣಶಾಲಿಯೇ ! ಅಷ್ಟರಿಂದ ಅದು ಸುಳ್ಳೆನ್ನುವೆಯಾ ? ನಿನಗೆ ತಿಳಿಯದ ಮಾತ್ರದಿಂದ ಪರಲೋಕವಿಲ್ಲವೆನ್ನುವೆಯಾ ? ೧೮೮. ಎನ್ನಲು ಬ್ರಹ್ಮಚಾರಿ ಹೀಗೆ ನುಡಿದನು ; ೧೮೯. "ದೇವಲೋಕ ಸುಖ"

ಸುರಲೋಕಸುಖಂ ತಪದಿಂ
ದೊರೆಕೊಳ್ಗೆಂದೋದು ಪೇಟ್ವುದಲ್ಲದೆ ಸತ್ತರ್
ಸುರಗತಿಯಿಂದಂ ಬಂದೊ
ಪ್ಪಿರೆ ಪೇಳ್ದರೆ ನೀವಿದೇಕೆ ಪರವುಂಟೆಂಬಿರ್ ೯೦

ಗದ್ಯ॥ ಎನೆ ಮುನೀಂದ್ರೋತ್ತಮರಿಂತೆಂದರ್ ೯೧

ದೂರದೊಳಿರ್ಪಾ ಗ್ರಹಣಮ
ನಾರಾನುಂ ಕಂಡರೊಳರೆ ಕೇಳೋದಿದೊಡಂ
ಧಾರಿಣಿಯೊಳಱಿದು ಪೇಟ್ವರ್
ಸಾರಗುಣರ್ಬಗೆವೊಡೋದಿನೊಳ್ ಪುಸಿಯುಂಟೇ ೯೨

ಅಮವಾಸೆಯಂದು ಲೋಕಂ
ಹಿಮಕರನಂ ಕಾಣದನಿತಱಿಂ ಸಸಿಯಿಲ್ಲಾ
ಭ್ರಮೆಯಿಂದಂ ನೀನತಿ ದು
ಷ್ಷಮದೊಳ್ಪೇಟ್ ಜಿನರನಱಿಯದಿರೆ ಜಿನರಿಲ್ಲಾ ೯೩

ಸಸಿಯಿರ್ದಪನಮವಾಸೆಯ
ಬಸದಿಂ ಕಾಣಲ್ಕೆಬಾರದಂತಿರೆ ಜಿನರುಂ
ವಸುಧೆಯೊಳಿರ್ದಪರಿರ್ದುಂ
ಮಿಸುಕುವ ಕಲಿಗಾಲದೆಸಕದಿಂ ತಲೆದೋಱರ್ ೯೪

ಗದ್ಯ॥ ಎಂಬುದುಮಂತಾದೊಡೆ ನಿಮ್ಮಾಗಮದೊಳ್ಪೇಳ್ದ ಮೂಱುಂ ಲೋಕಂಗಳನಾವಂ ಪೊತ್ತಿರ್ದಪಂ ಪೇಱಿಮೆನೆ ೯೫

ತಪಸ್ಸಿನಿಂದ ಸಿಕ್ಕುವುದೆಂದು ಶಾಸ್ತ್ರ ಹೇಳುತ್ತದೆ, ಆದರೆ ಸತ್ತವರು ದೇವಗತಿಯಿಂದ ಬಂದು ನಿಮಗೆ ಒಪ್ಪುವಂತೆ ಹೇಳಿರುವರೆ? ಪರಲೋಕವುಂಟೆದು ನೀವೇಕೆ ನಂಬುವಿರಿ ?" ೯೦. ಹೀಗೆನ್ನಲು ಮುನೀಂದ್ರರು ಮತ್ತೆ ಹೀಗೆ ಹೇಳಿದರು ! ೯೧. "ದೂರದಲ್ಲಿರುವ ಗ್ರಹಣವನ್ನು ಯಾರಾದರೂ ಕಂಡವರಿದ್ದಾರೆಯೆ? ಓದಿದವರು, ಸಾರಗುಣರು, ಲೋಕದಲ್ಲಿ ತಿಳಿದು ಹೇಳುವರು. ಶಾಸ್ತ್ರದಲ್ಲಿ ಸುಳ್ಳುಂಟೆ ? ೯೨. ಅಮಾವಾಸ್ಯೆಯ ದಿನ ಲೋಕದಲ್ಲಿ ಚಂದ್ರನು ಕಾಣಿಸುವುದಿಲ್ಲ. ಅಷ್ಟರಿಂದ ಚಂದ್ರನಿಲ್ಲವೆ ? ಅತಿ ದುಷ್ಷಮ ಕಾಲದಲ್ಲಿ ಜಿನರನ್ನು ನೀನು ಕಾಣದಿದ್ದರೆ ಜಿನರೇ ಇಲ್ಲವೆ ? ೯೩. ಚಂದ್ರನಿದ್ದಾನೆ. ಅಮಾವಾಸ್ಯೆಯ ದೆಸೆಯಿಂದ ಕಾಣುವುದಕ್ಕೆ ಸಿಕ್ಕುವುದಿಲ್ಲ. ಲೋಕದಲ್ಲಿ ಜಿನರೂ ಇದ್ದಾರೆ. ಇದ್ದರೂ ಈಗ ನಡೆಯುವ ಕಲಿಗಾಲದ ಮಹಿಮೆಯಿಂದ ಕಾಣಿಸಿಕೊಳ್ಳುವುದಿಲ್ಲ." ೯೪. ಎಂದು ಹೇಳಿದಾಗ ಆ ಬ್ರಹ್ಮಚಾರಿ "ಹಾಗಾದರೆ ನಿಮ್ಮ ಆಗಮದಲ್ಲಿ ಹೇಳಿದ ಮೂರು ಲೋಕಗಳನ್ನು ಯಾವನು ಹೊತ್ತಿದ್ದಾನೆ ? ಹೇಳಿ" ಎಂದನು. ೯೫. "ಆಕಾಶದಲ್ಲಿ

ಅಂಬರದೊಳ್ ಶಶಿದಿನಕರ
ಬಿಂಬಮನಾರ್ತಾಳ್ದಿ ಪೊತ್ತುಕೊಂಡಿರ್ದರ್ ಪೇ
ಳಿಂಬಿಲ್ಲದೆ ಲೋಕತ್ರಯ
ಬಿಂಬಂ ತನ್ನ ಸ್ವಭಾವದಿಂ ನೆಲಸಿರ್ಕುಂ ೧೯೬

ಗದ್ಯ॥ ಮತ್ತಂ ಪರಮಾಗಮಂ ಪುಸಿಯೆಂಬೆಯಪ್ಪೊಡೀ ಸಿದ್ಧಾಂತದೊಳ್ ಪೇೞ್ಪಟ್ಟ ಗಣಿತ ಜೋಯಿಸಂಗಳೇಕೆ ತಪ್ಪುವದಱಿಂದೊಂದು ಪುಸಿಯೆನವೇಡೆಂಬುದುಮಂತಪ್ಪೊಡೆ ನಿಮ್ಮಾಗಮದೊಳ್ ಪೇೞ್ಪಟ್ಟ ಷಡ್ದ್ರವ್ಯ ಸಪ್ತತತ್ವ ನವಪದಾರ್ಥ ಪಂಚಾಸ್ತಿಕಾಯಮೆಂಬಿವು ಮೊದಲಾದ ಪಲವುಂ ತತ್ವಂಗಳುಂ ದಿಟಮೆ ಪೇೞಿಮೆಂಬುದುಂ ಉಂಡುರುಳಿಭಟ್ಟಾರಕರಿಂತೆಂದರ್ ೧೯೭

ಖರಕರನುಷ್ಣಮಂ ತೊಱೆದು ತಣ್ಣದನಪ್ಪೊಡಮಿಂದು ತಣ್ಪನ
ಚ್ಚರಿಯೆನೆ ಬಿಟ್ಟು ತೀವ್ರಕರನಪ್ಪೊಡಮೊಪ್ಪುವ ವಾರ್ಧಿಸಂಕುಲಂ
ಪರಿಹರಿಸಿರ್ಪೊಡಂ ಜಲಮನಿಂದ್ರನಗಂ ನೆಲೆಯಿಂದಗಲ್ವೊಡಂ
ಪರಮಜಿನಾಗಮಂ ಮರುಳೆ ತಪ್ಪುಗುಮೇ ವಸುಧಾತಳಾಗ್ರದೊಳ್ ೧೯೮

ಗದ್ಯ॥ ಎಂಬುದುಂ ಕಿವಿಯಪಾಲೆಯ, ಮಹಾನದಿಯ ಸಮುದ್ರದ, ಗಜದಂತಪರ್ವತದ ಮೇರುವಿನ. ಪಾಸಿನ ಪೊಕ್ಕಿನ, ಮಾಣಿಕದ ಕಾಂತಿಯ, ನಿಷಧದ ವಿದೇಹದ, ಜತ್ತೆಯ ವಜ್ರಿಯ,

ಚಂದ್ರ ಸೂರ್ಯಬಿಂಬಗಳನ್ನು ಯಾರು ಧರಿಸಿ ಹೊತ್ತುಕೊಂಡಿದ್ದಾರೆ ? ಹೇಳು. ಆಶ್ರಯ ಬಯಸದೆ ಲೋಕತ್ರಯ ಬಿಂಬಗಳು ತಮ್ಮ ಸ್ವಭಾವದಿಂದ ನಿಂತಿವೆ, ೧೯೬. ಅಲ್ಲದೆ ಪರಮಾಗಮವೇ ಸುಳ್ಳೆನ್ನುವೆಯಾದರೆ ಈ ಸಿದ್ಧಾಂತದ ಪ್ರಕಾರ ಹೇಳಿರುವ ಗಣಿತ ಜ್ಯೋತಿಷ್ಯಗಳು ಏಕೆ ತಪ್ಪುವುದಿಲ್ಲ? ಆದರಿಂದ ಒಂದು ಮಾತ್ರ ಸುಳ್ಳೆನ್ನಬೇಡ" ಎಂದು ಭಟ್ಟಾರಕರು ಉತ್ತರ ಕೊಟ್ಟರು. "ಹಾಗಾದರೆ ನಿಮ್ಮ ಆಗಮದಲ್ಲಿ ಹೇಳಿರುವ ಷಟ್‌ದ್ರವ್ಯಗಳು, ಸಪ್ತತತ್ವಗಳೂ ನವಪದಾರ್ಥಗಳೂ ಪಂಚಾಸ್ತಿಕಾಯಗಳು ಇವೇ ಮೊದಲಾದ ಹಲವು ತತ್ವಗಳೂ ನಿಜವೆ ? ಹೇಳಿ" ಎಂದು ಬ್ರಹ್ಮಚಾರಿ ಕೇಳಿದನು. ೧೯೭. ಆದಕ್ಕೆ ಉಂಡುರುಳಿ ಭಟ್ಟಾರಕರು "ಸೂರ್ಯನು ಉಷ್ಣವನ್ನು ಬಿಟ್ಟು ತಂಪಾಗುವುದಾದರೂ ಚಂದ್ರ ತಂಪನ್ನು ಉಳಿದು ಬಿಸಿ ಕಿರಣಗಳನ್ನು ಹೊಂದಿದರೂ ಸಮುದ್ರಗಳೆಲ್ಲ ತಮ್ಮ ನೀರನ್ನು ಬಿಟ್ಟು ಬಿಟ್ಟರೂ ಇಂದ್ರಾದ್ರಿಯು ತನ್ನ ಸ್ಥಾನದಿಂದ ಚಲಿಸಿದರೂ, ಮರುಳೇ, ಪರಮ ಜಿನಾಗಮವು ತಪ್ಪಾಗುವುದಿಲ್ಲ." ೧೯೮. ಎಂದು ಹೇಳಲು ಕಿವಿಗೂ ಪಾಲೆಗೂ ಇರುವ ಸಂಬಂಧ, ಮಹಾನದೀ ಸಮುದ್ರಗಳಿಗೆ, ಗಜದಂತ ಮತ್ತು ಮೇರುಪರ್ವತಗಳಿಗೆ, ಹಾಸು ಹೊಕ್ಕುಗಳಿಗೆ, ಇರುವ ಸಂಬಂಧದಂತೆಯೇ ಮಹಾಪುರುಷರಿಗೂ ಸಮ್ಯಕ್ತ್ವಕ್ಕೂ ಆದ ಸಂಬಂಧ ಅತಿಶಯವಾದದ್ದು ; ಮಾಣಿಕ್ಯ, ಅದರ ಕಾಂತಿ, ನಿಷಧ ವಿದೇಹಗಳು, ಜತ್ತೆ ವಜ್ರಗಳು, ಮೊಲೆ–ಕೆಚ್ಚಲು, ಮರ–ಬೆಂಕಿ,

ಮೊಲೆಯ ಕೆಚ್ಚಲ, ಮರನ ಕಿಚ್ಚಿನ, ಬೆಲ್ಲದ ಸವಿಯ, ಸಿಂಹದ ಕೇಸರದ, ಗಜದ ದಂತದ, ತಳದ ರೇಖೆಯ, ಪುರ್ವಿನ ನೊಸಲ, ಕಣ್ಣಪಾಪೆಯ, ಸ್ತನದ ಚೂಚುಕದ, ಬಸಿಱ ಬಾಸೆಯ, ಕೂಡಿದಂತೆ ಮಹಾಪುರುಷರ ಸಮ್ಯಕ್ತ್ವದೊಳಾದ ಕೂಟಮುಮತಿಶಯಮೆಂದುಂಡುರುಳಿ ಭಟ್ಟಾರಕರ ಸಮ್ಯಕ್ತ್ವಕ್ಕೆ ಮೆಚ್ಚಿಮನದೊಳ್ ಪೊಡೆವಟ್ಟು ಮತ್ತಂ ಕ್ಷಮೆಯಂ ಪರೀಕ್ಷಿಸಲೆಂದು ೧೯೯

ಪಟ್ಟಿರ್ದರನಱಿಯದವೋಲ್
ಮೆಟ್ಟುವುದುಂ ಕಾಲೊಳಾದ ಕೆಸರೆಲ್ಲಂ ಮೇ
ಲೊಟ್ಟಿದ ತೆಱದಿಂ ಪತ್ತಿದೊ
ಡೊಟ್ಟಜೆಯಿಂದಿರ್ದು ಗಜಱಿ ಗರ್ಜಿಸದಿನಿಸುಂ ೨೦೦

ಗದ್ಯ॥ ಮೆಲ್ಲನೆ ಕುಳ್ಳಿರ್ದು ತಮ್ಮಂ ಪೆಱರಾರಾನುಂ ತಾಗಿಬಿರ್ದರೆಂದು ತಮ್ಮಂ ತಾವೆ ನಿಂದಿಸಿ ಕೊಂಡು ಪ್ರಾಣಹಿತಮಪ್ಪುದಱಿಂದೆಪೊೞ್ತುಂ ಮೆಲ್ಲನೆನೋಡಿ ಪೋಗಿಮೆನೆ ಮನದೊಳಾದ ದಯೆಗೆ ಮೆಚ್ಚಿಮಱುದಿವಸಂ ೨೦೧

ಆನಿರ್ಪೆಡೆಯೊಳ್ಧೂರ್ತಿಂ
ನೀನೆನ್ನಂ ಬಗೆಯದುದ್ಧತಿಕ್ಕೆಯೊಳಿರ್ದೈ
ನೀನೇಟಿಂದಲ್ಲಿಂದಭಿ
ಮಾನಂಗಿಡೆ ಜಡಿದು ಬಡಿದು ಕೆಡೆನೂಂಕುವುದುಂ ೨೦೨

ಬೆಲ್ಲದ–ಸವಿ, ಸಿಂಹ-ಕೇಸರ, ಆನೆ–ದಂತ. ಅಂಗೈ-ರೇಖೆ, ಹುಬ್ಬು-ಹಣೆ, ಕಣ್ಣು-ಪಾಪೆ, ಮೊಲೆ-ಚೂಚುಕ, ಹೊಟ್ಟೆ–ಬಾಸೆ,–ಇವುಗಳ ಪರಸ್ಪರ ಸೇರುವಿಕೆಯಂತೆ ನಿರಂತರ ವಾದದ್ದು" ಎಂದು ಹೇಳಿದ ಉಂಡುರುಳಿಭಟ್ಟಾರಕರ ಸಮ್ಯಕ್ತ್ವಕ್ಕೆ ಮೆಚ್ಚಿ ಮನಸ್ಸಿ ನಲ್ಲಿಯೇ ನಮಸ್ಕರಿಸಿ ಇನ್ನು ಕ್ಷಮೆಯನ್ನು ಪರೀಕ್ಷಿಸುವುದಕ್ಕೆಂದು ಯೋಚಿಸಿ ೧೯೯. ಮಲಗಿದ್ದವರನ್ನು ಕಾಣದವನಂತೆ ತುಳಿಯಲು ಕಾಲಿನಲ್ಲಿದ್ದ ಕೆಸರೆಲ್ಲ ಮೇಲೆ ರಾಸಿ ಹಾಕಿದ ಹಾಗೆ ಹತ್ತಿಕೊಂಡಿತು ಆದರೆ ಭಟ್ಟಾರಕರು ಸಹನೆಯಿಂದ ಇದ್ದು ಗದರದೆ, ಗರ್ಜಿಸದೆ, ೨೦೦, ಮೆಲ್ಲನೆ ಎದ್ದು ಕುಳಿತು ತಮ್ಮನ್ನು ಬೇರೆಯವರು ಯಾರಾದರೂ ಎಡವಿ ಕೊಂಡು ಬಿದ್ದರೋ ಎಂದು ತಮ್ಮನ್ನು ತಾವೇ ನಿಂದಿಸಿಕೊಂಡು ಪ್ರಾಣಹಿತರಾದ್ದರಿಂದ ಯಾವ ಹೊತ್ತೂ 'ಮೆಲ್ಲನೆ ನೋಡಿ, ಹೋಗಿ' ಎನ್ನಲು ಬ್ರಹ್ಮಚಾರಿ ಅವನ ಮನಸ್ಸಿನ ಲ್ಲಿನ ದಯಾಗುಣವನ್ನು ಮೆಚ್ಚಿದನು. ಮಾರನೆಯ ದಿನ "ನಾನು ಇರುವ ಸ್ಥಳದಲ್ಲಿ ಧೂರ್ತತನದಿಂದ ನೀನು ನನ್ನನ್ನು ಲಕ್ಷ್ಯಮಾಡದೆ ಔದ್ಧತ್ಯದಿಂದ ಕುಳಿತಿರುವೆ. ನೀನೇಳು" ಎಂದು ಅಭಿಮಾನಭಂಗವಾಗುವ ಹಾಗೆ ಗದರಿಸಿ ಬಡಿದು ಬೀಳುವಂತೆ ನೂಕಿದನು ೨೦೨.

ಗದ್ಯ॥ ಮನದೊಳೆಳ್ಳನಿತಪ್ಪೊಡಂ ಮುನಿಸಿಲ್ಲದೆ ತಾಂ ಪಾಪಭೀರುಗಳಪ್ಪುದಱಿಂ ಬ್ರಹ್ಮಚಾರಿಗೆ ತಮ್ಮಿರ್ದೆಡೆಯಂ ನಿತ್ತು ಕ್ಷಮೆಗೊಂಡು ಮತ್ತೊಂದೆಡೆಗೆ ಪೋಪುದುಂ ಆತಂ ಪರಮಾಶ್ಚರ್ಯಮಂ ಬಟ್ಟು ಕೃತಕರೋಷಮಂ ಬಿಟ್ಟು ತನ್ನೊಳಾದ ಕೃತಕಮೆಲ್ಲಮಂ ಪೇೞ್ದು ೨೦೩

ಪರಮಾದರದಿಂ ಭಕ್ತಿಯ
ಭರದಿಂ ಮೆಯ್ಯಱಿಯದಾ ಮುನೀಂದ್ರನ ಪಾದಾಂ
ಬುರುಹಕ್ಕೆ ವಿನತನಾದಂ
ಸರಸಿರುಹಕ್ಕಳಿಗಳಕ್ಕರಿಂದೆಱಗುವವೋಲ್ ೨೦೪

ಗದ್ಯ॥ ಅಂತು ವಂದಿಸಿ ಮುನಿಗುಪ್ತ ಭಟ್ಟಾರಕರ ಪ್ರತಿವಂದನೆಯುಂ ಪೇೞ್ದು ಮಱುದಿವಸಂ ರೇವತೀ ಮಹಾದೇವಿಯೊಳಾದಮೂಢದೃಷ್ಟಿತ್ವಮನಱಿಯಲೆಂದು ತತ್ಪುರದ ಮೂಡಣ ದೆಸೆಗೆ ಬಂದು ವಿದ್ಯೆಗಳಂ ನೆನೆದು ಬರಿಸಿ ವಿಗುರ್ವಣೆಯಿಂ ೨೦೫

ವರಕಮಂಡಲಮೊಪ್ಪೆ ಹಸ್ತದೊಳೋಜೆವೆತ್ತಿರೆ ಬೆಳ್ಪಿಯು
ತ್ತರಿಗೆ ಜನ್ನಿವರಂ ಬೆಡಂಗಳವಟ್ಟು ಬಾಲದಿನೇಶನಂ
ತಿರೆ ತನುಚ್ಛವಿ ನಾಡೆ ಶೋಭಿಸೆ ಹಂಸೆ ರಂಜಿಸಿ ತೋಱೆ ಭಾ
ಸುರಚತುರ್ವದನಂ ವಿರಾಜಿಸೆ ಧಾತ್ರಿಗಚ್ಚರಿಯಪ್ಪಿನಂ ೨೦೬

ಆದರೆ ಅವರು ಮನಸ್ಸಿನಲ್ಲಿ ಎಳ್ಳಷ್ಟಾದರೂ ಕೋಪವಿಲ್ಲದೆ ತಾವು ಪಾಪಭೀರುಗಳಾದ್ದರಿಂದ ತಾವಿದ್ದ ಸ್ಥಳವನ್ನು ಅವರಿಗೆ ಕೊಟ್ಟು ಕ್ಷಮಾಯಾಚನೆ ಮಾಡಿ ಬೇರೊಂದು ಕಡೆಗೆ ಹೋಗುತ್ತಲೇ ಬ್ರಹ್ಮಚಾರಿ ಬಹಳ ಆಶ್ಚರ್ಯಪಟ್ಟು ತನ್ನ ಕೃತಕ ರೋಷವನ್ನು ಬಿಟ್ಟು ತನ್ನ ವೇಷವನ್ನೆಲ್ಲ ಹೇಳಿದನು ೨೦೩. ಬಹಳ ಆದರದಿಂದ, ಭಕ್ತಿಯ ಆವೇಶದಿಂದ ಪರವಶತೆ ಹೊಂದಿ ಆ ಮುನಿಶ್ರೇಷ್ಠನ ಪಾದಕಮಲಗಳಿಗೆ ವಿನಯದಿಂದ ನಮಸ್ಕಾರಮಾಡಿ ದುಂಬಿಗಳು ಕಮಲ ಪುಷ್ಪಕ್ಕೆ ಇಳಿಯುವ ಹಾಗೆ ತಗ್ಗಿ ಅವರಿಗೆ ವಂದನೆ ಸಲ್ಲಿಸಿ ಮುನಿಗುಪ್ತ ಭಟ್ಟಾರಕರ ಪ್ರತಿವಂದನೆಯನ್ನು ಹೇಳಿ ಮಾರನೆಯ ದಿನ ರೇವತೀ ಮಹಾದೇವಿಯ ಅಮೂಢದೃಷ್ಟಿತ್ವವನ್ನು ಪರೀಕ್ಷಿಸಲೆಂದು ಆ ಪಟ್ಟಣದ ಪೂರ್ವ ದಿಕ್ಕಿಗೆ ಒಂದು ವಿದ್ಯಾಬಲದಿಂದ ಮಾಯೆಯಿಂದ ಕೈಯಲ್ಲಿ ಕಮಂಡಲ, ಬೆಳ್ಳಿಯ ಉತ್ತರೀಯ, ಜನಿವಾರಗಳು ಅಂದವಾಗಿ ಕಾಣುತ್ತಿರಲು ದೇಹಕಾಂತಿ ಬಾಲಸೂರ್ಯನ ತೇಜಸ್ಸಿನಂತೆ ಹೊಳೆಯಲು ಹಂಸಪಕ್ಷಿ ರಮಣೀಯವಾಗಿ ಕಾಣಿಸುತ್ತಿರಲು ಪ್ರಕಾಶಮಾನವಾದ ನಾಲ್ಕು ಮುಖಗಳು ವಿರಾಜಿಸುತ್ತಿರಲು ಲೋಕಕ್ಕೆ ಆಶ್ಚರ್ಯವಾಗುವ ಹಾಗೆ ೨೦೬. ಬ್ರಹ್ಮನ ರೂಪವನ್ನು ಧರಿಸಿ ಮಹಾ ವೈಭವದಿಂದ ಕಾಣಿಸಿಕೊಳ್ಳಲು ಆ

ಗದ್ಯ॥ ಬ್ರಹ್ಮನ ರೂಪಂ ಕೈಕೊಂಡು ಮಹಾವಿಭೂತಿಯಿಂದಿರ್ಪುದು ಮಾ ಪೊೞಲೊಳಾದಱಿ ಶ್ರಾವಕರುಂ, ಸಂಶಯಶ್ರಾವಕರುಂ ಕೇಳ್ವಿಯಿಲ್ಲದ ಶ್ರಾವಕರುಂ ನಾಮಶ್ರಾವಕರುಂ ಚರ್ಚಾ ಶ್ರಾವಕರುಂ ಯಶೋರ್ಥಿ ಶ್ರಾವಕರುಂ ಕಾರ್ಯಾರ್ಥಿಶ್ರಾವಕರುಂ ಪೋಷ ? ಶ್ರಾವಕರುಂ ಮೊದಲಾಗೆ ಕಲ್ಲೆಯುಂ ಕವಿಲೆಯುಮಾಗೆ ಡೊಂಬರಬೀಡಂ ತೊಱೆಪಾಯ್ವಂತೆ ಕಳಕಳರವಂ ಪೆರ್ಚೆಯೊರ್ವನೊರ್ವರ್ಗಸಂ ಮಿಗೆ ಪರಿದೆಯ್ದಿ ಪೂಜಿಸಿ ಪೊಡೆಮಡುತ್ತಿರ್ಪನ್ನೆಗಂ ಪೊೞಲೊಳಾದ ಜನದುಲಿಪುಮಂ ಪಱೆಯರವಮುಮಂ ಮಾಡದೇಟಿಸೆಯ ನೆಲೆಯೊಳ್ ರೇವತೀ ಮಹಾದೇವಿ ವೆರಸು ನಾಲ್ಕು ಸಾವಿರ ಮಕುಟಬದ್ಧರಿಂ ಪರಿವೃತನಾಗಿಯೊಡ್ಡೋಲಗಂ ಗೊಟ್ಟಿರ್ದ ವರುಣ ಮಹಾರಾಜಂ ಕೇಳ್ದಾಶ್ಚರ್ಯಂಬಟ್ಟದೇನೆನೆ ಕೆಲದೊಳಿರ್ದವರ್ ಬಿನ್ನಪಮೆಂದಿಂತೆಂದರ್ ೨೦೭

ಸರಸಿಜಾಸನನಿಂದು ನಮ್ಮ ಪೊೞಲ್ಗೆ ದೇವ ಮಹೋತ್ಸವಂ
ಬೆರಸು ತನ್ನ ನಿವಾಸದಿಂ ಪೊಱಮಟ್ಟು ತನ್ನ ಪರಿಗ್ರಹಂ
ಬೆರಸು ದುಂದುಭಿನಾದಮೊಪ್ಪಿರೆ ರಾಗದಿಂ ಮನವೊಲ್ದು ಭೂ
ಸುರರ ಪೆರ್ಪಡೆ ಕೀರ್ತಿಸುತ್ತಿರೆ ಬಂದು ಮೈಮೆಯೊಳಿರ್ದಪಂ ೨೦೮

ಗದ್ಯ॥ ಎಂಬುದುಂ ಅರಸನಾಶ್ಚರ್ಯಂಬಟ್ಟು, ರೇವತೀ ಮಹಾದೇವಿಯ ಮೊಗಮಂ ನೋಡಿ ೨೦೯

ಪಟ್ಟಣದಲ್ಲಿನ ಕೀಳುಶ್ರಾವಕರು, ಸಂಶಯದಶ್ರಾವಕರು, ವಿದ್ಯೆಯಿಲ್ಲದ ಶ್ರಾವಕರು, ಹೆಸರಿಗೆ ಮಾತ್ರ ಶ್ರಾವಕರಾದವರು, ಚರ್ಚಾಮಗ್ನ ಶ್ರಾವಕರು, ಕೀರ್ತಿಕಾಮನೆಯ ಶ್ರಾವಕರು, ಕಾರ್ಯಸಾಧಕ ಶ್ರಾವಕರೂ, ಮೊದಲಾದ ದೊಂಬಿ, ದನ, ಎಲ್ಲ ಸೇರಲು ಡೊಂಬರ ಬೀಡಿನ ಮೇಲೆ ಹೊಳೆ ಹಾಯುವಂತೆ ಕಲಕಲ ಶಬ್ದದಿಂದ ಗದ್ದಲ ಹೆಚ್ಚಲು ಒಬ್ಬರಿಗಿಂತ ಒಬ್ಬರು ಸ್ಪರ್ಧೆಯಿಂದ ಓಡಿಹೋಗಿ ಪೂಜೆ ಮಾಡಿ ನಮಸ್ಕರಿಸುತ್ತಿದ್ದರು. ಆಗ ಪಟ್ಟಣದಲ್ಲಿ ಉಂಟಾದ ಜನದ ಮಾತನ್ನೂ ತಂಬಟೆಯ ಶಬ್ದವನ್ನೂ ಅರಮನೆಯ ಏಳನೆಯ ಅಂತಸ್ತಿನಲ್ಲಿ ರೇವತೀ ಮಹಾದೇವಿಯೊಡನೆ ನಾಲ್ಕುಸಾವಿರ ಕಿರೀಟ ಧಾರಿಗಳ ನಡುವೆ ಖಡ್ಡೋಲಗದಲ್ಲಿದ್ದ ವರುಣ ಮಹಾರಾಜನು ಕೇಳಿ ಆಶ್ಚರ್ಯಪಟ್ಟು ಅದೇನೆಂದು ಕೇಳಲು ಪಕ್ಕದಲ್ಲಿದ್ದವರು ಬಿನ್ನಹಮಾಡಿದರು. ೨೦೭. "ಈ ಹೊತ್ತು ಕಮಲಾಸನನಾದ ಬ್ರಹ್ಮ ನಮ್ಮ ಪಟ್ಟಣಕ್ಕೆ ಮಹೋತ್ಸವದಿಂದ ಬಂದಿದ್ದಾನೆ. ಅವನು ತನ್ನ ಲೋಕದಿಂದ ಪರಿವಾರ ಸಹಿತನಾಗಿ ಹೊರಟು ದುಂಧುಭಿ ಮೊಳಗುತ್ತಿರಲು ಪ್ರೀತಿಯಿಂದ ಸಂತೋಷವಾಗಿ ಬ್ರಾಹ್ಮಣರ ದೊಡ್ಡ ಸೈನ್ಯವೇ ಹೊಗಳುತ್ತಿರಲು ಮಹಿಮೆಯಿಂದ ಕಾಣಿಸಿಕೊಂಡಿದ್ದಾನೆ." ೨೦೮. ಅದನ್ನು ಕೇಳಿ ಅರಸ ಆಶ್ಚರ್ಯಪಟ್ಟು ರೇವತೀ ಮಹಾದೇವಿ

ಸರಸಿಜಗರ್ಭಂ ಗಡ ಪಿಾ
ಪುರಕ್ಕೆ ಬಂದಿರ್ದನೆಂದೊಡಿನ್ನಮ್ಮಿಂದಂ
ಪಿರಿಯರ್ಪೆಱರಾರ್ಬಗೆವೊಡೆ
ಧರೆಯೊಳ್ ನಮ್ಮಂತು ನೋಡ ನೋಂತವರೊರೇ ೨೨೦

ಗದ್ಯ॥ ನಾವಾ ಪರಮೇಶ್ವರರಂ ಪೂಜಿಸಿ ಪೊಡೆವಟ್ಟು ಬರ್ಪಮೇಱಿಮೆನೆ ರೇವತೀ ಮಹಾದೇವಿ ನೃಪನ ದೇವತಾಮೂಢಕ್ಕೆ ಕಳಕಳಿಸಿ ನಕ್ಕಿಂತೆಂದಳ್ ೨೨೧

ಈ ಜಗದ ನರರ್ಮಾಟ್ಟಱಿ
ಪೂಜೆಗೆ ಮಾಯಾವಿಯೊರ್ವನರ್ತಿಯೊಳಂ ನಿ
ರ್ವ್ಯಾಜದೊಳೆ ತೊಡರ್ದು ಖೇಚರ
ರಾಜಂ ಮೇಣ್ ವ್ಯಂತರಾಧಿಪಂ ಮೇಣನಿಸಂ ೨೨೨

ಗದ್ಯ॥ ಮಾಡಿಕೊಂಡಿರ್ದಪಂ ದೇವರಿವನಂ ಬ್ರಹ್ಮನೆಂದು ನಿಶ್ಚಯಿಸಿ ನಂಬಲ್ವೇಡೆಮ್ಮಾಗಮದೊಳಪ್ಪೊಡೆ ಕಾಲಮವಸರ್ಪಿಣಿಯೆಂಬುದೀ ಕಾಲದ ಮೊದಲೊಳಾದಿ ಬ್ರಹ್ಮನೆಂಬ ಪ್ರಥಮ ತೀರ್ಥೇಶ್ವರನಾದನಾ ಪರಮಾತ್ಮನುಮಂದೇ ಮೋಕ್ಷಲಕ್ಷ್ಮಿಯೊಳ್ಕೂಡಿದನೆಂಬುದುಮರಸಂ ಪೋಗದಿರ್ದನನ್ನೆಗಮಿತ್ತಲ್ ಕೃತಕಬ್ರಹ್ಮಂ ೨೨೩

ಯನ್ನು ಕುರಿತು "ಈ ಪಟ್ಟಣಕ್ಕೆ ಕಮಲಜನು ಬಂದಿರುವನೆಂದರೆ ಇನ್ನು ನಮಗಿಂತ ಹಿರಿಯರು ಯಾರು ? ಪ್ರಪಂಚದಲ್ಲಿ ನಮ್ಮಷ್ಟು ಪುಣ್ಯಶಾಲಿಗಳು ಯಾರಿದ್ದಾರೆ? ೨೨೦. ನಾವು ಆ ಪರಮೇಶ್ವರರನ್ನು ಪೂಜಿಸಿ ನಮಸ್ಕಾರ ಮಾಡಿ ಬರೋಣ. ಏಳಿ" ಎಂದ. ಆದರೆ ರೇವತೀ ಮಹಾದೇವಿ ರಾಜನ ದೇವತಾಮೂಢಕ್ಕೆ ಗಹಗಹಿಸಿ ನಕ್ಕು ಹೀಗೆ ಹೇಳಿದಳು ೨೨೧. "ಈ ಲೋಕದ ಮಾನವರು ಮಾಡುವ ಕೀಳು ಪೂಜೆಗೆ ಯಾವನೋ ಒಬ್ಬ ಮಾಯಾವಿ ಆಸೆಯಿಂದ ಇದಕ್ಕೆ ತೊಡಗಿರಬೇಕು. ಇವನು ಖೇಚರರಾಜನೋ ಅಥವಾ ವ್ಯಂತರರ ಅಧಿಪತಿಯೋ ಇರಬಹುದು ೨೨೨. ಅವನೇ ಇಷ್ಟನ್ನೆಲ್ಲ ಮಾಡಿಕೊಂಡಿದ್ದಾನೆ. ದೇವರವರು ಇವನನ್ನು ಬ್ರಹ್ಮನೆಂದು ನಿಶ್ಚಯಿಸಿ ನಂಬಬೇಡಿ. ನಮ್ಮ ಆಗಮದಲ್ಲಾದರೆ ಈಗ ಅವಸರ್ಪಿಣೀ ಕಾಲ. ಈ ಕಾಲದ ಆದಿಯಲ್ಲಿ ಆದಿಬ್ರಹ್ಮನೆಂಬ ಮೊದಲನೆಯ ತೀರ್ಥಂಕರರು ಆಗಿದ್ದರು. ಆ ಪರಮಾತ್ಮನು ಆಹೊತ್ತೇ ಮೋಕ್ಷವನ್ನು ಹೊಂದಿದನೆಂದು ಹೇಳಿದೆ." ಇದನ್ನು ಕೇಳಿ ಅರಸನು ಹೋಗದೆ ನಿಂತುಬಿಟ್ಟನು. ಆ ವೇಳೆಗೆ ಆ ಕೃತಕ ಬ್ರಹ್ಮನು "ಅವರು, ಇವರು, ಎಂದು ಹೇಳದೆ ಈ ಪಟ್ಟಣದವರೆಲ್ಲ

ಅವರಿವರೆನ್ನದೆ ಪಟ್ಟಣ
ದವರೆಲ್ಲಂ ಬಂದರೆನ್ನನರ್ಚಿಸಲತ್ಯು
ತ್ಸವದಿಂ ರೇವತಿದೇವಿಯೆ
ವಿವಿಧ ಗುಣಾಭರಣೆ ಬಂದಳಿಲ್ಲನುನಯದಿಂ ೨೦೪

ಗದ್ಯ॥ ಎಂದು ವಿಸ್ಮಯಂಬಟ್ಟು ದದ್ರೂಪಮನುಪಸಂಹರಿಸಿ ಮಱುದಿನಂ ದಕ್ಷಿಣ ಭಾಗಕ್ಕೆ ಬಂದು ಕೌತುಕಮಪ್ಪಿನಂ ೨೦೫

ಕೊರಲೊಳ್ ಕೌಸ್ತುಭ ಹಾರವೊಪ್ಪೆಗದೆಯುಂ ಕೋದಂಡಮುಂ ಶಂಖಮುಂ
ವರ ಚಕ್ರಾಯುಧಮುಂ ಚತುರ್ಭುಜದೊಳಂ ಚೆಲ್ವಾಗೆ ನೀಲಾದ್ರಿಯುಂ
ತಿರೆ ದೇಹಚ್ಛವಿ ಶೋಭಿಸುತ್ತಿರೆ ವಿಭೂಷವ್ರಾತಮುತ್ತಂ ಮನೋ
ಹರಮಾಗಲ್ಗರುಡಂ ವಿರಾಜಿಸೆ ಮಹೀಚಕ್ರಂ ಮನಂಗೊಳ್ವಿನಂ ೨೦೬

ದೇಸಿಯಿನೊಪ್ಪಿರೆ ತೋಯುರು
ಹಾಸನೆ ಮೊದಲಾಗೆ ತನ್ನ ಕಾಂತೆಯ ರೀರೆ
ಣ್ಬಾಸಿರ್ವರ್ಮತ್ತೀರೆ
ಣ್ಬಾಸಿರ್ವರ್ಮಕುಟಬದ್ಧರುಂ ನಿಲೆ ಕೆಲದೊಳ್ ೨೦೭

ಗದ್ಯ॥ ನಾರಾಯಣರೂಪಂ ಕೈಕೊಂಡಿರ್ಪುದುಂ ಪುರದವರೆಲ್ಲಂ ವಿಷ್ಣು ಪ್ರತ್ಯಕ್ಷಮಾಗಿರ್ದನೆಂದು ಮುನ್ನಿನಂತೆ ಬಂದು ಪೂಜಿಸಿ ಪೊಡೆಮಡುತಿರ್ದರನ್ನೆಗಂ ಅದನರಸನಱಿದು ರೇವತೀ ಮಹಾದೇವಿಯ ಮೊಗಮಂ ನೋಡಿ ೨೦೮

ನನ್ನನ್ನು ಪೂಜಿಸುವುದಕ್ಕೋಸರ ಬಹಳ ಉತ್ಸಾಹದಿಂದ ಬಂದರು. ಅನೇಕ ಗುಣಗಳೇ ಆಭರಣಗಳಾಗಿ ಉಳ್ಳ (ಗುಣಭೂಷಿತೆಯಾದ) ರೇವತೀ ಮಹಾದೇವಿ ಮಾತ್ರ ಬರಲಿಲ್ಲ" ೨೦೪. ಎಂದು ಆಶ್ಚರ್ಯಪಟ್ಟು ಆ ರೂಪವನ್ನು ಕೊನೆಮಾಡಿ ಮಾರನೆಯ ದಿನ ಆ ಪುರದ ದಕ್ಷಿಣಭಾಗಕ್ಕೆ ಬಂದು ಆಶ್ಚರ್ಯವಾಗುವಂತೆ ವಿಷ್ಣುವಿನ ರೂಪ ಧರಿಸಿದನು ೨೦೫. ಕೊರಳಲ್ಲಿ ಕೌಸ್ತುಭರತ್ನದ ಹಾರ, ನಾಲ್ಕು ಕೈಗಳಲ್ಲಿ ಗದೆ. ಬಿಲ್ಲು, ಶಂಖ ಮತ್ತು ಶ್ರೇಷ್ಠ ಚಕ್ರಾಯುಧವೂ ಚೆಲುವನ್ನು ಹೆಚ್ಚಿಸುತ್ತಿರಲು ನೀಲಪರ್ವತದಂಥ ದೇಹಕಾಂತಿ, ವಿಭೂಷಣಸಮೂಹದ ಕಾಂತಿ ಮನೋಹರವಾಗಿತ್ತು. ಗರುಡನು ವಿರಾಜಮಾನನಾಗಿದ್ದನು. ಭೂಮಂಡಲವೇ ಮೆಚ್ಚಿಕೊಳ್ಳುವಹಾಗೆ ೨೦೬. ಕಮಲಾಸನೆ (ಲಕ್ಷ್ಮಿ)ಯೇ ಮೊದಲಾದ ತನ್ನ ಹೆಂಡಿರು ಹದಿನಾರು ಸಾವಿರಮಂದಿ, ಮತ್ತು ಹದಿನಾರು ಸಾವಿರ, ಮಕುಟಬದ್ಧ ಸಾಮಂತರೂ ಪಕ್ಕದಲ್ಲಿ ನಿಂತರು ೨೦೭. ನಾರಾಯಣನ ರೂಪ ಧರಿಸಿರಲು ಪುರದ ಜನರೆಲ್ಲ ವಿಷ್ಣು ಪ್ರತ್ಯಕ್ಷನಾಗಿರುವನೆಂದು ಮೊದಲಿನಹಾಗೆ ಬಂದು ಪೂಜಿಸಿ ನಮಸ್ಕರಿಸುತ್ತಿದ್ದರು. ಅದನ್ನೆಲ್ಲ ತಿಳಿದ ಅರಸನು ರೇವತೀ ಮಹಾದೇವಿಯನ್ನು ಕುರಿತು ಹೇಳಿದನು : ೨೦೮. 'ನಿನ್ನೆ ಬ್ರಹ್ಮ ಬಂದರೆ ಅದು ನಂಬಿಕೆಯಿಲ್ಲ, ಒಲ್ಲೆ, ಎಂದು

ನಿನ್ನೆವಿರಿಂಚಂ ಬಂದೊಡ
ದಂ ನಂಬುಗೆಯಿಲ್ಲದೊಲ್ಲೆನೆಂದೈ ಕೇಳ
ತ್ಯುನ್ನತಿಯಿಂ ಧರೆ ಬಣ್ಣಿಸೆ
ಪನ್ನಗಪತಿಶಯನನಪ್ಪ ಸರಸಿಜನಾಭಂ, ೨೧೯

ಗದ್ಯ॥ ಬಂದಿರ್ದನದುವಂ ಪುಸಿಮಾಡದೆ ನಮ್ಮ ಪರಿಜನಂಬೆರಸು ಪೋಗಿ ವಿಷ್ಣುವನರ್ಚಿಸಿ ಪೊಡೆವಟ್ಟು ಬರ್ಪಮೆನೆ ವನಿತಾರತ್ನೆಯಿಂತೆಂದಳ್ ೨೨೦

ಇವನು ಮಾಯಾಪುಂಜಂ
ಭುವನದೊಳಟಿ ಪೂಜೆಗೆಂಟಿಸುವ ಖಳನೇ ಮೇ
ಣವನಿಪ ನಿಶ್ಚಯದಿಂ ಕೇ
ಶವನಲ್ಲಂ ದೇವ ಬಗೆವೊಡೆಮ್ಮಾಗಮದೊಳ್ ೨೨೧

ನವಕೇಶವರುರ್ವರೆಯೊಳ
ಗವರುಂ ಮುನ್ನಾಗಿ ಪೋದರೀಗಳಿದೇನಾ
ನುವನೊರ್ವನಂತೆ ಮಾಡಿದೊ
ಡವಂಗೆ ನೀಂ ಭಕ್ತಿಯಿಂದವಱಗುವೆಸೆಂಬಾ ೨೨೨

ಗದ್ಯ॥ ಎಂಬುದುಮರಸನರಸಿಯ ಮಾತಿಂಗೆ ಚೋದ್ಯಂಬಟ್ಟು ಪೋಗದಿರ್ದನನ್ನೆಗಮಿತ್ತಲ್ ಮಾಯಾವಿಷ್ಣು ರೇವತೀ ಮಹಾದೇವಿಯೊರ್ವಳ್ ಬಾರದುದಕ್ಕೆ ವಿಸ್ಮಯಂಬಟ್ಟು ವಿರ್ಗುಣೆ ಯನದೃಶ್ಯಂ ಮಾಡಿ ಮತ್ತಂ ಮಱುದಿವಸಮಾಪುರದ ಪಡುವಣ ದೆಸೆಗೆ ಬಂದು ಮಹಾದ್ಭುತ ಮಪ್ಪಿನಂ ೨೨೩

ಹೇಳಿದೆ. ಕೇಳು. ಈಗ ಪನ್ನಗಶಯನನಾದ ಕಮಲನಾಭನೇ ವೈಭವದಿಂದ ಬಂದಿದ್ದಾನೆ. ಲೋಕವೇ ಹೊಗಳುತ್ತಿದೆ ೨೧೯. ಇದನ್ನೂ ಹುಸಿಮಾಡದೆ ನಮ್ಮ ಪರಿಜನದೊಡನೆ ಕೂಡಿಹೋಗಿ ವಿಷ್ಣುವನ್ನು ಪೂಜಿಸಿ ನಮಸ್ಕರಿಸಿ ಬರೋಣ." ಅರಸನ ಈ ಮಾತಿಗೆ ಆ ವನಿತಾರತ್ನಳು ಹೀಗೆ ಹೇಳಿದಳು: ೨೨೦. "ಇವನೂ ಮಾಯಾವಂಯನೇ. ಪ್ರಪಂಚದ ಈ ಕಾಲದ ಕೀಳು ಪೂಜೆಗೆ ಆಸೆಪಡುವ ಖಳನೇ. ರಾಜನೇ! ನಿಶ್ಚಯ ವಾಗಿಯೂ ಇವನು ಕೇಶವನಲ್ಲ. ನಮ್ಮ ಆಗಮದಲ್ಲಿ ಒಂಬತ್ತು ಮಂದಿ ಕೇಶವರನ್ನು ಹೇಳಿದೆ. ಅವರೂ ಮೊದಲೇ ಆಗಿ ಹೋದರು. ಈಗ ಇವನೂ ಏನೋ ಒಂದು ವೇಷ ತಾಳಿಕೊಂಡು ಬಂದರೆ ಅವನಿಗೆ ನೀನು ಭಕ್ತಿಯಿಂದ ನಮಸ್ಕರಿಸುವೆಯಾ"? ೨೨೨. ರೇವತೀದೇವಿ ಹೀಗೆ ಹೇಳಲು ರಾಜನು ಅವಳ ಮಾತಿಗೆ ಆಶ್ಚರ್ಯಪಟ್ಟು, ಹೋಗದೆ ನಿಂತನು. ಇತ್ತ ಆ ಮಾಯಾ ವಿಷ್ಣು ರೇವತೀ ಮಹಾದೇವಿಯೊಬ್ಬಳು ಬಾರದುದಕ್ಕೆ ಆಶ್ಚರ್ಯಪಟ್ಟು, ಮಾಯೆಯನ್ನು ಮರೆಮಾಡಿ, ಪುನಃ ಮಾರನೆಯದಿನ ಆ ನಗರದ ಪಶ್ಚಿಮ ದಿಕ್ಕಿಗೆ ಒಂದು ಮಹಾ ಅದ್ಭುತವೆನಿಸುವಂತೆ ೨೨೩. ತಲೆಯಮೇಲೆ ಗಂಗಾಜಲ

ಶಿರದೊಳ್ ಗಂಗಾಜಲಮೊ
ಪ್ಪಿರೆ ಜಡೆಯೊಳ್ಶಶಶಾಂಕನೆಸೆದಿರೆ ನೊಸಲೊಳ್
ಕರಮುರಿಗಣ್ಣೆಳವಟ್ಟಿರೆ
ಗಿರಿಸುತೆ ವಾಮಾರ್ಧದೊಳ್ವಿರಾಜಿಸೆ ಮುದದಿಂ ೨೨೪

ಕರದೊಳ್ ಫಣಿಕಂಕಣಮೆಸೆ
ದಿರೆ ಶೂಲಂ ಡಮರುಗಂ ಕಪಾಲಂ ತಳದೊಳ್
ಕರಮೊಪ್ಪೆ ಶಲ್ಯಭೂಷೋ
ತ್ಕರಮಂಗದೊಳೆಯ್ದೆ ಶೋಭೆವೆತ್ತಿರೆ ಚೆಲ್ವಿಂ ೨೨೫

ನಿರುಪಮ ತಾರಾಚಳದಂ
ತಿರೆ ದೇಹಚ್ಛಾಯೆಯಿರ್ಪ ವೃಷವಾಹನಮ
ಚ್ಚರಿಯಾಗೆ ಮರುಳ ಪೆರ್ವಡೆ
ಕರಮತ್ಯಾಶ್ಚರ್ಯಮಾಗೆ ಬಂದಿರೆ ಕೆಲದೊಳ್ ೨೨೬

ಗದ್ಯ॥ ಈಶ್ವರನ ರೂಪಂ ವಿಗುರ್ವಿಸಿ ಬಂದಿರ್ಪುದುಂ ಪುರದವರೆಲ್ಲಮಚ್ಚರಿವಟ್ಟು ಕಿವಿಯೊಳ್ಕೇಳ್ವೀಶ್ವರನಂ ಕಣ್ಣಾರೆ ಕಂಡೆವೆಮ್ಮಂ ಬಿಟ್ಟು ನೋಂತವರಾರೆಂದು ಬಗೆದು ಬಣ್ಣಿಕೆಯು ಪೂಜೆಗಳಂ ಮಾಡಿ ಪೊಡೆಮಡುತಿರ್ಪನ್ನೆಗಮಿಂತ್ತಲೀಶ್ವರಂ ಬಂದನೆಂಬುದಂ ವರುಣ ಮಹಾರಾಜಂ ಕೇಳ್ದು ತನ್ನಗ್ರಮಹಿಷಿಯ ಮೊಗಮಂ ನೋಡಿ ನಗುತ್ತುಮಿಂತೆಂದಂ ೨೨೭

ಶೋಭಿಸುತ್ತಿರಲು ಜಡೆಯಲ್ಲಿ. ಬಾಲಚಂದ್ರನೊಪ್ಪುತ್ತಿರಲು ಹಣೆಯಲ್ಲಿ ಉರಿಗಣ್ಣು, ಎಡಭಾಗದಲ್ಲಿ ಗಿರಿಜೆಯೂ ವಿರಾಜಮಾನವಾಗಿರಲು ಶಿವರೂಪವನ್ನು ಧರಿಸಿದನು, ೨೨೪. ಕೈಯಲ್ಲಿ ಹಾವಿನ ಕಂಕಣ, ಶೂಲ, ಡಮರುಗ ಮತ್ತು ಕಪಾಲ, ಇವು ಬಹಳ ಚನ್ನಾಗಿ ಒಪ್ಪುತ್ತಿದ್ದುವು. ಶಲ್ಯ (ಮೂಳೆ ?) ದಿಂದ ಮಾಡಿದ ಆಭರಣಗಳು ಮೈ ಮೇಲೆ ಶೋಭಿಸುತ್ತಿದ್ದುವು. (ಶಿವನ ರುಂಡಮಾಲೆ) ದೇಹಕಾಂತಿ ಶ್ರೇಷ್ಠವಾದ ತಾರಾಚಲದಂತೆ ಇತ್ತು. ಇಂಥ ವೃಷಭವಾಹನನು ನೋಟಕರಿಗೆ ಅಚ್ಚರಿಯಾಗುವಂತೆ ಭೂತಗಳ ಒಂದು ದೊಡ್ಡ ಪಡೆಯನ್ನೇ ಜತೆಯಲ್ಲಿ ಕರೆದುಕೊಂಡು ಬಂದನು. ೨೨೫–೨೬. ಈಶ್ವರನ ರೂಪವನ್ನು ಮಾಯೆಯಿಂದ ಧರಿಸಿ ಬರಲು ಪಟ್ಟಣದ ನಿವಾಸಿಗಳೆಲ್ಲರೂ ಆಶ್ಚರ್ಯಪಟ್ಟು "ಕಿವಿಯಿಂದ ಕೇಳುತ್ತಿದ್ದ ಈಶ್ವರನನ್ನು ಈ ದಿನ ಕಣ್ಣಾರೆ ಕಂಡೆವು" ನಮಗಿಂತ ಪುಣ್ಯವಂತರು ಯಾರು ?" ಎಂದು ಯೋಚಿಸಿ, ಇಷ್ಟಾನುಸಾರ ಪೂಜೆಗಳನ್ನು ಸಲ್ಲಿಸಿ ನಮಸ್ಕರಿಸುತ್ತಿದ್ದರು. ಆಗ ಈಶ್ವರ ನಗರಕ್ಕೆ ಬಂದಿರುವನೆಂಬ ವಾರ್ತೆ ವರುಣ ಮಹಾರಾಜನಿಗೂ ತಿಳಿಯಿತು. ಆತನು ತನ್ನ ಹಿರಿಯ ಹೆಂಡತಿಯ ಮುಖವನ್ನು ನೋಡಿ ನಗುತ್ತ ಹೀಗೆ ಹೇಳಿದನು : ೨೨೭. "ಕಮಲಮುಖಿ,

ವನಜಮುಖಿ ಕೇಳ ನೀಂ ಮೊ
ನ್ನಿನ ಶೂನ್ಯ ವಚನಮಂ ನುಡಿಯದೆ ನೆ
ಟ್ಟನೆ ಬರ್ಪುದಿಂದು ಗೌರೀ
ಶನ ಪದಮಂ ಕಾಣಲೆಂಬುದುಂ ಸತಿ ನುಡಿದಳ್ ೨೨೮

ಗದ್ಯ॥ ದೇವ ಬಿನ್ನಪಮೆಮ್ಮಾಗಮದೊಳ್ ಭೀಮಾವಳಿ ಮೊದಲಾದೇಕಾದಶರುದ್ರರುಂ ಮುನ್ನಾಗಿ ಪೋದರಿವಂ ರುದ್ರನಲ್ಲನೆನೆ ಭೂಮೀಶ್ವರಂ ಬೆಱಗಾಗಿ ರೇವತೀ ಮಹಾದೇವಿ ಪೋಗದಿರ್ದೊಡೆ ತಾನುಂ ಪೋಗದಿರ್ದನನ್ನೆಗಮಿತ್ತಲ್ಮಾಯಾಹರಂ ರೇವತೀ ಮಹಾದೇವಿಯ ಬರವಂ ಕಾಣದೆ ವಿಸ್ಮಯಂಬಟ್ಟು ಮತ್ತಮಾ ಮಹಾನುಭಾವೆಯ ಸಮ್ಯಕ್ತ್ವಮನಾರಯಲೆಂದು ಮೂಱು ದಿವಸಂ ಬಡಗಣ ದೆಸೆಗೆ ಬಂದು ಜಗಕ್ಕಾಶ್ಚರ್ಯಮಪ್ಪಿನಂ ೨೨೯

ಮಿಳಿರ್ವಶೋಕೆಯ ವೃಕ್ಷದಿಂ ಹರಿಪೀಠದಿಂ ಸುರತೂರ್ಯದಿಂ
ಪೊಳೆವ ಚಾಮರದೋಳಿಯಿಂ ನೆಱೆ ದಿವ್ಯನಿಸ್ವನದಿಂ ಸುರರ್
ತಳಿವ ಪುಷ್ಪಸಮೂಹದಿಂದೊದವಿರ್ದ ಮುಕ್ಕೊಡೆಯಿಂ ಪ್ರಭಾ
ವಳಯದಿಂ ರಮಣೀಯಮಾಗಿರೆ ಧಾತ್ರಿಗಚ್ಚರಿಯಪ್ಪಿನಂ ೨೩೦

ಗದ್ಯ॥ ಶ್ರೀ ವರ್ಧಮಾನ ಸ್ವಾಮಿಯ ರೂಪುಗೊಂಡಿರ್ಪುದುಂ ಮುನ್ನಿನಂತೆ ಎಲ್ಲರುಂ ಪರಿದು ೨೩೧

ನೀನು ಮೊನ್ನೆಯದಿನದ ಹಾಗೆ ಶೂನ್ಯವಚನವನ್ನಾಡದೆ (ನಿರಾಕರಿಸದೆ) ಬೇಗನೆ ಬರಬೇಕು. ಈ ಹೊತ್ತು ಗೌರೀಶನ ಪಾದಗಳನ್ನು ಕಾಣಬಹುದು" ಈ ಮಾತುಗಳನ್ನು ಕೇಳಿದ ರೇವತೀ ಮಹಾದೇವಿಯು, "ದೇವ, ಬಿನ್ನಹ. ನಮ್ಮ ಆಗಮದ ಪ್ರಕಾರ, ಭೀಮಾವಳಿ ಮೊದಲಾದ ಹನ್ನೊಂದು ಮಂದಿ ರುದ್ರರೂ ಬಹಳ ಹಿಂದೆಯೇ ಆಗಿ ಹೋದರು. ಈಗ ಬಂದಿರುವವನು ರುದ್ರನಲ್ಲ" ಎಂದು ಉತ್ತರ ಹೇಳಿದಳು. ರಾಜನಿಗೆ ಬೆಱಗೇ ಆಯಿತು. ಆದರೆ ರೇವತೀ ಮಹಾದೇವಿ ಆ ಈಶ್ವರ ಸಂದರ್ಶನಕ್ಕೆ ಹೋಗಲಿಲ್ಲವಾದ್ದರಿಂದ ತಾನೂ ಹೋಗಲಿಲ್ಲ, ಆ ವೇಳೆಗೆ ಇತ್ತ ಕಡೆ ಆ ಮಾಯಾ ಶಿವನು ರೇವತೀ ಮಹಾದೇವಿ ಬರಲಿಲ್ಲವೆಂದು ಅರಿತು ಆಶ್ಚರ್ಯಪಟ್ಟನು. ಆ ಮಹಾನುಭಾವೆಯ ಸಮ್ಯಕ್ತ್ವವನ್ನು ಇನ್ನೂ ಪರೀಕ್ಷಿಸುವ ಆಸೆ ಹೋಗಲಿಲ್ಲ. ಅವನು ಮೂರನೆ ದಿನ ಉತ್ತರ ದಿಕ್ಕಿಗೆ ಬಂದು ಜಗತ್ತಿಗೇ ಆಶ್ಚರ್ಯವಾಗುವಂತೆ ಮಾಡಿದನು ೨೨೯. ವಿದ್ಯಾಧರನು ಈಸಲ ಶ್ರೀವರ್ಧಮಾನ ಜಿನೇಶ್ವರನ ರೂಪವನ್ನು ಧರಿಸಿದನು, ಅಲುಗಾಡುವ ಅಶೋಕವೃಕ್ಷ, ಸಿಂಹಾಸನ, ಹೊಳೆಯುವ ಚಾಮರಗಳ ಸಾಲು, ದಿವ್ಯವಾದ್ಯಧ್ವನಿ, ದೇವತೆಗಳು ಸುರಿದ ಹೂಮಳೆ, ಮೂರು ಕೊಡೆಗಳು, ಪ್ರಭಾವಳಯ, ಇವೆಲ್ಲವುಗಳಿಂದ ಕೂಡಿ ರಮಣೀಯವಾಗಿದ್ದ ಜಿನರೂಪವನ್ನು ಕಂಡು ಎಲ್ಲರೂ ಓಡಿಬಂದರು. ೨೩೧. ಕೆಲವರು ಕಮಲಗಳಿಂದ, ಕೆಲವರು ಸುರಗಿಯಿಂದ, ನೈದಿಲೆ, ಬಕುಳ, ಮೊದ

ಕೆಲರಂಭೋರುಹದಿಂ ಕೆಲರ್ ಸುರಗಿಯಿಂ ಚೆನ್ನೈದಿಲಿಂದಂ ಕೆಲರ್
ಕೆಲರೊಂದುತ್ಪಲದಿಂ ಕೆಲರ್ವಕುಳದಿಂ ತಾಂಬೂಲದಿಂದಂ ಕೆಲರ್
ಕೆಲರೊಪ್ಪಿರ್ದ ಸುವರ್ಣ ಪುಷ್ಪಚಯದಿಂ ಕರ್ಪೂರ ದೀಪಂಗಳಿಂ
ಕೆಲರಾನಂದದಿ ನಿಂತು ಪೂಜಿಸಿ ಜಿನಾಧೀಶಾಂಘ್ರಿ ಪದ್ಮಂಗಳಂ ೨೩೨

ಗದ್ಯ॥ ಅಂತು ಪೂಜಿಸಿ ಪೊಡೆವಡುತ್ತಿರ್ಪನ್ನೆಗಂ ವರ್ಧಮಾನ ಸ್ವಾಮಿ ಮಹಾಮಹಿಮೆಯಿಂ ಬಂದಿರ್ದನೆಂದು ವರುಣ ಮಹಾರಾಜಂ ಕೇಳ್ದು ರೇವತೀ ಮಹಾದೇವಿಗಿಂತೆಂದಂ ೨೩೩

ವನಜಾತಾನನೆ ಮುನ್ನಿನ
ವನರುಹನಂದನನುಮಂ ವೃಷಾರೂಢನುಮಂ
ವನರುಹನಾಭನುಮಂ ನಂ
ಬಿ ನಿತಾಂತಂ ಕೇಳ ಪೋಗಿ ಪೊಡೆವಡದಿರ್ದೈ ೨೩೪

ಗದ್ಯ॥ ಅದು ನಿನಗುಚಿತಮಪ್ಪುದೀಗಳ್ ನಿನ್ನ ಕುಲಸ್ವಾಮಿಯಪ್ಪ ವರ್ಧಮಾನಸ್ವಾಮಿ ಬಂದಿರ್ದಪನಾ ಪರಮಾತ್ಮನಂ ಪೂಜಿಸಿ ಪೊಡೆಮಟ್ಟು ಬರ್ಪಮರ್ಚನೆವೆರಸು ಪೋಪಮಡುವುದೆನೆ ಸಮ್ಯಕ್ತ್ವ ರತ್ನಾಕರೆಯಿಂತೆಂದಳ್ ೨೩೫

ಇವನುಂ ಕೈವಲ್ಯ ಶ್ರೀ
ಧವನಪ್ಪ ಜಿನೇಂದ್ರನಲ್ಲನೆಮ್ಮಾಗಮದೊಳ್
ಭುವನೇಶ್ವರ ಜಿನನಾಥ
ರ್ವಿವರಿಪೊಡಿಪ್ಪತ್ತನಾಲ್ವರಮರಸ್ತುತ್ಯರ್ ೨೩೬

ಲಾದ ಪುಷ್ಪಗಳಿಂದಲೂ, ತಾಂಬೂಲಾದಿಗಳಿಂದ ಕೆಲವರೂ ಚಿನ್ನದ ಹೂಗಳಿಂದ ಕೆಲವರೂ ಕರ್ಪೂರ ಆರತಿಗಳಿಂದ ಕೆಲವರೂ ಜಿನನನ್ನು ಪೂಜಿಸಿ ಸಂತೋಷಪಟ್ಟರು. ಹಾಗೆ ಪೂಜಿಸಿ ಎಲ್ಲರೂ ನಮಸ್ಕರಿಸುತ್ತಿದ್ದಾಗ ವರ್ಧಮಾನಸ್ವಾಮಿ ಮಹಿಮೆಯನ್ನು ತೋರಿ ನಗರಕ್ಕೆ ಬಂದಿರುವನೆಂದು ಕೇಳಿ ವರ್ಧಮಾನನ ಪೂಜೆಗೆ ಹೋಗಬಯಸಿ ವರುಣ ಮಹಾರಾಜನು ರೇವತೀದೇವಿಯನ್ನು ಕುರಿತು "ಈ ಮೊದಲು ಬಂದ ಬ್ರಹ್ಮ ಶಿವ ವಿಷ್ಣು ಗಳನ್ನಂತು ನೀನು ನಂಬಿ ಹೋಗಿ ನಮಸ್ಕರಿಸಲಿಲ್ಲ ೨೩೩–೨೩೪. ಅದು ನಿನಗೆ ಉಚಿತವೇ ಸರಿ. ಈಗ ನಿನ್ನ ಕುಲದೈವನಾದ ವರ್ಧಮಾನಸ್ವಾಮಿಗಳು ಬಂದಿದ್ದಾರೆ. ಆ ಪರಮಾತ್ಮ ನನ್ನು ಕಂಡು ಪೂಜಿಸಿ ನಮಸ್ಕಾರಮಾಡಿ ಬರೋಣ" ಎಂದು ಹೇಳಿದನು. ಆದರೆ ಆಸಮ್ಯ ಕ್ತ್ವಸಮುದ್ರಳಾದ ಆ ದೇವಿಯು ಹೀಗೆಂದಳು ; ೨೩೫. "ಇವನೂ ನಿಜವಲ್ಲ. ಕೈವಲ್ಯ ಲಕ್ಷ್ಮಿಗೆ ಗಂಡನಾದ ಜಿನೇಂದ್ರನಲ್ಲ. ನಮ್ಮ ಆಗಮದಲ್ಲಿ ಹೇಳಿರುವ. ಇಪ್ಪತ್ತ ನಾಲ್ವರು ತೀರ್ಥಂಕರರು. ೨೩೬ ಅವರೂ ಮೋಕ್ಷಲಕ್ಷ್ಮಿಯಲ್ಲಿ ಸೇರಿ ಪರಮೇಷ್ಠಿಗಳಾಗಿರು

ಗದ್ಯ॥ ಅವರುಂ ನಿಶ್ರೇಯಶ್ರೀಯೊಳ್ ಕೂಡಿರ್ದ ಪರಮೇಷ್ಠಿಗಳಾಗಿರ್ಪುದರಿಂದೀತಂ ವರ್ಧಮಾನಸ್ವಾಮಿಯೆಂಬ ಮಾತು ಘಟಿಯಿಸದೆಂಬುದುಂ ರೇವತೀ ಮಹಾದೇವಿಯ ಮಾತಿನಂದಕ್ಕೆ ವರುಣ ಮಹಾರಾಜಂ ವಿಸ್ಮಯಂಬಟ್ಟು ಮೆಲ್ಲಗಿಂತೆಂದಂ ೨೩೭

ಸರಸಿರುಹವದನೆ ನಿನ್ನಿಂ
ಮರುಳ್ಗಳೇಂ ಭಕ್ತಿವೆರಸು ಪರಿದೆಯ್ದಿ ಜಿನೇ
ಶ್ವರನೆಂದೆಱಗುವ ನವಿಪ್ಪಾ
ಪುರದೊಳಗಣ ಪಾಸತಕ್ಕರೆಲ್ಲರುಮಿಗಳ್ ೨೩೮

ಗದ್ಯ॥ ಎಂಬುದುಮರಸಿಯಿಂತೆಂದಳ್ ದೇವಾ ಪುಣಿಸೆಯ ಪೂವೆಲ್ಲಂ ಕಾಯಪ್ಪುವೇ, ನೆಲನನಗುಟ್ದಿರೆಲ್ಲಂ ನಿಧಾನಮಂ ಕಾಣ್ಬರೇ, ಕೈಕಾಲುಳ್ಳರೆಲ್ಲಂ ಚಕ್ರವರ್ತಿಗಳೇ, ಮರನಾದುವೆಲ್ಲಂ ಶ್ರೀಖಂಡಮೇ, ಮೊಲೆ ಮುಡಿಯುಳ್ಳರೆಲ್ಲಂ ಸ್ತ್ರೀಯರೇ, ಪಗಿನಾದುವೆಲ್ಲಂ ಕರ್ಪೂರಮೇ, ಕೋಡುಳ್ಳವೆಲ್ಲಂ ಕರೆವವೇ, ಗಿರಿಯಾದುವೆಲ್ಲಂ ಪೊನ್ನೇ, ಶಿಲೆಯಾದುವೆಲ್ಲಂ ವಜ್ರಮೇ, ಸಮುದ್ರವಾದುವೆಲ್ಲಂ ಪಾಲೇ, ಧಾನ್ಯಮಾದುವೆಲ್ಲಂ ಕಳವೆಯೇ ನುಡಿಯುಳ್ಳವರೆಲ್ಲಂ ಮಂತ್ರಿಗಳೇ, ಬಂಟರಾದವರೆಲ್ಲಂ ನಾಯಕರೇ, ಕಾದುವರೆಲ್ಲಂ ವೀರರೇ ಪಡೆವರೆಲ್ಲಂ ಸೂಳೆಯರೇ, ಪಾಡುವರೆಲ್ಲಂ ಗಂಧರ್ವರೇ ಮೊಱೆವುವೆಲ್ಲಂ ತುಂಬಿಯೇ ನೀರಾದುವೆಲ್ಲಂ ರುಚಿಯೇ, ಪುಷ್ಪವಾದುವೆಲ್ಲಂ ಕಮ್ಮಿದುವೇ, ಸಜ್ಜನರಾದ

ವುದರಿಂದ ಈತನು ವರ್ಧಮಾನಸ್ವಾಮಿಯೆಂಬ ಮಾತು ಒಪ್ಪದು." ಮಹಾದೇವಿಯು ಹೇಳಿದ ಮಾತಿನ ರೀತಿಗೆ ಆಶ್ಚರ್ಯಪಟ್ಟು ಮೆಲ್ಲನೆ ಹೀಗೆ ಹೇಳಿದನು ೨೩೭. "ಕಮಲಮುಖಿ ಭಕ್ತಿಯಿಂದ ಹೋಗಿ ಜಿನೇಶ್ವರನೆಂದು ನಂಬಿ ನಮಸ್ಕರಿಸುವ, (ನಡೆಮುಡಿ) ಹಾಸುತ್ತಿರುವವರೆಲ್ಲರೂ ನಿನ್ನ ದೃಷ್ಟಿಯಲ್ಲಿ ಹುಚ್ಚರೇನು?" ೨೩೮. ಅರಸನ ಮಾತು ಕೇಳಿ ರೇವತೀದೇವಿ "ಸ್ವಾಮಿ, ಹುಣಿಸೆಯ ಹೂಗಳೆಲ್ಲ ಕಾಯಿಗಳಾಗುವುವೆ ? ನೆಲವನ್ನು ಅಗೆದವರೆಲ್ಲ ನಿಧಿಯನ್ನು ಕಾಣುವರೆ? ಕೈಕಾಲುಗಳಿದ್ದರೆಲ್ಲ ಚಕ್ರವರ್ತಿಗಳಾಗುವರೆ? ಮರಗಳೆಲ್ಲ ಶ್ರೀಗಂಧವಾಗುವುದೆ ? ಮೊಲೆ, ಮುಡಿ, ಇರುವವರೆಲ್ಲ ಸ್ತ್ರೀಯರೆ? ಗಿಡಗಳಿಂದ ಸುರಿದುದೆಲ್ಲ ಕರ್ಪೂರವೆ ? ಕೊಂಬಿರುವ ಪ್ರಾಣಿಗಳೆಲ್ಲ (ಹಾಲು) ಕರೆಯುವುವೆ ? ಬೆಟ್ಟಗಳೆಲ್ಲ ಬಂಗಾರವೆ ? ಶಿಲೆಗಳೆಲ್ಲ ವಜ್ರಗಳೆ ? ಸಮುದ್ರಗಳೆಲ್ಲ ಹಾಲೆ? ಎಲ್ಲ ಧಾನ್ಯಗಳೂ ನೆಲ್ಲೆ ? ಬತ್ತವೆ ? ಮಾತು ಉಳ್ಳವರೆಲ್ಲ ಮಂತ್ರಿಗಳೆ ? ಭಂಟರಾದವರೆಲ್ಲ ನಾಯಕರಾಗುವರೆ ? ಯುದ್ಧ ಮಾಡುವವರೆಲ್ಲರೂ ವೀರರೆ ? ಸಂಪಾದಿಸುವವರೆಲ್ಲ ಸೂಳೆಯರೆ ? ಹಾಡುವವರೆಲ್ಲರೂ ಗಂಧರ್ವರೆ ? ಧ್ವನಿಬೀರುವುವೆಲ್ಲ ದುಂಬಿಗಳೆ ? ಎಲ್ಲ ನೀರೂ ರುಚಿಯೆ ? ಹೂಗಳೆಲ್ಲ ಸುವಾಸನೆಯುಳ್ಳುವೇ ? ಹೆಂಡಿರಾದವರೆಲ್ಲ ಪತಿವ್ರತೆಯರೆ ? ಶ್ರಾವಕರಾದ

ರೆಲ್ಲಂ ಪತಿವ್ರತೆಯರೇ, ಶ್ರಾವಕರಾದರೆಲ್ಲಂ ಸಮ್ಯಗ್ದೃಷ್ಟಿಗಳೇ, ಮೂಢತ್ರಯಮಿಲ್ಲದರ್ ಜೈನರೇ, ಎನೆ ಮೂಢತ್ರಯಂಗಳಾವುವು ಪೇೞಿಮೆನೆಯರಸಿಯಿಂತೆಂದಳ್ ೨೯೯

ಅನಲನನರ್ಕನಂ ಶಶಿಯನಿಂದ್ರನನಂತಕನಂ ಮರಂಗಳಂ
ವನಧಿಯನುರ್ವಿಯಂ ಮಡಕೆಯಂ ತೊೞಯಂ ಕೆಱಯಂ ಗೃಹಂಗಳಂ
ಜನನಿಯನಯ್ಯನಂ ಪಶುವನೆತ್ತುಗಳಂ ಕುಲದೈವಮೆಂದು ಮೆ
ಲ್ಲನೆ ಪೊಡೆವಟ್ಟು ಪೂಜಿಸುವ ಗಾಂಪನೆ ದೈವವಿಮೂಢನುರ್ವಿಯೊಳ್ ೩೦೦

ಧುರದೊಳ್ ಕಮ್ಮರಿಯೊಳ್ ಮದೋರ್ವಿರುಹದೊಳ್ ಸಪ್ತಾರ್ಚಿಯೊಳ್ ನೀರ್ಗ
ಳೊಳ್
ಭರದಿಂ ದೇಹಮನಿಕ್ಕಿಯುಜ್ಜುಗದೆ ಮಿಥ್ಯಾತೀರ್ಥಮಂ ಮಿಂದುಮಾ
ದರದಿಂ ದುಷ್ಪರ ಪೇೞ್ಕೆಯೊಳ್ ನೆಗೞ್ದು ಮತ್ತಾನಂದದಿಂದೆಯ್ದುವೆಂ
ಸುರಲೋಕಂಗಳನೆಂಬ ಗಾವಿಲನವಂ ತಾಂ ಲೋಕಮೂಢಂ ನೃಪಾ ೩೦೧

ಧರ್ಮೋಪದೇಶಮಿಲ್ಲದೆ
ಕರ್ಮಮನುಪಶಮಿಪ ಚರಿತಮಿಲ್ಲದೆ ದುಃಖ
ಕ್ಕಾರ್ಮೆನಿಸಿರ್ದ ಲೌಕಿಕ
ಧರ್ಮದೊಳೆಸಗುವನೆ ಸಮಯಮೂಢಂ ನೃಪತೀ ೩೦೨

ವರೆಲ್ಲರೂ ಸಮ್ಯಗ್ದೃಷ್ಟಿಯುಳ್ಳವರೆ ? ಮೂಢತ್ರಯವಿಲ್ಲದವರು ಜೈನರೆ ?" ಎಂದು ವಿವರವಾಗಿ ನುಡಿದಳು. ಅರಸನು ಮೂಢತ್ರಯಗಳು ಯಾವುವೆಂದು ಕೇಳಲು ಅರಸಿ ಹೀಗೆ ತಿಳಿಯ ಹೇಳಿದಳು : ೨೯೯. ಬೆಂಕಿ, ಸೂರ್ಯ, ಚಂದ್ರ, ಇಂದ್ರ, ಯಮ, ಮರಗಳು, ಸಮುದ್ರ, ನೆಲ, ಮಡಕೆ, ತೊರೆ, ಕೆರೆ, ಮನೆಗಳು, ತಾಯಿತಂದೆಗಳನ್ನೂ ದನ ಎತ್ತುಗಳನ್ನೂ ಕುಲದೈವವೆಂದು ನಂಬಿ ನಮಸ್ಕರಿಸಿ ಪೂಜಿಸುವವನೇ ಈ ಲೋಕದಲ್ಲಿ ದೈವ ವಿಮೂಢ ೩೦೦. ಯುದ್ಧಭೂಮಿ, ಹಳ್ಳ, ಮತ್ತುಬರಿಸುವ ಗಿಡ, ಬೆಂಕಿಯ ಜ್ವಾಲೆ, ಜಲಾಶಯಗಳು—ಇವುಗಳಲ್ಲೆಲ್ಲ ದೇಹವನ್ನಿಕ್ಕಿ (ನಮಸ್ಕರಿಸಿ) ಮಿಥ್ಯಾತೀರ್ಥಗಳಲ್ಲಿ ಸ್ನಾನ ಮಾಡಿ ದುಷ್ಪರ ಹೇಳಿಕೆಯಂತೆ ಆದರದಿಂದ ಎಲ್ಲವನ್ನೂ ಮಾಡಿ ಬಹಳ ಆನಂದದಿಂದ ಸುರಲೋಕಗಳನ್ನು ಸೇರುವೆನೆಂದು ತಿಳಿಯುವ ದಡ್ಡನೇ ಲೋಕಮೂಢ, ೩೦೧. ಧರ್ಮದ ಉಪದೇಶವಿಲ್ಲದೆ, ಕರ್ಮವನ್ನು ಉಪಶಮನ ಮಾಡುವ ನಡತೆಯಿಲ್ಲದೆ, ದುಃಖಕ್ಕೆ ಆಶ್ರಯವೆನಿಸಿದ ಲೌಕಿಕ ಧರ್ಮದಲ್ಲಿ ನಡೆಯುವವನೇ ಸಮಯ (ಧರ್ಮ) ಮೂಢ ೩೦೨. ವರ ಕೊಡಬೇಕೆಂದು ದೈವವನ್ನು ಬೇಡುವವನೂ ಈಗ ದೈವ

ವರವೀವುದೆಂದು ದೈವಮ
ನೆರೆವವನುಂ ದೈವವಿಾಗಳೀವುದು ಪುಸಿಯೇ
ಪರಮಾರ್ಥವೆಂದು ನಂಬುವ
ನರನುಂ ಭೂಪಾಲ ಸಮಯಮೂಢನೆನಿಕ್ಕುಂ ೨೪೩

ಜಗದೊಳ್ ಮಹೇಂದ್ರಜಾಲಾ
ದಿಗಳಂ ತೋರ್ಪವರನಿವರೆ ದೇವರ್ದಿಂಡರ್
ಬಗೆವೊಡೆ ಕೇಳೆನ್ನುತೆ ನಂ
ಬುಗೆಯಿಂದೆಱಗುವನೆ ಸಮಯಮೊಢಂ ನೃಪತೀ ೨೪೪

ಪುರುಷನಂ ವಧುವಾಗೆ ತದ್ವಧುವಂ ಮನೋಹರಮಪ್ಪಿನಂ
ಪುರುಷನಾಗೆ ವಿನೋದದಿಂ ಪಗಲಂ ದಿಟಕ್ಕಿರುಳಾಗೆ ತಾ
ನಿರುಳನುಂ ಪಗಲಾಗೆ ಮಾಡುವ ದೇವರುಳ್ಳೊಡೆ ಧಾರಿಣೀ
ಶ್ವರನ ಮುಂಗಡೆ ತೋಱಲಾಗದೆ ತೋರ್ಪೆನೆಂಬವನುರ್ವಿಯೊಳ್ ೨೪೫

ಗದ್ಯ॥ ಎಂದು ಧರ್ಮಶ್ರವಣಂಗೆಯ್ವುತಿರ್ಪಿನಮತ್ತಲ್ ಕೃತಕಜಿನಂ ರೇವತೀ ಮಹಾದೇವಿಯ ಬರವಂ ಕಾಣದೆ ತನ್ನೊಳಿಂತೆಂದಂ ೨೪೬

ಸ್ಥಿರಮಪ್ಪೀ ಗುಣಮಿಾ ಸರ
ಸಿರುಹಾಕ್ಷಿಯ ಮೆಯ್ಯೊಳಿಲ್ಲದಿರೆ ಮುನಿಗುಪ್ತೇ
ಶ್ವರರೀ ಪರಕೆಯುಮಂ ವಿ
ಸ್ತರದಿಂ ಪೇಟ್ಟಿಟ್ಟುವರ್ಮಹೋತ್ಸವದಿಂದಂ ೨೪೭

ಕೊಡುವ ಹುಸಿಯನ್ನೇ ಪರಮಾರ್ಥವೆಂದು ನಂಬುವ ಮನುಷ್ಯನೂ ಸಮಯ ಮೂಢನೆನಿಸಿಕೊಳ್ಳುತ್ತಾನೆ ೨೪೩. ಜಗತ್ತಿನಲ್ಲಿ ಮಹೇಂದ್ರಜಾಲ ಮೊದಲಾದುವನ್ನು ತೋರಿಸುವವರನ್ನು ಇವರೇ ದೇವರು ದಿಂಡರೆಂದು ಭಾವಿಸಿ, ನಂಬಿ ನಮಸ್ಕರಿಸುವವನೂ ಸಮಯಮೂಢ ೨೪೪. ಗಂಡಸನ್ನು ಹೆಣ್ಣಾಗಿಯೂ ಹೆಣ್ಣನ್ನು ಸುಂದರ ಪುರುಷನನ್ನಾಗಿಯೂ ವಿನೋದಕ್ಕೆ ಹಗಲನ್ನು ರಾತ್ರಿಯಾಗಿ, ರಾತ್ರಿಯನ್ನು ಹಗಲಾಗಿ ಮಾಡಬಲ್ಲ ದೇವರಿರುವುದಾದರೆ, ರಾಜನ ಮುಂದೆ ಮಾಡಿ ತೋರಿಸಬಾರದೆ ? ೨೪೫. ಹೀಗೆ ಧರ್ಮಶ್ರವಣ ಮಾಡಿಸುತ್ತಿರುವಾಗ ಅತ್ತ ಮಾಯಾ ಜಿನೇಶ್ವರನು ರೇವತೀ ಮಹಾದೇವಿಯು ಬಂದುದನ್ನು ಕಾಣದೆ, ತನ್ನಲ್ಲಿಯೇ ಹೀಗೆ ಯೋಚಿಸಿದನು ೨೪೬. ಈ ಕಮಲಾಕ್ಷಿಯಲ್ಲಿ ಇಂಥ ಸ್ಥಿರವಾದ ಗುಣವಿರದಿದ್ದರೆ ಮುನಿಗುಪ್ತೇಶ್ವರರು ಈಕೆಗೆ ಉತ್ಸಾಹದಿಂದ ಹರಕೆಗಳನ್ನು ಹೇಳಿ ಕಳುಹಿಸುತ್ತಿದ್ದರೆ ?" ೨೪೭. ಯೋಚಿಸಿ ಆ

ಗದ್ಯ॥ ಎಂದು ಕೃತಕ ಜಿನರೂಪನನುಡುಗಿಸಿ ನೆರೆದ ನೆರವಿ ನೋಡೆ ನೋಡೆ ಪೂರ್ವ ಸ್ವರೂಪಮಂ ಕೈಕೊಂಡು ರೇವತೀ ಮಹಾದೇವಿಯಲ್ಲಿಗೆ ವಂದು ನಿಂದಿರ್ದು ಪಲತೆಱದಿಂ ಪೊಗೞ್ದು ಪೆಱಗಾದ ಸಂಬಂಧಮೆಲ್ಲಮಂ ತಿಳಿಯ ಪೇೞ್ದು ಮುನಿಗುಪ್ತ ಭಟ್ಟಾರಕರ ಪರಕೆಯುಂ ಪೇೞ್ದು ತತ್ಪುರದೊಳಾದ ಜಿನಾಲಯಂಗಳಂ ಬಂದಿಸಿ ದಕ್ಷಿಣ ಮಧುರೆಗೆ ಬ್ರಹ್ಮಚಾರಿ ಪೋದ ನಿತ್ತಲ್ ೨೪೮

ಶ್ರಾವಕರೆಲ್ಲರುಮಿರ್ದಂ
ತಾ ವರಮುನಿ ನೋಡ ಕೂರ್ತು ಪರಕೆಯನಿಂತೀ
ದೇವಿಗೆ ಪೇೞ್ದಟ್ಟಿದನೆನ
ಲೀ ವನಿತಾರತ್ನೆಯಂತು ನೋಂತವರೊಳರೇ ೨೪೯

ಪರಮ ಗುಣನಿಳಯೆ ಜಿನಮತ
ಸರೋಜಿನೀ ರಾಜಹಂಸೆ ಶೀಲಾಂಬುಧಿ ಸ
ಚ್ಚರಿತವಿಭೂಷಣೆ ಭವ್ಯೋ
ತ್ಕರಪೂಜಿತೆ ನಿಷ್ಕಲಂಕ ನಿರ್ಮಳೆ ಜಗದೊಳ್ ೨೫೦

ಗದ್ಯ॥ ಎಂದು ಪುರಜನಮುಂ ಪರಿಜನಮುಂ ಜಗಜ್ಜನಮುಂ ಪೊಗೞುತ್ತುಂ ಪೊಡೆಮಡುತ್ತು ಮಿರೆ, ವರುಣಮಹಾರಾಜಂ ಸದ್ಧರ್ಮಮಂ ಲೇಸಾಗಿ ನಂಬಿ ಮೂಢತ್ರಯದಿಂ ಪಿಂಗಿ ತನ್ನ

ವಿದ್ಯಾಧರನು ಕೃತಕ ಜಿನರೂಪವನ್ನು ಕಳೆದು ಅಲ್ಲಿ ಸೇರಿದ್ದ ಗುಂಪೆಲ್ಲ ನೋಡುತ್ತಿದ್ದ ಹಾಗೆಯೇ ಮೊದಲಿನ ರೂಪವನ್ನು ಧರಿಸಿ ರೇವತೀ ಮಹಾದೇವಿಯ ಬಳಿಗೆ ಹೋಗಿ ನಿಂತಿದ್ದು ಹಲವು ಬಗೆಯಾಗಿ ಹೊಗಳಿ ಹಿಂದೆ ಆದ ಕಥೆಯನ್ನೆಲ್ಲ ಹೇಳಿ ಮುನಿಗುಪ್ತ ಭಟ್ಟಾರಕರ ಹರಕೆಯನ್ನು ತಿಳಿಸಿ ಆ ಪಟ್ಟಣದಲ್ಲಿನ ಜಿನಾಲಯಗಳಲ್ಲೆಲ್ಲ ವಂದನೆಮಾಡಿ, ದಕ್ಷಿಣ ಮಧುರೆಗೆ ಹೋದನು. ೨೪೮. ಇತ್ತ ಶ್ರಾವಕರೆಲ್ಲರೂ "ಇದ್ದಕ್ಕಿದ್ದಂತೆ ಆ ಶ್ರೇಷ್ಠ ಮುನಿಗಳು ಪ್ರೀತಿಯಿಂದ ಈ ದೇವಿಗೆ ಹರಕೆಯನ್ನು ಹೇಳಿ ಕಳುಹಿಸಬೇಕಾದರೆ ಇನ್ನು ಈ ದೇವಿಯಂ ಹಾಗೆ ಪುಣ್ಯವಂತರುಂಟೆ ? ೨೪೯. ಪರಮಗುಣನಿಲಯೆಯಾದವಳು ಜಿನಮತವೆಂಬ ಕಮಲದಲ್ಲಿನ ರಾಜಹಂಸೆ ! ಶೀಲಾಂಬುಧಿ ಸಚ್ಚರಿತೆಯೇ ವಿಭೂಷಣ ವಾಗಿ ಉಳ್ಳವಳು ಭವ್ಯ ಸಮೂಹದಿಂದ ಪೂಜೆ ಹೊಂದಿದವಳು. ನಿಷ್ಕಳಂಕಳು, ನಿರ್ಮಲಳು" ೨೫೦. ಎಂದು ಪುರಜನ ಪರಿಜನರೆಲ್ಲರೂ ಜಗಜ್ಜನದೊಡನೆ ಹೊಗಳಿ ನಮಸ್ಕಾರ ಮಾಡಿದರು. ವರುಣ ಮಹಾರಾಜನು ಸದ್ಧರ್ಮವನ್ನು ಚೆನ್ನಾಗಿ ನಂಬಿ ಮೂಢತ್ರಯವನ್ನು ಕಳೆದುಕೊಂಡು ತನ್ನ ಹಿರಿಯ ಮಗನಾದ ಶಿವಕೀರ್ತಿಗೆ ಪಟ್ಟ

ಪಿರಿಯ ಮಗನಪ್ಪ ಶಿವಕೀರ್ತಿಗೆ ಪಟ್ಟಮಂ ಕಟ್ಟಿ ರಾಜ್ಯಮಂ ಕೊಟ್ಟರಿಂಜಯ ಭಟ್ಟಾರಕರ ಪಾದಮೂಲದೊಳ್ ದೀಕ್ಷೆಯಂ ಕೈಕೊಂಡಂ. ರೇವತೀ ಮಹಾದೇವಿ ದಾನಪೂಜೆ ಶೀಲೋಪವಾಸಮೆಂಬಿವಱೊಳಾರ್ತಿ ತನಗುಂಟಪ್ಪುದಱಿಂ ಪಲವು ಕಾಲಂ ೨೫೧

ಜಿನಪೂಜೆಗಳಂ ಕಣ್ತಣಿ
ಪಿನೆಗಂ ಮುನಿಗನ್ನದಾನಮಂ ಮನಮಾರಲ್
ವನಜಾಸ್ಯೆ ಮಾಡಿ ಧರೆ ಜೀ
ಯೆನೆ ಕಡೆಯೊಳ್ತೊಱೆದು ಸಕಲ ಸಾಮ್ರಾಜ್ಯಮುಮಂ ೨೫೨

ಗದ್ಯ॥ ಮುನಿಗುಪ್ತ ಭಟ್ಟಾರಕರೆ ಗುರುಗಳಾಗೆ ಸುವ್ರತಗಂತಿಯರಲ್ಲಿ ದೀಕ್ಷೆಯಂ ಕೈಕೊಂಡು ಏಕಾದಶಾಂಗಧಾರಿಯಾಗಿ ಪಲವುಂ ಕಾಲಂ ತಪದೊಳ್ ಚರಿಯಿಸಿ ದಕ್ಷಿಣ ಮಧುರೆಯಂ ಜಿನಭವನಮೆಲ್ಲಮಂ ಬಂದಿಸುವೆನೆಂಬಾರ್ತಿಯಿಂದುತ್ತರ ಮಧುರೆಯಿಂ ಪೊಱಮಟ್ಟು ಅಜ್ಜಿಕಾ ಸಮುದಾಯಂಬೆರಸು ಬರುತ್ತುಂ ಕರಹಾಟ ನಗರದೊಳ್ ೨೫೩

ತೊಟ್ಟನೆ ಕೊಳಲಾಲಸ್ಯಂ
ಪುಟ್ಟಿ ಮಹಾರುಜೆ ಶರೀರವೇದನೆಗಿನಿಸಂ
ಕಿಟ್ಟಿಂ ಪೋಗೆನ್ನದೆ ಬಾ
ಯ್ವಿಟ್ಟಱದೆ ಶರೀರ ಮೋಹಮಿಲ್ಲದೆ ಮನದೊಳ್ ೨೫೪

ಕಟ್ಟಿ ರಾಜ್ಯವನ್ನು ಕೊಟ್ಟು ಅರಿಂಜಯ ಭಟ್ಟಾರಕರ ಪಾದಸನ್ನಿಧಿಯಲ್ಲಿ ದೀಕ್ಷೆಯನ್ನು ತೆಗೆದುಕೊಂಡನು. ರೇವತೀ ಮಹಾದೇವಿಯು ದಾನ, ಪೂಜೆ, ಶೀಲ, ಉಪವಾಸ ಎಂಬಿವುಗಳಲ್ಲಿ ತನಗೆ ಆಸೆಯಿದ್ದುದರಿಂದ ಹಲವುಕಾಲ ಜಿನಪೂಜೆಗಳನ್ನು ಕಣ್ಣಿಗೆ ತೃಪ್ತಿಯಾಗುವವರೆಗೂ, ಮುನಿಗಳಿಗೆ ಅನ್ನದಾನವನ್ನೂ ಮನಸ್ತೃಪ್ತಿಯಾಗಿ ಮಾಡಿ ಲೋಕದ ಹೊಗಳಿಕೆಗೂ ಪಾತ್ರಳಾಗಿ ಕೊನೆಯಲ್ಲಿ ಸಮಸ್ತಸಾಮ್ರಾಜ್ಯವನ್ನೂ ತ್ಯಜಿಸಿದಳು ೨೫೨. ತರುವಾಯ ಆಕೆ ಮುನಿಗುಪ್ತಭಟ್ಟಾರಕರೇ ಗುರುಗಳಾಗಲು ಸುವ್ರತಗಂತಿಯವರಲ್ಲಿ ದೀಕ್ಷೆಯನ್ನು ಪಡೆದುಕೊಂಡು ಏಕಾದಶಾಂಗಧಾರಿಯಾಗಿ ಬಹಳ ಕಾಲ ತಪಸ್ಸನ್ನಾಚರಿಸಿ ದಕ್ಷಿಣ ಮಧುರೆಯ ಜಿನಭವನವೆಲ್ಲವನ್ನೂ ವಂದಿಸುವೆನೆಂಬ ಆಸೆಯಿಂದ ಉತ್ತರ ಮಧುರೆಯಿಂದ ಹೊರಟು ಅಜ್ಜಿಕಾಸಮೂಹದೊಡನೆ ಬರುತ್ತ ಕರಹಾಟನಗರದಲ್ಲಿ ೨೫೩. ತಟ್ಟನೆ ಆಲಸ್ಯ ಹುಟ್ಟಿ ಮಹಾರೋಗವು ಒದಗಿತು. ಶರೀರವೇದನೆಗೆ ಸ್ವಲ್ಪವೂ ಗೋಳಿಡದೆ ಬಾಯಿಬಿಟ್ಟು ಅಳದೆ, ಶರೀರ ಮೋಹವೇ ಇಲ್ಲದೆ ಮನಸ್ಸಿನಲ್ಲಿ ೨೫೪. ಶುಭ ಭಾವನೆಗಳಿಂದ ಕೂಡಿ ಸಂನ್ಯಾಸಮಾಡಿ ಸಮಾಧಿ

ಗದ್ಯ॥ ಶುಭ ಭಾವನೆವೆರಸು ಸಂನ್ಯಸನಂಗೆಯ್ದು ಸಮಾಧಿ ವಿಧಿಯಿಂ ಮುಡಿಪಿ ಪದಿನಾಱನೆಯ ಅಚ್ಯುತ ಕಲ್ಪದೊಳ್ ಇಪ್ಪತ್ತೆರಡು ಸಾಗರೋಪಮ ಕಾಲಮಾಯುಷ್ಯ ಕೊಡೆಯಂ ಮಹರ್ಧಿಕದೇವನಾಗಿ ಪುಟ್ಟಿದಳ್ ೨೫೫

ರೇವತಿಗಂತಿಯುರುತ್ತಮ
ಭಾವನೆಯಿಂ ಮುಡಿಪಿದೆಡೆ ಮಹೀವಳಯಂ ಸ
ದ್ಭಾವದ ನೆಲೆ ಸಲೆ ಬಣ್ಣಿಸೆ
ರೇವತೀ ಸತ್ತೀರ್ಥಮೆಂಬುದಾದುದು ಪೆಸರಿಂ ೨೫೬

ಅದು ಕಾರಣದಿಂ ಸೌಖ್ಯಾ
ಭ್ಯುದಯಕ್ಕಾಟಿಸುವೆನೆಂಬ ಮನುಜಂ ಮನದೊಳ್
ಬೆದಬೆದೆ ಬೇಯದೆ ತಾಂ ಬಿಡು
ವುದು ದುಷ್ಕೃತಬಂಧಮಪ್ಪ ಮೂಢತ್ರಯಮಂ ೨೫೭

ಗದ್ಯ॥ ಎಂದು ಪೇೞ್ವುದುಂ ರೇವತೀ ಮಹಾದೇವಿಯ ಕಥೆಯಂ ಲೇಸಾಗಿ ಕೇಳ್ದು ೨೫೮

ನೃಪವಂದ್ಯಂ ವಾಗ್ವಧೂವಲ್ಲಭನಮಳಯಶಂ ನಿರ್ಮಳಂ ಕಿಲ್ಬಿಷೈಕ
ದ್ವಿಪ ಪಂಚಾಸ್ಯಂ ಮನೋಜೋತ್ಪಲರವಿ ಸುಜನಾಂಭೋಧಿ ಶೀತಾಂಶು ವಾರಾ
ಶಿಪರೀತಖ್ಯಾತನುದ್ಯದ್ಗುಣನಿಧಿಯೊಸೆದಂ ಖ್ಯಾತ ತ್ರೈವಿದ್ಯಚಕ್ರಾ
ಧಿಪ ಪಾದಾಂಭೋಜ ಭೃಂಗಂ ಸುಕವಿಜನಮನಃ ಪದ್ಮಿನೀ ರಾಜಹಂಸಂ ೨೫೯

ವಿಧಿಯಂತೆ ಪ್ರಾಣಬಿಟ್ಟು, ಹದಿನಾರನೆಯ ಅಚ್ಯುತ ಕಲ್ಪದಲ್ಲಿ ಇಪ್ಪತ್ತೆರಡು ಸಾಗರೋಪಮ ಕಾಲದ ಆಯುಷ್ಯವುಳ್ಳ ಮಹರ್ಧಿಕ ದೇವನಾಗಿ ಹುಟ್ಟಿದಳು. ೨೫೫. ರೇವತಿಗಂತಿಯರು ಉತ್ತಮ ಭಾವನೆಯಿಂದ ಸತ್ತ ಸ್ಥಳವು ಭೂಮಂಡಲವೇ ಸದ್ಭಾವದಿಂದ ಹೊಗಳಲು ರೇವತೀಸತ್ತೀರ್ಥವೆಂಬ ಹೆಸರಿನಿಂದ ಪ್ರಸಿದ್ಧವಾಯಿತು. ೨೫೬. ಆದಕಾರಣ ಸೌಖ್ಯ ಅಭ್ಯುದಯಗಳಿಗೆ ಆಸೆಪಡುವೆನೆಂಬ ಮನುಷ್ಯನು ಮನಸ್ಸಿನಲ್ಲಿ ಮರುಗದೆ ದುಷ್ಕೃತ ಬಂಧವಿರುವ ಮೂಢತ್ರಯವನ್ನು ಬಿಡಬೇಕು ೨೫೭. ಹೀಗೆಂದು ಹೇಳಲು ರೇವತೀ ಮಹಾದೇವಿಯ ಕಥೆಯನ್ನು ಚೆನ್ನಾಗಿ ಕೇಳಿ ೨೫೮. ರಾಜರಿಗೆ ವಂದನಾರ್ಹನೂ ವಾಗ್ವಧುವಿಗೆ ಪ್ರಿಯನೂ ಶುದ್ಧಯಶಸ್ಕನೂ ಕಿಲ್ಬಿಷ (ಪಾತಕ) ವೆಂಬ ಆನೆಗೆ ಸಿಂಹನಂಥವನೂ ಮನ್ಮಥನೆಂಬ ನೈದಿಲೆಗೆ ಸೂರ್ಯನೂ, ಸುಜನ ಸಮುದ್ರಕ್ಕೆ ಚಂದ್ರನೂ ಸಾಗರಾಂತದವರೆಗೂ ಹಬ್ಬಿದ ಖ್ಯಾತಿಯುಳ್ಳವನೂ ಮಹಾಗುಣನಿಧಿ, ತ್ರೈವಿದ್ಯಚಕ್ರವರ್ತಿಯ ಪಾದಭಕ್ತ,ಸುಕವಿ ಜನರ ಮನಸ್ಸೆಂಬ ಪದ್ಮದಲ್ಲಿನ ರಾಜಹಂಸನೂ ಆದ ಮಗಧರಾಜನು ಕೇಳಿ ಹರ್ಷಪಟ್ಟನು. ೨೫೯. ಇದು ಸಮಸ್ತ ದೇವತೆಗಳ ಶಿರ

ಗದ್ಯ॥ ಇದು ನಿಖಿಲ ದಿವಿಜ ಪರಿವೃಢ ಮಕುಟತಟಘಟಿತ ಮಣಿಗಣವಿಲುಳಿತ ಕಿರಣ ಚುಂಬನೀಯ ಪರಮ ಜಿನಚರಣಯುಗಳ ಸರಸಿರುಹ ಮತ್ತ ಮಧುಕರ ನಿರುಪಮ ಸಹಜಕವಿ ಜನಪಯಃಪಯೋಧಿ ಹಿಮಕರ ನುತಭಾವಯುತ ದಿಗಂಬರದಾಸ ನೂತ್ನ ಕವಿತಾವಿಳಾಸ ಶ್ರೀಮನ್ನಯಸೇನದೇವ ವಿರಚಿತಮಪ್ಪ ಧರ್ಮಾಮೃತದೊಳ್ ದರ್ಶನ ಚತುರ್ಥಾಂಗ ವ್ಯಾವರ್ಣನಂ

## ಪಂಚಮಾಶ್ವಾಸಂ

ಸಾಷ್ಟಾಂಗ ಪ್ರಣಾಮಗಳನ್ನು ಹೊಂದಿದ, ಜಿನಪಾದ ಕಮಲಗಳಲ್ಲಿನ ತುಂಬಿಯಾದ, ನಿರುಪಮ ಸಹಜಕವಿಗಳೆಂಬ ಪಾಲ್ಗಡಲಿಗೆ ಚಂದ್ರನಾದ 'ದಿಗಂಬರದಾಸ 'ನೂತ್ನಕವಿತಾವಿಲಾಸ' ಎಂಬ ಬಿರುದುಗಳುಳ್ಳ ಶ್ರೀಮನ್ನಯಸೇನದೇವ ವಿರಚಿತಮಪ್ಪ 'ಧರ್ಮಾಮೃತ'ದಲ್ಲಿ ಪಂಚಮಾಶ್ವಾಸ.

# ಷಷ್ಠಾಶ್ವಾಸಂ

ಶ್ರೀ ವನಿತೆಗೆ ನಿರ್ವಾಣ
ಶ್ರೀವನಿತೆಗೆ ತೊಡವಮೂಢದೃಷ್ಟಿತ್ವಂ ಸ
ದ್ಭಾವದೊಳೆಂದಧಿಕಗುಣಂ
ಭಾವಿಸಿದಂ ಸುಕವಿನಿಕರ ಪಿಕಮಾಕಂದಂ ೧

ಗದ್ಯ॥ ಅಂತಮೂಢದೃಷ್ಟಿತ್ವದೊಳಾದ ಕಥೆಯಂ ತಿಳಿದು ಮತ್ತಂ ೨

ಭೂವಿಖ್ಯಾತಂ ಗಣಧರ
ದೇವರ ಪಾದದ್ವಯಕ್ಕೆ ಪೊಡೆಮಟ್ಟು ವಚ
ಶ್ರೀವನಿತೆಗೆ ನಿರ್ವಾಣ
ಶ್ರೀ ವನಿತೆಗೆ ತೊಡವಿದೆನಿಸುವುಪಗೂಹನಮಂ ೩

ಗದ್ಯ॥ ಎನಗರಿವಂತಾಗೆ ನಿಮ್ಮಡಿ ಕಾರುಣ್ಯದಿಂ ಬೆಸಸುವುದೆಂಬುದುಂ ನಿರ್ವಾಣ-ಲಕ್ಷ್ಮಿಯು ನೊಲಿಸುವುದಕ್ಕಿದು ಮೋಹನತರಮೆನಿಸುವುಪಗೂಹನದ ಕಥೆಯನಿಂತೆಂದು ಪೇಳ್ದರ್ ೪

ಚಕ್ರವರ್ತಿಯಂತೆ ಮಧುಕರಂಗಳಂತೆ ವಶ್ಯಮಂತ್ರದಂತೆ ಪರ್ಯಾಪ್ತಿಸಮೇತನಂತೆ ಋತುವಿನಂತೆ ಉತ್ಸರ್ಪಿಣಿಯಂತೆ ಸಿದ್ಧಾಂತದಂತೆ ಸಂಜ್ಞಿಜೀವದಂತೆ ಪೊತ್ತಗೆಯಂತೆ ಆವಶ್ಯಕ

ಲಕ್ಷ್ಮೀದೇವಿಗೆ ನಿರ್ವಾಣಲಕ್ಷ್ಮಿಯೆಂಬ ವನಿತೆಗೆ, ಅಮೂಢದೃಷ್ಟಿತ್ವವು ಒಂದು ಆಭರಣ. ಎಂದು ಸುಕವಿಗಳ ಸಮೂಹವೆಂಬ ಕೋಗಿಲೆಗಳಿಗೆ ಮಾವಿನ ಮರದಂಥವನಾದ ಅಧಿಕಗುಣ ವಂತನಾದ ಶ್ರೇಣಿಕಮಹಾರಾಜನು ಸದ್ಭಾವದಿಂದ ಯೋಚಿಸಿದನು. ೧. ಹಾಗೆ ಅಮೂಢ ದೃಷ್ಟಿತ್ವದ ಕಥೆಯನ್ನು ತಿಳಿದುಕೊಂಡು ಅನಂತರ ಲೋಕವಿಖ್ಯಾತನಾದ ಗಣಧರ ದೇವರ ಪಾದಗಳೆರಡಕ್ಕೆ ನಮಸ್ಕಾರ ಮಾಡಿ ವಚಶ್ರೀವನಿತೆಗೂ ನಿರ್ವಾಣ ಶ್ರೀವನಿತೆಗೂ ಆಭರಣವೆಂದೆನ್ನಿಸುವ ಉಪಗೂಹನವನ್ನು ೨-೩ 'ನನಗೆ ತಿಳಿಯುವ ಹಾಗೆ ನಿಮ್ಮ ಪಾದಕಾರುಣ್ಯದಿಂದ ಹೇಳಬೇಕು'' ಎಂದನು. ನಿರ್ವಾಣ(ಮೋಕ್ಷ)ಲಕ್ಷ್ಮಿಯನ್ನು ಒಲಿಸು ವುದಕ್ಕೆ ಇದು ಬಹಳ ಮೋಹಕವಾದದ್ದೆನಿಸುವ ಉಪಗೂಹನದ ಕಥೆಯನ್ನು ಹೇಳ ತೊಡಗಿದರು. ೪. ಚಕ್ರವರ್ತಿ (ಷಟ್ಖಂಡಗಳ ಅಧಿಪತಿ)ಯಂತೆ, ಮಧುಕರಗಳಂತೆ (ಷಟ್ಪದ : ಆರು ಕಾಲುಗಳುಳ್ಳದ್ದು, ದುಂಬಿ) ವಶ್ಯಮಂತ್ರದಂತೆ (ಆರು ವಶೀಕರಣ ಮಂತ್ರಗಳ ಹಾಗೆ) ಪರ್ಯಾಪ್ತಿ ಸಮೇತನಂತೆ (ಆಹಾರಪರ್ಯಾಪ್ತಿ, ಇಂದ್ರಿಯ ಪರ್ಯಾಪ್ತಿ ಮೊದಲಾದ ಆರು ಪರ್ಯಾಪ್ತಿಗಳು) ಋತುವಿನಂತೆ (ವಸಂತಾದಿ ಆರು ಋತುಗಳು) ಉತ್ಸರ್ಪಿಣಿಯಂತೆ (ಆರುವಿಧಃದುಷಮಸುಷಮ, ದುಷಮ, ದುಷಮ ಸುಷಮ, ಸುಷಮ ದುಷಮ, ಸುಷಮ, ಸುಷಮಸುಷಮ) ಸಿದ್ಧಾಂತದಂತೆ (ಪುಷ್ಪದಂತ ಭೂತಬಲಿವಿರಚಿತ ಷಟ್ಖಂಡಾಗಮ ಸಿದ್ಧಾಂತ), ಸಂಜ್ಞಿಜೀವದಂತೆ

ದಂತೆ ದರ್ಶನಮುಂ ನಿಶ್ಶಂಕೆಯುಂ ನಿಷ್ಕಾಂಕ್ಷೆಯುಂ ನಿರ್ವಿಚಿಕಿತ್ಸೆಯುಂ ಅಮೂಢ ದೃಷ್ಟಿತ್ವಮುಂ ಉಪಗೂಹನಮೆಂಬೀಯಱಿಂ ಸಂಪೂರ್ಣವಾಗಿ ಶೋಭಿಸುವುದು ೫

ಪೆಱಪೆಱವಸದಾಳಾಪ
ಕ್ಕೆಱಗದೆ ಸಮ್ಯಕ್ತ್ವಮೆಂಬ ಖಡ್ಗಕ್ಕಿದು ಸಂ
ದೊಱೆಯೆನಿಪುಪಗೂಹನದೊಳ್
ಮೆಱೆವುದು ಸದ್ಗುಣಮನಱಿವಿನೊಳ್ ನೆರೆದ ನರರ್ ೬

ಇನ್ನದಱ ಮಹಿಮಾಸ್ಪದಮೆಂತಪ್ಪುದೆಂದೊಡೆ ೭

ಕರಮೊಪ್ಪುವುದತಿಶಯದಿಂ
ಧರಿತ್ರಿಯೊಳ್ ಗೊಲ್ಲ ವಿಷಯವೆಂಬುದು ವಿಷಯಂ
ಕರಮೊಪ್ಪುವುದಾ ವಿಷಯದೊ
ಳುರುಮುದದಿಂ ಕಾಮಲಿಪ್ತಿಯೆಂಬುದು ನಗರಂ ೮

ಗದ್ಯ॥ ಆದನಾಳ್ವಂ ಮನೋಹರನೆಂಬರಸನಾತನ ರಾಜಶ್ರೇಷ್ಠಿ ೯

ಆ ಪುರದೊಳಗಖಿಲಗುಣಗ
ಣೋಪೇತಂ ವೈಶ್ಯವಂಶಗಗನಾರ್ಕಂ ಭೂ
ವ್ಯಾಪಿತ ಯಶಂ ಮನೋಹರ
ರೂಪಂ ಜಿನಭಕ್ತನೆಂಬನನುಪಮವಿಭವಂ ೧೦

(ಪಂಚೇಂದ್ರಿಯಗಳು ಮತ್ತು ಮನಸ್ಸು—ಇವು ಆರೂ ಇರುವ ಜೀವಿಗಳು) ಪೊತ್ತಗೆಯಂತೆ (?) ಆವಶ್ಯಕದಂತೆ, (ವಂದನೆ, ಸ್ತುತಿ ಇತ್ಯಾದಿ ಷಡಾವಶ್ಯಕತೆಗಳು ಯತಿಗಳ ಕರ್ತವ್ಯಗಳು) ದರ್ಶನವೂ ನಿಶ್ಶಂಕೆಯೂ ನಿಷ್ಕಾಂಕ್ಷೆಯೂ ನಿರ್ವಿಚಿಕಿತ್ಸೆಯೂ ಅಮೂಢದೃಷ್ಟಿತ್ವವೂ ಉಪಗೂಹನವೂ ಎಂಬ ಈ ಆರರಿಂದ ಸಂಪೂರ್ಣವಾಗಿ ಶೋಭಿಸುತ್ತದೆ. ೫. ಬೇರೆ ಬೇರೆ ಕೆಟ್ಟ ಮಾತುಗಳಿಗೆ ಸೋಲದೆ ಸಮ್ಯಕ್ತ್ವವೆಂಬ ಕತ್ತಿಗೆ ಇದು ಶ್ರೇಷ್ಠವಾದ ಒರೆಯೆಂದೆನ್ನಿಸಿಕೊಳ್ಳುವ ಉಪಗೂಹನದಲ್ಲಿ ಜ್ಞಾನಿಗಳಾದ ಮಾನವರು ತಮ್ಮ ಸದ್ಗುಣವನ್ನು ಮೆರೆಯಿಸಬೇಕು ೬. ಇನ್ನು ಅದರ ಮಹಿಮಾತಿಶಯವು ಎಂಥದೆಂದರೆ, ಭೂಮಿಯ ಮೇಲೆ ಗೊಲ್ಲ ವಿಷಯವೆಂಬ ದೇಶ ಪ್ರಸಿದ್ಧವಾಗಿತ್ತು. ಆ ದೇಶದ ರಾಜಧಾನಿ ಕಾಮಲಿಪ್ತಿಯೆಂಬ ನಗರ ಸುಂದರವಾಗಿತ್ತು ೭-೮. ಆ ಪಟ್ಟಣವನ್ನು ಆಳುವ ಅರಸು ಮನೋಹರನೆಂಬವನು ೯. ಆತನ ರಾಜ ಶ್ರೇಷ್ಠಿ ಆ ಪಟ್ಟಣದಲ್ಲೆಲ್ಲ ಬಹಳ ಗುಣವಂತ; ವೈಶ್ಯವಂಶವೆಂಬ ಆಕಾಶಕ್ಕೆ ಸೂರ್ಯನಂತೆ ಇದ್ದನು. ಅವನ ಕೀರ್ತಿ ಪ್ರಪಂಚದಲ್ಲೆಲ್ಲ ಹರಡಿತ್ತು. ಅವನ ಹೆಸರೇ ಜಿನಭಕ್ತ ೧೦. ಐಶ್ವರ್ಯದಲ್ಲಿ ಅವನು ಪ್ರಸಿದ್ಧನಾದ

ಆತನ ಸಿರಿಯಂ ಪೇೞ್ವೊಡೆ
ಭೂತಳದೊಳ್ ರೂಢಿವೆತ್ತ ಧನದಂಗಂ ಪೆ
ರ್ಮಾತಿನ ದೇವೇಂದ್ರಂಗಂ
ಮಾತೇಂ ಬಗೆವಂದು ನಾಲ್ವೆರಲ್ ತಾಂ ಪಿರಿಯಂ ೧೧

ಸುರರಾಜನೆ ದೊರೆ ಭೋಗ
ಕ್ಕೊರೆಯುಲ್ಲಂ ಜೈನಭಕ್ತಿಯೊಳ್ ಶ್ರೇಯಾಂಸಂ
ದೊರೆ ಜಗದೊಳ್ ಪೆಱರಾರುಂ
ದೊರೆಯುಲ್ಲದರ್ಾನದೆಡೆಗೆ ವೈಶ್ಯೋತ್ತಮನೊಳ್ ೧೨

ಗದ್ಯ॥ ಎನಿಸಿ ನೆಗೞ್ತೆವೆತ್ತ ಜಿನೇಂದ್ರಭಕ್ತಸೆಟ್ಟಿ ಸುಖಸಂಕಥಾ ವಿನೋದದಿಂದಿರ್ಪುದುಂ ಅತ್ತ ಮಗಧ ವಿಷಯದ ಪಾಟಲಿಪುತ್ರಮೆಂಬ ಪೊೞಲನಾಳ್ವಂ ವೀರಧ್ವಜನೆಂಬರಸನಾತನರಸಿ ಸುಸೀಮೆಯೆಂಬಳಾಯಿರ್ವರ್ಗಂ ಪ್ರಿಯನಂದನಂ ವೀರಕುಮಾರನೆಂಬನಾತಂ ದುರ್ಜನಪ್ರಿಯನುಂ ವಿಟಜನಾನಂದನುಂ ತಸ್ಕರವಿನೋದನುಂ ದುಷ್ಟಪ್ರಸಂಗನುಮಾಗಿ ಪಲವುದಿವಸಂ ಸಮಸ್ತ ದುರಾಚಾರಜನಪರಿವೃತನಾಗಿ ಪೊಱವೊೞಲೊಳ್ ಕುಳ್ಳಿರ್ದು ಕಳವಿನೊಳಾದ ಮಾತುಗಳಂ ನುಡಿಯಿಸಿ ಕೇಳುತ್ತುಮಿರ್ಪುದುಂ ಅಲ್ಲಿ ಚೋರಪ್ರಧಾನನೆಂಬನೊರ್ವನಿಂತೆಂದಂ ೧೩

ಕುಬೇರನಿಗೂ ಬಹಳ ದರ್ಪದ ದೇವೇಂದ್ರನಿಗೂ ನಾಲ್ಕು ಬೆರಳಿನಷ್ಟು ದೊಡ್ಡವನೆಂದರೆ ಹೆಚ್ಚು ಏನೂ ಹೇಳಿದಂತಲ್ಲ ೧೧. ಆ ವೈಶ್ಯೋತ್ತಮನ ಭೋಗಭಾಗ್ಯಗಳಿಗೆ ದೇವೇಂದ್ರನೇ ಸದೃಶನು; ಬೇರೆಯುವರಲ್ಲ, ಜೈನಭಕ್ತಿಯಲ್ಲಿ ಬಹಳ ಶ್ರೇಯಸ್ಸನ್ನು ಹೊಂದಿದವನು. ದಾನದಲ್ಲಿ ಪ್ರಪಂಚದ ಬೇರೆ ಯಾರೂ ಸೆಟ್ಟಿಗೆ ಸಮನಲ್ಲ ೧೨. ಹೀಗೆ ಹೆಸರು ಪಡೆದು ಪ್ರಸಿದ್ಧನಾದ ಜಿನೇಂದ್ರ ಭಕ್ತ ಸೆಟ್ಟಿ ಸುಖವಾಗಿ ಜೀವಿಸುತ್ತ ವಿನೋದದಿಂದ ಹೊತ್ತು ಕಳೆಯುತ್ತಿದ್ದನು. ಅತ್ತ ಮಗಧ ದೇಶದ ರಾಜ ವೀರಧ್ವಜ, ಅವನ ರಾಣಿ ಸುಸೀಮೆ. ಅವರಿಬ್ಬರ ಪ್ರಿಯಪುತ್ರ ವೀರಕುಮಾರನೆಂಬವನು, ಅವನು ದುರ್ಜನಪ್ರಿಯನಾಗಿ ವಿಟ ಜನರ ಗೆಳೆತನ ಬೆಳೆಸಿ ಕಳ್ಳರಿಗೆ ಸಂತೋಷವುಂಟುಮಾಡುವವನಾಗಿ ದುಷ್ಟಕಾರ್ಯಮಗ್ನನಾಗಿ ಹಲವು ಕಾಲ ಸಮಸ್ತ ದುರಾಚಾರಿಗಳ ಸಹವಾಸದಲ್ಲಿದ್ದು ನಗರದ ಹೊರಭಾಗದಲ್ಲಿ ಕುಳಿತು ಕಳ್ಳತನಕ್ಕೆ ಸಂಬಂಧಿಸಿದ ಮಾತುಗಳನ್ನು ಕೇಳಿ ತಿಳಿಯುತ್ತ ಇದ್ದನು. ಅಲ್ಲಿ ಚೋರಪ್ರಧಾನನೆಂಬವನೊಬ್ಬ ಯುವರಾಜನಿಗೆ ಹೇಳ ತೊಡಗಿದನು: "ಇವನು ಚಪಲ

ಚಪಳನಿವಂ ಕಡುಗಟಪಂ
ವಿಪರೀತಮನೆನ್ನ ಮುಂದೆ ನುಡಿದಪನೆಂದು
ರ್ವಿಪ ಮುನಿಯುವೇಡ ಕೇಳ್ಬಿ
ನ್ನಪಮಂ ನೀನೊಂದೆ ಚಿತ್ತದಿಂದಂ ನೃಪತೀ ೧೪

ಗದ್ಯ॥ ಎಂದು ವೀರಕುಮಾರಂಗಭಿಮುಖನಾಗಿ ನಿಂದು, ದೇವಾ ! ನಾಂ ಪುಗದ ದೇಶಮುಂ ಕಳದ ವಸ್ತುಗಳುಮಿಲ್ಲ ; ಗೊಲ್ಲ ವಿಷಯದೊಳ್ ಕಾಮಲಿಪ್ತಿಯೆಂಬ ಪುರದೊಳೊರ್ವ ಜಿನೇಂದ್ರ ಭಕ್ತನೆಂಬ ಪರದನ ದೇಹಾರದ ದೇವರ ಮುಕ್ಕೊಡೆಯೊಳೊಂದು ವೈಡೂರ್ಯಮಾಣಿಕಂ ಕೀಲಿಸಿರ್ದುದಾ ರತ್ನಮುಮನರ್ಘ್ಯರತ್ನಮೆನಿಪ್ಪುದದಕ್ಕೆ ಮೂಱುಂ ಲೋಕಂ ಬೆಲೆಯಲ್ಲೀ ಲೋಕದೊಳಪೂರ್ವಮಂ ಕಂಡೆನೆಂಬುದುಂ ವೀರಕುಮಾರನಾತನ ಮಾತಿಂಗೆ ವಿಸ್ಮಯಂ ಬಿಟ್ಟು ತನಗಾ ೧೫
ರತ್ನದ ಮೇಲೆ ಚಿತ್ತಮಾಗೆ ಚೋರಪ್ರಧಾನಂಗಿಂತೆಂದಂ

ಸಂದ ಕಳ್ಳರೊಳೆಲ್ಲ ನೀನೆ ಮಹಾವಿವೇಕಿಯೆ ಲೋಕದೊಳ್
ಕುಂದದುರ್ವರೆಯೆಲ್ಲಮಂ ಕಡುಧೂರ್ತರಂ ಕವರ್ವಂದದಿಂ
ಸಂದ ವಸ್ತುಗಳೆಲ್ಲಮಂ ನೆಱೆ ನೀನೆ ಸಾಧಿಸಿಕೊಂಡೆಯಿ ೧೬
ನ್ನೆಂದೊಡಾ ವರರತ್ನಮೇಂ ಗಡ ಸಾಧಿಸಲ್ಕರಿದಾದುದೇ

೧೭
ಎಂಬುದುಂ ಚೋರ ಪ್ರಧಾನನಿಂತೆಂದಂ

ಬಹಳ ಹರಟೆಯುವ, ನನ್ನ ಮುಂದೆ ಇವನು ವಿಪರೀತ ಮಾತುಗಳನ್ನಾಡುತ್ತಿದ್ದಾನೆ.
ಎಂದು ಸಿಟ್ಟುಗೊಳ್ಳಬೇಡ. ನನ್ನ ಬಿನ್ನಹವನ್ನು ಒಂದೇ ಮನಸ್ಸಿನಿಂದ ಕೇಳು." ಎಂದು
ವೀರಕುಮಾರನ ಕಡೆ ತಿರುಗಿಕೊಂಡು ನಿಂತು ತನ್ನ ಹೇಳಿಕೆಯನ್ನು ಮುಂದುವರಿಸಿದನು.
"ಸ್ವಾಮಿ, ನಾನು ಪ್ರವೇಶಿಸದ ದೇಶವಿಲ್ಲ; ಕದಿಯದ ವಸ್ತುವಿಲ್ಲ; ಗೊಲ್ಲ ದೇಶದ ಕಾಮ
ಲಿಪ್ತಿಪುರದ ಜಿನೇಂದ್ರಭಕ್ತನೆಂಬ ವರ್ತಕನ ದೇಹಾರದ ದೇವರ ಮುಕ್ಕೊಡೆಯಲ್ಲಿ
ಒಂದು ವೈಡೂರ್ಯ ಮಾಣಿಕ್ಯವನ್ನು ಜೋಡಿಸಿದ್ದಾರೆ. ಆ ರತ್ನ ಅನರ್ಘ್ಯವಾದದ್ದು.
ಅದಕ್ಕೆ ಮೂರು ಲೋಕಗಳೂ ಬೆಲೆಯಲ್ಲ. ಅದು ಈ ಲೋಕದಲ್ಲಿಯೇ ಅಪರೂಪ."
"ಇದನ್ನು ಕೇಳಿ ವೀರಕುಮಾರನಿಗೆ ಆ ರತ್ನದ ಮೇಲೆ ಆಸೆ ಹುಟ್ಟಿತು. ಅವನು ಚೋರ
ಪ್ರಧಾನನಿಗೆ ಹೀಗೆ ಹೇಳಿದನು: ೧೫. "ಕಳ್ಳರಲ್ಲೆಲ್ಲ ನೀನು ವಿವೇಕಿ, ಪ್ರಸಿದ್ಧ, ಲೋಕದವ
ರೆಲ್ಲರನ್ನೂ ಮಹಾ ಧೂರ್ತರನ್ನೂ ಲೂಟಿಮಾಡಬಲ್ಲವ. ಪ್ರಸಿದ್ಧವಾದ ವಸ್ತುಗಳೆಲ್ಲ
ವನ್ನೂ ನೀನೇ ಸಾಧಿಸಿಕೊಂಡೆ, ಆ ಶ್ರೇಷ್ಠ ರತ್ನವನ್ನು ಸಾಧಿಸಲು ಅಸಾಧ್ಯವೆ?" ೧೬.
ಅದಕ್ಕೆ ಚೋರ ಪ್ರಧಾನನು "ರಾಜಶ್ರೇಷ್ಠ, ಅಲ್ಲಿ ಕನ್ನ ಹಾಕೋಣವೆಂದರೆ ನೆಲಗಟ್ಟು

ಕನ್ನವನಿಕ್ಕುವೊಡವನೀ
ಶೋನ್ನತ ನೆಲಗಟ್ಟು ವಜ್ರಮಯಮೋಜಃವರ್ಸರ್
ತನ್ನಣ್ಮೆಂದಂ ಪುಗುವೊಡೆ
ಪನ್ನೆರಡಡೆಕಾಪು ಪುಗುವವಂಗೆಂಟೆರ್ದೆಯೇ ೧೮

ಗದ್ಯ॥ ಮತ್ತಮಾ ಪುರದೊಳಗೆ ಕೆಲವು ದಿವಸವಿರ್ದು ಕಾಪಿನವರಂ ವಂಚಿಸಿ ಪುಗುವೆನೆಂಬೊಡ ಮಣಮುಮಾಱದು : ಜಿನೇಂದ್ರಸೆಟ್ಟಿ ಜಿನಾರ್ಚನ ವಿನೋದದೊಳಂ ಜಿನಸಮಯ ಮಹೋತ್ಸವ ದೊಳಂ ಜಿನಕಥಾಳಾಪದೊಳಂ ನೇಸರ್ಪಟ್ಟು ನೇಸಮೂಡುವಿನಮಲ್ಲಿಯೆ ನೆಲಸಿರ್ಪನೆನೆ ವೀರ ಕುಮಾರಂ ಬೆಱಗಾಗಿ ಸೂಜಿಯ ಪಿನ್ನಯೊಳಂ ಮಣಿಯ ದ್ವಾರದೊಳಂ ನುಸುಳ್ವರಿರ್ದೆಡೆಯೊ ಳೊರ್ವನಂ ಕಳ್ವಂತಪ್ಪ ಕಳ್ಳರಕಳ್ಳನಿವಂ ಮೊದಲಾಗೆ ಪುಗಲರಿದೆಂದಪನಿನ್ನಾ ಮಹಾರತ್ನಮಂ ಕಳ್ವಂತಪ್ಪ ಗಂಡರಾರೆಂದು ಚಿಂತಿಸಿ ನೆರೆದಿರ್ದ ಕಳ್ಳರುಮಂ ನೋಡಿ ಕುಮಾರನಿಂತೆಂದಂ ೧೯

ಆವಾವುಪಾಯದಿಂದೆನ
ಗಾವಸ್ತುವನದಟನಾಗಿ ಪೋಗುತ್ತುಂ ತಂ
ದೀವವನುಳ್ಳೊಡೆ ಕುಡುವೆಂ
ಭಾವಿಸದೆನ್ನರ್ಧ ರಾಜ್ಯಮಂ ನಿಶ್ಚಯದಿಂ ೨೦

ವಜ್ರಮಯ, ಅಲ್ಲದೆ ಸುತ್ತ ಹನ್ನೆರಡು ಕಾವಲು ಉಂಟು. ಅಲ್ಲಿ ನುಗ್ಗುವವನಿಗೆ ಎಂಟೆದೆಯೆ ? (ಎಷ್ಟು ಧೈರ್ಯ ?) ೧೮. ಅಲ್ಲದೆ ಆ ಪುರದಲ್ಲಿಯೇ ಕೆಲವು ದಿನ ಇದ್ದು ಕಾವಲಿನವರನ್ನು ಮೋಸಪಡಿಸೋಣವೆಂದರೆ, ಅದೂ ಸಾಧ್ಯವಲ್ಲ ; ಜಿನೇಂದ್ರಸೆಟ್ಟಿಗೆ ಜಿನಪೂಜೆಯೇ ಆನಂದ. ಜಿನಧರ್ಮದ ಅನೇಕ ಮಹೋತ್ಸವಗಳ ಲ್ಲಿಯೂ ಜಿನಕಥೆಯ ಶ್ರವಣದಲ್ಲಿಯೂ ತೊಡಗಿ ಸೂರ್ಯಾಸ್ತಮಯದಿಂದ ತಿರುಗಿ ಸೂರ್ಯ ಹುಟ್ಟುವತನಕ ಅಲ್ಲಿಯೇ ಇರುತ್ತಾನೆ." ಎಂದು ಹೇಳಿದನು. ವೀರಕುಮಾರನು ಬೆರಗಾದನು. "ಸೂಜಿಯ ರಂಧ್ರದಲ್ಲಿಯೂ ಮಣಿಯ ಬಾಗಿಲುಗಳಲ್ಲಿಯೂ ನುಸುಳಿ, ಇಬ್ಬರಿದ್ದ ಕಡೆ ಒಬ್ಬನನ್ನು ಕದಿಯುವಂಥ ಕಳ್ಳರ ಕಳ್ಳನಾದ ಇವನು ಮೊದಲುಗೊಂಡು ಪ್ರವೇಶಿಸಲು ಅಸಾಧ್ಯವೆನ್ನುವನು. ಇನ್ನು ಆ ಮಹಾರತ್ನವನ್ನು ಕದಿಯೆ ಬಲ್ಲ ಶೂರರು ಯಾರು ?" ಎಂದು ಯೋಚಿಸಿ ಅಲ್ಲಿ ಸೇರಿದ್ದ ಕಳ್ಳರನ್ನೆಲ್ಲ ನೋಡಿ ಕುಮಾರನು ಹೀಗೆಂದನು. "ಯಾವ ಉಪಾಯದಿಂದಲಾದರೂ ನನಗೆ ಆ ವಸ್ತುವನ್ನು ಪರಾಕ್ರಮದಿಂದ ಹೋಗಿ ತಂದುಕೊಡುವವನಿಗೆ ನನ್ನ ಅರ್ಧರಾಜ್ಯವನ್ನೇ ಕೊಡುತ್ತೇನೆ. ೧೯–೨೦.

ಗದ್ಯ॥ ಎಂಬುದುಮಾ ಮಾತಿಂಗೆ ಸೂರ್ಪನೆಂಬ ಕಳ್ಳನೆರ್ದು ಕುಮಾರಂಗಭಿಮುಖನಾಗಿ ದೇವ ನಾನಾವಸ್ತುವಂ ತಂದಪೆನೆಂಬುದುಂ ಕುಮಾರಂ ಪೆರ್ಚಿ ಕರಮೊಳ್ಳಿತೆಂದು ಕರ್ಪೂರವೀಳೆಯ ಮುಂ ಕುಡುವುದುಂ ಪಿರಿದುಂ ಪೂಣ್ದು ವೀರಕುಪಾರಣಂ ಬೀಳ್ಕೊಂಡು ತನ್ನ ಮನೆಗೆ ಬಂದು ರತ್ನಮುಂ ಕಳ್ವ ಉಪಾಯಮುಂ ತನ್ನ ಮನದೊಳಗೆ ಭಾವಿಸಿ ನೋಡಿ ೨೧

ಆ ದೊರೆಯ ಮಹಾಕಲಿಯುಂ
ಭೇದಿಸಲಣಮಾಱನೆಂದೊಡಾ ರತ್ನಮನಾರ್
ಭೇದಿಸುವರೆಂಮ ತಸ್ಕರ
ರಾದಿಯ ಕಳ್ಳಂಗೆ ಚಿಂತೆ ಪುಟ್ಟಿದುದಾಗಳ್ ೨೨

ಪಱಿಯೊಳ್ಳನದಟಿಗಂಡಿಂ
ದಱಿಯದೆ ಮೆಯ್ಯುರ್ಚಿ ಪೋಗಿ ಪರದನ ಮನೆಯಂ
ತಱುವಲಿತನದಿಂ ಪೊಕ್ಕೊಡೆ
ಕುಱಿಸಾವಂತಲ್ಲಿ ಸಾವು ನಿಶ್ಚಯಮಕ್ಕುಂ ೨೩

ಭಾವಕನಿಧಿ ಜಿನಭಕ್ತಂ
ಶ್ರಾವಕನಱಿವಂದು ಕೊಲ್ವನಲ್ಲಂ ಪೆಱರ
ನ್ನಾ ವಿಭುವನಱಿಯಲಾಱದೆ
ತಾವದಯಂ ಕೊಲ್ವರಲ್ಲಿ ಸಂದೆಯಮುಂಟೇ ೨೪

ಯುವರಾಜನ ಈ ಮಾತಿಗೆ ಸೂರ್ಪನೆಂಬ ಕಳ್ಳನು ಎದ್ದು "ದೇವ ! ನಾನು ಆ ವಸ್ತು ವನ್ನು ತರುತ್ತೇನೆ" ಎಂದನು. ಕುಮಾರನು ಉಬ್ಬಿ, 'ಬಹಳ ಒಳ್ಳೆಯದು' ಎಂದು ಅವನಿಗೆ ಕರ್ಪೂರ ವೀಳಯವನ್ನು ಕೊಟ್ಟು ಕಳುಹಿಸಿದನು. ಆ ಕಳ್ಳ ಪ್ರತಿಜ್ಞೆಮಾಡಿ ಹೊರಟು ತನ್ನ ಮನೆಗೆ ಬಂದ ಮೇಲೆ ರತ್ನವನ್ನು ಕದಿಯುವ ಉಪಾಯವನ್ನು ತನ್ನ ಮನಸ್ಸಿನಲ್ಲಿ ಯೋಚಿಸಿ ನೋಡಿದನು ೨೧, 'ಅಂಥ ಮಹಾಶೂರನೂ ಭೇದಿಸಲು ಅಸಾಧ್ಯವೆಂದಾಗ ಆ ರತ್ನವನ್ನು ಯಾರು ಕದಿಯಬಲ್ಲರು?' ಎಂದು ಆ ಕಳ್ಳರ ಮೊದಲಿಗ ನಿಗೆ ಚಿಂತೆ ಹುಟ್ಟಿತು. ೨೨. ಹಳೆಯ ಶೌರ್ಯದ ಕೆಟ್ಟಧೈರ್ಯದಿಂದ ಮೈಯುಬ್ಬಿ ಹೋಗಿ ಆ ವರ್ತಕನ ಮನೆಯನ್ನು ತಬ್ಬಲಿತನದಿಂದ ಹೊಕ್ಕರೆ ಕುರಿ ಸಾಯುವಹಾಗೆ ಸಾವು ನಿಶ್ಚಯ. ೨೩. ಜಿನಭಕ್ತ, ಭಾವುಕರ ಭಾಗ್ಯವಾದ ಆ ಶ್ರಾವಕನು ತಿಳಿದರೂ ಕೊಲ್ಲುವವನಲ್ಲ. ಬೇರೆಯವರು ಆ ಪ್ರಭುವಿನ ಮನಸ್ಸನ್ನು ತಿಳಿಯಲಾರದೆ ನಿರ್ದಯ ರಾಗಿ ಕೊಲ್ಲುವರು. ಅದರಲ್ಲಿ ಸಂದೇಹವೇನಿದೆ ? ೨೪. ತಾನು ಕನ್ನ ಹಾಕಿ ಧನವನ್ನು

ತಾಂ ಕನ್ನಮಿಕ್ಕಿ ಧನಮಂ
ಭ್ರಾಂತಿಂದಂ ಕಳ್ವೆನೆಂಬನುಂ ಕಳ್ಳನೆ ಕೇಳ್
ಎಂತುಂ ನೋವುಂ ಸಾವುಂ
ಚಿಂತೆಯುಮಣಮಾಗದಂತು ಕಳ್ವನೆ ಕಳ್ಳಂ ೨೫

ಗದ್ಯ॥ ಅದು ಕಾರಣದಿಂದಱಿಚೆಟ್ಟಂ ತಲೆಬುಗುಂಟಪ್ಪುದುದೆಂಬ ನಾಣ್ಣುಡಿಯಂತಱಿಬಂಟಂ ಪೋಗಿ ಪೊಕ್ಕೆನಪ್ಪೊಡೆ ಕಾಪಿನವರ ಕೆಯ್ಯ ಸಾವು ನಿಶ್ಚಯಂ ಸಮನಿಸುಗುಮೌತ್ಸುಕತನದಿಂ ಮೂರ್ಖನಾಗಿ ಪುಗುವುದು ಬುದ್ಧಿಯಲ್ಲದು, ಕೆಲವು ವರುಷಂ ತಡೆದೊಡಂ ಕಡೆಗಲ್ಲಿಗುಪಾಯಮಂ ಲೇಸಾಗಿ ಬಲ್ಲೆನಾತನೆರಡಿಲ್ಲದ ಶ್ರಾವಕಂ ಜಿನಧರ್ಮದೊಳ್ ಸ್ಥಿರಚಿತ್ತಂ ಋಷಿಯರ ಮೇಲೆ ಮಹಾ ಪ್ರೀತನದಱಿಂದೆ ಮಾಯಾಋಷಿಯ ರೂಪಂ ಕೈಕೊಂಡುಗ್ರೋಗ್ರತಪದೊಳೆನ್ನಂ ಲೋಕದೊಳ್ ಪ್ರಸಿದ್ಧನಂ ಮಾಡಿಕೊಂಡು ಕಾಮಲಿಪ್ತಿನಗರಮಂ ಸಯ್ದಿ ಜಿನೇಂದ್ರಭಕ್ತಸೆಟ್ಟಿಯ ಮನೆಯಂ ಪೊಕ್ಕು ಮೆಲ್ಲನೆ ಮೆಲ್ಪಡಿಸಿ ರತ್ನಮನೆನ್ನಕಯ್ಗೆ ಮಾಡುವೆನೆಂಬ ಕಜ್ಜಮನೆತ್ತಿಕೊಂಡು ತನ್ನ ಪೆಂಡಿರುಮಂ ಪುತ್ರರುಮಂ ಬಂಧುಗಳುಮಂ ಕರೆದಿಂತೆಂದಂ ೨೬

ಪಿರಿದಪ್ಪ ಬೆಸನನೆನಗಿಂ
ದರಸಂ ಕಡುಗೂರ್ಮೆವೆತ್ತು ಬೆಸಸಿದನಾನುಂ
ಭರದಿಂದಂ ತಾ ಬೆಸನಂ
ಕರಮಲ್ಲದೆ ಪೂಣ್ದು ವೀರದಿಂ ಕೈಕೊಂಡೆಂ ೨೭

ಆಸೆಯಿಂದ ಕದಿಯುವೆನೆಂಬ ಕಳ್ಳನೂ ಒಬ್ಬ ಕಳ್ಳನೆ ? ಹೇಗೂ ನೋವಾಗಲಿ ಸಾವಾಗಲಿ ಚಿಂತೆಯಾಗಲಿ ಸ್ವಲ್ಪವೂ ಆಗದ ಹಾಗೆ ಕದಿಯುವವನೇ ಕಳ್ಳ, ೨೫. ಆ ಕಾರಣದಿಂದ 'ಹೀನ ಶಿಷ್ಯತನದಿಂದ ತಲೆ ಬುಗುಟಾಯಿತು' ಎಂಬ ಗಾದೆಯಂತೆ ಹೀನ ಶೌರ್ಯದಿಂದ ಹೋಗಿ ಹೊಕ್ಕೆನಾದರೆ ಕಾವಲಿನವರ ಕೈಯಲ್ಲಿ ಸಾವು ನಿಶ್ಚಯವಾಗಿ ಉಂಟಾಗುವುದು. ಆತುರದಿಂದ ಮೂರ್ಖನಂತೆ ಪ್ರವೇಶಿಸುವುದು ಸರಿಯಲ್ಲ. ಕೆಲವು ವರುಷಗಳೇ ತಡವಾದರೂ ಚಿಂತೆಯಿಲ್ಲ. ಇದಕ್ಕೆ ಸರಿಯಾದ ಉಪಾಯವನ್ನು ಚೆನ್ನಾಗಿ ಬಲ್ಲೆ. ಆತನು ಕಪಟವಿಲ್ಲದ ಶ್ರಾವಕ. ಜಿನಧರ್ಮದಲ್ಲಿ ಅವನಿಗೆ ಸ್ಥಿರಬುದ್ಧಿ. ಋಷಿಗಳ ಮೇಲೆ ಅವನಿಗೆ ಬಹಳ ಭಕ್ತಿ, ಆದ್ದರಿಂದ ಮಾಯಾಋಷಿಯ ರೂಪವನ್ನು ಧರಿಸಿ ಉಗ್ರವಾದ ತಪಸ್ಸಿನಲ್ಲಿ ನಾನು ಪ್ರಸಿದ್ಧನಾಗಿ ಕಾಮಲಿಪ್ತಿಪುರವನ್ನು ಸೇರಿ ಜಿನೇಂದ್ರಭಕ್ತಸೆಟ್ಟಿಯ ಮನೆಯನ್ನು ಹೊಕ್ಕು ಉಪಾಯವಾಗಿ ಮೋಸಪಡಿಸಿ ರತ್ನವನ್ನು ವಶಪಡಿಸಿಕೊಳ್ಳಬೇಕೆಂದು ನಿರ್ಧರಿಸಿ ತನ್ನ ಹೆಂಡಿರನ್ನೂ ಮಕ್ಕಳನ್ನೂ ಕರೆದು ೨೬. "ನನಗೆ ರಾಜನು ದೊಡ್ಡ ಕೆಲಸವೊಂದನ್ನು ಬಹಳ ಪ್ರೀತಿಯಿಂದ ಒಪ್ಪಿಸಿದ್ದಾನೆ. ನಾನೂ ಸಂಭ್ರಮದಿಂದ ಆ ಕೆಲಸವನ್ನು ಒಪ್ಪಿ ಪ್ರತಿಜ್ಞೆಮಾಡಿ ಕೈಕೊಂಡಿದ್ದೇನೆ ೨೭. ಅದೂ ಸಾಮಾನ್ಯವಾದ

ಗದ್ಯ॥ ಅದುವುಂ ಸಾಮಾನ್ಯದ ಬೆಸನಲ್ಲದಾಬೆಸನೆನ್ನ ಪುಣ್ಯೋದಯದಿಂ ದೊರೆಕೊಂಡು ದಕ್ಕುಮಪ್ಪೊಡೆ ವೀರಕುಮಾರನರ್ಧರಾಜ್ಯಮಂ ಮತ್ತೆನಿಸದೆ ಕೈಸಾರ್ಗುಮದು ಕಾರಣದಿಂ ಉಪಾಯದೊಳವಾ ಬೆಸನು ಸಾಧಿಸಿಕೊಂಡಲ್ಲದೆ ಬಾರೆನೆನ್ನದೆಸೆಗಂಜಬೇಡ, ನೀವೆಲ್ಲರೆನ್ನ ಬರ್ಪಿನೆಗಂ ಬುದ್ಧಿವಂತರಾಗಿರ್ಪುದೆಂದಪ್ಪೈಸಿ ತತ್ಪುರದಿಂ ಪೊಱಮಟ್ಟು ಪೂರ್ವದೇಶಮಂ ಪೊಕ್ಕೊಂದೂರೊಳ್ ಒಂದು ಬಸದಿಯಂ ಸಾರ್ದು ಋಷಿಯರ ಮಾರ್ಗಮಂ ಕಲಿಯಲೆಂದು ಕೃತಕ ವೈರಾಗ್ಯದಿಂ ಸಂಸಾರಕ್ಕೆ ಪೇಸುವರಂತೆಲ್ಲಾ ಋಷಿಯರ್ಗಂ ಚಾಟುಕಾಱಿಕ ವಿನಯದಿಂ ಪೊಡೆವಡುವುದುಂ ಮುನಿವರರಿಂತೆಂದರ್ ೨೮

ಎಲ್ಲಿಂದಂ ಬಂದಿರ್ಮು
ನ್ನೆಲ್ಲಿರ್ಪಿರ್ನಿಮ್ಮ ದೇಶಮಾವುದು ನೀಮಿ
ನ್ನೆಲ್ಲಿಗೆ ಪೋದಪಿರೆನೆ ತಳು
ವಿಲ್ಲದೆ ಮುನಿಸಂಕುಲಕ್ಕೆ ತಸ್ಕರನೆಂದಂ ೨೯

ಪರದೇಸಿಯೆಂ ನಮ್ಮವರೆ
ಲ್ಲರುಮಂ ಮನವಾರೆ ತೊಱೆದು ತಪಮಂ ಕೈಕೊಂ
ಡರವರಿಸದೆ ನೆಗಟ್ದಘಮಂ
ಹರಿಯಿಪೆನೆಂಬರ್ತಿಯಿಂದಮಿಲ್ಲಿಗೆ ವಂದೆಂ ೩೦

ಕೆಲಸವಲ್ಲ. ಆ ಕೆಲಸ ನನ್ನ ಪುಣ್ಯಾಧಿಕ್ಯದಿಂದ ಲಭಿಸಿದೆ. ಅದು ಈಡೇರಿದರೆ ವೀರ ಕುಮಾರನ ಅರ್ಧರಾಜ್ಯವು ತಡವಿಲ್ಲದೆ ಕೈಸೇರುತ್ತದೆ. ಆದಕಾರಣ ಉಪಾಯದಿಂದ ಆ ಕೆಲಸವನ್ನು ಸಾಧಿಸಿದ ಹೊರತು ಬರುವುದಿಲ್ಲ. ನನ್ನ ವಿಷಯಕ್ಕೆ ನೀವು ಅಂಜಬೇಡಿ. ನಾನು ಹಿಂತಿರುಗಿ ಬರುವವರೆಗೆ ನೀವೆಲ್ಲ ಬುದ್ಧಿವಂತರಾಗಿರಬೇಕು” ಎಂದು ಹೇಳಿ ಒಪ್ಪಿಸಿ ಆ ಪಟ್ಟಣದಿಂದ ಹೊರಟು ಪೂರ್ವದೇಶವನ್ನು ಹೊಕ್ಕು ಒಂದು ಊರಿನಲ್ಲಿ ಯಾವುದೋ ಒಂದು ಬಸದಿಯನ್ನು ಸಮೀಪಿಸಿ ಋಷಿಗಳ ರೀತಿಯನ್ನು ಕಲಿಯಬೇಕೆಂದು ಸುಳ್ಳು ವೈರಾಗ್ಯದಿಂದ ಸಂಸಾರದಲ್ಲಿ ಅಸಹ್ಯಪಟ್ಟವರ ಹಾಗೆ ಎಲ್ಲಾ ಋಷಿಗಳಿಗೂ ಮುಖಸ್ತೋತ್ರದ ವಿನಯದಿಂದ ಅಡ್ಡಬಿದ್ದನು. ಆಗ ಆ ಮುನಿಶ್ರೇಷ್ಠರು ೨೮. “ಎಲ್ಲಿಂದ ಬಂದಿರಿ ? ಈ ಮುಂಚೆ ಎಲ್ಲಿದ್ದಿರಿ ? ನಿಮ್ಮ ದೇಶ ಯಾವುದು ? ನೀವು ಇನ್ನು ಎಲ್ಲಿಗೆ ಹೋಗುವಿರಿ ?” ಎಂದು ಕೇಳಿದರು. ಆದಕ್ಕೆ ಆ ಕಳ್ಳನು ಸ್ವಲ್ಪವೂ ತಡ ಮಾಡದೆ ಉತ್ತರ ಹೇಳಿದನು : “ನಾನು ಪರದೇಶಿ. ನಮ್ಮವರೆಲ್ಲರನ್ನೂ ಮನಸಾರ ತ್ಯಜಿಸಿ ತಪಸ್ಸನ್ನು ಕೈಕೊಂಡೆ. ಹಿಂಜರಿಯದೆ ಮಾಡಿದ ಪಾಪವನ್ನು ಕಳೆದುಕೊಳ್ಳುವ ಆಸೆಯಿಂದ ಇಲ್ಲಿಗೆ ಬಂದೆ.” ೨೯–೩೦. ಒಡವೆ, ನಂಟರು, ಮಕ್ಕಳು, ಹೆಚ್ಚಾಗಿ ಪ್ರೇಮಿಸುವ

ಒಡವೆಯು ನೆಂಟರ ಮಕ್ಕಳ
ಕಡುಗೂರ್ಪಂಗನೆಯು ತಾಯು ತಂದೆಯು ಕೂರ್ತಾಂ
ನಡಪಿರ್ದ ಬಂಟನೆಂದೋ
ಗಡಿಸದೆ ಮೋಹಾಗ್ನಿಯಿಂದಮುೞ್ವುದು ಜೀವಂ ೩೧

ಸಂಸಾರಂ ಶಾಶ್ವತಮ
ಲ್ಲಂ ಸೆಡೆಯದೆ ತಪದೊಳಾದ ಕಡು ಚೆಲ್ವಿಂದಂ
ತಾಂ ಸಂದಘಮಂ ಹರಿಸಿ ದಿ
ಟಂ ಸುರಗತಿವಡೆದು ಭೋಗಿಪುದು ತತ್ಫಲಮಂ ೩೨

ಗದ್ಯ॥ ಎಂದು ಮೆಲ್ಪಡೆ ನುಡಿದು ಕೆಲವು ದಿವಸಮಲ್ಲಿರ್ದು ನಡೆವ ನುಡಿವ ಉಣ್ಬ ಬಂದಿಸುವ ಪಟ್ಟಿರ್ಪ ಕುಳ್ಳಿರ್ಪ ನಿಂದಿರ್ಪ ಕ್ರಿಯೆಗಳಂ ಮಾಳ್ಪಭಾಗಿಗಳೆಲ್ಲಮಂ ಲೇಸಾಗಿ ಅಭ್ಯಾಸಂ ಮಾಡಿ ಲೋಚಂಗಾಱದೆ ತಪಮಂ ಕೊಳಲಂಜಿ ಮೆಲ್ಲನಲ್ಲಿಂ ಜಗುೞ್ದು ಪೋಗಿ ತಲೆಯಂ ಬೋಳಿಸಿಕೊಂಡು ಬ್ರಹ್ಮಚಾರಿವೇಷಮಂ ಕೈಕೊಂಡು ೩೩

ವೀರಧ್ವಜಾತ್ಮಜಾತನ
ಧಾರಿಣಿಯರೆ ಸಾರ್ಗುಮೆಂಬ ಕಡುಮೋಹದಿನಾ
ವೀರಭಟಂ ಮೈಸುಖಮಂ
ಪಾರದೆ ತಾಳ್ದಿರ್ದನಧಿಕಮೆನಿಸುವ ಮಲಮಂ ೩೪

ಹೆಂಡತಿ, ತಾಯಿ, ತಂದೆ, ಪ್ರೀತಿಯಿಂದ ನಾನು ಸಾಕಿದ ಭಂಟ, ಎಂದು ಅತಿಯಾದ ಮೋಹದಿಂದ ಜೀವ ಹಾಳಾಗುತ್ತದೆ. ೩೧. ಸಂಸಾರ ಶಾಶ್ವತವಲ್ಲ-ಹಿಂಜರಿಯದೆ ತಪಸ್ಸಿನಲ್ಲಿ ತೊಡಗಿ ಲಭಿಸಿದ ಫಲದಿಂದ ಹೆಚ್ಚಾದ ಪಾಪವನ್ನು ಹೋಗಲಾಡಿಸಿ ದಿಟವಾಗಿ ದೇವಗತಿಯನ್ನು ಪಡೆದು ಆ ಫಲವನ್ನು ಅನುಭವಿಸುವುದು" ೩೨. ಎಂಬುದಾಗಿ ನಂಬಿಸಿ ಮಾತನಾಡಿ ಕೆಲವು ದಿನ ಅಲ್ಲಿಯೇ ಇದ್ದು ಋಷಿಗಳು ನಡೆಯುವ, ನುಡಿಯುವ, ಊಟಮಾಡುವ, ವಂದಿಸುವ, ಮಲಗಿರುವ, ಕುಳಿತುಕೊಳ್ಳುವ, ನಿಂತಿರುವ, ಕೆಲಸಗಳನ್ನು ಮಾಡುವ, ರೀತಿಗಳನ್ನೆಲ್ಲ ಚೆನ್ನಾಗಿ ಅಭ್ಯಾಸಮಾಡಿದನು. ಲೋಚಿಗೆ (ತಲೆಯ ಕೂದಲುಗಳನ್ನೆಲ್ಲ ಚಿಮಟದಿಂದ ಕೀಳುವುದು) ಧೈರ್ಯಸಾಲದೆ ತಪಸ್ಸನ್ನು ಕೈಕೊಳ್ಳುವುದಕ್ಕೆ ಹೆದರಿ, ಮೆಲ್ಲಗೆ ಅಲ್ಲಿಂದ ತಪ್ಪಿಸಿಕೊಂಡು ಹೋಗಿ ತಲೆಯನ್ನು ಬೋಳಿಸಿಕೊಂಡು ಬ್ರಹ್ಮಚಾರಿಯ ವೇಷವನ್ನು ಧರಿಸಿದನು. ೩೩. ವೀರಧ್ವಜನ ಮಗನ ಅರ್ಧರಾಜ್ಯ ಸಿಕ್ಕುವುದೆಂಬ ಹೆಚ್ಚಾದ ಮೋಹದಿಂದ ಆ ವೀರಭಟನು ದೇಹಸೌಖ್ಯವನ್ನು ನೋಡದೆ ಹೆಚ್ಚಾದ ಕೊಳೆಯನ್ನು ಧರಿಸಿದನು. ೩೪. ಆ ರತ್ನದಿಂದ ರಾಜ್ಯಲಕ್ಷ್ಮಿ ದೊರೆಯುವ

ಆರತ್ನದಿನವನೀತ
ಶ್ರೀರಮ ಕೈಸಾರ್ಗುಮೆಂದು ತಾಳ್ದಿದನಾಗಳ್
ಚೋರಂ ಮಾಯಾತಪಮಂ
ಧಾರಿಣಿಯೊಳ್ ಮೋಹಮುಳ್ಳರೇನಂ ಮಾಡರ್ ೩೫

ಧರೆ ಬೆಱಗಾಗಿರೆ ಸಲರುಂ
ಕರಮುಗಿಯೆ ಜಡರ್ಗೆ ಚೋದ್ಯಮಪ್ಪಂತಿರೆ ನಿ
ಷ್ಠುರಮಪ್ಪ ಬಾಹ್ಯತಪಮಂ
ಧರಿಯಿಸಿದಂ ಸೂರ್ಪಣಂದು ಮಾಯಾತಪಮಂ ೩೬

ಒಡಲೆಲ್ಲಂ ಬಡತನದಿಂ
ಗಡ ಗಿಡಿಗಿಡಿಜಂತ್ರಮಾಗೆ ಕಣ್ಣೆಲ್ಲಂ ತ
ಮ್ಮೊಡೆ ಗಾಣಬಾರದೆನಿಸಿರೆ
ಕಡುಗಲಿ ನಿತ್ಯೋಪವಾಸದೊಳ್ನಿಱ ನೆಗಟ್ದಂ ೩೭

ಗದ್ಯ॥ ಮತ್ತಮೇಕರಾತ್ರ ತ್ರಿರಾತ್ರಮಹಾರಾತ್ರಷೋಪವಾಸ ಮಾಸೋಪವಾಸಂಗಳಿಂ ಕಬ್ಬಿಣವುಂ ತಿಂದರಂತೆ ತನು ಕುಂದಲುಂ ಒಂದಗುಳೊಳ್ಮಾಡಿದಂತೊಡಲಸಿದಾಗಲುಂ ಬೇತಾಳನ ಬಸಿಱಂತೆ ಬಸಿಱ್ ಬೆನ್ನಂ ಪತ್ತಲುಂ ಪಟವಾವಿಯ ನೀರಂತೆ ಕಣ್ಗೊಳಗಡಂಗಲುಂ ಪಾಟ್ಮನೆಯ

ಳೆಂಬ ಆಸೆಯಿಂದ ಆ ಕಳ್ಳನು ಮಾಯಾತಪಸ್ಸನ್ನು ಕೈಕೊಂಡನು. ಈ ಲೋಕದಲ್ಲಿ ಮೋಹಪರವಶರು ಏನನ್ನು ತಾನೆ ಮಾಡುವುದಿಲ್ಲ ? ೩೫. ಲೋಕ ಆಶ್ಚರ್ಯಪಡಲು, ಅನೇಕರು ಕೈಮುಗಿಯುತ್ತಿರಲು, ದಡ್ಡರಿಗೆ ಆಶ್ಚರ್ಯವಾಗುವ ಹಾಗೆ ಕ್ರೂರವಾದ ಹೊರಗಿನ ತಪಸ್ಸನ್ನು ಆ ಸೂರ್ಪನು ಅನುಸರಿಸುತ್ತ ಮಾಯಾತಪಸ್ವಿಯಾದನು. ೩೬. ದೇಹವೆಲ್ಲ ಬಡಕಲಾಗಿ ಶಿಥಿಲವಾಯಿತು. ಕಣ್ಣುಗಳು ತಮ್ಮ ಸ್ವರೂಪ ಕಾಣಿಸ ಬಾರದೆಂದು ಯೋಚಿಸಿದಂತೆ ಒಳಕ್ಕೆಹೋದುವು. ಆ ಕಡುಗಲಿ ಸೂರ್ಪನು ವಿಶೇಷ ವಾಗಿ ನಿತ್ಯೋಪವಾಸವನ್ನು ಮಾಡಿದನು. ೩೭. ಅಲ್ಲದೆ ಏಕರಾತ್ರಿ, ತ್ರಿರಾತ್ರಿ ಮಹಾ ರಾತ್ರಿ, ಅಷ್ಟೋಪವಾಸ, ಮಾಸೋಪವಾಸಗಳನ್ನು ಆಚರಿಸಿ ಕಬ್ಬಿಣವನ್ನು ತಿಂದವರ ಹಾಗೆ ದೇಹ ಕುಗ್ಗಲು ಒಂದು ಅಗುಳು ಮಾತ್ರ ತಿಂದವನಂತೆ ಶರೀರ ಕೃಶವಾಗಲು, ಬೇತಾಳನ ಹೊಟ್ಟೆಯಂತೆ ಅವನ ಹೊಟ್ಟೆ ಬೆನ್ನಿಗೆ ಹತ್ತಿಕೊಂಡಿತು. ಹಳೆಯಬಾವಿಯ ನೀರಿನ ಹಾಗೆ (ಬಹಳ ಆಳ) ಕಣ್ಣುಗಳು ಒಳಗೆ ಅಡಗಿಬಿಟ್ಟವು. ಹಾಳುಮನೆಯ ಗಳುವಿ

ಗಳುವಿನಂತೆ ಬರಿಯ ಎಲ್ವುಗಳ್ ಪೊರಮಡಲುಂ ಅಲ್ಪಶ್ರೀಮಂತನಂತೆ ನಡೆ ತಡವಾಗಲುಂ ಕಾಗೆ ದೊಂಡೆಪಣ್ಣಿನಂತೊಳಗಶುಭಮುಂ ಪೊಱಗೆ ರಮಣೀಯಮುಮಪ್ಪಂತು ನಗಟ್ದು ೩೮

ಒಂದೆಡೆ ಮನ್ನಣೆ ಪಿರಿದುಂ
ಟೆಂದಿರ್ದೊಡೆ ಕೀರ್ತಿಪರಿಯಲಱಿಯದು ನಯಮಾ
ದಂದಲ್ಲದೆ ಪುಗಬಾರದು
ಸಂದೊಪ್ಪುವ ಕಾಮಲಿಪ್ತಿ ಪುರಮಂ ಬೇಗಂ ೩೯

ಉಪವಾಸಕ್ಕಲಸಿ ಕರಂ
ತಪಮಂ ಬಿಸುಡಲ್ಕೆಬಾರದವನೀತಳದೊಳ್
ವಿಪರೀತಮಾಗೆ ಪೆಱಗಣ
ತಪದಿಂದಲ್ಲದೆ ಪೊಗಱ್ತೆಯಾಗದು ಬೇಗಂ ೪೦

ಆಡಂಬರದಿಂದಲ್ಲದೆ
ನಾಡವರಱ್ಕರ್ತು ಪೂಜಿಸಲ್ನೆಱೆ ಕೈಕೊಂ
ಡಾಡರದಱಿಂದಮಿಳೆಯೊಳ್
ಮಾಡುವೆನುಗ್ರೋಗ್ರ ಮಾಯಾ ತಪಮಂ ೪೧

ಗದ್ಯ॥ ಎಂದೊಂದೆಡೆಯೊಳ್ನಿಲ್ಲದೆ ಗ್ರಾಮನಗರ ಖೇಡಖರ್ವಟ ಮಡಂಬ ಪಟ್ಟಣ ದ್ರೋಣಾ ಮುಖಂಗಳೆಂಬವಱೊಳೆಲ್ಲಂ ವಿಹಾರಿಸುತ್ತುಂ ಕೆಲವಾನುಂ ದಿವಸಂ ಪೋದಿಂಬಳಿಕ್ಕೆ ಗೊಲ್ಲ

ನಂತೆ ಪಕ್ಕೆಯ ಎಲುಬುಗಳು ಹೊರಟುಕೊಂಡವು. ಅಲ್ಪ ಶ್ರೀಮಂತನ ಹಾಗೆ ಸೂರ್ಪನ ನಡಿಗೆ ತಡವಾಯಿತು. (ನಿಧಾನ) ಕಾಗೆತೊಂಡೆಹಣ್ಣಿನಂತೆ ಒಳಗೆ ಅಶುಭವವೂ ಹೊರಗೆ ರಮಣೀಯವೂ ಆಗಿರುವ ಹಾಗೆ ಆಚರಿಸಿ, ೩೮. ಹೆಚ್ಚಾದ ಮನ್ನಣೆಯಿದೆಯೆಂದು ಒಂದೇ ಕಡೆ ಇದ್ದರೆ ಕೀರ್ತಿ ಹಬ್ಬುವುದು ಸಾಧ್ಯವಲ್ಲ. ಕೀರ್ತಿ ದೊರಕಿದಲ್ಲದೆ ಕಾಮಲಿಪ್ತಿಪುರ ವನ್ನು ಬೇಗ ಪ್ರವೇಶಿಸಬಾರದು. ೩೯. ಉಪವಾಸಕ್ಕೆ ಬೇಸತ್ತು ತಪಸ್ಸನ್ನು ಬಿಸಾಡ ಬಾರದು, ಲೋಕದಲ್ಲಿ ಹೆಚ್ಚಾಗಿ ಹಿಂದಣ ತಪಸ್ಸಿನಿಂದಲ್ಲದೆ ಹೊಗಳಿಕೆ ಲಭಿಸುವುದಿಲ್ಲ ೪೦. ಆಡಂಬರವಿಲ್ಲದಿದ್ದರೆ ನಾಡಿನ ಜನರು ಪ್ರೀತಿಯಿಂದ ಪೂಜೆ ಸಲ್ಲಿಸರು ; ಅವರು ಹೆಚ್ಚಿಗೆ ಕೊಂಡಾಡುವುದೂ ಇಲ್ಲ. ಆದ್ದರಿಂದ ಬಹಳ ಉಗ್ರವಾದ ತಪಸ್ಸನ್ನು ಮಾಡು ತ್ತೇನೆ." ೪೧. ಹೀಗೆ ಯೋಚಿಸಿ ಆ ಕಳ್ಳನು ಒಂದು ಸ್ಥಳದಲ್ಲಿ ನಿಲ್ಲದೆ, ಹಳ್ಳಿ ನಗರ, ಖೇಡ, ಖರ್ವಟ, ಅಡಂಬ, ದ್ರೋಣಾಮುಖ, ಪಟ್ಟಣಗಳಲ್ಲೆಲ್ಲೆಲ್ಲಿಯೂ ಸಂಚರಿಸುತ್ತ ಕೆಲವು ದಿನಗಳು ಕಳೆದ ಬಳಿಕ ಗೊಲ್ಲದೇಶವನ್ನು ಪ್ರವೇಶಿಸಿದನು. ಆದರೆ ಕಾಮಲಿಪ್ತಿಗೆ

ವಿಷಯುವಂ ಪೊಕ್ಕು ಕಾಮಲಿಪ್ತಿಯಂ ಪುಗದೆ ತತ್ಪುರಕ್ಕೆರಡು ಮೂಱುಗಾವುದದಂತರದೊಳಿರ್ದು ಸುತ್ತಣ ಗ್ರಾಮಂಗಳೊಳ್ ತನ್ನಂ ಪ್ರಸಿದ್ಧಿಗೆ ಸಲಲ್ವೇಡಿ ಚರಿಯಿಸುತ್ತುಮಿರ್ದು ಕೆಲವಾನುಂ ದಿವಸಂ ಪೋದಿಂಬೞಿಕ್ಕೆ ೪೨

ಕರಮುಗ್ರಮಪ್ಪತಪದೊಳ್
ಚರಿಯಿಸುವವರಾರಿಳಾಗ್ರದೊಳ್ತನುವಂ ನಿ
ಷ್ಠುರಮಪ್ಪುಪವಾಸಂಗಳಿ
ನಿರದಿಂತೋವೋವೊ ತವಿಸುವುನ್ನತನಾವಂ ೪೩

ಎನ್ನೊಡಲಲ್ಲದಿದೆಂಬವೊ
ಲನ್ನಮನೞಿ ತೊಱೆದು ತನ್ನ ಸುಖಮಂ ಬಿಟ್ಟಿ
ರ್ಪನ್ನರ್ಪೆಱರಾರೀ ಗುಣಿ
ಯನ್ನರ್ಧಾರಿಣಿಯೊಳಱಿದು ಭಾವಿಸಿ ನೋಡಲ್ ೪೪

ಗದ್ಯ॥ ಎಂದು ನಾಡೆಲ್ಲಮೊಂದೆ ಕೊರಲೊಳ್ ಪೊಗೞೆ ರೂಢಿಯಾಗಿ ಕಾಮಲಿಪ್ತಿನಗರಮಂ ಪುಗುವುದುಂ ಜಿನೇಂದ್ರಭಕ್ತಸೆಟ್ಟಿಮೊದಲಾಗೆ ತತ್ಪುರ ಶ್ರಾವಕರೆಲ್ಲಂ ಕೇಳ್ದು ಮಹಾಸಂತೋಷದಿಂ ದೂರದೊಳ್ ಕೇಳ್ವ ಮಹಾಪುರುಷರಂ ಕಣ್ಣಾರೆ ಕಾಣಲ್ಪಡೆದೆವಿನ್ನೆಮ್ಮಂ ಬಿಟ್ಟು ಕೃತಾರ್ಥ

ಹೋಗದೆ ಆ ಪುರಕ್ಕೆ ಎರಡುಗಾವುದ ದೂರದಲ್ಲಿದ್ದು ಸುತ್ತಲ ಗ್ರಾಮಗಳಲ್ಲಿ ತನ್ನ ಪ್ರಸಿದ್ಧಿ ಹೆಚ್ಚಿಸಬಯಸಿ ಭಿಕ್ಷಾಚರ್ಯೆ ಮಾಡುತ್ತ ಕೆಲವು ದಿನ ಕಳೆದ ಮೇಲೆ ೪೨. "ಬಹಳ ಉಗ್ರವಾದ ತಪಸ್ಸನ್ನು ಆಚರಿಸುವವನು, ಕಠಿಣವಾದ ಉಪವಾಸಗಳಿಂದ ಹೀಗೆ ದೇಹವನ್ನು ಕೃಶ ಮಾಡುವ ಶ್ರೇಷ್ಠನು ಇವನಲ್ಲದೆ ಬೇರೆ ಯಾವನಿದ್ದಾನೆ ? ೪೩. ಇದು ತನ್ನ ದೇಹವಲ್ಲವೆಂಬಂತೆ ಸಂಪೂರ್ಣವಾಗಿ ಅನ್ನವನ್ನೇ ಬಿಟ್ಟು ತನ್ನ ಸುಖವನ್ನೂ ಬಿಟ್ಟಿರುವವರು ಬೇರೆ ಯಾರು ? ಈ ಗುಣವಂತನಂಥವನು ಭೂಮಂಡಲದಲ್ಲಿ ಬೇರೆ ಯಾವನಿದ್ದಾನೆ ? ೪೪," ಎಂದು ದೇಶವೆಲ್ಲ ಒಂದೇ ಧ್ವನಿಯಲ್ಲಿ ಹೊಗಳಲು ಪ್ರಸಿದ್ಧನಾಗಿ ಸೂರ್ಪನು ಕಾಮಲಿಪ್ತಿ ನಗರವನ್ನು ಹೊಕ್ಕನು. ಜಿನೇಂದ್ರಭಕ್ತ ಸೆಟ್ಟಿ ಮೊದಲುಗೊಂಡು ಆ ಪುರದ ಗೃಹಸ್ಥರೆಲ್ಲ ಕೇಳಿ ಬಹಳ ಸಂತೋಷದಿಂದ "ದೂರದಿಂದ ಕೇಳುತ್ತಿದ್ದ ಮಹಾ ಪುರುಷರನ್ನು ಕಣ್ಣಾರೆ ಕಾಣುವ ಯೋಗ ಲಭಿಸಿತು. ಇನ್ನು ನಾವಲ್ಲದೆ ಕೃತಾರ್ಥರು ಬೇರೆ ಯಾರು ?" ಎಂದು ಭಾವಿಸಿ ಬಂದು ನಮಸ್ಕಾರ ಮಾಡಿದರು ;

ರಾರೆಂದು ಬಂದು ಪೊಡೆವಟ್ಟು ಪೂಜಿಸೆ ಜಿನೇಂದ್ರಭಕ್ತ ಸೆಟ್ಟಿ ಬೇಗವಾ ಬ್ರಹ್ಮಚಾರಿಯ ತಾಱಿದೊಡಲುಮಂ ಒಳಗಡಂಗಿದ ಕಣ್ಣುಮಂ ಮಾಯಾಸಂಯಮುಮಂ ಮನದೊಳ್ ಮೆಚ್ಚಿ ೪೫

ಪಿರಿದುಂ ವೈರಾಗ್ಯದಿ ತನ
ಗುರುಮುದದಿಂದಂತಲ್ಲದಂದೀ ತಪಮಂ
ಧರಿಯಿಸಿ ತನುವಂ ತಪದಿಂ
ಕರಗಿಸುವೀ ನಿಸ್ಪೃಹತ್ವಮಂ ತಾಳ್ದುವನೇ ೪೬

ಗದ್ಯ॥ ಎಂದಾತನೊಳಾದ ಮಾಯಾವೇಷಮನಱಿಯದೆ ನಿಶ್ಚಯ ವೈರಾಗ್ಯಮುಳ್ಳನೆಂದು ನಂಬಿ ಭಕ್ತಿಭರತೆಯಿಂದೊಡಗೊಂಡು ಬಂದು ತನ್ನ ದೇಹಾರಮಂ ಪುಗಿಸುವುದುಂ ಮಾಯಾವಿ ಜಿನೇಂದ್ರಭಕ್ತನೊಳಾದ ಭಕ್ತಿಯುಮಂ ಪಿರಿದಪ್ಪಾದರಮುಮಂ ಕಂಡು ತನ್ನ ಬಯಕೆ ತೀರ್ದು ದೆಂದು ಪೆರ್ಚಿ ಗುಡಿಗಟ್ಟಿ ಯಲ ಗ್ಗಿನಟ್ಟಂತೆ ವೈಶ್ಯೋತ್ತಮನ ಭಕ್ತಿಯಂ ಸ್ಥಿರಂ ಮಾೞ್ಪೆನೆಂಬ ಬಗೆಯಿಂದಿತೆಂದಂ ೪೭

ಪೊನ್ನತೋರಣದಿಂ ದುಕೂಲದ ಸೂಸಕಂಗಳಿನೊಪ್ಪುವೆ
ತ್ತುನ್ನತ ಧ್ವಜದೋಳಿಯಿಂ ಬಿಡುಮುತ್ತಿನಿಂ ಕಡುಶೋಭೆವೆ
ತ್ತಿನ್ನಯಂ ಬಡೆದಿರ್ದು ಚೆಲ್ವಿನ ರಂಗವಲ್ಲಿಯನೆಲ್ಲಿಯುಂ
ರನ್ನದಿಂ ಪಿರಿದುನ್ನತಿಕ್ಕೆಯಿನಿರ್ದುದೀ ಜಿನಮಂದಿರಂ ೪೮

ಪೂಜೆ ಸಲ್ಲಿಸಿದರು. ಜಿನೇಂದ್ರಭಕ್ತ ಸೆಟ್ಟಿ ಬೇಗನೆ ಆ ಬ್ರಹ್ಮಚಾರಿಯ ಬತ್ತಿದ ಶರೀರ ವನ್ನೂ ಒಳಗೆ ಅಡಗಿದ ಕಣ್ಣುಗಳನ್ನೂ ಮಾಯಾ ಸಂಯಮವನ್ನು ಮನಸ್ಸಿ ನಲ್ಲಿ ಮೆಚ್ಚಿ ೪೫. "ಈತನಿಗೆ ಹೆಚ್ಚಾದ ವೈರಾಗ್ಯ ಉಂಟು, ಇಲ್ಲದಿದ್ದರೆ ಈ ತಪಸ್ಸನ್ನು ಧರಿಸಿ ದೇಹವನ್ನು ಸಂತೋಷದಿಂದ ಕೃಶವಾಗಿಸುವ ಈ ನಿಸ್ಪೃಹತ್ವ (ನಿರಾಸಕ್ತಿ)ವನ್ನು ಧರಿಸುವನೆ ?" ೪೬. ಎಂದು ಅವನ ಮಾಯಾವೇಷವನ್ನು ತಿಳಿಯದೆ ನಿಜವಾದ ವೈರಾಗ್ಯವುಳ್ಳವನೆಂದೇ ನಂಬಿ (ಭಕ್ತಿಭಾರದಿಂದ) ಪೂರ್ಣಭಕ್ತಿಯಿಂದ ಆತ ನನ್ನು ಜತೆಯಲ್ಲಿ ಕರೆದುಕೊಂಡು ಬಂದು ತನ್ನ ದೇವಮಂದಿರದಲ್ಲಿ ಪ್ರವೇಶ ಮಾಡಿಸಿ ದನು. ಆ ಮಾಯಾವಿಯು ಜಿನೇಂದ್ರಭಕ್ತನಲ್ಲುಂಟಾಗಿದ್ದ ಭಕ್ತಿಯನ್ನೂ ಹೆಚ್ಚಾದ ಆದರವನ್ನೂ ಗಮನಿಸಿ ತನ್ನ ಆಸೆ ತೀರಿತೆಂದು ಉಬ್ಬಿ ಉತ್ಸಾಹಗೊಂಡು, ಅಲ್ಲಾಡಿಸಿ ನೆಡುವಂತೆ ವೈಶ್ಯೋತ್ತಮನ ಭಕ್ತಿಯನ್ನು ಸ್ಥಿರಪಡಿಸುವೆನೆಂಬ ಯೋಚನೆಯಿಂದ ಹೀಗೆ ಹೇಳಿದನು. ೪೭. "ಹೊನ್ನಿನ ತೋರಣ, ರೇಷ್ಮೆಯ ಕುಚ್ಚುಗಳು, ಶ್ರೇಷ್ಠವಾದ ಧ್ವಜ ಗಳ ಸಾಲು, ಬಿಡಿಮುತ್ತುಗಳು-ಇವೆಲ್ಲವುಗಳಿಂದ ವಿಶೇಷವಾದ ಕಾಂತಿ ಹೊಂದಿ ಅಂದ ವಾಗಿರುವ ರತ್ನದ ರಂಗವಲ್ಲಿಯನ್ನು ಕೂಡಿ ಈ ಜಿನಮಂದಿರವು ಬಹಳ ವೈಭವ ದಿಂದ ಮೆರೆಯುತ್ತಿದೆ ೪೮. ಮನಸ್ಸಿಗೆ ಪ್ರಿಯವಾದ ಪರಲೋಕ ಸದ್ಗತಿಯ

ಮನವೊಲ್ದು ಪರಶ್ರೀಯ ಮೇ
ಲನವರತಂ ಮೋಹಮುಳ್ಳವಂಗೀ ಧರೆಯೊಳ್
ಕನಸಿನೊಳಂ ಪೊನ್‌ತಾಂ ನೆ
ಟ್ಟನೆ ಕಂಡೊಡದಕ್ಕೆ ಬೆರ್ಚಿ ನಡುಗಲೆ ವೇಟ್ಕುಂ ೪೯

ಗದ್ಯ॥ ನಿನ್ನ ದೇಹಾರಮಪ್ಪೊಡೆ ರತ್ನಮಯಮದಱೊಳಿಮಗಿರ್ಪುದುಚಿತಮಲ್ಲದು ನೀ ನೆಮ್ಮನಿರಿಸುವೆನೆಂಬೆಯಪ್ಪೊಡೆ ಬೇರೊಂದು ಶೂನ್ಯಾಲಯದೊಳಿರಿಸುವುದೆಂಬುದುಂ ಜಿನೇಂದ್ರ ಭಕ್ತಸೆಟ್ಟಿ ಪಿರಿದುಂ ಪ್ರಾರ್ಥಿಸಿ ಪೊಡೆಮಟ್ಟೊಡಂಬಡಿಸಿದೊಡಲ್ಲಿರ್ದು ೫೦

ಗಾವಿಲತನದಿಂ ಪೊಕ್ಕೊಡೆ
ಸಾವಪ್ಪುದು ಪುಸಿಯೆ ಬರ್ದುಕಿದೆಂ ಪುಣ್ಯದಿನಿಂ
ತೀ ವಿಭುವಿನ ಮನೆಯಂ ಪುಗ
ಲಾವಮರರುಮಾಱರುದೊಡುಳಿದವರಳವೇ ೫೧

ಗದ್ಯ॥ ಎಂದು ಜಿನೇಂದ್ರಭಕ್ತಸೆಟ್ಟಿಯ ಮನೆಯಬಾಗಿಲ ಕಾಪಂ ಕಂಡು ಬೆರ್ಚಿ ಬೆಗಡುಗೊಂಡು ೫೨

ಏಳಿಸಿ ಪುಗಬಾರದು ವೈ
ಶ್ಯಾಲಯಮಂ ಕೃತಕದಿಂದೆ ಮಾಯಾತಪಮಂ
ಮೇಳಿಸಿ ಪೊಕ್ಕೆಂ ಮಿಕ್ಕಿಂ
ತಾಳಾಪಂಗೆಯ್ದು ಪುಗುವ ಗಂಡರು ಮೊಳರೇ ೫೩

ಮೇಲೆ ಅವಿರತವಾದ ಆಸೆಯುಳ್ಳವನು ಈ ಲೋಕದಲ್ಲಿ ಕನಸಿನಲ್ಲಿಯೂ ಬಂಗಾರ ಕಾಣಿಸಿದರೆ ಅದಕ್ಕೆ ಭಯಪಟ್ಟು ನಡುಗಲೇಬೇಕು. ೪೯. ನಿನ್ನ ದೇವಾಲಯವಾದರೋ ರತ್ನಗಳಿಂದ ತುಂಬಿದೆ. ನಮಗೆ ಅದರಲ್ಲಿ ಇರುವುದು ಉಚಿತವಲ್ಲ. ನೀನು ನಮ್ಮನ್ನು ನಿಲ್ಲಿಸುವೆಯಾದರೆ ಬೇರೆ ಯಾವುದಾದರೂ ಒಂದು ಶೂನ್ಯಾಲಯದಲ್ಲಿ ಇರಿಸಬೇಕು, ಎನ್ನಲು ಜಿನೇಂದ್ರಭಕ್ತಸೆಟ್ಟಿಯು ಬಹಳವಾಗಿ ಬೇಡಿಕೊಂಡು ನಮಸ್ಕರಿಸಿ ಒಪ್ಪಿಸಿದನು. ೫೦. ಆ ಕಪಟ ಮುನಿಯು ಅಲ್ಲಿ ಇದ್ದುಕೊಂಡು "ದಡ್ಡತನದಿಂದ ಹೊಕ್ಕರೆ ಸಾವು ಒದಗುವುದು ಸುಳ್ಳೆ ? ಪುಣ್ಯವಶದಿಂದ ಬದುಕಿದೆ. ಈ ಪ್ರಭುವಿನ ಮನೆಯನ್ನು ಪ್ರವೇಶಿಸಲು ಯಾವ ದೇವರುಗಳೂ ಅಶಕ್ತರೆಂಬಾಗ ಉಳಿದವರಿಗೆ ಸಾಧ್ಯವೆ ?" ೫೧. ಎಂದು ಜಿನೇಂದ್ರಭಕ್ತಸೆಟ್ಟಿಯ ಮನೆಯ ಬಾಗಿಲ ಕಾವಲನ್ನು ಕಂಡು ಬೆದರಿ ಕುಗ್ಗಿ ಹೋಗಿ "ಈ ವೈಶ್ಯನ ಮನೆಯನ್ನು ಅಲಕ್ಷ್ಯದಿಂದ ಹೊಗಬಾರದು. ಮಾಯಾ ತಪಸ್ಸನ್ನು ಹೊಂದಿಸಿಕೊಂಡು ಕಾಪಟ್ಯದಿಂದ ಪ್ರವೇಶಿಸಿದೆ. ಹೀಗೆ ವಶಾತನಾಡಿ ಪ್ರವೇಶಿಸಬಲ್ಲ ವೀರರೂ ಇರುವರೆ ? ೫೨-೫೩ ಇಂಥ ಬಲವಾದ ಕಾವಲು

ಗದ್ಯ॥ ಇಂತಪ್ಪ ಬಲ್ಗಾವುಂಟಪ್ಪುದರಿಂದಂತಪ್ಪ ಕಳ್ಳರ ಕಳ್ಳಂ ಮೊದಲಾಗೆ ಪುಗಲ್ಕಣಿದನಿಲ್ಲ, ಬುದ್ಧಿಬಲದಿಂ ಭೋಂಕೆನೆ ನಂಟರ ಮನೆಯಂ ಪುಗುವಂತು ಪೊಕ್ಕೆನೆನ್ನಂತು ಸಂದ ಕಳ್ಳರಿಲ್ಲೆಂದು ಮುಯ್ಪಂ ನೋಡಿ ಮತ್ತಂ ತನ್ನೊಳಿಂತೆಂದಾಳೋಚಿಸಿದನುತ್ಸಾಹತನದಿಂ ಪೆಟ್ಟುವೆರ್ಚಿ ಕಡುವೆಸನಂ ಮಾಡ್ಪಸೊಸೆ ಮಾವನ ಮಂಡೆಯಂ ಬೋಳಿಸಿದಳೆಂಬಂತೆ ರಾಗದಿಂದವಿಾ ರತ್ನ ಮಣಿಗಳ್ ನೆಗಪಿದೆನಪ್ಪೊಡೆ ಪೋಗಲ್ಬಾರದು. ಉಪವಾಸಂಗಳಿಂದೆಲ್ಲರುಮಂ ನಂಬಿಸಿ ತಪ ದೊಳೊಳ್ಳಿದನೆನಿಸಿ ಮೆಲ್ಲನೆ ನಿಂದು ಕಾರ್ಯಮಂ ನೆಗಟ್ವೆನನ್ನೆಗಂ ೫೪

ಸಂದ ಮಹಾನಿಸ್ಪೃಹನಿವ
ನೆಂದೆನ್ನಂ ಕಾಪಿನಾಳ್ಗಳುಂ ಶ್ರಾವಕರುಂ
ಕುಂದದ ವೈಶ್ಯಾನ್ವಯವಿಕ
ಚೇಂದೀವರಶಶಿ ಜಿನೇಂದ್ರಭಕ್ತನುಮಾದಂ ೫೫

ಗದ್ಯ॥ ಎನ್ನದೆಸೆಗೆ ಭಯಸ್ಥರಾಗದಂತು ಮೆಲ್ಪಡಿಸುವೆನೆಂಬ ಬಗೆಯಿಂದುಪವಾಸದ ಮೇಲು ಪವಾಸಮುಮನಲಾಭದಮೇಲಲಾಭಮುಮಂ ಮಾಡುತ್ತುಂ ತಾನಾಗಮದೂರನಪ್ಪುದ ಱಿಂದೆನ್ನ ರೂಢಿಗಾರಾನುಮಱಿವರ್ಬಂದು ಏನಾನುಮಂ ಬೆಸಗೊಂಡೊಡಾಂ ಪೇಟದಿರ್ದೊಡೆ ಮಹಾಕಷ್ಟಮಕ್ಕುಂ ಸೆಟ್ಟಿಯ ಭಕ್ತಿಯುಂ ಕಿಡುಗುಮೆಂಬ ನೆವದಿಂ ಮೋನಿಯಾಗಿ ೫೬

ಇರುವುದರಿಂದಲೇ ಅಂಥ ಕಳ್ಳರಕಳ್ಳನು ಮೊದಲುಗೊಂಡು ಪ್ರವೇಶಿಸಲು ಧೈರ್ಯ ಮಾಡಲಿಲ್ಲ. ಬುದ್ಧಿಬಲದಿಂದ ನಾನು ತಟ್ಟನೆ ನೆಂಟರ ಮನೆಯನ್ನು ಹೊಗುವಂತೆ ಹೊಕ್ಕೆನು. ನನ್ನ ಹಾಗೆ ಪ್ರಸಿದ್ಧರಾದ ಕಳ್ಳರಿಲ್ಲ" ಎಂದು ತನ್ನ ಹೆಗಲು ನೋಡಿ ಕೊಂಡು (ಹೆಮ್ಮೆಪಟ್ಟು) ಪುನಃ ತನ್ನಲ್ಲಿಯೇ ಹೀಗೆ ಆಲೋಚಿಸಿದನು : ಉತ್ಸಾಹದಿಂದ ದರ್ಪ ಹೆಚ್ಚಿ ಕ್ರೂರಕರ್ಮ ಮಾಡುವ ಸೊಸೆ ಮಾವನ ತಲೆಯನ್ನು ಬೋಳಿಸಿದಳು ಎಂಬ ಹಾಗೆ ಆಸೆಯಿಂದ ಈ ರತ್ನವನ್ನು ಈಗ ಎತ್ತಿಕೊಂಡರೆ ಹೋಗಲು ಸಾಧ್ಯವಿಲ್ಲ. ಉಪವಾಸಗಳಿಂದ ಎಲ್ಲರನ್ನೂ ನಂಬಿಸಿ ತಪಸ್ಸಿನಲ್ಲಿ ಶ್ರೇಷ್ಠನೆನ್ನಿಸಿಕೊಂಡು ನಿಂತು ಉಪಾಯವಾಗಿ ಕೆಲಸವನ್ನು ಮಾಡುತ್ತೇನೆ. ಅಲ್ಲಿಯತನಕ ಶ್ರೇಷ್ಠನಾದ ಮಹಾನಿಸ್ಪೃಹ ನೆಂದು ಕಾವಲಿನವರೂ ಗೃಹಸ್ಥರೂ, ಕುಂದಿಲ್ಲದ ಈ ವೈಶ್ಯವಂಶವೆಂಬ ಕನ್ನೈದಿಲೆಗೆ ಚಂದ್ರನಂತಿರುವ ಈ ಜಿನೇಂದ್ರಭಕ್ತನೂ ನನ್ನ ವಿಷಯದಲ್ಲಿ ಭಯಸ್ಥರಾಗದ ಹಾಗೆ (ಸಂಶಯ ಪಡದಂತೆ) ಮೋಸಪಡಿಸುವೆನೆಂಬ ಯೋಚನೆಯಿಂದ ಉಪವಾಸದ ಮೇಲೆ ಉಪವಾಸವನ್ನೂ ಅಲಾಭದ ಮೇಲೆ ಅಲಾಭವನ್ನೂ ಮಾಡುತ್ತ, ತಾನು ಆಗಮವನ್ನು ಅರಿಯದವನಾದ್ದರಿಂದ ತನ್ನ ಬಳಿಗೆ ಬಂದು ಯಾರಾದರೂ ಏನನ್ನಾದರೂ ಕೇಳಿದಾಗ ತಾನು ಹೇಳದಿದ್ದರೆ ಬಹಳ ಕಷ್ಟವಾಗುವುದು, ಸೆಟ್ಟಿಯ ಭಕ್ತಿಯೂ ಕೆಡುವುದು, ಎಂಬ ಕಾರಣದಿಂದ ಮೌನಿಯಾಗಿ ೫೪-೫೬. ಯುವತಿಯರೊಡನೆ ಮಾತನಾಡುವುದಿಲ್ಲ

---

ಅಲಾಭ = ಭಿಕ್ಷೆ ಸಿಕ್ಕದೆ ಇರುವುದು ; ಸಿಕ್ಕರೂ ಅದು ದೂಷ್ಯವಾಗುವಿಕೆ ದೂಷ್ಯವಾದರೆ ವರ್ಜ್ಯ.

ತರುಣಿಯರೊಳ್ ಮಾತಾಡಂ
ತರುಣಿಯರಂ ಕಂಡೊಡುಣ್ಣನಿದಿರೊಳ್ ನಿಲೆ ಪಂ
ಕರುಹಾಕ್ಷಿಯರಂ ನೋಡಿದೊ
ಡೆರಡಿಲ್ಲದೆ ತನಗಲಾಭಮಂದಿನ ದಿವಸಂ ೫೭

ಗದ್ಯ॥ ಅಂತು ಮಾಯಾಕೃತಕದಿಂದ ವಿಮುಕ್ತನಾಗಿ ೫೮

ಪೊನ್ನೆಂದೊಡೆ ಕಿವಿಯಂ ಮು
ತ್ತಿನ್ನದೆ ಮಾಯಾವಿ ಮುಚ್ಚಿಕೊಳ್ವಂ ತನ್ನಂ
ಪೊನ್ನಾಭರಣಂ ತೊಟ್ಟವ
ರಿನ್ನಱಿಯದೆ ಮುಟ್ಟೆ ಬೇಗವೊಂದುಪವಾಸಂ ೫೯

ಗದ್ಯ॥ ಇಂತು ಬಕವೇಸಿತನದಿಂ ಮಾಯಾನಿಸ್ಪೃಹನಾಗಿ ೬೦

ಭೋಗಮನೊಲ್ದು ನೋಡನುಣಿಸೆಂದೊಡೆ ಬೆರ್ಚುತುಮಿರ್ಪನಾರೊಳಂ
ರಾಗಿಸಿ ಮಾತನಾಡನೆರೆಯಂ ಪೆಱತಂ ಪೆಱರೇನನೆಂದೊಡಂ
ಬೇಗಮದಕ್ಕೆ ಕೋಪಿಸನಣಂ ಪೆಱರೀವೊಡವೊಲ್ವನಲ್ಲಮಿಂ
ತಾಗಳುಮಾಖಿಳಂ ಪೆಱರ್ಗೆ ನಂಬುಗೆಯಾಗಿರೆ ಠಕ್ಕವೃತ್ತಿಯಿಂ ೬೧

ಗದ್ಯ॥ ಅಂತೆ ಕುಱಿಯಂತೆ ಕವಿದ ತಲೆಯುಂ ಬೆಕ್ಕಿನಂತೆ ದುಷ್ಟಬುದ್ಧಿಯುಂ ಬೆಳ್ಳಕ್ಕಿಯಂತೆ ಮಾಯಾಮಾರ್ಗನುಂ ಪುಲಿಯಂತೋಜಾಯಿಲನುಂ ಅತ್ತಿಯಪಣ್ಗಳಂತೊಳಗಶುದ್ಧನುಂ

ಯುವತಿಯರನ್ನು ಕಂಡರೆ ಊಟ ಮಾಡುವುದಿಲ್ಲ. ಸುಂದರಿಯರು ತನ್ನ ಇದಿರಿನಲ್ಲಿ ನಿಂತುದನ್ನು ಕಂಡರೆ ಆ ದಿನ ತನಗೆ ಅಲಾಭ. ೫೭. ಹಾಗೆ ಸೂರ್ಪನು ಮಾಯಾ ಕೃತಕದಿಂದ ಬಿಡುಗಡೆಯಿಲ್ಲದವನಾಗಿ, 'ಹೊನ್ನು' ಎಂಬ ಮಾತು ಕೇಳಿಸಿದರೆ ತನ್ನ ಕಿವಿಯನ್ನು ಮುಚ್ಚಿಕೊಳ್ಳುವನು ಹೊನ್ನಿನ ಒಡವೆ ಧರಿಸಿದವರು ಯಾರಾದರೂ ತನ್ನನ್ನು ತಿಳಿಯದೆ ಮುಟ್ಟಿದರೆ ಆ ದಿನ ಅವನಿಗೆ ಉಪವಾಸ ೫೮–೫೯. ಹೀಗೆ ಆ ಮಾಯಾ ತಪಸ್ವಿಯು ಬಕನಂತೆ ನಿಸ್ಪೃಹತೆಯನ್ನು ನಟಿಸುತ್ತಿದ್ದನು ೬೦. ಭೋಗವನು ಅವನು ಪ್ರೀತಿಯಿಂದ ನೋಡಲೊಲ್ಲ. ಊಟವೆಂದರೆ ಬೆಚ್ಚಿಬೀಳುವನು. ಯಾರೊಡನೆಯೂ ಪ್ರೀತಿಯಿಂದ ಮಾತನಾಡನು. ಇತರರು ತನ್ನನ್ನು ಏನೆಂದರೂ ಅದಕ್ಕೆ ಬೇಗನೆ ಕೋಪಿಸಿಕೊಳ್ಳನು. ಬೇರೆಯವರು ಏನು ಸ್ವಲ್ಪವನ್ನು ಕೊಟ್ಟರೂ ಮುಟ್ಟುವವನಲ್ಲ. ಆ ನೀಚನು ತನ್ನ ಠಕ್ಕತನದಿಂದಲೇ ಎಲ್ಲರಿಗೂ ನಂಬಿಕೆಯನ್ನುಂಟುಮಾಡಿದ್ದನು ೬೧. ಕುರಿಯಹಾಗೆ ತಲೆ ಮುಚ್ಚಿಕೊಂಡು ಬೆಕ್ಕಿನ ಹಾಗೆ ಕೆಟ್ಟ ಬುದ್ಧಿಯುವನು, ಬೆಳ್ಳಕ್ಕಿಯ ಹಾಗೆ ಮಾಯಾ ಮಾರ್ಗದವನೂ ಹುಲಿಯ ಹಾಗೆ ಕ್ರಮತಪ್ಪದವನೂ ಅತ್ತಿಯ ಹಣ್ಣಿನಂತೆ ಒಳಗಡೆ ಅಶುದ್ಧನೂ ತುಂಬಿದ ತೊರೆಯ ಹಾಗೆ ಕದಡಿದ ಚಿತ್ತವುಳ್ಳವನು, ಆಲದ

ವಟಫಲದಂತೆ ಪೊಱಗೆ ಸೇವ್ಯನುಂ ಬಂದ ತೊಱೆಯಂತೆ ಕದಡಿದ ಚಿತ್ತನುಂ ಮಯೂಖ ವ್ಯಾಘ್ರನಂತೆ ಪೊಱಗೆಶಾಂತನು ಮೊಳಗೆ ಕ್ರೂರನುಮಾಗಿ ಕೆಲವು ದಿವಸಮಿರ್ಪುದುಂ ೬೨

ಜಿನಪಾದಾಂಬುಜ ಮಧುಪಂ
ಜಿನಸಮಯ ಸಮುದ್ರಚಂದ್ರನನುಪಮಗುಣ ಸ
ಜ್ಜನವಂದ್ಯಂ ವಿನಯದ ಕಣಿ
ಜಿನ ತತ್ವಾಂಬುರುಹ ಷಂಡರಂಜಿತಹಂಸಂ ೬೩

ಗದ್ಯ॥ ಅಂತಪ್ಪ ಜಿನೇಂದ್ರ ಭಕ್ತಸೆಟ್ಟಿಯೊಂದು ದಿವಸಂ ಪರದುಮೋಪೆನೆಂಬ ಬುದ್ಧಿ ಪುಟ್ಟೆ ತಡಯದಲ್ಲಿಗೆ ತಕ್ಕ ಬಂಡಮಂ ಕೊಂಡು ತನ್ನನಾಶ್ರಯಿಸಿ ಬರ್ಪರೆಲ್ಲರುಮಂ ಕೂಡಿಕೊಂಡು ಸುಭದಿನ ಸುಮುಹೂರ್ತದೊಳ್ ಜಿನೇಂದ್ರಾಭಿಷೇಕಮುಮಂ ಜಿನಮಹಾಪೂಜೆಗಳುಮಂ ಮಾಡಿಸಿ ಪೊಱವೀಡಂ ಬಿಟ್ಟು ತನ್ನ ದೇಹಾರದೊಳಿರ್ದ ಬ್ರಹ್ಮಚಾರಿಗೆ ವಂದು ತಾನವರ್ಗತಿಭಕ್ತನಪ್ಪುದಱಿಂದವನೊಳಾದ ಮಾಯಾ ಮಾರ್ಗಮನಱಿಯದೆ ಜಿನಮಾರ್ಗದೊಳ್ ದೃಢನೆಂದು ಕಯ್ಯಂ ಮುಗಿದಿಂತೆಂದಂ ೬೪

ಎಲ್ಲಿಯುಂ ಮೋರಂತೊಂದೆಡೆ
ನಿಲ್ಲದೆ ತೊಱಲುತ್ತುಮಿರ್ಪುದೆನ್ನಯ ಪುಣ್ಯಂ
ಬಲ್ಲಿತ್ತು ಪಲವು ದಿವಸಂ
ಪಲ್ಲಟಿಸದೆ ನಿಂದಿರನ್ನೆಗಂ ಮದ್ಗೃಹದೊಳ್ ೬೫

ಹಣ್ಣಿನಂತೆ ಹೊರಗೆ ಶಾಂತನೂ ಒಳಗೆ ಕ್ರೂರನೂ ಆಗಿ ಕೆಲವುದಿನಗಳಿದ್ದು ಜಿನಪಾದ ಕಮಲಗಳಲ್ಲಿ, ದುಂಬಿ ಜಿನಧರ್ಮಸಮುದ್ರಕ್ಕೆ ಚಂದ್ರ, ಹೋಲಿಕೆಯಿಲ್ಲದ ಗುಣವಂತ, ಸಜ್ಜನರ ವಂದನೆಗೆ ಪಾತ್ರ, ವಿನಯದ ಗಣಿ, ಜಿನತತ್ವವೆಂಬ ಕಮಲ ಸರೋವರದಲ್ಲಿ ಹಂಸನಂತೆ ಇರುವವನು, ಅಂಥ ಜಿನೇಂದ್ರಭಕ್ತಸೆಟ್ಟಿಯು ಒಂದು ದಿನ ವ್ಯಾಪಾರಕ್ಕೆ ಹೋಗುವ ಬುದ್ಧಿ ಹುಟ್ಟಲು ಸಾವಕಾಶಮಾಡದೆ ಅಲ್ಲಿಗೆ ತಕ್ಕ ಸರಕನ್ನು ತೆಗೆದುಕೊಂಡು ತನ್ನನ್ನು ಆಶ್ರಯಿಸಿ ಬರುವವರನ್ನೆಲ್ಲ ಕರೆದುಕೊಂಡು ಶುಭ ದಿನ ಒಳ್ಳೆಯ ಮುಹೂರ್ತದಲ್ಲಿ ಜಿನೇಂದ್ರನಿಗೆ ಅಭಿಷೇಕವನ್ನೂ ಜಿನ ಮಹಾಪೂಜೆಗಳನ್ನೂ ಮಾಡಿಸಿ ಹೊರಬೀಡು ಬಿಟ್ಟು ತನ್ನ ದೇಹಾರದಲ್ಲಿದ್ದ ಬ್ರಹ್ಮಚಾರಿಯಲ್ಲಿಗೆ ಬಂದು ತಾನು ಅವರಿಗೆ ಅತಿಭಕ್ತನಾದ್ದರಿಂದ ಅವನ ಮಾಯಾವಿತನವನ್ನು ತಿಳಿಯದೆ ಅವನು ಜಿನಮಾರ್ಗದಲ್ಲಿ ದೃಢಬುದ್ಧಿಯುವನೆಂದು ನಂಬಿ ಕೈ ಮುಗಿದು ಹೀಗೆ ಹೇಳಿದನು : ೬೪. "ಎಲ್ಲಿಯೂ ಹೆಚ್ಚಾಗಿ ಒಂದು ಸ್ಥಳದಲ್ಲಿ ನಿಲ್ಲದೆ 'ಅಲೆಯುವ ತಾವು ಇಲ್ಲಿ' ಇರುವುದು ನನ್ನ ಪುಣ್ಯ. ಅದು ಬಲವಾದದ್ದು. ನಾನು ಬರುವತನಕ ನೀವು ಮನಸ್ಸು ಬದಲಾಯಿಸದೆ ನನ್ನ ಮನೆಯಲ್ಲಿಯೇ ಇರಿ. ೬೫. ನಿಮ್ಮಂಥವರು ಇಲ್ಲಿಯತನಕ ಹಿರಿಮೆಯಿಂದ ಒಲಿದು ಇಲ್ಲಿ ಇದ್ದರೆಂದರೆ

ನಿಮ್ಮನ್ನರಿನ್ನೆವರೆಗಂ
ಪೆರ್ಮೆಯಿನೊಸೆದಿರ್ದರೆಂದೊಡೆನ್ನಂ ಬಿಟ್ಟಾ
ರಿಮ್ಮಿಕ್ಕಭ್ರಾವಿಸುವೊಡೆ
ನಿಮ್ಮಡಿ ಪುಣ್ಯಕ್ಕೆ ತಾನೆ ನೋಂತೆಂ ಜಗದೊಳ್ ೬೬

ಗದ್ಯ॥ ಅದುಕಾರಣದಿಂದೆನ್ನಂತು ಧನ್ಯರುಂ ಮಾನ್ಯರುಮಿಲ್ಲ ; ಸ್ಥಳಯಾತ್ರೆಗೆ ಪೋಗಿ ಬರ್ಪನ್ನೆವರಂ ನೀವೆನ್ನಂ ಪರಸುತ್ತುಮಿರ್ಪುದೆಂದು ಬೇಡಿಕೊಳ್ವುದುಂ ಮಾಯಾವಿ ತನ್ನ ಬಗೆ ಗೂಡಿದುದಕ್ಕೆ ಪೆಟ್ಟುವೆರ್ಚಿ ತನ್ನೊಳಿಂತೆಂದಂ ೬೭

ಗದ್ಯ॥ ಬಲ್ಲಾಳ್ತನದಿಂದೆಟೆದುಕೊಳ್ವಂಗೆ ಕಡಂಗೊಟ್ಟರೆಂಬಂತೆ ಪ್ರಾಣಮನಿಕ್ಕಿಯುಂ ಸೆಱಗುಮಂ ಬೆಱಗುಮಂ ಬಗೆಯದೆ ಸದ್ರತ್ನಮಂ ಕೊಳ್ವೆನೆಂದಿರ್ದೆನಗೆ ಸೆಟ್ಟಿಯ ಪೋಗಿನೊಳಂ ಬಾದಃದೆಂದು ತನ್ನ ಪುಣ್ಯಕ್ಕೆ ತಾನೇ ನಾದವಱಿಯಂತೆ ಪೋಗಿ ಪಾಲುಂ ಕೂರ್ಮೆಯುಂ ಮಱುಗಿದೊಡಲ್ಲದ ಲೇಸಾಗವೆಂದು ತನ್ನಂ ಪ್ರಿಯಂ ಮಾಡಲ್ವೇಡಿ ಜಿನೇಂದ್ರಭಕ್ತಂಗಿಂತೆಂದಂ ೬೮

ವನಿತೆಯುಮಂ ನಂಟರುಮಂ
ಜನಕನುಮಂ ಪೆತ್ತ ತಾಯುಮಂ ವೃತ್ತಿಯುಮಂ
ಮನಮುರಿದು ತೊಱೆದು ತಪಕಂ
ತನುವಂ ತಂದೊಡ್ಡಿ ಸೆಟ್ಟಿ ಮತ್ತಂ ಪದಪಿಂ ೬೯

ನನಗಿಂತ ಹೆಚ್ಚಿನ ಪುಣ್ಯಶಾಲಿಗಳು ಯಾರು ? ಯೋಚಿಸಿದರೆ ಅಂಥ ಪುಣ್ಯವನ್ನು ಪಡೆದುಕೊಂಡು ಬಂದವನು ಈ ಲೋಕದಲ್ಲಿ ನಾನೊಬ್ಬನೇ ೬೬. ಆದಕಾರಣ ನನ್ನ ಹಾಗೆ ಧನ್ಯರೂ ಮಾನ್ಯರೂ ಬೇರೆ ಯಾರೂ ಇಲ್ಲ ; ಕ್ಷೇತ್ರಯಾತ್ರೆಗೆ ಹೋಗಿಬರುವವರೆಗೆ ನೀವು ನನ್ನನ್ನು ಹರಸುತ್ತ ಇಲ್ಲಿಯೇ ಇರಬೇಕು" ಎಂದು ಬೇಡಿಕೊಂಡನು. ಅದನ್ನು ಕೇಳಿ ಆ ಮಾಯಾವಿ ತನ್ನ ಸಂಕಲ್ಪ ಕೈಗೂಡಿತೆಂದು ದರ್ಪ ಹೆಚ್ಚಿ ತನ್ನಲ್ಲಿಯೇ ಹೀಗೆಂದು ಕೊಂಡನು ೬೭. "ಪರಾಕ್ರಮದಿಂದ ಸೆಳೆದುಕೊಳ್ಳುವವನಿಗೆ ಸಾಲಕೊಟ್ಟರೆಂಬ ಹಾಗೆ, ಪ್ರಾಣವನ್ನು ಕೊಟ್ಟಾದರೂ ಆಪತ್ತು ವಿಪತ್ತುಗಳನ್ನು ಲೆಕ್ಕಿಸದೆ ಆ ರತ್ನವನ್ನು ತೆಗೆದು ಕೊಳ್ಳುವೆನೆಂಬ ನನಗೆ ಸೆಟ್ಟಿಯ ಪ್ರಯಾಣದಿಂದ ಅವಕಾಶವಾಯಿತು" ಎಂದು ತನ್ನ ಪುಣ್ಯಕ್ಕೆ ತಾನೇ ಮೊಳಗುವ ತಮಟೆಯಂತೆ ಉಬ್ಬಿ ಹಾಲೂ ಪ್ರೇಮವೂ ಕುದಿದಲ್ಲದೆ ಶ್ರೇಷ್ಠವಾಗುವುದಿಲ್ಲವೆಂದು ತನ್ನನ್ನು ಪ್ರೀತಿ ಪಾತ್ರನನ್ನಾಗಿ ಮಾಡಬಯಸಿ ಜಿನೇಂದ್ರ ಭಕ್ತನೊಡನೆ ಹೀಗೆ ಹೇಳಿದನು ೬೮. "ಸೆಟ್ಟಿ ! ಹೆಂಡತಿಯನ್ನೂ ನೆಂಟರನ್ನೂ ತಂದೆ ಹೆತ್ತ ತಾಯಿಯರನ್ನೂ ವೃತ್ತಿಯನ್ನೂ ಮನಃಪೂರ್ವಕವಾಗಿ ಬಿಟ್ಟು ದೇಹವನ್ನು ತಪಸ್ಸಿಗೆ ಗುರಿಮಾಡಿ ಮತ್ತೆ ಆಸೆಯಿಂದ ಒಂದು ಸ್ಥಳದಲ್ಲಿ ಹೆಚ್ಚಿನ ಮೋಹದಿಂದ

ಒಂದೆಡೆಯೊಳ್ಮೋಹೋದಯ
ದಿಂದಂ ಪತ್ತಿರ್ಪನೆಂಬನುಂ ಸುಖಮಂ ಪೊಂ
ದೆಂದುಂ ಪಾಟಸುತಿರ್ಪನು
ಮೆಂದುಂ ಸುರಲೋಕಮೆಯ್ದಲಾಱನವೋಘಂ ೨೦

ಗದ್ಯ॥ ಅವಱಿಂದೆಮ್ಮಂತಪ್ಪ ನಿಸ್ಪೃಹರ್ಗೆ ಕೂಟಂಗಾಟಿಸಿ ಮೈಸುಖಮಂ ಪಾಟಿಸಿ ಮನ್ನಣೆಗಾಸೆಗೆಯ್ದೊಂದೆಡೆಯೊಳ್ ಪತ್ತಿಕೊಂಡಿರಲಾಗದು ; ಕಡುಮೋಹದಿಂದಿರ್ದನಪ್ಪೊಡೆ ಮೇಲೆಗತಿವಡೆವುದರಿದು ; ನೀವೆನಗೆ ಭಕ್ತರಪ್ಪುದಱಿಂ ಪುಣ್ಯವೃದ್ಧಿಯಂ ಮಾಡಲೆಂದಿನ್ನೆವರೆಗಂ ಪರಸುತುಮಿರ್ದೆವದಂ ಪುಸಿಯೆಂಬಿರಪ್ಪೊಡೆ ನಮ್ಮ ಮುನ್ನಿನ ನಡೆವಳಿಯುಮಂ ನೀವೆ ಬಲ್ಲಿರೆಮಗಿರ್ಪುದಿಷ್ಟಮಿಲ್ಲ ; ದೇಶದೇಶದೊಳಂ ವಿಹಾರಿಸಿ ಕಾಲಮಂ ಕಟಿಪಿ ತಪೋವೃದ್ಧಿಯಂ ಮಾಡುವುದೆ ಮನದೊಳರ್ತಿಯೆನೆ ವೈಶ್ಯಪ್ರಧಾನನಿಂತೆಂದಂ ೨೧

ಮೊಲೆಗಳ ಮೇಲಿರ್ದುಂ ಪೆ
ರ್ಮಲೆಗಳ ಮೇಲಿರ್ದರಧಿಕಗುಣಗಣಯುಕ್ತರ್
ಮಲೆಗಳ ಮೇಲಿರ್ದುಂ ಪೆ
ರ್ಮೊಲೆಗಳ ಮೇಲಿರ್ದರಧಿಕ ದುಶ್ಚಾರಿತ್ರರ್ ೨೨

ಅಂಟಿಕೊಂಡಿರುವೆನೆಂಬುವನೂ ಸುಖವನ್ನುಹೊಂದಿ ಯಾವಾಗಲೂ ಅನುಸರಿಸುವನೂ ಎಂದಿಗೂ ಸುರಲೋಕವನ್ನು ಹೊಂದಲಾರ. ಇದು ತಪ್ಪದು ೬೯-೨೦. ಆದ್ದರಿಂದ ನಮ್ಮಂಥ ನಿಸ್ಪೃಹರಿಗೆ ಕೂಳಿಗೆ ಆಸೆಪಟ್ಟು ದೇಹಸೌಖ್ಯವನ್ನು ಪಾಲಿಸುತ್ತ ಗೌರವಕ್ಕೆ ಆಸೆಪಟ್ಟು, ಒಂದೇ ಸ್ಥಳದಲ್ಲಿ ಅಂಟಿಕೊಂಡಿರಬಾರದು. ಹೆಚ್ಚಿನ ಮೋಹದಿಂದ ಹಾಗೆ ಇದ್ದೆನಾದರೆ ಮೇಲೆ ಗತಿಯನ್ನು ಹೊಂದುವುದು ಅಸಾಧ್ಯ. ನೀವು ನನಗೆ ಭಕ್ತರಾದ್ದರಿಂದ ಪುಣ್ಯವನ್ನು ಹೆಚ್ಚು ಮಾಡುವುದಕ್ಕೆಂದು ಇಲ್ಲಿಯವರೆಗೆ ಹರಸುತ್ತ ಇದ್ದೆವು. ಅದನ್ನು ಸುಳ್ಳೆನ್ನುವಿರಾದರೆ ನಮ್ಮ ಮೊದಲಿನ ನಡೆವಳಿಕೆಯನ್ನೂ ನೀವೇ ಬಲ್ಲಿರಿ. ನಮಗೆ ಇರಲು ಇಷ್ಟವಿಲ್ಲ. ದೇಶ ದೇಶದಲ್ಲಿಯೂ ಸಂಚರಿಸುತ್ತ ಕಾಲವನ್ನು ಕಳೆದು ತಪೋವೃದ್ಧಿಯನ್ನು ಮಾಡಿಕೊಳ್ಳುವುದೇ ನಮ್ಮ ಮನಸ್ಸಿನ ಆಸೆ" ಎನ್ನಲು ಆ ವೈಶ್ಯ ಪ್ರಮುಖನು ಹೀಗೆ ನುಡಿದನು. ೨೧. "ಸ್ತ್ರೀಯರಲ್ಲಿ ಆಸಕ್ತರಾದರೂ ದೊಡ್ಡ ಬೆಟ್ಟಗಳ ಮೇಲಿದ್ದವರು ಹೆಚ್ಚು ಗುಣವಂತರು. ಬೆಟ್ಟಗಳ ಮೇಲಿದ್ದರೂ ಸ್ತ್ರೀ ಸುಖಾಸಕ್ತರೇ ಹೆಚ್ಚು ದುಶ್ಚರಿತ್ರರು ೨೨. ನೀರೊಳಗಿದ್ದರೂ ತಾವರೆ ನೀರನ್ನು ಹೊಂದು

ಜಲದೊಳಗಿರ್ದುಂ ತಾವರೆ
ಜಲಮಂ ಪೊರ್ದುವುದೆ ಚಾರುಚಾರಿತ್ರಯುತರ್
ಮಲರಹಿತರ್ನಿರ್ಮಳರು
ಜ್ವಲರೆನಿಸುವರೆತ್ತ ಪೊಕ್ಕೊಡಂ ಕೆಟ್ಟಪರೇ ೭೩

ನೀವೊಳ್ಳಿದರೆಂಬುದನವ
ನೀವಳಯದೊಳುತ್ತರೋತ್ತರಂ ನೆಗಟ್ವೀ ನಿ
ವ್ವಾವರಕಾಯಕ್ಲೇಶವೆ
ಭಾವಿಸಿನೋಟ್ಪಂತು ತಾನೆ ಪೇಟದೆ ನಯಮಂ ೭೪

ಗದ್ಯ॥ ಅದಱಿಂ ನಿಮ್ಮಂತಪ್ಪ ಮಹಾಪುರುಷರೆಲ್ಲಿರ್ದಪ್ಪೊಡೇಂ ಪುಣ್ಯೋಪಾರ್ಜಕರಲ್ಲದೆ ಪಾಪಾರ್ಜಕರ ನೆಗಟ್ತೆಯಿಲ್ಲದು; ನೀವೆನಗೆ ಕಾರುಣ್ಯಂಗೆಯ್ದಿರಪ್ಪೊಡೆನ್ನ ಮಾತಂ ಸಲಿಸಿಮೆಂದು ಪಲವು ಸೊಟ್ಟೊಡೆಮಟ್ಟು ವ್ರತವಿಶೇಷದಿಂ ಪ್ರಾರ್ಥಿಸುವುದುಮೊಡಂಬಟ್ಟಲ್ಲಿ ಸುಖದಿಂ ಸಂತೋಷದಿಂ ಮನೆಗೆ ಪೋಗಿ ಮಱುದಿವಸಂ ಪರಿಗ್ರಹ ಸಂಬಂಧಿಗಳ್ಗಂ ಪೆಂಡಿರ್ಗಂ ಧರ್ಮ ಕಾರ್ಯಮುಮಂ ದಾನಮುಮಂ ಪ್ರಯತ್ನದಿಂ ಮಾಟ್ಪುದೆಂದಪ್ಪೈಸಿ ಬಿಟ್ಟು ಬೀಡಿಂಗೆ ಪೋಗಿ ರ್ಪುದುಮಿತ್ತಲ್ ಮಾಯಾ ಬ್ರಹ್ಮಚಾರಿ ತನ್ನೊಳಿಂತೆಂದಂ ೭೫

ಪಿರಿದಪ್ಪ ದುಃಖಮೆಂದೋ
ಸರಿಸದೆ ಸೆಡೆದಿರದೆ ಬಿಟ್ಟು ದೈಸುಖಮಂ ಭಾ
ಸುರಮಪ್ಪ ರತ್ನಕಾಂಕ್ಷೆಯಿ
ನರಿದೆನಿಸುವ ತಪದೊಳಿನ್ನೆವರೆಗಂ ನವೆದೆಂ ೭೬

ವುದೆ ? ಶ್ರೇಷ್ಠಚಾರಿತ್ರವುಳ್ಳವರು ಮಲರಹಿತರು, ನಿರ್ಮಲರು, ಸುಪ್ರಕಾಶರು. ಅವರು ಎಲ್ಲಿ ಹೊಕ್ಕರೂ ಕೆಟ್ಟವರೆನ್ನಿಸಿಕೊಳ್ಳರು. ನೀವು ಒಳ್ಳೆಯವರೆಂಬುದನ್ನು ಭೂಮಂಡಲದಲ್ಲಿ ಪ್ರಸಿದ್ಧಮಾಡಿಸುವ ನಿಮ್ಮ ಶ್ರೇಷ್ಠದೇಹದಂಡನೆಯೇ ಹೇಳದೆ ? ಯೋಚಿಸಿ ನೋಡಿದರೆ ಅದೇ ತಮ್ಮ ಹಿರಿಮೆಯನ್ನು ಹೇಳುವುದಿಲ್ಲವೆ ? ೭೩-೭೪. ಆದ್ದರಿಂದ ನಿಮ್ಮಂಥ ಮಹಾ ಪುರುಷರು ಎಲ್ಲಿದ್ದರೇನು, ಪುಣ್ಯೋಪಾರ್ಜಕರೇ ಹೊರತು ಪಾಪವನ್ನು ಗಳಿಸುವವರಲ್ಲ. ನೀವು ನನಗೆ ದಯೆ ತೋರುವುದಾದರೆ ನನ್ನ ಮಾತನ್ನು ನಡೆಯಿಸಿ" ಎಂದು ಹೇಳಿ ಹಲವು ಸಲ ನಮಸ್ಕಾರಮಾಡಿ ಒಪ್ಪಿಸಿ ಅಲ್ಲಿಂದ ಸಂತೋಷ ವಾಗಿ ಮನೆಗೆ ಹೋಗಿ ಮಾರನೆಯದಿನ ಸಂಸಾರದ ಸಂಬಂಧಿಗಳಿಗೂ ಹೆಂಡಿರಿಗೂ ಮಾಡ ಬೇಕಾದ ಧರ್ಮಕಾರ್ಯ ದಾನಗಳನ್ನು ಪ್ರಯತ್ನಪೂರ್ವಕವಾಗಿ ಮಾಡಬೇಕೆಂದು ಹೇಳಿ ಒಪ್ಪಿಸಿ ತನ್ನ ಬೀಡಿಗೆಹೋಗಲು ಈಕಡೆ ಮಾಯಾಬ್ರಹ್ಮಚಾರಿಯು ತನ್ನಲ್ಲಿಯೇ ಹೀಗೆಂದು ಕೊಂಡನು ೭೫. "ಹೆಚ್ಚಿನ ದುಃಖವೆಂದು ಹಿಂಜರಿಯದೆ, ಹೆದರದೆ ದೇಹಸೌಖ್ಯವನ್ನು ಬಿಟ್ಟು ಪ್ರಕಾಶಮಾನವಾದ ರತ್ನದ ಅಪೇಕ್ಷೆಯಿಂದ ಅಸಾಧ್ಯವೆನಿಸುವ ತಪಸ್ಸಿನಲ್ಲಿ ಇಲ್ಲಿಯ ತನಕ ಸವೆದೆ ೭೬. "ಅಪ್ಪ, ಇನ್ನು ತಡಮಾಡಬಾರದು ಅವರೆಯ ಹಿಟ್ಟುಬೇಕು," ಎನ್ನು

ಗದ್ಯ॥ ಇನ್ನಿರಲಾಗದಬ್ಬೆ ಬೇಟ್ಸಿದವರೆಯು ಪಿಟ್ಟೆಂಬಂತೆನ್ನ ಬಗೆಗೊಡಂಬಟ್ಟಂತೆ ಪುಣ್ಯದಿಂ ಜಿನೇಂದ್ರಭಕ್ತಸೆಟ್ಟಿಯುಂ ಪೋದನೊಳ್ಳಿತವಸರಮಾಯ್ತೆಂದು ನಡುವಿರುಳಪ್ಪಾಗಳ್ ಕಾಪಿನ ಕಡಿತಕಾಱರ್ ಮಱೆದು ನಿದ್ರೆಗೆಯ್ದುದನಱಿದು ಮೆಲ್ಲನೆಯ್ದಿ ಗರ್ಭಗೃಹಮಂ ಪೊಕ್ಕು ಮುಕ್ಕೊಡೆಯೊಳಿರ್ದ ವೈಡೂರ್ಯ ಮಾಣಿಕಮಂ ನೋಡಿ ೭೭

ನಿನ್ನ ಕತದಿಂದೆ ನವೆದೆಂ
ನಿನ್ನಂ ನಡೆನೋಡಿ ಸುಖಮನಱಿದೆಂ ಮತ್ತಂ
ನಿನ್ನಿಂದ ಪಿರಿದಪ್ಪ ಮ
ಹೋನ್ನತಿಯುಂ ಪಡೆವೆನೆಂದು ದುಃಖಂಬಟ್ಟೆಂ ೭೮

ಕಡುತಪದಿಂದಂ ದೇಹಂ
ಬಡವಾದುದು ನಿನ್ನ ದೂಸಱಿಂ ಧರೆಯರೆಯುಂ
ಪಡೆವೆಂ ರಾಜ್ಯಶ್ರೀಯೊಳ್
ತಡೆಯದೆ ಕೂಡಿರ್ಪೆನೆಂಬ ಪರಮೋತ್ಸವದಿಂ ೭೯

ಗದ್ಯ॥ ಎಂದುತ್ಸಾಹದಿಂ ಮೆಯ್ಮಱೆಯದೆ ರತ್ನದೊಡನೆ ನುಡಿದು ಪೆಱರ್ಕೇಳದಂತಾಟಿಸಿ ಕೀಲಂ ಕಳೆದು ನೆಲಕ್ಕೆ ಬೀಟಲೀಯದೆ ಪಿಡಿದುಕೊಂಡು ತಳದೊಳಿಕ್ಕಿಕೊಂಡು ನೋಡಿ ೮೦

ವಂತೆ ತನ್ನ ಮನಸ್ಸಿಗೆ ಒಪ್ಪಿಗೆಯಾಗುವಂತೆ ಜಿನೇಂದ್ರಭಕ್ತಸೆಟ್ಟಿಯೂ ಹೊರಟುಹೋದ ಒಳ್ಳೆಯ ಸಂದರ್ಭವಾಯಿತು" ಎಂದು ಅರ್ಧರಾತ್ರಿಯಲ್ಲಿ ಕಾವಲ ಕತ್ತಿಯವರು ಮೈ ಮರೆತು ನಿದ್ರಿಸಿದರೆಂಬುದನ್ನು ತಿಳಿದು, ಮೆಲ್ಲಗೆ ಎದ್ದು, ಗರ್ಭಗುಡಿಯನ್ನು ಪ್ರವೇಶಿಸಿ ಮುಕ್ಕೊಡೆಯಲ್ಲಿದ್ದ ವೈಡೂರ್ಯ ಮಾಣಿಕ್ಯವನ್ನು ನೋಡಿದನು ೭೭. "ನಿನ್ನ ಕಾರಣ ದಿಂದ ಸವೆದೆ. ನಿನ್ನನ್ನು ಚೆನ್ನಾಗಿ ನೋಡಿ ಸುಖವನ್ನು ಅರಿತೆ. ಅಲ್ಲದೆ ನಿನ್ನಿಂದ ದೊಡ್ಡ ದಾದ ಮಹೋನ್ನತಪದವಿಯನ್ನು ಪಡೆಯುವೆನೆಂದು ದುಃಖವನ್ನು ಅನುಭವಿಸಿದೆ ೭೮. ಹೆಚ್ಚಿನ ತಪಸ್ಸಿನಿಂದ ದೇಹ ಬಡವಾಯಿತು. ನಿನ್ನ ಕಾರಣದಿಂದ ಅರ್ಧರಾಜ್ಯವನ್ನು ಪಡೆಯುತ್ತೇನೆ ; ರಾಜ್ಯಲಕ್ಷ್ಮಿಯೊಡನೆ ತಡವಿಲ್ಲದೆ ಕೂಡಿರುತ್ತೇನೆ, ಎಂದು ಬಹಳ ಉತ್ಸಾಹಪಟ್ಟನು. ೭೯. ಆ ಉತ್ಸಾಹದಲ್ಲಿ ಮೈಮರೆತು ರತ್ನದೊಡನೆ ಮಾತನಾಡಿ (ಅದು ಜಡವಸ್ತುವೆಂಬುದನ್ನು ಮರೆತು) ಇತರರು ಕೇಳದಂತೆ ಹೊಡೆದು ಕೀಲನ್ನು ಕಿತ್ತು ನೆಲಕ್ಕೆ ಬೀಳಗೊಡದೆ ಹಿಡಿದುಕೊಂಡು ಅಂಗೈಯಲ್ಲಿಟ್ಟುಕೊಂಡು ನೋಡಿ ೮೦. ಎದೆಯ

ಉರದೊಳವರ್ಚಿಕೊಂಡು ತಲೆಯೊಳ್ಪಿಡಿದೊಯ್ಯನೆ ಪೊತ್ತುಕೊಂಡು ಮಾ
ಣ್ದಿರದತಿಮೋಹದಿಂ ನೊಸಲ ಮೇಲೆ ಮಹೋತ್ಸವದಿಂದಮಿಟ್ಟುಕೊಂ
ಡಿರದದನಕ್ಕರಿಂದಡರೆ ಭಾವಿಸಿ ಭಾವಿಸಿ ನೋಡಿ ನೋಡಿ ಚೆ
ಚ್ಚರಮವನೀತಳಂ ತನಗೆ ಸಾರ್ದವೊಲೊರ್ವದಲುಣ್ಮಿ ಪೊಣ್ಮಿದಂ ೮೧

ಗದ್ಯ॥ ಅಂತು ರಾಗರಸದಿಂ ಪೊಂಗಿ ತಡೆದು ತಿಳಿನೀರನುಂಡುದೆಂಬ ನಾಣ್ಣುಡಿಯಂತೆ ತನ್ನ ಕೈಕೊಂಡು ನವೆದ ಕಡುದುಃಖಂ ಸಫಲಮಾಯ್ತೆಂದು ತನ್ನೊಳ್ ನುಡಿದು ೮೨

ಸುರರಾಜಂಗಂ ಭೇದಿಸ
ಲರಿದೆನಿಸುವ ದಿವ್ಯರತ್ನಮೆನಗವಯವದಿ
ದೊರೆಕೊಂಡುದು ವೀರಮಹೀ
ಶ್ವರನಲ್ಲಿಗೆ ಪೋಗಿ ಪಡೆವೆನುರ್ವರೆಯರೆಯಂ ೮೩

ಸ್ಫುರಿಯಿಪ ಸದ್ರತ್ನಮನಿದ
ನರಸಂ ಕೀಳ್ಕಾಣಲೊಡನೆ ತಾಂ ತನ್ನಾಳ್ವು
ರ್ವರೆಯರೆಯನೀವನಿತ್ತೊಡೆ
ಧರೆಯರೆಯಂ ಸುಖದೆ ಲೀಲೆಯಿಂ ಭೋಗಿಸುವೆಂ ೮೪

ಮನಕೆ ವಂದ ಹಯಂಗಳಿಂ ಮದಸಿಂಧುರಂಗಳನೇಱುವೆಂ
ಮನಕೆ ವಂದ ನವಾಂಬರಗಳನರ್ತಿಯಿಂದುಡುವೆಂ ಕರಂ
ಮನಕೆ ವಂದ ಸುಗಂಧವಸ್ತುವನಕ್ಕಱಿಂದಮೆ ಪೂಸುವೆಂ
ಮನಕೆವಂದೊಳ್ವೆಂಡರೊಳ್ನೆರೆವೆಂ ಮನಂಬಿಡೆ ನಿಚ್ಚಲುಂ ೮೫

ಮೇಲೆ ಜೋಡಿಸಿಕೊಂಡು ಹಿಡಿದು, ಮೆಲ್ಲಗೆ ತಲೆಯಲ್ಲಿ ಹೊತ್ತುಕೊಂಡು, ಅಲ್ಲಿಗೆ ಬಿಡದೆ ಆಸೆಯಿಂದ ಹಣೆಯ ಮೇಲೆ ಇಟ್ಟುಕೊಂಡು, ಅದನ್ನು ಅಕ್ಕರೆಯಿಂದ ಹಲವು ಬಗೆಯಾಗಿ ಭಾವಿಸಿ ನೋಡಿ ನೋಡಿ, ಬೇಗನೆ ತನಗೆ ರಾಜ್ಯ ಕೈ ಸೇರಿದಂತೆ ಆಗಲೇ ಉತ್ಸಾಹದಿಂದ ಉಬ್ಬಿ ಉಕ್ಕಿದನು. ೮೧. ಹಾಗೆ ಸಂತೋಷದಿಂದ ಉಕ್ಕಿ 'ತಡೆದು ತಿಳಿ ನೀರನ್ನು ಕುಡಿದರು' ಎಂಬ ಗಾದೆಯ ಹಾಗೆ ತಾನು ಸವೆದ ಬಗೆಯನ್ನು ನೆನೆದು ತನ್ನ ಕಡುದುಃಖ ಫಲಿಸಿತೆಂದು ತನ್ನಲ್ಲಿಯೇ ಹೇಳಿಕೊಂಡನು. ೮೨. ಭೇದಿಸಲು ದೇವೇಂದ್ರನಿಗೂ ಅಸಾಧ್ಯವೆನ್ನಿಸುವ ಈ ದಿವ್ಯ ರತ್ನವು ನನಗೆ ಸುಲಭವಾಗಿ ಲಭಿಸಿತು. ಇನ್ನು ವೀರ ಮಹಾರಾಜನಲ್ಲಿಗೆ ಹೋಗಿ ರಾಜ್ಯಾರ್ಧವನ್ನು ಪಡೆಯುತ್ತೇನೆ ೮೩. ಹೊಳೆಯುವ ಈ ಶ್ರೇಷ್ಠ ರತ್ನವನ್ನು ಅರಸನು ಕಂಡ ಕೂಡಲೇ ರಾಜನು ತಾನು ಆಳುವ ರಾಜ್ಯದ ಅರ್ಧವನ್ನು ಕೊಡುತ್ತಾನೆ. ಕೊಟ್ಟರೆ ಸೌಖ್ಯವನ್ನು ಆನಂದವಾಗಿ ಭೋಗಿಸುತ್ತೇನೆ. ೮೪. ಮನಸ್ಸಿಗೆ ಒಪ್ಪಿದ ಕುದುರೆಗಳನ್ನೂ ಮದ್ದಾನೆಗಳನ್ನೂ ಏರುತ್ತೇನೆ. ಮನಕ್ಕೊಪ್ಪಿದ ಹೊಸ ಬಟ್ಟೆಗಳನ್ನು ಉಟ್ಟು ಸಂತೋಷಪಡುತ್ತೇನೆ. ಶ್ರೇಷ್ಠವಾದ ಸುಗಂಧವಸ್ತುಗಳನ್ನು ಇಷ್ಟದಂತೆ ಹಚ್ಚಿಕೊಳ್ಳುತ್ತೇನೆ. ಇಷ್ಟಪಟ್ಟ ಒಳ್ಳೆಯ ಹೆಂಡಿರೊಡನೆ ನಿತ್ಯವೂ ನೆರೆಯುತ್ತೇನೆ. ೮೫. "ಎಂದು ಹೊಳೆಯುನ್ನು ಕಾಣುವ ಮುಂಚೆಯೇ

ಗದ್ಯ॥ ಎಂದು ತೋಱಿಗಾಣದೆ ಕಿರ್ಪುಗಳೆದು ನಗಿಸುವೆಗ್ಗನಂತೆ ಮುಂದಣ ತನಗಪ್ಪ ರಾಜ್ಯ ವಿಭೂತಿಯುನಾಳೋಚಿಸಿ ಸೊಡರಂ ಕಳೆದು ಪೊಱಮಟ್ಟು ಪೋಪುದುಂ ಕರ್ಮವಶದಿಂ ಖಲ್ವ ಬಿಲ್ವಸಂಯೋಗದಂತೆ ಪೊೞಲೊಳಗೆ ತೊೞಲ್ವರಸನ ತಳಾಱರೋಡುವ ಮಾಯಾವಿಯ ಕೈಯೊಳ್ಬಾಲಾರ್ಕನಂತೆ ಪ್ರಜ್ವಲಿಸುವ ರತ್ನದ ಬೆಳಗಂ ಕಂಡು ಕಳಕಳರವಮಂ ಮಾಡುವುದುಂ ೮೬

ಒಳಗಿರ್ದ ಬಂಟರಾಕಳ
ಕಳಕ್ಕೆ ಭಯದಿಂದಮೆರ್ದಿದೇನೆಂದಾಗಳ್
ನೋೞ್ಪುದುಮೊಳಗು
ಜ್ವಳಿಸುವ ಸೊಡರಿಲ್ಲದೆಯ್ದೆ ನೊಂದಿರೆ ಮನದೊಳ್ ೮೭

ಗದ್ಯ॥ ನೊಂದು ದೇಹಾರದ ಮನೆಯುಂ ಪೊಕ್ಕು ತಡವರಿಸಿ ನೋಡಿ ಮಾಯಾವಿಯುಂ ಪಡುವೆಡೆಯೊಳ್ಕಾಣದೆ. ತಕ್ಕನೆಂದಱಿದು ರತ್ನದ ದೆಸೆಗೆ ಭಯಸ್ಥರಾಗಿ ಸೊಡರಂ ತರಿಸಿ ನೋಡಿ ದೇವರ ಮುಕ್ಕೊಡೆಯೊಳಿರ್ದ ವೈಢೂರ್ಯ ಮಾಣಿಕಮುಂ ಕಾಣದೆ ಪೊಱಮಟ್ಟು ತಾಮುಂ ತತ್ಪುರದ ತಳಾಱರುಂ ಸುತ್ತಿಮುತ್ತಿಯಿನ್ನೆತ್ತ ಪೋದಪೆಯೆಂದು ಬೆನ್ನಟ್ಟಿ ತಗುಳ್ದಿಡುವುದುಂ ಖಿಳಿಲ್ ಖಿಳಿಲ್ ತೊಪ್ಪು ತೊಪ್ಪು ಛಳಿಲ್ ಛಳಿಲೆಂದು ಕೊಳ್ವ ಬಡಿಗಂ ಚೆಲ್ತು ೮೮

ಚಪ್ಪಲಿಗಳನ್ನು ಬಿಟ್ಟು ನಗೆಗೆ ಗುರಿಯಾಗುವ ದಡ್ಡನಂತೆ ಮುಂದೆ ತನಗೆ ಲಭಿಸುವ ರಾಜವೈಭವವನ್ನು ಕುರಿತು ಆಲೋಚಿಸಿ ದೀಪವನ್ನಾರಿಸಿ ಹೊರಟುಹೋಗುತ್ತಲೇ ಕರ್ಮವಶದಿಂದ, ಖಲ್ವಬಿಲ್ವಸಂಯೋಗ (ಬೋಳತಲೆ ಮೇಲೆ ಬಿಲ್ಪತ್ರೆಕಾಯಿ ಬಿದ್ದಂತೆ) ದಂತೆ ಪಟ್ಟಣದಲ್ಲಿ ಸುತ್ತುತ್ತಿರುವ ರಾಜನ ತಳವಾರರು ಓಡುತ್ತಿದ್ದ ಮಾಯಾವಿಯ ಕೈಯೊಳಗೆ ಬಾಲಸೂರ್ಯನ ಹಾಗೆ ಪ್ರಕಾಶಿಸುವ ರತ್ನದ ಬೆಳಕನ್ನು ನೋಡಿ ಕಳಕಳ ಶಬ್ದವನ್ನು ಮಾಡಿದರು. ೮೬. ಆ ಗದ್ದಲವನ್ನು ಕೇಳಿ ಒಳಗಿದ್ದ ಭಂಟರು ಭಯಪಟ್ಟು 'ಇದೇನು ?' ಎಂದು ಆಗ ಸುತ್ತಲೂ ನೋಡಿದರು. ಆಗ ಒಳಗೆ ವಿಶೇಷವಾಗಿ ಉರಿಯುತ್ತಿದ್ದ (ಪ್ರಕಾಶಿಸುವ) ದೀಪವಿಲ್ಲದಿರಲು ಅವರು ಮನಸ್ಸಿನಲ್ಲಿ ನೊಂದುಕೊಂಡು ದೇಹಾರದ ಮನೆಯೊಳಕ್ಕೆ ಹೋಗಿ ತಡವರಿಸುತ್ತ ಹುಡುಕಿ ನೋಡಿದರು. ಮಾಯಾವಿ ದಿನವೂ ಮಲಗುತ್ತಿದ್ದ ಸ್ಥಳದಲ್ಲಿ ಕಾಣಿಸಲಿಲ್ಲ. ಅವನು ತಕ್ಕನೆಂದು ಗ್ರಹಿಸಿ ರತ್ನದ ವಿಷಯಕ್ಕೆ ಭಯಪಟ್ಟು ದೀಪವನ್ನು ತರಿಸಿ ನೋಡಿದರು. ಆಗ ದೇವರ ಮುಕ್ಕೊಡೆಯಲ್ಲಿದ್ದ ವೈಡೂರ್ಯ ಮಾಣಿಕ್ಯವನ್ನು ಕಾಣದೆ ಹೊರಟು ಬಂದು ತಾವೂ ಆ ಪುರದ ತಳವಾರರೂ ಸುತ್ತಿಮುತ್ತಿ "ಇನ್ನೆಲ್ಲಿ ಹೋಗುವೆ ?" ಎಂದು ಮಾಯಾವಿಯನ್ನು ಬೆನ್ನಟ್ಟಿ ತಾಕಿ ಹೊಡೆಯಲು "ಖಿಳಿಲ್ ಖಿಳಿಲ್ ತೊಪ್ಪು, ತೊಪ್ಪು, ಛಳಿಲ್ ಛಳಿಲ್" ಎಂದು ಹೊಡೆಯುವ ಪೆಟ್ಟಿಗೆ ನಡುಗಿದನು. ೮೭–೮೮. "ಪರಾ

ಒಟ್ಟೈಸಿಪೋಗಲರಿದೊಣ
ಬಟ್ಟೆಯ ಕಿಱುಗಲ್ಲ ಬಡಿಯ ಕೋಳಿಂದಂ ಕಾಲ್
ಕೆಟ್ಟುವು ಜವಜವನಾದುವು
ನೆಟ್ಟನೆ ಮೈ ಸತ್ತೆನೆಂದು ಕಡುಭಯದಿಂದಂ ೮೯

ಅತ್ತಲುಮಿತ್ತಲುಮೋವೋ
ಯೆತ್ತಲುಮಾತಂಗೆ ಕೂಪಮಂ ತೆಱೆದಂತಾ
ಯ್ತೊತ್ತುತ್ತೆ ಮೊತ್ತುವ ತೆಱದಿಂ
ದತ್ತಿತ್ತಲ್ಮಿಡುಕಬಾರದವಗುದ್ಧತೆಯಿಂ ೯೦

ತಡೆದಿಲ್ಲಿ ನಿಂದೆನಪ್ಪೊಡೆ
ಮಡಿವಾದಪುದುೞಿವೆನಪ್ಪೊಡೆಲ್ಲಿಡೆ ಮುಂದೊಂ
ದಡಿಯುಂ ತೆಱಪಣಮಿಲ್ಲೀ
ಯೆಡೆಗಾವುದುಪಾಯಮೆಂದು ಮಾಯಾಪುಂಜಂ ೯೧

ಗದ್ಯ॥ ಚಿಂತಾಕ್ರಾಂತನಾಗಿ ಮಹಾಪ್ರಳಯಮಂ ಕವಿದಂತೆ ದುಃಖಂಬಟ್ಟು ಪಲವುನಾಯ್ಗಳ ನಡುವಣ ಪುಲ್ಲೆಯಂತೆ ನಡುನಡುಗಿ ೯೨

ಜಡಿದು ಬೈದುಂ ಮೋಹದಿ
ನೊಡಗೊಂಡುಣ್ಬವರೆ ಲೇಸು ದಿಟಮೆಂಬೀ ನಾ
ಟ್ನುಡಿಯಂತೀ ಪ್ರಾಣಿಗಳಂ
ಮಡಿಪದುಪಾಸಕರೆ ಲೇಸು ಬಗೆವೊಡೆ ಜಗದೊಳ್ ೯೩

ಕ್ರಮದಿಂದ ಹೊರಗೆ ಹೋಗುವುದು ಅಸಾಧ್ಯ. ಚಿಕ್ಕದೊಣ್ಣೆಯ ಪೆಟ್ಟಿನಿಂದಲೇ ಕಾಲುಗಳು ಶಕ್ತಿಗುಂದಿದವು. ದೇಹ ನಿಸ್ಸತ್ವವಾಯಿತು. ಸತ್ತೆ" ಎಂದು ಬಹಳ ಭಯದಿಂದ ಅತ್ತ ಇತ್ತ ನೋಡಿದನು. ಎಲ್ಲ ಕಡೆಗಳಲ್ಲಿಯೂ ಅವನಿಗೆ ಬಾವಿ ಬಾಯಿ ತೆರೆದ ಹಾಗಾಯಿತು. ಒತ್ತಿ ಬಡಿಯುತ್ತ ಬರುವ ತಳವಾರರು ನುಗ್ಗುತ್ತಿರಲು ಇಲ್ಲಿ ಉದ್ಧತನಾಗಿ ನಿಲ್ಲಬಾರದು. ಹಾಗೆ ನಿಂತೆನಾದರೆ ಸಾವು ಒದಗುತ್ತದೆ. ಎಲ್ಲಿಯೂ ಮಿಡುಕುವ ಹಾಗಿಲ್ಲ. ಉಳಿದುಕೊಳ್ಳಲು ಯಾವ ಕಡೆಯೂ ಮುಂದೆ ಒಂದು ಹೆಜ್ಜೆಯಷ್ಟು ದಾರಿಯೂ ಇಲ್ಲ. ಈ ಸನ್ನಿವೇಶದಲ್ಲಿ ಏನು ಉಪಾಯ ಮಾಡಬೇಕೆಂದು ಆ ಮಾಯಾಪುಂಜನು ಚಿಂತಾವಶನಾದನು. ಅವನ ಪಾಲಿಗೆ ಮಹಾಪ್ರಳಯವೇ ಮುಚ್ಚಿಕೊಂಡಂತೆ ಆಯಿತು. ಅವನು ಅನೇಕ ನಾಯಿಗಳ ಮಧ್ಯೆ ಸಿಕ್ಕಿಕೊಂಡ ಒಂದು ಹುಲ್ಲೆಯ ಹಾಗೆ ಭಯದಿಂದ ವಿಶೇಷವಾಗಿ ನಡುಗಿದನು. ೮೯-೯೨. "ಗದರಿಸಿ ಬೈದರೂ ಮೋಹದಿಂದ ಜತೆಯಲ್ಲಿ ಊಟ ಮಾಡುವವರೇ ವಾಸಿ" ಎಂಬ ಗಾದೆಯಂತೆ ಪ್ರಾಣಿಗಳನ್ನು ಕೊಲ್ಲದ ಈ ಉಪಾಸಕರೇ ವಾಸಿ ೯೩. ಆದ್ದರಿಂದ ಸಮ್ಯಕ್ತ್ವ ಚೂಡಮಣಿಯಾದ ಜಿನಭಕ್ತ ಸೆಟ್ಟಿ

ಗದ್ಯ॥ ಅದಱಿಂ ಸಮ್ಯಕ್ತ್ವಚೂಡಾಮಣಿಯಪ್ಪ ಜಿನಭಕ್ತಸೆಟ್ಟಿಯುಪ್ಪೊಡೆ ಪರಮ ಶ್ರಾವಕನೊಂದಿಱುಂಪೆಯ ಪ್ರಾಣಕ್ಕಂ ಮೊದಲಾಗೆ ತಪ್ಪಲಱಿಯದಾತನೆನ್ನಂ ಕಂಡೊಡೇಗೆಯ್ದುಂ ಕೊಲ್ವನಲ್ಲ, ನಿಷ್ಠುರನಪ್ಪ ತಳಾಱನ ಕೈಯೊಳ್ ಕಡಿಗಂಡವಾಗೆ ಜೀಱೀಟಿಪೊಯ್ಸಿಕೊಂಡು ಸಾಯದೆ ವಾತ್ಸಲ್ಯರತ್ನಾಕರನ ಮಱಿಯಂ ಪೊಗುವೆನೆಂದು ಪೊಱಬೀಡುಬಿಟ್ಟಿರ್ದ ಜಿನೇಂದ್ರಭಕ್ತನಬೀಡಂ ನೋಡಿ ಪೊಕ್ಕು ಜಿನಧರ್ಮ ನಿರ್ಮಳನ ಮಱಿಯಂ ಪುಗುವುದುಂ ಸೆಟ್ಟಿ ಮಾಯಾವಿಯ ಮುನ್ನಿನ ತಪದೊಳಾದ ಸಾಧುತ್ವಮುಮಂ ಬಱಿಕ್ಕವಾದ ದುರ್ಜನತ್ವಮುಮಂ ಕಂಡು ಬೆಱಗಾಗಿ ತನ್ನೊಳಿಂತೆಂದಂ ೯೪

ನಾಡಾಡಿಯನಾಡುವರೊಳ್
ಕೂಡುವೊಡದು ದೋಷಮಲ್ಲದು ಕುಕ್ಕುಟಮಂ
ಮಾಡುವರೊಳ್ನಂಬುಗೆಯಿಂ
ಕೂಡಿದೊಡೇನಾನುಮೊಂದು ದೋಷಂ ಸಾರ್ಗುಂ ೯೫

ಧರೆಯೊಳ್ ವಿವೇಕಿಯೆನಿಸುವ
ಪುರುಷಂ ಪೆಂಡಿರೊಳಮರ್ಥದೊಳಮಿನ್ನೆಂತ
ಪ್ಪರುಮಂ ನಂಬಿರಲಾಗದು
ಪರವಶದಿಂದೆಂಬ ನೀತಿಯೊಳ್ ಪುಸಿಯುಂಟೇ ೯೬

ಯಾದರೆ ಶ್ರೇಷ್ಠನಾದ ಶ್ರಾವಕ. ಅವನು ಒಂದು ಇರುವೆಯ ಪ್ರಾಣವನ್ನೂ ತೆಗೆಯಲು ಒಲ್ಲದವನು. ಆತನು ನನ್ನನ್ನು ಕಂಡರೆ ಏನು ಮಾಡಿದರೂ ಕೊಲ್ಲುವುದಿಲ್ಲ. ಈ ಕ್ರೂರನಾದ ತಳವಾರನ ಕೈಲಿ ಕಡಿಖಂಡವಾಗುವಂತೆ ಬಾಸುಂಡೆಗಳೇಳುವಂತೆ ಹೊಡಿಸಿಕೊಂಡು ಸಾಯದೆ ವಾತ್ಸಲ್ಯರತ್ನಾಕರನಲ್ಲಿ ಮರೆಹೊಗುತ್ತೇನೆ" ಎಂದು ಯೋಚಿಸಿ ಪ್ರಯಾಣಸ್ಸಿದ್ಧತೆಗಾಗಿ ಹೊರಬೀಡು ಬಿಟ್ಟಿದ್ದ ಜಿನೇಂದ್ರಭಕ್ತನ ಬೀಡನ್ನು ಕಂಡು ಜಿನಧರ್ಮನಿರ್ಮಲನಾದ ಆ ಸೆಟ್ಟಿಯ ಮರೆಹೊಕ್ಕನು. ಸೆಟ್ಟಿ ಮಾಯಾವಿಯ ಮೊದಲಿನ ತಪಸ್ಸಿನಲ್ಲಿ ಇದ್ದ ಸಾಧುತ್ವವನ್ನೂ ಆಮೇಲೆ ಆದ ದುರ್ಜನತ್ವವನ್ನೂ ಕಂಡು ಬೆರಗಾಗಿ ತನ್ನಲ್ಲಿಯೇ ಯೋಚಿಸಿಕೊಂಡನು. ೯೪. ನಾಡಾಡಿಯಾದ ಮನುಷ್ಯನನ್ನು ಆಟಗಾರರಲ್ಲಿ ಸೇರಿಸಿದರೆ ಅದರಲ್ಲಿ ಏನೂ ದೋಷವಿಲ್ಲ. ಆದರೆ ಮೋಸಮಾಡುವ ಮಹಾಕಪಟಿಗಳಲ್ಲಿ ನಂಬಿಕೆಯಿಂದ ಸೇರಿದರೆ ಏನಾದರೂ ಒಂದು ದೋಷವಾಗುತ್ತದೆ. ೯೫. ಲೋಕದಲ್ಲಿ ವಿವೇಕಿಯಾದ ಪುರುಷನು ಹೆಂಡಿರಲ್ಲಿಯೂ ಹಣದ ವಿಷಯದಲ್ಲಿಯೂ ಇನ್ನು ಎಂಥವರನ್ನೂ ಮೈಮರೆತು ನಂಬಿರಲಾಗದೆಂಬ ನೀತಿಯಲ್ಲಿ ಸುಳ್ಳಿದೆಯೋ ? ೯೬. ವ್ಯಸನ

ಗದ್ಯ॥ ಬೆಸನಿಯ ಸತ್ಯಮುಂ ಖಳನ ಧರ್ಮಮು ಮೂರ್ಖನ ಸಚ್ಚರಿತ್ರಮುಂ ಷಸಿವನ ಶೌಚಮುಂ ಬಡವನಪ್ಪನ ಭೋಗಮುಂ ಮಾಜಿರಂಗದೊಳ್ ಕುಸಿವನ ವೀರಮುಂ ಬಧಿರನಪ್ಪನ ಕೇಳ್ವಿಯು ಮಾಯತಿಕ್ಕಿಯಂ ಬಿಸುಟನ ಕೀರ್ತಿಯುಂ ವಿಟನ ಶೀಲಮುಮುರ್ವಿಯೊಳೊಪ್ಪಲಾರ್ಪವೇ ೯೭

ಕುರುಡನ ಕಾಣ್ಕೆಯುಂ ವನಿತೆಯುರ್ಗೆಳಸಿರ್ಪನ ರಾಜ್ಯಮುಂ ಮನಂ
ಮುರಿವನ ಧೈರ್ಯಮುಂ ಪತಿಗೆ ಮಾರ್ಮಲೆದಿರ್ಪನ ಸಜ್ಜನಿಕ್ಕೆಯುಂ
ಪರಮಜಿನಾಗಮೋಕ್ತಿಯನೆ ಮಾಣದೆ ಭಾವಿಸದಾತನೋದು ಭಾ
ಸುರತರಮುಂ ಮಹಾಗುಣಮುಮೊಪ್ಪವು ಧಾರಿಣಿಯೊಳ್ನಿರಂತರಂ ೯೮

ಚರಿತಪುರಾಣಮನಱಿಯದೆ
ಕುರಿಪದಿನಧ್ಯಾತ್ಮಿಯಾಗಿ ನೆಗಟ್ವನ ತಪಮುಂ
ಮರುಳಿನ ಸಿರಿಯುಂ ಷಂದೆಯ
ಬಿರುದುಂ ಸುಖಮಾಗಲಾಱವೆಂದುಂ ಕಡೆಯೊಳ್ ೯೯

ಸಿದ್ಧಾಂತಮನಱಿಯದೆ ಪಿರಿ
ದುದ್ಧತೆಯಿಂ ಸೋಂಬತನದಿನಧ್ಯಾತ್ಮಮುಮಂ
ಶ್ರದ್ಧೆಯಿನೋದುವ ಕಡುನಿ
ರ್ಬುದ್ಧಿ ಮಹಾಸುಖಮನೈದಲಾಱಂ ಕಡೆಯೊಳ್ ೧೦೦

ಶೀಲನ ಸತ್ಯವೂ ದುಷ್ಟನ ಧರ್ಮವೂ ಮೂರ್ಖನ ಒಳ್ಳೆಯ ನಡತೆಯೂ ಸುಳ್ಳಾಡುವವನ ಸದಾಚಾರವೂ ಬಡವನಾದವನ ಭೋಗವೂ ಯುದ್ಧರಂಗದಲ್ಲಿ ಕುಸಿಯುವವನ ವೀರಗುಣವೂ ಕಿವುಡನಾದವನ ಕೇಳ್ಮೆಯೂ ಘನತೆಯನ್ನು ಬಿಟ್ಟವನ ಕೀರ್ತಿಯೂ ವಿಟಪುರುಷನ ಶೀಲವೂ ಲೋಕದಲ್ಲಿ ಒಪ್ಪುವಂಥವಲ್ಲ. ೯೭. ಕುರುಡನ ನೋಟ ಹೆಂಗಸರಿಗೆ ಆಸೆ ಪಟ್ಟಿರುವವನ ರಾಜ್ಯವೂ ಮನಸ್ಸು ತಿರುಗಿಸುವವ(ಚಂಚಲಚಿತ್ತ)ನ ಧೈರ್ಯವೂ, ಒಡೆಯನಿಗೆ ಎದುರು ಬೀಳುವವನ ಒಳ್ಳೆಯತನವೂ ಪರಮಜಿನಾಗಮದ ಹೇಳಿಕೆಯನ್ನು ತಪ್ಪದೆ ಧ್ಯಾನಿಸದವನ ವಿದ್ಯೆಯೂ ಭಾಸುರತರವಾದ ಗುಣವೂ ಈ ಲೋಕದಲ್ಲಿ ಶೋಭಿಸುವುದಿಲ್ಲ. ೯೮. ಚರಿತೆ ಪುರಾಣಗಳನ್ನು ತಿಳಿಯದೆ ಆತುರದಲ್ಲಿ ಅಧ್ಯಾತ್ಮಿಯಾಗಿ ತಪಸ್ಸುಮಾಡುವವನ ತಪಸ್ಸೂ, ದಡ್ಡನ ಐಶ್ವರ್ಯವೂ ಹೇಡಿಯ ಬಿರುದೂ ಕೊನೆಯಲ್ಲಿ ಸುಖವನ್ನುಂಟುಮಾಡುವುದಿಲ್ಲ. ೯೯. ಸಿದ್ಧಾಂತವನ್ನು ತಿಳಿದುಕೊಳ್ಳದೆ ಹೆಚ್ಚಾದ ಔದ್ಧತ್ಯದಿಂದ, ಆಚರಿಸುವವನ ತಪಸ್ಸೂ, ಸೋಮಾರಿತನದಿಂದ, ತಪಸ್ಸಿಲ್ಲದೆ ಅಧ್ಯಾತ್ಮವನ್ನು ಶ್ರದ್ಧೆಯಿಂದ ಓದುವ ಬುದ್ಧಿಹೀನನೂ ಕೊನೆಯಲ್ಲಿ ಹೆಚ್ಚಿನ ಸೌಖ್ಯವನ್ನು ಪಡೆಯಲಾರ. ೧೦೦. ಆರಂಭದಲ್ಲಿ ಪ್ರಥಮಾನು

ಮೊದಲೊಳೋದದೆ ರಾಗದಿಂ ಪ್ರಥಮಾನ:ಯೋಗಮನರ್ತಿಯಿಂ
ತುದಿಯ ಸೂಕ್ಷ್ಮಮನೋದುವಾತನುಮಾಜಿಯೊಳ್ ಸಲೆ ಕೈದುವಿ
ಲ್ಲದೆ ಕಡಂಗಿ ವಿನೋದದಿಂ ಪುಗುವಾತನುಂ ನೃಪಕಾಂತೆಯುಂ
ಪದೆದುಕಾಮಿಸಿನೋಡಿ ಪೊರ್ದುವ ಗಾಂಪನುಂ ಮರುಳಲ್ಲನೇ ೧೧೧

ಆಗಮಮವಱಿಯದ ತಪಮುಂ
ರಾಗಿಯೆನಿಪ್ಪವನ ರಾಣಿವಾಸದ ಕಾಪುಂ
ವೇಗಿಯ ಕೆಳೆಯುಂ ಬಡವನ
ಭೋಗಮುಮತ್ಯಂತ ದುಃಖಮಂ ಪುಟ್ಟಿಸುಗುಂ ೧೧೨

ಲೋಭಿಯ ಕೊಡುಂ ಪದಪಿಂ
ದಿಃಭವದ ಸುಖಕ್ಕೆ ಮಱುಗಿ ಕುದಿವನ ತಪಮುಂ
ಲಾಭಮನಱಿಯದ ಪರದುಂ
ಶೋಭಿಸಲಾರ್ತಪುವೆ ಬಗೆವೊಡವನೀತಳದೊಳ್ ೧೧೩

ಗದ್ಯ॥ ಎಂದು ಮನದೊಳ್ ಭಾವಿಸುತಿರ್ಪನ್ನೆಗಂ ಕಲ್ಲಿಯುಂ ಕವಿಲೆಯುಮಾಗಿ ನೆರವಿ ಪೆಱಗೆ ಬರೆ ಪುರದ ತಳಾಱರುಂ ತನ್ನ ದೇಹಾರದ ಕಾಪಿನ ಬಂಟರುಂ ಕಳ್ಳನಿಲ್ಲಿ ಪೊಕ್ಕನೆಂದು ಬೀಡಿನೊಳ್ ಪೊಕ್ಕು ಗುಡಿಗೂಡಾರಂಗಳೊಳಂ ಬೆಟ್ಟಾಗೊಟ್ಟಿರ್ದ ಪೇಱನಿಟ್ಟೆಡೆಗಳೊಳಂ ಕೊಟ್ಟಿಗೆ ಯೆತ್ತಿನ ಪಟ್ಟಗಳೊಳಂ ಪುಂಜಿಸಿದ ಚೀನದ ದಿಂಡುಗಳೊಳಂ ಪಾಸಿನೆಡೆಗಳೊಳಂ ಕೈದೀವಿಗೆಯ

ಯೋಗವನ್ನು ಸಂತೋಷದಿಂದ ಓದದೇ ಕೊನೆಯ ಸೂಕ್ಷ್ಮವನ್ನು ಓದುವವನೂ ಯುದ್ಧದಲ್ಲಿ ಆಯುಧವಿಲ್ಲದೆ ರಭಸದಿಂದ ನುಗ್ಗುವವನೂ ರಾಜನ ಹೆಂಡತಿಯನ್ನು ಆಸೆ ಪಟ್ಟು ಕಾಮಿಸಿ ನೋಡಿ ಸೇರಲು ಯತ್ನಿಸುವ ದಡ್ಡನೂ ಹುಚ್ಚರಲ್ಲವೇ? ೧೧೧ ಆಗಮ ವನ್ನು ತಿಳಿಯದಿರುವವನ ತಪಸ್ಸೂ, ಪ್ರೇಮ (ಆಸೆ)ವುಳ್ಳವನೆನಿಸಿಕೊಂಡವನ ರಾಣಿ ವಾಸದ ಕಾವಲೂ, ಹರಿಕಾರನ ಸ್ನೇಹವೂ ಬಡವನ ಭೋಗವೂ ಅತ್ಯಂತವಾದ ದುಃಖ ವನ್ನು ಹುಟ್ಟಿಸುತ್ತವೆ. ೧೧೨. ಜಿಪುಣನ ದಾನವೂ ಈ ಸಂಸಾರದ ಸುಖಕ್ಕೆ ವಿಶೇಷವಾಗಿ ಆಸೆಪಟ್ಟು ಮಱುಗುವವನು ಕೈಕೊಳ್ಳುವ ತಪಸ್ಸೂ ಲಾಭವಿಲ್ಲದ ವ್ಯಾಪಾರವೂ ಈ ಲೋಕದಲ್ಲಿ ಶೋಭಾಯಮಾನವಾಗಲು ಸಾಧ್ಯವೆ? ೧೧೩. ಹೀಗೆ ಮನಸ್ಸಿನಲ್ಲಿಯೇ ಚಿಂತಿ ಸುತ್ತಿರುವ ವೇಳೆಗೆ ಹೊರಗೆ ಅಲ್ಲಕಲ್ಲೋಲವಾಗಿ ಜನರ ಗುಂಪು ಬಂದಿತು. ಪಟ್ಟಣದ ತಳವಾರರೂ ತನ್ನದೇಹಾರದ ಕಾವಲಿನ ಭಟರೂ 'ಕಳ್ಳನು ಇಲ್ಲಿ ಹೊಕ್ಕಿದ್ದಾನೆ' ಎಂದು ಕೂಗಿಕೊಂಡು ಬೀಡಿನೊಳಕ್ಕೆ ಪ್ರವೇಶ ಮಾಡಿ ಗುಡಿ ಗೂಡಾರಗಳನ್ನೆಲ್ಲ ಶೋಧಿಸಿದರು. ರಾಶಿಯಾಗಿ ಹಾಕಿದ್ದ ಹೇರುಗಳಿದ್ದ ಸ್ಥಳಗಳಲ್ಲಿಯೂ ಕೊಟ್ಟಿಗೆಗಳಲ್ಲಿಯೂ ಎತ್ತುಗಳಿದ್ದ ಜಾಗಗಳಲ್ಲಿಯೂ ರಾಶಿ ಮಾಡಿದ್ದ ಚೀನಾಂಬರಗಳ ದಿಂಡುಗಳ ನಡುವೆ, ಹಾಸಿಗೆಗಳಿದ್ದ ಸ್ಥಳಗಳಲ್ಲಿಯೂ ಕೈದೀವಿಗೆಗಳನ್ನು ಹಿಡಿದುಕೊಂಡು ಆ ಬೆಳಕಿನಲ್ಲಿ ಹುಡುಕಿ

ಬೆಳಕಿನೊಳ್ ನೋಡುತ್ತುಂ ಕಳಕಳರವದಿಂ ಬಿದಿರುಂ ಬಟಿಯುಂ ಪಾಸುಂ ಪೊಕ್ಕುಂತಿಗುರಿಯುಂ ಬುಗುರಿಯುಂ ಜಾತಿಯುಂ ಭೀತಿಯುಂ ಆಗೆ ಪರಿವಾಗಳವರಂ ವಣಿಗ್ವಂಶಲಲಾಮಂ ಕಂಡು ತನ್ನೊಳಿಂತೆಂದಂ ೧೦೪

ಈ ಪಾತಕನಪ್ಪೊಡೆ ಮು
ನ್ನೀಪುರದೊಳ್ ಪಿರಿದು ಕೀರ್ತಿಯಂ ತಪದಿಂದಂ
ವ್ಯಾಪಿಸಿದಂ ಪಲರಿಂದಂ
ಪಾಪಾಂತಕನೆನಿಸಿ ನೆಟಿಯೆ ಕೈಮುಗಿಯಿಸಿದಂ ೧೦೫

ಮೊದಲೊಳ್ ಮುಳ್ಳಿನಮೊನೆಗಳ್
ಮೃದುವಪ್ಪುವು ಬಟಿಕೆ ಬೆಟ್ಟಿತಪ್ಪುವು ಖಳರುಂ
ಮೊದಲೊಳ್ ಗುಣಿಯೆನಿಸಿರ್ಪರ್
ತುದಿಯೊಳ್ ತಂತಮ್ಮ ಮಾಯೆಯಂ ಪ್ರಕಟಿಸುವರ್ ೧೦೬

ಪೊಳ್ಳುಂ ಬಿತ್ತುಂ ಸಸಿಗಳು
ಮೊಳ್ಳಿದುವೆನಿಸಿರ್ಪವೆಯ್ದೆ ಫಲದೊಳ್ ತೋರ್ಕುಂ
ಪೊಳ್ಳಪ್ಪುದು ಪೊಳ್ಳುಂ ಕರ
ಮೊಳ್ಳಿದುವೆನಿಸಿರ್ಪ ಬಿತ್ತು ಧಾನ್ಯಮುಮಕ್ಕುಂ ೧೦೭

ನೋಡುತ್ತ ಬಹಳ ಗದ್ದಲವಾಗುತ್ತಿರಲು ಚೆಲ್ಲಾಪಿಲ್ಲಿಯಾಗಿ ಎಲ್ಲೆಲ್ಲಿಯೂ ಬೀಡಿನ ಉದ್ದಗಳಲ್ಲಿ ಸಂಚರಿಸಿ ಹುಡುಕುತ್ತ ಕಿಗುರಿ ಬುಗುರಿಗಳಂತೆ ನಿಂತಲ್ಲಿ ನಿಲ್ಲದೆ ಒಂದೇ ಸಮನಾಗಿ ತಿರುಗಾಡುತ್ತ ಹೆಚ್ಚಾದ ಭಯವುಂಟಾಗುವಂತೆ ಓಡಾಡುತ್ತಿರಲು ಅವರನ್ನು ಕಂಡು ಆ ವರ್ತಕವಂಶಶ್ರೇಷ್ಠನು ಹೀಗೆ ಯೋಚಿಸಿಕೊಂಡನು: ೧೦೪. ಈ ಪಾತಕನಾದರೆ ಮೊದಲು ಈ ಪಟ್ಟಣದಲ್ಲಿ ಹೆಚ್ಚಿನ ಕೀರ್ತಿಯನ್ನು ತನ್ನ ತಪಸ್ಸಿನಿಂದ ಸಂಪಾದಿಸಿಕೊಂಡಿದ್ದಾನೆ. ಇವನ ಕೀರ್ತಿ ಪಟ್ಟಣದಲ್ಲೆಲ್ಲ ಹಬ್ಬಿದೆ. ಇವನು ಪಾಪ ಪರಿಹಾರಕನೆಂದೇ ತಿಳಿದು ಅನೇಕರು ಇವನಿಗೆ ಕೈಮುಗಿದು ನಮಸ್ಕರಿಸಿದರು. ೧೦೫. ಮುಳ್ಳಿನ ಮೊನೆಗಳು ಮೊದಲಿನಲ್ಲಿ ಮೆತ್ತಗಿರುವುವು. ಆಮೇಲೆ ಅವು ಗಟ್ಟಿಯಾಗುವುವು. ನೀಚರೂ ಮೊದಮೊದಲು ಗುಣವಂತರೆಂದೆನಿಸಿಕೊಂಡಿರುತ್ತಾರೆ. ಅವರು ತಮ್ಮ ಮಾಯಾ ವಿದ್ಯೆಯನ್ನು ತುದಿಯಲ್ಲಿ ತೋರಿಸಿಕೊಳ್ಳುತ್ತಾರೆ ೧೦೬. ಜೊಳ್ಳುಬೀಜಗಳೂ ಸಸಿಗಳೂ ಆರಂಭದಲ್ಲಿ ಚೆನ್ನಾಗಿಯೇ ಇರುವಂತೆ ತೋರುತ್ತವೆ. ಆದರೆ ಅವುಗಳ ನೈಜ ಲಕ್ಷಣ ಫಲದಲ್ಲಿ ಕಾಣಿಸುತ್ತದೆ. ಜೊಳ್ಳು ಜೊಳ್ಳಾಗುತ್ತದೆ. ಬಹಳ ಒಳ್ಳೆಯದೆನಿಸಿಕೊಂಡ ಬೀಜಗಳು ಧಾನ್ಯವಾಗುತ್ತವೆ ೧೦೭ ಎಲ್ಲ ಜನರ ಹೊರಗಿನ ವ್ಯಾಪಾರ

ಎಲ್ಲರ ಪೊಱಗಣ ಚೇಷ್ಟೆಯು
ನಲ್ಲದೆ ಪೇೞೊಳಗನಱಿವನಾವನೋ ಮರನೇ
ಕಲ್ಲೇ ಬಿದಿರೇ ಸೀಳ್ದಿಂ
ಮೆಲ್ಲನೆ ನೋಟ್ಪಂತೆ ನೋಡೆ ಮಾಸಿಸರೆರ್ದೆಯಂ ೧೦೮

ಇವನಪ್ಪೊಡೆ ತಾನೊರ್ಮರ
ತವುಡಿಂಗಂ ಪೋಗನಿವನಕತದಿಂದಂ ತ್ರೈ
ಭುವನಂಬಡೆವೀ ಧರ್ಮಮ
ನವಿವೇಕಿಗಳಘುಸಮನ್ವಿತರ್ಕಿಡೆನುಡಿವರ್ ೧೦೯

ಗದ್ಯ॥ ಅದುಕಾರಣದಿಂದಿವನ ಪೋದಪೋಗಂ ಮಾಱಿಯಱಿಗೆ ಸದ್ಧರ್ಮಕ್ಕೆ ಪೞಿಯಾಗದಂತೆ ನೆಗೞ್ವೆನೆಂದು ಪಿರಿಯ ಮಣೆಯ ಮೇಲಾತನನಿರಿಸಿ ಮಹಾಭಕ್ತಿಯಿಂ ಪ್ರತ್ಯಕ್ಷಂ ಮಾಯಾವಿಯ ಕಾಲನೊತ್ತುತ್ತುಮಿರ್ಪುದುಮನ್ನೆಗಂ ತಳಾಱನಾಯಕಂ ಪರಿತಂದು ಜಿನೇಂದ್ರಭಕ್ತಸೆಟ್ಟಿಯಲ್ಲಿಗೆ ಭೋರೆನೆ ಪೋಗಿ ಸೆಟ್ಟಿಯ ಮೇಲೆ ಕಾಲನವಷ್ಟಂಭದಿಂ ನೀಡಿ ಮಹಾಮಹಿಮೆಯಿಂದಿರ್ದ ಕೃತಕವೇಷಧಾರಿಯುಂ ಕಂಡು ೧೧೦

ನೀವೇನೆಂದೀ ತಸ್ಕರ
ಕೀವಿಲಚರಣದ್ವಯಂಗಳಂ ಮೆಲ್ಲನೆ ಸ
ದ್ಭಾವದಿನೊತ್ತುತ್ತಿರ್ದಿರೊ
ನೀವಱಿಯಿರೆ ಚಪಳನಾಡಿದಾಟಮನಿನ್ನುಂ ೧೧೧

ಗಳನ್ನೇ ಹೊರತು ಅವರ ಅಂತರ್ಯದ ರಹಸ್ಯವನ್ನು ತಿಳಿಯ ಬಲ್ಲವನು ಯಾವನು ? ಸೀಳಿನೋಡುವುದಕ್ಕೆ ಅದೇನು ಕಲ್ಲೆ ? ಬಿದಿರೆ ? ಮರವೆ ? ಮನುಷ್ಯರ ಹೃದಯವನ್ನು ಹಾಗೆ ಸೀಳಿನೋಡಲು ಸಾಧ್ಯವಿಲ್ಲ. ೧೦೮. ಇವನಾದರೆ ಒಂದು ಮೊರತವುಡಿಗೂ ಮಾರಾಟವಾಗನು. ಇವನಿಗೆ ತವುಡಿನಷ್ಟು ಬೆಲೆಯೂ ಇಲ್ಲ. ಇವನ ಕಾರಣದಿಂದ ಮೂರುಲೋಕಗಳನ್ನೇ ಸಂಪಾದಿಸಿಕೊಡುವಂಥ, ಈ ಧರ್ಮವನ್ನು ಪಾಪಿಗಳು ದೂಷಿಸುತ್ತಾರೆ ೧೦೯. ಆದಕಾರಣ ಇವನ ಹೋಗುವ ದಾರಿಯನ್ನು ಮಾರಿ ಅರಿತುಕೊಳ್ಳಲಿ. ಸದ್ಧರ್ಮಕ್ಕೆ ದೂಷಣೆ ತಟ್ಟದಹಾಗೆ ಮಾಡುತ್ತೇನೆಂದು ನಿರ್ಧರಿಸಿ ದೊಡ್ಡ ಮಣೆಯ ಮೇಲೆ ಆತನನ್ನು ಕೂಡಿಸಿ ಮಹಾಭಕ್ತಿಯಿಂದ ಪ್ರತ್ಯಕ್ಷವಾಗಿ (ಎಲ್ಲರ ಎದುರಿನಲ್ಲಿ) ಆ ಮಾಯಾವಿಯ ಕಾಲುಗಳನ್ನು ಒತ್ತುತ್ತ ಇದ್ದನು. ಆ ವೇಳೆಗೆ ತಳವಾರ ನಾಯಕನು ಓಡಿಬಂದು ಜಿನೇಂದ್ರಭಕ್ತಸೆಟ್ಟಿಯಲ್ಲಿಗೆ ಬೇಗಹೋಗಿ, ಸೆಟ್ಟಿಯಮೇಲೆ ತನ್ನ ಕಾಲುಗಳನ್ನು ಧೈರ್ಯದಿಂದ ಚಾಚಿದ್ದ ಆ ಕೃತಕ ವೇಷಧಾರಿಯನ್ನು ಗಮನಿಸಿದನು ೧೧೦. ನೀವು ನೀಚನಾದ ಈ ಕಳ್ಳನ ಎರಡು ಚರಣಗಳನ್ನೂ ಹೀಗೆ ಮೆಲ್ಲಗೆ ಒತ್ತುತ್ತಿರುವುದೇಕೆ? ನೀವು ಇವನನ್ನು ಸರಿಯಾಗಿ ತಿಳಿಯಲಿಲ್ಲ. ಈ ಚಪಲಚಿತ್ತನು ಆಡಿದ ಆಟವನ್ನು ನೀವು ಕೇಳಲಿಲ್ಲವೆ ? ೧೧೧. ಈ ಪುಂಡನು ಮೋಸದ ತಪಸ್ಸನ್ನು ಮುಂದಿಟ್ಟು, ಬಹಳ

ಸಿತಗಂ ಮಾಯಾತಪಮಂ
ಕೃತಕದಿನಱಿಯುಟ್ಟುಮಾಡಿ ಮೇಳಿಸಿ ಪೆಱರು
ನ್ನತರರತ್ನಮನೊಯ್ದಪನು
ನ್ನತಿಯಿಂ ದುರ್ಜನರನಿನ್ನರಂ ಕಂಡಱಿಯೆಂ ೧೧೨

ಪೊಱಗೀಖಳನಂ ಕಂಡೊಡೆ
ಪೆಱದೆಗೆಯದೆ ಸಂದಿಸಂದಿಯುಂ ಪರಸಿಂದಂ
ತಱಿಯೆನೆ ಗರಗಸದಿಂದಂ
ಕೊಱಿಯೆನೆ ಖಳನಿಲ್ಲಿಪೊಕ್ಕು ಬದುಕಿದನಿನ್ನುಂ ೧೧೩

ಆಶ್ವಾಸಂ ಗುಡದಿವನಂ
ನಿಸ್ವನಮಜ್ಞಾನಿಯಂ ಮಹಾಪಾತಕನಂ
ವಿಶ್ವಾಸಘಾತುಕನನಮ
ರೇಶ್ವರನಿಭವಿಭವ ತಡೆಯದೊಪ್ಪಿಸು ಬೇಗಂ ೧೧೪

ಗದ್ಯ॥ ಮಹಾಮಾಯಾವಿಯು ತುಡುಗುಗೊಂಡ ತೊೞ್ತಿನಂತೆ ಬಾಯಂ ತೆಱೆದುಕೊಂಡು ತಾನಲ್ಲದಂತೆ, ಬೆಣ್ಣೆಯಂ ತಿಂದ ಬೆಕ್ಕಿನಂತೆ ನಿಮ್ಮ ಮಱೆವೊಕ್ಕು ನುಣ್ಣನಿರ್ದಪನೆಂದು ನಾನಾ ಪ್ರಕಾರದಿಂ ತಿರಸ್ಕರಿಸಿ ಸೆಟ್ಟಿಗಂಜಿ ಮೇಲ್ವಾಯ್ದು ತೆಗೆಯಲಣ್ಮದಿರ್ಪುದುಂ, ಜಿನೇಂದ್ರಭಕ್ತಸೆಟ್ಟಿ ತಳಾಱನಾಯಕನ ಮೊಗಮಂ ನೋಡಿ ನೆರವಿಯೆಲ್ಲಂ ಕೇಳ್ವಂತಾಗೆ ಗಂಭೀರನಾದದಿಂದಿಂತೆಂದಂ ೧೧೫

ಕಷ್ಟಪಟ್ಟು, ಆಚರಿಸುತ್ತ ಇತರರ ಶ್ರೇಷ್ಠವಾದ ರತ್ನವನ್ನು ಕದ್ದೊಯ್ಯುತ್ತಿದ್ದಾನೆ. ಇಂಥ ಕೆಟ್ಟವರನ್ನು ನಾನು ಕಂಡಿಲ್ಲ ೧೧೨. ಈ ನೀಚನನ್ನು ಹೊರಗೆ ಕಂಡರೆ ಸ್ವಲ್ಪವೂ ಹಿಂದೆಗೆಯದೆ ಕೊಡಲಿಯಿಂದ ಇವನ ದೇಹದ ಸಂಧಿ ಸಂಧಿಯನ್ನೂ ಕತ್ತರಿಸದೆ ಬಿಡುತ್ತೇನೆಯೆ ? ಗರಗಸದಿಂದ ಕೊಯ್ಯದೆ ಬಿಡುವೆನೆ ? ಈ ದುಷ್ಟ ಇಲ್ಲಿಗೆ ಬಂದು ಇನ್ನೂ ಬದುಕಿದ್ದಾನೆ ೧೧೩. ಇವನಿಗೆ ಆಶ್ವಾಸನೆ (ಅಭಯ) ಕೊಡದೆ, ಧ್ವನಿಯೇ ಇಲ್ಲದ (ಮಾತನಾಡಲು ಬಾಯಿಲ್ಲದ) ಈ ಅಜ್ಞಾನಿ, ಮಹಾಪಾತಕ, ನಂಬಿಕೆದ್ರೋಹ ಮಾಡಿದವನು ಇವನನ್ನು, ದೇವೇಂದ್ರನಿಗೆ ಸಮವಾದ ವಿಭವವುಳ್ಳವನೇ (ಜಿನೇಂದ್ರಭಕ್ತ ಸೆಟ್ಟಿಯೇ) ಬೇಗ ಒಪ್ಪಿಸು ೧೧೪. ಈ ಮಹಾ ಮೋಸಗಾರ, ಕಳ್ಳತನ ಮಾಡಿ ಸಿಕ್ಕಿಬಿದ್ದ ದಾಸನಂತೆ, ಬಾಯಿಬಿಡುತ್ತ, ತಾನಲ್ಲವೆಂಬಂತೆ, ಬೆಣ್ಣೆಯನ್ನುತಿಂದ ಬೆಕ್ಕಿನಹಾಗೆ ನಿಮ್ಮ ಮರೆಹೊಕ್ಕು ಕ್ಷೇಮದಿಂದ್ದಾನೆ., ಎಂದು ನಾನಾ ರೀತಿಯಿಂದ ತಿರಸ್ಕಾರಮಾಡಿ ನುಡಿದ ನಾಯಕನು ಸೆಟ್ಟಿಗೆ ಭಯಪಟ್ಟು ಮೇಲೆ ನುಗ್ಗಿ ಕಳ್ಳನನ್ನು ಹಿಡಿದುಕೊಳ್ಳಲು ಧೈರ್ಯ ಮಾಡದೆ ಇದ್ದನು. ಜಿನೇಂದ್ರಭಕ್ತಸೆಟ್ಟಿ ತಳವಾರನಾಯಕನ ಮುಖವನ್ನು ನೋಡಿ ಗುಂಪಿನವರೆಲ್ಲರಿಗೂ ಕೇಳಿಸುವಹಾಗೆ ಗಂಭೀರಧ್ವನಿಯಿಂದ ಹೀಗೆ ಹೇಳತೊಡಗಿದನು : ೧೧೫. "ಪಟ್ಟಣದಲ್ಲಿ ಕಳೆದುಹೋದದ್ದೇನು ? ಕಳ್ಳ ಯಾರು ? ಕದ್ದುತಂದ ಧನ

ಪುರದೊಳಗೆ ಕೆಟ್ಟುದೇಂ ತ
ಸ್ಕರನಾವಂ ಕಳ್ದುತಂದ ಧನವಮಾವುದು ನಿ
ಷ್ಠುರತನದಿಂದೀ ಪೆರ್ವಡೆ
ವೆರಸು ಮಹಾನೆರವಿವೆರಸು ಕಟ್ಟಾಳ್ತನದಿಂ ೧೧೬

ಗದ್ಯ॥ ಪರಿತಂದು ಪೊಕ್ಕಱಸುವೊಡೆನ್ನಬೀಡು ಕೊಟ್ಟಮಲ್ಲದು ನೀನಿಂದು ಕಟಿಲೆಯಂ ತಿಂದ ಪಸುವಿನಂತಾನುಂ ಮದ್ದುಗುಣಿಕೆಯಂ ತಿಂದ ಮಾನಿಸನಂತಾನುಂ ಮಯ್ಯಱಿಯದೆನ್ನೊಡವೆ ಯನೆನ್ನಲ್ಲಿಗೆ ತರ್ಪ ಬಡಸಾದುರುಷಿಯಂ ಕಳ್ಳನೆಂದು ಬೆನ್ನಟ್ಟಿದೆಯಿಂತೀ ಸಾಧು ತಪಸ್ವಿ ನಿಶ್ಚಯಂ ಕಳ್ಳನಪ್ಪೊಡೆ ಮತ್ತೊಂದು ದೆಸೆಗೆ ಪೋಗದೆನ್ನಬೀಡನೇಕೆ ಪುಗುವನದಱಿಂದಮಱಿಯ ಲ್ವೇಡಾ ೧೧೭

ಪಿರಿದುಂ ಕಾಲಂ ನೀನೀ
ಪುರಮಂ ಜೀಯೆನಿಸಿ ಬುದ್ಧಿಗಂ ತೇಜಕ್ಕಂ
ಬಿರುದಿಂಗಂ ಪೆಂಪಿಂಗಂ
ಕರಮೊಳ್ಪಿದನೆನಿಸಿ ರಕ್ಷಿಸಿದೆಯಿನ್ನೆವರಂ ೧೧೮

ಗದ್ಯ॥ ಮುನ್ನಮಿಂತಪ್ಪ ನಿರ್ಬುದ್ಧಿತನಮಿಲ್ಲ ನಿನ್ನಂತಪ್ಪ ಬುದ್ಧಿವಂತರುಂ ಪೆರ್ವಯ್ತಂ ಗೊಂಡರಂತೆ ಬಡಸಾದುಮಂ ಕಳ್ಳನೆಂದು ಬೆನ್ನಟ್ಟಿ ಬಂದುದಕ್ಕೆಮಗೆ ಪಿರಿದುಂ ವಿಸ್ಮಯಮಾದಪು ದೆಂಬುದುಂ ಸೆಟ್ಟಿಯ ಮಾತಿಂಗೆ ತಳಾಱನಾಯಕಂ ಬೆಱಗಾಗಿ ತನ್ನೊಳಿಂತೆಂದಂ ೧೧೯

ಯಾವುದು ? ಕ್ರೌರ್ಯದಿಂದ, ಈ ದೊಡ್ಡ ಸೈನ್ಯವನ್ನು ಕರೆದುಕೊಂಡು ಮಹಾ ಜನ ಸಮೂಹದೊಡನೆ ಬಹಳ ಶೌರ್ಯದಿಂದ ಓಡಿಬಂದೆ ೧೧೬. ಇಲ್ಲಿ ಹೊಕ್ಕು ಹುಡುಕಲು ನನ್ನ ಬೀಡು ಕಳ್ಳರ ಕೊಟ್ಟವಲ್ಲ. ನೀನು ಈ ಹೊತ್ತು ಬಿದಿರ ಕುಡಿಯನ್ನು ತಿಂದ ಹಸುವಿನಂತೆ, ಮದ್ದುಗುಣಿಯನ್ನು ಮೆದ್ದ ಮನುಷ್ಯರಂತೆ ಮೈಮೇಲೆ ಎಚ್ಚರವಿಲ್ಲದೆ, ನನ್ನ ಒಡವೆಯನ್ನು ನನ್ನಲ್ಲಿಗೆ ತಂದ ಈ ಬಡ ಸಾಧುವನ್ನು, ಋಷಿಯನ್ನು, ಕಳ್ಳನೆಂದು ಹೇಳಿ ಬೆನ್ನಟ್ಟಿಬಂದೆ. ನೀ ಹೇಳುವಂತೆ ಈ ಸಾಧು ನಿಜವಾಗಿ ಕಳ್ಳನೇ ಆಗಿದ್ದಪಕ್ಷದಲ್ಲಿ ಬೇರೊಂದು ದಿಕ್ಕಿಗೆ ಹೋಗದೆ ನನ್ನ ಬೀಡನ್ನೇ ಏಕೆ ಹೊಗುತ್ತಾನೆ ? ಅದರಿಂದ ನೀನಂ ತಿಳಿಯಬೇಡವೆ ? ೧೧೭. ಬಹಳ ಕಾಲದಿಂದ ನೀನು ಈ ಪಟ್ಟಣವನ್ನು ಇಲ್ಲಿಯತನಕ ಸುರಕ್ಷಿಸಿದೆ. ಎಲ್ಲರೂ ಒಪ್ಪಿ ಮೆಚ್ಚುವಂತೆ ಬುದ್ಧಿ, ತೇಜಸ್ಸು, ಬಿರುದು, ಪೆಂಪು, ಎಲ್ಲದರಲ್ಲಿಯೂ ನೀನು ಶ್ರೇಷ್ಠನೆನಿಸಿಕೊಂಡೆ ೧೧೮. ಹಿಂದೆ ನಿನಗೆ ಇಂಥ ಬುದ್ಧಿ ಹೀನತೆ ಇರಲಿಲ್ಲ, ನಿನ್ನಂಥ ಬುದ್ಧಿವಂತರು ಕೂಡ ಬಡಸಾಧುವನ್ನು ಕಳ್ಳನೆಂದು ಬೆನ್ನಟ್ಟಿ ಬಂದದ್ದಕ್ಕೆ ನಮಗೆ ಬಹಳ ಆಶ್ಚರ್ಯವಾಗುತ್ತಿದೆ." ಎಂದು ಹೇಳಲು ಸೆಟ್ಟಿಯ ಮಾತಿಗೆ ತಳವಾರ ನಾಯಕನು ಆಶ್ಚರ್ಯಪಟ್ಟು ಹೀಗೆ ಯೋಚಿಸಿದನು : ೧೧೯. "ಈ

ಈ ವೈಶ್ಯೋತ್ತಮನಪ್ಪೊಡೆ
ಕೇವಳಮೇ ಬುದ್ಧಿಯೆಡೆಗೆ ನೂರ್ಮಡಿ ಮಿಕ್ಕಂ
ದೇವೇಶನುಮಂ ಬಗೆವೊಡೆ
ಭೂವಿನುತಂ ಕಳ್ಳನಪ್ಪವಂಗೆಱಗುವನೇ ೧೨೦

ಅನುಪಮಗುಣಿಯೆಂದಸ್ಮ
ಜ್ಜನಪಂ ಮೊದಲಾಗೆ ಕೂರ್ಮೆಯಿಂ ಕೈಮುಗಿವಂ
ಜಿನಭಕ್ತ ಸೆಟ್ಟಿಗೆಂದೊಡೆ
ಜಿನಭಕ್ತಂ ಕಳ್ಳನಪ್ಪವಂಗೆಱಗುವನೇ ೧೨೧

ಗದ್ಯ॥ ಅಂತಲ್ಲದೊಡಂ ೧೨೨

ಈತಂ ತಸ್ಕರನಪ್ಪೊಡೆ
ಭೀತಿಯನತ್ತಿತ್ತಲೋಡುಗಲ್ಲದೆ ದಿಟಮಿಂ
ತೀತನ ಬೀಡಂ ಪುಗುವನೆ
ಮಾತೇನೀ ಸಾಧು ಕಳ್ಳನಲ್ಲಂ ಶುದ್ಧಂ ೧೨೩

ಗದ್ಯ॥ ಎಂದಿದೆಲ್ಲಮೆನ್ನ ನಿರ್ಬುದ್ಧಿತನಮೆಂದು ತಳಾಱ ನಾಯಕಂ ಸಿಗ್ಗಾಗಿ ಬಂದ ಬಟ್ಟೆಯನೆ ಮಗುಟ್ದುಸಿರದೆ ಪೋದಂ ; ಪೋಪುದುಂ ನೆರೆದ ನೆರವಿಯೆಲ್ಲಂ ತಮ್ಮೊಳಿಂತೆಂದರ್ ೧೨೪

ವೈಶ್ಯಶ್ರೇಷ್ಠನಾದರೋ ಬುದ್ಧಿಯಲ್ಲಿ ಸಾಮಾನ್ಯನಲ್ಲ; ಯೋಚಿಸಿನರೆ ದೇವೇಂದ್ರನಿಗೂ ನೂರುಪಟ್ಟು ಹೆಚ್ಚು. ಈ ಲೋಕದ ಹೊಗಳಿಕೆಗೆ ಪಾತ್ರನಾದವನು ಕಳ್ಳನಾದವನಿಗೆ ಸೋತು ನಮಸ್ಕರಿಸುತ್ತಾನೆಯೆ ? ಅನುಪಮನಾದ ಗುಣಶಾಲಿಯೆಂದು ನನ್ನ ರಾಜನು ಮೊದಲುಗೊಂಡು ಪ್ರೀತಿಯಿಂದ (ಜಿನಭಕ್ತಸೆಟ್ಟಿಗೆ) ಕೈಮುಗಿಯುವನು, ಎಂದಮೇಲೆ ಇಂಥ ಜಿನಭಕ್ತನು ಕಳ್ಳನಿಗೆ ಸೋಲುವನೆ ? ೧೨೧. ಹಾಗಲ್ಲದಿದ್ದರೂ ಈತ ಕಳ್ಳನಾದರೆ ಅಂಜಿಕೆಯಿಂದ ಆಕಡೆ, ಈಕಡೆ, ಓಡುವನೇ ಹೊರತು ನಿಜವಾಗಿ ಹೀಗೆ ಈತನ ಬೀಡಾರವನ್ನೇ ಪ್ರವೇಶಿಸುವನೆ ? ಹೆಚ್ಚೇಕೆ ? ಈ ಸಾಧು ಕಳ್ಳನಲ್ಲ ಇವನು ಶುದ್ಧನು, ೧೨೩. ಇದೆಲ್ಲ ನನ್ನ ಬುದ್ಧಿಹೀನತೆ” ಎಂದು ಯೋಚಿಸಿ ತಳವಾರ ನಾಯಕನು ನಾಚಿಕೆಪಟ್ಟು ಬಂದ ದಾರಿಯಲ್ಲಿಯೇ ಮತ್ತೆ ಮಾತನಾಡದೆ ಹಿಂತಿರುಗಿಹೋದನು. ಹೋಗುತ್ತಲೇ ಅಲ್ಲಿ ಸೇರಿದ್ದ ಗುಂಪೆಲ್ಲ ತಮ್ಮಲ್ಲಿ ಹೀಗೆಂದುಕೊಂಡರು ೧೨೪. ಸೆಟ್ಟಿಯ

ಸೆಟ್ಟಿಯ ಪೇಟಿಕ್ಕೆಯಿನೊಯ್ಯನೆ
ನೆಟ್ಟಗೆ ವೈಡೂರ್ಯರತ್ನಮಂ ತರ್ಪನನೆ
ಟ್ಟಟ್ಟಿ ಖಳನೆಂದು ಕಲ್ಲಿಂ
ದಿಟ್ಟು ಕುಕಿಲ್ದುರ್ದು ಬಱಿದೆ ನೋಡ ತಳಾಱಿಂ ೧೨೫

ಗದ್ಯ॥ ಕೊಂಡಂ ಮುನ್ನೆಂದು ತಳಾಱಿನಾಯಕನ ಪೊಲ್ಲಮೆಯನೆಲ್ಲಂ ಭೋರೆಂದುಲಿಯುತ್ತಂ ಪೋದರಿತ್ತಲ್ವಣಿಗ್ವಂಶತಿಲಕಂ ಮಾಯಾವಿಯನೇಕಾಂತಕ್ಕುಯ್ದು ಮೆಲ್ಲನಿಂತೆಂದಂ ೧೨೬

ಕರಮಲ್ಲದೆಯ್ದೆ ನಿನ್ನಂ
ಪುರವೆಲ್ಲಂ ಕೊಂಡು ಕೊನೆದು ದೇವಂ ದಿಟದಿಂ
ನಿರಂತಮಿವನೆಂದು ಬಣ್ಣಿಸು
ತಿರೆ ಗುಣಮಂ ಬಿಟ್ಟು ಕೆಟ್ಟು ಪುರಿಯೋಡಾದೈ ೧೨೭

ಗದ್ಯ॥ ಬಿತ್ತಲ್ಲದದು ಫಲದೊಳಱಿಪಿತ್ತೆಂಬ ನಾಣ್ನುಡಿಯಂತೆ ತಪದಿಂದಂ ಗುಣದಿಂದಂ ಪುರದೊಳ್ ಪಲವು ದಿವಸಂ ಮೆಚ್ಚಾಗಿರ್ದಲ್ಲಿಯೆ ಬಂಡುವೋದೈ ; ಆನೆಯನೇಱಿರ್ದಲ್ಲಿಯೆ ಬೇರಂಟೆಯಾಯ್ದೈ ; ನಿನ್ನಂ ಬಿಟ್ಟು ಪಾತಕರುಂ ವಿಶ್ವಾಸಘಾತಕರುಂ ಮಾಯಾವಿಗಳುಮಿಲ್ಲ ; ಬೆಕ್ಕು ಪಾಲನಲ್ಲದೆ ಮೇಲಣ ಬಡಿಯಂ ಕಾಣದೆಂಬಂತಿಲ್ಲಿಯ ಸುಖಮನೆ ಬಗೆದೆಯಲ್ಲದೆ ಮಱುಭವದೊಳಾದ ಮಹಾ ದುಃಖಮಂ ಬಗೆದೆಯಿಲ್ಲ. ಅನ್ಯಾಯದೊಳ್ಪಡೆದರ್ಥಂ ನಡುನೀರೊಳಿಕ್ಕಿ

ಹೇಳಿಕೆಯಿಂದ ಮೆಲ್ಲಗೆ ವೈಡೂರ್ಯ ರತ್ನವನ್ನು ನೇರವಾಗಿ ತರುವವನನ್ನು ಬೆನ್ನಟ್ಟಿದ ನೀಚನೆಂದು ಕಲ್ಲಿನಿಂದ ಹೊಡೆದು ಅಬ್ಬರಿಸಿ ತಳವಾರನು ವೃಥಾ ಮೊದಲು ಹಿಡಿದನೆಂದು ತಳವಾರನಾಯಕನ ನೀಚತನವನ್ನು ಎಲ್ಲರೂ ಗಟ್ಟಿಯಾಗಿ ಕೂಗುತ್ತಹೋದರು. ಇತ್ತ ಆ ವೈಶ್ಯವಂಶ ಶ್ರೇಷ್ಠನು ಮಾಯಾವಿಯನ್ನು ರಹಸ್ಯ ಸ್ಥಳಕ್ಕೆ ಕರೆದೊಯ್ದು ಮೆಲ್ಲನೆ ಹೀಗೆ ಹೇಳಿದನು : ೧೨೬. "ಪಟ್ಟಣಿಗರೆಲ್ಲ ನಿನ್ನನ್ನು ವಿಶೇಷವಾಗಿ ಹೊಗಳಿ ನಿಜವಾಗಿಯೂ ದೇವನೇ ಎಂದು ನಿಜವಾಗಿ ನಂಬಿಹೊಗಳುತ್ತಿರುವಾಗ ಗುಣವನ್ನು ಬಿಟ್ಟು ಕೆಟ್ಟು ಹುರಿಯುವ ಓಡಿನಂತಾದೆ ೧೨೭. ಬೀಜವಲ್ಲವೆಂಬುದು ಫಲದಲ್ಲಿ ತಿಳಿಸಿತು, ಎಂಬ ಗಾದೆಯ ಮಾತಿನಂತೆ ತಪಸ್ಸಿನಲ್ಲಿಯೂ ಗುಣದಲ್ಲಿಯೂ ಹಲವುದಿನದಿಂದ ಎಲ್ಲರಿಗೂ ಮೆಚ್ಚಿಗೆಯಾಗಿದ್ದು ಅಲ್ಲಿಯೇ ಭಂಡನಾದೆ ; ಆನೆಯನ್ನು ಏರಿದ್ದ ಕಡೆಯೇ ಬೆರಣಿ (?) ಯನ್ನು ಆರಿಸಿದೆಯಯ್ಯಾ ! ನಿನ್ನನ್ನು ಬಿಟ್ಟರೆ ಇನ್ನು ಪಾತಕರೂ ವಿಶ್ವಾಸಘಾತಕರೂ ಮೋಸಗಾರರೂ ಇಲ್ಲ. ಬೆಕ್ಕು ಹಾಲನ್ನೇ ಹೊರತು ಮೇಲಿನ ಬಡಿಗೆಯನ್ನು ಕಾಣದುಎಂಬ ಹಾಗೆ, ಇಲ್ಲಿಯ ಸುಖವನ್ನೇ ಯೋಚಿಸಿದೆಯೇ ಹೊರತು ಮುಂದಿನ ಜನ್ಮದಲ್ಲಿ ಆಗುವ ಮಹಾದುಃಖವನ್ನು ನೀನು ತಿಳಿಯಲಿಲ್ಲ. ಅನ್ಯಾಯದಿಂದ ಗಳಿಸಿದ ಧನ ನಡುನೀರಿನಲ್ಲಿ ಇಟ್ಟಿದ್ದರೂ ಕಳೆದುಹೋಗುತ್ತದೆ. ಈ ಮಹಾರತ್ನವು ನಾನು ಹಿಂದೆ

ದೊಡಂ ಕಿಡುಗುಮೆನ್ನ ಮುನ್ನ ಮಾಡಿದ ಸುಪಾತ್ರದಾನದ ಫಲದಿಂ ದೊರೆಕೊಂಡುದೀ ಮಹಾನರ್ಘ್ಯರತ್ನಂ ; ಕುತ್ಸಿತನಪ್ಪೀ ನಿನಗೆನಿತಾಪತ್ತುವಟ್ಟೊಡಂ ದುಃಖಮೆ ಕೈಸಾರ್ಗುಮಲ್ಲದೆ ರತ್ನಂ ಕೈಸಾರಲಱಿಯದು ; ಎಲ್ಲೆಡೆಯೊಳಂ ಪಕ್ಷವಿಲ್ಲದೊಂದೆ ಮಾರ್ಗದಿಂದೆಱಗಿ ಮುಗಿ ಸುರಿದೊಡಂ ನೀರ್ ಪುಣ್ಯಮಿಲ್ಲದ ಸ್ಥಾನಮಂ ಪರಿಹರಿಸಿ ಬಂದು ತೊಱೆ ಕೆಱೆ ಭಾವಿಗಳೊಳ್ ತೀವುವಂತೆ ಸಕಲವಸ್ತುಗಳುಂ ತೆರಳ್ದು ನಿರ್ಭಾಗ್ಯರಂ ಬಿಟ್ಟು ಪುಣ್ಯಾಧಿಕರೊಳ್ ನೆರೆಗುಮಂತು ತೊಱೆ ಕೆಱೆ ಭಾವಿಯ ನೀರೆಲ್ಲಂ ಕಾಲಕ್ರಮದಿಂ ಸಾರ್ದು ಸಮುದ್ರದೊಳ್ಕೂಡುವಂತೆ ಅಲ್ಪಪುಣ್ಯರ ವಸ್ತುಗಳುಂ ತೆರಳ್ದು ಮಹಾ ಪುಣ್ಯಾಧಿಕರೊಳ್ನೆಲಸುಗುಮದುಕಾರಣದಿಂ ೧೨೮

ಸಾವುದನೆ ಮಾಡಿಕೊಂಡೈ
ಕೇವಲ ವರಮಣಿಯಲ್ಲಿ ಭಾವಿಸಿ ಕೇಡಾಂ
ಶ್ರಾವಕನಪ್ಪುದಱಿಂದಂ
ಕೀವಲಿ ನಿನಗೊಂದು ಕಂಟಕಂ ಪೊಯ್ತೀಗಳ್ ೧೨೯

ಆನಱಿಯದೊಡಿಂತಕ್ಕಟ
ನೀನಾ ನಿಷ್ಠುರನ ಕೈಯ್ಯೊಳಿರಡಿಲ್ಲದೆ ಪೇ
ರಾನೆಯ ಬಾರಿಗೆ ಬಿರ್ದಾ
ಶ್ವಾನನ ತೆಱದಂತೆ ಬಾಧೆಗೊಳಗಾಗಿರ್ಪೈ ೧೩೦

ಮಾಡಿದ ಸತ್ಪಾತ್ರದಾನದ ಫಲದಿಂದ ಸಿಕ್ಕಿದೆ. ನೀಚನಾದ ನಿನಗೆ ನೀನೆಷ್ಟೇ ಕಷ್ಟಪಟ್ಟರೂ ದುಃಖವೇ ಲಭಿಸುವುದಲ್ಲದೆ ರತ್ನ ಕೈಸೇರುವುದು ಸಾಧ್ಯವಲ್ಲ. ಮಳೆ ಪಕ್ಷಪಾತವಿಲ್ಲದೆ ಎಲ್ಲ ಕಡೆಗಳಲ್ಲಿಯೂ ಒಂದೇ ರೀತಿಯಲ್ಲಿ ಸುರಿದರೂ ನೀರು ಪುಣ್ಯವಿಲ್ಲದ ಸ್ಥಳವನ್ನು ತ್ಯಜಿಸಿ ಬಿಟ್ಟು, ಒಂದು ನದಿ ಕೆರೆ, ಬಾವಿಗಳಲ್ಲಿ ತುಂಬಿಕೊಳ್ಳುವಂತೆ ಸಮಸ್ತ ವಸ್ತುಗಳೂ ನಿರ್ಭಾಗ್ಯರನ್ನು ಬಿಟ್ಟು ಹೋಗಿ ಹೆಚ್ಚು ಪುಣ್ಯವಂತರಲ್ಲಿ ಸೇರುವುವು. ಗೆಯೋಹಾ ತೊರೆಕೆರೆ ಬಾವಿಗಳ ನೀರೆಲ್ಲ ಕಾಲಕ್ರಮದಲ್ಲಿ ಹೋಗಿ ಸಮುದ್ರದಲ್ಲಿ ಸೇರುವಂತೆ ಅಲ್ಪ ಪುಣ್ಯರಾದವರ ವಸ್ತುಗಳೂ ಹೋಗಿ ಮಹಾಪುಣ್ಯಶಾಲಿಗಳಲ್ಲಿ ನೆಲಸುವುವು. ೧೨೮. ಆದಕಾರಣ ಕೇವಲ ಶ್ರೇಷ್ಠಮಾಣಿಕ್ಯದಲ್ಲಿ ಆಸೆಪಟ್ಟು ಸಾವನ್ನೇ ಮಾಡಿಕೊಂಡೆ. ನಾಚಿಕೆಯಿಲ್ಲದವನೇ, ನಾನು ಜಿನಭಕ್ತನಾದ್ದರಿಂದ, ನಿನ್ನ ಒಂದು ಕಂಟಕ ತಪ್ಪಿತು. ೧೨೯. ನನಗೆ ತಿಳಿಯದೆ ಹೋಗಿದ್ದರೆ ನೀನು ಆ ಕ್ರೂರಿಯ ಕೈಲಿ ನಿಸ್ಸಂದೇಹವಾಗಿ ಆನೆಯ ದಾಳಿಗೆ ಸಿಕ್ಕಿಬಿದ್ದ ನಾಯಿಯಂತೆ ಹಿಂಸೆಗೆ ಒಳಗಾಗುತ್ತಿದ್ದೆ. ೧೩೦. ಈ ರೂಪವನ್ನು

ಈ ರೂಪಂ ಧರಿಯಿಸಿ ಸಂ
ಸಾರಮನದಟಲೆದು ಮುಕ್ತಿವಡೆಯದೆ ಮಾಯಾ
ಧಾರಿ ಗುಣಹಾರಿ ರೌರವ
ವಾರಿಧಿಯೊಳ್ನೆಲಸಿ ನಿಲ್ವ ಬಗೆಯನೆ ಬಗೆದೈ ೧೩೧

ಈ ರತ್ನವೆಂಬುದೆಂತುಟು
ವೀರಜಿನಸ್ಮರಣೆಯಿಂದೆ ಮುಕ್ತಿಸುಖಂ ಕೈ
ಸಾರುಗುಮೆಂದೊಡೆ ಗುಣದಿಂ
ಧಾರಿಣಿಯೊಳ್ ಗಹನಮುಂಟೆ ಮತ್ತಿನ ಸಿರಿಗಳ್ ೧೩೨

ಗದ್ಯ॥ ಮತ್ತಂ "ಕಳ್ಳನೊಕ್ಕಲಾದುದಿಲ್ಲ ನಾಯಿ ಜಂಗುಳಿಯಾದುದಿಲ್ಲೆಂ"ಬ ನಾಣ್ನುಡಿಯುನ ಱಿದೆಯಿಲ್ಲಕ್ಕುಂ ; ಪುಣ್ಯಮಿಲ್ಲದೆ ಬೆವಸಾಯದಿಂ ಸಿರಿಯಕ್ಕುಮೆಂದೆಯಪ್ಪೊಡೆ ನೆತ್ತಿ ತಱಿಂಟಾಗೆ ಪುಳ್ಳಿಯನಡಕುವ ಬಡವರ್ಗಂ ಬಟ್ಟೆಗಟ್ಟಿ ಬಡಿವ ಬೇಡರ್ಗಂ ಸಿರಿಯೇಕಾಗದು ? ನಡೆದೊಡೆ ತಡತಡಿಸುವ ಕುಳ್ಳಿರ್ಪೋರೊರ್ವರಂ ಮಲಂಗುವ ಕಟ್ಟಲಸರಪ್ಪರಸುಗಳ್ಗೆ ರಾಜ್ಯಶ್ರೀ ಕೈಗಣ್ಮಿ ಪೊಣ್ಮುವುದದುಕಾರಣದಿಂ ಸಿರಿಗಂ ಸೌಭಾಗ್ಯಕ್ಕಂ ಶಾಶ್ವತಮಪ್ಪ ಸುಖಕ್ಕಂ ಜಿನಪೂಜೆಯುಂ ಸುಪಾತ್ರದಾನಮುಂ ವಿಷಯಕಷಾಯನಿಗ್ರಹಮುಂ ಮಿಥ್ಯಾತ್ವಭೀತಿಯುಂ ಜೀವದಯೆಯುಂ ಮುಖ್ಯಂ. ೧೩೩

ಧರಿಸಿಕೊಂಡು ಸಂಸಾರವನ್ನು ತಿರಸ್ಕರಿಸಿ ಮೋಕ್ಷವನ್ನು ಪಡೆದುಕೊಳ್ಳದೆ ಮಾಯಾವಿಯಾಗಿ ಗುಣಹೀನನಾಗಿ ರೌರವ ಸಮುದ್ರದಲ್ಲಿ ನೆಲೆಯಾಗಿ ನಿಲ್ಲುವ ಯೋಚನೆಯನ್ನೇ ಮಾಡಿದೆ. ೧೩೧. ಈ ರತ್ನವೆಂಬುದು ಎಷ್ಟು ? (ಇದರ ಮಹತ್ವವೇನು ?) ವೀರಜಿನಸ್ವಾಮಿಯ ಸ್ಮರಣೆಯಿಂದ ಮುಕ್ತಿಸುಖವೇ ಲಭಿಸುತ್ತದೆಯೆಂದರೆ ಪ್ರಪಂಚದಲ್ಲಿ ಗುಣಕ್ಕಿಂತ ಮಹತ್ವವುಳ್ಳದುಂಟೇ ? ಬೇರೆಯ ಸಿರಿಯು ದೊಡ್ಡದೇ ? ೧೩೨. ಅಲ್ಲದೆ ಕಳ್ಳನು ಒಕ್ಕಲಾದುದಿಲ್ಲ. ನಾಯಿ ಎಂದೂ ಸಮೂಹವಾಗಲಿಲ್ಲ, ಎಂಬ ಗಾದೆಯನ್ನು ನೀನು ತಿಳಿದಿಲ್ಲವಾದೀತು. ಪುಣ್ಯವಿಲ್ಲದೆ ವ್ಯವಸಾಯದಿಂದ ಐಶ್ವರ್ಯವಾಗುವುದೆನ್ನುವೆಯಾದರೆ ತಲೆ ಬೋಳಾಗುವಂತೆ ಸೌದೆಯನ್ನು ಹೊತ್ತು(ಪುಳ್ಳಿ) ರಾಶಿಮಾಡುವ ಬಡವನಿಗೂ, ದಾರಿಯಲ್ಲಿ ಅಡ್ಡಗಟ್ಟಿ ಬಡಿಯುವ ಬೇಡರಿಗೂ ಐಶ್ವರ್ಯವು ಏಕಾಗುವುದಿಲ್ಲ? ನಡೆದರೆ ತಟ್ಟಾಡುವ, ಕುಳಿತಿರುವ, ಪರರನ್ನು ಆಶ್ರಯಿಸುವ, ಕಡುಸೋಮಾರಿಗಳಾದ ರಾಜರಿಗೆ ರಾಜ್ಯಲಕ್ಷ್ಮಿ ಕೈವಶವಾಗಿ ಹೊಮ್ಮುತ್ತಿರುವುದು. ಆದಕಾರಣ ಸಿರಿಸೌಭಾಗ್ಯಗಳಿಗೂ ಶಾಶ್ವತವಾದ ಸುಖಕ್ಕೂ ಜಿನಪೂಜೆಯೂ ಸತ್ಪಾತ್ರದಾನವೂ ವಿಷಯಾಭಿಲಾಷೆಯಿಂದಾದ ಕಷಾಯವನ್ನು ನಿಗ್ರಹಿಸಿಕೊಳ್ಳುವುದೂ ಮಿಥ್ಯಾಧರ್ಮದ ಭಯವೂ ಜೀವದಯೆಯೂ ಮುಖ್ಯ. ೧೩೩. ಸಮುದ್ರದ ನೀರನ್ನು ನದಿಗಳು ಧರಿಸ

ಶರಧಿಯ ನೀರಂ ನದಿಗಳ್
ಧರಿಯಿಸಲಾರ್ತಪ್ಪುವೆ ತೊಱೆಯ ನೀರಂ ಕೆರೆಗಳ್
ಧರಿಯಿಸಲಾರ್ಕುಮೆ ಬಾವಿಗ
ಳರಿದೆನಿಸುವ ತೊಱೆಯ ನೀರ್ಗಳಂ ತಾಳ್ದುಗುಮೋ ೧೩೪

ಗದ್ಯ॥ ಅಂತೆ ಮಹಾ ಪುಣ್ಯಾಧಿಕರ್ ತಾಳ್ದುವ ಸಿರಿಯಂ ಪುಣ್ಯಹೀನರಪ್ಪವರೇಸು ಮನಂ ಕುದಿದುಂ ಮಱುಗಿಯುಂ ತಾಳಲಾಱರದುಕಾರಣಂ ೧೩೫

ಧರ್ಮಮ ನೆರಪುವುದುಂ ತ
ದ್ಧರ್ಮದಿನೆಲ್ಲಾ ಸುಖಂಗಳುಂ ಸಮನಿಸುಗುಂ
ಧರ್ಮಮನೇಳಿಸಿ ಬಿಟ್ಟೊಡೆ
ಕರ್ಮದಿ ನೆವನೆವದಿನಡಸುಗುಂ ಕಡುದುಃಖಂ ೧೩೬

ಲಲನೆಯರೊಲ್ಲದೊಡಂ ಸಿರಿ
ತೊಲಗಿದೊಡಂ ಪೋಗದಟ್ಟಿ ಕುತ್ತಂ ತನ್ನೊಳ್
ನೆಲಸಿದೊಡಮಂತು ಮುನ್ನಿನ
ಕೊಲೆಯುಲೆದಪುದೆಂದು ಮಱುಗುವವರಂ ಕಾಣಾ ೧೩೭

ವನಿತೆಯ ಮೋಹದಿಂ ಸುತರ ಮೋಹದಿನಿಷ್ಟರೊಳಾದ ಮೋಹದಿಂ
ಧನಮನುಪಾರ್ಜಿಸಲ್ಮಱುಗುವಂ ಕಳವಿಂ ಧನಲಾಭಮಾದೊಡಾ
ವನಿತೆಯುಮಿಷ್ಟರುಂ ಸುತರುಮುಣ್ಬೆಡೆಯೊಳ್ ಪುದುಗಳ್ಳನೆಂದು ಭೋಂ
ಕನೆ ಕಡಿದಿಕ್ಕೆ ಪೆರ್ದೆಸೆಯೊಳಲ್ಲದವರ್ಪುದುವಾಗಲಾರ್ಪರೇ ೧೩೮

ಬಲ್ಲುವೆ ? ತೊರೆಗಳ ನೀರನ್ನು ಕೆರೆಗಳು ಧರಿಸಲು ಸಾಧ್ಯವೆ ? ಅಯ್ಯಾ, ಬಾವಿಗಳು ಅಸಾಧ್ಯವಾದ ಹೊಳೆಗಳ ನೀರನ್ನು ಧರಿಸಬಲ್ಲುವೆ ? ೧೩೪. ಹಾಗೇ ಬಹಳ ಪುಣ್ಯವಂತರಾದ ಜನ ಮಾತ್ರ ಧರಿಸುವಂಥ ಐಸಿರಿಯನ್ನು ಪುಣ್ಯಹೀನರಾದವರು ಎಷ್ಟು ಕುದಿದು ಮನಸ್ಸಿನಲ್ಲಿ ಸಂಕಟಪಟ್ಟರೂ ಧರಿಸಲಾರರು. ಆದಕಾರಣ ೧೩೫. ಧರ್ಮವನ್ನೇ ಸಂಪಾದಿಸಬೇಕು. ಆ ಧರ್ಮದಿಂದ ಎಲ್ಲಾ ಸುಖಗಳೂ ಲಭಿಸುತ್ತವೆ. ಧರ್ಮವನ್ನು ಅಸಡ್ಡೆ ಮಾಡಿ ಬಿಟ್ಟರೆ ಕರ್ಮಫಲವಾಗಿ ನಾನಾ ನೆಪಗಳಿಂದ ಬಹಳ ದುಃಖವೇ ಒದಗುತ್ತದೆ. ೧೩೬. ಲಲನೆಯರು ಒಲಿಯದಿದ್ದರೂ ಐಶ್ವರ್ಯ ತೊಲಗಿ ಹೋದರೂ ರೋಗ ತನ್ನಲ್ಲಿ ನೆಲಸಿದರೂ ಅಟ್ಟಿದರೂ ಹೋಗವು. ಆಗ ಹಿಂದಿನ ಕೊಲೆ ಬಾಧಿಸುತ್ತಿದೆಯೆಂದು ಸಂಕಟ ಪಡುವವರನ್ನು ಕಾಣೆಯಾ? ೧೩೭. ಹೆಂಗಸಿನ ಮೋಹದಿಂದ, ಮಕ್ಕಳ ಮೇಲಿನ ಮೋಹದಿಂದ, ಸ್ನೇಹಿತರ ಮೇಲಿನ ಮೋಹದಿಂದ, ಧನವನ್ನು ಸಂಪಾದಿಸಲು ಮರುಗುವವನು ಕಳ್ಳತನದಿಂದ ಧನಲಾಭವಾದರೆ ಆ ಹೆಂಡತಿಯೂ ಮಿತ್ರರೂ ಮಕ್ಕಳೂ ಅದರ ಫಲವನ್ನು ಅನುಭವಿಸುವಾಗ ಕಳ್ಳತನದಲ್ಲಿ ಪಾಲುದಾರ (ಜತೆಯ ಕಳ್ಳ)ನೆಂದು ತಟ್ಟನೆ ಕತ್ತರಿಸಲು ಆ ದೊಡ್ಡ ಕಷ್ಟದಲ್ಲಿ ಇವರೆಲ್ಲ ಪಾಲುದಾರರಾಗುವರೆ? ೧೩೮. ಆದ್ದರಿಂದ ಬೇರೆಯವರು ಬೇರೆಯೇ! ತಾನು, ತನಗೆ ಎಂದು ಅಂಜಿ

ಗದ್ಯ॥ ಅದಱಿಂ ಪೆಱರ್ಪೆಱರೆ ತಾಂ ತನಗೆಂದು ನಡುಗಿ ಪಾಪಭೀರುವಪ್ಪುದುಂ ೧೭೯

ಕಡುಗಾಯ್ದ ಪಾರೆಯೆಂತುಂ
ಸುಡಲಱಿಯದು ಸತ್ಯಮುಳ್ಳನಂ ಪುಸಿವವನಂ
ಸುಡುವುದದಱಿಂದೆ ಸತ್ಯಮ
ನುಡಿವನೆ ಸುಖಿ ಕೇಳ ದುಃಖಿ ತಾಂ ಪುಸಿವಾತಂ ೧೮೦

ಗದ್ಯ॥ ಅದು ಕಾರಣದಿಂ ಅಸತ್ಯಮೆ ದುಃಖಕ್ಕೆ ಕಾರಣಮೆಂದು ನಂಬಿ ಪುಸಿಯಂ ಬಿಡು ವುದು ೧೮೧

ಆರವರಿಸದೆ ಪಲರುಂ ಪಾ
ದರಿಗನಿವಂ ಕಷ್ಟನೆಂದು ಕುಱಿಯಂ ಕೊಲ್ವಂ
ತಿರೆ ಕೊಂದು ಪೊಲೆಯರಿಂ ಚಿ
ಚ್ಚರಮೆಟಿಸುವರಟ್ಟಿ ದೂಱುವರ್ಪೆರ್ವಡಿಯೊಳ್ ೧೮೨

ಗದ್ಯ॥ ಅದು ಕಾರಣದಿಂ ಮಹಾದುಃಖಕ್ಕೆ ಪಾರದಾರಮೆ ಮೊದಲೆಂದು ಬೆರ್ಚಿ ಪರಸ್ತ್ರೀ ಯರಂ ತಾಯಂ ಕಾಣ್ಬಂತೆ ಕಾಣ್ಬುದು ೧೮೩

ಜಿನಪತಿಯಂ ಪೂಜಿಸದೊ
ಯ್ಯನೆ ಪಂಚಾಣುವ್ರತಂಗಳಂ ತಾಳ್ದದೆ ಕಿಂ
ಮನೆ ದೇವಲೋಕ ಸುಖಮಂ
ಮನದೊಳ್ ಪಂಬಲಿಸಿ ಮಱುಗಲೇಂ ಸಮನಿಕುಮೇ ೧೮೪

ಪಾಪಭೀರುವಾಗತಕ್ಕದ್ದು. ೧೭೯. ಹೆಚ್ಚಾಗಿ ಕಾದ ಹಾರೆ ಹೇಗೂ ಸತ್ಯವಂತನನ್ನು ಸುಡಲಾರದು. ಸುಳ್ಳಾಡುವವನನ್ನು ಸುಡುತ್ತದೆ. ಆದ್ದರಿಂದ ಸತ್ಯವನ್ನು ನುಡಿಯುವವನೇ ಸುಖಿ. ಕೇಳು, ಸುಳ್ಳಾಡುವವನು ಸದಾ ದುಃಖಿ. ೧೮೦ ಆದ್ದರಿಂದ ಅಸತ್ಯವೇ ದುಃಖಕ್ಕೆ ಕಾರಣವೆಂದು ನಂಬಿ ಹುಸಿಯನ್ನು ಬಿಟ್ಟು ಬಿಡಬೇಕು. ೧೮೧. ಯೋಚಿಸದೆ ಹಲವರು ಇವನು ಹಾದರದವ, ನೀಚ, ಎಂದು ಕುರಿಯನ್ನು ಕೊಲ್ಲುವಂತೆ ಕೊಂದು ಹೊಲೆಯರಿಂದ ಕೂಡಲೆ ಎಳೆಯಿಸುವರು; ಹೆದ್ದಾರಿಯಲ್ಲಿ ಅಟ್ಟಿಸಿ ದೂರುವರು. ೧೮೨. ಆದ್ದರಿಂದ ಪರರ ಹೆಂಡಿರ ಆಸೆಯೇ ಮಹಾದುಃಖಕ್ಕೆ ಮೂಲವೆಂದು ಭಯಪಟ್ಟು, ಅವರನ್ನು ತಾಯಿಯನ್ನು ಕಾಣುವ ಹಾಗೆ ಕಾಣತಕ್ಕದ್ದು. ೧೮೩. ಜಿನಪತಿಯನ್ನು ಪೂಜೆ ಮಾಡದೆ, ಸರಿಯಾಗಿ ಪಂಚಾಣುವ್ರತಗಳನ್ನು ಧರಿಸದೆ ಸುಮ್ಮನೆ ದೇವಲೋಕಸುಖವನ್ನು ಮನಸ್ಸಿನಲ್ಲಿ ಬಯಸಿ ಹಂಬಲಿಸಿ ಮರುಗಿದರೆ ಲಭಿಸುವುದೆ? ೧೮೪. 'ನನಗೆ

ಎನಗೆ ಸುಖಮಾಗವೇಟ್ಕುಂ
ದನವರತಂ ಬಯಸುತಿರ್ಪ ಮನುಜಂ ಜಿನನಾ
ಥನನರ್ಚಿಸುವುದು ಮನದೊಳ್
ಜಿನಪದಮಂ ನೆನೆಯುತಿರ್ಪುದಿರುಳುಂ ಪಗಲುಂ ೧೪೫

ಜಿನರಂ ಪೂಜಿಸಿದಮರೇಂ
ದ್ರನ ಸುಖಮುಂ ಖೇಚರೇಂದ್ರನತ್ಯುನ್ನತಿಯುಂ
ಮನುಜೇಂದ್ರನ ವಿಭವಮುಮಾ
ವನಾದೊಡಂ ಬಯಸಿ ಮಱುಗಿದೊಡೆ ಕೊಂಡಪುದೇ ೧೪೬

ಮದದಾನೆಯನೇಱಿ ಮನೋ
ಮುದದಿಂ ಚಾಮರಮನಿಕ್ಕೆ ದಿವ್ಯಾಂಗನೆಯು
ರ್ವಿದಿತಂ ಬರ್ಪುದನೊಲ್ವೊಡೆ
ಮದನಾರಿಯ ಪಾದಪದ್ಮಮಂ ನೆನೆ ಮನದೊಳ್ ೧೪೭

ದಾನಚತುಷ್ಟಯಮಂ ಮನ
ದಾನಂದಂ ಬೆರಸು ಮಾಡದಳಿಪಿಂ ಸುಖಮಂ
ಹೀನರ್ಬಯಸುತುಮಿರ್ಪಂ
ತೇನಾ ಸುಖಮಿದಿರೊಳಿರ್ದ ಕೊಗ್ಗಿಯ ಜೇನೇಂ ೧೪೮

ಸುಖವಾಗಬೇಕು' ಎಂದು ಯಾವಾಗಲೂ ಬಯಸುತ್ತಿರುವ ಮನುಷ್ಯನು ಜಿನನಾಥನನ್ನು ಪೂಜಿಸಬೇಕು. ಹಗಲೂ ರಾತ್ರಿಯೂ' ಮನಸ್ಸಿನಲ್ಲಿ ಜಿನಪಾದಗಳನ್ನು ಧ್ಯಾನಿಸುತ್ತಿರಬೇಕು. ೧೪೫. ಜಿನರನ್ನು ಪೂಜಿಸಿದ ದೇವೇಂದ್ರನ ಸುಖವನ್ನೂ ಖೇಚರೇಂದ್ರನ ಔನ್ನತ್ಯವನ್ನೂ ಮಾನವರಾಜನ ವೈಭವವನ್ನೂ ಯಾವನಾದರೂ ಬಯಸಿ ಕುದಿದರೆ ಸಿಕ್ಕುವುದೆ ? ೧೪೬. ಮದ್ದಾನೆಯನ್ನು ಹತ್ತಿ ಮನಸ್ಸಿನ ಆನಂದದಿಂದ ದೇವಸ್ತ್ರೀಯರು ಚಾಮರ ಬೀಸುತ್ತಿರಲು ಪ್ರಕಟವಾಗಿ ಬರುವುದಕ್ಕೆ ಆಸೆಪಟ್ಟರೆ ಮನ್ಮಥವೈರಿಯಾದ ಜಿನೇಶ್ವರನನ್ನು ಮನಸ್ಸಿನಲ್ಲಿ ಧ್ಯಾನಿಸು. ೧೪೭. ನಾಲ್ಕು ದಾನಗಳನ್ನೂ ಸಂತೋಷದಿಂದ ಮಾಡದೆ, ಆಸೆಯಿಂದ ಸುಖವನ್ನು ಬಯಸುತ್ತ ಇದ್ದರೆ ಹೀನಜನಕ್ಕೆ ಸಿಕ್ಕಲು ಆ ಸುಖವೆಂಬುದು ಸುವಾಸನೆ ಕಟ್ಟಿದ ಬೇನೆ? ೧೪೮:

ಮನವೊಸೆದನ್ನಮನುತ್ತಮ
ನೆನಿಸುವ ಜಿನಮುನಿಗೆ ಕುಡದೆ ಬಯಸಿ ಜಿನೇಂದ್ರಾ
ರ್ಚನೆಯಂ ಮಾಡದೆ ಸುಖಮಂ
ಮನದೊಳ್ ಬಯಸಿದೊಡೆ ಕೂಡಲಱಿಗುಮೆ ಧರೆಯೊಳ್ ೧೪೯

ಶೀಲವ್ರತಮಂ ತಾಳ್ದದೆ
ಮೇಲೆನಿಸುವ ಪಾತ್ರದಾನಮಂ ಮಾಡದೆ ಸ
ಲ್ಲೀಲೆಯಿನಿಂದ್ರನ ಸಿರಿಯಂ
ಪಾಲಿಸಲೆಲೆ ಮರುಳೆ ಬಾರದವನೀತಳದೊಳ್ ೧೫೦

ಜಳನಿಧಿಪರಿವೃತಧಾತ್ರೀ
ತಳಮಂ ಬೆಸಕೈಸಿಕೊಳ್ವೊಡಂ ಕಪ್ಪುರದಂ
ಬುಲಮಂ ಮಾಣದೆ ಮೆಲ್ವೊಡ
ಮಳಿಪಿಲ್ಲದೆ ಪೂಜಿಸಿಂದ್ರವಂದ್ಯನ ಪದಮಂ ೧೫೧

ಸ್ಮರಸುಖಮಂ ಸಲಿಸುವ ಸೌಂ
ದರಿಯರೊಳೊಡಗೂಡಿ ಲೀಲೆಯಿಂದಿರ್ಪೊಡಮಂ
ಬರಚರರಾಜ್ಯಶ್ರೀಯಂ
ಧರಿಯಿಸುವೊಡಮಲಸದರ್ಚಿಸರ್ಹತ್ಪದಮಂ ೧೫೨

ಶ್ರೇಷ್ಠನಾದ ಜಿನಮುನಿಗೆ ಉತ್ತಮವಾದ ಅನ್ನವನ್ನು ಕೊಡದೆ, ಆಸೆಯಿಂದ ಜಿನೇಂದ್ರ ಪೂಜೆಯನ್ನು ಮಾಡದೆ, ಮನಸ್ಸಿನಲ್ಲಿ ಸುಖವನ್ನು ಬಯಸಿದರೆ ಲೋಕದಲ್ಲಿ ಲಭಿಸುವುದು ಶಕ್ಯವೆ? ೧೪೯. ಶೀಲವ್ರತಗಳನ್ನು ಆಚರಿಸದೆ ಶ್ರೇಷ್ಠವಾದ ಸತ್ಪಾತ್ರ ದಾನವನ್ನು ಮಾಡದೆ, ಸುಲಭವಾಗಿ ಇಂದ್ರನ ಸಿರಿಯನ್ನು ಪಡೆಯಲು ಈ ಲೋಕದಲ್ಲಿ ಸಾಧ್ಯವಲ್ಲ. ೧೫೦ ಸಮುದ್ರ ಸುತ್ತುಗಟ್ಟಿರುವ ಭೂಮಂಡಲವನ್ನು ಅಧೀನ ಮಾಡಿಕೊಳ್ಳಬೇಕಾದರೂ ಕರ್ಪೂರ ತಾಂಬೂಲವನ್ನು ತಪ್ಪದೆ ಮೆಲ್ಲುತ್ತಿರಬೇಕಾದರೂ ಇಂದ್ರವಂದ್ಯನಾದ ಜಿನೇಶ್ವ ರನ ಪಾದಗಳನ್ನು ಯಾವ ಆಸೆಯೂ ಇಟ್ಟುಕೊಳ್ಳದೆ ಪೂಜೆ ಮಾಡು ೧೫೧. ಕಾಮ ಸುಖವನ್ನುಕೊಡುವ ಸುಂದರಿಯರೊಡನೆ ವಿನೋದದಿಂದ ಓಲಾಡುತ್ತಿರಲು ಬಯಸುವೆ ಯಾದರೆ, ಖೇಚರ ರಾಜ್ಯಲಕ್ಷ್ಮಿಯನ್ನು ಹೊಂದುವೆಯಾದರೆ, ಅರ್ಹತರ ಪಾದಗಳನ್ನು ಪೂಜಿಸು. ೧೫೨ ಯಥಾವಾಗಲೂ ದುಃಖವೇ ತಿಳಿಯದ ಹಾಗೆ ಮಕ್ಕಳು, ಸಮಸ್ತಮಿತ್ರರು,

ಎಂದುಂ ದುಃಖಮನಱಿಯದೆ
ನಂದನರೊಳ್ ಸಕಲ ಮಿತ್ರರೊಳ್ ಬಾಂಧವರೊಳ್
ತಂದೆಯೊಳಿಟ್ಟೆಯೊಳೊಡನೋ
ತೊಂದಿರ್ಪೊಡೆ ಪೂಜಿಸಾಗಳುಂ ಜಿನಪದಮಂ ೧೫೩

ಮಲಯಜಮಂ ಪೂಸಿ ತಳ
ತ್ತಳಿಸುವ ಚೆಂಬೊನ್ನರತ್ನಾಭರಣಮನು
ಜ್ವಳಮಾಗೆ ತೊಟ್ಟು ಸುಖಮಿರ
ಲೆಳಸುವೊಡಂತನ್ನದಾನಮಂ ಮಾಡೊಳ್ಪಿಂ ೧೫೪

ಚೀನಮಹಾಚೀನಂಗಳ
ನಾನಂದದಿನುಟ್ಟು ಪೂಸಿ ಪೊಸ ಕತ್ತುರಿಯಂ
ಮಾನವರೊಳಧಿಕಮೆನಿಸುವೊ
ಡಾನಂದದಿನೊಸೆದು ಪೂಜಿಸರ್ಹತ್ಪದಮಂ ೧೫೫

ತನ್ನಂ ತಪದಿಂ ನೋಯಿಸ
ದುನ್ನತಿಯಂ ದಿವ್ಯಭೋಗಮಂ ಬಯಸುವ ಗಾಂ
ಪಂ ನೆಱೆ ಪೋಲ್ಕುಂ ಸಾಲಿಸ
ದಿನ್ನಳಿಪಿಂ ಬಡ್ಡಿವೇಡಿ ಮಱುಗುವ ಮರುಳಂ ೧೫೬

ಬಾಂಧವರು, ತಂದೆ, ಇವರಲ್ಲಿ ಹೊಂದಿಕೊಂಡು ಇರಬೇಕೆಂದಿದ್ದರೆ ಜಿನಪಾದಗಳನ್ನು ಯಾವಾಗಲೂ ಪೂಜಿಸು. ೧೫೩. ಶ್ರೀಗಂಧವನ್ನು ಹಚ್ಚಿಕೊಂಡು ಥಳತಥಸುವ ಚಿನ್ನದ ರತ್ನಾಭರಣಗಳನ್ನು ಪ್ರಕಾಶವಾಗಿ ಧರಿಸಿ ಸುಖವಾಗಿರಬೇಕಾದರೆ ಒಳ್ಳೆಯತನದಿಂದ ಅನ್ನದಾನವನ್ನು ಮಾಡು. ೧೫೪. ಚೀನಾಂಬರ ಮಹಾಚೀನಾಂಬರಗಳನ್ನು ಆನಂದವಾಗಿ ಉಟ್ಟುಕೊಂಡು ಹೊಸ ಕಸ್ತೂರಿಯನ್ನು ಲೇಪಿಸಿಕೊಂಡು ಮನುಷ್ಯರಲ್ಲಿ ಶ್ರೇಷ್ಠನೆನಿಸಿಕೊಳ್ಳ ಬಯಸುವೆಯಾದರೆ ಈಗ ಅರ್ಹಂತರ ಪಾದಗಳನ್ನು ಪ್ರೀತಿಯಿಂದ ಪೂಜೆ ಮಾಡು. ೧೫೫ ತನ್ನನ್ನು ತಪಸ್ಸಿನ ಕಷ್ಟಕ್ಕೆ ಗುರಿಪಡಿಸದೆ, ಹಿರಿಮೆಯನ್ನೂ ದಿವ್ಯಭೋಗವನ್ನೂ ಬಯಸುವ ದಡ್ಡನು ಸಾಲವನ್ನು ಕೊಡದೆ ಬಡ್ಡಿ ಕೇಳಿ ಮರುಗುವ ಹುಚ್ಚನನ್ನು ಹೋಲುತ್ತಾನೆ. ೧೫೬. ಜಿನಮತವನ್ನು ಸೇರದೆ ಜಿನಮುನಿಗಳಿಗೆ ಅನ್ನವನ್ನು ನೀಡಿ

ಜಿನಮತಮಂ ಪೊರ್ದದೆ ಜಿನ
ಮುನಿಗನ್ನಮನಿಕ್ಕಿ ಧವಳ ಜೈನಾಗಮಮಂ
ಮನದೊಳ್ ನಂಬದೆ ದೇವೇ
ಶನ ಚಕ್ರೇಶ್ವರನ ಸಿರಿಗೆ ಮಱುಗಿದೊಡುಂಟೇ ೧೫೭

ತರುಣಿಯರಿಕ್ಕೆ ಚಾಮರಮನಿರ್ಕೆಲದೊಳ್ ಕಡುಶೋಭೆವೆತ್ತು ಕು
ಳ್ಳಿರೆ ನೃಪರುಂ ಮನೋಹರೆಯರುಂ ಬುಧರುಂ ಭಟರುಂ ಕುಮಾರರುಂ
ಬಿರುದರುಮರ್ತಿಯಿಂ ಬಿಡದೆ ಕಟ್ಟಿಗೆಗಾಱಿರುಘೇಯುಘೇಯೆನು
ತ್ತಿರೆ ನೃಪಲೀಲೆಯಂ ಪಡೆವೆನೆಂಬೊಡೆ ಪೊರ್ದು ಜಿನೇಂದ್ರಧರ್ಮಮಂ ೧೫೮

ಸುರುಚಿರಮಪ್ಪರತ್ನಚಯದಿಂದೆಸೆದೊಪ್ಪುವ ದಿವ್ಯಸಿಂಹ ವಿ
ಷ್ಟರದೊಳಗುರ್ವಿನಿಂ ನೆಲೆಸಿ ರಾಜಕುಮಾರರ ಮೇಲೆ ನೀಡಿ ಕೈ
ಯೆರಡುಮನಟ್ಕಱಿಂ ಮನಕೆ ಬಂದ ವಿದಗ್ಧೆಯರೊಂದು ರೂಪಿನ
ಚ್ಚರಿಯನೆ ನೋಡುತಿರ್ಪ ಮನಮುಳ್ಳೊಡೆ ಪೊರ್ದು ಜಿನೇಂದ್ರಧರ್ಮಮಂ ೧೫೯

ಕರಿನಿಕುರುಂಬದಿಂ ಹಯನಿಕಾಯದಿನುದ್ಭಟಕೋಟಿಯಿಂ ನೆಲಂ
ಬಿರಿವಿನಮೆತ್ತಲುಂ ನೆರೆದು ನಂದನದಂತಿರೆ ಛತ್ರರಾಜಿ ತ
ಳ್ತಿರೆ ಲವಣಾಬ್ಧಿಯಂತೆ ಪಡೆ ಘೂರ್ಣಿಸೆ ವಾಸವನಂತೆ ರಾಗದಿಂ
ಸ್ಥಿರತರಮಪ್ಪೆನೆಂಬ ಮನಮುಳ್ಳೊಡೆ ಪೊರ್ದು ಜಿನೇಂದ್ರಧರ್ಮಮಂ ೧೬೦

ಶುದ್ಧವಾದ ಜೈನಾಗಮವನ್ನು ಮನಸ್ಸಿನಲ್ಲಿ ನಂಬದೆ ದೇವೇಶ್ವರ (ಇಂದ್ರ) ಚಕ್ರೇಶ್ವರರ ಐಶ್ವರ್ಯಕ್ಕೆ ಮರುಗಿದರೆ ಏನು ಫಲ? ೧೫೭. ಎರಡು ಪಕ್ಕಗಳಲ್ಲಿಯೂ ತರುಣಿಯರು ಚಾಮರ ಹಾಕುತ್ತಿರಲು ವಿಶೇಷ ಕಾಂತಿಯಿಂದ ಕುಳಿತು ಇರುವಾಗ ರಾಜರೂ ರಮಣಿಯರೂ ಪಂಡಿತರೂ ಶೂರರೂ ಯುವರಾಜರೂ ಬಿರುದು ಧರಿಸಿದವರೂ ಕೋಲುಕಾರರೂ ಸಂಭ್ರಮದಿಂದ ಉಘೇ ಉಘೇ ಎನ್ನುತ್ತಿರುವ ನೃಪಲೀಲೆಯನ್ನು ಪಡೆಯಬೇಕಾದರೆ ಜೈನಧರ್ಮಕ್ಕೆ ಸೇರು. ೧೫೮. ಸುಂದರವಾದ ರತ್ನಸಮೂಹದೊಡನೆ ಶೋಭಿಸುವ ದಿವ್ಯವಾದ ಸಿಂಹಾಸನದ ಮೇಲೆ ದರ್ಪದಿಂದ ಕುಳಿತು ರಾಜಕುಮಾರರ ಮೇಲೆ ಕೈಗಳನ್ನು ಚಾಚಿ ಪ್ರೀತಿಯಿಂದ ಮನಸ್ಸಿಗೆ ಬಂದ ಸುಂದರಿಯರ ರೂಪಾಶ್ಚರ್ಯವನ್ನೇ ನೋಡುತ್ತಿರುವ ಮನಸ್ಸು ಇದ್ದರೆ ಜಿನಧರ್ಮವನ್ನು ಸೇರು. ೧೫೯: ಆನೆಗಳ ಗುಂಪು, ಕುದುರೆಗಳ ಸಮೂಹ, ವೀರಭಟರ ಗುಂಪು, ಇವುಗಳಿಂದ ನೆಲ ಬಿರಿಯುವಂತೆ ತುಂಬಿರುವಾಗ ನಂದನವನದ ಗಿಡಗಳಂತೆ ಛತ್ರ ಸಮೂಹ ಒತ್ತಾಗಿರಲು, ಲವಣಸಮುದ್ರದಂತೆ ಸೈನ್ಯ ಘೋಷಿಸುತ್ತಿರಲು ಇಂದ್ರನ ಹಾಗೆ ಸಂತೋಷದಿಂದ ಸ್ಥಿರವಾಗಿರುವ ಮನಸ್ಸಿದ್ದರೆ ಜಿನೇಂದ್ರಧರ್ಮವನ್ನು ಸೇರು. ೧೬೦. ಕಾಮ ಸುಖವನ್ನು ಪಡೆಯಲೆಂದು ಪ್ರೇಯ

ಇನಿಯಳಮೇಲೆ ಕಾಮಸುಖಮಂ ಕೊಳಲೆಂದು ಮಲಂಗಿ ಮೆಲ್ಲನಾ
ನನ ವನಜಾತಮಂ ಕುರುಳಪಂತಿಗಳಂ ಪೊಳೆವಕ್ಷಿಯುಗ್ಮಮಂ
ಕನಕಘಟೋಪಮಸ್ತನಯುಗಂಗಳನೀಕ್ಷಿಸುತುಂ ವಿನೋದದಿಂ
ಮನಮೊಸೆದಿರ್ಪೆನೆಂಬ ಮನಮುಳ್ಳೊಡೆ ಪೊರ್ದು ಜಿನೇಂದ್ರಧರ್ಮಮಂ ೧೬೧

ಪದಪಿನೊಳೇಱುವೆಂ ಸುರಗಜೇಂದ್ರಮನಿರ್ಪೆನನಂತ ಸೌಖ್ಯದೊ
ಳ್ಪುದಿದಮರಾವತೀಪುರದೊಳಾದರದಿಂ ಬೆಸಕೈಸಿಕೊಳ್ವೆನೊ
ರ್ಮೊದರೊಳೆ ದೇವಸಂಕುಲಮನೂರ್ವಶಿಯೊಳ್ನೆರೆವೆಂ ದಿವಕ್ಕೆ ನಾಂ
ಮೊದಲಿಗನಪ್ಪೆನೆಂಬ ಮನಮುಳ್ಳೊಡೆ ಪೊರ್ದು ಜಿನೇಂದ್ರಧರ್ಮಮಂ ೧೬೨

ಒಡನೆ ಸುರಾಳಿ ದೇವ ಬೆಸನಾವುದು ಜೀಯ ಮಹಾಪ್ರಸಾದ ನಿ
ಮ್ಮಡಿ ಬೆಸಸೆಂದು ಮುಂದಿರೆ ಸುರಾಂಗನೆಯರ್ಚಪಳಾಕ್ಷಿಯರ್ಮನಂ
ಬಿಡೆ ಮೃದುವಪ್ಪ ಮುದ್ದುನುಡಿಯಿಂ ಸ್ಮರರಾಜನ ಬಯ್ಕೆಯರ್ಥಮಂ
ಕುಡೆ ಸುಖಮಿರ್ಪೆನೆಂಬ ಮನಮುಳ್ಳೊಡೆ ಪೊರ್ದು ಜಿನೇಂದ್ರಧರ್ಮಮಂ ೧೬೩

ಸುರಕುಜಮಾಗಳುಂ ಬಗೆದ ವಸ್ತುವನೀಯೆ ಮರುನ್ನಿಕಾಯಮೊ
ಪ್ಪಿರೆ ನಲಿದಾಗಳುಂ ಬಿಡದೆ ಪೊರ್ದೆ ಮರುಲ್ಲಲಿತಾಂಗಿಯರ್ನಿಜಾ
ದರದೊಳೆ ಮೆಚ್ಚುವಿಚ್ಚೆಗಳನಚ್ಚರಿಯಾಗಿರೆ ಕೂಡಿ ಭೋಗಿಪಂ
ನಿರುತಮಮೋಘಮೆಂಬ ಮನಮುಳ್ಳೊಡೆ ಪೊರ್ದು ಜಿನೇಂದ್ರಧರ್ಮಮಂ ೧೬೪

ಸಿಯ ಮೇಲೆ ಮಲಗಿ ಮೆಲ್ಲನೆ ಚಿನ್ನದ ಕೊಡಗಳನ್ನು ಹೋಲುವ ಸ್ತನಯುಗಳವನ್ನು ನೋಡುತ್ತ ಆವಳ ಮುಖ ಕಮಲವನ್ನೂ ಕುರುಳಿನ ಓಳಿಗಳನ್ನೂ ಹೊಳೆಯುವ ಕಣ್ಣುಗಳನ್ನೂ ನೋಡುತ್ತ ವಿನೋದದಿಂದ ಮನಸ್ಸಂತೋಷಪಡೆದಿರುವ ಆಸೆಯಿದ್ದರೆ ಜಿನೇಂದ್ರ ಧರ್ಮವನ್ನು ಸೇರು ೧೬೧. ದೇವಲೋಕದ ಆನೆಯನ್ನು ಉತ್ಸಾಹದಿಂದ ಹತ್ತಿ ಅನಂತ ಸೌಖ್ಯದಲ್ಲಿರುವೆನು. ಜನನಿಬಿಡವಾದ ಅಮರಾವತೀಪುರದಲ್ಲಿ ದೇವಸಂಕುಲದ ಸೇವೆ ಮಾಡಿಸಿಕೊಳ್ಳುತ್ತೇನೆ. ಉರ್ವಶಿಯೊಡನೆ ನೆರೆಯುತ್ತೇನೆ, ಸ್ವರ್ಗಕ್ಕೆ ನಾನು ಅಗ್ರಣಿಯಾಗುತ್ತೇನೆಂಬ ಮನಸ್ಸಿದ್ದರೆ ಜಿನಧರ್ಮವನ್ನು ಸೇರು. ೧೬೨. ದೇವತೆಗಳು ಒಟ್ಟಿಗೆ "ಸ್ವಾಮಿ, ಏನಪ್ಪಣೆ, ಜೀಯ, ಮಹಾಪ್ರಸಾದ, ನಿಮ್ಮಪಾದ ಬೆಸಸಬೇಕು" ಎಂದು ಮುಂದೆ ನಿಂತಿರುವಾಗ ಚಂಚಲಾಕ್ಷಿಯರಾದ ದೇವಸ್ತ್ರೀಯರು ಮನಸ್ಸು ಬಿಚ್ಚಿ ಮೃದುವಾದ ಮುದ್ದುಮಾತುಗಳಿಂದ ಮನ್ಮಥನ ಬಯಕೆಯ ಪ್ರಯೋಜನವನ್ನುಕೊಡಲು ಸುಖವಾಗಿರುವೆನೆಂಬ ಮನಸ್ಸಿದ್ದರೆ ಜಿನೇಂದ್ರ ಧರ್ಮವನ್ನು ಸೇರು. ೧೬೩ ಕಲ್ಪವೃಕ್ಷಗಳು ಯಾವಾಗಲೂ ಕೋರಿದ ವಸ್ತುವನ್ನು ಕೊಡುತ್ತಿರಲು, ಮರುತ್ತರ ಗುಂಪು ರಾಜಿಸುತ್ತಿರಲು, ಮರುತ್ತುಗಳ ಲಲಿಂತಾಗಿಯರು ಯಾವಾಗಲೂ ಸುತ್ತಲೂ ನಲಿಯುತ್ತಿರಲು ಸಂತೋಷದಿಂದ ಕೂಡಿ ಭೋಗಿಸಬೇಕೆಂಬ ಮನಸ್ಸಿದ್ದರ ಜಿನೇಂದ್ರಧರ್ಮವನ್ನು ಸೇರು. ೧೬೪. ಮೈಸೋಕಿ ಆಕರ್ಷಕವಾದ ಕಟಾಕ್ಷ ವೀಕ್ಷಣಗಳನ್ನು ಬೀರಿ ಮನಸ್ಸಿನಲ್ಲಿ ಮೋಹ

ತನುಸೋಂಕಿಂ ಸೋಂಕಿ ಸೋಲಂ ಬೆರಸು ವರಕಟಾಕ್ಷಂಗಳಿಂ ನೋಡಿ ಮೋಹಂ
ಮನದೊಳ್ಕೆ್ಕೃಗಣ್ಮಿ ಕೈಯಂ ಪಿಡಿದು ನೊಸಲಮೇಲಿಟ್ಟುಕೊಂಡಟ್ಕರಿಂ ಜೊ
ಮ್ಮನೆ ಜೋಲ್ದಂತಪ್ಪಿಕೊಂಡೊಯ್ಯನೆ ಸುರತದೊಳಾಹ್ಲಾದಮಂ ಮಾಳ್ಪ ದೇವಾಂ
ಗನೆಯರ್ಗಿನ್ನಣ್ಣ ನೀನಾಟಿಸುವೊಡೆ ಜಿನನಂ ಪೂಜಿಸುತ್ಸಾಹದಿಂದಂ ೧೬೫

ಗದ್ಯ॥ ಮತ್ತಂ ಚಂದನ ಕಾಶ್ಮೀರ ಕರ್ಪೂರಾದಿ ಸುಗಂಧದ್ರವ್ಯಂಗಳಂ ಪೂಸುವೆನೆಂಬ ಚಿತ್ತ ಮುಳ್ಳೊಡಂ, ಚೀನಮಹಾಚೀನದುಕೂಲಾದಿವಸ್ತ್ರಂಗಳನುಡುವೆನೆಂಬ ಮನಮುಳ್ಳೊಡಂ, ಹಾರಕೇಯೂರ ಕಟಕ ಕಟಿಸೂತ್ರಕುಂಡಲ ರತ್ನಮುದ್ರಿಕಾಮುಕುಟಾದ್ಯಾಭರಣಂಗಳಂ ತುಡುವೆನೆಂಬ ಮೋಹಮುಳ್ಳೊಡಂ, ಕಲ್ಯಾಣಕರಾಮೃತಾಹಾರಂಗಳನಾರೋಗಿಸುವೆನೆಂಬಬಯಕೆಯುಳ್ಳೊಡಂ, ಮೃದುಶಯ್ಯಾತಲದೊಳೊಱಗುವೆನೆಂಬಿಚ್ಛೆಯುಳ್ಳೊಡಂ, ಭೋಗೋಪಭೋಗಂಗಳ ನನವರತಮನುಭವಿಸುವೆನೆಂಬ ಬಗೆಯುಳ್ಳೊಡಂ, ಅರ್ಹಚ್ಚರಣಂಗಳಂ ಮನದರ್ತಿಯಿಂ ಪೂಜಿಸಲುಂ ಸಕಲಶಾಸ್ತ್ರದಾನಮನುತ್ಸಾಹದಿಂ ಮಾಡಲುಂ ಸುಪಾತ್ರಕ್ಕನ್ನಮನಲಸದೀಯಲುಂ ಚಾತುರ್ವರ್ಣ್ಯಕ್ಕೆ ರೋಗಾಪಹಾರಾರ್ಥಮೌಷಧದಾನಮಂ ಮಾಡಲುಂ ಸಮಸ್ತಜೀವರಾಶಿಗಳ್ಗ ಭಯದಾನಮನೀಳಿದಂಗೆಯ್ಯದೆ ಮಾಡಲುಂ ಸುಖಮನೆಯ್ದುಗುಮಲ್ಲದೆನಿಸು ಕುದಿದೊಡಂ ಕಳ್ದೊಡಂ ನೆಲನಂ ಪೊಕ್ಕೊಡಂ ಭೈರವಂ ಬೈದೊಡಂ ಬಾಯಂ ಬಿಟ್ಟೊಡಂ ಬಡಿದು

ಮೇರೆ ಮೀರಲು ಕೈಹಿಡಿದು ಹಣೆಯ ಮೇಲಿಟ್ಟುಕೊಂಡು ಪ್ರೀತಿಯಿಂದ ಜೊಮ್ಮೆಂದು ಜೋತು ಅಪ್ಪಿಕೊಂಡು ನೆಟ್ಟನೆ ಸುರತದಲ್ಲಿ ಸಂತೋಷವನ್ನು ನೀಡುವ ದೇವಾಂಗನೆಯರಿಗೆ, ಅಣ್ಣ ! ನೀನು ಆಸೆಪಡುವೆಯಾದರೆ, ಉತ್ಸಾಹದಿಂದ ಜಿನನನ್ನು ಪೂಜಿಸು. ೧೬೫. ಅಲ್ಲದೆ ಶ್ರೀಗಂಧ, ಕಾಶ್ಮೀರದ ಕರ್ಪೂರ ಮೊದಲಾದ ಸುಗಂಧಗಳನ್ನು ಹಚ್ಚಿಕೊಳ್ಳುವ ಮನಸ್ಸಿದ್ದರೆ, ಚೀನಾಂಬರಾದಿ ರೇಷ್ಮೆ ಬಟ್ಟೆಗಳನ್ನುಡುವ ಆಸೆಯಿದ್ದರೆ, ಹಾರ, ಕಟಕ (ಕಡಗ) ಸೊಂಟಪಟ್ಟಿ, ಕರ್ಣಾಭರಣ ರತ್ನದ ಉಂಗುರ, ಕಿರೀಟವೇ ಮೊದಲಾದ ಆಭರಣಗಳನ್ನು ಧರಿಸುವೆನೆಂಬ ಆಸೆಯಿದ್ದರೂ ಕಲ್ಯಾಣಕರವಾದ ಅಮೃತಾಹಾರಗಳನ್ನು ಉಣ್ಣುವ ಸಂಕಲ್ಪವಿದ್ದರೂ, ಮೆತ್ತನೆಯ ಹಾಸುಗಳ ಮೇಲೆ ಮಲಗಲು ಇಚ್ಛೆಯಿದ್ದರೂ, ಭೋಗೋಪಭೋಗಗಳನ್ನು ಸದಾ ಅನುಭವಿಸುವ ಆಸೆಯಿದ್ದರೂ ಅರ್ಹಂತರ ಚರಣಗಳನ್ನು ಮನಃಪ್ರೀತಿಯಿಂದ ಪೂಜಿಸುವುದಕ್ಕೂ ಸಕಲ ಶಾಸ್ತ್ರ ದಾನವನ್ನೂ ಉತ್ಸಾಹದಿಂದ ಮಾಡುವುದಕ್ಕೂ ಸುಪಾತ್ರರಿಗೆ ಅನ್ನವನ್ನು ಬೇಸರ ಪಡದೆ ದಾನಮಾಡುವುದಕ್ಕೂ ಚತುರ್ವರ್ಣಗಳವರಿಗೂ ರೋಗ ಪರಿಹಾರಕವಾದ ಔಷಧದಾನವನ್ನು ಮಾಡುವುದಕ್ಕೂ ಎಲ್ಲ ಜೀವ ರಾಶಿಗಳಿಗೂ ಅಭಯದಾನವನ್ನು ಮಾಡುವುದಕ್ಕೂ ಸುಖವನ್ನು ಹೊಂದುವುದಕ್ಕೂ ಶಕ್ಯನಾಗುವೆ. ಹಾಗಲ್ಲದೆ ಎಷ್ಟು ಕುದ್ದುಕೊಂಡರೂ ಭೈರವನನ್ನು ಬೈದರೂ ಬಾಯಿಬಿಟ್ಟರೂ ಬಡಿದುಕೊಂಡರೂ

ಕೊಂಡೊಡಂ ದ್ರವ್ಯಮುಳ್ಳರಂ ಪೊರ್ದಿದೊಡಂ ಕಮ್ಮರಿವಾಯ್ದೊಡಂ ಮೊಱೆಯಿಟ್ಟೊಡಂ ದೊರೆ
ಕೊಳ್ಳದು ೧೬೬

ಅದು ಕಾರಣದಿಂ ಸುಖದೊಳ್
ಪದುಳಂ ನೆಲಸಿರ್ಪೆನೆಂಬ ಮನಮುಳ್ಳೊಡೆ ಮಾ
ಣ್ಬುದು ದಾನಪೂಜೆಯೆಂಬುದ
ನೊದವಿದ ಮನದೆಱಕದಿಂದಮೋರಂತಱಿವಂ ೧೬೭

. ಗದ್ಯ॥ ಕಿಮ್ಮನೆ ಪಾಪಹೇತುಗಳೊಳ್ತೊಡರ್ದು ಪರತ್ರೆಯೊಳ್ ಸುಖಮಂ ಬಯಸುವಾತಂ
ಜೋಳವಂ ಬಿತ್ತಿ ಕಳವೆಯಂ ಬಯಸುವೆಗ್ಗನುಮಂ ಬೇವಿನಾರವೆಯನಿಟ್ಟು ಮಾವಿನಪಣ್ಣನಱ
ಸುವ ಗಾಂಪನುಮಂ ಬಿಡದುಯ್ಯಂ ಕುಟ್ಟಿ ಪದೆದಕ್ಕಿಯನಱಸುವ ಬೆಳ್ಪನುಮಂ ಮಳಲಂ ಪಿಟಿ
ದೆಣ್ಣೆಯನಱಸುವ ನಿರ್ಬುದ್ಧಿಯುಮಂ ಪೋಲ್ಕುಮಿಂತು ೧೬೮

ಪಡೆವಂ ಮೋಕ್ಷಮನೆಂಬೊಡೆ
ಕಡೆಗಣಿಸದೆ ಮಾಡು ಧರ್ಮಮಂ ದೂರ್ತಿಂದಂ
ಬಡಿದುಂ ಬೈದುಂ ಕಳ್ದುಂ
ಪಡೆವಂತಿರೆ ಮುಕ್ತಿ ಮರುಳ ಬಡವನ ಧನಮೋ ೧೬೯

ಜಿನಪತಿಗೆಱಗದೆ ಬಲ್ಲಾ
ಳ್ತನದಿಂದಂ ಮಾಡಿಕೊಳ್ವೆನೆಂಬೊಡೆ ಸುಖಮಂ
ತನಗದು ಮೊಗ್ಗಾದುದೆ ಮಾ
ವಿನಪಣ್ಣಿಂ ದೋಟಿಯಿಕ್ಕಿತೆಗೆವಂತೆ ಸುಖಂ ೧೭೦

ದ್ರವ್ಯವುಳ್ಳವರನ್ನು ಆಶ್ರಯಿಸಿದರೂ ಕಮರಿಗೆ ಹಾರಿದರೂ ಮೊರೆಯಿಟ್ಟುಕೊಂಡರೂ ಲಭಿಸದು ೧೬೬. ಆ ಕಾರಣದಿಂದ ಸುಖದಲ್ಲಿ ಕ್ಷೇಮವಾಗಿ ನೆಲಸಿರುವೆನೆಂಬ ಮನಸ್ಸು ಇದ್ದರೆ ತಿಳಿದವನು ದಾನ ಪೂಜೆಗಳನ್ನು ಹೆಚ್ಚಾದ ಪ್ರೀತಿಯಿಂದ ವಿಶೇಷವಾಗಿ ಮಾಡಬೇಕು ೧೬೭. ಸುಮ್ಮನೆ ಪಾಪಹೇತುಗಳಲ್ಲಿ ಸಿಕ್ಕಿಕೊಂಡು ಪರಲೋಕದಲ್ಲಿ ಸುಖವನ್ನು ಬಯಸುವವನು ಜೋಳವನ್ನು ಬಿತ್ತಿ ಬತ್ತವನ್ನು ಅಪೇಕ್ಷಿಸುವ ದಡ್ಡನನ್ನೂ ಬೇವಿನ ತೋಟವನ್ನು ಬೆಳಸಿ ಮಾವಿನ ಹಣ್ಣನ್ನು ಹುಡುಕುವ ದಡ್ಡನನ್ನೂ ಹೊಟ್ಟನ್ನು ಕುಟ್ಟಿ ಬಂದ ಅಕ್ಕಿಯನ್ನು ಹುಡುಕುವ ಬೆಪ್ಪನನ್ನೂ ಮರಳನ್ನು ಹಿಂಡಿ ಎಣ್ಣೆಯನ್ನು ಬಯಸುವ ಬುದ್ಧಿಹೀನನನ್ನೂ ಹೋಲುವರು ೧೬೮. ಹೀಗೆ ಮೋಕ್ಷವನ್ನು ಪಡೆಯಬೇನ್ನುವೆಯಾದರೆ ಧರ್ಮವನ್ನು ಅಸಡ್ಡೆಯಿಲ್ಲದೆ ಆಚರಿಸು. ಧೂರ್ತತನದಿಂದ ಬಡಿದು, ಬೈದು, ಕದ್ದು, ಸಂಪಾದಿಸುವುದಕ್ಕೆ, ಎಲೆಮರುಳೆ, ಮುಕ್ತಿಯೆಂಬುದು ಬಡವನ ಧನವೆ ? ೧೬೯. ಜಿನಸ್ವಾಮಿಗೆ ನಮಸ್ಕರಿಸದೆ ಪರಾಕ್ರಮದಿಂದ ಸುಖವನ್ನು ವಶ ಮಾಡಿಕೊಳ್ಳುವೆಯೆಂಬೆಯಾದರೆ ಅದು ದೋಟಿಯಿಂದ ಎಳೆದಂ ತೆಗೆಯುವ ಮಾವಿನ ಹಣ್ಣೇ ? ೧೭೦. ಪ್ರೀತಿಯಿಂದ ಸತ್ಪಾತ್ರನಿಗೆ ಅನ್ನವನ್ನು ಬೇಸರವಿಲ್ಲದೆ ಕೊಡದೆ

ಒಲವಿಂ ಪಾತ್ರಕ್ಕನ್ನಮ
ನಲಸದೆ ಕುಡದದಟನಾಗಿ ಪಡೆವಂತೆ ಸುಖಂ
ಸಲೆ ಮೊಗ್ಗಾದುದೆ ಭಾವಿಪೊ
ಡೆಲೆಗಳನುರ್ಚಿಂಗೆ ಕೊಳ್ವತುಂಬೆಯಬಾಡೇ ೧೭೧

ಜಿನಪತಿಗೆಱಗದೆ ಮುನಿಗ
ಳ್ಗನವರತಂ ಭಕ್ತಿವೆರಸು ಬೆಸಕೆಯ್ಯದೆ ಕಿಂ
ಮನೆ ತೊನೆದು ಮಾಣದರಸಾ
ಳ್ತನದಿಂ ಪುಗುವಂತು ದೇವಗತಿ ಪಾಟ್ಮನೆಯೇ ೧೭೨

ಗದ್ಯ॥ ಎನಿತು ತಾಳಮರನೇಱಿದೊಡಂ ತಲೆಗೆ ಕಾಲ್ಕೆಳಗೇಬಂತೆ ಧರ್ಮದರಿದ್ರಂಗಮೆನಿಸು
ಕುದಿದೊಡಂ ದುಃಖಮಕ್ಕುಮಲ್ಲದೆ ಸುಖಮಾಗಲಱಿಯದು ೧೭೩

ಪರಮ ಜಿನೇಶ್ವರಂ ಮುನಿ
ವರರಂ ಪೂಜಿಸದೆ ಬಿಟ್ಟು ಕಳನಂ ಪುಗುವಂ
ತಿರೆ ವೀರವೃತ್ತಿಯಿಂದಂ
ಸುರಲೋಕಮನಣ್ಣ ರಂಡೆಯಾಳ್ದಪಳಲ್ಲಳ್ ೧೭೪

ಮತ್ತಂ ಕರ್ಮಫಲಮಂ ಪೇೞ್ವೊಡೆ, ಕರಟದ ಕದಿರಂತೆ ತಿರ್ಯಗ್ಜಾತಿಯೊಳ್ ತಿಱ್ಱನೆತಿರಿದುಂ ಕಡೆಗೋಲಂತೆ ಸುಖಾಸುಖಂಗಳಂ ಸೂೞ್ಸೂೞೊಳ್ ಮನುಷ್ಯಭವದೊಳುಂಡುಂ ಕಿರಕಂ ತುೞಿ

ಶೂರನಾಗಿ ಪಡೆಯುವಂತೆ ಸೌಖ್ಯವು ಅಷ್ಟು ಸುಲಭವಾಯಿತೆ ? ಯೋಚಿಸಿದರೆ ಎಲೆಗಳ, ನುಚ್ಚಿಗೆ, ಕೊಳ್ಳುವ ತುಂಬೆಯು ತೋಟವೆ? ೧೭೧. ಜಿನಪತಿಗೆ ನಮಸ್ಕರಿಸದೆ ಮುನಿಗಳಿಗೆ ನಿತ್ಯವೂ ಭಕ್ತಿಯಿಂದ ಸೇವೆ ಮಾಡದೆ ವೃಥಾ ಅಲೆದು ರಾಜಪರಾಕ್ರಮದಿಂದ ಮುಗ್ಗುವುದಕ್ಕೆ ದೇವಲೋಕವು ಒಂದು ಹಾಳುಮನೆಯೆ ? ೧೭೨. ಎಷ್ಟು ತಾಳೆ ಮರವನ್ನು ಹತ್ತಿದರೂ ತಲೆಗೆ ಕಾಲು ಕೆಳಗೆ, ಎಂಬ ಹಾಗೆ ಧರ್ಮದರಿದ್ರನಿಗೆ ಎಷ್ಟು ಮರುಗಿದರೂ ದುಃಖವಾಗುವುದೇ ಹೊರತು ಸುಖವಾಗುವುದು ಅಸಾಧ್ಯ ೧೭೩. ಪರಮ ಜಿನೇಶ್ವರನನ್ನೂ ಮುನಿಶ್ರೇಷ್ಠರನ್ನೂ ಪೂಜಿಸದೆ, ಯುದ್ಧರಂಗವನ್ನು ಪ್ರವೇಶಿಸುವಹಾಗೆ ವೀರ ವೃತ್ತಿಯಿಂದ ಸುರಲೋಕವನ್ನು, ಹೊಗಲು ಅಣ್ಣ ! ಅದನ್ನು ರಂಡೆ ಆಳುವುದಿಲ್ಲ. ೧೭೪. ಅಲ್ಲದೆ ಕರ್ಮಫಲವನ್ನು ಹೇಳುವುದಾದರೆ ಕರಟದಲ್ಲಿನ ಕದಿರಿನಹಾಗೆ ತಿರ್ಯಗ್ಜನ್ಮದಲ್ಲಿ ಹುಟ್ಟಿ ಒಂದೇ ಸಮನಾಗಿ ಅಲೆದು, ಕಡೆಗೋಲಿನಂತೆ ಸುಖಾಸುಖಗಳನ್ನು ಸರದಿಯ ಪ್ರಕಾರ ಮನುಷ್ಯಜನ್ಮದಲ್ಲಿ ಅನುಭವಿಸಿಯೂ ಸೀಕಲನ್ನು ತುರಿಸುವಂತೆ

ಸುವಂತೆತ್ತಾನುಮೊರ್ಮೆ ರಾಜ್ಯಲೀಲೆಯೊಳಿರ್ದುಂ, ತಿರಿದುಂಬರಂತೆ ಪಲವು ಭವಕ್ಕೊರ್ಮೆ ಕರ್ಮೋಪಶಮದಿಂ ದೇವಲೋಕದೊಳಾದ ಸುಖಮನನುಭವಿಸಿಯುಂ, ಗಾಣದೊಳಿಕ್ಕಿದ ಕಬ್ಬಿನಂತೆ ನರಕದೊಳ್ ದುಃಖಂಬಟ್ಟುಂ ಬೇಸಗೆಯ ಬಿಸಿಲ್ಗಂಜಿ ಬೆಯ್ವಮರನಂ ಪೊರ್ದುವಂತಾನುಂ ಕರಡಿಗಂಜಿ ಪುಲಿಯ ಗುಹೆಯಂ ಪುಗುವಂತಾನುಂ ಬೆಲ್ಲದಮೋಹಕ್ಕೆ ಸುರಗಿಯ ಬಾಯಧಾರೆಯಂ ನೆಕ್ಕುವಂತಾನುಂ ಕಳ್ಳಂಗಂಜಿ ಬೇಡವಳ್ಳಿಯಂ ಪುಗುವಂತಾನುಂ ತೇಟಿಂಗಂಜಿ ಕಡಂದುಱುಗೂಡುಂ ಪುಗುವಂತಾನುಂ ಪುಲಿಗಂಜಿ ಪುತ್ತುವೇಱುವಂತಾನುಂ ರಕ್ಕಸಿಗಂಜಿ ನೆಗಟುಳ್ಳಮಡುವಂ ಪುಗುವಂತಾನುಂ ಸಂಸಾರದೊಳಾದ ಬಡತನದ ಕುತ್ತದ ತಿರಿಗುತ್ತದ ರಾಜಬಾಧೆಯ ನಂಟರಗಲ್ಕೆಯ ತೆಱೆಯ ಪೊಱೆಯ ಸೀತದ ವಾತದ ಬಿಸಿಲ ಕಳ್ಳರ ಬಂದಿಕಾಱರ ಪಿಸುಣರ ಧೂರ್ತರ ದೆಸೆಯಿಂದಪ್ಪ ಪೀಡೆಯ ಸಾವಿನ ನೋವಿನ ಧನದ ಹರಣದ ಪೆಂಡಿರೊಲ್ಮೆಯ ಪುರುಡಿನ ಪಸಿವಿನ ಮುಪ್ಪಿನ ಪಿರಿದಪ್ಪಪಮಾನದ ಮಹಾದುಃಖಮಂ ಕಂಡು ಮತ್ತುಂ ಮಡಿಗೆ ಜೋಳೆಯ ತಿಲ್ಲಟ ಯೆಂಬ ನಾಣ್ನುಡಿಯಂತೆ ಪಾಪಮನೆ ಪೆರ್ಚಿಸಿ ಸತ್ತು ನರಕದೊಳಾದ ಮಹಾದುಃಖಮೆಂಬಗ್ಗಿಗೆ ತಮ್ಮ ಶರೀರಮೆಂಬ ಪುಳ್ಳಿಗಳನಿಕ್ಕುವರದೇಂ ಸಾಸಿಗರೋ ೧೭೫

ರಾಜ್ಯಲೀಲೆಯಲ್ಲಿದ್ದೂ, ಎಂದಾದರೂ ಒಂದು ಸಲ ತಿರಿದು ತಿನ್ನುವವರಂತೆ, ಹಲವು ಜನ್ಮಗಳಿಗೊಂದು ಸಲ ಕರ್ಮದ ಉಪಶಮನವಾಗಿ ದೇವಲೋಕದಲ್ಲಿ ಲಭಿಸಿದ ಸುಖವನ್ನು ಅನುಭವಿಸಿಯೂ, ಗಾಣಕ್ಕೆ ಹಾಕಿದ ಕಬ್ಬಿನಹಾಗೆ ನರಕದಲ್ಲಿ ದುಃಖಪಟ್ಟು ಬೇಸಿಗೆಯ ಬಿಸಿಲಿಗೆ ಅಂಜಿ ಸುಡುವ ಮರವನ್ನು ಸೇರುವಂತೆ, ಕರಡಿಗೆ ಭಯಪಟ್ಟು ಹುಲಿಯ ಗವಿಯನ್ನು ಹೊಗುವಂತೆ, ಬೆಲ್ಲದ ಆಸೆಗೆ ಕತ್ತಿಯ ಬಾಯ ಅಲಗನ್ನು ನೆಕ್ಕುವಂತೆ, ಕಳ್ಳನಿಗೆ ಹೆದರಿ ಬೇಡರಹಳ್ಳಿಯನ್ನು ಹೊಗುವಂತೆ ಚೇಳಿಗೆ ಅಂಜಿ ಕಡಂದುರಿನ ಗೂಡನ್ನು ಹೊಕ್ಕಂತೆ, ಹುಲಿಗೆ ಹೆದರಿ ಹುತ್ತದಮೇಲೆ ಹತ್ತಿದಂತೆ, ರಾಕ್ಷಸಿಗೆ ಹೆದರಿ ಮೊಸಳೆಯಿರುವ ಮಡುವನ್ನು ಹೊಗುವಹಾಗೆ, ಸಂಸಾರದಲ್ಲಿ ಆದ ಬಡತನ, ರೋಗ ಮರುಕಳಿಸಿದ ರೋಗ, ರಾಜನಕಾಟ, ನಂಟರ ಅಗಲಿಕೆ, ಮರೆಯಲ್ಲಿನ ಹೊರೆ, ಸೀತ ವಾತಗಳು, ಬಿಸಿಲು, ಕಳ್ಳರು ಬಂದಿಕಾರರು, ಚಾಡಿಕೋರರು, ಧೂರ್ತರು—ಇವರೆಲ್ಲರಿಂದ ಆಗುವ ಕಾಟ, ಸಾವು ನೋವುಗಳು, ಧನಾಪಹರಣ, ಹೆಂಡಿರ ಒಲುಮೆಯ ಸ್ಪರ್ಧೆ, ಹಸಿವು, ಮುಪ್ಪು, ಇವುಗಳ, ಹೆಚ್ಚಾದ ಅಪಮಾನದ ದುಃಖವನ್ನು ನೋಡಿ ಮಡಿಗೆ ಜೋಡಿಯ ಬಳುವಳಿಯೆಂಬ ಗಾದೆಯಂತೆ ಪಾಪವನ್ನೇ ಹೆಚ್ಚಿಸುತ್ತ, ನರಕದಲ್ಲಿ ಆದ ಮಹಾ ದುಃಖವೆಂಬ ಬೆಂಕಿಗೆ ತಮ್ಮ ಶರೀರಗಳೆಂಬ ಪುಳ್ಳೆಗಳನ್ನು ಇಕ್ಕುವವರು ಅದೇನು ಸಾಹಸಿಗರೊ ! ೧೭೫. ಜೈನಪೂಜೆಯನ್ನು ಕೆಡಿಸಿದವರು ಊಟವಿಲ್ಲದೆ, ಕಂಡವರೆಲ್ಲ

ಪೊತ್ತಿದ ನತ್ತಿಗೆ ಕಾಣದೆ
ತುತ್ತಿಲ್ಲದೆ ಬಡಿಯೆ ಜಡಿಯೆ ಕಂಡವರೆಲ್ಲಂ
ಚಿತ್ತೋತ್ಸಾಹಂಗಿಡುವ
ರ್ಮತ್ತೆನಿಸದೆ ಜೈನಪೂಜೆಯಂ ಕಿಡಿಸಿದವರ್ ೧೭೬

ಕಯ್ಯೇಟದೆ ಕಾಲೇಟದೆ
ಮೆಯ್ಯೆಲ್ಲಂ ತೊನ್ನುಗೊಂಡು ದುಃಖಂಬಟ್ಟೋ
ವೊಯ್ಯೆಂದೊಳಱುತ್ತಿರ್ಪರ್
ಚರ್ಯಾದಿ ಜಿನೇಂದ್ರಧರ್ಮಮಂ ಪಟೆದವರ್ಗಳ್ ೧೭೭

ಉಣಲಿಲ್ಲದೆ ಪಸಿವಿಂ ಬಂ
ಬಲಬಾಡಿ ಮಹಾಕ್ಷುಧಾಗ್ನಿಯಿಂದಂ ಪೆಱರಂ
ಗಣದೊಳ್ ಕುಳ್ಳಿರ್ಪರ್ಧಾ
ರಿಣಿಯೊಳ್ ಮುನ್ನನ್ನದಾನಮಂ ಕಿಡಿಸಿದವರ್ ೧೭೮

ಏಕಾಕ್ಷರಾಗಿ ಮಾಣದ
ನೇಕವ್ಯಾಧಿಗಳೊಳೊಂದಿ ತೊನ್ನಿಂದಂ ತ
ಮ್ಮಾಕಾರಂಗೆಟ್ಟು ಮಹಾ
ಶೋಕಾನ್ವಿತರಪ್ಪರಮಳಪೂಜೆಯನಟೆವರ್ ೧೭೯

ಮೋಂಟಾಗಿ ಕೈಗಳೆರಡುಂ
ಗೆಂಟಾಗಿರೆ ತನಗೆ ಸಿರಿಯುಂ ಕೂಟುಂ ಕಾಲುಂ
ಕುಂಟಾಗಿ ನವೆಯುತಿರ್ಪ
ರ್ಕೆಂಟಣಿಸಿ ಮಹಾತಪಂಗಳಂ ಕಿಡಿಸಿದವರ್ ೧೮೦

ಗದರಿಸಿ ಬಡಿಯಲು, ಮನಸ್ಸಿನ ಉತ್ಸಾಹವನ್ನು ಕಳೆದುಕೊಳ್ಳುವರು. (ಪೊತ್ತಿದನತ್ತಿಗೆ ಕಾಣದೆ ?) ೧೭೬. ಜೈನಧರ್ಮವನ್ನು ದೂಷಿಸಿದವರು ಕೈಕಾಲುಗಳು ಬಿದ್ದುಹೋಗಿ ಮೈಯೆಲ್ಲ ತೊನ್ನಾಗಿ ದುಃಖಪಟ್ಟು 'ಓ ಓ' ಎಂದು ಒರಲುತ್ತಿರುತ್ತಾರೆ ೧೭೭. ಊಟಕ್ಕೆ ಗತಿಯಿಲ್ಲದೆ ಹಸಿವಿನಿಂದ ಬಂಬಲಬಾಡಿ ಮಹತ್ತಾದ ಕ್ಷುಧೆಯ ಬೆಂಕಿಯಿಂದ ಅನ್ಯರ ಅಂಗಣದಲ್ಲಿ ಕುಳಿತು ಬೇಡುವ ದುರ್ಗತಿಗೆ ಗುರಿಯಾಗುತ್ತಾರೆ-ಹಿಂದೆ ಅನ್ನದಾನವನ್ನು ಕೆಡಿಸಿದವರು ೧೭೮. ಒಕ್ಕಣ್ಣರಾಗಿ ತಪ್ಪದೆ ಅನೇಕ ರೋಗಗಳಿಗೆ ಗುರಿಯಾಗಿ ತೊನ್ನಿನಿಂದ ತಮ್ಮ ಆಕಾರವನ್ನು ಕೆಡಿಸಿಕೊಂಡು, ಪರಿಶುದ್ಧವಾದ ಜಿನಪೂಜೆಯನ್ನು ಕೆಡಿಸಿದವರು ಮಹಾ ಶೋಕಕ್ಕೆ ಗುರಿಯಾಗುವರು ೧೭೯. ಕೈಗಳೆರಡೂ ಮೋಟಾಗಿ ತನಗೆ ಐಶ್ವರ್ಯ ದೂರವಾಗಿ ಕಾಲುಕುಂಟಾಗಿ ಕೂಳಿಲ್ಲದೆ ನವೆಯುತ್ತಿರುತ್ತಾರೆ— ಮಹಾ ತಪಸ್ಸುಗಳನ್ನು ಸಿಟ್ಟಿನಿಂದ ಕೆಡಿಸಿದವರು ! ೧೮೦. ದಾನಕ್ಕೆ ಕಂಟಕವನ್ನುಂಟು

ಕುರುಡಾಗೆ ಕಣ್ಗಳೆರಡುಂ
ಚರಣಂಗಳ್ಪಱಿದು ಬೀೞೆ ತೊನ್ನಿಂದಂ ಮೈ
ಕರಗಿ ಕಡುದುಃಖದಿಂದಂ
ತಿರಿವರ್ದಾನಾಂತರಾಯಮಂ ಮಾಡಿದವರ್ ೧೮೧

ನುಡಿವೊಡೆ ನಾಲಗೆ ಪೊರಳದೆ
ಕಿಡುಗುಂ ನೆಱೆ ಮೂಗನಾಗಿ ನವೆಗುಂ ನಯಮಂ
ನುಡಿದೊಡಮದು ಕೊಂಕಕ್ಕುಂ
ಜಡಿವರ್ಪೆಱರೋದಿನಂತರಾಯದ ಫಲದಿಂ ೧೮೨

ಬಗೆದದುಕೊಡದು ಕೂಡಿದ
ಬಗೆಯುಂ ಕಿಡುಗೇನನೆಂದೊಡಂ ಕಡುಗಟಪಂ
ಜಗದೊಳಿವನೆಂದು ನೂಂಕುವ
ರಗಣಿತ ಶಾಸ್ತ್ರಾಂತರಾಯ ಕರ್ಮದ ಫಲದಿಂ ೧೮೩

ಸಿರಿಯೆಲ್ಲಂ ಮಂಜಿನವೋಲ್
ಕರಗುಗು ಕಡುದುಃಖಮೊರ್ಮೆಗೊರ್ಮೆಗೆ ಕರಮು
ಬ್ಬರಮಕ್ಕುಂ ತಿರಿದೊಡೆ ಕೂೞ್
ದೊರೆಕೊಳ್ಳದು ಪೂಜೆಯಂತರಾಯದ ಫಲದಿಂ ೧೮೪

ಮಾಡಿದವರು ಕಣ್ಣುಗಳೆರಡೂ ಕುರುಡಾಗಿ ಕಾಲುಗಳು ಹರಿದುಬೀಳಲು, ತೊನ್ನಿನಿಂದ ಮೈ ಕರಗಿಹೋಗಿ ಬಹಳ ದುಃಖದಿಂದ ತಿರುಪೆಯೆತ್ತುತ್ತಿರುತ್ತಾರೆ ೧೮೧. ವಿದ್ಯೆಗೆ ಅಡ್ಡಿಯನ್ನುಂಟುಮಾಡಿದವರು ಮಾತನಾಡುವುದಕ್ಕೆ ನಾಲಗೆ ಹೊರಳದೆ, ಪೂರ್ತಿ ಮೂಗರಾಗಿ ಕೆಡುತ್ತಾರೆ ; ಕೃಶರಾಗುತ್ತಾರೆ. ಅವರು ನ್ಯಾಯವನ್ನೇ ಹೇಳಿದರೂ ಅದು ಕೊಂಕಾಗುತ್ತದೆ. ಜನ ಗದರಿಸುತ್ತಾರೆ ಇತರರ ಓದಿಗೆ ಅಂತರಾಯ ಮಾಡುವುದರ ಫಲ ಅದು, ೧೮೨. ಇನ್ನು ಶಾಸ್ತ್ರಾಭ್ಯಾಸಕ್ಕೆ ಭಂಗವನ್ನುಂಟುಮಾಡಿದ ಫಲದಿಂದ ಸಂಕಲ್ಪಿಸಿದ್ದು ನೆರವೇರುವುದಿಲ್ಲ. ನೆರವೇರಿದ ಸಂಕಲ್ಪವೂ ಹಾಳಾಗುವುದು. ಏನು ಹೇಳಿದರೂ ಜಗತ್ತಿನಲ್ಲಿ ಇವನು ಬಹಳ ಹರಟುವವನು ಎಂದು ಹೊರಕ್ಕೆ ನೂಕುವರು ೧೮೩. ದೇವರ ಪೂಜೆಗೆ ಕಂಟಕವನ್ನೊಡ್ಡಿದ ಫಲದಿಂದ ಐಶ್ವರ್ಯವೆಲ್ಲ ಮಂಜಿನಹಾಗೆ ಕರಗಿ ಹೋಗುವುದು. ಒಂದೊಂದು ಸಲವೂ ಮಹಾ ದುಃಖ ಬಹಳ ಉಬ್ಬರವಾಗುತ್ತದೆ; ಹೆಚ್ಚುತ್ತಲೇ ಇರುವುದು. ತಿರುಪೆ ಬೇಡಿದರೆ ಕೂಳು ಸಿಕ್ಕುವುದಿಲ್ಲ ೧೮೪. ಹಿಂದೆ ದಾನವನ್ನು ಕೆಡಿಸಿದ

ತರುವಲಿಯಾಗಿರ್ಪರ್ನಿ
ಷ್ಠುರದುಃಖಮನೆಯ್ದುವರ್ದರಿದ್ರತೆಯಿಂದಂ
ಪಿರಿದಪ್ಪ ನೋವನೆಯ್ದುವ
ರೆರಡಿಲ್ಲದೆ ದಾನದರ್ಥಮಂ ಕಳ್ದವರ್ಗಳ್ ೧೮೫

ಸ್ಮರತಾಪಮೊದವೆ ಭೋಗಂ
ತರಮಕ್ಕುಂ ನೋಡೆ ಕಂಡರೆಲ್ಲಂ ಕಾಯ್ವರ್
ತಿರಿದುಣ್ಬರ್ಮಱುಭವದೊಳ್
ಕರಮಲ್ಲದೆ ಪೂಜೆಯರ್ಥಮಂ ಕಳ್ದವರ್ಗಳ್ ೧೮೬

ನಾಯಾಗಿ ಪುೞಿತು ಕಂಡ
ರ್ಪೋಯೆಂದಿಡೆ ಬೆಂದು ನೊಂದು ದುಃಖಾನಲನಿಂ
ಬಾಯಂ ಬಿಟ್ಟಿರದೆಲ್ಲಿಯು
ಮಾಯಾಸಂಬಡುವರಘಸಮನ್ವಿತರಪ್ಪರ್ ೧೮೭

ಗದ್ಯ॥ ಮತ್ತಂ ಮಾಯಾವಿ ನಾಯಾಗಿಯುಂ ಮಹಾಮಾಯಾವಿ ಮೊಲನಾಗಿಯುಂ ಕೋಪಿ ಪುಲಿಯಾಗಿಯುಂ ಮಹಾಕೋಪಿ ಸಿಂಹನಾಗಿಯುಂ ಲೋಭಿಯೆಯ್ಯಾಗಿಯುಂ ಮಹಾಲೋಭಿ ಚಮರೀಮೃಗಮಾಗಿಯುಂ ಮಾನಕಷಾಯಿ ಮೀನಾಗಿಯುಂ ಮಹಾಮಾನಕಷಾಯಿ ಪಾವಾಗಿಯುಂ ರೌದ್ರಂ ಭೇರುಂಡನಾಗಿಯುಂ ಮಹಾರೌದ್ರಂ ಶರಭನಾಗಿಯುಂ ಗುಣದೂಷಕಂ ಪಂದಿ

ಪಾಪಿಗಳು ತಬ್ಬಲಿಗಳಾಗಿರುತ್ತಾರೆ ; ದಾರಿದ್ರ್ಯದಿಂದ ಕ್ರೂರವಾದ ದುಃಖವನ್ನು ಅನುಭವಿಸುವರು. ದಾನದ ದ್ರವ್ಯವನ್ನು ಕದ್ದವರು ಏನೇನೂ ಸಂಶಯವಿಲ್ಲದೆ ಮಹತ್ತರವಾದ ನೋವನ್ನು ಅನುಭವಿಸುವರು ೧೮೫. ಪೂಜೆಗಾಗಿ ಇಟ್ಟಿದ್ದ ದ್ರವ್ಯವನ್ನು ಕದ್ದವರು ಮುಂದಿನ ಜನ್ಮದಲ್ಲಿ ತಿರುಪೆಯಿಂದ ಜೀವಿಸುವರು. ಕಂಡವರೆಲ್ಲ ಅವರ ಮೇಲೆ ಕೋಪಗೊಳ್ಳುವರು. ಅವರಿಗೆ ಕಾಮತಾಪವುಂಟಾದಾಗ ಭೋಗಕ್ಕೆ ಅಂತರಾಯವಾಗುವುದು ೧೮೬. ಪಾಪದಿಂದ ಕೂಡಿದವರು ನಾಯಿಯಾಗಿ ಹುಟ್ಟಿ ಹುಳು ಬಿದ್ದು ಕಂಡವರೆಲ್ಲ 'ಪೋ' ಎಂದು ಹೊಡೆಯಲು ನೊಂದು ಸಂಕಟಪಟ್ಟು ದುಃಖಾಗ್ನಿಯಲ್ಲಿ ಬೆಂದು ಬಾಯಿಬಿಟ್ಟು ಗೋಳಿಡುತ್ತ ಎಲ್ಲಿಯೂ ಇರಲು ದಾರಿಯಿಲ್ಲದೆ ಆಯಾಸಪಡುತ್ತಾರೆ ೧೮೭. ಅಲ್ಲದೆ ಮೋಸಗಾರನು ನಾಯಿಯಾಗಿ, ಮಹಾಮಾಯಾವಿ ಮೊಲವಾಗಿ ಹುಟ್ಟುವರು. ಕೋಪಿಷ್ಠನು ಹುಲಿಯಾಗಿಯೂ ಮಹಾ ಕೋಪಿಯು ಸಿಂಹವಾಗಿಯೂ ಜಿಪುಣನು ಮುಳ್ಳುಹಂದಿಯಾಗಿಯೂ ಮಹಾಲೋಭಿ ಚಮರೀಮೃಗವಾಗಿಯೂ ಮಾನಕಷಾಯವುಳ್ಳವನು ಮೀನಾಗಿಯೂ ಹುಟ್ಟುವರು. ಮಹಾ ಮಾನಕಷಾಯದವನು ಹಾವಾಗಿಯೂ ರೌದ್ರನು ಭೇರುಂಡನಾಗಿಯೂ ಮಹಾ ರೌದ್ರನು ಶರಭನಾಗಿಯೂ

ಯಾಗಿಯುಂ ಕುಮಾರ್ಗಾನುರಾಗಿ ಕೋಟಿಯಾಗಿಯು ಸದ್ಧರ್ಮದ್ವೇಷಿ ಪುಲ್ಲಿಯಾಗಿಯುಂ ಜಾತಿಮದಮುಳ್ಳಂ ಬೆಕ್ಕಾಗಿಯುಂ ವಿದ್ಯಾಮದಮುಳ್ಳಂ ಗೂಬೆಯಾಗಿಯುಂ ತಪೋಮದಮುಳ್ಳಂ ನಾಯಾಗಿಯುಂ ಶ್ರೀಮದಮುಳ್ಳಂ ಮೊಸಳೆಯಾಗಿಯುಂ ರೂಪಮದಮುಳ್ಳಂ ಕಟ್ಟೆಯಾಗಿಯುಂ ಆಜ್ಞಾಮದಮುಳ್ಳಂ ತೇರಜೆಯಾಗಿಯುಂ ಪುಸಿಯುಳ್ಳಂ ಕರಡಿಯಾಗಿಯುಂ ಹಿಂಸಾನಂದಮುಳ್ಳಂ ಕುಱಿಯಾಗಿಯುಂ ಕಳವಿನೊಳ್ವ್ಯಸನಮುಳ್ಳವನೆತ್ತಾಗಿಯುಂ ಪರವಧೂಪ್ರಿಯಚಿತ್ತಂ ಕುದುರೆಯಾಗಿಯುಂ ಸಪ್ತವ್ಯಸನೋಪೇತಂ ಸೀನಾಯಾಗಿಯುಂ ದುರ್ಗುಣಪಕ್ಷಪಾತಿಗಿಡುಗನಾಗಿಯುಂ ಪುಟ್ಟಿ ಪೇಱಿನಮೇಲೆ ಕರಡೆಯೆಂಬಂತೆ ಪಿರಿದಪ್ಪ ಪಾಪಮಂ ನೆರಪಿ ನರಕದೊಳ್ ಪುಟ್ಟಿ ಪಲಕಾಲಂ ಸೈರಿಸಲ್ಬಾರದ ಮಹಾದುಃಖಕ್ಕೆ ಭಾಜನರಪ್ಪರ್ ೧೮೮

ಘುಱ್ಱೆಂದೆಣ್ಣೆಯೊಳಿಕ್ಕಿಯುಂ ತ್ವರಿತದಿಂ ಕೈಗಾಯದೋರೋರ್ವರಂ
ಗಿಱ್ಱೆಂದಾರ್ದಿದಿರಾಗಿ ಬಂದು ತಲೆ ಜೀಱೀಳೆ ಪೊಯ್ದುಗ್ರದಿಂ
ಹಱ್ಱೆಂದೇಡಿಸಿ ರಕ್ತಮಂ ಕುಡಿದು ಪೆರ್ಗೆಂಡಂಗಳಂ ಸೂಸುತುಂ
ಗಱ್ಱೆಂದೋವದೆ ತೇಗಿಯುಂ ಮಿಡಿಗಳಂ ಕುಂಟಾಗೆ ಕೊಯ್ದುಂ ಖಳರ್ ೧೮೯

ಪೆರ್ಗಲ್ಲಿಂದದಪುತ್ತುಂ
ಕರ್ಗಲ್ಲಂ ನೆರಪಿತಂದು ಬರಿಯೆಲ್ವೆಲ್ಲಂ
ನುರ್ಗಾಗಿ ಚಿಟಲ್ಚಿಟಲೆನೆ
ಕುರ್ಗುತ್ತುಂ ನೆಲದೊಳೊರಸಿ ಮೇಲ್ಕುತ್ತುತ್ತಂ ೧೯೦

ಗುಣವಂತರನ್ನು ದೂಷಿಸುವವನು ಹಂದಿಯಾಗಿಯೂ ಕುಮಾರ್ಗಪ್ರೇಮಿಯು ಕೋಳಿಯಾಗಿಯೂ ಸದ್ಧರ್ಮದ್ವೇಷಕನು ಹುಲ್ಲೆಯಾಗಿಯೂ ಜಾತಿಮದವುಳ್ಳವನು ಬೆಕ್ಕಾಗಿಯೂ ವಿದ್ಯಾಮದವುಳ್ಳವನು ಗೂಬೆಯಾಗಿಯೂ ತಪೋಮದವುಳ್ಳವನು ನಾಯಿಯಾಗಿಯೂ ಐಶ್ವರ್ಯಮದವುಳ್ಳವನು ಮೊಸಳೆಯಾಗಿಯೂ ರೂಪಮದವುಳ್ಳವನು ಕತ್ತೆಯಾಗಿಯೂ ಅಧಿಕಾರಮದವುಳ್ಳವನು ತೇರಜೆ (?) ಯಾಗಿಯೂ ಹುಸಿಯುವವನು ಕರಡಿಯಾಗಿಯೂ ಹಿಂಸೆಯಲ್ಲಿ ಆನಂದಪಡುವವನು ಸೀಳುನಾಯಿಯಾಗಿಯೂ ದುರ್ಗುಣ ಪಕ್ಷಪಾತಿ ಗಿಡುಗನಾಗಿಯೂ ಹುಟ್ಟಿ 'ಹೇರಿನ ಮೇಲೆ ಕರಡೆ' ಎಂಬ ಹಾಗೆ ಹೆಚ್ಚಾದ ಪಾಪವನ್ನು ಕೂಡಿಟ್ಟುಕೊಂಡು ನರಕದಲ್ಲಿ ಹುಟ್ಟಿ ಹಲವು ಕಾಲ ಸೈರಿಸಲಾಗದ ಮಹಾ ದುಃಖಕ್ಕೆ ಪಾತ್ರರಾಗುತ್ತಾರೆ ೧೮೮. ಕಾಪಾಡದೆ ವೇಗದಿಂದ ಒಬ್ಬೊಬ್ಬರನ್ನೂ ಘುರ್ರೆಂದು ಕುದಿಯುತ್ತಿರುವ ಎಣ್ಣೆಯಲ್ಲಿ ಹಾಕಿ, ಗಿರ್ರೆಂದು ಅಬ್ಬರಿಸಿ ಇದಿರಿಗೆ ಬಂದು ತಲೆ ಸಿಡೀರೇಳುವಂತೆ ಕ್ರೂರವಾಗಿ ಹೊಡೆದು ಹರ್ರೆಂದು ಹಾಸ್ಯಮಾಡಿ ರಕ್ತವನ್ನು ಕುಡಿದು ದೊಡ್ಡ ಕೆಂಡಗಳನ್ನು ಚೆಲ್ಲುತ್ತ, ತೇಗಿ ಕುಂಟಾಗುವಂತೆ ಹಿಮ್ಮಡಿಗಳನ್ನು ಕೊಯಿದು ಆ ಖೂಳರು ದೊಡ್ಡಕಲ್ಲಿನಿಂದ ಅದುಮುತ್ತ ಕಗ್ಗಲ್ಲನ್ನು ತಂದು ಪಕ್ಕೆಯ ಎಲುಬೆಲ್ಲವನ್ನೂ ಪುಡಿಯಾಗಿ 'ಚಿಟಿಲ್ ಚಿಟಿಲ್' ಎನ್ನುವಂತೆ ಬಗ್ಗಿ ನೆಲದ ಮೇಲೆ ಒರಸಿ ಮೇಲೆ ಚುಚ್ಚುತ್ತ ೧೯೦. ಚಿಕ್ಕ ಚಿಕ್ಕದಾಗಿ ಕಯ್ರುವನ್ನು ಕತ್ತರಿಸಿ ಕೊಳ್ಳಿ

ಕಿಱಿಕಿಱಿದಾಗಿರೆ ಕೈರಂ
ತಱಿದದನರಿದರಿದು ಕೊಳ್ಳಿಯಿಂದಂ ಮೊಗಮಂ
ನೆಱೆ ಚುರ್ಚುತ್ತುಂ ಘನ್ನೆಂ
ದಱಿಗುಱಿಗಳನೆರವನಱಿದು ಪೋಗದೆ ಪೆಣೆವರ್ ೧೯೧

ಬಡಿಬಡಿ ತಿವಿತಿವಿ ಪೊಡೆಪೊಡೆ
ಕಡಿಕಡಿ ತಱಿತಱಿ ಕಡಂದುಱಂ ಪುಣ್ಣೊಳಗಿಂ
ಬಿಡುಬಿಡು ತಲೆಯುಂ ತೂಂತಾ
ಗಡೆಯುಡೆ ಕೊಯ್ ಕೊಯ್ ಮುಗುಳ್ಮಗುಳ್ಸೀಳೆರ್ದೆಯುಂ ೧೯೨

ಅರಿಅರಿ ಪೊಯ್ಪೊಯ್ ಸೀಳ್ಸೀಳ್
ಕರಿಘಟೆಯಿಂದಿಕ್ಕಿ ಮೆಟ್ಟಿಸವನೆರ್ದೆಯಂ ಸೀ
ಳ್ದುರಿಯೆಣ್ಣೆಯನೆಱೆಯೆಱೆ ತಲೆ
ಯರಿದೋವೆಂದೊಳಱೆ ಬೀೞೆ ಕಿಡೆನೂಂಕುರಿಯೊಳ್ ೧೯೩

ಗದ್ಯ॥ ಎಂದು ನಾನಾ ಪ್ರಕಾರದಿಂ ನಾರಕರ್ದಂಡಿಸುವರೆಂದಿಂತು ಕಿಱಿದಱೊಳೆ ಧರ್ಮಾಧರ್ಮಂಗಳ ಫಲಮನಱಿಪುವುದುಂ ಮಾಯಾವಿಯಪ್ಪ ಸೂರ್ಪಂ ಮುನ್ನಿನ ತನ್ನಾಡಿದಾಟಕ್ಕಂ ಬೞಿಕಿನ ಸೆಟ್ಟಿಯ ಮಾಡಿದ ಮಾಟಕ್ಕಂ ಮುನ್ನಿನ ಕರ್ಮದ ತೀವ್ರತೆಗಂ ಬೞಿಕಿನ ತನ್ನ ಮನದುಪಶಮಕ್ಕಂ ಮುನ್ನಿನ ತನ್ನ ಮನದ ಕಾಂಕ್ಷೆಗಂ ಬೞಿಕಿನ ತನ್ನ ನಿಷ್ಕಾಂಕ್ಷೆಗಂ ಮುನ್ನಿನ ತನ್ನ ಸಂಸಾರದೆೞಕಕ್ಕಂ ಬೞಿಕಿನ ತನ್ನ ಸಂಸಾರ ವಿರಕ್ತಿಗಂ ಬೆಱಗಾಗಿ ೧೯೪

ಯಿಂದ ಮುಖವನ್ನು ತುಂಬ ಚುಚ್ಚುತ್ತ 'ಘನ್' ಎಂದು ಧರ್ಮದ್ರೋಹಿಗಳ ಗುಂಪನ್ನು ತಿಳಿದು ಹೋಗದೆ ಹೆಣೆಯುತ್ತಾರೆ ೧೯೧. ಬಡಿ, ತಿವಿ, ಹೊಡೆ, ಕಡಿ, ತಱಿ, ಹುಣ್ಣಿನೊಳಗಿನಿಂದ ಕಡುಂದುರನ್ನು ಬಿಡು, ತಲೆತೂತಾಗುವಂತೆ ಭಾಗ ಭಾಗವಾಗಿ ಕಡಿ, ಕೊಯ್ಯಿ, ಮತ್ತೆ ಮತ್ತೆ ಎದೆಯನ್ನು ಸೀಳು ೧೯೨. ಕತ್ತರಿಸು, ಹೊಡಿ, ಸೀಳು, ಆನೆಯ ಹಿಂಡಿನಿಂದ ಇಕ್ಕಿತುಳಿಸು, ಅವನ ಎದೆಯನ್ನು ಸೀಳಿ ಉರಿಯುವ ಎಣ್ಣೆಯನ್ನು ಸುರಿ, ತಲೆ ಕತ್ತರಿಸಿ ಓ ಎಂದು ಅರಚಿಕೊಂಡು ಬಿದ್ದರೆ ಉರಿಯೊಳಕ್ಕೆ ಬೀಳುವಂತೆ ನೂಕು ೧೯೩. ಎಂದು ನಾನಾರೀತಿಗಳಿಂದ ನರಕವಾಸಿಗಳು ದಂಡಿಸುವರೆಂದು ಹೀಗೆ ಸ್ವಲ್ಪದರಲ್ಲಿಯೇ ಧರ್ಮಾಧರ್ಮಗಳ ಫಲಗಳನ್ನು ತಿಳಿಯುವಹಾಗೆ ಹೇಳಲು ಕೇಳಿ ಮಾಯಾವಿಯಾದ ಸೂರ್ಪನು ತಾನು ಹಿಂದೆ ಆಡಿದ ಆಟಕ್ಕೂ ಆಮೇಲೆ ಸೆಟ್ಟಿ ಮಾಡಿದ ಕೆಲಸಕ್ಕೂ, ಮೊದಲಿನ ಕರ್ಮದ ತೀವ್ರತೆಗೂ ಆಮೇಲಿನ ತನ್ನ ಮನಸ್ಸಿನ ಉಪಶಾಂತಿಗೂ, ಮೊದಲಿನ ತನ್ನ ಮನಸ್ಸಿನ ಆಸೆಗೂ ಆಮೇಲಿನ ತನ್ನ ನಿಷ್ಕಾಂಕ್ಷೆಗೂ ಮೊದಲಿನ ತನ್ನ ಸಂಸಾರದ ಪ್ರೇಮಕ್ಕೂ ಆ ಮೇಲಿನ ತನ್ನ ಸುಸಾರ ವಿರಕ್ತಿಗೂ ಬೆಱಗಾದನು ೧೯೪. ಆಸೆಯಿಂದ ಈ

ಅಳಿಪಿಂದೀರತ್ನಮನೊ
ಯ್ದಿಳೆಗೀಶಂಗಿತ್ತು ಸತ್ತು ನರಕಾರ್ಣವದೊಳ್
ಸುಟಿಯದೆ ಬದುಕಿದೆನಿಂತಾಂ
ಕಳಬಂದುದು ಸಫಲಮಾಯ್ತು ಪುಣ್ಯೋದಯದಿಂ ೧೯೫

ನೋಂತರ್ಗೆ ಪುಂದು ಬಿತ್ತಿದೊ
ಡಂ ತಡೆಯದೆ ಬೆಳೆಗುಮೆಂಬ ನಾಣ್ನುಡಿಯಂತೋ
ರಂತೆ ಲಘುಕರ್ಮಿಯಪ್ಪಂ
ಗಂ ತತಕ್ಷಣದಿಂ ಸುದರ್ಶನಂ ದೊರೆಕೊಳ್ಗುಂ ೧೯೬

ಗದ್ಯ ॥ ಆನೇಕೆ ವೀರಕುಮಾರನಂದು ಕಳವಿನ ಮಾತನಾಡುವುದೇಕೆ, ಚೋರ ಪ್ರಧಾನನೀ ರತ್ನಮಂ ಪೊಗಟ್ಪುದೇಕೆ, ಕುಮಾರನದಕ್ಕೆ ಬಯಸಿ ತದ್ರತ್ನಮಂ ತಂದಂಗರ್ಧರಾಜ್ಯಮಂ ಕುಡುವೆನೆಂಬುದೇಕೆ, ನೃಪಸುತನ ಮಾತನೆಲ್ಲರುಮಿರ್ದಂತಾಂ ಕೈಕೊಳ್ವುದೇಕೆ, ಮಾಯಾತಪಮಂ ಪೊಣ್ಮುವುದೇಕೆ, ಮೆಲ್ಲನೆ ಕಳ್ದುಕೊಂಡು ಪೋಪುದೇಕೆ, ಯೀ ತಳಾಱಂ ಕಾಣ್ಬುದೇಕೆ, ನಾಂ ಭಯ ದಿಂದತ್ತಿತ್ತಲೋಡದೆ ಜಿನೇಂದ್ರಭಕ್ತನ ಬೀಡಂ ಬಂದು ಪುಗುವುದೇಕೆ, ಮತ್ತೀಮಹಾಪುರುಷ ನಿಂದಂ ಸದ್ಧರ್ಮಂ ದೊರೆಕೊಳ್ವುದೇಕೆ, ಭಾವಿಪೊಡಿವೆಲ್ಲಂ ಜಿನೇಂದ್ರಭಕ್ತಸೆಟ್ಟಿಯ ಪ್ರಸಾದದಿಂ ದೊರೆಕೊಂಡುದೆಂತುಮುಪದೇಶಂಗೊಟ್ಟರ್ ಋಣಂಗೊಟ್ಟರೆಂಬ ನಾಟ್ನುಡಿಯುಂಟದಱಿನೆನಗೆ ೧೯೭

ರತ್ನವನ್ನು ತೆಗೆದುಕೊಂಡುಹೋಗಿ ರಾಜನಿಗೆ ಕೊಟ್ಟು ಸತ್ತು ನರಕಸಮುದ್ರದಲ್ಲಿ ಸಂಚರಿಸದೆ ಬದುಕಿದೆ. ಹೀಗೆ ನಾನು ಕದಿಯಲು ಬಂದದ್ದು ಪುಣ್ಯವಶದಿಂದ ಸಫಲ ವಾಯಿತು ೧೯೫. ವ್ರತಮಾಡಿದವರಿಗೆ (ಪುಣ್ಯಶಾಲಿಗಳಿಗೆ) ಹುರಿದು ಬಿತ್ತಿರೂ ಅಡ್ಡಿಯಿಲ್ಲದೆ ಬೆಳೆಯಾಗುವುದೆಂಬ ಗಾದೆಯಂತೆ ಹೆಚ್ಚಾಗಿ ಲಘುಕರ್ಮಿಯಾದವನಿಗೆ ಕೂಡಲೆ ಒಳ್ಳೆಯದರ್ಶನ ಲಭಿಸುತ್ತದೆ ೧೯೬. ಅಂದು ವೀರಕುಮಾರನು ಕಳವಿನ ವಿಷಯವಾಗಿ ಮಾತನಾಡಿದ್ದೇಕೆ, ಆಗ ಚೋರಪ್ರಧಾನನು ಈ ರತ್ನವನ್ನು ಹೊಗಳಿ ದ್ದಾದರೂ ಏಕೆ ? ಕುಮಾರನು ಅದಕ್ಕೆ ಆಸೆಪಟ್ಟು ರತ್ನವನ್ನು ತಂದವನಿಗೆ ಅರ್ಧ ರಾಜ್ಯವನ್ನೇ ಕೊಡುವೆನೆಂಬುದೇಕೆ ? ರಾಜಪುತ್ರನ ಮಾತನ್ನು ಕೇಳಿದ ಎಲ್ಲರೂ ಸುಮ್ಮನಿದ್ದರೂ ತಾನು ಕೈಕೊಂಡದ್ದು, ಮಾಯಾತಪಸ್ಸನ್ನು ಹೂಡಿದುದು, ಮೆಲ್ಲನೆ ಕದ್ದುಕೊಂಡು ಹೋಗುತ್ತಿರಲು ಈ ತಳವಾರನು ಕಂಡದ್ದು, ನಾನು ಭಯದಿಂದ ಆಚೀಚೆ ಓಡದೆ ಜಿನೇಂದ್ರಭಕ್ತನ ಬೀಡನ್ನೇ ಪ್ರವೇಶಿಸಿದ್ದು, ಮತ್ತೆ ಈ ಮಹಾಪುರುಷನಿಂದ ಸದ್ಧರ್ಮವು ದೊರೆಕೊಂಡಿತು. ಇದನ್ನೆಲ್ಲ ಯೋಚಿಸಿದರೆ ಜಿನೇಂದ್ರಭಕ್ತಸೆಟ್ಟಿಯ ಅನುಗ್ರಹದಿಂದ ಲಭಿಸಿದುವೆಂದು ತಿಳಿಯಬೇಕು. ಹೇಗೂ ಉಪದೇಶ ಕೊಟ್ಟವರು ಸಾಲಕೊಟ್ಟವರು. ಎಂಬ ಗಾದೆಯುಂಟು. ಅದರಿಂದ ನನಗೆ ೧೯೭, ಈತನೇ ಸ್ನೇಹಿತ ಈತನೇ ಸಹೋದರ, ಈತನೇ ಹೆತ್ತತಂದೆ, ಮತ್ತೆ

ಈತನೆ ಮಿತ್ರನೀತನೆ ಸಹೋದರನೀತನೆ ಪೆತ್ತ ತಂದೆ ಮ
ತ್ತೀತನೆ ದೇವನೀತನೆ ಸುಬಾಂಧವನೀತನೆ ಕೂರ್ಮೆಯಾಣ್ಮನಿಂ
ತೀತನೆ ಪಜ್ಜನಜ್ಜನೆನಗೀತನೆ ತಾಯ್ ಪೆಱತೇನೊ ಭಾವಿಪಂ
ದೀತನೆ ನೋೞ್ಪಡಾಪ್ತನೆನಗಿಪ್ಪನುಮೀತನೆ ಭೂತಳಾಗ್ರದೊಳ್ ೧೯೮

ಎನಗೆಂದುಂ ದೊರೆಕೊಳ್ಳದ
ಜಿನಧರ್ಮಂ ಸಾರ್ದುದೀ ಮಹಾತ್ಮನಿನದಱಿಂ
ದೆನಗೀತನೆ ಜೀವಂ ಮ
ತ್ತೆನಗೀ ವೈಶ್ಯಾತ್ಮಭವನೆ ಕಣ್ಣುಂ ಮತಿಯುಂ ೧೯೯

ಖರಕರನುದಯಂಗೆಯ್ಯದೆ
ಸರಸಿರುಹಾವಳಿಗಳಲರಲಱಿಗುಮೆ ಜೀವೋ
ತ್ಕರಮಂ ಪೇೞ್ ಸದ್ಧರ್ಮಂ
ದೊರೆಕೊಳ್ಳದೆ ತಮಗೆ ತಾವೆ ತಿಳಿವವೆ ಧರೆಯೊಳ್ ೨೦೦

ಹಿಮಕರನುದಯಂ ಗೆಯ್ಯದೆ
ತಮೋಂಧಕಾರಂ ತೆರಳ್ದು ಪೋಕುಮೆ ಜೈನಾ
ಗಮಮಂ ಭ್ರಾಂತಿಂದಱಿವರ್
ಕ್ರಮದಿಂದಂ ಪೇೞದಘಕುಲಂ ಕೆಟ್ಟಪುದೇ ೨೦೧

ಈತನೇ ದೇವನು, ಈತನೇ ಒಳ್ಳೆಯ ಬಾಂಧವನು, ಈತನೇ ಪ್ರೀತಿಯ ಸ್ವಾಮಿ; ಹೀಗೆ ಈತನೇ ಮುತ್ತಜ್ಜ, ಅಜ್ಜ, ನನಗೆ ಈತನೇ ತಾಯಿ, ಬೇರೇನು? ಭಾವಿಸಿದರೆ ಈತನೇ ನನಗೆ ಆಪ್ತ. ನನಗೆ ಸ್ನೇಹಿತನೂ ಈ ಲೋಕದಲ್ಲಿ ಈತನೇ. ೧೯೮. ನನಗೆ ಎಂದೂ ಸಿಕ್ಕದ ಜಿನಧರ್ಮವು ಈತನಿಂದ ಲಭಿಸಿತು. ಆದರಿಂದ ಈ ಮಹಾತ್ಮನೇ ನನಗೆ ಜೀವ, ಮತ್ತೆ ನನಗೆ ಈ ವೈಶ್ಯಪುತ್ರನೇ ಕಣ್ಣೂಮತಿಯೂ ಸಹ. ೧೯೯. ಚಂಡಕಿರಣನ ಉದಯವಾಗದೆ ಕಮಲಸಮೂಹಗಳು ಅರಳಬಲ್ಲುವೆ ? ಹಾಗೆಯೇ ಜೀವಿಸಮೂಹಗಳು ಸದ್ಧರ್ಮದ ಉಪದೇಶ ಲಭಿಸದೆ ಈ ಲೋಕದಲ್ಲಿ ತಮ್ಮಷ್ಟಕ್ಕೆತಾವೇ ತಿಳಿದುಕೊಳ್ಳುವುವೆ ? ೨೦೦. ಚಂದ್ರನ ಉದಯವಾಗದೆ ಗಾಢಾಂಧಕಾರವು ಹೊರಟು ಹೋಗುವುದೆ? ಜೈನಶಾಸ್ತ್ರವನ್ನು ತಿಳಿದವರು ಪ್ರೀತಿಯಿಂದ ಹೇಳದೆ, ಪಾಪಸಮೂಹವು ನಾಶವಾಗುವುದೆ ? ೨೦೧. ತನಗೆ ವಿಶೇಷವಾಗಿ ಧರ್ಮವನ್ನು ನಿರಂತರವಾಗಿ ಹೇಳಿ

ತನಗೋರಂತಿರೆ ಧರ್ಮಮ
ನನವರತಂ ಕೀಱಿತೋಱಿ ಪೇೞ್ವನೆ ನೆಂಟಂ
ತನಗೋರಂತಿರೆ ಪಾಪಮ
ನನವರತಂ ಕೀಱಿತೋಱಿಪೇೞ್ವನೆ ಪಗೆವಂ ೨೦೨

ಗದ್ಯ ॥ ಎಂದು ಭಾವಿಸಿ ಸದ್ಧರ್ಮಂ ಕೈಸಾರ್ದುದಕ್ಕೆ ಮನದೊಳ್ ಗುಡಿಗಟ್ಟಿ ಮಹೋತ್ಸವದಿಂ ಮಯ್ಯಱಿಯದೆ ಹರ್ಷಚಿತ್ತದಿಂ ವಾತ್ಸಲ್ಯರತ್ನಾಕರನ ಪಾದಪದ್ಮಂಗಳ್ಗೆಱಗಿ ತನ್ನ ಮುನ್ನಿನ ಮಾಯಾಪ್ರಪಂಚಮಂ ಪೇೞ್ದು ೨೦೩

ನಿನ್ನಿಂದಮೆನಗೆ ಸದ್ಧ
ರ್ಮಂ ನಯದಿಂ ಸಾರ್ದುದದಱಿನೆನಗುರ್ವರೆಯೊಳ್
ನಿನ್ನನ್ನರೊಳರೆ ಮಿತ್ರರ್
ಸನ್ನುತಗುಣನಿಳಯ ವೈಶ್ಯವಂಶಲಲಾಮಾ ೨೦೪

ಗದ್ಯ॥ ಕಣ್ಣಾಗಿಯುಂ ಮತಿಯಾಗಿಯುಂ ನೀನೆ ಶರಣೆನಗೆ ಪೆಱರೊರ್ವರುಮಿಲ್ಲೆನ್ನ ಮುನ್ನಿನ ಪೊಲ್ಲಮೆಗಳಂ ಕೈಕೊಳ್ಳದೆ ಕಾರುಣ್ಯದಿಂದಂ ನಿಮ್ಮ ಧರ್ಮಾಭಿಪ್ರಾಯಮನ್ನಿನ್ನುಂ ಲೇಸಾಗಿ ಪೇೞ್ದು ಶಾಶ್ವತಮಪ್ಪ ಸುಖಕ್ಕೆ ಕಾರಣಮಪ್ಪ ವ್ರತರತ್ನಮಂ ದಯೆಗೆಯ್ವುದೆಂದು ಕೈಗಳಂ ಮುಗಿದು ವಿನಯದಿಂದಿರ್ಪುದುಂ ಸಮ್ಯಕ್ತ್ವಚೂಡಾಮಣಿ ಸೂರ್ಪಂಗಿಂತೆಂದಂ ೨೦೫

ನಿದರ್ಶನವನ್ನು ತೋರಿಸಿ ಹೇಳುವವನೇ ನೆಂಟ. ತನಗೆ ಹೆಚ್ಚಾಗಿ ಪಾಪವನ್ನೇ ಎಡೆಬಿಡದೆ ಹೇಳುವವನೇ ಶತ್ರು. ೨೦೨. ಎಂದು ಯೋಚಿಸಿ ಸದ್ಧರ್ಮವು ತನಗೆ ಲಭಿಸಿದುದಕ್ಕೆ ಮನಸ್ಸಿನಲ್ಲಿ ಬಹಳವಾಗಿ ಸಂಭ್ರಮಪಟ್ಟು ಬಹಳ ಸಂತೋಷದಿಂದ ಪರವಶನಾಗಿ ವಾತ್ಸಲ್ಯರತ್ನಾಕರನೆನಿಸಿದ ಆ ಸೆಟ್ಟಿಯ ಪಾದಕಮಲಗಳಿಗೆ ನಮಸ್ಕರಿಸಿ ತನ್ನ ಹಿಂದಿನ ಮಾಯಾ ಚರಿತ್ರೆಯನ್ನೆಲ್ಲ ವಿಸ್ತಾರವಾಗಿ ಹೇಳಿದನು. ೨೦೩. ನಿನ್ನಿಂದ ನನಗೆ ಸದ್ಧರ್ಮವು ಸುಲಭವಾಗಿ ಲಭಿಸಿತು. ಆದರಿಂದ ನನಗೆ ಲೋಕದಲ್ಲಿ ನಿನ್ನಂಥ ಸ್ನೇಹಿತರು ಬೇರೆ ಇದ್ದಾರೆಯೆ? ಸ್ತೋತ್ರಾರ್ಹವಾದ ಗುಣಗಳಿಗೆ ಮನೆಯಂತಿರುವ ವೈಶ್ಯಕುಲಕ್ಕೆ ಅಲಂಕಾರ ಸ್ವರೂಪನಾದವನೇ ! ೨೦೪. ನನಗೆ ನೀನೇ ಕಣ್ಣಾಗಿ, ಮತಿಯಾಗಿ, ಶರಣಾಗು. ನನಗೆ ಬೇರೊಬ್ಬರೂ ಇಲ್ಲ, ನನ್ನ ಹಿಂದಿನ ನೀಚತನಗಳನ್ನು ಲೆಕ್ಕಮಾಡದೆ ಕರುಣೆಯಿಂದ ನಿಮ್ಮ ಧರ್ಮದ ವಿವರವನ್ನು ಇನ್ನೂ ಚೆನ್ನಾಗಿ ಹೇಳಿ ಶಾಶ್ವತವಾದ ಸುಖಕ್ಕೆ ಕಾರಣವಾದ ವ್ರತರತ್ನವನ್ನು ನನಗೆ ಅನುಗ್ರಹಿಸು, ಎಂದು ಕೈಮುಗಿದು ವಿನಯದಿಂದ ನಿಲ್ಲಲು, ಆ ಸಮ್ಯಕ್ತ್ವ ಚೂಡಾಮಣಿ ಸೂರ್ಪನಿಗೆ ಹೀಗೆ ಹೇಳಿದನು : ೨೦೫. ಜಾಣನಾದವನು

ಚದುರನೆನಿಪ್ಪಂ ಮಿಥ್ಯಾ
ತ್ವದ ಬಾರಿಗೆ ಪೋಗಿ ಬಿರ್ದು ಸಂಸಾರಸಮು
ದ್ರದೊಳರ್ದು ಕಿಡದೆ ಮುನ್ನಮೆ
ಪದುಳಿಗನಾಗಱಿದು ಪಿಡಿವುದೀ ದರ್ಶನಮಂ ೨೦೬

ಗದ್ಯ॥ ಅಂತು ಶುದ್ಧ ದರ್ಶನಮಂ ಸಂಶಯಂಗಿಡದೆ ತಿಳಿದು ನಂಬಿ ಬಳಿಕ್ಕಮತಿಶಯ ಸುಖ ನಿಳಯಮಪ್ಪ ನಿರ್ವೃತಿಶ್ರೀಯನೆಯ್ದಿಸುವ ಶ್ರಾವಕ ಧರ್ಮದೊಳಕ್ಕೆ ನಡೆವುದು ೨೦೭

ಯತಿಧರ್ಮಮೆಂಬುದದು ನಿ
ರ್ವೃತಿವನಿತೆಯ ತೊಟ್ಟ ತೊಡವು ಜಯಲಕ್ಷ್ಮಿಯ ರಂ
ಜಿತಮಪ್ಪ ಜವ್ವನಂ ಸಂ
ಸೃತಿವನಿತೆಯ ಸೊಬಗು ಕೀರ್ತಿಲಕ್ಷ್ಮಿಯ ನಿಳಯಂ ೨೦೮

ಗದ್ಯ॥ ಎನಿಸಿ ಮಹಿಮೆಪಡೆದ ಯತಿಧರ್ಮದೊಳ್ನಡೆವಾತಂ ಮೂಲೋತ್ತರ ಗುಣಂಗಳೋಜೆವೆರಸು ಸಕಲದೋಷಂಗಳುಂ ತನ್ನಂ ಪೊರ್ದದಂತಾಗೆ ನಡೆವುದು. ಪಾಲಂ ಕಾಯಿಸುವರಂತೆಮನಮಂ ಬೆದಱಲೀಯದೆ, ದುರ್ಭಾವಮಂ ಬಿಟ್ಟು ದುರ್ಜನರಂ ಸಾರದೆ ದುರಾಚಾರಂಗಳಂ ಪೊರ್ದದಾಗಮಮಂ ಪೊರ್ದಿ ನಡುಗಡಲೊಳ್ಪಱಿಗೋಲಂ ನಡೆಯಿಸುವಂಬಿಗನಂತೆ ದುರ್ಮಾರ್ಗಮೆಂಬ ತೆರೆ

ಮಿಥ್ಯಾತ್ವದ ಪೀಡೆಗೆ ಹೋಗಿ ಬಿದ್ದು ಸಂಸಾರ ಸಮುದ್ರದಲ್ಲಿ ಮುಳುಗಿ ಕೆಟ್ಟುಹೋಗದೆ ಮೊದಲೇ ಕ್ಷೇಮ ಚಿಂತಕನಾಗಿ ಈ ದರ್ಶನವನ್ನು ತಿಳಿದು ಧರಿಸಬೇಕು. ೨೦೬, ಹಾಗೆ ಶುದ್ಧ ದರ್ಶನವನ್ನು ಸಂಶಯದಿಂದ ಕೆಡದೆ ತಿಳಿದುಕೊಂಡು ನಂಬಿ ಆಮೇಲೆ ಅತಿಶಯ ಸುಖಕ್ಕೆ ಆವಾಸವಾದ ಮೋಕ್ಷವನ್ನು ಕೊಡಿಸುವ ಶ್ರಾವಕಧರ್ಮಕ್ಕೆ ಸೇರಬೇಕು. ೨೦೭. ಯತಿಧರ್ಮವೆನ್ನುವುದು ನಿರ್ವೃತಿವನಿತೆಯು ಧರಿಸಿರುವ ಆಭರಣ, ಜಯಲಕ್ಷ್ಮಿಯ ಪ್ರಕಾಶಮಾನವಾದ ಯೌವನ, ಸಂಸಾರವೆಂಬ ವನಿತೆಯ ಸೌಂದರ್ಯ, ಕೀರ್ತಿಲಕ್ಷ್ಮಿಯ ಮನೆ. ೨೦೮. ಹೀಗೆ ಮಹಿಮೆಯನ್ನು ಪಡೆದ ಯತಿಧರ್ಮದಲ್ಲಿ ನಡೆಯುವಾತನು ಪೂರ್ವೋತ್ತರ ಗುಣಗಳನ್ನು ಕ್ರಮಾನುಸಾರವಾಗಿ ಕಲಿತು, ಸಕಲ ದೋಷಗಳೂ ತನ್ನನ್ನು ಸ್ಪರ್ಶಿಸದ ಹಾಗೆ ನಡೆದುಕೊಳ್ಳಬೇಕು. ಹಾಲನ್ನು ಕಾಯಿಸುವವರ ಹಾಗೆ ಮನಸ್ಸನ್ನು ಬೆದರಗೊಡದೆ, ಕೆಟ್ಟಭಾವನೆಗಳನ್ನು ಬಿಟ್ಟು ದುರ್ಜನರನ್ನು ಸೇರದೆ, ದುರಾಚಾರಗಳನ್ನು ಮಾಡದೆ, ಆಗಮವನ್ನು ತಿಳಿದು ಸಮುದ್ರಮಧ್ಯದಲ್ಲಿ ಹರಿಗೋಲನ್ನು ನಡೆಸುವ ಅಂಬಿಗನ ಹಾಗೆ ದುರ್ಮಾರ್ಗವೆಂಬ ಅಲೆಗಳನ್ನು ಮೋಸಗೊಳಿಸಿ, ಮಿಥ್ಯಾತ್ವವೆಂಬ ಸುಳಿಗಳನ್ನು ತಪ್ಪಿಸಿ ವಿಷಯಗಳೆಂಬ

ಗಳಂ ಪಂಚಿಸಿ ಮಿಥ್ಯಾತ್ವಮೆಂಬ ಸುಟಿಗಳಂ ತಪ್ಪಿಸಿ ವಿಷಯಂಗಳೆಂಬ ಪೊಯಲ್ಗಳಂ ಸಾರಲೀಯದೆ ಕ್ರಿಯೆ ಸಹಿತಂ ಶುಭಧ್ಯಾನದಿಂ ಸಂಸಾರಮೆಂಬ ಮಹಾನದಿಯಂ ದಾಂಟುವುದು ೨೦೯

ಶ್ರಾವಕಧರ್ಮಂ ಕೀರ್ತಿ
ಶ್ರೀವನಿತೆಯ ಕುಚಯುಗಂ ಮಹೀವನಿತೆಯವಾಕ್
ಶ್ರೀವನಿತೆಯ ಲಾವಣ್ಯಂ
ಶ್ರೀವನಿತೆಯ ಜಯಲತಾಂಗಿಯುಡುವ ದುಕೂಲಂ ೨೧೦

ಗದ್ಯ॥ ಎನಿಸಿ ಪೆಂಪುವಡೆದ ಶ್ರಾವಕಧರ್ಮದೊಳ್ನಡೆವಾತಂ ದಾನ ಪೂಜೆ ಶೀಲೋಪವಾಸಂಗಳಂ ಕುಂದಲೀಯದೆ ಸುವ್ರತವರ್ಧಮಾನನಾಗಿ ದೃಢಾಚಾರದಿಂ ಸಮುದ್ರದೊಳ್ ಭೈತ್ರಮಂ ನಡೆಯಿಸುವಂತೆ ದುಶ್ಶಂಕಿತಮೆಂಬ ಕಳ್ಳರಂ ಪೊರ್ದಲೀಯದೆ ದುರಾಚಾರಮೆಂಬ ತೆರೆಗಳಂ ತಪ್ಪಿಸಿ ಅಟ್ನೆಗಟ್ತೆಯೆಂಬ ಮೊಸಳೆಯಂ ತೊಲಗಿಸಿ ಸಂಶಯಮೆಂಬ ಮಹಾಮತ್ಸ್ಯಮನೋಸರಿಸಿ ಮಿಥ್ಯಾತ್ವಮೆಂಬ ನೆಗಟಿಂಗೊಳಗಾಗದೆ ತುಪ್ಪಮಂ ಕಾಸುವಳಂತೆ ಚಿತ್ತಮನಗಲಲೀಯದೆ ಜಿನಾಗಮದೋಜೆಯಿಂ ನಡೆದು ಸಂಸಾರಸಮುದ್ರಮನುಪಾಯದಿಂ ಕಟಿಪುವುದು ೨೧೧

ಮೆಲ್ಲನೆ ಮೇಳಿಸಿ ಪರ್ಚುವ
ಲಲ್ಲಯಿಸುವ ಪೆಱರನಟ್ಟೆ ದೂಱುವ ಪಲವುಂ
ಪೊಲ್ಲಮೆಯಂ ಕಲಿಸುವ ಮುನಿ
ಯಲ್ಲಿ ಜಿನೋಕ್ತಿಯನೆ ಕೇಳಲಾಗದು ಚತುರಂ ೨೧೨

ಹೊಡೆತಗಳನ್ನು ಸಮೀಪಿಸಲು ಬಿಡದೆ, ಕ್ರಿಯಾಶೀಲರಾಗಿ ಶುಭಧ್ಯಾನದಿಂದ ಸಂಸಾರವೆಂಬ ಮಹಾನದಿಯನ್ನು ದಾಟಬೇಕು. ೨೦೯. ಶ್ರಾವಕಧರ್ಮವು ಕೀರ್ತಿಲಕ್ಷ್ಮಿಯ ಎರಡು ಕುಚಗಳು. ಭೂದೇವಿಯ ವಾಕ್‌ಶ್ರೀವನಿತೆಯ ಲಾವಣ್ಯ, ಲಕ್ಷ್ಮಿಯ, ಜಯವನಿತೆಯ, ಉಡುವ ರೇಷ್ಮೆವಸ್ತ್ರ. ೨೧೦. ಹೀಗೆ ಆಧಿಕ್ಯವನ್ನು ಹೊಂದಿದ ಶ್ರಾವಕಧರ್ಮದಲ್ಲಿ ನಡೆಯುವವನು ದಾನ, ಪೂಜೆ, ಶೀಲ, ಉಪವಾಸಗಳನ್ನು ಕಡಿಮೆ ಮಾಡದೆ ಸುವ್ರತಗಳಿಂದ ವರ್ಧಿಸುತ್ತ ದೃಢವಾದ ಆಚಾರದಿಂದ ಸಮುದ್ರದಲ್ಲಿ ಹಡಗನ್ನು ನಡೆಯಿಸುವನಂತೆ ಕೆಟ್ಟಶಂಕೆಯೆಂಬ ಕಳ್ಳರನ್ನು ಸೇರಗೊಡದೆ ದುರಾಚಾರವೆಂಬ ತೆರೆಗಳನ್ನು ತಪ್ಪಿಸಿಕೊಂಡು ನೀಚಕಾರ್ಯವೆಂಬ ಮೊಸಳೆಯನ್ನು ಓಡಿಸಿ, ಸಂಶಯವೆಂಬ ದೊಡ್ಡ ಮೀನನ್ನು ಅಸಡ್ಡೆಮಾಡಿ ಪಕ್ಕಕ್ಕೆ ಸರಿಸಿ, ಮಿಥ್ಯಾತ್ವವೆಂಬ ಮೊಸಳೆಗೆ ಸಿಕ್ಕದೆ, ತುಪ್ಪವನ್ನು ಕಾಸುವವಳಂತೆ ಚಿತ್ತವನ್ನು ಅಗಲಲು ಬಿಡದೆ ಜಿನಾಗಮದ ಕ್ರಮದಂತೆ ನಡೆದು ಸಂಸಾರವೆಂಬ ಸಮುದ್ರವನ್ನು ಉಪಾಯದಿಂದ ದಾಟಬೇಕು. ೨೧೧. ಮೆಲ್ಲನೆ ಸೇರಿಕೊಂಡು ಪಿಸುಮಾತನ್ನಾಡುವ, ಲಲ್ಲೆ ಮಾಡುವ, ಇತರರನ್ನು ದೂಷಿಸುವ, ಹಲವು ತಪ್ಪುಗಳನ್ನು ಕಲಿಸುವಂಥ, ಮುನಿಯಲ್ಲಿ ವಿವೇಕಿ ಜಿನವಾಣಿಯನ್ನೇ ಕೇಳಬಾರದು. ೨೧೨. ಇತರರನ್ನು ದೂಷಿಸುವವರಲ್ಲಿ ಅವರ ರೀತಿಯನ್ನು ತಿಳಿಯದೆ

ಪೆಱರಂ ದೂಱುವರೊಳ್ ತೆಱ
ನಱಿಯದೆ ನುಡಿವವರೊಳಾಗಮಾರ್ಥಮನೇನಂ
ದಱಿಯದರೊಳ್ ಪುರುಡಿಗರೊಳ್
ಬಱುದಲೆಯೆಂದೆಳಸಿ ಕೇಳಲಾಗದು ಪುರುಷಂ ೨೧೩

ಅಲ್ಲಲ್ಲಿಗೆ ಭಾವಿಸುವಂ
ದೆಲ್ಲರ್ಗಂ ನುಡಿವ ಬಲ್ಮೆಯಿಂ ತಪದಿಂದಂ
ಬೆಲ್ಲಂ ಪಚ್ಚಂತಿರೆ ಕರ
ವೊಳ್ಳಿದರಿವರೆನಿಪರಲ್ಲಿ ಕೇಳ್ವುದು ಕಥೆಯಂ ೨೧೪

ಪುರುಳಿಲ್ಲದರೊಳ್ ನುಡಿಯೊಳ್
ಪರಿಣತರೊಳ್ ಪಕ್ಷಮಿಲ್ಲದವರೊಳ್ ಗುಣದೊಳ್
ಪಿರಿಯರೆನಿಪವರೊಳಘಕುಲ
ವಿರಹಿತರೊಳ್ ಕೇಳ್ವುದಾಗಮಾರ್ಥಮನಱಿವಿಂ ೨೧೫

ಜಿನಗೇಹಾಳಿಯೊಳುನ್ನತ
ಮುನಿವರರೊಳ್ ಭವ್ಯತತಿಯೊಳಾದರಮಂ ನೆ
ಟ್ಟನೆ ಮಾಟ್ಪ ತತ್ವವಿದರೊಳ್
ಜಿನಮತಮಂ ಕೇಳ್ಗೆ ಸೌಖ್ಯಮಂ ಬಯಸುವವಂ ೨೧೬

ನಿಂದಿಸುವವರಲ್ಲಿ ಆಗಮದ ಅರ್ಥವೇನೆಂಬುದನ್ನೇ ತಿಳಿಯದವರಲ್ಲಿ, ಹುರುಡಿಸುವವರಲ್ಲಿ, ಮನುಷ್ಯನು ಜಿನೋಕ್ತಿಯನ್ನು ಕೇಳಬಾರದು. ೨೧೩. ಆಗಾಗ್ಗೆ ಯೋಚಿಸುತ್ತ ಎಲ್ಲರಿಗೂ ಬೆಲ್ಲವನ್ನು ಹಂಚಿದ ಹಾಗೆ, ಹೇಳುವ ಸಾಮರ್ಥ್ಯದಿಂದ, ತಪಸ್ಸಿನಿಂದ, ಬಹಳ ಒಳ್ಳೆಯವರು ಎನಿಸುವವರಲ್ಲಿ ಕಥೆಯನ್ನು ಕೇಳತಕ್ಕದ್ದು. ೨೧೪. ಕೆಚ್ಚಿಲ್ಲದವರಲ್ಲಿ, ಮಾತಿನಲ್ಲಿ ಪಂಡಿತರಾದವರಲ್ಲಿ, ಪಕ್ಷಪಾತವಿಲ್ಲದವರಲ್ಲಿ, ಗುಣದಲ್ಲಿ ಹಿರಿಯರೆಂದೆನಿಸುವವರಲ್ಲಿ, ಪಾಪ ಸಮೂಹವಿರದವರಲ್ಲಿ ಆಗಮಾರ್ಥವನ್ನು ತಿಳುವಳಿಕೆಯಿಂದ ಕೇಳತಕ್ಕದ್ದು. ೨೧೫. ಜಿನಾಲಯ ಸಮೂಹದಲ್ಲಿ ಹಿರಿಯರಾದ ಮುನಿಶ್ರೇಷ್ಠರಲ್ಲಿ ಭವ್ಯಸಮೂಹದಲ್ಲಿ, ಹೆಚ್ಚಾಗಿ ಆದರವನ್ನು ತೋರುವ ತತ್ವಜ್ಞರಲ್ಲಿ, ಸೌಖ್ಯವನ್ನು ಬಯಸುವವನು, ಜಿನಮತವನ್ನು ಕೇಳಲಿ. ೧೧೬. ಅಲ್ಲದೆ ಜಿನಾಗಮದ ಅರ್ಥಗಳ ಸಂಬಂಧವನ್ನು ತಿಳಿಯಲಾರದೆ ಕೆಟ್ಟ

ಗದ್ಯ॥ ಮತ್ತಂ ಜಿನಾಗಮಾರ್ಥಗಳಂ ಸಂಬಂಧಿಸಲಱಿಯದೆ ದುರಾಗ್ರಹದಿಂದಾನೆ ದೇವರೆಂದು ಡೊಳ್ಳುಮಂ ಪೊಱಗಣ ಕಾಯಕ್ಲೇಶಮುಮಂ ತೋಱಿ ಪಾವಂ ಪೆತ್ತವರ್ಬೇಲಿಯುಂ ಪೊಕ್ಕರೆಂಬಂತೆ ತಮ್ಮ ನುಡಿದುದನೆ ತಲೆಮುಟ್ಟೆ ಸಾಧಿಸಿ ಬಾಯುಂಬಡಿದಾವಿನ ಕಱುವನೆಮ್ಮೆಗೆಬಟ್ಟೆಮ್ಮೆಯ ಕಱುವನಾವಿಂಗೆ ಬಿಡುವಂತೇನಾನುಮನೆಕ್ಕಸಕ್ಕಮನೆಣಗೋಣಂಗಳಂ ಪೇಟ್ವರಲ್ಲಿ ಜಿನತತ್ವಮಂ ಸೂಕ್ಷ್ಮಮತಿಯುಪ್ಪವಂ ಕೇಳವೇಡೆ ೨೧೭

ಇಲ್ಲಿಗಿದುಚಿತಂ ತಕ್ಕುದಿ
ದಿಲ್ಲಿಗಿದೆಂದಱಿದು ಸಂದ ಸೂತ್ರಾರ್ಥಮನಂ
ತಲ್ಲಲ್ಲಿಗೆ ವಿಪರೀತತೆ
ಯಿಲ್ಲದೆ ಪೇಟ್ವವರೊಳೊಲ್ದು ಕೇಳ್ಗಾಗಮಮಂ ೨೧೮

ಗದ್ಯ॥ ಮತ್ತಂ ಕೇಳ್ವಾತನುಂ ಪರಿಣತನಾಗಿ ಕೇಳಲ್ವೇಟ್ಪುದೆಂತೆಂದೊಡೆ ಪಾತ್ರಮಂ ನೋಡಲೆಂದು ಪೋಪಾತಂ ಮುಂದೊಂದೆಡೆಯೊಳಗೆ ಪೋಪಾತನಾಡಳ್ ಯೆಂದೊಡೆ ಮಗುಟ್ದನೆಂಬಂತೆ ಮಾಡದೆ ತಲೆಯೆಂದೊಡೆ ತಟೆಯೆಂದುಂ ಪುಲ್ಲೆಯೆಂದೊಡೆ ಪುಲಿಯೆಂದುಂ ವಿಪರೀತಮಂ ಕೈಕೊಳ್ಳದೆ ಕೇಳ್ವುದು. ೨೧೯

ಶ್ರಾವಕನಪ್ಪಂ ನೆಱೆ ಸ
ದ್ಭಾವದಿನೆಸಗುವುದು ನಾಲ್ಕು ಧರ್ಮಂಗಳೊಳಂ
ಭಾವಕನೆನಿಸುವ ಮುನಿಯುಂ
ಸಾವದ್ಯಂ ಸಾರದಂತು ನಡೆವುದು ದಯೆಯಿಂ ೨೨೦

ಹಟದಿಂದ ತಾನೇ ದೇವರೆಂದು ಟೊಳ್ಳನ್ನು ಹೊರಗಿನ ಕಾಯಕಷ್ಟ(ದೇಹದಂಡನೆ)ವನ್ನೂ ತೋರಿಸಿ, 'ಹಾವನ್ನು ಹೆತ್ತವರು ಬೇಲಿಯನ್ನು ಹೊಕ್ಕರು.' ಎಂಬ ಹಾಗೆ ತಾವು ಹೇಳಿದುದನ್ನೇ ಕೊನೆತನಕ ಸಾಧಿಸಿ ಬಾಯಿ ಬಡಿದು ಹಸುವಿನ ಕರುವನ್ನು ಎಮ್ಮೆಗೂ ಎಮ್ಮೆಯ ಕರುವನ್ನು, ಹಸುವಿಗೂ ಬಿಡುವ ಹಾಗೆ ಏನಾದರೂ ಅಸಂಬದ್ಧವಾದ ಮಾತನ್ನು, ಕೊಂಕುಗಳನ್ನು, ಹೇಳುವವರಲ್ಲಿ ಸೂಕ್ಷ್ಮಮತಿಯಾದವನು ಜಿನತತ್ವವನ್ನು ಕೇಳಬಾರದು. ೨೧೭. ಇಲ್ಲಿಗೆ ಇದು ಯೋಗ್ಯ, ಇದು ತಕ್ಕದ್ದು, ಎಂದು ತಿಳಿದುಕೊಂಡು ಸೂತ್ರಾರ್ಥವನ್ನು ಅಲ್ಲಲ್ಲಿಗೆ ಸಮಂಜಸವಾಗಿ ಹೊಂದಿಸಿ ಹೇಳುವವರಲ್ಲಿ ಆಗಮವನ್ನು ಪ್ರೀತಿಯಿಂದ ಕೇಳಲಿ, ೨೧೮. ಅಲ್ಲದೆ, ಕೇಳುವವನೂ ಪಂಡಿತನಾಗಿ ಕೇಳಬೇಕು. ಅದು ಹೇಗೆಂದರೆ, ನಾಟ್ಯವನ್ನು ನೋಡುವುದಕ್ಕೆ ಹೋಗುವವನು ಮುಂದೆ ಒಂದು ಸ್ಥಳದಲ್ಲಿ ಇನ್ನೊಬ್ಬನು 'ಇದು ಕುಣಿಯುವುದಿಲ್ಲ' ಎಂದು ಹೇಳಿದರೆ ಹಿಂತಿರುಗಿದನೆಂಬಂತೆ ಮಾಡದೆ, 'ತಲೆ' ಎಂದರೆ 'ತಳೆ'(ಛತ್ರಿ) ಎಂದೂ ಹುಲ್ಲೆಯೆಂದರೆ ಹುಲಿಯೆಂದೂ ವಿಪರೀತಾರ್ಥವನ್ನು ಹಿಡಿಯದೆ ಕೇಳಬೇಕು. ೨೧೯. ಶ್ರಾವಕನಾದವನು ಹೆಚ್ಚಿನ ಸದ್ಭಾವನೆಯಿಂದ ನಾಲ್ಕು ಧರ್ಮಗಳಲ್ಲಿಯೂ ನಡೆದುಕೊಳ್ಳಬೇಕು. ಭಾವಕನೆನ್ನಿಸಿಕೊಳ್ಳುವ ಮುನಿಯೂ ದಯೆಯಿಂದ ನಡೆಯತಕ್ಕದ್ದು. ೨೨೦ ಶ್ರೇಷ್ಠನಾದ ವ್ರತಸ್ಥನು ಕಠಿನವಾದ ತಪಸ್ಸಿನಿಂದ

ವರಸಂಯಮಿಯೆನಿಪುದು ದು
ರ್ಧರ ತಪದಿಂ ನಿಷ್ಕಷಾಯದಿಂ ಮುನಿಯೆನಿಪಂ
ಪರಮಶ್ರಾವಕನೆನಿಪಂ
ಕರವೊಳ್ಳಿದನೆನಿಪುದೆಸೆವ ದಾನಾದಿಗಳೊಳ್ ೨೨೧

ಎಂತೀಗಳ್ ಸೂರ್ಯಂಗೋ
ರಂತಿರೆ ತೀವ್ರೋಷ್ಣವೊಪ್ಪುಗುಂ ಭಾವಿಸುವಂ
ದಂತೆ ತಪಸ್ವಿಗಳ್ಗಮದೋ
ರಂತೊಪ್ಪುಗು ನಿಸ್ಪೃಹತ್ವಮುಂ ಸಂಯಮಮುಂ ೨೨೨

ಜಲಜಾತ ವಿರೋಧಿಗೆ ಶೀ
ತಳವೊಪ್ಪುಗುಮಿಾಗಳೆಂತು ತಾನಂತೆ ಮಹೀ
ತಳದೊಳುಪಾಸಕನಪ್ಪಂ
ಗಳವಟ್ಟೊಪ್ಪುಗು ಮಹೋನ್ನತಿಕ್ಕೆಯ ದಾನಂ . ೨೨೩

ದಾನದೊಳಂ ಪೂಜೆಯೊಳಂ
ತಾನೊಳ್ಳಿದೆನೆನಿಪುದವನಿಯೊಳುಪಾಸಕನಿಂ
ಧ್ಯಾನದೊಳಂ ಸಂಯಮದೊಳ
ಮೇನಿವರುರ್ವರೆಯೊಳಧಿಕರೆನಿಪುದು ಮುನಿಪರ್ ೨೨೪

ಕಷಾಯ ವಿರಹಿತನಾಗಿ ಮುನಿಯೆನ್ನಿಸಿಕೊಳ್ಳುವನು. ಪರಮಶ್ರಾವಕನೆನಿಸಿಕೊಳ್ಳುವವನು ದಾನಾದಿಗಳಲ್ಲಿ ಬಹಳ ಒಳ್ಳೆಯವನೆನಿಸಿಕೊಳ್ಳಬೇಕು. ೨೨೧. ಈಗ ಸೂರ್ಯನಿಗೆ ಹೇಗೆ ತೀವ್ರವಾದ ಉಷ್ಣವೊಪ್ಪುವುದೋ ಹಾಗೆಯೇ ಯೋಚಿಸಿದರೆ ತಪಸ್ವಿಗಳಿಗೆ ನಿಸ್ಪೃಹತೆಯೂ ಸಂಯಮವೂ ಒಪ್ಪುವುವು. ೨೨೨. ಕಮಲವಿರೋಧಿ(ಚಂದ್ರ)ಗೆ ಹೇಗೆ ಶೈತ್ಯವು ಶೋಭಿಸುತ್ತದೆಯೋ ಹಾಗೆಯೇ ಪ್ರಪಂಚದಲ್ಲಿ ಉಪಾಸಕನಾದವನಿಗೆ ಮಹೋನ್ನತಿಕೆಯಿಂದ ಕೊಡಿದ ದಾನವು ಶೋಭಿಸುತ್ತದೆ. ದಾನದಲ್ಲಿಯೂ ಪೂಜೆಯಲ್ಲಿಯೂ ತಾನು ಒಳ್ಳೆಯವನೆನಿಸಿಕೊಳ್ಳುವುದು ಉಪಾಸಕನಿಗೆ ಅಗತ್ಯ. ಇನ್ನು ಧ್ಯಾನದಲ್ಲಿಯೂ ಸಂಯಮದಲ್ಲಿಯೂ ಈ ಲೋಕದಲ್ಲಿ ಇವರು ಹೆಚ್ಚಿನವರೆಂದೆನ್ನಿಸಿಕೊಳ್ಳುವುದು ಮುನಿಶ್ರೇಷ್ಠರ ಲಕ್ಷಣ. ೨೨೩-೨೪. ಎತ್ತಿಗೆ ಹಿಣಿಲು ಒಪ್ಪುತ್ತದೆಯೇ ಹೊರತು ಕೆಚ್ಚಲು ಒಪ್ಪುವುದಿಲ್ಲ.

ಗದ್ಯ॥ ಎತ್ತಿಂಗೆ ಪಿಣಿಲೊಪ್ಪುಗುಮಲ್ಲದೆ ಕೆಚ್ಚಲೊಪ್ಪದಾವಿಂಗೆ ಕೆಚ್ಚಲೊಪ್ಪುಗುಮಲ್ಲದೆ ಪಿಣಿಲೊಪ್ಪದು ಪುರುಷಂಗೆ ಗಡ್ಡಮೀಸೆಯೊಪ್ಪುಗುಮಲ್ಲದೆ ಪೆರ್ಮೊಲೆಗಳೊಪ್ಪವು. ಸ್ತ್ರೀಯರ್ಗೆ ಪೆರ್ಮೊಡೆಗಳೊಪ್ಪುಗುಮಲ್ಲದೆ ಗಡ್ಡಮೀಸೆಯೊಪ್ಪವದಱಿಂ ಗೃಹಸ್ಥಂಗೆ ದಾನಾದಿ ಧರ್ಮಂಗಳೊಪ್ಪುಗುಮಲ್ಲದೆ ತಪದೊಳಾದಾಚರಣೆಯೊಪ್ಪದು ತಪಸ್ವಿಗಂ ದಾನಾಧ್ಯಯನ ಸಂಯಮಾದಿಗಳೊಪ್ಪುಗುಮಲ್ಲದೆ ಗೃಹಸ್ಥಾಚರಣವೊಪ್ಪದದು ಕಾರಣದಿಂ ತಂತಮ್ಮ ಮೇರೆಯಂ ದಾಂಟವೇಡ. ೨೨೫

ಸೊಡರುಂ ಕಿರ್ಚು ಕಿರ್ಚುಂ
ಗಡ ಕಿರ್ಚಂತೆರಡುಮೆಸೆವ ನಂಟರ್ತನಗಾ
ದೊಡೆ ಗಾಳಿಮಸಗಿ ಸೊಡರಂ
ಕಿಡಿಸುವವೊಲ್ ಕಿರ್ಚನೇಕೆ ಕಿಡಿಸದೊ ಮುನಿಸಿಂ ೨೨೬

ಗದ್ಯ॥ ಅಂತೆ ತಪಸ್ವಿಗಪ್ಪಾಚಾರಮಣುವ್ರತಿಗಳವಡದು; ಅಣುವ್ರತಂಗಪ್ಪಾಚಾರಂ ತಪಸ್ವಿಗಳವಡದು ; ಮುನ್ನಂ ದಾನದಿಂ ಪೂಜೆಯಿಂ ಶೀಲದಿಂದುಪವಾಸದಿಂದನಂತಸುಖಮನೆಯ್ದಿದ ಶ್ರೀಷೇಣ ಮಹಾರಾಜನ ಧನ್ಯಕುಮಾರನ ಕರಿಕಂತ ಮಹಾರಾಜನ ಸೌಧರ್ಮೇಂದ್ರನ ಸೀತಾದೇವಿಯ ಮಹಾದೇವಿಯ ನಾಗಕುಮಾರನ ಯೋಧನಮುಂಡನ ಕಥೆಗಳಂ ಕೇಳ್ದು ನಂಬಿ ದಾನಾದಿ ಧರ್ಮದೊಳೆಸಗುವುದು ೨೨೭

ಹಾಗೆಯೇ ಹಸುವಿಗೆ ಕೆಚ್ಚಲು ಶೋಭಿಸುವುದೇ ಹೊರತು ಹಿಣಿಲಂ ಶೋಭಿಸುವುದಿಲ್ಲ; ಗಂಡಸಿಗೆ ಗಡ್ಡ ಮೀಸೆಗಳು ಶೋಭಿಸುವುವೇ ಹೊರತು ದೊಡ್ಡ ಮೊಲೆಗಳು ಶೋಭಿಸುವುದಿಲ್ಲ. ಸ್ತ್ರೀಯರಿಗೆ ಮೊಲೆಗಳು ಒಪ್ಪುವುವೇ ಹೊರತು ಗಡ್ಡಮೀಸೆಗಳು ಒಪ್ಪುವುದಿಲ್ಲ. ಆದರಿಂದ ಗೃಹಸ್ಥನಿಗೆ ದಾನವೇ ಮೊದಲಾದ ಧರ್ಮಗಳು ಒಪ್ಪುವುವೇ ಹೊರತು ತಪಸ್ಸಿನ ಆಚರಣೆಯು ಒಪ್ಪುವುದಿಲ್ಲ. ತಪಸ್ಸಿಗೆ ದಾನ, ಅಧ್ಯಯನ, ಸಂಯಮ, ಮುಂತಾದವು ಒಪ್ಪುವುವೇ ಹೊರತು ಗೃಹಸ್ಥಾಚರಣೆಗಳು ಒಪ್ಪವು. ಆದಕಾರಣ ಯಾರೂ ತಮ್ಮ ತಮ್ಮ ಮೇರೆಯನ್ನು ದಾಟಬಾರದು. ೨೨೫ ದೀಪವೂ ಬೆಂಕಿ, ಆ ಬೆಂಕಿಯಂತೂ ಸರಿಯೇ ಸರಿ, ಈ ಎರಡೂ ತನಗೆ ಒಳ್ಳೆಯ ನಂಟರಾಗಿದ್ದರೂ ಗಾಳಿ ಸಿಟ್ಟಿಗೆದ್ದು ದೀಪವನ್ನು ಕೆಡಿಸುವ ಹಾಗೆ ಮುನಿಸಿನಿಂದ ಬೆಂಕಿಯನ್ನು ಏಕೆ ಕೆಡಿಸುವುದಿಲ್ಲವೊ! ೨೨೬. ಹಾಗೆ ತಪಸ್ವಿಗೆ ಆದ ಆಚರಣೆಯು ಅಣುವ್ರತಿಗೆ ಆಗದು, ಅವನಿಗೆ ಹೊಂದುವುದಿಲ್ಲ ; ಅಣುವ್ರತದವನಿಗೆ ಆದ ಆಚಾರ ತಪಸ್ವಿಗಳಿಗೆ ಹೊಂದುವುದಿಲ್ಲ ; ಮುಂಚೆ ದಾನದಿಂದ, ಪೂಜೆಯಿಂದ ಶೀಲದಿಂದ ಉಪವಾಸದಿಂದ, ಅನಂತಸುಖವನ್ನು ಹೊಂದಿದ ಶ್ರೀಷೇಣ ಮಹಾರಾಜನ, ಧನ್ಯಕುಮಾರನ, ಕರಿಕಂಠಮಹಾರಾಜನ, ಸೌಧರ್ಮೇಂದ್ರನ, ಸೀತಾದೇವಿಯ, ಮಹಾದೇವಿಯ, ನಾಗಕುಮಾರ, ಯೋಧನಮುಂಡನ ಕಥೆಗಳನ್ನು ಕೇಳಿ ನಂಬಿ, ದಾನವೇ ಮೊದಲಾದ ಧರ್ಮವನ್ನು ಆಚರಿಸತಕ್ಕದ್ದು. ೨೨೭. ದಾನ ಮೊದಲಾದುವುಗಳನ್ನು ಆಚರಿಸಲು

ದಾನಾದಿಗಳೊಳ್ ನೆಗಟಲ್
ತಾನಾಱದೆ ಪೇಣಿಯಪ್ಪವಂ ಮುನಿವರನುಂ
ತಾನೆಪ್ಪೆನೆಂದು ದೂರ್ತಿಂ
ಮೋನಂಗೊಂಡಿರ್ದೊಡಾಗದಕ್ಷಯ ಸೌಖ್ಯಂ ೨೨೮

ಪರಮಶ್ರೀಪತಿ ಶಾಂತಿತೀರ್ಥಕರನತ್ಯಾನಂದದಿಂ ದಾನಮಂ
ಸಿರಿಷೇಣಾವನಿಪಾಲನಾದ ಭವದೊಳ್ ತಾಂ ಮಾಡೆ ತದ್ದಾನದಿಂ
ಪಿರಿದಪ್ಪುನ್ನತಿವೆತ್ತು ನೋಡ ಕಡೆಯೊಳ್ ನಿರ್ವಾಣಲಕ್ಷ್ಮೀ ಮನೋ
ಹರನಾದಂ ದೃಢಚಿತ್ತದಿಂ ಸುಜನರುಂ ಮಾಳ್ಕಿರ್ತಿಯಿಂ ದಾನಮಂ ೨೨೯

ಗದ್ಯ॥ ಅಂತೆ ದಾನ ಚತುಷ್ಟಯದಿಂ ಪುಣ್ಯಬಂಧಮಕ್ಕುಮಾ ಪುಣ್ಯಬಂಧದಿಂ ಕ್ರಮಕ್ರಮದಿಂ ನಿರ್ವಾಣ ಸಾಮ್ರಾಜ್ಯಂ ದೊರೆಕೊಳ್ಗುಮೆಂಬುದಂ ಶಾಂತಿತೀರ್ಥೇಶ್ವರನ ಕಥಾಂತರದಿಂದ ಱಿದು ಬೆಣಕಚಂಗೆಡೆವರ ಮಾತು ಕೇಳ್ದು ದಾನಾದಿಗಳೊಳಪ್ಪರ್ಥವ್ಯಯಕ್ಕೆ ಮನದೊಳ್ ಮುಱುಗಿ ಮಾಡವೇಡ ೨೩೦

ತಪದ ನೆಗಟ್ತೆಗೆ ಬೇಸ
ತ್ತುಪವಾಸಕ್ಕಲಸಿ ಮನದೊಳಾಗಮಮಂ ತಾಂ
ಚಪಳತೆಯಿಂದಮಹರ್ನಿಶ
ಮುಪಾಯದಿಂ ಪಿಡಿವ ಮುನಿಗೆ ನಿರ್ವೃತಿದೂರಂ ೨೩೧

ಶಕ್ತನಾಗದೆ ಜಿಪುಣನಾದವನು ತಾನೂ ಮುನಿಶ್ರೇಷ್ಠನಾಗುವೆನೆಂದು ಧೂರ್ತತನದಿಂದ ಮೌನವನ್ನು ಕೈಕೊಂಡಿದ್ದರೆ ಅಕ್ಷಯ ಸೌಖ್ಯ ಲಭಿಸುವುದಿಲ್ಲ. ೨೨೮. ಪರಮಶ್ರೀ ಜಿನಪತಿ ಶಾಂತಿತೀರ್ಥಂಕರನು ಸಿರಿಷೇಣ ರಾಜನಾಗಿದ್ದ ಜನ್ಮದಲ್ಲಿ ಬಹಳ ಸಂತೋಷದಿಂದ ದಾನ ಮಾಡಿದ್ದರಿಂದ ಆ ದಾನದಿಂದ ಹೆಚ್ಚಿನ ಹಿರಿಮೆಯನ್ನು ಪಡೆದು ಕೊನೆಯಲ್ಲಿ ಮೋಕ್ಷ ಲಕ್ಷ್ಮೀ ಮನೋಹರನಾದನು. ಆದ್ದರಿಂದ ಸುಜನರಾದವರು ದೃಢ ಬುದ್ಧಿಯಿಂದ, ಪ್ರೀತಿಯಿಂದ ದಾನವನ್ನು ಮಾಡಲಿ. ೨೨೯. ಹಾಗೆ ನಾಲ್ಕು ಬಗೆಯ ದಾನಗಳಿಂದ ಪುಣ್ಯಲಾಭವಾಗುತ್ತದೆ. ಆ ಪುಣ್ಯದಿಂದ ಕ್ರಮಕ್ರಮವಾಗಿ ನಿರ್ವಾಣಸಾಮ್ರಾಜ್ಯ ಲಭಿಸುವುದೆಂಬುದನ್ನು ಶಾಂತಿತೀರ್ಥೇಶ್ವರನ ಕಥಾಂತರ್ಯದಿಂದ ತಿಳಿದು ಬೆಣಕಚಂ (?) ಗಳಹುವವರ ಮಾತನ್ನು ಕೇಳಿ ದಾನಾದಿಗಳಿಗೆ ಹಿಡಿಯುವ ಹಣದ ವೆಚ್ಚಕ್ಕೆ ಮನಸ್ಸಿನಲ್ಲಿ ಸಂಕಟಪಟ್ಟು ಮಾಡಬೇಡ. ೨೩೦. ತಪದ ಆಚರಣೆಗೆ ಬೇಸರಗೊಂಡು ಉಪವಾಸಕ್ಕೆ ಹಿಂತೆಗೆದು ಮನಸ್ಸಿನಲ್ಲಿ ಆಗಮವನ್ನು ತಾನು ಚಪಲತೆಯಿಂದ ಅಹೋರಾತ್ರಿ ಹಿಡಿಯುವ ಮುನಿಗೆ ನಿರ್ವೃತಿ ದೂರವಾಗಿಯೇ ಇರುತ್ತದೆ. ೨೩೧. "ನಮ್ಮ ಸೆಟ್ಟಿಯ ಮಾತು

ನಮ್ಮ ಸೆಟ್ಟಿಯುಮೊತ್ತೊಳ್ಳಿದುವು ಬಳ್ಳಂ ಕಿಱಿದೆಂಬಂತೆ ಮಾಡದೆ ಪ್ರಥಮತೀರ್ಥೇಶ್ವರ ನಂತೆ ಮೆಯ್ಯಮೋಹಮಿಲ್ಲದೆ ಸನತ್ಕುಮಾರಮುನಿಯಂತೆ ಜಿಹ್ವಾಲಂಪಟತೆಯಿಲ್ಲದ ಬಾಹುಬಲಿ ಯಂತೆ ನಿಂದೆಡೆಯಿಂ ತಳರದೆ ಗುರುದತ್ತಮುನಿಯಂತೆ ಘೋರೋಪಸರ್ಗಕ್ಕೆ ತಲ್ಲಣಿಸದೆ ಕುಮಾರ ಸ್ವಾಮಿಯಂತೆ ಚಿತ್ತದೊಳಳ್ಕದೆ ಧೈರ್ಯಸಮನ್ವಿತನಾಗಿರ್ಪೊಡೆ ಕೇವಲಧ್ಯಾನಮೊಪ್ಪುಗುಂ. ಈ ಕಾಲದವರ್ಗಳ್ ದರ್ಶನಶುದ್ಧರಾಗಿ ತಪದೊಳೊಳ್ಳಿದರೆನಿಸಿ ನಡೆವುದು ; ನಡೆಯೆ ಪುಣ್ಯಬಂಧ ಮಕ್ಕುಮಾಪುಣ್ಯಬಂಧದಿಂ ಅಷ್ಟವಿಧಕರ್ಮಂಗಳಂ ನಿರ್ಮೂಲಂ ಮಾಳ್ಪಶಕ್ತಿ ದೊರೆಕೊಳ್ಗು ಮದು ದೊರೆಕೊಳೆ ಕೈವಲ್ಯಲಕ್ಷ್ಮಿ ಸಾರ್ಗುಮದಱಿಂ ಕ್ರಿಯೆಸಹಿತಂ ತಪೋಮಾರ್ಗದೊಳೆಸಗುವುದು ೨೩೨

ಪುರುದೇವಂ ದೇವದೇವಂ ಪರಹಿತಚರಿತಂ ವಿಶ್ವಲೋಕಾಧಿಪಂ ಖೇ
ಚರನಾದಾಕಾಲದೊಳ್ ಮಾಡಿದ ತಪದ ಮಹಾಪುಣ್ಯದಿಂ ಸ್ವರ್ಗಸೌಖ್ಯೋ
ತ್ಕರಮುಂ ಕೈಸಾರ್ದು ವಿಭ್ರಾಜಿಸುವ ಮಹಿಮೆಯುಳ್ಳಕ್ಷಯಶ್ರೀಯೊಳಾತಂ
ನೆರೆದಂ ಕೀಳ್ಮಾಯೆಯಿಂದುಂ ಸುಟಿಯದೆ ತಪಮಂ ಮಾಟ್ಕೆ ನಿರ್ಮಾಯೆಯಿಂದಂ ೨೩೩

ಒಳ್ಳೆಯಂದು ಆದರೆ ಅವನ ಬಳ್ಳ ಚಿಕ್ಕದು" ಎಂಬ ಹಾಗೆ ಮಾಡದೆ ಮೊದಲನೆ ತೀರ್ಥಂ ಕರನಂತೆ ದೇಹ ಮೋಹವನ್ನು ಬಿಟ್ಟು ಸನತ್ಕುಮಾರಮುನಿಯ ಹಾಗೆ ನಾಲಗೆಯ ಚಪಲತೆಯಿಲ್ಲದೆ ಬಾಹುಬಲಿಯ ಹಾಗೆ ನಿಂತಕಡೆಯಿಂದ ಚಲಿಸದೆ ಗುರುದತ್ತ ಮುನಿಯ ಹಾಗೆ ಘೋರವಾದ ಹಿಂಸೆಗೆ ಗಾಬರಿಗೊಳ್ಳದೆ ಕುಮಾರಸ್ವಾಮಿಯ ಹಾಗೆ ಮನಸ್ಸಿನಲ್ಲಿ ಅಂಜದೆ ಧೈರ್ಯವುಳ್ಳವನಾಗಿದ್ದರೆ ಕೇವಲ ಧ್ಯಾನ ಶೋಭಿಸುವುದು. ಈ ಕಾಲದವರು ದರ್ಶನಶುದ್ಧರಾಗಿ ತಪಸ್ಸಿನಲ್ಲಿ ಒಳ್ಳೆಯವರೆನ್ನಿಸಿಕೊಂಡು ನಡೆಯಬೇಕು. ಹಾಗೆ ನಡೆ ದರೆ ಪುಣ್ಯ ಪ್ರಾಪ್ತಿಯಾಗುತ್ತದೆ. ಆ ಪುಣ್ಯ ಪ್ರಾಪ್ತಿಯಿಂದ ಅಷ್ಟವಿಧ ಕರ್ಮಗಳನ್ನು ನಿರ್ಮೂಲ ಮಾಡುವ ಶಕ್ತಿ ಉಂಟಾಗುತ್ತದೆ. ಅದು ಲಭಿಸಿದರೆ ಕೈವಲ್ಯಲಕ್ಷ್ಮಿಯು ಲಭಿ ಸುತ್ತದೆ. ಆದ್ದರಿಂದ ಕ್ರಿಯಾಶೀಲರಾಗಿ ತಪೋಮಾರ್ಗದಲ್ಲಿ ನಡೆದುಕೊಳ್ಳತಕ್ಕದ್ದು ೨೩೨. ದೇವ ದೇವನೂ ಪರಹಿತ ಚರಿತ್ರನೂ ವಿಶ್ವಲೋಕಾಧಿಪನೂ ಆದ ಪುರುದೇವನು ಖೇಚರನಾದ ಕಾಲದಲ್ಲಿ ಮಾಡಿದ ತಪಸ್ಸಿನ ಮಹಾಪುಣ್ಯದಿಂದ ಸ್ವರ್ಗಸೌಖ್ಯಾಧಿಕ್ಯವು ಕೈ ಸೇರಿತು. ರಾರಾಜಿಸುವ ಮಹಿಮೆಯುಳ್ಳ ಅಕ್ಷಯಶ್ರೀಯಲ್ಲಿ ಆತನು ನೆರೆದನು, ಮಾಯೆ ಯಿಂದ ತಪಸ್ಸು ನಡೆಯದು, ಯಾವ ಮಾಯೆಯೂ ಇಲ್ಲದೆ ತಪಸ್ಸನ್ನಾಚರಿಸಬೇಕು. ೨೩೩. ಹಾಗೆ ತಪಸ್ಸಿನಿಂದ ಪುಣ್ಯಪ್ರಾಪ್ತಿ, ಪುಣ್ಯದಿಂದ ಕ್ರಮ ಕ್ರಮವಾಗಿ ಮೋಕ್ಷಲಕ್ಷ್ಮಿ

ಗದ್ಯ॥ ಅಂತೆ ತಪದಿಂ ಪುಣ್ಯಬಂಧಮಕ್ಕುಮಾಪುಣ್ಯದಿಂ ಮೆಲ್ಲಮೆಲ್ಲನೆ ನಿಶ್ರೇಯಸಶ್ರೀಯೊಳ್ಕೂಡಲಕ್ಕುಮೆಂಬುದನಾದಿತೀರ್ಥೇಶ್ವರನ ಕಥಾಂತರದೊಳ್ ತಿಳಿವುದು. ಸೋಂಬರ ಮಾತಂ ಕೇಳ್ದು ತಪದೊಳಾದಬೇವಸಕ್ಕಲಸವೇಡ ೨೩೪

ಇರುಳೊಳ್ಚಂದ್ರನ ಪಗಲೊಳ್
ಖರಕರನುದಯಂಗಳಾಗದಭ್ಯುದಯಂ ಮ
ತ್ತಿರುಳೊಳ್ಸೂರ್ಯಂ ಪಗಲೊಳ್
ಸರಸಿಜರಿಪುವೊಗೆಯೆ ಜಗದೊಳದ್ಭುತಮಲ್ತೇ ೨೩೫

ಗದ್ಯ॥ ಅದಱಿಂ ಕೇವಲಧ್ಯಾನಂ ಮುನ್ನಂಸಂದ ಮಹಾಪುರುಷರ್ಗಳವಡುಗುಮಲ್ಲದೆ ಈಗಳಿನವರ್ಗಳವಡದು ೨೩೬

ಜಿನವಚನದೋಜೆಯಿಂದಂ
ಮನಮಂ ಸೈತಿಟ್ಟು ಬಿಟ್ಟು ದುರ್ಮಾರ್ಗಮನಾ
ರ್ಪನಿತಂ ಸುವ್ರತದೊಳ್ ನೆ
ಟ್ಟನೆ ಮಾಳ್ಪುದು ನೆಗಳ್ವ ತಪಮುಮಂ ದಾನಮುಮಂ ೨೩೭

ಗದ್ಯ॥ ಎಂದು ಯತಿಧರ್ಮಮುಮಂ ಶ್ರಾವಕಧರ್ಮಮುಮನೀಬಾಗಿರೆ ಜಿನೇಂದ್ರಭಕ್ತಸೆಟ್ಟಿ ಸಂಕ್ಷೇಪದಿಂ ಪೇೞೆ ಸೂರ್ಪಂ ಕೇಳ್ದು ತಪದೊಳತಿಪ್ರೀತನಾಗಿ ಸಂಸಾರಕ್ಕೆ ಪೇಸಿ ಜಿನದೀಕ್ಷೆಯಂ ಕೈಕೊಂಡುಗ್ರೋಗ್ರತಪದಿಂ ನೆಗಟ್ಟು ಕಡೆಯೊಳ್ ಸಮಾಧಿಮರಣದಿಂ ಮುಡಿಪಿ ದೇವಗತಿವಡೆದಂ

ಯೊಂದಿಗೆ ಕೂಡಲಾಗುವುದು, ಎಂಬುದನ್ನು ಆದಿತೀರ್ಥಂಕರ ಕಥೆಯಲ್ಲಿ ತಿಳಿಯುವುದು, ಸೋಮಾರಿಗಳ ಮಾತನ್ನು ಕೇಳಿ ತಪಸ್ಸಿನಲ್ಲಿ ಆಗುವ ಆಯಾಸಕ್ಕೆ ಹಿಂದೆಗೆಯಬೇಡ, ೨೩೪ ರಾತ್ರಿಯಲ್ಲಿ ಚಂದ್ರನ ಉದಯ, ಹಗಲಿನಲ್ಲಿ, ಸೂರ್ಯನ ಉದಯ ಆಗಲು, ಸಾಧ್ಯವಾಗದ ಅಭ್ಯುದಯವು ಇನ್ನು ರಾತ್ರಿ ಸೂರ್ಯೋದಯವೂ ಹಗಲು ಚಂದ್ರೋದಯವೂ ಆದರೆ ಲೋಕದಲ್ಲಿ ಆಶ್ಚರ್ಯವಲ್ಲವೆ ? ೨೩೫. ಆದ್ದರಿಂದ ಕೇವಲಧ್ಯಾನವು ಹಿಂದೆ ಆಗಿ ಹೋದ ಮಹಾ ಪುರುಷರಿಗೆ ಸಾಧ್ಯವಾಯಿತೇ ಹೊರತು ಈ ಕಾಲದವರಿಗೆ ಅದು ಸಾಧ್ಯವಲ್ಲ. ೨೩೬. ಜಿನವಚನದ ಕ್ರಮದಂತೆ ಮನಸ್ಸನ್ನು ಶಾಂತಪಡಿಸಿ ದುರ್ಮಾರ್ಗವನ್ನು ಬಿಟ್ಟು ಸಾಧ್ಯವಾದಷ್ಟೂ ಸುವ್ರತದಲ್ಲಿ ನೇರವಾಗಿ ನಡೆದುಕೊಳ್ಳುತ್ತ ದಾನ, ತಪಸ್ಸುಮಾಡತಕ್ಕದ್ದು. ೨೩೭. ಹೀಗೆ ಯತಿಧರ್ಮವನ್ನೂ ಗೃಹಸ್ಥಧರ್ಮವನ್ನೂ ಅನುಕೂಲವಾಗಿ ಜಿನೇಂದ್ರಭಕ್ತಸೆಟ್ಟಿ ಸಂಕ್ಷೇಪವಾಗಿ ಹೇಳಲು ಸೂರ್ಪನು ಕೇಳಿ ತಪಸ್ಸಿನಲ್ಲಿ ಬಹಳ ಪ್ರೀತನಾಗಿ ಸಂಸಾರಕ್ಕೆ ಅಸಹ್ಯಪಟ್ಟು ಜಿನದೀಕ್ಷೆಯನ್ನು ಸ್ವೀಕರಿಸಿ ಉಗ್ರವಾದ ತಪಸ್ಸನ್ನು ಆಚರಿಸಿ ಕಡೆಗೆ ಸಮಾಧಿ ಮರಣ ಹೊಂದಿ ದೇವಗತಿಯನ್ನು ಹೊಂದಿದನು. ಸಮ್ಯಕ್ತ್ವ

ಸಮ್ಯಕ್ತ್ವಚೂಡಾಮಣಿಯುಮುಪಗೂಹನದ ಫಲದಿಂದಿಹತ್ರೆಯೊಳಾದ ಕೀರ್ತಿಗಂ ಪರತ್ರೆಯೊಳಾದ ಸೌಖ್ಯಕ್ಕಂ ಭಾಜನನಾದನಿಂತು ೨೩೮

ಪರಮಶ್ರಾವಕನೆನಿಸುವ
ಪುರುಷಂ ಕಣ್ಣಾರೆ ಮುನಿಯ ಪೊಲ್ಲಮೆಯಂ ವಿ
ಸ್ತರದಿಂದಂ ಕಂಡದನು
ರ್ವರೆಯೊಳ್ ನೆಱೆ ದೂಱದುಸಿರದಿರ್ಪುದು ನಯದಿಂ ೨೩೯

ಜಲಧಿಯೊಳು ಕಪ್ಪೆ ಸತ್ತೊಡೆ
ಜಲಧಿಯನೀರೆಲ್ಲಮಟ್ಟಕೊಳೆ ನಾರ್ಪುದೆ ನಿ
ರ್ಮಲನಲ್ಲದೊರ್ವನಿಂದಂ
ಮಲಿನತೆ ಪೊರ್ದುವುದೆ ವಿಮಳಸದ್ಧರ್ಮಕ್ಕಂ ೨೪೦

ಉಪಗೂಹನಮಂ ಮಾಳ್ಪುದು
ವಿಪರೀತಮನುಳ್ಳ ಧರ್ಮಮಂ ಬಿಡುವುದು ಜೈ
ನ ಪದಾಂಬುಜಾತಮಂ ಮಿ
ಕ್ಕಪವರ್ಗದ ಬಟ್ಟೆಯೆಂದು ಪಿಡಿವುದು ಭವ್ಯಂ ೨೪೧

ಎಂದುಪಗೂಹನದೊಳಾದ ಕಥೆಯಂ ಗೌತಮಸ್ವಾಮಿಗಳ್ ಪೇಳ್ವುದುಂ ೨೪೨

ಚೂಡಾಮಣಿಯೂ ಉಪಗೂಹನದ ಫಲದಿಂದ ಇಹಲೋಕದಲ್ಲಿ ಹೆಚ್ಚಿನ ಕೀರ್ತಿಗೂ ಪರಲೋಕದಲ್ಲಿ ಸೌಖ್ಯಕ್ಕೂ ಪಾತ್ರನಾದನು. ೨೩೮. ಹೀಗೆ ಪರಮಶ್ರಾವಕನೆನ್ನಿಸಿಕೊಳ್ಳುವ ಪುರುಷನು ಮುನಿಯ ನೀಚತನವನ್ನು ಕಣ್ಣಾರೆ ಕಂಡಿದ್ದರೂ ಅದನ್ನು ಲೋಕದಲ್ಲಿ ದೂರದೆ, ಹೇಳದೆ, ಇರುವುದು. ೩೩೯. ಸಮುದ್ರದಲ್ಲಿ ಒಂದು ಕಪ್ಪೆ ಸತ್ತರೆ ಸಮುದ್ರದ ನೀರೆಲ್ಲ ಕೊಳೆತು ನಾರುವುದೆ? ಪರಿಶುದ್ಧನಲ್ಲದವನೊಬ್ಬನಿಂದ ವಿಮಲವಾದ ಸದ್ಧರ್ಮಕ್ಕೆ ಮಲಿನತೆಯಾಗುವುದೆ? ೨೪೦. ಉಪಗೂಹನವನ್ನು ಮಾಡಬೇಕು. ವೈಪರೀತ್ಯವನ್ನುಳ್ಳ ಧರ್ಮವನ್ನು ಬಿಡುವುದು, ಜಿನಪದ ಕಮಲಗಳನ್ನು ಶ್ರೇಷ್ಠವಾದ ಮೋಕ್ಷದ ದಾರಿಯೆಂದು ನಂಬಿ ಭವ್ಯನಾದವನು ಹಿಡಿಯಬೇಕು. ೨೪೧ ಹೀಗೆ ಉಪಗೂಹನದ ಕಥೆಯನ್ನು ಗೌತಮ ಸ್ವಾಮಿಗಳು ಹೇಳಲಾಗಿ ಪ್ರಪಂಚದಲ್ಲಿಯೇ ಪ್ರಖ್ಯಾತವಾದ ಕೀರ್ತಿಯ ಧ್ವಜ

ಭುವನಪ್ರಖ್ಯಾತ ಕೀರ್ತಿಧ್ವಜನಮಳಯಶಂ ಸತ್ಯವಾರಾಶಿ ಚಿತ್ತೋ
ದ್ಭವಮೋಘಾನೀಕತೀವ್ರಾನಳನಘಹರಣಂ ಕೂರ್ಮೆಯಿಂ ಪೇಟ್ಕೆ ಚಿತ್ತೋ
ತ್ಸವದಿಂ ತ್ರೈವಿದ್ಯಚಕ್ರೇಶ್ವರವಿಮಳ ಪದಾಂಭೋಜಭೃಂಗಂ ವಿನೇಯ
ಪ್ರವರಂ ಸಾನಂದನಾದಂ ಸುಕವಿಜನಮನಃಪದ್ಮಿನೀರಾಜಹಂಸಂ ೨೪೩

ಇದು ನಿಖಿಳದಿವಿಜಪರಿದೃಢಮುಕುಟತಟ ಘಟಿತಮಣಿಗಣನಿಕರ ವಿಲುಳಿತಕಿರಣ ಚುಂಬನೀಯ ಪರಮಜಿನಚರಣಯುಗಳಸರಸಿರುಹಮತ್ತಮಧುಕರ ನಿರುಪಮಸಹಜಕವಿಜನಮನಃ ಪಯೋಧಿಹಿಮಕರ ನುತಭಾವಯುತ ದಿಗಂಬರದಾಸ ನೂತ್ನಕವಿತಾವಿಳಾಸ ಶ್ರೀಮನ್ನಯಸೇನ ದೇವವಿರಚಿತಮಪ್ಪ ಧರ್ಮಾಮೃತದೊಳ್ ದರ್ಶನಪಂಚಮಾಂಗವ್ಯಾವರ್ಣನಂ

## ಷಷ್ಠಾಶ್ವಾಸಂ

ವೇರಿಸಿದವನು, ಪರಿಶುದ್ಧ ಯಶಸ್ಸುಳ್ಳವನು, ಸತ್ಯಸಾಗರನು, ಚಿತ್ತದಲ್ಲಿ ಹುಟ್ಟುವ ಮೋಘ ಸಮೂಹ(ಕಾಮನೆಗಳ) ರಾಶಿಗೆ ತೀವ್ರ ಮಾರುತನಂಥವನು, ಪಾಪಪರಿಹಾರಕ ನಾದ ಗೌತಮ ಸ್ವಾಮಿ ಪ್ರೀತಿಯಿಂದ ಹೇಳಲು ಮನದುತ್ಸಾಹದಿಂದ ತ್ರೈವಿದ್ಯ ಚಕ್ರೇಶ್ವರನ ವಿಮಲಪಾದಕಮಲಗಳಲ್ಲಿನ ತುಂಬಿ, ವಿನೇಯಜನ ಶ್ರೇಷ್ಠನಾದ ಸುಕವಿಜನ ಮನ: ಪದ್ಮಿನೀರಾಜಹಂಸ (ಶ್ರೇಣಿಕ ಮಹಾರಾಜನು) ಆನಂದ ಹೊಂದಿದನು. ೨೪೩.

ಇದು ಸಮಸ್ತ ದೇವತೆಗಳ ಶಿರಸಾಷ್ಟಾಂಗ ಪ್ರಣಾಮಗಳನ್ನುಹೊಂದಿದ
ಜಿನನ ಪಾದ ಕಮಲಗಳಲ್ಲಿ ತುಂಬಿಯಾದ
ನಿರುಪಮ ಸಹಜಕವಿ, ಕವಿಗಳೆಂಬ ಪಾಲ್ಗಡಲಿಗೆ
ಚಂದ್ರನಾದ'ದಿಗಂಬರದಾಸ, 'ನೂತ್ನಕವಿತಾವಿಲಾಸ'
ಎಂಬ ಬಿರುದುಗಳುಳ್ಳ ಶ್ರೀಮನ್ನಯಸೇನದೇವ
ವಿರಚಿತವಾದ 'ಧರ್ಮಾಮೃತ' ದಲ್ಲಿ ದರ್ಶನ ಪಂಚಮಾಂಗ
ವರ್ಣನೆಯುನ್ನೊಳಗೊಂಡ ಷಷ್ಠಾಶ್ವಾಸ

# ಸಪ್ತಮಾಶ್ವಾಸಂ

ಶ್ರೀನಿರ್ವೃತಿ ವನಿತೆಗೆ ಪೆಱ
ತೇನುಪಗೂಹನ ಗುಣಂ ಲಸನ್ಮಣಿಹಾರಂ
ತಾನೆಂದು ನಂಬಿದಂ ವಿಬು
ಧಾನಂದಂ ಸುಕವಿನಿಕರ ಪಿಕವಾಕಂದಂ ೧

ಅಂತುಪಗೂಹನದೊಂದು ಕ
ಥಾಂತರಮಂ ಕೇಳ್ದು ನಂಬಿ ಮನದೊಳ್ ಪಿರಿದುಂ
ಸಂತೋಷಮಾಗೆ ಧಾತ್ರೀ
ಕಾಂತಂ ಪಿರಿದುಂ ಮಹೋತ್ಸವಂಬೆರಸಾಗಳ್ ೨

ಗಣಧರ ಸ್ವಾಮಿಗಳ ಪಾದ ಪಯೋರುಹಕ್ಕೆ ಮಱಿದುಂಬಿಯಂತೆಱಗಿ ಕೈಗಳಂ ಮುಗಿದು ತಲೆಯಂ ಬಾಗಿ ನಿಮ್ಮಡಿ ಕಾರುಣ್ಯದಿಂ ಮುಂದಣ ಸ್ಥಿತಿಕರಣದ ಕಥೆಯಂ ಎನಗಱಿವಂತಾಗೆ ಬೆಸಸುವುದೆಂಬುದುಂ ಗಣಧರಸ್ವಾಮಿಗಳ್ ಕೈವಲ್ಯ ಲಕ್ಷ್ಮಿಯ ನಚ್ಚುವಾಭರಣಮಪ್ಪ ಸ್ಥಿತಿಕರಣದ ಕಥೆಯುಂ ಇಂತೆಂದು ಪೇಟ್ದರ್ : ಅಗ್ನಿಯಂತೆ ಮದದಾನೆಯಂತೆ, ವಾರದಂತೆ, ಕುಲಶೈಲದಂತೆ ಜಂಬೂದ್ವೀಪದಂತೆ ಸಪ್ತಸ್ವರದಂತೆ ಮಾಳವದಂತೆ ದೇವೇಂದ್ರನ ಬರವಿನಂತೆ ರಾಜ್ಯದಂತೆ

ಮೋಕ್ಷಲಕ್ಷ್ಮಿಯೆಂಬ ಹೆಂಗಸಿಗೆ ಉಪಗೂಹನ ಪ್ರಕಾಶಮಾನವಾದ ಒಂದು ಮಣಿ ಹಾರವಲ್ಲದೆ ಬೇರೇನೂ ಅಲ್ಲವೆಂದು ಪಂಡಿತರಿಗೆ ಆನಂದದಾಯಕನಾದ ಶ್ರೇಣಿಕ ಮಹಾ ರಾಜನು ನಂಬಿದನು. ಅವನು ಉಪಗೂಹನದ ಒಂದು ಕಥೆಯನ್ನು ಕೇಳಿ ನಂಬಿ ಮನಸ್ಸಿನಲ್ಲಿ ವಿಶೇಷ ಸಂತೋಷವಾಗಲು ಆ ರಾಜನು ಬಹಳ ಉತ್ಸಾಹದಿಂದ ಆಗ ಗಣಧರಸ್ವಾಮಿಗಳ ಪಾದಕಮಲಗಳಿಗೆ ನಮಸ್ಕಾರ ಮಾಡಿ ಕೈಮುಗಿದು ತಲೆಬಾಗಿ, ನಿಮ್ಮ ಪಾದಗಳ ದಯೆಯಿಂದ ಮುಂದಿನ ಸ್ಥಿತಿಕರಣದ ಕಥೆಯನ್ನು ನನಗೆ ತಿಳಿಸುವ ಹಾಗೆ ಹೇಳಬೇಕು ಎಂದು ಕೇಳಿಕೊಂಡನು. ಆಗ ಗಣಧರಸ್ವಾಮಿಗಳು ಕೈವಲ್ಯಲಕ್ಷ್ಮಿಯ ಪ್ರೀತಿಯ ಆಭರಣವಾದ ಸ್ಥಿತಿಕರಣದ ಕಥೆಯನ್ನು ಹೀಗೆ ಹೇಳಿದರು : ಅಗ್ನಿಯಂತೆ (ಸಪ್ತಜಿಹ್ವ) ಮದ್ದಾನೆಯಂತೆ (ಸಪ್ತಮದಗಳು) ವಾರದಂತೆ (ಏಳುದಿನಗಳು) ಕುಲಶೈಲ ದಂತೆ (ಸಪ್ತಕುಲಪರ್ವತಗಳು) ಜಂಬೂದ್ವೀಪದಂತೆ, (ಸಪ್ತಕ್ಷೇತ್ರಗಳಿಂದ ಕೂಡಿದ್ದು) ಸಪ್ತಸ್ವರಗಳಂತೆ(ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ, ನಿಷಾದ) ಮಾಳವದಂತೆ (ಸಪ್ತಮಾಳವವೆಂದೇ ಆ ದೇಶದ ಹೆಸರು) ದೇವೇಂದ್ರನ ಬರವಿನಂತೆ (ಅರ್ಹಂತನಿರುವ ದಿಕ್ಕಿನ ಕಡೆಗೆ ಮೊದಲು ಏಳು ಹೆಜ್ಜೆ ಇಡುವುದು ವಾಡಿಕೆ) ರಾಜ್ಯ ದಂತೆ (ಸಪ್ತಾಂಗಗಳುಳ್ಳದ್ದು, ರಾಜ್ಯಕ್ಕೆ 'ಸಪ್ತಾಂಗ' ಎಂದೂ ಹೆಸರು) ಋದ್ಧಿಯಂತೆ

ಋದ್ಧಿಯಂತೆ ಕಮಠೋಪಸರ್ಗಕ್ಕೆ ಬಂದ ಧರಣೇಂದ್ರನಂತೆ ದರ್ಶನಮುಂ ನಿಶ್ಶಂಕೆಯುಂ ನಿಷ್ಕಾಂಕ್ಷೆಯುಂ ನಿರ್ವಿಚಿಕಿತ್ಸೆಯುಂ ಅಮೂಢದೃಷ್ಟಿತ್ವಮುಂ ಉಪಗೂಹನಮುಂ ಸ್ಥಿತಿಕರಣಮು ಮೆಂಬೀ ಟರೊಳಂ ಶೋಭೆವಡೆವುದು ೩

ಸ್ಥಿತಿಕರಣಂ ವಾಗ್ವನಿತೆಯ
ಮತಿ ಕೀರ್ತಿಶ್ರೀಯ ನಿಳಯಮಪವರ್ಗಶ್ರೀ
ಸತಿಯ ಮಣಿಹಾರಮೆಂದಿಂ
ತತಿಮುದದಿಂ ಮಾಟ್ಕೆ ಭವ್ಯನಪ್ಪಂ ಮನದೊಳ್ ೪

ಇನ್ನದಱೊಳಾದ ವಿಭವಮೆಂತೆಂದೊಡೆ ೫

ಸರಸಿಜ ನೇತ್ರೆ ಸಲ್ಲಲಿತಗಾತ್ರೆ ಕುಲೈಕಪವಿತ್ರೆ ಗಂಧಸಿಂ
ಧುರನಿಭಯಾನೆ ಶೀಲ ಗುಣಧಾರೆ ಚರಿತ್ರನಿಧಾನೆ ಸಜ್ಜಿನೇ
ಶ್ವರಪದ ಭಕ್ತೆ ಸರ್ವಗುಣಯುಕ್ತೆ ಸುಧಾಕರವಕ್ತ್ರೆ ಮಾನವೋ
ತ್ಕರನುತಪಾದ ಪಂಕರುಹೆ ಚೇಳಿನಿದೇವಿ ಮಹೀತಳಾಗ್ರದೊಳ್ ೬

ಮನಸಿಜಕಾಂತೆಗಮಂತಿಂ
ದ್ರನ ಸತಿಗಂ ಚಂದ್ರಮನ ವನಿತೆ ರೋಹಿಣಿಗಂ
ತಾಂ ನೂರ್ಮಡಿ ರೂಪಕ್ಕಂ
ಜಿನಚರಣಸರೋಜಭಕ್ತಿಗಂ ವಿನಯಕ್ಕಂ ೭

(ಸಪ್ತ ಋದ್ಧಿಗಳು) ಕಮಠೋಪಸರ್ಗಕ್ಕೆ ಬಂದ ಧರಣೇಂದ್ರನಂತೆ, (ಕಮಠನೆಂಬ ಜನ್ಮಾಂತರ ವೈರಿ ಪಾರ್ಶ್ವನಾಥನಿಗೆ ಉಪಸರ್ಗವನ್ನುಂಟು ಮಾಡುತ್ತಿದ್ದಾಗ ಬಂದ ಧರಣೇಂದ್ರನಿಗೆ ಏಳು ಹೆಡೆಗಳಿದ್ದವು.) ದರ್ಶನವೂ ನಿಶ್ಶಂಕೆಯೂ ನಿಷ್ಕಾಂಕ್ಷೆಯೂ ನಿರ್ವಿಚಿಕಿತ್ಸೆಯೂ ಅಮೂಢ ದೃಷ್ಟಿತ್ವವೂ ಉಪಗೂಹನವೂ ಸ್ಥಿತಿಕರಣವೂ ಎಂಬ ಈ ಏಳರಲ್ಲಿಯೂ ಶೋಭಾಯಮಾನವಾಗಿದೆ ೧-೩. ಸ್ಥಿತಿಕರಣವು ವಾಗ್ದೇವಿಯ ಮತಿ, ಕೀರ್ತಿಲಕ್ಷ್ಮಿಯ ಮನೆ, ಮೋಕ್ಷಲಕ್ಷ್ಮಿಯ ರತ್ನಹಾರ ಎಂದು ಭವ್ಯನು ಮನಸ್ಸಿನಲ್ಲಿ ಸಂತೋಷದಿಂದ ಭಾವಿಸಬೇಕು. ೪. ಇನ್ನು ಅದರಲ್ಲಿ ಆದ ವೈಭವ ಹೇಗೆಂದರೆ ೫. ಕಮಲನೇತ್ರೆ, ಸುಂದರಾಕಾರಳು, ಕುಲಪವಿತ್ರಳೂ, ಮದ್ದಾನೆಯಂಥ ನಡಿಗೆಯುಳ್ಳವಳೂ ಶೀಲಗುಣಗಳನ್ನು ಧರಿಸಿದವಳೂ ಚಾರಿತ್ರ್ಯದ ನಿಧಿಯಂಥವಳೂ ಶ್ರೇಷ್ಠ ಜಿನೇಶ್ವರನ ಪಾದಭಕ್ತಳೂ ಸಮಸ್ತಗುಣಗಳಿಂದ ಕೂಡಿದವಳೂ, ಚಂದ್ರಮುಖಿಯೂ ಮಾನವ ಸಮೂಹಗಳಿಂದ ಹೊಗಳಿಕೆಯನ್ನು ಹೊಂದಿದ ಪಾದಕಮಲಗಳುಳ್ಳವಳೂ ಆದ ಚೇಳಿನಿ ದೇವಿ ಪ್ರಸಿದ್ಧಳು. ೬. ಅವಳು ರತಿದೇವಿಗೂ ಶಚಿದೇವಿಗೂ ಚಂದ್ರನ ಪತ್ನಿಯಾದ ರೋಹಿಣೀದೇವಿಗೂ ರೂಪದಲ್ಲಿ, ವಿನಯದಲ್ಲಿ, ಜಿನಪಾದ ಭಕ್ತಿಯಲ್ಲಿ, ನೂರರಷ್ಟು ದೊಡ್ಡವಳು. ೭. ಒಳ್ಳೆಯಬುದ್ಧಿ, ಅತಿಶಯವಾದ ವಿಲಾಸಗಳಲ್ಲಿ, ಜಾನಕಿ, ಭಾರತಿ,

ಜನಕಜೆಗೆ ಭಾರತಿಗೆ ಗೋ
ವಿನಿಗೆ ತಿಲೋತ್ತಮೆಗೆ ನೋಡೆ ಸಾಸಿರ್ಮಡಿ ಚೇ
ಳಿನಿ ಶೀಲದೇಟ್ಗಿಗಂ ವೇ
ದಿನಿಯೊಳಗೆ ಸುಬುದ್ಧಿಗಂ ವಿಳಾಸೋನ್ನತಿಗಂ ೮

ದಯೆಯ ತವರ್ಮನೆ ಭವ್ಯ
ಪ್ರಿಯೆ ಸಕಲಜನಾನುರಾಗೆ ಜಿನಪಾದಪದ
ದ್ವಯವನಜ ಮತ್ತಮಧುಕರೆ
ನಯವಿದೆ ಭುವನೈಕಪೂಜ್ಯೆ ಚೇಳಿನಿ ಧರೆಯೊಳ್ ೯

ಗದ್ಯ॥ ಎನಿಸಿ ನೆಗಟ್ತೆಗಂ ಪೊಗಟ್ತೆಗಂ ನೆಲೆಯಾದ ಚೇಳಿನಿಮಹಾದೇವಿಗಂ ನಿನಗಂ ೧೦

ಉದಯಗಿರಿಯೊಳ್ ದಿವಾಕರ
ನುದಯಂಗೆಯ್ವಂತೆ ಸಕಲ ಗುಣಗಣ ನಿಳಯಂ
ವಿದಿತ ಯಶಃಪುಂಜಂ ಪು
ಟ್ಟಿದನೊಪ್ಪಿರೆ ವಾರಿಷೇಣನೆಂಬ ಕುಮಾರಂ ೧೧

ಅಂತಾ ಸದ್ಗುಣನಿಧಿ ವಿ
ಖ್ಯಾತಂ ಭೂಭುವನವಂದಿತಕ್ರಮಯುಗ್ಮಂ
ನೀತಿವಿದಂ ಭವ್ಯಜನ
ಪ್ರೀತಂ ಜಿನಸಮಯವಾರ್ಧಿವರ್ಧನ ಚಂದ್ರಂ ೧೨

ಮಹಾಲಕ್ಷ್ಮಿ, ತಿಲೋತ್ತಮೆಯರಿಗೆ ಸಾವಿರ ಪಟ್ಟು ಶ್ರೇಷ್ಠಳು. ಚೇಳಿನಿದೇವಿ ಸುಶೀಲದ ಏಳಿಗೆಯುಳ್ಳವಳು. ೮. ಅವಳು ದಯೆಯ ತವರುಮನೆ, ಭವ್ಯರಿಗೆ ಪ್ರಿಯಳು, ಸಮಸ್ತ ಜನಗಳ ಅನುರಾಗಕ್ಕೆ ಪಾತ್ರಳು. ಜಿನಪಾದಯುಗಳವೆಂಬ ಕಮಲಗಳಲ್ಲಿ ಮಕರಂದ ಪಾನಮಾಡಿ ಮದಿಸಿದ ದುಂಬಿ, ನಯಜ್ಞಳು, ಭೂಮಂಡಲದಲ್ಲಿ ಅತಿಶಯ ವಾದ ಪೂಜ್ಯತೆಯನ್ನು ಹೊಂದಿದವಳು, ಚೇಳಿನಿದೇವಿ. ೯. ಹೀಗೆ ಪ್ರಸಿದ್ಧಿಗೂ ಹೊಗಳಿಕೆಗೂ ವಾಸಸ್ಥಾನವಾದ ಚೇಳಿನಿ ಮಹಾದೇವಿಗೂ ನಿನಗೂ (ಶ್ರೇಣಿಕ ಮಹಾ ರಾಜ) ಉದಯಪರ್ವತದಲ್ಲಿ ಸೂರ್ಯನು ಹುಟ್ಟುವಂತೆ ಸಮಸ್ತ ಗುಣಸಮೂಹಕ್ಕೆ ಆಶ್ರಯನಾದ, ಲೋಕದಲ್ಲೆಲ್ಲ ಹಬ್ಬಿದ ಯಶೋರಾಶಿಯುಳ್ಳವನಾದ ವಾರಿಷೇಣನೆಂಬ ಮಗನು ಹುಟ್ಟಿದನು. ೧೦-೧೧. ಹಾಗೆ ಸದ್ಗುಣಗಳ ನಿಧಿಯುಂಥವನೂ ಸುಪ್ರಸಿದ್ಧನೂ ಭೂಲೋಕದಲ್ಲೆಲ್ಲ ವಂದನೆಯನ್ನು ಪಡೆದ ಪಾದಯುಗಳವುಳ್ಳವನೂ ನೀತಿಜ್ಞನೂ ಭವ್ಯಜನರಿಗೆ ಪ್ರೀತಿಪಾತ್ರನೂ ಜೈನಧರ್ಮವೆಂಬ ಸಮುದ್ರಕ್ಕೆ ವೃದ್ಧಿಯನ್ನುಂಟು ಮಾಡುವ ಚಂದ್ರನೂ ಆದ ಆ ಕುಮಾರನು ಬಹಳ ೧೨. ದೃಢಚಿತ್ತವುಳ್ಳವನು; ಮಹಾ

ದೃಢಚಿತ್ತಂ ಗುಣನಿಳಯಂ
ಕಡುಗಲಿ ಕಿಱಿಯಂದು ದಿವ್ಯಜಿನಮುನಿಗಳ ಮೆ
ಲ್ಲಡಿಯಂ ಪಿಡಿದು ತಳರ್ನಡೆ
ನಡೆಗಲ್ತಂ ಭವ್ಯವನಜವನಕಳಹಂಸಂ ೧೩

ಬಿಡು ಮಿಥ್ಯಾತ್ವಮನಂಜದೆ
ಪಿಡಿ ಸಮ್ಯಕ್ತ್ವಮನುದಾರಚಿತ್ತದಿನೆಂಬೀ
ನುಡಿಯನೆ ನುಡಿದು ಮನಂಬಿಡೆ
ನುಡಿಗಲ್ತಂ ಸುಕವಿನಿಕರಪಿಕಮಾಕಂದಂ ೧೪

ಉಡೆವಱಿದಂದಿಂ ಬೞಿಕಿಡೆ
ಯುಡುಗದೆ ಜಿನಮುನಿಗಳಿಂ ಜಿನಾಗಮಮಂ ನೇ
ರ್ಪಡೆ ಕೇಳ್ದೋದುವ ಜಿನಮುನಿ
ಗಡಣದೊಳೆ ವಿವೇಕಿಯಾಗಿ ಪೊೞ್ತಂ ಕಳೆವಂ ೧೫

ಭವ್ಯರ ಗೋಷ್ಠಿಯು ತಪದೊಳ್
ದಿವ್ಯಮೆನಿಪ್ಪವರ ಪಾದಸೇವೆಯು ಜಿನಸ
ತ್ಕಾವ್ಯಂಗಳ ಭಾವನೆಯು ಮ
ಹಾವ್ಯಸನಂ ವಾರಿಷೇಣ ನೃಪತಿಗೆ ನಿಚ್ಚಂ ೧೬

ಶೂರನು. ಚಿಕ್ಕಂದಿನಲ್ಲಿಯೇ ಅವನು ಶ್ರೇಷ್ಠರಾದ ಜೈನಮುನಿಗಳ ಮೃದುಪಾದಗಳನ್ನು ಹಿಡಿದುಕೊಂಡೇ ತೊದಲು ಹೆಜ್ಜೆಯಿಟ್ಟು ನಡೆಯಲು ಕಲಿತನು. ಅವನು ಭವ್ಯಜನ ಕಮಲ ಸರೋವರದ ಕಲಹಂಸ. ೧೩. "ಮಿಥ್ಯಾತ್ವವನ್ನು ನಿರ್ಭಯವಾಗಿ ಬಿಟ್ಟು ಧೈರ್ಯದಿಂದ ಸಮ್ಯಕ್ತ್ವವನ್ನು ಅವಲಂಬಿಸು. ಉದಾರಚಿತ್ತದಿಂದ ನಡೆ" ಎಂಬ ಈ ಮಾತುಗಳನ್ನು ಆಡುತ್ತ ಆಡುತ್ತ ಮಾತು ಕಲಿತನು. (ಮಾತು ಬರುವುದಕ್ಕೂ ಮುಂಚೆಯೇ ಅವನು ಜಿನಭಕ್ತನಾಗಿದ್ದನೆಂದು ಭಾವ) ೧೪. ಸೊಂಟಕ್ಕೆ ಬಟ್ಟೆಕಟ್ಟಲು ತೊಡಗಿದಂದಿನಿಂದ ಜತೆಬಿಡದೆ ಜಿನಮುನಿಗಳ ಜತೆಯಲ್ಲಿಯೇ ಇದ್ದುಕೊಂಡು ಜಿನಾಗಮವನ್ನು ಸರಿಯಾಗಿ ಕೇಳುತ್ತ ಆಗಮವನ್ನು ಓದುವ ಜಿನಮುನಿಗಳ ಸಂಗದಲ್ಲಿಯೇ ಹೊತ್ತು ಕಳೆಯುವನು ೧೫. ವಾರಿಷೇಣ ರಾಜನಿಗೆ ಯಾವಾಗಲೂ ಭವ್ಯರ ಗೋಷ್ಠಿಯೇ ಇಷ್ಟ. ತಪಸ್ಸಿನಿಂದ ದಿವ್ಯವೆನಿಸಿದ ಅವರ ಪಾದಸೇವೆಯೇ, ಜೈನಸತ್ಕಾವ್ಯಗಳ ಚಿಂತನೆಯೇ ದೊಡ್ಡ ಗೀಳು, ಚಟ. ೧೬. ಹಾಗೆ ಗುಣಸಮೂಹಕ್ಕೆ ಆಶ್ರಯನೂ ವಿನಯ

ಗದ್ಯ॥ ಅಂತು ಗುಣಗಣ ನಿಳಯನುಂ ವಿನಯ ನಿಧಾನನುಂ ಜಿನಪಾದಪದ್ಮಮಧುಪನುಂ ಜಿನಾಗಮ ಘನಾಗಮ ಮಯೂರನುಂ ಪಾಪೀಭ ಪಂಚಾನನನುಮೆನಿಸಿ ಆ ವಾರಿಷೇಣ ಕುಮಾರಂ ಸುಖಸಂಕಥಾವಿನೋದದಿಂ ಯುವರಾಜ್ಯಶ್ರೀಯನನುಭವಿಸುತ್ತಿರ್ಪನ್ನೆಗಂ ೧೭

ವಿಮಲಗುಣಾಕ್ಷರ್ಸಕಲಾ
ಗಮಯುಕ್ತರ್ಮುನಿಜನಾನುರಾಗರ್ದುರಿತ
ದ್ಯುಮಣಿಗಳಗಣಿತ ಚರಿತ
ರ್ಸಮಸ್ತ ಜೀವೋಪಕಾರಿಗಳ್ ದಯೆನಿಧಿಗಳ್ ೧೮

ಗದ್ಯ॥ ಮುಂಡಿಯ ಪುತ್ರಾಚಾರ್ಯರ್ ಗ್ರಾಮಯೇಕರಾತ್ರಂ ನಗರೇ ಪಂಚರಾತ್ರಮಟವ್ಯಾಂ ದಶರಾತ್ರಮೆಂಬ ಪೂರ್ವಶಾಸ್ತ್ರೋಕ್ತಿಯಿಂ ವಿಹಾರಿಸುತ್ತುಂ ನಿನ್ನ ಪುರಕ್ಕೆ ವಂದು ತತ್ಪುರದ ಮೂಡನ ದೆಸೆಯ ಬಾಳಾಹಕವೆಂಬ ಪರ್ವತದೊಳಿರ್ಪುದುನಾ ಮುನಿಯ ಬರವಂ ಋಷಿನಿವೇದಕಂ ನಿನಗಱಿಪುವುದುಂ ೧೯

ಕರಮಲ್ಲದೊಸೆದು ತನ್ಮುನಿ
ವರನಿರ್ದಾದೆಸೆಗೆ ನಡೆದು ಬಿಡದೇಟಡಿಯಂ
ಕರಮುಗಿದು ತುಷ್ಟಿದಾನಮ
ನೆರಡಿಲ್ಲದೆ ಋಷಿನಿವೇದಕಂಗಿತ್ತಾಗಳ್ ೨೦

ನಿಧಿಯೂ ಜಿನಪಾದಪದ್ಮಗಳ ಮಧುಕರನೂ (ದುಂಬಿ) ಜಿನಾಗಮವೆಂಬ ಮೇಘಕ್ಕೆ ಮಯೂರ (ನವಿಲು) ನಂಥವನೂ (ಮೇಘದರ್ಶನದಿಂದ ನವಿಲುಗಳು ಸಂತೋಷಪಡುತ್ತವೆ.) ಪಾಪಿಗಳೆಂಬ ಆನೆಗಳಿಗೆ ಸಿಂಹಸ್ವರೂಪನೂ ಎನ್ನಿಸಿಕೊಂಡು ಆ ವಾರಿಷೇಣ ಕುಮಾರನು ಸುಖವಾಗಿ ಸತ್ಕಥಾವಿನೋದದಿಂದಿದ್ದುಕೊಂಡು ಯುವರಾಜ್ಯ ವೈಭವವನ್ನು ಅನುಭವಿಸುತ್ತಿದ್ದಾಗ. ೧೭. ಮುಂಡಿಯಪುತ್ರಾಚಾರ್ಯರು ಆ ನಗರದ ಬಳಿಗೆ ಬಂದರು. ಅವರು ಪರಿಶುದ್ಧಗುಣರು ; ಸಮಸ್ತ ಆಗಮಗಳನ್ನೂ ಬಲ್ಲವರು. ಮುನಿಜನರ ಅನುರಾಗಕ್ಕೆ ಪಾತ್ರರು. ದುರಿತಕ್ಕೆ ಸೂರ್ಯನಂಥವರು. ವಿಶೇಷವಾದ ವ್ರತಪರಿಪಾಲನೆಮಾಡಿ ಸಮಸ್ತ ಜೀವಿಗಳಿಗೂ ಉಪಕಾರಿಗಳೆನಿಸಿಕೊಂಡವರು, ದಯಾನಿಧಿಗಳು. ೧೮. ಇಂಥ ಆಚಾರ್ಯರು ಗ್ರಾಮದಲ್ಲಿ ಒಂದು ರಾತ್ರಿ, ನಗರದಲ್ಲಿ ಐದು ರಾತ್ರಿ, ಅಡವಿಯಲ್ಲಿ ಹತ್ತು ರಾತ್ರಿ ಎಂಬ ಪೂರ್ವಶಾಸ್ತ್ರದ ಹೇಳಿಕೆಯಂತೆ ಸಂಚರಿಸುತ್ತ ನಿನ್ನ ಪಟ್ಟಣದ ಪೂರ್ವದ ದಿಕ್ಕಿನ ಬಾಳಾಹಕಪರ್ವತದಲ್ಲಿ ನಿಲ್ಲಲು ಆ ಮುನಿಯ ಬರವನ್ನು ಋಷಿ ನಿವೇದಕನು ಬಂದು ನಿನಗೆ ತಿಳಿಸಿದನು. ೧೯. ಕೂಡಲೆ ಪ್ರೀತಿಯಿಂದ ಆ ಮುನಿವರನು ಇದ್ದ ದಿಕ್ಕಿಗೆ ನಡೆದು ಏಳಡಿ ಆದಮೇಲೆ ಕೈಮುಗಿದು ಆ ಋಷಿ ನಿವೇದಕನಿಗೆ ಎರಡು ಮಾತಾಡದೆ ತೃಪ್ತಿಯಾಗಿ ದಾನ ಕೊಟ್ಟು ಆನಂದಭೇರಿಯನ್ನು ಹೊಡೆಯಿಸಿ ೨೦.

ಆನಂದಭೇರಿಯಂ ಪೊಯ್ಸಿ ಚೇಳಿನಿಮಹಾದೇವಿ
ಮೊದಲಾಗೆಣ್ಛಾಸಿರ್ವರರಸಿಯರುಂ ವಾರಿಷೇಣ ಕುಮಾರಂ
ಮೊದಲಾದ ಕುಮಾರರುಂ ಯೆಣ್ಛಾಸಿರ್ವರ್ಮಕುಟಬದ್ಧ
ರುಂ ಪುರದೊಳಗಣ ಶ್ರಾವಕರುಂ ಬೆರಸು ೨೧

ತುಂಬಿಗಳಬ್ಜನಿಗೆಳಸಿ ಮ
ನಂ ಬಿಡೆ ಬರ್ಪಂತೆ ನೀನುಮತ್ಯಾದರದಿಂ
ದಂ ಬಯಸಿ ದಿವ್ಯಮುನಿಚರ
ಣಾಂಬುಜಮಂ ಕಾಣಲೆಂದು ರಾಜಾಲಯದಿಂ ೨೨

ಗದ್ಯ॥ ಪೊಱಮಟ್ಟು ಬಂದು ಬಾಳಾಹಕಗಿರಿಯೊಳಿರ್ದ ಮುಂಡಿಯ ಪುತ್ರಮುನೀಂದ್ರರ ಪಾದಸರಸಿಜಮಂ ಸರಸಿಜಾದಿ ಕುಸುಮಂಗಳಿಂದರ್ಚಿಸಿ ಬಂದಿಸಿ ಕಿಱಿದು ಬೇಗಂ ಧರ್ಮಶ್ರವಣ ಮಂ ಕೇಳ್ದು ತನ್ಮುನಿಪುಂಗವಂಗೆ ಪುನರ್ನಮಸ್ಕಾರಂಗೆಯ್ದು ರಾಜಮಂದಿರಕ್ಕೆ ನೀಂ ಮಗು ಟ್ವುದುಂ ನಿನ್ನೊಡನೆ ಸಕಲಜನಂಗಳುಂ ಮಗುಟ್ವುದುಂ ವಾರಿಷೇಣ ಕುಮಾರನೊರ್ವನೆ ಮುನಿ ನಾಥನನಗಲ್ದು ಬರಲಾಱದೆ ಪೆಱಗಿರ್ದ ೨೩

ಬಿಡದೆ ಕಡಾರದ ಪೊನ್ನಂ
ಕಡುಲೋಭಂ ಕಂಡು ಮೋಹದಿಂದಾ ಪೊನ್ನಂ
ತಡೆಯದೆ ನೋಡುತ್ತಿರ್ಪವೊ
ಲಡಿಮಿಡುಕದೆ ನಿಂದು ವಾರಿಷೇಣಂ ಮುನಿಯಂ ೨೪

ಚೇಳಿನಿ ಮಹಾದೇವಿ ಮೊದಲುಗೊಂಡು ಎಂಟುಸಾವಿರ ಅರಸಿಯರನ್ನೂ ವಾರಿಷೇಣನೇ ಮೊದಲಾದ ಎಂಟು ಸಾವಿರ ಕುಮಾರರನ್ನೂ ಕಿರೀಟಧಾರಿಗಳನ್ನೂ ಕರೆದುಕೊಂಡು ಪಟ್ಟಣದಲ್ಲಿನ ಶ್ರಾವಕರೂ ಜತೆಗೆ ಬರಲು. ೨೧. ದುಂಬಿಗಳು ಕಮಲಕ್ಕೆ ಆಸೆಪಟ್ಟು ಓಡಿಬರುವಂತೆ ನೀನೂ ಬಹಳ ಆದರದಿಂದ ಆಸೆಪಟ್ಟು ದಿವ್ಯಮುನಿಗಳ ಚರಣಕಮಲ ಗಳನ್ನು ಕಾಣುವುದಕ್ಕೆಂದು ಅರಮನೆಯಿಂದ ಹೊರಟುಬಂದೆ. ೨೨. ಬಾಳಾಹಕ ಗಿರಿ ಯಲ್ಲಿದ್ದ ಮುಂಡಿಯ ಪುತ್ರಮುನೀಂದ್ರರ ಪಾದಕಮಲವನ್ನು ಕಮಲವೇ ಮೊದಲಾದ ಪುಷ್ಪಸಮೂಹದಿಂದ ಪೂಜಿಸಿ ವಂದಿಸಿ ಸ್ವಲ್ಪಹೊತ್ತು ಧರ್ಮಶ್ರವಣವನ್ನು ಕೇಳಿ ಆ ಮುನಿಶ್ರೇಷ್ಠನಿಗೆ ಪುನಃ ನಮಸ್ಕಾರಮಾಡಿ ರಾಜಮಂದಿರಕ್ಕೆ ನೀನು ಹಿಂತಿರುಗಿದೆ. ನಿನ್ನ ಸಂಗಡ ಸಕಲಜನರೂ ಹಿಂತಿರುಗಿದರು. ಆದರೆ ವಾರಿಷೇಣಕುಮಾರನೊಬ್ಬನೇ ಮುನಿ ಶ್ರೇಷ್ಠನನ್ನು ಬಿಟ್ಟುಬರಲಾರದೆ ಹಿಂದೆ ನಿಂತು. ೨೩. ಕೊಪ್ಪರಿಗೆಯ ಹೊನ್ನನ್ನು ಕಂಡು ಬಿಡಲಾರದೆ ಲೋಭಿಯು ಆ ಹೊನ್ನನ್ನೇ ಆಸೆಯಿಂದ ನೋಡುತ್ತಿರುವ ಹಾಗೆ ವಾರಿಷೇಣನು ಆ ಮುನಿಯನ್ನು ರೆಪ್ಪೆಹಾಕದೆ ನೋಡುತ್ತ ಇದ್ದುಬಿಟ್ಟನು. ೨೪.

ಮನದೆಱಕದಿಂದೇಱಲುಮಿೞಿಯಲುಂ ನೋಡಿ ತಂಗಾಳಿಯ ಪೊರ್ದುಗೆಯಿಂ ನಯಂ ಬಡೆದೆಳಲತೆಯಂತೆ ಪೆರ್ಚಿ ೨೫

ಮನದೊಳ್ಕರಮುತ್ಸಾಹದಿ
ನನವರತಂ ನಿಚ್ಚನಿಚ್ಚಮಿರುಳುಂ ಪಗಲುಂ
ಜಿನಪದಮಂ ಜಿನಮತಮಂ
ನೆನೆವ ಮಹಾತ್ಮನೆ ಕೃತಾರ್ಥನವನೀತಳದೊಳ್ ೨೬

ಗದ್ಯ॥ ಎಂದು ಮನದೊಳ್ಭಾವಿಸಿ ವಾರಿಷೇಣ ಕುಮಾರಂ ಮುಂಡಿಪುತ್ರ ದಿಗಂಬರಾಧೀಶ್ವರನ ಪಾದೋಪಕಂಠದೊಳ್ ಕುಳ್ಳಿರ್ದು ಚರಣಯುಗಂಗಳಂ ಮೆಲ್ಲಮೆಲ್ಲನೊತ್ತುತ್ತಿರ್ಪುದುಂ ತನ್ಮುನೀಶ್ವರನಂ ಜಿನಸಮಯ ವಾರ್ಧಿವರ್ಧನ ಚಂದ್ರನಂ ನೋಡಿ ತನ್ನಂತರಂಗದೊಳಿಂತೆಂದಂ ೨೭

ದೂರದೊಳಿರ್ದುಮಾರ್ತಿವೆರಸಂಬುರುಹಕ್ಕೆಮದಾಳಿಸಂಕುಳಂ
ಭೋರೆನೆ ಬಂದು ತೀವಿ ನೆಲಸಿರ್ಪುವು ಕಪ್ಪೆಗಳಲ್ಲಿ ಪುಟ್ಟಿಯುಂ
ಸಾರವು ನೋಟ್ಪೊಡೊಳ್ಳಿದರನೊಳ್ಳಿದರಪ್ಪವರಿಂತು ಪೊರ್ದುವರ್
ದೂರದೊಳಿರ್ದೊಡಂ ಕೆಲದೊಳಿರ್ದೊಡಮೊಂದುವರಲ್ಲರುದ್ಧತರ್ ೨೮

ಮನದ ಪ್ರೀತಿಯಿಂದ ಮೇಲೆ, ಕೆಳಗೆ ನೋಡಿ ತಂಗಾಳಿಯ ಸ್ಪರ್ಶದಿಂದ ಸೊಗಸನ್ನು ಪಡೆದ ಎಳೆಯಬಳ್ಳಿಯಂತೆ ಉತ್ಸಾಹಿಸಿ. ೨೫. ಮನಸ್ಸಿನಲ್ಲಿ 'ಯಾವಾಗಲೂ ನಿತ್ಯನಿತ್ಯ, ರಾತ್ರಿ, ಹಗಲು, ಜಿನಪಾದಗಳನ್ನೂ ಜಿನಮತವನ್ನೂ ಆಸೆಯಿಂದ ಧ್ಯಾನಿಸುವ ಮಹಾತ್ಮನೇ ಈ ಲೋಕದಲ್ಲಿ ಕೃತಾರ್ಥ.' ೨೬. ಎಂಬುದಾಗಿ ಮನಸ್ಸಿನಲ್ಲಿ ಯೋಚಿಸಿ ವಾರಿಷೇಣಕುಮಾರನು ಮುಂಡಿಪುತ್ರ ದಿಗಂಬರಾಧೀಶ್ವರನ ಪಾದದ ಬಳಿ ಕುಳಿತು ಅವರ ಚರಣ ಯುಗಳವನ್ನು ಮೆಲ್ಲಮೆಲ್ಲಗೆ ಒತ್ತುತ್ತ ಇರಲಾಗಿ ಆ ಮುನೀಶ್ವರನು ಜಿನಧರ್ಮ ಸಮುದ್ರವನ್ನು ವೃದ್ಧಿಗೊಳಿಸುವ ಆ ಚಂದ್ರ (ವಾರಿಷೇಣ)ನನ್ನು ನೋಡಿ ತನ್ನ ಮನಸ್ಸಿನಲ್ಲಿ ಹೀಗೆಂದುಕೊಂಡನು. ೨೭. 'ದುಂಬಿಗಳು ದೂರದಲ್ಲಿದ್ದರೂ ಕಮಲದ ಬಳಿಗೆ ಭೋರೆಂದು ಬಂದು ತುಂಬಿಕೊಳ್ಳುತ್ತವೆ. ಕಪ್ಪೆಗಳು ಅಲ್ಲಿಯೇ ಹುಟ್ಟಿದ್ದರೂ ಅವನ್ನು ಸೇರವು. ಒಳ್ಳೆಯವರು ಒಳ್ಳೆಯವರನ್ನೇ ಹೀಗೆ ಸೇರುವರು, ದೂರದಲ್ಲಿದ್ದರೂ ಸಹ ! ಉದ್ಧತರು ಪಕ್ಕದಲ್ಲಿಯೇ ಇದ್ದರೂ ಹೊಂದುವುದಿಲ್ಲ.' ೨೮. ಹೀಗೆಂದು ವಾರಿಷೇಣನ ಮನದಲ್ಲಿ ಮೂಡಿದ ಮಹಾಭಕ್ತಿಗೂ, ತಮ್ಮ

ಗದ್ಯ॥ ಎಂದು ವಾರಿಷೇಣಕುಮಾರನೊಳಾದ ಮಹಾಭಕ್ತಿಗಂ ತಮ್ಮಯ್ಯನೊಡನೆ ಪೋಗದೆ ಧರ್ಮಾನುರಾಗದಿಂದಿರ್ದಿರವಿಂಗಂ ಚೋದ್ಯಂಬಟ್ಟಪ್ಪುದಂ ಚೇಳಿನೀ ಪ್ರಿಯಾತ್ಮಜಂ ತನ್ಮುನೀಂದ್ರಂಗಭಿಮುಖನಾಗಿ ತಲೆಯಂ ಬಾಗಿ ಕೈಯಂ ಮುಗಿದಿರ್ದಿಂತೆಂದಂ ೨೯

ದಾನಮುಮಂ ಧರ್ಮಮುಮಂ
ನಾನಾಪೂಜೆಯುಮನೆಲ್ಲರುಂ ಕೈವಲ್ಯ
ಶ್ರೀನಾರಿಯನೆಯ್ದುವೆವೆಂ
ದಾನಂದಂಬೆರಸು ಮಾಡುವರ್ವಸುಮತಿಯೊಳ್ ೩೦

ಗದ್ಯ॥ ಅಲ್ಲಿ ನಿರ್ವಾಣಲಕ್ಷ್ಮಿಯನೆಯ್ದಿಸಲಾರ್ಪ ದೇವನುಮಂ ತಪಮುಮಂ ಧರ್ಮಮುಮಾಗಮುಮುಮಂ ದಾನಮುಮಂ ಪೂಜೆಯುಮಂ ನಿಮ್ಮಡಿ ನೀವೆನಗಱಿವಂತಾಗೆ ಬೆಸಸುವುದೆಂಬುದುಂ ಮುನಿವೃಂದಾರಕನಿಂತೆಂದಂ ೩೧

ವನಿತೆಯುರಂ ವನಿತೆಯುರೊಳ್
ಕನಕಮನೋರಂತೆ ಕನಕದೊಳ್ ರತ್ನಮನಿಂ
ಬೆನೆ ರತ್ನದೊಳ್ ವಿಚಾರಿಸಿ
ಮನದೊಳ್ ಕೀೞ್ಮೇಲಿದೆಂದು ನಂಬುವ ತೆಱದಿಂ ೩೨

ಗದ್ಯ॥ ಆಪ್ತನನಾಪ್ತನೊಳ್ ತಪಮಂ ತಪದೊಳ್ ಧರ್ಮಮಂ ಧರ್ಮದೊಳ್ ಆಗಮುಮನಾಗಮದೊಳ್ ದಾನಮಂ ದಾನದೊಳ್ ಪೂಜೆಯಂ ಪೂಜೆಯೊಳ್ ಪರೀಕ್ಷಿಸಿ ಬೇಗಮಿವನಾಪ್ತ

ತಂದೆಯೊಡನೆ ಹೋಗದೆ ಧರ್ಮದ ಮೇಲಿನ ಪ್ರೇಮದಿಂದ ನಿಂತ ರೀತಿಗೂ ಆಶ್ಚರ್ಯಪಟ್ಟಿರಲು ಚೇಳಿನೀಪ್ರಿಯಪುತ್ರನು ಆ ಮುನಿಶ್ರೇಷ್ಠನಿಗೆ ಎದುರಾಗಿ ನಿಂತು ತಲೆ ಬಗ್ಗಿಸಿ ಕೈಮುಗಿದು. ೨೯. "ದಾನಧರ್ಮಗಳನ್ನೂ ನಾನಾ ಪೂಜೆಗಳನ್ನೂ ಮೋಕ್ಷಲಕ್ಷ್ಮಿಯನ್ನು ಸೇರುವೆವೆಂದು ಆಸೆಪಟ್ಟು ಆನಂದದಿಂದ ಈ ಲೋಕದಲ್ಲಿ ಮಾಡುತ್ತಾರೆ. ೩೦. ಅಲ್ಲಿ ನಿರ್ವಾಣಲಕ್ಷ್ಮಿಯೊಡನೆ ಸೇರಿಸಬಲ್ಲ ದೇವನನ್ನೂ, ತಪಸ್ಸನ್ನೂ ಧರ್ಮ, ಆಗಮಗಳನ್ನೂದಾನ, ಪೂಜೆಗಳನ್ನೂ ನೀವು ನನಗೆ ತಿಳಿಯುವಂತೆ ಹೇಳಬೇಕು" ಎಂದು ಕೇಳಲು ಆ ಮುನಿಶ್ರೇಷ್ಠನು ಹೀಗೆ ಹೇಳಿದನು : ೩೧. ಹೆಂಗಸರನ್ನು ಹೆಂಗಸರಲ್ಲಿ, ಚಿನ್ನವನ್ನೂ ರತ್ನವನ್ನೂ ಬಲ್ಲವರಲ್ಲಿ ವಿಚಾರಮಾಡಿ ಅವರು ರತ್ನವನ್ನು ಶ್ರೇಷ್ಠವೆಂದರೆ ಮನಸ್ಸಿನಲ್ಲಿ 'ಇದು ಮೇಲು, ಇದು ಕೀಳು,' ಎಂದು ನಂಬುವ ಹಾಗೆ ಆಪ್ತನು ಆಪ್ತನಲ್ಲದವನಲ್ಲಿ, ತಪಸ್ಸನ್ನು ತಪಸ್ಸಿನಲ್ಲಿ, ಧರ್ಮದಲ್ಲಿ ಧರ್ಮವನ್ನೂ ಜಿನಾಗಮವನ್ನೂ ಆಗಮದಲ್ಲಿ ದಾನವನ್ನೂ ದಾನದಲ್ಲಿ ಪೂಜೆಯನ್ನೂ, ಪರೀಕ್ಷಿಸಿ ಬೇಗನೆ ಇವನು ಆಪ್ತ, ಇವ ಅನಾಪ್ತ,

ನಿವನನಾಪ್ತನಿದು ಸತ್ತಪಮಿದು ದುಸ್ತಪಮಿದು ಸದ್ಧರ್ಮಮಿದು ಕುಧರ್ಮಮಿದಾಗಮಮಿದ ನಾಗಮಮಿದು ಸದ್ದಾನಮಿದು ಕುದಾನಮಿದು ಪೂಜೆಯಿದು ಕುಪೂಜೆಯಿದು ಸುಖಕೆ ಕಾರಣ ಮಿದು ದುಃಖಕಾರಣಮಿದು ಮುನ್ನಮಿದು ಬಳಿಕಮೆಂಬುದಂ ಬುದ್ಧಿಯಿಂ ಸಂಚಲಚಿತ್ತನಾಗದೆ ತನ್ನೊಳಾರೈದು ನೋಡಿ ಜಲಮಿಶ್ರಿತಮಪ್ಪ ಪಾಲಂ ಮುಂದಿಡಲ್ ಹಂಸೆಯೆಂತು ನೀರಂ ಬಿಟ್ಟು ಪಾಲಂ ಕುಡಿವುದಂತೆ ಕುಧರ್ಮಮಂ ಬಿಟ್ಟು ಸದ್ಧರ್ಮಮಂ ಕೈಕೊಳ್ವುದು ೩೩

ನಿರ್ದೋಷಿಯಲ್ಲದವನಂ
ಪೊರ್ದಲ್ವೇಡಾಪ್ತನೆಂದು ಮೇಲ್ಪಟ್ಟನಿಸಂ
ನಿರ್ದೋಷಿಯುಪ್ಪ ಮನಸಿಜ
ಮರ್ದನನಂ ದೇವನೆಂದು ಪೊರ್ದುಗೆ ಭವ್ಯಂ ೩೪

ಗದ್ಯ॥ ಕುರುಡನಪ್ಪ ಪೊಲಂಬಿಗನಂ ನಂಬಿ ಗಟ್ಟದಿಟ್ಟೆಡೆಯೊಳಿರುಳ್ ದೂರದೇಶಕ್ಕೆ ಪಯಣಂ ಪೋಪೆನೆಂಬಾತನುಂ ದೋಷಿಯಪ್ಪಾಪ್ತನಂ ನಂಬಿ ತಪಂಗೆಯ್ದು ಮುಕ್ತಿವಡೆವೆನೆಂಬಾತನುಂ ನಿರ್ಬುದ್ಧಿಗಳಲ್ಲದೆ ಬುದ್ಧಿವಂತರಲ್ಲರ್ ೩೫

ತಕ್ಕನಿವನಲ್ಲನಳಿಪಂ
ಟಕ್ಕಂ ಖಳನೆಂದು ಪೊರ್ದರತಿಧೂರ್ತನನೋ
ವಕ್ಕಟ ಖಳರಂ ಕ್ರೂರರ
ನುಕ್ಕೆವದಿಂ ದೇವರೆಂದು ಪೇಳ್ ಪೊರ್ದುವುದೇ ೩೬

ಇದು ಒಳ್ಳೆಯ ತಪಸ್ಸು, ಇದು ದುಷ್ಟ ತಪಸ್ಸು ಇದು ಸದ್ಧರ್ಮ, ಇದು ಕುಧರ್ಮ, ಇದು ಆಗಮ, ಇದು ಅನಾಗಮ, 'ಇದು ಒಳ್ಳೆಯ ದಾನ, ಇದು ಕುದಾನ, ಇದು ಪೂಜೆ, ಇದು ಕುಪೂಜೆ, ಇದು ಸುಖಕ್ಕೆ ಕಾರಣ, ಇದು ದುಃಖಕ್ಕೆ ಕಾರಣ, ಇದು ಮುಂಚೆ, ಇದು ಆಮೇಲೆ ಎಂಬುದನ್ನು ಬುದ್ಧಿಯಿಂದ ತನ್ನಲ್ಲಿಯೇ ವಿಚಾರ ಮಾಡಿ ಚಂಚಲ ಮನಸ್ಕನಾಗದೆ ನೋಡಿ ತಿಳಿದು, ನೀರು ಬೆರತ ಹಾಲನ್ನು ಮುಂದಿಟ್ಟರೆ ಹಂಸೆಯು ಹೇಗೆ ನೀರನ್ನು ಬಿಟ್ಟು ಹಾಲನ್ನು ಕುಡಿಯುವುದೋ ಹಾಗೆ, ಕೆಟ್ಟ ಧರ್ಮವನ್ನು ಬಿಟ್ಟು ಶ್ರೇಷ್ಠ ಧರ್ಮವನ್ನು ಅಂಗೀಕರಿಸಬೇಕು. ೩೩. ನಿರ್ದೋಷಿಯಲ್ಲದವನನ್ನು ಆಪ್ತನೆಂದು ಸೇರಬೇಡ, ಅವನು ಶ್ರೇಷ್ಠನಾಗುವುದಿಲ್ಲ, ದೋಷರಹಿತನಾದ ಮನ್ಮಥ ವೈರಿಯನ್ನು ಭವ್ಯನು ಆಶ್ರಯಿಸಲಿ ೩೪. ಕುರುಡನಾದ ದಾರಿಗನನ್ನು ನಂಬಿ ಬೆಟ್ಟಗಾಡಿನ ಪ್ರದೇಶದಲ್ಲಿ ರಾತ್ರಿ ಹೊತ್ತು ದೂರದೇಶಕ್ಕೆ ಪ್ರಯಾಣ ಹೊರಡುವೆನೆನ್ನುವವನೂ ದೋಷಿಯಾದ ಆಪ್ತನನ್ನು ನಂಬಿ ತಪಸ್ಸು ಮಾಡಿ ಮೋಕ್ಷವನ್ನು ಹೊಂದುವೆನೆಂಬವನೂ ಬುದ್ಧಿಹೀನರೇ ಹೊರತು ಬುದ್ಧಿವಂತರಲ್ಲ. ೩೫. ಇವನು ಯೋಗ್ಯನಲ್ಲ. ಇವನು ಆಶೆಪಾತಕ, ಠಕ್ಕುಗಾರ, ನೀಚ, ಎಂದು ತಿಳಿದು ಯಾರೂ ಹೋಗಿ ಸೇರಿಕೊಳ್ಳುವುದಿಲ್ಲ. ಹೀಗಿರುವಾಗ ಅಂಥಾ ಧೂರ್ತನನ್ನು, ಅಯ್ಯೋ ! ನೀಚರನ್ನು ಕ್ರೂರಿಗಳನ್ನೂ 'ಇವರು ದೇವರೇ' ಎಂದು ಭಾವಿಸಿ ಮೋಸ ಹೋಗಿ ಸೇರಿಕೊಳ್ಳುವುದೆ ? ೩೬. ಕಲ್ಲಿನ ದೋಣಿ

ಗದ್ಯ॥ ಕಲ್ಲದೋಣಿಯನೇಱಿ ಬಂದ ತೊಱೆಯೊಳ್ ಪೋಪೆನೆಂಬನುಂ ಕ್ರೂರನಪ್ಪಾಪ್ತನಂ ಪಿಡಿದು ಮೋಕ್ಷಕ್ಕೆ ಪೋಪೆನೆಂಬೆಗ್ಗನುಂ ಕರಮೆಗ್ಗರಲ್ಲದೆ ಚತುರರಲ್ಲರ್ ೩೭

ಇವನೀ ಧಾತ್ರಿಗೆ ತಾಂ ಮಹಾ ಪ್ರಭು ಗಡಾ ಪೋವಿಂತಿದೇಕಟ್ಟುತ್ತು ಕಾ
ಡುವನೆದ್ದೋಡುವನಟ್ಟ ಬೇಡುವನಣಂ ನಾಣಿಲ್ಲ ಬೂತೆಂದು ದೂ
ಱುವರಾರಾದೊಡಮಟ್ಟ ಮರ್ತ್ಯರುಮನಿಂತೇನೆಂಬೊಡಂ ಪೋಗಿ ನಂ
ಬುವನೆಗ್ಗಂ ನೆಱೆ ದೇವರೆಂದು ವಿಟರಂ ಚಾಪಲ್ಯರಂ ಧೂರ್ತರಂ ೩೮

ಗದ್ಯ॥ ಬ್ರಹ್ಮಚರ್ಯಮಂಗೆಟ್ಟ ತಪಮಂ ಮೊದಲಾಗೆ ಕೈಕೊಳ್ಳರೆಂದೊಡೆ ಪರವಧೂಪ್ರಿಯರಪ್ಪರಂ ಸರ್ವಜ್ಞರೆಂದೆಂತು ಕೈಕೊಂಡಾಡುವರೋ ೩೯

ಪುಸಿವನಿವಂ ಮಹಾವ್ಯಸನಿ ಕಳ್ಳನಿವಂ ಕಡುಧೂರ್ತನೆಂದು ಶಂ
ಕಿಸಿ ಭಯದಿಂದೆ ಬೆಚ್ಚಳಿಸಿ ಮಾನಿಸರಂ ಮೊದಲಾಗೆ ಪೊರ್ದಿ ರಂ
ಜಿಸುವ ಸುವಸ್ತ್ರಧಾರಿಗಳನಿಷ್ಟವಿಘಾತರ ನಷ್ಟಶೌಚರಂ
ಪುಸಿವರನಾಪ್ತರೆಂದು ನೆಱೆಪೊರ್ದುವ ಮರ್ತ್ಯನೆ ಗಾಂಪನುರ್ವಿಯೊಳ್ ೪೦

ಯನ್ನು ಹತ್ತಿಕೊಂಡಂ ಪೂರ್ಣ ಪ್ರವಾಹವಿರುವ ತೊಱೆಯಲ್ಲಿ ಹೋಗುವೆನೆಂಬವನೂ ಕ್ರೂರನಾದಂಥ ಆಪ್ತನನ್ನು ಹಿಡದುಕೊಂಡು ಮೋಕ್ಷಕ್ಕೆ ಹೋಗುವೆನೆನ್ನುವವನೂ ಶುದ್ಧ ದಡ್ಡರೇ ಹೊರತು ಚತುರರಲ್ಲ. ೩೭. 'ಈ ಭೂಮಂಡಲಕ್ಕೆ ತಾನು ಮಹಾಪ್ರಭು ವಲ್ಲವೆ? ಓಹೋ! ಇವನು ಹೀಗೆ ಅತ್ತು ಕಾಡುತ್ತಿದ್ದಾನೆ? ಎದ್ದು ಓಡುತ್ತಾನೆ! ಇವನಿಗೆ ಸ್ವಲ್ಪವೂ ನಾಚಿಕೆಯಿಲ್ಲ. ಹುಚ್ಚು,' ಎಂದು ಮರ್ತ್ಯರಾದವರನ್ನು ಯಾರಾದರೂ ದೂಷಿಸುವರು. ಹೀಗಿರುವಾಗ ಇಂಥ ಮರ್ತ್ಯಮಾತ್ರರನ್ನು ಈ ಜನ 'ಇವರು ದೇವರೇ' ಎಂದು ನಂಬಿಕೊಂಡು ಹೋಗಿ ಸೇರುವವನು ದಡ್ಡನಲ್ಲವೆ? ದಡ್ಡರನ್ನು, ವಿಟರನ್ನೂ ಚಪಲರನ್ನೂ ನಂಬಿ ಹೀಗೆ ಸೇರಿಕೊಳ್ಳುವುದೆ? ೩೮. ಬ್ರಹ್ಮಚರ್ಯವನ್ನು ಕಳೆದುಕೊಂಡು ತಪಸ್ಸನ್ನು ಮೊದಲೇ ಕೈಕೊಳ್ಳರು. ಹಾಗೆಂದ ಮೇಲೆ ಪರರ ಹೆಂಡಿರ ಪ್ರೇಮಿಗಳಾದವರನ್ನು ಸರ್ವಜ್ಞರಾದ ಜನರೆಂದು ನಂಬಿ ಕೊಂಡಾಡುವರಲ್ಲಾ! ೩೯. ಇವನು ಸುಳ್ಳಾಡುತ್ತಾನೆ. ಇವನು ದೊಡ್ಡ ಚಟಕ್ಕೆ ಬಿದ್ದವನು. ಇವನು ಕಳ್ಳ; ಮಹಾಧೂರ್ತ, ಎಂದು ಸಂದೇಹಪಟ್ಟು ಭಯದಿಂದ ಗಾಬರಿಯಾಗಿ, ದಿಕ್ಕೆಟ್ಟು ಮನುಷ್ಯರನ್ನು ಸೇರಿಕೊಂಡು ಸಂತೋಷಪಡಿಸುವ ಒಳ್ಳೆಯ ವಸ್ತ್ರಗಳನ್ನು ಧರಿಸಿದ ಇಷ್ಟವಿಘಾತಿಯನ್ನುಂಟುಮಾಡುವವರನ್ನೂ ಶೌಚವ್ರತವನ್ನೇ ಕಳೆದುಕೊಂಡವರನ್ನೂ ಸುಳ್ಳಾಡುವವರನ್ನೂ ಆಪ್ತರೆಂದು ನಂಬಿ ವಿಶೇಷವಾಗಿ ಆಶ್ರಯಿಸುವ ಮಾನವನೇ ಈ ಲೋಕದಲ್ಲಿ ದಡ್ಡ ೪೦. ರಾಜನ ಮೇಲೆ ರಾಜನಾದರೆ ಮೊದಲು

ಗದ್ಯ॥ ಅರಸಿನ ಮೇಲರಸಾದೊಡೆ ಮೊದಲಾಗೆ ನಾಡೆಲ್ಲಂ ಕೆಟ್ಟು ಪಾೞಪ್ಪುದೆಂದೊಡೆ ಜಗದೊಳಡಕಿಲ ದೈವಮಾದೊಡೆ ಕಿಡದಿರ್ಕುಮೆ ; ವಿಟನಪ್ಪ ಪ್ರಭುವಂ ಮೊದಲಾಗೆ ಬಗೆಯರೆಂದೊಡೆ ವಿಟನಪ್ಪ ದೇವನನೆಂತು ಬಗೆವರದಱಿಂ ದೇವರ್ಪಲರಿಲ್ಲ ; ನಿರ್ದೋಷಿಯಪ್ಪನೊರ್ವನೆ ; ಪರಮಾತ್ಮನುಂ ಶಾಂತರೂಪನಲ್ಲದೆ ಕ್ರೂರನಲ್ಲಂ ; ಮನೋಜವಿದ್ರಾವಣನಲ್ಲದ ವಿಟನಲ್ಲವೆಂದು ನಂಬುವುದು ೪೧

ಅರಸನ ನಡೆದೋಜೆಯೆ ವಿ
ಸ್ತರದಿಂದಂ ಪ್ರಜೆಗಮೋಜೆ ತಂತಮ್ಮಾಪ್ತರ್
ಚರಿಸುವ ಮೋಜೆಯೊಳೇಕೆಯೊ
ಚರಿಯಿಸರನ್ಯರ್ವಿರುದ್ಧಮಿದು ಧಾರಿಣಿಯೊಳ್ ೪೨

ಗದ್ಯ॥ ಜಗದೊಳಾರಾದೊಡಂ ಸದಾಚಾರರಂ ಕೈಕೊಳ್ವಂತೆ ದುರಾಚಾರರನೇಕೆ ಕೈಕೊಳ್ಳರನ್ಯವನಿತಾಪ್ರಿಯರಂ ದೂಱುವಂತೆ ಶುಚಿಗಳನೇಕೆ ದೂಱರ್ ಕಳ್ಳರಪ್ಪರಂ ಕೊಲ್ವಂತೆ ಕಳ್ಳರಲ್ಲದರನೇಕೆ ಕೊಲ್ಲರ್ ಪುಸಿವವರಂ ದುಷ್ಟರೆಂಬಂತೆ ಸತ್ಯಮುಳ್ಳರನೇಕೆ ದುಷ್ಟರೆನ್ನರ್ ಕಳ್ಗುಡಿವವರಂ ಪೊಲ್ಲರೆಂಬಂತೆ ಪಾಲ್ಗುಡಿವವರನೇಕೆ ಪೊಲ್ಲರೆನ್ನರ್ ಅಡಗಟ್ಟ ಮಡಕೆಯಂ ಪೊಱಗಿಡುವಂತೆ ಕೂೞನಟ್ಟ ಮಡಕೆಯನೇಕೆ ಪೊಱಗಿಡರ್ ಕೊಂದರಂ ಕೊಲ್ವರಂತೆ ಕೊಲ್ಲದರನೇಕೆ ಕೊಲ್ಲರ್

ದೇಶವೆಲ್ಲ ಕೆಟ್ಟು ಹಾಳಾಗುವುದೆಂದರೆ ಜಗತ್ತಿನಲ್ಲಿ(ಅಡಕಿಲದೈವ) ಒಂದರಮೇಲೊಂದಾಗಿ ಪೇರಿಸಿದ ದೈವವಾದರೆ ಕೆಡದೆ ಇರುವುದೆ ? ವಿಟನಾದ ಪ್ರಭುವನ್ನೇ ಆರಂಭದಲ್ಲಿ ಲೆಕ್ಕ ವಿಡುವುದಿಲ್ಲವೆನ್ನುವಾಗ ವಿಟನಾದವನನ್ನೇ ದೇವನೆಂದು ಹೇಗೆ ಒಪ್ಪುವರು ? ಆದ್ದರಿಂದ ಹಲವರು ದೇವರುಗಳಿಲ್ಲ; ನಿರ್ದೋಷಿಯಾದ ದೇವರು ಒಬ್ಬನೇ, ಪರಮಾತ್ಮನೂ ಶಾಂತರೂಪನೇ ಹೊರತು ಕ್ರೂರಿಯಲ್ಲ. ಅವನು ಮನ್ಮಥನನ್ನು ಸೀಳಿದವನೇ ಹೊರತು ವಿಟನಲ್ಲ, ಎಂದು ನಂಬತಕ್ಕದ್ದು ೪೧. ರಾಜನು ನಡೆಯುವ ಕ್ರಮವೇ ವಿಶೇಷವಾಗಿ ಪ್ರಜೆಗಳಿಗೂ ಕ್ರಮವಾಗುತ್ತದೆ. ತಮ್ಮ ತಮ್ಮ ಆಪ್ತರು ಆಚರಿಸುವ ಕ್ರಮದಲ್ಲಿ ಇತರರು ಏಕೆ ನಡೆದುಕೊಳ್ಳುವುದಿಲ್ಲ ? ಲೋಕದಲ್ಲಿ ಇದು ಸ್ವಭಾವವಿರುದ್ಧವಾಗಿದೆ. ೪೨. ಪ್ರಪಂಚದಲ್ಲಿ ಯಾರಾದರೂ ಸದಾಚಾರದಲ್ಲಿರುವವರನ್ನು ಮೆಚ್ಚುವಂತೆ ದುರಾಚಾರಪರರನ್ನು ಏಕೆ ಮೆಚ್ಚುವುದಿಲ್ಲ ? ಅನ್ಯಸ್ತ್ರೀ ಪ್ರೇಮಿಗಳನ್ನು ದೂಷಿಸುವಂತೆ ಶುಚಿಯಾದವರನ್ನು ಏಕೆ ದೂರುವುದಿಲ್ಲ ? ಕಳ್ಳರನ್ನು ಕೊಲ್ಲುವ ಹಾಗೆ ಕಳ್ಳರಲ್ಲದವರನ್ನೇಕೆ ಕೊಲ್ಲುವುದಿಲ್ಲ ? ಹುಸಿಯುವವರನ್ನು ದುಷ್ಟರೆನ್ನುವ ಹಾಗೆ ಸತ್ಯವಂತರನ್ನೇಕೆ ದುಷ್ಟರೆನ್ನುವುದಿಲ್ಲ ? ಹೆಂಡಕುಡುಕರನ್ನು ಕೆಡುಕರೆಂದೆನ್ನುವಂತೆ ಹಾಲು ಕುಡಿಯುವವರನ್ನೇಕೆ ದೂಷಿಸುವುದಿಲ್ಲ? ಮಾಂಸವನ್ನು ಬೇಯಿಸಿದ ಮಡಕೆಯನ್ನು ಹೊರಗೆ ಇಡುವಂತೆ ಅನ್ನವನ್ನು ಬೇಯಿಸಿದ ಮಡಕೆಯನ್ನೇಕೆ ಹೊರಗಿಡುವುದಿಲ್ಲ ? ಕೊಂದವರನ್ನು ಕೊಲ್ಲುವಂತೆ ಕೊಲ್ಲದವರನ್ನು ಎಕೆ ಕೊಲ್ಲುವುದಿಲ್ಲ ? ದ್ರೋಹಿಗಳನ್ನು ಲೂಟಿ ಮಾಡು

ದ್ರೋಹರಪ್ಪವರಂ ಕವರ್ವಂತೆ ತಕ್ಕರನೇಕೆ ಕವರರ್ ಸಾಧುಗಳ್ಗೆ ಕೈಮುಗಿವಂತೆ ದುಷ್ಟರ್ಗೇಕೆ ಕೈಮುಗಿಯರ್ ಬ್ರಹ್ಮಚರ್ಯವುಳ್ಳವರ್ಗೆಱಗುವಂತೆ ಮಿಂಡರ್ಗೇಕೆಱಗರ್ ನಿಸ್ಪೃಹರ್ಗೆ ಒಲ್ವಂತೆ ಕಾಂಕ್ಷಿತರ್ಗೇಕೆ ಒಲ್ಲರ್ ತಪಂಗೆಯ್ವರ್ಗೆ ಕೈವಾರಂಗೊಳ್ವಂತೆ ದುಷ್ಟರ್ಗೇಕೆ ಕೈವಾರಂಗೊಳರ್ ಅನ್ಯಾಯಪರರಂ ಕಿಡಿಸುವಂತೆ ನ್ಯಾಯಪರರನೇಕೆ ಕಿಡಿಸರ್ ಚಾರಿತ್ರಂಗೆಟ್ಟರ ನಾಟ್ಕಡಿಗಳೆವಂತೆ ಚಾರಿತ್ರಮುಳ್ಳನೇಕೆನಾಟ್ಕಡಿಗಳೆಯರ್ ಅದು ಕಾರಣದಿಂದೆಲ್ಲನಿತು ಪೊಲ್ಲಮೆಯೊಳಂ ಪೊರ್ದದಂತಪ್ಪ ದೇವನೆ ದೇವಂ ಪೊಲ್ಲಮೆಯೊಳ್ಕೂಡಿದಾತಂ ದೇವನಲ್ಲನೆಂಬುದಂ ಲೋಕದೊಳಾದ ನಡೆವಳಿಯಿಂದಮೇ ಲೇಸಾಗಱಿವುದಿನ್ನು ತಪಮೆಂತಪ್ಪುದೆಂದೊಡೆ ೪೩

ಪೆಣ್ಣಿಂಗಂ ಪೊನ್ನಿಂಗಂ
ಮಣ್ಣಿಂಗಂ ಕಾಂಕ್ಷೆಯಿಂದಮೆಱಗದೆ ಲೋಕಂ
ಬಣ್ಣಿಸೆ ಚಂಚಲನಾಗದೆ
ತಿಣ್ಣಂ ನಡೆವವನೆ ತಾಂ ತಪೋಧನನಕ್ಕುಂ ೪೪

ಗದ್ಯ॥ ಕರ್ಗಲ್ಲೆನಿತು ಬೆಳ್ಪಾದೊಡಂ ಬೆಲೆಗೆಯ್ಗುಮೇ ; ರತ್ನಮಾದೊಡೆ ಬೆಲೆಗೆಯ್ಗುಂ ; ಮಿಥ್ಯಾದೃಷ್ಟಿಯ ತಪಮೆನಿತೊಳ್ಳಿತಾದೊಡಂ ಶಾಶ್ವತಮಪ್ಪ ಸುಖಮಂ ಕುಡಲಾರ್ಕುಮೇ ; ಶುದ್ಧದರ್ಶನದೊಳ್ಕೂಡಿದೊಡೆ ನಿರಂತರಮಪ್ಪ ಸುಖಮಂ ಕುಡುಗುಂ ೪೫

ವಂತೆ ಯೋಗ್ಯರನ್ನೇಕೆ ಲೂಟಿಗೆ ಗುರಿಮಾಡರು ? ಸಾಧುಗಳಿಗೆ ಕೈ ಮುಗಿಯುವ ಹಾಗೆ ದುಷ್ಟರಿಗೆ ಏಕೆ ಕೈಮುಗಿಯರು ? ಬ್ರಹ್ಮಚರ್ಯವುಳ್ಳವರಿಗೆ ಸೋಲುವಂತೆ (ವಂದಿಸುವಂತೆ) ಮಿಂಡರಿಗೇಕೆ ವಂದಿಸುವುದಿಲ್ಲ ? ಆಸೆಯಿಲ್ಲದವರಿಗೆ ಒಲಿಯುವಂತೆ ಆಸೆಯುಳ್ಳವರಿಗೇಕೆ ಒಲಿಯುವುದಿಲ್ಲ ? ತಪಸ್ಸುಮಾಡುವವರನ್ನು ಹೊಗಳುವಂತೆ ದುಷ್ಟರನ್ನೇಕೆ ಹೊಗಳುವುದಿಲ್ಲ ? ಅನ್ಯಾಯಪರರನ್ನು ಕೆಡಿಸುವ ಹಾಗೆ ನ್ಯಾಯಪರರನ್ನೇಕೆ ಕೆಡಿಸರು ? ನಡತೆಗೆಟ್ಟವರನ್ನು ಗಡಿದಾಟಿಸುವಂತೆ (ಬಹಿಷ್ಕರಿಸುವಂತೆ) ಚಾರಿತ್ರವುಳ್ಳವರನ್ನೇಕೆ ಓಡಿಸುವುದಿಲ್ಲ ? ಆದಕಾರಣ, ಎಳ್ಳಷ್ಟು ನೀಚತ್ವವನ್ನೂ ಹೊಂದದಂತೆ ಇರುವ ದೇವನೇ ದೇವ. ನೀಚತನದಿಂದ ಕೂಡಿದವನು ದೇವನಲ್ಲವೆಂಬುದನ್ನು ಲೋಕದಲ್ಲಿ ನಡೆಯುವ ನಡವಳಿಕೆಯಿಂದಲೇ ಚೆನ್ನಾಗಿ ತಿಳಿಯುವುದು. ಇನ್ನು ತಪಸ್ಸೆಂಥಾದ್ದೆಂದರೆ ೪೩. ಹೆಣ್ಣಿಗೂ ಹೊನ್ನಿಗೂ ಮಣ್ಣಿಗೂ ಆಸೆಯಿಂದ ಸೋಲದೆ ಲೋಕ ಹೊಗಳಿದಾಗ ಚಂಚಲಚಿತ್ತನಾಗದೆ ಸರಿಯಾಗಿ ನಡೆಯುವವನೇ ತಪೋಧನನಾಗುತ್ತಾನೆ ೪೪. ಕಗ್ಗಲ್ಲು ಎಷ್ಟು ಬೆಳ್ಳಗಾದರೂ ಬೆಲೆಬರುತ್ತದೆಯೇ ? ರತ್ನವಾದರೆ ಬೆಲೆ ಬಾಳುತ್ತದೆ. ಮಿಥ್ಯಾದೃಷ್ಟಿಯುಳ್ಳವನ ತಪಸ್ಸು ಎಷ್ಟು ಒಳ್ಳೆಯದಾದರೂ ಶಾಶ್ವತವಾದ ಸುಖವನ್ನು ಕೊಡಬಲ್ಲುದೆ ? ಶುದ್ಧವಾದ ದರ್ಶನದಲ್ಲಿ ಕೂಡಿದ ತಪಸ್ಸು ನಿರಂತರವಾದ ಸುಖವನ್ನು ಕೊಡುವುದು ೪೫. ಹಾಲಿನೊಳಕ್ಕೆ ಹೆಚ್ಚಾಗಿ ನೀರನ್ನು ಹಾಕಿದರೆ ಬಿಳುಪು ಆಗು

ಪಾಲೊಳ್ ಪೊಕ್ಕಳವಾಗೆ ಪೊಯ್ಯೆ ಜಲಮಂ ಬೆಳ್ಪೆಕ್ಕುಮಂತಲ್ಲದಾ
ಪಾಲೆಂತುಂ ರುಚಿಯಾಗದಂತೆ ಕೆಲಬರ್ಮಿಥ್ಯಾದುಃಖಿಂಗಳೊಳ್
ಕಾಲಟ್ಟಿರ್ದು ತಪಂಗಳಂ ನೆಗಟ್ಟೊಡಂ ದುಷ್ಕರ್ಮರೆಂತಿರ್ದೊಡಂ
ಭೂಲೋಕಸ್ತುತಮಪ್ಪ ಸತ್ತಪದೊಳಂ ಪೊಂದಿರ್ದರಂ ಪೋಲ್ವರೇ ೪೬

ಗದ್ಯ॥ ಕಬ್ಬುನವೆನಿಸು ಕಾಯ್ದು ಮೃದುವಾದೊಡಂ ಕಮ್ಮಾರಿಲ್ಲದೆ ಖಡ್ಗಾದಿ ಶಸ್ತ್ರಂಗಳಾಗದಂತೆ ಕುಮಾರ್ಗಾನುರಾಗಿಗಳೆನಿಸು ಕುದಿದು ತಪಂ ಮಾಡಿದೊಡಂ ನಿರ್ದೋಷಿಯಪ್ಪ ಪರಮಾತ್ಮನಂ ಪೊರ್ದಿದೊಡಲ್ಲದೆ ಸಕಲ ಸುಖಮನೆಯ್ದಲಾಜಿರಿಂತು ೪೭

ನೀರಿಲ್ಲದೆಡೆಯ ಬೆಳಸುಂ
ಕ್ರೂರರ ಕೆಳೆಯುಂ ವಿವೇಕಿಯಲ್ಲದನರಸುಂ
ಸಾರಗುಣಮಿಲ್ಲದಾತನ
ಚಾರಿತ್ರಮುಮೊಪ್ಪಲಾಱವೆಂತುಂ ಕಡೆಯೊಳ್ ೪೮

ರಂಡೆ ನಡಪಿದನಗುಣಮುಂ
ಗಂಡಿಲ್ಲದ ಭಟನ ಯುದ್ಧಮುಂ ಧರೆಯೊಳ್ ಕೈ
ಕೊಂಡುಱೆನೆಗಟದ ತಪಮುಂ
ಮಿಂಡನ ತಕ್ಕುಮೆಯುಮೊಪ್ಪಲಾಱವು ಜಗದೊಳ್ ೪೯

ವುದು. ಅಷ್ಟೇ ಹೊರತು ಹಾಲು ರುಚಿಯಾಗುವುದಿಲ್ಲ. ಹಾಗೆಯೇ ಕೆಲವರು ಮಿಥ್ಯಾತ್ವದ ದುಃಖಿಗಳಲ್ಲಿ ಕಾಲುಗಳನ್ನು ಅದ್ದಿದ್ದು ತಪಸ್ಸನ್ನು ಮಾಡಿದರೂ, ದುಷ್ಕರ್ಮಿಗಳು ಹೇಗಿದ್ದರೂ ಭೂಲೋಕದವರಿಂದೆಲ್ಲ ಹೊಗಳಿಕೆಯುನ್ನು ಹೊಂದಿದ ಒಳ್ಳೆಯ ತಪಸ್ಸಿನಿಂದ ಕೂಡಿದವರನ್ನು ಹೋಲುವರೆ ? ೪೬. ಕಬ್ಬಿಣ ಎಷ್ಟು ಕಾದು ಮೆತ್ತಗಾದರೂ ಕಮ್ಮಾರರಿಲ್ಲದೆ ಕತ್ತಿಯೇ ಮೊದಲಾದ ಅಸ್ತ್ರಗಳಾಗುವುದಿಲ್ಲ. ಹಾಗೆಯೇ ಕುಮಾರ್ಗದಲ್ಲಿ ಪ್ರೇಮವುಳ್ಳವರು ಎಷ್ಟು ಮರುಗಿ ತಪಸ್ಸು ಮಾಡಿದರೂ ನಿರ್ದೋಷಿಯಾದ ಪರಮಾತ್ಮನನ್ನು ಹೊಂದಿದಲ್ಲದೆ ಸಕಲ ಸುಖವನ್ನೂ ಹೊಂದಲಾರರು ೪೭. ಹೀಗೆ ನೀರಿಲ್ಲದ ಕಡೆಯ ಬೆಳೆಯೂ ಕ್ರೂರಿಗಳ ಸ್ನೇಹವೂ ವಿವೇಕಿಯಲ್ಲದವನ ರಾಜತ್ವವೂ ಶ್ರೇಷ್ಠ ಗುಣವಿಲ್ಲದವನ ನಡತೆಯೂ ಹೇಗೂ ಕಡೆಯಲ್ಲಿ ಶೋಭಾಯಮಾನವಾಗಲಾರವು ೪೮. ರಂಡೆ ಸಲಹಿದವನ ಗುಣವೂ ಪೌರುಷವಿಲ್ಲದವನ ಯುದ್ಧವೂ ಲೋಕದಲ್ಲಿ ವ್ರತವನ್ನು ಹಿಡಿದು ಸರಿಯಾಗಿ ಮಾಡದ ತಪಸ್ಸೂ ಮಿಂಡನ ಯೋಗ್ಯತೆಯೂ ಜಗತ್ತಿನಲ್ಲಿ ಶೋಭಿಸುವುದಿಲ್ಲ. ೪೯. ಹೆಚ್ಚಾದ ಶಕ್ತಿ ತನಗಿದ್ದರೂ ಕತ್ತಿಯಿಲ್ಲದೆ ಹಾವಿನ ಅಂಜಿಕೆ ಹರಿಯದಂತೆ ದೋಷ

ಗದ್ಯ॥ ಪಿರಿದಪ್ಪ ಶಕ್ತಿ ತನಗುಳ್ಳೊಡಂ ಸುರಗಿಯಿಲ್ಲದೆ ಪಣಿದಗುರ್ವುಪಜಱಿಯದಂತೆ ದೋಷ ವಿರಹಿತಮಪ್ಪ ಪರಮಾತ್ಮನ ಮತಮಂ ಪೊರ್ದಿದೊಡಲ್ಲದೆ ಸಮಸ್ತ ಕರ್ಮಂಗಳುಂ ನಿರ್ಮೂಲ ವಾಗಲಱಿಯವು. ೫೦

ಸುಜ್ಞಾನಮಿಲ್ಲದನ್ನೆಗ
ಮಜ್ಞಾನಮದಿರ್ಕು ಬುದ್ಧಿವಂತರ್ ನಯದಿಂ
ದಜ್ಞಾನವನಟಿವೊಡೆ ಕೇ
ಳ್ಸುಜ್ಞಾನಮನೆಯ್ದೆ ತಿಳಿಗೆ ಜೈನಾಗಮದೊಳ್ ೫೧

ಗದ್ಯ॥ ಪಡಿಯಱನೆನಿತು ಕೂರ್ಪೊಡಮರಮನೆಯನರಸನನುಮತಮಿಲ್ಲದೆ ಪುಗಲ್ಬಾರದಂತೆ ಮಿಥ್ಯಾದೃಷ್ಟಿಗಳೆನಿತು ತಪದಿಂ ಕಾಯಕ್ಲೇಶಂಬಟ್ಟೊಡಂ ದೇವರೆಂದಿರ್ದೊಡಂ ಕುಚರ್ಚೆಗಳಿಂ ಬಾಯಾರ್ದೊಡಂ ಸುಜ್ಞಾನಮಿಲ್ಲದೆ ದರ್ಶನಮಂ ಪೊರ್ದದೆ ಮೋಕ್ಷಮನೈದಲ್ಬಾರದು. ೫೨

ನಾಯಕನಿಲ್ಲದ ರಣಮುಂ
ಮಾಯಾವಿಯ ಪರದುಮಳಿಪನಪ್ಪನ ಧನಮುಂ
ನ್ಯಾಯಮಣಮಿಲ್ಲದವನ
ಶ್ರೀಯುಂ ನಿರ್ದಯನ ತಪಮುಮೇನೆಸೆದಪುದೇ ೫೩

ವಿರಹಿತವಾದ ಪರಮಾತ್ಮನ ಮತವನ್ನು ಹೊಂದಿದಲ್ಲದೆ ಸಮಸ್ತ ಕರ್ಮಗಳೂ ನಿರ್ಮೂಲವಾಗಲಾರವು. ೫೦. ಸಮ್ಯಕ್ ಜ್ಞಾನವಿಲ್ಲದಿರುವಾಗ ಅಜ್ಞಾನವು ಇರುತ್ತದೆ. ಬುದ್ಧಿವಂತರು ಉಪಾಯದಿಂದ ಆ ಅಜ್ಞಾನವನ್ನು ನಾಶಪಡಿಸಬೇಕಾದರೆ ಜೈನಾಗಮವನ್ನು ಕೇಳಿ ಅದರ ಸಹಾಯದಿಂದ ಸುಜ್ಞಾನವನ್ನು ಪಡೆಯಬೇಕು ೫೧. ದ್ವಾರಪಾಲಕನು ನಮಗೆ ಎಷ್ಟು ಪ್ರಿಯನಾಗಿದ್ದರೂ ಅರಸನ ಒಪ್ಪಿಗೆಯಿಲ್ಲದೆ ಅರಮನೆಯನ್ನು ಪ್ರವೇಶಿಸಲಾರರು. ಹಾಗೆಯೇ ಮಿಥ್ಯಾದೃಷ್ಟಿಗಳು ಎಷ್ಟು ತಪಸ್ಸು ಮಾಡಿ ದೇಹಕಷ್ಟವನ್ನು ಅನುಭವಿಸಿದರೂ ದೇವರೆಂದೇ ಭಾವಿಸಿದ್ದರೂ ಕೆಟ್ಟ ಚರ್ಚೆಗಳಿಂದ ಬಾಯಾರಿದರೂ ಸರಿಯಾದ ಜ್ಞಾನವಿಲ್ಲದೆ, ದರ್ಶನವನ್ನು ಹೊಂದದೆ ಮೋಕ್ಷವನ್ನು ಹೊಂದಲು ಸಾಧ್ಯವಲ್ಲ. ೫೨. ನಾಯಕನಿಲ್ಲದ ಯುದ್ಧವೂ ಮೋಸಗಾರನ ವ್ಯಾಪಾರವೂ ಆಸೆಪಾತಕನ ಧನವೂ ಸ್ವಲ್ಪವೂ ನ್ಯಾಯವಿಲ್ಲದವನ ಐಶ್ವರ್ಯವೂ ದಯಾಹೀನನ ತಪಸ್ಸೂ ಶೋಭಿಸುವುವೆ ? ೫೩. ದೇವನನ್ನು ಹೋಲುವ ಶೂರರೂ ಸ್ವರ್ಗದ

ಗದ್ಯ॥ ದೇವನ ದೊರೆಯ ಬಂಟರುಂ ದಿವಿಜಗಜದ ದೊರೆಯ ಮದವಾರಣಂಗಳುಮುಳ್ಳೊಡಂ ಮುಖ್ಯನಾಯಕನಿಲ್ಲದೆ ಮಾರ್ಪಡೆಯುಂ ಗೆಲ್ದುಗೆಲ್ಲಂಗೊಳಲಾರ್ಪರದಂತೆ ದಾನ ಪೂಜೆ ಶೀಲೋಪವಾಸಂಗಳಂ ಮಾಳ್ಪುದಾರಗುಣಮುಳ್ಳೊಡಮರಿದೆನಿಸುವ ತಪಮಂ ಮಾಳ್ಪ ದೇಹದ ಬಲಮುಳ್ಳೊಡಂ ಅಷ್ಟಾದಶ ದೋಷದೂರನಪ್ಪ ದೇವನಂ ಸಾರದೆ ಕರ್ಮಂಗಳಂ ಗೆಲ್ದು ನಿರ್ವಾಣ ಸಾಮ್ರಾಜ್ಯಮಂ ಪಡೆಯಲಾರ್ಪರದು. ೫೪

ದಿನಕರನಿಲ್ಲದಂಬರಮುಮುನ್ನತಿಯಿಲ್ಲದ ರಾಜ್ಯಲೀಲೆಯುಂ
ವನಿತೆಯರಿಲ್ಲದೋಲಗಮುಮಾತ್ಮಜರಿಲ್ಲದ ಗೇಹಮುಂ ಜಗ
ಜ್ಜನನುತಮಪ್ಪ ಪಾಪಹರಮಪ್ಪ ಸದಾಶುಚಿಯಪ್ಪ ಶುದ್ಧದ
ರ್ಶನಮಣಮಿಲ್ಲದಾತನ ತಪೋಗ್ರತೆಯುಂ ನೆಗೞ್ದೊಪ್ಪಲಾರ್ಕುಮೆ ೫೫

ಗದ್ಯ॥ ಕೈದುವುಳ್ಳೊಡಂ ಭುಜಬಲಮುಳ್ಳೊಡಂ ಮನಮಿಲ್ಲದನಿತಱೊಳೆ ಸಕಲ ಕರ್ಮಂಗಳಂ ಕಿಡಿಸಲಾರ್ಪರದಾ ಕರ್ಮಂ ಕೆಟ್ಟೊಡಲ್ಲದೆ ನಿಶ್ಶ್ರೇಯಸಶ್ರೀಯುಂ ಪಡೆಯಲಾರ್ಪರದದಱಿಂ ಶುದ್ಧ ದರ್ಶನದೊಳ್ ಮುನ್ನಂ ದೃಢರಾಗಿ ಬೞಿಕ್ಕೊಳ್ಳಿತಪ್ಪ ತಪಮಂ ಮಾಳ್ಪುದೀ ಧರ್ಮಮೆಂತಪ್ಪುದೆಂದೊಡೆ ೫೬

ಆನೆಯನ್ನು ಹೋಲುವ ಮದ್ದಾನೆಗಳೂ ಇದ್ದರೂ ಮುಖ್ಯನಾದ ನಾಯಕನೇ ಇಲ್ಲದೆ ಇದಿರು ಸೈನ್ಯವನ್ನು ಗೆದ್ದು ವಿಜಯವನ್ನು ಸಂಪಾದಿಸಿಕೊಳ್ಳಲಾಗದು. ಹಾಗೆಯೇ ದಾನ, ಪೂಜೆ, ಶೀಲ, ಉಪವಾಸಗಳನ್ನು ಮಾಡುವ ಉದಾರಗುಣವಿದ್ದರೂ ಅಸಾಧ್ಯವೆನಿಸುವಂಥ ತಪಸ್ಸನ್ನು ಮಾಡುವ ದೇಹಬಲವಿದ್ದರೂ ಹದಿನೆಂಟು ದೋಷಗಳಿಂದ ದೂರನಾದ ದೇವನನ್ನು ಸಮೀಪಿಸದೆ ಕರ್ಮಗಳನ್ನು ಗೆದ್ದು ಮೋಕ್ಷ ಸಾಮ್ರಾಜ್ಯವನ್ನು ಪಡೆಯಲು ಬರುವುದಿಲ್ಲ ೫೪. ಸೂರ್ಯನಿಲ್ಲದ ಆಕಾಶವೂ ಔನ್ನತ್ಯವಿಲ್ಲದ ರಾಜ್ಯ ವಿಲಾಸವೂ ಸ್ತ್ರೀಯರಿಲ್ಲದ ರಾಜಸಭೆಯೂ ಮಕ್ಕಳಿಲ್ಲದ ಮನೆಯೂ ಜಗತ್ತಿನ ಜನರ ಸ್ತೋತ್ರಕ್ಕೆ ಪಾತ್ರವಾದ, ಪಾಪವನ್ನು ಹೋಗಲಾಡಿಸಬಲ್ಲ, ಸದಾ ಶುಚಿಯಾದ ಶುದ್ಧವಾದ ದರ್ಶನವು ಸ್ವಲ್ಪವೂ ಇಲ್ಲದವನ ತಪಸ್ಸಿನ ಉಗ್ರತೆಯೂ ಶೋಭಿಸಬಲ್ಲುವೆ? ೫೫. ಆಯುಧವಿದ್ದರೂ ಬಾಹುಬಲವೂ ಇದ್ದರೂ ಮನಸ್ಸಿಲ್ಲದಿದ್ದರೆ ಶತ್ರುವನ್ನು ಕೊಲ್ಲಲು ಆಗುವುದಿಲ್ಲ, ಹಾಗೆಯೇ ತಪಸ್ಸಿದ್ದರೂ ದರ್ಶನವಿಲ್ಲದೆ ಎಲ್ಲ ಕರ್ಮಗಳನ್ನೂ ಹೋಗಲಾಡಿಸಲು ಆಗದು, ಕರ್ಮವು ಕಳೆದ ಹೊರತು ಮೋಕ್ಷಲಕ್ಷ್ಮಿಯನ್ನು ಹೊಂದಲು ಅಸಾಧ್ಯ, ಆದ್ದರಿಂದ ಮೊದಲು ಶುದ್ಧ ದರ್ಶನದಲ್ಲಿ ದೃಢಚಿತ್ತರಾಗಿ ಆಮೇಲೆ ಒಳ್ಳೆಯ ತಪಸ್ಸನ್ನು ಮಾಡುವುದು. ಈ ಧರ್ಮ ಎಂತಹುದೆಂದರೆ. ೫೬. 'ಕೊಲೆ' ಎನ್ನುವ ಈ ಮಾತಿಗೆ ಮಹಾಶೂರನೂ ಮೊದಲು ಹೆಚ್ಚಾಗಿ ಭಯ

ಕೊಲೆಯೆಂಬೀ ನುಡಿಗೆ ಮಹಾ
ಕಲಿಯುಂ ಮೊದಲಾಗೆ ನಾಡೆ ಬೆರ್ಚುವನೇದು
ದೆಲೆಗಳ ಬಗೆವೊಡೆ ಜಗದೊಳ್
ಕೊಲೆಯಿಂದು ಬಿಟ್ಟು ಪಾತಕಂ ಪೆಱತುಂಟೇ ೫೭

ಘಮ್ಮನೆ ಸಾವಾಯ್ತೀತನ
ಧರ್ಮದಿನಾನಂದು ಬಟ್ಕಿದೆನೆಂಬೀ ನುಡಿಯುಂ
ಕೂರ್ಮೆಯೊಳೆ ನುಡಿವೊಡೀತನ
ಧರ್ಮದೊಳಾನೞಿದೆನೆಂದು ನುಡಿವವರೊಳರೇ ೫೮

ಗದ್ಯ॥ ಬಲ್ಲಿದರಪ್ಪರಸುಗಳ ನ್ಯಾಯದಿಂದಿನಿತರ್ಥಮಂ ತೆಱಲ್ವೇೞ್ಕುಮೆಂಬರಿಂತಿರ್ಪವರೂ-ರೂರ್ದಪ್ಪದೋರೊರ್ವರ ಜೀವಮಂ ಕುಡಲ್ವೇೞ್ಕುಮೆಂದೊಡೆ ನಾಡೆಲ್ಲಮಾತನೊಳಿದಿರ್ಚಿ ಕಾದುವರಲ್ಲದೆ ತೆಱುವವರಲ್ಲದಱಿಂ ಜೀವವಧೆಯೆ ಮಹಾಪಾಪಂ ೫೯

ಸುತರುಂ ನಂಟರುಮಯ್ಯನುಂ ಕೆಳೆಯನುಂ ಬಲ್ಲಾಳ್ಗಳುಂ ನೋಡೆ ನೋ
ಡೆ ತಗುಳ್ದಟ್ಟಿ ಪೊರಳ್ಚಿ ಕೊಂದಪಗೆಯಂ ಕೊಲ್ವರ್ಭಯಂಗೊಳ್ವಿನಂ
ಕ್ಷಿತಿಯಂ ಪೊಕ್ಕುಳಿತಿರ್ದೊಡಂ ಭರದಿನಿನ್ನೀತಪ್ಪುದಂ ತಾನೆ ಕಾ
ಣುತುಮಿರ್ದುಂ ಕೊಲೆ ಧರ್ಮವೆಂದು ಪಿಡಿವಂ ಗಾಂಪಂ ಪೆಱರ್ಗಾಂಪರೆ ೬೦

ಪಡುವವನು. ಹೀಗೆಂದಾಗ ಲೋಕದಲ್ಲಿ ಕೊಲೆಗಿಂತ ಹೆಚ್ಚಿನ ಪಾತಕ ಬೇರೆಯಾವುದಿದೆ? ೫೭. 'ಥಟ್ಟನೆ ಸಾವೇ ಒದಗಿತ್ತು. ಈತನ ಧರ್ಮದಿಂದ ನಾನು ಬದುಕಿದೆ' ಎಂಬ ಈ ಮಾತನ್ನು ಪ್ರೀತಿಯಿಂದ ಹೇಳಿಕೊಳ್ಳುವವರುಂಟು, 'ಈತನ ಧರ್ಮದಿಂದ ನಾನು ಪ್ರಾಣಕಳೆದುಕೊಂಡೆ' ಎಂದು ಹೇಳುವವರಿದ್ದಾರೆಯೆ ? ೫೮. ಬಲಿಷ್ಠರಾದ ರಾಜರು ಅನ್ಯಾಯದಿಂದ 'ಇಷ್ಟು ಹಣವನ್ನು ತೆರಬೇಕು' ಎನ್ನುವರು. ಹೀಗಿರುವವರು 'ಒಂದೊಂದು ಊರೂ ಬಿಡದೆ ಒಬ್ಬೊಬ್ಬರು ಜೀವವನ್ನು ಕೊಡಬೇಕು,' ಎಂದು ಹೇಳಿದರೆ ದೇಶವೆಲ್ಲ ಆ ಮಾತಿಗೆ ಪ್ರತಿಭಟಿಸಿ ಹೋರಾಡುವರೇ ಹೊರತು ಜೀವ ತೆರುವುದಿಲ್ಲ. ಆದ್ದರಿಂದ ಜೀವವಧೆಯೇ ಮಹಾಪಾಪ ೫೯. ಮಕ್ಕಳು, ನಂಟರು, ತಂದೆ, ಗೆಳೆಯ, ಶೂರರು, – ಎಲ್ಲರೂ ನೋಡು ನೋಡುತ್ತಿದ್ದಂತೆಯೇ ಕೊಲೆ ಮಾಡಿದ್ದ ಹಗೆಯನ್ನು ಬೆನ್ನಟ್ಟಿ ಹೋಗಿ ಹಿಡಿದು ಕೆಡವಿ ಹೊರಳಿಸಿ ಕೊಲ್ಲುತ್ತಾರೆ. ಅವನು ಎಲ್ಲಿ ಹೊಕ್ಕು ಬಚ್ಚಿಟ್ಟುಕೊಂಡಿದ್ದರೂ ಬಿಡದೆ ನೋಡುವವರಿಗೂ ಭಯವಾಗುವಂತೆ ಕೊಲ್ಲುತ್ತಾರೆ. ಈ ರೀತಿಯಾಗಿ ನಡೆಯುವುದನ್ನು ತಾನು ಕಾಣುತ್ತಿದ್ದರೂ ಕೊಲೆ ಧರ್ಮವೆಂದು ಅನುಸರಿಸುವವನು ದಡ್ಡ. ಇತರರು ದಡ್ಡರೇ ? ೬೦. ಈ ದಾರಿಯಲ್ಲಿ ಸುಂಕ ಹೆಚ್ಚೆಂದು

ಗದ್ಯ॥ ಈ ಬಟ್ಟೆಯೊಳ್ಸುಂಕಂ ಪಿರಿದೆಂದೊಡೆ ಮೊದಲಾಗದೆಂಬಱಲ್ಲಿಗೆ ತಕ್ಕರ್ಥಮಂ ಕೊಟ್ಟು ಪೋಪಮೆಂಬರ್ದಾರಿಗಳೊಳವಿೂ ಬಟ್ಟೆಯೊಳ್ ಕೊಂದಪರೆಂದೊಡೆ ಭಯದಿಂ ಪೋಗಲೊಲ್ಲ ರೆಂದೊಡೆ ಕೊಲೆಯಿಂದಮಗ್ಗಳಂ ಪಾಪಮಿಲ್ಲ ೬೧

ಏಗೆಯ್ದುಂ ಕೊಲೆಯಿಂ ಸುಖ
ಮಾಗದು ಕಡುದುಃಖಮಕ್ಕುಮೆಂಬುದನಱಿದಿಂ
ಬಾಗಿ ತಿಳಿದೆಯ್ದೆ ಕೊಲೆಯು
ದ್ಯೋಗಮನತಿ ಕಷ್ಟಮೆಂದು ಬಿಡುವುದು ಭವ್ಯಂ ೬೨

ಗದ್ಯ॥ ದೂರದಪೊಗೆಯುಂ ಕಂಡು ಕಿಚ್ಚುಂಟೆಂದಱಿವಂತೆ ಮಹಾವಿಭೂತಿಯಂ ಬಿಟ್ಟೆಕ್ಕಡಂ ಮೆಟ್ಟಿ ಬಿಲ್ಗೊಂಡು, ಕರಿತುರಗಾದಿಗಳನೊಲ್ಲದೆ ನಾಯಿಗಳ್ವೆರಸು ಸಿವಿಗೆಯ ನಿರಿಸಿ ನಡೆದು ಗಣಕಾಜನಮುಂ ಮಂಡಳಿಕರುಂ ಸಾಮಂತರುಮಿಲ್ಲದೆ ಕ್ರೂರರಪ್ಪ ಬೇಂಟೆಗಾಱರೊಳ್ಕೂಡಿ, ಮಣಿಕಂಕಣಮನೊಲ್ಲದೆ ಕೈಪೊಡೆಯುಂ ಕಟ್ಟಿ, ದಿವ್ಯಾಂಬರವನೀಡಾಡಿ ಕರಿಯ ಕುಪ್ಪಸಮಂ ತೊಟ್ಟು, ಹಾರಾದ್ಯಾಭರಣಂಗಳನೊಲ್ಲದೆ ತೋಲ್‌ಗಟ್ಟಿ, ಪಂಚಮಹಾಶಬ್ದಮನೊಲ್ಲದ ಬೇಂಟೆಪಱಿಯಂ ಪೊಯ್ಸಿ, ಶಾಂತರೂಪಂಬಿಟ್ಟು ಕ್ರೂರರೂಪಂ ಕೈಕೊಂಡು, ನಗೆಯುಂ

ಹೇಳಿದರೆ ಮೊದಲು 'ಆಗದು' ಎನ್ನುವವರು ಕೊನೆಗೆ ಅಲ್ಲಿ 'ತಕ್ಕಷ್ಟು ಹಣ ಕೊಟ್ಟು ಹೋಗೋಣ' ಎನ್ನುವರು. ಈ ದಾರಿಯಲ್ಲಿ ಕೊಲ್ಲುವರೆಂದು ಹೇಳಿದರೆ ಭಯಪಟ್ಟು ಹೋಗಲು ಇಷ್ಟವಿಲ್ಲದೆ ನಿಲ್ಲುವರು. ಆದ್ದರಿಂದ ಕೊಲೆಗಿಂತ ಹೆಚ್ಚಿನ ಪಾಪವಿಲ್ಲ. ೬೧. ಏನು ಮಾಡಿದರೂ ಕೊಲೆಯಿಂದ ಸುಖವಾಗುವುದಿಲ್ಲ. ಹೆಚ್ಚಾದ ದುಃಖವೇ ಆಗು ವುದು. ಇದನ್ನು ಅರಿತು ಸರಿಯಾಗಿ ಅರ್ಥ ಮಾಡಿಕೊಂಡು ಕೊಲೆಯ ಪ್ರಯತ್ನವೇ ಕೆಟ್ಟದ್ದೆಂದು ಭವ್ಯನು ಅದನ್ನು ಬಿಟ್ಟುಬಿಡಬೇಕು ೬೨. ದೂರದಲ್ಲಿ ಹೊಗೆಯನ್ನು ನೋಡಿ ಬೆಂಕಿಯಿರುವುದೆಂದು ತಿಳಿಯುವ ಹಾಗೆ ಮಹಾವೈಭವವನ್ನು ಬಿಟ್ಟು, ಎಕ್ಕಡ ಮೆಟ್ಟಿಕೊಂಡು ಬಿಲ್ಲು ಹಿಡಿದು ಆನೆ ಕುದುರೆಗಳನ್ನು ಬಿಟ್ಟು, ನಾಯಿಗಳನೊಡನೆ, ಪಲ್ಲಕ್ಕಿ ಯನ್ನು ನಿಲ್ಲಿಸಿ, ನಡೆಯುತ್ತಾ, ಸೂಳೆಯರಂ, ಸಾಮಂತರೂ, ಮಂಡಲಾಧಿಕಾರಿಗಳೂ, ಇಲ್ಲದೆ, ಕ್ರೂರಿಗಳಾದ ಬೇಟೆಗಾರರೊಡನೆ ಕೂಡಿ, ರತ್ನಕಂಕಣಗಳನ್ನು ಬಿಟ್ಟು ಕೈಗೆ ಚರ್ಮದ ಪಟ್ಟಿಯನ್ನು ಕಟ್ಟಿ ದಿವ್ಯವಸ್ತ್ರಗಳನ್ನು ತ್ಯಜಿಸಿ ಕಪ್ಪನೆಯ ಅಂಗಿಯನ್ನು ತೊಟ್ಟು, ಹಾರ ಮೊದಲಾದ ಒಡವೆಗಳನ್ನು ಬಯಸದೆ ಚರ್ಮವನ್ನು ಕಟ್ಟಿ, ಪಂಚ ಮಹಾ ಶಬ್ದ (ರಾಜಯೋಗ್ಯವಾದ ವಾದ್ಯಗಳು) ಗಳನ್ನು ಮೆಚ್ಚದೆ ಬೇಟೆಯ ತಮಟೆ ಯನ್ನು ಹೊಡೆಯಿಸಿ ಶಾಂತರೂಪವನ್ನು ಬಿಟ್ಟು ಕ್ರೂರರೂಪವನ್ನು ಧರಿಸಿ ನಗುವನ್ನು

ಬಿಟ್ಟು ಮುನಿಸನೊಳಕೊಂಡು, ಬೇಂಟೆಗೆ ಪೋಪ ರೌದ್ರಾತ್ಮರ ನೆಗಟ್ತೆಯೆ ನರಕಗಮನಮನಱಿ
ಪುಗುಮದಂ ಕಂಡು ಕೊಲೆಯೆ ದುಃಖಹೇತುವೆಂದಱಿದು ಕೊಲೆಯಂ ಮಾಣ್ಬುದು ೬೩

ಸೊಗಯಿಪ ಸುಖದೊಳ್ಕೂಡುವ
ಬಗೆಯುಳ್ಳೊಡೆ ಜೈನಮಾರ್ಗಮಂ ನಂಬುಗೆಯಿಂ
ಸುಗಮಮನೆ ಪಿಡಿದುಬಿಡುವುದು
ಪಗೆಯಿಂದುಳ್ಳಿಕ್ಕಿ ಕೊಲೆಯೊಳೊಂದಿದ ಮತಮಂ ೬೪

ಗದ್ಯ॥ ಇನ್ನಾಗಮಮೆಂತಪ್ಪುದೆಂದೊಡೆ, ವಿಚಾರಮಂ ತಿರ್ದುವ ಧರ್ಮಾಧಿಕರಣರೆಂತವರವ
ರ್ನುಡಿವ ಪದ್ಧತಿಯಿಂದಪರ್ಕಳ್ಳರಿವರ್ಶುದ್ಧರೆಂದಱಿವರಂತೆ ಬುದ್ಧಿವಂತರ್ ಸಕಳಾಗಮಂ
ಗಳೊಳಾದ ನುಡಿಗಳಂ ಪರೀಕ್ಷಿಸಿ ತಿಳಿದು ನರಕಕ್ಕೆ ಕಾರಣಮಪ್ಪ ಕುಮತಮಿದು ಮೋಕ್ಷಕ್ಕೆ
ಕಾರಣಮಪ್ಪ ಸನ್ಮತಮಿದೆಂದು ನೋಡಿ ಪಿಡಿವುದು ೬೫

ಕುರುಡರ್ನೂರ್ವರ್ನೆರೆದುಂ
ಸುರಗಿರಿ ಮುಂದಿರ್ದುದಾದೊಡಂ ಕಾಣ್ಬರೆ ಕಾ
ಪುರುಷರ್ಮಿಥ್ಯಾಜ್ಞಾನಿಗ
ಳುರು ನಿರ್ವೃತಿಗುಯ್ವ ಧರ್ಮಮಂ ಕಂಡಪರೇ ೬೬

ಬಿಟ್ಟು ಮುನಿಸನ್ನೇ ವಹಿಸಿ ಬೇಟೆಗೆ ಹೋಗುವ ಕ್ರೂರಾತ್ಮರ ಕೆಲಸವೇ ನರಕ ಪ್ರಯಾಣ ವನ್ನು ತಿಳಿಸುವುದು, ಅದನ್ನು ಕಂಡು ಕೊಲೆಯೇ ದುಃಖಕ್ಕೆ ಕಾರಣವೆಂದು ತಿಳಿದು. ಅದನ್ನು ತ್ಯಜಿಸತಕ್ಕದ್ದು, ೬೩. ಆನಂದವನ್ನುಂಟು ಮಾಡುವ, ಸುಖವನ್ನು ಪಡೆಯುವ, ಮನಸ್ಸಿದ್ದರೆ ಸುಗಮವಾದ ಜೈನ ಮಾರ್ಗವನ್ನು ನಂಬಿಕೆಯಿಂದ ಹಿಡಿದು ಹಗೆತನದಿಂದ ಮನಸ್ಸು ಅಂಜಿ ಕೊಲೆಯಲ್ಲಿ ಕೂಡಿದ ಮತವನ್ನು ಬಿಡತಕ್ಕದ್ದು ೬೪. ಇನ್ನು ಆಗಮ ವೆಂತಹುದೆಂದರೆ ವಿಚಾರವನ್ನು ತಿದ್ದುವ ಧರ್ಮಾಧಿಕರಣದವರು ಹೇಗೆ, ಅವರವರು ಹೇಳುವ ಪದ್ಧತಿಯಿಂದ ಇವರು ಕಳ್ಳರು, ಇವರು ಶುದ್ಧರು ಎಂದು ತಿಳಿಯುವರು. ಹಾಗೆಯೇ ಬುದ್ಧಿವಂತರು ಸಮಸ್ತ ಆಗಮಗಳಲ್ಲಿನ ಮಾತುಗಳನ್ನೂ ಪರೀಕ್ಷಿಸಿ ತಿಳಿದುಕೊಂಡು ನರಕಕ್ಕೆ ಕಾರಣವಾದ ಕುಮತ ಇದು, ಮೋಕ್ಷಕ್ಕೆ ಕಾರಣವಾದ ಸನ್ಮತ ಇದು, ಎಂದು ತಿಳಿದು ಆಶ್ರಯಿಸಬೇಕು. ೬೫. ನೂರಾರು ಮಂದಿ ಕುರುಡರು ಸೇರಿಯೂ ಮುಂದೆ ಮೇರು ಪರ್ವತವಿದ್ದರೂ ಕಾಣಲಾರರು. ಹಾಗೆಯೇ ಮಿಥ್ಯಾ ಜ್ಞಾನಿಗಳಾದ ಕಾಪುರುಷರು ಮೋಕ್ಷಸುಖಕ್ಕೆ ಕರೆದೊಯ್ಯುವ ಧರ್ಮವನ್ನು ಕಾಣಲಾರರು. ೬೬. ಎಷ್ಟು ಶಕ್ತಿಯಿದ್ದರೂ ಔಷಧವು ಬಕ್ಕ ತಲೆಯ

ಗದ್ಯ॥ ಎನಿಸು ಶಕ್ತಿಯುಳ್ಳೊಡಮೌಷಧಂ ತಱಿಂಟುದಲೆಯೊಳ್ ರೋಮಮಂ ಪುಟ್ಟಿಸಲಾರದು; ಎನಿತು ಗಾರುಡಮಂತ್ರ ಬೀಜಾಕ್ಷರಮಾದೊಡಂ ಕೊಟಿವಾವಂ ಕೇಳಿಸಲಾಱದು; ಎನಿತು ಶೃಂಗಾರವತಿಯಾದೊಡಂ ಸೂಳೆ ವಿರಕ್ತನನೊಲಿಸಲಾಱಳಂತೆ ಬದ್ಧಮಿಥ್ಯಾದೃಷ್ಟಿಯಪ್ಪ ಜೀವಮುಮಂ ಬೇಗಂ ನರಕಂಬುಗಲ್ವೇಡಿರ್ದ ಜೀವಮುಮಂ ಅಭವ್ಯನಪ್ಪ ಜೀವನುಮಂ ಪರಮಾಗಮಮೆನಿತು ಸಾಗಿಯುಂ ಸೋಲಿಸಲಾಱದದು ಪ್ರಮಾಣಮಲ್ಲದು ಬುದ್ಧಿವಂತರಪ್ಪರಾರ್ಕೈದು ತಿಳಿದು ನಂಬುವುದು ೬೭

ಪೇಲಿಂಗೆ ನೊಣಂಗಳ್ ಕಡು
ಸೋಲದಿನೆಱಗುವುವು ಕಪ್ಪುರಕ್ಕೀಗೆಯ್ದುಂ
ಸೋಲದಿನೆಱಗವು ಜಗದೊಳ್
ಪೇಲೇಂ ಮೇಲಾಯ್ತೆ ಕಪ್ಪುರಂ ಕೀೞಾಯ್ತೇ ೬೮

ಗದ್ಯ॥ ಪಿತ್ತಮುಳ್ಳವರ್ಗೆ ಪಾಲ್ ಕೈಪೆಯುಕ್ಕುಮಲ್ಲದೆ ಪಿತ್ತಮಿಲ್ಲದಂಗೆ ಕೈಪೆಯಾಗದಂತೆ ತೀವ್ರಕರ್ಮಮುಳ್ಳವಂಗೆ ಪರಮಾಗಮಂ ರಂಜಿಸದಲ್ಲದೆ ಲಘುಕರ್ಮಿಗೆ ರಂಜಿಸುಗುಂ ೬೯

ಮೊದಲಿಂ ಕಡೆವರೆಗಂ ಪೇ
ೞ್ವುದು ಪೂರ್ವಾಪರವಿರುದ್ಧಮಪ್ಪಾಗಮದೊಳ್
ವಿದಿತಂ ಕೇಳಿಲ್ಲದಱಿಂ
ಸುದೂರಮಾ ಮೋಕ್ಷಮೆಂದು ನಂಬುವುದು ಬುಧಂ ೭೦

ಮೇಲೆ ಕೂದಲನ್ನು ಹುಟ್ಟಿಸಲಾರದು; ಎಷ್ಟು ಗಾರುಡ ಮಂತ್ರ ಬೀಜಾಕ್ಷರವಾದರೂ ಕೊಳಕು ಮಂಡಲದ ಹಾವನ್ನು ಆಜ್ಞೆಗೊಳಗೆ ಮಾಡಲಾರದು ; ಎಷ್ಟು ಅಲಂಕಾರವತಿಯಾದರೂ ಸೂಳೆ ವಿರಕ್ತನಲ್ಲಿ ಪ್ರೀತಿಯನ್ನು ಹುಟ್ಟಿಸಲಾರಳು. ಹಾಗೆಯೇ ಬದ್ಧರಾದ ಮಿಥ್ಯಾದೃಷ್ಟಿಗಳಾದ ಜೀವಿಗಳನ್ನು, ಬೇಗ ನರಕವನ್ನು ಹೊಗುವ ಆಸೆಯುಳ್ಳ ಜೀವನನ್ನೂ, ಪರಮಾಗಮವಾಗಿಯೂ ಸೋಲಿಸಲಾರದು, ಅದು ಪ್ರಮಾಣವಲ್ಲ. ಬುದ್ಧಿವಂತರಾದವರು ಅದನ್ನು ಪರೀಕ್ಷೆಮಾಡಿ ನೋಡಿ ತಿಳಿದು ನಂಬಬೇಕು. ೬೭. ಹೇಲಿಗೆ ನೊಣಗಳು ಬಹು ಆಕರ್ಷಣೆಯಿಂದ ಮೇಲೆ ಮುತ್ತುತ್ತವೆ. ಏನು ಮಾಡಿದರೂ ಕರ್ಪೂರಕ್ಕೆ ಹಾಗೆ ಮುತ್ತುವುದಿಲ್ಲ. ಜಗತ್ತಿನಲ್ಲಿ ಇದರಿಂದ ಹೇಲು ಉತ್ತಮವಾಯಿತೆ, ಕರ್ಪೂರ ಕೀಳಾಯಿತೇ ? ೬೮. ಪಿತ್ತವಿರುವವರಿಗೆ ಹಾಲು ಕಹಿಯಾಗುವುದು. ಪಿತ್ತವಿಲ್ಲದವರಿಗೆ ಕಹಿಯಾಗದು, ಹಾಗೆಯೇ ತೀವ್ರಕರ್ಮವಿರುವವರಿಗೆ ಪರಮಾಗಮವು ರಂಜಿಸುವುದಿಲ್ಲ. ಲಘುಕರ್ಮಿಗೆ ರಂಜಿಸುತ್ತದೆ. ೬೯. ಮೊದಲಿನಿಂದ ಕಡೆಯುವರೆಗೂ ಹೇಳುವುದೆಲ್ಲ ಪೂರ್ವಾಪರವಿರುದ್ಧವಾಗಿರುವ ಆಗಮದಲ್ಲಿ ತಿಳಿಯಬೇಕಾದದ್ದು ಏನೂ ಇಲ್ಲ. ಅದರಿಂದ ಮೋಕ್ಷವು ಬಹಳ ದೂರವೆಂದು ಬುಧನು ತಿಳಿದುಕೊಳ್ಳಬೇಕು. ೭೦. ಪೂರ್ವಾ

ಗದ್ಯ॥ ಪೂರ್ವಾಪರವಿರೋಧಮಂ ಕಂಡೊಡೆ ಮೊದಲಾಗೆ ಲೋಕದ ಜನಂಗಳಿವರ್ಕಳ್ಳ ನೆಂದು ನಂಬರೆಂದೊಡೆ ಪೂರ್ವಾಪರ ವಿರುದ್ಧಮಪ್ಪಾಗಮಮನೆಂತು ಕಿಲರ್ಜಡಮತಿಗಳ್ ನಂಬು ವರೋ ೭೧

ಪೇಟ್ವರ್ತವಿಪ್ಪಿಚ್ಚೆಗೆ ವರೆ
ಪೇಟ್ವರದೇಂ ದೋಷಪಮಾಯ್ತೆ ಬೆಳ್ಪನದಿಂದಂ
ಕೇಳ್ವರ್ತಾವೆತ್ತಾಗದೆ
ಕೇಳ್ವುದು ಲೇಸಾಗಿ ಮನದೊಳಾರಯ್ಯುತ್ತುಂ ೭೨

ಗದ್ಯ॥ ಪಂದಿ ಕೆಯ್ಯಂ ತಿಂದೊಡೆ ಕತ್ತೆಯುಂ ಕಿವಿಯುಂ ಕೊಯ್ದರೆಂಬಂತೆ ಸೂಳೆಬಂಟಂಗಾಅದೆ ಶಂಖದ ಗೊರಪನಂ ಬಡಿದರೆಂಬಂತೆ ಪೆಂಡಿರ ದೋಷಕ್ಕೆ ಮಕ್ಕಳ ಮೂಗಂ ಕೊಯ್ದರೆಂಬಂತೆ ಅವಿಚಾರದಿಂ ಪಕ್ಷಪಾತಿಯಾಗದೆ ಮಾಣಿಕಬಟ್ಟಂ ಮಾಣಿಕಮಂ ಪರೀಕ್ಷಿಸುವಂತೆ ಪರದಂ ವಸ್ತುವಂ ಪರೀಕ್ಷಿಸುವಂತೆ ಸುಜನರ್ವಿದಗ್ಧರಂ ಪರೀಕ್ಷಿಸುವಂತೆ ಬಂಡಾರಿಗರ್ಪೊನ್ನಂ ಪರೀಕ್ಷಿಸು ವಂತೆ ವಿಚಾರಪೂರ್ವಕಮಾಗಿ ಧರ್ಮಂಗಳಂ ಪರೀಕ್ಷಿಸಿ ಪರಮಾಗಮಮಪ್ಪುದನೇಕಚಿತ್ತದಿಂ ನಂಬಿ ಸಂಶಯಮತಿಯಾಗದೆ ತದಾಗಮ ಕ್ರಮದೊಳ್ ನೆಗಟ್ಟುದು; ಇಂತೀದಾನವೆಂತಪ್ಪುದೆಂದೊಡೆ ೭೩

ಪರವಿರೋಧವನ್ನು ಕಂಡರೆ ಮೊದಲು ಲೋಕದ ಜನರು ಇವನು ಕಳ್ಳನೆಂದು ನಂಬು ವುದಿಲ್ಲವೆಂದರೆ, ಪೂರ್ವಾಪರ ವಿರುದ್ಧವಾದ ಆಗಮವನ್ನು ಜಡಮತಿಗಳಾದ ಕೆಲವರು ಹೇಗೆ ನಂಬುವರೋ ? ೭೧. ಹೇಳುವರು ತಮಗಿಷ್ಟ ಬಂದಂತೆ ಹೇಳುತ್ತಾರೆ. ಅದೇನು ತಪ್ಪಾಯ್ತು ? ಬೆಪ್ಪುತನದಿಂದ ಕೇಳುವವರು ಎತ್ತಿನಂತೆ ಎಲ್ಲಕ್ಕೂ ತಲೆ ದೂಗದೆ ಮನಸ್ಸಿನಲ್ಲಿ ಚೆನ್ನಾಗಿ ವಿಚಾರ ಮಾಡುತ್ತ ಕೇಳಬೇಕು. ೭೨. ಹಂದಿ ಹೊಲ ವನ್ನು ತಿಂದರೆ ಕತ್ತೆಯ ಕಿವಿಯನ್ನು ಕೊಯಿದರೆಂಬ ಹಾಗೆ ಸೂಳೆಬಂಟನನ್ನೇನೂ ಮಾಡ ಲಾರದೆ ಶಂಖದ ಗೊರವನನ್ನು ಬಡಿದರೆಂಬ ಹಾಗೆ, ಹೆಂಡಿರ ದೋಷಕ್ಕೆ ಮಕ್ಕಳ ಮೂಗನ್ನು ಕೊಯಿದರೆಂಬಂತೆ ವಿಚಾರವಿಲ್ಲದೆ, ಪಕ್ಷ ವಹಿಸದೆ, ಮಾಣಿಕ್ಯ ಭಟ್ಟನು ಮಾಣಿಕ್ಯವನ್ನು ಪರೀಕ್ಷಿಸುವ ಹಾಗೆ, ವ್ಯಾಪಾರಿಯು ವಸ್ತುವನ್ನು ಪರೀಕ್ಷಿಸುವ ಹಾಗೆ, ಸುಜನರು ಪಂಡಿತರನ್ನು ಪರೀಕ್ಷಿಸುವ ಹಾಗೆ, ಭಂಡಾರದವನು ಹೊನ್ನನ್ನು ಪರಿಶೀಲಿಸು ವಂತೆ, ವಿಚಾರ ಪೂರ್ವಕವಾಗಿ ಧರ್ಮಗಳನ್ನು ಚೆನ್ನಾಗಿ ಪರೀಕ್ಷೆ ಮಾಡಿ ಪರಮಾಗಮ ವಾದುದನ್ನು ಒಂದೇ ಮನಸ್ಸಿನಿಂದ ನಂಬಿ ಸಂಶಯ ಮತಿಯಾಗದೆ ಆ ಆಗಮಕ್ರಮದಲ್ಲಿ ಆಚರಿಸಬೇಕು. ಇನ್ನು ಈ ದಾನವೆಂತಹುದೆಂದರೆ ೭೩. ಹಾವುಗಳಿಗೂ ಹಸುಗಳ

ಉರಗತತಿಗಂ ಗೋವೃಂದಕ್ಕಂ ಮನೋಹರಮಾಗೆ ಚಿ
ಚ್ಚರದಿನೆಱೆಯಲ್ಬೇಗಂ ಕೇಳೊಂದೆ ಬಾವಿಯ ನೀರನಾ
ದರದಿನುರಗಂ ಪೀರ್ದಾನೀರ್ನಂಜು ಜೀವಧನಂ ಸವಿ
ಸ್ತರದೆ ಕುಡಿದಾ ತೋಯಂ ಪಾಲಂತೆ ಪಾತ್ರಮಪಾತ್ರಮುಂ ೭೪

ಗದ್ಯ॥ ಸೌಳಪ್ಪ ಭೂಮಿಯನುತ್ತುದಕಮನೆಱೆದು ಕಸಮಂ ಕಳೆದು ಬಿತ್ತಿ ಬೇಲಿಯನಿಕ್ಕಿ ಪಿರಿದುಂ ಪ್ರಯತ್ನಮಂ ಮಾಡಿದೊಡಂ ಕರಿಯ ಭೂಮಿಯಬೆಳಸಿನಂತಕ್ಕುಮೆ, ಕುಪಾತ್ರಕ್ಕೆನಿತು ಕುದಿದು ಭಕ್ತಿಮಾಡಿದೊಡಂ ಸುಪಾತ್ರಕ್ಕೆ ಕೊಟ್ಟ ದಾನದ ಫಲದಂತಾಗಲಱಿಯದದಱಿಂ ಸುಪಾತ್ರದಾನಮೆ ಮಿಗಿಲೆಂದಱಿವುದು ; ಇಂತೀ ಸತ್ಪೂಜೆಯೆಂತಪ್ಪುದೆಂದೊಡೆ ೭೫

ಎಲವದ ಪುಷ್ಪದೊಂದು ಕಮನೀಯತೆಯಂ ಗಿಳಿ ಕಂಡು ಸೋಲ್ತು ಕೋ
ಮಲಮಿದಱಿಂದಮಿಂತುಟು ಫಳಂ ಪಿರಿದಾಗದೆ ಮಾಣದೆಂದು ಸಂ
ಚಲಮತಿ ಕಾದುಕೊಂಡು ನೆಲಸಿರ್ದು ಬಟಿಕ್ಕದು ದೂರಮಾಗೆ ಪೋ
ಯ್ತಲಸಿ ಪೊಡರ್ಪುಗೆಟ್ಟೆನಿಪವೊಲ್ ಫಲಮಾಗದು ಕೇಳ್ಕುಪೂಜೆಯೊಳ್ ೭೬

ಮುಂದೆಗೂ ಹಿತವಾಗುವಂತೆ ಒಂದೇ ಬಾವಿಯಿಂದ ನೀರು ಸೇದಿ ಬೇಗನೆ ಹಾಕಲು ಆ ನೀರನ್ನು ಆದರದಿಂದ ಹಾವು ಹೀರಲು ಆ ನೀರು ವಿಷ ; ಜೀವಧನವಾದ ಗೋವುಗಳು ಆ ಬಾವಿಯ ನೀರನ್ನು ಹೆಚ್ಚಾಗಿ ಕುಡಿಯಲು ಆ ನೀರು ಹಾಲಾಗುತ್ತದೆ. ಹಾಗೆಯೇ ಪಾತ್ರ, ಅಪಾತ್ರಗಳು, ೭೪. ಚೌಳುನೆಲವನ್ನು ಉತ್ತು ನೀರೆರೆದು ಕಳೆ ತೆಗೆದು ಬಿತ್ತಿ ಬೇಲಿಯನ್ನು ಕಟ್ಟಿ ಬಹಳ ಪ್ರಯತ್ನದಿಂದ ಬೇಸಾಯ ಮಾಡಿದರೂ ಕಪ್ಪು ನೆಲದ ಬೆಳಸಿನಂತೆ ಆಗುವುದಿಲ್ಲ, ಕುಪಾತ್ರನಿಗೆ ಎಷ್ಟು ಶ್ರದ್ಧಾಭಕ್ತಿಗಳಿಂದ ದಾನ ಮಾಡಿದರೂ ಸುಪಾತ್ರಕ್ಕೆಕೊಟ್ಟ ದಾನದ ಫಲದಂತೆ ಆಗುವುದಿಲ್ಲ. ಆದ್ದರಿಂದ ಸುಪಾತ್ರ ದಾನವೇ ಹೆಚ್ಚೆಂದು ತಿಳಿಯತಕ್ಕದ್ದು, ಇನ್ನು ಸತ್ಪೂಜೆಯೆಂಥಾದ್ದೆಂದರೆ ೭೫. ಎಲವದ ಹೂವಿನ ಒಂದು ಆಕರ್ಷಕ ರೂಪವನ್ನು ಕಂಡು ಗಿಣಿ ಆಸೆಪಟ್ಟು 'ಇದು ಬಹಳ ಕೋಮಲವಾಗಿದೆ, ಇದರ ಹಣ್ಣು ದೊಡ್ಡದಾಗದೆ ಇರಲಾರದು' ಎಂದು ಯೋಚಿಸಿ, ಆ ಚಪಲಮತಿಯು ಕಾದು ಕುಳಿತಿದ್ದರೆ ಅದರ ಆಸೆ ದೂರವಾಗಲು ಆಯಾಸಪಟ್ಟು ಉತ್ಸಾಹಹೀನವಾಗಿ ಹೊರಟು ಹೋಗುತ್ತದೆ, ಅದರಂತೆಯೇ ಕುಪೂಜೆಯಿಂದ ಫಲವಾಗುವುದಿಲ್ಲ ೭೬. ಬೊಬ್ಬುಳಿಯ ಕಾಡಿಗೆ ಎಷ್ಟು ಅಕ್ಕರೆಯಿಂದ ಬೇಲಿಯನ್ನು ಹಾಕಿ

ಗದ್ಯ॥ ಬೊಬ್ಬುಲಿಯ ವನಕ್ಕೆನಿಸು ಕೂರ್ಪೆಯಿಂ ಬೇಲಿಯನಿಕ್ಕಿ ನೀರನೆಱೆದೊಡಂ ಮಾವಿನ ವನದಂತೆ ಫಲವಾಗಲಾರ್ಕುಮೆ ? ಕುದೈವಂಗಳ್ಗೆನಿತು ಭಕ್ತಿಯಿಂ ಪೂಜಿಸಿ ಪೊಡೆವಟ್ಟೊಡಂ ಸುದೈವಮನಾರಾಧಿಸಿ ಪಡೆವ ಫಲಮಂ ಪಡೆಯಬಾರದು ೭೭

ಮಾಗಿಯೊಳಾದ ಶೀತದೊದವಿಂಗಿರಲಾಱದೆ ಸೇದೆಗೆಟ್ಟು ಬೇ
ಳಾಗಿ ಸುಬುದ್ಧಿಗೆಟ್ಟು ಗುರುಗುಂಜಿಗಳಂ ಮುಸುಗಳ್ಪಿನೋದದಿಂ
ಪೋಗದೆ ರಾಶಿಮಾಡಿ ಶಿಖಿಗೆತ್ತುಱೆ ಕಾಯ್ವವೊಲಲ್ಪಬುದ್ಧಿಗಳ್
ರಾಗಿಸಿ ಪೊರ್ದಲೇಂ ಗಳ ಕುದೈವದೊಳಂ ಫಲವಾಗಲಾರ್ಪುದೇ ೭೮

ಗದ್ಯ॥ ಪೂಗಿಡುವೆಂಬ ಪೆಸರಿಂಗೆ ಕೊಳವಳ್ಳಿಯಗಿಡಂಗಳಂ ನಟ್ಟು ನೀರೆಱೆದು ನಡಪೆ ವಲ್ಲಿಗೆಯ ಪೂವಿನಂತಾಗಲಱಿಯದಂತೆ ದೈವಮೆಂಬ ಪೆಸರಿಂಗೆ ಕುದೈವಮನಳರ್ತಾರಾಧಿಸಿ ದೊಡೆ ಸುದೈವಮನಾರಾಧಿಸಿ ಪಡೆದ ಲಾಭಮಂ ಪೋಲಲಱಿಯದು. ೭೯

ಈ ವರಧರ್ಮದಿಂದಘಕುಲಂ ಕಿಡುಗುಂ ಸುಖಮಕ್ಕುಮಕ್ಷಯ
ಶ್ರೀವಧು ಸಾರ್ಗುಮುನ್ನತಿಕೆಯಕ್ಕು ಮಳಂ ಕಿಡುಗುಂ ಕುಧರ್ಮದಿಂ
ಬೇವಸಮಕ್ಕುಮುಗ್ರ ನರಕಾರ್ಣವದೊಳ್ಗಡ ಬೀೞ್ವೆನೆಂಬುದಂ
ಭಾವಿಸಿ ನೋಡಿ ತನ್ನೊಳೆ ಪರೀಕ್ಷಿಸಿ ಮಾಳ್ಪುದು ಧರ್ಮಮೆಂಬುದಂ ೮೦

ನೀರೆರೆದರೂ ಅದು ಮಾವಿನ ತೋಟದ ಹಾಗೆ ಫಲಕ್ಕೆ ಬರದು., ಕುದೈವಗಳಿಗೆ ಎಷ್ಟು ಭಕ್ತಿಯಿಂದ ಆರಾಧನೆ ಮಾಡಿದರೂ ಸುದೈವವನ್ನು ಪೂಜಿಸಿ ಪಡೆಯುವ ಫಲದನ್ನು ಹೊಂದಲು ಸಾಧ್ಯವಲ್ಲ. ೭೭, ಮಾಗಿಯಕಾಲದ ಚಳಿಯ ಹೆಚ್ಚಳಕ್ಕೆ ತಡೆಯಲಾರದೆ ಆಯಾಸಪಟ್ಟು ಬುದ್ಧಿಗೆಟ್ಟು ಗುರುಗುಂಜಿಗಳನ್ನು ಕೋತಿಗಳು ರಾಸಿಮಾಡಿ ಅದನ್ನೇ ಬೆಂಕಿಯೆಂದು ಭ್ರಮಿಸಿ ಕಾಯುವ ಹಾಗೆ ಅಲ್ಪಬುದ್ಧಿಗಳು ಕುದೈವಗಳನ್ನು ಪ್ರೀತಿ ಯಿಂದ ಆಶ್ರಯಿಸಿ ಪೂಜಿಸಿದರೆ ಫಲ ದೊರೆವುದು ಸಾಧ್ಯವೆ ? ಹೂಗಿಡವೆಂಬ ಹೆಸರಿಗೆ ಆಸೆಪಟ್ಟು ಕೊಳವಳ್ಳಿಯ ಗಿಡ ನೆಟ್ಟು ನೀರು ಹಾಕಿ ಬೆಳೆಸಿದರೆ ಮಲ್ಲಿಗೆಯ ಹೂವಿನಂತೆ ಆಗುವುದು ಅಸಾಧ್ಯ. ಹಾಗೆಯೇ ದೈವವೆಂಬ ಹೆಸರಿಗೆ ಭಯಪಟ್ಟು ಕುದೈವವನ್ನು ಆರಾಧಿಸಿದರೆ ಸುದೈವವನ್ನು ಪೂಜಿಸಿದ ಫಲ ಸಿಕ್ಕಲಾರದು. ೭೯. ಈ ಶ್ರೇಷ್ಠ ಧರ್ಮದಿಂದ ಪಾಪಸಮೂಹ ನಾಶ ಹೊಂದುತ್ತದೆ, ಸುಖ ಲಭಿಸುತ್ತದೆ, ಅಕ್ಷಯಂ ಸುಖ ಸಂಪತ್ತು ಕೈ ಸೇರುತ್ತದೆ, ಔನ್ನತ್ಯವುಂಟಾಗುತ್ತದೆ. ಕುಧರ್ಮದಿಂದ ದುಃಖವಾಗುತ್ತಧೆ, ಉಗ್ರವಾದ ನರಕಸಮುದ್ರದಲ್ಲಿ ಬೀಳುಪವೆಂಬುದನ್ನು ಯೋಚಿಸಿ ನೋಡಿ, ತನ್ನಲ್ಲಿಯೇ ಪರೀಕ್ಷಿಸಿ ಧರ್ಮವೆಂಬುದನ್ನು ಆಚರಿಸಬೇಕು. ೮೦. ಲೋಚನ್ನುಮಾಡಿಸಿಕೊಳ್ಳುವುದಂ

ಗದ್ಯ॥ ಲೋಚಂ ಮಾಡಿಸಿಕೊಂಬುದರಿಂದೋ ಬೋಳಿಸಿಕೊಂಬುದರಿಂದೋ ಚತ್ತಲೆಯಿರ್ಪುದರಿಂದೋ, ಸೀರೆಯುಟ್ಟಿರ್ಪುದರಿಂದೋ, ಪೆಂಡಿರಂ ಬಿಟ್ಟಿರ್ಪುದರಿಂದೋ ಪೆಂಡಿರೊಳ್ ಕೂಡಿರ್ಪುದರಿಂದೋ, ಮೀಯದಿರ್ಪುದರಿಂದೋ ಮೀವುದರಿಂದೋ ಮಣೆಯೊಳ್ ಪಡುವುದರಿಂದೋ ಪಾಸಿನೊಳ್ ಪಡುವುದರಿಂದೋ, ಕಯ್ಕೊಲುಂಬುದರಿಂದೋ ತಳಿಗೆಯೊಲುಂಬುದರಿಂದೋ, ಕುಳ್ಳಿರ್ದುಂಬುದರಿಂದೋ ನಿಂದಿರ್ದುಂಬುದರಿಂದೋ, ನೀರಂ ಕುಡಿವುದರಿಂದೋ ನೀರಂ ಕುಡಿಯದಿರ್ಪುದರಿಂದೋ, ಏಕಭುಕ್ತಮಂ ಮಾಳ್ಪುದರಿಂದೋ ಪಲವು ಸೂಟುಂಬುದರಿಂದೋ, ತೊಲಗದೊಂದೆಡೆಯೊಳಿರ್ಪುದರಿಂದೋ, ತೊಟಲುತ್ತಿರ್ಪುದರಿಂದೋ, ಪಲ್ಲಂ ಸುಲಿದುಕೊಂಡಿರ್ಪುದರಿಂದೋ, ಪಲ್ಲಂ ಸುಲಿಯದಿರ್ಪುದರಿಂದೋ, ಮುಟ್ಟು ಪಡವಾದೊಡೆ ಕೂಟನೀಡಾಡುವುದರಿಂದೋ ಮುಟ್ಟು ಪಡಮಿಲ್ಲದುದರಿಂದೋ, ತನಗಲಾಭಮಾದೊಡುಣ್ಣದುದರಿಂದೋ, ಪಡೆದೊಡೆ ಮತ್ತುಂಬುದರಿಂದೋ ಸುಗಂಧ ದ್ರವ್ಯಮಂ ಪೂಸುವುದರಿಂದೋ ಮಲಮಂ ತಾಳ್ದುವುದರಿಂದೋ ಬೇಡದುಂಬುದರಿಂದೋ ಬೇಡಿಕೊಂಡುಂಬುದರಿಂದೋ, ಪೆಱರ ಬೈಗಳಂ ಸೈರಿಸುವುದರಿಂದೋ, ಪೆಱರೊಡನೆ ಬಾಯಂ ಬಡಿವುದರಿಂದೋ, ಪಂಚೇಂದ್ರಿಯನಿಗ್ರಹಮರಿದೋ ವಿಷಯ ಸೇವೆಯಿಂದೋ ಪೂಣ್ಕೆಯಿಂದೋ

ಶ್ರೇಷ್ಠವೇ, ತಲೆಯನ್ನು ಬೋಳಿಸಿಕೊಳ್ಳುವುದು ಶ್ರೇಷ್ಠವೇ ? ಬೆತ್ತಲೆಯಾಗಿರುವುದು ಶ್ರೇಷ್ಠವೇ ? ಬಟ್ಟೆಯನ್ನುಟ್ಟಿರುವುದರಿಂದ ಶ್ರೇಷ್ಠವೇ ಹೆಂಡಿರನ್ನು ಬಿಟ್ಟಿರುವುದು ಶ್ರೇಷ್ಠವೇ ಅವರೊಡನೆ ಕೂಡಿಕೊಂಡಿರುವುದು ಶ್ರೇಷ್ಠವೇ, ? ಸ್ನಾನಮಾಡದೆ ಇರುವುದು ಶ್ರೇಷ್ಠವೇ ಸ್ನಾನಮಾಡುವುದು ಶ್ರೇಷ್ಠವೇ, ಹಲಗೆಯಮೇಲೆ ಮಲಗುವುದು ಶ್ರೇಷ್ಠವೇ. ಹಾಸಿಗೆಯಲ್ಲಿ ಮಲಗುವುದು ಶ್ರೇಷ್ಠವೆ ? ಕೈಯಲ್ಲಿ ತೆಗೆದುಕೊಂಡು ಉಣ್ಣುವುದು ಶ್ರೇಷ್ಠವೋ, ತಟ್ಟೆಯಲ್ಲಿ ಉಣ್ಣುವುದು ಶ್ರೇಷ್ಠವೋ, ಕುಳಿತು ಊಟಮಾಡುವುದು ಶ್ರೇಷ್ಠವೋ ನಿಂತಿದ್ದು ಊಟ ಮಾಡುವುದು ಶ್ರೇಷ್ಠವೋ, ನೀರು ಕುಡಿಯುವುದು ಶ್ರೇಷ್ಠವೋ, ಕುಡಿಯದೆ ಇರುವುದು ಶ್ರೇಷ್ಠವೋ, ಒಪ್ಪತ್ತು ಊಟ ಶ್ರೇಷ್ಠವೋ ಹಲವು ಸಲ ತಿನ್ನುವುದು ಶ್ರೇಷ್ಠವೋ, ಕದಲದೆ ಒಂದೇ ಕಡೆ ಇರುವುದು ಶ್ರೇಷ್ಠವೇ, ಸುತ್ತುತ್ತಿರುವುದು ಶ್ರೇಷ್ಠವೇ ? ಹಲ್ಲು ಉಜ್ಜದಿರುವುದು ಶ್ರೇಷ್ಠವೋ, ಉಜ್ಜಿಕೊಳ್ಳುವುದು ಶ್ರೇಷ್ಠವೋ, ಮುಟ್ಟು ಮೈಲಿಗೆಯಾದರೆ ಅನ್ನಬಿಡುವುದು ಶ್ರೇಷ್ಠವೆ ? ತನಗೆ ಭಿಕ್ಷೆ ದೊರೆಯದಿದ್ದರೆ (ಸಿಕ್ಕಿಯೂ ಮೈಲಿಗೆಯಾದರೆ) ಊಟ ಮಾಡದಿರುವುದು ಶ್ರೇಷ್ಠವೋ, ಪಡೆದರೆ ಮತ್ತೆ ಊಟ ಮಾಡುವುದು ಶ್ರೇಷ್ಠವೋ, ಪರಿಮಳ ವಸ್ತುಗಳನ್ನು ಹಚ್ಚಿಕೊಳ್ಳುವುದು ಶ್ರೇಷ್ಠವೇ ? ಕೊಳೆಯನ್ನು ತಾಳಿಕೊಳ್ಳುವುದು ಶ್ರೇಷ್ಠವೆ? ಭಿಕ್ಷೆಮಾಡದೆ ಊಟಮಾಡುವುದು ಶ್ರೇಷ್ಠವೋ, ಬೇಡಿಕೊಂಡು ಉಣ್ಣುವುದು ಶ್ರೇಷ್ಠವೋ, ಇತರರ ಬೈಗಳನ್ನು ಸಹಿಸಿಕೊಳ್ಳುವುದು ಶ್ರೇಷ್ಠವೋ, ಇತರರ ಬಾಯಿ ಬಡಿಯುವುದು ಶ್ರೇಷ್ಠವೋ, ಪಂಚೇಂದ್ರಿಯನಿಗ್ರಹ ಶ್ರೇಷ್ಠವೋ, ವಿಷಯಸೇವನೆ ಶ್ರೇಷ್ಠವೋ, ಪ್ರತಿಜ್ಞೆ ಶ್ರೇಷ್ಠವೋ ಮನಸ್ಸಿಗೆ ತೋರಿದಂತೆ ನಡೆಯುವುದು ಶ್ರೇಷ್ಠವೋ

ಮೆಚ್ಚಿದಂತೆ ನಡೆವುದರಿದೋ, ಗೋತ್ರದೊಳ್ ಕೂಡಿರ್ಪುದರಿದೋ ಗೋತ್ರಮಂ ಬಿಟ್ಟಿರ್ಪುದರಿದೋ, ಪೊನ್ನಂ ತೊಱೆದಿರ್ಪುದರಿದೋ ಪೊನ್ನಿಂಗೆಱಗುವುದರಿದೋ, ದಿವಸಕ್ಕೊರ್ಮೆಯಲ್ಲದೆ ಮತ್ತವೌಷಧಮಂ ಸಾವೊಡಮೊಲ್ಲೆನೆಂಬ ನಿಯಮಮರಿದೋ ಮನಕ್ಕೆ ಬಂದಂತೆ ಆಡುವ ನಿಯಮಮರಿದೋ, ಬಗೆದಿವಱೊಳ್ ಮುನ್ನಂ ಮಾಳ್ಪುದಾವುದು ಬೞಿಕ್ಕೆ ಮಾಳ್ಪುದಾವುದು ಸೈರಿಸಪಡೆವುದಾವುದು ನೆಗಟಲರಿದಾವುದೆಂಬುದಂ ವಿಚಾರಿಸಿ ೮೧

ಇಂತೀಗಳಾವುದೀ ಧ
ರ್ಮಂ ತೊದಲಿಂ ಮುನ್ನಮಾವುದೀಧರ್ಮಂ ಕೇ
ಳಿಂತಿದಱಿಂ ಸುಖಮಿದಱಿಂ
ಸಂತತ ಕಡುದುಃಖಮಕ್ಕುಮೆಂಬುದನಱಿಪಂ ೮೨

ಗದ್ಯ॥ ಎಂದು ಮುನಿವೃಂದಾರಕಂ ಕಿಱಿದಱೊಳೆ ಧರ್ಮಮಂ ತಿಳಿಪುವುದುಂ ಕೇಳ್ದು ಪಿರಿದುಂ ಸಂತೋಷಂಬಟ್ಟು ಅಂದು ಚತುರ್ದಶಿಯಪ್ಪುದಱಿಂದುಪವಾಸಮಂ ಕೈಕೊಂಡು ಮುನಿವೃಷಭನಂ ಬಂದಿಸಿ ರಾಜಮಂದಿರಕ್ಕೆ ಬಂದು ನೇಸರ್ಪಡುವಿನಮಿರ್ದೊಯ್ಯನೆ ಕಾಪಿನವರಂ ಬಂಚಿಸಿ ಪೊಟಲಿಂ ಪೊಱಮಟ್ಟುಪೋಗಿ ಶ್ಮಶಾನಭೂಮಿಯೊಳ್ ರಾತ್ರಿ ಪ್ರತಿಮೆಯಿಂದನನ್ನೆಗಮಿತ್ತಲ್ ಮಗಧಸೌಂದರಿಯೆಂಬ ಸೂಳೆಗೆ ಮೃಗವೇಗನೆಂಬ ಕಳ್ಳಂ ಕೂರ್ತು ಕಣ್ಣಾಗಣದಾಕೆಯ

ವಂಶದಲ್ಲಿ ಸೇರಿಕೊಂಡಿರುವುದು ಶ್ರೇಷ್ಠವೋ ಬೇರೆ ಹೋಗುವುದು ಶ್ರೇಷ್ಠವೋ, ಚಿನ್ನವನ್ನು ಬಿಟ್ಟಿರುವುದು ಶ್ರೇಷ್ಠವೋ ಚಿನ್ನಕ್ಕೆ ಆಸೆಪಡುವುದು ಶ್ರೇಷ್ಠವೋ, ದಿವಸಕ್ಕೊಂದು ಸಾರಿಯಲ್ಲದೆ ಔಷಧವನ್ನು ಕೂಡ ಸಾಯುವೆನೆಂದರೂ ಮತ್ತೆ ಒಲ್ಲೆನೆಂಬ ನಿಯಮ ಶ್ರೇಷ್ಠವೋ ಮನಸ್ಸಿಗೆ ಬಂದಂತೆ ಮಾಡುವ ನಿಯಮ ಶ್ರೇಷ್ಠವೋ, ಇದನ್ನೆಲ್ಲ ಯೋಚಿಸಿ ಇವುಗಳಲ್ಲಿ ಮೊದಲು ಮಾಡತಕ್ಕದ್ದು ಯಾವುದು, ಆಮೇಲೆ ಮಾಡತಕ್ಕದ್ದು ಯಾವುದು, ಮಾಡಲು ಶ್ರೇಷ್ಠವಾದುದು ಯಾವುದು, ಎಂಬುದನ್ನು ಯೋಚಿಸಿ ೮೧. ಈಗ ಯಾವುದು ಧರ್ಮ, ತಪ್ಪುವ ಮುನ್ನ ಇದು ಧರ್ಮ, ಇದರಿಂದ ಸುಖ, ಇದರಿಂದ ಸದಾ ದುಃಖವಾಗುವುದು, ಎಂಬುದನ್ನು ಅರಿತುಕೊಳ್ಳೋಣ ೮೨. ಮುನಿಶ್ರೇಷ್ಠನು ಸ್ವಲ್ಪದರಲ್ಲಿಯೇ ಧರ್ಮವನ್ನು ಹೀಗೆ ತಿಳಿಯಹೇಳಿದುದನ್ನು ಕೇಳಿ ಬಹಳ ಸಂತೋಷಪಟ್ಟು ಆ ದಿನ ಚತುರ್ದಶಿಯಾದ್ದರಿಂದ ಉಪವಾಸವನ್ನು ತೊಡಗಿ ಮುನಿಶ್ರೇಷ್ಠನಿಗೆ ವಂದನೆ ಮಾಡಿ ಅರಮನೆಗೆ ಬಂದು ಸೂರ್ಯ ಮುಳುಗುತ್ತಲೂ ಕಾವಲಿನವರನ್ನು ಮೋಸಪಡಿಸಿ ಅವರಿಗೆ ತಿಳಿಯದ ಹಾಗೆ ಪಟ್ಟಣದಿಂದ ಹೊರಗೆ ಹೋಗಿ ಶ್ಮಶಾನದಲ್ಲಿ ರಾತ್ರಿ ಪ್ರತಿಮೆಯಂತೆ ನಿಂತಬಿಟ್ಟನು. ಆ ವೇಳೆಗೆ ಈ ಕಡೆ ಮಗಧ ಸೌಂದರಿಯೆಂಬ ಸೂಳೆಯನ್ನು ಮೃಗವೇಗನೆಂಬ ಒಬ್ಬ ಕಳ್ಳನು ಪ್ರೀತಿಸಿ ವಿಚಾರವಿಲ್ಲದೆ ಆಕೆಯು ಇಷ್ಟದಂತೆ ರಾಜಶ್ರೇಷ್ಠಿಯ ಹೆಂಡತಿಯಾದ

ಮತದಿಂ ರಾಜಶ್ರೇಷ್ಠಿಯಪೆಂಡತಿಯಪ್ಪ ಕೀರ್ತಿಮತಿಯ ಕೊರಳಹಾರಮಂ 'ಕಳಿದುಕೊಂಡು ಪೋಗಲವನಂ ತೊಟ್ಟನೆ ತಳಾಱರ್ಕಂಡು ೮೩

ಬಡಿಯಿಂ ಗುಂಡಿಂ ಕಲ್ಲಿಂ
ದಿಡುತುಂ ಬೆನ್ನಟ್ಟೆ ಬೆರ್ಚಿ ಭಯವಶದಿಂ ಮೈ
ನಡುಗೆ ಮತಿಗೆಟ್ಟು ಕಾಲ್ಗಳ್
ತಡೆದೊಡೆ ಬಿಡದೋಡುವಾತನಾ ನೃಪಸುತನಂ ೮೪

ಗದ್ಯ॥ ಭೋಂಕನೆ ಕಂಡು ಬೆರ್ಚಿ ಕಳ್ಳಂ ಸತ್ತೊಡಮಕ್ಕುಂ ಪುಲಿ ಸತ್ತೊಡಮಕ್ಕುಮೆಂಬ ನಾಣ್ನುಡಿಯಂತೆ ತಳಾಱನ ಕೈಯೊಳೀತಂ ಸತ್ತೊಡಮಕ್ಕುಮೀತನ ಕೈಯೊಳ್ತಳಾಱಂ ಸತ್ತೊಡಮಕ್ಕುಂ ನಗೆಗೆಟ್ಟುದಾನೊರ್ಮೆಗೆನ್ನಪುಣ್ಯದಿಂ ಪುಲಿನಕ್ಕಿ ಬರ್ದುಂಕಿದೆನೆಂದು ಹಾರಮಂ ವಾರಿಷೇಣ ಕುಮಾರನ ಮುಂದೀಡಾಡಿ ಪೋಪುದುಂ ತಳಾಱರೆಯ್ದೆವಂದು ೮೫

ನಿಂದಿರ್ದ ವಾರಿಷೇಣನ
ನಂದವರಡಹಡಿಸಿ ನೋಡಿ ಕಳ್ಳನಿವಂ ಪೋ
ಸಂದೆಯಮಿಲ್ಲೆರಡಿಲ್ಲದೆ
ಕೊಂದಪರೆಂದಂಜಿ ಸೆಡೆದು ಪೋಗದೆ ನಿಂದಂ ೮೬

ಕೀರ್ತಿಮತಿಯ ಕೊರಳಲಿನ ಹಾರವನ್ನು ಕಳಚಿಕೊಂಡು ಹೋಗಲು ಅವನನ್ನು ತಳವಾರರು ಹಟಾತ್ತನೆ ನೋಡಿದರು. ೮೩. ಅವರು ದೊಣ್ಣೆ, ಗುಂಡು, ಕಲ್ಲು, ಇವುಗಳಿಂದ ಹೊಡೆಯುತ್ತ ಬೆನ್ನಟ್ಟಲು ಬೆಚ್ಚಿ ಮೈನಡುಕವುಂಟಾಗಲು ಬುದ್ಧಿಗೆಟ್ಟು ಕಾಲು ಸೋತು ಓಡಲಾರದೆ ಆ ರಾಜಪುತ್ರನನ್ನು ಕಂಡನು. ೮೪. ತಟ್ಟನೆ ಯುವರಾಜನನ್ನು ನೋಡಿ ಭಯಪಟ್ಟು "ಕಳ್ಳನು ಸತ್ತರೂ ಆದೀತು, ಹುಲಿ ಸತ್ತರೂ ಆದೀತು" ಎಂಬ ಗಾದೆಯಂತೆ ತಳಾರನ ಕೈಯಲ್ಲಿ ಈತನು (ಯುವರಾಜ) ಸತ್ತರೂ ಸರಿಯೆ, ಇವನ ಕೈಯಲ್ಲಿ ತಳವಾರ ಸತ್ತರೂ ಸರಿಯೆ ನನಗೆ ಕೆಟ್ಟದ್ದೇನು ? ಇದೊಂದು ಸಲ ಹುಲಿ ನೆಕ್ಕಿದರೂ ಬದುಕಿದೆ" ಎಂದು ಯೋಚಿಸಿ ಹಾರವನ್ನು ವಾರಿಷೇಣಕುಮಾರನ ಮುಂದೆ ಎಸೆದು ಹೋದನು, ತಳವಾರರು ಹತ್ತಿರ ಬಂದು ನೋಡಿದರು ೮೫. ನಿಂತಿದ್ದ ವಾರಿಷೇಣನನ್ನು ಅಂದು ಅವರು ಆತುರದಲ್ಲಿ ನೋಡಿ "ಇವನು ಕಳ್ಳನೇ. ಸಂದೇಹವಿಲ್ಲ ಇನ್ನು ಅನುಮಾನವಿಲ್ಲದೆ ಕೊಲ್ಲುವರು, ಎಂದು ಹೆದರಿ ಓಡಿ ಹೋಗದೆ ನಿಂತಿದ್ದಾನೆ" ೮೬. ಎಂದು ಅವರು ಕತ್ತಲೆಯಲ್ಲಿ ಅವರು, ಇವರು. ಎಂಬುದನ್ನು ತಿಳಿಯದೆ ತಡಕಿ

ಗದ್ಯ॥ ಎಂದು ಕಟ್ಟಲೆಯೊಳವರಿವರೆಂದಱಿಯದೆ ತಡವರಿಸಿನೋಡಿ ಮುಂದಿರ್ದ ಹಾರಮಂ ಕಂಡು ಕಳ್ಳನೆಂದು ನಿಶ್ಚಯಿಸಿ ದೀವಿಗೆಯ ಬೆಳಗಿಂ ನೋಡಿ ವಾರಿಷೇಣನಪ್ಪುದನಱಿದು ಬೆಱಗಾಗಿ ೮೭

ತುರಗಕ್ಕಂ ಕರಿಗಂ ರಥಪ್ರತತಿಗಂ ದ್ರವ್ಯಕ್ಕಮಿಂ ಮೇರೆಯಿ
ಲ್ಲರಸಂಗಪ್ಪೊಡೆ ತಾನೆ ಮುಖ್ಯನವನೀನಾಥರ್ಪಲರ್ತನ್ನರಿ
ರ್ಪರವೋಘಂ ನೃಪನೇಕೆ ಕಳ್ವಬಗೆಯಂ ತಾಂ ತಂದನೋ ನೋೞ್ಪೊಡ
ಚ್ಚರಿಯೆಂದು ತಳಾಱರಂಜಿ ಧರಣೀಶಾರಾಧ್ಯನಂ ನೋಡಿದರ್ ೮೮

ತುಡಲಿಲ್ಲದೆ ಕಳ್ದನೋ ಮೇ
ಣುಡಲಿಲ್ಲದೆ ಪೋಗಿ ಕಳ್ದನೋ ತನಗರಸಂ
ಕುಡದೊಡೆ ಕಳ್ದನೊ ಕೆಮ್ಮನೆ
ದೃಢಚಿತ್ತಂ ಕಳ್ವಬಗೆಯನೇಕೆಯೊ ತಂದಂ ೮೯

ಗದ್ಯ॥ ಎಂದು ತಮ್ಮೊಳಾಶ್ಚರ್ಯಂ ಬಟ್ಟು ನಿನ್ನಲ್ಲಿಗೆವಂದು ಹಾರಮಂ ತೋಱಿ ಜಿನಸಮಯವಾರ್ಧಿವರ್ಧನ ಸುಧಾಕರಕರನಂ ನಿಷ್ಕಾರಣಂ ಕಳ್ಳನೆಂದು ಬಿನ್ನಪಂಗೆಯ್ವುದುಂ ಜಾತಿಕ್ಷತ್ರಿಯಂಗೆ ದುಷ್ಟನಿಗ್ರಹ ಶಿಷ್ಟಪರಿಪಾಲನಂ ಧರ್ಮಮಪ್ಪುದಱಿಂ ಮಗನೆಂದು ಕಾರುಣ್ಯಂಗೆಯ್ಯದೆ ಕೊಲ್ಲಿಮೆಂದು ತಳಾಱರ್ಗೆ ನೀಂ ಬೆಸಸುವುದುಂ ತಳಾಱಂ ಕುಮಾರನಲ್ಲಿಗೆವಂದು ೯೦

ನೋಡಿ ಮುಂದೆ ಇದ್ದ ಹಾರವನ್ನು ಗಮನಿಸಿ ಕಳ್ಳನೇ, ಎಂದು ನಿರ್ಧರಿಸಿ ದೀಪದ ಬೆಳಕಿನಿಂದ ನೋಡಿದಾಗ ಅವನು ವಾರಿಷೇಣನೆಂಬುದನ್ನು ತಿಳಿದುಕೊಂಡರು. ಅವರಿಗೆ ಗಾಬರಿಯಾಯಿತು. ೮೭. "ಕುದುರೆ, ಆನೆ, ರಥಗಳಿಗೂ ಹಣಕ್ಕೂ ಈತನಿಗೆ ಅರಕೆಯಿಲ್ಲ. ರಾಜನಿಗೆ ಈತನೇ ಮುಖ್ಯ, ಅನೇಕ ರಾಜರು ಇವನ ಅಭಿಮಾನಿಗಳು. ಖಂಡಿತ. ಹೀಗಿದ್ದರೂ ಈ ರಾಜನು ಕದಿಯುವ ಯೋಚನೆಯನ್ನು ಏಕೆ ಮಾಡಿದನೋ ! ಇದು ಆಶ್ಚರ್ಯ," ಎಂದು ತಳವಾರರು ಭಯದಿಂದ ಆ ರಾಜಪೂಜ್ಯನನ್ನು ದೃಷ್ಟಿಸಿ ನೋಡಿದರು ೮೮. ಧರಿಸಿಕೊಳ್ಳುವುದಕ್ಕಿಲ್ಲದೆ ಕದ್ದನೆ, ಉಟ್ಟುಕೊಳ್ಳಲು ಇಲ್ಲದೆ ಕದ್ದನೆ. ತನಗೆ ಬೇಕಾದುದನ್ನು ರಾಜನು ಕೊಡಲಿಲ್ಲವೆಂದು ಹೋಗಿ ಕದ್ದನೆ ? ಈ ದೃಢಚಿತ್ತನು ಸುಮ್ಮನೆ ಕದಿಯುವ ಸಂಕಲ್ಪವನ್ನೇಕೆ ಮಾಡಿದನೋ ! ೮೯. ಹೀಗೆಂದು ತಳವಾರರು ತಮ್ಮ ತಮ್ಮಲ್ಲಿಯೇ ಆಶ್ಚರ್ಯಪಟ್ಟು ನಿನ್ನ ಬಳಿಗೆ ಬಂದು ಹಾರವನ್ನು ತೋರಿಸಿ ಜೈನಧರ್ಮವೆಂಬ ಸಾಗರಕ್ಕೆ ಚಂದ್ರನೋಪಾದಿಯಲ್ಲಿದ್ದ ಯುವರಾಜನನ್ನು ನಿಷ್ಕಾರಣವಾಗಿ ಕಳ್ಳನೆಂದು ಬಿನ್ನವಿಸಲಾಗಿ ಜನ್ಮ ಕ್ಷತ್ರಿಯನಿಗೆ ದುಷ್ಟರನ್ನು ಶಿಕ್ಷಿಸುವುದೂ ಶಿಷ್ಟರನ್ನು ಪರಿಪಾಲಿಸುವುದೂ ಧರ್ಮವಾದುದರಿಂದ ತನ್ನ ಮಗನೆಂದು ಕರುಣೆವಹಿಸದೆ 'ಕೊಲ್ಲಿರಿ' ಎಂದು ನೀನು ತಳವಾರರಿಗೆ ಆಜ್ಞಾಪಿಸಲಾಗಿ ತಳವಾರನು ಯುವರಾಜನ ಬಳಿಗೆ ಬಂದು ಅವನೊಡನೆ ಹೀಗೆ ಹೇಳಿದನು : ೯೦. "ಚಾಡಿಕೋರರು, ಕಳ್ಳರು, ವ್ಯಭಿ

ಪಿಸುಣರ ಕಳ್ಳರ ಮಿಂಡರ
ಪೆಸರಂ ಮೊದಲಾಗೆ ನುಡಿದೊಡುರ್ವೀಶಂ ಸೈ
ರಿಸನೆಂಬುದನಱಿದಿರ್ದುಂ
ಕಸವರಕ್ಕೇಕೆ ದೇವ ನೀಂ ಬಗೆದಂದೈ ೯೧

ನಿನ್ನಯ್ಯನ ಭಂಡಾರದ
ಪೊನ್ನೆಲ್ಲಮನಕ್ಕೆ ಪಿರಿದು ತದ್ಧನಮಿರ್ದುಂ
ತನ್ನ ದರಿದ್ರನ ತೆಱದಿಂ ಕೆ
ಮ್ಮನೆ ಕಳವಿಂಗೆ ಬಗೆಯಾನೇಕೆಯೊ ತಂದೈ ೯೨

ಗದ್ಯ॥ ಅಂತೊಡೆದ ಕಲ್ಲ ಕೆಱಯಿಲ್ಲೆಂಬ ನಾಣ್ನುಡಿಯಂತೆ ನಾನರಸನ ಮಗನೆಂ ಬಲ್ಲಿದನೆನ್ನರಸಂ ಕಳ್ದೊಡಂ ಕೊಲ್ವನಲ್ಲೆಂದು ಸೊಕ್ಕಿಯಕ್ಕುಂದಲೆವಾಯ್ದು ಕೀರ್ತಿಮತಿಯ ಹಾರಮಂ ಕಳ್ದುಮೆಮ್ಮನೆ ಪೆಱರೇಡಿಸಲೆಂದು ಪೋಗಿ ದಸಿಯ ಮೇಲೆ ಬಿದ್ದು ಸತ್ತ ಕೋಡಗದಂತೆ ನಿನಗೆ ಕಪ್ಪುಮಪ್ಪ ಸಾವು ಮಾಡಿಕೊಂಡೈ ಎಂದು ತಳಾಱಮೊರ್ದಲಿಸಿ ನುಡಿಯುತ್ತಿರೆ ಸಮ್ಯಕ್ತ್ವ ಚೂಡಾಮಣಿ ತನ್ನೊಳಿಂತೆಂದಂ ೯೩

ಧರೆಯಂ ಪೊಕ್ಕಡಗಿರ್ದೊಡಂ ಜಲಧಿಯಂ ಪೊಕ್ಕಿರ್ದೊಡಂ ಪೋಗಿ ಮಂ
ದರಶೈಲಾಗ್ರದೊಳಿರ್ದೊಡಂ ಖಚರರಂ ಬೇಗಂ ಶರಣ್ಬೊಕ್ಕೊಡಂ
ಪಿರಿದುಂ ದ್ರವ್ಯಮನಿತ್ತೊಡಂ ನಡುಕದಿಂ ಚಕ್ರೇಶನಂ ಪಾರ್ದೊಡಂ
ಮರುಳೇ ಮಾಣ್ಬನೆ ಕಾಲಮೆಯ್ದಿದವನಂ ಕ್ರೂರಾಂತಕಂ ಕೊಲ್ವುದಂ ೯೪

ಚಾರಿಗಳು – ಇವರ ಹೆಸರನ್ನು ಹೇಳಿದರೂ ರಾಜನು ಸೈರಿಸುವುದಿಲ್ಲವೆಂಬುದನ್ನು ತಿಳಿದಿದ್ದರೂ ಬಂಗಾರಕ್ಕೆ ಏಕೆ ಆಸೆ ಪಟ್ಟೆ ? ೯೧. ನಿನ್ನ ತಂದೆಯ ಬೊಕ್ಕಸದ ಹೊನ್ನು ಎಲ್ಲರೂ ತಿಳಿದಂತೆ ದೊಡ್ಡದು. ಆ ಧನವಿದ್ದೂ ದರಿದ್ರನ ಹಾಗೆ ಕಳ್ಳತನಕ್ಕೆ ಏಕೆ ಮನಸ್ಸು ಮಾಡಿದೆಯಪ್ಪಾ ? ೯೨. ಒಡೆದ ಕಲ್ಲು ಕೆರೆಯಲ್ಲವೆಂಬ ಗಾದೆಯಂತೆ ನೀನು ಅರಸನ ಮಗ, ಬಲಿಷ್ಠ, ನಿನ್ನನ್ನು ಅರಸನು ಕದ್ದರೂ ಕೊಲ್ಲುವುದಿಲ್ಲವೆಂದು ಸೊಕ್ಕಿ ಮೇರೆ ಮೀರಿ ನುಗ್ಗಿ ಕೀರ್ತಿಮತಿಯ ಹಾರವನ್ನು ಕದ್ದು ನಮ್ಮನ್ನು ಇತರರು ಹಿಯ್ಯಾಳಿಸರೆಂದು ಹೋಗಿ ದಸಿಯ ಮೇಲೆ ಬಿದ್ದು ಸತ್ತಕೋತಿಯ ಹಾಗೆ, ನಿನಗೆ ನೀಚವಾದ ಮರಣವನ್ನು ತಂದುಕೊಂಡೆ," ಎಂದು ತಳವಾರರು ಮೂದಲಿಸಿ ಮಾತನಾಡುತ್ತಿದ್ದರು ಅದನ್ನೆಲ್ಲ ಹೇಳಿ ಸಮ್ಯಕ್ತ್ವ ಚೂಡಾಮಣಿಯಾದ ವಾರಿಷೇಣ ಕುಮಾರನು ಮನಸ್ಸಿನಲ್ಲಿ ಹೀಗೆಂದು ಕೊಂಡನು, ೯೩. ನೆಲದೊಳಕ್ಕೆ ಹೋಗಿ ಬಚ್ಚಿಟ್ಟುಕೊಂಡಿದ್ದರೂ ಸಮುದ್ರವನ್ನು ಹೊಕ್ಕಿದ್ದರೂ; ಹೋಗಿ ಮಂದರ ಪರ್ವತದ ಶಿಖರದಲ್ಲಿದ್ದರೂ ಬೇಗ ಖೇಚರರ ಶರಣು ಹೊಕ್ಕರೂ ಹೆಚ್ಚಾಗಿ ದ್ರವ್ಯವನ್ನು ಕೊಟ್ಟರೂ ಹೆದರಿಕೆಯಿಂದ ಚಕ್ರವರ್ತಿಯನ್ನು ಸೇರಿದರೂ, ಮರುಳೆ, ಯಮಧರ್ಮರಾಯನು ಆಯುಸ್ಸು ಮುಗಿದವರನ್ನು ಕೊಲ್ಲದೆ ಬಿಡುವನೆ ? ೯೪. ಅಲ್ಲದೆ, ಯಮನ ಬಿಲ್ಲಾಳ್ತನವನ್ನು ಹೇಳುವುದಾದರೆ

ಗದ್ಯ॥ ಮತ್ತಂ ಜವನ ಬಿಲ್ಲಾಳ್ತನಮಂ ಪೇಟ್ಸೊಡೆ, ದೇವೇಂದ್ರರಂ ತಾವರೆಗೊಳನಂ ಸೋಕ್ಕಿದಾನ ಪೊಕ್ಕಂತೆ ಮಾಡಿ ವ್ಯಂತರದೇವರಂ ಸೌಂತೆಯು ಬಳ್ಳಿಯೊಳಿಟ್ಟು ಪೊಕ್ಕಂತೆ ಮಾಡಿ ಜ್ಯೋತಿಷ್ಕದೇವರಂ ಸೀತಂ ಪತ್ತಿದ ವಾತಾಧಿಕರಂತೆ ಮಾಡಿ ಭವನವಾಸಿಗರಂ ಕರು ದವನದ ಮಡಿಯಂ ದಾಟಿಪೊಕ್ಕಂತೆಮಾಡಿ ಚಕ್ರಧರನಂ ವಕ್ರಮಾದ ಪುಳ್ಳಿಗಳಂ ಮುಱಿವಂತೆ ಮುಱಿದು, ಮಾಂಡಲಿಕರಂ ಚಂಡಕರಸನ್ನಾಹಂ ನುಂಗುವಂತೆ ನುಂಗಿ ಬಲ್ಲಿದರು ಕಲ್ಲಂ ತಾಗಿದ ಪುಳ್ಳಿಯಂತೆ ನುಚ್ಚುನುಱಿ ಮಾಡಿ ರಾವಣನಂ ಕೋವಣಮಂ ಸೀಳ್ವಂತೆ ಸೀಳ್ದು, ಕುಂಭಕರ್ಣನಂ ಕಂಬಂ ಮುಱಿದ ಮಾಳಿಗೆಯಂತೆ ಮಾಡಿ ವಿಭೀಷಣನಂ ಸಾಹಸವಿಲ್ಲದರಂ ನೂಂಕುವಂತೆ ನೂಕಿ, ಇಂದಗಿಯುಂ ಪಂದೆಯುಂ ಕಾಡುವಂತೆ ಕಾಡಿ, ರಾಮನಂ ಧೂಮಂ ಸುತ್ತಿದಂತೆ ಜೀವಂಗಿಡಿಸಿ, ಲಕ್ಷ್ಮಣನಂ ಮಕ್ಕಳ್ಗಿಟ್ಟರಂತೆ ಗೋಳುಂಡೆಗೊಳಿಸಿ, ಸುಗ್ರೀವನನುದ್ಗ್ರೀವನನಂಬುತಾಗಿದಂತೆ ಮಾಡಿ, ಜಾಂಬವನಂ ಪಿಂಬಗಲಾದಿತ್ಯನಂತೆ ತೇಜಂಗಿಡಿಸಿ ಹನುಮನನುಮಾನು ಮಾಡದೆ ನೆಲಕ್ಕಿಕ್ಕಿ, ಪಾಂಡವರಂ ದಂಡಿನೊಳ್ ಪೊಕ್ಕ ನರಿಯಂತೆ ಮನಂಗಿಡಿಸಿ, ಕೌರವರಂ ಭೈರವಂ ಬಾಯ್ದರಂತೆ ತಲೆಕೆಳಗುಮಾಡಿ, ಬಾಲಕರಂ ಬಾಲಕರೆಂದು ನಾಣ್ಚದೆ, ಮುದುಕರಂ ಕರುಣಿಸದೆ, ವೀರರಂ ಸಾರಲಣ್ಮೆನೆಂದು ಬೆರ್ಚದೆ, ಮೂರ್ಖರಂ ಮೂರ್ಖರೆಂದೋಸರಿಸದೆ, ಸ್ತ್ರೀಯರಂ

ದೇವೇಂದ್ರರನ್ನು ಆನೆ ತಾವರೆಗೊಳವನ್ನು ಹೊಕ್ಕ ಹಾಗೆ ಮಾಡಿ ವ್ಯಂತರ ದೇವರುಗಳನ್ನು ಸೌತೆಯ ಬಳ್ಳಿಗೆ ಎತ್ತು ಹೊಕ್ಕ ಹಾಗೆ ಮಾಡಿ ಜೋತಿಷ್ಕ ದೇವರುಗಳನ್ನು ಶೀತ ಹತ್ತಿದ ವಾತರೋಗಿಗಳ ಹಾಗೆ ಮಾಡಿ ಭವನವಾಸಿಗಳನ್ನು ದವನದ ಪಾತಿಗೆ ದಾಳಿ ಹೊಕ್ಕ ಹಾಗೆ ಮಾಡಿ ಚಕ್ರಧಾರಿಯನ್ನು ಸೊಟ್ಟನಾದ ಪುಳ್ಳೆಗಳನ್ನು ಮುರಿಯುವ ಹಾಗೆ ಮುರಿದು, ಮಂಡಲಿಕರನ್ನು ಸೂರ್ಯಸನ್ನಾಹನು ನುಂಗುವ ಹಾಗೆ ನುಂಗಿ ಬಲಿಷ್ಠರನ್ನು ಕಲ್ಲು ತಾಕಿದ ಪುಳ್ಳಿಯಂತೆ ಪುಡಿಪುಡಿ ಮಾಡಿ ರಾವಣನನ್ನು ಕಾಪೀನವನ್ನು ಸೀಳುವ ಹಾಗೆ ಸೀಳಿ, ಕುಂಭಕರ್ಣನನ್ನು ಕಂಬ ಮುರಿದುಹೋದ ಮಾಳಿಗೆಯ ಹಾಗೆ ಕೆಡವಿ, ವಿಭೀಷಣನನ್ನು ಸಾಹಸವಿಲ್ಲದವರನ್ನು ನೂಕುವ ಹಾಗೆ ನೂಕಿ, ಇಂದ್ರಜಿತ್ತನ್ನು ಹೇಡಿಯನ್ನು ಕಾಡಿಸುವಂತೆ ಕಾಡಿಸಿ, ರಾಮನನ್ನು ಹೊಗೆ ಸುತ್ತಿ ಕೊಂಡ ಹಾಗೆ ಜೀವವನ್ನು ಕಳೆದು, ಲಕ್ಷ್ಮಣನನ್ನು ಮಕ್ಕಳನ್ನು ಕಳೆದುಕೊಂಡವರ ಹಾಗೆ ಗೋಳಾಡಿಸಿ, ಸುಗ್ರೀವನನ್ನು ಉದ್ದ ಕತ್ತಿನವನಿಗೆ ಬಾಣ ತಗಲಿದಂತೆ ಮಾಡಿ ಜಾಂಬವನನ್ನು ಅಪರಾಹ್ಣ ಸೂರ್ಯನಂತೆ ತೇಜಸ್ಸು ಕೆಡಿಸಿ, ಹನುಮಂತನನ್ನು ಅನುಮಾನ ಪಡದೆ ನೆಲಕ್ಕೆ ಕುಕ್ಕಿ ಪಾಂಡವರನ್ನು ದಂಡಿನಲ್ಲಿ ಹೊಕ್ಕ ನರಿಯಂತೆ ಬುದ್ಧಿಗೆಡಿಸಿ, ಕೌರವರನ್ನು ಭೈರವನ್ನು ಹಾಯ್ದವರಂತೆ ತಲೆಕೆಳಗುಮಾಡಿ, ಹುಡುಗರನ್ನು ಹುಡುಗರೆಂದು ಸಂಕೋಚಪಡದೆ, ಮುದುಕರನ್ನು ಕನಿಕರಿಸದೆ. ವೀರರನ್ನು ಸಮೀಪಿಸಲಾರೆನೆಂದು ಭಯಪಡದೆ, ಮೂರ್ಖರನ್ನು ಬುದ್ಧಿಯಿಲ್ಲದವರೆಂದು 'ಅಲಕ್ಷ್ಯ ಮಾಡದೆ, ಸ್ತ್ರೀಯರನ್ನು ಕಾಪಾಡದೆ, ಇಂದ್ರಿಯ ಹೀನರನ್ನು ವಿಕಲೇಂದ್ರಿಯರೆಂದು

ಸ್ತ್ರೀಯರೆಂದು ಕೈಗಾಯದೆ, ವಿಕಳೇಂದ್ರಿಯಂಗಳಂ ವಿಕಳೇಂದ್ರಿಯಗಳೆಂದು ತೊಲಗಿಸದೆ, ನಾರಕರಂ ನಾರಕರೆಂದು ಕೊಕ್ಕರಿಸದೆ, ಪಟ್ಟಂಗಟ್ಟಿದರ್ ಕಟ್ಟುಗ್ರರೆಂದೊಲ್ಲೆನೆನ್ನದೆ, ಬಡವರಂ ಬಡವರೆಂದಿರಿಸದೆ, ಮಾನ್ಯರಂ ಮಾನ್ಯಗಾವೆನೆನ್ನದೆ, ಮುಸು ಪಣ್ತ ಪುಣಸೆಯನೇಱಿದಂತೆ, ಕೋೞಿ ತಿಪ್ಪೆಯಂ ಪೊರ್ದಿದಂತೆ, ಪಸಿದೆಮ್ಮೆ ಬೆಳೆದ ಕೆಯ್ಯಂ ಪೊಕ್ಕಂತೆ, ಬಡವರ್ ಕೂಟ ರಾಶಿಯಂ ಕವಿದಂತೆ, ಮೆಲ್ದುಂ, ನುಂಗಿಯುಂ, ಸವಿದುಂ, ಕೆರ್ಚಿಯುಮೋಗೆಯ್ದುಂ ಮೆಚ್ಚದಂತೆ ನರಿಯಾಟವಾಡುವಾತನೆನಗೆ ಪೀಡೆಯಂ ಮಾಡಿದಪ್ಪನೆಂಬುದಾವ ವಿಸ್ಮಯಂ, ಸುಡುವ ಕಿರ್ಚಿನೊಳ್ ತುಪ್ಪಮನೆನಿತೆಱೆದೊಡಮನಿತನಿತೆ ಪೆರ್ಚುಗುಂ ನೀರನೆನಿತೆನಿತೆಱೆದೊಡಮನಿತನಿತೆ ಕುಂದುಗುಂ ಮತ್ತೆ ಪೂರ್ವಜನ್ಮದ ಕರ್ಮೋದಯದಿಂ ಬಂದಡಸುವ ಸಾವಿಂಗಂ ನೋವಿಂಗಮೆನಿತೆನಿತಂಜುವಮನಿತನಿತೆ ಭವಭವಂಗಳೊಳೆಲ್ಲಂ ಪೆರ್ಚುಗುಂ ; ಧೈರ್ಯದಿಂ ಜಿನಪಾದ ಪದ್ಮಂಗಳನೆನಿತೆನಿತಂ ನೆನೆವನನಿತನಿತೆ ಕುಂದುಗುಂ ೯೫

ದುರಿತಂ ಕಿಡದನ್ನೆವರಂ
ಪರಮ ಜಿನಾಗಮಮನಱಿಯದನ್ನೆವರಂ ನಿ
ಷ್ಠುರಮಪ್ಪದುಃಖಚಯಮುಂ
ಮರಣಮುಮಾವಾವ ಭವದೊಳೇಂ ಪಿಂಗುಗುಮೋ ೯೬

ಕಳುಹಿಸಿಬಿಡದೆ, ನರಕಗಾಮಿಗಳನ್ನು ನಾರಕರೆಂದು ಅಸಹ್ಯಪಟ್ಟುಕೊಳ್ಳದೆ, ಪಟ್ಟಕಟ್ಟಿದವರು ಬಹಳ ಕ್ರೂರಿಗಳೆಂದು ಬೇಡವೆನ್ನದೆ ಬಡವರನ್ನು ಬೇಡವೆಂದು ಬಿಟ್ಟುಬಿಡದೆ, ಮಾನ್ಯರನ್ನು ಮನ್ನಿಸಿ ಕಾಯುವೆನೆನ್ನದೆ ಕೋತಿ ಹಣ್ಣುಬಿಟ್ಟ ಹುಣಸೆಯಮರವನ್ನೇರಿದಂತೆ, ಕೋಳಿ ತಿಪ್ಪೆಯನ್ನು ಸೇರಿದಂತೆ, ಹಸಿದ ಎಮ್ಮೆ ಬೆಳೆದ ಹೊಲವನ್ನು ಹೊಕ್ಕಂತೆ, ಬಡವರು ಅನ್ನದರಾಶಿಯನ್ನು ಮುತ್ತಿದಂತೆ, ಮೆಂದ್ದು, ನುಂಗಿ, ತಿಂದು, ಕಚ್ಚಿ ಏನು ಮಾಡಿದರೂ ತೃಪ್ತಿಹೊಂದದೆ, ನರಿಯಾಟವಾಡುವವನು ನನಗೆ ಪೀಡೆಯನ್ನುಂಟು ಮಾಡುವನೆಂಬುದು ಯಾವ ಸೋಜಿಗ ? ಸುಡುವ ಬೆಂಕಿಯೊಳಕ್ಕೆ ತುಪ್ಪವನ್ನೆಷ್ಟೆಷ್ಟು ಹಾಕಿದರೂ ಅಷ್ಟಷ್ಟು ಹೆಚ್ಚುವುದು ; ನೀರನ್ನೆಷ್ಟೆಷ್ಟು ಹಾಕಿದರೆ ಅಷ್ಟಷ್ಟು ಕುಂದುವುದು; ಇನ್ನು ಹಿಂದಿನ ಜನ್ಮದ ಕರ್ಮಫಲದಿಂದ ಒದಗುವ ಸಾವಿಗೂ ನೋವಿಗೂ ಎಷ್ಟೆಷ್ಟು ಅಂಜುವೆವೋ ಅಷ್ಟಷ್ಟು ಜನ್ಮಜನ್ಮಗಳಲ್ಲಿಯೂ ಹೆಚ್ಚುವುದು ; ಧೈರ್ಯದಿಂದ ಜಿನಪಾದ ಕಮಲಗಳನ್ನು ಎಷ್ಟೆಷ್ಟು ಧ್ಯಾನಿಸುವನೋ ಅಷ್ಟಷ್ಟು ಕುಂದುವುದು. ೯೫. ಪಾಪವು ಹಾಳಾಗುವವರೆಗೆ ಪರಮಜಿನಾಗಮವನ್ನು ತಿಳಿಯದಿರುವ ತನಕ, ಕ್ರೂರವಾದ ದುಃಖ ಸಮೂಹವೂ, ಮರಣವೂ ಯಾವ ಜನ್ಮದಲ್ಲಿ ತಾನೆ ಕಳೆದು ಹೋಗುವುದೆ ? ೯೬. ಜಿನಧರ್ಮವೆಂಬ ನೀರಿನಿಂದ ಕರ್ಮವೆಂಬ ಬೆಂಕಿಯನ್ನು ಆರಿಸದೆ,

ಗದ್ಯ॥ ಜಿನಧರ್ಮವೆಂಬ ನೀರಿಂ ಕರ್ಮವೆಂಬ ಕಿರ್ಚಂ ನಂದಿಸದೆ, ಜಿನಾಗಮವೆಂಬ ಗ್ರಹವಾದಿಯಿಂ ದುಷ್ಕೃತವೆಂಬ ಗ್ರಹಮಂ ಕಳೆಯದೆ, ಜಿನಸೇವನೆಯೆಂಬ ದಿವ್ಯೌಷಧದಿಂ ಕಿಲ್ಬಿಷವೆಂಬ ಕುತ್ತಮಂ ಕಿಡಿಸದೆ, ಜಿನಾರ್ಚನೆಯೆಂಬ ಕೊಡಲಿಯಿಂ ಪಾಪವೆಂಬ ದುರ್ಗಮಂ ತಱಿಯದೆ, ಜಿನಸ್ಮರಣೆಯೆಂಬ ಭೈತ್ರದಿಂ ದುರಿತವೆಂಬ ಸಮುದ್ರಮಂ ಪಾಯದೆ, ಜಿನವ್ರತವೆಂಬ ಪಱುಗೋಲಿಂದಶುಭವೆಂಬ ತೊಱೆಯಂ ದಾಂಟದೆ, ಜಿನಪಕ್ಷಪಾತವೆಂಬ ಸಿಡಿಲಿಂ ಪುಣ್ಯವಿರೋಧಿಯೆಂಬ ಮರನಂ ಮುಱಿಯದೆ, ಜಿನಭಾವನೆಯೆಂಬ ಬಡಬಾಗ್ನಿಯಿಂ ವಿಷಯಸಾಗರಮಂ ಪೀರದೆ, ಜಿನಾಭಿಷೇಕವೆಂಬ ಕೂರಲಗಿಂ ಕರ್ಮವೈರಿಯೆಂಬ ಪಣಿದಮನಿಱಿಯದೆ, ಜಿನಕಥಾಪ್ರೀತಿಯೆಂಬ ಸಿಂಹದಿಂ ದೋಷವೆಂಬ ಭೇರುಂಡನಿಂ ಮೋಹವೆಂಬ ಶರಭಮಂ ಕೊಲ್ಲದೆ, ಜಿನಮುನಿದಾನವೆಂಬ ಗಾಳಿಯಿಂ ಲೋಭವೆಂಬ ಮುಗಿಲಂ ಬೆದಱಿಸದೆ, ಜಿನಶ್ರೀಮುಖದರ್ಶನವೆಂಬ ವಜ್ರದಿಂ ಮಾಯೆಯೆಂಬ ಬೆಟ್ಟಮನೊಡೆಯದೆ, ಜಿನಪೂಜಾನಂದವೆಂಬನಳನಿಂ ಮಾನವೆಂಬ ಕರಡಮಂ ಸುಡದೆ, ಜಿನರೂಪ ದರ್ಶನವೆಂಬ ಬಿಸಿಲಿಂ ದೋಷವೆಂಬ ತಿಮಿರಮಂ ತೆಗೆಯದೆ, ಜಿನಲಕ್ಷಣನಿರೀಕ್ಷಣವೆಂಬ ಚಂದ್ರನಿಂ ಅಂತರಾಯವೆಂಬ ತಾವರೆಯಂ ಮುಗಿಯಿಸದೆ, ಜಿನಭಕ್ತಿಯೆಂಬ ಸೊಡರಿಂ ದರ್ಶನಾವರಣೀಯವೆಂಬ ಕತ್ತಲೆಯಂ ಪಿಂಗಿಸದೆ, ಜಿನತತ್ತ್ವ

ಜಿನಾಗಮವೆಂಬ ಗ್ರಹವಾದಿಯಿಂದ ಪಾಪವೆಂಬ ಗ್ರಹವನ್ನು ಓಡಿಸದೆ, ಜಿನಸೇವೆಯೆಂಬ ದಿವ್ಯೌಷಧದಿಂದ ಪಾಪವೆಂಬ ರೋಗವನ್ನು ನಾಶಪಡಿಸದೆ, ಜಿನಪೂಜೆಯೆಂಬ ಕೊಡಲಿಯಿಂದ ಪಾಪವೆಂಬ ದುರ್ಗ (ಕೋಟೆ) ವನ್ನು ಕತ್ತರಿಸದೆ, ಜಿನಸ್ಮರಣೆಯೆಂಬ ಹಡಗಿನಿಂದ ಪಾಪವೆಂಬ ಸಮುದ್ರವನ್ನು ದಾಟದೆ, ಜಿನವ್ರತವೆಂಬ ಹರಿಗೋಲಿನಿಂದ ಅಶುಭವೆಂಬ ನದಿಯನ್ನು ದಾಟದೆ, ಜಿನಪಕ್ಷಪಾತವೆಂಬ ಸಿಡಿಲಿನಿಂದ ಪುಣ್ಯವಿರೋಧಿಯೆಂಬ ಮರವನ್ನು ಮುರಿಯದೆ ಜಿನಭಾವನೆಯೆಂಬ ಬಡಬಾಗ್ನಿಯಿಂದ ವಿಷಯ ಸುಖ ಸಾಗರವನ್ನು ಹೀರದೆ, ಜಿನಾಭಿಷೇಕವೆಂಬ ಹರಿತವಾದ ಕತ್ತಿಯಿಂದ, ಕರ್ಮವೈರಿಯ ಹೊಡೆತವನ್ನು ಇದಿರಿಸದೆ, ಜಿನಕಥಾ ಪ್ರೀತಿಯೆಂಬ ಸಿಂಹದಿಂದ ದೋಷವೆಂಬ ಆನೆಯನ್ನು ಸೀಳದೆ, ಜಿನಧರ್ಮಪ್ರೀತಿಯೆಂಬ ಭೇರುಂಡನ ನೆರವಿನಿಂದ ಮೋಹವೆಂಬ ಶರಭವನ್ನು ಕೊಲ್ಲದೆ, ಜಿನಮುನಿಗೆ ಮಾಡುವ ದಾನವೆಂಬ ಗಾಳಿಯಿಂದ ಲೋಭವೆಂಬ ಮೋಡವನ್ನು ಹೆದರಿಸದೆ, ಜಿನಶ್ರೀಮುಖದರ್ಶನವೆಂಬ ವಜ್ರಾಯುಧದಿಂದ ಮಾಯೆಯೆಂಬ ಬೆಟ್ಟವನ್ನು ಒಡೆಯದೆ, ಜಿನಪೂಜಾನಂದವೆಂಬ ಬೆಂಕಿಯಿಂದ ಮಾನವೆಂಬ ಕಾಡುಹುಲ್ಲನ್ನು ಸುಡದೆ, ಜಿನರೂಪ ದರ್ಶನವೆಂಬ ಬಿಸಿಲಿನಿಂದ ದೋಷವೆಂಬ ಕತ್ತಲೆಯನ್ನು ಕಳೆಯದೆ, ಜಿನಲಕ್ಷಣ ನಿರೀಕ್ಷಣವೆಂಬ ಚಂದ್ರನಿಂದ ಅಂತರಾಯ (ವಿಘ್ನ) ವೆಂಬ ತಾವರೆಯನ್ನು ಮುಚ್ಚಿಸದೆ, ಜಿನಭಕ್ತಿಯೆಂಬ ದೀಪದಿಂದ ದರ್ಶನಾವರಣೀಯವೆಂಬ ಕತ್ತಲೆಯನ್ನು ಹಿಂಗಿಸದೆ, ಜಿನತತ್ತ್ವ ವಿಚಾರವೆಂಬ ರಾಜನಿಂದ ಜ್ಞಾನಾವರಣೀಯವೆಂಬ ಕಾಡುಜನರನ್ನು ಓಡಿ

ವಿಚಾರಮೆಂಬರಸನಿಂ ಜ್ಞಾನಾವರಣೀಯಮೆಂಬಾಟವಿಕರನೋಡಿಸದೆ, ಜಿನಪದಸ್ನೇಹಮೆಂಬ ದಂಡಿಂ ವೇದನೀಯಮೆಂಬ ಗಡಿಯ ನಾಯಕರನಡಂಗಿಸದೆ, ಜಿನಚರಣಾವಲಂಬನಮೆಂಬ ಬಲದಿಂ ವಿಷಯಮೆಂಬ ಸೂಱೆಗಾಱರಂ ಕಾದಿ ಗೆಲದೆ, ಜಿನಸ್ತವನರುಚಿಯೆಂಬ ಮೇಘಗರ್ಜನೆಯಿಂ ನರಕಗತಿಯೆಂಬ ಹಂಸೆಯನಂಜಿಸದೆ ಜಿನತತ್ತ್ವಾಕಾಂಕ್ಷೆಯೆಂಬ ಬಾಣದಿಂ ತಿರಿಕಗತಿಯೆಂಬ ಗುಱಿಯಂ ಪಾಱಲೀಯದೆ, ಜಿನರಾರಾಧನೆಯೆಂಬ ಹಿಮದಿಂ ಮನುಷ್ಯಗತಿಯೆಂಬ ಬಾಳಸಹಕಾರಮಂ ಕಿಡಿಸದೆ, ಜಿನರ ನೆರವಿಯೆಂಬ ಚೀಣದಿಂ ದೇವಗತಿಯೆಂಬ ನಿಗಳಮಂ ಭೇದಿಸದೆ, ನೆರೆಮನೆಯವರಂ ಪಾಪಂ ಪಿಡಿಯಿಮೆಂಬಂತೆ, ನೆರೆಗೆಯ್ಯವರಂ ಬಿತ್ತಿಕೊಡಿಮೆಂಬಂತೆ ಸವತಿಯ ಮಗನಂ ಬೇಡಿಕೊಳ್ವಂತೆ, ಬಟ್ಟೆವೋಪರಂ ಪುಲಿಯನಿಱಿಯಿಮೆಂಬಂತೆ, ತಿರಿಯಲ್ಬಂದವರು ಕೂಟನಡಿಮೆಂಬಂತೆ, ಬರ್ದುಬಂದವಳಂ ಪೆಂಡತಿಯಾಗಿರೆಂಬಂತೆ, ಲೋಗರಂ ಮನೆಯ ಕಾದಿಂಮೆಂಬಂತೆ, ನಿರ್ಬುದ್ಧಿತನದಿಂ ಪೆಱರೆನಗೆಂದಿರ್ದೊಡೆ ಶಾಶ್ವತಸುಖಂ ದೊರೆಕೊಳ್ಳದು, ಮುನ್ನ ತನ್ನ ಮಾಡಿದ ಕರ್ಮದುದಯದಿಂದೆಯ್ದುವ ಸಾವುಮಂ ನೋವುಮಂ ಪೆಱರ್ಪಚ್ಚಿಕೊಳ್ಳಿಮೆಂದೊಡೆ ಪಚ್ಚಿಕೊಳ್ವರೆ ಸದ್ಧರ್ಮಮಂ ಪೊರ್ದಿ ಸುಖಿಯಪ್ಪೊಡಂ ಕುಧರ್ಮಮಂ ಪೊರ್ದಿ ದುಃಖಂಬಡುವೊಡಂ ತಾನೆ ಪೆಱರೊರ್ವರುಂ ಸಹಾಯರಲ್ಲರ್ ೯೭

ಸದೆ, ಜಿನಪಾದ ಸ್ನೇಹವೆಂಬ ಸೈನ್ಯದಿಂದ ವೇದನೀಯವೆಂಬ ಗಡಿಯ ನಾಯಕರನ್ನು ಅಡಗಿಸದೆ, ಜಿನಚರಣಾವಲಂಬನವೆಂಬ ಬಲದಿಂದ ವಿಷಯವೆಂಬ ಲೂಟಿಗಾರರನ್ನು ಹೋರಾಡಿ ಗೆಲ್ಲದೆ, ಜಿನಸ್ತೋತ್ರ ಕಾಂತಿಯೆಂಬ ಮೇಘಗರ್ಜನೆಯಿಂದ ನರಕಗತಿಯೆಂಬ ಹಂಸವನ್ನು ಅಂಜಿಸದೆ, ಜಿನತತ್ತ್ವಾಕಾಂಕ್ಷೆಯೆಂಬ ಬಾಣದಿಂದ ತಿರ್ಯಕ್ ಗತಿಯೆಂಬ ಕುರಿಯನ್ನು ಹಾರಗೊಡದೆ ಜಿನಾರಾಧನೆಯೆಂಬ ಹಿಮದಿಂದ ಮಾನವಗತಿಯೆಂಬ ಎಳೆಯಮಾವಿನ ಗಿಡವನ್ನು ಕೆಡಿಸದೆ, ಜಿನರ ಸಮೂಹವೆಂಬ ಚಾಣದಿಂದ ದೇವಗತಿಯೆಂಬ ಸಂಕೋಲೆಯನ್ನು ಕತ್ತರಿಸದೆ, ನೆರೆಮನೆಯವರನ್ನು 'ಹಾವನ್ನು ಹಿಡಿಯಿರಿ' ಎನ್ನುವ ಹಾಗೆ, ಪಕ್ಕದ ಹೊಲದವರನ್ನು (ನಮ್ಮ ಹೊಲದಲ್ಲಿ) ಬಿತ್ತಿಕೊಡಿ ಎಂದು ಕೇಳುವಂತೆ, ಸವತಿಯ ಮಗನನ್ನು ಬೇಡಿಕೊಳ್ಳುವ ಹಾಗೆ, ದಾರಿಹೋಕರನ್ನು 'ಹುಲಿಯನ್ನು ತಿವಿಯಿರಿ' ಎನ್ನುವ ಹಾಗೆ, ಭಿಕ್ಷೆಗೆ ಬಂದವರನ್ನೇ ಅನ್ನವನ್ನು ಬೇಯಿಸಿರೆನ್ನುವಂತೆ, ಕೃಶಳಾಗಿ (ಸತ್ತುಬದುಕಿ) ಬಂದವಳನ್ನು 'ಹೆಂಡತಿಯಾಗಿರು' ಎನ್ನುವಂತೆ, ಕಂಡವರನ್ನು 'ಮನೆಯನ್ನು ಕಾದುಕೊಂಡಿರಿ' ಎನ್ನುವಂತೆ, ಬುದ್ಧಿಹೀನತೆಯಿಂದ 'ಬೇರೆಯವರು ತನಗೆ' ಎಂದು ನಂಬಿಕೊಂಡಿದ್ದರೆ, ಶಾಶ್ವತ ಸುಖವು ಲಭಿಸುವುದಿಲ್ಲ. ಹಿಂದೆ ತಾನು ಮಾಡಿದ ಕರ್ಮದ ಫಲವಾಗಿ ಬರುವ ಸಾವುನೋವುಗಳನ್ನು ಬೇರೆಯವರು ಹಂಚಿಕೊಳ್ಳಿರೆಂದರೆ ಹಂಚಿಕೊಳ್ಳುತ್ತಾರೆಯೆ ? ಸದ್ಧರ್ಮವನ್ನು ಸೇರಿ ಸುಖವಿರುವುದಾದರೂ ಕೆಟ್ಟಧರ್ಮವನ್ನು ಸೇರಿ ದುಃಖಪಡುವುದಾದರೂ ತಾನೇ ಮಾಡಬೇಕು. ಬೇರೆಯವರು ಯಾರೂ ಸ್ನೇಹಿತರಾಗುವುದಿಲ್ಲ. ೯೭. ರೋಗಗಳ

ರುಜೆಗಳೊದವಿಂ ದುಃಖವ್ರಾತಂಗಳಿಂ ಪೆಱರೊತ್ತಿನಿಂ
ಪ್ರಜೆಯ ಭಯದಿಂ ಪೊನ್ನಿಂ ಶೀತೋಷ್ಣದಿಂ ಕಿಲವಾಱಿನಿಂ
ಕುಜನ ನೆರವಿಂ ಸ್ತ್ರೀಯಿಂದಕ್ಕಂತ ಮಿತ್ರರಗಲ್ಕೆಯಿಂ
ವಿಜಯರಳವಿಂ ಸಾವಿಂ ನೋವಿಂ ಮಹೀಶರ ಬಾಧೆಯಿಂ ೯೮

ಅರಿಯ ಭಯದಿಂ ಮುಳ್ಳಿಂ ಕಲ್ಲಿಂ ಪ್ರಯಾಣದ ಪೀಡೆಯಿಂ
ಪರದಿನಳಿಪಿಂ ಮುನ್ನಂ ಕೊಂಡುಂಡ ಸಾಲದ ಚಿಂತೆಯಿಂ
ಭರದ ತೆಱೆಯಿಂ ಕೇಡಿಂ ದಾರಿದ್ರ್ಯದಿಂ ಪರ್ಭವಮಾನದಿಂ
ದುರಿತದೊದವಿಂ ದುಃಖಂ ಸಾರ್ಗುಂ ಮನುಷ್ಯರನೆಲ್ಲಿಯುಂ ೯೯

ಗದ್ಯ॥ ಮಂತ್ರಮವಸಿಯುಂ ಪೊಯ್ದು ಕಯ್ತುಪ್ಪಿದೊಡಂ ತಪ್ಪುಗು, ತೀವ್ರ ಕರ್ಮೋದಯ ದಿಂದಡಸುವ ಸಾವುಂ ನೋವುಂ ಏಗೆಯ್ದುಂ ತಪ್ಪಲಱಿಯದಿದನಱಿವ ಮಹಾಪುರುಷಂಗೆ ಸಾವಿಂಗಂ ನೋವಿಂಗಮಲಱಾಗದೆನಗಿಂ ಮಹಾವೀರಸ್ವಾಮಿಯ ಚರಣಪಯೋಜಾತಂಗಳಂ ನೆನೆಯುತಿರ್ಪುದು ಕಜ್ಜಮೆಂದು ೧೦೦

ವೀರಸ್ವಾಮಿಯ ಪಾದಪ
ಯೋರುಹಮಂ ಬಂದಿವಿಡಿದು ಬಂಟಂ ಸೆಱೆಯುಂ
ಧೀರತೆಯಿಂ ಪಿಡಿವಂತೆ ಕು
ಮಾರಕನುಂ ಪಿಡಿದನೇಕಚಿತ್ತದಿನಾಗಳ್ ೧೦೧

ಹೆಚ್ಚಳದಿಂದ, ಅನೇಕ ದುಃಖಗಳಿಂದ, ಇತರರ ಒತ್ತಡದಿಂದ, ಪ್ರಜೆಗಳ ಭಯದಿಂದ, ಹೊನ್ನಿನಿಂದ, ಶೀತೋಷ್ಣಗಳಿಂದ, ನೆರೆಯುವರ ಮೋಸದಿಂದ, ಕೆಟ್ಟವರ ಗುಂಪಿನಿಂದ, ಹೆಂಗಸಿನಿಂದ, ಬಹಳ ಸ್ನೇಹಿತರ ಅಗಲಿಕೆಯಿಂದ, ಗೆದ್ದವರ ಶಕ್ತಿಯಿಂದ, ಸಾವುನೋವು ಗಳಿಂದ ರಾಜರ ಬಾಧೆಯಿಂದ ೬೮. ಶತ್ರುಭಯ, ಮುಳ್ಳುಕಲ್ಲುಗಳು, ಪ್ರಯಾಣದ ಕೆಡಕು, ಪರಗತಿಯ ಆಸೆ, ಮೊದಲು ತೆಗೆದುಕೊಂಡಿದ್ದ ಸಾಲದ ಚಿಂತೆ, ರಭಸದ ಅಲೆ ಗಳು, ಹಾನಿ, ದಾರಿದ್ರ್ಯ, ಇತರರ ಅಭಿಮಾನ, ಪಾಪದ ಆಧಿಕ್ಯ, ಇವೆಲ್ಲವುಗಳಿಂದ ಮನುಷ್ಯನು ಎಂದಾದರೂ ದುಃಖಪಡುತ್ತಾನೆ. ೯೯. ಅಲ್ಲದೆ ಭೂಮಿಯನ್ನು ಹೊಡೆದ ಕೆಯ್ ತಪ್ಪಿದರೂ ತಪ್ಪಬಹುದು, ತೀವ್ರವಾದ ಕರ್ಮದ ಫಲವಾಗಿ ಒದಗುವ ಸಾವು ನೋವುಗಳು ಏನು ಮಾಡಿದರೂ ತಪ್ಪುವುದಿಲ್ಲ. ಇದನ್ನು ತಿಳಿಯುವ ಮಹಾತ್ಮನಿಗೆ ಸಾವುನೋವುಗಳಿಂದ ದುಃಖವಾಗುವುದಿಲ್ಲ. ನನಗೆ ಇನ್ನು ಮಹಾವೀರಸ್ವಾಮಿಯ ಚರಣ ಕಮಲಗಳನ್ನು ಧ್ಯಾನಿಸುತ್ತಿರುವುದೇ ಕರ್ತವ್ಯ. ೧೦೦. ಹೀಗೆ ಯೋಚಿಸಿ ಕುಮಾರನು ವೀರಸ್ವಾಮಿಯ ಪಾದಕಮಲವನ್ನು, ಭಂಟನು ಸೆರೆಯಾಳನ್ನು ಧೈರ್ಯ ದಿಂದ ಹಿಡಿಯುವಂತೆ, ಒಂದೇ ಮನಸ್ಸಿನಿಂದ ಹಿಡಿದುಬಿಟ್ಟನು. ೧೦೧. ಜಿನಪಾದ,

ಜಿನಪದಮಂ ಜಿನಮತಮಂ
ಜಿನರ ಗುಣೋನ್ನತಿಯನೆಯ್ದೆ ಜಿನಗೃಹಮಂ ಸ
ಜ್ಜಿನ ಚೈತ್ಯಮನನವರತಂ
ಮನದೊಳ್ ನೆನೆಯುತ್ತುಮಿರ್ದನಂತಿರ್ಪಿನೆಗಂ ೧೦೨

ಗದ್ಯ॥ ಆ ಪುರದ ದೇವತೆಗಳ್ಗಾಸನಕಂಪಮಾಗೆ ಸಮ್ಯಕ್ತ್ವ ಚೂಡಾಮಣಿಗುಪಸರ್ಗಮಾದುದನಱಿದು ಘೋರೋಪಸರ್ಗಮಂ ಪಿಂಗಿಸಲೆಂದು ಬಂದು ಮುಂದಚಳಿತಮಲ್ಲನಾಗಿನಿಂದ ವಾತ್ಸಲ್ಯರತ್ನಾಕರನ ಮನದೊಳಾದ ಧೈರ್ಯಕಾಶ್ಚರ್ಯಂಬಟ್ಟು ೧೦೩

ದುರಿತಾರಿಯನದಟಲೆದೋ
ಸಂಸದೆ ನಿರ್ವೃತಿಗೆ ಸಲ್ವೆ ನಾನೆಂಬ ಮಹಾ
ಪುರುಷಂ ಮನದೊಳ್ ಕುಂದದೆ
ಜರಿಯದೆ ಕಲಿಯೆನಿಸಿ ಸೆಡೆಯದಿಂತಿರವೇಡಾ ೧೦೪

ಗದ್ಯ॥ ಎಂದು ಕೈಗಳಂ ಮುಗಿದು ಪಲವುಂ ತೆಱದ ಪೊಗೞ್ತೆಗಳಿಂ ಪೊಗೞುತ್ತುಮಿರ್ದರನ್ನೆಗಂ ಮನದೊಳೆಳ್ಳನಿಸಪ್ಪೊಡಂ ಕರುಣಮಿಲ್ಲದೆ ನಿಷ್ಠುರರಪ್ಪ ತಳಾಱಿರ್ಕುಮಾರನಂ ನೆಲಕಿಕ್ಕುವಂತೆ ನೆಲಸಿಕ್ಕಿ ಗಜಱಿಗರ್ಜಿಸಿ ನಿಶಿತಾಸ್ತ್ರಂಗಳನೊಱೆಯಿಂದುರ್ಚಿಕೊಂಡು ತಲೆಯಂ ದಡಿಯಿಂ ಪೊಯ್ದುಂ ಕಿವಿಯಂ ಬಾಳಿಂ ಪೊಯ್ದುಂ ಕೊರಲಂ ಸುರಗಿಯಿಂದರಿದುಂ ಮೆಯ್ಯಂ ಕೊಳ್ಳಿಯಿಂ

ಜಿನಮತ, ಜಿನರ ಗುಣದ ಹೆಚ್ಚಳ, ಜಿನಗೃಹ. ಶ್ರೇಷ್ಠವಾದ ಜಿನಚೈತ್ಯ – ಇವುಗಳನ್ನೇ ಎಲ್ಲ ಕಾಲದಲ್ಲಿಯೂ ಮನಸ್ಸಿನಲ್ಲಿ ಧ್ಯಾನಿಸುತ್ತಿದ್ದನು, ಹಾಗಿರುವಾಗ ೧೦೨, ಆ ಪಟ್ಟಣದ ದೇವತೆಗಳಿಗೆ ಆಸನಕಂಪವಾಯಿತು. ಅದರಿಂದ ಸಮ್ಯಕ್ತ್ವಚೂಡಾಮಣಿಯಾದ ವಾರಿಷೇಣನಿಗೆ ಉಪಸರ್ಗವಾದುದನ್ನು ತಿಳಿದು ಭಯಂಕರವಾದ ಉಪಸರ್ಗವನ್ನು ತಪ್ಪಿಸುವುದಕ್ಕೆಂದು ಬಂದು ತಮ್ಮೆದುರಿಗೆ ಅಲ್ಲಾಡದ ಜಟ್ಟಿಯಂತೆ ನಿಂತಿದ್ದ ವಾತ್ಸಲ್ಯರತ್ನಾಕರನ ಮನಸ್ಸಿನೊಳಗಾಗಿದ್ದ ಧೈರ್ಯಕ್ಕೆ ಆಶ್ಚರ್ಯಪಟ್ಟರು. ೧೦೩. "ಪಾಪವೆಂಬ ಶತ್ರುವನ್ನು ಹಿಂಸಿಸಿ ಲಕ್ಷ್ಯಮಾಡದೆ ನಾನು ಮೋಕ್ಷಕ್ಕೆ ಸಲ್ಲುವೆನೆಂಬ ಮಹಾಪುರುಷನು ಮನಸ್ಸಿನಲ್ಲಿ ಕುಗ್ಗದೆ. ಅಂಜದೆ, ಶೂರನಾಗಿ, ಹೆದರದೆ, ಹೀಗಿರಬೇಡವೆ ?" ೧೦೪. ಎಂದು ಕೈಮುಗಿದು ಹಲವು ರೀತಿಯಲ್ಲಿ ಹೊಗಳಿಕೆಗಳನ್ನು ಹಾಡುತ್ತ ಇದ್ದರು. ಆ ವೇಳೆಗೆ ಮನಸ್ಸಿನಲ್ಲಿ ಸ್ವಲ್ಪವೂ ಕರುಣೆಯಿಲ್ಲದೆ ಕ್ರೂರರಾದ ತಳವಾರರು ಯುವರಾಜನನ್ನು ನೆಲಕ್ಕೆ ಕೆಡವಿ ಗದರಿಸಿ ಗರ್ಜಿಸುತ್ತ ಹರಿತವಾದ ಅಸ್ತ್ರಗಳನ್ನು ಒರೆಗಳಿಂದ ಎಳೆದುಕೊಂಡು ತಲೆಯನ್ನು ದೊಣ್ಣೆಯಿಂದ ಹೊಡೆದು, ಕಿವಿಯನ್ನು ಕತ್ತಿಯಿಂದ ತಿವಿದು ಕೊರಳನ್ನು ಕತ್ತಿಯಿಂದ ಕತ್ತರಿಸಿ ದೇಹವನ್ನು ಕೊಳ್ಳಿಯಿಂದ ಬರೆಹಾಕಿ, ಸೊಂಟವನ್ನು ಕೊಡಲಿಯಿಂದ ಕಡಿದು,

ಕರಿದುಂ ನಡುವಂ ಕೊಡಲಿಯಿಂ ಕಡಿದುಂ ತೋಳಂ ಗದೆಯಿಂ ಬಡಿದುಂ ಬೆರಲನುಳಿಯಿಂ ಕಡಿದುಂ ನೊಸಲನಂಬಿನಿಂ ಕೋಟಿದುಂ ತಳಮಂ ಬಾಚಿಯಿಂ ಕೆತ್ತಿ ಮೊಳಕೈಯಂ ಕೊಂತದಿಂ ಕುತ್ತಿ ಬೊಬ್ಬಿರಿದು ನಾನಾ ಪ್ರಕಾರಮಪ್ಪ ಘೋರೋಪಸರ್ಗಂಗಳಂ ಮಾಡುತ್ತಿರ್ಪುದುಂ, ಅವಕ್ಕೆ ಕಳ್ಳರಂ ಕಂಡಂತಳ್ಕದೆ ಕಣ್ಣೊಳಗಣ ಕಸವಿನಂತುಳ್ಕದೆ ನಡುವಿನಂತು ಬಳ್ಕದೆ, ಷರ್ವಿನಂತೆ ಕೊಂಕದೆ, ತೆಱೆಯಂತೆ ನೂಂಕದೆ ಬೆಂಡಿನಂತೆ ತೇಂಕದೆ ಕೊಳ್ಪಟ್ಟರಂತೊಳಱದೆ ಭಯಮಾದರಂತೆ ಬೆಳಱದೆ ಶರಗೆಲೆಯಂತೆ ತಳಱದೆ ಪುಲ್ಲೆಯಂತೆ ಬೆಚ್ಚದೆ ಪೊಲ್ಲರಂತೆ ಪಚ್ಚದೆ ಶುಭಧ್ಯಾನಾರೂಢನಾಗಿ ರ್ಪುದುಂ, ಸಮ್ಯಕ್ತ್ವಚೂಡಾಮಣಿಯ ದರ್ಶನಶುದ್ಧಿಗಂ ಸುಕವಿನಿಕರಪಿಕಮಾಕಂದನ ಜಿನಾಗಮದ ಪರಿಣತಿಗಂ ವಾತ್ಸಲ್ಯರತ್ನಾಕರನ ಶುದ್ಧಭಾವನೆಗಂ ಸಹಜ ಕವಿಜನಪಯಃ ಪಯೋಧಿ ಹಿಮಕರನ ಮನದ ಸ್ಥಿರತೆಗಂ ಸುಕವಿ ಜನಮನಃಪದ್ಮಿನೀ ರಾಜಹಂಸನ ಸಂಸಾರ ಭೀತಿಗಂ ಜಿನ ಶ್ರೀಚರಣಾಳಂಕಾರಶೀರ್ಷನ ಶುದ್ಧಭಾವನೆಗಂ ಭಾವಯುತ ದಿಗಂಬರದಾಸನ ಪಂಚಪರ ಮೇಷ್ಠಿಗಳೊಳಾದ ಭಕ್ತಿಗಂ ನಗರದೇವತೆಗಳ್ಮೆಚ್ಚಿ ಜಿನೇಶ್ವರನೆಂಬ ವಜ್ರಪಂಜರಮಂ ಪೊಕ್ಕಿರ್ದಂಗೆ ಜಿನನಾಥನೆಂಬ ಬಲ್ಗೋಂಟೆಯಂ ಪೊಕ್ಕಿರ್ದಂಗೆ, ಜಿನನಾಥನೆಂಬ ವಜ್ರ ಕವಚಮಂ ತೊಟ್ಟಿರ್ದಂಗೆ ಜಿನಾಧಿಪನೆಂಬ ಮಹಾದ್ರಿಯನೇಱಿರ್ದಂಗೆ ಜಿನಸ್ವಾಮಿಯೆಂಬ

ತೋಳನ್ನು ಗದೆಯಿಂದ ಬಡಿದು, ಬೆರಳುಗಳನ್ನು ಉಳಿಯಿಂದ ಕಡಿದು, ಹಣೆಯನ್ನು ಬಾಣದಿಂದ ಚುಚ್ಚಿ ಅಂಗೈಯನ್ನು ಬಾಚಿಯಿಂದ ಕೆತ್ತಿ, ಮೊಣಕೈಯನ್ನು ಭರ್ಜಿ ಯಿಂದ ಚುಚ್ಚಿ ಆರ್ಭಟಿಸಿ ನಾನಾರೀತಿಯಾದ ಭಯಂಕರ ಹಿಂಸೆಗಳನ್ನು ಮಾಡಲಾಗಿ, ಅವುಗಳಿಗೆ ಕಳ್ಳರನ್ನು ಕಂಡಂತೆ ಅಂಜದೆ, ಕಣ್ಣೊಳಗಿನ ಕಸದ ಹಾಗೆ ಹೊರನುಗ್ಗದೆ (ನಡುವಿನ ಹಾಗೆ ಬಳುಕದೆ) ಹುಬ್ಬಿನ ಹಾಗೆ ಕೊಂಕದೆ ಅಲೆಯ ಹಾಗೆ ತಳ್ಳದೆ, ಬೆಂಡಿನಂತೆ ತೇಲದೆ, ಸೆರೆಯಾದವರಂತೆ ಸಂಕಟ ಪಡದೆ, ಭಯದಿಂದ ಬೆಚ್ಚದೆ. ತರ ಗೆಲೆಯ ಹಾಗೆ ಅಲ್ಲಾಡದೆ, ಜಿಂಕೆಯಂತೆ ಭಯಪಡದೆ, ಕೆಟ್ಟವರಂತೆ ಪೆಚ್ಚಾಗದೆ ಶುಭ ಧ್ಯಾನದಲ್ಲಿ ಮಗ್ನನಾಗಿರಲು ಸಮ್ಯಕ್ತ್ವಚೂಡಾಮಣಿಯ ದರ್ಶನಶುದ್ಧಿ. ಸುಕವಿನಿಕರಪಿಕಮಾಕಂದನ ಜಿನಾಗಮ ಪಾಂಡಿತ್ಯ, ವಾತ್ಸಲ್ಯರತ್ನಾಕರನ ಶುದ್ಧ ಭಾವನೆ, ಸಹಜಕವಿಜನಮನಃ ಪದ್ಮಿನೀ ರಾಜಹಂಸನ ಸಂಸಾರ ಭಯ, ಜಿನಶ್ರೀಚರಣ ಗಳೇ ಶೀರ್ಷಾಲಂಕಾರವಾಗಿ ಉಳ್ಳವ (ಸದಾ ಜಿನನಿಗೆ ಶಿರಸಾಷ್ಟಾಂಗ ನಮಸ್ಕಾರ ಮಾಡುವವನು) ನಾದ ಕುಮಾರನ ಶುದ್ಧ ಭಾವನೆಗೂ ಭಾವಯುತ ದಿಗಂಬರದಾಸ ನಗೆ ಪಂಚಪರಮೇಷ್ಠಿಗಳಲ್ಲಿ ಉಂಟಾಗಿದ್ದ ಭಕ್ತಿಗೂ ನಗರ ದೇವತೆಗಳು ಮೆಚ್ಚಿ ಜಿನೇಶ್ವರನೆಂಬ ವಜ್ರಪಂಜರವನ್ನು ಹೊಕ್ಕಿದ್ದವನಿಗೆ, ಜಿನನಾಥನೆಂಬ ಬಲವಾದ ಕೋಟೆಯನ್ನು ಹೊಕ್ಕಿದ್ದವನಿಗೆ ಜಿನನಾಥನೆಂಬ ವಜ್ರಕವಚವನ್ನು ತೊಟ್ಟುಕೊಂಡಿದ್ದ ವನಿಗೆ. ಜಿನಾಧಿಪನೆಂಬ ಮಹಾಪರ್ವತವನ್ನು ಏರಿದವನಿಗೆ ಜಿನಸ್ವಾಮಿಯೆಂಬ ಚಕ್ರ

ಚಕ್ರವರ್ತಿಯುಂ ನೆಮ್ಮಿರ್ದಂಗೆ ಜಿನವಲ್ಲಭನೆಂಬವನ ದುರ್ಗಮಂ ಕೈಕೊಂಡಂಗೆ ಜಿನಪರಿವೃಢನೆಂಬ ಜಲದುರ್ಗಮನಾಶ್ರಯಿಸಿದಂಗೆ ಜಿನದೇವನೆಂಬ ಚಂದ್ರಬಲಮಂಬೆತ್ತಂಗೆ ಜಿನಪ್ರಭಾವನೆಯೆಂಬ ಭೂಬಲಮಂ ಪಡೆದಂಗೆ ಜಿನಕುಂಜರಮೆಂಬ ರಸಾಯನಮಂ ಸಾಧಿಸಿದಂಗೆ ಜಿನಾಗಮಮೆಂಬ ಮೃತಮಂ ಸೇವಿಸಿದಂಗೆ ಜಿನಧರ್ಮ ನಿಧಾನಮನೊಳಕೊಂಡಂಗೆ ಜಿನಸೇವನೆಯೆಂಬ ನಿಧಿಯುಂ ಕಂಡಂಗೆ ಜಿನವ್ರತಮೆಂಬ ಕೈದುವಿನೊಳ್ ಪರಿಣತನಾದಂಗೆ ಜವನುಂ ಗಿವನುಂ ಕರ್ಮಮುಂ ಗಿರ್ಮಮುಂ ಬಿದಿಯುಂ ಗಿದಿಯುಂ ವಿಧಾತ್ರನುಂ ಗಿಧಾತ್ರನುಂ ದೈವಮುಂ ಗಿಯ್ವಮುಂ ಪಾಪಮುಂ ಗೀಪಮುಂ ಮುಪ್ಪುಂ ಗಿಪ್ಪುಂ ಉತ್ತಮುಂ ಗಿತ್ತಮುಂ ಸಾವುಂ ಗೀವುಂ ಪೀಡೆಯುಂ ಗೀಡೆಯುಂ ನೋವುಂ ಗೀವುಂ ಪುಟ್ಟುಂಗಿಟ್ಟುಮೆಂಬಿವೆಲ್ಲಮುಮೇನಂ ಮಾಡಲಾರ್ಪುವೇಗೆಯ್ವುವೇನನನೊಡರ್ಚುವುವೆಂದು ಱೋಡಾಡಿ ತಳಾಱರಿಱಿದೇಱೆಲ್ಲಮಂ ಮಕುಟಮುಂ ಮಣಿಕುಂಡಲಮುಂ ಹಾರಮುಂ ಕೇಯೂರಮುಂ ತೋಳಮಣಿಯುಂ ಕಂಕಣಮುಂ ಮುದ್ರಿಕೆಯುಂ ಬ್ರಹ್ಮಸೂತ್ರಮುಂ ದೇವಾಂಗ ವಸ್ತ್ರಮುಮಂ ಮಾಡಿ ಮತ್ತಂ ೧೦೫

ಛಲದಿಂ ಪೊಣಸಿ ತಲೆಯುಂ
ಸೆರಗಿಲ್ಲದೆ ಪೊಯ್ಯೆ ನಗರ ದೇವತೆಗಳ್
ಕ್ರೂರಮಪ್ಪೇಱಂ ಮುದದಿಂ
ಸ್ಫುರಿಯಿಪ ಸದ್ರತ್ನಹಾರಮಂ ಮಾಡುವುದುಂ ೧೦೬

ವರ್ತಿಯುನ್ನು ಆಶ್ರಯಿಸಿದವನಿಗೆ, ಜಿನವಲ್ಲಭನೆಂಬವನ ದುರ್ಗವನ್ನು ತೆಗೆದುಕೊಂಡವನಿಗೆ ಜಿನಪರಿವೃಢನೆಂಬ ಜಲದುರ್ಗವನ್ನು ಆಶ್ರಯಿಸಿದವನಿಗೆ ಜಿನದೇವನೆಂಬ ಚಂದ್ರಬಲವನ್ನು ಪಡೆದವನಿಗೆ, ಜಿನಪ್ರಭಾವನೆಯೆಂಬ ಭೂಬಲವನ್ನು ಪಡೆದವನಿಗೆ. ಜಿನಕುಂಜರವೆಂಬ ರಸಾಯನವನ್ನು ಸಾಧಿಸಿಕೊಂಡವನಿಗೆ ಜಿನಾಗಮವೆಂಬ ಅಮೃತವನ್ನು ಸೇವಿಸಿದವನಿಗೆ ಜಿನಧರ್ಮವೆಂಬ ನಿಕ್ಷೇಪವನ್ನು ಆಕ್ರಮಿಸಿಕೊಂಡವನಿಗೆ, ಜಿನಸೇವೆಯೆಂಬ ನಿಧಿಯನ್ನು ಕಂಡವನಿಗೆ ಜಿನವ್ರತವೆಂಬ ಕತ್ತಿಯಲ್ಲಿ ಪಂಡಿತನಾದವನಿಗೆ,ಯಮಗಿಮ. ಕರ್ಮಗಿರ್ಮ, ವಿಧಿಗಿಧಿ, ವಿಧಾತ್ರ ಗಿಧಾತ್ರರು, ದೈವಗಿಯ್ವ, ಪಾಪಗೀಪ, ಮುಪ್ಪುಗಿಪ್ಪು, ರೋಗಗೀಗ, ಸಾವುಗೀವು, ಪೀಡೆಗೀಡೆ, ನೋವಿಗೀವು, ಹುಟ್ಟುಗಿಟ್ಟು, ಎಂಬ ಇವೆಲ್ಲವೂ ಏನನ್ನೂ ಮಾಡಲಾರವು. ಇವು ಏನನ್ನು ಒಡರಿಸಿಯಾವು ಎಂದು ಹಾಸ್ಯಮಾಡಿ, ತಳವಾರರು ಇರಿದ ಗಾಯಗಳೆಲ್ಲವೂ ಕಿರೀಟ, ಮಣಿಕುಂಡಲ, ಹಾರ, ಕೇಯೂರ(ಏಕಾವಳಿಹಾರ) ಬಾಹುಕೀರ್ತಿ, ಕಂಕಣ, ಉಂಗುರ, ಬ್ರಹ್ಮಸೂತ್ರ, ರೇಷ್ಮೆವಸ್ತ್ರಗಳನ್ನು ಮಾಡಿದರು. ೧೦೫ ತಳವಾರರು ರೋಷದಿಂದ ಲಕ್ಷ್ಯವಿಲ್ಲದೆ ತಲೆಯನ್ನು ಹೊಡೆಯಲು ನಗರದೇವತೆಗಳು ಕ್ರೂರವಾದ ಹೊಡೆತವನ್ನು ಸಂತೋಷದಿಂದ ಹೊಳೆಯುವ ಒಳ್ಳೆಯ ರತ್ನಹಾರವನ್ನಾಗಿ ಮಾಡಿದರು. ೧೦೬. ಎರಡು ಕೈಗಳನ್ನೂ ನಿಷ್ಕರುಣೆಗಳು ಗುರಿಯಿಟ್ಟು ಕಡಿಯಲು

ಎರಡುಂ ಕೈಗಳುಮಂ ನಿ
ಷ್ಕರುಣೆಗಳಡೆಯಿಟ್ಟು ಕಡಿಯೆ ದೇವತೆಗಳ್ಕಾ
ಣ್ದಿರದಾಗಳೆ ಕಂಕಣಮಾ
ಗಿರೆ ಮಾಡಿದ ತೆಱನದವನಿಗಚ್ಚರಿಯಾಗಳ್ ೧೧೭

ಬೇಗಂ ಮಂಡೆಯನಿರ್ಪೋ
ಳಾಗಿರೆ ಕರ್ಬುನದ ಡಂಕಿಯಿಂ ಪೊಯ್ವುದುಮಂ
ತಾಗಳ್ಕನಿಸೇಱಂ ಸ
ದ್ರಾಗದಿನೊಡನೊಡನೆ ಮಕುಟಮಂ ಮಾಡುವುದುಂ ೧೧೮

ಪರಸಿಂದಂ ನಡುಮಂ ನಿ
ಷ್ಠುರ ಕೋಪಪರ್ಪೊಯ್ಯೆ ನಗರದೇವತೆಗಳ್ವಿ
ಸ್ತರದಿಂದೇಱಂ ದಿವ್ಯಾಂ
ಬರಮಾಗೆ ಮಹಾನುರಾಗದಿಂ ಮಾಪುವುದುಂ ೧೧೯

ಎರಡುಂ ಕಿವಿಯುಮನೊಡನೊಡ
ನರಿಯೆ ಕಿಲರ್ಸೊಕ್ಕಿ ನಗರ ದೇವತೆಗಳ್ ಭಾ
ಸುರ ಕುಂಡಳಂಗಳಾಗಿರೆ
ವಿರಚಿಸಿದರ್ನೋವು ಪೊರ್ದದಂತಾಗೇಱಂ ೧೨೦

ದೇವತೆಗಳು ಬಿಡದೆ ಆಗಲೇ ಕಂಕಣವಾಗುವಂತೆ ಮಾಡಿದ ರೀತಿಯು ಪ್ರಪಂಚಕ್ಕೆ ಆಶ್ಚರ್ಯವಾಯಿತು. ೧೧೭. ಬೇಗನೆ ತಲೆಯನ್ನು ಎರಡು ಹೋಳಾಗುವ ಹಾಗೆ ಕಬ್ಬಿಣದ ಸಲಾಕಿಯಿಂದ ಹೊಡೆಯುತ್ತಲೂ ದೇವತೆಗಳು ಆ ಸಿಟ್ಟಿನ ಪೆಟ್ಟನ್ನು ಪ್ರೀತಿಯಿಂದ ಕೂಡಲೆ ಕಿರೀಟವನ್ನಾಗಿ ಮಾಡಿದರು. ೧೧೮. ಗಂಡುಗೊಡಲಿಯಿಂದ ಆ ನಿಷ್ಠುರ ಕೋಪಿಗಳು ನಡುವನ್ನು ಹೊಡೆಯಲು ನಗರದೇವತೆಗಳು ಆ ದೊಡ್ಡ ಪೆಟ್ಟನ್ನು ವಿಸ್ತಾರವಾದ ದಿವ್ಯ ವಸ್ತ್ರವಾಗುವಂತೆ ಬಹಳ ಪ್ರೀತಿಪೂರ್ವಕವಾಗಿ ಮಾಡಿದರು. ೧೧೯. ಎರಡು ಕಿವಿಗಳನ್ನೂ ಒಟ್ಟೊಟ್ಟಿಗೆ ಕೊಯ್ಯಲು ನಗರದೇವತೆಗಳು ಆ ಪೆಟ್ಟುಗಳನ್ನು ಪ್ರಕಾಶಮಾನವಾದ ಕುಂಡಲಗಳಾಗಿ ಮಾರ್ಪಡಿಸಿದರು; ಆ ಏಟಿನ ನೋವು ಕುಮಾರನನ್ನು ತಾಕದಂತೆ ಮಾಡಿದರು. ೧೨೦ ಹಾಗೆ ಇರಿದ ಗಾಯಗಳೆಲ್ಲವನ್ನೂ ಹಾರವೇ ಮೊದಲಾದ

ಗದ್ಯ॥ ಅಂತಿಱಿದೇಟುಗಳೆಲ್ಲಮಂ ಹಾರಾದ್ಯಾಭರಣಂಗಳಾಗಿ ವಿರಚಿಸಿ ಸುಕವಿನಿಕರಪಿಕಮಾಕಂದಂಗೆ ವೇದನೆಯುನೆಂತುಂ ಪೊರ್ದದಂತಾಗೆ ಮಾಡುವುದುಂ ದಂಡಧರರ್ತವಿಮ್ಮಱಿದೇಟುಗಳೆಲ್ಲಂ ವಾರಿಷೇಣಕುಮಾರಂಗಾಭರಣಂಗಳಾಗೆ ಕಂಡು ನಿಲಲಣ್ಮದೆ ನಿನ್ನಲ್ಲಿಗೆ ಪಱಿತಂದು ಮಹಾವಿಸ್ಮಯಮಂ ಪೇಟುತ್ತುಮಿರ್ದರನ್ನೆಗಂ ದೇವತೆಗಳುಂ ಪುರದೇವತೆಗಳುಂ ನೆರೆದು ೧೧೧

ರುಂದ್ರ ಜಿನ ಸಮಯ ವಾರಿಧಿ
ಚಂದ್ರನನಭಿಮಾನಧವಳನಂ ಧೈರ್ಯಸುರಾ
ದ್ರೀಂದ್ರೋಪಮನಂ ವಿಭವ ಸು
ರೇಂದ್ರನನಘತಿಮಿರವನಜಸಖಸನ್ನಿಭನಂ ೧೧೨

ಗದ್ಯ॥ ತಮ್ಮ ವಿಗುರ್ವಿಸಿದ ನಾನಾ ರತ್ನಖಚಿತಮಪ್ಪ ಸಿಂಹಾಸನದ ಮೇಲಿರಿಸಿ ಕಲ್ಪವೃಕ್ಷದ ಪುಷ್ಪಂಗಳಿಂ ಮನವಾರೆ ಪೂಜಿಸಿ ಪೊಗಟುತ್ತುಮಿರ್ದರನ್ನೆಗಂ ೧೧೩

ಸುರದುಂದುಭಿ ಪಲವುಂ ಭೋ
ರ್ಗರೆಯೆ ವಿಯತ್ತಳದೊಳಿರ್ದು ಮೈಯಱಿಯದೆ ದೇ
ವರ ತಂಡಂ ಪೂವಿನ ಬ
ಲ್ಸರಿಯಂ ನೃಪಸುತನ ಮೇಲೆ ಕರೆವುದುಮಾಗಳ್ ೧೧೪

ಆಭರಣಗಳಾಗಿ ಮಾಡಿ ಸುಕವಿನಿಕರಪಿಕಮಾಕಂದನಿಗೆ ನೋವು ಹೇಗೂ ತಾಕದಂತಾಗಲು ದಂಡಧಾರಿಗಳಿಂದ ತಳವಾರರು ತಾವು ಹೊಡೆದ ಪೆಟ್ಟುಗಳೆಲ್ಲ ವಾರಿಷೇಣ ಕುಮಾರನಿಗೆ ಆಭರಣಗಳಾದುದನ್ನು ನೋಡಿ ನಿಲ್ಲಲು ಧೈರ್ಯವಾಗದೆ ನಿನ್ನ ಬಳಿಗೆ ಓಡಿ ಬಂದು ಬಹಳ ಆಶ್ಚರ್ಯವನ್ನು ಹೇಳುತ್ತಿದ್ದರು. ಆ ವೇಳೆಗೆ ವನದೇವತೆಗಳೂ ಪುರದೇವತೆಗಳೂ ಸೇರಿ ೧೧೧. ವಿಸ್ತಾರವಾದ ಜಿನಧರ್ಮಸಮುದ್ರಕ್ಕೆ ಚಂದ್ರನಾದ, ಅಭಿಮಾನಧವಳನಾದ, ಧೈರ್ಯದಲ್ಲಿ ಸುರಾದ್ರಿ ಸದೃಶನಾದ ವೈಭವದಲ್ಲಿ ಸುರೇಂದ್ರನಂತಿದ್ದ ಪಾಪವೆಂಬ ಕತ್ತಲೆಗೆ ಸೂರ್ಯಸನ್ನಿಭನಾದ ವಾರಿಷೇಣಕುಮಾರನನ್ನು ೧೧೨. ತಾವು ಮಾಯೆಯಿಂದ ಸೃಷ್ಟಿಸಿದ ಅನೇಕ ಬಗೆಯ ರತ್ನಗಳನ್ನು ಕೆತ್ತಿದ್ದಂಥಾ ಸಿಂಹಾಸನದ ಮೇಲೆ ಕೂಡಿಸಿ ಕಲ್ಪ ವೃಕ್ಷಗಳ ಪುಷ್ಪಗಳಿಂದ ಮನಸ್ತೃಪ್ತಿಯಾಗಿ ಪೂಜೆ ಮಾಡಿ ಹೊಗಳುತ್ತಿದ್ದರು. ೧೧೩. ಆ ವೇಳೆಗೆ ಹಲವು ಸುರದುಂದುಭಿಗಳು ಭೋರೆಂದು ಶಬ್ದ ಮಾಡುತ್ತಿರಲು ಆಕಾಶದಲ್ಲಿದ್ದು ಮೈ ಮೇಲೆ ಎಚ್ಚರವಿಲ್ಲದೆ ದೇವರುಗಳ ಸಮೂಹವು ಹೂಗಳ ದೊಡ್ಡ ಮಳೆಯನ್ನೇ ಆ ರಾಜಪುತ್ರನ ಮೇಲೆ ಕರೆದರು. ೧೧೪. ಆಗ ಪಟ್ಟಣ

ಗದ್ಯ॥ ಪುರಕ್ಷೋಭವಾಗೆ ನೀಂ ಸಕಳ ಜನ ಪರಿವೃತನಾಗಿ ಬಂದು ಕುಮಾರಕನಂ ಪೂಜಿಸುವ ನಗರ ದೇವತೆಯರುಮಂ ಜಯಜಯ ನಿನಾದದಿಂದಂಬರದೊಳಿರ್ದು ಮೆಯ್ಯುಱಿಯದೆ ಪೊಗಟ್ಟ ದಿವಿಜ ಸಮೂಹಮುಮಂ ಕಂಡು ಹರ್ಷಚಿತ್ತನಾಗಿ ಸಮ್ಯಕ್ತ್ವ ಚೂಡಾಮಣಿಯ ಚರಣ ಯುಗಳಮಂ ಚಂಪಕಾದಿ ಸುಮಂಗಳಿಂದರ್ಚಿಸಿ ಸಹಜಕವಿಜನ ಮನೋಹರೋದ್ಯಾನವನ ಕಳಕಂಠನ ಧೈರ್ಯಮಂ ಬಣ್ಣಿಸುತಿರ್ಪನ್ನೆಗಂ ೧೧೫

ಮಂದರಾದ್ರಿನಿಭಕ್ಷಮಾನ್ವಿತನಂ ದೃಢವ್ರತನಂ ಮಹಾ
ನಂದದಿಂ ಸುರಕೋಟಿ ಬಣ್ಣಿಸಿದಪ್ಪುದೀಗಳೆ ಪೋಗಿ ನಾ
ಮುಂ ದಯಾಂಬುಧಿ ವಾರಿಷೇಣ ಕುಮಾರನಂ ನೆಱೆ ನೋಟ್ಪೆನೆಂ
ಬಂದದಿಂದುದಯಾಚಲಾದ್ರಿಯನೇಱಿದಂ ದಿನವಲ್ಲಭಂ ೧೧೬

ಗದ್ಯ॥ ಅಂತಾದಿತ್ಯನುದಯಗಿರಿಗಜಾರೂಢನಪ್ಪುದುಂ ಕುಮಾರಂ ಪ್ರತಿಜ್ಞೆ ತೀರ್ದು ಕೈಯ ನೆತ್ತಿಕೊಳ್ವುದುಂ ಭಯಸ್ಥನಾಗಿ ನೀಂ ಕರಕಮಲಯುಗಳಂಗಳಂ ಮುಗಿದು ೧೧೭

ದಲ್ಲಿ ಬಹಳ ಅಶಾಂತಿಯುಂಟಾಯಿತು. ಆಗ ನೀನು ಸಮಸ್ತ ಜನರಿಂದ ಕೂಡಿಕೊಂಡು ಬಂದು ಯುವರಾಜನನ್ನು ಪೂಜಿಸುವ ನಗರ ದೇವತೆಗಳನ್ನು, ಜಯ ಜಯ ಶಬ್ದದಿಂದ ಆಕಾಶದಲ್ಲಿದ್ದು ಪರವಶತೆ ಹೊಂದಿ ಹೊಗಳುವ ದೇವಸಮೂಹದವರನ್ನು ಕಂಡು ಮನಸ್ಸಿನಲ್ಲಿ ಹರ್ಷಪಟ್ಟು ಸಮ್ಯಕ್ತ್ವ ಚೂಡಾಮಣಿಯ ಪಾದಯುಗಳವನ್ನು ಸಂಪಿಗೆ ಮೊದಲಾದ ಹೂಗಳಿಂದ ಪೂಜಿಸಿ ಸಹಜಕವಿಜನ ಮನೋಹರವಾದ ಉದ್ಯಾನವನ ಕಳಕಂಠ (ಕೋಗಿಲೆ) ನ (ವಾರಿಷೇಣನ) ಧೈರ್ಯವನ್ನು ವರ್ಣಿಸುತ್ತಿದ್ದರು. ೧೧೫. ಆ ವೇಳೆಗೆ ಕತ್ತಲು ಹರಿದು ಸೂರ್ಯೋದಯವಾಯಿತು, ಮಂದರ ಪರ್ವತವನ್ನು ಹೋಲುವಂಥ ಕ್ಷಮಾಗುಣದಿಂದ ಕೂಡಿದವನೂ. ವ್ರತಗಳಲ್ಲಿ ದೃಢಚಿತ್ತವುಳ್ಳವನೂ ದೇವಕೋಟಿಗಳು ಮಹತ್ತರವಾದ ಆನಂದದಿಂದ ಹೊಗಳುತ್ತಿರುವಂಥವನೂ ಆದ ದಯಾಸಮುದ್ರನಾದ ವಾರಿಷೇಣ ಕುಮಾರನನ್ನು ನಾನೂ ಈಗಲೇ ಹೋಗಿ ನೋಡು ತ್ತೇನೆಂಬ ಸಂಭ್ರಮದಿಂದ ಸೂರ್ಯನು ಉದಯಾಚಲದ ಶಿಖರವನ್ನೇರಿದನು. ೧೧೬. ಹಾಗೆ ಸೂರ್ಯನು ಉದಯಗಿರಿಯೆಂಬ ಆನೆಯನ್ನು ಆರೋಹಿಸಲು ಕುಮಾರನು ಪ್ರತಿಜ್ಞೆ ತೀರಿ ಕೈಯನ್ನು ಎತ್ತಿಕೊಂಡನು. ಆಗ ನೀನು ಭಯಪಟ್ಟು ನಿನ್ನ ಎರಡು ಕೈಗಳನ್ನೂ ಮುಗಿದುಕೊಂಡು ೧೧೭. ನಾನು ತಿಳಿಯದೆ ದೊಡ್ಡದಾದ ಅಪಮಾನವನ್ನು ಮಾಡಿದ್ದೆ

ಅನಱಿಯದೆ ಏರಿಪಪ್ಪುದ
ಮಾನಮನೆರಡಿಲ್ಲದಿಂದು ಮಾಡಿದೆನದನ
ಜ್ಞಾನಿಯ ತೆಱದಿಂ ಮನದೊಳ್
ನೀನಿರಿಸದೆ ಬಿಡುವುದಮಳಗುಣಗಣನಿಳಯಾ ೧೧೮

ಗದ್ಯ॥ ಎಂದು ಪೇೞ್ವುದುಂ ವಾರಿಷೇಣ ಕುಮಾರಂ ಕಳಕಳಿಸಿ ನಕ್ಕು ಮುನ್ನಮೆನ್ನ ಮಾಡಿದ ಪಾಪ ಫಲಮೀ ನೆವದಿಂ ಫಲಮನೀಯಲೆಂದು ಬಂದುದಕ್ಕೆ ನೀವೇಗುವಿರಿ ? ಎಚ್ಚಂಗಾಱದಂ ಬಂಗೆ ಇಟ್ಟಂಗಾಱದೆ ಗುಂಡಿಂಗೆ ಪೆಂಡತಿಗಾಱದೆ ತೊಟ್ತಿಂಗೆ ಗವುಂಡಂಗಾಱದೆ ಬಾರಿಕಂಗೆ ಕಳ್ಳಂಗಾಱದೆ ಬಟ್ಟೆವೋಪಂಗೆ ಮಾಱಂಕಕ್ಕಾಱದೆ ಸುಂಕದ ಗೊರವಂಗೆ ಬಂದಿಕಾಱಂಗಾಱದೆ ತಿರಿದುಣ್ಬಂಗೆ ಮನ್ನೆಯಂಗಾಱದೆ ತಳಾಱಂಗೆ ನೆರೆಗಾಱದೆ ಮಗಂಗೆ ಮುನಿವರೆಂಬ ನಾಣ್ನುಡಿ ಯಂತೆ ಕರ್ಮಮಿರ್ದಂತೆ ನಿಮಗೇಕೆ ಮುನಿವಂ ಮುನಿವೊಡೆ ದುಷ್ಕರ್ಮಕ್ಕೆ ಮುನಿವಂ ನೀವೆನ್ನ ಪೆರ್ಚಂ ಬಯಸುವಿರಲ್ಲದೆ ಕೇಡಂ ಬಯಸರಿದೆಲ್ಲಂ ಕರ್ಮರಾಜನ ಪರಿಣತಿಯೆಂದು ನಿಮ್ಮ ಕಟ್ಟುಂ ಕಡಹಮುಂ ಕಳೆವಂದು ಮಹಾವಿಭೂತಿಯಿಂದರಮನೆಗೆ ವಂದು ಕತಿಪಯ ದಿನಮಿರ್ದು ತನ್ನೊಳಿಂತೆಂದು ಬಗೆದಂ ೧೧೯

ಅದರಲ್ಲಿ ಅನುಮಾನವಿಲ್ಲ. ಅಜ್ಞಾನಿಯ ರೀತಿಯಲ್ಲಿ ಅದನ್ನು ನೀನು ಮನಸ್ಸಿನಲ್ಲಿ ಇಟ್ಟು ಕೊಳ್ಳದೆ ಬಿಡಬೇಕು. ನೀನು ಅಮಲ ಗುಣಗಣಕ್ಕೆ ನಿಲಯನೇ ಆಗಿರುವೆ" ೧೧೮ ಎಂದು ಹೇಳುತ್ತಲೂ ವಾರಿಷೇಣ ಕುಮಾರನು ಗಟ್ಟಿಯಾಗಿ ನಕ್ಕು 'ಹಿಂದೆ ನಾನು ಮಾಡಿದ ಪಾಪ ಫಲವು ಈ ನೆವದಿಂದ ಫಲ ಕೊಡಲು ಬಂದಿದೆ. ಇದಕ್ಕೆ ನೀವೇನು ಮಾಡುವಿರಿ ? ಬಾಣಹೊಡೆದವನ ಮೇಲೆ ಸಿಟ್ಟಾಗಲಾರದೆ ಬಾಣದ ಮೇಲೆ ಸಿಟ್ಟಾದರೇನು ಫಲ ? ಹೊಡೆದವನ ಮೇಲೆ ಆಗದೆ ಗುಂಡಿನ ಮೇಲೆ ಸಿಟ್ಟಾದರೆ, ಹೆಂಡತಿಯ ಮೇಲೆ ಸಿಟ್ಟಾಗ ಲಾರದೆ ತೊತ್ತಿನ ಮೇಲೆ, ಗೌಡನನ್ನೆದುರಿಸಲಾರದೆ ತಳವಾರನ ಮೇಲೆ, ಕಳ್ಳನ ಮೇಲೆ ಕೈಲಾಗದೆ ದಾರಿಹೋಕನ ಮೇಲೆ, ಪ್ರತಿಕ್ಷಾಳಗಕ್ಕಾಗದೆ ಸುಂಕದ ಗೊರವನ ಮೇಲೆ ಬಂದಿಕಾರನನ್ನು ಎದುರಿಸಲಾರದೆ ತಿರುಪೆಯುವನ ಮೇಲೆ, ಪಾಳೆಯಗಾರನ ಮೇಲೆ, ಕೈಲಾಗದೆ ತಳವಾರನ ಮೇಲೆ, ನೆರೆಯುವರನ್ನೇನೂ ಮಾಡಲಾರದೆ ಮಗನ ಮೇಲೆ. ಮುನಿದರೆಂಬ ಗಾದೆಯಂತೆ ಕರ್ಮವಿದ್ದ ಹಾಗೆ ನಿಮ್ಮ ಮೇಲೆ ಏಕೆ ಮುನಿಯಲಿ? ಮುನಿ ಯುವುದಾದರೆ ದುಷ್ಕರ್ಮದ ಮೇಲೆ ಮುನಿದುಕೊಳ್ಳಬೇಕು, ನೀವು ನನ್ನ ಆಧಿಕ್ಯ ವನ್ನು ಬಯಸುವವರೇ ಹೊರತು ಕೇಡು ಬಯಸುವವರಲ್ಲ. ಇದೆಲ್ಲವೂ ಕರ್ಮರಾಜನ ಪಾಂಡಿತ್ಯ"ವೆಂದು ಹೇಳಿ ನಿಮ್ಮ ಕಟ್ಟುಕಟ್ಟಲೆಗಳನ್ನು ತೆಗೆಯುವಾಗ ಮಹಾವೈಭವದಿಂದ ಅರಮನೆಗೆ ಬಂದು ಕೆಲವುದಿನ ಇದ್ದು ತನ್ನಲ್ಲಿ ಹೀಗೆಂದು ಯೋಚಿಸಿದನು. ೧೧೯. ಹಿಂದೆ

ಮುನ್ನನೇಕ ಭವಂಗಳೊಳ್ಗತಿಗೆಟ್ಟು ಪಾಪದ ಬಣ್ಪಿನಿಂ
ದೆನ್ನ ನಂದನರೆನ್ನ ಪೆಂಡತಿಯೆನ್ನ ಬಾಂಧವರೆನ್ನ ಮೈ
ಯೆನ್ನದೋರ್ವಲಮೆಂದು ಧರ್ಮದ ಬಟ್ಟೆಗಾಣದೆ ಮೋಹದಿಂ
ದಿನ್ನೆಗಂ ಭವವಾರ್ಧಿಯೊಳ್ ತಿರಿದೆಂ ಮನಂ ಮುರಿವನ್ನೆಗಂ ೧೨೦

ಎಲ್ಲಿಯುಂ ಜಿನಧರ್ಮಮಂ ಜಿನವಾಕ್ಯಮಂ ಜಿನತತ್ವಮಂ
ಕಲ್ಲದೊಲ್ಲದೆ ಪೊರ್ದದೇಳಿಸಿ ಬೈದು ಱೋಡಿಸಿ ಪಾಪದಿಂ
ದೆಲ್ಲಿಯುಂ ನರಕಾದಿ ದುಃಖಮನುಂಡು ಕಂಡು ಬೞಲ್ದು ಬಂ
ದಿಲ್ಲಿ ತೊಟ್ಟನೆ ಪುಣ್ಯದಿಂ ನೆಱೆ ಪೊರ್ದಿದೆಂ ಜಿನಧರ್ಮಮಂ ೧೨೧

ಗದ್ಯ॥ ಇನ್ನಿದನೇಳಿಸಿ ರಾಜ್ಯಾಭಿಲಾಷೆಯಿಂದಿರ್ದೆನಪ್ಪೊಡೆ ಮದುವೆಯ ರಾಗದಂತೆ ಸುಗ್ಗಿಯುಯ್ಯಲಂತೆ ಕಬ್ಬಿನ ಗಾಣದಂತೆ ಪಾಡುವ ರಾಗದಂತೆ ಬೇಳಂಬದ ಪರ್ವದಂತೆ ಜವ್ವನೆಯ ಮೊಲೆಯಂತೆ ಬೇಂಟದ ಕೊಂಡಾಟದಂತೆ ಮಧ್ಯಾಹ್ನದರ್ಕನಂತೆ ಬಿರ್ದಿನಿಕ್ಕೆಯಂತೆ ಮದವಳಿಗೆಯ ಶೋಭೆಯಂತೆ ಮಧುಮಾಸದ ಮರದಂತೆ ಬೆಳೆದ ಕೆಯ್ಯ ರಂಜನೆಯಂತೆ ತಂಬುಲದ ರುಚಿಯಂತೆ ತಲೆಯ ಕಪ್ಪಿನಂತೆ ಕೇರಚಿತ್ರದಂತೆ ಪೂವಿನ ಬಣ್ಣದಂತೆ ತಳಿಪದ ಚೆಲ್ವಿನಂತೆ ಮರುಳ ಮನ್ನಣೆಯಂತೆ ಬಾಹಿನ ಡೊಳ್ಳಿನಂತೆ ಸೂಳೆಯ ಕರೆಹಗಂತೆ ಕುಂಟಣಿಯ ಕೂರ್ಮೆಯಂತೆ ಪಶುವಿನ ಕರೆಹದಂತೆ ದೀವಳಿಗೆಯೂಟದಂತೆ ಬೞತಿನ ಪೊಗೞ್ತೆಯಂತೆ ಬೆಳ್ದಿಂಗಳೊಪ್ಪದಂತೆ ತವರ್ಮನೆ

ಅನೇಕ ಜನ್ಮಗಳಲ್ಲಿ ಗತಿಗೆಟ್ಟು, ಪಾಪದ ಭಾರದಿಂದ ನನ್ನ ಮಕ್ಕಳು, ನನ್ನ ಹೆಂಡತಿ, ನನ್ನ ಬಾಂಧವರು, ನನ್ನ ದೇಹ, ನನ್ನ ಬಾಹುಬಲ, ಎಂದು ಧರ್ಮದ ದಾರಿಯನ್ನು ಕಾಣದೆ ಮೋಹದಿಂದ ಇಲ್ಲಿಯತನಕ ಸಂಸಾರ ಸಮುದ್ರದಲ್ಲಿ ತಿರುಗಿದೆ : ಮನಸ್ಸು ಮುರಿಯುವ ತನಕ ಅಲೆದೆ. ೧೨೦. ಎಲ್ಲಿಯೂ ನಾನು ಜಿನಧರ್ಮ, ಜಿನವಾಕ್ಯ, ಜಿನತತ್ವ ಇವುಗಳನ್ನು ಕಲಿಯಲೊಲ್ಲದೆ, ಸೇರದೆ, ಅಲಕ್ಷ್ಯಮಾಡಿ ಬೈದು ಹಾಸ್ಯಮಾಡಿ ಪಾಪದಿಂದ ನರಕಾದಿ ದುಃಖವನ್ನು ಅನುಭವಿಸಿ ಬಳಲಿ ಬಂದು ಇಲ್ಲಿ ಹಟಾತ್ತಾಗಿ ಪುಣ್ಯವಶದಿಂದ ಜಿನಧರ್ಮವನ್ನು ಸೇರಿದೆ. ೧೨೧. ಇನ್ನು ಇದನ್ನು ತಿರಸ್ಕರಿಸಿ ರಾಜ್ಯದ ಆಸೆಯಿಂದ ಇರುವೆನಾದರೆ ಮದುವೆಯ ಸಂತೋಷ, ಸುಗ್ಗಿಯ ಉಯ್ಯಾಲೆ, ಕಬ್ಬಿನಗಾಣ, ಹಾಡುವ ರಾಗ, ಆಸೆಪಟ್ಟ ಹಬ್ಬ, ಯುವತಿಯ ಮೊಲೆ, ಪ್ರೇಮದ ಹೊಗಳಿಕೆ, ಮಧ್ಯಾಹ್ನದ ಸೂರ್ಯ, ಔತಣದ ಸ್ಥಾನ, ಮದವಣಗಿತ್ತಿಯ ಶೋಭೆ, ವಸಂತಮಾಸದ ಮರ, ಬೆಳೆದ ಗದ್ದೆಯ ರಮಣೀಯತೆ, ತಾಂಬೂಲದ ರುಚಿ, ತಲೆಯ ಕಪ್ಪುಬಣ್ಣ, ಗೋಡೆಯ ಚಿತ್ರ, ಹೂವಿನ ಬಣ್ಣ, ಒಳಿದ ಬಣ್ಣದ ಚೆಲುವು, ಹುಚ್ಚನ ಮನ್ನಣೆ, ಹೊರಗಿನ ಡೊಳ್ಳು, ಸೂಳೆಯ ಆಹ್ವಾನ, ಕುಂಟಣಿಗಿತ್ತಿಯ ಪ್ರೀತಿ, ದನದ ಹಾಲು ಕರೆಯುವಿಕೆ, ದೀಪಾವಳಿಯ ಊಟ, ಮೋಸಗಾರನ ಹೊಗಳಿಕೆ, ಬೆಳುದಿಂಗಳ ಕಾಂತಿ, ತವರುಮನೆಯವಾಸ, ಸೌತೆಯತೋಟ

ಯಿರವಿನಂತೆ ಸೌಂತೆಯುತೋಂಟದಂತೆ ಕಡೆಯೊಳ್ ಪೇಸುಪಥಮುಮಶೋಭೆಯುಮಾಗದೆ ಪೋಗದದು ಕಾರಣದಿಂ ರಾಜ್ಯಾಂಗನೆಯ ಮೋಹದೀದುದಾಸೀನಂ ಮಾಡಿದೆನಪ್ಪೊಡೆ ನಾಯ್ಬಾಲಮಂ ಪಿಡಿದು ತೊಱೆಯುಂ ಪಾಯ್ವ ಜಡನಂ ಪೋಲ್ವೆನೆನಗೀ ಶಾಶ್ವತಮಪ್ಪ ಸುಖಮನೀವ ಜಿನಪಾದಮನೆ ಬಲ್ವಿಡಿವೆನೆಂಬ ಬಗೆಯಿಂ ತಂದು ಚೇಳಿನಿಮಹಾದೇವಿಯುನೊಡಂಬಡಿಸಿ ಪೋಗಿ ಪುಷ್ಪಗಿರಿಯೆಂಬ ಪರ್ವತದೊಳಿರ್ದ ಸುರದೇವರೆಂಬಾಚಾರ್ಯರಲ್ಲಿ ಜಿನದೀಕ್ಷೆಯಂ ಕೈಕೊಂಡು ಉಗ್ರೋಗ್ರ ತಪದೊಳ್ ನೆಗಟುತ್ತುಮಿರೆ ೧೨೨

ಆ ವಾರಿಷೇಣಮುನಿಗೆ ಮ
ಹಾವಿಭವದ ಜಂಘಚಾರಣತ್ವಂ ಪುಟ್ಟಿ
ತ್ತೇವೇಳ್ವುದೊ ಜಗದೊಳ್ಜಿನ
ಸೇವನೆಯಿಂದಿರ್ಪವಂಗಿದಾವುದು ಗಹನಂ ೧೨೩

ಗದ್ಯ॥ ಅಂತು ಜಂಘಚಾರಣ ಋದ್ಧಿಪ್ರಾಪ್ತನಾಗಿ ದ್ವಾದಶತಪೋನುಷ್ಠಾನನಿರತನುಂ ತ್ರಿದಂಡರಹಿತನುಂ ತ್ರಿಶಲ್ಯದೂರನುಂ ತ್ರಯೋದಶ ವಿಧಚಾರಿತ್ರಸಂಪನ್ನನುಂ ಅಷ್ಟಾವಿಂಶತಿ ಮೂಲಗುಣಯುಕ್ತನುಂ ದಶಧರ್ಮಸಮೇತನುಂ ಚತುಃಕಷಾಯಾಂತಕನುಂ ರಾಗದ್ವೇಷ ಮೋಹವಿವರ್ಜಿತನುಮಾಗಿ ತಪದೊಳೇಕಾದ್ಯುತ್ತರಂ ನೆಗಟುತ್ತುಮಿರ್ದೊಂದು ದಿವಸಂ ಭಾಂಡಿಲನೆಂಬ ಪುರೋಹಿತಂ

—ಇವುಗಳಂತೆ ಕೊನೆಯಲ್ಲಿ ಅಸಹ್ಯದ ದಾರಿಯೂ ಅಶೋಭೆಯೂ ಆಗದೆ ಹೋಗುವುದಿಲ್ಲ. ಆದಕಾರಣ ರಾಜ್ಯಾಂಗನೆಯ ಮೋಹದಿಂದ ಉದಾಸೀನ ಮಾಡಿದೆನಾದರೆ ನಾಯಿಯ ಬಾಲವನ್ನು ಹಿಡಿದು ತೊರೆಯನ್ನು ದಾಟುವ ದಡ್ಡನನ್ನು ಹೋಲುವೆನು. ನನಗೆ ಶಾಶ್ವತಸುಖವನ್ನು ಕೊಡುವ ಈ ಜಿನಪಾದವನ್ನೇ ಬಲವಾಗಿ ಹಿಡಿಯುತ್ತೇನೆ, ಎಂಬ ಸಂಕಲ್ಪ ಮಾಡಿ ಚೇಳಿನಿಮಹಾದೇವಿಯನ್ನು ಒಪ್ಪಿಸಿ ಹೋಗಿ ಪುಷ್ಪಗಿರಿಯೆಂಬ ಪರ್ವತದ ಮೇಲೆ ಇದ್ದ. ಸುರದೇವರೆಂಬ ಆಚಾರ್ಯರಲ್ಲಿ ಜಿನದೀಕ್ಷೆಯನ್ನು ಸ್ವೀಕರಿಸಿ ಉಗ್ರವಾದ ತಪಸ್ಸನ್ನು ಮಾಡುತ್ತಿದ್ದನು ೧೨೨. ಆ ವಾರಿಷೇಣ ಮುನಿಗೆ ಮಹಾ ವೈಭವದ ಜಂಘಚಾರಣತ್ವವು ಹುಟ್ಟಿತು. ಏನು ಹೇಳುವುದು ! ಜಿನಸೇವೆಯಲ್ಲಿರುವವನಿಗೆ. ಯಾವುದು ತಾನೆ ಗಹನ ? ೧೨೩. ಹಾಗೆ ಜಂಘಚಾರಣವೆಂಬ ಸಿದ್ಧಿಯು ಲಭಿಸಿ ಹನ್ನೆರಡು ತಪಸ್ಸುಗಳ ಅನುಷ್ಠಾನವುಳ್ಳನೂ ತ್ರಿದಂಡವಿಲ್ಲದವನೂ ತ್ರಿಶಲ್ಯದೂರನೂ ಹದಿಮೂರು ಬಗೆಯ ಚಾರಿತ್ರ್ಯದಿಂದ ಕೂಡಿದವನೂ ಇಪ್ಪತ್ತೆಂಟು ಮೂಲ ಗುಣಗಳಿಂದ ಕೂಡಿದವನೂ ದಶಧರ್ಮಗಳಿಂದ ಕೂಡಿದವನೂ ನಾಲ್ಕು ಕಷಾಯಗಳಿಂದ ದೂರನೂ ಪ್ರೀತಿ ದ್ವೇಷ ಮೋಹಗಳನ್ನು ಬಿಟ್ಟವನೂ ಆಗಿ ತಪಸ್ಸಿನಲ್ಲಿ ಏಕಾದ್ಯುತ್ತರ? ಅತಿಶಯವಾಗಿ ನಡೆಯುತ್ತಿದ್ದನು. ಒಂದು ದಿನ ಭಾಂಡಿಲನೆಂಬ ಪುರೋಹಿತನಿಗೂ

ಗಮಾತನ ಪೆಂಡತಿ ಪುಷ್ಪವತಿಯೆಂಬ ಪಾರ್ವಿತಿಗಂ ಪುಟ್ಟಿದ ಮಗಂ ವ್ಯಾಕರಣಾದಿ ಶಾಸ್ತ್ರಂಗಳೊಳ್ ಕುಶಲನಪ್ಪ ಪುಷ್ಪದಾಡನೆಂಬ ಬಾಳಸಖಾಯಂ ಸುದಂತಿಯೆಂಬ ಬ್ರಾಹ್ಮಣಿಯೊಳ್ ಮದುವೆಯಾಗಿರ್ದನೆಂಬುದಂ ಕೇಳ್ದು ತನ್ನೊಳಿಂತೆಂದಂ ೧೨೪

ಕುರುಡರ್ಕುಳಿಯೊಳ್ ಕೆಡೆದೊಡೆ
ಕರುಣಿಸಿ ತೆಗೆವವನೆ ನಂಟನಘವಶದಿಂದಂ
ನರಕಗತಿಗಿೞಿವ ಜೀವೋ
ತ್ಕರಮುಮನೊಳ್ಗತಿಗೆ ತರ್ಪೊಡಾತನೆ ಕೆಳೆಯಂ ೧೨೫

ಅರಿದೆನಿಪಘವಶದಿಂದಂ
ತಿರಿವಮನುಷ್ಯರನುಪಾಯದಿಂ ಸದ್ಧರ್ಮ
ಕ್ಕುರುಮುದದಿಂ ತರ್ಪ ಮಹಾ
ಪುರುಷನೆ ಕಲ್ಯಾಣಮಿತ್ರನವನೀತಳದೊಳ್ ೧೨೬

ಗದ್ಯ॥ ಎಂದು ಭಾವಿಸಿ ಪುಷ್ಪದಾಡನಂ ಚತುರ್ಗತಿ ಸಂಸಾರದಿಂ ಪೊಱಮಡಿಸಿ ಪಂಚಮಗತಿಯನೆಯ್ದಿಸುವೆನೆಂಬ ಸಮುತ್ಕಟ್ಟೇದಾತನ ಮನೆಗೆವಂದು ಪೊಸಮದವಳಿಗೆಯ ಕೆಲದೊಳಿರ್ದ ಪುಷ್ಪದಾಡನಂ ಕಂಡು ಕಯ್ಯಂ ಪಿಡಿದೊಡಗೊಂಡು ಬಂದು ತಮ್ಮ ಗುರುಗಳ್ಗೆ ಪೊಡೆಮಡಿಸಿ ನಿಮ್ಮಡಿ ಚಿತ್ತೈಸಿ ಕೇಳಿಮೀತಂ ಸಂಸಾರಭೀರುವಾಗಿ ಜಿನದೀಕ್ಷೆಯಂ ಬಯಸಿ ಬಂದನೀತಂಗೆ ದೀಕ್ಷೆಯಂ ಪ್ರಸಾದಂಗೆಯ್ಯಿಮೆಂಬುದುಂ ೧೨೭

ಆತನ ಹೆಂಡತಿ ಪುಷ್ಪವತಿಯೆಂಬ ಬ್ರಾಹ್ಮಣ ಸ್ತ್ರೀಗೂ ಹುಟ್ಟಿದ ಮಗ, ವ್ಯಾಕರಣ ಮೊದಲಾದ ಶಾಸ್ತ್ರಗಳಲ್ಲಿ ಕುಶಲನಾದ ಪುಷ್ಪದಾಡನೆಂಬ ತನ್ನ ಬಾಲ್ಯ ಸ್ನೇಹಿತನು ಸುದಂತಿಯೆಂಬ ಬ್ರಾಹ್ಮಣ ಕನ್ಯೆಯನ್ನು ಮದುವೆಯಾದನೆಂಬುವನ್ನು ಕೇಳಿದನು. ಆಗ ಅವನು ಹೀಗೆ ಯೋಚಿಸಿದನು : ೧೨೪. ಕುರುಡರು ಗುಳಿಯಲ್ಲಿ ಬಿದ್ದರೆ ಕರುಣೆಯಿಂದ ತೆಗೆಯುವವನೇ ನಂಟ. ಪಾಪವಶದಿಂದ ನರಕಗತಿಗೆ ಇಳಿಯುವ ಜೀವಸಮೂಹವನ್ನು ಒಳ್ಳೆಯ ಗತಿಗೆ ತರುವವನೇ ಸ್ನೇಹಿತ. ೧೨೫. ಅಸಾಧ್ಯವಾದ ಪಾಪವಶದಿಂದ ಸಂಸಾರದಲ್ಲಿ ಅಲೆಯುವ ಮನುಷ್ಯರನ್ನು ಉಪಾಯದಿಂದ ಶ್ರೇಷ್ಠ ಧರ್ಮಕ್ಕೆ ಹೆಚ್ಚಿನ ಸಂತೋಷದಿಂದ ತರುವ ಮಹಾತ್ಮನೇ ಲೋಕದಲ್ಲಿ ಕಲ್ಯಾಣಮಿತ್ರ ೧೨೬, ಹೀಗೆ ಚಿಂತಿಸಿ ಪುಷ್ಪದಾಡನನ್ನು ನಾಲ್ಕು ಗತಿಗಳ ಸಂಸಾರದಿಂದ ಹೊರಡಿಸಿ ಐದನೆಯ ಗತಿ(ಮೋಕ್ಷ)ಯನ್ನು ಸೇರಿಸುವೆನೆಂಬ ಯೋಚನೆಯಿಂದ ಆತನ ಮನೆಗೆ ಬಂದು ಹೊಸ ಮದುವಣಗಿತ್ತಿಯ ಪಕ್ಕದಲ್ಲಿದ್ದ ಪುಷ್ಪಡಾಡನನ್ನು ಕಂಡು ಕೈಹಿಡಿದು ಕರೆದುಕೊಂಡು ಬಂದು ತಮ್ಮ ಗುರುಗಳಿಗೆ ನಮಸ್ಕಾರ ಮಾಡಿಸಿ "ನಿಮ್ಮ ಪಾದ, ದಯವಿಟ್ಟು ಕೇಳಿ. ಈತನು ಸಂಸಾರಕ್ಕೆ ಹೆದರಿ ಜಿನದೀಕ್ಷೆಗೆ ಆಸೆಪಟ್ಟು ಬಂದಿದ್ದಾನೆ. ಈತನಿಗೆ ದೀಕ್ಷೆಯನ್ನು ಅನುಗ್ರಹಿಸಿ" ಎಂದನು. ೧೨೭. ಆ 'ಮುನಿಶ್ರೇಷ್ಠನು ಆತನಿಗೆ ಕೃಪೆಯಿಂದ ಜಿನದೀಕ್ಷೆಯನ್ನು

ಜಿನದೀಕ್ಷೆಯನಾತಂಗಾ
ಮುನಿಪಂ ಕಾರುಣ್ಯದಿಂದೆ ಕುಡೆ ಕೊಂಡಂ ನೆ
ಟ್ಟನೆ ವಾರಿಷೇಣ ಮುನಿಪಂ
ಮುನಿದೊಡೆ ಪೊಲ್ಲೆಂದು ಮನದೊಳುಳ್ಳಳ್ಕುತ್ತುಂ ೧೨೮

ಗದ್ಯ॥ ಅಂತು ಮನವಲ್ಲದಮನದೊಳ್ ಜಿನರೂಪಧಾರಿಯಾಗಿ ತನ್ನ ಮದವಳಿಗೆಯ ಮೇಲೆ ಚಿತ್ತವಿಟ್ಟು ಬನವನಗಲ್ದಾನೆಯಂತೆ ದೂರಿಸುತ್ತಮಿರ್ಪುದುಂ ವಾರಿಷೇಣಮುನಿ ಪುಷ್ಪದಾಡನ ಮನಮನಱಿದು ತನ್ನೊಳಿಂತೆಂದಂ ೧೨೯

ಕುಡಿಯಲೊಲ್ಲದು ಪಾಲನೆಂದೊಡೆ ಕೂಸನೊಲ್ಲದೆ ನೊಂದು ತಾಯ್
ಬಿಡುವಳೇ ಮುನಿಸಿಂ ಧರಿತ್ರಿಯೊಳಂತೆ ನೋಡ ವಿವೇಕಿಯುಂ
ಜಡರನುಕ್ಕಿವರಂ ಮಹಾದುರಿತಾನ್ವಿತರ್ಕಳನೊಳ್ಪಿತಂ
ನುಡಿದು ಬೇಸಱದೆಯ್ದೆ ತಿರ್ದುಗು ಧರ್ಮಮಂ ತಿಳಿವನ್ನೆಗಂ ೧೩೦

ಗದ್ಯ॥ ಅದು ಕಾರಣದಿಂದಘವಿಕಾರದಿಂ ನಿರ್ಬುದ್ಧಿಯಪ್ಪೀತನುಮನೇನೆಂದೇಳಿಸಿ ಬಿಡದೆ ಸದ್ಧರ್ಮದೊಳ್ ದೃಢನಪ್ಪಂತು ಜಿನಾಗಮೋಕ್ತಿಯನಱಿಯೆ ತಿಳಿಪಿ ನಿರಂತರ ಸುಖಮನೀವ ತಪದೊಳ್ ಪತ್ತಿಸುವೆನೆಂದು ಪುಷ್ಪದಾಡಂಗಿಂತೆಂದಂ ೧೩೧

ಕೊಡಲು, ವಾರಿಷೇಣಮುನಿ ಮುನಿಸಿಕೊಂಡರೆ ಕೆಟ್ಟದೆಂದು ಮನಸ್ಸಿನಲ್ಲಿ ಒಳಗೇ ಅಂಜುತ್ತ ಪುಷ್ಪದಾಡನು ದೀಕ್ಷೆಯನ್ನು ಸ್ವೀಕರಿಸಿದನು ೧೨೮. ಹಾಗೆ ಮನಸ್ಸಿಲ್ಲದ ಮನದಲ್ಲಿ ಜಿನ ರೂಪವನ್ನು ಧರಿಸಿ ತನ್ನ ಮದುವಣಗಿತ್ತಿಯ ಮೇಲೆ ಮನಸ್ಸಿಟ್ಟು ಕಾಡನ್ನು ಬಿಟ್ಟು ಬಂದ ಆನೆಯಂತೆ ದುಃಖಿಸುತ್ತಿರಲಾಗಿ ವಾರಿಷೇಣ ಮುನಿಯು ಪುಷ್ಪ ದಾಡನ ಮನಸ್ಸನ್ನು ತಿಳಿದು ತನ್ನಲ್ಲಿಯೇ ಹೀಗೆ ಯೋಚಿಸಿದನು. ೧೨೯. ಕೂಸು ಹಾಲನ್ನು ಕುಡಿಯಲು ಇಷ್ಟ ಪಡುವುದಿಲ್ಲವೆಂದು ತಾಯಿ ಸಿಟ್ಟಿನಿಂದ ಬಿಟ್ಟುಬಿಡುತ್ತಾ ಳೆಯೆ ? ಹಾಗೆಯೇ ನೋಡಿದರೆ ಲೋಕದಲ್ಲಿ ವಿವೇಕಿಯು ದಡ್ಡರನ್ನೂ ಕಪಟಿಗಳನ್ನೂ ಮಹಾಪಾಪಗ್ರಸ್ತರನ್ನೂ ಒಳ್ಳೆಯದನ್ನು ಹೇಳಿ ಬೇಸರಪಡದೆ ಅವರು ಧರ್ಮವನ್ನು ತಿಳಿದುಕೊಳ್ಳುವತನಕ ತಿದ್ದಬೇಕು. ೧೩೦. ಆದಕಾರಣ ಪಾಪವಿಕಾರದಿಂದ ಬುದ್ಧಿಹೀನ ನಾದ ಇವನನ್ನು ಅಸಡ್ಡೆಮಾಡಿ ಬಿಟ್ಟುಬಿಡದೆ ಸದ್ಧರ್ಮದಲ್ಲಿ ದೃಢನಾಗಿ ನಿಲ್ಲುವಂತೆ ಜಿನಾಗಮದ ಉಕ್ತಿಗಳನ್ನು ತಿಳಿಯ ಹೇಳಿ ನಿರಂತರ ಸೌಖ್ಯವನ್ನು ಕೊಡುವ ತಪಸ್ಸಿನಲ್ಲಿ ತೊಡಗಿಸುತ್ತೇನೆ, ಎಂದು ಯೋಚಿಸಿ ಪುಷ್ಪದಾಡನಿಗೆ ಹೀಗೆ ಹೇಳಿದನು : ೧೩೧. ಚಕ್ರ

ಸಿರಿಯಿಲ್ಲಾ ಬೆಸಕೆಯ್ವ ನಾಡು ಕಿಱಿದೇಂ ತಮ್ಮಿಂದಮುರ್ವೀಶ್ವರರ್
ಪಿರಿಯರ್ ಮೇಣೊಳರೇ ಮಹಾಬಲಯುತರ್ ಭೋಗಾನ್ವಿತರ್ ಧಾರಿಣೀ
ಶ್ವರನಾಮಕ್ರಮರಪ್ಪ ಚಕ್ರಧರರುಂ ರಾಜ್ಯಂಗಳಂ ಬಿಟ್ಟು ನಿ
ಷ್ಠುರಮಪ್ಪುಗ್ರತಪಕ್ಕೆ ತಂದರೊಡಲಂ ಸಾಮಾನ್ಯಮೇ ಕೇಳ್ತಪಂ ೧೩೨

ಭರತಂ ಷಟ್ಖಂಡವಸುಂ
ಧರೆಯುಮನೊರ್ಮೊದಲೆ ಬಿಟ್ಟು ಜಿನಸದ್ರೂಪಂ
ಧರಿಯಿಸಿದನೆಂದೊಡುೞಿದರ
ಸಿರಿಯುಂ ಸಂಪತ್ತುಮಳವುಂ ಬಳವುಂ ಪಿರಿದೇ ೧೩೩

ಸ್ಮರರೂಪಂ ನೃಪವಂದಿತಂ ಸಕಳ ಷಟ್ಖಂಡಾವನೀವಲ್ಲಭಂ
ಸ್ಥಿರಚಿತ್ತಂ ವಿಭು ಚಕ್ರವರ್ತಿತಿಳಕಂ ಶಾಂತೀಶನಂತಪ್ಪ ಗು
ಡರುಮಿಂ ಸಂಸೃತಿಗಳ್ಕಿ ಸುಗತಿಶ್ರೀಕಾಂತೆಯೊಳ್ಕೂಡಲಂ
ದರಿದಪ್ಪುಗ್ರ ತಪಕ್ಕೆ ತಂದರೊಡಲಂ ಸಾಮಾನ್ಯಮೇ ಪೇೞ್ತಪಂ ೧೩೪

ಬೇಸಱದಲಸದೆ ಕುದಿಯದೆ
ಸಾಸವೆಯಂ ಕುಡಿದರಂತೆ ಮಱುಗದೆ ತಪದೊಳ್
ಸಾಸಿಗನಾಗಿರ್ದು ಗುಣಾ
ಭ್ಯಾಸಂ ಮಾಳ್ಪಂಗೆ ತಡೆಯಲಱಿಯದು ಮೋಕ್ಷಂ ೧೩೫

ವರ್ತಿಗಳಾಗಿದ್ದ ರಾಜಾಧಿರಾಜರನೇಕರು ರಾಜ್ಯಗಳನ್ನು ಬಿಟ್ಟು ಕ್ರೂರವಾದ ತಪಸ್ಸಿಗೆ ತಮ್ಮ ದೇಹಗಳನ್ನು ಗುರಿಮಾಡಿದರಲ್ಲಾ! ಅವರಿಗೆ ಐಶ್ವರ್ಯವಿರಲಿಲ್ಲವೆ, ವಿಧೇಯ ವಾಗಿದ್ದ ರಾಜ್ಯ ಚಿಕ್ಕದಾಗಿತ್ತೆ ? ಅವರಿಗಿಂತ ದೊಡ್ಡವರಾದ ಬೇರೆ ರಾಜರಿದ್ದರೇ ? ಮಹಾ ಬಲಯುತರೂ ಭೋಗಪರರೂ ಆದ ಅವರೂ ತಪಸ್ಸು ಕೈಕೊಂಡರೆಂಬಾಗ ತಪಸ್ಸು ಸಾಮಾನ್ಯವೆ? ೧೩೨ ಕೇಳು, ಭರತನು ಷಟ್ಖಂಡ ಭೂಮಂಡಲವನ್ನೂ ಒಂದೇ ಸಲಬಿಟ್ಟು ಜಿನರೂಪವನ್ನು ಧರಿಸಿದನೆಂದರೆ ಉಳಿದವರ ಸಿರಿಯೂ ಸಂಪತ್ತೂ ಸಾಮರ್ಥ್ಯವೂ ಶಕ್ತಿ ಯೂ ದೊಡ್ಡವೆ? ೧೩೩ ಮನ್ಮಥನ ರೂಪವುಳ್ಳವ, ರಾಜವಂದ್ಯ, ಸಮಸ್ತವಾದ ಷಟ್ಖಂಡ ಭೂಮಂಡಲದ ದೊರೆ, ಸ್ಥಿರಚಿತ್ತನು, ಚಕ್ರವರ್ತಿ, ಶ್ರೇಷ್ಠ, ಇಂಥಾ ಶಾಂತೀಶನಂಥ ಶೂರರೂ ಸಂಸಾರಕ್ಕೆ ಅಂಜಿ ಸದ್ಗತಿಯೆಂಬ ಲಕ್ಷ್ಮಿಯೊಡನೆ ಸೇರಬಯಸಿ ಅಸದಳವಾದ ಕ್ರೂರ ತಪಸ್ಸಿಗೆ ದೇಹವನ್ನು ಒಡ್ಡಿದರೆಂದರೆ ತಪಸ್ಸೇನು ಸಾಮಾನ್ಯವೆ ? ೧೩೪. ಬೇಸರ ಪಡದೆ, ಸೋಮಾರಿತನವಿಲ್ಲದೆ, ಮರುಗದೆ, ಸಾಸವೆಯನ್ನು ಅರೆದು ಕುಡಿದವರ ಹಾಗೆ ಸಂಕಟಪಡದೆ ತಪಸ್ಸಿನಲ್ಲಿ ಸಾಹಸಪರನಾಗಿದ್ದು ಗುಣಗಳನ್ನು ಅಭ್ಯಾಸ ಮಾಡುವವನಿಗೆ ಮೋಕ್ಷ ಲಭಿಸುವುದು ತಡವಾಗುವುದಿಲ್ಲ. ೧೩೫. ಹರಿಗೋಲಿನ ಹನ್ನೆರಡು ಕೋಲು

ಗದ್ಯ॥ ಪಱಗೋಲ ಪನ್ನಿರ್ಕೋಲಿಂದಂ ದೋಣಿಯೊರ್ಕೋಲೆ ಲೇಸೆಂಬಂತೆ ಮನುಷ್ಯ ಲೋಕದೊಳಪ್ಪ ಶತಸಹಸ್ರ ಲಕ್ಷ ಕಾಲ ಭವಂಗಳೊಳಾದ ಸುಖಮೆಲ್ಲಂ ಸ್ವರ್ಗದೊಳಾದ ವಾಹನ ದೇವ ನೊಂದು ಗಳಿಗೆಯ ಸುಖಮಂ ಪೋಲವೆಂದೊಡೆ ಉತ್ತಮಮಪ್ಪ ಜಿನರೂಪಿಂದೆ ಸಂತತಮಪ್ಪ ಸುಖಂ ದೊರೆಕೊಳ್ಗುಮದಕ್ಕಲಸುವಾತನೆ ಗಾವಿಲಂ ೧೩೬

ತಪಮನೆ ಮಾೞ್ಪುದು ಬೆರ್ಚದೆ
ತಪದಿಂದ ಸಕಲ ರಾಜ್ಯಮುಂ ಕೈಸಾರ್ಗುಂ
ತಪದಿಂ ನಿರ್ವೃತಿಯಕ್ಕುಂ
ತಪದಿಂ ಪರಿಹರಿಸುಗುಂ ಸಮಸ್ತಾಘೌಘಂ ೧೩೭

ಗದ್ಯ॥ ದಿವ್ಯಾಹಾರಮುಮಂ ಕೂರ್ಪಪೆಂಡತಿಯುಮಂ ಸುಗಂಧದ್ರವ್ಯಂಗಳುಮಂ ಪೆಱರ ಮೇಲೆ ಬಿಟ್ಟೆನಗಾಗೆ ನೀವುಣ್ಬುದು ನೀವನುಭವಿಸುವುದು ನೀವುಪಭೋಗಿಸುವುದೆಂಬನುಂ ಧರ್ಮಮುಮಂ ದಾನಮುಮನೋದುಮಂ ತಪಮುಮಂ ತಾನಲಸಿ ಪೆಱರಿಂ ಮಾಡಿಸುವನುಂ ಫಲಪ್ರಾಪ್ತಿಯನೆಯ್ದಲಾಱಂ ೧೩೮

ಒಡಲಪ್ಪೊಡಶುಚಿ ನಿಲ್ಲದು
ಪಡಿಕೆ ಕರಂ ಜಂತಿನಾಗರಂ ಪೆರ್ವೇಲಿ
ಪೆಡೆ ಕ್ರಿಮಿಯ ರಾಶಿ ಮೂತ್ರದ
ಮಡಕೆಯದಂ ನಂಬಿ ಚಪಳರೇಕೆಯೊ ಕಿಡುವರ್ ೧೩೯

ಗಳಿಗಿಂತ ದೋಣಿಯ ಒಂದು ಕೋಲೇ ವಾಸಿಯೆಂಬಂತೆ ಮನುಷ್ಯಲೋಕದಲ್ಲಿ ಆಗುವ ನೂರು ಸಾವಿರ ಲಕ್ಷ ಕಾಲ, ಜನ್ಮಗಳಲ್ಲಿ ಲಭಿಸುವ ಸುಖವೆಲ್ಲವೂ ಸ್ವರ್ಗದಲ್ಲಿ ಇರುವ ವಾಹನ ದೇವನ ಒಂದು ಗಳಿಗೆಯ ಸುಖವನ್ನು ಹೋಲದೆಂದು ಹೇಳಿದರೆ ಉತ್ತಮ ವಾದ ಜಿನರೂಪದಿಂದ ಸಂತತವಾದ ಸುಖವು ಲಭಿಸುತ್ತದೆ. ಅದಕ್ಕೆ ಹಿಂಜರಿಯುವ ವನೇ ದಡ್ಡ. ೧೩೬. ಭಯಪಡದೆ ತಪಸ್ಸನ್ನೇ ಮಾಡಬೇಕು. ಆದರಿಂದ ಸಕಲ ರಾಜ್ಯವೂ ಕೈಸೇರುವುದು. ತಪಸ್ಸಿನಿಂದ ಮೋಕ್ಷವಾಗುವುದು, ತಪಸ್ಸಿನಿಂದ ಎಲ್ಲ ಪಾಪಗಳೂ ನಾಶಹೊಂದುವುವು. ೧೩೭. ದಿವ್ಯಾಹಾರವನ್ನೂ, ಪ್ರೀತಿಸುವ ಹೆಂಡತಿ ಯನ್ನೂ, ಸುಗಂಧ ದ್ರವ್ಯಗಳನ್ನೂ, ಇತರರಿಗೆ ಬಿಟ್ಟುಕೊಟ್ಟು "ನನಗಾಗಿ ನೀವು ಊಟ ಮಾಡಿ, ನೀವು ಅನುಭವಿಸಿ. ಉಪಭೋಗಿಸಿ" ಎಂದು ಹೇಳುವವನೂ ಧರ್ಮದಾನ ಗಳನ್ನೂ ವಿದ್ಯೆಯನ್ನೂ ತಪಸ್ಸನ್ನೂ ತಾನು ಸೋಮಾರಿಯಾಗಿ ಇತರರಿಂದ ಮಾಡಿಸು ವವನೂ ಫಲಪ್ರಾಪ್ತಿಯನ್ನು ಕಾಣಲಾರರು. ೧೩೮. ಶರೀರವಾದರೋ ಅಶುಚಿ, ನಿಲ್ಲುವುದಲ್ಲ, ಅದು ಅಮೇಧ್ಯದ ಕುಳಿ, ಜಂತು ಹುಳುಗಳ ಆಶ್ರಯ, ಹೆಚ್ಚಿನ ಹೇಲಿರುವ ಸ್ಥಳ, ಕ್ರಿಮಿಗಳ ರಾಶಿ, ಮೂತ್ರದ ಮಡಕೆ. ಅದನ್ನು ನಂಬಿ ಚಪಲಚಿತ್ತರು ಏಕೆ ಕೆಡು ವರೋ ! ೧೩೯. ಬೇರೆ ಏನು ? ಹಲವು ದಿನಗಳ ಕಾಲ ಹೊರಗೆ ಇಟ್ಟಿದ್ದರೂ ಕೆಡದಿ

ಪೆಱತೇನೊ ಪಲವು ದಿದಸಂ
ಪೊಱಗಿರ್ದೊಡೆ ಕಿಡದ ವಸ್ತುಗಳ್ತನುವನಿದಂ
ನೆಱೆ ಪೊರ್ದಿದನಿತಱೊಳೆ ಪೊ
ಚ್ಚಱುಗೆಟ್ಟು ಮಲಂಗಳೆಂಬ ಪೆಸರಂ ಪಡೆಗುಂ ೧೪೦

ಗದ್ಯ॥ ಮಡಕೆಯೊಳಿನಿಸು ಬೇಗಮಿರ್ದೊಡಂ ಕೂಟನೆಂಜಲೆನ್ನರ್ ಪೇಸದುಂಬರಂಜದೆ ಮುಟ್ಟುವರಾ ಕೂಟಂ ಮಾನಿಸರ್ಮುಟ್ಟಿದನಿತಱೊಳೆ ಗುಣಂಗೆಟ್ಟೆಂಜಲಪ್ಪುದುಂ ಪೆಱರ್ಮು ಟ್ಟದೋಸರಿಪುದಱಿಂ ಶರೀರಂ ಪೊಲ್ಲದೆಂಬುದಲ್ಲದೆ ಶುಚಿಯೆನಲಾಗದು ೧೪೦

ಎರಡುಂ ಕೈಗಳಿನಾಗಳು
ಮೊರಸುತುಮುರ್ದುತ್ತುಮಿರದೆ ಲೇಸಲ್ಲದೊಡೀ
ಪುರುಳಿಲ್ಲದ ನಾಯೊಡಲಂ
ಮರುಳೀ ಕರಮೊಲ್ದು ಕೂರ್ಪ ಮಾನಿಸರೊಳರೇ ೧೪೨

ಎಲೆಯಿಂ ಬಾಯ್ ಮುಡಿಯಿಂದಂ
ತಲೆ ಸೀರೆಯಿನಂಗಮೆಸೆಗುಮಿಂತಿವು ಪೋಗಲ್
ಕೊಳೆಪೊಡಲಂ ಕ್ರಿಮಿರಾಸಿಯು
ನೆಲೆ ಮಾಣದೆ ಸೋಲ್ತು ಪೊರ್ದುವನ್ನರುಮೊಳರೇ ೧೪೩

ರುವ ವಸ್ತುಗಳು ಈ ದೇಹವನ್ನು ಪ್ರವೇಶಿಸಿದಷ್ಟರಿಂದಲೇ ತಮ್ಮ ಗುಣವನ್ನು ಕಳೆದು ಕೊಂಡು ಮಲಗಳೆಂಬ ಹೆಸರನ್ನು ಪಡೆಯುವುವು. ೧೪೦. ಮಡಕೆಯಲ್ಲಿ ಅನ್ನ ಎಷ್ಟು ಹೊತ್ತು ಇದ್ದರೂ ಅದನ್ನು ಯಾರೂ ಎಂಜಲು ಎಂದೆನ್ನರು ; ಹೇಸದೆ ತಿನ್ನುವರು, ಅಂಜದೆ ಕೈಲಿ ಮುಟ್ಟುವರು, ಆ ಅನ್ನವನ್ನು ಮನುಷ್ಯರು ಮುಟ್ಟಿದಷ್ಟರಿಂದಲೇ ಗುಣವನ್ನು ಕಳೆದುಕೊಂಡು, ಎಂಜಲಾಗುತ್ತದೆ. ಇತರರು ಮುಟ್ಟದೆ ಪಕ್ಕಕ್ಕೆ ನೂಕು ತ್ತಾರೆ. ಆದ್ದರಿಂದ ಶರೀರವು ಕೆಟ್ಟದ್ದು ಎಂದೆನ್ನಬೇಕೇ ಹೊರತು ಶುಚಿಯೆನ್ನಲಾಗದು. ೧೪೧. ಯಾವಾಗಲೂ ಎರಡು ಕೈಗಳಿಂದಲೂ ಒರಸುತ್ತ, ಉಜ್ಜುತ್ತ ಇರದಿದ್ದರೆ ಲೇ ಸಲ್ಲವೆಂದ ಮೇಲೆ ಸಾರವಿಲ್ಲದ ಈ ನಾಯಿ ದೇಹವನ್ನು ವಿಶೇಷವಾಗಿ ಪ್ರೀತಿಸುವ ಮನು ಷ್ಯರುಂಟೆ ? ೧೪೨. ವೀಳ್ಯದೆಲೆಯಿಂದ ಬಾಯಿ, ತಲೆಕೂದಲಿನಿಂದ ತಲೆ, ಬಟ್ಟೆಯಿಂದ ಅಂಗಾಂಗಗಳು ಶೋಭಿಸುವುವು. ಇವು ಕಳೆದುಹೋದರೆ, ಕೊಳೆತರೂ ಕ್ರಿಮಿಗಳ ರಾಸಿ ಯನ್ನು ಬಿಡದೆ ಸೋತು ಸೇರುವಂಥವರೂ ಇದ್ದಾರೆಯೆ ? ೧೪೩. ಉಗುಳೂ ಹೇಲೂ

ಉಗುಬುಂ ಪೇಲುಂ ಸಿಂಬುಳು
ಮುಗಲಿರ್ದವನೆಯ್ದೆ ನೋಡಿ ಪೇಸುವರಂತ
ಪ್ಪುಗುಬುಂ ಪೇಲಂ ಸಿಂಬುಳ
ಮಗಲದೆ ಪೊತ್ತಿರ್ದ ತನುಗೆ ಪೇಸದರೊಳರೇ ೧೪೪

ತನುವಪ್ಪೊಡೆ ಪೊಲ್ಲದು ಜೌ
ವನಮಪ್ಪೊಡೆ ಪಲವು ಕಾಲಮಿರಲಱಿಯದು ಕಾಂ
ಚನಮಪ್ಪೊಡೆ ದಾಯಿಗರಿಂ
ದನುನಯದಿಂ ಠಕ್ಕರಿಂದಮಱಿವುದು ಬೇಗಂ ೧೪೫

ವನಿತೆಯರುಂ ತಾಯುಂ ಬಂ
ಧುನಿಕಾಯಮುಮಾತ್ಮಜಾತರುಂ ತಂತಮ್ಮಿಂ
ಬನೆ ಬಗೆವರಲ್ಲದೆಂತುಂ
ತನಗಪ್ಪರೆ ನರಕಗತಿಗೆ ಪೋಪವಸರದೊಳ್ ೧೪೬

ನೆರೆದಿರ್ದ ನಂಟರುಂ ಪೆಂ
ಡಿರುಮಯ್ಯನುಮಿರ್ದುಪಚ್ಚುಕೊಳ್ವರೆ ನೋವಂ
ಮರಣಮನೊತ್ತುವ ರುಜೆಯುಂ
ಕರುಣಿಸಿ ಪೆರ್ಱಗೇಕೆ ಮುಯ್ವನಾಂಪರೊ ಕೆಲಬರ್ ೧೪೭

ಸಿಂಬಳವೂ ದೇಹದಿಂದ ಹೊರಗೆ ಬಿದ್ದುದನ್ನು ನೋಡಿದರೆ ಅಸಹ್ಯಪಟ್ಟುಕೊಳ್ಳುವರು. ಅಂಥ ಸಿಂಬಳ ಮೊದಲಾದವನ್ನು ಬಿಡದೆ ಹೊತ್ತುಕೊಂಡಿರುವ ದೇಹಕ್ಕೆ ಹೇಸದೆ ಇರುವವರೂ ಇದ್ದಾರೆಯೆ ? ೧೪೪. ದೇಹವಾದರೆ ಕೆಟ್ಟದ್ದು. ಯೌವನವಾದರೋ ನಿಲ್ಲುವಂಥಾದ್ದಲ್ಲ. ಅದು ಬಹಳ ಕಾಲ ಇರುವುದಿಲ್ಲ. ಕಾಂಚನವಾದರೆ ದಾಯಾದಿಗಳ ಉಪಾಯದಿಂದಲೂ ಠಕ್ಕರಿಂದಲೂ ಬೇಗ ಹಾಳಾಗುವುದು. ೧೪೫. ಹೆಂಡತಿಯರೂ ತಾಯಿಯೂ ಬಂಧುಸಮೂಹವೂ ಮಕ್ಕಳೂ ತಮ್ಮ ತಮ್ಮ ಸೌಕರ್ಯವನ್ನೇ ಯೋಚಿಸುವರು. ಅಷ್ಟೇ ಹೊರತು ನರಕಗತಿಗೆ ಹೋಗುವ ಸಂದರ್ಭದಲ್ಲಿ ನಿನಗೆ ಅವರೆಲ್ಲ ಸಹಾಯ ಮಾಡುವರೆ ? ೧೪೬. ಸೇರಿರುವ ನಂಟರೂ ಹೆಂಡಿರೂ ತಂದೆಯೂ ನಿನ್ನ ನೋವನ್ನು ಹಂಚಿಕೊಳ್ಳುವರೆ ? ಮರಣವನ್ನೂ ಆಕ್ರಮಿಸುವ ರೋಗವನ್ನೂ ಹಂಚಿಕೊಳ್ಳುವುದು ಸಾಧ್ಯವೆ ? ಹೀಗಿದ್ದರೂ ಕೆಲವರು ಇತರರಿಗಾಗಿ ಏಕೆ ಕಷ್ಟವನ್ನು ಹೊತ್ತುಕೊಳ್ಳುವರೊ ? ೧೪೭. ಮೂರೂವರೆ ಕೋಟಿ ಜನ ನಂಟರು ಇದ್ದೂ

ಕರವೊಪ್ಪೆ ಮೂಱುಕೋಟಿಯು
ವರೆಸಂಟರುಮಿರ್ದು ಕಾಯಲಾರ್ತರೆ ಚಕ್ರೇ
ಶ್ವರನಿರವಿಂತುಟು ಕೆಲಬರ್
ಪರಮಾರ್ಥಮಂ ಕಂಡು ನಂಟರಂ ನಂಬಿರ್ಪರ್ ೧೪೮

ಲಂಕೆಯು ದೊರೆಯು ಮಹಾನಗ
ರಂ ಕೋಂಟೆ ಸಮಸ್ತ ವಿದ್ಯೆಗಧಿಪತಿ ತಾನುಂ
ಮಾಂ ಕಲಿಯೆನಿಸಿದ ರಾವಣ
ನಂಕದೊಳೇನಣ್ಣ ರಾಮನಂ ಗೆಲ್ದಪನೇ ೧೪೯

ಗದ್ಯ॥ ತುಪ್ಪದ ಮೋಹಕ್ಕೆಯುಮೇಧ್ಯಮಂ ಕೊಂಡಂತೆ ಪೊನ್ನಮೋಹಕ್ಕೆ ಬಾವಿಯೊಳ್ಕೈಯಂ ನೀಡುವಂತೆ ಪೆಂಡಿರ ಮೋಹಕ್ಕೆ ಸಱಿಯಂ ಪಾಯ್ವಂತೆ ಮಕ್ಕಳಮೋಹಕ್ಕೆ ಕಿರ್ಚಂ ಪಾಯ್ವಂತೆ ನಂಟರ ಮೋಹಕ್ಕೆ ಪುಲಿಯಂ ಪಿಡಿವಂತೆ ಮಾನಿಸವಾಳ ಮೋಹಕ್ಕೆ ಸಂಸಾರದೊಳಾದ ಭೋಗಕ್ಕಳಿಪಿ ಪಿರಿದಪ್ಪ ಸುಖಮಂ ಮಾಟ್ಪ ತಪಮಂ ಕಿಡಿಸಿ ನರಕದೊಳಾದ ಮಹಾದುಃಖಕ್ಕೊಳಗಾಗವೇಡ ೧೫೦

ಈ ಸಿರಿ ಯೀತನುವೀ ಧನ
ಮೀ ಸತಿ ಮತ್ತೀವಿಳಾಸಮತಿವಿಭವಂ ಕೇ
ಳೀ ಸುಖಮೀ ನೆಲನೀ ಮನೆ
ಯೀ ಸುತರೆಲೆ ನಿತ್ಯಮೆಂದು ಪದೆವನೆ ಗಾಂಪಂ ೧೫೧

ಕೂಡ ಚಕ್ರೇಶ್ವರನನ್ನು ರಕ್ಷಿಸಲು ಶಕ್ತರಾದರೆ ? ಇರುವ ಸ್ಥಿತಿ ಇಷ್ಟು. ಕೆಲವರು ಪರಮಾರ್ಥವನ್ನು ಕಂಡೂ ನಂಟರನ್ನು ನಂಬಿರುತ್ತಾರೆ. ೧೪೮. ಲಂಕಾಪಟ್ಟಣದ ದೊರೆಯು ಮಹಾನಗರ, ಕೋಟೆ, ಜತೆಗೆ ತಾನು ಸಮಸ್ತ ವಿದ್ಯೆಗಳಿಗೆ ಅಧಿಪತಿ. ಅವನು ಶೂರನೆನಿಸಿಕೊಂಡವನು. ಅಂಥ ರಾವಣನು ಯುದ್ಧದಲ್ಲಿ ರಾಮನನ್ನು ಗೆದ್ದನೇ ? ೧೪೯. ತುಪ್ಪದ ಮೇಲಿನ ಮೋಹಕ್ಕೆ ಕಟ್ಟುಬಿದ್ದು ಅಮೇಧ್ಯವನ್ನು ಕೊಂಡಹಾಗೆ ಹೊನ್ನಿನ ಮೇಲಣ ಮೋಹಕ್ಕೆ ಬಾವಿಯಲ್ಲಿ ಕೈಯನ್ನು ನೀಡುವ ಹಾಗೆ, ಹೆಂಡಿರ ಮೇಲಿನ ಮೋಹಕ್ಕೆ ಕಟ್ಟುಬಿದ್ದು ಕಮರಿಯನ್ನು ಹಾಯುವಂತೆ, ಮಕ್ಕಳ ಮೋಹಕ್ಕೆ ಕಿಚ್ಚನ್ನು ಹಾಯುವಂತೆ ನಂಟರ ಮೋಹಕ್ಕೆ ಹುಲಿಯನ್ನು ಹಿಡಿಯುವಂತೆ ಮನುಷ್ಯರ ಬಾಳಿನ ಮೋಹಕ್ಕೆ ಸಂಸಾರದಲ್ಲಿ ಆದ ಭೋಗಕ್ಕೆ ಆಸೆಪಟ್ಟು ಹೆಚ್ಚಿನ ಸುಖವನ್ನುಂಟುಮಾಡುವ ತಪಸ್ಸನ್ನು ಕೆಡಿಸಿ ನರಕದೊಳಗೆ ಆಗುವ ಮಹತ್ತರವಾದ ದುಃಖಕ್ಕೆ ಒಳಗಾಗಬೇಡ. ೧೫೦. ಈ ಐಶ್ವರ್ಯ, ಈ ದೇಹ, ಈ ಧನ, ಈ ಹೆಂಡತಿ ಮತ್ತು ಈ ವಿಲಾಸ, ಅತಿವೈಭವ, ಈ ನೆಲ. ಈ ಮನೆ, ಈ ಸುಖ, ಈ ಮಕ್ಕಳು, ಇವೆಲ್ಲ ಶಾಶ್ವತವೆಂದು ಉತ್ಸಾಹಿಸುವವನೇ ದಡ್ಡ ೧೫೧. ಬರಿಯ ಮರಳನ್ನು ಹಿಡಿದುಕೊಂಡರೆ ಕೈಯಲ್ಲಿ ನಿಲ್ಲ

ಬಱುಮಳಲಂ ಪಿಡಿದೊಡೆ ನಿಲ
ಲಱಿಗುಮೆ ತಳದೊಳ್ವಿವೇಕಿಯಲ್ಲದ ನರನುಂ
ಮಱುಗಿದೊಡೆ ಮಱುಕಮಲ್ಲದೆ
ಪೆಱತೇಂ ಸಂಸಾರದಲ್ಪಸುಖಮಿರ್ದಪುದೇ ೧೫೨

ಗದ್ಯ॥ ಒಂದು ವರುಷದಾರಂಬಕ್ಕಾಱದೆ ಸಾವನ್ನೆವರಮೆಂಜಲಗುಳಿನಾಯ್ದುಣ್ಬೊಕ್ಕಲ ಮಗನು ಮೊಂದು ಭವದ ತಪಕ್ಕಾಱದೆ ಪಲವು ಭವಂ ನರಕ ತಿರ್ಯಕ ವೇದನೆಯನುಣ್ಬ ನರನುಂ ಬುದ್ಧಿ ವಂತರಲ್ಲರ್ ೧೫೩

ತರುಣಿಯರೆಂಬ ಪೆರ್ಬುಲಿಗಳಂ ಹರಿಣಾಕ್ಷಿಯರೆಂಬ ಕ್ರೂರಸೀ
ರ್ಕರಡಿಗಳಂ ಲತಾಲಲಿತಗಾತ್ರಿಯರೆಂಬ ಮಹೋರಗಂಗಳಂ
ಸ್ಮರಶರದಿಂದಮೆಯ್ಮಱಿಯದೊಯ್ಯನೆ ಪೊರ್ದಿದರಪ್ಪೊಡಟ್ಟಿಚೆ
ಚ್ಚರಮುಱಿದೊತ್ತಿ ಮೆಟ್ಟಿ ಪುಡಿಯಾಗಿರೆ ತಿನ್ನದೆ ಪೋಗಲೀವರೇ ೧೫೪

ಗದ್ಯ॥ ಮತ್ತಂ ವನಿತೆಯರ ತೋಳಂ ಕಾಮನ ಮಸೆದ ಬಾಳೆನ್ನದೆ ಲತೆಯೆಂದೊಡಂ, ಲಲನೆಯರ ಕಡೆಗಣ್ಣ ನೋಟಮಂ ಮನಸಿಜನ ಕಯ್ಯ ಪಾಶಮೆನ್ನದೆ ನಗೆಗಣ್ಣೆಂದೊಡಂ, ಕಾಂತೆಯರ ಮೆಲ್ನುಡಿಯಂ ನಂಜಿನುಂಡೆಯೆನ್ನದೆ ಮುದ್ದುನುಡಿಯೆಂದೊಡಂ ತರುಣಿಯರ ಕುಚಯುಗಳಂಗಳಂ ಮೋಹರಾಜನ ಚಕ್ರಮೆನ್ನದೆ ಚಕ್ರವಾಕಮೆಂದೊಡಂ, ಲತಾಂಗಿಯರ ಮೇಲ್ವೊದೆದ ದು

ಬಲ್ಲುದೆ ? ವಿವೇಕಿಯಲ್ಲದ ಮನುಷ್ಯನು ಸಂಕಟಪಟ್ಟರೆ ಬರಿಯ ಸಂಕಟವೇ ಹೊರತು ಬೇರೆ ಏನಿದೆ ? ಸಂಸಾರದ ಅಲ್ಪಸುಖವು ನಿಲ್ಲುತ್ತದೆಯೆ ? ೧೫೨. ಒಂದು ವರುಷಕಾಲ ಮಾಡಬೇಕಾದ ವ್ಯವಸಾಯಕ್ಕೆ ಶಕ್ತನಾಗದೆ ಸಾಯುವವರೆಗೂ ಎಂಜಲ ಅಗುಳುಗಳನ್ನು ಆರಿಸಿ ಉಣ್ಣುವ ಒಕ್ಕಲ ಮಗನೂ, ಒಂದು ಜನ್ಮದಲ್ಲಿ ಮಾಡುವ ತಪಸ್ಸಿಗೆ ಧೈರ್ಯ ವಿಲ್ಲದೆ ಹಲವು ಜನ್ಮಗಳನ್ನು ನರಕ ಮತ್ತು ತಿರ್ಯಕ್‌ಗತಿಗಳ ವೇದನೆಯನ್ನು ಅನುಭವಿಸು ವವನೂ ಬುದ್ಧಿವಂತರಲ್ಲ. ೧೫೩. ತರುಣಿಯರೆಂಬ ಹೆಬ್ಬುಲಿಗಳನ್ನು ಹರಿಣಾಕ್ಷಿಯರೆಂಬ ಸೀಳುಕರಡಿಗಳನ್ನು, ಲತಾ ಲಲಿತ ಗಾತ್ರಿಯರೆಂಬ ಮಹಾ ಸರ್ಪಗಳನ್ನು ಕಾಮಬಾಣ ದಿಂದ ಪರವಶರಾಗಿ ಮೆಲ್ಲಗೆ ಸೇರಿದರಾದರೆ ಅಟ್ಟಿಹಿಡಿದು ಜಾಣತನದಿಂದ ಒತ್ತಿ ತುಳಿದು ಪುಡಿಮಾಡಿ ತಿನ್ನದೆ ಹೋಗಲು ಬಿಡುವರೆ ? ೧೫೪. ಅಲ್ಲದೆ ಹೆಂಗಸರ ತೋಳನ್ನು ಕಾಮನ ಮಸೆದ ಹರಿತವಾದ ಕತ್ತಿಯೆನ್ನದೆ ಬಳ್ಳಿಯೆಂದರೂ, ಲಲನೆಯರ ಕಡೆಗಣ್ಣ ನೋಟವನ್ನು ಮನ್ಮಥನ ಕೈಯ ಪಾಶವೆನ್ನದೆ ನಗೆಗಣ್ಣೆಂದರೂ, ಕಾಂತೆಯರ ಮೃದು ವಾಕ್ಯಗಳನ್ನು ವಿಷದ ಉಂಡೆಯೆನ್ನದೆ ಮುದ್ದು ಮಾತುಗಳೆಂದು ಹೇಳಿದರೂ, ತರುಣಿ ಯರ ಮೊಲೆಗಳನ್ನು ಮೋಹರಾಜನ ಚಕ್ರಾಯುಧವೆನ್ನದೆ ಚಕ್ರವಾಕವೆಂದರೂ, ಲತಾಂ

ಕೂಲಮಂ ಮೋಹರಾಜನೆಂಬ ಬೇಟೆಗಾಱಂ ಪರೆಪಿದ ಬಲೆಯೆನ್ನದೆ ಕಾಮಧ್ವಜಮೆಂದೊಡಂ, ಕಾಮಿನಿಯರ ಕರ್ಣಯುಗಳಮಂ ಕಾಮರಾಜಂ ಪಿಡಿದಡ್ಡಣಮೆನ್ನದೆ ಕಮಲಯೂಥಮೆಂದೊಡಂ ಬಾಲೆಯರ ಬೆರಲುಗುರ್ಗಳಂ ಮಾಯಾಕಿರಾತನ ಕೂರಂಬುಗಳೆನ್ನದೆ ಕಾಮನ ಪಂಚಬಾಣಮೆಂದೊಡಂ ರಮಣಿಯರ ಪುರ್ಬುಗಳಂ ಜವನಬಿಲ್ಲೆನ್ನದೆ ಕಬ್ಬಿನ ಬಿಲ್ಲೆಂದೊಡಂ, ನಿತಂಬಿನಿಯರಸಿಯ ಬಾಸೆಗಳಂ ಯಮರಾಜನ ಭಟರೆನ್ನದೆ ಶೋಭಾಕರಮೆಂದೊಡಂ, ನಾರಿಯರ ಮೂಗಂ ಕಾಮದೇವನೆಂಬ ಬೇಟೆಗಾರಂ ಪೊಗೆದು ಕೊಲ್ವ ತಿದಿಯೆನ್ನದೆ ಚಂಪಕ ಕುಟ್ಮಳಮೆಂದೊಡಂ, ಕನ್ನೆಯರ ಬಾಯ್ದೆರೆಯಂ ನರಕದ ಬಿಲಮೆನ್ನದೆ ಕಡುಚೆಲ್ವೆಂದೊಡಂ, ದಯಿತೆಯರ ಕುರುಳಪಙ್ತಿಗಳನಂತಕನ ಕಣ್ಣಿವಲೆಯೆನ್ನದೆ ಮಱಿದುಂಬಿಯೆಂದೊಡಂ ಅಬಲೆಯರ ಕೊರಲರೇಖೆಗಳುಮಂ ಮೃತ್ಯುರಾಜಂಗಿದು ಕೊಲ್ವನೇಣೆನ್ನದೆ ಕೋಮಲರೇಖೆಯೆಂದೊಡಂ, ಗಣಿಕೆಯರ ನೊಸಲಂ ಮಾಯಾನೃಪನ ಕಪಲಂಬೆನ್ನದೆ ಬಾಲಶಶಿಯೆಂದೊಡಂ, ಕಪಟನಾಟಕಸೂತ್ರಧಾರೆಯರ ಶೃಂಗಾರಮಂ ನರಕದ ದಾರಿಯೆನ್ನದೆ ಲೇಸೆಂದೊಡಂ ಮಾಯಾಕಿರಾತೆಯರ ವಿಲಾಸಮಂ ಕೇಸುರಿಯೆನ್ನದೆ ರಮಣೀಯಮೆಂದೊಡಂ, ಕುಟಿಲಚಿತ್ತೆಯರ ಕೂಟಮಂ ಕಾಳಕೂಟಮೆನ್ನದೆ ನಲಿ

ಗಿಯೇರು ಮೇಲೆ ಹೊದ್ದುಕೊಂಡ ವಸ್ತ್ರವನ್ನು ಮೋಹರಾಜನೆಂಬ ಬೇಟೆಗಾರನು ಹರಡಿದ ಬಲೆಯೆನ್ನದೆ ಕಾಮನ ಧ್ವಜವೆಂದರೂ, ಕಾಮಿನಿಯರ ಎರಡು ಕಿವಿಗಳನ್ನು ಕಾಮರಾಜನು ಹಿಡಿದ ಗುರಾಣಿಯೆನ್ನದೆ ಕಮಲಯೂಥವೆಂದರೂ ಬಾಲೆಯರ ಬೆರಳುಗಳ ಉಗುರುಗಳನ್ನು ಮಾಯಾ ಕಿರಾತನ ಹರಿತವಾದ ಬಾಣಗಳೆನ್ನದೆ ಕಾಮನ ಪಂಚಬಾಣಗಳೆಂದರೂ ರಮಣಿಯರ ಹುಬ್ಬುಗಳನ್ನು ಯಮನ ಬಿಲ್ಲೆನ್ನದೆ ಕಬ್ಬಿನ ಬಿಲ್ಲೆಂದರೂ, ನಿತಂಬಿನಿಯರ ಅಸಿಯ ಬಾಸೆಗಳನ್ನು ಯಮರಾಜನ ಭಟರೆಂದು ಹೇಳದೆ ಶೋಭಾಕರವೆಂದು ಹೇಳಿದರೂ, ನಾರಿಯರ ಮೂಗನ್ನು ಕಾಮದೇವನೆಂಬ ಬೇಟೆಗಾರನು ಹೊಗೆ ಹಾಕಿ ಕೊಲ್ಲುವ ತಿದಿಯೆನ್ನದೆ ಸಂಪಗೆಯ ಮೊಗ್ಗೆಂದರೂ, ಕನ್ಯೆಯರ ತುಟಿಗಳನ್ನು ನರಕದ ಬಿಲವೆನ್ನದೆ ಬಹಳ ಸುಂದರವೆಂದು ಹೊಗಳಿದರೂ, ದಯಿತೆಯರ ತಲೆಗೂದಲು ಸಾಲುಗಳನ್ನು ಅಂತಕನ ಹಗ್ಗದ ಬಲೆಯೆನ್ನದೆ ಮರಿದುಂಬಿಯೆಂದರೂ ಹೆಂಗಸರ ಕೊರಳಿನ ಗೆರೆಗಳನ್ನು ಇದು ಮೃತ್ಯುರಾಜನಿಗೆ ಕೊಲ್ಲುವ ಹಗ್ಗವೆನ್ನದೆ ಕೋಮಲರೇಖೆಯೆಂದರೂ ಸೂಳೆಯರ ಹಣೆಯನ್ನು ಮಾಯಾ ನೃಪನ ಕಾವಲು ಬಾಣವೆನ್ನದೆ ಬಾಲಚಂದ್ರನೆಂದರೂ ಕಪಟನಾಟಕ ಸೂತ್ರಧಾರೆಯರಾದ ಸ್ತ್ರೀಯರ ಪ್ರೇಮವನ್ನು ನರಕದ ದಾರಿಯೆನ್ನದೆ ಶ್ರೇಷ್ಠವೆಂದರೂ ಮಾಯಾ ಕಿರಾತೆಯರ ಸೊಗಸನ್ನು ಕೆಂಪನೆಯ ಜ್ವಾಲೆಯೆನ್ನದೆ ರಮಣೀಯವೆಂದರೂ ಕುಟಿಲ ಚಿತ್ತವುಳ್ಳ ಸ್ತ್ರೀಯರ ಕೂಟವನ್ನು ಕಾಳಕೂಟ(ವಿಷ)ವೆನ್ನದೆ ನಲಿದರೂ ಪಾಪ ಸ್ವರೂಪಿಣಿಯರ ಸಹವಾಸವನ್ನು ಯಮನ ಗಾಳ

ದೊಡಂ, ಪಾಪರೂಪೆಯರ ಮೇಳಮಂ ಕೀನಾಶನ ಗಾಳಮೆನ್ನದೆ ಪೆರ್ಚುವೊಡಂ ತನ್ನ ಕೇಡಂ
ಬಗೆವನಲ್ಲದೆ ಸುಖಮಂ ಬಗೆಯಂ ೧೫೫

ಮಾಯದ ಟಕ್ಕಿನ ಕಪಟದ
ಮಾಯದ ಕೃತ್ರಿಮದ ಮಱುಕದೆಱಕದ ಕಪಟೋ
ಪಾಯದ ಕಣಿಗಳ್ ಸಂದ
ಸ್ತ್ರೀಯರ್ಕೇವಲಮೆ ಸರ್ವಜನವಂಚಕಿಯರ್ ೧೫೬

ನರಕದ ಬಟ್ಟೆಯನಱಿಯದ
ನರರ್ಗಂ ತೋಱುವ ಪೊಲಂಬಿಗರ್ದುಷ್ಕೃತತ
ಸ್ಕರನ ಪಿಡಿದಿರ್ಪ ಡೊಣೆಗ
ಳರವಿಂದಾಕ್ಷಿಯರನಂಗನೋಜೆಯ ಪಿಡಿಗಳ್ ೧೫೭

ಸುಗತಿಯ ಬಟ್ಟೆಯ ಮುಳ್ಗಳ್
ಸುಗತಿಯ ಬಟ್ಟೆಯ ಚಮೂರುತತಿಗಳ್ ಮತ್ತಂ
ಸುಗತಿಯ ಬಾಗಿಲ ಪಡಿಗಳ್
ಮೃಗಾಕ್ಷಿಯರ್ಮೋಕ್ಷಪಥದ ಕಾಪಿನ ನಾಯ್ಗಳ್ ೧೫೮

ಸಿರಿಯುಪ್ಪೊಡೆ ಪುಲ್ಗಿಚ್ಚಿನ
ದೊರೆ ರಾಜ್ಯವಿಭೂತಿ ಮುಗಿಲನೆಳಲ ಸಮಾನಂ
ತರುಣತ್ವಮಪ್ಪೊಡಿಂದ್ರನ
ವರಚಾಪದ ಸರಿ ಮನುಷ್ಯರೇಕೆಯೊ ಬೆಸೆವರ್ ೧೫೯

ವೆನ್ನದೆ(ಉಬ್ಬಿದರೂ) ಉತ್ಸಾಹಪಟ್ಟರೂ ತನ್ನ ಕೇಡನ್ನು ಯೋಚಿಸುವನೇ ಹೊರತು ಸುಖವನ್ನು ಯೋಚಿಸುವುದಿಲ್ಲ. ೧೫೫. ಮಾಯೆಯ, ಠಕ್ಕಿನ, ಕಪಟದ, ತಂತ್ರದ, ಬೂಟಕದ ಮರುಕಪ್ರೇಮಗಳ ಮೋಸದ ಉಪಾಯದ ಗಣಿಗಳು, ಪ್ರಸಿದ್ಧರಾದ ಹೆಂಗಸರು ಸಾಮಾನ್ಯರೆ? ಅವರು ಸರ್ವಜನವಂಚಕಿಯರು. ೧೫೬. ನರಕದ ದಾರಿಯನ್ನು ಅರಿಯದ ಮನುಷ್ಯರಿಗೂ ತೋರುವ ದಾರಿಗರು, ಪಾಪವೆಂಬ ಕಳ್ಳನು ಹಿಡಿದಿರುವ ದೊಣ್ಣೆಗಳು, ಅರವಿಂದಾಕ್ಷಿಯರು(ಕಮಲದಂಥ ಕಣ್ಣುಳ್ಳವರು) ಮನ್ಮಥನ ಸೊಗಸಾದ ಹೆಣ್ಣಾನೆಗಳು. ೧೫೭. ಸದ್ಗತಿಯ ದಾರಿಯಲ್ಲಿನ ಮುಳ್ಳುಗಳು, ಸುಗತಿಯ ದಾರಿಯಲ್ಲಿರುವ ಹುಲಿಗಳ ಸಮೂಹಗಳು ಮತ್ತು, ಸುಗತಿಯ ಬಾಗಿಲ ಕದಗಳು, ಮೃಗಾಕ್ಷಿಯರು ಮೋಕ್ಷಮಾರ್ಗದ ಕಾವಲು ನಾಯಿಗಳು. ೧೫೮ ಐಶ್ವರ್ಯವು ಹುಲ್ಲಿನ ಬೆಂಕಿಯಂಥಾದ್ದು. ರಾಜ್ಯ ವೈಭವ ಮೋಡದ ನೆರಳಿಗೆ ಸಮಾನ. ತಾರುಣ್ಯವಾದರೋ ಇಂದ್ರಧನುಸ್ಸಿಗೆ ಸಮಾನ. ಮನುಷ್ಯರು ಏಕೆ ಅಹಂಕಾರ ಪಡುತ್ತಾರೆಯೊ ? ೧೫೯. ಹಳ್ಳದಲ್ಲಿನ ಮರ

ದರಿಯುಮರದಂತೆ ಜೀವಿತ
ಮಶಲೆಯ ಮಸಿಯಂತೆ ಪೆಂಡಿರುಪಭೋಗಂ ಭೂ
ಧರನದಿಯಂತೆ ಕಳೇವರ
ಮರಿಸಿನದಂತಿರ್ಕುಮುದ್ಧತಿಕ್ಕೆಯುಮದಟುಂ ೧೬೦

ಬಲಮುಂ ಪೆಂಪುಂ ಕೂರ್ಪುಂ
ಕಲಿತನಮುಂ ದರ್ಪಮುಂ ಪ್ರತಾಪಮುಮಳವುಂ
ಕುಲಮುಂ ದಳಮುಂ ಜಳಬೊ
ಬ್ಬುಳಿಕೆಯುವೋಲ್ ಕಿಡುವವೇಕೆ ತೊನೆವರ್ ಮೂರ್ಖರ್ ೧೬೧

ಒಡಲೊಳ್ಳಿತಾದೊಡಂ ಸಿರಿ
ಕಿಡದೊಡಮಾಯುಷ್ಯಮೊರ್ಮೆಗೊರ್ಮೆಗೆ ಪಿರಿದ
ಪ್ಪೊಡಮೋವೋ ಮನುಷ್ಯರ ಸೈ
ತಿಡುವವರಾರ್ಮಾಣಿಪನ್ನರಾರ್ಮಮತಿಯೊಳ್ ೧೬೨

ಚಕ್ಕನೆ ಸಾವುದುಮಂ ಸಿರಿ
ನೆಕ್ಕನೆ ಕಿಡುವುದುಮನಱಿದು ಕಂಡುಂ ಕೇಳ್ದುಂ
ಸೊಕ್ಕುವರುಕ್ಕುವರಂಜದೆ
ಯುಕ್ಕುಂದಲೆವಾಯ್ವರನ್ಯರೆಸಗಿದು ಚೋದ್ಯಂ ೧೬೩

ದಂತೆ ಜೀವಿತ. ಹತ್ತಿಯ ಮಸಿಯಂತೆ ಹೆಂಡಿರ ಉಪಭೋಗ. ಬೆಟ್ಟದ ಝರಿಯ ಹಾಗೆ ಕಳೇಬರ. ಅರಿಸಿನದಂತೆ, ಔದ್ಧತ್ಯವೂ ಕಾರ್ಯವೂ ಕ್ಷಣಿಕ. ೧೬೦. ಬಲ, ಹೆಚ್ಚಳ ಪ್ರೀತಿ, ಶೌರ್ಯ, ದರ್ಪ, ಪರಾಕ್ರಮ, ಅಧಿಕಾರ, ಕುಲ, ಸಿರಿ, ಎಲ್ಲವೂ ನೀರಿನ ಗುಳ್ಳೆಯಂತೆ ಕೆಟ್ಟುಹೋಗುವುವು. ಇಷ್ಟುಮಾತ್ರಕ್ಕೆ ಮೂರ್ಖರು ಏತಕ್ಕೆ ತೂಗಾಡು (ಜಂಬಮಾಡು)ವರೋ ? ೧೬೧, ದೇಹ ಒಳ್ಳೆಯದಾದರೂ ಐಶ್ವರ್ಯ ನಷ್ಟವಾಗದಿದ್ದರೂ ಆಯುಸ್ಸು ಒಂದೊಂದು ಸಲವೂ ೧೬೪. ಹೆಚ್ಚಾಗುತ್ತಿದ್ದರೂ, ಓಹೋ ! ಮನುಷ್ಯರನ್ನು ಹಿಡಿದಿಡುವವರು ಯಾರು? ಲೋಕದಲ್ಲಿ ಅವರನ್ನು ತಡೆಯಬಲ್ಲವರು ಯಾರು ? ೧೬೨. ಇದ್ದಕ್ಕಿದಂತೆ ಸಾಯುವುದನ್ನೂ ಐಶ್ವರ್ಯವು ತಟ್ಟನೆ ನಷ್ಟವಾಗುವುದನ್ನೂ ತಿಳಿದೂ, ನೋಡಿಯೂ, ಕೇಳಿಯೂ ಜನರು ಸೊಕ್ಕು ಪಡುತ್ತಾರೆ : ಉಬ್ಬುತ್ತಾರೆ. ಅವರು ಅಂಜದೆ ಅತಿಶಯವಾಗಿ ಮುನ್ನುಗ್ಗುವರು. ಇದು ವಿಚಿತ್ರ ೧೬೩. ದೇಹವನ್ನು ತಪಸ್ಸಿನಲ್ಲಿಯೂ, ಹಣವನ್ನು ಸದ್ಧರ್ಮ

ತನುವಂ ತಪದೊಳ್ ಧನಮಂ
ಜನನುತ ಸದ್ಧರ್ಮದಲ್ಲಿಯುಂ ತವಿಸಿ ಕೆಲರ್
ಮನದೊಳ್ಪಾಪಕ್ಕಂಜುವ
ರೆನಸುಂ ದುಃಖಕ್ಕೆಮಂಜರೆನಗಿದು ಚೋದ್ಯಂ ೧೬೪

ಗದ್ಯ॥ ಎಂದು ಶರೀರದೊಳಾದಪೊಲ್ಲಮೆಯುಮಂ ಸಂಸಾರದೊಳಾದ ದುಃಖಮುಮಂ ಭೋಗಂಗಳ ಕೇಡುಮಂ ಬಾಟ್ಕೆಯನಿತ್ಯತೆಯುಮಂ ವನಿತೆಯರ ಕಷ್ಪತೆಯುಮಂ ಸ್ಥಿತಿಕರಣಂ ಮಹಾಪುಣ್ಯಮೆಂಬುದುಮಂ ಬಗೆದು ಪನ್ನೆರಡು ವರ್ಷಂ ಬರಂ ಮಾಣದೆ ಪೇಟಲ್ಪುಷ್ಪದಾಡ ನೊಡೆದ ಕಲ್ಲದೋಣಿಯೊಳಿಟ್ಟಿದ ನೀರಂತೆ ಕೈಕೊಳ್ಳದೆ ಸತಿಯರ ರೂಪನೆ ಭಾವಿಸುತಿರ್ಪುದುಂ ವಾರಿಷೇಣಮುನಿನಾಥಂ ತನ್ನೊಳಿಂತೆಂದಂ ೧೬೫

ಆನೀಪಾಲ್ಗಳನೊಲ್ಲದಂದು ಕಿಡುವೆಂ ತಾಯುಂ ಮನಂನೋಗುಮೆಂ
ದೇನಟ್ಕರ್ತೆಳಗೂಸುಗಳ್ ಕುಡಿಗುಮೇ ಸಂತೋಷದಿಂ ಪಾಲ್ಗಳಂ
ಹೀನಾತ್ಮರ್ಕಳುಮಂತೆ ನಾಡೆ ಹಿತಮಂ ಸಂತಂ ಸುಖೋಪಾಯಮಂ
ಜ್ಞಾನಾತ್ಮಂ ನೆಱೆ ಪೇಟ್ದೊಡಂ ಪದೆಪಿನಿಂ ಕೈಕೊಳ್ಳರಾನಂದದಿಂ ೧೬೬

ಕಾರ್ಯಗಳಲ್ಲಿಯೂ ಸವೆಯಿಸಿ ಕೆಲವರು ತಮ್ಮ ಅಂತರಂಗದಲ್ಲಿ ಪಾಪಕ್ಕೆ ಹೆದರುತ್ತಾರೆ ; ದುಃಖಕ್ಕೆ ಸ್ವಲ್ಪವೂ ಹೆದರುವುದಿಲ್ಲ. ನನಗೆ ಇದು ಆಶ್ಚರ್ಯಕರವಾಗಿದೆ. ೧೬೪. ಹೀಗೆಂದು ಹೇಳಿ ದೇಹದಲ್ಲಿನ ಕೆಡಕನ್ನು, ಸಂಸಾರದಲ್ಲಿ ಒದಗುವ ದುಃಖವನ್ನು, ಭೋಗಗಳ ನಾಶವನ್ನೂ ಜೀವನದ ನಶ್ವರತೆಯನ್ನೂ ವನಿತೆಯರ ನೀಚತನವನ್ನೂ ಸ್ಥಿತಿಕರಣವು ಮಹಾಪುಣ್ಯವೆಂಬುದನ್ನೂ ಯೋಚಿಸಿ ಹನ್ನೆರಡು ವರ್ಷಗಳವರೆಗೆ ಬಿಡದೆ ಹೇಳಲು ಪುಷ್ಪದಾಡನು ಒಡೆದ ಕಲ್ಲಿನ ದೋಣಿಯಲ್ಲಿ ಹುಯಿದ ನೀರಿನಂತೆ (ಒಪ್ಪದೆ) ಅಂಗೀಕರಿಸದೆ ಹೆಂಡಿರ ರೂಪವನ್ನೇ ಯೋಚಿಸುತ್ತಿರಲಾಗಿ ವಾರಿಷೇಣಮುನಿಶ್ರೇಷ್ಠನು ತನ್ನಲ್ಲಿಯೇ ಹೀಗೆ ಯೋಚಿಸಿದನು : ೧೬೫. 'ನಾನು ಈಗ ಹಾಲನ್ನು ಬೇಡವೆಂದರೆ ಕೆಡುತ್ತೇನೆ. ತಾಯಿಯೂ ಮನನೋಯುತ್ತಾಳೆ.' ಎಂದು ಯೋಚಿಸಿ ಅಕ್ಕರೆಯಿಂದ ಎಳೆಯಕೂಸುಗಳು ಹಾಲನ್ನು ಸಂತೋಷದಿಂದ ಕುಡಿಯುವುವೆ? ಹೀನಾತ್ಮರೂ ಹಾಗೆಯೇ. ಸಂತನು ಹಿತವನ್ನೂ ಸುಖೋಪಾಯವನ್ನೂ ಹೇಳಿದರೂ ಉತ್ಸಾಹದಿಂದ ಒಪ್ಪಿಕೊಳ್ಳುವುದಿಲ್ಲ. ೧೬೬. ನೆಲ್ಲಕ್ಕಿಯ ಅನ್ನವನ್ನೂ ತೊವ್ವೆಯನ್ನೂ

ಕಳವೆಯುಕೂಟುಮಂ ತೊವೆಯುಮಂ ತಿಳಿದುಪ್ಪಮುಮಂ ವಿನೋದದಿಂ
ಗಳಿಲನೆ ನಾಯ್ಗೆ ಬೇಗವೊಸೆದಿಕ್ಕಿದೊಡಂ ಕಡುಗೆಯ್ದು ಮತ್ತಮ
ವ್ವಳಿಸಿ ಕನಲ್ದೊನಲ್ದು ಸಲೆ ಪೇಲನೆ ಚಿಂತಿಸುತಿರ್ಪವಂತೆ ಸಂ
ಚಳಮನರುಂ ಸದುಕ್ತಿಗಳನೊಲ್ಲದೆ ಚಿಂತಿಸುವರ್ಕುಮಾರ್ಗಮಂ ೧೬೭

ಗದ್ಯ॥ ಎಂದು ಮುಗಳ್ನಗೆ ನಕ್ಕು ಮತ್ತಮಾತನನಲಸಿ ಬಿಡುವುದು ಪುರುಷಾರ್ಥಮಲ್ಲೆಂದು ಗಿಳಿಯಂ ಪಂಜರದೊಳಿಕ್ಕಿ ರಕ್ಷಿಸುವಂತೆ ಪುಷ್ಪದಾಡನನೆತ್ತಲುಂ ಪೋಗಲೀಯದೆ ಧರ್ಮಶ್ರವಣಮಂ ಗೆಯ್ಯುತ್ತುಮೊಂದು ದಿವಸಂ ವಿಪುಳಶೈಲದೊಳಿರ್ದ ವರ್ಧಮಾನಸ್ವಾಮಿಗಳ ಶ್ರೀಪಾದಮಂ ಬಂದಿಸಲೆಂದು ವಾರಿಷೇಣಮುನಿಪರಿವೃಢಂ ಪೋಪುದುಮತ್ತಲ್ ದ್ರವ್ಯಲಿಂಗಿಯಾಗಿರ್ದ ಪುಷ್ಪದಾಡನೆಡೆವೆತ್ತು ರಾಗಿಸಿ ಬಲೆವಱಿದ ಕೊಂಕನಂತೆ ಮನೆಯೆ ಗುಱಿಯಾಗಿರ್ಪುದುಮಾಗಳ್ ೧೬೮

ಉತ್ತಮಗುಣಗಣನಿಳಯಂ
ಚಿತ್ತಜಮದಭರಕರೀಂದ್ರಹರಿ ವಿಮಳಯಶೋ
ದಾತ್ತಂ ಶ್ರುತಾಂಬುನಿಧಿ ಜಗ
ದುತ್ತುಂಗಂ ನಿಷ್ಕಷಾಯನಪಗತದುರಿತಂ ೧೬೯

ಗದ್ಯ॥ ವಾರಿಷೇಣಮುನಿವಲ್ಲಭನುಂ ಮಹಾವೀರಸ್ವಾಮಿಯಂ ಬಂದಿಸಿ ತಡೆಯದಲ್ಲಿಂದಂ ಬಂದು ಪುಷ್ಪದಾಡನೆನಿಪ ದ್ರವ್ಯತಪಸ್ವಿಯನಲ್ಲಿ ಕಾಣದೆ ತನ್ನ ನಿವಾಸಕ್ಕೆ ಪೋದನೆಂದಱಿದು ತಾಂ

ಶುದ್ಧ ತುಪ್ಪವನ್ನೂ ನಾಯಿಗೆ ಹೊತ್ತಿಗೆ ಸರಿಯಾಗಿ ಪ್ರೀತಿಯಿಂದ ಬಡಿಸಿದರೂ ಸಂತೋಷಿಸದೆ ಅದು ಕೋಪದಿಂದ ಅಪ್ಪಳಿಸಿ ತೂಗಾಡಿ ವಿಶೇಷವಾಗಿ ಹೇಲನ್ನೇ ಕುರಿತು ಯೋಚಿಸುತ್ತಿರುವಂತೆ ಚಂಚಲ ಮನಸ್ಕರು ಸದ್ವಾಕ್ಯಗಳನ್ನು ಒಪ್ಪದೆ ಕೆಟ್ಟದಾರಿಯನ್ನೇ ಯೋಚಿಸುತ್ತಿರುತ್ತಾರೆ.' ೧೬೭. ಎಂದು ಯೋಚಿಸಿ ಮುಗುಳುನಗೆ ಬೀರಿ ಈ ಪುಷ್ಪದಾಡನನ್ನು ಬೇಸರದಿಂದ ಬಿಟ್ಟು ಬಿಡುವುದು ಪುರುಷಾರ್ಥಸಾಧಕವಲ್ಲವೆಂದು ತಿಳಿದು ಅವನನ್ನು ಎಲ್ಲಿಯೂ ಹೋಗಲು ಬಿಡದೆ ಧರ್ಮಶ್ರವಣವನ್ನು ಮಾಡಿಸುತ್ತ ಇದ್ದು ಒಂದು ದಿನ ವಿಮಳ ಪರ್ವತದಲ್ಲಿ ಇದ್ದ ವರ್ಧಮಾನಸ್ವಾಮಿಗಳ ಶ್ರೀಪಾದಗಳನ್ನು ವಂದಿಸುವುದಕ್ಕೆಂದು ವಾರಿಷೇಣ ಮುನಿಶ್ರೇಷ್ಠನು ಹೋಗಲಾಗಿ ಅತ್ತ ದ್ರವ್ಯಲಿಂಗಿಯಾಗಿದ್ದ ಪುಷ್ಪದಾಡನು ಅವಕಾಶ ಸಿಕ್ಕಿ ಸಂತೋಷಪಟ್ಟು ಬಲೆ ಹರಿದ ಕೊಂಕನ ಹಾಗೆ ಮನೆಯೆ ಗುರಿಯಾಗಿ ಹೊರಟನು ೧೬೮. ಆಗ ಉತ್ತಮಗುಣಸಮೂಹಕ್ಕೆ ಆಶ್ರಯನಾದಂಥ, ಮನ್ಮಥನೆಂಬ ಮದಿಸಿದ ಆನೆಗೆ ಸಿಂಹನಾಗಿದ್ದ, ಶುದ್ಧಕೀರ್ತಿ, ಉದಾತ್ತ, ಶ್ರುತಸಮುದ್ರನು, ಜಗತ್ತಿನಲ್ಲಿ ಹಿರಿಯನಾದ, ಕಷಾಯದೂರನೂ ಪಾಪರಹಿತನೂ ಆದ ವಾರಿಷೇಣ ಮುನಿಶ್ರೇಷ್ಠನು ಮಹಾವೀರ ಸ್ವಾಮಿಗೆ ವಂದಿಸಿ ತಡಮಾಡದೆ ಅಲ್ಲಿಂದ ಹೊರಟು ಬಂದು ಪುಷ್ಪದಾಡನೆಂಬ ದ್ರವ್ಯತಪಸ್ವಿಯನ್ನು ಅಲ್ಲಿ ಕಾಣದೆ ತನ್ನ ಮನೆಗೆ ಹೋದನೆಂದು ತಿಳಿದು

ಜಂಘಾಚಾರಣಯಿದ್ಧಿ ಪ್ರಾಪ್ತನಪ್ಪುದಱಿಂ ಮರುಜ್ಜವದಿಂದೆಯ್ದಿ ಪುಷ್ಪದಾಡನೆಡೆಯೊಳ್ ಕಂಡು ಪಿಡಿದುಕೊಂಡಾತಂಗೆ ವೈರಾಗ್ಯಮಂ ಪುಟ್ಟಿಸಲ್ವೇಡಿ ನಿನ್ನರಾಜಭವನಕ್ಕೆ ಬರ್ಪುದುಂ ಚೇಳಿನಿ ಮಹಾದೇವಿ ವಾರಿಷೇಣ ಮುನೀಂದ್ರೋತ್ತಮನ ಬರವಂ ದೂರದೊಳೆ ಕಂಡು ಪೊತ್ತಲ್ಲದ ಪೊಟ್ತಿನೊಳೆ ಬಂದರಿದೇನಾನುಮೊಂದು ಕಾರಣಮಾಗಲ್ವೇಟ್ಕುಮೆಂದುವಿಸ್ಮಯಂ ಬಟ್ಟು ತನ್ನೊಳಿಂತೆಂದಳ್ ೧೭೦

ಎಗ್ಗಂ ಮುನ್ನೀ ಮಾರ್ಗಂ
ಮೊಗ್ಗೆಂದುಬ್ಬಿದುಕ್ಕಿ ಪೋಗಿ ನಿಲಲಾಱದೆ ಚಿಃ
ಸಿಗ್ಗಿಲ್ಲದಲಸಿ ಬಂದಂ
ಗುಗ್ಗುರಿಯಂ ತಿಂಬ ಮೊಗ್ಗು ಸುಣ್ಣದೊಳುಂಟೇ ೧೭೧

ಅಱಿಮನದಂಗಂ ಸುಖದಿಂ
ಗೆಳಸುವವಂಗಂ ಗೃಹಕ್ಕೆ ಪೆಂಪಿಂಗೆ ಮಹೋ
ಜ್ವಳಕೀರ್ತಿಗಾಟಿಪಂಗಂ
ಖಳಂಗಮಳವಡದು ಜೈನಮಾರ್ಗಂ ಜಗದೊಳ್ ೧೭೨

ಗದ್ಯ॥ ಈತನಪ್ಪೊಡೆ ಸುಖಿ ಕೊರಲಸತ್ವವಿಲ್ಲದೊರಲಂ ನುಂಗಿದರೆಂಬ ನಾಟ್ಣುದೆಯುಂತೆ ತನ್ನಳವಱಿಯದೆ ಜಿನಸ್ವಾಮಿಯ ಜಗನ್ಮಾಂಗಲ್ಯನ ರೂಪಂ ಧರಿಯಿಸಿ ತಪದೊಳಾದ ಕ್ಲೇಶಕ್ಕಿರ

ತಾನು ಜಂಘಚಾರಣ ಋದ್ಧಿಯನ್ನು ಪಡೆದವನಾದ್ದರಿಂದ ವಾಯುವೇಗದಿಂದ ಹೋಗಿ ಪುಷ್ಪದಾಡನನ್ನು ಮಾರ್ಗಮಧ್ಯದಲ್ಲಿಯೇ ಹಿಡಿದುಕೊಂಡು ಆತನಿಗೆ ವೈರಾಗ್ಯವನ್ನು ಹುಟ್ಟಿಸಲು ಬಯಸಿ, ನಿನ್ನ ರಾಜಮಂದಿರಕ್ಕೆ ಬರಲಾಗಿ ಚೇಳಿನಿ ಮಹಾದೇವಿಯು ವಾರಿಷೇಣ ಮುನೀಂದ್ರ ಶ್ರೇಷ್ಠನ ಆಗಮನವನ್ನು ದೂರದಲ್ಲಿಯೇ ಕಂಡು "ಹೊತ್ತಲ್ಲದ ಹೊತ್ತಿನಲ್ಲಿ ಬಂದರು. ಇದು ಏನಾದರೂ ಒಂದು ಕಾರಣವಿರಬೇಕು." ಎಂದು ಆಶ್ಚರ್ಯಪಟ್ಟು ತನ್ನಲ್ಲಿಯೇ ಹೀಗೆ ಯೋಚಿಸಿದಳು. ೧೭೦. "ದಡ್ಡನು ಈ ದಾರಿ ಸುಲಭವೆಂದು ಭಾವಿಸಿ ಉಬ್ಬಿಹೋಗಿ ಅಲ್ಲಿ ನಿಲ್ಲಲಾರದೆ, ಚಿ: ನಾಚಿಕೆಯಿಲ್ಲದೆ ಸೋತು ಬಂದ. ಗುಗ್ಗುರಿಯನ್ನು ತಿನ್ನುವಷ್ಟು ಸುಲಭತೆ ಸುಣ್ಣದಲ್ಲಿ ಇರುವುದೆ ? ೧೭೧. ದುರ್ಬಲ ಮನಸ್ಸಿನವನಿಗೂ ಸುಖಕ್ಕೆ ಆಸೆ ಪಡುವವನಿಗೂ ಮನೆಗೆ, ಹೆಮ್ಮೆಗೆ, ಮಹಾ ಉಜ್ವಲವಾದ ಕೀರ್ತಿಗೆ, ಆಸೆ ಪಡುವವನಿಗೂ ದುಷ್ಟನಿಗೂ ಜಗತ್ತಿನಲ್ಲಿ ಜೈನಮಾರ್ಗ ವಶವಾಗುವುದಿಲ್ಲ. ೧೭೨. ಈತನಾದರೋ ಸುಖಿ. ಕೊರಳಿನಲ್ಲಿ ಶಕ್ತಿಯಿಲ್ಲದೆ ಒರಳನ್ನು ನುಂಗಿದರೆಂಬ ನಾಡಗಾದೆಯಂತೆ, ತನ್ನ ಯೋಗ್ಯತೆಯನ್ನು ತಿಳಿದುಕೊಳ್ಳದೆ, ಜಿನಸ್ವಾಮಿಯ, ಜಗನ್ಮಂಗಳನ, ರೂಪವನ್ನು ಧರಿಸಿ ತಪಸ್ಸಿನಲ್ಲಿ ಆಗುವ ಕ್ಲೇಶಕ್ಕೆ ತಡೆದುಕೊಳ್ಳಲಾರದೆ, ರಾಜ್ಯದ ಆಸೆಯಿಂದ ಬಂದಿರ

ಲಾಜಿದೆ ರಾಜ್ಯಕಾಂಕ್ಷೆಯಿಂ ಬಂದನಾಗಲೆವೇಟ್ಕುಮಲ್ಲದೊಡಿಲ್ಲಿಗೇಕೆ ವಂದನಿದನಾರಯ್ದು ನೋಡುವೆನೆಂದು ಸರಾಗಾಸನಮುಮಂ ವಿರಾಗಾಸನಮುಮನಿಕ್ಕುವುದುಂ ಸುಕವಿಜನಮನಃ ಪದ್ಮಿನೀ ರಾಜಹಂಸಂ ಬಂದು ವಿರಾಗಾಸನದೊಳಿರ್ಪುದುಂ ಜಿನಸಮಯ ಗಗನಚಂದ್ರಿಕೆ ವಾರಿಷೇಣ ಮುನೀಂದ್ರನ ಚರಣದ್ವಯಪಲ್ಲವಂಗಳಂ ಪ್ರಸೂನಾವಳಿಗಳಿನರ್ಚಿಸಿ ಮಹಾಭಕ್ತಿಯಿಂ ಬಂದಿಸಿ ಕೈಗಳಂ ಮುಗಿದು ನವ್ರಮಸ್ತಕೆಯಾಗಿರ್ದು ಮುಂದೆ ಕುಳ್ಳಿರ್ದು ೧೭೩

ಮುದದಿಂ ನಿಮ್ಮಡಿ ನಿಮ್ಮಯ
ಪದಸರಸಿಜಯುಗಳಮುಂ ಮಹೋತ್ಸವದಿಂದಂ
ವಿದಿತಂ ಕಂಡೆನವೋಘಂ
ಸದಮಳರೆನ್ನಿಂದಮಿಂ ಕೃತಾರ್ಥರುಮೊಳರೇ ೧೭೪

ಗದ್ಯ॥ ಎನಗೆ ಬೆಸನಾವುದೆಂದೊಡೆ ನಿಮ್ಮ ಸೊಸೆವಿರಯ್ನೂರ್ವರುಮಂ ಶೃಂಗಾರಂಗೆಯ್ಸಿ ಬೇಗವೊಡಗೊಂಡು ಬನ್ನಿಮೆನೆ ಚೇಳಿನಿ ಮಹಾದೇವಿ ತನ್ನ ಮಣಿಮಾಡಕ್ಕೆ ಪೋಗಿ ಪರಿಚಾರಕಿಯರಂ ಬರಿಸಿ ತಡೆಯದೆ ಶೃಂಗಾರಂಗೆಯ್ದು ಬರ್ಪುದು ತಮ್ಮ ವಲ್ಲಭಂ ಬಂದಿರ್ದನೆಂದು ಪೇಟೆಮೆಂದಯ್ನೂರ್ವರ್ಕುಮಾರಿಯುಗಟ್ಟುವುದುಂ ಅವರ್ಕೇಳ್ದು ತೆಂಕಣೆಲರ ತೀಟದಿಂ ನಯಂಬಡೆದ ಮಾಧವೀಲತೆ ಪೆರ್ಚಿ ಬಗೆಗೆ ಬಂದ ಶೃಂಗಾರಮುಂ ಮಾಟ್ಪಲ್ಲಿಯೊರ್ವಳ್ ೧೭೫

ಬೇಕು. ಅಲ್ಲದಿದ್ದರೆ ಇಲ್ಲಿಗೆ ಏಕೆ ಬಂದ ? ಇದನ್ನು ಪರೀಕ್ಷಿಸಿ ನೋಡಬೇಕು," ಎಂದು ಒಂದು ವಿರಕ್ತಾಸನವನ್ನೂ ಇನ್ನೊಂದು ಸಂಸಾರಿಯ ಆಸನವನ್ನೂ ಹಾಕಿಸಿದಳು. ಸುಕವಿಜನಮನಃ ಪದ್ಮಿನೀ ರಾಜಹಂಸ (ವಾರಿಷೇಣ)ನು ಬಂದು ವಿರಕ್ತನ ಆಸನದಲ್ಲಿ ಕುಳಿತುಕೊಳ್ಳಲು ಜಿನಧರ್ಮವೆಂಬ ಗಗನದ ಬೆಳುದಿಂಗಳಂಥವಳಾದ ಆ ಚೇಳಿನಿ ಮಹಾದೇವಿಯು ವಾರಿಷೇಣ ಮುನಿವರನ ಪಾದಪಲ್ಲವಗಳನ್ನು ಅನೇಕ ಹೂಗಳಿಂದ ಪೂಜೆಮಾಡಿ ಮಹಾಭಕ್ತಿಯಿಂದ ವಂದನೆ ಸಲ್ಲಿಸಿ, ಕೈಜೋಡಿಸಿ, ತಲೆಬಾಗಿಸಿ, ಮುಂದೆ ಕುಳಿತಳು ೧೭೩. "ನಿಮ್ಮಪಾದ, ನಿಮ್ಮ ಚರಣಯುಗಳವನ್ನು ಇಂದು ಕಂಡು ಸಂತೋಷಪಟ್ಟೆ. ಇನ್ನು ನಮಗಿಂತ ಧನ್ಯರು ಯಾರೂ ಇಲ್ಲ. ಇದು ಖಂಡಿತ. ೧೭೪. ನನಗೆ ಏನು ಅಪ್ಪಣೆ? " ಎಂದು ಕೇಳಲು, ಮುನಿಯು "ನಿಮ್ಮ ಐನೂರು ಮಂದಿ ಸೊಸೆಯರನ್ನು ಶೃಂಗಾರಮಾಡಿಸಿ ಬೇಗ ಕರೆದುಕೊಂಡು ಬನ್ನಿ" ಎಂದನು. ಚೇಳಿನಿ ಮಹಾದೇವಿ ತನ್ನ ರತ್ನಖಚಿತವಾದ ಉಪ್ಪರಿಗೆಗೆ ಹೋಗಿ ಸೇವಕಿಯರನ್ನು ಕರೆದು "ತಡಮಾಡದೆ ಶೃಂಗಾರಮಾಡಿಕೊಂಡು ಬರತಕ್ಕದ್ದು. ನಿಮ್ಮ ವಲ್ಲಭನು ಬಂದಿದ್ದಾನೆಂದು ಹೇಳಿ" ಎಂದು ಐನೂರ್ವರು ಯುವರಾಣಿಯರಿಗೂ ಹೇಳಿ ಕಳುಹಿಸಿದಳು. ಅವರು ಕೇಳಿ ದಕ್ಷಿಣದ ಗಾಳಿಯ ಸ್ಪರ್ಶದಿಂದ ಕಾಂತಿಹೊಂದಿದ ಮಲ್ಲಿಗೆಯ ಬಳ್ಳಿಯಂತೆ ಉಬ್ಬಿ ಮನಸ್ಸಿಗೆ ಬಂದ ಅಲಂಕಾರವನ್ನು ಮಾಡಿಕೊಳ್ಳುವಾಗ ಒಬ್ಬಳು ೧೭೫. ವಿಶೇಷ ಪ್ರೀತಿಯುಂಟಾಗಲು

ಅನುರಾಗವೊದವೆ ಬಟ್ಟಂ
ಸ್ತನದೊಳ್ ಕಟಿಸೂತ್ರಮಂ ಪದದ್ವಯದೊಳ್ ಪೆಂ
ಪಿನ ಹಾರವಂ ಕರಂಗಳೊ
ಳನುನಯದಿಂ ಕಟ್ಟಿ ತುರಿಪದಿಂದಂ ಬಂದಳ್ ೧೭೬

ಲೀಲೆಯಿನೊಳ್ಪುವೆತ್ತ ಪೊಸ ಚೀನಮನುಟ್ಟು ಬೆಡಂಗುವೆತ್ತ ಪ
ಚ್ಚೋಲೆಯನಿಕ್ಕಿ ಕಣ್ಗೆವರೆ ರೂಪು ವಿಳಾಸಮಳುಂಬಮಾಗೆ ಭೂ
ಪಾಲಕ ಚಿತ್ತಮಂ ಪಡೆಯಲೆಂದು ಮಹೋತ್ಸವದಿಂದೆ ಪೊಣ್ಮೆಯಿಂ
ಬಾಲಿಕೆ ಬಂದಳೊರ್ವಳತಿರಾಗದೆ ಕಿನ್ನರ ಕಾಂತೆಯಂದದಿಂ ೧೭೭

ಹಾರಮನಿಕ್ಕಿ ಪೊಚ್ಚ ಪೊಸ ಮಲ್ಲಿಗೆಯಂ ಮುದದಿಂ ತುಱುಂಬಿ ವಿ
ಸ್ತಾರದಿನಿಟ್ಟು ಚಂದನದ ಬಟ್ಟನಳಂಕೃತಿಯಿಂದ ಮುಟ್ಟು ಧಾ
ತ್ರೀ ರಮಣೀಯಮಪ್ಪ ಮೃದುವಪ್ಪ ದುಕೂಲಮನರ್ತಿವಟ್ಟು ವಾಕ್
ಶ್ರೀರಮೆಯಂತೆ ಬಂದಳುಱದೊರ್ವಳಪೂರ್ವ ಮನೋನುರಾಗದಿಂ ೧೭೮

ಸುಳಿಗುರುಳೋಳಿ ಕಣ್ಗೆವರೆ ನೀಳ್ದಲರ್ಗಣ್ಕಡು ರಮ್ಯಮಾಗೆ ಕೋ
ಮಲ ತನು ಭಂಗಿವೆತ್ತೆಸೆಯೆ ಪರ್ವಿದ ಪುರ್ವಿನಿಗಂಪು ಸೋಲಮಂ
ಪೞಿಲನೆ ಮಾಡೆ ಭೂಭುಜನ ಚಿತ್ತಮನೀಗಳೆ ಸೂಱೆಗೊಳ್ವೆನೆಂ
ಬಳಿಪಿನದೊರ್ವಳುರ್ವಶಿವೊಲೊಪ್ಪಿರೆ ಬಂದಳುದಾತ್ತ ಲೀಲೆಯಿಂ ೧೭೯

ಹಣೆಯಲ್ಲಿಡಬೇಕಾದ ಚುಕ್ಕೆಯನ್ನು ಮೊಲೆಯ ಮೇಲೆ, ಕಟಿ ಸೂತ್ರವನ್ನು (ಸೊಂಟಕ್ಕೆ ಕಟ್ಟುವ ದಾರ) ಪಾದಗಳಿಗೂ ಹೆಮ್ಮೆಯ ಹಾರವನ್ನು ಕೈಗಳಲ್ಲಿಯೂ ಪ್ರೀತಿಯಿಂದ ಕಟ್ಟಿಕೊಂಡು ಆತುರವಾಗಿ ಬಂದಳು, ೧೭೬. ಇನ್ನೊಬ್ಬ ಯುವತಿ ಅತ್ಯಂತ ಪ್ರೇಮ ದಿಂದ ಕಿನ್ನರ ಕಾಂತೆಯೋಪಾದಿಯಲ್ಲಿ ಬಹಳ ಸಂತೋಷವಾಗಿ ಹೊಸ ಚೀನಾಂಬರವನ್ನು ಸೊಗಸಾಗಿ ಉಟ್ಟುಕೊಂಡು ಪಚ್ಚೆಯ ಓಲೆಗಳನ್ನು ಅಂದವಾಗಿ ಧರಿಸಿಕೊಂಡು ತನ್ನ ರೂಪ ಕಣ್ಣಿಗೆ ಮೆಚ್ಚಿಗೆಯಾಗಲು ವಿಲಾಸವು ಅಧಿಕವಾಗಲು ಭೂಪಾಲಕನ ಮನಸ್ಸನ್ನು ಆಕರ್ಷಿಸುವ ಆಸೆಯಿಂದ ಸಂಭ್ರಮದಿಂದ ಬಂದಳು. ೧೭೭. ಹಾರವನ್ನು ಧರಿಸಿಕೊಂಡು ಹೊಚ್ಚ ಹೊಸಮಲ್ಲಿಗೆಯ ದಂಡೆಯನ್ನು ತುರುಬಿನಲ್ಲಿ ಮುಡಿದುಕೊಂಡು ಚಂದನದ ತಿಲಕವನ್ನು ಧರಿಸಿಕೊಂಡು, ಲೋಕಕ್ಕೇ ರಮಣೀಯವಾದ ಶ್ರೇಷ್ಠವಾದ ರೇಷ್ಮೆ ಸೀರೆ ಯನ್ನು ಅಲಂಕಾರವಾಗಿ ಉಟ್ಟುಕೊಂಡು ವಾಗ್ದೇವಿಯಂತೆ ಅದೊಂದು ಅಪೂರ್ವವಾದ ಮನಃ ಪ್ರೀತಿಯಿಂದ ಬಂದಳು ೧೭೮. ಸುಳಿಗುರುಳಿಗಳ ರಾಶಿ ನೋಡುವುದಕ್ಕೆ ಆಕರ್ಷಕ ವಾಗಿರಲು ದೀರ್ಘವಾದ ಕಣ್ಣುಗಳು ಬಹಳ ಸುಂದರವಾಗಿರಲು ಕೋಮಲ ಶರೀರ ವೊಂದು ಸುಂದರ ರೀತಿಯಿಂದ ಶೋಭಿಸುತ್ತಿರಲು ಹಬ್ಬಿದ ಹುಬ್ಬಿನ ಸುವಾಸನೆ ಆಕರ್ಷಣೆ ಯನ್ನುಂಟುಮಾಡಲು ರಾಜನ ಮನಸ್ಸನ್ನು ಈಗಲೇ ಸೂರೆಗೊಳ್ಳುವ ಆಸೆಯಿಂದ ಒಬ್ಬಳು ಊರ್ವಶಿಯ ಹಾಗೆ ಶೋಭಿಸುತ್ತ ಲೀಲಾವಿಲಾಸದಿಂದ ಬಂದಳು ೧೭೯. ಹುಬ್ಬು

ಸುಲಿಪಲ್ ವಿಭ್ರಮಮಂ ಮುಖಂ ಕಮಳಮಂ ಪಾಠೀನಮಂ ಕಣ್ಗಳು
ಜ್ವಳಬಾಳೇಂದುವನೊಪ್ಪುವೆತ್ತ ನಿಟಿಳಂ ಕರ್ಣದ್ವಯಂ ನೆಯ್ದಿಲಂ
ನಳಿತೋಳ್ ಸಲ್ಲತೆಯಂದಮಂ ನೆಱೆಯೆ ಪೋಲ್ತೊರಂತೆ ಚೆಲ್ವಾಗೆ ಕೋ
ಮಳೆಯೊರ್ವಳ್ ನಡೆತಂದಳಂದು ಮದನೇಭೇಂದ್ರಂಬೊಲಾಶ್ಚರ್ಯದಿಂ ೧೮೦

ಉಡಿಯದೆ ಮಾಣದೀ ಮುಡಿಯ ಭಾರದೊಳೀ ಕೊರಲಾದ ಪಾಂಗಿನಿಂ
ದುಡಿಯದೆ ಮಾಣದೀ ಕುಚದ ಭಾರದಿನೊಳ್ನಡುವಕ್ಕಟಕ್ಕಟ
ನ್ನುಡಿಯದೆ ಮಾಣದೀ ಕಟಿಯ ಭಾರದಿನೀ ಕಣಕಾಲ್ಗಳೆಂದು ನೇ
ರ್ಪಡೆ ಪಲರ್ಗೊರ್ವಳದ್ಭುತಮನೊರ್ಮೆಯೆ ಪುಟ್ಟಿಸಿ ಬಂದಳರ್ತಿಯಿಂ ೧೮೧

ಮದನನ ಮಂತ್ರದೇವತೆಯೊ ಕಾಮನ ನಚ್ಚುವ ಪುಷ್ಪಬಾಣವೋ
ಮದನನ ಗಂಧಸಿಂಧುರವೊ ಮನ್ಮಥರಾಜನ ರಾಜ್ಯಲಕ್ಷ್ಮಿಯೋ
ವಿದಿತಮಿವಳ್ಜಗತ್ರಯದೊಳೆಂಬಭಿಶಂಕೆಯನುಂಟುಮಾಡಿ ಸಂ
ಪದದಿನಪೂರ್ವರೂಪೆ ನಡೆತಂದಳನಂಗನ ಶಸ್ತ್ರದಂದದಿಂ ೧೮೨

ವಾದ ಹಲ್ಲು, ವಿಭ್ರಮವನ್ನೂ, ಮುಖ ಕಮಲವನ್ನೂ, ಕಣ್ಣುಗಳು ಪಾಠೀನವೆಂಬ ಮೀನುಗಳನ್ನೂ ಪ್ರಕಾಶಮಾನವಾದ ಅಂದವಾದ ಹಣೆಯು ಬಾಲಚಂದ್ರನನ್ನೂ ಎರಡು ಕಿವಿಗಳು ನೆಯ್ದಿಲೆಗಳನ್ನೂ ಉದ್ದನೆಯ ತೋಳುಗಳು ಸುಂದರವಾದ ಬಳ್ಳಿಗಳ ಅಂದವನ್ನೂ ವಿಶೇಷವಾಗಿ ಹೋಲುತ್ತ ಸುಂದರವಾಗಿರಲು ಒಬ್ಬ ಕೋಮಲೆಯು ಮನ್ಮಥನ ಆನೆಯೋಪಾದಿಯಲ್ಲಿ ಆಶ್ಚರ್ಯವುಂಟು ಮಾಡುತ್ತ ಅಲ್ಲಿಗೆ ಬಂದಳು ೧೮೦. ಈ ತಲೆಗೂದಲಿನ ಭಾರದಿಂದ ಈ ಕೊರಲು ಮುರಿಯದೆ ಇರುವುದಿಲ್ಲ. ಈ ಮೊಲೆಯ ಭಾರದಿಂದ ಸಣ್ಣ ನಡು ಮುರಿಯದೆ ತಪ್ಪದು, ಅಯ್ಯೋ, ಈ ಸೊಂಟದ ಭಾರದಿಂದ ಇವಳ ಕಣಕಾಲುಗಳು ಮುರಿಯದೆ ಇರವು ಎಂದು ನೋಡುವ ಹಲವರಿಗೆ ಆಶ್ಚರ್ಯ ಭಯಗಳನ್ನುಂಟು ಮಾಡುತ್ತ ಒಬ್ಬಳು ಪ್ರೀತಿಯಿಂದ ಬಂದಳು. ೧೮೧. ಮನ್ಮಥನ ಮಂತ್ರದ ಅಭಿಮಾನ ದೇವತೆಯೋ, ಕಾಮನ ಪ್ರೀತಿಯ ಹೂಬಾಣವೋ, ಮದನನ ಮದ್ದಾನೆಯೋ ಮನ್ಮಥ ರಾಜನ ರಾಜ್ಯಲಕ್ಷ್ಮಿಯೋ ಈ ಜಗತ್ರಯದಲ್ಲಿಯೂ ಇವಳು ಪ್ರಸಿದ್ಧಳು, ಎಂಬ ಅನುಮಾನವನ್ನುಂಟುಮಾಡುತ್ತ ಒಬ್ಬ ರೂಪವತಿಯು ಅನಂಗನ ಶಸ್ತ್ರದೋಪಾದಿಯಲ್ಲಿ ಕಂಗೊಳಿಸುತ್ತ ಬಂದಳು ೧೮೨. ಒಬ್ಬ

ಜಿನನೊರ್ವಂ ಪೆಱಗಾಗೆ ಮತ್ತುೞಿದರಂ ಜೀಯೆಂಬಿನಂ ಕೊಂದು ಕೂ
ಗೆನೆತಾನೆಂದು ಮಹಾಪ್ರತಾಪದೊದವಿಂ ಮೆಯ್ವೆರ್ಚಿ ವೀರಕ್ಕೆ ಪೊ
ಟ್ಟನೆ ಮುಯ್ವಾಂತು ಮನೋಜರಾಜನದಟಿಂದೆತ್ತಿರ್ದ ಪಾಠೀನ ಕೇ
ತನಮಂ ಪೋಲ್ತುದು ಕಾಂತೆಯೊರ್ವಳ ಕಟಾಕ್ಷದ್ವಂದ್ವ ವಿಕ್ಷೇಪಣಂ ೧೮೩

ಸುೞಿಗುರುಳ ಪಙ್ಕ್ತಿ ತುಂಬಿಯ
ಬಳಗದವೊಲ್ ಶೋಭೆವೆತ್ತು ರಂಜಿಸಿ ಮೊಲೆಗಳ್
ಕಳಶದವೊಲೆಸೆಯೆ ಬಂದಳ್
ವಿಳಾಸದಿಂದೊರ್ವಳಂಗಜಾತನ ಸತಿವೊಲ್ ೧೮೪

ಸರಸಿರುಹವದನೆ ಮದಸಿಂ
ಧುರಗಾಮಿನಿ ನೀಲಕುಟಿಲ ಕುಂತಳೆಯೊರ್ವಳ್
ತರುಣಿ ಮನಸಿಜನ ನಚ್ಚಿನ
ಸರಲೆನಿಸಿ ವಿಳಾಸಮುಮರೆ ನಯದಿಂ ಬಂದಳ್ ೧೮೫

ಅಲುಂಗೆ ಕುರುಳ್ ತೊಡವು ಪಳಂ
ಚಲೆಯೆ ತಳತ್ತಳಿಸಿ ಪೊಳೆಯೆ ತನುರುಚಿಯೊರ್ವಳ್
ಕಳಹಂಸಗಮನೆ ಕಾಮನ
ತೊಳಗುವ ಕೂರಂಬಿನಂತೆ ಪದೆಪಿಂ ಬಂದಳ್ ೧೮೬

ಜಿನನ ಹೊರತಾಗಿ ಉಳಿದವರು 'ಜೀ'ಯೆನ್ನುವಂತೆ ಕೊಂದು ಕೂಗಿಡಿಸೆನೆ, ತಾನು ?" ಎಂದು ಅತಿಶಯವಾದ ಪ್ರತಾಪದಿಂದ ಮೈಯುಬ್ಬಿ ವೀರಗುಣಕ್ಕೆ ಹೆಗಲುಕೊಟ್ಟು ಮನೋಜರಾಜನ ಶೌರ್ಯದಿಂದ ಎತ್ತಿದ ಮೀನಕೇತನವನ್ನೇ ಹೋಲುತ್ತ ಇತ್ತು, ಒಬ್ಬ ಕಾಂತೆಯ ಕಡೆಗಣ್ಣ ನೋಟದ ಸೊಗಸು. ೧೮೩. ಸುಳಿಗುರುಳುಗಳ ಸಾಲಿನ ಮೇಲೆ ಕುಳಿತ ತುಂಬಿಗಳ ಬಳಗದಂತೆ ಶೋಭಿಸುತ್ತ ಇರಲು, ಮೊಲೆಗಳು ಕಳಶಗಳಂತೆ ರಾಜಿಸುತ್ತಿರಲು, ಒಬ್ಬಳು ಅಂಗಭವನ ಹೆಂಡತಿ, ರತಿಯ ಹಾಗೆ ಬಂದಳು ೧೮೪. ಕಮಲಮುಖಿ, ಮದ್ದಾನೆಯ ನಡಿಗೆಯುಳ್ಳವಳು, ಕಪ್ಪು ಬಣ್ಣದ ಕೂದಲ ಕುಂತಳಗಳುಳ್ಳವಳೂ ಆದ ಒಬ್ಬ ತರುಣಿಯು ಮನ್ಮಥನ ಪ್ರೀತಿಯ ಬಾಣವೆನ್ನಿಸುವಂತೆ, ವಿಲಾಸದಿಂದ ಬಂದಳು. ೧೮೫. ಮುಂಗೂದಲು ಅಲ್ಲಾಡಲು ಒಡವೆ ಹೊಳೆಯಲು, ದೇಹಕಾಂತಿ ಥಳಥಳಿಸುತ್ತಿರಲು ಒಬ್ಬಳು ಕಳಹಂಸದಂತೆ ಸಂಚರಿಸುವ ಹೆಣ್ಣು ಕಾಮನ ಹೊಳೆಯುವ ಹರಿತವಾದ ಬಾಣದಂತೆ ಉತ್ಸಾಹದಿಂದ ಬಂದಳು. ೧೮೬. ಚಂಚಲಾಕ್ಷಿಯೊಬ್ಬಳು ಆಲದ ಹಣ್ಣನಂಥ ಕೆಂಪನೆ ತುಟಿಯುಳ್ಳವಳು ಸುಂದರವಾದ

ತರಳಾಕ್ಷಿ ವಟಫಲಾಧರೆ
ಸುರುಚಿರ ನಾನಾ ವಿಭೂಷಣಾನ್ವಿತೆಯೊರ್ವಳ್
ಸುರವನಿತೆಯೆ ವಸುಮತಿಗವ
ತರಿಸಿದಳೆಂಬಂತೆ ವಿಭವದಿಂದಂ ಬಂದಳ್ ೧೮೭

ತರುಣ ಹರಿಣಾಕ್ಷಿ ಬಿಂಕಂ
ಬೆರಸೊರ್ವಳ್ನೋಡ ಗಳಿಗೆಗೋರಡಿಯಂ ವಿ
ಸ್ತರದಿಂದಿಡುತುಂ ಬಂದಳ್
ನೆರವಿಯ ನೋಟಕರ ಮನಮನಲ್ಲಾಡಿಸುತುಂ ೧೮೮

ಸಲ್ಲಲಿತಗಾತ್ರೆಯೊರ್ವಳ್
ಮಲ್ಲಿಗೆಯಂ ಮುಡಿದು ಮುತ್ತಿನೈಸರವಂ ತ
ಳ್ಪಿಲ್ಲದೆ ಕಟ್ಟಿ ಮನೋಜನ
ಬಿಲ್ಲಿಂ ಬರ್ದುಕಿದಳರಾಳಿಯಂತಿರೆ ಬಂದಳ್ ೧೮೯

ತರಣಿಯುಮಂ ಚಂದ್ರನುಮಂ
ಸಿರಿಕಂಡದ ಬೊಟ್ಟುಮೆಸೆವ ಕುಂಕುಮಮುಂ ಪೋ
ಲ್ತಿರಲಮವಾಸೆವೊಲೊರ್ವಳ್
ಸರೋಜಮುಖಿ ಬಂದಳಂದು ವಿಭ್ರಮದಿಂದಂ ೧೯೦

ನಾನಾ ಆಭರಣಗಳಿಂದ ಕೂಡಿದವಳು ದೇವತಾಸ್ತ್ರೀಯೇ ಭೂಮಿಗೆ ಇಳಿದು ಬಂದಳೆಂಬ ಹಾಗೆ ವೈಭವದಿಂದ ಬಂದಳು ೧೮೭. ಜಿಂಕೆಯ ಮರಿಯಂಥ ಕಣ್ಣುಗಳುಳ್ಳವಳೊಬ್ಬಳು ಬಿಂಕದಿಂದ ಗಳಿಗೆಗೊಂದು ಹೆಜ್ಜೆಯಿಡುತ್ತ ಅಲ್ಲಿ ಗುಂಪು ಸೇರಿದ್ದ ನೋಟಕರ ಮನಸ್ಸನ್ನು ಚಂಚಲಗೊಳಿಸುತ್ತ ಬಂದಳು ೧೮೮. ಸುಂದರಶರೀರೆಯೊಬ್ಬಳು ಮಲ್ಲಿಗೆ ಹೂವನ್ನು ಮುಡಿದುಕೊಂಡು ಮುತ್ತಿನ ಐದೆಳೆಯ ಸರವನ್ನು ಕಟ್ಟಿಕೊಂಡು ಮನ್ಮಥನ ಬಿಲ್ಲಿನಿಂದ ಕಳಚಿಕೊಂಡು ಬಂದ ಬಾಣಸಮೂಹದಂತೆ ಬಂದಳು ೧೮೯. ಶ್ರೀಗಂಧದ ಚುಕ್ಕೆಯೂ ಶೋಭಿಸುವ ಕುಂಕುಮವೂ ಸೂರ್ಯನನ್ನೂ ಚಂದ್ರನನ್ನೂ ಹೋಲುತ್ತಿರಲು ಕಮಲಮುಖಿಯೊಬ್ಬಳು ಅಮವಾಸ್ಯೆಯಂತೆ ವಿಭ್ರಮದಿಂದ ಬಂದಳು. ೧೯೦. ಕೊಂಚ

ನಸುಗೆಂಪುವಡೆದ ದಶನದ
ಮಿಸುಪಧರದ ಕೆಂಪುಮಿನ ಸುಧಾಕರರಂ ಪೋ
ಲ್ತೆಸೆದಿರೆ ಪುಣ್ಣಮೆಯಂತಿರೆ
ಶಶಿಮುಖಿ ನಡೆತಂದಳೊರ್ವಳತಿಶಯದಿಂದಂ ೧೯೧

ಗದ್ಯ॥ ಅಂತು ಶೃಂಗಾರರಸಂಗಳ್ ಮೇರೆದಪ್ಪಿದಂತೆ ಲಾವಣ್ಯಯುಕ್ತೆಯರಪ್ಪಯ್ನೂಱು ಸೊಸೆದಿರುಂ ಚೇಳಿನೀ ಮಹಾದೇವಿಯಲ್ಲಿಗೆ ವರ್ಪುದುಂ ಅವರ್ಬೆರಸು ಸಮ್ಯಕ್ತ್ವ ಚೂಡಾಮಣಿಯಲ್ಲಿಗೆ ಚೇಳಿನೀ ಮಹಾದೇವಿ ಬಂದು ಪೊಡೆವಟ್ಟಪ್ಪುದುಂ ೧೯೨

ಒದವಿದ ಬಿರುದಿಂ ಪೆಱರ
ಗ್ಗದ ಗಂಡರ ಬೆಂಡುಮಾಡಿ ಗೆಲ್ಲಂಗೊಂಡಾ
ಮದನನ ವಿಜಯ ಗಜೇಂದ್ರನ
ರದನಿಗಳಂ ಪೋಲ್ತವೊರ್ವಳ ಸ್ತನಯುಗಳಂ ೧೯೩

ಅಪಹರಿಸೆ ಪೆಱಂ ಬಿರುದಂ
ಕಿಡಿಸುವೆನೆಂಬೊಂದು ಪೂಣ್ಕೆಯಿಂದಂ ಕಾಮಂ
ಪಿಡಿದಿರ್ದಡ್ಡಣಮೆನಿಸಿದು
ದೊಡಂಬಡಿಂದೊರ್ವ ವಾರಿಜಾನನೆಯ ಕುಚಂ ೧೯೪

ಕೆಂಪಾದ ಹಲ್ಲಿನ, ಹೊಳೆಯುವ ತುಟಿಯ ಕೆಂಪೂ ಸೂರ್ಯಚಂದ್ರರನ್ನು ಹೋಲುತ್ತ ಶೋಭಿಸಿರಲು ಹುಣ್ಣಿಮೆಯ ಹಾಗೆ ಚಂದ್ರಮುಖಿಯೊಬ್ಬಳು ಸಡಗರದಿಂದ ಬಂದಳು. ೧೯೧. ಹಾಗೆ ಶೃಂಗಾರರಸಗಳು ಮೇರೆ ಮೀರಿದಂತೆ ಲಾವಣ್ಯವತಿಯರಾದ ಐನೂರು ಸೊಸೆಯರೂ ಚೇಳಿನೀ ಮಹಾದೇವಿಯ ಬಳಿಗೆ ಬರುತ್ತಲೇ ಅವರೊಡನೆ ಕೂಡಿ ಸಮ್ಯಕ್ತ್ವ ಚೂಡಾಮಣಿಯಾದ ವಾರಿಷೇಣನ ಬಳಿಗೆ ಬಂದು ನಮಸ್ಕರಿಸಿದರು. ೧೯೨. ತನಗೆ ಲಭಿಸಿದ ಬಿರುದಿನಿಂದ ಇತರ ಶ್ರೇಷ್ಠರಾದ ವೀರರನ್ನು ಬೆಂಡಿನಂತೆ ನಿಸ್ಸಾರರನ್ನಾಗಿ ಮಾಡಿ ವಿಜಯವನ್ನು ಗಳಿಸಿದ ಆ ಮನ್ಮಥನ ವಿಜಯಗಜದ ದಂತಗಳನ್ನೇ ಹೋಲುತ್ತಿದ್ದುವು—ಒಬ್ಬಾಕೆಯ ಎರಡು ಸ್ತನಗಳು ! ೧೯೩. ಬೇರೆಯವನು ತನ್ನ ಬಿರುದನ್ನು ಅಪಹರಿಸಿದರೆ ಅವನನ್ನು ಕೆಡಿಸುವೆನೆಂಬ ಪ್ರತಿಜ್ಞೆಯಿಂದ ಮನ್ಮಥನು ಹಿಡಿದಿದ್ದ ಗುರಾಣಿಯೆಂಬಂತೆ ಒಬ್ಬ ಕಮಲಮುಖಿಯ ಮೊಲೆಗಳು ತೋರುತ್ತಿದ್ದುವು. ೧೯೪. ಮಹಾಕೋಪದಿಂದ ವಿಜೃಂಭಿಸಿ ಚಂದ್ರನನ್ನು ಹಿಡಿಯುವುದಕ್ಕೋಸ್ಕರ ರಾಹು

ಮಸಗಿ ಕಡುಗೋಪದಿಂದಂ
ಸಸಿಯಂ ಪಿಡಿಯಲ್ಕೆ ರಾಹು ಸೆಡೆಯದೆ ನೆಱೆ ಸಂ
ಕಿಸದೆಯ್ತಂದಪುದೆಂಬವೊ
ಲೆಸೆದಿರ್ದುವು ಮಿಸುಪ ಭಾಳಮುಂ ಸೋರ್ಮುಡಿಯುಂ ೧೯೫

ಮುನಿದು ಮನೋಜಂ ಲೋಕದ
ಜನಮಂ ತನಗೆಱಗಿಸಲ್ಕೆ ಕೂರ್ಪಿಂದಂ ಭೋಂ
ಕನೆ ತೊಟ್ಟು ಪೊಳೆವ ಕವಲಂ
ಬೆನೆ ಪೋಲ್ತುವು ಕಾಂತೆಯೊರ್ವಳಕ್ಷಿದ್ವಂದ್ವಂ ೧೯೬

ಗದ್ಯ॥ ಲಲಿತತೆವೆತ್ತು ಕೊಂಕಿ ಪರಿದೊಪ್ಪದೊಳೊಂದಿರೆ ಪುರ್ವು ಚಾಪಮಂ ಸುಲಲಿತಮಾಗಿ ನೀಳ್ದ ತುಱುಗಿರ್ದಮೆಗಳ್ ತಮಮಂ ಬೆಳರ್ಪ ಕಣ್ಮಲರ್ಗಣೆಯಂದಮಂ ನೆಱೆಯೆ ಪೋಲ್ತಿರೆ ಕಾಮುಕರೊಳ್ ಪಳಂಚಲೆವ ಮನೋಜನೇಱಿಸಿದ ಬಿಲ್ಲವೊಲಿರ್ದುದು ವಕ್ತ್ರಮೊರ್ವಳಾ ೧೯೭

ಅರುಣತೆಯಿಂದಮೊಪ್ಪುವಧರಚ್ಛವಿಯಂ ರವಿಯೆಂದು ವಕ್ತ್ರಪಂ
ಕರುಹಮಲರ್ಕೆಯಿಂದಲರೆ ರಾಗಿಸಿ ಪೋಪುದು ರಾತ್ರಿಯೆಂದು ಬ
ಬ್ಬಿರಿಬಿರಿದೊಂದಿ ನಿಂದವೊಡನಿಂ ಪೊಣರ್ವಕ್ಕಿಗಳೆಂಬ ದೇಸಿಯಿಂ
ಕರಮಮರ್ದೊಪ್ಪುಗುಂ ನಿಬಿಡವೃತ್ತಕುಚಂ ವರಕಾಂತೆಯೊರ್ವಳಾ ೧೯೮

ಗದ್ಯ॥ ಮತ್ತೊರ್ವಳ್ ೧೯೯

ಅಂಜದೆ, ಅನುಮಾನಿಸದೆ ಬರುತ್ತಿರುವನೆಂಬ ಹಾಗೆ ಅವಳ ಹಣೆಯೂ ಸೋರು ಮುಡಿಯೂ ಶೋಭಿಸುತ್ತಿದ್ದುವು. ೧೯೫. ಮನ್ಮಥನು ಮುನಿಸುಗೊಂಡು ಲೋಕದ ಜನರನ್ನು ತನಗೆ ವಿಧೇಯರನ್ನಾಗಿ ಮಾಡಿಕೊಳ್ಳಲು ಆಸೆಯಿಂದ ತಟ್ಟನೆ ಹೂಡಿದ ಕವಲುಬಾಣವೋ ಎಂಬ ಹಾಗೆ ಒಬ್ಬ ಕಾಂತೆಯ ಎರಡು ಕಣ್ಣುಗಳು ಶೋಭಿಸುತ್ತಿದ್ದುವು. ೧೯೬. ಹುಬ್ಬು ಅಂದದಿಂದ ಕೂಡಿ ಸೊಟ್ಟಗೆ ಹರಿದು ಹಬ್ಬಿ ಬಾಣವನ್ನೂ, ಸುಂದರವಾಗಿ ಉದ್ದಕ್ಕೆ ದಟ್ಟವಾಗಿದ್ದ ಕಣ್ಣೆವೆಗಳು ಕತ್ತಲೆಯನ್ನೂ ಬೆಳ್ಪನ್ನೊಳಗೊಂಡ ಕಣ್ಣೆಂಬ ಹೂಗಳು ಬಾಣದ ಅಂದವನ್ನೂ ಹೋಲುತ್ತಿರಲು, ಕಾಮುಕರ ಮೇಲೆ ಮನ್ಮಥನು ಬಾಣಪ್ರಯೋಗ ಮಾಡಲು ಸಿದ್ಧವಾಗಿ ಏರಿಸಿರುವ ಬಿಲ್ಲಿನಂತೆ ಒಬ್ಬಳ ಮುಖವು ಇತ್ತು. ೧೯೭. ಶ್ರೇಷ್ಠಳಾದ ಕಾಂತೆಯೊಬ್ಬಳ ಕೆಂಪು ಕಾಂತಿಯಿಂದ ಹೊಳೆಯುವ ತುಟಿಯ ಬಣ್ಣವನ್ನು ಸೂರ್ಯನೆಂದು ಬಗೆದು ಮುಖಕಮಲವು ಸುಂದರವಾಗಿ ಅರಳಿತು. ರಾತ್ರಿ ಇನ್ನೇನು ಹೋಗಿ ಬಿಡುವುದೆಂದು ಉತ್ಸಾಹದಿಂದ ಉಬ್ಬಿ ಪೊಣರ್ವಕ್ಕಿಗಳು ಹೊಂದಿಕೊಂಡು ನಿಂತಂತೆ ಎರಡು ಕುಚಗಳು ಶೋಭಿಸುತ್ತಿದ್ದುವು. ೧೯೮. ಮತ್ತೊಬ್ಬಳು "ಇವಳ ಹಣೆಯೆಂಬ ಚಂದ್ರನನ್ನು ಚೆನ್ನಾಗಿ ನೋಡೋಣವೆಂದರೆ ಈ

ಇವಳ ಲಲಾಟದೆಂಬ ಸಸಿಯಂ ನೆಱೆ ನೋಡುವೆವೆಂದೊಡೀ ಮನೋ
ಭವನೆಮಗಡ್ಡಮಾಗಿ ನಿಡುವುರ್ವುಗಳೆಂಬ ಪೊದಳ್ದ ಚಾಪಮಂ
ಸುವಿಟಜನೋಪಘಾತಮನುವಗ್ರದಿನಿಕ್ಕಿದನೆಂದು ನೋವಿನೊಳ್
ಕಿವಿಗೆ ಮನೋಜನಂ ಪಱಿದು ಸಾಱುವಪೊಲ್ನಿಡುಗಣ್ಗಳೊಪ್ಪುಗುಂ ೨೦೦

ಗಾಂಪಿನೊಳನ್ಯ ಪುಷ್ಪದೊಳು ಮೇಳಿಸಿ ನೀಳ್ದುದಿದೇಕೆ ಕಂಪಿನೊಳ್
ಪೊಂಪುಳಿವೋಗುತಿರ್ದಮಳ ವಕ್ತ್ರಸರೋಜಮೆ ಸಾಲ್ಗುಮೆಂದು ತ
ಣ್ಗಂಪನುಣಲ್ಕೆ ಬಂದೆಱಗಿ ಕಂಡಿದಿರೊಳ್ ಮಱಿದುಂಬಿ ಮೂಗಿನಿಂ
ಸಂಪಗೆಯೆಂದು ಪೊರ್ದದವೊಲಿರ್ದುವು ತುಂಬಿಗಳಂತೆ ಕುಂತಳಂ ೨೦೧

ಕುವಲಯ ಮಿತ್ರನೆಂದು ನೊಸಲಂ ಪಿಡಿಯಲ್ಕೆಡ ಬಂದು ಚಿತ್ತ ಸಂ
ಭವನಿಡಲಿರ್ದನೆಂದಸಿಯು ಬಾಸೆಯು ನಿಟ್ಟಸಿಯಿಂದೆ ಮೆಯ್ಗಳುಂ
ಜವಜವನಾಗಿ ಪೋಗಲೆಡೆಯಿಲ್ಲದೆ ಶಂಕಿಸಿ ರಾಹು ತಕ್ಕೆಗೊಂ
ಡವೊಲಳವಟ್ಟು ರಂಜಿಪುದು ಕೇಳ್ ಮುಡಿ ಪಂಕರುಹಾಕ್ಷಿಯೊರ್ವಳಾ ೨೦೨

ಪೆಱೆಯುಂಬು ಕವಲಂಬನೆಯ್ದೆ ಸರಲಂ ತೀವ್ರಾಸಿಯುಂ ಚಕ್ರಮುಂ
ನೆಱೆ ಭಾಳಂ ದಿಗುದಂತಪಂಕ್ತಿ ನಳಿತೋಳುದ್ಯತ್ಕುಚಂ ಪೋಲೆ ತ
ಳ್ತಿಱಿಯಲ್ಕಾಮುಕರೊಳ್ ಮನೋಭವ ನೃಪಂ ಮೇಲೆತ್ತಿದಂ ನಾಡೆ ಪೊ
ಚ್ಚಱುಬೇಡೆಂಬವೊಲೊರ್ವ ಕಾಮಿನಿ ಲಸಚ್ಛೃಂಗಾರದಿಂದೊಪ್ಪಿದಳ್ ೨೦೩

ಮನ್ಮಥನೇ ಉದ್ದನೆಯ ಹುಬ್ಬುಗಳೆಂಬ ದೊಡ್ಡ ಬಿಲ್ಲುಗಳನ್ನು ನಮಗೆ ಅಡ್ಡ ಮಾಡಿ ವಿಟ ಜನಸಮೂಹವನ್ನು ಕೊಂದನೆಂದು ದುಃಖದಿಂದ ಮನ್ಮಥನ ಬಳಿಗೆ ಓಡಿಹೋಗಿ ಹೇಳುವ ರೀತಿಯಲ್ಲಿ ಕಿವಿಯವರೆಗೆ ಹಬ್ಬಿದ ಕಣ್ಣುಗಳಿಂದ ಶೋಭಿಸುತ್ತಿದ್ದಳು. ೨೦೦. ಸುವಾಸನೆಯಿಂದ ತುಂಬಿದ ಮುಖಕಮಲವೇ ಸಾಕಾಗಿರುವಲ್ಲಿ ದಡ್ಡತನದಿಂದ ಬೇರೆ ಹೂಗಳ ಪರಿಮಳವನ್ನು ಇದೇಕೆ ಬೆರಸಿದನೆಂದು, ತಂಪನೆಯ ಪರಿಮಳವನ್ನು ಉಣ್ಣಲು ಬಂದು ಮರಿದುಂಬಿಯು ಇದಿರಿನಲ್ಲಿ ಮೂಗನ್ನು ಕಂಡು ಅದು ಸಂಪಿಗೆಯೆಂದು ಭಾವಿಸಿ ಸಮೀಪಿಸದೆ ಇವೆಯೋ ಎಂಬಂತೆ ತಲೆಗೂದಲುಗಳು ಇದ್ದುವು. ೨೦೧. ಕಮಲಾಕ್ಷಿಯಾದೊಬ್ಬಳ ಮುಡಿಯು, ಕನ್ನೈದಿಲೆಯ ಸ್ನೇಹಿತ(ಚಂದ್ರ) ನೆಂದು ಹಣೆಯನ್ನು ಹಿಡಿಯಲೆಂದು ಬಂದು ಮನ್ಮಥನು ಕತ್ತಿಯಿಂದ ಹೊಡೆಯಲಿರುವನೆಂದು ಹೆದರಿ ತೆಳ್ಳನೆಯ ಬಾಸೆಯನ್ನಿಟ್ಟು, ಬೇಗಬೇಗನೆ ಹೊರಟು ಹೋಗಲು ದಾರಿಯಿಲ್ಲದೆ ಅನುಮಾನಿಸಿ ಹಾವು ತಬ್ಬಿಹಿಡಿದ ಹಾಗೆ, ಅಂದವಾಗಿ ಶೋಭಿಸುತ್ತಿತ್ತು. ೨೦೨. ಚಂದ್ರಾಸ್ತ್ರವನ್ನೂ ಕವಲಂಬನ್ನೂ, ಸಲಾಕೆಯನ್ನೂ ಹರಿತವಾದ ಕತ್ತಿಯನ್ನೂ ಚಕ್ರಾಯುಧವನ್ನೂ, ಹಣೆ, ದಂತಪಂಕ್ತಿ, ಉದ್ದನೆಯ ತೋಳುಗಳು, ಉಬ್ಬಿದ ಕುಚಗಳು–ಹೋಲಲು "ಮೇಲೆ ಬಿದ್ದು ಕಾದಲು ಕಾಮುಕರ ಮೇಲೆ ಮನ್ಮಥನು ದಂಡೆತ್ತಿ ಬಂದನು, ಅಹಂಕಾರ ಬೇಡ," ಎಂಬ ಹಾಗೆ ಒಬ್ಬ ಕಾಮಿನಿ ಸುಂದರವಾಗಿ ಶೃಂಗಾರ ಮಾಡಿಕೊಂಡು ಶೋಭಿಸುತ್ತಿದ್ದಳು ೨೦೩. ಮತ್ತೊಬ್ಬಳು ಸ್ಫಟಿಕದ ರಂಗದಮೇಲೆ ಹೆಂಗಸು ತನ್ನ ಹಣೆಯನ್ನೂ

ಗದ್ಯ॥ ಮತ್ತೊರ್ವಳ್ ೨೦೪

ಪಳುಕಿನ ರಂಗದೊಳ್ ವನಿತೆ ತನ್ನ ಲಲಾಟಮುಮಂ ಸ್ವಕೀಯ ಕುಂ
ಡಲಮುಮನೆಯ್ದೆ ಕಂಡು ಬೆರಲಂ ಮಿಡಿದಾಗಸದಿಂದಮಿಂದುಮಂ
ಡಲಮವನೀತಳಕ್ಕಲಸಿ ಬಿದ್ದುದೊ ನೋಡ ಮರಾಳಿಯಿಂದು ಸಂ
ಚಳಿಸದೆ ಮುತ್ತಿಯಿರ್ದಪುವೆನುತ್ತೆ ಮಹೋತ್ಸವದಿಂದ ನೋಡಿದಳ್ ೨೦೫

ಗದ್ಯ॥ ಅಲ್ಲಿ ಮತ್ತೊರ್ವಳ್ ೨೦೬

ನಗೆಗಣ್ ನೀಳಸಹಸ್ರ ಪತ್ರದೆಸಳಂ ನಾಸಾಪುಟಂ ಮಿಕ್ಕಸಂ
ಪಗೆಯಂ ಪೊಕ್ಕುಳು ನಂದಿವಟ್ಟದರಲಂ ಚೆಲ್ವಿಂದುಗುರ್ಕೆಂಡದೆ ಕೇ
ದಗೆಯಂ ಮೊಲ್ಲೆಯ ಭಂಗಿವೆತ್ತ ಮುಗುಳಂ ದಂತಾಳಿಗಳ್ಪೋಲೆ ಕೈ
ಮಿಗೆ ಪುಷ್ಪಾಸ್ತ್ರನ ಪಂಚಬಾಣ ಮಿವಳೆಂಬಾಶಂಕೆಯಂ ಮಾಡಿದಳ್ ೨೦೭

ಗದ್ಯ॥ ಮತ್ತೊರ್ವಳ್ ೨೦೮

ಬಿಂಬಫಲಾಧರಂ ಪವಳಮಂ ಕ್ರಮದಿಂ ತೆರೆಯಂ ವಳಿತ್ರಯಂ
ಮೀಂಬೊಣರಂ ವಿಲೋಲನಯನಂ ಪಲು ಮುತ್ತುಗಳಂ ಕುಚಂಗಳೊ
ಪ್ಪಂ ಬಡೆದಿರ್ದ ದೀಪಮನಸುಂಗೊಳೆ ಪೋಲ್ತಿರೆ ಕಾಮುಕರ್ಗೆ ಹೇ
ಮಾಂಬುಜವಕ್ತ್ರೆ ಕಾಮರಸವಾರ್ಧಿಯಂದದಿನೊಪ್ಪಿತೋಱಿದಳ್ ೨೦೯

ಕರ್ಣಾಭರಣವನ್ನೂ ಚೆನ್ನಾಗಿ ಕಂಡು ಬೆರಳನ್ನು ಮಿಡಿದು ಆಕಾಶದಿಂದ ಚಂದ್ರಮಂಡಲವು ಭೂಮಿಯ ಮೇಲಕ್ಕೆ ಸೋತು ಬಿದ್ದಿತೋ, ನೋಡು ಹಂಸ ಸಮೂಹವಿದು ಚಲಿಸದೆ ಮುತ್ತಿಕೊಂಡಿವೆಯೆನ್ನುತ್ತ ಬಹಳ ಉತ್ಸಾಹದಿಂದ ನೋಡಿದಳು ೨೦೪-೨೦೫. ಅಲ್ಲಿ ಮತ್ತೊಬ್ಬಳು ನಗೆಗಣ್ಣು ಕನ್ನೈದಿಲೆಯ ಪತ್ರದ ಎಸಳನ್ನೂ, ಮೂಗಿನ ಹೊಳ್ಳೆ ಶ್ರೇಷ್ಠವಾದ ಸಂಪಗೆಯನ್ನೂ ಹೊಕ್ಕಳು ನಂದಿಬಟ್ಟಲ ಹೂವನ್ನೂ ಸುಂದರವಾದ ಉಗುರುಗಳು ಕೇದಗೆ ಹೂಗಳನ್ನೂ ಹಲ್ಲಿನಸಾಲು ಅಂದವಾದ ಮೊಲ್ಲೆಯ ಮೊಗ್ಗುಗಳನ್ನೂ ಹೋಲುತ್ತಿರಲು ಮನ್ಮಥನ ಹೂಬಾಣಗಳೆಲ್ಲ ಇವಳೇ ಎಂಬ ಅನುಮಾನವನ್ನುಂಟುಮಾಡಿದಳು ೨೦೬-೨೦೭. ಮತ್ತೊಬ್ಬಳು ಬಿಂಬಫಲದಂತೆ ಇರುವ ತುಟಿ ಹವಳವನ್ನೂ ವಳಿತ್ರಯವು ತೆರೆಯನ್ನೂ ಚಂಚಲನೇತ್ರಗಳು ಮೀನಿನ ಹೊಳಪನ್ನೂ ಹಲ್ಲು ಮುತ್ತುಗಳನ್ನೂ ಕುಚಗಳು ಕಾಂತಿಯುಕ್ತವಾದ ದೀಪವನ್ನೂ ಬಹಳವಾಗಿ ಹೋಲುತ್ತಿರಲು ಕಾಮುಕರಿಗೆ ಚಿನ್ನದ ಕಮಲದಂತಹ ಮುಖವುಳ್ಳವಳು ಕಾಮರಸಸಮುದ್ರಂತೆ ಶೋಭಿಸುತ್ತಿದ್ದಳು ೨೦೮-೨೦೯. ಒಬ್ಬ ಮಣಿಗ್ದೆ ಶ್ರೇಷ್ಠವಾದ ಹೊಳೆಯುತ್ತಿದ್ದ ಗೋಡೆಯಲ್ಲಿ

ಸ್ತನಯುಗಳಂಗಳಂ ತುರಿಪದಿಂ ಪೊಳೆವಗ್ಗದ ಭಿತ್ತಿಯಲ್ಲಿ ಭೋಂ
ಕನೆ ಕೊಳೆ ಕಂಡು ಪೂರ್ಣಘಟಮಂದೊಳಗಂ ನೆಱೆ ನೋಡಲೆಂದು ಮೆ
ಲ್ಲನೆ ತೆಱೆಯಲ್ಕೆ ತತ್ಕುಚದ ಚೋಚಕಮಂ ಗಡಮುಚ್ಚಳೆಂದು ನೆ
ಟ್ಟನೆ ಪಿಡಿದೊರ್ವ ಮುಗ್ಧೆ ಪಿರಿದುಂ ನಗೆಯಂ ಸಭೆಗೆಯ್ದೆ ಮಾಡಿದಳ್ ೨೧೦

ಗದ್ಯ॥ ಮತ್ತೊರ್ವಳ್ ೨೧೧

ಇನಿಯನನಕ್ಕಱಿಂ ಬಿಡದೆ ನೋಡುತುಮಿರ್ದ ಲತಾಂಗಿ ತನ್ನ ರೂ
ಪನೆ ತಡವಿಲ್ಲದಾತ್ಮಪತಿ ನಿಮ್ಮಿದ ಕಂಬದೊಳೆಂದು ಕಂಡು ತೊ
ಟ್ಟನೆ ಮುನಿಸಾಗಿ ಹಃ ಸವತಿಯಂ ನೆಱೆ ತೋಱಿಪನೆಂದು ತನ್ನ ಕಾ
ಮಿನಿಯ ವಿದಗ್ಧ ವೃತ್ತಿಗಳನಕ್ಕ ನಾಳೆಯೆ ತಾನೆ ಕಾಣನೇ ೨೧೨

ಪರಿವ ಪೊಡರ್ಪುಗೆಟ್ಟು ರವಿ ಮುಂದಿರೆ ಲಜ್ಜಿಸಿ ಕಣ್ಣ ಬೆಳ್ಪುಗಳ್
ಕರಮೊಳಗುರ್ಚಿ ಬಂದು ಕೊರಲೊಳ್ ಪೊಱಮಟ್ಟು ಕುಚಾಚಳಾಗ್ರದೊಳ್
ಪರಿದಪುವೆಂಬ ಶಂಕೆಯನೆ ಪುಟ್ಟಿಸುತಿರ್ದುದು ನೋಟಕರ್ಗೆ ಪಂ
ಕರುಹದಳಾಯತಾಕ್ಷಿಯ ಮನೋಹರ ಮೌಕ್ತಿಕಹಾರಮೌಕ್ತಿಕಂ ೨೧೩

ತಟ್ಟನೆ ಸ್ತನಯುಗಳಗಳನ್ನು ನೋಡಿ ಅವು ಪೂರ್ಣಘಟವೆಂದು ಭ್ರಮಿಸಿ ಅವುಗಳ ಒಳಗನ್ನು ನೋಡಬೇಕೆಂದು ಯೋಚಿಸಿ ಮೆಲ್ಲನೆ ತೆರೆಯಲು ಆಕುಚದ ತೊಟ್ಟನ್ನು ಮಡಿಕೆಯ ಮುಚ್ಚಳವೆಂದು ಬಗೆದು ಗಟ್ಟಿಗೆ ಹಿಡಿದುಕೊಂಡು ಆ ಸಭೆಗೆ ವಿಶೇಷವಾಗಿ ನಗೆಯನ್ನುಂಟು ಮಾಡಿದಳು ೨೧೦. ಮತ್ತೊಬ್ಬಳು ಪ್ರಿಯನನ್ನು ಅಕ್ಕರೆಯಿಂದ ಒಂದೇ ಸಮನೆ ನೋಡುತ್ತಿದ್ದ ಸುಂದರಿಯು ತನ್ನ ರೂಪವನ್ನೇ ತನ್ನ ಗಂಡನು ಒರಗಿಕೊಂಡಿದ್ದ ಕಂಬದಲ್ಲಿ ತಡವಿಲ್ಲದೆ ಕಂಡಳು. ಆದರಿಂದ ಅವಳಿಗೆ ತಟ್ಟನೆ ಸಿಟ್ಟುಬಂತು. ಅವನು ತನ್ನ ಸವತಿಯನ್ನು ಬೇಕೆಂದೇ ತೋರಿಸುತ್ತಿರುವನೆಂದು ಯೋಚಿಸಿದಳು. "ತನ್ನ ಕಾಮಿನೀ ವಿದಗ್ಧ ಲೀಲೆಗಳನ್ನು ನಾಳೆ ಅವನೇ ಕಾಣುವುದಿಲ್ಲವೆ ?" ಎಂದು ಅವಳು ಯೋಚಿಸಿದಳು ೨೧೧-೨೧೨. ಓಡುವ ಸೂರ್ಯನು ಶಕ್ತಿಗುಂದಿ ಇದಿರಿನಲ್ಲಿ ನಿಂತಿರಲು ಕಣ್ಣಿನ ಕಾಂತಿಗಳು ನಾಚಿಕೆಪಟ್ಟು ಬಹಳವಾಗಿ ಮೈಮರೆಸಿಕೊಂಡು ಹೋಗಿ ಕೊರಳಲ್ಲಿ ಹೊರಹೊರಟು ಕುಚವೆಂಬ ಬೆಟ್ಟದ ಶಿಖರದಮೇಲೆ ಓಡುತ್ತಿವೆಯೆಂಬ ಶಂಕೆ ಹುಟ್ಟುವ ಹಾಗೆ ಕಮಲದಳಾಯತಾಕ್ಷಿಯ ಮುತ್ತಿನ ಹಾರದಲ್ಲಿನ ಮುತ್ತುಗಳು ಎದೆಯಮೇಲೆ ಹೊಳೆಯುತ್ತಿದ್ದುವು ೨೧೩. ಹೊಳೆಯುವ ಉಂಗುಷ್ಠದಲ್ಲಿ ಹಲ್ಲುಗಳ ಸಾಲನ್ನು ಕಂಡು ಒಬ್ಬಳು

ಪೊಳೆವುಗುಟದೊಳ್ ದಶನಾ
ವಳಿಯಂ ಕಂಡೊರ್ವಳಂಜಿ ಮುತ್ತಿನ ಹಾರಂ
ನೆಲಕೆ ಪಱಿದೊಕ್ಕುದೆಂದು
ಮ್ಮಳದಿಂ ತಡವರಿಸಿ ನೋಡುತಿರ್ದಳ್ ಕೊರಲಂ ೨೧೪

ಇನಿಯನ ಪೆಱಗಣ ಕೇರಿನೊ
ಳನಿಬರ ರೂಪುಗಳನೊರ್ವ ಕಾಮಿನಿ ಕಂಡೊ
ಯ್ಯನೆ ನಕ್ಕು ನಲ್ಲನೆನಗೀ
ಯನಿಬರುಮಂ ಮೇಲುದೋಱಿ ಕಾಡಿಪನಱಿದೆಂ ೨೧೫

ತೊಳಗುವ ಕೆಂದಳದಸೆವಂ
ಗುಳಿಯೊಳ್ ಶೋಭಿಸುವ ನೀಲದುಂಗುರವೊರ್ವ
ಳ್ಗಳವಟ್ಟುದಶೋಕೆಯ ಕೆಂ
ದಳಿರೊಳ್ ಪತ್ತಿರ್ದ ಕಱಿಯ ತುಂಬಿಯ ತೆಱದಿಂ ೨೧೬

ಕೊಸಗಿನ ರಜಮಂ ಪೀರ್ದ
ಱ್ಕಿಸಲಾಱದೆ ಮುಗುಱಿ ತುಂಬಿಗಳ್ ಕಾಱುವುವೆಂ
ಬೆಸಕದಿನೊರ್ವಳ ಕುರುಳೊ
ಳ್ಪು ಶೋಭೆಯಿಂ ಚೆನ್ನ ಪೂಗಳೇನೊಪ್ಪಿದುವೋ ೨೧೭

ತನ್ನ ಮುತ್ತಿನ ಹಾರವು ಹರಿದು ನೆಲಕ್ಕೆ ಬಿದ್ದಿರಬೇಕೆಂದು ಭಯಪಟ್ಟು ತನ್ನ ಕೊರಳನ್ನು ಮುಟ್ಟಿ ನೋಡಿಕೊಳ್ಳುತ್ತಿದ್ದಳು ೨೧೪. ಪ್ರಿಯನ ಹಿಂದಿನ ಗೋಡೆಯೊಳಗೆ ಎಲ್ಲರ ರೂಪಗಳನ್ನೂ ಒಬ್ಬ ಕಾಮಿನಿ ಕಂಡು ತಟ್ಟನೆ ನಕ್ಕು ತನ್ನ ಪ್ರಿಯನು ಇವರೆಲ್ಲರನ್ನೂ ತನಗೆ ತೋರಿಸಿ ಕಾಡಿಸುತ್ತಿದ್ದಾನೆ ತಿಳಿಯಿತು, ಎಂದುಕೊಂಡಳು ೨೧೫. ಹೊಳೆಯುವ ಕೆಂಪನೆ ಕೈಯ ಬೆರಳಿನಲ್ಲಿ ಶೋಭಿಸುವ ನೀಲಮಣಿಯ ಉಂಗುರವು ಒಬ್ಬಳಿಗೆ ಅಶೋಕದ ಕೆಂಪು ಚಿಗುರಿನಲ್ಲಿ ಪತ್ತಿದ್ದ ಕರಿಯ ದುಂಬಿಯ ಹಾಗೆ ತೋರಿತು ೨೧೬. ಕರ್ಣಿಕಾರದ ದೂಳನ್ನು ಹೀರಿ ಸಂತೋಷಿಸಲಾರದೆ ಮತ್ತೆ ತುಂಬಿಗಳು ಕಾರಿಕೊಳ್ಳುವುವೆಂಬಂತೆ ಒಬ್ಬಳ ಕುರುಳಿನ ಅಂದದಿಂದ ಚಿನ್ನಹೂಗಳೇನು ಶೋಭಿಸುತ್ತಿದ್ದವೊ !. ೨೧೭. ಬಹಳವಾಗಿ

ಸಲೆ ಸೋಲ್ತು ಪಾಟು ಬಾವಿಯ
ಜಲಮಂ ತೆಗೆಯಲ್ಕೆ ಮಕರಕೇತನನಿಂದಂ
ಕುರಿಸಿಕ್ಕಿದ ನೀಲದ ಬ
ಟ್ಟಲನನುಕರಿಸಿತ್ತು ಕಾಂತೆಯೊರ್ವಳ ನಯನಂ ೨೧೮

ಘಟಕುಚೆಯುಗೆ ವಲ್ಲಭನಂ
ಗುಟದೊಳ್ ತನ್ನಕ್ಷಿಯುಗಳಮಂ ಕಂಡೊರ್ವಳ್
ಜಟಮೀನ್ಗಳಿಲ್ಲಿಗೇಕೆ
ಕ್ಕಟ್ಟ ಬಿಕ್ಕಟ ಬಂದುವೆಂದು ನೋಡುತ್ತಿರ್ದಳ್ ೨೧೯

ಗದ್ಯ॥ ಅಂತೊಪ್ಪುವೆತ್ತಿರ್ಪುದುಂ ವಾತ್ಸಲ್ಯರತ್ನಾಕರಂ ಚೇಳಿನೀ ಮಹಾದೇವಿಗೆ ಪುಷ್ಪದಾಡನ ಭಾರ್ಯೆಯಪ್ಪ ಸುದಂತಿಯುಮಂ ಬರಿಸುವುದೆನೆ ಪರಿಚಾರಕಿಯರನಟ್ಟುವುದುಂ ಸುದಂತಿ ತಡೆಯದೆ ಬಂದು ಕುಮಾರಿಯರೊಡನಿರ್ಪುದುಂ ೨೨೦

ಕರಿಣೀ ವೃಂದದೊಳಾಡು ಕರ್ಪುರತರುವ್ರಾತಂಗಳೊಳತ್ತಿ ಪಂ
ಕರುಹಾನೀಕದೊಳಿಕ್ಕೆ ಗೋನಿವಹದೊಳ್ಕಾಟ್ಬಿಕ್ಕು ಕಂಠೀರವೋ
ತ್ಕರದೊಳ್ ಕೋಡಗ ಮಾಧವೀಲತೆಯೊಳಂ ಕಿರ್ಬಳ್ಳಿ ಚೆಂಬೊಂಗಳೊ
ಳ್ಕಿರದಿರ್ಪಂತಿರೆ ಕರ್ಬುನಂ ಸಕಲ ಭೂ ವಾರೀಶರೊಳ್ಕೀಲಿಗಳ್ ೨೨೧

ಗದ್ಯ॥ ಇರ್ಪಂತಿರ್ದು ೨೨೨

ಸೋತು ಹಾಳು ಬಾವಿಯ ನೀರನ್ನು ತೆಗೆಯುವುದಕ್ಕೋಸ್ಕರ ಮಕರಕೇತನ (ಮನ್ಮಥನು) ಬಗ್ಗಿ ಕಟ್ಟಿದ ನೀಲಮಣಿಯ ಬಟ್ಟಲ ಅಂದವನ್ನು ಒಬ್ಬ ಕಾಂತೆಯ ಕಣ್ಣುಗಳು ಅನುಕರಿಸುತ್ತಿದ್ದುವು ೨೧೮. ಘಟದಂಥ ಕುಚಗಳುಳ್ಳವಳೊಬ್ಬಳು ಗಂಡನ ಉಂಗುಷ್ಟದಲ್ಲಿ ತನ್ನ ಎರಡು ಕಣ್ಣುಗಳನ್ನು ಕಂಡು "ಜತೆಮೀನುಗಳು ವೃಥಾ ಇಲ್ಲಿಗೇಕೆ ಬಂದುವು ? ಅಯ್ಯೊ !" ಎಂದು ನೋಡುತ್ತಿದ್ದಳು ೨೧೯. ಹಾಗೆ ಒಪ್ಪದಿಂದ ಕೂಡಿರಲಾಗಿ ವಾತ್ಸಲ್ಯ ರತ್ನಾಕರ (ವಾರಿಷೇಣನು) ಚೇಳಿನೀ ಮಹಾದೇವಿಗೆ, "ಪುಷ್ಪದಾಡನ ಹೆಂಡತಿಯಾದ ಸುದಂತಿಯನ್ನೂ ಬರಮಾಡಿಸಬೇಕು" ಎಂದು ಹೇಳಿದನು. ಆಕೆ ಅದರಂತೆ ಸೇವಕಿಯರನ್ನು ಕಳುಹಿಸಲು ಸುದಂತಿಯು ತಡಮಾಡದೆ ಬಂದು ಕುಮಾರಿಯರ ಜತೆಯಲ್ಲಿ ನಿಂತುಕೊಂಡಳು ೨೨೦. ಹೆಣ್ಣಾನೆಗಳ ಹಿಂಡಿನಲ್ಲಿ ಒಂದು ಕುರಿ, ಕರ್ಪೂರವೃಕ್ಷಗಳ ಪಕ್ಕದಲ್ಲಿ ಒಂದು ಮುತ್ತಿಗಿಡ, ಕಮಲಸಮೂಹದೊಳಕ್ಕೆ, ಗೋನಿವಹದೊಳಕ್ಕೆ, ಕಾಡುಬೆಕ್ಕು, ಸಿಂಹ ಸಮೂಹದೊಳಕ್ಕೆ ಕೋತಿ, ಮಲ್ಲಿಗೆಯ ಬಳ್ಳಿಯಲ್ಲಿ ಕರ್ಬಳ್ಳಿ, ಕೆಂಪುಪೊನ್ನುಗಳಲ್ಲಿ ಕಬ್ಬಿಣ ಸೇರಿಕೊಂಡಿರುವಹಾಗೆ ಸಮಸ್ತ ಭೂಪತಿಗಳಲ್ಲಿ, ಜಲಾಧಿಪತಿಗಳಲ್ಲಿ ಕೀಳರು ಇರುವಂತೆ ಇದ್ದಳು, ಸುದಂತಿ ೨೨೧–೨೨೨. ಎವೆಗಳಿಲ್ಲದ ಕೊಳೆಯಾದ ಕಣ್ಣಿ

ಎವೆಯಿಲ್ಲದ ಕೊಟರ್ಗಣ್ಣ್‌ವಿ
ಭ್ರಮಮಿಲ್ಲದ ರೂಪು ಪತ್ತಿಪತ್ತಿದ ಪೊಲೆ ಸೋ
ಲಮು ನೀಯದಿರವು ಕರ್ಪಿಂ
ಸಮಸಂದೊಡಲಲರ್ದಮೂಗಡಂಗಿದ ಗಲ್ಲಂ ೨೨೩

ತೆರಳ್ದ ಮೊಗಂ ತರ್ಗಿದ ಬಾಯ್
ಪುರುಳಿಲ್ಲದ ಮಿಳ್ಳಿಗಾಲ್ಪೆಡಂಗಿಲ್ಲದ ಮೈ
ಕೆರಕಿಂ ತುಱಿಯಿಂ ತೀವಿದ
ಕರಚರಣಂ ಬೋಟ ಮಂಡೆ ಕುಗ್ಗಿದ ದೇಹಂ ೨೨೪

ಗದ್ಯ॥ ಮತ್ತಂ ಮೊಳಗಿವಿಯುಂ ಪೊಱಮಾಯ್ದ ಪಲ್ಲುಂ ಮೊರದಂತಪ್ಪ ಕಾಲುಗುರುಂ ಒಳಗಟ್ದ ಬಸಿರುಂ ಒರಳಂತಪ್ಪ ಕಾಲ್ಗಳುಂ ಬಾಗಿದ ಬೆನ್ನುಂ ಕೊಱಗಣ್ಣುಂ ಬಿಟ್ಟ ಬಾಯುಂ ಕೂಡಿದ ಪುರ್ಬುಂ ತೊಟ್ಟ ಕಾಸಿಯುಂಬೆರಸು ಹಂಸೆಯೊಳಗೆ ಹೊರಸು ಬಂದಿರ್ಪಂತೆ ಬರ್ಪುದುಂ ವಾರಿಷೇಣ ಮುನಿ ಪುಷ್ಪದಾಡನ ಮೊಗಮಂ ನೋಡಿ ನಗುತ್ತಮಿಂತೆಂದಂ ೨೨೫

ನರಲೋಕದಲ್ಪ ಸೌಖ್ಯಂ
ಸ್ಥಿರಮಲ್ಲದು ವೀರನಾಥಪದಸೇವನೆಯಿಂ
ಸ್ಥಿರಮಪ್ಪ ಮೋಕ್ಷ ಸೌಖ್ಯಂ
ದೊರೆಕೊಳ್ಗೆಂದರ್ತಿವಟ್ಟು ತಪದೊಳ್ ನಿನ್ನಂ ೨೨೬

ಆಕರ್ಷಣೆಯಿಲ್ಲದ ರೂಪ, ಹತ್ತಿಯಂತೆ (ಮೆತ್ತಿಕೊಂಡ ?) ಮೊಲೆ, ಆಕರ್ಷಣೆ ನೀಡದ ಸ್ವರೂಪ, ಕಪ್ಪು ಬಣ್ಣದ ಶರೀರ, ಅರಳಿದ ಮೂಗು ಮತ್ತು ಅಡಗಿದ ಗಲ್ಲ ೨೨೩. ಮುರುಟಿಕೊಂಡ ಮುಖ, ಕಂದಿ ಕಪ್ಪಾದ ಬಾಯಿ, ಸತ್ವವಿಲ್ಲದ ಕುಳ್ಳು ಕಾಲುಗಳು ಬೆಡಗಿಲ್ಲದ ದೇಹ ನವೆಯಿಂದ ಕಜ್ಜಿಯಿಂದ ತುಂಬಿದ ಕೈಕಾಲುಗಳು, ಬೋಳಿತಲೆ ಕುಗ್ಗಿದ ದೇಹ ೨೨೪. ಅಲ್ಲದೆ ಮೊಳದುದ್ದಕಿವಿಯೂ ಉಬ್ಬಿದ ಹೊರಟುಕೊಂಡ ಹಲ್ಲೂ ಮೊರದಂಥ ಉಗುರೂ ಒಳಕ್ಕೆ ಅಂಟಿಕೊಂಡ ಹೊಟ್ಟೆಯೂ ಒರಳಿನಂಥ ಕಾಲುಗಳೂ ಬಗ್ಗಿದ ಬೆನ್ನೂ ಕೊಳೆಗಣ್ಣು, ಬಿಟ್ಟಬಾಯಿ, ಕೂಡಿಕೊಂಡ ಹುಬ್ಬುಗಳೂ ಇದ್ದು ಕಾಸಿಯನ್ನು ಧರಿಸಿ ಹಂಸೆಗಳೊಳಗೆ ಪಾರಿವಾಳ ಬಂದಂತೆ ಬರುತ್ತಲೂ ವಾರಿಷೇಣ ಮುನಿಯು ಪುಷ್ಪದಾಡನ ಮುಖವನ್ನು ನೋಡಿ ನಗುತ್ತಾ ಹೀಗೆ ಹೇಳಿದನು. ೨೨೫. ಮನುಷ್ಯಲೋಕದ ಅಲ್ಪ ಸೌಖ್ಯವು ಸ್ಥಿರವಲ್ಲ. ವೀರನಾಥಸ್ವಾಮಿಯ ಪಾದಸೇವೆಯಿಂದ ಶಾಶ್ವತವಾದ ಮೋಕ್ಷ ಸೌಖ್ಯವು ಲಭಿಸಲೆಂದು ಆಸೆಪಟ್ಟು ನಿನ್ನನ್ನು ತಪಸ್ಸಿನಲ್ಲಿ ನಿಲ್ಲಿಸಿದೆ ೨೨೬. ನನ್ನ ಸ್ವಂತ ಕೆಲಸವನ್ನೂ ಲಕ್ಷ್ಯಮಾಡದೆ ಹನ್ನೆರಡು ವರ್ಷಗಳ

ಗದ್ಯ॥ ನಿಲಿಸಿ ಪನ್ನೆರಡು ವರುಷಂಬರಮೆನ್ನಾತ್ಮಕಾರ್ಯಮಂ ಬಗೆಯದೆ ಲೋಕೋತ್ತರಮಪ್ಪ ಜಿನೋಕ್ತಿಯನಿನ್ನೆವರಂ ಮಾಣದೆ ಪೇಳ್ದೊಡೆ ನಾಯ್ಗೆ ನಱುನೆಯ್ಯಕ್ಕದೆಂಬಂತೆನ್ನ ಪೇಳ್ದ ಧರ್ಮಶ್ರವಣಮನೊಲ್ಲದೆ ಸುದಂತಿಯನೆ ಮನದೊಳ್ನೆನೆಯುತಿರ್ಪೆಯಿಂತು ೨೨೭.

ರತಿಯುಂ ವಿಭ್ರಮದೊಳ್ಸುರೇಂದ್ರಸತಿಯುಂ ಲಾವಣ್ಯದೊಳ್ನೋಡೆ ಭಾ
ರತಿಯುಂ ಹಾವದೊಳೀವಳೆಂದುಱದೆ ಸಚ್ಛೃಂಗಾರದಿಂ ರೂಪಸು
ನ್ನತಿಯಿಂದಿರ್ದ ಮಹೀಶ್ವರಾತ್ಮಜೆಯರಂ ಕೈಕೊಳ್ಳದಾಂ ಬಿಟ್ಟು ನಿ
ರ್ವೃತಿಯಂ ಸಾಧಿಸಲೆಂದು ಪೋಗಿ ತಪಮಂ ಕೈಕೊಂಡೆನುತ್ಸಾಹದಿಂ ೨೨೮

ಗದ್ಯ॥ ಅಳಲ ಪಡಪು ಬಸುರಿಯ ಪಣ್ಣೆಂಬಂತೆ ಸುದಂತಿಯನೇಗೆಯ್ದುಂ ಬಿಡಲಾಱದೆ ನೀಂ ಬೆಳಬೆಂಜನನಾಗಿ ಭೋಗಿಸುವೆನೆಂದು ಕೊಕ್ಕರಿಗುದಿವೈ ; ಉಂಡಱಿಯದರ್ಗುಂಡುದೆಲ್ಲ ಮಚ್ಚರಿಯೆಂಬಂತೆ, ಕಾಲೂರ್ಗೆ ಮೆಣಸು ಬೆಲ್ಲವೆಂಬಂತೆ, ಬೇಡವಳ್ಳಿಗೆ ಪಂದಿ ಮದ್ದಾನೆಯೆಂಬಂತೆ, ನುಗ್ಗಿಯ ಬನಕ್ಕೆ ಗುಬ್ಬಿಕೋಗಿಲೆಯೆಂಬಂತೆ, ಅಗಸೆಯ ಮರಕ್ಕೆ ತೊನಸೆ ಮಱಿದುಂಬಿಯೆಂಬಂತೆ ಸಂಸಾರದಲ್ಪಸುಖಕ್ಕೆ ಮುಯ್ಯಾಂತು ಶಾಶ್ವತಸುಖಮನುದಾಸೀನಂ ಮಾಡಿ ಜಿನರೂಪಿಂಗೆ ಬೇಸಱವೆಯಿನ್ನು ನಿನ್ನಿಂಬಿಟ್ಟು ಗಾವಿಲರುಂ ಕುಮತಿಗಳುಂ ಲೋಕದೊಳಿಲ್ಲೆಂದು

ಕಾಲ ಲೋಕೋತ್ತರವಾದ ಜಿನವಾಕ್ಯವನ್ನು ಇಂದಿನತನಕ ಬಿಡದೆ ನಿನಗೆ ಹೇಳಿದೆ. ಆದರೆ ನಾಯಿಗೆ ಘಮ ಘಮಿಸುವ ತುಪ್ಪ ಪ್ರಿಯವಾಗದೆಂಬ ಹಾಗೆ ನಾನು ಹೇಳಿದ ಧರ್ಮಶ್ರವಣವನ್ನು ಒಲ್ಲದೆ ನೀನು ಸುದಂತಿಯನ್ನೇ ಮನಸ್ಸಿನಲ್ಲಿ ಸ್ಮರಿಸುತ್ತಿರುವೆ. ಹೀಗೆ ನೋಡು. ಆಕರ್ಷಣೆಯಲ್ಲಿ ರತಿಯೂ ಲಾವಣ್ಯದಲ್ಲಿ ಶಚೀದೇವಿಯೂ ಹಾವದಲ್ಲಿ ಭಾರತೀದೇವಿಯೂ ಯಾವ ಲೆಕ್ಕವೆಂದು ಲಕ್ಷ್ಯಮಾಡದೆ ಒಳ್ಳೆಯ ಶೃಂಗಾರದಿಂದಲೂ ರೂಪದಿಂದಲೂ ಔನ್ನತ್ಯಹೊಂದಿರುವ ರಾಜಪುತ್ರಿಯರನ್ನು ನಾನು ಕೈಕೊಳ್ಳದೆ ಬಿಟ್ಟು ಬಿಟ್ಟು ಮೋಕ್ಷವನ್ನು ಸಾಧಿಸುವುದಕ್ಕೋಸ್ಕರ ಹೋಗಿ ಉತ್ಸಾಹದಿಂದ ತಪಸ್ಸುಮಾಡಿದೆ! ೨೨೮. 'ಅಳಲಿನ ಸಂಪಾದನೆ ಬಸರಿಯ ಹಣ್ಣು' ಎಂಬ ಹಾಗೆ ಸುದಂತಿಯನ್ನು ಏನು ಮಾಡಿದರೂ ಬಿಡಲಾರದೆ ನೀನು ಬೆಳಬೆಂಜನ (?) ನಾಗಿ ಭೋಗಿಸುತ್ತೇನೆಂದು ವಿಶೇಷವಾಗಿ ಸಂಕಟಪಡುತ್ತಿದ್ದೀಯೆ ; ಉಂಡು ಅನುಭವವಿಲ್ಲದವರಿಗೆ ಉಂಡದ್ದೆಲ್ಲ ಆಶ್ಚರ್ಯವೆಂಬ ಹಾಗೆ, ಚಿಕ್ಕಹಳ್ಳಿಗೆ ಮೆಣಸೇಬೆಲ್ಲವೆಂಬಂತೆ, ಬೇಡರಹಳ್ಳಿಗೆ ಹಂದಿಯೇ ಮದ್ದಾನೆಯೆನ್ನುವಂತೆ ನುಗ್ಗೆಯ ತೋಟಕ್ಕೆ ಗುಬ್ಬಿ ಕೋಗಿಲೆಯೆನ್ನುವಂತೆ, ಅಗಸೆಯ ಗಿಡಕ್ಕೆ ತೊಣಚೆಯೇ ಮರಿದುಂಬಿಯೆನ್ನುವಂತೆ, ಸಂಸಾರದ ಅಲ್ಪಸುಖಕ್ಕೆ ಆಸೆಪಟ್ಟು ಶಾಶ್ವತ ಸುಖವನ್ನು ಉದಾಸೀನ ಮಾಡಿ ಜಿನರೂಪಕ್ಕೆ ಬೇಸರಪಡುತ್ತಿರುವೆ. ಇನ್ನು ನಿನ್ನನ್ನು ಬಿಟ್ಟರೆ ದಡ್ಡರು, ಕುಬುದ್ಧಿಗಳೂ ಲೋಕದಲ್ಲಿ ಯಾರೂ ಇಲ್ಲ, ಎಂದು

ಮೂದಲಿಸಿ ತೋಱಿ ಹಾಸ್ಯಂ ಮಾಡಿ ನಕ್ಕು ಸುದಂತಿಯ ಮೊಗಮಂ ನೋಡಿ ವಾತ್ಸಲ್ಯ ರತ್ನಾಕರನಿಂತೆಂದಂ ೨೨೯

ಪರಮ ಜಿನೇಶ್ವರ ರೂಪಂ
ಧರಿಯಿಸಿ ಮತ್ತಳಿಪಿ ಬಂದು ತನ್ನಂಗನೆಯೊಳ್
ನೆರೆಯಲ್ಕಱುಗುವ ನರನುಂ
ಪುರುಷನೆ ಪೇೞಬ್ಬೆ ಬೇಗಮೆಂಬುದುಮಾಗಳ್ ೨೩೦

ಗದ್ಯ॥ ಸುದಂತಿಯಿಂತೆಂದಳ್ ೨೩೧

ನೆಟ್ಟನೆ ಕಾಱಿದ ಕೂೞಂ
ಮುಟ್ಟದು ನಾಯುಂ ಧರಾತಳಾಗ್ರದೊಳೆನೆ ಮುಂ
ಬಿಟ್ಟು ಬೞಿಕ್ಕಱಿಪವನುಂ
ನಿಟ್ಟಿಸುವೊಡೆ ಪಂದೆ ಕಷ್ಟನಾ ನಾಯಿಂದಂ ೨೩೨

ಗದ್ಯ॥ ಎಂಬುದುಂ ಸುದಂತಿಯ ಮಾತಿಂಗೆ ಪುಷ್ಪದಾಡಂ ಲಜ್ಜಿಸಿ ತನ್ನೊಳಿಂತೆಂಪಂ ೨೩೩

ಈ ದಿವ್ಯಸ್ತ್ರೀಯ‍ರನಿನಿ
ಸಾದರಿಸದೆ ತೊಱೆದು ವಾರಿಷೇಣ ಕುಮಾರಂ
ಪೋದನನೆನೆ ನೋೞ್ಪೊಡೆನಗೇ
ನಾದುದು ಕೇಳಿನ್ನ ಪೆಂಡಿರುನ್ನತಿ ಪಿರಿದೇ ೨೩೪

ಮೂದಲಿಸಿ ತೋರಿಸಿ, ಹಾಸ್ಯಮಾಡಿ ನಕ್ಕು, ಸುದಂತಿಯ ಮುಖವನ್ನು ನೋಡಿ ವಾತ್ಸಲ್ಯರತ್ನಾಕರನು ಹೀಗೆಂದನು ೨೨೯. ಪರಮಜಿನೇಶ್ವರನ ರೂಪವನ್ನು ಧರಿಸಿ ಕೊಂಡು ಮತ್ತೆ ಆಸೆಯಿಂದ ಬಂದು ತನ್ನ ಹೆಂಡತಿಯೊಡನೆ ಕೂಡಲು ಆಸೆಪಡುವ ಮನುಷ್ಯನೂ ಗಂಡಸೆ ? ನೀನು ಬೇಗ ಹೇಳಬ್ಬೆ ಎಂದು ನುಡಿಯಲು ಆಗ ಸುದಂತಿ ಹೀಗೆ ಉತ್ತರ ನೀಡಿದಳು ೨೩೦–೨೩೧. ಕಾರಿದ ಅನ್ನವನ್ನು ನಾಯಿಯೂ ಮುಟ್ಟುವು ದಿಲ್ಲವೆಂದಮೇಲೆ ಪ್ರಪಂಚದಲ್ಲಿ ಮೊದಲು ಬಿಟ್ಟು ಆಮೇಲೆ ಆಸೆಪಡುವವ ಹೇಡಿ. ಆ ನಾಯಿಗಿಂತ ಅಲ್ಪನಾದವನು ೨೩೨. ಎಂದು ಹೇಳಲು ಸುದಂತಿಯ ಮಾತಿಗೆ ಪುಷ್ಪದಾ ಡನು ನಾಚಿಕೆಪಟ್ಟುಕೊಂಡು ತನ್ನಲ್ಲಿಯೇ ಹೀಗೆಂದುಕೊಂಡನು ೨೩೩. ದಿವ್ಯನಾದ ಈ ಹೆಂಗಸರನ್ನು ಸ್ವಲ್ಪವೂ ಆದರಿಸದೆ ತೊರೆದುಬಿಟ್ಟು ವಾರಿಷೇಣ ಕುಮಾರನು ತಪಸ್ಸಿಗೆ ಹೋದನೆಂದರೆ ನನಗೇನಾಯಿತು ? ನೋಡಿದರೆ ನನ್ನ ಹೆಂಡಿರ ಶ್ರೇಷ್ಠತೆ ಅಷ್ಟು ಹೆಚ್ಚಿನದೆ ? ೨೩೪. ಶ್ರೇಷ್ಠವಾದ ತಪಸ್ಸನ್ನು ಕೈಕೊಂಡ ಒಡನೆಯೇ ಅಪೂರ್ವವಾದ

ವರತಪಮಂ ಕೈಕೊಳಲೊಡ
ಮಂದೆನಿಸುವ ಜಂಘಚಾರಣತ್ವಂ ಕೇಳೀ
ವರಮುನಿಗಾಯ್ತೆನೆ ತಪದಿಂ
ಪಿಂದಪ್ಪೈಶ್ವರ್ಯಮಪ್ಪುದಾವುದು ಗಹನಂ ೨೩೫

ಗದ್ಯ॥ ಎಂದು ಮನದೊಳೆ ವಾರಿಷೇಣ ಮುನಿಕುಂಜರನ ಮುಂ ಪೇಳ್ದ ಧರ್ಮಶ್ರವಣಮುನಿತುಮಂ ನಂಬಿ ಸಂಸೃತಿಲತಾಂಕುರಮಂ ಕಿೞ್ತೀಡಾಡಲುಂ ಮೋಹಮಹೀರುಹಮಂ ಕಡಿಯಲುಂ ಕರ್ಮೇಂಧನಂಗಳು ಸುಡಲುಂ ಜಿನಚರಣಮಂ ಬಲ್ವಿಡಿಯಲುಂ ಸನ್ಮಾರ್ಗಮಂ ಪೊರ್ದಲ್ಕುಂ ಮನಂದಂದು ಜಿನಸಮಯ ವಾರ್ಧಿವರ್ಧನ ಸುಧಾಕರನ ಪಾದಕ್ಕೆಱಗಿ ಪೊಡೆಮಟ್ಟು ಪುನರ್ದೀಕ್ಷೆಯುಂ ಪ್ರಸಾದಂಗಯ್ವುದೆಂಬುದುಮಾತನುಂ ಗುರುಗಳಲ್ಲಿಗೊಡಗೊಂಡು ಬಂದು ದೀಕ್ಷೆಯುಂ ಕೊಡಿಸುವುದುಂ ಭಾವತಪಸ್ವಿಯಾಗಿ ತನ್ನೊಳಿಂತೆಂದಂ ೨೩೬

ಸಂಸಾರದಲ್ಪ ಸೌಖ್ಯಮಿ
ದಂ ಶಾಶ್ವತಮೆಂದು ಜೈನಧರ್ಮಮನೆಂತುಂ
ನಾಂ ಸಲೆ ಕೈಕೊಳ್ಳದೆ ಕೆ
ಟ್ಟೆಂ ಸತಿಯುಂ ನೆನೆದಶುದ್ಧಭಾವನೆಯಿಂದಂ ೨೩೭

ಜಂಘಚಾರಣತ್ವವು ಈ ಮುನಿಶ್ರೇಷ್ಠನಿಗೆ ಆಯಿತು. ಅಂದಮೇಲೆ ತಪಸ್ಸಿನಿಂದ ದೊಡ್ಡದಾದ ಐಶ್ವರ್ಯವಾಗುವುದರಲ್ಲಿ ಆಶ್ಚರ್ಯವೇನಿದೆ ? ೨೩೫. ಹೀಗೆಂದು ಮನಸ್ಸಿನಲ್ಲಿಯೆ ವಾರಿಷೇಣ ಮುನಿಶ್ರೇಷ್ಠನು ಹಿಂದೆ ಹೇಳಿದ ಧರ್ಮಶ್ರವಣವಷ್ಟನ್ನೂ ನಂಬಿ ಸಂಸಾರವೆಂಬ ಲತೆಯ ಮೊಳಕೆಯನ್ನು ಕಿತ್ತುಬಿಸಾಡುವುದಕ್ಕೂ ಮೋಹವೆಂಬ ವೃಕ್ಷವನ್ನು ಕಡಿಯುವುದಕ್ಕೂ ಕರ್ಮವೆಂಬ ಇಂಧನ (ಸೌದೆ)ವನ್ನು ಸುಡುವುದಕ್ಕೂ ಜಿನಚರಣವನ್ನು ಬಲವಾಗಿ ಹಿಡಿಯುವುದಕ್ಕೂ ಸನ್ಮಾರ್ಗವನ್ನು ಸೇರುವುದಕ್ಕೂ ಮನಸ್ಸುಮಾಡಿ ಜಿನಧರ್ಮವೆಂಬ ಸಾಗರವನ್ನು ವೃದ್ಧಿಗೊಳ್ಳುವಂತೆ ಮಾಡುವ ಅಮೃತಕಿರಣನ (ವಾರಿಷೇಣನ) ಪಾದಗಳಿಗೆ ಒಲಿದು ನಮಸ್ಕಾರಮಾಡಿ ಪುನಃ ದೀಕ್ಷೆಯನ್ನು ಅನುಗ್ರಹ ಮಾಡಬೇಕೆಂದು ಕೇಳಿಕೊಳ್ಳಲು ಆತನು ಪುಷ್ಪದಾಡನನ್ನು ಗುರುಗಳ ಸನ್ನಿಧಿಗೆ ಕರೆದುಕೊಂಡು ಹೋಗಿ ದೀಕ್ಷೆಯನ್ನು ಕೊಡಿಸಿದನು. ಅಂದಿನಿಂದ ಪುಷ್ಪದಾಡನು ಭಾವತಪಸ್ವಿಯಾಗಿ ತನ್ನಲ್ಲಿಯೇ ಹೀಗೆಂದುಕೊಂಡನು ೨೩೬. ಸಂಸಾರದ ಅಲ್ಪಸೌಖ್ಯವನ್ನು ಶಾಶ್ವತವೆಂದು ನಂಬಿ ಜೈನಧರ್ಮವನ್ನು ಹೇಗೂ ನಾನು ಅಂಗೀಕರಿಸದೆ ಅಶುದ್ಧಭಾವನೆಯಿಂದ ಹೆಂಡತಿಯನ್ನು ಸ್ಮರಿಸುತ್ತಿದ್ದು ಕೆಟ್ಟೆ ೨೩೭. ಶ್ರೀವಾರಿಷೇಣ ಮುನಿಯಿಂದ

ಶ್ರೀವಾರಿಷೇಣಮುನಿಯಿಂ
ದೀವರದನ ಧರ್ಮಮೆನಗೆ ದೊರೆಕೊಂಡುದು ಸ
ದ್ಭಾವದಿನೆನಗದಱಿಂದಂ
ಭಾವಿಸುವೊಡೆ ವಾರಿಷೇಣಮುನಿ ಪನೆದೇವಂ ೨೩೮

ಗದ್ಯ॥ ಎಂದು ತನ್ನ ಮುನ್ನಿನ ನಿರ್ಬುದ್ಧಿಯುಮಂ ಮಿಥ್ಯಾತ್ವದ ತೀವ್ರತೆಯುಮಂ ವಾತ್ಸಲ್ಯರತ್ನಾಕರನ ಮಾಡಿದುಪಕಾರಮುಮಂ ನನೆದು ವಿಸ್ಮಯಂ ಬಟ್ಟು ಶುದ್ಧ ಹೃದಯನಾಗಿ ಸಕಲಾಗಮಂಗಳಂ ನೋಡಿ ತಪದೊಳುತ್ತರೋತ್ತರಂ ನೆಗಟ್ದು ಸಮಾಧಿವಿಧಿಯಿಂ ಮುಡಿಪಿ ದೇವಗತಿವಡೆದನಿತ್ತಲ್ ವಾರಿಷೇಣಮುನೀಂದ್ರನುಂ ಪುಷ್ಪದಾಡನ ಮುನ್ನಿನ ಹೀನಬುದ್ಧಿಗಂ ಬೞಿಕಮಾದ ಸುಬುದ್ಧಿಗಂ ಚೋದ್ಯಂಬಟ್ಟು ತನ್ನೊಳಿಂತೆಂದಂ ೨೩೯

ಪಿರಿದಪ್ಪ ಮುಗಿಲ ಮಱೆಯೊಳ್
ಖರಕರನುಂ ಬೆಳಗಲಾಱನೆಂತಂತೆ ಮಹಾ
ದುರಿತೋದಯದಿಂದಱಿಯ
ನರರುಂ ಸದ್ಧರ್ಮಮಪ್ಪುದಂ ಧಾರಿಣಿಯೊಳ್ ೨೪೦

ಗದ್ಯ॥ ಮೆಕ್ಕೆಯ ಕಾಯ್ಗಳ್ ಮೊದಲೊಳ್ ಕೈಪೆಯಪ್ಪುವು ಕಡೆಯೊಳ್ ರುಚಿಯಪ್ಪುವಂತೆ ಕೆಲಂಬರ್ ಮೊದಲೊಳ್ ಪೊಲ್ಲರ್ ಕಡೆಯೊಳೊಳ್ಳಿದರಪ್ಪರ್ಕಟ್ಟು ಮೊದಲಿಂದಂ ಕಡೆ

ಈ ಶ್ರೇಷ್ಠವಾದ ಧರ್ಮವು ನನಗೆ ಆಯಿತು. ಇವನು ವರದ (ವರಕೊಟ್ಟವನು)ನೇ ಆದನು. ಆದ್ದರಿಂದ ನಾನು ಸದ್ಭಾವದಿಂದ ಯೋಚಿಸಿದರೆ ನನಗೆ ವಾರಿಷೇಣ ಮುನಿಶ್ರೇಷ್ಠನೇ ದೇವನು ೨೩೮. ಹೀಗೆ ತನ್ನ ಮೊದಲಿನ ಬುದ್ಧಿಯಿಲ್ಲದ ವರ್ತನೆಯನ್ನೂ ಮಿಥ್ಯಾತ್ವದ ಪ್ರಾಬಲ್ಯವನ್ನೂ ವಾತ್ಸಲ್ಯ ರತ್ನಾಕರನು ತನಗೆ ಮಾಡಿದ ಉಪಕಾರವನ್ನೂ ಸ್ಮರಿಸಿ ಆಶ್ಚರ್ಯಪಟ್ಟು ಪರಿಶುದ್ಧ ಹೃದಯವುಳ್ಳವನಾಗಿ ಎಲ್ಲ ಆಗಮಗಳನ್ನೂ ವ್ಯಾಸಂಗಮಾಡಿ ತಪಸ್ಸಿನಲ್ಲಿ ಉತ್ತರೋತ್ತರವಾಗಿ ಅಭಿವೃದ್ಧಿಹೊಂದಿ ಸಮಾಧಿ ವಿಧಿಯಂತೆ ಸತ್ತು ದೇವಗತಿಯನ್ನು ಪಡೆದುಕೊಂಡನು. ಇತ್ತ ವಾರಿಷೇಣಮುನಿ ಶ್ರೇಷ್ಠನೂ ಪುಷ್ಪದಾಡನ ಮೊದಲಿನ ಹೀನಬುದ್ಧಿಗೂ ಬಳಿಕ ಆತನಿಗೆ ಹುಟ್ಟಿದ ಸುಬುದ್ಧಿಗೂ ಆಶ್ಚರ್ಯಪಟ್ಟು ಹೀಗೆ ಯೋಚಿಸಿದನು. ೨೩೯. ದೊಡ್ಡದಾದ ಮೋಡದ ಮರೆಯಲ್ಲಿ ಚಂಡಕಿರಣನೇ ಆದರೂ ಸೂರ್ಯನು ಬೆಳಗಲಾರ. ಹಾಗೆಯೇ ಮಹಾ ಪಾಪಧ ಆಧಿಕ್ಯದಿಂದ ಲೋಕದಲ್ಲಿ ಸದ್ಧರ್ಮವಾದುದನ್ನು ಮನುಷ್ಯರು ತಿಳಿದುಕೊಳ್ಳುವುದಿಲ್ಲ. ೨೪೦. ಮೆಕ್ಕೆಯ ಕಾಯಿಗಳು ಮೊದಲಿನಲ್ಲಿ ಕಹಿಯಾಗಿರುವುವು. ಕಡೆಯಲ್ಲಿ ರುಚಿಯಾಗುವುವು. ಹಾಗೆ ಕೆಲವರು ಆರಂಭದಲ್ಲಿ ಕೆಟ್ಟವರು ; ಕೊನೆಯಲ್ಲಿ

ವರಮಿನಿದಂತೆ ಕೆಲಂಬರಾದ್ಯಂತವೊಳ್ಳಿವರ್ ಅಶೋಕೆ ಮೊದಲಾದ ವೃಕ್ಷದೆಲೆಗಳ್ ಮೊದಲೊಳ್ ಮೃದುವಪ್ಪುವು ಕಡೆಯೊಳ್ತಱಗೆಲೆಗಳಪ್ಪುವಂತೆ ಕೆಲಂಬರ್ಮೊದಲೊಳ್ಳಿದರಪ್ಪರ್ಕಡೆಯೊಳ್ಪೊಲ್ಲರಪ್ಪರೆಂದು ಮನುಷ್ಯರ ಪರಿಣಾಮಮುಮಂ ಭಾವಿಸಿ ಗುರುಗಳಾಜ್ಞೆಯಿಂದೇಕ ವಿಹಾರಿಯಾಗಿ ಪನ್ನಿರ್ತೆಱದ ತಪದೊಳಂ ನೆಗೞ್ದು ಕಡೆಯೊಳ್ಸಂನ್ಯಸನ ಸಮಾಧಿಯಿಂ ಮುಡಿಪಿ ಸರ್ವಾರ್ಥಸಿದ್ಧಿಯೊಳ್ ಮೂವತ್ತಮೂಱು ಸಾಗರೋಪಮಾಯುಷ್ಯಮನೊಡೆಯನಾಗಿ ಪುಟ್ಟಿದನದಱಂ ಸ್ಥಿತಿಕರಣದ ಫಲಂ ಕೇವಲಮಲ್ಲೆಂದು ಗಣಧರಸ್ವಾಮಿಗಳ್ ಪೇೞ್ದುದುಂ ೨೪೧

ಕ್ಷಿತಿಪೂಜ್ಯಂ ವಾಗ್ವಿಳಾಸಂ ಸುಕವಿಜನ ಮನೋರಂಜನಂ ಜೈನವಾಕ್ಯಾ
ಮೃತತೃಪ್ತಂ ವಾಗ್ವಧೂವಲ್ಲಭನಘಕುಲವಿದ್ರಾವಣಂ ಕೇಳ್ದು ಚಿತ್ತೋ
ನ್ನತಿಯಿಂ ತ್ರೈವಿದ್ಯಚಕ್ರೇಶ್ವರ ವಿಮಲಪದಾಂಭೋಜಭೃಂಗಂ ಕವೀಂದ್ರ
ಸ್ತುತನಿರ್ದಂ ಲೀಲೆಯಿಂದಂ ಸುಕವಿಜನಮನಃ ಪದ್ಮಿನೀರಾಜಹಂಸಂ ೧೪೨

ಗದ್ಯ॥ ಇದು ನಿಖಿಲದಿವಿಜಪರಿವೃಢ ಮಕುಟತಟ ಘಟಿತಮಣಿಗಣ ವಿಲುಳಿತಕಿರಣಚುಂಬನೀಯ ಪರಮಜಿನ ಚರಣಯುಗಳ ಸರಸಿರುಹ ಮತ್ತ ಮಧುಕರ ನಿರುಪಮ ಸಹಜಕವಿಜನಪಯಃ

ಒಳ್ಳೆಯವರು ಆಗುವರು. ಕಬ್ಬು ಮೊದಲಿನಿಂದ ತುದಿಯವರೆಗೂ ಸಿಹಿ. ಹಾಗೆಯೇ ಕೆಲವರು ಆದ್ಯಂತವೂ ಒಳ್ಳೆಯವರು. ಅಶೋಕೆ ಮೊದಲಾದ ಮರಗಳ ಎಲೆಗಳು ಮೊದಲಿನಲ್ಲಿ ಮೃದುವಾಗಿರುತ್ತವೆ ; ಕೊನೆಯಲ್ಲಿ ತರಗೆಲೆಗಳಾಗುವುವು. ಹಾಗೆ ಕೆಲವರು ಮೊದಲು ಒಳ್ಳೆಯವರಾಗಿರುವರು; ಕೊನೆಯಲ್ಲಿ ಕೆಟ್ಟವರಾಗುವರು. ಎಂದು ಮನುಷ್ಯರ ಸ್ವಭಾವ ಪರಿಣಾಮಗಳನ್ನು ಕುರಿತು ಚಿಂತಿಸಿ ಗುರುಗಳ ಆಜ್ಞೆಯಿಂದ ಏಕವಿಹಾರಿಯಾಗಿ ಹನ್ನೆರಡು ರೀತಿಯ ತಪಸ್ಸುಗಳಲ್ಲಿಯೂ ಪ್ರಸಿದ್ಧನಾಗಿ ಕೊನೆಯಲ್ಲಿ ಸನ್ಯಸನ ಸಮಾಧಿಯಿಂದ ಸತ್ತು ಸರ್ವಾರ್ಥಸಿದ್ಧಿಯಲ್ಲಿ ಮೂವತ್ಮೂರು ಸಾಗರಗಳಷ್ಟು ಆಯುಷ್ಯವುಳ್ಳವನಾಗಿ ಹುಟ್ಟಿದನು; ಆದರಿಂದ ಸ್ಥಿತಿಕರಣದ ಫಲ ಸಾಮಾನ್ಯವಲ್ಲವೆಂದು ಗಣಧರಸ್ವಾಮಿಗಳು ಹೇಳಿದರು. ೨೪೧. ಲೋಕಪೂಜ್ಯವಾದ ವಾಗ್ವಿಳಾಸನೂ ಸುಕವಿಜನ ಮನೋರಂಜನನೂ ಜೈನವಾಕ್ಯಾಮೃತತೃಪ್ತನೂ ವಾಗ್ವಧೂವಲ್ಲಭನೂ ಪಾಪಕುಲವನ್ನು ಸೀಳಿದವನೂ ಆದ ಶ್ರೇಣಿಕ ಮಹಾರಾಜನು ಕೇಳಿ ಚಿತ್ತದ ಉನ್ನತಿಯನ್ನು ಹೊಂದಿ ತ್ರೈವಿದ್ಯಚಕ್ರೇಶ್ವರನ ವಿಮಲ ಪಾದಕಮಲಗಳಲ್ಲಿ ಭೃಂಗದಂತಿರುವ ಕವೀಂದ್ರರಿಂದ ಹೊಗಳಲ್ಪಟ್ಟು ಆನಂದದಿಂದ ಇದ್ದನು. ೨೪೨.

ಇದು ಸಮಸ್ತ ದೇವತೆಗಳ ಶಿರಸಾಷ್ಟಾಂಗ ಪ್ರಣಾಮಂಗಳನ್ನು
ಹೊಂದಿದ ಜಿನಪಾದ ಕಮಲಗಳಲ್ಲಿ ತುಂಬಿಯಾದ

ಪಯೋಧಿ ಹಿಮಕರ ಸುತಭಾವಯುತ ದಿಗಂಬರದಾಸ ನೂತ್ನ ಕವಿತಾವಿಲಾಸ ಶ್ರೀಮನ್ನಯಸೇನ ದೇವವಿರಚಿತಮಪ್ಪ 'ಧರ್ಮಾಮೃತ'ದೊಳ್ ದರ್ಶನಷಷ್ಠಾಂಗ ವ್ಯಾವರ್ಣನಂ ಸಪ್ತಮಾಶ್ವಾಸಂ.

ನಿರುಪಮ ಸಹಜ ಕವಿಗಳೆಂಬ ಪಾಲ್ಗಡಲಿಗೆ ಚಂದ್ರನಾದ
'ದಿಗಂಬರದಾಸ' 'ನೂತ್ನ ಕವಿತಾವಿಲಾಸ'
ಎಂಬ ಬಿರುದುಗಳುಳ್ಳ ಶ್ರೀಮನ್ನಯಸೇನ ದೇವ
ವಿರಚಿತವಾದ 'ಧರ್ಮಾಮೃತ'ದಲ್ಲಿ ದರ್ಶನಷಷ್ಠಾಂಗ
ವರ್ಣನೆಯನ್ನೊಳಗೊಂಡ ಸಪ್ತಮಾಶ್ವಾಸ.

# ಅಷ್ಟಮಾಶ್ವಾಸಂ

ಶ್ರೀ ಸತಿಗೀ ಸ್ಥಿತಿಕರಣಂ
ಭಾಸುರ ಭೂಷಾಳಿಯೆಂದು ಕರಮಲ್ಲದೆ ಸಂ
ತೋಷಂಬಟ್ಟಂ ಮನದೊಳ್
ಲೇಸಾಗಿರೆ ಸುಕವಿನಿಕರಪಿಕಮಾಕಂದಂ ೧

ಸ್ಥಿತಿಕರಣದ ಕಥೆಯಂ ಭೂ
ಪತಿ ಬೇಗಂ ಕೇಳ್ದು ನಂಬಿ ಮತ್ತಂ ಮುನಿಪಂ
ದಿತರಂ ಸದ್ವಾತ್ಸಲ್ಯದ
ಕಥೆಯಂ ಬೆಸಗೊಳ್ವುದುಂ ಮಹೋತ್ಸವದಿಂದಂ ೨

ಯತಿತಿಲಕರ್ ಸಕಲಗುಣಾ
ನ್ವಿತರಮಳ ಚರಿತ್ರರಂಗಭವ ಮದಹರಣರ್
ನುತವಾಕ್ಯರ್ಭುವನತ್ರಯ
ನತಕರ್ಮದುರಿತ ಗಂಧಗಜ ಸಿಂಹನಿಭರ್ ೩

ಗದ್ಯ॥ ನಿರ್ವೃತಿಶ್ರೀಯ ಭಂಡಾರದಮೂಲ್ಯ ವಸ್ತುವೆನಿಪ ವಾತ್ಸಲ್ಯದ ಕಥೆಯಂ ಇಂತೆಂದು ಪೇಳ್ದರ್ : ಪ್ರಾತಿಹಾರ್ಯದಂತೆ ಸ್ವರ್ಗಯುಗಳದಂತೆ ದೆಸೆಗಳಂತೆ ದಿಕ್ಪಾಲಕರಂತೆ ಸೀತಾ

ಲಕ್ಷ್ಮೀಸತಿಗೆ ಈ ಸ್ಥಿತಿಕರಣವು ಹೊಳೆಯುವ ಆಭರಣಾವಳಿಯೆಂದು ಅತಿಶಯ ವಾಗಿ ಭಾವಿಸಿ ಮನಸ್ಸಿನಲ್ಲಿ ಸುಕವಿಕರವೆಂಬ ಕೋಗಿಲೆಗಳಿಗೆ ಮಾವಿನಮರದಂಥವನಾದ (ಆನಂದದಾಯಕ) ಶ್ರೇಣಿಕನು ಹರ್ಷಪಟ್ಟನು, ೧. ಸ್ಥಿತಿಕರಣದ ಕಥೆಯನ್ನು ಕೇಳಿ ರಾಜನು ಬೇಗನೆ ನಂಬಿ ಮತ್ತೆ ಮುನಿಪೂಜ್ಯರನ್ನು ತನಗೆ ವಾತ್ಸಲ್ಯದ ಕಥೆಯನ್ನು ಹೇಳ ಬೇಕೆಂದು ಬಹಳ ಉತ್ಸಾಹದಿಂದ ಕೇಳಿಕೊಂಡನು. ೨. ಯತಿಶ್ರೇಷ್ಠರೂ ಸಕಲಗುಣ ಗಳಿಂದ ಕೂಡಿದವರೂ ಪರಿಶುದ್ಧಚರಿತ್ರರೂ ಮನ್ಮಥನ ಅಹಂಕಾರವನ್ನು ಕಳೆದವರೂ ಎಲ್ಲರಿಂದಲೂ ಹೊಗಳಿಸಿಕೊಂಡವರೂ ಮೂರು ಲೋಕಗಳ ನಮಸ್ಕಾರಕ್ಕೆ ಪಾತ್ರರೂ ಕರ್ಮ ಮತ್ತು ಪಾಪವೆಂಬ ಮದ್ದಾನೆಗಳಿಗೆ ಸಿಂಹಸ್ವರೂಪರೂ ಆದ ಗೌತಮ ಗಣ ಧರರು ಮೋಕ್ಷಲಕ್ಷ್ಮಿಯ ಭಂಡಾರದ ಅಮೂಲ್ಯ ವಸ್ತುವಾದ ವಾತ್ಸಲ್ಯದ ಕಥೆಯನ್ನು ಹೇಳತೊಡಗಿದರು. ಪ್ರಾತಿಹಾರ್ಯದಂತೆ (ಜಿನರಿಗೆಲ್ಲ ಅಷ್ಟಮಹಾಪ್ರಾತಿಹಾರ್ಯ; ವೈಭವಗಳುಂಟು) ಸ್ವರ್ಗಯುಗಳದಂತೆ (ಸೌಧರ್ಮ–ಈಶಾನ, ಇತ್ಯಾದಿಯಾಗಿ ಜೋಡಿ ಸ್ವರ್ಗಗಳು) ದಿಕ್ಕುಗಳಂತೆ (ಎಂಟು ದಿಕ್ಕುಗಳು) ದಿಕ್ಪಾಲಕರಂತೆ (ಎಂಟು ಜನ) ಸೀತಾ

ನದಿಯ ತಡಿಯಂತೆ ನಾಗಕುಲದಂತೆ ಶೋಭೆಯಂತೆ ಶ್ರಾವಕರ ಮೂಲಗುಣದಂತೆ ಪೃಥ್ವಿಯಂತೆ ದರ್ಶನಾಂಗದಂತೆ ದೇವರಷ್ಟ ಗುಣದಂತೆ ದರ್ಶನಮುಂ ನಿಶ್ಶಂಕೆಯುಂ ನಿಷ್ಕಾಂಕ್ಷೆಯುಂ ನಿರ್ವಿಚಿಕಿತ್ಸೆಯುಂ ಅಮೂಢದೃಷ್ಟಿತ್ವಮುಂ ಉಪಗೂಹನಮುಂ ಸ್ಥಿತಿಕರಣಮುಂ ವಾತ್ಸಲ್ಯಮುಮೆಂಬೀಟುಂ ಗುಣಂಗಳೊಳ್ಕೆರೆದು ನಡೆವುದು ೪

ಕಲ್ಯಾಣಮಿದು ಜಗನ್ಮಂ
ಗಲ್ಯಂ ಸಮ್ಯಕ್ತ್ವರತ್ನದಧಿದೇವತೆ ವಾ
ತ್ಸಲ್ಯಂ ಭಾವಿಸುವೊಡೆ ಕೈ
ವಲ್ಯ ಶ್ರೀವನಿತೆ ತುಡುವ ದಿವ್ಯಾಭರಣಂ ೫

ಗದ್ಯ॥ ಇನ್ನದಱ ಪರಮೈಶ್ವರ್ಯಮಂ ಪೇೞ್ವೊಡೆ ಜಂಬೂದ್ವೀಪದ ಭರತಕ್ಷೇತ್ರದ ಪಾಂಚಾಲ ವಿಷಯದೊಳ್ ರಮಣೀಯಮಪ್ಪಹಿಚ್ಛತ್ರಮೆಂಬ ಪುರಮುಂಟಾ ಪುರಮನಾಳ್ವಂ ಸಂತಪನೆಂಬರಸನಾತನ ಪುರೋಹಿತಂ ಸಕಲ ಶಾಸ್ತ್ರ ಪರಿಣತಂ ಸೋಮದತ್ತನೆಂಬನಾತನ

ನದಿಯ ತಡಿಯಂತೆ (ಸೀತಾನದಿಯ ದಡದಲ್ಲಿ ಎಂಟು ದೇಶವಿಭಾಗಗಳಿವೆ) ನಾಗಕುಲದಂತೆ (ಅನಂತ, ವಾಸುಕಿ, ತಕ್ಷಕ, ಕರ್ಕೋಟಕ, ಪದ್ಮ, ಮಹಾಪದ್ಮ, ಶಂಖಪಾಲ ಮತ್ತು ಕುಲಿಂದ, ಎಂಟು ನಾಗಕುಲಗಳು) ಶೋಭೆಯಂತೆ (ಅಷ್ಟಶೋಭೆ–ಮಂಗಳ ಸೂಚಕವಾದ ಎಂಟು ಬಗೆಯ ಅಲಂಕಾರಗಳು) ಶ್ರಾವಕರ ಮೂಲಗುಣದಂತೆ (ಅವೂ ಎಂಟು ಇವೆ) ಪೃಥ್ವಿಯಂತೆ (ಅಷ್ಟಪೃಥ್ವಿಗಳು) ದರ್ಶನಾಂಗದಂತೆ (ನಿಶ್ಶಂಕೆ ಮೊದಲಾದ ಎಂಟು ಅಂಗಗಳು) ದೇವರ ಅಷ್ಟಗುಣದಂತೆ (ಅನಂತದರ್ಶನ, ಅನಂತ ಜ್ಞಾನ, ಅನಂತ ವೀರ್ಯ, ಅನಂತಸುಖ, ಅವ್ಯಾಬಂಧ, ಅಗುರುಲಘುತ್ವ ಸೂಕ್ಷ್ಮ, ಅವಗಾಹ 'ಸಿದ್ಧಮಷ್ಟಗುಣಯುಕ್ತಮನಂತಂ') ದರ್ಶನವೂ ನಿಶ್ಶಂಕೆಯೂ ನಿಷ್ಕಾಂಕ್ಷೆಯೂ ನಿರ್ವಿಚಿಕಿತ್ಸೆಯೂ ಅಮೂಢ ದೃಷ್ಟಿತ್ವವೂ ಉಪಗೂಹನವೂ ಸ್ಥಿತಿಕರಣವೂ ವಾತ್ಸಲ್ಯವೂ ಎಂಬ ಎಂಟು ಗುಣಗಳಿಂದ ಕೂಡಿ ನಡೆಯತಕ್ಕದ್ದು. ೪. ಇದು ಕಲ್ಯಾಣ ಕರವಾದದ್ದು ; ಜಗತ್ತಿಗೆ ಮಂಗಳದಾಯಕವು, ಸಮ್ಯಕ್ತ್ವವೆಂಬ ರತ್ನದ ಅಧಿದೇವತೆ, ವಾತ್ಸಲ್ಯ. ಯೋಚಿಸಿದರೆ ಕೈವಲ್ಯಲಕ್ಷ್ಮಿಯೆಂಬ ವನಿತೆಯು ತೊಟ್ಟುಕೊಳ್ಳುವ ದಿವ್ಯಾಭರಣ, ವಾತ್ಸಲ್ಯ. ೫. ಇನ್ನು ಅದರ ಪರಮೈಶ್ವರ್ಯವನ್ನು ಹೇಳಬೇಕಾದರೆ ಜಂಬೂದ್ವೀಪದ ಭರತ ಭೂಮಿಯ ಪಾಂಚಾಲ ದೇಶದಲ್ಲಿ ರಮಣೀಯವಾದ ಅಹಿಚ್ಛತ್ರವೆಂಬ ಪುರವುಂಟು. ಆ ಪಟ್ಟಣವನ್ನು ಆಳುವ ದೊರೆ ಸಂತಪ. ಆತನಿಗೆ ಸೋಮದತ್ತನೆಂಬ ಸಕಲಶಾಸ್ತ್ರಪರಿಣತನಾದ ಬ್ರಾಹ್ಮಣನು ಪುರೋಹಿತನಾಗಿದ್ದನು. ಆತನ ಹೆಂಡತಿ

ಭರ್ತಾರೆ ಯಜ್ಞದತ್ತೆಯೆಂಬಳಾ ಯಿರ್ವರುಂ ಸಕಲ ಜನಕ್ಕಂ ನಂಟರ್ಗಮೊಳ್ಳಿದರಾಗಿ ಸುಖದಿಂದಿರ್ಪುದುಂ ೬

ಹರಿಸಾಕ್ಷಿಗೆ ವಿಪ್ರ ಕುಲಾಂ
ಬರ ತರಣಿಗೆ ಸತಿಗೆ ಯಜ್ಞದತ್ತೆಗೆ ನಂಟ
ರ್ಗರು ಮುದದಿಂದಂ ರಾಗಂ
ಕರಮಲ್ಲದೆ ಪೆರ್ಚೆ ಗರ್ಭಮಪ್ಪುದುಮಾಗಳ್ ೭

ಆ ಗರ್ಭಾರ್ಭಕನೊಂದು
ದ್ಯೋಗಮುಮಂ ಮುಂದಣೊಂದು ರಾಜ್ಯಮುಮಂ ಜೈ
ನಾಗಮ ಕುಶಲತೆಯುಮನಿಂ
ಬಾಗಿರೆ ತೋರ್ಪಂತೆ ಸಾರುವಂತವಯುವದಿಂ ೮

ಗದ್ಯ॥ ಗರ್ಭವಾದಯ್ದು ತಿಂಗಳ್ಗೆ ಜಿನಮಂದಿರಂಗಳಂ ಪೋಗಿ ಬಲಗೊಳಲುಂ ಜಿನಬಿಂಬಗಳನಷ್ಟವಿಧಾರ್ಚನೆಯಿಂದರ್ಚಿಸಲುಂ ತ್ರಿಭುವನ ಮಾಂಗಲ್ಯಂಗೆ ಮಹಾಭಿಷೇಕಮಂ ಮಾಡಲುಂ ಶ್ರೀಮದರ್ಹತ್ಪರಮೇಶ್ವರ ರೂಪನೆವೆಯಿಕ್ಕದೆ ನೋಡಲುಂ ಮೋಕ್ಷಲಕ್ಷ್ಮೀ ವಿಲಾಸನನಾಗಳುಂ ಪತ್ತುವಿಡದಿರಲುಂ ಜಿನಾಗಮಮನಾಗಳುಂ ಕೇಳಲುಂ ಸಿದ್ಧಾಂತವಚನಮನಾಲಿಸಲುಂ ಚರಿತಪುರಾ

ಯಜ್ಞದತ್ತೆಯೆಂಬುವಳು. ಆ ಇಬ್ಬರೂ ಸಕಲ ಜನರಿಗೂ ನಂಟರಿಗೂ ಒಳ್ಳೆಯವರಾಗಿ ಸುಖವಾಗಿ ಇದ್ದರು. ೬. ವಿಪ್ರಕುಲಾಂಬರ ಸೂರ್ಯನೆನಿಸಿದ ಆ ಬ್ರಾಹ್ಮಣನಿಗೂ ಹರಿಸಾಕ್ಷಿಯಾದ ಆ ಸತಿ ಯಜ್ಞದತ್ತೆಗೂ, ನಂಟರಿಗೆ ಎಲ್ಲರಿಗೂ ಅತಿಶಯವಾದ ಆನಂದವೊದಗುವಂತೆ ಆಕೆಗೆ ಗರ್ಭವುಂಟಾಯಿತು ೭. ಆ ಗರ್ಭಸ್ಥನಾದ ಅರ್ಭಕನ ಮುಂದಿನ ಉದ್ಯೋಗವನ್ನು ಅವನ ಬದುಕಿನ ವೈಭವವನ್ನು, ಜೈನಾಗಮ ಕುಶಲತೆಯನ್ನು ಚೆನ್ನಾಗಿ ತೋರಿಸುವಂತೆ, ಸಾರಿ ಹೇಳುವಂತೆ, ಗರ್ಭವುಂಟಾದ ಐದು ತಿಂಗಳಿಗಾಗಲೇ ಜಿನಮಂದಿರಗಳನ್ನು ಹೋಗಿ ಪ್ರದಕ್ಷಿಣೆ ಮಾಡುವ ಆಸೆ ಹುಟ್ಟಿತು, ಆ ತಾಯಿಗೆ; ಜಿನಬಿಂಬಗಳಿಗೆ ಅಷ್ಟವಿಧವಾದ ಅರ್ಚನೆಯಿಂದ ಪೂಜಿಸುವ ಆಸೆಯಾಯಿತು. ಆಕೆ ತ್ರಿಭುವನ ಮಾಂಗಲ್ಯನಿಗೆ ಮಹಾಭಿಷೇಕ ಮಾಡಲು ಬಯಸಿದಳು; ಅರ್ಹತ್ಪರಮೇಶ್ವರನ ರೂಪವನ್ನೇ ರೆಪ್ಪೆ ಹೊಡೆಯದೆ ನೋಡುತ್ತಿರುವ ಬಯಕೆಯಾಯಿತು ಆ ಮೋಕ್ಷಲಕ್ಷ್ಮೀವಿಳಾಸನಾದ ಜಿನೇಶ್ವರ ಸನ್ನಿಧಿಯನ್ನು ಯಾವಾಗಲೂ ಬಿಡದೆ ಅಲ್ಲಿಯೇ ಇರುವ ಆಸೆಯಾಯಿತು, ಯಜ್ಞದತ್ತೆಗೆ. ಯಾವಾಗಲೂ ಜಿನಾಗಮವನ್ನು ಕೇಳುತ್ತಿರಬೇಕೆಂಬ ಆಸೆ. ಜೈನಸಿದ್ಧಾಂತ ವಚನಗಳನ್ನು ಕೇಳುವ, ಚರಿತ್ರೆ, ಪುರಾಣ

ಣಂಗಳಂ ಪೆಱರ್ಗೆ ಪೇೞಲುಂ ಜಿನಮುನಿಗಳಂ ಸಾರಲುಂ ಜೀವಂಗಳನೋವಲುಂ ಕುಮಾರ್ಗಾನುರಾಗಿಗಳನಗಲಲುಂ ಆಹಾರಾಭಯಭೈಷಜ್ಯ ದಾನಮಂ ಮಾಡಲುಂ ಸದ್ದೃಷ್ಟಿಗಳಪ್ಪರಾಳ್ಮಾಡಲುಂ ವಿದ್ಯಾಧರಾಧಿರಾಜರಿಂ ಬೆಸಕೆಯ್ಸಿ ಕೊಳಲುಂ ಚಾತುರ್ವರ್ಣ್ಯಕಮಿದಿರೆೞ್ದು ಕೈಗಳಂ ಮುಗಿಯಲುಂ ಸರ್ವಸ್ವಮನೀಯಲುಂ ಬಯಕೆ ತಿಣ್ಣಮಾಗೆ ೯

ಪೆಱರ್ಗೀ ಬಯಕೆಗಳಂ ತಾ
ನಱಿಪಿದೊಡಂ ತೀರದೆಂದು ಕಾಮಿನಿ ಮನದೊಳ್
ಮಱುಗಿ ಬಿಸಿದಪ್ಪ ತುಪ್ಪಮ
ನಱಿಯದೆ ಶಿಶು ಮಿಂಗಿದಂತೆ ಚಿಂತಿಸಿ ಮನದೊಳ್ ೧೦

ನೆರೆಯಲ್ಲದು ಪೊರೆಯಲ್ಲದು
ಗೊರವನನೆಲೆ ಮಗವು ಪೋಲ್ತುದೆಂಬೀ ನುಡಿಯಂ
ತಿರೆ ಚೋದ್ಯಮಾದುದೀತಂ
ಪುರುೞಿಲ್ಲದ ಬಯಕೆ ಬಗೆವೊಡವನೀತಳದೊಳ್ ೧೧

ಗದ್ಯ॥ ಎನ್ನ ಕುಲದವರಕ್ಕೆ ಮತ್ಪತಿಯನ್ವಯದವರಕ್ಕೆ ಜಿನಧರ್ಮಮೆಂಬುದಂ ಕನಸಿನೊಳಪ್ಪೊಡಂ ಕಂಡಱಿಯರೆನಗೀಗಳಿನ ಬಯಕೆಗಾಶ್ಚರ್ಯಮಾದುದಿದನೆನ್ನ ಬಂಧುಗಳ್ಗಕ್ಕೆ ಗಂಡಂಗಕ್ಕೆ ಪೇೞ್ದೊಡಮವರೀ ಬಯಕೆಯಂ ತೀರ್ಚುವರಲ್ಲವೆಂದಂ ಕೊಕ್ಕಳಗುದಿದು ಮೂಗರ್

ಗಳನ್ನು ಇತರರಿಗೆ ಹೇಳುವ ಅಪೇಕ್ಷೆ ಹುಟ್ಟಿತು. ಜಿನಮುನಿಗಳನ್ನು ಸೇರಿ ಕುಮಾರ್ಗಪ್ರೇಮಿಗಳನ್ನು ಬಿಟ್ಟು ಜೀವಿಗಳನ್ನು ಕಾಪಿಡುತ್ತ ಆಹಾರ, ಅಭಯ, ಔಷಧ ದಾನಗಳನ್ನು ಮಾಡುವ ಆಸೆ, ಸದ್ಧರ್ಮಾಸಕ್ತರಿಗೆ, ಸೇವೆಮಾಡುವ ಆಸೆ, ವಿದ್ಯಾಧರರ ಅಧಿರಾಜನಿಂದ ಸೇವೆ ಮಾಡಿಸಿಕೊಳ್ಳುವ ಆಸೆ, ಚತುರ್ವರ್ಣಗಳವರಿಗೆ ಇದಿರೆದ್ದು ಕೈಮುಗಿದು ಸರ್ವಸ್ವನ್ನೂ ಕೊಡುವ ಆಸೆಯೂ ಹೆಚ್ಚಾಯಿತು ೯. ಇತರರಿಗೆ ಈ ಬಯಕೆಗಳನ್ನು ತಾನು ತಿಳಿಸಿದರೂ ಅವು ತೀರುವುದಿಲ್ಲವೆಂದು ಆ ಹೆಂಗಸು ಮನಸ್ಸಿನಲ್ಲಿ ಸಂಕಟಪಟ್ಟು ಮಗುವು ತಿಳಿಯದೆ ಬಿಸಿಯ ತುಪ್ಪವನ್ನು ನುಂಗಿದ ಹಾಗೆ ಮನಸ್ಸಿನಲ್ಲಿಯೇ ವ್ಯಥೆಪಟ್ಟಳು. ೧೦. ನೆರೆಯಲ್ಲ, ಹೊರೆಯಲ್ಲ, ಮಗುವು ಗೊರವನನ್ನು ಹೋತಿತ್ತು ಎಂಬ ಗಾದೆಯಂತೆ ವಿಚಿತ್ರವಾಯಿತು. ಇದು ಪುರುಳಿಲ್ಲದ ಬಯಕೆ, ನನ್ನ ಕುಲದವರಾಗಲಿ ನನ್ನ ಗಂಡನ ವಂಶದವರಾಗಲಿ, ಜಿನಧರ್ಮವೆಂಬುದನ್ನು ಕನಸಿನಲ್ಲಿಯೂ ಕಂಡು ಬಲ್ಲವರಲ್ಲ, ನನಗೆ ಈಗಿನ ಬಯಕೆಗೆ ಆಶ್ಚರ್ಯವಾಗುತ್ತಿದೆ. ನನ್ನ ಬಂಧುಗಳಿಗಾಗಲಿ, ನನ್ನ ಗಂಡನಿಗಾಗಲಿ, ಹೇಳಿದರೂ ಅವರು ಈ ಬಯಕೆಯನ್ನು ನೆರವೇರಿಸುವವರಲ್ಲ, ಎಂದು ಬಹಳವಾಗಿ ಮರುಗಿ ಮೂಗರು ಕಂಡ ಕನಸಿನ ಹಾಗೆ ಇತರ

ಕಂಡ ಕನಸಿನಂತೆ ಪೆಱರ್ಗೆ ಪೇೞಲಱಿಯದೆ ನಾಡೆಯುಂ ಬಡವಾಗಿರ್ಪುದುಂ ತಾಯುಂ ತಂದೆಯುಂ ಸೋಮದತ್ತನುಂ ಬಂಧುಗಳುಂ ಯಜ್ಞದತ್ತೆ ಬಡವಾಗಿರ್ದುದಕ್ಕೆ ಚೋದ್ಯಂಬಟ್ಟು ೧೨

ಮುನ್ನಿನೂಟದ ಮಾರ್ಗಮಲ್ಲದು ಬುದ್ಧಿಯುಂ ನಡೆವೋಜೆಯುಂ
ಮುನ್ನಿನಂದಮನೇನೊ ಪೋಲವು ಚಿತ್ತದೊಳ್ ಪೆಱತೊಂದನಾಂ
ತುನ್ನತಿಕ್ಕೆಯನಾಗಳುಂ ನೆನೆಯುತ್ತುಮಿರ್ಪುದಿದೇಕೆ ಪೇೞ್
ಕೆನ್ನನೊಡನೆಂದಿನಂದದೊಳೊಂದಲೊಲ್ಲದೆ ರಾಗದಿಂ ೧೩

ಪವನಮಾರ್ಗಮನೇನೊ ನೋಡುತುಮಿರ್ಪಳರ್ತಿಯೊಳಾಗಳುಂ
ಪ್ರವರಮಪ್ಪ ಜಿನಾಲಯಂಗಳನಟ್ಕಱಿಂದಮೆ ನೋಡುವಳ್
ಸವಣರೆಂದೊಡೆ ಪೆರ್ಚುವಳ್ ಜಿನಪೂಜೆಯೆಂದೊಡೆ ನೋಡುವಳ್
ಧವಳಲೋಚನೆ ಜೈನರೆಂದೊಡೆ ಪೊಂಗುವಳ್ಕಡುಗೂರ್ಮೆಯಿಂ ೧೪

ಗದ್ಯ॥ ಇದಾಶ್ಚರ್ಯಮೆಂದು ವಿಸ್ಮಯಂಬಟ್ಟು ಯಜ್ಞದತ್ತೆಯಲ್ಲಿಗೆ ಬಂದು ನಿನ್ನ ಬಯಕೆಯನೆಮಗಱಿಯೆ ಪೇೞ್ವುದಾ ಬಯಕೆ ತೀರ್ದೊಡಲ್ಲದೆ ನಿನ್ನ ಮೆಯ್ಯ ಬಡತನಂ ಪೋಗದೆಂದು ಕೞಿವೆಸಗೊಳ್ವುದುಂ ಯಜ್ಞದತ್ತೆ ಪೇೞಲಣ್ಮದುಸಿರದಿರ್ಪುದುಂ ನಂಟರುಂ ಸೋಮದತ್ತನುಂ

ರಿಗೆ ಹೇಳಲು ಆಗದೆ ಬಹಳ ಬಡವಾಗಿರಲು ತಾಯಿಯೂ ತಂದೆಯೂ ಸೋಮದತ್ತನೂ ಬಂಧುಗಳೂ ಯಜ್ಞದತ್ತೆ ಬಡವಾಗಿದ್ದುದಕ್ಕೆ ಆಶ್ಚರ್ಯಪಟ್ಟು ಮೊದಲಿನ ಊಟದ ರೀತಿಯಿದಲ್ಲ. ಬುದ್ಧಿಯೂ ನಡೆಯುವ ಕ್ರಮವೂ ಮೊದಲಿನ ರೀತಿಯನ್ನು ಏನೇನೂ ಹೋಲುವುದಿಲ್ಲ. ಮನಸ್ಸಿನಲ್ಲಿ ಬೇರೆಯೊಂದನ್ನು ಯಾವಾಗಲೂ ಚಿಂತಿಸುತ್ತ ಇರುವುದಿದೇಕೆ ? ನನ್ನ ಸಂಗಡ ಹೇಳು. ಎಂದಿನಂತೆ ಸಂತೋಷದಿಂದಿಲ್ಲವೇಕೆ ? ೧೩. ಯಾವಾಗಲೂ ವಾಯುಮಾರ್ಗದ ಕಡೆ ನೋಡುತ್ತಿರುವಳು. ಶ್ರೇಷ್ಠವಾದ ಜಿನಾಲಯಗಳನ್ನು ಪ್ರೀತಿಯಿಂದ ನೋಡುವಳು. ಸವಣರೆಂದರೆ ಉತ್ಸಾಹಿಸುವಳು ಜಿನಪೂಜೆಯೆಂದರೆ ತಿರುಗಿ ನೋಡುವಳು. ಈ ಧವಳಲೋಚನೆಯು ಜೈನರೆಂದರೆ ಉತ್ಸಾಹಿಸುವಳು ೧೪. ಇದು ಆಶ್ಚರ್ಯವೆಂದು ಸೋಜಿಗಪಟ್ಟು ಯಜ್ಞದತ್ತೆಯ ಬಳಿಗೆ ಬಂದು "ನಿನ್ನ ಬಯಕೆಯನ್ನು ನಮಗೆ ತಿಳಿಯುವಂತೆ ಹೇಳು. ಆ ಬಯಕೆ ಈಡೇರಿದ ಹೊರತು ನಿನ್ನ ದೇಹದ ಕೃಶತೆಯು ಹೋಗುವುದಿಲ್ಲ,"ವೆಂದು ಕೇಳಿಕೊಳ್ಳಲು ಯಜ್ಞದತ್ತೆ ಹೇಳಲು ಧೈರ್ಯ ಸಾಲದೆ ಸುಮ್ಮನಿದ್ದಳು. ಆಗ ನಂಟರು, ಸೋಮದತ್ತ, ತಾಯಿ, ತಂದೆ, ಎಲ್ಲರೂ ಯಜ್ಞದತ್ತೆಯನ್ನು ನಿತ್ಯವೂ ಹಿಡಿದು ಕೇಳ

ತಾಯುಂ ತಂದೆಯುಂ ಯಜ್ಞದತ್ತೆಯಂ ನಿಚ್ಚಲಡಸಿ ಬೆಸಗೊಳ್ವುದುಮವರನಿಪ್ಪಕಾಜದೊಂದು ದಿವಸಂ ತನ್ನ ಮನದ ಬಯಕೆಯಂ ಪೇಟದೆ ಪುಸಿದಿಂತೆಂದಳ್ ೧೫

ತನಿರಸದಿಂದಮೃತದ ದೊರೆ
ಯೆನಿಸುವ ಕುಂಕುಮದ ರುಚಿಯನನುಕರಿಸುವ ಮಾ
ವಿನ ಪಣ್ಣನೆನಗೆ ನೀವಿಂ
ಭಿನೆ ತಂದಿಕ್ಕುವುದಮೋಘಮೆಂಬುದುಮಾಗಳ್ ೧೬

ಗದ್ಯ॥ ನಂಟರುಂ ಸೋಮದತ್ತನುಂ ಯಜ್ಞದತ್ತೆಯ ಬಯಕೆಗೆ ಬೆಱಗಾಗಿ ಪುಲಿಯ ಗಿಣ್ಣುಮಂ ಮೊಲನ ಕೋಡುಮಂ ಕಬ್ಬಿನ ಪಣ್ಣುಮಂ ಪಲಸಿನ ಪೂವುಮಂ ಪಡೆವೊಡಂ ಪಡೆಯ ಲಕ್ಕುಮಿಾ ದಿವಸಂ ಮಾವಿನಪಣ್ಣಂ ಪಡೆಯಲ್ಬಾರದಿದಕ್ಕೇಗೆಯ್ವುದೆಂದು ಚಿಂತಿಸಿ ೧೭

ತರುಣಿಗೆ ಮಾವಿನ ಪಣ್ಗಳ್
ದೊರೆಕೊಳ್ಳದವಮೋಘಮೆಂತು ಪೇಟ್ವೊಡಮಿಂದನೋ
ಸರಿಸಿ ಕರಮೇಳಿಸಿರ್ದೊಡ
ಮೆರಡಿಲ್ಲದೆ ಕೀಳ ಸಾವು ತಾಂ ಸಮನಿಸುಗುಂ ೧೮

ಗದ್ಯ॥ ನಾವಿದನುಪೇಕ್ಷಿಸಿರ್ದೆವಪ್ಪೊಡೆ ಜಟಿಕ್ಕಮೊಕ್ಕ ತುಪ್ಪಮನುಡುಗಲ್ಬಾರದು. ಮಾವಿನ ಪಣ್ಣನೆಲ್ಲಿ ಪೊಕ್ಕಪ್ಪೊಡಂ ತರವೇಟ್ಕುಮೆಂದು ಸೋಮದತ್ತನುಂ ಬಂಧುಗಳುಂ ತಾಯ್ ತಂದೆಯುರುಂ ಯಜ್ಞದತ್ತೆಗೆ ಸಂತೋಷಮಪ್ಪಂತಾಗೆ ನುಡಿದು ದೆಸೆದೆಸೆಗೆ ಪೋಗಿ ೧೯

ಲಾಗಿ ಅವರ ಕಾಟಕ್ಕೆ ತಾಳಲಾರದೆ ಒಂದು ದಿನ ತನ್ನ ಮನಸ್ಸಿನ ಕೋರಿಕೆಯನ್ನು ಹೇಳದೆ ಹೀಗೆ ಹುಸಿದು ನುಡಿದಳು. ೧೫. "ರಸಭರಿತವಾಗಿರುವ ಅಮೃತಸಮಾನ ವೆನ್ನಿಸುವ ಕುಂಕುಮದ ಬಣ್ಣವನ್ನು ಅನುಕರಿಸುವ ಮಾವಿನಹಣ್ಣನ್ನು ನನಗೆ ನೀವು ಸಂತೋಷದಿಂದ ತಂದುಕೊಡಿ" ೧೬. ಆಗ ನಂಟರೂ ಸೋಮದತ್ತನೂ ಯಜ್ಞ ದತ್ತೆಯ ಬಯಕೆಯನ್ನು ಕೇಳಿ ಬೆರಗಾದರು. "ಹುಲಿಯ ಗಿಣ್ಣು, ಮೊಲನ ಕೊಂಬು, ಕಬ್ಬಿನಹಣ್ಣು, ಹಲಸಿನ ಹೂವು, ಇವುಗಳನ್ನಾದರೂ ಪಡೆಯಬಹುದೋ ಹೇಗೋ ! ಈ ದಿನಗಳಲ್ಲಿ ಮಾವಿನ ಹಣ್ಣನ್ನು ಪಡೆಯುವುದು ಸಾಧ್ಯವಲ್ಲ. ಇದಕ್ಕೇನು ಮಾಡು ವುದು ?" ಎಂದು ಚಿಂತಿಸಿದರು. ೧೭. ಈ ತರುಣಿಗೆ ಮಾವಿನಹಣ್ಣುಗಳು ಸಿಕ್ಕದಿದ್ದರೆ ಖಂಡಿತವಾಗಿಯೂ ಇವಳಿಗೆ ಸಾವೇ ಬರಬಹುದು. ಇದನ್ನು ಹೇಗೆ ಹೇಳಿದರೂ ಕಷ್ಟ. ಇದನ್ನು ಅಸಡ್ಡೆ ಮಾಡುವುದೂ ಸರಿಯಲ್ಲ" ಎಂದು ಯೋಚಿಸಿ "ಆಮೇಲೆ ಚೆಲ್ಲಿದ ತುಪ್ಪವನ್ನು ಎತ್ತಲು ಆಗದು. ಎಲ್ಲಿಯಾದರೂ ಹೋಗಿ ಮಾವಿನ ಹಣ್ಣನ್ನು ತರಲೇ ಬೇಕು" ಎಂದು ಯೋಚಿಸಿ ಸೋಮದತ್ತನೂ ಬಂಧುಗಳೂ ಅವಳ ತಾಯಿ ತಂದೆಗಳೂ ಯಜ್ಞದತ್ತೆಗೆ ಸಂತೋಷವಾಗುವ ಹಾಗೆ ಮಾತನಾಡಿ ದಿಕ್ಕುದಿಕ್ಕುಗಳಿಗೆ ಹೋದರು. ೧೮–೧೯. ನದೀತೀರದಲ್ಲಿ ಬೆಟ್ಟದ ತಪ್ಪಲಲ್ಲಿ ಹೆಬ್ಬಾದ ಕೊಳ್ಳಗಳಲ್ಲಿ ಕೆರೆಗಳ ನೀರ

ತೊಱೆಗಳ ತೀರದೊಳ್ಗಿರಿಯ ತಪ್ಪಲೊಳಗ್ಗಳಮಪ್ಪ ಕೊಳದೊಳ್
ಕೆಱೆಗಳ ನೀರಪಳ್ಳದ ತಟಂಗಳೊಳೊಪ್ಪುವ ಪುಷ್ಪವಾಟದೊಳ್
ತುಱುಗಿದ ವೃಕ್ಷ ಸಂಕುಲದೊಳಾರವೆಯೊಳ್ ಬಳಸಿರ್ದ ತೋಂಟದೊಳ್
ಮಱುಗಿ ತೊಟಲ್ತು ಮಾವಿನ ಫಲಂಗಳನಂದಱಸುತ್ತುಮೆಲ್ಲಿಯುಂ ೨೦

ಗದ್ಯ॥ ಪಗಲ್ ಪಸಿವುಮ ನಿರುಳ್ ನಿದ್ರೆಯುಮಂ ನಱೆಯದೆ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳೊಳೆಲ್ಲಂ ತೊಟಲ್ದು ನೋಡಿ ೨೧

ಆವನಾದೊಡಮಕ್ಕೆ ಮಾವಿನ ಪಣ್ಣನೀಗಳೆ ನೋಡಿ ತಂ
ದೀವನುಳ್ಳೊಡೆ ಬೇಗಮಾತನ ಬೇಡಿದರ್ಥಮನೀವೆವೆಂ
ದೋವದೆಲ್ಲಿಯುಮಲ್ಲಿಗಲ್ಲಿಗೆ ಸಾಱುತುಂ ಬಿಡದೆಯ್ದಿ ಸ
ದ್ಭಾವದಿಂ ನೆಱೆ ಕೇಳುತುಂ ತಿರಿದರ್ಮಹೀತಳಮೆಲ್ಲಮಂ ೨೨

ತುಱುಗುವ ಗೋವರಂ ಮ
ತ್ತಱಿಕೆಯ ಕಬ್ಬಿಲರನೆಯ್ದೆ ಬೆಸಗೊಳುತುಂ ಬಾಯ್
ಬಱಬಱಬತ್ತುತ್ತುಂ ಮೈ
ಮಱುಗಿ ಮಹಾಭರದಿನರಸುತಿರ್ಪವಸರದೊಳ್ ೨೩

ಗದ್ಯ॥ ಬಲವಾಹಿನಿಯೆಂಬ ತೊಱೆಯ ತಡಿಯೊಳಿರ್ದ ಬೇಡವಳ್ಳಿಗೆ ಸೋಮದತ್ತಂ ಛಾತ್ರ ವೆರಸು ಪೋಗಿ ಮಾವಿನ ಪಣ್ಣೆಡೆಯಂ ಪುಳಿಂದರಿಂ ಬೆಸಗೊಳ್ವುದುಮೊರ್ವ ಬೇಡಂ ಸೋಮದತ್ತ

ಹಳ್ಳಗಳ ಪಕ್ಕಗಳಲ್ಲಿ, ಶೋಭಿಸುವ ಹೂದೋಟಗಳಲ್ಲಿ, ಎಲ್ಲೆಲ್ಲಿಯೂ ಸುತ್ತಿ ಸಂಕಟ ಪಟ್ಟು ಮಾವಿನಹಣ್ಣುಗಳನ್ನು ಹುಡುಕಿದರು ೨೦. ಒತ್ತಾದ ಮರದ ತೋಪುಗಳಲ್ಲಿ ಆರಾಮಗಳಲ್ಲಿ, ಎಲ್ಲಿಯೂ ಹಣ್ಣು ಸಿಕ್ಕಲಿಲ್ಲ. ಹಗಲು ಹಸಿವನ್ನು ರಾತ್ರಿ ನಿದ್ದೆ ಯನ್ನೂ ಮರೆತು ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖ ಗಳೆಂಬೆಲ್ಲ ಸ್ಥಳಗಳಲ್ಲಿಯೂ ಅಲೆದು ನೋಡಿದರು. ೨೧. "ಈಗ ಮಾವಿನ ಹಣ್ಣು ಗಳನ್ನು ನಮಗೆ ತಂದು ಕೊಡಬಲ್ಲವನಿದ್ದರೆ ಅವನು ಯಾರಾದರೂ ಆಗಲಿ, ಅವನು ಬೇಡಿದ ಅರ್ಥವನ್ನು ಕೊಡುತ್ತೇವೆ" ಎಂದು ಹಿಂತೆಗೆಯದೆ ಎಲ್ಲೆಲ್ಲಿಯೂ ಹೋಗಿ ಸಾರಿ ಹೇಳುತ್ತ ಎಲ್ಲರನ್ನೂ ಸದ್ಭಾವನೆಯಿಂದ ಕೇಳುತ್ತ ದೇಶದಲ್ಲೆಲ್ಲ ಅಲೆದರು. ೨೨. ದನಕಾಯುವವರನ್ನೂ ಪರಿಚಿತರಾದ ಬೇಡರನ್ನೂ ಹೆಚ್ಚಾಗಿ ವಿಚಾರಿಸುತ್ತ, ಬಾಯಿ ಒಣಗಲು ಮೈಕಾಯಲು ಬಹಳ ರಭಸದಿಂದ ಅವರು ಹುಡುಕುತ್ತಿದ್ದರು. ೨೩. ಆ ಸಮ ಯದಲ್ಲಿ ಬಲವಾಹಿನಿಯೆಂಬ ನದಿಯ ತೀರದಲ್ಲಿದ್ದ ಒಂದು ಬೇಡರಹಳ್ಳಿಗೆ ಸೋಮ ದತ್ತನು ಶಿಷ್ಯನೊಡನೆ ಹೋಗಿ ಮಾವಿನ ಹಣ್ಣಿರುವ ಸ್ಥಳವನ್ನು ಬೇಡರಲ್ಲಿ ವಿಚಾರಿಸು ತ್ತಿರುವಾಗ ಒಬ್ಬ ಬೇಡನು ಸೋಮದತ್ತನ ಬಳಿಗೆ ಬಂದು "ನೀವು ಹುಡುಕುತ್ತಿರುವ

ನಲ್ಲಿಗೆ ಬಂದು ನಿಮ್ಮರಸುವ ಮಾವಿನ ಪಣ್ಣಡೆಯ ನಾನಱಿವೆನೆಂಬುದುಂ ಆತನ ಮಾತಿಂಗೆ ಪ್ರಾಣಂ ಬಂದಂತಾಗೆ ಸಂತೋಷಂಬಟ್ಟು ೨೪

ತಡೆಯದೆ ಮಾವಿನ ಪಣ್ಣ
ಪೆಡೆಯಂ ನೀನೆಮಗೆ ತೋರ್ಪೆಯಪ್ಪೊಡೆ ನಿನಗಾಂ
ಕುಡುವೆಂ ಬೇಡಿದ ವಸ್ತುವ
ನಡಿಮಡಗದೆ ಮನೆಗೆ ಬೇಗಮೆಂಬುದುಮಾಗಳ್ ೨೫

ಗದ್ಯ॥ ಕಿರಾತಂ ತನ್ನ ಬೇಟ್ಪವಸ್ತುವಂ ಬೇಡಿಕೊಂಡು ಸೋಮದತ್ತಂಗಿಂತೆಂದಂ : ಅಬ್ಜಷಂಡಮೆಂಬುದೊಂದು ಮಾವಿನವನಮೀ ನದೀತೀರದೊಳಿರ್ಪುದು, ತದಾಮ್ರವನದೊಳೊರ್ವಂ ಮೈಯೊಳೆಲ್ಲಂ ಕೆಸಱಿನೊಟ್ಟಿಕೊಂಡು ಬೆತ್ತಲೆಮರುಳಂತೆ ತನ್ನೊಳೆ ಮಿನುಕುತ್ತುಂ ಮೋನದೊಳಿರ್ಪನಾತಂ ಕುಳ್ಳಿರ್ಪೆಡೆಯ ಚೂತಮಹೀಜಾತಂ ಪಣ್ಫಲಂಗಳಿಂದೊಱಗಿರ್ದಪುದಲ್ಲಿಗೆ ಪೋಗಿ ನೀಮಾರ್ಪನಿತ ಪಣ್ಗಳಂ ಕೊಳ್ಳಿಮೆಂದು ಕಿಱಿದೆಡೆಯಂ ಬಂದು ಬಟ್ಟೆಯಂ ತೋಱಿ ವ್ಯಾಧಂ ಮಗುಳ್ದು ಪೋಪುದುಂ ೨೬

ತೊಱೆಯ ತಡಿವಿಡಿದು ಬರುತುಂ
ತುಱುಗಿದ ಸಹಕಾರವನಮನೊರ್ಮೆಗೆ ಕಂಡ
ಟ್ಕಱಿನೊಳ್‌ರಾಗಿಸಿ ನಲಿದಂ
ಮಱುಕಂ ಪೆಱಪಿಂಗಿಪೋಗೆ ಮನದಿಂದಾಗಳ್ ೨೭

ಮಾವಿನಹಣ್ಣು ಇರುವ ಸ್ಥಳವನ್ನು ನಾನು ಬಲ್ಲೆ” ಎನ್ನುತ್ತಲೇ ಅವನ ಮಾತಿನಿಂದ ಪ್ರಾಣ ಬಂದ ಹಾಗೆ ಆಗಿ ಸಂತೋಷಪಟ್ಟು ೨೪. “ಸಾವಕಾಶ ಮಾಡದೆ ನೀನು ನಮಗೆ ಮಾವಿನ ಹಣ್ಣಿರುವ ಸ್ಥಳವನ್ನು ತೋರಿಸಿದರೆ ನೀನು ಕೋರಿದ ವಸ್ತುವನ್ನು ಕೊಟ್ಟು ಆಮೇಲೆ ಮನೆಗೆ ಹೋಗುತ್ತೇನೆ” ಎಂದನು ೨೫. ಆ ಕಿರಾತನು ತನಗೆ ಬೇಕಾದ ವಸ್ತುವನ್ನು ಕೇಳಿ ಪಡೆದುಕೊಂಡು ಸೋಮದತ್ತನಿಗೆ ಹೀಗೆ ಹೇಳಿದನು : ಅಬ್ಜಷಂಡವೆಂಬ ಒಂದು ಮಾವಿನ ತೋಟ ಈ ನದಿಯ ದಡದಲ್ಲಿಯೇ ಇದೆ. ಆ ಮಾವಿನ ತೋಟದೊಳಗೆ ಒಬ್ಬನು ಮೈಗೆಲ್ಲ ಕೆಸರನ್ನು ಮೆತ್ತಿಕೊಂಡು ಬೆತ್ತಲೆ ಮರುಳಿನ ಹಾಗೆ ತನ್ನಲ್ಲಿಯೇ ಏನೋ ಗುಣಿಗುಣಿಸುತ್ತ ಮೌನದಲ್ಲಿ ಇದ್ದಾನೆ. ಆತನು ಕುಳಿತಿರುವ ಸ್ಥಳದ ಮಾವಿನಮರವು ಅನೇಕ ಹಣ್ಣುಗಳಿಂದ ಕೂಡಿ ಭಾರಕ್ಕೆ ಬಾಗಿದೆ. ಅಲ್ಲಿಗೆ ಹೋಗಿ ನೀವು ನಿಮಗಾದಷ್ಟು ಹಣ್ಣುಗಳನ್ನು ತೆಗೆದುಕೊಳ್ಳಿ” ಎಂದು ಹೇಳಿ ಕೊಂಚ ದೂರ ಬಂದು ದಾರಿತೋರಿಸಿ ಬೇಡನು ಹಿಂತಿರುಗಿ ಹೋದನು ೨೬. ನದಿಯ ದಡವನ್ನೇ ಅನುಸರಿಸಿ ಬರುತ್ತ ಒತ್ತಾಗಿದ್ದ ಮಾವಿನ ಮರಗಳ ತೋಪೊಂದನ್ನು ಕಡೆಗೆ ಕಂಡು ಸಂತೋಷಿಸಿ ನಲಿದು ಬಿಟ್ಟನು. ಸೋಮದತ್ತನ ಮನಸ್ಸಿನ ಸಂಕಟ ಬಿಟ್ಟು ಹೋಯಿತು. ೨೭. ಆಗ ಆ ವನವನ್ನು ಹೊಕ್ಕು ನೋಡುತ್ತ ಬರುತ್ತಿರಲು

ಗದ್ಯ॥ ವನಮಂ ಪೊಕ್ಕು ನೋಡುತುಂ ಬರ್ಪಾತಂ ಫಲಭಾರದಿಂ ಸೊಗಯಿಸುವ ಮಾಕಂದ ಮಹೀರುಹಮಂ ತದ್ವೃಕ್ಷದ ಕೆಳಗಿರ್ದ ಸುಮತಿ ಭಟ್ಟಾರಕರೆಂಬ ಮಹರ್ಷಿಯರುಮಂ ಕಂಡು ತನ್ನೊಳಿಂತೆಂದಂ ೨೮

ಈವನದ ಚೂತಭೂಜಾ
ತಾವಳಿಯೊಳ್ ಫಲಮವಿಲ್ಲಮಿರ್ದಂತಾಗೀ
ಮಾವಿನೊಳೆ ಪಣ್ಗಳಾದುವು
ಭಾವಿಸುವಂತಿದುವೆ ಚೋದ್ಯಮುರ್ವೀತಳದೊಳ್ ೨೯

ಈ ಮುನಿಯ ತಪೋನ್ನತಿಯಿಂ
ದೀ ಮಾವೊಂದರೊಳೆ ಪಣ್ಗಳಾದುವು ಬಗೆವಂ
ದೀ ಮುನಿಯ ತಪೋನ್ನತಿಯಂ
ಸಾಮಾನ್ಯಮನುಷ್ಯರೆಯ್ದೆ ನೆಱೆವರೆ ಪೊಗಟಲ್ ೩೦

ಈ ವರಮುನಿಪನೆ ಸಾಕ್ಷಾ
ದ್ದೇವಂ ಧರಣೀತಳಕ್ಕೆ ಮತ್ತುಱಿದವರಂ
ದೇವರನವೇಡ ಧರೆಯೊಳ್
ದೇವರೆ ನಟ್ಟಿರ್ದ ಕಲ್ಲುಮೊಟ್ಟಿದ ಮಣ್ಣುಂ ೩೧

ಗದ್ಯ॥ ಈ ಮಹಾತ್ಮನ ತಪದ ಸಾಮರ್ಥ್ಯದಿಂದೀ ಮಾವೊಂದಱೊಳ್ ಫಲಮಾದುದಲ್ಲ ದಂತು ನಾಡೊಳಗಣ ಮಾವುಗಳೇಕೆ ಪಣ್ಣಾಗವೆಂದು ಯತಿವೃಷಭನಂ ಪರಮಾವಧಿಲೋಚನನಂ

ಹಣ್ಣಿನ ಭಾರದಿಂದ ಶೋಭಿಸುತ್ತಿದ್ದ ಮಾವಿನ ಮರವನ್ನೂ ಆ ಮರದ ಬುಡದಲ್ಲಿ ಕುಳಿತಿದ್ದ ಸುಮತಿಭಟ್ಟಾರಕರೆಂಬ ಮಹರ್ಷಿಗಳವರನ್ನೂ ಕಂಡು ಮನಸ್ಸಿನಲ್ಲಿ ಹೀಗೆ ಯೋಚಿಸಿಕೊಂಡನು ೨೮. ಈ ವನದ ಮಾವಿನ ಮರಗಳಲ್ಲೆಲ್ಲ ಹಣ್ಣುಗಳಿಲ್ಲ. ಈ ಮಾವು ಒಂದರಲ್ಲಿಯೇ ಹಣ್ಣುಗಳು ಇವೆ. ಯೋಚಿಸಿ ನೋಡಿದರೆ ಲೋಕದಲ್ಲಿ ಇದಂ ಬಹಳ ಸೋಜಿಗವಾಗಿದೆ. ಈ ಮುನಿಯ ಹೆಚ್ಚಾದ ತಪೋ ಮಹಿಮೆಯಿಂದ ಈ ಒಂದೇ ಮರದಲ್ಲಿ ಹಣ್ಣುಗಳಾಗಿವೆ. ಈ ದಿವ್ಯಮುನಿಯ ತಪಸ್ಸಿನ ಹಿರಿಮೆಯನ್ನು ಹೊಗಳಲು ಸಾಮಾನ್ಯ ಮಾನವರಿಗೆ ಸಾಧ್ಯವಾದೀತೆ ? ೨೯-೩೦. ಈ ಮುನಿ ಶ್ರೇಷ್ಠನೇ ಸಾಕ್ಷಾತ್ ದೇವರು. ಇನ್ನು ಬೇರೆಯವರನ್ನು ದೇವರೆಂದು ಹೇಳಬೇಡ. ಲೋಕದಲ್ಲಿ ನೆಟ್ಟಿದ್ದ ಕಲ್ಲೂ, ರಾಶಿ-ಹಾಕಿದ ಮಣ್ಣೂ ದೇವರುಗಳೆ ? ೩೧. ಈ ಮಹಾತ್ಮನ ತಪಸ್ಸಿನ ಶಕ್ತಿಯಿಂದ ಈ ಒಂದು ಮಾವಿನ ಮರದಲ್ಲಿ ಮಾತ್ರ ಫಲ ಬಿಟ್ಟಿದೆ. ಅಲ್ಲದಿದ್ದರೆ ದೇಶದೊಳಗಿನ ಮಾವಿನ ಮರಗಳಲ್ಲಿ ಏಕೆ ಹಣ್ಣು ಬಿಟ್ಟಿಲ್ಲ ? " ಎಂದು ಯೋಚಿಸುತ್ತ ಪರಮಾವಧಿ

ಪೊಗಟುತ್ತುಂ ಮನದೊಳಾದರದಿಂ ಪೊಡೆವಡುತುಮೆಯ್ದೆವಂದು ಛಾತ್ರರುಂ ತಾನುಂ ಮುಂದೆ ನಿಲ್ವುದುಂ ಅವರ್ ತ್ರಿಲೋಕಪ್ರಜ್ಞಪ್ತಿಯೆಂಬಾಗಮಂ ಪಱಿವಡಿಗೆಯ್ಯುತ್ತುಮಿಲ್ಲಿ ನರಲೋಕದೊಳಾದ ವೃತ್ತಾಂತಮೆಲ್ಲಮಂ ನೋಡಿ ಸ್ವರ್ಗಲೋಕದ ವ್ಯಾವರ್ಣನೆಯಂ ಮಾಡುವಲ್ಲಿ ಪನ್ನೆರಡನೆಯ ಸಹಸ್ರಾರ ಕಲ್ಪಮಂ ನೋಡುತ್ತಮಿರ್ಪುದುಂ ೩೨

ಪರಿಣತನಪ್ಪುದಱಿಂ ವ್ಯಾ
ಕರಣದೊಳವಯವದಿನವರ ಶಬ್ದಾರ್ಥಮನ
ಚ್ಚರಿವಟ್ಟು ಭಾವಿಸುತ್ತುಂ
ಧರಾಮರಂ ಸೋಮದತ್ತನಿರ್ದನ್ನೆವರಂ ೩೩

ಗದ್ಯ॥ ಸೂರ್ಯಾಭಮೆಂಬ ವಿಮಾನಮಂ ವ್ಯಾವರ್ಣಿಸುವುದುಂ ತಾನಾ ವಿಮಾನದೊಳ್ ಮುನ್ನಿನ ಭವದೊಳ್ ಸೂರ್ಯಾವರನೆಂಬ ಮಹರ್ಧಿಕ ದೇವನಾಗಿ ಪುಟ್ಟಿ ಬಂದನಪ್ಪುದಱಿಂ ತದ್ವಿಮಾನದೊಳಾದ ವೃತ್ತಾಂತಮಂ ಕೇಳ್ದು ೩೪

ಜಾತಿಸ್ಮರನಾಗಿ ಮಹಾ
ಖ್ಯಾತಿಯ ವಿಪ್ರಾಂಬರಾರ್ಕನಾಕ್ಷಣದೊಳ್ ಧಾ
ತ್ರೀತಳಕೆ ನೆರೆದ ಶಿಷ್ಯ
ವ್ರಾತಂ ಬೆಱಗಾಗೆ ಮೂರ್ಛೆಯಿಂದಂ ಬಿದ್ದಂ ೩೫

ಲೋಚನನಾದ (ದಿವ್ಯಜ್ಞಾನವುಳ್ಳ) ಯತಿಶ್ರೇಷ್ಠನನ್ನು ಹೊಗಳುತ್ತ ಮನಸ್ಸಿನಲ್ಲಿ ಆದರದಿಂದ ನಮಸ್ಕಾರ ಮಾಡಿ ಹತ್ತಿರ ಸೇರಿ ಶಿಷ್ಯರೂ ತಾನೂ ಎದುರಿಗೆ ನಿಲ್ಲುತ್ತಲೇ ಅವರು ತ್ರಿಲೋಕಜ್ಞಪ್ತಿಯೆಂಬ ಆಗಮವನ್ನು ಪುನರಾವರ್ತನೆ ಮಾಡುತ್ತ ಇಲ್ಲಿ ನರಲೋಕದೊಳಗೆ ಆದ ವೃತ್ತಾಂತವೆಲ್ಲವನ್ನು ನೋಡಿ ಸ್ವರ್ಗಲೋಕದ ವಿವರಣೆಯನ್ನು ನೀಡುವಲ್ಲಿ ಹನ್ನೆರಡನೆಯ ಸಹಸ್ರಾರ ಕಲ್ಪವನ್ನು ನೋಡುತ್ತಿದ್ದರು, ೩೨. ಆಗ, ಪಂಡಿತನಾದ್ದರಿಂದ ಸೋಮದತ್ತನು ಅವರ ಮಾತುಗಳ ಅರ್ಥವನ್ನು ಆಶ್ಚರ್ಯ ಪಟ್ಟು ಭಾವಿಸುತ್ತ ನಿಂತನು. ೩೩. ಭಟ್ಟಾರಕರು ಸೂರ್ಯಭವೆಂಬ ವಿಮಾನವನ್ನು ವರ್ಣಿಸುತ್ತಲೇ ಹಿಂದಿನ ಜನ್ಮದಲ್ಲಿ ತಾನು ಆ ವಿಮಾನದಲ್ಲಿ ಸೂರ್ಯಾವರನೆಂಬ ಹೆಸರಿನಿಂದ ಮಹರ್ಧಿಕದೇವನಾಗಿ ಹುಟ್ಟಿಬಂದವನಾದುದರಿಂದ ಆ ವಿಮಾನದಲ್ಲಿ ನಡೆದ ವೃತ್ತಾಂತವನ್ನು ಕೇಳಿ ಸೋಮದತ್ತನು ಹಿಂದಿನ ಜನ್ಮದ ಸ್ಮರಣೆಯನ್ನು ಪಡೆದನು ೩೪. ಜಾತಿಸ್ಮರನಾಗಿ ಮಹಾ ಖ್ಯಾತಿವಂತನಾದ ವಿಪ್ರಲೋಕದ ಆಕಾಶಕ್ಕೆ ಸೂರ್ಯನಂಥವನಾದ ಸೋಮದತ್ತನು ಆ ಕ್ಷಣದಲ್ಲಿಯೇ ತನ್ನ ಶಿಷ್ಯರೆಲ್ಲರೂ ಬೆರಗಾಗಲು ಮೂರ್ಛೆ ಬಿದ್ದು ಬಿಟ್ಟನು ೩೫ ಹಾಗೆ ಮೂರ್ಛೆ ಹೋಗಿ ಬಿದ್ದುದಕ್ಕೆ ಅವನ ಶಿಷ್ಯರೆಲ್ಲರೂ ಭಯ

ಗದ್ಯ॥ ಅಂತು ಮೂರ್ಛೆವೋಗಿ ಬಿರ್ದುದಕ್ಕಿ ಛಾತ್ರರೆಲ್ಲಂ ಬೆರ್ಚಿ ತಮ್ಮೊಳ್ ೩೬

ಮನೆಯಿಂದಂ ಪಿಡುಕಂ ಮಹಾಸುಖಿ ಕರಂ ಪ್ರಾಳಂ ಮಹಾಭೋಗಿ ದೇ
ವನಿಭಂ ಶ್ರೀನಿಳಯಂ ಸಮಸ್ತನುತ ಶಾಸ್ತ್ರಾಂಭೋಧಿ ತಾಂ ತನ್ನ ಕಾ
ಮಿನಿಗತ್ಯುತ್ಸವಮಾಗೆ ಮಾವಿನ ಫಲವ್ರಾತಂಗಳಂ ತರ್ಪೆನೆಂ
ದನಿತಂ ಮಾಣ್ದು ಧರಿತ್ರಿಯಂ ತಿರಿದು ತಾಂ ಬೇಸತ್ತು ನಿಶ್ಶಕ್ತಿಯಿಂ ೩೭

ಗದ್ಯ॥ ಬಿರ್ದನೆಂದು ದುಃಖಂಬಟ್ಟುಟುತೆ ತಮ್ಮ ಮೇಲುದಂ ತಿಳಿಗೊಳದೊಳ್ ಕೋಡು ವಾಲನೀರೊಳರ್ದಿ ತಂದಾಮೊಗದೊಳೊತ್ತಿ ಕಾಲನೊತ್ತುತ್ತುಮಿರ್ಪಿನಂ ಸೋಮದತ್ತಂ ಮೂರ್ಛೆಯಿಂದೆಚ್ಚತ್ತು ೩೮

ಸುರಲೋಕಭೋಗಮಂ ಭೂ
ಸುರವಂದ್ಯಂ ನೆನೆದು ಮರ್ತ್ಯಲೋಕದ ಸುಖಮಂ
ಪರಿಹರಿಸಲೆಂದು ಬಗೆದಂ
ಪರಮಾರ್ಥಂ ಕಾಲಲಬ್ಧಿಯದು ಕೇವಲಮೇ ೩೯

ಜಿನಧರ್ಮಮೆಂಬುದಂ ಕನ
ಸಿನೊಳಂ ಕಂಡರಿಯನಘಸಮೇತಂ ತಾಂ ತೊ
ಟ್ಟನೆ ಭವಮನರಿದು ಸಂಸೃತಿ
ವನಮಂ ತರಿದೊಟ್ಟಿ ಸುಡುವಬಗೆಯಂ ತಂದಂ ೪೦

ಪಟ್ಟು ತಮ್ಮ ತಮ್ಮಲ್ಲಿಯೇ ಹೀಗೆ ಮಾತನಾಡಿಕೊಂಡರು : ೩೬. "ಈತನು ಮಹಾ ಸುಖಿ, ಎಂದೂ ಮನೆಯಿಂದ ಹೊರಗೆ ಅಲ್ಲಾಡನು. ಈತನು ಮಹಾಭೋಗಿ ದೇವ ಸದೃಶನಾದವನು. ಇವನು ಲಕ್ಷ್ಮೀನಿಳಯನೆಂಬಷ್ಟು ಶ್ರೀಮಂತನು. ಸಮಸ್ತ ಶಾಸ್ತ್ರ ಗಳನ್ನೂ ಕಲಿತವನು. ಈತನು ತನ್ನ ಹೆಂಡತಿಗೆ ಬಹಳ ಆಸೆಯಾಗಲು ಮಾವಿನ ಹಣ್ಣು ಗಳನ್ನು ತರುವೆನೆಂದು ಎಲ್ಲವನ್ನೂ ಬಿಟ್ಟು ಭೂಮಿಯಲ್ಲೆಲ್ಲ ಅಲೆದು ಬೇಸತ್ತು ಈಗ ನಿಶ್ಶಕ್ತಿಯಿಂದ ಹೀಗೆ ಮೂರ್ಛೆಬಿದ್ದ," ೩೭. ಹೀಗೆ ಯೋಚಿಸಿ ದುಃಖಪಟ್ಟು ಅಳುತ್ತ ತಮ್ಮ ಉತ್ತರೀಯವನ್ನು ಸಮೀಪದ ತಿಳಿ ನೀರಿನ ಕೊಳದಲ್ಲಿ (ತಣ್ಣೀರಿನಲ್ಲಿ) ಆದ್ದಿ ತಂದು ಮುಖದಲ್ಲಿ ಹಿಂಡಿ ಕಾಲನ್ನೊತ್ತುತ್ತ ಇದ್ದರ. ಸ್ವಲ್ಪ ಹೊತ್ತಿನ ಮೇಲೆ ಆ ಸೋಮದತ್ತನು ಮೂರ್ಛೆಯಿಂದ ಎಚ್ಚತ್ತನು. ೩೮. ಈ ಬ್ರಾಹ್ಮಣ ಶ್ರೇಷ್ಠನು ದೇವ ಲೋಕದ ಭೋಗವನ್ನು ಸ್ಮರಿಸಿಕೊಂಡು ಭೂಲೋಕದ ಸುಖವನ್ನು ಬಿಟ್ಟುಬಿಡಬೇ ಕೆಂದು ಯೋಚಿಸಿದನು. ಕಾಲಲಬ್ಧಿಯೆಂಬುದು ಸಾಮಾನ್ಯವಲ್ಲ. ಅದು ಪರಮಾರ್ಥ ೩೯. ಜಿನಧರ್ಮವೆಂಬುದನ್ನು, ಕನಸಿನಲ್ಲಿಯೂ ಕಂಡು ತಿಳಿಯದ ಆತನು ಪಾಪದಿಂದ ಕೂಡಿ ದವನು ಇದ್ದಕ್ಕಿದ್ದ ಹಾಗೆ ಪೂರ್ವಜನ್ಮವೃತ್ತಾಂತವನ್ನು ತಿಳಿದು ಸಂಸಾರವೆಂಬ ಕಾಡನ್ನು ಕತ್ತರಿಸಿ ಹಾಕಿ ಸುಡುವ ನಿರ್ಧಾರಕ್ಕೆ ಬಂದನು ೪೦. ಸತ್ತವರನ್ನು ಕಂಡವರು ಯಾರೊ ?

ಸತ್ತವರನಾರೊ ಕಂಡರ್
ಚಿತ್ತಂ ಪರಿದಂತೆ ಮಾೞ್ಪುದೆಂಬರ್ ಕುಱಿಗಳ್
ಸತ್ತವರೆ ಪುಟ್ಟದಿರ್ದೊಡೆ
ಮತ್ತಾನಿರದೀಗಳೆತ್ತಣಿಂದಂ ಬಂದೆಂ ೪೧

ಗದ್ಯ॥ ಎಂದು ಬಗೆದು ತನ್ನ ಮುನ್ನಿನ ಭವಮನಱಿದು ಜೀವಮಿಲ್ಲೆಂದು ನುಡಿದ ಕುಮತಮಂ ಬಿಟ್ಟು ಜೀವನುಂಟೆಂಬ ಜಿನಾಗಮಾಭಿಪ್ರಾಯಮಂ ಮನದೊಳ್ ನಂಬಿ ಸುಮತಿಭಟ್ಟಾರಕರ ಜ್ಞಾನಮಂ ನೋಡಲೆಂದು ತನ್ನ ಭವಮಂ ಬೆಸಗೊಳಲ್ವೇಡಿ ಸಮೀಪಕ್ಕೆ ಬಂದು ಕುಳ್ಳಿರ್ಪುದುಮಾವರೀತನಾಸನ್ನಭವ್ಯನೆಂದಱಿದು ಬೇಗಮಾತನಿಂ ಮುನ್ನಂ ಮನದಭಿಪ್ರಾಯಮನಿಂತೆಂದರ್ ೪೨

ಮುನ್ನಿನ ಭವಮಂ ನೀಂ ವಿ
ಪ್ರೋನ್ನತ ಜಾತಿಸ್ಮರತ್ವದಿಂದಱಿದೀಗಳ್
ನಿನ್ನ ಕುಬುದ್ಧಿಯಿನಿವರು ಮ
ನಾಂನೆಱೆಬೆಸಗೊಳ್ವೆನೆಂದು ಮೆಲ್ಲನೆ ಬಂದೈ ೪೩

ಗದ್ಯ॥ ನಿನ್ನ ಬೆಸಗೊಳ್ವನಿತಂ ಬೆಸಗೊಳ್ಳೆಂಬುದಂ ಸೋಮದತ್ತನವರಱಿತಕ್ಕೆ ಬೆಱಗಾಗಿ ಬೇಱನಱಿವರ್ಗೆಲೆಯುಂ ತೋಱಿದರೆಂಬಂತೆ ಜಾತಿಸ್ಮರತ್ವಮನಱಿವೀ ಮಹಾಪುರುಷಂಗೆ

ಕೆಲವರು ಕುರಿಗಳಂಥವರು ಹಿಂದೆ ಮುಂದೆ ಯೋಚನೆ ಮಾಡದೆ ಮನಸ್ಸು ಓಡಿದಂತೆ ಕೆಲಸ ಮಾಡುವುದೆಂದು ಹೇಳುವರು. ಆದರೆ ಸತ್ತವರೇ ಹುಟ್ಟದಿದ್ದರೆ ಈಗ ನಾನು ಎಲ್ಲಿಂದ ಬಂದೆ ? ೪೧. ಹೀಗೆ ಭಾವಿಸಿ ತನ್ನ ಮುಂಚಿನ ಜನ್ಮವನ್ನು ತಿಳಿದುಕೊಂಡು ಜೀವವೆಂಬುದು ಇಲ್ಲವೆಂದವರ ಕುಮತವನ್ನು ಕೈಬಿಟ್ಟು ಜೀವನಿರುವನೆಂಬ ಜಿನಾಗಮದ ಅಭಿಪ್ರಾಯವನ್ನು ಮನಸ್ಸಿನಲ್ಲಿ ನಂಬಿ ಸುಮತಿಭಟ್ಟಾರಕರ ಜ್ಞಾನವನ್ನು ನೋಡಬೇಕೆಂದು ತನ್ನ ಹಿಂದಿನ ಜನ್ಮವೃತ್ತಾಂತವನ್ನು ಕೇಳಲು ಬಯಸಿ ಹತ್ತಿರಕ್ಕೆ ಹೋಗಿ ಕುಳಿತುಕೊಂಡಿರಲು ಅವರು ಈತನು ಆಸನ್ನಭವ್ಯನೆಂದು ತಿಳಿದು ಅವನಿಗಿಂತ ಮುಂಚೆಯೇ ಬೇಗನೆ ಮನಸ್ಸಿನ ಅಭಿಪ್ರಾಯವನ್ನು ಹೀಗೆ ಹೇಳಿದರು: ೪೨. “ವಿಪ್ರಶ್ರೇಷ್ಠನೆ, ಜಾತಿಸ್ಮರತ್ವದಿಂದ ನಿನ್ನ ಹಿಂದಿನ ಜನ್ಮವೃತ್ತಾಂತವನ್ನು ತಿಳಿದುಕೊಂಡು ಈಗ ನಿನ್ನ ದುರ್ಬುದ್ಧಿಯಿಂದ ‘ಇವರನ್ನು ನಾನು ಕೇಳಿ ಪರೀಕ್ಷಿಸುವೆ'ನೆಂದು ಮೆಲ್ಲನೆ ಬಂದೆಯಾ ?' ‘೪೩. ನೀನು ಕೇಳುವುದಷ್ಟನ್ನೂ ಕೇಳು' ಎನ್ನುತ್ತಲೂ ಸೋಮದತ್ತನು ಅವರ ಜ್ಞಾನಕ್ಕೆ ಆಶ್ಚರ್ಯಪಟ್ಟು ಬೇರನ್ನೇ ಬಲ್ಲವರಿಗೆ ಎಲೆಯನ್ನು ತೋರಿಸಿದರು, ಎನ್ನುವಹಾಗೆ ಜಾತಿಸ್ಮರತ್ವವನ್ನು ತಿಳಿಯುವ ಈ ಮಹಾ ಪುರುಷನಿಗೆ ಈ ಲೋಕದಲ್ಲಿ

ಲೋಕದೊಳಾದ ವಸ್ತುಗಳನಱಿವುದಾವುದು ಚೋದ್ಯವೆಂದು ನಂಬಿ ತನ್ಮುನಿಯ ಚರಣಯುಗಳಕ್ಕೆ ಸಾಷ್ಟಾಂಗವೆಱಗಿ ಪೊಡೆವಟ್ಟು ಕೈಗಳಂ ಮುಗಿದು ೪೪

ಮುನಿಯಂ ಬೆಸಗೊಂಡಂ ಮೆ
ಲ್ಲನೆ ನಿಮ್ಮಡಿ ಬೆಸಸಿವೆನ್ನ ಭರ್ತಾರಿಯು ಮಾ
ವಿನಪಣ್ಣನೇಕೆ ಬಯಸಿದ
ಳನಿತಾನುಂ ವಸ್ತುನಿಕರವಿರ್ದುಂ ತಿನಿಸಂ ೪೫

ಗದ್ಯ॥ ಎಂದು ಬೆಸಗೊಳ್ಪುದುಂ ಸುಮತಿಭಟ್ಟಾರಕರಾಕೆಯ ಗರ್ಭದ ಕೂಸು ಜಿನಸಮಯಪ್ರಾಕಾರನುಂ ವಾತ್ಸಲ್ಯರತ್ನಾಕರನುಂ ಕರ್ಮಾಚಲವಜ್ರನುಂ ಮುನಿಜನ ಹೃದಯಾನಂದನುಂ ದಿಗಂಬರ ಸರೋಜರಾಜಹಂಸನುಂ ಸುಕವಿನಿಕರಪಿಕಮಾಕಂದನುಂ ಸಹಜಕವಿಜನ ಮನೋಹರೋದ್ಯಾನವನ ಕಲಕಂಠನುಂ ಆಸನ್ನ ಭವ್ಯನುಂ ಸುಜನ ಮನೋರಂಜನನುಂ ಸಮ್ಯಕ್ತ್ವ ಚೂಡಾಮಣಿಯುಂ ವಿದ್ಯಾಧರಾನತಪಾದಪಲ್ಲವನುಮಪ್ಪುದಱಿಂದವನ ಬಯಕೆ ನಿನ್ನ ಪೆಂಡತಿಯುಪ್ಪ ಯಜ್ಞದತ್ತೆಗೆ ಬಯಕೆಯಾಗೆ ಜಿನೇಂದ್ರಾಭಿಷೇಕಮುಂ ಮಾಡಲುಂ ಜಿನಮಹಾಮಹಿಮೆಗಳಂ ನೋಡಲುಂ ಚರಿತಪುರಾಣಂಗಳಂ ಪೆಱರ್ಗೆ ಪೇಳಲುಂ ಜಿನಾಗಮಮನಾಗಳುಂ ಕೇಳಲುಂ ಶ್ರಾವಕ

ರುವ ವಸ್ತುಗಳನ್ನು ತಿಳಿದುಕೊಳ್ಳುವುದು ಯಾವ ದೊಡ್ಡ ವಿಚಾರವೆಂದು ನಂಬಿ ಆ ಮುನಿಯ ಪಾದಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಕೈಗಳನ್ನು ಜೋಡಿಸಿದನು. ೪೪. "ನನ್ನ ಹೆಂಡತಿಯು ಈ ಕಾಲದಲ್ಲಿ ಮಾವಿನ ಹಣ್ಣನ್ನು ಏಕೆ ಬಯಸಿದಳು ? ಎಷ್ಟಾದರೂ ತಿನಿಸಿನ ಪದಾರ್ಥಗಳಿದ್ದರೂ ಆಕೆ ಮಾವನ್ನೇ ಕೋರಿದಳು, ದಯೆಯಿಟ್ಟು ತಾವು ಇದರ ನಿಮಿತ್ತವನ್ನು ಅಪ್ಪಣೆ ಕೊಡಿಸಬೇಕು" ಎಂದು ಸೋಮದತ್ತನು ಆ ಮುನಿಯನ್ನು ಕೇಳಿಕೊಂಡನು. ೪೫. ಆಗ ಸುಮತಿ ಭಟ್ಟಾರಕರು ಆಕೆಯ ಗರ್ಭದಲ್ಲಿರುವ ಕೂಸು ಸಾಮಾನ್ಯನಲ್ಲ. ಅವನು ಜಿನ ಧರ್ಮರಕ್ಷಕ, ವಾತ್ಸಲ್ಯ ರತ್ನಾಕರ, ಕರ್ಮವೆಂಬ ಬೆಟ್ಟಕ್ಕೆ ವಜ್ರಾಯುಧದಂಥವನು, ಮುನಿಜನ ಹೃದಯಗಳಿಗೆ ಆನಂದವನ್ನುಂಟು ಮಾಡುವವನು ; ದಿಗಂಬರ ಜೈನಧರ್ಮವೆಂಬ ಕಮಲದಲ್ಲಿ ವಿರಾಜಿಸುವ ರಾಜಹಂಸನು, ಅವನು ಸುಕವಿ ಸಮೂಹವೆಂಬ ಕೋಗಿಲೆಗಳಿಗೆ ಮಾವಿನಮರದಂಥವನು, ಸಹಜ ಕವಿಜನರ ಮನೋಹರೋದ್ಯಾನವನದ ಕೋಗಿಲೆ, ಅವನು ಆಸನ್ನಭವ್ಯ. ಸುಜನ ಮನೋರಂಜನನಾದ ಸಮ್ಯಕ್ತ್ವ ಚೂಡಾಮಣಿ, ಅವನ ಪಾದಗಳಿಗೆ ವಿದ್ಯಾಧರರು ನಮಸ್ಕಾರ ಮಾಡುತ್ತಾರೆ. ಆದ್ದರಿಂದ ಅವನ ಬಯಕೆ ನಿನ್ನ ಹೆಂಡತಿಯಾದ ಯಜ್ಞದತ್ತೆಯ ಬಯಕೆಯಾಯಿತು, ಜಿನೇಂದ್ರಾಭಿಷೇಕವನ್ನು ಮಾಡುವುದಕ್ಕೂ ಜಿನ ಮಹಾಮಹಿಮೆಗಳನ್ನು ನೋಡುವುದಕ್ಕೂ ಚರಿತ ಪುರಾಣಗಳನ್ನು ಬೇರೆಯವರಿಗೆ ಹೇಳುವುದಕ್ಕೂ ಜಿನಾಗಮವನ್ನು ಯಾವಾಗಲೂ ಕೇಳುವುದಕ್ಕೂ ಶ್ರಾವಕರ ಸಂಗಡ ಆಡುವುದಕ್ಕೂ

ಕೊಡನಾಡಲುಂ ಶ್ರಾವಕರ್ಗುಡಲುಂ ತೊಡಲುಂ ಕುಡಲುಂ ಚಾತುರ್ವರ್ಣ್ಯಕ್ಕಂ ವಿನಯದಿಂ ಬೆಸಕೆಯ್ಯಲುಂ ಚತುರ್ವಿಧಮಪ್ಪ ಮಹಾದಾನಮಂ ಮಾಡಲುಂ ಮುನಿವೃಂದಾರಕರ ಸಮೀಪ ದೊಳಿರಲುಂ ಮನಮಾಗೆ ನಿಮಗಾ ಬಯಕೆಯಂ ಪೇಟಲಣ್ಮದೆ ನಿಮ್ಮನಿಪ್ಪಕ್ಕೆ ಮಾವಿನಪಣ್ಣಂ ಬಯಸಿದನೆಂದು ಪೇಟ್ಟಳೆಂದು ಪೆಟ್ಟುದುಂ ಸೋಮದತ್ತಂ ಬೆಱಗಾಗಿ ೪೬

ವರಮುನಿ ಪೇಟ್ಟನಿತುಂ ತಾಂ
ತರುಣಿಯ ಮೇಲಣವು ನಿಶ್ಚಯಂ ನಂಬಿದನೆಂ
ದರವಿಂದೋದ್ಭವ ವಂಶಾಂ
ಬುರುಹಾರ್ಕಂ ಮುನಿವರಂಗೆ ಪೊಡೆಮಟ್ಟಾಗಳ್ ೪೭

ಸುಡು ಸಂಸಾರಮನೊಲೆಯೊಳ
ಗಿಡು ಸಂಸೃತಿಸುಖಮನೀಮಹಾಪುರುಷನ ಮೆ
ಲ್ಲಡಿಯಂ ನೋಡುತ್ತಂ ಮೃದು
ನುಡಿಯಂ ಕೇಳುತ್ತಮಿರ್ಪುದೊಂದರಸಲ್ತೇ ೪೮

ಗದ್ಯ॥ ಎಂದು ಮಾವಿನಪಣ್ಗಳಂ ಛಾತ್ರರಕೈಯೊಳ್ ಅಹಿಚ್ಛತ್ರದ ಪುರಕಟ್ಟಿ ತಾಂ ಪೋಗ ಲೊಲ್ಲದಿರ್ದು ೪೯

ಶ್ರಾವಕರಿಗೆ ತೊಡಿಗೆ ಉಡಿಗೆಗಳನ್ನು ದಾನ ಕೊಡುವುದಕ್ಕೂ ಚತುರ್ವರ್ಣದವರಿಗೂ ವಿನಯದಿಂದ ಸೇವೆ ಮಾಡುವುದಕ್ಕೂ ನಾಲ್ಕು ವಿಧಗಳಿಂದ ಮಹಾ ದಾನ ಮಾಡುವು ದಕ್ಕೂ ಮುನಿಶ್ರೇಷ್ಠರ ಸಮೀಪದಲ್ಲಿ ಇರುವುದಕ್ಕೂ ಮನಸಾಗಿದೆ. ನಿಮಗೆ ಆ ಬಯಕೆ ಯನ್ನು ಹೇಳಲು ಧೈರ್ಯವಿಲ್ಲದೆ ನಿಮ್ಮ ಕಾಟಕ್ಕೆ ಮಾವಿನ ಹಣ್ಣನ್ನು ಬಯಸಿದೆನೆಂದು ಹೇಳಿದ್ದಾಳೆ" ಎಂದು ಹೇಳಲಾಗಿ ಸೋಮದತ್ತನು ಕೇಳಿ ಬೆರಗಾದನು. ೪೬. ಮುನಿ ಶ್ರೇಷ್ಠ ತನ್ನ ಹೆಂಡತಿಯ ವಿಷಯವಾಗಿ ಹೇಳಿದುವೆಲ್ಲವೂ ನಿಶ್ಚಯವೆಂದು ಆ ಬ್ರಹ್ಮ ವಂಶೋದ್ಭವಾಂಬುರುಹಾರ್ಕನು (ಬ್ರಾಹ್ಮಣರೆಂಬ ಕಮಲಗಳಿಗೆ ಸೂರ್ಯ)ನಂಬಿ ಮುನಿ ವರನಿಗೆ ನಮಸ್ಕಾರ ಮಾಡಿದನು. ೪೮. 'ಸಂಸಾರವನ್ನು ಸುಡು. ಸಂಸಾರ ಸುಖವನ್ನು ಒಲೆಗೆ ಹಾಕು. ಈ ಮಹಾ ಪುರುಷನ ಮೃದುಪಾದಗಳನ್ನು ನೋಡುತ್ತ ಈತನ ಮೃದು ವಾಕ್ಯಗಳನ್ನು ಕೇಳುತ್ತ ಇರುವುದೇ ಒಂದು ರಾಜಪದವಿಯಲ್ಲವೆ ?' ೪೮. ಮಾವಿನ ಹಣ್ಣುಗಳನ್ನು ಶಿಷ್ಯರ ಕೈಲಿ ಅಹಿಚ್ಛತ್ರಪುರಕ್ಕೆ ಕೊಟ್ಟು ಕಳುಹಿಸಿ ತಾನು ಹೋಗಲಿಷ್ಟ ವಿಲ್ಲದೆ ಇದ್ದನು ೪೯. ಜಿನವಾಕ್ಯವನ್ನು ಬಿಟ್ಟು ಉಳಿದ ವೃಥಾ ಮಾತುಗಳು ನನ

ಜನವಾಕ್ಯಂ ಪೊಱಗಾಗೆ ಮತ್ತಿನ ವೃಥಾಲಾಪೋಕ್ತಿಗಳ್ಗಿನದೇ
ವೆನೆನುರ್ವೀತಳದೊಳ್ ಸಮಸ್ತ ವಿಷಯ ವ್ಯಾಪಾರಮಂ ಬಲ್ಲೆನೊ
ಯ್ಯನೆ ಜೈನಾಗಮಮಂ ಸಮಸ್ತದುರಿತ ಪ್ರಧ್ವಂಸಿಯಂ ಕೇಳ್ವೆನೀ
ಮುನಿಪಾಂಘ್ರಿದ್ವಯ ಪದ್ಮದೊಳ್ ನೆಱೆಯೆ ಪೊರ್ದಿರ್ದಿಲ್ಲಿ ಸಾನರ್ತಿಯಿಂ ೫೦

ಗದ್ಯ॥ ಎಂದು ಉತ್ಸಾಹಮನನಾಗಿ, ಬೀದಿಯ ರತ್ನದಂತೆ, ಪೊಸಂತಿ ನಿಧಿಯಂತೆ ಮನೆಗೆ ಬಂದ ನಿಕ್ಷೇಪದಂತೆ, ಕುಡದೆ ಬಂದ ಭಂಡಾರದಂತೆ, ಮಾಡದೆ ಬಂದ ಮನೆಯಂತೆ, ಬೇಡದೆ ಬಂದ ಸಾಲದಂತೆ, ಪಡೆಯದೆ ಬಂದ ದೇಶದಂತೆ, ವರಿಸದೆ ಬಂದ ನಲ್ಲಳಂತೆ, ಕಾಡದೆ ಬಂದ ರಾಜ್ಯದಂತೆ ಬಿತ್ತದೆ ಬಂದ ಧಾನ್ಯದಂತೆ, ಚಿಂತಿಸದೆ ಬಂದ ಕಸವರದಂತೆ, ಪ್ರಾರ್ಥಿಸದೆ ಬಂದ ಮದುವೆಯಂತೆ, ಸಾಧಿಸದೆ ಪಡೆದ ವಿದ್ಯೆಯಂತೆ, ಕಾದದೆ ಗೆಲ್ದಗೆಲ್ಲದಂತೆ, ಕೇಳದೆ ಬಂದ ಶಾಸ್ತ್ರದಂತೆ, ನುಡಿಯದೆ ತಿರ್ದಿದ ಕಾರ್ಯದಂತೆ, ಮೞೆಯಿಲ್ಲದೆ ತೀವಿದ ಕೆಱೆಯಂತೆ ನೀರೆತ್ತದೆ ಫಲಮಾದ ತೋಂಟದಂತೆ, ಮದ್ದಿಲ್ಲದೆ ಪೋದ ಕುತ್ತದಂತೆ ತನಗೆ ತಾನೆ ಬಂದ ಸಿರಿಯಂತೆ, ಪುಣ್ಯದಿಂದ ದೊರೆಕೊಂಡ ಜೈನಧರ್ಮಮನೊಲ್ಲದೆ ಬಿಟ್ಟೊಡೆ, ಮುಗಿಲನೀರಂ ನಂಬಿ ದೋಣೆಯ ನೀರಂ ತುಳುಂಕುವ ಕೋಡಗಮುಮಂ, ಪೆಱರ ಬೆಳಸಂ ನಂಬಿ ಕೆಲಸಂಗೆಯ್ಯದೊಕ್ಕಲಿಗನುಮಂ ನಂಟರ

ಗೇಕೆ ? ಭೂಮಿಯ ಮೇಲೆ ಸಮಸ್ತ ವಿಷಯ ವ್ಯಾಪಾರವನ್ನೂ ಬಲ್ಲೆನು. ಪೆಲ್ಲಿಗೆ ಜೈನಾಗಮವನ್ನೂ, ಸಮಸ್ತದುರಿತಗಳನ್ನು ಧ್ವಂಸಮಾಡುವಂತಹುದನ್ನು, ಕೇಳುತ್ತೇನೆ. ಇಲ್ಲಿ ನಾನು ಈ ಮುನಿಪಾಲಕನ ಪಾದಕಮಲಗಳಲ್ಲಿ ಸೇರಿಕೊಂಡಿರುತ್ತೇನೆ ೫೦. ಹೀಗೆ ಮನಸ್ಸಿನಲ್ಲಿ ಉತ್ಸಾಹಪಟ್ಟು ಬೀದಿಯಲ್ಲಿ ಬಿದ್ದಿರುವ ರತ್ನದಂತೆ, ಹೊಸಲಲ್ಲಿರುವ ನಿಧಿಯಂತೆ, ಮನೆಗೆ ಬಂದ ಬಚ್ಚಿಟ್ಟ ಧನದಹಾಗೆ, ಕೊಡದೆ ಬಂದ ಭಂಡಾರದಂತೆ, ಕಟ್ಟದೆಯೇ ಬಂದ ಮನೆಯಂತೆ, ಕೇಳದೆ ಸಿಕ್ಕಿದ ಸಾಲದಂತೆ, ಪಡೆಯದೆ (ಪ್ರಯತ್ನವಿಲ್ಲದೆ) ಬಂದ ದೇಶದಂತೆ, ವರಿಸದೆ ಬಂದ ಪ್ರಿಯಳಂತೆ, ಕಾಡಿಸದೆ ಬಂದ ರಾಜ್ಯದಂತೆ ಬಿತ್ತದೆಯೇ ಬಂದ ಧಾನ್ಯದಂತೆ, ಚಿಂತಿಸದೆ ಬಂದ ಚಿನ್ನದಂತೆ, ಕೇಳದೆ ಬಂದ ಮದುವೆಯಂತೆ, ಸಾಧನೆ ಮಾಡದೆ ಲಭಿಸಿದ ವಿದ್ಯೆಯಂತೆ, ಯುದ್ಧಮಾಡದೆ ಗೆದ್ದ ವಿಜಯದಂತೆ, ಕೇಳದೆ ಬಂದ ಶಾಸ್ತ್ರದಂತೆ, ಹೇಳದೆ ತಿದ್ದಿಕೊಂಡ ಕೆಲಸದಂತೆ, ಮಳೆಯಿಲ್ಲದ ತುಂಬಿದ ಕೆರೆಯಂತೆ, ನೀರು ಎತ್ತದೆ ಹಣ್ಣುಬಿಟ್ಟ ತೋಟದಂತೆ, ಔಷಧವಿಲ್ಲದೆಯೇ ವಾಸಿಯಾದ ರೋಗದಂತೆ, ತನ್ನಷ್ಟಕ್ಕೆ ತಾನೇ ಬಂದ ಐಶ್ವರ್ಯದಂತೆ, ಪುಣ್ಯಫಲವಾಗಿ ಲಭಿಸಿದ ಜೈನಧರ್ಮವನ್ನು ಒಲ್ಲದೆ ಬಿಟ್ಟರೆ, ಮೋಡದ ನೀರನ್ನು ನಂಬಿಕೊಂಡು ದೋಣೆಯ ನೀರನ್ನು ತುಳುಕಿಸಿ ಹೊರಡಿಸಿದ ಕೋತಿಯನ್ನೂ ಬೇರೆಯವರ ಬೆಳೆಯನ್ನು ನಂಬಿ ಕೆಲಸಮಾಡದ ಒಕ್ಕಲಿಗನನ್ನೂ ಬಂಧುಗಳ ಮಕ್ಕಳನ್ನು ನಂಬಿ ತನ್ನ ಮಕ್ಕಳನ್ನು ಕಳಿಸಿ

ಮಕ್ಕಳಂ ನಂಬಿ ತನ್ನ ಮಕ್ಕಳಂ ಕಳೆವ ನಿರ್ಬುದ್ಧಿಯುಮಂ, ಜಾರೆಯ ಮಾತಂ ನಂಬಿ ತನ್ನ ಪೆಂಡತಿಯಂ ಬಿಡುವ ಬೇಂಟಗಾಱನುಮಂ ಕಳ್ಳನ ನುಡಿಯಂ ನಂಬಿ ತಳಾಱನಂ ಕೊಲ್ವ ಗ್ರಾಮಣಿಯುಮಂ, ಮದುವೆಯ ಕೂೞಂ ನಂಬಿ ಮನೆಯ ಧಾನ್ಯಮಂ ಸೂಱೆಗೊಡುವ ಬೆಳ್ಪನುಮಂ, ಸಾಲದ ಪೊನ್ನಂನಂಬಿ ಪೂಳ್ದ ಪೊನ್ನನೀಡಾಡುವ ಮರುಳನುಮಂ, ಕೈಯುದಂ ಬಿಟ್ಟು ಕಾಲದಕ್ಕಿಱಗುವ ಲೋಭಿಯುಮಂ ಧಾತುವಾದಮಂ ನಂಬಿ ಕೈಯೊಡವೆಯುಂ ಬೀಯಂ ಮಾಳ್ಪ ಹೀನಿಯುಮಂ ಗುಡಿಯಂ ನಂಬಿ ಮನೆಯಂ ಸುಡುವ ನಿರ್ಬುದ್ಧಿಯುಮಂ ಹಿಂಡಿಯಂ ನಂಬೆಣ್ಣೆಯನುಗುವ ತೆಲ್ಲಿಗನುಮಂಬೀಯಕಾಱನಂಬಿಟ್ಟು ಬೇಂಟಗಾಱನಂ ಕರೆವ ಸೂಳೆಯುಮಂ ಮಣ್ಣಕೋಂಟೆಯಂ ನಂಬಿ ಕಲ್ಲಕೋಂಟೆಯನೊಡೆವಮನ್ನೆಯನುಮಂ, ಬಿನುಗಂ ನಂಬಿ ತೞವೊಕ್ಕಲಂ ಕಳೆವ ಪ್ರಭುವುಮಂ, ಮಾತಾಳಿಯಂ ನಂಬಿ ವೀರನಂ ಬಿಡುವ ನಾಯಕನುಮಂ ಸೊರೆಯ ಬಟ್ಟಲಂ ನಂಬಿ ಕಂಚಿನ ಬಟ್ಟಲನೊಡೆವ ಗೊರವನುಮಂ, ಪಾೞುನಾಡಂ ನಂಬಿ ತೀವಿದ ನಾಡಂ ಕಿಡಿಸುವ ಭೂಪನುಮಂ ಕಳ್ಳಿಯಂ ನಂಬಿ ಕೌಂಗಿನ ತೋಂಟಮಂ ಕಡಿವ ತೋಂಟಿಗನುಮಂ, ಪುಲ್ಬಂಟನಂ ನಂಬಿ ಬಲ್ಬಂಟನಂ ಬಿಡುವ ಪಗೆಗಾಱನುಮಂ, ಕಿಚ್ಚಂಬಿಟ್ಟು ನೀರಂ ಪುಗುವ ವಾತಾಧಿಕನುಮಂ ತಣ್ಪಂಬಿಟ್ಟು ಬಿಸಿಲಂ ಕಾಯ್ವ ಪಿತ್ತಾಧಿಕನುಮಂ ಪೋಲ್ವೆನೆಂದು ಪರಿಚ್ಛೇದಿಸಿ, ಜಿನೇಂದ್ರಧರ್ಮಮಂ ಸುಮತಿ ಭಟ್ಟಾರಕರೊಳ್ ಲೇಸಾಗಿ ಕೇಳ್ದು ತನ್ನ ಮುನ್ನಿನ ಸಂಕಲ್ಪಜಾಲಂಗಳಂ ನೆಱ ತೊಱೆದು

ಬಿಡುವ ಬುದ್ಧಿಹೀನನನ್ನೂ ಜಾತಿಯ ಮಾತನ್ನು ನಂಬಿ ತನ್ನ ಹೆಂಡತಿಯನ್ನು ಬಿಡುವ ಪ್ರೇಮಿಕನನ್ನೂ ಕಳ್ಳನ ಮಾತನ್ನು ನಂಬಿ ತಳವಾರನನ್ನು ಕೊಲ್ಲುವ ಗ್ರಾಮ ಮುಖಂಡನನ್ನೂ ಮದುವೆಯ ಅನ್ನವನ್ನು ನಂಬಿ ಮನೆಯ ಧಾನ್ಯವನ್ನು ಸೂರೆಯಾಗಿ ಕೊಡುವ ಬೆಪ್ಪನನ್ನೂ, ಸಾಲದ ಹಣವನ್ನು ನಂಬಿ ಹೂತಿದ್ದ ಹಣವನ್ನು ಬಿಸಾಡುವ ದಡ್ಡನನ್ನೂ ಕೈಯಲ್ಲಿರುವುದನ್ನು ಬಿಟ್ಟು ಕಾಲದಕ್ಕೆ ಸೋಲುವ ಲೋಭಿಯನ್ನೂ, ರಸವಾದವನ್ನು ನಂಬಿ ಕೈಯಲ್ಲಿನ ಒಡವೆಯನ್ನು ವೆಚ್ಚಮಾಡುವ ಹೀನಬುದ್ಧಿಯನ್ನೂ ಹಿಂಡಿಯಂ ನಂಬಿ ಕೊಂಡು ಎಣ್ಣೆಯನ್ನು ಚೆಲ್ಲುವ ಗಾಣಿಗನನ್ನೂ ವೆಚ್ಚ ಮಾಡುವವನನ್ನು ಬಿಟ್ಟು ಮೋಜುಗಾರನನ್ನು ಕರೆಯುವ ಸೂಳೆಯನ್ನೂ, ಮಣ್ಣಿನ ಕೋಟೆಯನ್ನು ನಂಬಿ ಕಲ್ಲಿನ ಕೋಟೆಯನ್ನು ಒಡೆಯುವ ಪಾಳೆಯಗಾರನನ್ನೂ ಅಲ್ಪನನ್ನು ನಂಬಿ ಕೊಡುವ ಒಕ್ಕಲಿಗನನ್ನು ಕಳೆದುಕೊಳ್ಳುವ ಪ್ರಭುವನ್ನೂ ಮಾತುಗಾರನನ್ನು ನಂಬಿ ವೀರನನ್ನು ಬಿಡುವ ನಾಯಕನನ್ನೂ ಸೋರೆಯ ಬಟ್ಟಲನ್ನು ನಂಬಿ ಕಂಚಿನ ಬಟ್ಟಲನ್ನು ಒಡೆದುಹಾಕುವ ಗೊರವನನ್ನೂ ಹಾಳುದೇಶವನ್ನು ನಂಬಿ ತುಂಬಿದ ದೇಶವನ್ನು ಬಿಡುವ ರಾಜನನ್ನೂ, ಕಳ್ಳಿಯನ್ನು ನಂಬಿ ಅಡಿಕೆಯ ತೋಟವನ್ನು ಕಡಿಯುವ ತೋಟಗಾರನನ್ನೂ ಕೀಳುಬಂಟನನ್ನು ನಂಬಿ ಮಹಾಶೂರನನ್ನು ಬಿಡುವ ದ್ವೇಷಸಾಧಕನನ್ನೂ ಬೆಂಕಿಯನ್ನು ಬಿಟ್ಟು ನೀರನ್ನು ಪ್ರವೇಶಿಸುವ ವಾತಪೀಡಿತನನ್ನೂ ತಂಪನ್ನು ಬಿಟ್ಟು ಬಿಸಿಲನ್ನು ಕಾಯಿಸುವ ಪಿತ್ತಾಧಿಕನನ್ನೂ ಹೋಲುವೆನೆಂದು ನಿರ್ಧರಿಸಿ ಜಿನೇಂದ್ರಧರ್ಮವನ್ನು ಸುಮತಿಭಟ್ಟಾರಕರಲ್ಲಿ ಚೆನ್ನಾಗಿ ಕೇಳಿ ತನ್ನ ಹಿಂದಿನ ಸಂಕಲ್ಪಜಾಲಗಳನ್ನು ಪೂರ್ತಿಯಾಗಿ

ಸಂಸಾರಕ್ಕೆ ಪೇಸಿ ವೈರಾಗ್ಯಂ ಪುಟ್ಟೆ ಪಂಚೇಂದ್ರಿಯಂಗಳೊಳಾದಲ್ಪಸುಖಮಂ ಬಿಟ್ಟತೀಂದ್ರಿಯ ಸುಖಮಂ ಕೈಕೊಳಲೆಂದು ೫೧

ಕರಮಂಗಿದು ಬಾಗಿ ತಲೆಯಂ
ದುರಿತಮನದಟಲೆಯಲೆಂದು ಜಿನದೀಕ್ಷೆಯನಾ
ದರದಿಂ ಮುನೀಂದ್ರ ವಂದಿತ
ಚರಣಾಂಭೋಜಾತಯುಗಳನಂ ಬೇಡುವುದುಂ ೫೨

ಗದ್ಯ॥ ಸುಮತಿಭಟ್ಟಾರಕರಾತನ ವಿನಯಕ್ಕಂ ಮನದ ವೈರಾಗ್ಯಕ್ಕಂ ಮೆಚ್ಚಿ ದೀಕ್ಷೆಯಂ ಕಾರುಣ್ಯಂಗೆಯ್ವುದುಂ ಜಾತರೂಪಧರನಾಗಿ ಚತುರನುಯೋಗಮುಮಂ ನೋಡಿ ದಶಧರ್ಮ ಕುಶಲನುಂ ಅಷ್ಟಾವಿಂಶತಿ ಮೂಲಗುಣಸಮನ್ವಿತನುಂ ದರ್ಶನಸಂಶುದ್ಧನುಮಾಗಿ ಕೆಲವು ದಿವಸಂ ಗುರುಪಾದ ಸೇವೆಯೊಳಿರ್ದು ಗುರುಗಳಾಜ್ಞೆಯಿಂ ದೇಶವಿಹಾರಿಯಾಗಿ ವಿಹಾರಿಸುತ್ತುಂ ಬಂದು ಮಗಧ ವಿಷಯದ ಸೌಪಾಳಮೆಂಬ ಪುರದ ಪಡುವಣ ದೆಸೆಯ ನಾಭಿಗಿರಿಯೆಂಬ ಪರ್ವತ ದೊಳಾತಪಯೋಗದಿಂದಿರ್ದನನ್ನೆಗಮಿತ್ತಲ್ ೫೩

ಸೋಮದತ್ತನ ಕೊಟ್ಟಮಾವಿನ ಪಣ್ಗಳಂ ಪಿರಿದಟ್ಕಱಿಂ
ಸೋಮದತ್ತನ ಛಾತ್ರಸಂಕುಲಮಂದು ತಂದತಿರಾಗದಿಂ
ಸೋಮದತ್ತನ ಭಾರ್ಯೆಗಿತ್ತು ಸಮಸ್ತ ಬಂಧುಜನಾಳಿಗಂ
ಸೋಮದತ್ತನೊಳಾದ ವಾರ್ತೆಯನೆಲ್ಲಮಂ ನೆಱಪೇಳ್ವುದುಂ ೫೪

ತ್ಯಜಿಸಿ ಸಂಸಾರಕ್ಕೆ ಹೇಸಿಕೊಂಡು ವೈರಾಗ್ಯಹುಟ್ಟಲು ಪಂಚೇಂದ್ರಿಯಗಳಿಂದಾಗುವ ಅಲ್ಪ ಸುಖವನ್ನು ಬಿಟ್ಟು ಅತೀಂದ್ರಿಯ ಸುಖವನ್ನು ಪಡೆಯುವುದಕ್ಕೆಂದು ಸೋಮದತ್ತನು ಕೈಮುಗಿದು ತಲೆಯನ್ನು ಬಗ್ಗಿಸಿ ಪಾಪವನ್ನು ಓಡಿಸುವುದಕ್ಕೆಂದು ಆದರದಿಂದ ಆ ಮುನೀಂದ್ರಪೂಜ್ಯನಲ್ಲಿ ಜಿನದೀಕ್ಷೆಯನ್ನು ಬೇಡಿಕೊಂಡನು. ೫೧-೫೨. ಸುಮತಿ ಭಟ್ಟಾರಕರು ಆತನ ವಿನಯಕ್ಕೂ ಮನಸ್ಸಿನ ವೈರಾಗ್ಯಕ್ಕೂ ಮೆಚ್ಚಿಕೊಂಡು ಅವನು ಕೇಳಿದಂತೆ ಜಿನದೀಕ್ಷೆಯನ್ನು ಅನುಗ್ರಹಿಸಿದರು. ಅವನು ದಿಗಂಬರನಾಗಿ ನಾಲ್ಕು ಅನುಯೋಗಗಳನ್ನು ನೋಡಿ ದಶಧರ್ಮಗಳಲ್ಲಿ ಕುಶಲನಾಗಿ ಇಪ್ಪತ್ತೆಂಟು ಮೂಲಗುಣ ಗಳಿಂದ ಕೂಡಿದವನೂ ದರ್ಶನದಲ್ಲಿ ಸಂಶುದ್ಧನೂ ಆಗಿ ಕೆಲವು ದಿವಸ ಗುರುವಿನ ಪಾದ ಸೇವೆ ಮಾಡಿಕೊಂಡಿದ್ದು ಗುರುಗಳ ಅಪ್ಪಣೆಯಂತೆ ದೇಶವಿಹಾರಿಯಾಗಿ ಸಂಚರಿಸುತ್ತ ಬಂದು ಮಗಧ ಪ್ರಾಂತ್ಯದ ಸೌಪಾಳವೆಂಬ ಪಟ್ಟಣದ ಪಶ್ಚಿಮ ದಿಕ್ಕಿನ ನಾಭಿಗಿರಿಯೆಂಬ ಪರ್ವತದಲ್ಲಿ ಆತಪಯೋಗದಿಂದ ಇದ್ದನು. ೫೩. ಆ ವೇಳೆಗೆ ಇತ್ತ, ಸೋಮದತ್ತನು ಕೊಟ್ಟ ಮಾವಿನ ಹಣ್ಣುಗಳನ್ನು ಹೆಚ್ಚಾದ ಪ್ರೀತಿಯಿಂದ ಅವನ ಶಿಷ್ಯಸಮೂಹವು ತಂದು ಸೋಮದತ್ತನ ಹೆಂಡತಿಗೆ ಕೊಟ್ಟು ಎಲ್ಲ ಬಂಧುಜನ ಸಮೂಹಕ್ಕೂ ಸೋಮ ದತ್ತನ ಸುದ್ದಿಯನ್ನೆಲ್ಲ ವಿಸ್ತಾರವಾಗಿ ಹೇಳಿದರು. ೫೪. ಆ ಸುದ್ದಿ ಕೇಳಿ ಅವರು

ಗದ್ಯ॥ ಕೇಳ್ದು ಬೆಱಗಾಗಿ ಋಷಿಯರಂ ಪೊರ್ದಿದನಪ್ಪೊಡೆ ನಮಗಲ್ಲನೆಂದು ಮನದೊಳ್ ಮಲಮಱುಗಿ ೫೫

ಎರಡಿಲ್ಲದೆ ಜಿನರೂಪಂ
ಧರಿಯಿಸದಿರಲಱಿಯನೋವೊ ಋಷಿಯರ ಕೆಲದೊಳ್
ವರಧರ್ಮಶ್ರವಣಮನೊ
ಪ್ಪಿರೆ ಕೇಳ್ವಂ ಬಳಿಕೆ ವಿಪ್ರವಂಶಲಲಾಮಂ ೫೬

ಗದ್ಯ॥ ಎಂಬುದುಂ ಸಕಲಬಂಧುಜನಕ್ಕಂ ಯಜ್ಞದತ್ತೆಯಿಂತೆಂದಳ್ ೫೭

ಧರೆಯೊಳಗಗ್ಗಳಮಪ್ಪ ವಿಪ್ರಕುಲಕ್ಕೆ ಭಾವಿಸಿ ನೋಳ್ಪೊಡಂ
ಪಿರಿಯನಗ್ಗದ ವೇದಶಾಸ್ತ್ರ ಪುರಾಣ ತರ್ಕ ಪರಾಯಣಂ
ಸರಸಿಜೋದ್ಭವನನ್ನನಲ್ಲನೆ ಮಿಕ್ಕ ಚಾರುಚರಿತ್ರದೊಳ್
ಮರಳೆ ಮತ್ಪತಿ ಜೈನದೀಕ್ಷೆಯನೊಲ್ಲನಲ್ಲನವೋಘದಿಂ ೫೮

ಗದ್ಯ॥ ಎಂಬುದುಮಲ್ಲಿ ಕೆಲರ್ವಿವೇಕಿಗಳಿಂತೆಂದರ್ ೫೯

ವಾರಿಜೋದ್ಭವನನ್ನರಪ್ಪ ಧರಾಮರರ್ಪಲರುಂ ಸದಾ
ಚಾರರಪ್ಪರೆ ನೋಡ ಕೊರ್ತು ಜಿನೇಂದ್ರ ದೀಕ್ಷೆಯನಾಂತರಿ
ನ್ನಾರೊ ಬರ್ಪರನಂತ ಸೌಖ್ಯಮನೀವ ದಿವ್ಯತಪಸ್ಕೆ ವಿ
ಸ್ತಾರದಿಂ ದೊರೆಕೊಂಡೊಡೊಲ್ಲದೆ ಬುದ್ಧಿವಂತರಿಳಾಗ್ರದೊಳ್ ೬೦

ಬೆರಗಾದರು. 'ಋಷಿಯರನ್ನು ಸೇರಿಕೊಂಡನಾದರೆ ಇನ್ನು ಅವನು ನಮ್ಮವನಲ್ಲ' ಎಂದು ಮನಸ್ಸಿನಲ್ಲಿ ಬಹಳವಾಗಿ ಕುದಿದು ಜಿನರೂಪವನ್ನು ಧರಿಸಿರುವುದರಲ್ಲಿ ಸಂಶಯವಿಲ್ಲ. ಋಷಿಯರ ಪಕ್ಕದಲ್ಲಿ ಧರ್ಮಶ್ರವಣವು ಮನಸ್ಸಿಗೆ ಹಿತವಾದರೆ ಆ ವಿಪ್ರಶ್ರೇಷ್ಠನು ಕೇಳಿದ್ದಾನೆ. ೫೫-೫೬. ಈ ಮಾತುಗಳನ್ನೆಲ್ಲ ಕೇಳಿ ಬಳಿಕ ಯಜ್ಞದತ್ತೆ ಎಲ್ಲ ಬಂಧುಜನಗಳಿಗೂ ಹೀಗೆ ಹೇಳಿದಳು : ೫೭. ಲೋಕದಲ್ಲಿ ಶ್ರೇಷ್ಠವಾದ ಬ್ರಾಹ್ಮಣ ಕುಲಕ್ಕೇ ಶ್ರೇಷ್ಠನು, ಹಿರಿಯನು. ವೇದ, ಶಾಸ್ತ್ರ, ತರ್ಕಗಳಲ್ಲಿ ಆಸಕ್ತನು. ಮಿಕ್ಕ ಚರಿತ್ರೆಯಲ್ಲಿ ಆ ಬ್ರಹ್ಮನಂಥವನು. ನನ್ನ ಪತಿಯು ಖಂಡಿತವಾಗಿಯೂ ಜೈನದೀಕ್ಷೆಗೆ ಒಲಿಯನು. ೫೮. ಆಕೆ ಹೀಗೆನ್ನಲು ಕೆಲವರು ವಿವೇಕಿಗಳು ಹೀಗೆ ಉತ್ತರ ಹೇಳಿದರು : ೫೯. ಕಮಲಸಂಭವನಂಥವರಾದ ಬ್ರಾಹ್ಮಣರನೇಕರು ಸದಾಚಾರ ಪರರಾದವರೇ ಪ್ರೀತಿಯಿಂದ ಜಿನೇಂದ್ರ ದೀಕ್ಷೆಯನ್ನು ಧರಿಸಿದರು. ಅನಂತ ಸೌಖ್ಯವನ್ನು ಕೊಡುವ ಜಿನೇಂದ್ರ ದೀಕ್ಷೆ ಲಭಿಸಿದ ಮೇಲೆ, ದಿವ್ಯ ತಪಸ್ಸು ಒದಗಿದ ಮೇಲೆ, ಹಿಂತಿರುಗಿ ಬರುವ ಬುದ್ಧಿವಂತರು ಯಾರು ? ೬೦. ಹೀಗೆಂದು ಯಜ್ಞದತ್ತೆಯ ಬಂಧುಗಳೂ ಮಿತ್ರರೂ ತಮತಮಗೆ

ಗದ್ಯ॥ ಎಂದು ಯಜ್ಞದತ್ತೆಯು ಬಂಧುಗಳುಂ ಮಿತ್ರರುಂ ತಂತಮ್ಮ ಕಂಡ ಮಾತುಗಳಂ ನುಡಿದು ಸೋಮದತ್ತನಪ್ಪೊಡೆ ಮಹಾವಿವೇಕಿ ಬ್ರಾಹ್ಮಣಂ ಜಿನದೀಕ್ಷೆಯನೆಂತುಂ ಕೈಕೊಳ್ಳಲಱಿಯಂ ಪುತ್ತುಂ ಬತ್ತಲೆಯುಂ ಬಱಿದಲ್ಲೆಂಬೀ ನಾಣ್ನುಡಿಯುಂಟಪ್ಪುದಱಿಂದಾ ಋಷಿಯಂ ನಂಬಿಸಿ ಪುಸಿ ಭಕ್ತಿಯಂ ಮಾಡಿಯೇನಾನುಮೊಂದು ಸದ್ವಿದ್ಯೆಯಂ ಸಾಧಿಸಲ್ವೇಡಿ ನಿಂದಂ ತಡೆಯದೆ ಬರ್ಕುಂ ಬಾರದಿರನೆಂದು ಮನದೊಳ್ ಸಂತೋಷಂಬಟ್ಟು ಸುಖದಿಂದಿರ್ಪುದುಂ ೬೧

ಪೆಱೆಮ್ಮುಖಿ ಸಮಸ್ತ ದುಃಖಂ
ಪಱೆವೊಡೆ ನೆಱೆ ಯಜ್ಞದತ್ತೆ ನವಮಾಸಂಗಳ್
ನೆಱೆಯೆ ಸುರರಾಜನಿಭನಂ
ನೆಱೆ ಪೆತ್ತಳ್ ಸಕಲ ಜೀವನುತನಂ ಸುತನಂ ೬೨

ಗದ್ಯ॥ ಅಂತು ಪೆತ್ತು ಪುತ್ರೋತ್ಸಾಹಮಂ ಮಾಡಿ ಕೂಸಿಂಗೆ ಶ್ರೀದತ್ತನೆಂದು ಪೆಸರನಿಟ್ಟು ಸುಖಮಿರ್ಪನ್ನೆಗಂ ಸೋಮದತ್ತಂ ಋಷಿಯಾಗಿ ಮಗಧ ವಿಷಯದ ಸೌಪಾಳಪುರದ ಕೆಲದ ನಾಭಿಗಿರಿಯೆಂಬ ಪರ್ವತದೊಳಿರ್ದನೆಂಬುದಂ ಲೋಗರಿಂ ಕೇಳ್ದು ಮೂಲಶುದ್ಧಿಯಿಂದಱಿದು ಬಸಿರಂ ಪೊಸೆದುಕೊಂಡು ಯಜ್ಞದತ್ತೆಯುಂ ಬಂಧುಗಳುಂ ದುಃಖಿತೆಯರಾಗಿ ಸೋಮದತ್ತನ ತಪವನಾವಾವ ತೆಱದೊಳಾದೊಡಂ ಕಿಡಿಸಿ ಬರ್ಪಮೆಂಬುದ್ಯೋಗಮನೆತ್ತಿಕೊಂಡು ಛಲಮಂ ಪೂಣ್ದು ೬೩

ತಿಳಿದ ಮಾತುಗಳನ್ನು ಹೇಳಿ ಸೋಮದತ್ತನಾದರೆ ಮಹಾ ವಿವೇಕಿಯಾದ ಬ್ರಾಹ್ಮಣ. ಹೇಗೂ ಅವನು ಜಿನದೀಕ್ಷೆಯನ್ನು ಸ್ವೀಕರಿಸುವುದಿಲ್ಲ. ಹುತ್ತವೂ ಬತ್ತಲೆ (ದಿಗಂಬರ ಜೈನ) ಯೂ ಬರಿಯುದಲ್ಲವೆಂಬ ಈ ಗಾದೆಯುಂಟು. ಆದ್ದರಿಂದ ಆ ಋಷಿಯನ್ನು ನಂಬಿಸಿ ಸುಳ್ಳುಭಕ್ತಿಯನ್ನು ನಟಿಸಿ ಏನಾದರೂ ಒಂದು ಒಳ್ಳೆಯ ವಿದ್ಯೆಯನ್ನು ಸಾಧಿಸಬೇಕೆಂದು ನಿಂತಿದ್ದಾನೆ ; ತಡಮಾಡದೆ ಬರುತ್ತಾನೆ. ಬರದೆ ಇರುವುದಿಲ್ಲ, ಎಂದು ಮನಸ್ಸಿನಲ್ಲಿ ಸಂತೋಷಪಟ್ಟು ಸುಖವಾಗಿದ್ದರು. ೬೧. ಚಂದ್ರಮುಖಿಯ ಸಮಸ್ತ ದುಃಖಗಳೂ ಹರಿಯುವ ಕಾಲ ಬಂತು. ಯಜ್ಞದತ್ತೆ ಒಂಬತ್ತು ತಿಂಗಳು ತುಂಬಲು ಇಂದ್ರ ಸದೃಶನಾದ, ಸಕಲ ಜೀವಿಗಳಿಂದಲೂ ಸ್ತೋತ್ರಕ್ಕೆ ಪಾತ್ರನಾಗುವಂಥ ಮಗನನ್ನು ಹೆತ್ತಳು. ೬೨. ಹಾಗೆ ಹೆತ್ತು ಪುತ್ರೋತ್ಸವವನ್ನು ಮಾಡಿ ಮಗುವಿಗೆ ಶ್ರೀದತ್ತನೆಂಬ ಹೆಸರನ್ನಿಟ್ಟು ಸುಖವಾಗಿರುವಾಗ ಸೋಮದತ್ತನು ಜೈನಮುನಿಯಾಗಿ ಮಗಧಪ್ರಾಂತ್ಯದ ಸೌಪಾಳಪುರದ ಪಕ್ಕದ ನಾಭಿಗಿರಿಯೆಂಬ ಪರ್ವತದಲ್ಲಿದ್ದಾನೆಂಬ ಸುದ್ದಿಯನ್ನು ಜನರಿಂದ ಕೇಳಿ ಮೂಲಶುದ್ಧಿಯಿಂದ ತಿಳಿದು ಹೊಟ್ಟೆಯನ್ನು ಹೊಸೆದುಕೊಂಡು ಯಜ್ಞದತ್ತೆಯೂ ಬಂಧುಗಳೂ ದುಃಖಪಟ್ಟು ಹೇಗಾದರೂ ಮಾಡಿ ಸೋಮದತ್ತನ ತಪಸ್ಸನ್ನು ಕೆಡಿಸಿ ಬರೋಣವೆಂಬ ಪ್ರಯತ್ನವನ್ನು ಕೈಕೊಂಡು ಹಟಮಾಡಿಕೊಂಡು ಹೊರಟರು. ೬೩. ಹೊರಟು ಕೋಪದಲ್ಲಿ ಮೈಮರೆತು ಆ ಮುನಿಯ ತಪವನ್ನು ಏನಾದರೂ

ಪೊಱಮಟ್ಟು ಕೋಪದಿಂ ಮು
ಯ್ಯಾಱಿಯದೆ ತನ್ಮುನಿಯ ತಪಮನೇಗೆಯ್ದುಂ ಪೊ
ಚ್ಚಱಿಗಿಡಿಸಿ ತರ್ಪೆಮೆಂಬೊಂ
ದಱಿಕೆಯಿನವರೆಯ್ದೆ ವಂದರಾಗಿರಿವರಮಂ ೬೪

ಗದ್ಯ॥_ಅಂತೆಯ್ದೆವಂದು ನಾಭಿಗಿರಿಪರ್ವತದೊಳಿರ್ದು ಮಂದರಾದ್ರಿಯಂತಚಳಿತನಾಗಿ ನಿಂದಿರ್ದ ಸೋಮದತ್ತ ಮುನಿಯುಂ ಕಂಡು ಸಾರೆವಂದು ನಂಟರೆಲ್ಲಮಿಂತೆಂದರ್ ೬೫

ಪಡೆಯಬಾರದ ದಿವ್ಯಮಪ್ಪ ಧರಾಮರತ್ವಮನಂದು ನೀಂ
ಪಡೆದು ಮತ್ತದನೊಲ್ಲದಿಲ್ಲಿಗೆ ವಂದು ಗಾವಿಲನಾಗಿ ಚೀ
ಕಿಡಿಸಿ ಚಾರು ಚರಿತ್ರಮಂ ತೊಱೆದೆಮ್ಮನಾಱಡಿಗೊಂಡು ಕೈ
ಮಡಗದೇಳಿದರಂತೆ ಘುಮ್ಮನೆ ಪೊರ್ದಿದೈ ಜಿನದೀಕ್ಷೆಯಂ ೬೬

ಸುಬ್ರಾಹ್ಮಣನಾಗಿರ್ದುಂ
ಸುಬ್ರಾಹ್ಮಣರಿಂದೆ ಪೊಗೞಿಪಟ್ಟುಂ ಮತ್ತಂ
ಸುಬ್ರಾಹ್ಮಣತ್ವಮಂ ನೀಂ
ನಿರ್ಬ್ರಹ್ಮಂ ಕಿಡಿಸಿ ಸವಣನಾದೈ ಮರುಳೇ ೬೭

ನಿನ್ನೋದಿನಿಮಿವರೋದುಗ
ಳುನ್ನತಮೆಂದಿವರ್ಗೆ ಸೋಲ್ತು ಪೊರ್ದಿದೆಯೊ ಮೇಣ್
ನಿನ್ನ ಕುಲಕ್ಕಿವರನ್ವಯ
ಮಿನ್ನಧಿಕಂ ದಿವ್ಯಮೆಂದು ಮೇಣ್ಪೊರ್ದಿದೆಯೋ ೬೮

ಮಾಡಿ ಗರ್ವವನ್ನು ಭಂಗಮಾಡಿ ಕರೆತರುವೆವೆಂಬ ಒಂದು ತಿಳಿವಳಿಕೆಯಿಂದ ಅವರೆಲ್ಲ ಆ ಪರ್ವತದ ಹತ್ತಿರಕ್ಕೆ ಬಂದರು. ೬೪. ಹಾಗೆ ಸಮೀಪಿಸಿ ನಾಭಿಗಿರಿ ಪರ್ವತದಲ್ಲಿದ್ದು ಮಂದರಾಚಲದಂತೆ ಅಚಲನಾಗಿ ನಿಂತಿದ್ದ ಸೋಮದತ್ತ ಮುನಿಯನ್ನು ಕಂಡು ಸಮೀಪಕ್ಕೆ ಸೇರಿ ನಂಟರೆಲ್ಲರೂ ಹೀಗೆ ನುಡಿದರು : ೬೫. ಪಡೆಯಲು ಕಷ್ಟವಾದ ದಿವ್ಯವಾದ ಬ್ರಾಹ್ಮಣತ್ವವನ್ನು ನೀನು ಪಡೆದೂ ಅದನ್ನು ಒಲ್ಲದೆ ಇಲ್ಲಿಗೆ ಬಂದು ಮೂಢನಾಗಿ ಚೀ ನಿನ್ನ ಸಚ್ಚರಿತ್ರವನ್ನು ಕೆಡಿಸಿಕೊಂಡು ನಮ್ಮನ್ನು ದೂರಿ ಹಿಂತೆಗೆಯದೆ ಅಲ್ಪರ ಹಾಗೆ ಸಡಗರದಿಂದ ಜಿನದೀಕ್ಷೆ ತೆಗೆದುಕೊಂಡೆ. ೬೬. ಸದ್ಬ್ರಾಹ್ಮಣನಾಗಿದ್ದು, ಸದ್ಬ್ರಾಹ್ಮಣರಿಂದ ಹೊಗಳಿಕೆಗೆ ಪಾತ್ರನಾಗಿಯೂ ಸುಬ್ರಾಹ್ಮಣತ್ವವನ್ನು ಬಿಟ್ಟು ನೀನು ಬ್ರಹ್ಮದೂರನಾಗಿ ಸವಣನಾದೆಯಾ ಮರುಳೇ? ೬೭. ನಿನ್ನ ವಿದ್ಯೆಗಿಂತ ಇವರ ಓದು ದೊಡ್ಡದೆ? ಇವರಿಗೆ ಸೋತು ಈ ಧರ್ಮವನ್ನು ಸೇರಿದೆಯೊ, ಅಥವಾ ನಿನ್ನ ಜಾತಿಗಿಂತ ಇವರ ವಂಶವು ಹೆಚ್ಚಿನದು, ಶ್ರೇಷ್ಠ, ಎಂದು ಸೇರಿಕೊಂಡೆಯೋ ? ೬೮. ಸುಮ್ಮನೆ ಸವಣರ

ಕೆಮ್ಮನೆ ಸವಣರ ಗೋರಿಗೆ
ನೀಂ ಮತಿಗೆಟ್ಟಱಿತವಿಲ್ಲದಿವರೊಳಿನಿಸುಂ
ಸಮ್ಮತವಿಲ್ಲದೆ ಮರುಳಂ
ತಮ್ಮ ಪರತ್ರಿಯನೆ ಕಿಡಿಸಿಕೊಂಡೈ ಕಂದಾ ೬೯

ಗದ್ಯ॥ ಮತ್ತಂ ಜಗದೊಳಿಂಗಂ ನಿನ್ನನ್ನರಿಲ್ಲ ; ಸಕಳಶಾಸ್ತ್ರಪಾರಗನೈ ಸಮಸ್ತ ಕಳಾಧರನೈ ನೃಪಪೂಜಿತನೈ ಧರಾಮರಾಗ್ರಗಣ್ಯನೈ ನೀತಿಪರಿಣತನೈ ಶ್ರುತಿಸ್ಮೃತಿಗಳೊಳತಿ ಜಾಣನೈ ಕೆಮ್ಮನ ಪ್ಪೊಡಂ ವಿಚಾರಿಸದವಿಚಾರಿಯಾಗಿ ನೀರುಮಂ ನೇಣುಮಂ ತೊಱೆದು ಕುಲಮಂ ನೀರೊಳ ಗರ್ದಿ ನಂಟರಿಪ್ಪರಿಂದಂ ಚಿಃ ಎನಿಸಿ ಪರತ್ರಿಯುಂ ಕಿಡಿಸಿ ವೇದಾಭಿಪ್ರಾಯಮನುದಾಸೀನಂ ಮಾಡಿ ಜಿನರೂಪಧಾರಿಯಾದೈಯೆಂದು ನಂಟರೆಲ್ಲಂ ನುಡಿದು ಕಾಲಮೇಲೆ ಬಿದ್ದಿಂತೆಂದರ್ ೭೦

ಬಿಡುವುದು ನೀನೀ ತಪಮಂ
ಕಿಡಿಸದೆ ಸದ್ಬ್ರಾಹ್ಮಣತ್ವಮಂ ಪೆಱತೊಂದಂ
ನುಡಿಯದೆ ತಡೆಯದೆ ನೀನೆ
ನ್ನೊಡವರ್ಪುದು ಪುರವರಕ್ಕೆ ವಿಪ್ರಕುಲಾರ್ಕ ೭೦

ಗದ್ಯ॥ ಮುನ್ನಮೇನೆಂದಱಿಯದೆ ಸವಣರ ಗೋರಿಗೊಳಗಾಗಿ ಜಿನನ ರೂಪಂ ಧರಿಯಿ ಸಿದೈ ; ನೀನೆನ್ನ ಬಂಧುಗಳುಂ ಬ್ರಾಹ್ಮಣರುಂ ಕೈಕೊಳರೆಂದು ಲಜ್ಜಿತನಾಗಿ ಬಡತ್ವದಿಂದಿರವೇ

ಆಕರ್ಷಣೆಗೆ ನೀನು ಬುದ್ಧಿಗೆಟ್ಟು ತಿಳಿವಳಿಕೆಯಿಲ್ಲದೆ ಇವರಲ್ಲಿ ಸ್ವಲ್ಪವೂ ಸಮ್ಮತವಿಲ್ಲದಿದ್ದರೂ ಹುಚ್ಚನಂತೆ, ತಮ್ಮ ! ನಿನ್ನ ಪಾರಲೌಕಿಕ ಸದ್ಗತಿಯನ್ನು ಕೆಡಿಸಿಕೊಂಡೆಯಾ ? ೬೯. ಅಲ್ಲದೆ ಲೋಕದ ವಿದ್ಯೆಯಲ್ಲಿ ನಿನ್ನಂಥವರು ಬೇರೆ ಇಲ್ಲ. ಸಮಸ್ತಶಾಸ್ತ್ರ ಪಾರಂಗತ ನೀನು. ಸಮಸ್ತ ಕಳೆಗಳನ್ನು ಬಲ್ಲವನು, ರಾಜಪೂಜಿತ ! ಭೂಸುರರಲ್ಲಿ ಅಗ್ರಗಣ್ಯ, ನೀತಿಯಲ್ಲಿ ಪಂಡಿತ. ಶ್ರುತಿ ಸ್ಮೃತಿಗಳಲ್ಲಿಯೂ ನೀನು ಬಹಳ ಬುದ್ಧಿವಂತ, ವೃಥಾ ವಿಚಾರಮಾಡದೆ ನೀರು ನೇಣುಗಳನ್ನು (ಅರ್ಘ್ಯ, ಜನಿವಾರ) ತೊರೆದು ನಿನ್ನ ಜಾತಿಯನ್ನು ನೀರಿನಲ್ಲಿ ಅದ್ದಿದೆ. ನಂಟರಿಷ್ಟರಿಂದ ಚಿಃ ಎನ್ನಿಸಿಕೊಂಡೆ, ಪರಗತಿಯನ್ನು ಹಾಳು ಮಾಡಿಕೊಂಡೆ. ವೇದಾಭಿಪ್ರಾಯವನ್ನು ಅಸಡ್ಡೆಮಾಡಿ ಜಿನರೂಪವನ್ನು ಧರಿಸಿದೆ, ಎಂಬುದಾಗಿ ಬಂಧುಗಳೆಲ್ಲರೂ ಹೇಳಿ ಕಾಲಮೇಲೆ ಬಿದ್ದು ಹೀಗೆಂದರು. ೭೦ “ನೀನು ಈ ತಪವನ್ನು ಬಿಡಬೇಕು. ಸದ್ಬ್ರಾಹ್ಮಣತ್ವವನ್ನು ಕೆಡಿಸದೆ ಬೇರೊಂದು ಮಾತನಾಡದೆ ತಡ ಮಾಡದೆ ನೀನು ನಮ್ಮ ಸಂಗಡ ಊರಿಗೆ ಬರಬೇಕು. ವಿಪ್ರಕುಲ ಸೂರ್ಯನೇ! ಮೊದಲು ಏನೊಂದು ತಿಳಿಯದೆ ಈ ಸವಣರ ಗೋರಿಗೆ (ಆಕರ್ಷಣೆಗೆ)ಸಿಕ್ಕಿ ಜಿನರೂಪವನ್ನು ಧರಿಸಿದೆ: ನೀನು ನನ್ನ ಬಂಧುಗಳೂ ಬ್ರಾಹ್ಮಣರೂ ಒಪ್ಪುವುದಿಲ್ಲವೆಂದು ನಾಚಿಕೆಪಟ್ಟು ದಡ್ಡನಾಗ

ದಿಲ್ಲಿಗೆ ತಕ್ಕ ಪ್ರಾಯಶ್ಚಿತ್ತಮಂ ಹೋಮಾದಿಗಳಿಂ ಮಾಡಿಕೊಳಲಪ್ಪುದು, ನೀಂ ಮಹಾ ಶ್ರೀಯುಮಂ ವೃತ್ತಿಯುಮಂ ಪೆಂಡಿರ್ ಮಕ್ಕಳುಮಂ ಬಂಧುಗಳುಮಂ ಕಿಡಿಸದೆ ಬನ್ನಿಮೆನೆ ಸೋಮದತ್ತ ಋಷಿ ತನ್ನಂತರಂಗದೊಳಿಂತೆಂದಂ ೭೨

ಜಿನವಚನಾಮೃತಮಂ ಬೆ
ಳ್ಪನದಿಂ ಮಿಥ್ಯಾತ್ವದೊದವಿನಿಂದಿನ್ನೆವರಂ
ಮನದೊಳ್ ಭಾವಿಸಲೊಲ್ಲದೆ
ಕುನಯಾಭಿಪ್ರಾಯದೊಂದು ರುಚಿಯಿಂ ಕಿಟ್ಟೆಂ ೭೩

ಜಿನವಚನಮುಮಂ ಮತ್ತಿನ
ಕುನಯಂಗಳುಮಂ ಸಮಾನಮೆಂಬುದೆ ಕೇಳ
ರ್ಕನ ಬೆಳಗಿನೊಳ್ ಸಮಾನಮಿ
ದೆನಲಕ್ಕುಮೆ ಪಕ್ಷದಿಂದೆ ಮಿಂಬುಳುಗಳುಮಂ ೭೪

ಗದ್ಯ॥ ತನಗಿಲ್ಲದ ಬಡಸೂಳೆ ಬೊಜಂಗನ ಸಾರೆ ಪೆಂಪಿಂಗಸಗಮಂ ಬಯ್ದುಳಿಂತಂತೆ ಜಿನಾಗಮದುಡುಗೆಗೆ ಮೆಯ್ಯಾಂಜದೆ ಕುಬುದ್ಧಿಗಳುಂ ಸೋಂಬರುಂ ಸಪ್ತವ್ಯಸನಾಪೇಕ್ಷಿತರುಂ ಪರಸ್ತ್ರೀಯರುಂ ಹಿಂಸಾನಂದರುಂ ದೂರ್ತಾಳಾಪರುಂ ಜಿನಧರ್ಮಂ `ಪೊಲ್ಲಮೆಂಬರದು ಪ್ರಮಾಣಮಲ್ಲದು. ೭೫

ಬೇಡ. ಇದಕ್ಕೆ ಸರಿಯಾದ ಪ್ರಾಯಶ್ಚಿತ್ತವನ್ನು ಹೋಮಾದಿಗಳಿಂದ ಮಾಡಿಕೊಳ್ಳಬಹುದು. ನೀನು ಮಹಾ ಐಶ್ವರ್ಯವನ್ನೂ ವೃತ್ತಿಯನ್ನೂ ಹೆಂಡಿರು ಮಕ್ಕಳನ್ನೂ ನೇಟರನ್ನೂ ಕೆಡಿಸದೆ ಬಾ ಎನ್ನಲು ಸೋಮದತ್ತ ಋಷಿಯು ತನ್ನ ಮನಸ್ಸಿನಲ್ಲಿ ಹೀಗೆಂದುಕೊಂಡನು : ೭೨. ಜಿನವಾಕ್ಯವೆಂಬ ಅಮೃತವನ್ನು ಬೆಪ್ಪುತನದಿಂದ ಮಿಥ್ಯಾತ್ವದ ಆದಿಕ್ಯದಿಂದ ಇಂದಿನವರೆಗೂ ಮನಸ್ಸಿನಲ್ಲಿ ಗೌರವಿಸಲು ಇಷ್ಟಪಡದೆ ಕುಧರ್ಮಾಭಿಪ್ರಾಯದ ಒಂದು ಮೋಹದಿಂದ ಕೆಟ್ಟೆ. ೭೩. ಜಿನವಚನವನ್ನೂ ಉಳಿದ ಕುಧರ್ಮಗಳನ್ನೂ ಸಮಾನವೆಂದು ತಿಳಿಯುವುದೆ ? ಕೇಳು, ಸೂರ್ಯನ ಬೆಳಕಿಗೆ ಮಿಂಚುಹುಳುಗಳ ಪ್ರಕಾಶವು ಸಮಾನವೆಂದು ಪಕ್ಷಪಾತದಿಂದ ಹೇಳಲು ಸಾಧ್ಯವೆ ? ೭೪. ತನಗೆ ಗತಿಯಿಲ್ಲದ ಬಡತನದ ಸೂಳೆ ವಿಟನನ್ನು ಸೇರಲು ಹೆಚ್ಚಳಕ್ಕೆ ಅಗಸನನ್ನು ಬಯ್ದಳೆಂಬ ಹಾಗೆ ಜಿನಾಗಮದ ಉಡಿಗೆ (ಬೆತ್ತಲೆಯಾಗಿರುವಿಕೆ)ಗೆ ದೇಹ ತಡೆಯಲಾರದೆ ಕುಬುದ್ಧಿಗಳೂ ಸೋಮಾರಿಗಳೂ ಸಪ್ತ ವ್ಯಸನಗಳಲ್ಲಿ ಸಿಕ್ಕಿಕೊಂಡವರೂ ಪರಸ್ತ್ರೀ ವ್ಯಸನಿಗಳೂ ಹಿಂಸಾನಂದಿಗಳೂ ಧೂರ್ತತನದ ಮಾತುಗಳನ್ನಾಡುವವರೂ ಜಿನಧರ್ಮವು ಕೆಟ್ಟದ್ದೆನ್ನುವರು. ಅದು ಪ್ರಮಾಣವಾಗುವುದಿಲ್ಲ. ೭೫ 'ಕೊಲ್ಲಲಾಗದು, ಅಜ್ಞಾನದಿಂದ ಸುಳ್ಳಾಡ

ಕೊಲಲಾಗೆಂಬ ಜಡತ್ವದಿಂ ಪುಸಿಯಲಾಗಿನ್ನೆಂಬ ಚಾಪಲ್ಯದಿಂ
ಕಳಲಾಗೆಂಬ ಪರಾಂಗನಾ ವ್ಯಸನಮಂ ಮಾಣೆಂಬ ಲೋಭತ್ವದಿಂ
ದಿಳೆಯೊಳ್ ಸಂದ ಪರಿಗ್ರಹಕ್ಕೆಱಗಲಿನ್ನಾಗೆಂಬ ಜೈನೋಕ್ತಿಗಳ್
ಸಲೆ ಲೇಸಲ್ಲದೆ ಪೊಲ್ಲವೇ ಕುಮತಿಗಳ್ ತಾವೆಂತಿದಂ ದೂಱುವರ್ ೭೬

ಗದ್ಯ॥ ಅಗ್ಗಾಯತಿಯಪ್ಪ ಸೂಳೆಗಂ ಕುಡಲಿಲ್ಲದೆ ಬಡಬೋಜಂಗಂ ಪೞಿದು ಸಾಮಾನ್ಯದ ಭೇದವಾದಿಗಳಂ ಪೊಗೞ್ವಂತೆ ಮಹಾ ಪರೀಷಹದೊಳ್ಕೂಡಿ ಸುವ್ರಂತಗಳನೊಡೆಯ ಜೈನಮಾರ್ಗಮುಮಂ ದುಷ್ಕರಪ್ಪರ್ ಕೈಕೊಳಲಾಱದೆ ಸೆಡೆದು ಪೞಿದು ತಮ್ಮಿಚ್ಛೆಗೆ ಬರ್ಪ ಅಧರ್ಮಂಗಳಂ ಮಹಾ ಧರ್ಮಮೆಂದು ಕೈಕೊಂಡು ಪೊಗೞ್ವರಿದು ಚೋದ್ಯಮಲ್ಲೆಂದುಸಿರದಿರ್ಪುದುಂ ಯಜ್ಞದತ್ತೆ ಬಂದು ಕಾಲಮೇಲೆ ಬಿರ್ದಿಂತೆಂದಳ್ ೭೭

ಎನ್ನಂ ಕಿಡಿಸದೆ ಪಿರಿದ
ಪ್ಪುನ್ನತಿಯುಂ ಕಿಡಿಸದಿನ್ನುಮೇನಾದುದು ವಿ
ಪ್ರೋನ್ನತ ಬಿಸುಡೀ ತಪಮಂ
ನಿನ್ನಂ ಪೆಱರಿಂದೆ ನಗಿಸಿಕೊಳ್ಳದೆ ಬೇಗಂ ೭೮

ನೀನಪ್ಪೊಡೆ ವಿಪ್ರಸಮೂ
ಹಾನತನೈ ವಿಪ್ರವಂಶಶೇಖರನೈ ವಿ
ದ್ಯಾನಿಧಿಯೈ ನಿನಗಲ್ಲದ
ಹೀನತೆಯುಂ ಮಾಡಿ ನಗಿಸಿದೈ ಪರರಿಂದಂ ೭೯

ಲಾಗದು, ಚಪಲತೆಯಿಂದ ಕದಿಯಲಾಗದು, ಪರಸ್ತ್ರೀಯ ಚಟವನ್ನು ಬಿಡು, ದುರಾಸೆಯಿಂದ ಲೋಕದಲ್ಲಿ ಹೆಚ್ಚು ಸಂಗ್ರಹಕ್ಕೆ ಆಸೆ ಪಡಬೇಡ, ಎಂದು ಹೇಳುವ ಜೈನವಾಕ್ಯಗಳು ಬಹಳ ಶ್ರೇಷ್ಠವೇ ಹೊರತು ಕೆಟ್ಟವೇ ? ಕುಮತಿಗಳು ಇದನ್ನು ಹೇಗೆ ಆಕ್ಷೇಪಿಸುತ್ತಾರೆ ? ೭೭. ಹೆಚ್ಚು ಹಣ ಕೇಳುವ ಸೂಳೆಗೆ ಕೊಡಲು ಗತಿಯಿಲ್ಲದ ವಿಟನು ಅವಳನ್ನು ದೂಷಿಸಿ ಭೇದ ಕಲ್ಪನೆಗಾಗಿ ಇತರರನ್ನು ಹೊಗಳುವಂತೆ ಮಹಾಕಷ್ಟದಲ್ಲಿ ಸಿಕ್ಕಿ ಸುವ್ರತಗಳನ್ನುಳ್ಳ ಜೈನಮಾರ್ಗವನ್ನು ದುಷ್ಕರಾದವರು ನಡೆಸಲಾರದೆ ಅಂಜಿ ದೂಷಿಸಿ ತಮಗೆ ಇಷ್ಟ ಬಂದ ಅಧರ್ಮಗಳನ್ನು ಮಹಾಧರ್ಮವೆಂದು ಒಪ್ಪಿಕೊಂಡು ಹೊಗಳುವರು. 'ಇದು ಆಶ್ಚರ್ಯವಲ್ಲ.' ಎಂದು ಯೋಚಿಸಿ ಮಾತನಾಡದೆ ಇದ್ದನು. ಆಗ ಯಜ್ಞದತ್ತೆಯು ಬಂದು ಅವನ ಕಾಲಮೇಲೆ ಬಿದ್ದು ಹೀಗೆಂದಳು. ೭೮. "ನನ್ನನ್ನು ಕೆಡಿಸದೆ ದೊಡ್ಡದಾದ ಉನ್ನತಿಯನ್ನು ಕೆಡಿಸಿಕೊಳ್ಳದೆ, ವಿಪ್ರಶ್ರೇಷ್ಠ ! ಈಗ ತಾನೆ ಏನಾಗಿದೆ ? ಈ ತಪಸ್ಸನ್ನು ಬಿಡು. ಇತರರು ನಿನ್ನನ್ನು ಹಾಸ್ಯಮಾಡದಂತೆ ಇದನ್ನು ಬಿಡು. ೭೮. ನೀನಾದರೋ ಅನೇಕ ವಿಪ್ರರ ನಮಸ್ಕಾರಗಳಿಗೆ ಪಾತ್ರನು. ನೀನು ವಿಪ್ರವಂಶಕ್ಕೆ ಶಿಖರಪ್ರಾಯನಾದವನು ; ವಿದ್ಯಾನಿಧಿ ನಿನಗೆ ಅನುಚಿತವಾದ ಹೀನತೆಯನ್ನು ಮಾಡಿಕೊಂಡು ಇತರರ ಹಾಸ್ಯಕ್ಕೆ ಗುರಿಯಾದೆ. ೭೯. ಯಾರೂ ಗತಿಯಿಲ್ಲದ ಭಿಕ್ಷುಕರ

ಗದ್ಯ॥ ಆರುಮಿಲ್ಲದ ದೇಸಿಗರಂತೆ ಕಾಡಂ ಪೊಕ್ಕು ಕೂೞ್ಪಡೆಯದ ತಿರಿಕರಂತೆ ಗಿಡಿಗಿಡಿಜಂತ್ರಮಾಗಿ, ತರುವಲಿಗಳಂತೆ ಸಿರಿಯಂ ಬಿಟ್ಟು ಪಂದಿಯಂತೆ ಕೆಸಱನೊಟ್ಟಿಕೊಂಡು, ಬೆಂದ ಕಗ್ಗೊರಡಿನಂತೆ ಬಿಸಿಲೊಳ್ನಿಂದು, ಕಡಂಬಡೆಯದ ಒಡವನಂತೆ ಪಸಿದು ಪಟ್ಟು, ಬಱಿದಿದೇ ಕೊಡಲಂ ತಪಿಸಿ ಗಾವಿಲನಾದಪ್ಪೆಯೆಂದು ನಾನಾಪ್ರಕಾರದಿಂ ತನುವಂ ಸಿರಿಯುಮಂ ಸಂಪತ್ತುಮಂ ಭೋಗಮುಮಂ ತೋಱಿ ನುಡಿಯಿಸಲಾಱದೆ ಯಜ್ಞದತ್ತೆ ಮೆಲ್ಲನೊಳಸೋರ್ದು ಸಿರದಿರ್ಪುದುಂ ಸೋಮದತ್ತ ಋಷಿ ತನ್ನೊಳಿಂತೆಂದಂ: ಓಲಗಂ ಲೇಸು ಕಾಳಗಮರಿದೆಂಬಂತೆ, ಮದುವೆ ಲೇಸು ಪೊರೆವುದರಿದೆಂಬಂತೆ, ಮಾನ್ಯಂಲೇಸು ಮುಂದಣ ಮಾನ್ಯದೆಱೆ ಅರಿಯದೆಂಬಂತೆ ಪಾದರಂ ಲೇಸು ಸಾವುದರಿದೆಂಬಂತೆ, ಪೂಣ್ಕೆಲೇಸು ಮಾಟವರಿದೆಂಬಂತೆ, ಬೇಟಂಲೇಸು ಕುಡುವುದರಿದೆಂಬಂತೆ, ತೋಟಲೇಸು ದಂಡವರಿದೆಂಬಂತೆ, ಬೀಯಂ ಲೇಸು ಪಡೆವುದರಿದೆಂಬಂತೆ, ಬಲ್ಪು ಲೇಸು ಗೆಲವರಿದೆಂಬಂತೆ, ಬಿಗುಪು ಲೇಸು ಕಳನವೇಗರಿದೆಂಬಂತೆ, ಅಳವುಲೇಸು ಶೂಲಮರಿದೆಂಬಂತೆ, ತೊನೆಪಂ ಲೇಸು ಸಖಿಗೆಯರಿದೆಂಬಂತೆ, ಕೃಷಿಲೇಸು ತೆಱುವುದರಿದೆಂಬಂತೆ, ಸೂಱೆ ಲೇಸು ಪೊಱೆಯರಿದೆಂಬಂತೆ ಪ್ರತಾಪಂ ಲೇಸು ನಿತ್ತರಿಸಲರಿದೆಂಬಂತೆ, ಕೊಲೆ ಲೇಸು ಕಾವುದರಿದೆಂಬಂತೆ, ಸಂಸಾರದ ಸುಖಂ ಲೇಸು ಮೇಗಣ ನರಕ ದುಃಖಂಗಳರಿಯವು. ಅದು ಕಾರಣದಿಂ ೮೦

ಹಾಗೆ ಕಾಡನ್ನು ಪ್ರವೇಶಿಸಿ ಅನ್ನಸಿಕ್ಕದ ತಿರುಕರ ಹಾಗೆ ಬಡಕಲಾಗಿ, ತಬ್ಬಲಿಗಳ ಹಾಗೆ ಐಶ್ವರ್ಯವನ್ನು ಬಿಟ್ಟು. ಹಂದಿಯ ಹಾಗೆ ಮೈಮೇಲೆ ಕೆಸರನ್ನು ಹಾಕಿಕೊಂಡು, ಸುಟ್ಟ ಒರಟು ಕೊರಡಿನಹಾಗೆ ಬಿಸಿಲಿನಲ್ಲಿ ನಿಂತುಕೊಂಡು, ಸಾಲಸಿಕ್ಕದ ಬಡವನ ಹಾಗೆ ಹಸಿದು ಮಲಗಿಕೊಂಡು ವೃಥಾ ಹೀಗೆ "ಶರೀರವನ್ನು ಕಷ್ಟಪಡಿಸಿ ದಡ್ಡನಾಗುವೆ" ಎಂದು ನಾನಾ ರೀತಿಯಿಂದ, ದೇಹಸೌಖ್ಯ, ಐಶ್ವರ್ಯ, ಸಂಪತ್ತು ಭೋಗ ಮೊದಲಾದುವನ್ನು ತೋರಿಸಿ ಮಾತನಾಡಿದರೂ ಸೋಮದತ್ತ ಮಾತನಾಡಲಿಲ್ಲ. ಆಗ ಯಜ್ಞದತ್ತೆ ಹಿಂಜರಿದು ಮೌನ ವಹಿಸಲು ಸೋಮದತ್ತ ಋಷಿ ಹೀಗೆ ಯೋಚಿಸಿಕೊಂಡನು : ಓಲಗ ಒಳ್ಳೆಯದು ಕಾಳಗ ಕಷ್ಟ, ಎಂಬ ಹಾಗೆ, ಮದುವೆ ಚೆನ್ನ, ಸಾಕುವುದು ಕಷ್ಟವೆಂಬ ಹಾಗೆ, ಮಾನ್ಯಚೆನ್ನ; ಆದರೆ ಮುಂದೆ ಆ ಮಾನ್ಯದ ತೆರಿಗೆ ಕಷ್ಟ, ಎಂಬ ಹಾಗೆ, ಹಾದರ ಚೆನ್ನ, ಸಾಯುವುದು ಕಷ್ಟವೆಂಬ ಹಾಗೆ, ಪ್ರತಿಜ್ಞೆ ಚೆನ್ನ ಮಾಡುವುದು ಕಷ್ಟವೆಂಬಂತೆ, ಜಗಳ ಚೆನ್ನ ದಂಡ ಕಷ್ಟವೆಂಬ ಹಾಗೆ, ವೆಚ್ಚ ಚೆನ್ನ ಸಂಪಾದಿಸುವುದು ಕಷ್ಟವೆಂಬ ಹಾಗೆ, ಶಕ್ತಿ ಲೇಸು, ಗೆಲ್ಲುವುದು ಕಷ್ಟವೆಂಬಂತೆ, ಬಿಗುಹು ಚೆನ್ನ, ಯುದ್ಧದ ಪರಿಣಾಮ ಕಷ್ಟವೆಂಬಂತೆ, ಸಾಮರ್ಥ್ಯ ಚೆನ್ನ ಶೂಲ ಕಷ್ಟವೆನ್ನುವಂತೆ, ತೊನೆದಾಡುವುದು ಚೆನ್ನ ಸಖಿಗೆ ಪೋಷಣೆ ಕಷ್ಟವೆಂಬಂತೆ, ಬೇಸಾಯ ಚೆನ್ನ, ತೆರಿಗೆ ಕಷ್ಟವೆನ್ನುವ ಹಾಗೆ ಸೂರೆ ಚೆನ್ನ, ಹೊರುವುದು ಕಷ್ಟವೆನ್ನುವ ಹಾಗೆ, ಪರಾಕ್ರಮ ಹೇಳಿಕೊಳ್ಳುವುದು ಚೆನ್ನ ನಿರ್ವಹಿಸುವುದು ಕಷ್ಟವೆಂಬ ಹಾಗೆ, ಕೊಲ್ಲುವುದು ಸುಲಭ ಕಾಪಾಡುವುದು ಕಷ್ಟವೆನ್ನುವ ಹಾಗೆ, ಸಂಸಾರದ ಸುಖ ಚೆನ್ನ, ಮೇಲಿನ ನರಕದ ದುಃಖಗಳು ಕಷ್ಟವಾದುವು. ೮೦. ಆದಕಾರಣ ಜಿನಪಾದಯುಗಳದ

ಜಿನಪದದ್ವಯ ಸೇವೆಯಿಂ ಭುವನತ್ರಯಾಧಿಪತಿತ್ವಮುಂ
ತನಗೆ ತಾನೆ ಮಹೋತ್ಸವಂ ಬೆರಸೊಪ್ಪದಿಂ ದೊರೆಕೊಳ್ಗು ಮೊ
ಯ್ಯನೆ ಮನೋಮುದದಿಂದಮೆಂದೊಡೆ ದೇವಲೋಕಪತಿತ್ವಮುಂ
ಮನುಜರಾಜ್ಯವಿಭೂತಿಯುಂ ದೊರೆಕೊಳ್ವುದಾವುದು ವಿಸ್ಮಯಂ ೮೧

ತನಗೆ ಹಿತಮಪ್ಪುದಂ ಪೇ
ಳ್ವನ ಮಾತಂ ಚಿತ್ತವಿತ್ತು ನೆಱೆ ಕೇಳ್ವುದು ಕಿಂ
ಮನೆ ನರಕಹೇತುವಂ ನುಡಿ
ವನ ಮಾತಂ ಕೇಳದುಸಿರದಿರ್ಪುದು ಚದುರಂ ೮೨

ಗದ್ಯ॥ ಮುತ್ತು ಸಮುದ್ರದೊಳ್ ನೀರ್ಮುಗಿಲೊಳ್ ಮಣ್ ಭೂಮಿಯೊಳ್ ತೈಲಮೆ ಳ್ಳೊಳ್ ತುಪ್ಪಂ ಪಾಲೊಳ್, ಮಕ್ಕಳ್ವನಿತೆಯರೊಳ್ ಪಾಲ್ಕೆಚ್ಚಲೊಳ್ ತಣಿಪು ಊಟದೊಳ್ ಸೀರೆ ನೂಲೊಳ್ ಪಗಲ್ ಸೂರ್ಯನೊಳ್ ತಣ್ಪು ಗಾಳಿಯೊಳ್ ಬೆಂಕಿ ಕಿಚ್ಚಿನೊಳ್ ಕಾಣ್ಕೆ ಕಣ್ಣೊಳ್ ಸಿರಿ ಪೊನ್ನೊಳ್ ಬಲಂ ಜವ್ವನದೊಳ್ ಪಡಪು ಸೌಭಾಗ್ಯದೊಳ್ ರಾಗಂ ಸಂತೋಷ ದೊಳ್ ಮದುವೆ ಕೊಡಗೂಸಿನೊಳ್ ಪುಟ್ಟುವಂತೆ ಸ್ವರ್ಗಮೋಕ್ಷಂಗಳುಂ ಕುಡುವ ಗುಣಂ ಗಳುಂ ಸದಾಚಾರಮುಂ ಮಹಾವ್ರತಂಗಳುಂ ಜಿನಮತದೊಳ್ ಪುಟ್ಟುಗುಮಲ್ಲದೆ ಪೆಱವು ಕುಮತಂಗಳೊಳ್ ಪುಟ್ಟವು. ಅದಱಿಂದಜ್ಞಾನಿಗಳ ಮಾತನಾಲಿಸಲಾಗದು ೮೩

ಸೇವೆಯಿಂದ ಮೂರು ಲೋಕಗಳ ಅಧಿಪತಿತ್ವವು ತನಗೆ ತಾನೇ ಬಹಳ ಸುಖವಾಗಿ ಲಭಿಸುತ್ತದೆ. ಅದರಿಂದ ಹೆಚ್ಚಿನ ಆನಂದ ಲಭಿಸುವುದೇದು ಹೇಳುವಾಗ ಮಾನವ ರಾಜ್ಯವೈಭವವೂ ಲೋಕಪತಿತ್ವವೂ ಲಭಿಸುವುದು ಯಾವ ಸೋಜಿಗ ? ೮೧. ತನಗೆ ಹಿತವಾಗುವುದನ್ನು ಹೇಳುವವನ ಮಾತನ್ನು ಮನಸ್ಸುಕೊಟ್ಟು ಪೂರ್ತಿಯಾಗಿ ಕೇಳ ತಕ್ಕದ್ದು. ಸುಮ್ಮನೆ ನರಕಕ್ಕೆ ಕಾರಣವಾಗುವಂಥಾದ್ದನ್ನು ಹೇಳುವವನ ಮಾತನ್ನು ಕೇಳದೆ, ಮಾತನಾಡದೆ ಇರುವುದು ಚದುರನಾದವನ ಕರ್ತವ್ಯ. ೮೨. ಮುತ್ತು ಸಮುದ್ರದಲ್ಲಿ, ನೀರು ಮೋಡದಲ್ಲಿ, ಮಣ್ಣು ನೆಲದಲ್ಲಿ ಎಣ್ಣೆ ಎಳ್ಳಿನಲ್ಲಿ, ತುಪ್ಪ ಹಾಲಿನಲ್ಲಿ, ಮಕ್ಕಳು ಹೆಂಡಿರಲ್ಲಿ, ಹಾಲು ಕೆಚ್ಚಲಿನಲ್ಲಿ, ತೃಪ್ತಿ ಊಟದಲ್ಲಿ, ಸೀರೆ ನೂಲಿ ನಲ್ಲಿ, ಹಗಲು ಸೂರ್ಯನಲ್ಲಿ, ತಂಪು ಗಾಳಿಯಲ್ಲಿ, ಬೆಂಕಿ ಜ್ವಾಲೆಯಲ್ಲಿ, ನೋಟ ಕಣ್ಣಿನಲ್ಲಿ, ಐಶ್ವರ್ಯ ಹೊನ್ನಿನಲ್ಲಿ, ಬಲ ಯುವ್ವನದಲ್ಲಿ, ಲಾಭ ಸೌಭಾಗ್ಯದಲ್ಲಿ, ರಾಗ ಸಂತೋಷ ದಲ್ಲಿ, ಮದುವೆ ಕನ್ಯೆಯಿಂದ ಹುಟ್ಟುವ ಹಾಗೆ ಸ್ವರ್ಗ ಮೋಕ್ಷಗಳೂ ಕೊಡುವ ಗುಣ ಗಳೂ ಸದಾಚಾರವೂ ಮಹಾವ್ರತಗಳೂ ಜಿನಮತದೊಳಗೆ ಹುಟ್ಟುತ್ತವೆ. ಅಲ್ಲದೆ ಬೇರೆ ಕುಮತಗಳಲ್ಲಿ ಹುಟ್ಟುವುದಿಲ್ಲ. ಆದರಿಂದ ಅಜ್ಞಾನಿಗಳ ಮಾತನ್ನು ಕೇಳಬಾರದು. ೮೩. ಎಷ್ಟು ಒಳ್ಳೆಯವಾದರೂ ಗಾಜಿನ ಮಣಿಗಳು ಬಂಗಾರದ ಒಡವೆಯನ್ನು ಕೀಳು

ಎನಿತೊಳ್ಳಿತಾದೊಡಂ ಕಾ
ಜನಮಣಿಗಳ್ ಪೊನ್ನತೊಡವನಿಱಿಕೆಯುಂಗ್ಗಮೆ ತಾ
ನೆನಿತೊಳ್ಳಿತಾದೊಡಂ ಮ
ತ್ತಿನ ನುಡಿಗಳ್ ಜೈನನುಡಿಗಳಂ ಪೋಲ್ತಪುವೆ ? ೮೪

ಜಿನವಚನಮನಱಿಯದೆ ಕಿ
ಮ್ಮನೆ ಪೞಿವರ್ದುರ್ಜನರ್ದುರಾಚಾರರ್ ಸ
ಜ್ಜನವಚನವನಱಿವೊಡೆ ಮೇ
ದಿನಿಯೊಳ್ ಸನ್ಮತಿಗಳಪ್ಪವರ್ಪೞಿದಪರೇ ೮೫

ಉಱುವ ಜಿನಮತಮನೇನೆಂ
ದಱಿಯದೆ ಮುಂ ಕೆಟ್ಟ ಕೇಡೆ ಸಾಲ್ಗುಂ ಮತ್ತಿ
ನ್ನಱಿದು ಮತಿಗೆಟ್ಟು ಬಿಟ್ಟೊಡೆ
ಮಱುಕಂ ಕೈಸಾರ್ಗುಮುಗ್ರ ಸಂಸೃತಿ ವನದೊಳ್ ೮೬

ಗದ್ಯ॥ ಎಂದುಸಿರದಿರ್ಪುದುಂ ನಂಟರೆಲ್ಲಂ ಮುನಿದು ೮೭

ನಡೆನಡೆ ಡೊಂಬುವೇಡ ನಿನಗೇಕೆ ತಪಸ್ಸಿನ ಕುತ್ತಮೆಂದು ನೇ
ರ್ಪಡೆ ಜಡಿದಟ್ಟಿ ಬೈದು ಬಿಸುಸುಯ್ದಲೆ ಗಾಂಪ ಸಮಸ್ತ ನಂಟರಂ
ಮಡದಿಯನಿಷ್ಟರಂ ಕಿಡಿಸಿ ದುರ್ಗತಿವೋಗದೆ ಬರ್ಪುದೆಂದು ನಿ
ಗ್ಗಡಿತನದಿಂ ಸಬಾಂಧವ ಜನಂ ತೆಗೆದಪ್ಪಿದರಾ ಮುನೀಂದ್ರನಂ ೮೮

ಮಾಡುವುವೆ ? ತಾವು ಎಷ್ಟು ಒಳ್ಳೆಯವಾದರೂ ಇತರರ ಮಾತುಗಳು ಜೈನವಚನಗಳನ್ನು ಹೋಲುವುವೆ ? ೮೪. ಜಿನವಚನವನ್ನು ತಿಳಿಯದೆ ಸುಮ್ಮನೆ ದೂಷಿಸುವ ದುರ್ಜನರು, ದುರಾಚಾರಿಗಳು, ಶ್ರೇಷ್ಠವಾದ ಜಿನವಚನವನ್ನು ತಿಳಿಯುವುದಾದರೆ ಲೋಕದಲ್ಲಿ ಸನ್ಮತಿಗಳಾದವರು ದೂಷಣೆ ಮಾಡುವರೆ ? ೮೫. ಶ್ರೇಷ್ಠವಾದ ಜಿನಮತವನ್ನು ಅದು ಏನೆಂದು ತಿಳಿಯದೆ ಮುಂಚೆ ನಾನು ಕೆಟ್ಟಕೇಡೇ ಸಾಕು. ಈಗ ತಿಳಿದೂ ಪುನಃ ಮತಿಗೆಟ್ಟು ಬಿಟ್ಟುಬಿಟ್ಟರೆ ಕ್ರೂರವಾದ ಸಂಸಾರವೆಂಬ ಅರಣ್ಯದಲ್ಲಿ ಸಂಕಟವುಂಟಾಗುತ್ತದೆ. ೮೬. ಹೀಗೆ ಯೋಚಿಸಿ ಮಾತನಾಡದೆ ಸುಮ್ಮನಿರಲು ನಂಟರೆಲ್ಲರೂ ಸಿಟ್ಟುಗೊಂಡು. ೮೭. 'ನಡೆನಡೆ, ಡೊಂಬಾಟ ಬೇಡ. ನಿನಗೆ ಈ ತಪಸ್ಸಿನ ರೋಗವೇಕೆ?" ಎಂದು ಚೆನ್ನಾಗಿ ಗದರಿಸಿ ಬೈದು ನಿಟ್ಟುಸಿರುಬಿಟ್ಟು "ಎಲಾ ದಡ್ಡ ! ಸಮಸ್ತರಾದ ನಂಟರನ್ನೂ ಹೆಂಡತಿಯನ್ನೂ ಸ್ನೇಹಿತರನ್ನೂ ಕೆಡಿಸಿ ದುರ್ಗತಿಗೆ ಹೋಗದೆ ನಮ್ಮ ಜತೆಯಲ್ಲಿ ಬರತಕ್ಕದ್ದು." ಎಂದು ನಾಚಿಕೆ ಬಿಟ್ಟು ಆ ನೆಂಟರು ಆ ಮುನಿಯನ್ನು ತಬ್ಬಿಕೊಂಡರು. ೮೮. ಅವರಂ ಸೊಂಟವನ್ನು ಹಿಡಿ

ಗದ್ಯ॥ ಅಂತು ನಿಷ್ಠುರ ಕೋಪದಿಂ ಕೈಯುಮಂ ಕಾಲುಮಂ ನಡುವುಮಂ ಪತ್ತಿ ತೆಗೆವುದುಂ ಸೋಮದತ್ತ ಮುನಿನಾಥನಿಂತೆಂದು ಮನದೊಳ್ ಭಾವಿಸಿದಂ ೮೯

ಗುರುದತ್ತ ಮುನೀಶ್ವರನಂ
ಕರಮಲ್ಲದೆ ಮುನಿದು ಸೂಡಿ ಪೊತ್ತಿಸಿ ಸುಟ್ಟಂ
ಭರದಿಂ ಮಳಮುಖನೆಂದೊಡೆ
ಕರಮುಗ್ರಮುರ್ಮುಳಿಸು ಬಂದರೇನಂ ಮಾಡರ್ ೯೦

ಗದ್ಯ॥ ಬಂಡಿಯಂ ತೀವಿದಜೋಳಮಂ ತೆಗೆವ ಕೋಣಂ ಮೊರಂ ತೀವಿದ ಧಾನ್ಯಮಂ ತೆಗೆಯಲಾಱದೆ ? ನರಕದೊಳೆನಿತಾನುಂ ಕಾಲಂ ನವೆವಂತಪ್ಪ ಮಹಾಪಾಪಮನುಪಾರ್ಜಿಸುವಂತಪ್ಪ ಪಾಪಕರೆನಗುಪಸರ್ಗಂ ಮಾಡಿದರೆಂಬುದಾವ ವಿಸ್ಮಯಮೆಂದು ಮನದೊಳ್ ಮುನ್ನಂ ಮಹೋಪಸರ್ಗಂಗಳಂ ಸೈರಿಸಿ ದಿವ್ಯ ಸುಖಂಗಳಂ ಪಡೆದ ಮಹಾಪುರುಷರ ಕಥೆಗಳಂ ಚಿಂತಿಸುತ್ತುಂ ಮಾನುಷ್ಯೋಪಸರ್ಗಮಿದು ಪಿಂಗುವಿನಮಾಹಾರ ಶರೀರ ನಿವೃತ್ತಿಯೆಂದಿರ್ದನನ್ನೆಗಂ ಸಗೋತ್ರರೆಲ್ಲಂ ತೆಗೆದು ತೆಗೆಯಲಾಱದೆ ಬೇಸತ್ತು ಪಿಂಗಿ ಸೋಮದತ್ತ ಮುನಿಯುಂ ಬಳಸಿಕೊಂಡಿರ್ದಿಂತೆಂದರ್ ೯೧

ದೆಳೆಯುತ್ತಲಿದ್ದಾಗ ಸೋಮದತ್ತ ಮುನಿಶ್ರೇಷ್ಠನು ಮನಸ್ಸಿನಲ್ಲಿ ಹೀಗೆಂದು ಭಾವಿಸಿದನು. "ಗುರುದತ್ತ ಮುನೀಶ್ವರನನ್ನು ವಿಶೇಷವಾಗಿ ಬೆಂಕಿಹೊತ್ತಿಸಿ ಮಳಮುಖನು ರಭಸದಿಂದ ಸುಟ್ಟನೆಂಬಾಗ ಇವರು ಕ್ರೂರವಾದ ಮುನಿಸು ಬಂದರೆ ಏನನ್ನು ತಾನೆ ಮಾಡಲಾರರು.? ೯೦. ಬಂಡಿಯನ್ನು ತುಂಬಿದ ಜೋಳವನ್ನು ಎಳೆಯುವ ಕೋಣ ಮೊರವನ್ನು ತುಂಬುವಷ್ಟು ಜೋಳವನ್ನು ಎಳೆಯಲಾರದೆ ? ನರಕದಲ್ಲಿ ಎಷ್ಟಾದೂ ಕಾಲ ಸವೆಯುವಂಥ ಮಹಾಪಾಪವನ್ನು ಸಂಪಾದಿಸುವಂಥ ಜನರು ನನಗೆ ಉಪಸರ್ಗವನ್ನು(ಹಿಂಸೆ) ಮಾಡಿದರೆಂಬುದು ಯಾವ ದೊಡ್ಡ ಆಶ್ಚರ್ಯ ?" ಎಂದು ಮೊದಲೇ ಮನಸ್ಸಿನಲ್ಲಿ ಹಿಂದೆ ಉಪಸರ್ಗವನ್ನು ಸೈರಿಸಿ ದಿವ್ಯ ಸುಖಗಳನ್ನು ಹೊಂದಿದ ಮಹಾ ಪುರುಷರ ಕಥೆಗಳನ್ನು ಸ್ಮರಿಸಿಕೊಳ್ಳುತ್ತ "ಈ ಮಾನವೋಪಸರ್ಗವು ಕಳೆದು ಹೋಗುವ ವರೆಗೆ ಆಹಾರ ನಿವೃತ್ತಿ ಆದರಿಂದ ಶರೀರನಿವೃತ್ತಿ" ಎಂದು ನಿರ್ಧರಿಸಿಕೊಂಡಿದ್ದನು. ಆ ವೇಳೆಗೆ ಅವನ ದಾಯಾದಿಗಳೆಲ್ಲ ಎಳೆದು, ಎಳೆಯಲಾರದೆ ಬೇಸರಪಟ್ಟು ಆ ಪ್ರಯತ್ನವನ್ನು ಕೈಬಿಟ್ಟು ಸೋಮದತ್ತ ಮುನಿಯು ಸುತ್ತ ನಿಂತುಕೊಂಡು ಹೀಗೆಂದರು. ೯೧. "ಎಲವೋ ಪಾಪಿ

ಎಲೆ ಪಾತಕ ನೀನೀ ಕುಲ
ಲಲನೆಯುರಂ ಜ್ಯೇಷ್ಠ ಸುತನುಮಂ ಬಿಸುಟು ತಪ
ಕ್ಕೆಳಸಿರ್ದೊಡಮಿಾ ತಪದೊಳ್
ಫಲಮುಂಟೇ ಪುಣ್ಯಮುಂಟೆ ಪೇಟ್ ಗತಿಯುಂಟೇ ೯೨

ಬತ್ತಲಿಗರ ಮಾತಂ ಕೇ
ಳ್ದುತ್ತಮಮೆನಿಸಿರ್ದ ಕುಲಮನಳಿದೈ ನಿನಗಿ
ನ್ನೆತ್ತಣ ಪರತ್ರ ನೀನುಂ
ಸತ್ತೊಡಮಿಂ ಕಷ್ಟವೃತ್ತಿಯಂ ನೀಗಿದಪಾ ೯೩

ಗದ್ಯ॥ ಎಂದು ಬಾಯ್ವಂದಂತೆ ನುಡಿವುದು ವಾತ್ಸಲ್ಯ ರತ್ನಾಕರಂ ಅವರ ಮಾತಿಂಗೆ ನಕ್ಕು ಕೇಱ ಚಿತ್ರದಂತೆ, ಬಸುಱಿಯ ಪಣ್ಣಂತೆ, ಕತ್ತೆಯ ಲದ್ದಿಯಂತೆ, ಕಳ್ಳನ ನನ್ನಿಯಂತೆ, ಪಱುಣೆಯ ಶೋಭೆಯಂತೆ, ಪಾವುಮೆಕ್ಕೆಯ ತಂಪಿಸಂತೆ, ತಿಪ್ಪೆಯ ನೀರಂತೆ, ಬಡವನ ಮಹಿಮೆಯಂತೆ, ಪಗರಣದಾನೆಯಂತೆ, ರಂಗವಲಿಯ ಪಿಟ್ಟಿನಂತೆ, ಪಂದೆಯ ಮಾತಿನಂತೆ, ಡೊಂಬರ ತೋಂಟಿ ಯಂತೆ, ದೂರದ ಬೆಟ್ಟಿನಂತೆ, ಮಾಟದ ಮುಡಿಯಂತೆ, ಕಟ್ಟಿದ ಪಲ್ಲಂತೆ, ಪೀಲಿಯ ಕಣ್ಣಂತೆ, ಬಟ್ಟೆಯ ಪುಲ್ಲಂತೆ, ತಾಳಕಾಯಂತೆ ಮರುಳ ಕೋಡಿನಂತೆ, ಪೊಱಗಣ್ಗೆ ರಂಜಿಸುವ ಬಹಿರಾ ಳಾಪದ ಡೊಂಬನೊಲ್ಲದೆ, ಮಾಸದ ಹೇಮಕುಂಭದಂತೆ, ಸಾಧಕನ ಮರುಳಾಟದಂತೆ,

ನೀನು ಈ ಕುಲಸ್ತ್ರೀಯರನ್ನೂ ದೊಡ್ಡ ಮಗನನ್ನೂ ಬಿಟ್ಟು ತಪಸ್ಸಿಗೆ ಆಸೆಪಟ್ಟು ನಿಂತರೂ ಈ ತಪಸ್ಸಿನಿಂದ ಫಲ ಸಿಕ್ಕುವುದುಂಟೆ ? ಪುಣ್ಯವುಂಟೆ? ಸದ್ಗತಿಯುಂತೆ ? ಹೇಳು. ೯೨ ಈ ದಿಗಂಬರರ ಮಾತು ಕೇಳಿ ಉತ್ತಮವಾದ ಕುಲವನ್ನು ಹಾಳು ಮಾಡಿದೆ, ನಿನಗೆ ಇನ್ನು ಎಲ್ಲಿಯ ಪರಲೋಕ? ನೀನು ಸತ್ತರೂ ಈ ನೀಚಜೀವನವನ್ನು ಕಳೆದು ಕೊಳ್ಳುವೆಯಾ?" ೯೩. ಎಂದು ಬಾಯಿಗೆ ಬಂದ ಹಾಗೆ ನುಡಿಯಲು ವಾತ್ಸಲ್ಯರತ್ನಾ ಕರನು ಅವರ ಮಾತಿಗೆ ನಕ್ಕು ಗೋಡೆಯ ಮೇಲಿನ ಚಿತ್ರದ ಹಾಗೆ, ಬಸುರಿಗಿಡದ ಹಣ್ಣ ನಂತೆ, ಕತ್ತೆಯ ಲದ್ದಿಯ ಹಾಗೆ, ಕಳ್ಳನ ಸತ್ಯದಂತೆ, ಪರುಣೆ?ಯ ಶೋಭೆಯಂತೆ, ಹಾವು ಮೆಕ್ಕೆಯ ಸುವಾಸನೆಯಂತೆ, ತಿಪ್ಪೆಯ ನೀರಿನಂತೆ, ಬಡವನ ಹಿರಿತನದಂತೆ, ಹಗರಣ (ನಾಟಕ)ದ ಆನೆಯಂತೆ, ರಂಗೋಲೆಯ ಹಿಟ್ಟಿನಂತೆ. ಹೇಡಿಯ ಮಾತಿನ ಹಾಗೆ, ಡೊಂ ಬರ ಜಗಳದಂತೆ, ದೂರದ ಬೆಟ್ಟದಂತೆ, ಮಾಟದ ಮುಡಿಯಂತೆ, ಕಟ್ಟಿಸಿದ ಹಲ್ಲಿನಂತೆ, ನವಿಲುಗರಿಯ ಕಣ್ಣಿನ ಹಾಗೆ, ದಾರಿಯಲ್ಲಿನ ಹುಲ್ಲಿನ ಹಾಗೆ, ತಾಳೆಯ ಕಾಯಿಯಂತೆ ಪಿಶಾಚದ ಕೊಂಬಿನಂತೆ ಹೊರಗೆ ಚೆನ್ನಾಗಿ ಕಾಣುವ ಹೊರಗಿನ ಮಾತಿನ ಡಂಬಾಚಾರ ವನ್ನು ಮೆಚ್ಚದೆ, ಮಾಸದ ಚಿನ್ನದ ಗಡಿಗೆಯಂತೆ ಸಾಧಕನ ಹುಚ್ಚಾಟದಂತೆ, ವೀರನ ನಿರ್ಭ

ವೀರನಂಜವೆಯಂತೆ, ತೆಂಗಿನಕಾಯಂತೆ, ಕೇದಗೆಯ ಪುಷ್ಪದಂತೆ, ಬಾಳೆಯ ಪಣ್ಣಂತೆ, ಕೂರ್ಪ ರೊಲ್ಲಮೆಯಂತೆ, ನಿದಿಗಂಡ ಬಡವನಂತೆ, ಬೂದಿಪತ್ತಿದ ಕೆಂಡದಂತೆ, ಮಲವೇಱಿದ ರಕ್ತದಂತೆ, ಸೊಬಗಿಯ ಗಾಂಪಿನಂತೆ, ನುಡಿಜಾಣನ ಮೋನದಂತೆ, ಬಲ್ಲಿದನ ನೋಟದಂತೆ, ಸಮುದ್ರದ ಕಯ್ಪಿಯಂತೆ ತೋಂಟದ ಬೇಲಿಯಂತೆ, ತುಪ್ಪದ ಕೊಡದಂತೆ, ನಿಶ್ಚಯಕ್ಕೊಳಗೆ ಕಡುಲೇಸಪ್ಪ ಸನ್ಮಾರ್ಗಮಂ ಬಿಟ್ಟು ನರಕದೊಳ್ ತಿಱ್ಱನೆ ತಿರಿವಂತಪ್ಪ ಪಾಪಮಂ ನೆರಪಿದ ಮಾನಿಸರಂ ಕೈ ಕೊಳರೆಂದು ಜಿನಮಾರ್ಗಮಂ ಬಿಡುವುದು ಕಜ್ಜಮಲ್ಲದೆಂದು ಜಿನಾಗಮೋಕ್ತಿಗಳಂ ಭಾವಿಸುತಿರ್ದ ನನ್ನೆಗಂ ಬಂಧುಗಳುಂ ಯಜ್ಞದತ್ತೆಯುಂ ಮಸಗಿ ಕೂಸಂ ಸೋಮದತ್ತಮುನಿಯ ಮುಂದಿಕ್ಕಿ ಬ್ರಹ್ಮೇತಿಯಾಗೆ ಪೊಟಲೊಳಗೆ ಪುಯ್ಯಲಿಟ್ಟು ಬಂದು ಸಾವಮೆಂದು ಪೂಣ್ದು ಪರ್ವತದಿಂದಿಳಿದು ಸೌಪಾಳಪುರಕ್ಕೆ ಪೋದರಿತ್ತಲ್ ಬಾಲಕಂ ಸೋಮದತ್ತಮುನಿಯ ಪಾದಮಂ ಮೋಕ್ಷ ಬಟ್ಟೆಯುಂ ನೋಡುವಂತೆ ಮುನಿಯ ಮೊಗಮಂ ನೋಡುತ್ತುಂ ಮುಂದಪ್ಪ ವಿದ್ಯಾಧರ ರಾಜಲಕ್ಷ್ಮಿಯ ಬರವಿಂಗೆ ರಾಗಿಸಿ ನಗುವಂತೆ ನಗುತಿರ್ದನನ್ನೆಗಂ ೯೪

ನೆಗಲ್ದೀ ಭರತಕ್ಷೇತ್ರದ
ಸೊಗಯಿಪ ವಿಜಯಾರ್ಧ ಗಿರಿಯ ತೆಂಕಣ ದೆಸೆಯೊಳ್
ಮಿಗಿಲೆನಿಪುದು ನಾನಾ ಶೋ
ಭೆಗಳಿಂದಂ ನೆಱೆದ ದಕ್ಷಿಣ ಶ್ರೇಣಿ ಕರಂ ೯೫

ಯಕ್ಷದ ಹಾಗೆ, ತೆಂಗಿನ ಕಾಯಿನಂತೆ ತಾಳೆ ಹೂವಿನಂತೆ, ಬಾಳೆಯ ಹಣ್ಣಿನಂತೆ ಪ್ರೀತಿ ಸುವವರ ಒಲುಮೆಯ ಹಾಗೆ, ನಿಧಿಯನ್ನು ಕಂಡ ಬಡವನ ಹಾಗೆ, ಬೂದಿ ಹತ್ತಿದ ಕೆಂಡ ದಂತೆ ಕೊಳೆಯೇರಿದ ರಕ್ತದ ಹಾಗೆ, ಸುಂದರಿಯ ದಡ್ಡತನದಂತೆ ಮಾತಿನ ಜಾಣನಾದ ವನ ಮೌನದಂತೆ, ಬಲಿಷ್ಠನ ನೋಟದಂತೆ, ಸಮುದ್ರದ ನೀರಿನ ಕಹಿಯಂತೆ, ತೋಟದ ಬೇಲಿಯ ಹಾಗೆ, ತುಪ್ಪದ ಕೊಡದಂತೆ, ನಿಶಯುವಾಗಿಯು ಒಳಗೆ ಶ್ರೇಷ್ಠವಾದ ಸನ್ಮಾರ್ಗವನ್ನು ಬಿಟ್ಟು ನರಕದಲ್ಲಿ ಒಂದೇ ಸಮನೆ ತಿರುಗುವಂಥ ಪಾಪವನ್ನು ಒಟ್ಟು ಗೂಡಿಸಿಕೊಡ ಮನುಷ್ಯರನ್ನು ಕೈಕೊಳ್ಳರೆಂದು ಜಿನಮಾರ್ಗವನ್ನು ಬಿಡುವುದು ಸರಿಯಲ್ಲ ವೆಂದೂ ಜಿನಾಗಮೋಕ್ತಿಗಳನ್ನು ಚಿಂತಿಸುತ್ತಿದ್ದನು. ಆ ವೇಳೆಗೆ ಬಂಧುಗಳೂ ಯಜ್ಞ ದತ್ತೆಯೂ ಕೋಪದಿಂದ ರೇಗಿ ಆ ಕೂಸನ್ನು ಸೋಮದತ್ತ ಮುನಿಯ ಮುಂದಿಟ್ಟು ಬ್ರಹ್ಮೇತಿಯಾದಂತೆ ಪಟ್ಟಣದಲ್ಲಿ ಮೊರೆಯಿಟ್ಟುಕೊಂಡು ಬಂದು ಸಾಯೋಣವೆಂದು ಪ್ರತಿಜ್ಞೆ ಮಾಡಿ ಬೆಟ್ಟದಿಂದ ಇಳಿದು ಸೌಪಾಳಪುರಕ್ಕೆ ಹೋದರು. ಇತ್ತ ಆ ಹುಡುಗನು ಸೋಮದತ್ತ ಮುನಿಯ ಪಾದವನ್ನು ಮೋಕ್ಷದ ದಾರಿಯನ್ನು ನೋಡುವಂತೆ, ಮುನಿಯ ಮುಖವನ್ನು ನೋಡುತ್ತ ಮುಂದೆ ಆಗುವ ವಿದ್ಯಾಧರ ರಾಜ್ಯಲಕ್ಷ್ಮಿಯ ಬರವಿಗೆ ಹರ್ಷ ಪಟ್ಟು ನಗುವಂತೆ ನಗುತ್ತಿದ್ದನು. ಆ ವೇಳೆಗೆ ೯೪. ಪ್ರಸಿದ್ಧವಾದ ಈ ಭರತ ಕ್ಷೇತ್ರದ ಸುಂದರವಾದ ವಿಜಯಾರ್ಧಪರ್ವತದ ದಕ್ಷಿಣ ದಿಕ್ಕಿನಲ್ಲಿ ನಾನಾ ಶೋಭೆಗಳಿಂದ ಕೂಡಿದ ದಕ್ಷಿಣಶ್ರೇಣಿಯು ಬಹಳ ಶ್ರೇಷ್ಠವೆನ್ನಿಸಿಕೊಂಡಿದೆ. ೯೫. ಆ ದಕ್ಷಿಣ ಶ್ರೇಣಿಯೊಳಗೆ

ಗದ್ಯ॥ ಆ ದಕ್ಷಿಣ ಶ್ರೇಣಿಯೊಳಮರಾವತಿಯೆಂಬುದು ಪುರಮುಂಟಾ ಪುರಮನಾಳ್ವಂ ವಿದ್ಯಾಧರರಾಜಂ ಶಂಭುವೆಂಬನಾತನ ಮಹಾದೇವಿ ಮಂಗಳೆಯೆಂಬಳಾಯಿರ್ವರ್ಗಂ ೯೬

ಸ್ಮರಸನ್ನಿಭನೆನಿಸುವ ಭಾ
ಸ್ಕರ ದೇವನುಮಮರರಾಜನಿಭನೆನಿಸುವ ಮಂ
ದರರಾಜದೇವನೆಂಬಿ
ರ್ವರುಂ ಸುವಿಕ್ರಮರುದಾತ್ತರಗ್ಗದ ತನಯರ್ ೯೭

ಸಿರಿಗಂ ಭಾರತಿಗಂ ಸೌಂ
ದರ ರೂಪಿಂಗೀಕೆ ಪಿರಿಯಳೆನಿಸುವ ರೂಪಿಂ
ಕರಮೊಪ್ಪುವಳಂಬುಜಮುಖಿ
ತರಳಾಕ್ಷಿ ಸುದೇವಿಯೆಂಬಳವರಿಂ ಕಿಱಿಯಳ್ ೯೮

ಗದ್ಯ॥ ಅಂತವರ್ಬೆರಸು ಶಂಭುಖೇಚರರಾಜಂ ಸುಖ ಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತುಂ ಸುದೇವಿಕುಮಾರಿಯುಮಂ ಕನಕಪುರಾಧೀಶ್ವರನಪ್ಪ ವಿಮಳವಾಹನನೆಂಬ ಭೂಚರ ಮಹೀವಲ್ಲಭಂಗೆ ಕೊಟ್ಟು ಪಿರಿದಪ್ಪುತ್ಸಾಹಂಬೆರಸು ಪಲಕಾಲಂ ವಿದ್ಯಾಧರ ಶ್ರೀಯನನುಭವಿಸಿ ಕಡೆಯೊಳ್ ಸಂಸಾರ ವೈರಾಗ್ಯಂ ಪುಟ್ಟೆ ಸುಗತಿಶ್ರೀಯೊಳ್ ಕೂಡುವೆನೆಂಬ ಬಗೆಯಿಂ ತಂದು ಪಿರಿಯ ಮಗನಪ್ಪ ಭಾಸ್ಕರದೇವಂಗೆ ಯೌವರಾಜ್ಯಮುಮಂ ವಿದ್ಯೆಗಳುಮಂ ಕೊಟ್ಟು ೯೯

ಅಮರಾವತಿಯೆಂಬ ಪಟ್ಟಣವಿತ್ತು. ಆ ಪಟ್ಟಣದ ದೊರೆ ವಿದ್ಯಾಧರರಾಜ ಶಂಭುವೆಂಬವನು. ಆತನ ಮಹಾದೇವಿ ಮಂಗಳೆ. ಆ ಯಿಬ್ಬರಿಗೂ ೯೬. ಮನ್ಮಥನ ಸದೃಶನಾದ ಭಾಸ್ಕರ ದೇವನೂ ಇಂದ್ರಸದೃಶನೆನಿಸುವ ಮಂದರರಾಜನೂ ಇಬ್ಬರು ಪರಾಕ್ರಮಶಾಲಿಗಳಾದ ಶ್ರೇಷ್ಠರಾದ ಪುತ್ರರು. ೯೭. ಲಕ್ಷ್ಮಿಗೂ ಸರಸ್ವತಿಗೂ ಸುಂದರ ರೂಪದಲ್ಲಿ ಈಕೆ ಹಿರಿಯಳೆಂದೆನಿಸಿಕೊಳ್ಳುವಂಥ ರೂಪದಿಂದ ಸುದೇವಿಯೆಂಬ ಕಮಲಮುಖಿಯು ಚಿಕ್ಕ ಮಗಳು. ೯೮. ಹಾಗೆ ಅವರೊಡನೆ ಕೂಡಿ ಶಂಭುಖೇಚರರಾಜನು ಸುಖಸಂಕಥಾವಿನೋದದಿಂದ ರಾಜ್ಯಾಡಳಿತ ಮಾಡುತ್ತ, ಸುದೇವಿಕುಮಾರಿಯನ್ನು ಕನಕಪುರದ ಒಡೆಯನಾದ ವಿಮಳವಾಹನನೆಂಬ ಭೂಚರರಾಜನಿಗೆ ಕೊಟ್ಟು ಹೆಚ್ಚಾದ ಉತ್ಸಾಹದಿಂದ ದೀರ್ಘಕಾಲ ವಿದ್ಯಾಧರ ಲಕ್ಷ್ಮಿಯನ್ನು ಅನುಭವಿಸಿ ಕಡೆಯಲ್ಲಿ ಸಂಸಾರದಲ್ಲಿ ವೈರಾಗ್ಯ ಹುಟ್ಟಿ ಸುಗತಿಯೆಂಬ ಲಕ್ಷ್ಮಿಯೊಡನೆ ಸೇರುವ ಸಂಕಲ್ಪದಿಂದ ಹಿರಿಯ ಮಗನಾದ ಭಾಸ್ಕರದೇವನಿಗೆ ಯೌವರಾಜ್ಯಪದವಿಯನ್ನೂ ವಿದ್ಯೆಗಳನ್ನೂ ಕೊಟ್ಟು. ೯೯. ದೇಹಸುಖಕ್ಕೆ

ಎಳಸದೆ ವೈಸುಖಕ್ಕೆ ಪೆಱತೊಂದಱೆ ಮೋಹಮನುಂಟುಮಾಡಿ ಸಂ
ಚಲಿಸಿ ವಿಭೂತಿಯಂ ನೆನೆಯದೊರ್ಮೆಯೆ ಘುಮ್ಮನೆ ರಾಜ್ಯಲಕ್ಷ್ಮಿಯಂ
ಘಳಿಲನೆ ಬಿಟ್ಟು ಸುಪ್ರಭ ಸುಚಾರಣರಲ್ಲಿ ಜಿನೇಂದ್ರ ದೀಕ್ಷೆಯಂ
ಕಲಿ ಪೆಱಪಿಂಗೆ ಮೈದೆಗೆಯದಣ್ಮಳವಟ್ಟರೆ ಕೊಂಡನರ್ತಿಯಿಂ ೧೦೦

ಗದ್ಯ॥ ಅಂತು ನಿಶ್ಶಂಕೆಯಿಂ ಶಂಭು ಜಿನರೂಪಂ ಕೈಕೊಂಡು ತಪದೊಳಿರ್ದನಿತ್ತಲ್
ಮಂದರದೇವಂ ಸಮಸ್ತ ವಿದ್ಯಾ ಸಮನ್ವಿತನಪ್ಪುದಱಿಂ ಪ್ರತಾಪದಿಂ ಭಾಸ್ಕರದೇವನನೋಡಿಸಿ
ಖೇಚರರಾಜ್ಯಕ್ಕೆ ಪೊತ್ತಮೊದಲಿಗನಾಗಿ ನೆಗಟ್ದಮರಾವತೀ ಪುರದೊಳಿರ್ದ ಭಾಸ್ಕರದೇವಂ
ವಿದ್ಯಾಧರರಾಜ್ಯಂ ಪೋದುದಕ್ಕೆ ಚಿಂತಾಕ್ರಾಂತನಾಗಿ ಮಂದರದೇವಂಗಿದಿರ್ಚಲಣ್ಮದೆ ತನ್ನಗ್ರ
ಮಹಾದೇವಿ ಮಣಿಮಾಲೆ ಮೊದಲಾಗೊಡೆಯ ಪಲಂಬರರಸಿಯರ್ವೆರಸು ಕನಕಪುರಕ್ಕೆ ವಂದು
ತನ್ನ ಮೈದುನನಪ್ಪ ವಿಮಳ ಮಹಾರಾಜನಂ ಪೊರ್ದಿರ್ದು ೧೦೧

ಧರ್ಮ ವಿಚಾರದೊಳಂ ಜಿನ
ಧರ್ಮಮೆ ಮಿಗಿಲೆಂದು ನಂಬಿ ಭಾಸ್ಕರದೇವಂ
ನಿರ್ಮಲ ಮನದಿಂದಂ ಸ
ದ್ಧರ್ಮ ಕಥಾಳಾಪದಿಂದಮಿರ್ದೊಂದು ದಿನಂ ೧೦೨

ಆಸೆಪಡದೆ ಬೇರೊಂದು ನೀಚ ಮೋಹವನ್ನುಂಟು ಮಾಡಿಕೊಂಡು ಚಲಿತಚಿತ್ತನಾಗದೆ ವೈಭವವನ್ನು ಸ್ಮರಿಸದೆ ಒಂದೇಸಲ ತಟ್ಟನೆ ರಾಜ್ಯಲಕ್ಷ್ಮಿಯನ್ನು ಕೈಬಿಟ್ಟು ಸುಪ್ರಭರೆಂಬ ಶ್ರೇಷ್ಠಚಾರಣರಲ್ಲಿ ಜಿನೇಂದ್ರ ದೀಕ್ಷೆಯನ್ನು ಪಡೆದುಕೊಂಡನು. ಕಲಿ ಹಿಂಮೆಟ್ಟಿದನು. ಕುಂದದ ಧೈರ್ಯ ಸಂಪ್ರಾಪ್ತವಾಯಿತು. ೧೦೦. ಹಾಗೆ ನಿಶ್ಶಂಕೆಯಿಂದ ಶಂಭುರಾಜನು ಜಿನರೂಪವನ್ನು ಅಂಗೀಕರಿಸಿ ತಪೋನಿರತನಾದನು. ಇತ್ತ ಮಂದರದೇವನು ಸಮಸ್ತ ವಿದ್ಯೆಗಳಿಂದ ಕೂಡಿದವನಾದ್ದರಿಂದ ಪ್ರತಾಪದಿಂದ ಭಾಸ್ಕರದೇವನನ್ನು ಓಡಿಸಿದನು. ಖೇಚರರಾಜ್ಯಕ್ಕೆ ಅವನೇ ಮೊಟ್ಟಮೊದಲನೆಯನಾದನು. ಅಮರಾವತೀಪುರದಲ್ಲಿದ್ದ ಭಾಸ್ಕರದೇವನು ವಿದ್ಯಾಧರರಾಜ್ಯವು ಹೋದದ್ದಕ್ಕೆ ಚಿಂತೆಮಾಡಿ ಮಂದರದೇವನನ್ನು ಇದಿರಿಸಲು ಧೈರ್ಯವಿಲ್ಲದೆ ತನ್ನ ಹಿರಿಯ ಹೆಂಡತಿ ಮಣಿಮಾಲೆ ಮೊದಲಾಗಿ ಹಲವರು ರಾಣಿಯರಿಂದ ಕೂಡಿ ಕನಕಪುರಕ್ಕೆ ಬಂದು, ತನ್ನ ಮೈದುನನಾದ ವಿಮಳವಾಹನ ಮಹಾ ರಾಜನನ್ನು ಆಶ್ರಯಿಸಿಕೊಂಡನು. ೧೦೧. ಧರ್ಮವಿಚಾರದಲ್ಲಿ ಜಿನಧರ್ಮವೇ ಹೆಚ್ಚಿನ ದೆಂದು ನಂಬಿ ಭಾಸ್ಕರದೇವನು ನಿರ್ಮಲವಾದ ಮನಸ್ಸಿನಿಂದ ಸದ್ಧರ್ಮ ಕಥಾ ವಿಚಾರ ದಲ್ಲಿ ಮಗ್ನನಾಗಿದ್ದನು. ೧೦೨. ಒಂದು ದಿನ ಪರ್ವೋಪವಾಸ ಮಾಡಿ ಭರತ ಕ್ಷೇತ್ರ

ಗದ್ಯ॥ ಪರ್ವೋಪವಾಸಂಗೆಯ್ದು ಭರತಕ್ಷೇತ್ರದೊಳಾದ ಜಿನಭವನಂಗಳುಮಂ ಮಹಾಮುನೀಂದ್ರರ್ಕಳುಮಂ ಬಂದಿಸಲುಂ ಪೂಜಿಸಲುಮೆಂದು ಮಣಿಮಾಲೆಯುಂ ತಾನುಂ ವಿಮಾನಾರೂಢರಾಗಿ ಪೋಗಿ ಸಮಸ್ತ ಚೈತ್ಯಾಲಯಂಗಳಂ ಸಕಲ ಮುನಿವರರುಮಂ ವಂದಿಸಿ ನಾಭಿಗಿರಿಯೊಳಿರ್ದ ಸೋಮದತ್ತ ಮುನಿಯುಂ ಬಂದಿಸಲೆಂದು ಬಂದು ೧೦೩

ದಿನಕೃನ್ಮಂಡಲಮುರ್ವಿಯೊಳ್ ನೆಲೆಸಿತೋ ಮೇಣ್ದೇವ ಸಂದೋಹಮೀ
ಮುನಿಯಂ ಪೊಂಗಳಿನೊಲ್ದು ಪೂಜಿಸಿದರೋ ಪಾತಾಳದಿಂ ನಿಲ್ಕಿಸ
ಲ್ಮುನಿಪಾಂಘ್ರಿದ್ವಯಮಂ ಫಣೀಂದ್ರನೊಲವಿಂ ಸದ್ಭಕ್ತಿಯಿಂದೊಲ್ದು ಮೆ
ಲ್ಲನೆ ಮೇಣ್ಧ್ಯಾನಿಸಿ ಕೂರ್ತು ನೋಡಿದಪನೋ ಪೇಳೆಂಬ ಭ್ರಾಂತಿಯಂ ೧೦೪

ಗದ್ಯ॥ ಪುಟ್ಟಿಸಿ ತೊಳತೊಳಗುವ ಬಾಲಾರ್ಕನಂತಪ್ಪ ಶಿಶುವಂ ಕಂಡು ಸಂತೋಷಂಬಟ್ಟು ಸೋಮದತ್ತ ಮುನಿವೃಂದಾರಕನ ಪ್ರಸಾದದಿಂ ಸುಪುತ್ರಂ ದೊರೆಕೊಂಡನೆಂದು ಮುನಿಪತಿಯ ಚರಣಸರೋಜಾತಂಗಳಂ ಪೂಜಿಸಿ ಬಂದಿಸಿ ಮಗನಂ ನಿಧಾನಮನೆತ್ತುವಂತೆತ್ತಿಕೊಂಡು ನಿನಗೆ ಜಿನಧರ್ಮಪ್ರಸಾದದಿಂ ಸ್ಮರಸಮಾನನಪ್ಪಸುಪುತ್ರಂ ದೊರೆಕೊಂಡನೆಂದು ನಲ್ಲಳ ಕೈಯೊಳ್ ಕೊಟ್ಟು ಕನಕಪುರಕ್ಕೆ ಪೋಗಿ ಪೊಟಲೊಳಗಿರ್ದ ವಿಮಳವಾಹನಮಹಾರಾಜಂಗಂ ಸುದೇವಿಮಹಾದೇವಿಗಂ ಮಣಿಮಾಲೆ ಮಹಾದೇವಿ ಗೂಢಗರ್ಭದೊಳ್ ಮಗನಂ ಪಡೆದಳೆಂದು ಪೇಳ್ದಟ್ಟುವುದುಂ ೧೦೫

ದಲ್ಲಿ ಇದ್ದ ಜಿನಭವನಗಳನ್ನೂ ಮಹಾ ಮುನೀಂದ್ರರನ್ನೂ ವಂದಿಸುವುದಕ್ಕೂ ಪೂಜಿಸುವುದಕ್ಕೂ ಬಯಸಿ ಮಣಿಮಾಲೆಯೂ ತಾನೂ ವಿಮಾನಾರೂಢರಾಗಿ ಹೋಗಿ ಸಮಸ್ತ ಚೈತ್ಯಾಲಯಗಳನ್ನೂ ಸಕಲಮುನಿವರರನ್ನೂ ವಂದಿಸಿ ನಾಭಿಗಿರಿಯಲ್ಲಿದ್ದ ಸೋಮದತ್ತ ಮುನಿಯನ್ನು ವಂದಿಸುವುದಕ್ಕೆಂದು ಬಂದನು. ೧೦೩. ಅಲ್ಲಿ ಸೂರ್ಯಮಂಡಲವೇ ಭೂಮಿಯ ಮೇಲೆ ಬಂದು ನೆಲಸಿತೋ, ಅಥವಾ ದೇವಸಮೂಹವು ಈ ಮುನಿಯನ್ನು ಒಲಿದು ಹೊನ್ನುಗಳಿಂದ ಪೂಜಿಸಿದರೋ ಪಾತಾಳದಿಂದ ಆದಿಶೇಷನು ಪ್ರೀತಿಭಕ್ತಿಗಳಿಂದ ಈ ಮುನಿಶ್ರೇಷ್ಠನ ಪಾದಕಮಲಗಳನ್ನು ನಿಲುಕಿಸಿಕೊಳ್ಳಲು ಮೆಲ್ಲನೆ ಧ್ಯಾನಿಸಿ ನೋಡುತ್ತಿರುವನೋ ಎಂಬ ಭ್ರಾಂತಿಯನ್ನು ಹುಟ್ಟಿಸುತ್ತ ಹೊಳೆಯುವ ಬಾಲ ಸೂರ್ಯನಂಥ ಮಗುವನ್ನು ನೋಡಿ ಸಂತೋಷಪಟ್ಟು ಸೋಮದತ್ತ ಮುನಿಶ್ರೇಷ್ಠನ ಪ್ರಸಾದದಿಂದ ತನಗೆ ಸುಪುತ್ರನು ಲಭಿಸಿದನೆಂದು ಮುನಿಪತಿಯ ಪಾದಕಮಲಗಳನ್ನು ಪೂಜಿಸಿ, ವಂದಿಸಿ, ಮಗನನ್ನು ನಿಧಿಯನ್ನು ಎತ್ತುವಂತೆ ಎತ್ತಿಕೊಂಡು "ಜಿನಧರ್ಮ ಪ್ರಸಾದದಿಂದ ಮನ್ಮಥನಂಥ ಸುಂದರನಾದ ಮಗ ಲಭಿಸಿದನು" ಎಂದು ನುಡಿದು ತನ್ನ ಹೆಂಡತಿಯ ಕೈಯಲ್ಲಿ ಕೊಟ್ಟು ಕನಕಪುರಕ್ಕೆ ಹೋಗಿ ಪಟ್ಟಣದೊಳಗಿದ್ದ ವಿಮಲವಾಹನ ಮಹಾರಾಜನಿಗೂ ಸುದೇವಿಮಹಾದೇವಿಗೂ "ಮಣಿಮಾಲಾ ಮಹಾದೇವಿಯು ಗೂಢಗರ್ಭದಲ್ಲಿ ಮಗನನ್ನು ಹೆತ್ತಳು" ಎಂದು ಹೇಳಿ ಕಳುಹಿಸಿದನು. ೧೦೪–೧೦೫. ಆಗ ಅವರು ಅತ್ಯಂತ ಉತ್ಸಾಹ

ಪಿರಿದಪ್ಪುತ್ಸಾಹದಿಂ ಬಂದಿದಿರ್ಗೊಳೆ ಪುರಮಂ ಪೊಕ್ಕು ಸಂತೋಷದಿಂ ಭಾ
ಸ್ಕರದೇವಂ ಕೂರ್ಮೆಯಿಂದಂ ಸುರಪತಿವಿಭವಂಗರ್ಕತೇಜಂಗೆ ಧಾತ್ರೀ
ಧರಧೈರ್ಯಂಗಂಗಜಾಲಂಕೃತ ವಿಮಳಪದಾಂಭೋಜಭೃಂಗಂಗೆ ಭವ್ಯಾಂ
ಬರಚಂದ್ರಂಗುಗ್ರವೈರಿದ್ವಿರದಹರಿಗೆ ಕೀರ್ತ್ಯಂಗನೇಶಂಗೆ ಪೆರ್ಚಿಂ ೧೧೬

ಗದ್ಯ॥ ವಜ್ರಕುಮಾರನೆಂದು ಪೆಸರನಿಟ್ಟು ಕೊಂಡಾಡಿ ನಡೆಪಿ ಬಟಿಕ್ಕಮಯ್ದುವರುಷದಂದು ಜೈನೋಪಾಧ್ಯಾಯರ ಸಮೀಪದೊಳೋದಿಗಿಡುವುದುಂ ಅಕ್ಷರ ಗಣಿತ ಗಾಂಧರ್ವ ಚಿತ್ರಕರ್ಮ ಪತ್ರಚ್ಛೇದಾದಿ ಸಪ್ತತಿಕಳೆಗಳೊಳಂ ಚತುಷ್ಷಷ್ಟಿಕಳಾಗುಣಂಗಳೊಳಂ ಪರಿಣತನಾಗಿ ಮುಂಬಗಲ ಸೂರ್ಯನಂತೆ ತೇಜಮುಂ ಪ್ರತಾಪಮುಮೊಡನೆ ಬಳೆಯೆ, ಜವ್ವನನಾಗಿ ಕುಲ ಜಾತಿ ಸಾಧಿತ ವಿದ್ಯೆಯೆಂಬ ಮೂಱುವಿದ್ಯೆಗಳೊಳಂ ಸಂಪೂರ್ಣನಾಗಿ ಸುಖದಿಂದಿರ್ಪುದುಂ ೧೧೭

ಸ್ಮರರೂಪನಂ ಜಿನೇಶ್ವರ
ಚರಣಾಂಭೋಜಾತಭೃಂಗನಂ ಜಿನಧರ್ಮಾಂ
ಬರಚಕ್ರಚಂದ್ರನಂ ಭಾ
ಸ್ಕರದೇವಂ ನೋಡೆ ತನ್ನ ಕಣ್ಣಣಿವಿನೆಗಂ ೧೧೮

ದಿಂದ ಬಂದು ಇದಿರುಗೊಂಡು ಪಟ್ಟಣ ಪ್ರವೇಶ ಮಾಡಿದರು. ಭಾಸ್ಕರದೇವನು ಪ್ರೀತಿಯಿಂದ ಆ ಇಂದ್ರವೈಭವದ, ಸೂರ್ಯತೇಜಸ್ಸಿನ, ಪರ್ವತದಂಥ ಧೈರ್ಯವುಳ್ಳ, ಮನ್ಮಥನಂಥ ಅಲಂಕಾರದಿಂದ ಕೂಡಿದ ಪವಿತ್ರ ಪಾದಕಮಲಗಳಿಂದ ಕೂಡಿದ, ಭವ್ಯರಿಗೆ ಆನಂದದಾಯಕನಾದ, ಉಗ್ರವೈರಿಗಜಗಳಿಗೆ ಸಿಂಹನೇ ಆದ, ಆ ಕೀರ್ತಿಯೆಂಬ ಅಂಗನೆಯ ಗಂಡನಾದ, ಆ ಶಿಶುರತ್ನಕ್ಕೆ ೧೧೬. ಉತ್ಸಾಹದಿಂದ ವಜ್ರಕುಮಾರನೆಂದು ಹೆಸರಿಟ್ಟು, ಹೊಗಳಿ, ಸಲಹಿದರು ; ಐದುವರುಷ ವಯಸ್ಸಾಗಲು ಜೈನೋಪಾಧ್ಯಾಯರ ಹತ್ತಿರ ಓದಂ ಕಲಿಯಲು ಬಿಟ್ಟರು. ಆ ಕುಮಾರನು ಅಕ್ಷರ, ಗಣಿತ, ಗಾಂಧರ್ವವಿದ್ಯೆ ಚಿತ್ರಕರ್ಮ, ಪತ್ರಚ್ಛೇದವೇ ಮೊದಲಾದ ಎಪ್ಪತ್ತು ಕಲೆಗಳಲ್ಲಿಯಲ್ಲಿ ಚತುಷಷ್ಠಿಕಳಾ ಗುಣಗಳಲ್ಲಿಯೂ ಪಂಡಿತನಾಗಿ ಪ್ರಾತಃಸೂರ್ಯನಂತೆ, ಪ್ರತಾಪ ತೇಜಸ್ಸುಗಳೆರಡೂ ಒಡನೊಡನೆ ಬೆಳೆಯಲು, ಯೌವನವಂತನಾಗಿ ಕುಲವಿದ್ಯೆ, ಜಾತಿವಿದ್ಯೆ, ಸಾಧಿತವಿದ್ಯೆಗಳೆಂಬ ಮೂರು ವಿದ್ಯೆಗಳಲ್ಲಿಯೂ ಸಂಪೂರ್ಣನಾಗಿ ಸುಖವಾಗಿದ್ದನು. ೧೧೭. ಭಾಸ್ಕರದೇವನು ಆ ಜಿನೇಶ್ವರ ಚರಣಕಮಲಭೃಂಗನಾದ, ಮನ್ಮಥರೂಪಿಯಾದ ಆ ಜಿನಧರ್ಮವೆಂಬ ಆಕಾಶಮಂಡಲದ ಚಂದ್ರನನ್ನು ಕಣ್ಣು ದಣಿಯುವಂತೆ ನೋಡಿದನು. ೧೧೮.

ಮಾವನುಮತ್ತೆಯುಮಬ್ಬೆಯು
ಮಾ ವಿಭುವಿನ ತೇಜಮಂ ಪ್ರತಾಪಮುನದಟಂ
ಭಾವಿಸಿ ನೋಡಿದರಾಗ ಮ
ಹಾವಿಭವದಿನಿರ್ಪರೆರ್ದೆ ಕುಳಿರ್ಕೊಳೆ ಡುವಿಸಂ ೧೦೯

ಗದ್ಯ॥ ಅಂತು ಭಾಸ್ಕರದೇವನುಂ ಮಣಿಮಾಲಾ ಮಹಾದೇವಿಯುಂ ವಿಮಳವಾಹನ ಮಹಾರಾಜನುಂ ಸುದೇವಿಯುಃಂ ವಜ್ರಕುಮಾರಂ ಮಾಡುವ ಜಿನಪೂಜೆಯುಃಮನಾಹಾರಾಭಯ ಭೈಷಜ್ಯ ಶಾಸ್ತ್ರದಾನಮುಮಂ ಚಾತುರ್ವರ್ಣ್ಯದೊಳಾದ ವಾತ್ಸಲ್ಯಮುಮಂ ಕಣ್ಣಾರೆ ನೋಡುತುಂ ಮನವಾರೆ ಬಣ್ಣಿಸುತ್ತುಂ ವಾತ್ಸಲ್ಯ ವಾರಾಶಿಯ ಮಾತೆಮಾತಾಗಿ ಸಂತೋಷದಿಂದಿರ್ದೊಂದು ದಿವಸಂ ಕುಮಾರಂಗೆ ಮದುವೆಯಂ ಮಾಡಲೆಂದಾಲೋಚಿಸಿ ಸುದೇವಿಯ ಮಗಳಮಿಂದುಮತಿಯಂ ಬೇಡಿ ೧೧೦

ಪಸುರ್ವಂದರ್ಪಸೆಯೆಂಬಿವೊಪ್ಪೆ ಖಚರಸ್ತ್ರೀಸಂಕುಳಂ ಪಾಡೆ ಸಂ
ತಸದಿಂ ಮಂಗಳಮಂ ವಿವಾಹಭವನಂ ಸದ್ರತ್ನದಿಂದೆಯ್ದೆ ರಂ
ಜಿಸೆ ತೂರ್ಯಧ್ವನಿ ಪೊಣ್ಮೆ ಕಟ್ಟಗುಡಿಯಂ ಪೌರರ್ ಮನಂಗೊಂಡು ರಾ
ಗಿಸೆ ಪುತ್ರಂಗೆ ವಿವಾಹಮಂ ಖಚರಲಕ್ಷ್ಮೀವಲ್ಲಭಂ ಮಾಡಿದಂ ೧೧೧

ಮಾವ, ಅತ್ತೆ, ಅಬ್ಬೆ-ಎಲ್ಲರೂ ಆ ವಿಭುವಿನ ತೇಜಸ್ಸನ್ನೂ ಪ್ರತಾಪ ಶೌರ್ಯಗಳನ್ನೂ ಗಮನಿಸಿ ನೋಡಿದರು. ಆ ಮಹಾವಿಭವವನ್ನೂ ಹೃದಯಾನಂದದಿಂದ ನೋಡಿ ಸಂತೋಷಿಸಿದರು. ೧೦೯. ಭಾಸ್ಕರದೇವನೂ ಮಣಿಮಾಲಾ ಮಹಾದೇವಿಯೂ ವಿಮಳವಾಹನ ಮಹಾರಾಜನೂ, ಸುದೇವಿಯೂ ವಜ್ರಕುಮಾರನು ಮಾಡುವ ಜಿನ ಪೂಜೆಯನ್ನೂ ಆಹಾರ, ಅಭಯ, ಭೈಷಜ್ಯ, ಶಾಸ್ತ್ರದಾನಗಳನ್ನೂ ಚತುರ್ವರ್ಣ ಗಳವರಲ್ಲಿ ಆದ ಆತನ ವಾತ್ಸಲ್ಯವನ್ನೂ ಕಣ್ಣು ತುಂಬಾ ನೋಡುತ್ತ, ಮನಸ್ತೃಪ್ತಿಯಾಗಿ ಹೊಗಳುತ್ತ, ವಾತ್ಸಲ್ಯಸಮುದ್ರನ ಮಾತೇ ಮಾತಾಗಿ ಸಂತೋಷದಿಂದಿದ್ದರು. ಒಂದು ದಿನ ಕುಮಾರನಿಗೆ ಮದುವೆಯನ್ನು ಮಾಡಬೇಕೆಂದು ಆಲೋಚಿಸಿ ಸುದೇವಿಯ ಮಗಳು ಇಂದುಮತಿಯನ್ನು ಕೇಳಿದರು. ೧೧೦. ಹಸಿರುವಾಣಿ ಚಪ್ಪರ, ಹಸೆ, ಎಲ್ಲವೂ ಶೋಭಾಯಮಾನವಾಗಿರಲು ಖೇಚರ ಸ್ತ್ರೀಯರು ಒಟ್ಟಿಗೆ ಹಾಡುತ್ತಿರಲು ಸಂತೋಷದಿಂದ ವಿವಾಹ ಮಂಗಳವನ್ನು ರತ್ನಖಚಿತವಾಗಿ ಶೋಭಿಸುತ್ತಿದ್ದ ಕಲ್ಯಾಣ ಭವನದಲ್ಲಿ ವಾದ್ಯಧ್ವನಿ ಮೊಳಗುತ್ತಿರಲು ಧ್ವಜಗಳನ್ನೇರಿಸಿ ಪೌರರೆಲ್ಲ ಸಂತೋಷದಿಂದ ಭಾಗಿಗಳಾಗಿರಲು ಖಚರರಾಜನು ವೈಭವದಿಂದ ನೆರವೇರಿಸಿದನು. ೧೧೧. ಹಾಗೆ

ಗದ್ಯ॥ ಅಂತು ಮದುವೆಯಂ ಮಾಡುವುದುಂ ವಜ್ರಕುಮಾರನುಮಿಂದುಮತಿಯುಂ ಪ್ರಾಣವಲ್ಲಭರಾಗಿ ಸುವಿಷಯಸುಖಮನನುಭವಿಸುತಿರ್ದೊಂದುದಿವಸಂ ಮಣಿಕುಂಡಲಪ್ರಭೃತಿ ಕುಮಾರರ ತಂಡಂವೆರಸು ವಾತ್ಸಲ್ಯವಾರಾಶಿ ವಿಜಯಾರ್ಧಪರ್ವತದ ಸಿದ್ಧಕೂಟ ಜೈತ್ಯಾಲಯಮಂ ಬಂದಿಸಲೆಂದು ವಿಮಾನಾರೂಢನಾಗಿ ಪೋಗುತ್ತುಂ ಹೇಮಗಿರಿಯೊಳೊರ್ವ ವಿದ್ಯಾಧರಿಯಂ ತಲೆ ಪೊಜಗಾಗೆ ಪೆರ್ವಾವು ನುಂಗಿರ್ದುದಂ ಕಂಡು ಸಮ್ಯಕ್ತ್ವಚೂಡಾಮಣಿ ಪ್ರತಿವಿದ್ಯೆಯಿಂ ಕಿಡಿಸಿ ವಿಘ್ನನಾಶವಂ ಮಾಡುವುದುಂ ೧೧೨

ಕರಕಮಲದೆ ತದ್ವಿದ್ಯಾ
ಧರಿ ರಾಗಿಸಿ ಪೆರ್ಚಿ ನೋಡಿ ಮೆಯ್ಯುಜಿಯದೆ ಭಾ
ಸ್ಕರದೇವನಗ್ರತನಯನ
ಚರಣಾಂಭೋಜದ್ವಯಕ್ಕೆ ಕೈಮುಗಿದಾಗಳ್ ೧೧೩

ಗದ್ಯ॥ ಪೊಡೆಮಡೆ, ಅಂತು ಪೊಡೆಮಟ್ಟ ವಿದ್ಯಾಧರಿಯಂ ನೀನಾರ್ಗೆ ನಿನ್ನ ಪೆಸರೇನೆಂಬುದೇನಂ ಸಾಧಿಸಲೆಂದು ಬಂದೆಯೆಂದು ಬೆಸಗೊಳ್ವುದುಂ, ವಿದ್ಯಾಧರಿಯಿಂತೆಂದಳ್ : ವರಚಂದ್ರಪುರಮನಾಳ್ವಂ ಸುರಸದೃಶಂ ಗರುಡನೆಂಬ ವಿದ್ಯಾಧರರಾಜನಾತನ ಮಹಾದೇವಿ ವಿಭ್ರಮಾನ್ವಿತೆ ಪೆಸರ್ಂ ಅನಂತಮತಿಯೆಂಬಳಾಯಿರ್ವರ್ಗಂ ಪುಟ್ಟಿದೆಂ ಪವನವೇಗೆಯೆಂಬೆಂ ; ಬಹುರೂಪಿಣೀ ವಿದ್ಯೆಯಂ

ಮದುವೆಯನ್ನು ಮಾಡಲಾಗಿ ವಜ್ರಕುಮಾರನೂ ಇಂದುಮತಿಯೂ ಪ್ರಾಣವಲ್ಲಭರಾಗಿ ಶ್ರೇಷ್ಠವಾದ ವಿಷಯಸುಖವನ್ನು ಅನುಭವಿಸುತ್ತಿದ್ದು ಒಂದು ದಿನ ಮಣಿಕುಂಡಲ ಮೊದಲಾದ ಕುಮಾರರ ತಂಡದೊಡನೆ ಕೂಡಿ ವಾತ್ಸಲ್ಯ ಸಮುದ್ರನು ವಿಜಯಾರ್ಧ ಪರ್ವತದ ಸಿದ್ಧಕೂಟದಲ್ಲಿನ ಚೈತ್ಯಾಲಯದಲ್ಲಿ ವಂದನೆ ಸಲ್ಲಿಸಲೆಂದು ವಿಮಾನಾರೂಢನಾಗಿ ಹೋಗುತ್ತ ಹೇಮಗಿರಿಯಲ್ಲಿ ಒಬ್ಬ ವಿದ್ಯಾಧರಿಯನ್ನು, ತಲೆಯೊಂದರ ಹೊರತು, ಒಂದು ಹೆಬ್ಬಾವು ನುಂಗಿದ್ದುದನ್ನು ಕಂಡು ಸಮ್ಯಕ್ತ್ವಚೂಡಾಮಣಿ (ವಜ್ರಕುಮಾರ)ಯು ಪ್ರತಿವಿದ್ಯೆಯಿಂದ ಅದನ್ನು ಕೆಡಿಸಿ ಕಂಟಕಪರಿಹಾರ ಮಾಡಿದನು. ೧೧೨ ಆಗ ಆ ವಿದ್ಯಾಧರಿಯು ಸಂತೋಷದಿಂದ ಉಬ್ಬಿ ನೋಡಿ ಪರವಶತೆ ಹೊಂದಿ ಭಾಸ್ಕರದೇವನ ಹಿರಿಯ ಮಗನನ್ನು ಕಂಡು ಅವನ ಪಾದಗಳಿಗೆ ತನ್ನ ಕರಕಮಲಗಳನ್ನು ಜೋಡಿಸಿ ವಂದಿಸಿದಳು. ೧೧೩. ಆ ಮೇಲೆ ಅವಳು ನಮಸ್ಕಾರ ಮಾಡಿದಳು. ಅವಳನ್ನು ಕಂಡು ವಜ್ರಕುಮಾರನು "ನೀನು ಯಾರ ಮಗಳು ? ನಿನ್ನ ಹೆಸರೇನು ? ವಿದ್ಯಾಧರಿಯಾದ ನೀನು ಏನನ್ನು ಸಾಧಿಸಲೆಂದು ಬಂದೆ ?" ಎಂದು ಕೇಳಿದನು. ಆ ವಿದ್ಯಾಧರಿಯು "ಚಂದ್ರಪುರದ ಅರಸನಾದ ಗರುಡನೆಂಬ ವಿದ್ಯಾಧರರಾಜನಿಗೂ ಆತನ ಮಹಾದೇವಿ ಅನಂತಮತಿಗೂ ನಾನು ಮಗಳು. ನನ್ನ ಹೆಸರು ಪವನವೇಗೆ. ಬಹುರೂಪಿಣೀ ವಿದ್ಯೆಯನ್ನು ಸಾಧಿಸುವುದಕ್ಕೆಂದು ಬಂದು ಇಲ್ಲಿ ಸಾಧನೆ ಮಾಡುತ್ತಿದ್ದೆ.

ಸಾಧಿಸಲೆಂದು ಬಂದಿಲ್ಲಿ ಸಾಧಿಸುವುದುಮೆನಗಾ ವಿದ್ಯೆ ಸಾಧ್ಯಮಲ್ಲದೆ ವಿಘ್ನಂ ಮಾಡಲೆಂದು ಪೆರ್ಮಾವಾಗಿ ನುಂಗಿರ್ದುದು ; ನಿನ್ನ ಪ್ರಸಾದದಿಂದೊರ್ಮೆಗೆ ಬರ್ದುಕಿದೆನಲ್ಲದೆಂದುಂ ಈ ವಿಘ್ನಮನಾವಂಗಂ ಕಿಡಿಸಲ್ಬಾರದೆಂದು ತನ್ನ ವೃತ್ತಾಂತಮೆಲ್ಲಮಂ ಪೇಳ್ದು ಪ್ರಜ್ಞಪ್ತಿಯೆಂಬ ವಿದ್ಯೆಯುಮಂ ವಾತ್ಸಲ್ಯರತ್ನಾಕರಂಗೆ ಪ್ರಾರ್ಥಿಸಿ ಕೊಟ್ಟು ಮುಂದೆ ನಿಂದಿರ್ಪುದುಂ ಕುಮಾರ ನಿಂತೆಂದಂ ೧೧೪

ಎನಿತೊಳವು ವಿದ್ಯೆ ಕೇಳಿ
ನ್ನನಿತುಂ ಖಚರರ್ಗಮುಂಟು ಕೊಳ್ಪೋಗವು ಕಾ
ಮಿನಿಯರ್ಗಲ್ಲದೆ ಜಗದೊಳ್
ನಿನಗೀ ಸದ್ವಿದ್ಯೆ ಯಾವ ಕಾರಣದಿಂದಂ ೧೧೫.

ಗದ್ಯ॥ ಸಾಧ್ಯಮಾಗದೆಂದು ಬೆಸಗೊಳ್ವುದುಂ ಪವನವೇಗೆಯಿಂತೆಂದಳ್ ಸಂಜಯಂತ ಭಟ್ಟಾರಕರೆಂಬ ಮುನಿವರರ್ ವಿದೇಹದೊಳುಗ್ರಮಪ್ಪ ತಪಮಂ ಮಾಡುತುಮಿರ್ಪುದುಮವರ ಮುನ್ನಿನ ಭವದ ವೈರಿ ವಿದ್ಯುದ್ವೇಗನೆಂಬ ವಿದ್ಯಾಧರಂ ವಿದ್ಯಾವಿನೋದಾರ್ಥಂ ತೊೞಲುತ್ತೆ ವಿದೇಹದೊಳಿರ್ದ ಸಂಜಯಂತ ಯೋಗೀಶ್ವರನಂ ಕಂಡು ಕೋಪಂ ಪುಟ್ಟೆ ೧೧೬

ಘನಮುಪ್ಪಾಸರೆಮೇಲೀ
ಮುನಿಯಂ ಕೊಂಡುಯ್ದು ನೆಟ್ಟನಪ್ಪಳಿಸುವೆನೋ
ತನು ನೆಱೆ ತಗ್ಗಿಯು ನುರ್ಗ
ಪ್ಪನೆಗಂ ಮೇಗಣ್ಗೆ ನೆಗಪಿ ನೆಲಕಿಕ್ಕುವೆನೋ ೧೧೭

ನನಗೆ ಆ ವಿದ್ಯೆ ಸಾಧ್ಯವಾಗಲಿಲ್ಲ. ಅದು ನನಗೆ ವಿಘ್ನಮಾಡುವುದಕ್ಕೋಸ್ಕರ ಹೆಬ್ಬಾವಾಗಿ ಬಂದು ನುಂಗಿತ್ತು. ನಿನ್ನ ಅನುಗ್ರಹದಿಂದ ಈ ಸಲಕ್ಕೆ ಬದುಕಿದೆನೇ ಹೊರತು ಈ ವಿಘ್ನವನ್ನು ನಾಶಪಡಿಸಲು ಬೇರೆ ಯಾವನಿಗೂ ಸಾಧ್ಯವಲ್ಲ" ಎಂದು ತನ್ನ ವೃತ್ತಾಂತವನ್ನೆಲ್ಲ ಹೇಳಿ, 'ಪ್ರಜ್ಞಪ್ತಿ' ಎಂಬ ವಿದ್ಯೆಯನ್ನು ಆ ವಾತ್ಸಲ್ಯ ರತ್ನಾಕರನಿಗೆ ಸ್ವೀಕರಿಸಬೇಕೆಂದು ಪ್ರಾರ್ಥಿಸಿ ಕೊಟ್ಟು ಮುಂದೆ ನಿಂತುಕೊಂಡಿದ್ದಳು. ೧೧೪. ಆಗ ವಜ್ರಕುಮಾರನು "ವಿದ್ಯೆಗಳು ಎಷ್ಟು ಇವೆಯೋ ಅವೆಲ್ಲವೂ ಖೇಚರರಿಗೆ ಉಂಟು. ಅವು ಸೂರೆ ಹೋಗುವುದಿಲ್ಲ. ಈ ಸದ್ವಿದ್ಯೆ ನಿನಗೆ ಯಾವ ಕಾರಣದಿಂದ ವಶವಾಗಲಿಲ್ಲ ?" ಎಂದು ಪ್ರಶ್ನೆ ಮಾಡಿದನು. ಆದಕ್ಕೆ ಪವನವೇಗೆಯು ಹೀಗೆ ಹೇಳಿದಳು : "ಸಂಜಯಂತ ಭಟ್ಟಾರಕರೆಂಬ ಮುನಿಶ್ರೇಷ್ಠರು ವಿದೇಹ ರಾಜ್ಯದಲ್ಲಿ ಉಗ್ರವಾದ ತಪಸ್ಸನ್ನು ಮಾಡುತ್ತಿದ್ದರು. ಅವರ ಹಿಂದಿನ ಜನ್ಮದ ವೈರಿಯಾದ ವಿದ್ಯುದ್ವೇಗನೆಂಬ ವಿದ್ಯಾಧರನು ವಿದ್ಯಾವಿನೋದಾರ್ಥವಾಗಿ ಸಂಚರಿಸುತ್ತ ವಿದೇಹದಲ್ಲಿದ್ದ ಸಂಜಯಂತ ಯೋಗೀಶ್ವರನನ್ನು ಕಂಡನು. ಕಂಡಕೂಡಲೆ ಕೋಪ ಹುಟ್ಟಿತು. ೧೧೬. ಈ ಮುನಿಯನ್ನು ಹೊತ್ತುಕೊಂಡು ಹೋಗಿ ದೊಡ್ಡ ಬಂಡೆಯ ಮೇಲೆ ಅಪ್ಪಳಿಸಲೋ, ದೇಹವು ನುಚ್ಚುನೂರಾಗುವ ಹಾಗೆ ಮೇಲಕ್ಕೆ ಎತ್ತಿ ನೆಲಕ್ಕೆ ಕುಕ್ಕಲೋ, ೧೧೭. ಎಂದು ಯೋಚಿಸಿ ಅದು

ಗದ್ಯ॥ ಎಂದು ಬಗೆದೊಲ್ಲದೆ ಹರಿವತಿ ಗಜಾವತಿ ಕಮಳಾವತಿ ಪುಷ್ಪಾವತಿ ಚಂಡವೇಗೆ ಯೆಂಬ ಪಂಚನದೀಸಂಗಮದೊಳ್ ತಂದಿಕ್ಕುವುದುಂ ಸಂಜಯಂತಮುನೀಶ್ವರಂ ಕ್ಷಮೆಯೆಂಬ ಪೆರ್ಗೊಡಲಿಯಿಂ ದುರಿತಾಟವಿಯುಂ ತಱಿದು ಶುಕ್ಲಧ್ಯಾನಮೆಂಬ ಕಿರ್ಚಿಂ ಕರ್ಮೇಂಧನಮುಂ ಸುಟ್ಟು ಕೇವಲಜ್ಞಾನಿಯಾಗಿರ್ಪುದುಂ, ಸಕಲದೇವ ಸಮೂಹಂ ಬಂದು ಕೇವಲ ಪೂಜೆಯುಂ ಮಾಡಿ ಪಲತೆಱದಿಂ ಪರಮೇಶ್ವರನಂ ಬಣ್ಣಿಸುತ್ತುಮಿರ್ಪುದುಂ ೧೧೮

ಧರಣೇಂದ್ರಂ ಕೋಪದಿಂದಂ ಮಸಗಿ ಗಜದೆ ನಿರ್ದೋಷಿಯಂ ಧೈರ್ಯಚಾಮೀ
ಕರ ಶೈಲೇಂದ್ರಾಭನಂ ಕೆಮ್ಮನೆ ಕಲುಪದಿನೀ ಬಾಧೆಯಂ ಮಾಡಿದೀ ಖೇ
ಚರನಂ ನಿರ್ವಂಶಮಪ್ಪಂತಿರೆ ತಱಿದು ಮಹಾವಾರ್ಧಿಗುಯ್ದಿಕ್ಕುವೆಂ ಚಿ
ಚ್ಚರವೆಂಬುದ್ಯೋಗದಿಂದಂ ಕೆಳರ್ದು ನಡೆವ ದೇವೇಂದ್ರನಂ ನಾಗರಾಜಂ ೧೧೯

ಗದ್ಯ॥ ಮಾಣಿಸಿ ನಿನಗಿವರ್ ಸಮಾನರಲ್ಲರೆಂದು ಬೇಡಿಕೊಳ್ವುದುಂ, ಕೋಪಮನುಡುಗಿಸಿ ಸಂಜಯಂತ ಸ್ವಾಮಿಗಳ ಪ್ರತಿಬಿಂಬಮನಾ ನದೀ ತೀರದೊಳ್ ಮಾಡಿ ಮಣಿ ಕನಕಮಯಮಪ್ಪ ಚೈತ್ಯಾಲಯಮನೆತ್ತಿಸಿ ಖೇಚರರಿಂದು ಮೊದಲಾಗೆ ಸಮಸ್ತ ವಿದ್ಯೆಗಳುಮನಿಲ್ಲಿ ಸಾಧಿಸುವುದು ಪೆಱವೆಡೆಗಳೊಳ್ ಸಾಧಿಸಿದರಪ್ಪೊಡೆ ಸಾಧ್ಯಮಾಗದೆ ಪೋಕೆಂದು ಪ್ರತಿಜ್ಞೆಯುಂ ಮಾಡಿ ಪೋದ

ಇಷ್ಟವಾಗದೆ ಹರಿವತಿ, ಗಜಾವತಿ, ಕಮಳಾವತಿ, ಪುಷ್ಪಾವತಿ, ಚಂಡವೇಗೆ, ಎಂಬ ಐದು ನದಿಗಳ ಸಂಗಮದಲ್ಲಿ ತಂದು ಹಾಕಿದನು. ಆಗ ಸಂಜಯಂತ ಮುನೀಶ್ವರನು ಕ್ಷಮೆಯೆಂಬ ದೊಡ್ಡ ಕೊಡಲಿಯಿಂದ ಪಾಪವೆಂಬ ಕಾಡನ್ನು ಕತ್ತರಿಸಿ, ಶುಕ್ಲಧ್ಯಾನವೆಂಬ ಬೆಂಕಿಯಿಂದ ಕರ್ಮವೆಂಬ ಸೌದೆಯನ್ನು ಸುಟ್ಟು ಕೇವಲ ಜ್ಞಾನಿಯಾಗಿರಲು, ಸಮಸ್ತದೇವತೆಗಳೂ ಗುಂಪಾಗಿ ಬಂದು ಕೇವಲಿಪೂಜೆಯನ್ನು ಮಾಡಿ ಹಲವು ಬಗೆಯಿಂದ ಪರಮೇಶ್ವರನನ್ನು ಹೊಗಳುತ್ತಿದ್ದರು. ೧೧೮. ಆಗ ಧರಣೇಂದ್ರನು ಕೋಪದಿಂದ ವಿಜೃಂಭಿಸಿ ನಿರ್ದೋಷಿಯಾದ, ಮೇರುಪರ್ವತದಂಥ ಧೈರ್ಯವುಳ್ಳವನನ್ನು ನಿಷ್ಕಾರಣವಾಗಿ ಈ ಬಾಧೆಗೆ ಗುರಿಮಾಡಿದ ಖೇಚರನನ್ನು ನಿರ್ವಂಶವಾಗುವ ಹಾಗೆ ಕೊಂದು ಹಾಕಿ ಮಹಾಸಮುದ್ರಕ್ಕೆಸೆಯುವೆನೆಂದು ಪ್ರಯತ್ನ ಶೀಲನಾದಾಗ ನಾಗರಾಜನು ದೇವೇಂದ್ರನ ಆ ಪ್ರಯತ್ನವನ್ನು ಬಿಡಿಸಿ 'ಇವರೆಲ್ಲ ನಿನಗೆ ಸಮಾನರಲ್ಲ' ಎಂದು ಬೇಡಿಕೊಂಡು ಅವನ ಕೋಪವನ್ನು ಹೋಗಲಾಡಿಸಿ ಸಂಜಯಂತ ಸ್ವಾಮಿಗಳ ಪ್ರತಿಬಿಂಬವನ್ನು ಆ ನದಿಯ ತೀರದಲ್ಲಿ ಮಾಡಿ ರತ್ನಕನಕಗಳಿಂದ ತುಂಬಿದ ಚೈತ್ಯಾಲಯವನ್ನು ಕಟ್ಟಿಸಿ 'ಇಂದಿನಿಂದ ಮೊದಲುಗೊಂಡು ಖೇಚರರು ಎಲ್ಲ ವಿದ್ಯೆಗಳನ್ನೂ ಇಲ್ಲಿ ಸಾಧಿಸತಕ್ಕದ್ದು; ಬೇರೆ ಸ್ಥಳಗಳಲ್ಲಿ ಸಾಧಿಸಲು ಯತ್ನಿಸಿದರೆ ಸಾಧ್ಯವಾಗದೆ ಹೋಗಲಿ' ಎಂದು ಪ್ರತಿಜ್ಞೆ ಮಾಡಿ ಹೋದ. ಆದುದರಿಂದ ನನಗೆ ಇಲ್ಲಿ ವಿದ್ಯಾಸಾಧನೆಗೆ ವಿಘ್ನವಾಯಿತು." ಎಂದು

ನಪ್ಪುದಱಿಂದೆನಗಿಲ್ಲಿ ವಿದ್ಯೆಗೆ ವಿಘ್ನಮಾದುದೆಂದು ಪೇೞ್ದು ಸಂಜಯಂತ ಭಟ್ಟಾರಕರಲ್ಲಿಗೆ ವಂದು ಪವನವೇಗೆ ಕೊಟ್ಟ ಪ್ರಜ್ಞಪ್ತಿ ಮೊದಲಾಗೆ ಪಲವು ವಿದ್ಯೆಗಳುಮಂ ಸಾಧಿಸಿ ಕನಕಪುರಕ್ಕೆ ವಂದು ರಾಜ್ಯಲೀಲೆಯಿಂದಿರ್ದೊಂದು ದಿವಸಂ ತಮ್ಮಯ್ಯನಪ್ಪ ಭಾಸ್ಕರದೇವನಂ ೧೨೦

ನೀನಪ್ಪೊಡೆ ಖೇಚರನೈ
ಹೀನರ ತೆಱದಿಂದೆ ಭೂಚರಾಶ್ರಯಮಂ ಮ
ತ್ತೇನೆಂದು ಪೊರ್ದಿ ನಿಂದೈ
ಯಾನಂದಂ ಬೆರಸು ದೇವ ಬೆಸಸಲ್ವೇೞ್ಕುಂ ೧೨೧

ಗದ್ಯ॥ ಎನೆ ಭಾಸ್ಕರದೇವಂ ನಂದನನಂ ತೆಗೆದಪ್ಪಿಕೊಂಡು ಭರವಶದಿಂ ಮುನ್ನಿನ ತನ್ನ ಕಥೆಯನೆಲ್ಲಮನತಿಶಯಮಂ ಮಾಡಿ ತಿಳಿಪೆ ಪೇೞ್ವುದುಮಾಗಳ್ ೧೨೨

ಎಮ್ಮಜ್ಜಂ ಕೊಟ್ಟ ವಿದ್ಯಾಬಲದಿನುಱದೆ ವೀರಕ್ಕೆ ಮುಯ್ವಾಂತು ಬೇಗಂ
ನಿಮ್ಮಂ ತದ್ದೇಶದಿಂದ ಪೊಱಮಡಿಸಿ ಬೃಹತ್ತೇಜದಿಂ ರಾಜ್ಯಮಂ ಕೊಂ
ಡೆಮ್ಮಂ ಬಾಯ್ವಿಟ್ಟು ತದ್ರಾಜ್ಯಮನೆ ಬಿಸುಟು ಪೋಡಾಗಿ ಬಾಯ್ಬತ್ತಿ ಮತ್ತಂ
ತಮ್ಮೆಚ್ಚಿಂ ನೋಡೆ ಬೆಂಕೊಳ್ಳದೆ ನಿನಗೆ ನಾಂ ನಿಶ್ಚಯಂ ಪುತ್ರನಲ್ಲೆಂ ೧೨೩

ಹೇಳಿದಳು. ಆಮೇಲೆ ಸಂಜಯಂತ ಭಟ್ಟಾರಕರ ಸನ್ನಿಧಿಗೆ ಬಂದು ಪವನವೇಗೆಯು ಕೊಟ್ಟ ಪ್ರಜ್ಞಪ್ತಿ ಮೊದಲಾದ ಹಲವು ವಿದ್ಯೆಗಳನ್ನೂ ಸಾಧಿಸಿ ಕನಕಪುರಕ್ಕೆ ಬಂದು ರಾಜ್ಯಲೀಲೆಯನ್ನು ಅನುಭವಿಸುತ್ತಿದ್ದನು. ಹೀಗೆ ಕೊಂಚಕಾಲ ಕಳೆದಮೇಲೆ ತಮ್ಮ ತಂದೆಯಾದಭಾಸ್ಕರದೇವನನ್ನು ಹೀಗೆ ಪ್ರಶ್ನೆಮಾಡಿದನು. ೧೨೦ "ನೀನಾದರೆ ಖೇಚರ. ಆದರೆ ನೀನು ಹೀನರ ಹಾಗೆ ಭೂಚರರಾದ ಮನುಷ್ಯರ ಆಶ್ರಯವನ್ನು ಹೊಂದಿಕೊಂಡಿರುವೆಯೇಕೆ ? ಸ್ವಾಮಿ, ನೀವು ಇದನ್ನು ನನಗೆ ಸಂತೋಷದಿಂದ ಹೇಳಬೇಕು" ೧೨೧. ಹೀಗೆಂದು ಕೇಳಲು ಭಾಸ್ಕರದೇವನು ತನ್ನ ಮಗನನ್ನು ಬಾಚಿ ತಬ್ಬಿಕೊಂಡು ಸಂಭ್ರಮದಿಂದ ತನ್ನ ಕಥೆಯೆಲ್ಲವನ್ನೂ ವಿಶದವಾಗಿ ತಿಳಿಯ ಹೇಳಿದನು. ಆಗ ೧೨೨. "ನಮ್ಮ ಅಜ್ಜನು ಕೊಟ್ಟ ವಿದ್ಯೆಯ ಬಲದಿಂದ ವೀರತನಕ್ಕೆ ಹೆಸರು ಹೊಂದಿ ಬೇಗನೆ ನಿಮ್ಮನ್ನು ಆ ದೇಶದಿಂದ ಹೊರಡಿಸಿ ಬಹಳ ಪರಾಕ್ರಮದಿಂದ ನಮ್ಮಿಂದ ರಾಜ್ಯವನ್ನು ವಶಪಡಿಸಿಕೊಂಡು ಆ ರಾಜ್ಯವನ್ನೇ ಬಿಟ್ಟು ಅಲ್ಪರಾಗಿ ಬಾಯಿ ಒಣಗಿ ಓಡುವಂತೆ ತಾವು ಮೆಚ್ಚಿನಿಂದ ನೋಡುತ್ತಿರಲು ಅವನನ್ನು ಬೆನ್ನಟ್ಟದೆ ಹೋದರೆ ನಿಶ್ಚಯವಾಗಿಯೂ ನಾನು ನಿಮ್ಮ ಮಗನಲ್ಲ" ಎಂದು ತಂದೆಯ ಮುಂದೆ ಪ್ರತಿಜ್ಞೆಮಾಡಿ ಸಿಟ್ಟುಗೊಂಡ ಸಿಂಹದಂತೆ,

ಗದ್ಯ॥ ಎಂದು ತಂದೆಯು ಮುಂದೆ ಪೊಣ್ದು ಮಸಗಿದ ಸಿಂಹದಂತೆ ಪೊಡೆವೆತ್ತ ಪಾವಿನಂತೆ ನೊಂದ ಶರಭದಂತೆ ಸಿಕ್ಕಿದ ಪುಲಿಯಂತೆ ಕೋಪಾವಿಷ್ಟನಾಗಿ ಪರಿದು ಅಮರಾವತೀ ಪುರಮಂ ಮೂವಳಸಾಗೆ ಮುತ್ತಿಕೊಳ್ವುದುಂ ಮಂದರದೇವನಿದಿರ್ಚಿ ಕಾದಿ ತನ್ನ ಬಲವೆಲ್ಲಂ ಕಲ್ಲ ಮೇಲೆ ಬಿರ್ದ ಕಾಜಿನ ಪೇಜಿನಂತೆ ನುಗ್ಗಪ್ಪುದುಂ ಮುನಿದು ಸಮುದ್ರಬಾಣಮಂ ಬಿಡುವುದುಂ ೧೨೪

ಶರನಿಧಿಬಾಣಂ ಬರೆ ಖೇ
ಚರರಾಜಂ ಬಾಡಬಾಗ್ನಿಶರಮಂಬಿಡೆ ಬೆ
ಚ್ಚರವಾಜಲಮಂ ಪೀರ್ವುದು
ಮುರಿದೆಟ್ದು ಕನಲ್ದೊನಲ್ದು ಮಂದರ ದೇವಂ ೧೨೫

ಗದ್ಯ॥ ಉರಗಬಾಣಮಂ ಬಿಡುವುದುಮದು ವಿಷಮನುಗುಟುತ್ತುಂ ಬರೆ ೧೨೬

ಉರಗಶರಕ್ಕಿದಿರಂ ಭಾ
ಸ್ಕರದೇವಸುತಂ ಮಹೋಗ್ರ ಕೋಪಾನಲನಿಂ
ಗರುಡಾಸ್ತ್ರಮನೆಸೆವುದುಮೋ
ಸಂಶದೆ ಕಡಿಖಂಡಮಾಗಲದ ನುಂಗುವುದುಂ ೧೨೭

ಗದ್ಯ॥ ಮತ್ತಂ ಕನಲ್ದು ಮಂದರದೇವನಿಸುವ ಮೇಘಬಾಣಮಂ ವಾಯುಬಾಣದಿಂ ಪರ್ವತಾಸ್ತ್ರಮಂ ವಜ್ರಶರದಿಂ ತವೋಂಧ ಶರಮಂ ಸೂರ್ಯಸಾಯಕದಿಂ ನಿರ್ಬುದ್ಧಿಬಾಣಮಂ

ಏಟು ತಿಂದ ಹಾವಿನಂತೆ, ನೊಂದ ಶರಭದಂತೆ, ಸಿಕ್ಕಿಬಿದ್ದ ಹುಲಿಯಂತೆ, ಕೋಪದ ಆವೇಶಕ್ಕೊಳಗಾಗಿ ಓಡಿಹೋಗಿ ಅಮರಾವತೀ ಪಟ್ಟಣವನ್ನು ಮೂರು ಸುತ್ತಿನಲ್ಲಿ ಸೇನೆಯನ್ನು ನಿಲ್ಲಿಸಿ ಮುತ್ತಿಗೆ ಹಾಕಿದನು. ಮಂದರ ದೇವನು ಮುತ್ತಿದ ಸೈನ್ಯವನ್ನು ಇದಿರಿಸಿ ಯುದ್ಧಮಾಡಿದನು. ಆದರೆ ತನ್ನ ಸೈನ್ಯವೆಲ್ಲ ಕಲ್ಲಿನಮೇಲೆ ಬಿದ್ದ ಗಾಜಿನ ಹೇರಿನಂತೆ ನಷ್ಟವಾಯಿತು. ಆಗ ಅವನು ಸಿಟ್ಟಾಗಿ ಸಮುದ್ರ ಬಾಣವನ್ನು ಬಿಟ್ಟನು. ೧೨೪. ಸಮುದ್ರಬಾಣವು ಬರಲು ಖೇಚರರಾಜನು ಬಡಬಾಗ್ನಿ ಶರವನ್ನು ಬಿಡುತ್ತಲೇ ಬೇಗನೆ ಆ ನೀರನ್ನೆಲ್ಲ ಹೀರಿಕೊಂಡು ಬಿಟ್ಟಿತು. ಆಗ ಮಂದರದೇವನು ಉರಿದೆದ್ದು ಕೋಪದಿಂದ ಮಸಗಿ ಉರಗಬಾಣವನ್ನು ಬಿಟ್ಟನು. ಅದು ವಿಷವನ್ನು ಉಗುಳುತ್ತ ಬಂದಿತು. ೧೨೫–೨೬. ಉರಗಬಾಣಕ್ಕೆ ವಿರೋಧವಾಗಿ ಭಾಸ್ಕರದೇವಪುತ್ರನು ಮಹಾ ಉಗ್ರವಾದ ಕೋಪಾಗ್ನಿಯಿಂದ ಮಸಗಿ ಗರುಡಾಸ್ತ್ರವನ್ನು ಪ್ರಯೋಗಿಸಿದನು. ಅದು ಉರಗಬಾಣವನ್ನು ಲಕ್ಷ್ಯಮಾಡದೆ ಚೂರುಚೂರಾಗಿ ಕತ್ತರಿಸಿ ನುಂಗಿಬಿಟ್ಟಿತು. ೧೨೭. ಅಲ್ಲದೆ ಪುನಃ ಕೋಪಗೊಂಡು ಮಂದರದೇವನು ಹೊಡೆದ ಮೇಘಬಾಣವನ್ನು ವಾಯು ಬಾಣದಿಂದಲೂ, ಪರ್ವತಾಸ್ತ್ರವನ್ನು ವಜ್ರಾಸ್ತ್ರದಿಂದಲೂ ಕತ್ತಲೆಯ ಬಾಣವನ್ನು ಸೂರ್ಯ ಬಾಣದಿಂದಲೂ ನಿರ್ಬುದ್ಧಿ (ಬುದ್ಧಿನಾಶಕ) ಬಾಣವನ್ನು ಮತಿಶರ ಸಮೂಹ

ಮತಿಶರಾಳಿಯಿಂ ಗೆಲ್ವುದುಂ ಮಂದರದೇವಂ ನಿಲಲಾಱದೀತಂ ಸಾಮಾನ್ಯ ಪುರುಷನಲ್ಲೆಂದು-
ಬೆರ್ಚಿ ಪ್ರಾಣಭಯದಿಂದೋಡುವುದುಂ ಅಮರಾವತೀ ಪುರಮಂ ಮಹಾವಿಭೂತಿಯಿಂ ಪೊಕ್ಕು
ತಮ್ಮಯ್ಯನ ರಾಜ್ಯ ಪದವಿಯೊಳ್ ನಿಂದು ಮಹಾಮಹಿಮೆಯುಮಂ ತಾಳ್ದಿ ತಂದೆಯುಮಂ
ತಾಯುಮಂ ಪೆಂಡಿರುಮಂ ಬರಿಸಿ ಖೇಚರ ರಾಜ್ಯಲಕ್ಷ್ಮೀ ವಲ್ಲಭನಾಗಿ ೧೨೮

ಜಿನನಾಥಾರ್ಚನೆಯಿಂ ಜಿನಾಭಿಷವದಿಂದಾಹಾರ ಭೈಷಜ್ಯಶಾ
ಸ್ತ್ರನಯೋಪಾರ್ಜಿತಮಪ್ಪ ಸಂದಭಯಮೆಂಬೀನಾಲ್ಕುಮೊಳ್ದಾನದಿಂ
ಮುನಿಪಾಂಘ್ರಿದ್ವಯ ಸೇವೆಯಿಂ ಜಿನಕಥಾಲಾಪಂಗಳಿಂ ಕಾಮಿನೀ
ಜನಕಂದರ್ಪನುತ್ತಮ ನಿರ್ಮಲ ಯಶಂ ವಾತ್ಸಲ್ಯರತ್ನಾಕರಂ ೧೨೯

ಗದ್ಯ॥ ಅಂತು ರಾಜ್ಯಂಗೆಯ್ಯುತ್ತುಮಿರ್ಪನ್ನೆಗಂ ಚಂದ್ರಪುರಾಧಿಪತಿಯಪ್ಪ ಗರುಡವೇಗ ವಿದ್ಯಾಧರರಾಜಂ ತನ್ನ ಮಗಳಪ್ಪ ಪವನವೇಗೆಗೆ ಮದುವೆಯಂ ಮಾಡಲೆಂದು ಸ್ವಯಂವರ ಶಾಲೆಯಂ ಮಾಡಿಸಿ ತಡೆಯದುಭಯಶ್ರೇಢಿಯ ವಿದ್ಯಾಧರರರ್ಗೆಲ್ಲಂ ಬಟ್ಟಿಯಟ್ಟಿ ವಜ್ರ ಕುಮಾರಂಗಂ ಬಟ್ಟಿಯಟ್ಟುವುದುಂ, ಗರುಡವೇಗನ ದೂತರ್ಬಂದು ಕಂಡು ಪೊಡೆಮಟ್ಟು ತಮ್ಮ ಬಂದ ಕಾರ್ಯಮಂ ಬಿನ್ನಪಂಗೆಯ್ವುದುಂ ೧೩೦

ದಿಂದಲೂ ಹೊಡೆದು ಗೆದ್ದನು. ಆಗ ಮಂದರದೇವನು ನಿಲ್ಲಲಾರದೆ 'ಈತನು ಸಾಮಾನ್ಯ ಪುರುಷನಲ್ಲ' ಎಂದು ಬೆದರಿ ಪ್ರಾಣಭಯದಿಂದ ಓಡಿದನು. ಆಗ ಅಮರಾವತೀ ಪಟ್ಟಣ ವನ್ನು ಮಹಾ ವೈಭವದಿಂದ ಪ್ರವೇಶಿಸಿ ತಮ್ಮ ತಂದೆಯ ರಾಜ್ಯ ಪದವಿಯಲ್ಲಿ ನಿಂತು ಮಹತ್ತರವಾದ ಮಹಿಮೆಯನ್ನು ಧರಿಸಿ ತಂದೆತಾಯಿಗಳನ್ನೂ ಹೆಂಡಿರನ್ನೂ ಕರೆಯಿಸಿ ಖೇಚರ ರಾಜ್ಯಲಕ್ಷ್ಮಿಗೆ ವಲ್ಲಭನಾದನು ೧೨೮. ಜಿನನಾಥನ ಪೂಜೆ, ಜಿನಾಭಿಷೇಕ, ಆಹಾರ ಔಷಧ, ಶಾಸ್ತ್ರ ಮತ್ತು ಅಭಯದಾನಗಳೆಂಬ ಈ ನಾಲ್ಕು ಶ್ರೇಷ್ಠದಾನಗಳಿಂದಲೂ ಮುನಿಪನ ಪಾದದ್ವಯ ಪೂಜೆಯಿಂದಲೂ ಜಿನಕಥೆಯ ಮಾತುಗಳಿಂದಲೂ ಕಾಮಿನೀ ಜನಕ್ಕೆ ಕಂದರ್ಪನಾದ, ಉತ್ತಮ ನಿರ್ಮಲ ಯಶಸ್ಸನ್ನು ಪಡೆದ, ವಾತ್ಸಲ್ಯ ರತ್ನಾಕರನು ವೈಭವದಿಂದ ಶೋಭಿಸಿದನು ೧೨೯. ಹಾಗೆ ರಾಜ್ಯಭಾರ ಮಾಡುತ್ತಿರುವಾಗ ಚಂದ್ರ ಪುರದ ದೊರೆಯಾದ ಗರುಡವೇಗನೆಂಬ ಖೇಚರರಾಜನು ತನ್ನ ಮಗಳು ಪವನವೇಗೆಗೆ ಮದುವೆ ಮಾಡಬೇಕೆಂದು ಯೋಚಿಸಿ ಸ್ವಯಂವರ ಶಾಲೆಯನ್ನು ಕಟ್ಟಿಸಿ ಒಡನೆಯೇ ಉಭಯಶ್ರೇಢಿಗಳ ವಿದ್ಯಾಧರರಿಗೆಲ್ಲ ಹೇಳಿಕಳುಹಿಸಿ ವಜ್ರಕುಮಾರನಿಗೂ ಕರೆ ಕಳುಹಿಸಿ ದನು. ಗರುಡವೇಗನ ದೂತರು ಬಂದು ಕಂಡು ನಮಸ್ಕಾರ ಮಾಡಿ ತಾವು ಬಂದ ಕೆಲಸವನ್ನು ಬಿನ್ನಹ ಮಾಡಿದರು. ೧೩೦. ವಜ್ರಕುಮಾರನು ಸಂತೋಷಪಟ್ಟು

ಬೇಗಂ ವಜ್ರಕುಮಾರಂ
ರಾಗಿಸೆ ದೂತರ್ಗೆ ಸಂತಸಂ ಪಿರಿದಪ್ಪಂ
ತಾಗೆ ಕರಮುತ್ಸವಂಬೆರ
ಸಾಗಳ್ ಕೊಟ್ಟಂಗಚಿತ್ರಮಂ ತಕ್ಷಣದಿಂ ೧೩೦

ಗದ್ಯ॥ ಅಂತಮರಾವತೀಪುರಮಂ ಪೊಱಮಟ್ಟು ಚಂದ್ರಪುರಮನೆಯ್ದಿ ನೆರೆದ ವಿದ್ಯಾಧರ ವಲ್ಲಭರೊಡನೆ ಬಿಟ್ಟಿರೆ ಗರುಡವೇಗಂ ಮಱುದಿವಸಂ ಸಮಸ್ತ ವಿದ್ಯಾಧರನಾಯಕರುಮೆಯ್ದಿಂ ಮೆಂದು ಸಾಱುವುದುಂ ೧೩೧

ತನ್ನಗ್ರಾತ್ಮಜೆಯಂ ನವ
ಭಿನ್ನಾಂಬುಜಮುಖಿಯನಮಲ ಗುಣಗಣಯುತೆಯಂ
ಕನ್ನೆಯನಭಿನವಮೆಸಿಸುವ
ಚೆನ್ನೆಯನಗ್ಗಳದ ಪವನವೇಗೆಯನಾಗಳ್ ೧೩೨

ಕಡಗ ಕಂಕಣ ಹಾರನೂಪುರಮಾದಿ ಭೂಷಣ ರಾಜಿಯಂ
ತುಡಿಸಿ ಚೀನಮನರ್ತಿಯಿಂ ಮೃದುವಪ್ಪುದಂ ಮುದದಿಂದೆ ತಂ
ದುಡಿಸಿ ಕುಂಕುಮ ಚಂದನಾದಿ ಸುಗಂಧ ವಸ್ತುಗಳಂ ಮನಂ
ಬಿಡೆ ಮನೋಹರವಾಗಿ ಪೂಸಿ ವಿಲಾಸದಿಂ ಕಡುರಾಗದಿಂ ೧೩೪

ಗದ್ಯ॥ ನೆಱೆಯೆ ಪಸದನಂಗೊಳಿಸಿ ಪೊನ್ನವಿಮಾನಮನೇಱಿಸಿ ಮಂಗಳತೂರ್ಯರವ ಮೆಸೆಯೆ ಖೇಚರರ ಸೈನ್ಯಂ ಸುತ್ತಂ ಬರೆ ವಿದ್ಯಾಧರಕುಮಾರಿಯರ್ಕೆಲದೊಳಮಿರ್ದು ಪೊನ್ನ

ದೂತರಿಗೆ ಹೆಚ್ಚಿನ ಸಂತೋಷವಾಗುವಂತೆ ಧಾರಾಳವಾಗಿ ಪಾರಿತೋಷಕವನ್ನು ಕೊಟ್ಟನು. ೧೩೧. ಕೂಡಲೆ ಅಮರಾವತೀಪುರದಿಂದ ಹೊರಟು ಚಂದ್ರಪುರವನ್ನು ಸೇರಿ, ಸೇರಿದ್ದ ವಿದ್ಯಾಧರ ರಾಜರೊಡನೆ ಬೀಡುಬಿಟ್ಟನು. ಮಾರನೆ ದಿನ ಗರುಡವೇಗನು ಸಮಸ್ತ ವಿದ್ಯಾಧರರಾಜರನ್ನೂ ಬನ್ನಿರೆಂದು ಸಾರಿದನು ೧೩೨. ಅವನು ತನ್ನ ದೊಡ್ಡ ಮಗಳನ್ನು ಹೊಸದಾಗಿ ಅರಳಿದ ಕಮಲದಂಥ ಮುಖವುಳ್ಳ, ಪರಿಶುದ್ಧವಾದ ಗುಣಸಮೂಹದಿಂದ ಕೂಡಿದವಳಾದ, ಕನ್ಯೆಯಾದ, ಅಭಿನವ ಸುಂದರಿಯಾದ, ಶ್ರೇಷ್ಠಳಾದ ಪವನವೇಗೆ ಯನ್ನು ೧೩೩. ಕಡಗ, ಬಳೆ, ಹಾರ ನೂಪುರವೇ ಮೊದಲಾದ ಆಭರಣಸಮೂಹವನ್ನು ತೊಡಿಸಿ ಮೃದುವಾದ ಚೀನಾಂಬರವನ್ನು ಪ್ರೀತಿಯಿಂದ ತಂದು ಉಡಿಸಿ, ಕುಂಕುಮ ಚಂದನಾದಿ ಪರಿಮಳ ದ್ರವ್ಯಗಳನ್ನು ಲೇಪಿಸಿ ಬಹಳ ಪ್ರೀತಿಯಿಂದ ಸೊಗಸಾಗಿ ಅಲಂಕಾರ ಮಾಡಿ, ಚಿನ್ನದ ವಿಮಾನವನ್ನೇರಿಸಿ ಮಂಗಳವಾದ್ಯಧ್ವನಿಯು ಶೋಭಿಸುತ್ತಿರಲು, ಖೇಚರರ ಸೈನ್ಯ ಸುತ್ತಲೂ ಬರಲು, ವಿದ್ಯಾಧರ ಕುಮಾರಿಯರು ಪಕ್ಕದಲ್ಲಿ ಇದ್ದು

ಚಾಮರವನಿಕ್ಕೆ ಮಹೋತ್ಸವಂ ಬೆರಸು ಸ್ವಯಂವರ ಭೂಮಿಗೆ ವರ್ಪುದುಂ ಪವನವೇಗೆ ಮುನ್ನಿನ ಪ್ರತಿಜ್ಞೆಯಂ ನೆನೆದು ತರತರದೋಳಿಯೊಳಿರ್ದ ವಿದ್ಯಾಧರ ಕುಮಾರರಂ ನೋಡುತ್ತೆ ಬಂದು ವಜ್ರಕುಮಾರನಂ ಕಂಡು ೧೩೫

ಮಾರನ ಶರದಳ್ಳಿಱಿಂ
ದೋರಂತಿರೆ ನೊಂದು ಸೋಲದಿಂದಂತಾಗಳ್
ವಾರಿರುಹಾನನೆ ವಜ್ರಕು
ಮಾರಂಗಂ ಕೂರ್ತು ಮಾಲೆಸೂಡಿದಳಾಗಳ್ ೧೩೬

ಸರಸಿರುಹಾನನೆ ವಿದ್ಯಾ
ಧರರಂ ಕೈಕೊಳ್ಳದುಱಿದೆ ವಜ್ರಕುಮಾರಂ
ಗೆರಡಿಗೆಲ್ಲದೋತಳೆದಱಿಂ
ಧರೆಯೊಳ್ ಭಾಗ್ಯಾಧಿಕಂಗದಾವುದು ಗಹನಂ ೧೩೭

ಗದ್ಯ॥ ಅಂತು ನೆರೆದ ಖೇಚರರೆಲ್ಲಂ ಸಿಗ್ಗಾಗಿ ಪರಿದುಪೋಗೆಯುಂ ಸಮ್ಯಕ್ತ್ವಚೂಡಾಮಣಿ ಮದುವೆನಿಂದು ಮಹೋತ್ಸವದಿಂದಮರಾವತೀಪುರಕ್ಕೆವಂದು ಮಹಾವಿಭೂತಿಯಿಂದರಮನೆ ಯಂ ಪೊಕ್ಕು ಸುಖದಿಂದಿರ್ಪುದುಂ ೧೩೮

ಕೊಂಡು ಚಿನ್ನದ ಚಾಮರಗಳಿಂದ ಗಾಳಿ ಹಾಕುತ್ತಿರಲಾಗಿ ವೈಭವದಿಂದ ಸ್ವಯಂವರ ಭೂಮಿಗೆ ಕರೆತಂದರು. ಪವನವೇಗೆಯು ಮೊದಲಿನ ಪ್ರತಿಜ್ಞೆಯನ್ನು ಸ್ಮರಿಸಿಕೊಂಡು ಅನೇಕ ಸಾಲುಗಳಲ್ಲಿದ್ದ ವಿದ್ಯಾಧರಕುಮಾರರನ್ನು ನೋಡುತ್ತ ಬಂದು ವಜ್ರಕುಮಾರ ನನ್ನು ನೋಡಿದಳು. ೧೩೫. ಮನ್ಮಥನ ಬಾಣದ ಪೆಟ್ಟಿನಿಂದ ಹೆಚ್ಚಾಗಿ ನೊಂದು ಆ ಕಮಲಮುಖಿಯು ಆಕರ್ಷಣೆಯಿಂದ ವಜ್ರಕುಮಾರನಿಗೆ ಒಲಿದು ಮಾಲೆಹಾಕಿದಳು. ೧೩೬. ಕಮಲಮುಖಿಯು ವಿದ್ಯಾಧರರನ್ನು ಒಪ್ಪದೆ, ಲಕ್ಷ್ಯಮಾಡದೆ, ಬೇರೆ ಯೋಚ ನೆಯೇ ಇಲ್ಲದೆ ವಜ್ರಕುಮಾರನಿಗೆ ಒಲಿದಳು. ಆದರಿಂದ ಭಾಗ್ಯಶಾಲಿಗೆ ಯಾವುದು ತಾನೆ ಕಷ್ಟ? ೧೩೭. ಹಾಗೆ ಸೇರಿದ್ದ ಖೇಚರರೆಲ್ಲರೂ ಅವಮಾನಗೊಂಡು ಹೋದರು, ಸಮ್ಯಕ್ತ್ವಚೂಡಾಮಣಿಯು ಮದುವೆಯಾಗಿ ಸಂತೋಷದಿಂದ ಅಮರಾವತೀಪುರಕ್ಕೆ ಬಂದು ಮಹಾ ವೈಭವದಿಂದ ಅರಮನೆಯನ್ನು ಪ್ರವೇಶಮಾಡಿ ಸುಖದಿಂದಿದ್ದನು. ೧೩೮. ಮನ್ಮಥನಂತೆ ರೂಪಶಾಲಿ, ವೈಭವದಲ್ಲಿ ಇಂದ್ರ, ಪ್ರಬಲ ವಿರೋಧಿಗಳ ದರ್ಪ

ಸ್ಮರರೂಪಂ ವಿಭವಪುರಂ
ದರನುಗ್ರವಿರೋಧಿದರ್ಪದಳನಂ ವಿದ್ಯಾ
ಧರವಂದ್ಯನೆಂದು ವಿದ್ಯಾ
ಧರರೆಲ್ಲಂ ಕೂರ್ಮೆಯಿಂದ ಮಾತ್ಸ್ಯಾದರದಿಂ ೧೪೯

ಗದ್ಯ॥ ತಂತಮ್ಮ ಮಕ್ಕಳಂ ತಂದು ಕುಡುವುದುಂ, ಸೌಂದರಿ ಅನಂಗಮಾಲೆ ವಿಜಯೆ ಅನಂಗ ಸೌಂದರಿ ಸುಪ್ರಭೆ, ವಿದ್ಯುದ್ವೇಗೆ, ವಿಜಯಾವತಿ ರತ್ನಸೌಂದರಿಯೆಂಬಿವರ್ಮೊದಲಾಗೆ ಪಲರುಂ ವಿದ್ಯಾಧರಕುಮಾರಿಯರೊಳ್ ಕೂಡಿ ಸಂತೋಷದಂತಮನೆಯ್ದಿ ರಾಜ್ಯಲೀಲೆಯಿಂ ಪಲಕಾಲ ಮಿರ್ದೊಂದು ದಿವಸಂ ೧೫೦

ಕರಿಘಟೆಯುಂ ಹಯಪ್ರತತಿಯುಂ ಭಟಕೋಟಿಯುಮೊಪ್ಪೆ ಸುತ್ತಲುಂ
ಬರೆ ಲಲಿತಾಂಗಿಯರ್ ಪದೆದು ಮೆಲ್ಲನೆ ಚಾಮರಮಿಕ್ಕೆ ಮೇಘಡಂ
ಬರಮೊಳವಟ್ಟು ಶೋಭಿಸೆ ವಿಯಚ್ಚರನಾಯಕರತ್ತಲಿತ್ತಲೋ
ಸರಿಸದೆ ಕೂರ್ತು ಪೊರ್ದಿಬರೆ ಗಂಧಗಜೇಂದ್ರಮನೇರಿ ಲೀಲೆಯಿಂ ೧೫೧

ಗದ್ಯ॥ ಬರ್ಪ ವಜ್ರಕುಮಾರನಂ ರತ್ನಮಯಮಪ್ಪ ಕಱುಮಾಡದಮೇಲೆ ವಿಳಾಸಿನೀ ಜನಮುಂ ಸೊಸೆದಿರುಂಬೆರಸು ಕುಳ್ಳಿರ್ದ ಮಣಿಮಾಲೆ ಮಹಾದೇವಿ ಕಂಡು ಮುಯ್ಯಂನೋಡಿ ರಾಗದಿಂ ವಿಳಾಸಿನಿಯರ್ಗಿಂತೆಂದಳ್ ೧೫೨

ವನ್ನು ಭಂಗಪಡಿಸಿದವನು ವಿದ್ಯಾಧರರಿಗೆಲ್ಲ ವಂದ್ಯನು, ಎಂದು ವಿದ್ಯಾಧರರೂ ಸಮಸ್ತರೂ ಪ್ರೀತ್ಯಾದರಗಳಿಂದ ಹೊಗಳಿದರು. ೧೪೯. ಹಾಗೆ ಹೊಗಳಿ ತಮ್ಮ ತಮ್ಮ ಕನ್ಯೆಯರನ್ನು ತಂದುಕೊಟ್ಟರು. ಸೌಂದರಿ, ಅನಂಗಮಾಲೆ, ವಿಜಯೆ, ಅನಂಗಸೌಂದರಿ, ಸುಪ್ರಭೆ ವಿದ್ಯುದ್ವೇಗೆ, ವಿಜಯಾವತಿ, ರತ್ನಸೌಂದರಿ, ಎಂಬ ಇವರೇ ಮೊದಲಾದ ಹಲವರು ವಿದ್ಯಾಧರ ಕುಮಾರಿಯರೊಡನೆ ಕೂಡಿ ಸಂತೋಷದ ತುಂದಿಯನ್ನೇರಿ ರಾಜ್ಯಲೀಲೆ ಯಿಂದ ಬಹಳ ಕಾಲ ಕಳೆದನು. ೧೫೦. ಒಂದು ದಿನ ವಜ್ರಕುಮಾರನು ಮದಿಸಿದ ಆನೆಯನ್ನೇರಿ ಮೆರೆವಣಿಗೆ ಹೊರಟನು. ಆ ಉತ್ಸವದಲ್ಲಿ ಆನೆಗಳ ಸೈನ್ಯ, ಕುದುರೆಗಳ ಸಮೂಹ, ಪದಾತಿ ಸೈನ್ಯವೂ ಸುತ್ತಲೂ ಶೋಭಿಸುತ್ತಿರಲು, ಸುಂದರಾಂಗಿಯರು ಅವನಿಗೆ ಚಾಮರ ಹಾಕುತ್ತಿದ್ದರು. ಮೇಘಧ್ವನಿಯ ಹಾಗೆ ವಾದ್ಯದ ಮೊಳಗು ಕೇಳು ತ್ತಿತ್ತು. ಖೇಚರನಾಯಕರು ಆಚೆ, ಈಚೆ, ಹೋಗದೆ. ಸ್ನೇಹದಿಂದ ಹೊಂದಿಕೊಂಡು ಬರುತ್ತಿದ್ದರು ೧೫೧. ಹಾಗೆ ವೈಭವದಿಂದ ಬರುತ್ತಿದ್ದ ವಜ್ರಕುಮಾರನನ್ನು ರತ್ನ ಮಯವಾದ ಉಪ್ಪರಿಗೆಯ ಮೇಲೆ ವಿಳಾಸಿಜನರಿಂದಲೂ ಸೊಸೆಯರಿಂದಲೂ ಕೂಡಿ ಕುಳಿತಿದ್ದ ಮಹಾದೇವಿ ಮಣಿಮಾಲೆಯು ನೋಡಿ ಅತ್ತಿತ್ತ ಗಮನಿಸಿ ಸಂತೋಷದಿಂದ ವಿಲಾಸಿನೀ ಜನಕ್ಕೆ ಹೀಗೆಂದಳು : ೧೫೨. "ಸಮುದ್ರದೊಳಗೆ ಇದ್ದ ರತ್ನ ಸಮೂಹವೂ

ಶರಧಿಯೊಳಗಿರ್ದ ರತ್ನೋ
ತ್ಕರಮುಂ ತಮ್ಮಿಂದೆ ತಾವೆ ಬಾರವೆ ಪುಣ್ಯಂ
ದೊರೆಕೊಳೆ ಕೇಳವು ತಾವ
ಚ್ಚರಿಯಾದುವೆ ಪುಣ್ಯದಿಂದಮಾಗದುದುಂಟೇ ೧೪೩

ಗದ್ಯ॥ ಅಪುಷ್ಪಿತಫಲಭಾಗಿನಿಯಾದೆನೆನ್ನಿಂದಂ ಬಿಟ್ಟು ಕೃತಾರ್ಥರಿಲ್ಲೆಂದು ನಲಿದು ಮಾತಾಡು ವುದುಮಾ ಮಾತಂ ಪವನವೇಗೆ ಕೇಳ್ದು ವಿಸ್ಮಯಂಬಟ್ಟು ವಜ್ರಕುಮಾರಂಗೆ ರಾತ್ರಿ ಸಮಯ ದೊಳ್ ಅಱಿಪುವುದುಂ ಸಮ್ಯಕ್ತ್ವಚೂಡಾಮಣಿ ಕೇಳ್ದು ಮಱುದಿವಸಂ ತಮ್ಮಬ್ಬೆಯಲ್ಲಿಗೆ ವಂದು ಕಿಱಿಬೆಸಗೊಂಡು ತನ್ನ ವೃತ್ತಾಂತಮೆಲ್ಲಮಂ ಲೇಸಾಗಱಿದು ತನ್ನೊಳಿಂತೆಂದಂ ೧೪೪

ನೀರ ಬೊಬ್ಬುಳಿಕೆ ಭಾವಿಪಂದು ಸಂ
ಸಾರಮಿಂದ್ರಧನುವೆಂತುಟಂತೆ ಸ
ಚ್ಛರೀರಮಾಗೆ ತನು ಬೀಟಲಿರ್ದ ಧಾ
ತ್ರೀರುಹಂಬೊಲಳಿಗುಂ ನಿರಂತರಂ ೧೪೫

ಸ್ತ್ರೀಯರೊಂದು ಕಡುಗೂರ್ಮೆ ನೋಟ್ಪೊಡಂ
ಮಾಯಮಿಂದ್ರಿಯಸುಖಂಗಳಿಂಬೊಡಿಂ
ನಾಯಬಾಲಮಳಿಪಿಂದಮೇಕೆ ಕೇಳ್
ವಾಯುಮಂ ಸ್ಥಿರಮಿದೆಂದು ನಂಬುವರ್ ೧೪೬

ತಮ್ಮಿಂದ ತಾವೇ ಬರುವುದಿಲ್ಲವೆ? ಪುಣ್ಯವಿದ್ದರೆ ಅವು ಲಭಿಸುವುದು ಆಶ್ಚರ್ಯವಾದೀತೆ? ಪುಣ್ಯದಿಂದ ಆಗದುದೂ ಉಂಟೆ ? ೧೪೩. ಹೂ ಬಿಡದ ಫಲಕ್ಕೆ ಭಾಗಿನಿಯಾದೆ. ನನ್ನ ಹೊರತು ಬೇರೆ ಕೃತಾರ್ಥರಿಲ್ಲ" ಎಂದು ಉತ್ಸಾಹದಿಂದ ಮಾತನಾಡಲು ಆ ಮಾತನ್ನು ಪವನವೇಗೆಯು ಕೇಳಿ ಆಶ್ಚರ್ಯಪಟ್ಟಳು. ಆ ಸುದ್ದಿಯನ್ನು ರಾತ್ರಿ ವಜ್ರಕುಮಾರನಿಗೆ ತಿಳಿಸಿದಳು. ಸಮ್ಯಕ್ತ್ವ ಚೂಡಾಮಣಿಯು ಅದನ್ನು ಕೇಳಿ ಮಾರನೆಯ ದಿನ ತನ್ನ ತಾಯಿಯ ಬಳಿಗೆ ಬಂದು ಸ್ವಲ್ಪ ಹೊತ್ತು ಸಂಭಾಷಣೆ ನಡೆಸಿ ತನ್ನ ವೃತ್ತಾಂತ ವೆಲ್ಲವನ್ನೂ ಚೆನ್ನಾಗಿ ತಿಳಿದುಕೊಂಡು ತನ್ನಲ್ಲಿಯೇ ಹೀಗೆಂದುಕೊಂಡನು: ೧೪೪. ಭಾವಿಸಿ ದರೆ ಸಂಸಾರವು ನೀರ ಮೇಲಿನಗುಳ್ಳೆ. ಅದು ಇಂದ್ರಧನುಸ್ಸು (ಕಾಮನಬಿಲ್ಲು) ಹೇಗೋ ಹಾಗೆ ! ಸಚ್ಛರೀರ ? ವಾಗಲು ದೇಹವು ಬೀಳಲಿರುವ ಮರದಂತೆ, ತಪ್ಪದೆ ಹಾಳಾಗು ತ್ತದೆ. ೧೪೫. ಸ್ತ್ರೀಯರ ಹೆಚ್ಚಿನ ಪ್ರೇಮವನ್ನು ನೋಡಿದರೂ ಮಾಯೆ. ಇಂದ್ರಿಯ ಸುಖಗಳು ನಾಯಿಬಾಲ. ಆಸೆಯಿಂದ ಈ ಮೋಸವನ್ನೇ ಸ್ಥಿರವೆಂದು ಜನ ಏಕೆ ನಂಬು ತ್ತಾರೆಯೊ ! ೧೪೬. ಹಿಂದೆ, ಇದುವರೆಗೆ, ದಡ್ಡತನದಿಂದ, ನನ್ನ ಕರ್ಮವಶದಿಂದ ಇದ್ದೆ.

ಮುನ್ನಮಿನ್ನವರೆಗಂ ಜಡತ್ವದಿಂ
ದೆನ್ನ ಕರ್ಮವಶದಿಂದಮಿರ್ದೆನಿ
ನ್ನೆನ್ನನಾನಱಿದು ರಾಜ್ಯಮೋಹದೊಂ
ದುನ್ನತಿಕ್ಕೆವೆರಸಿರ್ಪುದೊಪ್ಪವೇ ೧೪೭

ದೇಹಮಂ ಧನಮನಿಂದ್ರಿಯಂಗಳಂ
ನೇಹಮಂ ವನಿತೆಯರ್ಕಳಂ ಮಹಾ
ಮೋಹದಿಂ ಪಿಡಿದು ಧರ್ಮದೊಂದು ಸತ್
ಸ್ನೇಹಮಂ ಬಿಡುವುದೇನದೊಳ್ಳಿತೇ ೧೪೮

ಗದ್ಯ॥ ಎಂದು ಸಂಸಾರದೊಳಾದ ಭೋಗೋಪಭೋಗಂಗಳ್ಗೆ ಪೇಸಿ ಜಗನ್ಮಾಂಗಲ್ಯಮಪ್ಪ ಜಿನರೂಪಂ ಧರಿಯಿಸುವೆನೆಂಬ ಕಜ್ಜಮನೆತ್ತಿಕೊಂಡು ಭಾಸ್ಕರದೇವಂಗಂ ಮಣಿಮಾಲೆಗಮಱಿಪುವುದುಮವರಿಂತೆಂದರ್ ೧೪೯

ಬೇಡ ಮರುಳ್ತನಮಂ ನೀಂ
ಮಾಡದೆ ಪೆತ್ತನಗೆ ಕಱುವೆ ಮಱುಕಮನೋವಿಂ
ಮಾಡದೆ ಕೇಳ್ಸಂತಸಮಂ
ಮಾಡುವೊಡೀ ಮಾತನೆಯ್ದೆ ಮಾಣ್ಬುದು ಮಗನೇ ೧೫೦

ಇನ್ನು ನಾನು ನನ್ನನ್ನು ಅರಿತುಕೊಂಡು ರಾಜ್ಯಮೋಹದ ಒಂದು ಹೆಚ್ಚಳಕ್ಕೆ ಆಸೆಪಟ್ಟು ಇರುವುದು ಶೋಭಾಯಮಾನವೆ ? ೧೪೭. ದೇಹವನ್ನೂ ಧನವನ್ನೂ ಇಂದ್ರಿಯಗಳನ್ನೂ ಸ್ನೇಹವನ್ನೂ ಹೆಂಡಿರನ್ನೂ ಅತ್ಯಂತವಾದ ಮೋಹದಿಂದ ಹಿಡಿದು ಧರ್ಮದ ಒಂದು ಒಳ್ಳೆಯ ಸ್ನೇಹವನ್ನು ಬಿಡುವುದು, ಅದೇನು ಒಳ್ಳೆಯದೆ ? ೧೪೮. ಹೀಗೆ ಯೋಚಿಸಿ ಸಂಸಾರದಲ್ಲಿ ಲಭಿಸುವ ಭೋಗೋಪಭೋಗಗಳಿಗೆ ಹೇಸಿಕೆಪಟ್ಟು ಜಗತ್ತಿಗೇ ಮಂಗಳಕರವಾದ ಜಿನರೂಪವನ್ನು ಧರಿಸುತ್ತೇನೆ, ಎಂಬ ಉದ್ದೇಶದಿಂದ ಭಾಸ್ಕರದೇವನಿಗೂ ಮಣಿ ಮಾಲೆಗೂ ತಿಳಿಸುತ್ತಲೇ, ಅವರು ಹೀಗೆ ಹೇಳಿದರು ೧೪೯. "ದಡ್ಡತನವನ್ನು ಮಾಡಬೇಡ. ಹೆತ್ತ ನನಗೆ, ಮಗನೇ, ಸಂಕಟವನ್ನುಂಟುಮಾಡದೆ, ಸಂತೋಷವನ್ನು ಮಾಡುವುದಾದರೆ ನನ್ನ ಈ ಮಾತನ್ನು ಕೇಳು. ಈ ಪ್ರಯತ್ನವನ್ನು ಕೈಬಿಡತಕ್ಕದ್ದು" ೧೫೦ ನಿನಗೆ ಸಾಮರ್ಥ್ಯವಿದ್ದಷ್ಟೂ ಜಿನಪೂಜೆಗಳನ್ನು ಪ್ರೀತಿಯಿಂದ ಮಾಡು.

ಜಿನಪೂಜೆಗಳಂ ನಿನ್ನಾ
ರ್ಜನಿತಂ ಮಾಡರ್ತಿಯಿಂದ ಕೃತ್ರಿಮಜಿನ ಚೈ
ತ್ಯಾವಾಸಂಗಳನಟ್ಟಿ
ರ್ಜನವರತಂ ಪೋಗಿ ಬಿಡದೆ ವಂದಿಸು ಮಗನೇ ೧೫೧

ಗದ್ಯ॥ ಎಂದಳಿಪಂ ತೋಱಿ ತಮ್ಮ ಮೋಹದಿಂ ಬಿಡಲಾಱದೆ ನುಡಿವುದುಂ ಕುಮಾರನೇ ಗೆಯ್ದುಂ ತಮ್ಮ ಮಾತಿಂಗೊಡಂಬಡದಿರೆ, ಮಗನ ಮನದ ದೃಢತೆಯುಮಂ ಪರಿಚ್ಛೇದಮು ಮನಱಿದು ದಕ್ಷಿಣ ಮಧುರಾಪುರದ ಸಹಸ್ರಕೂಟ ಚೈತ್ಯಾಲಯದೊಳಿರ್ದ ಸೋಮದತ್ತ ಭಟ್ಟಾರಕರನವಳೋಕಿನೀ ವಿದ್ಯೆಯಿಂದಱಿದು ವಜ್ರಕುಮಾರನಂ ಬೆರಸು ಮಣಿಮಾಲೆಯುಂ ಮಹಾವಿಭೂತಿಯಿಂದವರಲ್ಲಿಗೆ ವಂದು ಸೋಮದತ್ತ ಭಟ್ಟಾರಕರಂ ಬಂದಿಸಿ ವಾತ್ಸಲ್ಯರತ್ನಾ ಕರನ ಸಂಸಾರದ ವೈರಾಗ್ಯಮಂ ಪೇಟ್ವುದುಂ ೧೫೨

ನಯದಿಂ ಮುನಿಪತಿ ಜಿನದೀ
ಕ್ಷೆಯನಂಬರಚರತನೂಭವಂಗನುನಯದಿಂ
ದಯೆಗೆಯ್ಯೆ ತಪಶ್ರೀಯುಂ
ಪ್ರಿಯದಿಂ ತಾಳ್ದಿದನನಂತಗುಣಗಣನಿಲಯಂ ೧೫೩

ಗದ್ಯ॥ ಅಂತು ವಜ್ರಕುಮಾರಂ ಜಿನರೂಪಂ ತಾಳ್ವುದುಂ, ಭಾಸ್ಕರದೇವನುಂ ಮಣಿ ಮಾಲೆಯುಂ ತಮ್ಮ ವಂಶಜರೆಲ್ಲಮಣುವ್ರತಂ ಮಾಡಿ ಸೋಮದತ್ತ ಮುನೀಶ್ವರನುಮಂ ವಜ್ರ

ಅಕೃತ್ರಿಮ ಚೈತ್ಯಾಲಯಗಳನ್ನು ಅಕ್ಕರೆಯಿಂದ ಸದಾಕಾಲವೂ ಹೋಗಿ ತಪ್ಪದೆ ವಂದಿಸು ೧೫೧. ಎಂದು ಆಸೆಯನ್ನು ತೋಱಿಸಿ ತಮ್ಮ ಮೋಹದ ದೆಸೆಯಿಂದ ಅವನನ್ನು ಬಿಡಲಾರದೆ ಹೇಳಿದರು. ಆದರೆ ಯುವರಾಜನು ಏನು ಮಾಡಿದರೂ ತಮ್ಮ ಮಾತಿಗೆ ಒಪ್ಪದಿರಲು, ಮಗನ ಮನೋದಾರ್ಢ್ಯವನ್ನೂ ನಿರ್ಧಾರವನ್ನೂ ತಿಳಿದುಕೊಂಡು ದಕ್ಷಿಣ ಮಧುರಾಪುರದಲ್ಲಿನ ಸಹಸ್ರಕೂಟ ಚೈತ್ಯಾಲಯದೊಳಗೆ ಇದ್ದ ಸೋಮದತ್ತ ಭಟ್ಟಾರಕರನ್ನು ಅವಲೋಕಿನೀ ವಿದ್ಯೆಯಿಂದ ತಿಳಿದು ವಜ್ರಕುಮಾರನನ್ನೂ ಕರೆದುಕೊಂಡು ಮಣಿಮಾಲೆಯು ಮಹಾವೈಭವದಿಂದ ಅವರಲ್ಲಿಗೆ ಬಂದು ಸೋಮದತ್ತ ಭಟ್ಟಾರಕರಿಗೆ ವಂದನೆ ಮಾಡಿ, ವಾತ್ಸಲ್ಯರತ್ನಾಕರ(ವಜ್ರಕುಮಾರ)ನ ಸಂಸಾರ ವೈರಾಗ್ಯವನ್ನು ಕುರಿತು ಹೇಳಿದರು. ೧೫೨. ಉಪಾಯದಿಂದ, ಮುನಿಪತಿಯು ಖೇಚರ ಪುತ್ರನಿಗೆ ವಿಶ್ವಾಸದಿಂದ ಜಿನದೀಕ್ಷೆಯನ್ನು ದಯಪಾಲಿಸಲು ಆ ಅನಂತಗುಣ ಸಮೂಹಗಳಿಗೆ ಮನೆಯಂತೆ ಇದ್ದ ವಜ್ರಕುಮಾರನು ತಪೋಲಕ್ಷ್ಮಿಯನ್ನು ಧರಿಸಿದನು. ೧೫೩. ಹಾಗೆ ವಜ್ರಕುಮಾರನು ಜಿನರೂಪವನ್ನು ಧರಿಸಲಾಗಿ, ಭಾಸ್ಕರದೇವನೂ ಮಣಿಮಾಲೆಯೂ ತಮ್ಮ ವಂಶದಲ್ಲಿ ಹುಟ್ಟಿದವರೆಲ್ಲರೂ ಅಣುವ್ರತಗಳನ್ನು ಮಾಡಿ ಸೋಮದತ್ತ ಮುನಿಶ್ರೇಷ್ಠನನ್ನೂ ವಜ್ರ

ಕುಮಾರಮುನಿಯುಮಂ ವಂದಿಸಿ ವಿದ್ಯಾಧರಲೋಕಕ್ಕೆ ಪೋದರಿತ್ತಲ್, ವಜ್ರಕುಮಾರಮುನಿ ನಿಯಮಿತವಚನನುಂ ಸಕಲಾಗಮ ಕುಶಲನುಂ ಸಂಯಮಜಲನಿಧಿಯುಂ ಗುರುಪಾದಭಕ್ತನುಂ ಚತುಷ್ಕಯಾಂತಕನುಂ ದಶಧರ್ಮಸಮೇತನುಂ, ವಾತ್ಸಲ್ಯನಿಳಯನುಂ ಸಮಸ್ತದೋಷ ರಹಿತನುಂ ಸಂಸಾರಭಯಸ್ಥನುಂ ಬಾಹ್ಯಾಭ್ಯಂತರತಪೋನಿರತನುಂ ಸಮ್ಯಕ್ತ್ವ ಚೂಡಾಮಣಿಯು ಮಾಗಿ ತಪದೊಳೊಂದುತ್ತರೋತ್ತರಮಾಗಿ ನೆಗಟುತ್ತುಮಿರ್ಪುದುಂ ೧೫೪

ಚಾರಣಋದ್ಧಿಗುಣಾಳಂ
ಕಾರಂಗುನ್ನತ ಮಹಾವ್ರತಂಗಘಗಜಸಂ
ಹಾರಂಗೊಗೆದುದು ಜಿನಚರ
ಣಾರಾಧನಮೀಯದಿರ್ಪವಸ್ತುಗಳೊಳವೇ ೧೫೫

ಗದ್ಯ॥ ಅಂತು ಚಾರಣಋದ್ಧಿಪ್ರಾಪ್ತನಾಗಿ ಸುಕವಿನಿಕರಪಿಕಮಾಕಂದನಿರ್ಪುದುಮಾಪುರಮ ನಾಳ್ವ ಪೂತಿವಾಹನಮಹಾರಾಜನ ಪಟ್ಟದ ಮಹಾದೇವಿ ಸಮ್ಯಕ್ತ್ವನಿಳಯೆಯುಂ ಮೂಢತ್ರಯ ನಿವಾರಿತೆಯುಂ ಷಡಾಯತನದೂರಿತೆಯುಂ ಅಷ್ಟಮದವರ್ಜಿತೆಯುಂ ನಿಶ್ಶಂಕಾದ್ಯಷ್ಟಗುಣ ಸಂಪನ್ನೆಯುಂ ಅಣುವ್ರತೋಪೇತೆಯುಮೆನಿಸಿದೋಹಿಲೆಯೆಂಬಳ್ ೧೫೬

ಕುಮಾರ ಮುನಿಯನ್ನೂ ವಂದಿಸಿ ವಿದ್ಯಾಧರಲೋಕಕ್ಕೆ ಹೋದರು. ಇತ್ತ ಕಡೆ ವಜ್ರ ಕುಮಾರಮುನಿಯು ಮಾತಿನಲ್ಲಿ ಬಹಳ ಸಂಯಮವುಳ್ಳವನಾಗಿ, ಸಕಲಾಗಮಗಳಲ್ಲಿಯೂ, ಕುಶಲನಾಗಿ, ಸಂಯಮ ಸಮುದ್ರನಾಗಿ ಗುರುಪಾದಭಕ್ತನೂ ನಾಲ್ಕು ಕಷಾಯಗಳಿಗೆ ಯಮಸ್ವರೂಪನೂ ದಶಧರ್ಮಗಳಿಂದ ಕೂಡಿದವನೂ, ವಾತ್ಸಲ್ಯಕ್ಕೆ ಮನೆಯಂಥವನೂ ಸಮಸ್ತ ದೋಷಗಳಿಂದ ದೂರನೂ ಸಂಸಾರದಲ್ಲಿ ಭಯಗೊಂಡವನೂ ಹೊರಗೂ ಒಳಗೂ (ಅಂತರಂಗ ಬಹಿರಂಗಗಳಲ್ಲಿ) ತಪೋನಿರತನೂ ಸಮ್ಯಕ್ತ್ವ ಚೂಡಾಮಣಿಯೂ ಆಗಿ ತಪಸ್ಸಿನಲ್ಲಿ ಉತ್ತರೋತ್ತರವಾಗಿ ಅಭಿವೃದ್ಧಿ ಹೊಂದುತ್ತ ಇದ್ದನು. ೧೫೪. ಚಾರಣ ಋದ್ಧಿಯು ಗುಣವೇ ಅಲಂಕಾರವಾಗಿ ಉಳ್ಳ, ಮಹಾವ್ರತ ದೀಕ್ಷಿತನಾದ ಪಾಪವೆಂಬ ಗಜ ಸಂಹಾರಕನಾದ ವಜ್ರಕುಮಾರಮುನಿಗೆ ಹುಟ್ಟಿತು. ಜಿನಚರಣಾರಾಧನೆ ಕೊಡದೆ ಇರುವ ವಸ್ತುಗಳು ಇವೆಯೆ ? ೧೫೫. ಹಾಗೆ ಚಾರಣಋದ್ಧಿ ಲಭಿಸಿದವನಾಗಿ ಸುಕವಿನಿಕರಪಿಕ ಮಾಕಂದ(ವಜ್ರಕುಮಾರ)ನು ತಪಸ್ಸಿನಲ್ಲಿ ಇರಲು ಆ ಪಟ್ಟಣವನ್ನು ಆಳುವ ಪೂತಿ ವಾಹನ ಮಹಾರಾಜನ ಪಟ್ಟದರಾಣಿ, ಸಮ್ಯಕ್ತ್ವನಿಲಯಳು, ಮೂಢತ್ರಯವನ್ನು ನಿವಾ ರಿಸಿಕೊಂಡವಳು ಷಡಾಯತನಗಳಿಂದ ದೂರವಿರುವವಳೂ, ಅಷ್ಟಮದಗಳನ್ನು ವರ್ಜಿಸಿದ ವಳೂ, ನಿಶ್ಶಂಕೆಯೇ ಮೊದಲಾದ ಅಷ್ಟಗುಣಗಳಿಂದ ಕೂಡಿದವಳೂ ಅಣುವ್ರತಗಳಿಂದ ಕೂಡಿದವಳೂ ಆದ ಓಹಿಲೆಯೆಂಬವಳು ಇದ್ದಳು. ೧೫೬. ಆಕೆ ಸಕಲ ಗುಣಗಳಿಂದ

ಸಕಲಗುಣಾಢ್ಯೆ ಸತ್ಯದ ತವರ್ಮನೆ ವಾರ್ಧಿಪರೀತಧಾರಿಣೀ
ಪ್ರಕಟಿತ ಚಂದ್ರಸನ್ನಿಭೆ ಯಶೋನ್ನತೆ ನಿರ್ಮಳಸಚ್ಚರಿತ್ರ ಚಂ
ಪಕನುತಗಂಧೆ ಜೈನಪದಭಕ್ತೆ ಮನೋಹರರೂಪೆ ಕಾಮಿನೀ
ನಿಕರಕವೋಘರತ್ನೆ ನೆಗಟ್ಬ್ರೋಹಿಲೆಯೆಂಬುದು ಭವ್ಯಸಂಕುಲಂ ೧೫೭

ಗದ್ಯ॥ ಅಂತು ನೆಗಟ್ತೆಗಂ ಪೊಗಟ್ತೆಗಂ ನೆಲೆಯಾದೋಹಿಲೆ ಮಹಾದೇವಿ ಸುಕಸಂಕಥಾ ವಿನೋದದಿಂದಿರೆ, ಮತ್ತಮಾಪುರದೊಳ್ ಸಮುದ್ರದತ್ತನೆಂಬ ಪರದನಾತನ ಪೆಂಡತಿಧನದೆಯೆಂಬ ಳಾಯಿರ್ವರುಂ ಪಲಕಾಲಂ ಸುಖಮನನುಭವಿಸುತ್ತಿರ್ಪುದುಂ ಸಮುದ್ರದತ್ತಸೆಟ್ಟಿ ತೊಟ್ಟನೆ ಕೊಳೆ ಜವನ ಬರ್ಪಂತಾನುಂ ಸಮುದ್ರದತ್ತ ಸೆಟ್ಟಿಯ ಮಹಾಶ್ರೀಗೆ ಕರ್ಮರಾಜನದಾಟಿ ಬರ್ಪಂತಾನುಂ ಧನದೆಗೆ ಗರ್ಭಮಪ್ಪುದುಂ ೧೫೮

ಸಿರಿಯೆಲ್ಲಂ ನೆವನೆವದಿಂ
ದುರಿಯೊಳ್ ಬಿಟ್ಟರಗಿನಂತೆ ಕರಗುವುದುಂ ನಿ
ಷ್ಠುರಮಪ್ಪದರಿದ್ರತೆ ಪೊ
ರ್ದಿರೆ ಕೂಟ್ಗಂ ಸಿರಿಗಮುಂದುತಾಂ ಗೆಂಟಾದರ್ ೧೫೯

ಕೂಡಿದವಳು; ಸತ್ಯಕ್ಕೆ ತವರು ಮನೆ. ಸಮುದ್ರವೇ ಮೇರೆಯಾಗಿರುವ ಭೂಮಂಡಲ ದಲ್ಲಿ ಪ್ರಸಿದ್ಧಳಾದ ಚಂದ್ರಸದೃಶವಾದ ಧವಳ ಕೀರ್ತಿಯುಳ್ಳವಳು. ಪರಿಶುದ್ಧವಾದ ಸಚ್ಚರಿತ್ರದಿಂದ ಕೂಡಿದವಳು; ಸಂಪಗೆಯ ಶ್ರೇಷ್ಠಪರಿಮಳದಿಂದ ಕೂಡಿದವಳು. ಜೈನ ಪಾದ ಭಕ್ತಳು, ಮನೋಹರವಾದ ರೂಪವುಳ್ಳವಳು, ಸ್ತ್ರೀಸಮೂಹದಲ್ಲಿ ಆಕೆಯು ಶ್ರೇಷ್ಠರತ್ನದಂತಹವಳು. ಭವ್ಯಸಮೂಹದವರು ಓಹಿಲೆಯನ್ನು ಹೀಗೆ ವರ್ಣಿಸುವರು. ೧೫೭. ಹಾಗೆ ಪ್ರಸಿದ್ಧಿಗೂ ಕೀರ್ತಿಗೂ ನೆಲೆಯಾದ ಓಹಿಲೆದೇವಿಯು ಸುಖ ಸಂಕಥಾ ವಿನೋದದಲ್ಲಿರಲು ಆ ಪಟ್ಟಣದಲ್ಲಿ ಸಮುದ್ರದತ್ತನೆಂಬ ವರ್ತಕನು, ಆತನ ಹೆಂಡತಿ ಧನದೆಯೆಂಬುವಳು, ಆ ಯಿಬ್ಬರೂ ಹಲವು ಕಾಲ ಸುಖವನ್ನು ಅನುಭವಿಸುತ್ತ ಇರಲಾಗಿ ಸಮುದ್ರದತ್ತಸೆಟ್ಟಿ ಇದ್ದಕ್ಕಿದ್ದಂತೆ ಕ್ಷೀಣನಾಗಲು, ಯಮನ ಬರುವಿಕೆಯಂ ತೆಯೂ ಸಮುದ್ರದತ್ತಸೆಟ್ಟಿಯ ಮಹೈಶ್ವರ್ಯಕ್ಕೆ ಕರ್ಮರಾಜನು ದಾಳಿಯಿಟ್ಟಂತೆಯೂ ಧನದೆ ಗರ್ಭವತಿಯಾದಳು. ೧೫೮. ಐಶ್ವರ್ಯವೆಲ್ಲವೂ ನಾನಾ ಕಾರಣಗಳಿಂದ ಉರಿ ಯಲ್ಲಿ ಬಿದ್ದ ಅರಗಿನ ಹಾಗೆ ಕರಗಿಹೋಯಿತು. ಕ್ರೂರವಾದ ದಾರಿದ್ರ್ಯವು ಬಂದಿತು. ಕೂಳಿಗೂ ಸಿರಿಗೂ ಅಂದು ಅವರು ದೂರವಾದರು. ೧೫೯. ಮೊದಲಿನ ಐಶ್ವರ್ಯವನ್ನು

ಮುನ್ನಿನ ಸಿರಿಯಂ ನೆನೆನೆನೆ
ದುನ್ನತಿಗೆಟ್ಟಳವುಗೆಟ್ಟು ಬಡತನದೊದವಿಂ
ದನ್ನಂ ಬಡೆಯದೆ ಮಱುಗಿ ಕ
ರನ್ನೋವಿಂ ಪೆಂಪುಗೆಟ್ಟು ನವೆಯುತ್ತಿರ್ದರ್ ೧೬೦

ಗದ್ಯ॥ ಅಂತು ಬಡತನವೊದವೆ ಸಮುದ್ರದತ್ತಸೆಟ್ಟಿಯುಂ ಧನದೆಯುಂ ದುಃಖಮೆಂಬ ಸುೞಿಯೊಳ್ ಬಿರ್ದು ಮೂಡಿ ಮುೞ್ಕಾಡುತ್ತಿರೆ, ಕರ್ವತೆಯ ಮೇಲೆ ಕೋಲೆಯೆಂಬಂತೆ ಬಡ ತನದ ಮೇಲೆ ಮಾರಿಗುತ್ತಮಾಗೆ ಪಿರಿದಪ್ಪಾಪತ್ತಂ ಮಾಡಿದ ಮಗವಿನ ಮೊಗಮನೇಗೆಯ್ದುಂ ನೋಡಲೊಲ್ಲನೆಂಬಂತೆ ಸಮುದ್ರದತ್ತಸೆಟ್ಟಿ ಯಮನಿವಾಸಮನೆಯ್ದುವುದುಂ ಧನದೆಗೆ ದುಃಖ ಮಿರ್ಮಡಿಸಿ ಚಿಂತಾಸಮುದ್ರದೊಳೋಲಾಡುತ್ತಿರ್ದು ನವಮಾಸಂ ನೆಱೆದು ಪೆಣ್ಗೂಸಂ ಪೆತ್ತು ೧೬೧

ತಂದೆಯುನವಯದಿಂದಂ
ಕೊಂದೀ ಶಿಶು ಬೇಗಮೆನ್ನುಮಂ ಕೊಲ್ಗುಂ ಪೋ
ಸಂದೆಯಮಿಲ್ಲೆನ್ನಾಣ್ಮನೊ
ಳೊಂದುವೆನಾಂ ಮುನ್ನಮೆಂಬ ತೆಱದಿಂದಾಗಳ್ ೧೬೨

ಗದ್ಯ॥ ಧನದೆಯುಮನದೆಯಾಗಿ ಕೆಲವು ದಿವಸಕ್ಕೆ ಕ್ರೂರಾಂತಕನ ದಾಡೆಗೊಳಗಪ್ಪುದುಂ, ಕೂಸನಾಥೆಯಾಗಿ ಪೂರ್ವಕೃತ ಕರ್ಮಫಲಮುನನುಭವಿಸುತ್ತುಂ ಕೊಟ್ಟಿಡೆಯುದೆ ಪೊಟಲೊಳ

ಮತ್ತೆ ಮತ್ತೆ ಸ್ಮರಿಸಿಕೊಂಡು ಹೆಚ್ಚಳವನ್ನು ಕಳೆದುಕೊಂಡು, ಶಕ್ತಿಗುಂದಿ ಬಡತನ ಆಧಿಕ್ಯದಿಂದ ಅನ್ನವನ್ನು ಪಡೆಯಲಾರದೆ ಸಂಕಟಪಟ್ಟು ಬಹಳ ನೋವಿನಿಂದ ತಮ್ಮ ಪೆಂಪನ್ನೆಲ್ಲ ಕಳೆದುಕೊಂಡು ಮನನೋಯುತ್ತಿದ್ದರು. ೧೬೦. ಹಾಗೆ ಬಡತನ ಬರಲು ಸಮುದ್ರದತ್ತಸೆಟ್ಟಿಯೂ ಧನದೆಯೂ ದುಃಖವೆಂಬ ಸುಳಿಯಲ್ಲಿ ಬಿದ್ದು ತೇಲಿ ಮುಳು ಗಾಡುತ್ತಿದ್ದರು. ಆಗ 'ಸೂರೆಯ ಮೇಲೆ ಕೊಲೆ' ಎನ್ನುವ ಹಾಗೆ, ಬಡತನದ ಮೇಲೆ ಮಾರಿಕಾ ರೋಗವಾಗಲು ದೊಡ್ಡ ಆಪತ್ತನುಂಟುಮಾಡಿದ ಆ ಮಗುವಿನ ಮುಖವನ್ನು ಏನಾದರೂ ನೋಡಲು ಒಲ್ಲೆನೆನ್ನುವ ಹಾಗೆ ಸಮುದ್ರದತ್ತಸೆಟ್ಟಿಯು ಯಮಪಟ್ಟಣಕ್ಕೆ ಹೋಗಿಬಿಟ್ಟನು. ಅದರಿಂದ ಧನದೆಗೆ ದುಃಖ ಇಮ್ಮಡಿಯಾಯಿತು. ಅವಳು ಚಿಂತೆ ಯೆಂಬ ಸಮುದ್ರದಲ್ಲಿ ಮುಳುಗಾಡುತ್ತಿದ್ದಳು ; 'ಒಂಬತ್ತು ತಿಂಗಳು ತುಂಬಿ ಹೆಣ್ಣು ಕೂಸನ್ನು ಹೆತ್ತಳು. ೧೬೧. "ತಂದೆಯನ್ನು ಆತುರದಿಂದ ಕೊಂದ ಈ ಮಗು ನನ್ನನ್ನೂ ಬೇಗನೆ ಕೊಲ್ಲುವುದು, ಸಂದೇಹವಿಲ್ಲ. ನನ್ನ ಸ್ವಾಮಿಯೊಡನೆ ನಾನು ಸೇರಿಕೊಳ್ಳುವೆನು" ಎನ್ನುವಂತೆ ೧೬೨. ಧನದೆಯೂ ಅನದೆ(?)ಯಾಗಿ ಕೆಲವೇ ದಿನಗಳಲ್ಲಿ ಕ್ರೂರನಾದ ಅಂತಕನ ದಾಡೆಗೆ ಸಿಕ್ಕಿದಳು. ಕೂಸು ಅನಾಥೆಯಾದಳು, ಹಿಂದಿನ ಕರ್ಮಫಲವನ್ನು ಅನುಭವಿಸುತ್ತ ಅನ್ನವನ್ನು ಪಡೆಯದೆ, ಪಟ್ಟಣದೊಳಗೆ ಎಂಜಲು ಅಗುಳುಗಳನ್ನು

ಗೆಂಜಲಗುಟನಾಯ್ದುಲಸಿ ಕುಱುಕುತ್ತುಂ ಬೀದಿಯೊಳ್ ಪೆಱರ್ವೇೞಿಡಾಡಿದ ಪಣ್ಪಲಂಗಳಂ ಮೆಲುತುಂ ಕಾಲಮಂ ಕಳೆಯುತ್ತುಮಿರ್ಪುದುಮೊರ್ವೆ ೧೬೩

ಜಿನತತ್ವಾಂಭೋನಿಧಿವ
ರ್ಧನ ಚಂದ್ರರ್ ದುರಿತ ವಾರ್ಧಿಬಡಬಾನಳರಿಂ
ಧ್ರನಗಕ್ಷಮರಂತಭಿನಂ
ದನರುಂ ನಂದನರುಮೆಂಬರಿರ್ವರ್ಮುನಿಗಳ್ ೧೬೪

ಗದ್ಯ॥ ಚರಿಗೆಯುಂ ಮಾಡಿ ಪೋಗುತ್ತುಂ ಕಸಗುಪ್ಪೆಯೊಳೆಂಜಲಗುಟನಾಯ್ದುಲಸಿ ತಿಂಬ ಮಗುವಂ ಕಂಡು ನಂದನಮುನೀಂದ್ರರ್ ವಿಸ್ಮಯಂಬಟ್ಟು ಸಂಸಾರದಿಂ ಬಿಟ್ಟು ಕಷ್ಟಮಿಲ್ಲೆಂ ಬುದುಮಭಿನಂದನ ಭಟ್ಟಾರಕರಿಂತೆಂದರಿಂತು ನಮೆವೀಮಗವೀ ಪುರಮನಾಳ್ವ ಪೂತಿವಾಹನ ಮಹಾರಾಜಂಗೆ ಪ್ರಾಣವಲ್ಲಭೆಯಪ್ಪಳೆಂಬುದು ಮಾ ಮಾತಂ ಪೆಱಗೆ ಬರುತ್ತುಮಿರ್ದ ಬುದ್ಧಾ ತ್ಮನೆಂಬ ರಕ್ತಾಂಬರಧರಂ ಕೇಳ್ದು ಋಷಿವಾಕ್ಯಂ ತಪ್ಪದೆಂದು ಮಗವಂ ತನ್ನ ದೇಹಾರಕ್ಕೊಯ್ದು ಬುದ್ಧದಾಸಿಯೆಂದು ಪೆಸರನಿಟ್ಟು ನಡೆಪುವುದುಂ ೧೬೫

ಪುರುಡಿಸುವಳ್ ವಿಳಾಸದ ಪೊದಟ್ಕೆಗೆ ವಿಭ್ರಮದೇಟ್ಗೆಗಂಬರ
ಚರಿಯರೊಳಿಂದ್ರಲೋಕ ಲಲಿತಾಂಗಿಯರೊಳ್ ಕಡುಗಾಯ್ದುಡರ್ತು ಮ
ಚ್ಚರಿಸುವಳುನ್ನತಿಕ್ಕೆಗೆ ಬೆಡಂಗಿನ ತೋರ್ಕೆಗೆ ನೋಡ ನಾಡ ಸೌಂ
ದರಿಯರೊಳಾವಗಂ ಸೆಣಸುವಳ್ ಸಲೆ ಗಾಡಿಗವುನ್ನತಿಕ್ಕೆಗಂ ೧೬೬

ಆರಿಸಿ ಮೆಲ್ಲುತ್ತ ಬೀದಿಯಲ್ಲಿ ಇತರರು ಬಿಸಾಟ ಹಣ್ಣುಹಂಪಲುಗಳನ್ನು ತಿನ್ನುತ್ತ ಕಾಲ ವನ್ನು ಕಳೆಯುತ್ತಿರಲು ಒಮ್ಮೆ ೧೬೩. ಜಿನತತ್ವ ಸಮುದ್ರವನ್ನು ಉಕ್ಕಿಸುವ ಚಂದ್ರರು, ಪಾಪಸಮುದ್ರದ ಬಡಬಾಗ್ನಿಗಳು, ಮೇರುಪರ್ವತದಂಥ ಕ್ಷಮೆಯುಳ್ಳವರು,—ಇಂಥ ನಂದನ, ಅಭಿನಂದನ, ಎಂಬ ಇಬ್ಬರು ಮುನಿಗಳು ೧೬೪. ಚರಿಗೆಯನ್ನು ಮಾಡಿ ಹೋಗುತ್ತ ಕಸದ ತಿಪ್ಪೆಯ ಮೇಲೆ ಎಂಜಲನ್ನದ ಅಗುಳುಗಳನ್ನು ಆರಿಸಿ ತಿನ್ನುವ ಆ ಮಗುವನ್ನು ಕಂಡರು. ಆಗ ನಂದನ ಮುನೀಂದ್ರರು ಆಶ್ಚರ್ಯಪಟ್ಟು "ಸಂಸಾರವನ್ನು ಬಿಟ್ಟರೆ ಲೋಕದಲ್ಲಿ ನೀಚತನವಿಲ್ಲ" ಎಂದರು. ಆಗ ಅಭಿನಂದನ ಮುನಿಶ್ರೇಷ್ಠರು ಹೀಗೆಂದರು : ಹೀಗೆ ಕಷ್ಟಪಡುತ್ತಿರುವ ಈ ಮಗು ಈ ಪಟ್ಟಣವನ್ನು ಆಳುತ್ತಿರುವ ಪೂತಿವಾಹನ ಮಹಾರಾಜನಿಗೆ ಪ್ರಾಣವಲ್ಲಭೆಯಾಗುವಳೆಂದು ಹೇಳಿದರು. ಆ ಮಾತನ್ನು ಅವರ ಹಿಂದೆ ಬರುತ್ತಿದ್ದ 'ಬುದ್ಧಾತ್ಮ' ಎಂಬ ರಕ್ತವಸ್ತ್ರಧಾರಿಯು ಕೇಳಿ ಋಷಿಯರ ಮಾತು ತಪ್ಪುವುದಿಲ್ಲವೆಂದು ನಂಬಿ ಆ ಮಗುವನ್ನು ತನ್ನ ದೇಹಾರಕ್ಕೆ ಕರೆದೊಯ್ದು ಬುದ್ಧದಾಸಿಯೆಂಬ ಹೆಸರನ್ನಿಟ್ಟು ಸಾಕಿದನು. ೧೬೫. ಆ ಮಗುವು ಕ್ರಮೇಣ ಬೆಳೆದು ಪ್ರಬುದ್ಧಳಾದಳು. ಅವಳು ಸೊಗಸಿನ ಹೆಚ್ಚಳದಲ್ಲಿ, ವಿಭ್ರಮದ ಏಳಿಗೆಯಲ್ಲಿ, ಆಕಾಶ ಗಾಮಿಗಳಾದ ಖೇಚರಸ್ತ್ರೀಯರ ಸಂಗಡ, ಇಂದ್ರಲೋಕದ ಸುಂದರಿಯರ ಸಂಗಡ, ಹುರುಡುಗಟ್ಟುವಳು; (ಸ್ಪರ್ಧಿಸುವಳು) ಬೆಡಗಿನ ತೋರಿಕೆಗೆ, ಉನ್ನತ ಪದವಿಗೆ ನಾಡಿನ

ಗದ್ಯ॥ ಅಂತು ಮಹಾ ಹಾವಭಾವ ವಿಲಾಸ ವಿಭ್ರಮಂಗಳ್ಗೆ, ನೆಲೆಯಾಗಿ ಬುದ್ಧದಾಸಿ ಶೃಂಗಾರದುರುಳಿಯಾಗಿರ್ದೊಂದು ದಿವಸಂ ದೇಹಾರದ ಪೆಱಗಣ ನಂದನವನದೊಳುಯ್ಯಲಾಡುತ್ತುಮಿರ್ಪುದುಂ ಪೂತಿವಾಹನ ಮಹಾರಾಜಂ ಗಂಧಸಿಂಧುರಾರೂಢನಾಗಿ ಬೀದಿಯೊಳ್ ಪೋಗುತ್ತುಂ ತೊಟ್ಟನೆ ಕಂಡು ೧೬೭

ಸ್ಮರನ ಸರಳ್ಗಳ್ ನಡುಕೋ
ಲ್ವರೆಗಂ ನಡೆ ಪೂತಿವಾಹನಂ ಪೋಗದೆ ನಿಂ
ದರವಿಂದಾಕ್ಷಿಯ ರೂಪಂ
ಪರಿಭಾವಿಸಿ ನೋಡಿ ತೂಗಿ ತಲೆಯಂ ಬೇಗಂ ೧೬೮

ಗದ್ಯ॥ ಅರಮನೆಗೆ ಪೋಗಿ ವಿರಹ ಸಂತಾಪದಿಂ ನಿಲಲಾಱದೆ ಬುದ್ಧದಾಸಿಯಂ ಬೇಡಿ ಪೆರ್ಗಡೆಗಳಂ ಬುದ್ಧರಕ್ತಾಂಬರನಲ್ಲಿಗಟ್ಟುವುದುಂ ಬುದ್ಧಾತ್ಮಂ ತಿರಿವಂಗೆ ಸಿರಿದೊರೆಕೊಂಡಂತೆ ಪೆರ್ಚಿ ಋಷಿ ವಾಕ್ಯಮೇಕೆ ತಪ್ಪುಗುಮೆಂದು ಮನದೊಳ್ ಬಗೆದು ಸಿರಿಬರೆ ಮೊಣಕಾಲನಾಂತರೆಂಬಂತೆ ನಿಮ್ಮರಸಂಗಂ ಪ್ರಾಣಮುಮನರ್ಥಮುಮನೀವೆಂ ಕೂಸಾವ ಪಿರಿದೆಂದು ಕುಡುವುದುಂ, ಪೂತಿವಾಹನ ಮಹಾರಾಜಂ ಬುದ್ಧ ದಾಸಿಯೊಳ್ ಪ್ರಾಣವಲ್ಲಭನಾಗಿ ೧೬೯

ಸುಂದರಿಯರೊಡನೆ ಯಾವಾಗಲೂ ಹೋರಾಡುವಳು. ಮತ್ಸರಿಸುವಳು ೧೬೬. ಹಾಗೆ ಅತಿಶಯವಾದ ಹಾವಭಾವವಿಲಾಸ ವಿಭ್ರಮಗಳಿಗೆ ನೆಲೆಯಾಗಿ ಆ ಬುದ್ಧದಾಸಿ ಶೃಂಗಾರದ ಉಂಡೆಯಾಗಿದ್ದು ಒಂದು ದಿನ ಅವಳಿದ್ದ ದೇಹಾರದ ಹಿಂದಿನ ಉದ್ಯಾನವನದಲ್ಲಿ ಉಯ್ಯಾಲೆಯಾಡುತ್ತಿರಲಾಗಿ ಪೂತಿವಾಹನ ಮಹಾರಾಜನು ಮದಗಜದ ಮೇಲೆ ಕುಳಿತು ಬೀದಿಯಲ್ಲಿ ಹೋಗುತ್ತ ಹಟಾತ್ತಾಗಿ ಅವಳನ್ನು ಕಂಡನು. ೧೬೭. ಮನ್ಮಥನ ಬಾಣಗಳು ಅವುಗಳ ಮಧ್ಯದವರೆಗೆ ನಾಟಿದುವು ! ಆದರಿಂದ ಪೂತಿವಾಹನನು ಮುಂದಕ್ಕೆ ಹೋಗದೆ ನಿಂತು ಆ ಕಮಲಾಕ್ಷಿಯ ರೂಪವನ್ನು ಗಮನಿಸಿ ನೋಡಿ ತಲೆದೂಗಿದನು. ೧೬೮. ಆ ಮೇಲೆ ಬೇಗನೆ ಅರಮನೆಗೆ ಹೋಗಿ ವಿರಹ ಸಂತಾಪವನ್ನು ತಾಳಿಕೊಳ್ಳಲು ಅಸಮರ್ಥನಾಗಿ ಬುದ್ಧದಾಸಿಯನ್ನು ಕೇಳಲು ಹೆಗ್ಗಡೆಗಳನ್ನು ಬುದ್ಧರಕ್ತಾಂಬರನ ಬಳಿಗೆ ಕಳುಹಿಸಿದನು. ಬುದ್ಧಾತ್ಮನು ತಿರುಪದವನಿಗೆ ಐಶ್ವರ್ಯ ದೊರೆತಂತೆ ಉಬ್ಬಿ 'ಋಷಿ ವಾಕ್ಯ ಏಕೆ ತಪ್ಪುತ್ತದೆ ?' ಎಂದು ಮನಸ್ಸಿನಲ್ಲಿ ಯೋಚಿಸಿ 'ಸಿರಿ ಬಂದರೆ ಮೊಣಕಾಲನ್ನಡ್ಡವಿಟ್ಟರು' ಎಂಬಂತೆ 'ನಿಮ್ಮ ರಾಜನಿಗೆ ಪ್ರಾಣವನ್ನೂ ಅರ್ಥವನ್ನೂ ಕೊಡುತ್ತೇನೆ. ಈ ಕೂಸು ಯಾವ ದೊಡ್ಡದು ?' ಎಂದು ಕೊಡಲಾಗಿ ಪೂತಿವಾಹನ ಮಹಾರಾಜನು ಬುದ್ಧದಾಸಿಯ ಪ್ರಾಣವಲ್ಲಭನಾಗಿದ್ದನು. ೧೬೯. ಮನ್ಮಥನ ತಕ್ಕು ಹಿಡಿಯಲು

ರತಿಪತಿಯ ಟಕ್ಕು ಕೊಳೆ ಭೂ
ಪತಿ ಮತ್ತಿನ ಕಾಂತೆಯರ್ಕಳಂ ನೋಡದೆ ಸ
ನ್ನುತಮಪ್ಪ ಪೆಱವು ಕಾರ್ಯಮ
ನತಿಶಯದಿಂ ಬಿಟ್ಟು ಕೇಳದನ್ಯರ ಮಾತಂ ೧೭೦

ಗದ್ಯ॥ ಬುದ್ಧದಾಸಿಯನೆ ಪತ್ತಿ ಕಣ್ಣೆವೆಯಿಕ್ಕುವನಿತುಪೊತ್ತಪ್ಪೊಡಮಗಲದೆ ಕೂರ್ಮೆಯಿಂದಿರ್ಪುದುಂ ಸಕಲ ಗುಣನಿಳಯೆಯೆನಿಪೋಹಿಲೆ ಮಹಾದೇವಿ ಫಾಲ್ಗುನದ ನಂದೀಶ್ವರದಂದು ಮಹಾಮಹಿಮೆಯಿಂ ಜಿನಪೂಜೆಯುಂ ಪೊಱಮಡಿಸುವುದುಂ ಬುದ್ಧದಾಸಿ ತನಗೆ ಪೂತಿವಾಹನ ಮಹಾರಾಜನೆರಡಿಲ್ಲದೆ ಸ್ನೇಹಂಗೆಯ್ವನಪ್ಪುದಱಿಂ ಜಿನೆಪೂಜೆಗೆ ವಿಘ್ನಮಂ ಮಾಡಿ ತಮ್ಮಯ್ಯನಪ್ಪ ಬುದ್ಧಾತ್ಮನ ಮತದಿಂ ಮುನ್ನಂ ಬುದ್ಧನ ಪೂಜೆಯುಂ ೧೭೧

ಅವಯವದಿಂದಂ ಪೊಱಮಡಿ
ಸುವ ಬಗೆಯಿಂ ರಥಮನೊಪ್ಪಮಾಗಿರೆ ಕರಮು
ತ್ಸವದಿಂ ಮಾಡಿಸಿ ವಾರಣ
ನಿವಹಂ ಹಯನಿಕರ ವಾರವನಿತಾನಿಚಯಂ ೧೭೨

ಗದ್ಯ॥ ಬೆರಸುಗುರ್ವಾಗೆ ಬುದ್ಧದಾಸಿ ಪೆರ್ಚಿಂದುಂ ಇರ್ಪುದುಂ ಓಹಿಲೆ ಮಹಾದೇವಿ ಬುದ್ಧದಾಸಿ ಜಿನಪೂಜೆಯುಂ ಮಾಣಿಸಿ ಸುಗತನ ರಥಮಂ ಪೊಱಮಡಿಸಿದಳೆಂದು ಸಭಾಕ್ಷೋಭಮಾಗೆ ಗರ್ಜಿಸಿ ೧೭೩

ರಾಜನು ಉಳಿದ ಕಾಂತೆಯರನ್ನು ನೋಡದೆ ಶ್ರೇಷ್ಠವಾದ ಬೇರೆ ಕಾರ್ಯಗಳನ್ನು ಸಂಪೂರ್ಣವಾಗಿ ಬಿಟ್ಟು ಬೇರೆಯವರ ಮಾತನ್ನು ಕೇಳದೆ. ೧೭೦. ಬುದ್ಧದಾಸಿಯನ್ನೇ ಹತ್ತಿರವಿಟ್ಟುಕೊಂಡು ಕಣ್ಣುರೆಪ್ಪೆ ಹಾಕುವಷ್ಟು ಹೊತ್ತಾದರೂ ಬಿಟ್ಟಿರದೆ ಪ್ರೀತಿಯಿಂದಿದ್ದನು. ಸಮಸ್ತ ಗುಣಗಳಿಗೂ ಆಶ್ರಯಸ್ಥಾನಳೆನಿಸಿಕೊಂಡ ಓಹಿಲೆ ಮಹಾದೇವಿ ಫಾಲ್ಗುಣ ಮಾಸದ ನಂದೀಶ್ವರ ಹಬ್ಬದ ದಿನ ಮಹಾಮಹಿಮೆಯಿಂದ ಜಿನಪೂಜೆಯನ್ನು ಮಾಡಿ ಉತ್ಸವವನ್ನು ಹೊರಡಿಸಿದಳು. ಆಗ ಬುದ್ಧದಾಸಿಯು ಪೂತಿವಾಹನ ಮಹಾರಾಜನು ತನಗೆ ವಿಕಲ್ಪವಿಲ್ಲದ ಪ್ರೇಮ ಮಾಡುತ್ತಿದ್ದುದರಿಂದ ಆ ಜಿನಪೂಜೆಗೆ ವಿಘ್ನ ಮಾಡಿ ತಮ್ಮ ತಂದೆಯಾದ ಬುದ್ಧಾತ್ಮನ ಅಭಿಪ್ರಾಯದಂತೆ ಬುದ್ಧನ ಉತ್ಸವವನ್ನು ಕೂಡಲೆ ಹೊರಡಿಸುವ ಯೋಚನೆಯಿಂದ ರಥವನ್ನು ಬಹಳ ಶೋಭಾಯಮಾನವಾಗಿ ಮಾಡಿಸಿ ಆನೆ ಕುದುರೆ ಮೊದಲಾದ ಸೈನ್ಯದೊಡನೆ ಸಮಸ್ತ ಮರ್ಯಾದೆಗಳಿಂದ ಬುದ್ಧನ ಉತ್ಸವವನ್ನು ಮಾಡಿಸಿದಳು. ೧೭೨. ಹೀಗೆ ಬುದ್ಧದಾಸಿ ಹೆಚ್ಚಿನ ದರ್ಪದಿಂದ ಇರಲು ಓಹಿಲೆ ಮಹಾದೇವಿ ಬುದ್ಧದಾಸಿಯು ಜಿನಪೂಜೆಯನ್ನು ತಪ್ಪಿಸಿ ಬುದ್ಧ (ಸುಗತ)ನ ರಥವನ್ನು ಹೊರಡಿಸಿದಳೆಂದು, ಸೇರಿದ್ದ ಸಭೆಯಲ್ಲಿ ಕ್ಷೋಭೆಯಾಗುವಂತೆ ಗರ್ಜಿಸಿದಳು. ೧೭೩. ಜಿನಶ್ರೇಷ್ಠನ ದಯೆಯನ್ನು ಆ ಕಾಮಿನಿಯು ನಂಬಿ ಮಹಾ

ಜಿನಪನ ಕೂರ್ಮೆಯನಾ ಕಾ
ಮಿನಿ ನಂಬಿ ಮಹಾಪ್ರತಾಪದಿಂ ಪೆಱರಂ ದು
ರ್ಮನದಿಂ ಕೈಕೊಳ್ಳದೆ ಕೆ
ಮ್ಮನೆ ತನ್ನನೆ ಕೊಂಡು ಕೊನೆದು ಪೊಗೞಿಸುತಿರ್ಪಳ್ ೧೭೪

ಆದಿಯ ತಿರಿಕಂಗೊರ್ಮೆಯೆ
ಮೇದಿನಿ ದೊರೆಕೊಂಡುದಪ್ಪೊಡೇ ಮುನ್ನಂ ತಾ
ನೋದಿಲ್ಲದವನ ನಂದನ
ನೋದಿದೊಡಂ ಬಗೆವನಲ್ಲನನ್ಯರನೆಂದುಂ ೧೭೫

ಗದ್ಯ॥ ವಾಂತಿಯ ಪೆಸರ್ ಮೈಲಾರಮೆಂಬಂತೆ, ಪೊಲೆಯರಾಡಿನ ಪೆಸರ್ ಮಾಣಿಕದೇವಿಯೆಂಬಂತೆ, ತೊೞ್ತಿನ ಪೆಸರ್ ಸಿರಿಯ ದೇವಿಯೆಂಬಂತೆ, ಎಮ್ಮೆಯ ಪೆಸರ್ ಮಹಾದೇವಿಯೆಂಬಂತೆ, ಓಡಿನ ಪೆಸರ್ ಮಂಗಳಮೆಂಬಂತೆ, ತಾನುಮರಸಿಯಾಗಿ ಮುಯ್ಯಾಂತು ಸೊಕ್ಕಿ ತಮ್ಮಯ್ಯನಪ್ಪ ತಂಗುೞ್ದಿರಿಕನ ಮಾತಂ ಕೇಳ್ದು ದಕ್ಷಿಣ ಮಧುರಾಪುರದೊಳೆಂದುಂ ಪೊಱಮಡದ ಸುಗತನ ರಥಮಂ ಪೊಱಮಡಿಸಿ ಸದಾಕಾಲಂ ಪೊಱಮಡುವ ಪಾಂಡ್ಯಾನ್ವಯಸ್ವಾಮಿಯಪ್ಪ ಜಿನಸ್ವಾಮಿಯ ಪೂಜೆಯುಂ ಪೊಱಮಡಲೀಯದೆ ಕೊರ್ವಿದೊಡೇನಾಯ್ತು, ಪೂತಿವಾಹನ ಮಹಾರಾಜನ ಕೂರ್ಮೆಯ ಪೆಂಡತಿಯಪ್ಪ ತನ್ನ ದಲಮುಮೆನ್ನ ದಲಮುಂ ಕಾದಲಕ್ಕುಮೆಂದು ಪೂಣ್ದು ಸೋಮದತ್ತ ಮುನಿಪತಿಯಲ್ಲಿಗೆ ವಂದು ಭಕ್ತಿಯಿಂ ಬಂದಿಸಿ ತನಗಾದಪಮಾನಮಂ ಪೇೞ್ದು, ೧೭೬

ಪ್ರತಾಪದಿಂದ ಇತರರನ್ನು ದುರ್ಬುದ್ಧಿಯಿಂದ ಕೇಳದೆ ಸುಮ್ಮನೆ ತನ್ನನ್ನೇ ಹೊಗಳಿ ಹಾಡಿಸುತ್ತಿದ್ದಳು. ೧೭೪. ಮೊದಲಿನಿಂದಲೂ ತಿರುಕನಾಗಿದ್ದವನಿಗೆ ಒಂದೇ ಸಲ ರಾಜ್ಯವೇ ಲಭಿಸಿದ್ದಾದರೆ ತಾನೆ ಏನು ? ಮೊದಲು ತಾನು ಓದಿಲ್ಲದವನ ಮಗನು ಓದಿದರೂ ಅನ್ಯರನ್ನು ಅವನು ಎಂದಿಗೂ ಲೆಕ್ಕವಿಡುವುದಿಲ್ಲ: ೧೭೫. ವಾಂತಿಯ ಹೆಸರು ಮೈಲಾರವೆನ್ನುವಂತೆ, ಹೊಲೆಯರ ಆಡಿನ ಹೆಸರು ಮಾಣಿಕ್ಯದೇವಿಯೆಂದು ಹೇಳುವಂತೆ, ತೊತ್ತಿನ ಹೆಸರು ಮಹಾದೇವಿಯೆನ್ನುವಂತೆ, ಹುರಿಯುವ ಓಡಿನ ಹೆಸರು 'ಮಂಗಳಂ' ಎನ್ನುವ ಹಾಗೆ, ತಾನೂ ಅರಸಿಯಾಗಿ ಆಧಿಕ್ಯವನ್ನು ಹೊಂದಿ ಸೊಕ್ಕಿ ತಮ್ಮ ತಂದೆಯಾದ ತಂಗುಳು ತಿರುಕನ ಮಾತನ್ನು ಕೇಳಿ ದಕ್ಷಿಣ ಮಧುರಾಪುರದಲ್ಲಿ ಎಂದೂ ಹೊರಡದೆ ಇದ್ದ ಸುಗತನ ರಥವನ್ನು ಹೊರಡಿಸಿ ಎಲ್ಲ ಕಾಲದಲ್ಲಿಯೂ ಹೊರಡುತ್ತಿದ್ದ ಪಾಂಡ್ಯವಂಶಸ್ವಾಮಿಯಾದ ಜಿನಸ್ವಾಮಿಯ (ಪೂಜೆ) ರಥವನ್ನು ಹೊರಡಲು ಅವಕಾಶಕೊಡದೆ ಕೊಬ್ಬಿದರೆ ಏನಾಯಿತು ? ಪೂತಿವಾಹನ ಮಹಾರಾಜನ ಪ್ರೇಮದ ಹೆಂಡತಿಯಾದ ಅವಳ ಸೈನ್ಯವೂ ನನ್ನ ಸೈನ್ಯವೂ ಕಾದಾಡಬಹುದೆಂದು ಶಪಥ ಮಾಡಿ ಸೋಮದತ್ತಮುನಿಪತಿಯ ಬಳಿಗೆ ಹೋಗಿ ಭಕ್ತಿಯಿಂದ ನಮಸ್ಕಾರ ಮಾಡಿ ತನಗೆ ಆದ ಅವಮಾನವನ್ನು ತಿಳಿಸಿ ಹೇಳಿದಳು. ೧೭೬. ಪರಮಜೀಶ್ವರನ ರಥವು ಈ

ಪರಮ ಜಿನೇಶನ ರಥವಿಾ
ಪುರದೊಳ್ ಮುನ್ನೆಂತು ನಡೆವುದಾ ಮಾರ್ಗದೊಳೊ
ಪ್ಪಿರೆ ನಡೆದೊಡುಣ್ಬೆನಲ್ಲದೊ
ಡರವರಿಸುವಳಲ್ಲನೆನಗೆ ಯಾವಜ್ಜೀವಂ ೧೭೭

ಗದ್ಯ॥ ಆಹಾರ ಶರೀರ ನಿವೃತ್ತಿಯೆಂಬುದುಂ ಸೋಮದತ್ತ ಭಟ್ಟಾರಕರಿಂತೆಂದರ್ ; ವಜ್ರಕುಮಾರ ಮುನಿಕುಂಜರನಿಂ ನಿಮ್ಮ ಕಾರ್ಯಂ ತೀರ್ಗುಂ ನೀವಿದಕ್ಕುಮ್ಮಳಿಸದೆ ಅಲ್ಲಿಗೆ ಪೋಗಿಮೆನೆ, ವಾತ್ಸಲ್ಯರತ್ನಾಕರನಲ್ಲಿಗೆ ಪೋಗಿ ವಿಧಿಪೂರ್ವಕಂ ಬಂದಿಸಿ ತನ್ನ ಮನದ ಕಾರ್ಯಮುಮಂ ನೆಱೆಯೆ ಪೇೞ್ದು, ಸೋಮದತ್ತ ಮುನಿಪತಿಯ ಮುಂದೆ ನುಡಿದ ಪ್ರತಿಜ್ಞೆಯುಮಂ ಮಾಡುವುದುಂ ಸಮ್ಯಕ್ತ್ವಚೂಡಾಮಣಿ ತನ್ನೊಳಿಂತೆಂದಂ ೧೭೮

ಕಲ್ಯಾಣಮುಮೆನಿಸುವ ವಾ
ತ್ಸಲ್ಯಂ ಕೇವಳಮೆ ಸರ್ವಸೌಖ್ಯಕ್ಕಂ ಮಾಂ
ಗಲ್ಯಂ ಮುಕ್ತಿಶ್ರೀಗಿದು
ಮೌಲ್ಯದ ತೊಡವುಗ್ರ ಕರ್ಮ ಭಯ ಸಂಹರಣಂ ೧೭೯

ಪಟ್ಟಣದಲ್ಲಿ ಹಿಂದೆ ಹೇಗೇ ನಡೆಯುತ್ತಿದ್ದಿತೋ ಆ ಮಾರ್ಗದಲ್ಲಿಯೇ ಒಪ್ಪುವಂತೆ ನಡೆದದ್ದಾದರೆ ನಾನು ಊಟ ಮಾಡುತ್ತೇನೆ. ಇಲ್ಲದೆ ಹೋದರೆ ಊಟ ಮಾಡುವುದಿಲ್ಲ, ಯಾವಜ್ಜೀವವೂ (ಊಟಬಿಡಲು) ಇದಕ್ಕೆ ಹಿಂತೆಗೆಯುವವಳಲ್ಲ. ೧೭೭. ಆಹಾರ ಶರೀರ ನಿವೃತ್ತಿಯೆನ್ನುತ್ತಲೂ ಸೋಮದತ್ತ ಭಟ್ಟಾರಕರು ಹೀಗೆಂದರು : ವಜ್ರಕುಮಾರ ಮುನಿಶ್ರೇಷ್ಠನಿಂದ ನಿಮ್ಮ ಕೆಲಸವು ನೆರವೇರುವುದು. ನೀವು ಇದಕ್ಕೆ ದುಃಖಿಸದೆ ಅವರಲ್ಲಿಗೆ ಹೋಗಿರೆನ್ನಲು ಆಕೆ ಆ ವಾತ್ಸಲ್ಯರತ್ನಾಕರನ ಬಳಿಗೆ ಹೋಗಿ ವಿಧಿ ಪೂರ್ವಕವಾಗಿ ವಂದನೆಯನ್ನು ಸಲ್ಲಿಸಿ ತನ್ನ ಮನಸ್ಸಿನಲ್ಲಿದ್ದ ಕೆಲಸವನ್ನು ಸಂಪೂರ್ಣವಾಗಿ ತಿಳಿಯ ಹೇಳಿ ಸೋಮದತ್ತಮುನಿಯ ಮುಂದೆ ನುಡಿದ ಪ್ರತಿಜ್ಞೆಯನ್ನು ಮತ್ತೆ ಮಾಡಿದಳು. ಅದನ್ನು ಕೇಳಿದ ಸಮ್ಯಕ್ತ್ವಚೂಡಾಮಣಿಯಾದ ವಜ್ರಕುಮಾರ ಮುನಿಯು ತನ್ನಲ್ಲಿಯೇ ಹೀಗೆ ಯೋಚಿಸಿಕೊಂಡನು, ೧೭೮. ಮಂಗಳಕರವೆನಿಸುವ ವಾತ್ಸಲ್ಯವು ಸಾಮಾನ್ಯವೆ ? ಸರ್ವಸೌಖ್ಯಕ್ಕೂ ಮಂಗಳಕರವಾದದ್ದು. ಅದು ಮೋಕ್ಷಲಕ್ಷ್ಮಿಗೆ ಬೆಲೆಬಾಳುವ ಆಭರಣ. ಅದೇ ಕರ್ಮಭಯವನ್ನು ಸಂಹರಿಸುವಂತಹುದು. ೧೭೯. ಆ ಸೌಖ್ಯಕ್ಕೆ ಒಲಿಯುವ ಮನುಷ್ಯನು ಮಾತ್ಸರ್ಯವನ್ನು ಸಂಪೂರ್ಣವಾಗಿ

ತತ್ಸೌಖ್ಯಮನೊಲ್ದು ನರಂ
ಮಾತ್ಸರ್ಯಮನೆಯ್ದೆ ಬಿಟ್ಟು ಚಾತುರ್ವರ್ಣ್ಯ
ಕ್ಕುತ್ಸವದಿಂದಂ ಮಾಳ್ಪುದು
ವಾತ್ಸಲ್ಯಮನಱಿದು ಜೈನವಚನಾಂಬುಧಿಯೊಳ್ ೧೮೦

ಪಡಿಯಿಲ್ಲದ ಮನೆಯುಂ ಪೆ
ರ್ಗಡೆಯಿಲ್ಲದ ರಾಜ್ಯಮುಂ ಮಹಾವಾತ್ಸಲ್ಯಂ
ಗಡಮಿಲ್ಲದ ಗುಣಗಣಮುಂ
ಬಡವನ ಯೌವನಮುಮೊಪ್ಪಲಾಱವು ಜಗದೊಳ್ ೧೮೧

ಗದ್ಯ॥ ಅದಱಿಂ ವಾತ್ಸಲ್ಯಮೆಂಬುದು ಸಾಮಾನ್ಯಮಲ್ಲದಿದನುದಾಸೀನಂಗೆಯ್ಯಲಾಗದೆಂದು ಸಹಜಕವಿಜನಮನೋಹರೋದ್ಯಾನ ಕಳಕಂಠನೋಹಿಲೆ ಮಹಾದೇವಿಗಿಂತೆಂದಂ ೧೮೨

ವಾರಿಜನೇತ್ರೆ ದಿವ್ಯಗುಣಭೂಷಣೆ ಭವ್ಯಜನಾನುರಾಗೆ ನಿ
ಷ್ಕಾರಣಮೇಕೆ ಪೂಣ್ಕೆ ನಿನಗುರ್ವಿಯೊಳಾವಗಮಾವಕಾರ್ಯಮುಂ
ತೀರದುದುಂಟೆ ನಾಳೆ ಜನಪೂಜೆಯನಚ್ಚರಿಯಾಗೆ ಖೇಚರ
ಶ್ರೀರಮಣೇಶರಿಂ ನಡೆಸುವೆಂ ನಿನಗುತ್ಸವಮಾಗಲರ್ಥಿಯಿಂ ೧೮೩

ಬಿಟ್ಟು ಕಳೆದು ಚತುರ್ವರ್ಣಗಳವರಿಗೂ ಸಂತೋಷದಿಂದ ವಾತ್ಸಲ್ಯವನ್ನು ಆಚರಿಸಬೇಕು. ಜೈನವಚನಸಮುದ್ರದಲ್ಲಿ ಹೇಳಿರುವ ಆ ಮಾತನ್ನು ಅರಿತುಕೊಳ್ಳಬೇಕು. ೧೮೦. ಬಾಗಿಲಿಲ್ಲದ ಮನೆ ಹೆಗ್ಗಡೆಯಿಲ್ಲದ ರಾಜ್ಯವೂ ಮಹಾ ವಾತ್ಸಲ್ಯವಿಲ್ಲದವನ ಗುಣಸಮೂಹವೂ ಬಡವನ ಯೌವನವೂ ಈ ಪ್ರಪಂಚದಲ್ಲಿ ಶೋಭಿಸುವುದಿಲ್ಲ. ೧೮೧. ಆದ್ದರಿಂದ ವಾತ್ಸಲ್ಯವೆನ್ನುವುದು ಸಾಮಾನ್ಯವಲ್ಲ. ಇದನ್ನು ಉದಾಸೀನ ಮಾಡತಕ್ಕದ್ದಲ್ಲ. ಹೀಗೆಂದು ಸಹಜಕವಿಜನ ಮನೋಹರೋದ್ಯಾನದ ಕೋಕಿಲ (ವಜ್ರಕುಮಾರಮುನಿ) ನು ಓಹಿಲೆ ಮಹಾದೇವಿಗೆ ಹೀಗೆ ಹೇಳಿದನು : ೧೮೨, ಕಮಲನೇತ್ರೆ! ದಿವ್ಯಗುಣಭೂಷಣಗಳುಳ್ಳವಳೆ ! ಭವ್ಯಜನರ ಮೇಲೆ ಪ್ರೀತಿಯುಳ್ಳವಳೆ ! ನಿಷ್ಕಾರಣವಾಗಿ ಏಕೆ ಪ್ರತಿಜ್ಞೆ ಮಾಡುತ್ತೀಯೆ ? ಈ ಲೋಕದಲ್ಲಿ ಯಾವಾಗಲೇ ಆದರೂ ನಿನಗೆ ಸಾಧ್ಯವಾಗದ ಕೆಲಸವಿದೆಯೆ ? ನಾಳೆ ಎಲ್ಲರಿಗೂ ಆಶ್ಚರ್ಯವಾಗುವ ಹಾಗೆ ಖೇಚರರಾಜರಿಂದ ನಿನಗೆ ಸಂತೋಷವಾಗುವ ರೀತಿಯಲ್ಲಿ ಜಿನಪೂಜೆಯನ್ನು ಸಂಭ್ರಮವಾಗಿ ನಡೆಯಿಸುತ್ತೇನೆ. ೧೮೩. ಹೀಗೆ ಹೇಳುತ್ತಲೇ, ಓಹಿಲೆ ಮಹಾದೇವಿ ಆ ಸುಕವಿನಿಕರಪಿಕ

ಗದ್ಯ॥ ಎಂಬುದುಂ ಓಹಿಲೆಮಹಾದೇವಿ ಸುಕವಿನಿಕರಪಿಕವಮಾಕಂದನ ವಚನದಿಂ ಚಂದ್ರೋದಯದ ಸಮುದ್ರದಂತೆ ಪೆರ್ಚಿಂದವಿರ್ಪುದುಂ ವಾತ್ಸಲ್ಯರತ್ನಾಕರಂ ಚಾರಣಋದ್ಧಿಪ್ರಾಪ್ತನಪ್ಪುದಱಿಂ ಪವನವೇಗದಿಂದಮರಾವತೀ ಪುರಮನೆಯ್ದಿ ರಾಜಮಂದಿರಮಂ ಪುಗುವುದುಂ ೧೮೪

ಶ್ರೀಮದ್ವಜ್ರಕುಮಾರಮು
ಹಾಮುನಿಪನ ಬರವನಱಿದು ಭಾಸ್ಕರದೇವಂ
ಶ್ರೀಮಹಿತನೊಸೆದು ಪಡೆದು ಮ
ಹಾ ಮುದದಿಂದೆಟ್ಟಿ ಸಿಂಹವಿಷ್ಟರದಿಂದಂ ೧೮೫

ಗದ್ಯ॥ ಅಂತು ಮಣಿಮಾಲೆ ಮಹಾದೇವಿಯಿದಿರೆಟ್ಟಿ ಬಂದು ಬಲಗೊಂಡು ಬಂದಿಸಿ ಭಕ್ತಿಯಿಂದಿದಿರ್ಗೊಂಡು ಪೋಗಿ ವಿಸ್ತೀರ್ಣಮಪ್ಪ ವಿಷ್ಟರಮನೇಱಲಿಕ್ಕಿ ಕಾಲಂ ಕರ್ಚಿ ತಳೋದಕಮಂ ತಲೆಯಮೇಲೆ ತಳಿದುಕೊಂಡು ೧೮೬

ಸುರತರುವಿನ ಮೊಲ್ಲೆಯ ಪಾ
ದರಿಯ ನಮೇರುವಿನ ಪಾರಿಜಾತದ ಪುಷ್ಪೋ
ತ್ಕರದಿಂ ವಜ್ರಮುನೀಂದ್ರನ
ಚರಣಮನಾನಂದಚಿತ್ತದಿಂ ಪೂಜಿಸಿದರ್ ೧೮೭

ಮಾಕಂದ (ವಜ್ರಕುಮಾರಮುನಿ) ನ ಮಾತಿನಿಂದ ಚಂದ್ರೋದಯ ಕಾಲದ ಸಮುದ್ರದ ಹಾಗೆ ಉಬ್ಬಿರಲು ವಾತ್ಸಲ್ಯ ರತ್ನಾಕರನು ಚಾರಣ ಋದ್ಧಿಯನ್ನು ಪಡೆದವನಾದುದರಿಂದ ವಾಯುವೇಗದಿಂದ ಅಮರಾವತೀ ಪಟ್ಟಣವನ್ನು ಸೇರಿ ಅರಮನೆಯನ್ನು ಪ್ರವೇಶಿಸಿದನು. ೧೮೪. ಶ್ರೀಮದ್ವಜ್ರಕುಮಾರ ಮುನಿಶ್ರೇಷ್ಠನು ಬಂದುದನ್ನು ತಿಳಿದು ಭಾಸ್ಕರ ದೇವನು, ಶ್ರೀಮಂತನು, ಪ್ರೀತಿಯಿಂದ ಸಿಂಹಾಸನದಿಂದ ಇಳಿದು ಬಂದು ಇದಿರುಗೊಂಡನು. ೧೮೫. ಹಾಗೆ ಮಣಿಮಾಲೆ ಮಹಾದೇವಿಯೂ ಇದಿರೆದ್ದು ಬಂದು ಪ್ರದಕ್ಷಿಣೆ ಮಾಡಿ ವಂದಿಸಿ ಭಕ್ತಿಯಿಂದ ಸ್ವಾಗತಿಸಿ ಕರೆದುಕೊಂಡು ಹೋಗಿ ವಿಸ್ತಾರವಾದ ಪೀಠವನ್ನು ಹಾಕಿ ಆತನ ಕಾಲುಗಳನ್ನು ತೊಳೆದು ಪಾದೋದಕವನ್ನು ತಮ್ಮ ತಲೆಯ ಮೇಲೆ ಚಿಮುಕಿಸಿಕೊಂಡು ೧೮೬. ದೇವಲೋಕದ ಗಿಡದ, ಮೊಲ್ಲೆ, ಪಾಟಲ, ಸುರಗಿ, ಪಾರಿಜಾತಗಳ ಹೂಗಳ ಸಮೂಹದಿಂದ ವಜ್ರಮುನೀಂದ್ರನ ಚರಣಗಳನ್ನು ಆನಂದವಾಗಿ ಪೂಜಿಸಿದರು. ೧೮೭. ಹಾಗೆ ಪೂಜಿಸಿ ಮುನಿಕುಂಜರನಂ ಬಾಮುದಕ್ಕೆ ಉತ್ಸಾಹಪಟ್ಟು

ಗದ್ಯ॥ ಅಂತು ಪೂಜಿಸಿ ಮುನಿಕುಂಜರನ ಬರವಿಗೆ ಪೆರ್ಚಿ ಕಿಱಿದು ಬೇಗಂ ಭಾಸ್ಕರದೇವನುಂ ಮಣಿಮಾಲೆಯುಂ ಸಮ್ಯಕ್ತ್ವಚೂಡಾಮಣಿಯ ಕಾಲ್ಗಳಂ ತಮ್ಮ ತೊಡೆಯ ಮೇಲಿರಿಸಿ ಮೆಲ್ಲ ಮೆಲ್ಲನೊತ್ತುತ್ತುಂ ಧರ್ಮವುಂ ಕೇಳ್ದು ತದನಂತರಂ ಮುನೀಂದ್ರೋತ್ತಮರ ಮೊಗಮಂ ನೋಡಿ ಕರಕಮಲಮುಕುಳಿತರಾಗಿರ್ದಿಂತೆಂದರ್ ೧೮೮

ಉಮ್ಮಳಿಕೆ ಪೋಯ್ತು ನಯದಿಂ
ದೆಮ್ಮಘನಿಕುರುಂಬಮಿಂದು ನೆಟ್ಟನೆ ಪೋದುವು
ನಿಮ್ಮಡಿ ಸಂತಸದಿಂದಂ
ನಿಮ್ಮ ಶ್ರೀಪಾದಪದ್ಮಮಂ ಕಂಡೀಗಳ್ ೧೮೯

ಗದ್ಯ॥ ಎಂದು ತಮ್ಮ ಭಕ್ತಿಯಂ ಪೊಱಗಣಜನಕ್ಕೆ ತೋರ್ಪಂತೆ ನುಡಿದವರ್ನಿಮ್ಮಡಿ ಬೆಸ ನಾವುದು ಬೆಸಸಿಮೆನೆ ಭಾಸ್ಕರದೇವಂಗೆ ವಾತ್ಸಲ್ಯರತ್ನಾಕರನಿಂತೆಂದಂ ನೀಂ ನಿಮ್ಮ ಸಮಸ್ತ ವಿದ್ಯಾಧರಬಲಂ ಬೆರಸು ಎಮ್ಮೊಡನೆ ದಕ್ಷಿಣಮಧುರಾಪುರಕ್ಕೆ ವಂದು ಪೂತಿವಾಹನ ಮಹಾ ರಾಜನ ಪಿರಿಯರಸಿಯಪ್ಪೊಪಿಲೆ ಮಹಾದೇವಿಯ ಜಿನಪೂಜೆಯುಂ ಪೊಱಮಡಿಪುದೆಂಬುದುಂ, ಮಹಾಪ್ರಸಾದಮಂತೆಗೆಯ್ವುದಾವಗಹನವೆಂದುಭಯಶ್ರೇಢಿಯ ವಿದ್ಯಾಧರರ್ಗೆಲ್ಲಂ ಬಟ್ಟ ಯುಟ್ಟುವುದುಮೆರಡುಗೇಳದೆ ತಂತಮ್ಮ ಮಹಾವಿಭೂತಿಯಿಂದೊದವಿ ವಿದ್ಯಾಧರಮಹೀವಲ್ಲಭ ರಮರಾವತೀ ಪುರಕ್ಕೆವರ್ಪುದುಂ ೧೯೦

ಸ್ವಲ್ಪ ಹೊತ್ತು ಭಾಸ್ಕರದೇವನೂ ಮಣಿಮಾಲೆಯೂ ಸಮ್ಯಕ್ತ್ವ ಚೂಡಾಮಣಿಯಾದ ವಜ್ರಕುಮಾರಮುನಿಯ ಕಾಲುಗಳನ್ನು ತಮ್ಮ ತೊಡೆಯ ಮೇಲಿಟ್ಟುಕೊಂಡು ಮೆಲ್ಲ ಮೆಲ್ಲನೆ ಒತ್ತುತ್ತ ಧರ್ಮವನ್ನು ಕೇಳಿ ಆಮೇಲೆ ಮುನೀಂದ್ರೋತ್ತಮರ ಮುಖವನ್ನು ನೋಡಿ ಕರಕಮಲಗಳನ್ನು ಜೋಡಿಸಿಕೊಂಡಿದ್ದು ಹೀಗೆಂದರು : ೧೮೮. "ವ್ಯಥೆ ಹೋಯಿತು. ಉಪಾಯದಿಂದ ನಮ್ಮ ಪಾಪ ರಾಶಿ ಈ ದಿನ ನೆಟ್ಟನೆ ಹೋಗಿಬಿಟ್ಟುವು. ತಮ್ಮ ಕೃಪೆಯಿಂದ ನಿಮ್ಮ ಶ್ರೀ ಪಾದಪದ್ಮಗಳನ್ನು ಈಗ ಕಂಡದ್ದರಿಂದ !" ೧೮೯. ಹೀಗೆಂದು ತಮ್ಮ ಭಕ್ತಿಯನ್ನು ಹೊರಗಿನ ಜನಕ್ಕೆ ತೋರುವ ಹಾಗೆ ನುಡಿದು ಅವರು "ನಿಮ್ಮ ಪಾದ, ಏನು ಅಪ್ಪಣೆ ? ಬೆಸಸಿ" ಎನ್ನಲು ಭಾಸ್ಕರದೇವನಿಗೆ ವಾತ್ಸಲ್ಯ ರತ್ನಾಕರನು ಹೀಗೆಂದನು : "ನೀವು ನಿಮ್ಮ ಸಮಸ್ತ ವಿದ್ಯಾಧರ ಸೈನ್ಯದೊಡನೆ ನಮ್ಮ ಸಂಗಡ ದಕ್ಷಿಣ ಮಧುರಾಪುರಕ್ಕೆ ಬಂದು ಪೂತಿವಾಹನ ಮಹಾರಾಜನ ಹಿರಿಯ ರಾಣಿ ಯಾದ ಓಪಿಲೆ ಮಹಾದೇವಿಯ ಜಿನಪೂಜೆಯ ರಥವನ್ನು ಹೊರಡಿಸಬೇಕು." ಹೀಗೆ ಹೇಳಲು, "ಮಹಾ ಪ್ರಸಾದ, ಹಾಗೆಯೇ ಮಾಡುತ್ತೇನೆ, ಅದು ಯಾವ ಕಷ್ಟದ ವಿಷಯ ?" ಎಂದು ನುಡಿದು ಉಭಯಶ್ರೇಢಿಗಳ ವಿದ್ಯಾಧರರಿಗೆಲ್ಲ ಹೇಳಿ ಕಳಿಸಿದನು. ಅವರೂ ಬದಲು ಮಾತಿಲ್ಲದೆ ತಮ್ಮ ತಮ್ಮ ಮಹಾಮಹಿಮೆಗಳಿಂದ ಗುಂಪು ಕೂಡಿದರು. ವಿದ್ಯಾಧರ ರಾಜರೆಲ್ಲರೂ ಅಮರಾವತೀಪುರಕ್ಕೆ ಬಂದರು. ೧೯೦. ಅವಮನೆಯಿಂದ

ಅರಮನೆಯಿಂದಂ ವಿಬುಧೇ
ಶ್ವರನಿಕರಂ ರಾಜಲೀಲೆಯಿಂ ಪೊಱಮಟ್ಟಾ
ದರದಿಂ ಸಮಸ್ತ ವಿದ್ಯಾ
ಧರರಾಜರ್ವೆರಸು ವಜ್ರಮುನಿಪನ ಬೆಸನಿಂ ೯೧

ದೆಸೆ ಮೊರ್ದನಿಯಿಡೆ ಪಱೆ ಘೂ
ರ್ಣಿಸೆ ದುಗ್ಧಾಂಬುಧಿಯ ತೆಱೆಗಳಂ ಪೋಲ್ತೆತ್ತಂ
ಪೆಸರಿಸೆ ಗಗನದ ತಳದೊ
ಳ್ಮಿಸುಗುವ ಬೆಳ್ಗೊಡೆಯುಮೆಸೆವ ಮುತ್ತಿನ ಕೊಡೆಯುಂ ೯೨

ನೆರೆದು ಮಹೀಧರತತಿಗಳ್
ಧರೆಯುಂ ಬಿಟ್ಟಂತರಿಕ್ಷದೊಳ್ ತಮ್ಮನಿತುಂ
ಕರಮೊಪ್ಪಿರ್ದಪುವೆಂಬಂ
ತಿರೆ ರಂಜಿಸಿದುವು ಮದಾಂಧ ಸಿಂಧುರಘಟೆಗಳ್ ೯೩

ತಾರಾವಳಿಗಳ್ ವಜ್ರಕು
ಮಾರಮುನೀಶ್ವರನನಿದಿರ್ಗೊಳಲ್ ಬಂದು ಸವಿ
ಸ್ತಾರದಿನಿರ್ದಪುವೆನಿಸಿದ
ಪೋರಂತಿರೆ ತುಱುಗಿದವಮಳ ತುರಗಚಯಂಗಳ್ ೯೪

ದೇವರಾಜಸಮೂಹವು ರಾಜಲೀಲೆಯಿಂದ ಹೊರಟು ಆದರ ಪೂರ್ವಕವಾಗಿ ಎಲ್ಲಾ ವಿದ್ಯಾಧರ ರಾಜರಿಂದ ಕೂಡಿ ವಜ್ರಮುನಿಪತಿಯ ಆಜ್ಞೆಯಂತೆ ೯೧. ದಿಕ್ಕುಗಳು ಪ್ರತಿಧ್ವನಿ ಕೊಡುತ್ತಿರಲು, ತಮಟೆಗಳು ಘೂರ್ಣಿಸುತ್ತಿರಲು ಕ್ಷೀರಸಮುದ್ರದ ಅಲೆಗಳನ್ನು ಹೋಲುತ್ತ, ಆಕಾಶದಲ್ಲೆಲ್ಲ ಹಬ್ಬಿದ ಬೆಳ್ಗೊಡೆಗಳೂ ಮುತ್ತಿನ ಕೊಡೆಗಳೂ ಎಲ್ಲ ಕಡೆಗಳಲ್ಲಿಯೂ ಹೊಳೆಯುತ್ತಿದ್ದುವು. ೯೨. ಪರ್ವತಸಮೂಹಗಳೆಲ್ಲ ಭೂಮಿಯನ್ನು ಬಿಟ್ಟು ಅಂತರಿಕ್ಷದಲ್ಲಿ ತಾವೆಲ್ಲರೂ ಶೋಭಿಸುತ್ತಿರುವುವೆಂಬ ಹಾಗೆ ಮದ್ದಾನೆಗಳ ಸೈನ್ಯಗಳು ಶೋಭಿಸುತ್ತಿದ್ದುವು. ೯೩. ನಕ್ಷತ್ರ ಸಮೂಹಗಳು ವಜ್ರಕುಮಾರ ಮುನೀಶ್ವರನನ್ನು ಎದುರುಗೊಳ್ಳುವುದಕ್ಕೋಸ್ಕರ ಬಂದು ವಿಸ್ತಾರವಾಗಿ ನಿಂತಿವೆಯೆನ್ನಿಸುವ ಹಾಗೆ ವಿದ್ಯಾಧರ ಸೈನ್ಯದ ಕುದುರೆಗಳು ಆಕಾಶದಲ್ಲೆಲ್ಲ ಹರಡಿಕೊಂಡಿದ್ದುವು. ೯೪. ಇಂದ್ರನ ಮೇಲೆ ಮುನಿಸಿಕೊಂಡು ದೇವತಾಸ್ತ್ರೀಸಮೂಹವು ದೇವೇಂದ್ರನ

ಮುನಿದಿಂದ್ರಂಗೆ ಸುರಾಂಗನಾತತಿ ಸುರೇಂದ್ರಾವಾಸದಿಂ ಪಳ್ಳಿವಂ
ದು ನಿತಾಂತಂ ನೆರೆದಿರ್ದರೆಂಬರದೊಳೆಂಬಂತೊಪ್ಪಿ ವಿದ್ಯಾಧರಾಂ
ಗನೆಯರ್ ಕೋಮಲಗಾತ್ರಿಯರ್ ವಿಕಸಿತಾಂಭೋಜಾಕ್ಷಿಯರ್ ಖೇಚರಾ
ವನಿಪಾಲರ್ಕಳ ಚಿತ್ತಮಂ ಕದಡುತಂ ಬಂದರ್ ಮಹೋತ್ಸಾಹದಿಂ ೧೯೫

ಗದ್ಯ॥ ಮತ್ತಂ ಬಟಲ್ಮುಡಿಯ ಸೋರ್ಮುಡಿಯ ಪೂಮುಡಿಯ ನಿಱುದಲೆಯ ಸುಳಿಗುರುಳ ತುಂಬುನೊಸಲ ಅಸಿಯ ಬೊಟ್ಟಿನ ನೀಳ್ದ ಪುರ್ವಿನ ಚೆಲ್ಲೆಗಣ್ಣ ತುಱುಗೆವೆಯ ವಿಶಾಲಗಂಡಸ್ಥಳದ ರಮಣೀಯ ಕರ್ಣಯುಗಳದ ಪವಳದ ಬಾಯ್ದೆರೆಯ ಚೆಲ್ವುವಡೆದ ಮೂಗಿನ ರೇಕಗೊರಲ ಘನಕುಚದ ನಳಿತೋಳ ಕೋಮಲಾಂಗುಲಿಯ ಕೆಂದಳದ ಬಡನಡುವಿನ ತೋರ ಜಘನದ ನೇರಿದಪ್ಪ ಬಾಸೆಯ ನುಣ್ಣುವಡೆದೂರುದ್ವಯದ ಮೃದುತಳದ ಮಂದಗಮನದ ಮುದ್ದುನುಡಿಯ ಕೋಮಲಾಂಗದ ವಿದ್ಯಾಧರವಾರನಾರೀಕದಂಬಂ ಕಾಮದೇವನ ರಾಜ್ಯಕ್ಕೆ ನಾವು ಮೊದಲಿಗರೆಂಬಂತೆ ಪೊಂಕಂ ಬೆರಸು ತರತರದಿಂದಿರಲುಂ ಸ್ವರ್ಣದ್ವೀಪವನನುಕರಿಸುವ ಕನಕಮಯವಪ್ಪ ಪೊನ್ನ ವಿಮಾನದಿಂ ಚಂದ್ರಮಂಡಲಮೆ ಪಲವುರೂಪಿಂ ನಭಸ್ಥಳದೊಳಿರ್ದುದೆನಿಸುವ ಬೆಳ್ಳಿಯ ವಿಮಾನಂಗಳಿಂ ಗಗನ ಶ್ರೀವಿದ್ಯಾಧರೆ ಸೈನ್ಯಮನರ್ತಿಯಿಂ ಶತಸಹಸ್ರವದನಂಗಳಿಂ

ವಾಸಸ್ಥಾನದಿಂದ ವಲಸೆ ಬಂದು ಹೆಚ್ಚಾಗಿ ಆಕಾಶದಲ್ಲಿ ಸೇರಿರುವರೆಂಬಂತೆ ಶೋಭಿಸುತ್ತ ವಿದ್ಯಾಧರಾಂಗನೆಯರು, ಕೋಮಲ ಶರೀರಗಳುಳ್ಳವರು, ಅರಳಿದ ಕಮಲದಂಥ ಕಣ್ಣುಗಳುಳ್ಳ ವರು, ಖೇಚರರಾಜನ ಮನಸ್ಸನ್ನು ಕದಡುತ್ತ ಬಂದರು. ೧೯೫. ಅಲ್ಲದೆ ಸಡಿಲವಾಗಿ ಮುಡಿಗಟ್ಟಿದ್ದ, ಸೋರುಮುಡಿಯು, ಹೂಮುಡಿಯುನ್ನು ಕಟ್ಟಿದ, ನಿರುದಲೆಯು, ಸುಳಿಯ ಮುಂಗೂದಲುಳ್ಳ ತುಂಬುಹಣೆಯು, ಚಿಕ್ಕತಿಲಕದ, ಉದ್ದವಾದ ಹುಬ್ಬಿನ, ಚಂಚಲ ನೇತ್ರಗಳ, ಒತ್ತಾದ ಎವೆಗಳ, ವಿಶಾಲವಾದ ಗಂಡಸ್ಥಳವುಳ್ಳ, ಸುಂದರವಾದ ಕಿವಿಗಳಿಂದ ಕೂಡಿದ, ಹವಳದಂತೆ ಕೆಂಪನೆಯ ತುಟಿಗಳುಳ್ಳ ಚೆಲುವಿನಿಂದ ಕೂಡಿದ ಮೂಗುಳ್ಳ, ರೇಖೆಯುಳ್ಳ ಕೊರಳಿನ, ಘನಕುಚದ, ಉದ್ದನೆಯ ತೋಳುಗಳ ಕೋಮಲವಾದ ಬೆರಳುಗಳುಳ್ಳ, ಕೆಂಪನೆಯ ಹಸ್ತಗಳ, ಸಣ್ಣ ನಡುವಿನ, ದೊಡ್ಡ ಜಘನವುಳ್ಳ, ನೆಟ್ಟಿನಿರುವ ಬಾಸೆಯ, ನುಣುಪುಳ್ಳ ತೊಡೆಗಳ, ಮೃದುಪಾದಗಳ, ನಿಧಾನವಾಗಿ ಚಲಿಸುವ, ಮುದ್ದು ಮಾತಿನ, ಕೋಮಲ ಶರೀರದ ವಿದ್ಯಾಧರರ ಸೂಳೆಯರ ಗುಂಪು ಕಾಮದೇವನ ರಾಜ್ಯಕ್ಕೆ ತಾವು ಮೊದಲನೆಯವರೆನ್ನುವಂತೆ ಬಿಂಕದಿಂದ ಸಾಲುಸಾಲಾಗಿರಲು, ಸುವರ್ಣ ದ್ವೀಪವನ್ನು ಅನುಕರಣಮಾಡುವ ಚಿನ್ನದಮಯವಾದ ಪೊನ್ನ ವಿಮಾನದಿಂದ ಚಂದ್ರಮಂಡಲವೇ ಹಲವು ರೂಪಗಳಿಂದ ನಭೋಂಗಣದಲ್ಲಿ ಇದೆಯೋ ಎಂದೆನಿಸುವ ಬೆಳ್ಳಿಯ ವಿಮಾನಗಳಿಂದ, ಗಗನಲಕ್ಷ್ಮಿಯು ವಿದ್ಯಾಧರ ಸೈನ್ಯವನ್ನು ಪ್ರೀತಿಯಿಂದ ಲಕ್ಷಮುಖಗಳಿಂದ

ನೋಡಿದಪಳೆನಿಸುವ ಪದ್ಮರಾಗಮಯ ವಿಮಾನಂಗಳಿಂ ಮೌಕ್ತಿಕಾವಳಿಯಿಂ ಮುತ್ತಿನಾಗರ ಮನಿಳಿಸುವ ವಿಮಾನಂಗಳಿಂ ಖೇಚರಸೈನ್ಯದಗುರ್ವಿಗೆ ಕಣ್ಣೆಱಗದಂತೆ ವಿಧಾತ್ರಂ ಚೀನದ ವಸ್ತ್ರದಿಂ ಬಾಸಣಿಸಿದನೆಂಬಂತೆಸೆದು ಸುತ್ತಿದ ಪಚ್ಚೆಯ ವಿಮಾನಂಗಳಿಂ ವಿದ್ಯಾಧರ ತಂತ್ರಕ್ಕೆ ವಿಧಿ ಮಂತ್ರಿಸಿ ಕಾಡಿಗೆಯಂ ಸುಂಚಿಸಿದನೆಂಬಂತೀಂದ್ರ ನೀಲದ ವಿಮಾನಂಗಳಿಂ ಕಾಮನ ಮೀನಪತಾಕೆಯೊಡನೆಕ್ಕತುಳಕ್ಕ ಮುಚ್ಚಳಿಸಿ ಪೊಱಮಟ್ಟವೆನಿಸಿ ಚೆಲ್ವುವಡೆದ ಮಹಾಧ್ವಜಂಗಳಿಂ ದಿನಕರ ಕಾಂತಿಯುಮಂ ನೀವಿಂ ಪರಿಕಿಸಿ ನೋಡಿಮೆಂದು ಸೂರ್ಯನೊಡನೆ ಕಯ್ವಾಯ್ದು ಮಧ್ಯಸ್ಥರಲ್ಲಿಗೆ ಬರ್ಪಂತೆ ಪೊಳೆವ ಪೊಂಗಾಲಿಗಳಿಂದೊಪ್ಪುವ ರದಂಗಳಿಂ, ಹಸ್ತ್ಯಶ್ವ ರಥಪದಾತಿಗಳೊಂದಱಳೊಂದು ಪೊರ್ದಲೀಯದೆ ನಿಯಮಿಸುವ ಕಟ್ಟೆಗೆಕಾಱರಿಂ, ಕಾಮದೇವನ ರೂಪಿಂಗೆಮ್ಮ ರೂಪೆ ಮಿಗಿಲೆಂಬಂತೆ ಕಡಗ ಕಂಕಣ ಹಾರಕೇಯೂರ ಮಕುಟಾದ್ಯಾಭರಣಂಗಳಿಂ ತೊಳಗಿ ಬೆಳಗುವಂಬರಚರಕುಮಾರರಿಂದೆಸೆದು ೧೯೬

ಅಮರೇಂದ್ರಂಗಮಹೀಶ್ವರಂಗಮಮರೇಂದ್ರಾವಾಸಮುಂ ನಾಗಲೋ
ಕಮುಮೊಪ್ಪಿರ್ದುವವರ್ಗೆ ಕುಂದೆ ಸಿರಿಗಂ ತಾನೆಂದು ಮೆಯ್ವೆರ್ಚಿ ವಿ
ಕ್ರಮದಿಂ ಭಾಸ್ಕರದೇವನಂಬರದೊಳತ್ಯಾನಂದದಿಂ ಮಾಡಿದಂ
ಕ್ರಮದಿಂ ಖೇಚರಲೋಕಮಂ ಮಹಿಮೆಯಿಂದೆಂಬಂತದೇನೊಪ್ಪಿತೋ ೧೯೭

ನೋಡುವಳೆನ್ನಿಸುವ ಪದ್ಮರಾಗಮಯವಾದ ವಿಮಾನಗಳಿಂದಲೂ ಮುತ್ತಿನ ಸರಗಳಿಂದ ಮುತ್ತಿನ ಆಶ್ರಯಗಳನ್ನು ಕೀಳ್ಮಾಡುವ ವಿಮಾನಗಳಿಂದ ಖೇಚರ ಸೈನ್ಯದ ಅದ್ಭುತಕ್ಕೆ ದೃಷ್ಟಿ ತಾಕದಂತೆ ಬ್ರಹ್ಮನು ಚೀನದ ಬಟ್ಟೆಯಿಂದ ಹೊದಿಸಿದನೆಂಬಂತೆ ಶೋಭಿಸಿ, ಸುತ್ತಿದ್ದ ಪಚ್ಚೆಯ ವಿಮಾನಗಳಿಂದ ವಿದ್ಯಾಧರ ಸೈನ್ಯಕ್ಕೆ ವಿಧಿಯು ಮಂತ್ರಿಸಿ ಕಾಡಿಗೆಯನ್ನು ಬಳಿದನೆಂಬಂತೆ ಕಾಣುವ ಇಂದ್ರನೀಲವಿಮಾನಗಳಿಂದ ಮನ್ಮಥನ ಮೀನಧ್ವಜದೊಡನೆ ಪರಾಕ್ರಮದಿಂದ ಉನ್ನತವಾಗಿ ಹಾರಿ ಹೊರಟವೆನಿಸಿ ಚೆಲುವಿನಿಂದ ಕೂಡಿದ ಮಹಾಧ್ವಜಗಳಿಂದ "ಇನ್ನು ನೀವು ಸೂರ್ಯನ ಕಾಂತಿಯನ್ನು ಪರೀಕ್ಷಿಸಿ ನೋಡಿ" ಎಂದು ಸೂರ್ಯನೊಡನೆ ಕೈಮಾಡಿ ಮಧ್ಯಸ್ಥಗಾರರ ಬಳಿಗೆ ಬರುವ ಹಾಗೆ ಹೊಳೆಯುವ ಹೊನ್ನಿನ ಗಾಲಿಗಳಿಂದ ಒಪ್ಪುವ ರಥಗಳಿಂದ ಆನೆ, ಕುದುರೆ, ರಥ, ಕಾಲುಬಲಗಳು ಒಂದರಲ್ಲೊಂದು ಸೇರಗೊಡದೆ ನಿಯಮಿಸುವ ಕಟ್ಟೆಗೆ ಕಾರರಿಂದಲೂ ಕಾಮದೇವನ ರೂಪಕ್ಕೆ ನಮ್ಮ ರೂಪವೇ ಹೆಚ್ಚು ಎಂಬ ಹಾಗೆ ಕಡಗ ಕಂಕಣ ಹಾರಕೇಯೂರ ಮಕುಟ (ಕಿರೀಟ) ಮೊದಲಾದ ಆಭರಣಗಳಿಂದ ತೊಳಗಿ ಬೆಳಗುವ ಖೇಚರಕುಮಾರರಿಂದ ಪ್ರಕಾಶಿಸಿತು. ೧೯೬. ಅಮರೇಂದ್ರನಿಗೂ ಸರ್ಪರಾಜನಿಗೂ ಸ್ವರ್ಗವೂ ನಾಗಲೋಕವೂ ಶೋಭಿಸುತ್ತವೆ. ಅವರಿಗಿಂತ ಐಶ್ವರ್ಯದಲ್ಲಿ ನಾವು ಕುಂದೆ ? ಎಂದು ಮೈಯುಬ್ಬಿ ಪರಾಕ್ರಮದಿಂದ ಭಾಸ್ಕರದೇವನು ಆಕಾಶದಲ್ಲಿ ವಿಶೇಷ ಆನಂದದಿಂದ ಕ್ರಮವಾಗಿ ತನ್ನ ಮಹಿಮೆಯಿಂದ ಖೇಚರಲೋಕವನ್ನೇ ಸೃಷ್ಟಿಮಾಡಿದನೋ ಎಂಬಂತೆ ಅದೇನು ಒಪ್ಪುತ್ತಿತ್ತೋ ! ೧೯೭. ಎಲವದ, ಶಂಖದ, ಕಹಳೆಯ, ಇನ್ನು ಹಲವು ಆಧಿಕ್ಯ

ಎಲವದ ಶಂಖದ ಕಹಳೆಯ
ಸಲೆ ಪಲವುಂ ಪೆಂಪುವೆತ್ತ ಕರಡೆಯ ಪೊಸಮು
ದ್ದಲೆಯ ತ್ರಿವಳಿಯ ಭೇರಿಗ
ಳುಲಿಯಿಂದರ್ಣವಮನೆಯ್ದೆ ಪೋಲ್ತುದು ಸೈನ್ಯಂ ೧೯೮

ತಳಿಗಳ್ ಬೆಳ್ಗೊಡೆಗಳ ಮಂ
ಡಳಿಯಿಂ ಸತ್ತಿಗೆಯ ಮೇಘಡಂಬರದ ನೆಳ
ಲ್ಗಳಿನೊಪ್ಪುವೆತ್ತುದಾ ಖಗ
ಬಲಮಾರವೆಯಂತೆ ನಾಡೆ ಕಡು ಚೆಲ್ವಿಂದಂ ೧೯೯

ಸುರಲೋಕಂ ಮರ್ತ್ಯಲೋಕಂ ಫಣಿಪತಿಭುವನಂ ಪೂಜ್ಯಮೆಮ್ಮಿಂದಮೆಂಬಂ
ತಿರೆ ಮುನ್ನಾರ್ನೋಂತರೆಂದುಬ್ಬರಿಸಿ ಕೊನೆದು ಕಾಮಾಸ್ತ್ರದಂತೊಪ್ಪಿ ನಾನಾ
ಭರಣವ್ರಾತಂಗಳಿಂದಂ ನೆಱೆದು ಮೆಱೆಯುತುಂ ಸೌಂದರಾಕಾರಮಂ ಭಾ
ಸುರ ಲಾವಣ್ಯಾಬ್ಧಿ ಬೆಳ್ಳಂಗೆಡೆದವೊಲೆಸೆದರ್ ಖೇಚರಸ್ತ್ರೀಸಮೂಹಂ ೨೦೦

ತ್ರಿದಶೇಂದ್ರಸ್ತ್ರೀಯರಿಂದಲ್ಲದೆ ಫಣಿಪತಿಯುಂ ನೋೞ್ಪೊಡಿಂ ಸ್ತ್ರೀಯರಿಂದ
ಲ್ಲದೆ ಚಕ್ರಾಧೀಶರುಂ ಭಾವಿಸುವೊಡೆ ಧರೆಯೊಳ್ ಪೆಂಪಿನಿಂ ಸ್ತ್ರೀಯರಿಂದ
ಲ್ಲದೆ ಮೇಣ್ತಮ್ಮಿಂದೆ ತಾವಿನ್ನೆಸೆಯರದಱಿನೆಮ್ಮಂತು ಮಾಂಗಲ್ಯರಾರೆಂ
ದೊದವಿಂ ಬಂದಿರ್ದುವೊಪ್ಪಂ ಬೆರಸು ಸಕಲ ವಿದ್ಯಾಧರ ಸ್ತ್ರೀಸಮೂಹಂ ೨೦೧

ಪಡೆದ ಕರಡೆಯ ಹೊಸ ಮದ್ದಲೆಯ ತ್ರಿವಳಿ[1]ಯ, ಭೇರಿಗಳ, ಶಬ್ದದಿಂದ ಸೈನ್ಯವು ವಿಶೇಷವಾಗಿ ಸಮುದ್ರವನ್ನು ಹೋಲುತ್ತಿತ್ತು. ೧೯೮. ಕೊಡೆಗಳು ಬೆಳ್ಕೊಡೆಗಳ ಸಮೂಹದಿಂದ, ಸತ್ತಿಗೆಯ. ಮೇಘಸಮೂಹದ ನೆರಳುಗಳಿಂದ. ಆ ಖೇಚರ ಸೈನ್ಯವು ಆರವೆಯಂತೆ ಬಹಳ ಚೆಲುವಿನಿಂದ ಶೋಭಿಸುತ್ತಿತ್ತು. ೧೯೯. ಸುರಲೋಕ ನರಲೋಕ, ನಾಗಲೋಕಗಳು ನಮಗಿಂತ ಪೂಜ್ಯವೆನ್ನುವುದಾದರೆ ಮೊದಲು ಯಾರು ಪುಣ್ಯವಂತರು(ನೋಂತವರು) ? ಎಂದು ಉಬ್ಬಿಹೋಗಿ ಹೊಗಳಿಕೊಂಡು ಕಾಮನ ಅಸ್ತ್ರಗಳಂತೆ ಶೋಭಿಸಿ ಅನೇಕ ಆಭರಣಗಳಿಂದ ಕೂಡಿ ಮೆರೆಯುತ್ತ ಸುಂದರ ಆಕಾರವನ್ನು, ಹೊಳೆಯುವ ಲಾವಣ್ಯ ಸಮುದ್ರವು ಜಲಪಾತವಾಗಿ ಧುಮುಕಿದ ಹಾಗೆ ಖೇಚರಸ್ತ್ರೀಯರು ಮೆರೆಯಿಸುತ್ತಿದ್ದರು. ೨೦೦. ದೇವೇಂದ್ರನೂ ಆದಿಶೇಷನೂ ನೋಡುವುದಾದರೆ ಚಕ್ರವರ್ತಿಗಳು ಕೂಡ ಸ್ತ್ರೀಯರಿಂದಲ್ಲದೆ ತಮ್ಮಿಂದ ತಾವೇ ಲೋಕದಲ್ಲಿ ಶೋಭಿಸರು. ಆದ್ದರಿಂದ ಇನ್ನು ನಮಗಿಂತ ಮಂಗಳಕರರಾದವರು ಯಾರು ? ಎಂದು ಗುಂಪಾಗಿ ಸಮಸ್ತ ವಿದ್ಯಾಧರ ಸ್ತ್ರೀಯರೂ ಒಟ್ಟಿಗೆ ಬಂದಿದ್ದರು. ೨೦೧. ಹೂವುಗಳು ಆಕರ್ಷಣೆಯನ್ನುಂಟು ಮಾಡುತ್ತಿರಲು, ನಳಿ

1. ತ್ರಿವಳಿ ← ತಿವಳಿ = ಪಂಚಮಹಾವಾದ್ಯಗಳಲ್ಲಿ ಒಂದು.

ಅಲರ್ಗಳ್ಸೋಲಮಂ ಪುಟ್ಟಿಸುತಿರೆ ನಳಿತೋಳ್ಗಾಡಿಯಂ ಕೂಡೆ ಮಾಡು
ತ್ತಿರೆ ಧಮ್ಮಿಲ್ಲಂಗಳೆತ್ತಂ ಖಚರರ ಮನಮಂ ಮಾಣದೋರಂತೆ ಚೆಚ್ಚು
ತ್ತಿರೆ ಲಾವಣ್ಯಂ ತುಳುಂಕುತ್ತಿರೆ ಮೃದುಗಮನಂ ಚಿತ್ತಮಂ ಪತ್ತಿನೂಂಕು
ತ್ತಿರೆ ಬಂದರ್ ಚೆನ್ನೆಯರ್ ಚೆನ್ನಳವಡೆ ಮುದದಿಂ ಖೇಚರಸ್ತ್ರೀಸಮೂಹಂ ೨೦೨

ಸ್ಮರನಿನ್ನಾನಿಲ್ಲ ದಂದೀಜನಮನೆಱಗಿಸಲೋಡಿಸಲ್ ಮ
ತ್ಸರದಿಂದಲ್ಲಾಡಿಸಲ್ ಪೋಲಿಸಲವಯವದಿಂ ತೂಳ್ದಿ ಬೆನ್ನಟ್ಟಿ ಮುಟ್ಟಲ್
ಪುರುಡಿಂತಾಗಲ್ಕದೇನೊರ್ವನೆ ನೆಱೆವನೆ ಪೇೞೆಂದು ಲೋಕಕ್ಕೆ ಪೇೞ್ವಂ
ತಿರೆ ಬಂದರ್ ಬಿಂಕದಿಂ ಸಂಕಿಸದೆ ಸಕಲ ವಿದ್ಯಾಧರಸ್ತ್ರೀಸಮೂಹಂ ೨೦೩

ಗದ್ಯ॥ ಅಂತು ಗಗನ ಚಕ್ರಕ್ಕೆ ಬೇರೊಂದು ಗಗನ ಚಕ್ರಂ ಬಿರ್ದುವಂದುದೆಂಬಂತಾನುಂ ಮಾಣದೊಂದೆಡೆಯೊಳ್ ಪಲಕಾಲಮಿರ್ದಲಸಿ ಕ್ಷೀರಸಾಗರಮುಸಿರ್ವಂತಾಗೆ ಮೇಗೆ ನೆಗೆದುದೆಂಬಂತಾನುಂ ವಾತ್ಸಲ್ಯರತ್ನಾಕರನ ಕೀರ್ತಿಲತೆಯ ದಾಂಗುಡಿಯಂತಾನುಂ ಕರಮೊಪ್ಪಿ ದಕ್ಷಿಣ ಮಧುರೆಗೆ ವಿದ್ಯಾಧರಸಾಧನಂ ಬರ್ಪುದುಂ ಪೌರವರ್ಕಂಡು ಬೆಱಗಾಗಿ ದೇವಲೋಕಂ ಮೇಲೆ ಬಿರ್ದುದೆಂದು ತಲ್ಲಣಿಸಿ ಬೆಬ್ಬಳಿಸಿ ನೋಡುತಿರ್ಪುದುಂ ಬುದ್ಧದಾಸಿಯ ಪಕ್ಷಮುಳ್ಳರುಂ ಸುಗತಂಗೆ ಭಕ್ತರಪ್ಪರುಮಿಂತೆಂದರ್ ೨೦೪

ತೋಳುಗಳು ಅಂದವನ್ನು ತೋರುತ್ತಿರಲು ತುರುಬುಗಳು ಖೇಚರರ ಮನಸ್ಸುಗಳನ್ನು ಅತಿಶಯವಾಗಿ ಚೆಚ್ಚುತ್ತಿರಲು, ಲಾವಣ್ಯವು ತುಳುಕುತ್ತಿತ್ತು. ಅವರ ಮಂದಗಮನವು ಚಿತ್ತವನ್ನು ಹತ್ತಿ ಮುಂದೆ ನೂಕುತ್ತಿತ್ತು. ಹೀಗೆ ಖೇಚರ ಸ್ತ್ರೀಯರ ಸಮೂಹದ ಚೆನ್ನೆಯರು ತಮ್ಮ ಅಂದವನ್ನು ಮೆರೆಯುತ್ತ ಬರುತ್ತಿದ್ದರು. ೨೦೨. "ಇನ್ನು ನಾನು ಇಲ್ಲದೆ ಹೋದರೆ ಈ ಜನರನ್ನು ಸೋಲಿಸಿ, ಓಡಿಸಲು, ಮತ್ಸರದಿಂದ ಅಲ್ಲಾಡಿಸುವುದಕ್ಕೆ ಬೇಗನೆ ಅಟ್ಟಿ, ಬೆನ್ನಟ್ಟಿ, ಮುಟ್ಟಿ ಹುರುಡಿನಿಂದ ತಾಗುವುದಕ್ಕೆ ಮನ್ಮಥನೊಬ್ಬನೇ ಶಕ್ತನಾಗುತ್ತಾನೆಯೆ ? ಹೇಳು." ಎಂದು ಲೋಕಕ್ಕೆ ಹೇಳುವಂತೆ ಸಕಲ ವಿದ್ಯಾಧರಸ್ತ್ರೀಯರೂ ಬಿಂಕದಿಂದ ಸ್ವಲ್ಪವೂ ಶಂಕೆಪಡದೆ ಬರುತ್ತಿದ್ದರು. ೨೦೩. ಹಾಗೆ ಗಗನಮಂಡಲಕ್ಕೆ ಬೇರೊಂದು ಗಗನ ಚಕ್ರವು ಔತಣಕ್ಕೆ ಬಂದಿತೆಂಬಂತೆ, ಕ್ಷೀರಸಾಗರವು ಬಹಳ ಕಾಲದಿಂದ ಚಲಿಸದೆ ಒಂದೇ ಕಡೆ ಇದ್ದು ಬೇಸರಗೊಂಡು ಮೇಲಕ್ಕೆ ನೆಗೆದುದೋ ಎಂಬ ಹಾಗೆಯೂ ವಾತ್ಸಲ್ಯರತ್ನಾಕರನ ಕೀರ್ತಿಲತೆಯ ದೊಡ್ಡ ಚಿಗುರಿನಂತೆಯೂ ವಿಶೇಷವಾಗಿ ಶೋಭಿಸಿ ದಕ್ಷಿಣ ಮಧುರೆಗೆ ವಿದ್ಯಾಧರ ಸೈನ್ಯವು ಬಂದಿತು, ಅದನ್ನು ಪುರಜನರು ಕಂಡು ಬೆರಗಾಗಿ ದೇವಲೋಕವೇ ಬಂದು ಮೇಲೆ ಬಿದ್ದಿತೆಂದು ಗಾಬರಿಗೊಂಡು ಭೀತಿಯಿಂದ ನೋಡುತ್ತಿದ್ದರು. ಆಗ ಬುದ್ಧದಾಸಿಯ ಪಕ್ಷಪಾತಿಗಳೂ, ಸುಗತನಿಗೆ ಭಕ್ತರಾದವರೂ ಹೀಗೆಂದರು; ೨೦೪. "ಬುದ್ಧನ ರಥವನ್ನು ಹೊರಡಿಸುವ ಉತ್ಸಾಹದಿಂದ ದೇವಲೋಕದಿಂದ ದೇವರು

ಬುದ್ಧನ ರಥಮಂ ಪೊಱಮಡಿ
ಪುದ್ಧತೆಯಿಂ ದೇವಲೋಕದಿಂ ದೇವರ್ ಸ
ನ್ನದ್ಧಪರರಾಗಿ ಪಲವುಂ
ಪದ್ಧತಿಯಿಂ ಬಂದರಲ್ಲಿ ಸಂದೆಯಮುಂಟೇ ೨೦೪

ಗದ್ಯ॥ ಎಂದು ರಾಗಿಸುತ್ತಿರ್ಪನ್ನೆಗಂ ಕಣ್ಣೋೞ್ ಮಳಲಂ ಪೊಯ್ದುಟ್ಟುದಂ ಕೊಂಡರೆಂಬಂತಾಗಿ ಬುದ್ಧದಾಸಿಯ ಪಕ್ಷದವರ ಮೊಗಂಗಳ್ ಕಱಂಕುವರಿದಂತೆ ಕರ್ಗೆಯುಂ, ಕೂರ್ಪಡೆಯುದ ಪೈತ್ತ್ಯಾಧಿಕನಂತೊಡಲುರಿಯೆಯುಂ, ತಾಯ್ಸತ್ತ ಶಿಶುವಿನಂತೆ ಮಱುಗೆಯುಂ, ಸಕಲ ಗುಣಗಣನಿಳಯೆಯುಪ್ಪೋಹಿಲೆ ಮಹಾದೇವಿಯ ರಾಜಭವನಕ್ಕೆ ವಂದು ವಿದ್ಯಾಧರರಗುರ್ವಿಯಿಂ ನಿಲೆಪುರದೊಳಗಣ ಭವ್ಯ ಜನರುಂ ಪಟಿಯರುಂ ಪ್ರಧಾನರುಂ ಪರಿಚಾರಕರುಂ ಪೆರ್ಗಡೆಗಳುಂ ಲೆಂಕದಂಡರುಂ ಸಾಮಂತರುಂ ಪೌರರುಂ ಲೆಂಕಿಯರುಂ ರಾಜಕುಮಾರರುಂ ಮತ್ತಿನರಸಿಯರುಂ ದಂಡನಾಥೆಯರುಂ ಪೆರ್ಚಿ ಮೇಗುಮೆಯ್ಯಱಿಯದಂತೆ ರಾಗಿಸಿ ತಮ್ಮೊಳಿಂತೆಂದರ್ ೨೦೫

ಅರಸಂ ಮರುಳಲ್ಲನೆ ಪಿರಿ
ಯರಸಿಯ ಸಾಹಸಮನಱಿದುಮಱಿಯದವೋಲ್ ಮ
ಚ್ಚರಮಂ ಮಾಡಿದನೀ ಪುರ
ವರದೊಳ್ ಪೆಱರಗ್ಗಳಿಕೆಗಳ್ ನಡೆದಪುವೇ ೨೦೬

ಗಳು ಹಲವು ರೀತಿಯಾಗಿ ಸಿದ್ಧಮಾಡಿಕೊಂಡು ಬಂದರು. ಅದಕ್ಕೆ ಸಂದೇಹವುಂಟೆ ?" ೨೦೫. ಹೀಗೆಂದು ಸಂತೋಷಪಡುತ್ತಿರುವ ಕಾಲಕ್ಕೆ ಕಣ್ಣಿಗೆ ಮರಳು ಹುಯಿದು ಉಟ್ಟ ಬಟ್ಟೆಯನ್ನು ಕಿತ್ತುಕೊಂಡರೆಂಬ ಹಾಗೆ ಆಯಿತು, ಬುದ್ಧದಾಸಿಯ ಪಕ್ಷದವರ ಮುಖಗಳು ಕರಿಕಾದ ಹಾಗೆ ಕಪ್ಪಾಗಲ, ಮದ್ದು (?) ಪಡೆಯುದ ಪಿತ್ತರೋಗಿಯಂತೆ ಹೊಟ್ಟೆಯುರಿಯುಲು, ತಾಯಿಸತ್ತ ಮಗುವಿನಂತೆ ಸಂಕಟಪಡಲು, ಸಕಲ ಗುಣಗಣಗಳಿಗೆ ನಿಲಯದಂತಿದ್ದ ಓಹಿಲೆ ಮಹಾದೇವಿಯ ಅರಮನೆಗೆ ಬಂದು, ವಿದ್ಯಾಧರರು ಅದ್ಭುತವಾಗಿ ನಿಲ್ಲಲು, ಪಟ್ಟಣದಲ್ಲಿನ ಭವ್ಯಜನರೂ, ಹಳಬರೂ, ಪ್ರಧಾನರೂ, ಪರಿಚಾರಕರೂ, ಹೆಗ್ಗಡೆಗಳೂ, ದುಡಪಾಣಿಗಳಾದ ಸೇವಕರೂ, ಸಾಮಂತರೂ, ಪುರಜನರೂ, ಸೇವಕಿಯರೂ, ರಾಜಕುಮಾರರೂ ಉಳಿದ ಅರಸಿಯರೂ ದಂಡನಾಥೆಯರ ಪತ್ನಿಯರೂ, ಉಬ್ಬಿ, ಮೈಮೇಲೆ ಎಚ್ಚರವಿಲ್ಲದ ಹಾಗೆ ಪ್ರೇಮಿಸಿ ತಮ್ಮಲ್ಲಿಯೇ ಹೀಗೆಂದುಕೊಂಡರು. ೨೦೬. ಆರಸನು ದಡ್ಡನಲ್ಲವೆ? ಹಿರಿಯರಾಣಿಯ ಸಾಹಸವನ್ನು ತಿಳಿದೂ ತಿಳಿಯದವನ ಹಾಗೆ ಮತ್ಸರವನ್ನುಂಟುಮಾಡಿದನು. ಈ ಪಟ್ಟಣದಲ್ಲಿ ಬೇರೆಯವರ ಅಗ್ಗಳಿಕೆಗಳು ನಡೆಯುವುವೆ ? ೨೦೭. ಜಿನಪೂಜೆಯ ಹೊರತು ಬೇರೆ ಪೂಜೆಗಳು ಇಂದಿನವರೆಗೂ ಈ

ಜಿನಪೂಜೆಯಲ್ಲದೀ ಮ
ತ್ತಿನ ಪೂಜೆಗಳಿನ್ನೆವರೆಗಮೀಪುರದೊಳ್ ಪೇ
ಟ್ಕಿನಿತುಂ ಕಾಲಂ ನಡೆದುವೆ
ಜನನಾಥನುಮಱಿವನಱಿವೊಡಿಂತಿದು ಪೊಸದೇ ೨೦೮

ಭಾವಿಸುವಂದೋಹಿಲೆ ಮಾ
ದೇವಿಯೆ ಪಾಂಡ್ಯಂಗೆ ಪಟ್ಟಮಾದೇವಿ ಯಿದಂ
ಭಾವಿಸದೆ ಬುದ್ಧದಾಸಿಗೆ
ದೇವಿತನಂ ಗೊಟ್ಟನೀತು ಕಷ್ಟನುಮೊಳನೇ ೨೦೯

ಕಿರಪಂ ತಲೆಗೇಱಿಸಿಕೊ
ಳ್ವರೆ ಕೂರ್ತೊಡೆ ಬುದ್ಧದಾಸಿಯಂ ಕಿಮ್ಮನೆ ನ
ಮ್ಮರಸಂ ತಲೆಗೇಱಿಸಿ ಪಿರಿ
ಯರಸಿಯರಂ ಬಗೆದನಿಲ್ಲ ಭೂಪರೆ ಕಷ್ಪರ್ ೨೧೦

ಅರಸಿಯು ಕೈಕೊಂಡ ಜಿನೇ
ಶ್ವರ ಪೂಜೆ ಮಹಾ ವಿಭೂತಿಯಿಂ ನಡೆವಂತಾ
ಯ್ತೆರಡಿಲ್ಲದೆಮಗದಱಿಂ
ಪಿರಿದಪ್ಪಪಮಾನವೃತ್ತಿ ಪಿಂಗಿದುದೀಗಳ್ ೨೧೧

ಪುರದಲ್ಲಿ ಯಾವ ಕಾಲದಲ್ಲಿಯಾದರೂ ನಡೆದಿದ್ದುವೆ ? ರಾಜನಿಗೂ ಅದು ತಿಳಿದಿದೆ, ಅಂದ ಮೇಲೆ ಇದು ಆಶ್ಚರ್ಯವೆ ? ೨೦೮. ಓಹಿಲೆ ಮಹಾದೇವಿಯೇ ನಿಜವಾಗಿ ಪಾಂಡ್ಯನಿಗೆ ಪಟ್ಟದರಾಣಿ. ಇದನ್ನು ಲೆಕ್ಕಿಸದೆ ಬುದ್ಧದಾಸಿಗೆ ರಾಣಿತನವನ್ನು ಕೊಟ್ಟನು. ಇಂಥಾ ನೀಚನೂ ಇರುವನೆ ? ೨೦೯. ಚಪ್ಪಲಿಯನ್ನು ತಲೆಗೆ ಏರಿಸಿಕೊಳ್ಳುವರೆ ? ಪ್ರೀತಿಸಿದರೆ ಮಾತ್ರ ಬುದ್ಧದಾಸಿಯನ್ನು ನಮ್ಮ ರಾಜನು ನಿಷ್ಕಾರಣವಾಗಿ ತಲೆಗೆ ಏರಿಸಿಕೊಂಡು ತನ್ನ ಹಿರಿಯ ರಾಣಿಯರನ್ನು ಲಕ್ಷ್ಯಮಾಡಲಿಲ್ಲ. ರಾಜರೇ ನೀಚರು. ೨೧೦. ಅರಸಿಯು ತೊಡಗಿದ ಜಿನೇಶ್ವರ ಮಹಾ ಪೂಜೆ ಮಹಾ ವೈಭವದಿಂದ ನಡೆಯುವ ಹಾಗೆ ಆಯಿತು. ಆದರಿಂದ ನಮಗೆ ಖಂಡಿತವಾಗಿಯೂ ದೊಡ್ಡ ಅಪಮಾನದ ಜೀವನ ಕಳೆದುಹೋಯಿತು. ೨೧೧. ರಾಣಿಯು ಸಮ್ಯಕ್ತ್ವಕ್ಕೂ ಕಮಲಮುಖಿಯು

ಅರಸಿಯ ಸಮ್ಯಕ್ತ್ವಕ್ಕಂ
ಸರಸಿರುಹಾನನೆಯ ಜೈನಭಕ್ತಿಗಮಿದು ತಾಂ
ಪಿರಿದಾಯ್ತೆ ಫಣೀಶ್ವರನುಂ
ಸುರೇಶನುಂ ಬರ್ಪರಱಿದರಪ್ಪೊಡೆ ಬೇಗಂ ೨೧೨

ಗದ್ಯ॥ ಎಂದು ತಂತಮ್ಮೊಳ್ ನುಡಿಯುತ್ತುಂ ರಾಗಿಸಿ ಮಂಗಳ ತೂರ್ಯಮೆಸೆಯೆ ಪಲವರ್ಚನೆವೆರಸು ಸಕಲಗುಣಗಣನಿಳಯೆಯಪ್ಪೊಂಹಿಲೆ ಮಹಾದೇವಿಯ ಮನೆಗೆ ವಂದು ಸಾಷ್ಟಾಂಗವೆಱಗಿ ಪೊಡೆವಟ್ಟು ಸಮುದ್ರಂ ಘೂರ್ಣಿಸುವಂತೆ ಪಲವುಂ ತೆಱದಿಂ ಪೊಗಟ್ದುದುಂ ೨೧೩

ಒಸೆದುಂ ಸ್ತುತಿಯಿಪ ಪೌರರ
ಮಿಸುಗುವ ನಾಲಗೆಗಳೆಂಬ ಕೆಂದಳಿರಿಂದಂ
ಶಶಿಮುಖಿ ಪೋಲ್ತಿರ್ದಳ್ ಭಾ
ವಿಸುವೊಡೆ ಕರವೊಪ್ಪಿ ತೋರ್ಪಶೋಕೆಯ ಮರನಂ ೨೧೪

ಗದ್ಯ॥ ಅಂತು ಜನಮೆಲ್ಲಂ ಪಗಲ ತಾವರೆಯಂತೆ ಬಿಚ್ಚತರಾಗಿ ಕಾರ್ಗಾಲದ ನವಿಲಂತಾನಂದಿತ ಚಿತ್ತರಾಗಿ ಗೆಲ್ಲಂಕದಂತೆ ಮೆಯ್ವೆರ್ಚಿ ಮದುವೆಯ ಮನೆಯಂತೊಸಗೆಗೆ ಮರುಳ್ಗೊಂಡು ಪಟ್ಟಂಗಟ್ಟಿದರಸಿನಂತೆ ಮಹಾವಿಭೂತಿವೆರಸು ಜೀವಿತಂಬಡೆದ ಬಂಟನಂತೆ ರಾಗಿಸಿ, ಪಸಾಯತಂ ಬಡೆದ ದಾಳಿಕಾಱನಂತೆ ನಲಿದು, ಕೆಟ್ಟ ಸಾಲಂ ಬಂದ ಪರದನಂತೆ

ಜೈನಭಕ್ತಿಗೂ ಇದು ದೊಡ್ಡದಾಯಿತೆ ? ಫಣಿರಾಯನೂ ದೇವೇಂದ್ರನೂ ಇದನ್ನು ತಿಳಿದರಾದರೆ ಬೇಗನೆ ಬರುತ್ತಾರೆ ೨೧೨. ಎಂದು ತಮ್ಮ ತಮ್ಮಲ್ಲಿಯೇ ಮಾತನಾಡಿಕೊಳ್ಳುತ್ತ ಹರ್ಷಪಟ್ಟು ಮಂಗಳವಾದ್ಯಗಳು ಮೊಳಗುತ್ತಿರಲು ಹಲವು ಪೂಜಾ ಸಲಕರಣೆಗಳೊಂದಿಗೆ ಸಕಲಗುಣಸಮೂಹಗಳಿಗೂ ಆಶ್ರಯ ಸ್ಥಾನಳಂತಿದ್ದ ಓಹಿಲೆ ಮಹಾದೇವಿಯ ಮನೆಗೆ ಬಂದು ಸಾಷ್ಟಾಂಗ ನಮಸ್ಕಾರಮಾಡಿ ಸಮುದ್ರವು ಗರ್ಜಿಸುವಹಾಗೆ ಹಲವು ರೀತಿಯಿಂದ ಹೊಗಳಿದರು. ೨೧೩. ಪ್ರೀತಿಯಿಂದ ಸ್ತೋತ್ರಮಾಡುವ ಪುರಜನರ ನಾಲಗೆಗಳೆಂಬ ಕೆಂಪನೆಯ ಚಿಗುರಿನಿಂದ ಚಂದ್ರಮುಖಿಯು ವಿಶೇಷವಾಗಿ ಒಪ್ಪುವ ಅಶೋಕೆಯ ಮರವನ್ನು ಅತಿಶಯವಾಗಿ ಹೋಲುತ್ತಿದ್ದಳು. ೨೧೪. ಹಾಗೆ ಜನರೆಲ್ಲ ಹಗಲ ತಾವರೆಯಂತೆ ಮುಖವರಳಿದವರಾಗಿ ಮಳೆಗಾಲದ ನವಿಲಿನ ಹಾಗೆ ಆನಂದಪಟ್ಟು ಯುದ್ಧವಿಜಯವಾದಂತೆ ಮೈಯುಬ್ಬಿ, ಮದುವೆಯ ಮನೆಯ ಹಾಗೆ ಉತ್ಸವದ ಹುಚ್ಚು ಹಿಡಿದು ಪಟ್ಟಾಭಿಷೇಕವಾದ ಅರಸನಂತೆ ಮಹಾ ವೈಭವದಿಂದ ಕೂಡಿ ಜೀವನೋಪಾಯವನ್ನು ಪಡೆದ ಭಂಟನ ಹಾಗೆ ಉತ್ಸಾಹಗೊಂಡು, ತೃಪ್ತಿಹೊಂದಿದ ದಾಳಿಕಾರನಂತೆ ಕುಣಿದು, ಕಳೆದುಹೋಗಿದ್ದ ಸಾಲ ಕೈಗೆ ಬಂದ ವರ್ತಕನ ಹಾಗೆ, ಭುಜಗಳನ್ನು ನೋಡಿ

ಮಾಯ್ವಂ ನೋಡಿ, ಪಿರಿದುಂ ಲಾಭವಾದ ಪೊಸಪರದನಂತೆ ಬಿಂಕಂಬೆರಸು, ಪಟ್ಟಿಗೆಯ ಬಡಸೂಳೆಯಂತೆ ಪೊಂಗಿ, ಮನೆಮನೆದಪ್ಪದೆ ಗುಡಿಗಟ್ಟಿ, ಬೀದಿ ಬೀದಿ ತಪ್ಪದೆ ಚಂದನದೆಳದಳಿರ್ಗಳಿಂ ತೋರಣಂಗಟ್ಟಿ ಬಸದಿಗಳೆಲ್ಲಮಲಂಕಾರವಾಗೆ ದುಕೂಲದ ಸೂಸಕಂಗಳಿಂ ಮುತ್ತಿನ ರಂಗವಲಿಗಳಿಂ ಚಿನ್ನದ ಕಂಭಗಟ್ಟಿನಿಂ ಶೃಂಗಾರಂ ಮಾಡುವುದುಂ ; ಮಱುದಿವಸಂ ೨೧೫

ಅಲ್ಲಲ್ಲಿಗೊಸಗೆವಱೆ ಮ
ತ್ತಲ್ಲಲ್ಲಿಗೆ ಶಂಖ ಪಟಹ ಭೇರೀರವ ಮ
ತ್ತಲ್ಲಲ್ಲಿಗೆ ಗಾಂಧರ್ವರ
ಸಲ್ಲಲಿತ ದನಿಗಳೆಸೆಯೆ ಪುರದೊಳಗೆಲ್ಲಂ ೨೧೬

ಎಲ್ಲೆಲ್ಲಿ ನೋೞ್ಪಡಂ ಮ
ತ್ತಲ್ಲಲ್ಲಿಗೆ ಕರಡೆ ಡಕ್ಕೆ ಪಱೆ ಡಕ್ಕೆಗಳಂ
ತಲ್ಲಲ್ಲಿಗೆ ಕಹಳೆಯ ದನಿ
ಯೆಲ್ಲೆಡೆಯೊಳವೊಪ್ಪ ಪುರದ ನಾಲ್ಕುಂ ದೆಸೆಯೊಳ್ ೨೧೭

ಅಲ್ಲಲ್ಲಿಗೆ ನೃಪನಂದನ
ರಲ್ಲಲ್ಲಿಗೆ ಪಣ್ಣಿ ಬಂದ ಮದದಾನೆಗಳಂ
ತಲ್ಲಲ್ಲಿಗೆ ಹಯಸಂಕುಳ
ಮಲ್ಲಲ್ಲಿಗೆ ಬರ್ಪ ವಾರವನಿತಾನಿಕರಂ ೨೧೮

ಕೊಂಡು, ಹೆಚ್ಚು ಲಾಭ ದೊರೆತ ಹೊಸ ವರ್ತಕನಂತೆ ಬಿಂಕದಿಂದ ಕೂಡಿ, ಬಟ್ಟೆಯನ್ನು ಪಡೆದ ಬಡಸೂಳೆಯುಹಾಗೆ ಉಬ್ಬಿ, ಮನೆ ಮನೆಗಳಲ್ಲಿಯೂ ತಪ್ಪದೆ ಧ್ವಜಗಳನ್ನು ಕಟ್ಟಿ ಬೀದಿ ಬೀದಿಗಳಲ್ಲಿಯೂ (ಗಂಧೋದಕಗಳನ್ನು ಚಿಮುಕಿಸಿ) ಚಂದನದ ಎಳೆಯ ಚಿಗುರುಗಳಿಂದ ತೋರಣಗಳನ್ನು ಕಟ್ಟಿ, ಬಸದಿಗಳಿಗೆಲ್ಲ ಅಲಂಕಾರವಾಗುವ ರೇಷ್ಮೆ ಬಟ್ಟೆಗಳಿಂದ, ಸೂಸಕಗಳಿಂದ, ಮುತ್ತಿನ ರಂಗೋಲಿಗಳಿಂದ, ಚಿನ್ನದ ಕಂಭಕಟ್ಟುಗಳಿಂದ ಶೃಂಗಾರವನ್ನು ಮಾಡಿದರು. ೨೧೫. ಮಾರನೆಯದಿನ ಅಲ್ಲಲ್ಲಿ ಉತ್ಸವದ ತಮಟೆಗಳು, ಅಲ್ಲಲ್ಲಿ ಶಂಖ ನಗಾರಿಗಳು, ಭೇರಿಯ ಶಬ್ದ, ಅಲ್ಲಲ್ಲಿ ಗಂಧರ್ವರ ಹಾಡಿನ ಧ್ವನಿಗಳು ಶೋಭಿಸಲು ಪಟ್ಟಣದೊಳಗೆಲ್ಲ ಸಡಗರವಾಯಿತು. ೨೧೬. ಎಲ್ಲೆಲ್ಲಿ ನೋಡಿದರೂ ಅಲ್ಲಲ್ಲಿ ಕರಡೆ, ಢಕ್ಕೆ, ತಮಟೆಗಳ ಧ್ವನಿಗಳು, ಅಲ್ಲಲ್ಲಿ ಕಹಳೆಗಳ ಶಬ್ದ, ಹೀಗೆ ಪುರದ ನಾಲ್ಕು ದಿಕ್ಕುಗಳಲ್ಲಿಯೂ ವಾದ್ಯಧ್ವನಿಯಾಗುತ್ತಿತ್ತು. ೨೧೭. ಅಲ್ಲಿಗಲ್ಲಿಗೆ ರಾಜಪುತ್ರರು, ಅಲ್ಲಲ್ಲಿ ಅಲಂಕಾರ ಮಾಡಿಸಿಕೊಂಡು ಬಂದ ಮದ್ದಾನೆಗಳು, ಹಾಗೆಯೇ ಅಲ್ಲಲ್ಲಿ ರಥಸಮೂಹಗಳು, ಅಲ್ಲಲ್ಲಿ ಬರುತ್ತಿರುವ ವಾರಸ್ತ್ರೀಯರ ಗುಂಪುಗಳು. ೨೧೮. ಅಲ್ಲಲ್ಲಿ ಕೈದೀವಿಗೆಗಳು,

ಅಲ್ಲಲ್ಲಿಗೆ ಕೈದೀವಿಗೆ
ಯಲ್ಲಲ್ಲಿಗೆ ನೆರೆದು ನೋಟ್ಟ ನೋಟಕಜನ ಮ
ತ್ತಲ್ಲಲ್ಲಿಗೆ ರಥಸಂಕುಳ
ಮಲ್ಲಲ್ಲಿಗೆ ನೆರೆದು ಬರ್ಪ ಪಲವರ್ಚನೆಗಳ್ ೨೧೯

ಗದ್ಯ॥ ಅಂತು ಪುರದೊಳಲ್ಲೆಡೆಯೊಳಮಲ್ಲಲ್ಲಿಗೆ ಪುಣ್ಯಾಂಗನೆಯರುಂ ಮಂಗಳವಟಿಗಳುಂ ಮಹಾಧ್ವಜಂಗಳುಂ ಮಣಿವಿತಾನಂಗಳುಂ ಜಯಜಯ ಧ್ವನಿಗಳುಮೆಸೆಯೆ ೨೨೦

ಪದಿನಾಱು ನೆಲೆಯ ಮಣಿ ಮಾ
ಡದಿನೊಪ್ಪುವ ಪೊನ್ನ ರಥದ ಮೇಲೆಸೆದಿರೆ ರಾ
ಗದಿನಿರಿಸಿ ಖೇಚರರ್ ಸಂ
ಪದದಿಂದಂ ನಲಿದು ಜೈನ ಚೈತ್ಯಾವಳಿಯಂ ೨೨೧

ಆ ರಥದ ನಾಲ್ಕು ದೆಸೆಯೊಳ್
ನೇರಿದವಾಗಿರಿಸಿ ರತ್ನಮಯಮೆನಿಸುವ ವಿ
ಸ್ತಾರದ ಪೊನ್ನ ರಥಂಗಳ
ನಾರ್ಕೈದೋರಂತೆ ಮೆಚ್ಚಿ ನಚ್ಚಿ ಖಗೇಶರ್ ೨೨೨

ಸುರಭೂಧರಮಂ ಬೆಳ್ಳಿಯ
ಗಿರಿಗಳ್ ಬಳಸಿರ್ದುವೆನಿಸಿ ಚೆಂಬೊನ್ನ ರಥೋ
ತ್ಕರಮಂ ಸುತ್ತಿರ್ದುವು
ಕರಮೊಪ್ಪಿರೆ ಖಚರ ರಾಜರೆಸೆವ ವಿಮಾನಂ ೨೨೩

ಅಲ್ಲಲ್ಲಿ ಗುಂಪಾಗಿ ಸೇರಿ ನಿಂತು ನೋಡುವ ಪ್ರೇಕ್ಷಕಜನ ಮತ್ತು ಅಲ್ಲಲ್ಲಿ ರಥಸಮೂಹ, ಅಲ್ಲಲ್ಲಿಗೆ ಗುಂಪುಕೂಡಿ ತರುತ್ತಿದ್ದ ಅರ್ಚನಾ ಸಾಮಗ್ರಿಗಳು ೨೧೯. ಹಾಗೆ ಪಟ್ಟಣ ದೊಳಗೆ ಎಲ್ಲ ಕಡೆಗಳಲ್ಲಿಯೂ ಅಲ್ಲಲ್ಲಿಗೆ ಪುಣ್ಯಾಂಗನೆಯರೂ ಮಂಗಳ ವಾದ್ಯಗಳೂ, ಮಹಾ ಧ್ವಜಗಳೂ ರತ್ನಸಮೂಹಗಳೂ ಜತೆಗೆ ಜಯ ಜಯಕಾರಗಳೂ ಶೋಭಾಯ ಮಾನವಾಗಿದ್ದವು. ೨೨೦. ಹದಿನಾರು ನೆಲೆಯ ರತ್ನಖಚಿತವಾದ ಉಪ್ಪರಿಗೆಯಿಂದ ಒಪ್ಪುವಂಥ ಹೊನ್ನಿನ ರಥದ ಮೇಲೆ ಜಿನಮೂರ್ತಿಪ್ರಕಾಶಿಸುತ್ತಿರಲು ಸಂತೋಷದಿಂದ ಇರಿಸಿ ಖೇಚರರು ಸಂಪತ್ತಿನಿಂದನಲ್ಲಿದು ಜೈನಚೈತ್ಯಸಮೂಹವನ್ನು ೨೨೧. ಶೃಂಗರಿಸಿ, ಆ ರಥದ ನಾಲ್ಕು ದಿಕ್ಕಗಳಲ್ಲಿಯೂ ನೆಟ್ಟಗೆ ಇರಿಸಿ ರತ್ನಮಯವಾದ ವಿಸ್ತಾರವಾದ ಚಿನ್ನದ ರಥಗಳನ್ನು ಖಗೇಶರು ಹೆಚ್ಚಾಗಿ ಮೆಚ್ಚಿ ಪ್ರೀತಿಯಿಂದ ಕಂಡರು. ೨೨೨. ದೇವಪರ್ವತ ವನ್ನು ಬೆಳ್ಳಿಯ ಬೆಟ್ಟಗಳು ಬಳಸಿಕೊಂಡಿವೆಯೆಂಬಂತೆ, ಕೆಂಪನೆಯ ಚಿನ್ನದ ರಥ ಸಮೂಹವನ್ನು ಖೇಚರರಾಜರ ಸುಪ್ರಕಾಶವಾದ ವಿಮಾನಗಳು ಬಹಳ ಅಲಂಕಾರ ವಾಗುವ ರೀತಿಯಲ್ಲಿ ಸುತ್ತುಗಟ್ಟಿದ್ದವು. ೨೨೩. ಸೂರ್ಯಮಂಡಲಕ್ಕೆ ಪರಿವೇಷ

ಪರಿವೇಷಂ ಸುತ್ತಿರ್ದುದು
ಖರ ಕಿರಣನನೆನಿಸಿ ಮೊದಲ ಕನಕದ ರಥಮಂ
ಕರಮೊಪ್ಪಿರೆ ಸುತ್ತಿರ್ದರ್
ನೆರೆದು ಮಹಾ ವಿಭವದಿಂ ವಿಯಚ್ಚರ ಸತಿಯರ್ ೨೨೪

ಕೆಂದಾವರೆ ತಾನುರ್ವರೆ
ಯಿಂದಂ ಗಗನಕ್ಕೆ ನೆಗೆದುದೆನಿಸಿ ಮಹೀಶ
ಸ್ಯಂದನದ ಮೇಲೆ ನಿಂದಿ
ರ್ದಂದು ಕರಂಗಳನೆ ಮುಗಿದು ಪೊಡೆವಡುತಿರ್ದರ್ ೨೨೫

ಗದ್ಯ॥ ಮತ್ತಂ ಸುತ್ತಿಮುತ್ತಿದ ವಿದ್ಯಾಧರ ವಿಮಾನದಿಂದವಱಿಂ ಪೊಱಗೆ ನಂದನವನಕ್ಕೆ ಕವಿದು ಮೊಱೆವ ಮಱಿದುಂಬಿಗಳೆನಿಸುವ ಗಾಂಧರ್ವರಿಂದಂ ಅವರಿಂ ಪೊಱಗೆ ಪೊನ್ನ ಬೆಳ್ಳಿಯ ಪಚ್ಚೆಯ, ನೀಲದ ರಥಂಗಳಿಂದಂ ಅವಱಿಂ ಪೊಱಗೆ ಗಿರಿದುರ್ಗದಂತೆ ಸುತ್ತಿಮುತ್ತಿದ ವಾರಣ ಘಟೆಗಳಿಂದಂ ಅವಱಿಂ ಪೊಱಗೆ ಕಾಮದೇವನ ಕಯ್ಯ ಸೆಂಡಿನಂತೆ ಪರಿವ ತುರಗಂಗಳಿಂದಂ ಅವಱಿಂ ಪೊಱಗೆ ಸುಕುಮಾರರೆನಿಸುವ ರಾಜಕುಮಾರರಿಂದಂ ಅವರಿಂ ಪೊಱಗೆ ದೇವಕನ್ನೆಯರೆನಿಪ ಪೆಂಡವಾಸದೊಳ್ಪೆಂಡಿರಿಂದಂ ಅವರಿಂ ಪೊಱಗೆ ಕ್ಷಿತಿಜಲಧಿ ಸುತ್ತಿತ್ತೆನಿಸುವ ಮೇಘಡಂಬರದಿಂದಂ, ಅವಱಿಂ ಪೊಱಗೆ ಮಿಂಚಿನ ಬಳ್ಳಿಯನನುಕರಿಸುವ ಕಡಿತಲೆಗಾಜರಿಂದಂ, ಅವರಿಂ

ಕಟ್ಟಿದೆಯೋ ಎಂದೆನ್ನುವಹಾಗೆ ಮೊದಲನೆಯ ಚಿನ್ನದ ರಥವನ್ನು ವಿಯಚ್ಚರರ ಹೆಂಡಿರು ಬಹಳವಾಗಿ ಒಪ್ಪುವಂತೆ ಸುತ್ತಿಕೊಂಡಿದ್ದರು. ೨೨೪. ಕೆಂಪನೆಯ ತಾವರೆಯು ತಾನು ಭೂಮಿಯಿಂದ ಆಕಾಶಕ್ಕೆ ಹಾರಿತೆನ್ನುವಂತೆ ರಾಜರು ರಥದ ಮೇಲೆ ನಿಂತಿರುವಾಗ ಕೈಗಳನ್ನು ಮುಗಿದುಕೊಂಡು ವಂದಿಸುತ್ತಿದ್ದರು. ೨೨೫. ಸುತ್ತಿಮುತ್ತಿಕೊಂಡಿದ್ದ ವಿದ್ಯಾಧರ ವಿಮಾನಗಳು, ಅವುಗಳಿಂದ ಹೊರಗೆ ನಂದನವನಕ್ಕೆ ಮುತ್ತಿಕೊಂಡು ಝೇಂಕರಿಸುವ ಮರಿದುಂಬಿಗಳೆಂದೆನ್ನಿಸಿಕೊಳ್ಳುವ ಗಾಂಧರ್ವರು, ಅವರಿಂದ ಹೊರಗೆ ಚಿನ್ನಬೆಳ್ಳಿಗಳ, ಪಚ್ಚೆ, ಇಂದ್ರನೀಲಗಳ ರಥಗಳು, ಅವುಗಳಿಂದ ಹೊರಗೆ ಗಿರಿದುರ್ಗಗಳ ಹಾಗೆ ಸುತ್ತಿಮುತ್ತಿಕೊಂಡ ಗಜಗಳ ಗುಂಪುಗಳು, ಅವುಗಳಿಂದ ಹೊರಗೆ ಕಾಮದೇವನ ಕೈಚೆಂಡಿನಂತೆ ಓಡುವ ಕುದುರೆಗಳಿಂದ, ಅವುಗಳಿಂದ ಹೊರಗೆ ಸುಕುಮಾರರೆನಿಸಿಕೊಳ್ಳುವ ರಾಜಕುಮಾರರಿಂದಲೂ ಅವರಿಂದ ಹೊರಗೆ ದೇವಕನ್ನಿಕೆಯರೆಂದು ತೋರುವಂಥ ಅಂತಃಪುರದ ಒಳ್ಳೆಯ ಹೆಂಡಿರಿಂದ, ಅವರಿಂದ ಹೊರಗೆ ಭೂಮಿ ಸಮುದ್ರಗಳನ್ನು ಸುತ್ತಿತ್ತೆನ್ನಿಸುವ ಮೇಘ ಸಮೂಹಗಳಿಂದಲೂ, ಅವುಗಳಿಂದ ಹೊರಗೆ ಮಿಂಚಿನ ಬಳ್ಳಿಯನ್ನು ಅನುಕರಿಸುವಂಥ ಕತ್ತಿಗಳನ್ನು ಹಿಡಿದ ಭಟರಿಂದಲೂ ಅವರಿಂದ ಹೊರಗೆ ಹಿರಿಯ ಹೆಂಡಿರ ಗುಂಪು

ಪೊಱಗೆ ಪೆರ್ವೆಂಡಿರ ತಂಡಂಗಳಿಂದಂ, ಅವಱಿಂ ಪೊಱಗೆ ಮಹಾ ಧ್ವಜಂಗಳಿಂದಂ ಅವಱಿಂ ಪೊಱಗೆ ಮಣಿವಿತಾನಂಗಳಿಂದಂ ಅವಱಿಂ ಪೊಱಗೆ ವಜ್ರವೇದಿಕೆಯುಂತಿರ್ದ ಪೊನ್ನಪಱಿಗೆಯಿಂದಂ ವನದುರ್ಗಮಂ ಪೋಲ್ವ ಬಿಲ್ವಡೆಯಿಂದಂ ಘರವಟ್ಟಿಗೆಯ ಕಟ್ಟಿಗೆಕಾಱರಿಂದಂ ಅವರಿಂ ಪೊಱಗೆ, ೨೨೬

ಮಿಸುಕದೆ ಭಾಸ್ಕರದೇವನ
ಬೆಸದಿಂದಂ ರೌದ್ರರೂಪನತ್ಯಂತಂ ಪೆ
ರ್ಚಿಸಿ ಖೇಚರಾದಿನಾಥರ್
ದೆಸೆಗಳನವ್ವಳಿಸಿ ನಿಂದರದಿರದೆ ನೆಲೆಯಿಂ ೨೨೭

ಜಿನಪೂಜೆಗೆ ಬಾಧೆಗಳಂ
ಮುನಿವವರಟಲಿಂದೆ ಮಾಡದಂತಾಗೆ ಮಹಾ
ತನುವಿಂ ವಿದ್ಯಾದೇವಿಗ
ಳನುನಯದಿಂ ಸುತ್ತಿಮುತ್ತಿ ನಿಂದರ್ ಚಲದಿಂ ೨೨೮

ಬೇಗಂ ವ್ಯೋಮಕ್ಕಂ ಭೂ
ಭಾಗಕ್ಕಂ ಧಾತ್ರನೊಸೆದು ಕೀಲ್ ಕೂಡಿಟ್ಟಂ
ತಾಗೆ ಬಳಸಿರ್ದರೊಡನಿಂ
ಬಾಗಿರೆ ಸನ್ಮಂತ್ರ ದೇವಿಯರ್ ನಿರ್ಭಯದಿಂ ೨೨೯

ಗಳಿಂದ, ಅವರಿಂದ ಹೊರಗೆ ಮಹಾಧ್ವಜಗಳಿಂದಲೂ, ಅವುಗಳಿಂದ ಹೊರಗೆ ರತ್ನರಾಶಿಗಳಿಂದಲೂ, ಅವುಗಳಿಂದ ಹೊರಗೆ ನಂದನವನದಂತೆ ಒತ್ತಾದ ನವಿಲುಗರಿಯ ಕೊಡೆಗಳಿಂದ, ಅವುಗಳಿಂದ ಹೊರಗೆ ವಜ್ರದ ಜಗಲಿಯು ಹಾಗಿದ್ದ ಬಂಗಾರದ ಗುರಾಣಿಗಳಿಂದ, ವನದುರ್ಗವನ್ನು ಹೋಲುವ ಬಿಲ್ಲುಗಾರರ ಸೈನ್ಯಗಳಿಂದಲೂ ಕಾವಲಿನ ಕಟ್ಟಿಗೆಯವರಿಂದಲೂ ಅವರಿಂದ ಹೊರಗೆ, ೨೨೬. ಮಿಸುಕದೆ ಭಾಸ್ಕರದೇವನ ಅಪ್ಪಣೆಯಂತೆ ರೌದ್ರರೂಪವನ್ನು ಅತಿಶಯವಾಗಿ ಹೆಚ್ಚು ಮಾಡಿ ಖೇಚರರ ಅಧಿಪತಿಗಳು ದಿಕ್ಕುಗಳನ್ನೇ ಅಪ್ಪಳಿಸಿ ಅಂಜದೆ ನೆಲೆಯಾಗಿ ನಿಂತರು. ೨೨೭. ಜಿನಪೂಜೆಗೆ ತೊಂದರೆಗಳನ್ನು ದ್ವೇಷಿಗಳು ಸಂಕಟದಿಂದ ಮಾಡದ ಹಾಗೆ ಆಗಲು ವಿದ್ಯಾದೇವಿಯರ ಅನುಗ್ರಹದಿಂದ ಖೇಚರರಾಜರು ಮಹಾದೇಹಗಳನ್ನು ಧರಿಸಿ ಹಟದಿಂದ ಸುತ್ತಲೂ ಮುತ್ತಿಕೊಂಡು ನಿಂತರು. ೨೨೮. ಬೇಗನೆ ಆಕಾಶಕ್ಕೂ ಭೂಭಾಗಕ್ಕೂ ಬ್ರಹ್ಮನು ಸೇರಿಸಿ ಇಟ್ಟ ಹಾಗೆ ಒಡನೆಯೇ ಒಳ್ಳೆಯ ಮಂತ್ರ ದೇವಿಯರು ನಿರ್ಭಯದಿಂದ ಅನುಕೂಲವಾಗುವಂತೆ ಬಳಸಿ ನಿಂತರು.

ಗದ್ಯ॥ ಅಂತು ಜಂಬೂದ್ವೀಪದ ಖಚರಮಹೀವಲ್ಲಭಂ ಭವ್ಯರ್ಗೆ ಜಿನಮತದೋಜೆಯಿಂ ಬರೆದು ತೋಱಿದಪನೆನಿಸಿ ಪಲವು ಶೋಭೆಗಳಿಂದೆ ರಮಣೀಯಮಾಗೆ ಗಗನತಳವೆಲ್ಲಂ ವಿಮಾನಮಯಮಾಗಿಯುಂ ಧರಾತಳಮೆಲ್ಲಂ ರಥಮಯಮಾಗಿಯುಂ ಅಂತರಿಕ್ಷಮೆಲ್ಲಂ ಧ್ವಜಮಯಮಾಗಿಯುಂ ದಿಗ್ಭಿತ್ತಿಗಳೆಲ್ಲಂ ಜಯ ಜಯನಿನಾದಮಯಮಾಗಿಯುಂ ವಿದ್ಯಾಧರಕುಮಾರರಿಂ ದೇವಲೋಕಮಂ ರಾಜಕುಮಾರರಿಂ ಖೇಚರಲೋಕಮಂ ವಿದ್ಯಾದೇವತೆಗಳಿಂ ವ್ಯಂತರಲೋಕಮಂ ಮಕುಟಬದ್ಧರಿಂ ಜ್ಯೋತಿರ್ಲೋಕಮಂ ಚಾತುರ್ವರ್ಣ್ಯಸಂಘದಿಂ ಸಮವಸರಣಮಂ ಪೋಲ್ತಿಸೆಯೆ ಭಾಸ್ಕರದೇವಂ ಜಿನ ಮಹಾಪೂಜೆಯನೆಂಟು ದಿವಸಂಬರಮಾಮಾರ್ಗದಿಂ ೨೩೦

ಒಸೆದು ಖಚರೇಶ್ವರಂ ಸಂ
ತಸದಿಂದಂ ಸೋಮದತ್ತ ಮುನಿಯುಮನಘಮೋ
ಘಸಮೂಹವಾಯು ವಾತ್ಸ
ಲ್ಯ ಸಮುದ್ರಂ ವಜ್ರಮುನಿಯುಮಂ ಮುದದಿಂದಂ ೨೩೧

ಗದ್ಯ॥ ಬಂದಿಸೆ ನಿಮ್ಮಡಿಯ ಪ್ರಸಾದದಿಂ ಜಿನಪೂಜೆಯೊಳಾದ ಮಹಾಪುಣ್ಯಂ ದೊರೆಕೊಂಡುದೆಂದು ಸಕಳ ಗುಣಗಣನಿಳಯಪ್ಪೋಹಿಲೆ ಮಹಾದೇವಿಯುಂ ಪೊಗೞ್ದುದುಂ ೨೩೨

ಹಾಗೆ ಜಂಬೂದ್ವೀಪದ ಖೇಚರ ಮಹಾರಾಜನು ಭವ್ಯರಿಗೆ ಜಿನಮತದ ಓಜಸ್ಸಿನಿಂದ ಬರೆದು ತೋರಿಸುತ್ತಿರುವನೆಂಬಂತೆ ಹಲವು ಶೋಭೆಗಳಿಂದ ಕೂಡಿ ರಮಣೀಯವಾಗಲು ಗಗನತಳದ ಪ್ರದೇಶವನ್ನೆಲ್ಲ ವಿಮಾನಮಯವಾಗಿಯೂ ಭೂಮಂಡಲವೆಲ್ಲವೂ ರಥಮಯವಾಗಿಯೂ ಅಂತರಿಕ್ಷವೆಲ್ಲವೂ ಧ್ವಜಗಳಮಯವಾಗಿಯೂ ದಿಕ್ಕುಗಳ ಗೋಡೆಗಳೆಲ್ಲವೂ 'ಜಯ ಜಯ' ಎಂಬ ನಿನಾದಗಳಿಂದ ತುಂಬಿ ಹೋಗಿ ವಿದ್ಯಾಧರ ಕುಮಾರರಿಂದ ದೇವಲೋಕವನ್ನು, ರಾಜಕುಮಾರರಿಂದ ಖೇಚರ ಲೋಕವನ್ನೂ ವಿದ್ಯಾದೇವತೆಗಳಿಂದ ವ್ಯಂತರ ಲೋಕವನ್ನೂ ಕಿರೀಟಧಾರಿಗಳಿಂದ ಜ್ಯೋತಿರ್ಲೋಕವನ್ನು ಚತುರ್ವರ್ಣಗಳವರ ಸಂಘದಿಂದ ಸಮವಸರಣವನ್ನು ಹೋತು ಶೋಭಿಸಲು ಭಾಸ್ಕರ ಮಹಾದೇವನು ಜಿನಮಹಾಪೂಜೆಯನ್ನು ಎಂಟು ದಿವಸಗಳವರೆಗೆ ಈ ರೀತಿಯಿಂದ, ೨೩೦. ಪ್ರೀತಿಸಿ ಮಾಡಿ ಖೇಚರರಾಜನು ಸಂತೋಷವಾಗಿ ಸೋಮದತ್ತ ಮುನಿಯನ್ನು, ಪಾಪಗಳೆಂಬ ಮೋಡಗಳ ಸಮೂಹಕ್ಕೆ ವಾಯುವೂ ವಾತ್ಸಲ್ಯ ಸಮುದ್ರನೂ ಆದ ವಜ್ರಮುನಿಯನ್ನೂ ಸಮ್ಮೋದದಿಂದ ವಂದಿಸಿದನು. ೨೩೧. ಅನಂತರ "ನಿಮ್ಮ ಪಾದಾನುಗ್ರಹಬಲದಿಂದ ಜಿನಪೂಜೆಯಲ್ಲಿ ಸೇರಿದ ಮಹಾಪುಣ್ಯ ನನಗೆ ಲಭಿಸಿತು" ಎಂಬುದಾಗಿ ಸಮಸ್ತ ಗುಣಗಣಗಳಿಗೂ ನೆಲೆಯೆನ್ನಿಸಿಕೊಂಡ ಓಹಿಲೆ ಮಹಾದೇವಿಯನ್ನು ಹೊಗಳಿದನು. ೨೩೨. ಆ ಕಮಲಮುಖಿಯು ವಜ್ರಕುಮಾರಮುನೀಶ್ವರನ್ನು ಸಮೀಪಿಸಿ

ನೀರೇಜಾನನ ವಜ್ರಕು
ಮಾರ ಮುನೀಶ್ವರನ ಸಾರೆ ಖಚರೇಶ್ವರನಂ
ಸಾರಮಿದೆನಿಸುವ ಸೂರ್ಯಾ
ಕಾರ ಜಿನಸ್ತೂಪೆಯಂ ಸವಿಸ್ತರದಿಂದಂ ೨೩೩

ಗದ್ಯ॥ ಬೇಡುವುದು ಮೋಹಿಲೆ ಮಹಾದೇವಿಯ ಮಾತನೆರಡುಗೇಳದೆ ವಜ್ರಮಯಮಪ್ಪ ಜಿನಪ್ರತಿಮಾವಳಿಗಳಿಂ ತುಱುಗಿದ ಸ್ತೂಪೆಯಂ ದಕ್ಷಿಣ ಮಧುರಾಪುರದೊಳಿರಿಸಿ ಮಾನಿಸರ್ ಪುಗಬಾರದಂತದಱ ಸುತ್ತಲುಮೆರಡು ಕ್ರೋಶಾಂತರಂ ವಿಗುರ್ವಣೆಯಂ ಮಾಡಿ ಭಾಸ್ಕರದೇವನಮರಾವತೀಪುರಕ್ಕೆ ಮಗುಳ್ದು ಪೋದನಿತ್ತಲೋಹಿಲೆ ಮಹಾದೇವಿಯುಂ ಸೋಮದತ್ತ ಭಟ್ಟಾರಕರುಮಂ ವಾತ್ಸಲ್ಯ ರತ್ನಾಕರನುಮಂ ವಂದಿಸಿ ಪೂಣ್ಕೆಯುಮಂ ನೆಱಪಿ ತನ್ನ ಮನೆಗೆ ಪೋದಳಿನ್ನುಮಾ ಭಾಸ್ಕರದೇವಸಿರಿಸಿ ಪೋದ ಸ್ತೂಪೆಯಂ ದೇವರ್ ಅಪ್ಟಮಿ ಚತುರ್ದಶಿಗಳೊಳ್ ದೇವದುಂದುಭಿವೆರಸು ಬಂದು ಪೂಜಿಸುವರದು ಕಾರಣದಿಂ ೨೩೪

ನುತವಾತ್ಸಲ್ಯಮೆ ಭವ್ಯ
ಪ್ರತತಿಗೆ ಗುಣರತ್ನ ನಿಚಯಮಂ ಮಡಗಿರಲು
ನ್ನತಮಪ್ಪ ಮಂದಿರಂ ಶಾ
ಶ್ವತ ಸುಖಮಂ ಕುಡುವ ಕಲ್ಪವೃಕ್ಷಂ ಧರೆಯೊಳ್ ೨೩೫

ಸಾರವತ್ತಾದುದೆನ್ನಿಸುವ ಸೂರ್ಯಾಕಾರದ ಜಿನಸ್ತೂಪೆಯನ್ನು ಖಚರೇಶ್ವರನಲ್ಲಿ ವಿಶೇಷವಾಗಿ ಬೇಡಿದಳು. ೨೩೩. ಓಹಿಲೆ ಮಹಾದೇವಿಯ ಮಾತನ್ನು ಎರಡನೆಯ ಸಲ ಕೇಳದೆ (ಒಡನೆಯೇ) ವಜ್ರಮಯವಾಗಿದ್ದ ಜಿನಪ್ರತಿಮೆಗಳ ಸಮೂಹಗಳಿಂದ ತುಂಬಿದ್ದ ಸ್ತೂಪೆಯನ್ನು ದಕ್ಷಿಣ ಮಧುರಾಪುರದೊಳಗೆ ಇಟ್ಟು ಮನುಷ್ಯರು ಪ್ರವೇಶಿಸಲು ಆಗದಂತೆ ಅದರ ಸುತ್ತಲೂ ಎರಡು ಕ್ರೋಶಗಳ ದೂರ ಮಾಯಾಸೃಷ್ಟಿಯನ್ನು ಮಾಡಿ ಭಾಸ್ಕರದೇವನು ಅಮರಾವತೀಪುರಕ್ಕೆ ಹಿಂತಿರುಗಿ ಹೋದನು. ಇತ್ತ ಓಹಿಲೆ ಮಹಾದೇವಿಯು ಸೋಮದತ್ತಭಟ್ಟಾರಕರನ್ನೂ ವಾತ್ಸಲ್ಯ ರತ್ನಾಕರನನ್ನೂ ವಂದಿಸಿ ಪ್ರತಿಜ್ಞೆಯನ್ನು ನೆರವೇರಿಸಿ ತನ್ನ ಮನೆಗೆ ಹೋದಳು. ಇನ್ನೂ ಆ ಭಾಸ್ಕರದೇವನು ಇಟ್ಟು ಹೋದ ಸ್ತೂಪೆಯನ್ನು ದೇವರುಗಳು ಅಷ್ಟಮಿ ಚತುರ್ದಶಿಗಳಲ್ಲಿ ದೇವದುಂದುಭಿಗಳಿಂದ ಕೂಡಿ ಬಂದು ಪೂಜಿಸುತ್ತಾರೆ. ಆದಕಾರಣ. ೨೩೪. ಶ್ರೇಷ್ಠವಾದ ವಾತ್ಸಲ್ಯವೇ ಭವ್ಯಸಮೂಹಕ್ಕೆ ಗುಣಗಳೆಂಬ ರತ್ನರಾಶಿಯನ್ನು ಬಚ್ಚಿಟ್ಟಿರುವುದಕ್ಕೆ ದೊಡ್ಡದಾದ ಮನೆ. ಅದೇ ಈ ಪ್ರಪಂಚದಲ್ಲಿ ಶಾಶ್ವತ ಸುಖವನ್ನು ಕೊಡುವಂಥ ಕಲ್ಪವೃಕ್ಷ ೨೩೫.

ಗದ್ಯ॥ ಎಂದು ಗುಣಧರಸ್ವಾಮಿಗಳ್ ವಾತ್ಸಲ್ಯದ ಕಥೆಯಂ ಪೇಟೆ ಕೇಳ್ದು ೨೩೬

ಗುಣದುಗ್ಧಾಂಭೋಧಿ ಪಾಪಾಚಲರಿಪು ಮದನೇಭೇಂದ್ರಕಂಠೀರವಂ ದು
ರ್ಗುಣದೂರಂ ವಾಗ್ವಧೂವಲ್ಲಭನುದಿತ ಯಶಂ ನಿರ್ಮಳಂ ಮರ್ತ್ಯಲೋಕಾ
ಗ್ರಣಿ ತನ್ನೊಳ್ ನಾಡೆಯುಂ ಸಂತಸದಿನೊಸೆದನೋರಂತೆ ತ್ರೈವಿದ್ಯ ಚೂಡಾ
ಮಣಿ ಪಾದಾಂಭೋಜ ಭೃಂಗಂ ಸುಕವಿ ಜನಮನಃಪದ್ಮಿನೀರಾಜಹಂಸಂ ೨೩೭

ಗದ್ಯ॥ ಇದು ನಿಖಿಲ ದಿವಿಜ ಪರಿವೃಢಮಕುಟತತಟಘಟಿತ ಮಣಿಗಣವಿಲುಳಿತಕಿರಣ ಚುಂಬನೀಯ ಪರಮಜಿನ ಚರಣಯುಗಳ ಸರಸಿರುಹ ಮತ್ತಮಧುಕರ ನಿರುಪಮ ಸಹಜಕವಿ ಜನ ಪಯಃಪಯೋಧಿಹಿಮಕರ ನುತಭಾವಯುತ ದಿಗಂಬರದಾಸ ನೂತ್ನಕವಿತಾವಿಳಾಸ ಶ್ರೀಮನ್ನಯಸೇನ ದೇವ ವಿರಚಿತಮಪ್ಪ ಧರ್ಮಾಮೃತದೊಳ್ ದರ್ಶನ ಸಪ್ತಮಾಂಗ ವ್ಯಾವರ್ಣನಂ

## ಅಷ್ಟಮಾಶ್ವಾಸಂ

ಹೀಗೆಂದು ಗಣಧರಸ್ವಾಮಿಗಳು ವಾತ್ಸಲ್ಯದ ಕಥೆಯನ್ನು ಹೇಳಲು ಕೇಳಿ ೨೩೬. ಗುಣಗಳೆಂಬ ಹಾಲಿನ ಸಮುದ್ರದಂಥವನೂ ಪಾಪವೆಂಬ ಪರ್ವತಗಳಿಗೆ ಶತ್ರುವೂ ಮನ್ಮಥನೆಂಬ ಮದ್ದಾನೆಗಳಿಗೆ ಸಿಂಹಸ್ವರೂಪನೂ, ದುರ್ಗುಣದೂರನೂ ವಾಗ್ವಧೂವಲ್ಲಭನೂ ಹೆಚ್ಚಿನ ಯಶಸ್ಸುಳ್ಳವನೂ, ನಿರ್ಮಲನೂ ಆದ, ಮರ್ತ್ಯಲೋಕಕ್ಕೆ ಅಗ್ರಣಿ (ಶ್ರೇಣಿಕಮಹಾರಾಜ)ಯು ತನ್ನಲ್ಲಿಯೇ ವಿಶೇಷವಾಗಿ ಸಂತೋಷಪಟ್ಟು ತ್ರೈವಿದ್ಯ ಚೂಡಾಮಣಿಯ ಪಾದಕಮಲದಲ್ಲಿನ ತುಂಬಿ, ಸುಕವಿಜನರ ಮನಸ್ಸೆಂಬ ಕಮಲಿನಿಗಳ ನಡುವಿನ ರಾಜಹಂಸನಾಗಿ, ಆನಂದಪಟ್ಟನು. ಇದು ಸಮಸ್ತ ದೇವತೆಗಳ ಶಿರ ಸಾಷ್ಟಾಂಗ ಪ್ರಣಾಮಗಳನ್ನು ಹೊಂದಿದ, ಜಿನಪಾದಕಮಲಗಳಲ್ಲಿ ತುಂಬಿಯಾದ ನಿರುಪಮ ಸಹಜ ಕವಿಗಳ ಸಮೂಹವೆಂಬ ಹಾಲು ಕಡಲಿಗೆ ಚಂದ್ರನಾದ 'ದಿಗಂಬರದಾಸ' 'ನೂತ್ನ ಕವಿತಾ ವಿಲಾಸ' ಎಂಬ ಬಿರುದುಗಳುಳ್ಳ ಶ್ರೀ ಮನ್ನಯಸೇನ ದೇವ ವಿರಚಿತವಾದ 'ಧರ್ಮಾಮೃತ' ದಲ್ಲಿ ದರ್ಶನ ಸಪ್ತಮಾಂಗವ್ಯಾವರ್ಣನಂ ಅಷ್ಟಮಾಶ್ವಾಸಂ.

# ನವಮಾಶ್ವಾಸಂ

ಶ್ರೀ ವಾತ್ಸಲ್ಯಂ ಮುಕ್ತಿ
ಶ್ರೀವನಿತೆಯನೊಲಿಸುವೌಷಧಂ ನಿಶ್ಚಯಮೆಂ
ದಾವಗಮಾವಿಭು ಮನದೊಳ್
ಭಾವಿಸಿದಂ ಸುಕವಿನಿಕರಪಿಕಮಾಕಂದಂ ೧

ಮಗಧಾವನೀಶ್ವರಂ ಮ
ತ್ತಗಣಿತಗುಣಗಣರನಮಳರಂ ಗೌತಮರಂ
ಜಗತೀಪೂಜಿತಪದರಂ
ನಗೇಂದ್ರಧೈರ್ಯ್ಯರನನಂಗಮದ ಸಂಹರರಂ ೨

ಗದ್ಯ॥ ಅಮೃತಶ್ರೀಯ ಕ್ರೀಡಾವನಮೆನಿಸುವ ಪ್ರಭಾವನೆಯ ಕಥೆಯನೆನಗೆ ಬೆಸಸವುದೆಂದು ನಮ್ರಮಸ್ತಕನಾಗಿ ಕೈಗಳಂ ಮುಗಿದು ಬೆಸಗೊಳ್ವುದುಂ ಗಣಧರಸ್ವಾಮಿಗಳಿಂತೆಂದು ಪೇಟ್ದರ್ ; ಮೂಗಿಲ್ಲದ ಮೂಕೊಟಿಯನೆಂತು ಕಣ್ಣಿಲ್ಲದ ಕುರುಡನೆಂತು ಕಿವಿ ಕೆಟ್ಟ ಕಿವುಡನೆಂತು, ಕೈಯಿಲ್ಲದ ಮೋಟನೆಂತು ಕಾಲಿಲ್ಲದ ಪೆಟವನೆಂತು ಶುಭಕಾರ್ಯಕ್ಕಂ ರಾಜಸಭೆಗಂ ಒಸಗೆಗಂ ಉತ್ಸಾಹಕ್ಕಂ ಒಳ್ಪಿಂಗಂ ಸಲ್ಲನಂತೆ ದರ್ಶನದೊಳಂ ದರ್ಶನದೆಂಟಂಗದೊಳಂ ಹೀನನಾಗಿ ಚಕ್ರವರ್ತಿ ಪದವಿಯುಮಂ ದೇವೇಂದ್ರ ಪದವಿಯುಮಂ ಮಹರ್ಧಿಕ ಪದವಿಯುಮಂ ಪಡೆವ ಪಡೆಪಂ ಕಿಡಿಸದೆ,

ಶ್ರೀವಾತ್ಸಲ್ಯವು ಮೋಕ್ಷ ಲಕ್ಷ್ಮಿಯೆಂಬ ವನಿತೆಯನ್ನು ಒಲಿಸಬಲ್ಲ ಔಷಧವೇ ನಿಶ್ಚಯವೆಂದು ಸುಕವಿನಿಕರಪಿಕಮಾಕಂದನಾದ ಆ ವಿಭು (ಶ್ರೇಣಿಕನು) ಮನಸ್ಸಿನಲ್ಲಿ ಭಾವಿಸಿದನು. ೧. ಮಗಧರಾಜನು ಮತ್ತೆ ಅಗಣಿತವಾದ ಗುಣಗಳನ್ನುಳ್ಳ ಪರಿಶುದ್ಧರಾದ ಗೌತಮರನ್ನು, ಜಗತ್ಪೂಜ್ಯವಾದ ಪಾದಗಳುಳ್ಳವರನ್ನೂ ಮೇರು ಧೈರ್ಯರನ್ನು, ಮನ್ಮಥ ಮದಸಂಹಾರಕರನ್ನು ೨. ಅಮೃತಲಕ್ಷ್ಮಿಯ ಆಡುಂಬೊಲವೆನಿಸುವ ಪ್ರಭಾವನೆಯ ಕಥೆಯನ್ನು ತನಗೆ ಹೇಳಬೇಕೆಂದು ತಲೆ ಬಾಗಿ ಕೈಗಳನ್ನು ಮುಗಿದು ಪ್ರಾರ್ಥಿಸಲು ಗಣಧರಸ್ವಾಮಿಗಳು ಹೀಗೆಂದು ಹೇಳಿದರು : ಮೂಗಿಲ್ಲದವನು (ಮೂಗು ಕೊಯ್ಸಿಕೊಂಡವ) ಹೇಗೊ, ಕಣ್ಣಿಲ್ಲದ ಕುರುಡ ಹೇಗೋ ಕಿವಿ ಕೆಟ್ಟುಹೋದ ಕಿವುಡ ಹೇಗೋ, ಕೈಯಿಲ್ಲದ ಮೋಟನು ಹೇಗೋ ಕಾಲಿಲ್ಲದ ಹೆಳವನು ಹೇಗೋ ಹಾಗೆ ಶುಭಕಾರ್ಯ, ರಾಜಸಭೆ, ಉತ್ಸವ, ಸಂಭ್ರಮ, ಒಳ್ಳೆಯ ಕೆಲಸ–ಇವುಗಳಿಗೆ ಸಲ್ಲನು. ಹಾಗೆಯೇ ದರ್ಶನದಲ್ಲಿಯೂ ದರ್ಶನದ ಎಂಟು ಅಂಗಗಳಲ್ಲಿಯೂ ಹೀನನಾಗಿ ಚಕ್ರವರ್ತಿ ಪದವಿಯನ್ನೂ ದೇವೇಂದ್ರ ಪದವಿಯನ್ನೂ ಮಹಾ ಋದ್ಧಿಯ ಪದವಿಯನ್ನೂ

ನವನಿಧಿಯುಳ್ಳವನಂತೆ ನವಗ್ರಹ ಬಲಮಂ ಪೆತ್ತನಂತೆ ದರ್ಶನಂ ಮೊದಲ್ಗೊಂಡೊಂಬತ್ತು ಗುಣಂಗಳೊಳ್ ನೆಱೆದು ಶುಭದ ತುತ್ತತುದಿಯಂನೆಯ್ದಿ ಕಳಸವಿಟ್ಟಬೆಸದಂತೆ ಸಂಪೂರ್ಣಾಗಮಮುಳ್ಳನಂತೆ ತೀವಿದ ಕೆಱೆಯಂತೆ ಪಗವಕ್ಕೆ ಬಂದ ಧಾನ್ಯದಂತೆ ಗಂಡಂಗೂಸುವೆತ್ತ ಸಜ್ಜನದಂತೆ ಪೊಂಬಡೆದ ಸೂಳೆಯಂತೆ ಸೇವೆಗಾದುವೊಕ್ಕ ಬಂದಿಗಾಱನಂತೆ ಬಲ್ಲಿದಂ ಕೈಕೊಂಡ ಸತಿಯಂತೆ ಲಂಚವೊಕ್ಕಿರ್ದ ಪ್ರಧಾನನಂತೆ ಪಗೆ ನಿರ್ಮೂಲವಾದ ಪಂದೆಯಂತೆ ಚಿತ್ತದೊಳಾನಂದಂಬೆರಸಿರ್ಪುದುಂ ೩

ಮುನಿಯೆನಲುವೇಡ ಶ್ರಾವಕ
ನೆನವೇಡ ಮನೋಜ್ಞೆಯುಂ ಪ್ರಭಾವನೆಯುಂ ನೆ
ಟ್ಟನೆ ಮಾಡವೇಟ್ಟುದಲ್ಲದೊ
ಡನಂತಸುಖನಿಳಯನಾಗಲಾಱಂ ಕಡೆಯೊಳ್ ೪

ಇನ್ನಾಪ್ರಭಾವನೆಯ ಮಹಿಮೆಯೆಂತಪ್ಪುದೆಂದೊಡೆ ೫

ವಿದಿತಂ ಕುರುಜಾಂಗಣಮೆಂ
ಬುದು ವಿಷಯಂ ಭೂತಳಾಗ್ರದೊಳ್ ಕಡು ಚೆಲ್ವಿಂ
ದೊದವಿರ್ದುದು ತದ್ಧರಣೀ
ಸುದತಿಯ ಮುಖಮುಕುರಮೆನಿಪ್ಪುದತಿಶಯದಿಂದಂ ೬

ಹೊಂದುವ ಲಭ್ಯವನ್ನು ಕೆಡಿಸದೆ ನವನಿಧಿಗಳುಳ್ಳವನಂತೆ, ನವಗ್ರಹಗಳ ಬಲವನ್ನು ಹೊಂದಿದವನಂತೆ, ದರ್ಶನ ಮೊದಲುಗೊಂಡು ಒಂಬತ್ತು ಗುಣಗಳಲ್ಲಿ ಕೂಡಿ ಶುಭದ ತುತ್ತತುದಿಯನ್ನು ಸೇರಿ ಕಳಶವನ್ನು ಇಟ್ಟ ಕೆಲಸದಂತೆ, ಸಂಪೂರ್ಣ ಆಗಮವುಳ್ಳವನಂತೆ ತುಂಬಿದ ಕೆರೆಯಂತೆ, ಹಗೇವಿಗೆ ಬಂದ ಧಾನ್ಯದಂತೆ ಗಂಡುಮಗನನ್ನು ಹೆತ್ತ ಕುಲಸ್ತ್ರೀಯಂತೆ, ಹೊನ್ನನ್ನು ಪಡೆದ ಸೂಳೆಯಂತೆ, ಹುಲ್ಲುಗಾವಲನ್ನು (?) ಹೊಕ್ಕ ಬಂದಿಕಾರನ ಹಾಗೆ ಹಿರಿಮೆಯನ್ನು ಪಡೆದ ಸತಿಯಂತೆ ಲಂಚ ಸೇರಿದ್ದ ಪ್ರಧಾನನಂತೆ ಶತ್ರು ನಿರ್ಮೂಲವಾದ ಹೇಡಿಯಂತೆ ಮನಸ್ಸಿನಲ್ಲಿ ಆನಂದದಿಂದ ಕೂಡಿರಲು ೩. ಮುನಿಯೆನ್ನಬೇಡ, ಶ್ರಾವಕನೆನ್ನಬೇಡ. ಯಾರೇ ಆದರೂ ಮನೋಹರವಾದ ಪ್ರಭಾವನೆಯನ್ನು ಚೆನ್ನಾಗಿ ಮಾಡಬೇಕು. ಇಲ್ಲದಿದ್ದರೆ ಅವನು ಕಡೆಯಲ್ಲಿ ಅನಂತಸುಖಕ್ಕೆ ನಿಲಯನಾಗಲಾರ ೪. ಇನ್ನು ಆ ಪ್ರಭಾವನೆಯ ಮಹಿಮೆಯೆಂತಹುದೆಂದರೆ ೫. ಕುರುಜಾಂಗಣವೆಂಬ ಪ್ರಾಂತ್ಯವು ಪ್ರಸಿದ್ಧವಾದದ್ದು. ಭೂಮಿಯಮೇಲೆ ಅದು ಬಹಳ ಸುಂದರವಾದ ನಾಡು. ಆ ಧರಣಿಯೆಂಬ ಸುದತಿಯ ಮುಖಕ್ಕೆ ಕನ್ನಡಿಯೆನ್ನಿಸಿಕೊಳ್ಳುವಂತಿತ್ತು, ೬. ಹಸ್ತಿನಾಪುರವೆಂಬ ಪಟ್ಟಣ. ಅದನ್ನು ಆಳುವವನು ಮಹಾಪದ್ಮನೆಂಬ

ಗದ್ಯ ॥ ಹಸ್ತಿನಾಪುರಮೆಂಬ ಪೊೞಲದನಾಳ್ವಂ ಮಹಾಪದ್ಮನೆಂಬ ಮಾಂಡಳಿಕನಾತನರಸಿ ಲಕ್ಷ್ಮೀಮತಿ ಮಹಾದೇವಿಯೆಂಬಳಾಯಿರ್ವರ್ಗಂ ಪ್ರಿಯತನೂಜರ್ ಪದ್ಮನುಂ ವಿಷ್ಣುಕುಮಾರನು ಮೆಂಬವರ್ ೭

ಸ್ಮರನಿಭರ್ ದಿವಿಜೇಂದ್ರಸನ್ನಿಭ ಭೋಗಿಗಳ್ ಜಿನಪಾದ ಪಂ
ಕರುಹಭೃಂಗರುದಾತ್ತಕೀರ್ತಿಗಳುಗ್ರವೈರಿಬಲೇಭಕಂ
ಜರ ವಿರೋಧಿಗಳುನ್ನತರ್ ದೃಢಚಿತ್ತರದ್ರಿನಿಭಕ್ಷಮರ್
ಪರಿಣತರ್ ವರ ಶಾಸ್ತ್ರವಿದ್ಯೆಗಳೊಳ್ ನೃಪಾಲನಸುಕ್ಷಮರ್ ೮

ಗದ್ಯ ॥ ಎನಿಸಿ ಪೆಂಪುವೆತ್ತ ಕುಮಾರರ ಗಾಡಿಯುಮಂ ನೋಡುತ್ತುಂ ಪರಮಾಂಡಳಿಕರುಮಂ ಪ್ರತಾಪಪರರುಮನಲ್ಲಾಡಿಸುತ್ತುಂ ಚರಿತ ಪುರಾಣಂಗಳುಮಂ ರಸಗೀತಮುಮನಾಲಿಸುತ್ತುಂ ಪರನೃಪರುಮಂ ಕುದೃಷ್ಟಿಗಳುಮಂ ಸೋಲಿಸುತ್ತುಂ ಸದ್ಧರ್ಮಮುಮಂ ಭವ್ಯರುಮಂ ಪರಿಪಾಲಿಸುತ್ತುಂ ೯

ಸಕಲಗುಣೋಪೇತಂ ಭಾ
ವಕ ತಿಲಕಂ ಜಿನಮತಾಬ್ಧಿಚಂದ್ರಂ ಧಾತ್ರೀ
ಶಕದಂಬ ನಮ್ರಚರಣಂ
ಪ್ರಕಟಯಶಂ ಭೂರಿಭೂತಳಪ್ರಸ್ತುತ್ಯಂ ೧೦

ಮಾಂಡಲಿಕ. ಆತನ ರಾಣಿ ಲಕ್ಷ್ಮೀಮತಿ ಮಹಾದೇವಿಯೆಂಬವಳು. ಆ ಇಬ್ಬರಿಗೂ ಪ್ರೀತಿಯ ಮಕ್ಕಳು ವಿಷ್ಣುಕುಮಾರ ಮತ್ತು ಪದ್ಮ ಎಂಬವರು ೭ ಮನ್ಮಥನಂತಿರುವವರು. ದೇವೇಂದ್ರಸಮಾನ ಭೋಗವುಳ್ಳವರು, ಜಿನಪಾದಗಳೆಂಬ ಕಮಲಗಳಲ್ಲಿ ದುಂಬಿಗಳು. (ಭಕ್ತರು) ಉದಾತ್ತ ಕೀರ್ತಿವಂತರು, ಉಗ್ರರಾದ ವೈರಿಗಳೆಂಬ ಆನೆಗಳಿಗೆ ವಿರೋಧಿಗಳು, ಶ್ರೇಷ್ಠರು, ದೃಢಚಿತ್ತರು ಪರ್ವತದಂಥ ಧೈರ್ಯವುಳ್ಳವರು ೮. ಹೀಗೆ ಆಧಿಕ್ಯ ಹೊಂದಿದ ಕುಮಾರ ಅಂದವನ್ನು ನೋಡುತ್ತ ಶತ್ರುಮಾಂಡಳಿಕರನ್ನೂ ಪ್ರತಾಪಶಾಲಿಗಳನ್ನೂ ಅಲ್ಲಾಡಿ ಸುತ್ತಲೂ ಚರಿತಪುರಾಣಗಳನ್ನೂ ಸುರಸ ಗೀತಗಳನ್ನು ಕೇಳುತ್ತಲೂ ಶತ್ರುರಾಜರನ್ನೂ ಕುದೃಷ್ಟಿಗಳನ್ನೂ ಸೋಲಿಸುತ್ತಲೂ ಸದ್ಧರ್ಮವನ್ನೂ ಭವ್ಯರನ್ನೂ ಕಾಪಾಡುತ್ತಲೂ ೯. ಸಕಲಗುಣಯುತನಾದ ಭಾವಕ ಶ್ರೇಷ್ಠನಾದ, ಜಿನಮತವೆಂಬ ಸಮುದ್ರಕ್ಕೆ ಚಂದ್ರನೆನಿಸಿದ. ರಾಜಸಮೂಹವನ್ನು ನಮ್ರವಾಗಿಸಿದ ಪಾದಗಳುಳ್ಳವನು, ಪ್ರಸಿದ್ಧ ಕೀರ್ತಿವಂತನೂ ಲೋಕದಲ್ಲೆಲ್ಲ ಬಹಳ ಸ್ತೋತ್ರಪಾತ್ರನೂ ಆಗಿದ್ದನು ೧೦.

ಗದ್ಯ ॥ ಮಹಾಪದ್ಮಮಹಾರಾಜಂ ರಾಜ್ಯಲಕ್ಷ್ಮಿಯ ಮನೋಹರನಾಗಿ ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತುಮಿರ್ಪಿನಂ, ಶ್ರುತಸಾಗರರೆಂಬಾಚಾರ್ಯರಯ್ನೂರ್ವರ್ ಮುನಿಗಳ್ವೆರಸು ಕ್ರಮಕ್ರಮದಿಂ ವಿಹಾರಿಸುತ್ತುಂ ಹಸ್ತಿನಾಪುರಕ್ಕೆ ವಂದು ಬಹಿರುದ್ಯಾನವನದೊಳಗಿರ್ಪುದುಂ ೧೧

ಮುನಿಮುಖ್ಯರ ಬರವಂ ಭೋಂ
ಕನೆಕಂಡು ಮಹಾನುರಾಗದಿಂದಂ ರಾಜ್ಯಂ
ತನಗೆ ದೊರೆಕೊಂಡ ತೆಱದಿಂ
ಮನದೊಳ್ ಕಡುಪೊಂಗಿ ಋಷಿನಿವೇದಕನಾಗಳ್ ೧೨

ಗದ್ಯ ॥ ಅರಮನೆಗೆ ಬಂದು ರಾಜಕುಮಾರರ ನಡುವೆ ತಾರಾಗಣದ ನಡುವೆ ಚಂದ್ರನಂತಿರ್ದ ಮಹಾಪದ್ಮರಾಜಂಗೆ ಕೈಮುಗಿದು ಪೊಡೆಮಟ್ಟು ೧೩

ಎರ್ದರಸಂಗಭಿಮುಖ ಮಾ
ಗಿರ್ದು ಕರಾಂಬುರುಹ ಯುಗಳಮಂ ಮುಗಿದು ಕರಂ
ಪೊರ್ದದೆ ಮೆಲ್ಲನೆ ದೂರದೊ
ಳಿರ್ದವಧಾರಿಸುವುದೇಕಚಿತ್ತದಿನಿತ್ತಲ್ ೧೪

ದ್ವಾದಶ ತಪಂಗಳುಂ ಕರ
ಮಾದರದಿಂ ಮೂರ್ತಿಗೊಂಡು ನಮ್ಮಯಪುರಕ
ತ್ತಾದರದಿಂ ಬಂದುವು ಪು
ಣ್ಯೋದಯದಿಂದೆನಿಸಿ ನೆಗಟ್ದ ದಿವ್ಯಮುನೀಂದ್ರರ್ ೧೫

ಮಹಾಪದ್ಮ ಮಹಾರಾಜನು ರಾಜ್ಯಲಕ್ಷ್ಮಿಗೆ ಮನೋಹರನಾಗಿ (ರಾಜನಾಗಿ) ಸುಖವಾಗಿ ರಾಜ್ಯಭಾರ ಮಾಡುತ್ತಿರಲು ಶ್ರುತಸಾಗರರೆಂಬ ಆಚಾರ್ಯರು ಐನೂರು ಮಂದಿ ಮುನಿಗಳೊಡನೆ ಕ್ರಮವಾಗಿ ವಿಹಾರಿಸುತ್ತ ಹಸ್ತಿನಾಪುರಕ್ಕೆ ಬಂದು ಹೊರಗಿನ ಉದ್ಯಾನದಲ್ಲಿ ನಿಂತಿರಲು, ೧೧. ಮುನಿಗಳ ಬರವನ್ನು ತಟ್ಟನೆ ಕಂಡು ಬಹಳ ಹರ್ಷದಿಂದ ತನಗೆ ರಾಜ್ಯ ಸಿಕ್ಕಿದಷ್ಟು ಸಂತೋಷವಾಗಿ ಋಷಿನಿವೇದಕನು ಬಹಳ ಉತ್ಸಾಹದಿಂದ ಅರಮನೆಗೆ ಹೋಗಿ ರಾಜಕುಮಾರರ ಮಧ್ಯೆ ನಕ್ಷತ್ರಸಮೂಹದ ನಡುವೆ ಚಂದ್ರನಂತೆ ಇದ್ದ ಮಹಾಪದ್ಮರಾಜನಿಗೆ ಕೈಮುಗಿದು ಅಡ್ಡಬಿದ್ದು ಎದ್ದು ರಾಜನನ್ನು ಕುರಿತು ಕೈಜೋಡಿಸಿಕೊಂಡು ಸ್ವಲ್ಪ ದೂರದಲ್ಲಿಯೇ ನಿಂತು ಬಿನ್ನವಿಸತೊಡಗಿದನು೧೪. ಹನ್ನೆರಡು ತಪಸ್ಸುಗಳೇ ಸ್ವಯಂ ಆಕಾರವನ್ನು ಧರಿಸಿ ನಮ್ಮ ಈ ಪಟ್ಟಣಕ್ಕೆ ಆದರದಿಂದ ಬಂದುವೆಂಬಂತೆ ದಿವ್ಯ ಮುನಿಶ್ರೇಷ್ಠರು ನಮ್ಮ ಪುಣ್ಯೋದಯದಿಂದ ಬಂದಿದ್ದಾರೆ ೧೫.

ಗದ್ಯ ॥ ಶ್ರುತಸಾಗರರೆಂಬಾಚಾರ್ಯರ್ಕೈನೂರ್ವರ್ ಮುನಿವರರ್ವೆರಸು ಬಂದಿರ್ಪರೆಂದು ಬಿನ್ನಪಂಗೆಯ್ವುದುಂ ಮಹಾಪದ್ಮಮಹೀವಲ್ಲಭನುಂ ಕರಮೊಸೆದು ಋಷಿನಿವೇದಕಂಗಂಗಚಿತ್ತ ಮನಿತ್ತು ಋಷಿಯರಿರ್ದೆಡೆಗೇಳಡಿಯಂ ನಡೆದು ಪೊಡೆಮಟ್ಟಾನಂದಭೇರಿಯಂ ಪೊಯ್ಸುವುದುಂ ತದ್ಭೇರೀನಾದಮಂ ಕೇಳ್ದು ೧೬

ಶ್ರಾವಕರುಂ ಸಮಸ್ತ ಪರಿವಾರಮುಮುತ್ಸವದಿಂ ನರೇಂದ್ರರುಂ
ತಾವಿರದರ್ತಿಯಿಂ ನೆರೆದು ತತ್ಕ್ಷಣದಿಂ ನೃಪಮಂದಿರಕ್ಕೆ ನಾ
ನಾವಿಧದರ್ಚನೋಪಕರಣಂಬೆರಸುನ್ನತಿಯಿಂದೆ ಬಂದು ಸ
ದ್ಭಾವದಿನಿರ್ದರಂಬುಧಿರವಕ್ಕೆಣೆಯಾಗಿರೆ ತೂರ್ಯನಿಸ್ವನಂ ೧೭

ಅರಮನೆಗೆ ಸಕಲ ಭವ್ಯೋ
ತ್ಕರಮುಂ ಸಾಮಂತರುಂ ಮಹಾಮಾತ್ಯರು ಮ
ಚ್ಚರಿಯಾಗಿರೆ ಬಂದಿರ್ದರ್
ಸರಾಗದಿಂ ದೇವರವನಿಗವತರಿಸಿದವೋಲ್ ೧೮

ಗದ್ಯ ॥ ಅರಮನೆಯ ಮುಂದಿರ್ಪುದುಂ, ಮಹಾಪದ್ಮ ಮಹಾರಾಜಂ ಸಮಸ್ತಾಂತಃಪುರ ಪುರಂಧ್ರಿಯರುಂ ಪದ್ಮನುಂ ವಿಷ್ಣುಕುಮಾರನುಂಬೆರಸು ಪೊರಮಟ್ಟು ಪಾದಮಾರ್ಗದಿಂ ಹಂಸೆ ಗಳ್ ಶತಪತ್ರಷಂಡಕ್ಕೆ ಬರ್ಪಂತೆ ಮುನಿವೃಂದಾರಕನನೆಯ್ದೆವಂದು ಮೇರುಗಿರಿಯಂ ಪ್ರದಕ್ಷಿಣೆ

ಶ್ರುತಸಾಗರರೆಂಬ ಆಚಾರ್ಯರು ಐನೂರು ಮಂದಿ ಮುನಿಗಳೊಡನೆ ಬಂದಿದ್ದಾರೆ, ಎಂದು ಬಿನ್ನಹ ಮಾಡುತ್ತಲೇ ಮಹಾಪದ್ಮರಾಜನು ಬಹಳ ಸಂತೋಷಪಟ್ಟು ಋಷಿ ನಿವೇದಕನಿಗೆ ಬಹುಮಾನವನ್ನು ಕೊಟ್ಟು ಋಷಿಗಳು ಇದ್ದ ಸ್ಥಳದ ಕಡೆಗೆ ಏಳು ಹೆಜ್ಜೆ ನಡೆದು ನಮಸ್ಕರಿಸಿ ಆನಂದ ಭೇರಿಯನ್ನು ಹೊಡೆಸಲು ಆ ಭೇರೀನಾದವನ್ನು ಕೇಳಿ, ೧೬. ಶ್ರಾವಕರೂ ಸಮಸ್ತ ಪರಿವಾರದವರೂ ಉತ್ಸಾಹದಿಂದ ರಾಜರೂ ಸಂಭ್ರಮದಿಂದ ಒಟ್ಟುಗೂಡಿ ಆ ಕ್ಷಣವೇ ಅರಮನೆಗೆ ನಾನಾ ವಿಧವಾದ ಪೂಜಾ ಸಾಮಗ್ರಿಗಳನ್ನು ತೆಗೆಸಿ ಕೊಂಡು ಹೆಚ್ಚಿನ ವೈಭವದಿಂದ ಬಂದು ಸೇರಿದರು. ವಾದ್ಯಧ್ವನಿಯು ಸಮುದ್ರ ಘೋಷಕ್ಕೆ ಸದೃಶವಾಯಿತು ೧೭. ಸಮಸ್ತಭವ್ಯರ ಸಮೂಹವೂ ಸಾಮಂತರೂ ಮಹಾ ಅಮಾತ್ಯರೂ ಆಶ್ಚರ್ಯಗೊಂಡು ಬಂದಿದ್ದರು. ಸರಾಗವಾಗಿ ದೇವರುಗಳು ಭೂಮಿಗೆ ಇಳಿದು ಬಂದಹಾಗೆ ತೋರುತ್ತಿತ್ತು ೧೮. ಅವರೆಲ್ಲ ಅರಮನೆಯ ಎದುರಿನಲ್ಲಿ ಇರಲಾಗಿ ಮಹಾ ಪದ್ಮ ಮಹಾರಾಜನು ಸಕಲ ಅಂತಃಪುರಸ್ತ್ರೀಯರು, ಪದ್ಮ, ವಿಷ್ಣುಕುಮಾರ, ಎಲ್ಲರನ್ನೂ ಕೂಡಿ ಹೊರಟು ಹಂಸಗಳು ಪಾದ ಮಾರ್ಗದಿಂದ ಕಮಲ ಸರೋವರಕ್ಕೆ ಬರುವ ಹಾಗೆ ಮುನಿಶ್ರೇಷ್ಠನ ಸಮೀಪಕ್ಕೆ ಬಂದು ಮೇರುಪರ್ವತವನ್ನು ಪ್ರದಕ್ಷಿಣೆ

ಗೆಯ್ವ ಚಂದ್ರಾದಿತ್ಯರ್ಕಳಂತೆ ಮುನಿನಿಕರಮಂ ತ್ರಿಃಪ್ರದಕ್ಷಿಣಂ ಮಾಡಿ ಭಕ್ತಿ ಪೂರ್ವಕಂ ಗುಣಾಕರರೆನಿಸುವ ಶ್ರುತಸಾಗರ ಮುನೀಂದ್ರರ ಪಾದಪದ್ಮಂಗಳನರ್ಚಿಸಿ ವಂದಿಸಿ ಕೈಯುಂ ಮುಗಿದು ಮುಂದೆ ಕುಳ್ಳಿರ್ದು ೧೯

ಕೊಲೆಯೊಳ್ ಪೊರ್ದದ ನಿರ್ವೃತಿ
ಲಲನೆಯ ಸೊಬಗೆನಿಪ ಪಾಪಹೇತುಗಳಂ ಪಂ
ಬಲಿಸದ ಮಿಥ್ಯಾವಚನ
ಕ್ಕಲಸುವ ಜಿನಧರ್ಮಮಂ ಮನಂಬಿಡೆ ಕೇಳ್ದಂ ೨೦

ಗದ್ಯ ॥ ಅಂತು ಧರ್ಮಮಂ ಕೇಳ್ದು ಸಂಸಾರಕ್ಕೆ ಪೇಸಿ ಪಂಚೇಂದ್ರಿಯಂಗಳೆಂಬ ಗಂಧ ಸಿಂಧುರಂಗಳಂ ಮನಂಗಿಡೆ ಸುಗ್ಗೊತ್ತಲುಂ, ಮೋಹವೃಕ್ಷದ ಬೇರಂ ಕಿತ್ತಾಕಾಶಕೆತ್ತಲುಂ ಕಷಾಯಭಟರಂ ಪಡಲ್ವಡಿಸಲುಂ ಬಗೆದಂದು ತನ್ನೊಳಿಂತೆಂದಂ ೨೧

ನೋಡ ಮಂಜಿನ ನೀರನಕ್ಕಟ ನಂಬಿ ಬಿತ್ತುವೆನೆಂಬನುಂ
ನಾಡೆಯುಂ ಪಿಡಿದೇಱುವೆಂ ದ್ವಿರದೇಂದ್ರವೈರಿಯನೆಂಬನುಂ
ಕೂಡೆ ಪೆರ್ವೊನಲಂ ತಳಂಗಳಿನೊತ್ತಿ ಕಾಳ್ದುವೆನೆಂಬನುಂ
ಕೇಡಿನೊಳ್ಕಿಳಿಗೊಂಡ ರಾಜ್ಯಮನೊಲ್ವನುಂ ಮರುಳಲ್ಲನೇ ೨೨

ಗದ್ಯ॥ ಬೂದಿಯಾದ ಪುಳ್ಳಿಯಂತೆ ಪಿಂಡಿಯಾದ ಎಳ್ಳಿನಂತೆ ಬಸಿಱಂ ಪೊಕ್ಕ ಕೂಟನಂತೆ ರಸಂಬೋದ ಕಬ್ಬಿನಂತೆ ಪೇಡಿಯಪ್ಪರಸಿನ ಮಾತಿನಂತೆ ಬೇಸಗೆಯ ಮುಗಿಲಂತೆ ಬಱಗಾಲದ

ಮಾಡುವ ಚಂದ್ರಸೂರ್ಯರುಗಳಂತೆ ಮುನಿಸಮೂಹವನ್ನು ಮೂರು ಸಲ ಪ್ರದಕ್ಷಿಣೆ ಮಾಡಿ ಭಕ್ತಿಪೂರ್ವಕವಾಗಿ ಗುಣಾಶ್ರಯರೆನಿಸುವ ಶ್ರುತಸಾಗರ ಮುನಿಶ್ರೇಷ್ಠರ ಪಾದ ಕಮಲಗಳನ್ನು ಪೂಜಿಸಿ ನಮಸ್ಕಾರಮಾಡಿ ಕೈಮುಗಿದು ಮುಂದೆ ಕುಳಿತುಕೊಂಡು, ೧೯. ಕೊಲೆಯನ್ನು ಸಹಿಸದ, ಮೋಕ್ಷಲಲನೆಯಂ ಸೊಗಸೆನಿಸುವ ಪಾಪಹೇತುಗಳನ್ನು ಹಂಬಲಿಸದ, ಮಿಥ್ಯಾವಚನಕ್ಕೆ ಬೇಸರಿಸುವ ಜಿನಧರ್ಮವನ್ನು ಮನಬಿಚ್ಚಿ ಕೇಳಿದರು ೨೦. ಹಾಗೆ ಧರ್ಮವನ್ನು ಕೇಳಿ ಸಂಸಾರಕ್ಕೆ ಅಸಹ್ಯಪಟ್ಟು ಪಂಚೇಂದ್ರಿಯಗಳೆಂಬ ಮದ್ದಾನೆ ಗಳನ್ನು ಅವು ಅಂಜುವಂತೆ ನಿಗ್ರಹಿಸಲೂ, ಮೋಹವೆಂಬ ಮರದ ಬೇರನ್ನು ಕಿತ್ತು ಆಕಾಶಕ್ಕೆ ಎತ್ತುವುದಕ್ಕೂ ಕಷಾಯಗಳೆಂಬ ಭಟರನ್ನು ಧ್ವಂಸಮಾಡುವುದಕ್ಕೂ ಸಂಕಲ್ಪಿಸಿ ತನ್ನೊಳಗೇ ಹೀಗೆ ಯೋಚಿಸಿದನು. ೨೧. ಮಂಜಿನ ನೀರನ್ನು ನಂಬಿಕೊಂಡು ಬೀಜಬಿತ್ತು ವೆನೆಂಬವನೂ ವಿಶೇಷವಾಗಿ ಸಿಂಹವನ್ನು ಹತ್ತಿ ಸವಾರಿ ಮಾಡುವೆನೆಂಬವನೂ ದೊಡ್ಡ ಪ್ರವಾಹವನ್ನು ಕೈಗಳಿಂದ ಒತ್ತಿ ತಡೆಯುವೆನೆಂಬುವವನೂ ಕೇಡಿನಲ್ಲಿ ಸ್ನೇಹ ಮಾಡಿ ಕೊಂಡ ರಾಜ್ಯವನ್ನು ಬಯಸುವವನೂ ಹುಚ್ಚರಲ್ಲವೆ ? ೨೨. ಬೂದಿಯಾದ ಪುರಲೆ ಯಂತೆ, ಹಿಂಡಿಯಾದ ಎಳ್ಳಿನಂತೆ, ಹೊಟ್ಟೆಯಲ್ಲಿ ಸೇರಿದ ಅನ್ನದಂತೆ ರಸವು ಸೋರಿಹೋದ ಕಬ್ಬಿನಂತೆ, ಹೇಡಿಯಾದ ಅರಸನ ಮಾತಿನಂತೆ, ಬೇಸಗೆ ಕಾಲದ ಮೋಡದಂತೆ, ಕ್ಷಾಮ

ಬೆಳಸಿನಂತೆ ಮಳೆಗಾಲದ ಬಿಸಿಲಂತೆ ಬಲ್ಲಿದರಲ್ಲದರ ಪೊರ್ದುಗೆಯಂತೆ ಮೂರ್ಖರ ನಗೆಮೊಗದಂತೆ ದೂರದ ಬರವಿನಂತೆ ಕೆಟ್ಟೊಕ್ಕಲ ಸಾಲದಂತೆ ಸಂಶಯಕ್ಕೆಡೆಯಾದರ್ಥಮುಮಂ, ಸಿಕ್ಕಿದೆರಲೆಯಂತೆ ಪಲ್ಲಿಸಂದಿಯಡಕೆಯಂತೆ, ಬಾಯತುತ್ತಿನಂತೆ ಬೇರಿಲ್ಲದ ಮರನಂತೆ ತೊಱೆಯ ತೀರದೂರಿನಂತೆ, ಪಳ್ಳದೊಳಗಣ ಬಳಂಬೆಯಂತೆ, ದ್ರೋಹನ ನಿಸ್ತರಣೆಯಂತೆ ಕಳ್ಳನ ಸಿರಿಯಂತೆ, ಗಾಳಿಯ ಸೊಡರಂತೆ ಬಡವನ ದರ್ಪದಂತೆ ಸಂಚಲಮಪ್ಪ ದೇಹಮುಮಂ, ಮುಗಿಲಂತೆ ಸಂಜೆಯ ಕೆಂಪಿನಂತೆ ನೀರ ರೇಖೆಯಂತೆ, ಪೊರೆದಂಕದಾಳಿನಂತೆ ಪತ್ತಿಸಿ ನೋಟ್ಪ ಸೂಳೆಯಂತೆ ಕಾದುವ ಕೋೞಿಯೊಡೆಯನಂತೆ, ಕಾಳಗಕ್ಕೆ ಬಂದ ಬೂತಿನಂತೆ ಕೊಟ್ಟೀವಟ್ಟ ಬಾರಿಕನಂತೆ ದಂಡುವೇಟ್ಪರಸಿನಂತೆ ತೂಗಿ ಬಿಡುವ ನಾಯಕನಂತೆ ಕಲಹಂ ಮಾಟ್ಪ ಕೋಡೆಯನಂತೆ ಲೇಸಲ್ಲದ ಸುಖಕ್ಕೆ ಪಾಯಿಸಿ ನೋಯಿಸುವಿಂದ್ರಿಯಂಗಳುಮಂ ಮದ್ದುಕುಣಿಕೆಯಂತೆ, ಪಿತ್ತದಂತೆ ನಾಯಪಾಲಂತೆ ಮತಿಗಿಡಿಸುವ ಪೆಂಡಿರುಮಂ ಕಾಪಿನಾಳಂತೆ ಬೇಲಿಯಂತೆ ಪೊಳೆಯಿಲ್ಲದ ತೊಱೆಯಂತೆ ಬಲ್ಪಂಟನಾಣೆಯಂತೆ ಧರ್ಮಕ್ಕೆ ಸಲಲೀಯದಡ್ಡಂಬರ್ಪ ತಾಯ್ತಂದೆಯುಮಂ, ತೊಱೆಯೊಳ್ ಪೋಪರಂ ಬೆಟ್ಟೇಱಿಬೀಳ್ವರಂ ಪೆಟ್ಟಮೆಳಸಿಕೊಳ್ವರಂ ಕುತ್ತದೊಳ್ ಪೊರಳ್ವರಂ ಬೇಗೆಯೊಳ್ ನರಳ್ವರಂ ಬಯಲೊಳ್ ಕಾದುವರಂ ಕಳದೊಳಿಱಿವರಂ ಕಿರ್ಚಿನೊಳ್ ಬೆಯ್ವರಂ ಸೋಲ್ತೋಡುವರಂ ಗಾಳದೊಳ್ನೇಲು

ಕಾಲದ ಬೆಳೆಯ ಹಾಗೆ, ಮಳೆಗಾಲದ ಬಿಸಿಲಿನಂತೆ, ಬಲಿಷ್ಠರಲ್ಲದವರ ಆಶ್ರಯದಂತೆ, ಮೂರ್ಖರ ನಗುಮುಖದಂತೆ, ದೂರದಿಂದ ಬರುವಿಕೆಯ ಹಾಗೆ, ಗತಿಗೆಟ್ಟ ಒಕ್ಕಲಿಗನ ಸಾಲದಂತೆ, ಅನುಮಾನಕ್ಕೆ ಗುರಿಯಾದ ಅರ್ಥವೂ, ಸಿಕ್ಕಿಬಿದ್ದ ಜಿಂಕೆಯಂತೆ, ಹಲ್ಲಿನ ಸಂದಿಯಲ್ಲಿನ ಅಡಿಕೆಯಂತೆ, ಬಾಯ ತುತ್ತಿನಂತೆ, ಬೇರಿಲ್ಲದ ಮರದಂತೆ, ನದೀ ತೀರದ ಊರಿನಂತೆ, ಹಳ್ಳದೊಳಗಿನ ಒಣಮೆಯಂತೆ, ದ್ರೋಹಿಯ ಉದ್ಧಾರದಂತೆ, ಕಳ್ಳನ ಐಶ್ವರ್ಯದಂತೆ, ಗಾಳಿಯಲ್ಲಿನ ದೀಪದಂತೆ ಬಡವನ ದರ್ಪದಂತೆ, ಚಂಚಲವಾದ ದೇಹವನ್ನು ಮೋಡದಂತೆ, ಸಂಜೆಯ ಕೆಂಬಣ್ಣದಂತೆ, ನೀರೊಳಗಿನ ಗೆರೆಯಂತೆ, ಕಾಪಾಡಿದ ಯುದ್ಧವೀರನಂತೆ. ಜಗಳ ಹತ್ತಿಸಿ ನೋಡುವ ಸೂಳೆಯಂತೆ, ಕಾಳಗದ ಕೋಳಿಯ ಒಡೆಯನಂತೆ, ಯುದ್ಧಕ್ಕೆ ಬಂದ ಭೂತದಂತೆ, ಕೂಳು ಬೇಡುವ ಸರದಿ ಸೂಚಿಸುವನಂತೆ, ಯುದ್ಧಕ್ಕೆ ಆಜ್ಞಾಪಿಸುವ ರಾಜನಂತೆ, ತೂಕಮಾಡಿ ಬಿಡುವ ನಾಯಕನಂತೆ, ಜಗಳ ಮಾಡುವ ಚಾಡಿಕಾರನಂತೆ ಒಳ್ಳೆಯದಲ್ಲದ ಸುಖಕ್ಕೆ ನುಗ್ಗಿಸಿ ನೋಯಿಸುವ ಇಂದ್ರಿಯಗಳನ್ನೂ, ಮದ್ದುಕುಣಿಕೆಯಂತೆ, ಪಿತ್ತದಂತೆ, ನಾಯಿಯ ಹಾಲಿನಂತೆ ಬುದ್ಧಿಯನ್ನು ಕೆಡಿಸುವ ಹೆಂಡಿರನ್ನು, ಕಾವಲಿನ ಆಳಿನಂತೆ, ಬೇಲಿಯಂತೆ, ಪ್ರವಾಹವಿಲ್ಲದ ನದಿಯಂತೆ, ಬಲಿಷ್ಠನಾದ ಬಂಟನ ಆಜ್ಞೆಯಂತೆ, ಧರ್ಮಕ್ಕೆ ಸೇರಲೀಯದೆ ಅಡ್ಡ ಬರುವ ತಾಯಿ ತಂದೆಗಳನ್ನು, ನದಿಯಲ್ಲಿ ಹೋಗುವವರನ್ನು, ಬೆಟ್ಟವನ್ನು ಹತ್ತಿ ಬೀಳುವವರನ್ನೂ ಪೆಟ್ಟ (ಬಂಡಿ) ವನ್ನು ಎಳಸಿಕೊಳ್ಳುವವರನ್ನು ರೋಗದಲ್ಲಿ ಹೊರಳುವವರನ್ನು ಬೇಗೆಯಲ್ಲಿ ನರಳುವವರನ್ನು ಬಯಲಲ್ಲಿ ಯುದ್ಧ ಮಾಡುವವರನ್ನು ಯುದ್ಧದಲ್ಲಿ ಇರಿಯುವವರನ್ನು ಬೇಕಿಯಲ್ಲಿ ಬೇಯುವವರನ್ನು ಸೋತು ಓಡುವವರನ್ನು ಗಾಳದಲ್ಲಿ ನೇತಾಡು

ವರುಂ ನೆರೆದು ನೋಡುವರಂತೆ ನೋವುಂ ಸಾವುಮಡಸಿದಾಗಳ್ ನೆರೆದು ಗುಜುಗುಮ್ಮನೆ ನೋಡುತಿರ್ಪ ನಂಟರುಮಂ ಸೂಜಿಗೊಂಡ ಪುಣ್ಣನಂತೆ ಕಣ್ಣಶೂಲೆಯಂತೆ ನಾಲಗೆಯ ಪುಗುಳಂತೆ ಮೂಗಿನ ರಸಿಗೆಯಂತೆ ಶೂಲೆಯಂತೆ ಕೆಮ್ಮಿನಂತೆ ತೇಳವಿಷದಂತೆ ನಂಜೂಡಿದಂಬಿನಂತೆ ಬಸಿಱೊಳಿರ್ದಲಗಿನಂತೆ ಮಮ್ಮಲ ಮಱುಗಿಸುವ ಮಕ್ಕಳುಮಂ, ಸುೞಿಯೊಳ್ ಬಿರ್ದ ಪಱುಗೋಲಂತೆ ಬೆಟ್ಟಂ ತಾಗಿದ ಪೊನಲಂತೆ ಕುಂಬಾಱನ ಚಕ್ರದಂತೆ, ಅಟಣದ ವೊಗಪೆಯಂತೆ ಕಡವ ಕಡೆಗೋಲಂತೆ ಮಸೆವ ಸಾಣೆಯಂತೆ, ವೈಹಾಳಿಯ ಕುದುರೆಯಂತೆ ಮಕ್ಕಳಿಟ್ಟ ಬದರಿಯಂತೆ ಮಾಣದೆ ತಿರುಗುವ ಬಾಳುಮಂ, ನಂಬಿ ಮೆಯ್ಯಱಿಯದೆ ಭೋಗಕಾಂಕ್ಷೆಯಿಂದಿರ್ದನಪ್ಪೊಡೆ, ನೆರೆಮನೆಯ ಕಿರ್ಚುಮಂ ಪತ್ತಿದಪಗೆಯುಮಂ ಬರ್ಪ ಪುಲಿಯುಮಂ ತಿಂಬ ನಾಯುಮಂ ಕೊಲ್ವಾನೆಯುಮಂ ಮುನಿವರಸನುಮಂ ಬಡಿವ ಕಳ್ಳನುಮಂ ನಿದ್ರಿಸುವ ಬಂಟನುಮಂ ಪೆಱರ್ಗೆ ಕೂರ್ಪ ಸ್ತ್ರೀಯುಮಂ ಪೊಂಗಳಿಪುವ ಮಗನುಮನಳಿಪುವಂತಕ್ಕುಮೆಂದು ಕಳಕಳಿಸಿ ನಕ್ಕು ಮನದೊಳ್ ರಾಜ್ಯಕ್ಕೆ ಪೇಸಿ ಪದ್ಮನುಮಂ ವಿಷ್ಣುಕುಮಾರನುಮಂ ಪ್ರಧಾನರುಮಂ ಬರಿಸಿ ಮಹೀನಾಥನಿಂತೆಂದಂ ೨೩

ಸನ್ನುತ ಧರ್ಮದ ಫಲದಿಂ
ದಿನ್ನೆವರಂ ರಾಜ್ಯಲಕ್ಷ್ಮಿಯೊಳ್ ನೆರೆದೆಂ ಮ
ತ್ತಿನ್ನಳಿಪಿಂ ನಿಲ್ವೊಡೆ ಬಿ
ನ್ನಣಮೇಂ ಬಿತ್ತನುಂಡ ತೆಱನೆಂತಕ್ಕುಂ ೨೪

ವವರನ್ನು ಗುಂಪು ಸೇರಿ ನೋಡುವವರಂತೆ, ನೋವೂ ಸಾವೂ ಬಂದಾಗ ಸೇರಿ ಮೌನವಾಗಿ ನೋಡುತ್ತಿರುವನೆಂಬರನ್ನು, ಸೂಜಿಯಿಂದ ಚುಚ್ಚಿದ ಹುಣ್ಣಿನಂತೆ, ಕಣ್ಣಿನ ನೋವಿನಂತೆ, ನಾಲಗೆಯ ಮೇಲಿನ ಗುಳ್ಳೆಯಂತೆ, ಮೂಗಿನ ರಸಿಕೆಯಂತೆ, ನೋವಿನಂತೆ, ಕೆಮ್ಮಿನಂತೆ, ಚೇಳಿನ ವಿಷದಂತೆ, ವಿಷ ಹಚ್ಚಿದ ಬಾಣದಂತೆ, ಹೊಟ್ಟೆಯಲ್ಲಿರುವ ಕತ್ತಿಯಂತೆ ಬಹಳ ಸಂಕಟ ಪಡಿಸುವ ಮಕ್ಕಳನ್ನು, ಸುಳಿಯಲ್ಲಿ ಬಿದ್ದ ಹರಿಗೋಲಿನಂತೆ, ಬೆಟ್ಟಕ್ಕೆ ತಾಕಿದ ಹಳ್ಳದಂತೆ, ಕುಂಬಾರನ ಚಕ್ರದಂತೆ, ಮಕ್ಕಳು ಹೊಡೆದ ಬುಗುರಿಯಂತೆ, ರಾಟಣದ ಸಣ್ಣ ಕುಡಿಕೆಯಂತೆ ಕಡೆಯುವ ಕಡೆಗೋಲಿನಂತೆ, ಮಸೆಯುವ ಸಾಣೆಯ ಕಲ್ಲಿನಂತೆ, ವಿಹಾರದ ಬಯಲಲ್ಲಿನ ಕುದುರೆಯಂತೆ ಬಿಡದೆ ತಿರುಗುವ ಜೀವನವನ್ನು, ನಂಬಿ ಮೈಮೇಲೆ ಎಚ್ಚರವಿಲ್ಲದೆ ಭೋಗದ ಆಸೆಯಿಂದ ಇದ್ದೆನೆಂದರೆ ನೆರಮನೆಯ ಬೆಂಕಿಯನ್ನು ಬೆನ್ನು ಹತ್ತಿದ ಹಗೆಯನ್ನು, ಬರುವ ಹುಲಿಯನ್ನೂ, ತಿನ್ನುವ ನಾಯಿಯನ್ನೂ, ಕೊಲ್ಲುವ ಆನೆಯನ್ನೂ, ಸಿಟ್ಟುಗೊಳ್ಳುವ ಅರಸನನ್ನು, ಬಡಿಯುವ ಕಳ್ಳನನ್ನು ನಿದ್ರಿಸುತ್ತಿರುವ ವೀರನನ್ನು, ಇತರರಿಗೆ ಒಲಿದ ಹೆಣ್ಣನ್ನು ಹಣಕ್ಕೆ ಆಸೆಪಡುವ ಮಗನನ್ನು ಆಸೆ ಪಡುವಂತೆ ಆಗುತ್ತದೆ. ಎಂದು ಗಹಗಹಿಸಿ ನಕ್ಕು ಮನಸ್ಸಿನಲ್ಲಿ ರಾಜ್ಯಕ್ಕೆ ಅಸಹ್ಯಪಟ್ಟು ಪದ್ಮನನ್ನೂ ವಿಷ್ಣುಕುಮಾರನನ್ನೂ ಪರಿವಾರವನ್ನೂ ಪ್ರಧಾನರನನ್ನೂ ಬರಮಾಡಿ ರಾಜನು ಹೀಗೆಂದನು : ೨೩. ಶ್ರೇಷ್ಠ ಧರ್ಮದ ಫಲದಿಂದ ಇಲ್ಲಿಯವರೆಗೆ ರಾಜಲಕ್ಷ್ಮಿಯನ್ನು ಸೇರಿದ್ದೆ. ಈಗ ಇನ್ನೂ ಆಸೆಯಿಂದ ನಿಲ್ಲುವುದಾದರೆ ವಿವೇಕವೆ ? ಬೀಜವನ್ನೇ

ಬಿತ್ತಿಂದಂ ಬೆಳದೊಕ್ಕಲ್
ಬಿತ್ತಂ ಮುಂದಣ್ಗೆ ಕಟ್ಟುವಂತಿರೆ ಮುನ್ನಿನ
ಸತ್ತಪದ ಫಲವನುಣುತುಂ
ಮತ್ತೇಳಿಸಿ ಬಿಡದೆ ಮಾಡವೇಟ್ಪುದು ತಪಮಂ ೨೫

ಗದ್ಯ॥ ಅದು ಕಾರಣದಿನಿನ್ನೆವರೆಗಂ ಪರತ್ರೆಯಂ ಕಿಡಿಸಿ ಸಂಸಾರದಲ್ಪಸುಖಮಂ ಮಹಾ ಸುಖಮೆಂದು ನಂಬಿ ಕೆಟ್ಟೆನೀಗಳ್ ಶಾಶ್ವತಸುಖಮಂ ಮಾಳ್ಪ ಜಿನರೂಪಮಂ ತಾಳ್ದುವ ಪುಣ್ಯ ಮಿಂದು ಸಮನಿಸಿತೆಂದು ತನ್ನ ಮನದ ಕಜ್ಜಮನಱಿಯೆ ಪೇಟ್ದು ಪದ್ಮಂಗೆ ಪಟ್ಟಮಂ ಕಟ್ಟಿ ಧರಾಭಾರಮನೊಪ್ಪಿಸಿ ಸಮ್ಯಕ್ತ್ವಚೂಡಾಮಣಿಗೆ ಯುವರಾಜಪದವಿಯಂ ಕುಡುವುದುಂ ವಿಷ್ಣುಕುಮಾರನಿಂತೆಂದಂ ೨೬

ಒಪ್ಪುವ ರಾಜ್ಯಶ್ರೀ ಲೇ
ಸಪ್ಪೊಡೆ ನೀನೇಕೆ ದೇವ ಬಿಡುವೈ ಕೇಳಿಂ
ತಪ್ಪ ನುಡಿ ಬೇಡ ನೃಪ ನೀ
ನಪ್ಪುದನಾನಪ್ಪೆನಟಿಸುಖಂಗಳ್ಗೆಱಗೆಂ ೨೭

ತನು ಲೇಸಪ್ಪೊಡೆ ದೇವರೇಕೆ ತಪಮಂ ಕೈಕೊಳ್ವರಿಂತೀ ಸುಹೃ
ಜ್ಜನಮಂ ಕಾಂತೆಯರಂ ಮಹಾಮಹಿಮೆಯಂ ಶ್ರೀಯಂ ಗಜಾನೀಕಮಂ
ಧನಮಂ ಧಾತ್ರಿಯನೊಲ್ಲದೋಸರಿಸಿ ಪೇಟಾಂ ಗಾಂಪನೇ ಪುಟ್ಟನೇಂ
ನಿನಗಾಂ ಬೇಳನೆನಲ್ಲನೀ ನುಡಿಗಳಂ ಮಾತಾಡವೇಡೆನ್ನೊಳಂ ೨೮

ತಿಂದಹಾಗೆ ಆಗುತ್ತದೆ ೨೪. ಬೀಜದಿಂದ ಬೆಳೆದು ಒಕ್ಕಲಿಗನು ಮುಂದಕ್ಕೆ ಬೀಜವನ್ನು ಕಟ್ಟಿಡುವ ಹಾಗೆ ಹಿಂದಿನ ಒಳ್ಳೆಯ ತಪಸ್ಸಿನ ಫಲವನ್ನು ಅನುಭವಿಸುತ್ತ ಪುನಃ ಆಸಕ್ತಿ ಯಿಂದ ಬಿಡದೆ ತಪಸ್ಸನ್ನು ಮಾಡಬೇಕು. ೨೫. ಆದಕಾರಣ ಇಂದಿನವರೆಗೆ ಪರಗತಿ ಯನ್ನು ಕೆಡಿಸಿಕೊಂಡು ಸಂಸಾರದ ಅಲ್ಪ ಸುಖವನ್ನು ಮಹಾಸುಖವೆಂದು ನಂಬಿ ಕೆಟ್ಟೆ. ಈಗ ಶಾಶ್ವತ ಸುಖವನ್ನುಂಟು ಮಾಡುವ ಜಿನರೂಪವನ್ನು ಧರಿಸುವ ಪುಣ್ಯವು ಇಂದು ಲಭಿಸಿತ್ತೆಂದು ತನ್ನ ಮನಸ್ಸಿನ ಉದ್ದೇಶವನ್ನು ತಿಳಿಯಹೇಳಿ ಪದ್ಮನಿಗೆ ಪಟ್ಟಕಟ್ಟಿ ರಾಜ್ಯಭಾರವನ್ನು ಒಪ್ಪಿಸಿ ಸಮ್ಯಕ್ತ್ವಚೂಡಾಮಣಿಗೆ ಯುವರಾಜ ಪದವಿಯನ್ನು ಕೊಡಲು ವಿಷ್ಣುಕುಮಾರನು ಹೀಗೆ ಹೇಳಿದನು ೨೬. ಶ್ರೇಷ್ಠವಾದ ರಾಜ್ಯಲಕ್ಷ್ಮಿಯು ಒಳ್ಳೆಯದಾದ ಪಕ್ಷದಲ್ಲಿ, ದೇವ, ನೀನು ಏಕೆ ಬಿಡುತ್ತೀಯೆ ? ಕೇಳು. ಇಂಥ ಮಾತು ಬೇಡ. ರಾಜನೆ, ನೀನು ಆಗುವುದನ್ನು ನಾನೂ ಆಗುತ್ತೇನೆ. ನೀಚ ಸುಖಗಳಿಗೆ ನಾನು ಬಲಿಯೆನು. ೨೭. ದೇಹ ಒಳ್ಳೆಯದಾದರೆ ದೇವರವರು ತಪಸ್ಸನ್ನೇಕೆ ಕೈಕೊಳ್ಳುವರು ?. ಈ ಸ್ನೇಹಿತರನ್ನೂ ಕಾಂತೆಯರನ್ನೂ ಮಹಾ ಮಹಿಮೆಯನ್ನೂ ಐಶ್ವರ್ಯವನ್ನೂ ಗಜಸೈನ್ಯವನ್ನೂ ಧನವನ್ನೂ ರಾಜ್ಯವನ್ನೂ ಒಲ್ಲದೆ ತ್ಯಜಿಸಿ ಏಕೆ ತಪಸ್ಸು ಮಾಡುವರು ? ನಾನೇನು ದಡ್ಡನೆ ? ಚಿಕ್ಕ ಹುಡುಗನೆ ? ನಾನು ದಡ್ಡನಲ್ಲ. ನನ್ನಲ್ಲಿ ಈ ಮಾತುಗಳನ್ನು ಆಡಬೇಡ.

ಗದ್ಯ॥ ಅರಸರೋಲಗಂ ಲೇಸು ಕಾಳಗಂ ಬೆಟ್ಟಿತೆಂಬಂತೆ ಸಂಚಲಚಿತ್ತಂಗಂ ದೂರದರ್ಶಿಯಲ್ಲದಂಗಂ ಮಿಥ್ಯಾತ್ವಮಿಶ್ರಿತಂಗಂ ಸಂಸಾರದೊಳಾದ ಸುಖಂ ಪಿರಿದಪ್ಪ ಸುಖಮಾಗಿ ತೋಱುಗುಂ ಬಟಱಿಕ್ಕುದ ನರಕದುಃಖಕ್ಕೆ ಮೆಯ್ಯನೊಡ್ಡಬಾರದುದಱಿಂ ದೇವಗೆಂದೊಡವ್ವೆ ನಗೆ ರಾಜ್ಯದ ಮೇಲೆಳ್ಳನಿತಪ್ಪೊಡಂ ಮೋಹಮಿಲ್ಲೆಂದು ಪಲವಂ ನುಡಿಯದೊಂದನೆ ಪರಿಚ್ಛೇದಮಾಗೆ ನುಡಿದುಸಿರದಿರ್ಪುದುಂ ಮಹಾಪದ್ಮಮಹಾರಾಜಂ ಮಗನ ಮಾತಿಂಗೆ ಬೆಱಗಾಗಿ ತನ್ನೊಳಿಂತೆಂದಂ ೨೯

ಸಂದ ತಿರಿಕಂಗೆ ತೊವೆ ತು
ಪ್ಪಂ ದೊರೆಕೊಳಲುಣ್ಮಿ ನಲಿವ ತೆಱದಿಂ ಸೌಖ್ಯ
ಕ್ಕೆಂದುಂ ಬಾರದೆ ರೌರವ
ದಿಂದಂ ಬಂದಂಗೆ ಮೋಹಮಕ್ಕುಂ ಸಿರಿಯೊಳ್ ೩೦

ಶರಧಿಪರೀವೃತ ಧಾತ್ರೀ
ಭರಮಂ ತಾಳ್ದಂತೆ ಪಳಿವು ಸಮನಿಸೆ ಪೆರ್ಚುಂ
ಪಿರಿದಾಗದಂತೆ ಸುಖಮಂ
ಸುರಲೋಕದೊಳುಂಡು ಬಂದವಂಗಿದು ಪಿರಿದೇ ೩೧

೨೯. 'ರಾಜನ ಸಭೆ ಚೆನ್ನ, ಕಾಳಗ ಕಷ್ಟ' ಎನ್ನುವ ಹಾಗೆ ಚಪಲಮನಸ್ಕನಿಗೆ, ದೂರದರ್ಶಿಯಲ್ಲದವನಿಗೆ, ಮಿಥ್ಯಾತ್ವಮಿಶ್ರಿತನಿಗೂ ಸಂಸಾರದ ಸುಖ ದೊಡ್ಡದಾದ ಸುಖವಾಗಿ ತೋರುವುದು. ಆಮೇಲೆ ಒದಗುವ, ನರಕ ದುಃಖಕ್ಕೆ ಮೈಯೊಡ್ಡಲಾಗುವುದಿಲ್ಲ. ಆದ್ದರಿಂದ ದೇವರವರೇನೆಂದರೂ ನನಗೆ ರಾಜ್ಯದ ಮೇಲೆ ಎಳ್ಳಷ್ಟೂ ಮೋಹವಿಲ್ಲವೆಂದು ಹಲವು ಮಾತನ್ನಾಡದೆ ಒಂದನ್ನೇ ನಿರ್ಣಯವಾಗಿ ನುಡಿದು ಮತ್ತೆ ಮಾತನಾಡದೆ ನಿಲ್ಲಲು, ಮಹಾಪದ್ಮಮಹಾರಾಜನು ಮಗನ ಮಾತಿಗೆ ಆಶ್ಚರ್ಯಗೊಂಡು ತನ್ನೊಳಗೇ ಹೀಗೆ ಯೋಚಿಸಿದನು. ೨೯. ತಿರುಕನಿಗೆ ತೊವ್ವೆ ತುಪ್ಪ ಲಭಿಸಿದರೆ ಉತ್ಸಾಹ ಪಟ್ಟು ನಲಿಯುವ ರೀತಿಯಾಗಿ ಸೌಖ್ಯ ಎಂದೂ ಲಭಿಸದೆ ರೌರವದಿಂದ ಬಂದವನಿಗೆ ಐಶ್ವರ್ಯದಲ್ಲಿ ಮೋಹವುಂಟಾಗುತ್ತದೆ. ೩೦. ಸಮುದ್ರ ಸುತ್ತುಗಟ್ಟಿರುವ ಭೂಮಿಯ ಭಾರವನ್ನು ಹೊತ್ತಂತೆ. ಅಪಕೀರ್ತಿ ಬಂದರೆ, ಹೆಚ್ಚಳವು ದೊಡ್ಡದಾಗುವುದಿಲ್ಲ. ಹಾಗೆಯೇ ದೇವಲೋಕದಲ್ಲಿ ಸುಖವನ್ನು ಅನುಭವಿಸಿ ಬಂದವನಿಗೆ ಇದು–ಈಸುಖ–ದೊಡ್ಡದೇ ? ೩೧. ಆದಕಾರಣ ಈತನಾದರೆ ಸಾಮಾನ್ಯ ಮನುಷ್ಯ

ಗದ್ಯ॥ ಅದುಕಾರಣದಿಂದೀತನಪ್ಪೊಡೆ ಸಾಮಾನ್ಯ ಮನುಷ್ಯನಲ್ಲೆಂದು ಪೆರ್ಚಿ ರಾಜ್ಯಭಾರಮಂ ಬಿಟ್ಟಪೊತ್ತಪಂ ಕಲ್ಲಭಾರವನೀಡಾಡುವಂತೀಡಾಡಿ ಪಂಚೇಂದ್ರಿಯಂಗಳ ಸುಖಮಂ ಪಗೆಯಂ ಕಾಣ್ಬಂತೆ ಕಂಡು ಮಹಾಶ್ರೀಯಂ ಕೊಳೆದ ಪುಲ್ಲಕಡ್ಡಿಯಂ ತೊರೆವಂತೆ ತೊರೆದು ಸಮ್ಯಕ್ತ್ವಚೂಡಾಮಣಿವೆರಸು ಶ್ರುತಸಾಗರ ಮುನೀಶ್ವರರಲ್ಲಿ ಜಿನದೀಕ್ಷೆಯಂ ಕೈಕೊಂಡು ಮುಕ್ತಿಶ್ರೀಕಂಠಾಭರಣಮೆನಿಪ ಪರಮಾಗಮಮನೋದಿ ಪಲಕಾಲಂ ಗುರುಪಾದಸೇವೆಯೊಳಿರ್ದು ಗುರುಗಳಾಜ್ಞೆಯಿಂ ಬೇರೆವೇರೆ ಪೋಗಿ ಘೋರವೀರತಪದೊಳ್ ನೆಗಟುತ್ತುಮಿರ್ದು ಮಹಾಪದ್ಮಮುನಿನಾಥಂ ಅಷ್ಟಾಪದಗಿರಿಯೊಳ್ ಕರ್ಮಕ್ಷಯಂಗೆಯ್ದು ಸುಗತಿಲಕ್ಷ್ಮಿಯೊಳ್ ಕೂಡಿದಂ; ವಿಷ್ಣುಕುಮಾರ ಮುನೀಶ್ವರನುಂ ತಪಶ್ರೀ ವಧೂಪ್ರಿಯನಾಗಿರ್ದನಿತ್ತಲ್ ೩೨

ಧರೆಯಂ ಜೀಯೆನೆ ಮಾಡುತುಂ ವಿಬುಧರಂ ಶಿಷ್ಟೇಷ್ಟರಂ ಮನ್ನಿಸು
ತ್ತರಿ ಭೂಪಾಲರ ದರ್ಪಮಂ ಕಿಡಿಸುತುಂ ಸದ್ಧರ್ಮಮಂ ಪಾಲಿಸು
ತ್ತುರು ಭೂಚಕ್ರಮನಾಜ್ಞೆಯಿಂ ನಡೆಸುತುಂ ಸದ್ರಾಜನೀತಿತ್ವದೊಳ್
ದೊರೆಯಿಲ್ಲೀತನೊಳೆಂಬಿನಂ ಪದುಮ ಭೂನಾರೀಶನಿರ್ಪನ್ನೆಗಂ ೩೩

ಗದ್ಯ॥ ಅನ್ನೆಗಮಿತ್ತಲವಂತಿ ವಿಷಯದುಜ್ಜಯಿನಿಯೆಂಬ ಪುರಮನಾಳ್ವಂ ಜಯವರ್ಮ ಮಹಾರಾಜನೆಂಬರಸನಾತನ ಮಂತ್ರಿ ಬಲಿಯೆಂಬನಂತಾ ಬಲಿಯೊಡವುಟ್ಟಿದರುಂ ಶುಕ್ರನುಂ ಬೃಹ

ನಲ್ಲವೆಂದು, ಹೆಮ್ಮೆಯಿಂದ ರಾಜ್ಯಭಾರವನ್ನು, ಬಿಟ್ಟಿ ಹೊತ್ತವನು ಕಲ್ಲಿನ ಹೊರೆಯನ್ನು ಬಿಸಾಡುವಂತೆ ಬಿಸಾಟು ಪಂಚೇಂದ್ರಿಯಸುಖವನ್ನು ಶತ್ರುವಿನಂತೆ ಕಂಡು ಮಹೈಶ್ವರ್ಯವನ್ನು ಕೊಳೆತ ಹುಲ್ಲು ಕಡ್ಡಿಯ ಹಾಗೆ ಭಾವಿಸಿ ತ್ಯಜಿಸಿ, ಸಮ್ಯಕ್ತ್ವಚೂಡಾಮಣಿಯೊಡನೆ ಶ್ರುತಸಾಗರ ಮುನೀಶ್ವರರಲ್ಲಿ ಜಿನದೀಕ್ಷೆಯನ್ನು ಪಡೆದು ಮುಕ್ತಿಶ್ರೀಗೆ ಕಂಠಾಭರಣವೆನ್ನಿಸುವ ಪರಮಾಗಮವನ್ನು ಓದಿ ಹಲವು ಕಾಲ ಗುರುಪಾದಸೇವೆಯಲ್ಲಿದ್ದು ಅವರ ಅಪ್ಪಣೆಯಂತೆ ಬೇರೆಬೇರೆ ಹೋಗಿ ಘೋರವಾದ ವೀರತಪಸ್ಸಿನಲ್ಲಿ ತೊಡಗಿದ್ದು ಮಹಾಪದ್ಮಮುನಿನಾಥನು ಅಷ್ಟಾಪದಗಿರಿಯಲ್ಲಿ ಕರ್ಮನಾಶ ಮಾಡಿಕೊಂಡು ಸದ್ಗತಿಯನ್ನು ಪಡೆದನು. ವಿಷ್ಣುಕುಮಾರ ಮುನೀಶ್ವರನೂ ತಪಸ್ಸೆಂಬ ವಧುವಿಗೆ ಪ್ರಿಯನಾಗಿ (ತಪಸ್ವಿ) ಇದ್ದನು. ೩೨. ಇತ್ತ ಪದ್ಮಭೂಪತಿಯು ಲೋಕದಲ್ಲಿ ಭೂಮಿಯನ್ನು ಗೆದ್ದು, ಪಂಡಿತರನ್ನೂ ಶಿಷ್ಟರನ್ನೂ ಇಷ್ಟರನ್ನೂ ಗೌರವಿಸುತ್ತ ಶತ್ರುರಾಜರ ಭಯವನ್ನು ಕೆಡಿಸುತ್ತ ಸದ್ಧರ್ಮವನ್ನು ಕಾಪಾಡುತ್ತ ಸಮಸ್ತ ಭೂಮಂಡಳವನ್ನೂ ತನ್ನ ಆಜ್ಞೆಯಂತೆ ನಡೆಸುತ್ತ ರಾಜನೀತಿಯಲ್ಲಿ ಈತನಿಗೆ ಸಮಾನರಿಲ್ಲವೆನ್ನಿಸಿಕೊಂಡ. ೩೩. ಆ ವೇಳೆಗೆ ಇತ್ತ, ಅವಂತಿದೇಶದ ಉಜ್ಜಯಿನಿಯೆಂಬ ಪಟ್ಟಣವನ್ನು ಆಳುವ ಜಯವರ್ಮಮಹಾರಾಜನೆಂಬ ಅರಸ, ಆತನ ಮಂತ್ರಿ ಬಲಿ, ಎನ್ನುವವನೂ ಇದ್ದರು. ಆ ಬಲಿಯ ಒಡಹುಟ್ಟಿದವರಾದ ಶುಕ್ರ, ಬೃಹಸ್ಪತಿ,

ಸ್ಪತಿಯುಂ ಪ್ರಹ್ಲಾದನುಮೆಂಬರತಿಪ್ರವೀಣರ್ ವೇದಶಾಸ್ತ್ರಪ್ರವೀಣರವರೊಳ್ ಕೂಡಿ ಬಲಿ ಸುಖದಿರ್ಪನ್ನೆಗಂ ೩೪

ಪರಮತಪೋನಿಲಯರ್ ದು
ರ್ಧರಚರಿತರ್ ಕಾಲಜಲಧಿ ಬಡಬಾನಳರು
ರ್ವರೆ ಪೂಜ್ಯರ್ ಸಕಳಾಗಮ
ಪರಿಣತರಮಳರ್ ಸಮಸ್ತಮುನಿಗಣವಂದ್ಯರ್ ೩೫

ಗದ್ಯ॥ ಅಕಂಪನಾಚಾರ್ಯರಯ್ನೂರ್ವರ್ ಮುನೀಶ್ವರರ್ವೆರಸು ವಿಹಾರಿಸುತ್ತುಮುಜ್ಜ ಯಿನಿಗೆ ವಂದು ಪೊಱವೊಟಲೊಳಿರ್ಪುದುಂ ಪೊಟಲೊಳಗಣ ಶ್ರಾವಕರೆಲ್ಲಂ ೩೬

ಪೆರ್ಚಿಯುಮುತ್ಸವಂಬೆರಸು ಭೂವಳಯಂ ತಮಗಾದ ಮಾರ್ಗದಿಂ
ದರ್ಚನೆಗೊಂಡು ದಿವ್ಯಮುನಿ ವಾಗ್ಝರಿಯಿಂದಘಮೆಂಬ ಪಂಕಮಂ
ಕರ್ಚುವನೆಂಬಪೋಲ್ನೆರೆದು ತನ್ಮುನಿ ಪಾದಪಯೋಜವಂ ಸಮಂ
ತರ್ಚಿಸಲೆಂದು ಪೋಪ ಜನದೊಂದುಲಿವಂ ಜಯವರ್ಮ ಭೂಭುಜಂ ೩೭

ಗದ್ಯ॥ ಕೇಳ್ದು ಮಾಡದ ಮೇಲಿರ್ದು ದಿಶಾವಲೋಕನಂಗೆಯ್ಯುತ್ತುಮೀ ನೆರೆದ ನೆರವಿ ನಾನಾ ವಿಧಾರ್ಚನೆವೆರಸೆಲ್ಲಿಗೆ ಪೋದಪ್ಪರೆಂದು—ಮಾಪ್ರಸ್ತಾವದೊಳ್ ಋಷಿನಿವೇದಕನುಂ ಬಂದು ಮಹೀವಲ್ಲಭಂಗೆ ಪೊಡೆಮಟ್ಟು ದೇವ, ನಮ್ಮ ಪುರಕ್ಕಿಂದು ಶ್ರುತವಾರಾಶಿಗಳುಂ ಪರಮಾವಧಿ

ಪ್ರಹ್ಲಾದ, ಎಂಬವರು ಬಹಳ ಪ್ರವೀಣರು, ವೇದಶಾಸ್ತ್ರಗಳಲ್ಲಿ ಪಂಡಿತರು, ಅವರೊಡನೆ ಸೇರಿ ಬಲಿಯು ಸುಖವಾಗಿದ್ದನು ೩೪. ಆಗ ಪರಮತಪಸ್ಸಿಗೆ ನಿಲಯದಂಥವರು, ದುರ್ಧರವಾದ ಚರಿತವುಳ್ಳವರು, ಕಾಲಸಮುದ್ರಕ್ಕೆ ಬಡಬಾಗ್ನಿಯಂಥವರು, ಲೋಕಪೂಜ್ಯರು, ಸಕಲ ಆಗಮಗಳಲ್ಲಿಯೂ ಪಂಡಿತರು, ಪರಿಶುದ್ಧರು. ಎಲ್ಲ ಮುನಿ ಸಮೂಹಗಳಿಗೂ ಪೂಜ್ಯರು, ೩೫. ಇಂಥ ಅಕಂಪನಾಚಾರ್ಯರು ಐನೂರು ಜಿನ ಮುನೀಶ್ವರರೊಡನೆ ಕೂಡಿ ವಿಹಾರಿಸುತ್ತ ಉಜ್ಜಯನಿಗೆ ಬಂದು ನಗರದ ಬಾಹ್ಯೋದ್ಯಾನದಲ್ಲಿರಲು ಪಟ್ಟಣದಲ್ಲಿದ್ದ ಜೈನ ಗೃಹಸ್ಥರೆಲ್ಲರೂ ೩೬. ಉತ್ಸಾಹಿಸಿ ಭೂಮಂಡಲವೇ ತಮಗೆ ದೊರೆತ ಹಾಗೆ ಸಂಭ್ರಮದಿಂದ ಪೂಜಾದ್ರವ್ಯಗಳನ್ನು ತೆಗೆದುಕೊಂಡು ದಿವ್ಯಮುನಿಗಳ ವಾಕ್ಪ್ರವಾಹದಲ್ಲಿ ಪಾಪವೆಂಬ ಕೆಸರನ್ನು ತೊಳೆಯುವೆವೆಂಬಂತೆ ಗುಂಪು ಸೇರಿ ಮುನಿಪಾದಕಮಲವನ್ನು ಶ್ರೇಷ್ಠವಾಗಿ ಪೂಜಿಸಲೆಂದು ಹೋಗುವ ಜನರ ಶಬ್ದವನ್ನು ಜಯವರ್ಮ ಮಹಾರಾಜನು ಕೇಳಿದನು. ೩೭. ಉಪ್ಪರಿಗೆಯ ಮೇಲಿದ್ದು ದಿಕ್ಕುಗಳನ್ನು ನೋಡುತ್ತ ಈ ಗುಂಪು ನಾನಾ ವಿಧವಾದ ಅರ್ಚನೆಗಳೊಡನೆ ಎಲ್ಲಿಗೆ ಹೋಗುತ್ತಾರೆಂದು ಯೋಚಿಸುತ್ತಿರಲು ಆ ಸಮಯದಲ್ಲಿ ಋಷಿನಿವೇದಕನು ಬಂದು ರಾಜನಿಗೆ ಅಡ್ಡಬಿದ್ದು "ದೇವ ! ನಮ್ಮ ಪುರಕ್ಕೆ ಈದಿನ ಶ್ರುತಸಮು

ಲೋಚನರುಂ ಚಾರಿತ್ರಮಯರುಮಪ್ಪ ಅಕಂಪನಾಚಾರ್ಯರಯ್ನೂರ್ವರ್ ಮುನೀಶ್ವರರ್ವೆರಸು ಬಂದಿರ್ದರೆಂದು ಬಿನ್ನಪಂಗೆಯ್ವುದುಂ ನರೇಂದ್ರನವರಿರ್ದ ದೆಸೆಗೇಳಡಿಯುಂ ನಡೆದು ಪೊಡೆವಟ್ಟು ಋಷಿ ನಿವೇದಕಂಗೆ ಮೆಚ್ಚುಗೊಟ್ಟು ಕೆಲದೊಳಿರ್ದ ಬಲಿಯ ದೊಗವಂ ನೋಡಿ ೩೮

ಮನದೊಳೆನಿತೊಳವು ಸಂಶಯ
ಮನಿತುಮನೋರಂತೆ ದಿವ್ಯಮುನಿಪುಂಗವನೊಳ್
ಮನಸಿಜಹರನೊಳ್ ತ್ರಿಭುವನ
ವಿನಮಿತನೊಳ್ ಕೇಳ್ವಮೆಂಬುದುಂ ಬಲಿ ನುಡಿದಂ ೩೯

ಜೀವವನೇಕ ಕರ್ಮಮನುಪಾರ್ಜಿಸಿ ಮಾಣದೆ ತತ್ಫಲಂಗಳಂ
ಜೀವನೆ ಮತ್ತಮನ್ಯಭವದೊಳ್ ಗಡ ತಾನಿರದುಣ್ಬಮೆಂಬುದುಂ
ಭೂವರ ನಂಬಿ ಬೇಳೆನಿಸಬೇಡ ಪರತ್ರೆಯನಾರು ಕಂಡರೆ
......ಲೆ ಪೇಟ್ಟಡೆ ಸತ್ತರನಾರು ಕಂಡವರ್ ೪೦

ಬಱುವಲಿಯಂ ಮಾತಂ ಕೇ
ಳ್ದಱಿಯದೆ ದೆಸೆಗೆಟ್ಟು ಜೀವಮುಂ ಗತಿಯುಂ ಕೇ
ಳಱಿನುಂ ತಾವೊಳವೆಂಬೀ
ತೆಱವಲಿತನವೇಕೆ ನಿನಗೆ ಭುವನಾಧಿಪತೀ ೪೧

ದ್ರರೂ ದಿವ್ಯಜ್ಞಾನನೇತ್ರರೂ, ಚಾರಿತ್ರಮಯರೂ ಆದ ಅಕಂಪನಾಚಾರ್ಯರು ಐನೂರುಮಂದಿ ಮುನೀಶ್ವರರೊಡನೆ ಬಂದಿದ್ದಾರೆ" ಎಂದು ಬಿನ್ನಹ ಮಾಡುತ್ತಲೆ, ರಾಜನು ಅವರು ಇದ್ದ ದಿಕ್ಕಿನ ಕಡೆಗೆ ಏಳು ಹೆಜ್ಜೆ ನಡೆದು ನಮಸ್ಕರಿಸಿ, ಆ ಋಷಿ ನಿವೇದಕನಿಗೆ ಬಹುಮಾನವನ್ನು ಕೊಟ್ಟು ಪಕ್ಕದಲ್ಲಿದ್ದ ಬಲಿಯ ಮುಖವನ್ನು ನೋಡಿ ೩೮. "ಮನಸ್ಸಿನಲ್ಲಿ ಎಷ್ಟು ಸಂಶಯಗಳಿವೆಯೋ ಅವಷ್ಟನ್ನೂ ದಿವ್ಯ ಮುನಿಶ್ರೇಷ್ಠನಲ್ಲಿ, ಮನ್ಮಥಹರನಲ್ಲಿ, ತ್ರಿಭುವನಗಳಿಂದ ನಮನ ಪಡೆದವನಲ್ಲಿ ಚೆನ್ನಾಗಿ ಕೇಳೋಣ" ಎನ್ನಲು ಬಲಿಯು ಹೇಳಿದನು : ೩೯. "ಜೀವವು ಅನೇಕ ಕರ್ಮಗಳನ್ನು ಮಾಡಿ ಪಾಪ ಸಂಪಾದಿಸಿ ತಪ್ಪದೆ ಆ ಫಲಗಳನ್ನು ಆ ಜೀವನೇ ಮತ್ತೆ ಅನೇಕ ಜನ್ಮಗಳಲ್ಲಿ ಅನುಭವಿಸುವನೆಂಬುದನ್ನು ನಂಬಿ, ರಾಜ ! ಬೆಪ್ಪನೆನಿಸಿಕೊಳ್ಳಬೇಡ. ಪರಲೋಕವನ್ನು ಕಂಡವರು ಯಾರು ? ಸತ್ತವರನ್ನು ಮತ್ತೆ ಕಂಡವರು ಯಾರು ? ೪೦. ಬೆತ್ತಲೆಯಿರುವವರ ಮಾತು ಕೇಳಿ ತಿಳಿಯದೆ ದಿಕ್ಕೆಟ್ಟು ಜೀವವೂ ಪರಗತಿಯೂ ಧರ್ಮವೂ ವುಂಟೆಂಬ ದಡ್ಡತನ ನಿನಗೇಕೆ ? ೪೧. ಅದರಿಂದ ಜೀವವೆಂಬುದುಂಟೆಂಬುದಕ್ಕೂ

ಗದ್ಯ॥ ಅದಱಿಂ ಜೀವಮುಂಟೆಂಬುದಕ್ಕಂ ಶುಭಾಶುಭ ಕರ್ಮಮೊಳವೆಂಬುದಕ್ಕಂ ತತ್ಫಲ ಮುಂಟೆಂಬುದಕ್ಕಂ ಮಱುಭವದೊಳ್ ತಾವೆ ಮಗುಳ್ದುಂಬರೆಂಬುದಕ್ಕಂ ಸ್ವರ್ಗನರಕಂಗಳೊಳ ವೆಂಬುದಕ್ಕಂ ಸಾಕ್ಷಿಯಾರಿದೆಲ್ಲಂ ಗಾಳಿಯುಂ ಗೇಂಟಿಕ್ಕುವಂತೆ ಮಾಯಾವ್ಯವಹಾರಮಿದನರಸ ನೀಂ ಕಿವ್ವನೆ ನಂಬಿ ಮರುಳಾಗಿ ತಪದಿಂದೊಡಲಂ ನಿಷ್ಕಾರಣಂ ಪರತ್ರೆಯುಂಟೆಂದು ತವಿಸುವ ಕಟ್ಟಿ ಗ್ಗರಪ್ಪ ಋಷಿಯರ ಮಾತಂ ಕೇಳ್ದು ರಾಜ್ಯದೊಳಾದ ಭೋಗೋಪಭೋಗಂಗಳಂ ಕಿಡಿಸಿ ಕೊಳವೇಡೆಂಬುದುಮರಸನಿಂತೆಂದಂ ೪೨

ಒಯ್ಯನೆ ದಿನಕರನುದಯಂ
ಗೆಯ್ಯದ ಮುನ್ನೊಪ್ಪುಗುಂ ನಿಶಾಕರಬಿಂಬಂ
ರಯ್ಯಮೆನೆ ಸೂರ್ಯನುದಯಂ
ಗೆಯ್ಯೆ ಬಱಿಕ್ಕೊಪ್ಪಿ ಬೆಳಗಲಾರ್ಪನೆ ಚಂದ್ರಂ ೪೩

ಗದ್ಯ॥ ಅಂತು ಕುವಾದಿಯೆನಿಪ ನಿನ್ನಂತಪ್ಪತಿ ಧೂರ್ತರ್ ಮಹಾವಾದಿಗಳಿಲ್ಲದನ್ನೆವರಮುಕ್ಕಿ ಸೊಕ್ಕಿ ತೇಜಮಂ ಪಾಟಿಸುವರಲ್ಲದೆ ಮಹಾವಾದಿಗಳಾಸ್ಥಾನದೊಳ್ ಕುಂದಿ ಕುಸಿದೊಳಸೋರ್ದು ಕೇದಗೆಯೇಱಿದ ಕೋಡಗನಂತೆ ಸಿಡಿಮಿಡಿಗೊಂಡು ಮಿಡುಕದಿರ್ಪರದಲ್ಲದೆ ತಲೆಯೆತ್ತರದಱಿಂ ಬಾಯ್ಗೆ ವಂದಂತೆ ಕೊನೆದುದ್ದವೇಱಿ ಪಲವನೆನ್ನ ಮುಂದೆ ಗಳಪದುಸಿರದಿರೆಂಬುದುಂ ಬಲಿ ಯಿಂತೆಂದಂ ೪೪

ಶುಭಾಶುಭಕರ್ಮಗಳಿವೆಯೆಂಬುದಕ್ಕೂ ಅವಕ್ಕೆ ಫಲವುಂಟೆಂಬುದಕ್ಕೂ ಪುನರ್ಜನ್ಮದಲ್ಲಿ ತಾವೇ ಅದನ್ನು ಮತ್ತೆ ಅನುಭವಿಸುವರೆಂಬುದಕ್ಕೂ ಸ್ವರ್ಗನರಕಗಳು ಇವೆಯೆಂಬು ದಕ್ಕೂ ಸಾಕ್ಷಿ ಯಾರು ? ಇದೆಲ್ಲವೂ ಗಾಳಿಯನ್ನು ಗಂಟುಹಾಕುವಂತೆ ಮಾಯಾ ವ್ಯವ ಹಾರ. ಅರಸನೆ ! ನೀನು ಇದನ್ನು ವೃಥಾ ನಂಬಿ ದಡ್ಡನಾಗಿ ಅಕಾರಣವಾಗಿ, ಪರಲೋಕ ವುಂಟೆಂದು ಭ್ರಮಿಸಿ, ತಪಸ್ಸಿನಿಂದ ದೇಹವನ್ನು ಕೃಶಪಡಿಸುವುದು ಬಹಳ ದಡ್ಡತನ. ಕಡುದಡ್ಡರಾದ ಋಷಿಗಳ ಮಾತನ್ನು ಕೇಳಿ ರಾಜ್ಯದಲ್ಲಿ ಆಗುವ ಭೋಗ, ಉಪಭೋಗ ಗಳನ್ನು ಕಳೆದುಕೊಳ್ಳಬೇಡ" ಎಂದು ಹೇಳಿದಾಗ ಅರಸನು ಹೀಗೆಂದನು. ೪೨ "ಸೂರ್ಯ ಬಿಂಬ ಹುಟ್ಟುವ ಮುಂಚೆ ಚಂದ್ರಬಿಂಬ ಚೆನ್ನಾಗಿ ಹೊಳೆಯುತ್ತದೆ. ರಮ್ಯವಾಗಿ ಸೂರ್ಯ ಬಿಂಬವು ಉದಯವಾದ ಮೇಲೆ ಚಂದ್ರನು ಬೆಳಗಬಲ್ಲನೆ ? ೪೩. ಹಾಗೆಯೇ ಕುವಾದಿ ಯಾದ ನಿನ್ನಂಥ ಮಹಾಧೂರ್ತರು ಮಹಾವಾದಿಗಳು ಎದುರಿಗೆ ಇಲ್ಲದಿರುವವರೆಗೆ ಉಬ್ಬಿ ಗರ್ವದಿಂದ ತೇಜಸ್ಸನ್ನು ಹೊಗಳಿಕೊಳ್ಳುವರು. ಅಷ್ಟೇ ಹೊರತು, ಮಹಾ ವಾದಿಗಳ ಸಮ್ಮುಖದಲ್ಲಿ ಕುಗ್ಗಿ ಕುಸಿದು ಮುದುಡಿಕೊಂಡು ಕೇದಗೆ ಮರವನ್ನು ಹತ್ತಿದ ಕೋತಿಯಂತೆ ಒದ್ದಾಡುತ್ತ ಅಲುಗದೆ ಇರುವರು : ಅಲ್ಲದೆ ತಲೆ ಎತ್ತರು. ಆದರೆ ಬಾಯಿಗೆ ಬಂದ ಹಾಗೆ ಕೊಚ್ಚಿಕೊಳ್ಳದಿರು. ನನ್ನ ಮುಂದೆ ಹರಟಬೇಡ, ಮಾತನಾಡ

ವಸುಧೇಶ್ವರ ನೀನವಧಾ
ರಿಸುವೋದಿನೊಳೆನಗೆ ನಿನ್ನ ನಚ್ಚಿನ ಋಷಿಯರ್
ವಸುಮತಿಯೊಳ್ ತಲೆಯಂ ಸಂ
ಕಿಸದೆತ್ತಿರದಿರ್ಪೊಡವರೆ ದೇವರ್ ಧರೆಯೊಳ್ ೪೫

ಗದ್ಯ॥ ಎಂಬುದುಮರಸನವನನಾಚಾರಕ್ಕೆ ಸೈರಿಸದೀತನ ವಿದ್ಯಾಗರ್ವಮಂ ಕಿಡಿಸಲ್ವೇಳ್ಕುಮೆಂದು ಕೆಯ್ಯಂ ಪಿಡಿದೊಡಗೊಂಡು ಸಮಸ್ತ ನೃಪಕುಮಾರರುಮಂತಃಪುರ ಪುರಂಧ್ರಿಯರುಂ ಬೆರಸು ಪಾದಮಾರ್ಗದಿಂದಕಂಪನಾಚಾರ್ಯರಲ್ಲಿಗೆ ವಂದು ಮೂಱು ಸೂಳ್ ಬಲಗೊಂಡು ಮುನಿವೃಂದಾರಕರ ಚರಣಯುಗಳಮಂ ಬಹುವಿಧಾರ್ಚನೆಯಿಂದರ್ಚಿಸಿ ವಂದಿಸಿ ಋಷಿಯರುಮಂ ಪರಿವಿಡಿಯಿಂದರ್ಚಿಸಿ ವಂದಿಸಿ ಮುಂದೆ ಕುಳ್ಳಿರ್ದು ಮೋಕ್ಷದ ನಿಚ್ಚಣಿಕೆಯೆನಿಪ ಜಿನೇಂದ್ರ ಧರ್ಮಮಂ ಕೇಳ್ದಿಂತೆಂದಂ - ೪೬

ಮೊಱೆಯಿಲ್ಲಘಮಿಲ್ಲೊಳ್ಪಿ
ಲ್ಲಱನಿಲ್ಲ ಪರತ್ರೆಯಿಲ್ಲ ಜೀವನುಮಿಲ್ಲೆಂ
ದಱಿಯದೆ ಕೆಮ್ಮನೆ ಕುದಿವರ್
ತೆಱವಲಿತನದಿಂದೆ ಬಾಯ್ಗೆ ವಂದಂತೆ ಕೆಲರ್ ೪೭

ಬೇಡ" ಎನ್ನಲು ಬಲಿ ಹೀಗೆಂದನು ; "ರಾಜನೇ, ನೀನು ಗಮನಿಸು. ವಿದ್ಯೆಯಲ್ಲಿ ನಿನ್ನ ಪ್ರೀತಿಯ ಋಷಿಗಳು ನನ್ನೆದುರಿಗೆ ಶಂಕೆಯಿಲ್ಲದೆ ತಲೆಯೆತ್ತಿ ನಿಂತರಾದರೆ ಲೋಕದಲ್ಲಿ ಅವರೇ ದೇವರು " ೪೫. ಹೀಗೆನ್ನಲು ಅರಸನು ಅವನ ಅನಾಚಾರಕ್ಕೆ ಸಹಿಸದೆ "ಇವನ ವಿದ್ಯಾಗರ್ವವನ್ನು ಕೆಡಿಸಬೇಕೆಂದು ಯೋಚಿಸಿ ಅವನ ಕೈಹಿಡಿದು ಕರೆದುಕೊಂಡು ಸಮಸ್ತರಾದ ರಾಜಕುಮಾರರು, ಅಂತಃಪುರಸ್ತ್ರೀಯರು, ಎಲ್ಲರ ಜತೆಯಲ್ಲಿ ಪಾದಚಾರಿಯಾಗಿ ಅಕಂಪನಾಚಾರ್ಯರ ಬಳಿಗೆ ಬಂದು ಮೂರುಸಲ ಪ್ರದಕ್ಷಿಣೆ ಮಾಡಿ, ಮುನಿಶ್ರೇಷ್ಠರ ಪಾದಗಳನ್ನು ಬಹು ವಿಧವಾಗಿ ಅರ್ಚಿಸಿ, ನಮಸ್ಕರಿಸಿ ಋಷಿಯರನ್ನೂ ಕ್ರಮ ಪ್ರಕಾರವಾಗಿ ಪೂಜಿಸಿ ಮುಂದೆ ಕುಳಿತು ಮೋಕ್ಷದ ನಿಚ್ಚಣಿಕೆಯೆನ್ನಿಸುವ ಜಿನೇಂದ್ರಧರ್ಮವನ್ನು ಕೇಳಿ ಹೀಗೆಂದನು. ೪೬. ನೀತಿ, ಪಾಪ, ಒಳ್ಳೆಯತನ, ಧರ್ಮ ಪರಲೋಕ, ಜೀವ– ಇವು ಎಲ್ಲ ಸುಳ್ಳು, ಯಾವುವೂ ಇಲ್ಲ, ಎಂದು ತಿಳಿಯದೆ ವೃಥಾ ಸಂಕಟಪಟ್ಟು ಅಜ್ಞಾನದಿಂದ ಕೆಲವರು ಬಾಯಿಗೆ ಬಂದ ಹಾಗೆ ಆಡಿಕೊಳ್ಳುವರು. ೪೭. ಇದರಿಂದ ನಮಗೆ ಮನಸ್ಸಿನಲ್ಲಿ ಸಂಶಯ ಹುಟ್ಟಿದೆ, ಪಂಡಿತಪೂಜ್ಯನೇ ! ನೀನು

ಇದಕ್ಕಿಮಗೆ ಸಂಶಯಂ ಮನದೊಳುಂಟು ಜೈನೋಕ್ತಿಯಂ
ವಿದಗ್ಧಜನಮಧ್ಯ ನೀಂ ತಿಳಿಪಿ ಮನ್ಮನಶ್ಶಂಕೆಯಂ
ಸದಾ ಕಿಡಿಸವೇಳ್ಪುದೆಂದು ನರಪಾಲಕಂ ತಾನುಪಾ
ಯದಿಂದೆ ಬೆಸಗೊಳ್ವುದುಂ....ಮುನೀಂದ್ರೋತ್ತಮಂ ೪೮

ಗಂಭೀರ ವಚನ ರಚನೆಗ
ಳಂಬುಧಿಯ ನಿನಾದದಂತೆ ಕರಮೊಪ್ಪೆ ಮುನೀಂ
ದ್ರಂ ಭೂಮಿಪತಿಗೆ ನುಡಿದಂ
ಶುಂಭಜ್ಜೈನಾಗಮೋಕ್ತಿಯಂ ಸಭೆ ಮೆಚ್ಚಲ್ ೪೯

ಮೊಱೆಯಿಲ್ಲಪ್ಪೊಡೆ ಸತಿಗಾ
ದೆಱಕಂ ಮೇಣ್ ಕೂರ್ಪ ತಂಗಿಗೇಕಾಗದು ಮ
ತ್ತಱಿಕೆಯ ತಾಯ್ಗೇಕಾಗದು
ಮೊಱೆಯುಂಟಲ್ಲೆಂಬುದಕ್ಕಿದಲ್ಲವೆ ದಿವ್ಯಂ ೫೦

ಗದ್ಯ॥ ಮತ್ತಂ ಭಾವಕರ್ಭಾವಿಸಿ ನೋೞ್ಪೆಂದು ಲೋಕದೊಳಾದ ಪ್ರಸಿದ್ಧಮಪ್ಪಿದುವೆ ಪೇೞ್ಗುಮದಾವುದೆಂದೊಡೆ, ಸೂಳೆಯೊಡನೆನಿತು ಕಾಲಮಿರ್ದೊಡಂ ಮಿಂಡರೆಂಬರಲ್ಲದೆ ಪೆಱ ತಿಲ್ಲ ; ಕರ್ಮವಶದಿಂ ತಾಯೊಡನಕ್ಕೆ, ತಂದೆಯೊಡನಕ್ಕೆ ಕರಮೞಿಪಿಂ ಕೂಡಿದೊಡೆ ಕೊಲೆಗಂ ಕವರ್ತೆಗಂ ಭಾಜನನಪ್ಪನದಱಿಂ ಮೊಱೆಯುಂಟಲ್ಲೆಂಬುದನಿಂಬಾಗಿ ನಂಬುವುದು. ೫೧

ತಿಳಿಯಹೇಳಿ ನಮ್ಮ ಮನದ ಶಂಕೆಯನ್ನು ಕಳೆಯಬೇಕು ಎಂದು ರಾಜನು ಉಪಾಯದಿಂದ ಪ್ರಾರ್ಥಿಸಿಕೊಳ್ಳಲು ಮುನಿಶ್ರೇಷ್ಠನು ೪೮. ಗಂಭೀರವಾದ ಮಾತುಗಳಿಂದ, ಸಮುದ್ರ ಧ್ವನಿಯಂತೆ ರಾಜನಿಗೆ ಜೈನಾಗಮದ ಮಾತುಗಳನ್ನು ಆ ಸಭೆಯವರೆಲ್ಲ ಮೆಚ್ಚಿಕೊಳ್ಳು ವಂತೆ ಹೇಳಿದನು. ೪೯. ನೀತಿಯಿಲ್ಲವಾದರೆ ಹೆಂಡತಿಯ ಮೇಲಿನ ಸ್ನೇಹ ಪ್ರೀತಿಯ ತಂಗಿಗೆ ಏಕೆ ಆಗದು ? ಚೆನ್ನಾಗಿ ತಿಳಿದ ತಾಯಿಗೆ ಏಕೆ ಆಗದು ? ನೀತಿ ಉಂಟೆ, ಇಲ್ಲವೆ, ಎಂಬುದಕ್ಕೆ ಇದೇ ಪರೀಕ್ಷೆ. ೫೦. ಮತ್ತು ಭಾವುಕರು ಯೋಚಿಸಿ ನೋಡುವಾಗ ಲೋಕ ದಲ್ಲಿ ಪ್ರಸಿದ್ಧವಾದ ಇವೇ ಹೇಳುತ್ತವೆ ; ಅವು ಯಾವುವೆಂದರೆ, ಸೂಳೆಯೊಡನೆ ಎಷ್ಟು ಕಾಲವಿದ್ದರೂ 'ಮಿಂಡರು' ಎನ್ನುವರೇ ಹೊರತು ಬೇರೆಯಿಲ್ಲ; ಕರ್ಮವಶದಿಂದ ತಂದೆ ಯೊಡನೆಯಾಗಲಿ, ತಾಯಿಯ ಸಂಗಡವಾಗಲಿ, ಬಹಳ ಆಸೆಯಿಂದ ಕೂಡಿಕೊಂಡರೆ ಕೊಲೆಗೂ ಸೂರೆಗೂ ಪಾತ್ರರಾಗುವರು. ಆದರಿಂದ ನೀತಿಯುಂಟೆ ? ಇಲ್ಲವೆ ಎಂಬುವನ್ನು ಸರಿಯಾಗಿ ನಂಬತಕ್ಕದ್ದು. ೫೧. ಪಲ್ಲಕ್ಕಿಯನ್ನು ಏರಿ ಸೇವಕರ ಗುಂಪಿನೊಡನೆ ಬರುವ

ಅಂದಣಮನೇಱಿ ಭೃತ್ಯರ
ಸಂದಣಿಯಿಂ ಬರ್ಪ ಮನುಜರಂ ಕಂಡು ಸದಾ
ನಂದದಿನೀತನ ಮುನ್ನಿನ
ದೊಂದು ಮಹಾ ಪುಣ್ಯಫಲಮಿದೆಂಬರ್ ನುಡಿಯಿಂ ೫೨

ತರುಣಿಯರಿಕ್ಕೆ ಚಾಮರಮನಿರ್ಕೆಲದೊಳ್ ಬರೆ ವಾಜಿ ಸಿಂಧುರೋ
ತ್ಕರಮುಮರೇಂದ್ರಲೀಲೆಯೊಳೆ ಬರ್ಪ ಮಹಾತ್ಮನನೆಯ್ದೆ ಕಂಡವರ್
ಪುರುಡಿಸಲರ್ತಿಯಿಂದಿವರ ಮುನ್ನಿನ ಮಾಡಿದ ಪುಣ್ಯದಿಂದಮೀ
ಸಿರಿ ದೊರೆಕೊಂಡುದೆಂಬ ಜನದೊಂದುಲಿಯಿಂದಱಿ ಪುಣ್ಯದೊಲ್ಮೆಯಂ ೫೩

ಗದ್ಯ॥ ಮತ್ತಂ ರೂಪಿನೊಳ್ ಚೆಲ್ವರಪ್ಪರುಮಂ ಸಿರಿಯೊಳ್ ಪಿರಿಯರಪ್ಪರುಮಂ ವಿಳಾಸಸಮೇತರುಮಂ ಸುಭಗರುಮಂ ಸರ್ವಾಭರಣಭೂಷಿತರುಮಂ ನೀರಜರುಮಂ ದಿವ್ಯಾಹಾರಮನುಣ್ಬರುಮಂ ದಿವ್ಯವಸ್ತ್ರಮನುಡುವರುಮಂ ಸುಖಿಗಳುಮಂ ಕಂಡೊಡಿವರ ಮುನ್ನಿನ ದಾನಪೂಜೆಯು, ತಪದ ಫಲದಿನಾದುವೆಂದು ನುಡಿವ ಲೋಕದ ಜನದುಲಿಯಿಂ ಧರ್ಮಮುಂಟೆಂದಱಿವುದು ೫೪

ಮನುಷ್ಯರನ್ನು ಕಂಡು ಒಳ್ಳೆಯ ಆನಂದದಿಂದ "ಈತನ ಹಿಂದಿನ ಮಹಾ ಪುಣ್ಯಫಲ, ಇದು" ಎಂದು ನೋಡಿದವರು ಹೇಳುವರು. ೫೨. ಎರಡು ಪಕ್ಕಗಳಲ್ಲಿಯೂ ಯುವತಿಯರು ಚಾಮರ ಹಾಕುತ್ತಿರಲು, ಆನೆಕುದುರೆಗಳ ಸೈನ್ಯ ಜತೆಯಲ್ಲಿ ಬರುತ್ತ ಇಂದ್ರನಂತೆ ತೋರುವ ಮಹಾತ್ಮನನ್ನು ಕಂಡವರು ಹುರುಡಿಸಿವರೂ ಸಂಭ್ರಮದಿಂದ, ಅವರ ಮುಂಚಿನ ಜನ್ಮದಲ್ಲಿ ಮಾಡಿದ ಪುಣ್ಯದಿಂದ ಈ ಐಶ್ವರ್ಯ ಲಭಿಸಿತೆಂದು ಹೇಳುವ ಜನರ ಮಾತಿನಿಂದ ಪುಣ್ಯದ ಇರವನ್ನು ತಿಳಿ, ೫೩. ಅಲ್ಲದೆ ರೂಪದಲ್ಲಿ ಚೆಲುವರಾದವರನ್ನೂ ಒಳ್ಳೆಯ ವಸ್ತ್ರಗಳನ್ನು ಉಡುವವರನ್ನೂ ಐಶ್ವರ್ಯದಲ್ಲಿ ದೊಡ್ಡವರಾದವರನ್ನೂ ಸೊಗಸುಗಾರರನ್ನೂ, ಸುಂದರರೂಪಿಗಳನ್ನೂ, ಎಲ್ಲ ಆಭರಣಗಳನ್ನು ತೊಟ್ಟುಕೊಂಡಿರುವವರನ್ನೂ ನಿರೋಗಿಗಳನ್ನೂ ಒಳ್ಳೆಯ ಆಹಾರವನ್ನು ಸೇವಿಸುವವರನ್ನೂ ಸುಖಿಗಳನ್ನೂ ನೋಡಿದರೆ 'ಇವರ ಹಿಂದಿನ ದಾನ, ಪೂಜೆ, ತಪಸ್ಸುಗಳ ಫಲದಿಂದ ಇದೆಲ್ಲ ಆಯಿತೆಂದು ಹೇಳುವ ಲೋಕದ ಜನರ ಮಾತಿನಿಂದ ಧರ್ಮ ಇದೆಯೆಂದು ತಿಳಿಯಬೇಕು. ೫೪. ಕುರುಡರು ಕುಂಟರು ತಿರಿಕರು–ಇಂಥವರನ್ನು ಕಂಡರೆ ಇವರಿಗೆ ಹಿಂದಿನ

ಕುರುಡರುಮಂ ಕುಂಟರುಮಂ
ತಿರಿಕರುಮಂ ಕಂಡೊಡಿವರ್ಗೆ ಮುನ್ನಿನ ಪಾಪೋ
ತ್ಕರದಿನಿನಿತಾದುದೆಂಬೀ
ನರವಾಕ್ಯದಿನಮ್ಮ ಪಾಪಮುಂಟೆಂದಱಿ ನೀಂ ೫೫

ಕರಮುರಿದಪ್ಪ ಬಾಧೆಗಳಿನೋವೆನೆ ಕೂಗಿರೆ ಬೆರ್ಚಿ ಕಂಪಿಸು
ತ್ತಿರೆ ಪಿಡಿದೊತ್ತಿ ಕಟ್ಟಿ ಬಿಡದೊಯ್ಯನೆ ಕೊಲ್ವರನೆಯ್ದೆ ಕಂಡೊಡೋ
ಸರಿಸದೆ ಕಷ್ಟನೀ ಖಳನ ಮುನ್ನಿನ ಸಂಚಿತ ಪಾಪಮೆಂದು ಕೊ
ಕ್ಕರಿಸುವ ಲೋಕದೊಂದುಲಿಪಿನಿಂದಱಿ ಭೂಪತಿ ಪಾಪದುಣ್ಮೆಯಂ ೫೬

ಗದ್ಯ ॥ ಮತ್ತಂ ಕೊಳ್ಪಟ್ಟು ಪುಯ್ಯಲಿಡುವವರುಮಂ ಕೂಳ್ಪಡೆಯದಿರ್ಪರುಮಂ ನಿರ್ಭಾಗ್ಯರುಮಂ ಕುರೂಪಿಗಳುಮಂ ಪಂದೆಗಳುಮಂ ಕಂಡೊಡಿವರ ಮುನ್ನಿನ ಕರ್ಮದ ಫಲಮೆಂಬರ ದಱಿಂ ಪಾಪಮುಂಟೆಂಬುದಂ ಜಲಕ್ಕನಱಿವುದು. ೫೭

ಅಳಿಪಂ ಪಾತಕನುಗ್ರನನ್ಯವನಿತಾಸಕ್ತಂ ವೃಥಾಳಾಪಿ ನಿ
ರ್ಮಳನಲ್ಲಂ ಗುಣಹೀನನೂನನದಯಂ ಸತ್ತೊಳ್ಳಿತಾಯ್ತಾ ಖಳಂ
ಘಳಿಲೆಂದೊರ್ಮೆಯೆ ಬೀೞ್ಗುಮುಗ್ರ ನರಕಾಂಭೋರಾಶಿಯೊಳ್ತಪ್ಪದೆಂ
ದಿಳೆ ಕೈಕೊಳ್ಳದೆ ಪೊಲ್ಲರಂ ಪಿತಗರಂ ನಿರ್ಧರ್ಮರಂ ಭೂಪತೀ ೫೮

ಪಾಪದ ಹೆಚ್ಚಳದಿಂದ ಇಷ್ಟಾಯಿತೆಂದು ಹೇಳುವ ಜನರ ಮಾತಿನಿಂದ ಪಾಪ ಸುಳ್ಳಲ್ಲ. ಅದರ ಫಲ ತಪ್ಪದು ಎಂದು ನೀನು ತಿಳಿ. ೫೫. ಹೆಚ್ಚಿನ ನೋವಿನಿಂದ 'ಅಯ್ಯೋ' ಎಂದು ನೊಂದು ಕೂಗಿ ಕಂಪಿಸುತ್ತಿರುವುದನ್ನು ನೋಡಿ ಈ ನೀಚನ ಹಿಂದಿನ ಪಾಪ ಸಂಚಯದಿಂದ ಹೀಗಾಯಿತೆಂದು ಅಸಹ್ಯಪಟ್ಟುಕೊಳ್ಳುವ ಲೋಕದ ಒಂದು ಮಾತಿನಿಂದ ಪಾಪದ ಫಲ ನಿಜವೆಂದು ತಿಳಿ. ೫೬. ಇನ್ನು ಸೆರೆಸಿಕ್ಕಿ ಹುಯ್ಯಲಿಡುವವರನ್ನೂ ಅನ್ನ ದೊರೆಯದಿರುವವರನ್ನೂ ನಿರ್ಭಾಗ್ಯರನ್ನೂ ಕುರೂಪಿಗಳನ್ನೂ ಹೇಡಿಗಳನ್ನೂ ಕಂಡರೆ ಇವರ ಮೊದಲಿನ ಕರ್ಮದ ಫಲವೆನ್ನುವರು. ಅದರಿಂದ ಪಾಪವುಂಟೆಂಬುದನ್ನು ಸ್ಪಷ್ಟವಾಗಿ ತಿಳಿಯತಕ್ಕದ್ದು. ೫೭. ರಾಜನೇ ! ಲೋಕದಲ್ಲಿ ಆಸೆಪರ, ಪಾಪಿ, ಕ್ರೂರಿ, ಅನ್ಯವನಿತಾಸಕ್ತ, ವೃಥಾಮಾತನಾಡುವವ, ನಿರ್ಮಳನಲ್ಲದವನು, ಗುಣಹೀನ, ಅಂಗವಿಕಲ, ನಿರ್ದಯಿ, ಇಂಥವರು "ಸತ್ತುದು ಒಳ್ಳೆಯದಾಯಿತು. ಆ ನೀಚನು ನೆಟ್ಟಗೆ ಒಂದೇ ಸಲ ಕ್ರೂರ ನರಕದಲ್ಲಿ ಬೀಳುತ್ತಾನೆ, ತಪ್ಪದು" ಎಂದು ಜನ ಧರ್ಮಹೀನರನ್ನೂ ಪುಂಡರನ್ನೂ ದುಷ್ಟರನ್ನೂ ದೂಷಿಸುವುದಿಲ್ಲವೆ ? ೫೮. ಅದರಿಂದ ಅವಗುಣವೂ ಪಾಪವೂ ಕೆಟ್ಟವೆಂಬು

ಗದ್ಯ॥ ನುಡಿವುದಱಿಂದವಗುಣಮುಂ ಪಾಪಮುಂ ಪೊಲ್ಲೆಂಬುದುಮಂ ಅವಗುಣಿಗಳುಂ ಸದ್ಧರ್ಮದೂಷಕರುಂ ಪಾಪಿಗಳುಂ ನಿರ್ಧರ್ಮರುಂ ನರಕಕ್ಕಿೞಿವುದುಮಂ ನರಕಮುಂಟೆಂಬುದುಮಂ ಲೇಸಾಗಱಿವುದು ೫೯

ಪರಹಿತಂ ಗುಣಿ ನಿರ್ಮಳಂ ಶಠನಲ್ಲನುತ್ತಮದಾನಿ ಸ
ತ್ಪುರುಷನುನ್ನತ ಧಾರ್ಮಿಕಂ ಪ್ರಭು ಸಾಯಲಾಗದು ಸತ್ತೊಡಂ
ಸುರ ನಿವಾಸಮಮೋಘಮಕ್ಕುಮವಂಗೆ ನಿಶ್ಚಯವೆಂದು ಭೂ
ಧರ ಜನಂ ಗುಣವಂತರಂ ದಯೆಯುಕ್ತರಂ ಸುಜನರ್ಕಳಂ ೬೦

ಗದ್ಯ॥ ನುಡಿವುದಱಿಂ ಧರ್ಮವೊಳ್ಳಿತ್ತೆಂಬುದುಮಂ ತದ್ಧರ್ಮಮಂ ತಾಳ್ದಿರ್ದ ಮಹಾಪುರುಷರ್ಗೆ ಸ್ವರ್ಗಾಪವರ್ಗಮುಂಟೆಂಬುದುಮಂ ನಂಬುವುದು ೬೧

ಅವನೀವಲ್ಲಭ ಮುಂ ಪೇ
ಳ್ದವಱಿಂದಂ ನಂಬು ಜೀವನುಂಟೆಂಬುದನು
ತ್ಸವದಿಂದೆ ಬಱಿದೆ ಗಳಪುವ
ಕುವಾದಿಗಳ ಮಾತನಣಮೆ ನಂಬದಿರಿನಿಸಂ ೬೨

ಗದ್ಯ॥ ಎಂಬುದುಂ ಬಲಿ ತನ್ಮುನೀಂದ್ರರ ವಚನಕ್ಕೆ ತುಂಬುರುಗೊಳ್ಳಿಯಂತೆ ಸಿಡಿಲ್ದು ಮುನಿರಾಜಹಂಸಗಭಿಮುಖನಾಗಿ ೬೩

ದನ್ನೂ ಅವಗುಣಿಗಳೂ ಸದ್ಧರ್ಮದೂಷಕರೂ ಪಾಪಿಗಳೂ ಧರ್ಮಹೀನರೂ ನರಕಕ್ಕೆ ಇಳಿಯುವುದುಂಟೆಂದು ಚೆನ್ನಾಗಿ ತಿಳಿಯತಕ್ಕದ್ದು. ೫೯. ಪರಹಿತಸಾಧಕ, ಗುಣವಂತ, ನಿರ್ಮಳಚಿತ್ತ, ದುರ್ಜನನಲ್ಲ, ಉತ್ತಮದಾನಿ, ಒಳ್ಳೆಯವನು, ಶ್ರೇಷ್ಠಧಾರ್ಮಿಕ,-ಇಂಥ ಪ್ರಭು ಸಾಯತಕ್ಕದ್ದಲ್ಲ. ಸತ್ತರೂ ಅವನಿಗೆ ತಪ್ಪದೆ ಸುರಲೋಕವಾಸ ಸಿಕ್ಕುತ್ತದೆ. ಅದು ನಿಶ್ಚಯ, ಎಂದು ಜನರು ಗುಣವಂತರನ್ನೂ ದಯಾಪರರನ್ನೂ ಸುಜನರನ್ನೂ ಹೊಗಳುವರು. ೬೦. ಇದರಿಂದ ಧರ್ಮವು ಒಳ್ಳೆಯದೆಂಬುದನ್ನೂ ಆ ಧರ್ಮವನ್ನು ಅನುಸರಿಸುವ ಮಹಾಪುರುಷರಿಗೆ ಸ್ವರ್ಗಮೋಕ್ಷಗಳುಂಟೆಂಬುದನ್ನೂ ನಂಬತಕ್ಕದ್ದು ೬೧. ರಾಜನೇ, ಈ ಮುಂಚೆ ಹೇಳಿದ ಸಂಗತಿಗಳಿಂದ ಜೀವನು ಇದ್ದಾನೆ ಎಂಬುದನ್ನು ನಂಬು. ಉತ್ಸವದಿಂದ ವೃಥಾ ಹರಟುವ ಕುತರ್ಕಿಗಳ ಮಾತನ್ನು ಸ್ವಲ್ಪವೂ ನಂಬಬೇಡ. ೬೨. ಋಷಿಯರು ಹೀಗೆ ಹೇಳಿದಾಗ ಬಲಿ ಆ ಮುನಿಶ್ರೇಷ್ಠರ ಮಾತಿಗೆ ತುಂಬುರುಕೊಳ್ಳಿಯಂತೆ ಸಿಡಿದೆದ್ದು ಆ ಮುನಿಶ್ರೇಷ್ಠನಿಗೆ ಎದುರಾಗಿ ನಿಂತುಕೊಂಡು ೬೩. ಸಮುದ್ರದ

ಶರನಿಧಿಯೊಡನೊರ್ಮೆಗೆ ಮ
ಚ್ಚರಿಸಿ ಕೊಳಂ ಪೊಣರ್ವತೆಱದಿನಂಗಜಮದಸಂ
ಹರನೊಳ್ ತನ್ನಳವಱಿಯದೆ
ಗುರುಲಘುವೆಂದಱಿಯದುಕ್ಕಿ ನೆಱೆ ಬಲಿ ನುಡಿದಂ ೬೪

ಏನೆಂದಱಿಯದೆ ಮಸಗಿದ
ಮಾನಕಷಾಯದಿನುದಗ್ರಚಿತ್ತಂ ಬಲಿ ಮ
ತ್ತಾನಿವರೊಳ್ ನುಡಿದು ಬೞಿ
ಕ್ಕೀ ನರಪನ ಸಭೆಯಿನೆಯ್ದೆ ಪೊಗೞಿಸಿಕೊಳ್ವೆಂ ೬೫

ಗದ್ಯ॥ ಎಂದು ತನ್ನ ಮುನ್ನಪಿಡಿದ ಜೀವಭಾವಮನೆ ಬಲ್ವಿಡಿದಿಂತೆಂದಂ ೬೬

ಅರಹಂತನೆಂಬನೆಲ್ಲಿದ
ನರಹಂತನೊಡರ್ಚೆವೇೞ್ದ ತಪದೊಳ್ ಫಲಮೇಂ
ನರಹಂತಂ ಕೊಲಲಾಗೆಂ
ಬರಿದಪ್ಪ ಧರ್ಮಮದಱೊಳೇಂ ಗಳ ಲಾಭಂ ೬೭

ಗದ್ಯ॥ ಅದೆಂತೆಂದೊಡಮರಸನುಂ ಸಭಾಜನಮುಮವಧರಿಸಿ ನೆಲ್ಲುಂ ಪುಲ್ಲುಂ ಕಾಡೆಮ್ಮೆಯುಮೂರೆಮ್ಮೆಯುಂ ಕಾೞ್ಪಲಸುಂ ಊರಪಲಸುಂ ಕಾಡಾವುಮೂರಾವುಂ ಕಾೞ್ಪತ್ತಿಯುಂ ಪತ್ತಿಯುಂ ಕೞ್ತಲೆಯುಂ ಬೆಳಗುಂ ಕುಲಹೀನನುಂ ಕುಲಜನುಂ ಸೂಳೆಯುಂ ಸಜ್ಜನಮುಂ ಕಾಡೆಳ್ಳುಮೂ

ಸಂಗಡ ಮತ್ಸರಿಸಿ ಕೊಳ ಯುದ್ಧ ಹೂಡುವ ಹಾಗೆ, ಮನ್ಮಥನ ಮದಹರನಾದ ಮುನಿಯೊಡನೆ ತನ್ನ ಶಕ್ತಿಯ ಮೇರೆಯನ್ನರಿಯದೆ ದೊಡ್ಡವರು ಚಿಕ್ಕವರೆಂಬುದನ್ನು ತಿಳಿಯದೆ ಕೊಬ್ಬಿ ಬಲಿಯು ಹೀಗೆ ಹೇಳಿದನು: ೬೪. ಏನೆಂಬುದನ್ನು ಅರಿಯದೆ ಹೆಚ್ಚಿನ ಮಾನಕಷಾಯದಿಂದ ಕೊಬ್ಬಿದ ಮನಸ್ಸಿನ ಬಲಿಯು "ನಾನು ಇವರೊಡನೆ ವಾದಿಸಿ ಈ ರಾಜನ ಸಭೆಯವರಿಂದ ಚೆನ್ನಾಗಿ ಹೊಗಳಿಸಿಕೊಳ್ಳುತ್ತೇನೆ." ಎಂದು ತಾನು ಮೊದಲು ಹಿಡಿದ ಜೀವಭಾವವನ್ನೇ ಬಲವಾಗಿ ಹಿಡಿದುಕೊಂಡು ಹೀಗೆ ಹೇಳಿದನು. ೬೫-೬೬. "ಅರ್ಹಂತನೆಂಬವನು ಎಲ್ಲಿದ್ದಾನೆ ? ಅರ್ಹಂತನು ಮಾಡಿರೆಂದು ಹೇಳಿದ ತಪಸ್ಸಿನಿಂದ ಆಗುವ ಫಲವೇನು ? ಅರಹಂತನು ಹೇಳಿದ ಕೊಲ್ಲಲಾಗದೆಂಬ ಅಸಾಧ್ಯವಾದ ಧರ್ಮದಿಂದ ಏನು ಲಾಭ ? ೬೭. ಅದು ಹೇಗೆಂದರೆ ಅರಸನೂ ಸಭಾಜನರೂ ಲಾಲಿಸಿ : ನೆಲ್ಲೂ ಹುಲ್ಲೂ, ಕಾಡೆಮ್ಮೆಯೂ ಊರೆಮ್ಮೆಯೂ ಉಂಟು. ಕಾಡುಹಲಸು ಊರುಹಲಸು; ಕಾಡಹಸು ಊರಹಸು, ಕಾಡುಹತ್ತಿ, ಹತ್ತಿ ; ಕತ್ತಲೆಯೂ ಬೆಳಕೂ, ಕುಲಹೀನನೂ ಕುಲಜನೂ, ಸೂಳೆಯೂ ಗರತಿಯೂ, ಕಾಡು ಎಳ್ಳು ಊರೆಳ್ಳು, ಹೇಗೆ

ರೆಳ್ಳುಮೆಂತು ಲೋಕದೊಳೊಳವೆಂತು ಪೊಲ್ಲರುವೊಳ್ಳಿದರುವೊಳರಂತು ತಿರಿಕರುಂ ಸಿರಿವಂತರು ವೊಳರಪ್ಪುದಱಿಂ ಅರಸನುಂ ಬಡವರುವೊಳರೆಂತಂತೆ ಧರ್ಮಮುಂ ಪಾಪಮುಮುಂಟಪ್ಪುದ ಱಿಂದವಱ ಫಲಮನೀವಂತಪ್ಪರ್ಹತ್ಸರ್ವಜ್ಞರುವೊಳರಾ ಜಿನಸ್ವಾಮಿಯುಮಂ ಪೊಗೆಯಿಂ ಕಿರ್ಚಂ ಮೊಟಗಿಂ ಮುೞೆಯುಂ ಗಾಳಿಯಿಂ ಕತ್ತುರಿಯುಂ ಬಣ್ಣದಿಂ ಮದುವೆಯುಂ ದಾೞೆಕಾಱ ರಿಂದರಸುಗಳಂ ಬೈತ್ರಕಾಱರಿಂ ದ್ವೀಪಗಳಂ ಜೋಯಿಸರಿಂ ಗ್ರಹಣಮನಱಿವಂತೆ, ಕೊಂದೊಡೆ ಪುಸಿದೊಡೆ ಕಳ್ದೊಡೆ ಪರಸ್ತ್ರೀಗೆಱಗಿದೊಡೆ ಪಿರಿದಂ ಬಯಸಿದೊಡೆ ಪೊಲ್ಲದೆಂದು ಪೇೞ್ವಜಿನೇಶ್ವರ ನಾಜ್ಞೆಯುಂ ಮೀಱಿದೊಡಾ ಪರಮೇಶ್ವರನ ಸಾಮಂತರಂತೆ ದಂಡ ನಾಯಕರಂತೆ ಕೊಂದೊಡೆ ಕೊಲ್ವ, ಪುಸಿದೊಡೆ ನಾಲಗೆಯುಂ ಸೀಳ್ವ ಕಳ್ದೊಡೆ ಸೂಲದೊಳಿಕ್ಕುವ ಪೆಱರ ಪೆಂಡಿರ್ಗಳಿಪಿದೊಡೆ ತಲೆಯನರಿವ ತಂತಮ್ಮ ಮೇಱೆಯುಂ ತಪ್ಪಿದೊಡೆ ದಂಡಮಂ ಕೊಳ್ವ ಭೂಪಾಲರ ನಾಡವರ ಮಾರ್ಗದಿಂದೆ ಮುಂ ಬಟ್ಟೆಗಳೂರಂ ಪೊರ್ದಿಪೋಪಂತೆ ಕೊಲೆಪುಸಿ ಕಳವು ಪಾರದಾರಂ ಬಹುಕಾಂಕ್ಷೆ ಧರ್ಮಮಲ್ಲದೆನೆ ಜಿನವಲ್ಲಭನ ಮಾತನೆ ಪೊರ್ದಿ ನಡೆವವರ ಸಮಯಂಗಳಿಂದ ಮುಂ ಕೊಲ್ವಪುಸಿವ, ಕಳ್ವ ಪಾದರವಾಡುವ ಮೇಱೆಯುಂ ತಪ್ಪುವ ಮಾನಿಸರಂ ಕಂಡೊಡೆ ಪಂಚಮಹಾಪಾತಕರೆಂದು ಬೈವ ನಾಡವರ ಬೈಗುಳ್ಗಳಿಂದಮುಂ ಕೊಲ್ಲೆಂ ಪುಸಿಯೆಂ ಕಳೆಂ ಪಾವರಿಗನಲ್ಲೆಂ ಪೆಱರರ್ಥಮಂ

ಲೋಕದಲ್ಲಿ ಇರುವುವೋ ಹಾಗೆ ಕೆಟ್ಟವರೂ ಒಳ್ಳೆಯುವರೂ ಇದ್ದಾರೆ. ಹಾಗೆಯೇ ತಿರಿಕರೂ ಶ್ರೀಮಂತರೂ ಇದ್ದಾರೆ. ಆದ್ದರಿಂದ ರಾಜನೂ ಬಡವರೂ ಇರುವಂತೆಯೇ ಧರ್ಮವೂ ಪಾಪವೂ ಉಂಟು. ಆದ್ದರಿಂದ ಅವುಗಳ ಫಲವನ್ನು ಕೊಡುವಂಥ ಅರ್ಹತ್ಸರ್ವಜ್ಞರೂ ಇದ್ದಾರೆ. ಹೊಗೆಯಿಂದ ಬೆಂಕಿಯನ್ನು, ಗುಡುಗಿನಿಂದ ಮಳೆ ಯನ್ನೂ ಗಾಳಿಯಿಂದ ಕಸ್ತೂರಿಯನ್ನೂ ಬಣ್ಣದಿಂದ (ಸೀರೆಗಳಿಂದ) ಮದುವೆ ಯನ್ನೂ ದಾಳಿಕಾರರಿಂದ ಅರಸುಗಳನ್ನೂ ಹಡಗಿನವರಿಂದ ದ್ವೀಪಗಳನ್ನೂ ಜೋಯಿಸರಿಂದ ಗ್ರಹಣವನ್ನೂ ತಿಳಿಯುವ ಹಾಗೆ, ಕೊಂದರೆ ಹುಸಿದರೆ, ಕದ್ದರೆ, ಪರರ ಹೆಂಗಸಿಗೆ ಒಲಿದರೆ ದುರಾಸೆಪಟ್ಟರೆ ಕೆಟ್ಟದ್ದೆಂದು ಹೇಳುವ ಜಿನೇಶ್ವರನ ಆಜ್ಞೆಯನ್ನು ಮೀರಿದರೆ ಆ ಪರಮೇಶ್ವರನ ಸಾಮಂತರಂತೆ, ದಂಡನಾಯಕರಂತೆ, ಕೊಂದರೆ ಕೊಲ್ಲುವ ಹುಸಿದರೆ ನಾಲಗೆಯನ್ನು ಸೀಳುವ, ಕದ್ದರೆ ಶೂಲಕ್ಕೆ ಹಾಕುವ, ಇತರರ ಹೆಂಡಿರಿಗೆ ಆಸೆ ಪಟ್ಟರೆ ತಲೆಯನ್ನು ಕತ್ತರಿಸುವ ತಮ್ಮ ತಮ್ಮ ಮೇರೆಯನ್ನು ಮೀರಿದರೆ ದಂಡವನ್ನು ತೆಗೆದುಕೊಳ್ಳುವ ರಾಜರ, ನಾಡಿನವರ, ರೀತಿಯಿಂದ ಮುಂದಿನ ದಾರಿಗಳು ಊರನ್ನು ಹೊಂದಿಕೊಂಡು ಹೋಗುವಂತೆ ಕೊಲೆ, ಸುಳ್ಳು, ಕಳವು, ಹಾದರ, ದುರಾಸೆ, ಇವು ಧರ್ಮವಲ್ಲ, ಎನ್ನಲು ಜಿನವಲ್ಲಭನ ಮಾತನ್ನೇ ಅನುಸರಿಸಿ ನಡೆಯುವವರ ಧರ್ಮ ಗಳಿಂದಲೂ ; ಕೊಲ್ಲುವ, ಸುಳ್ಳಾಡುವ, ಕದಿಯುವ, ಹಾದರವಾಡುವ, ಮೇರೆಯನ್ನು ದಾಟುವ, ಮನುಷ್ಯರನ್ನು ಕಂಡರೆ, ಪಂಚಮಹಾಪಾತಕರೆಂದು ಬೈಯುವ ಜನರ ಬೈಗುಳಗಳಿಂದಲೂ ಕೊಲ್ಲೆನು, ಹುಸಿಯೆನು, ಕದಿಯುವುದಿಲ್ಲ, ಹಾದರದವನಲ್ಲ, ಇತರರ

ಕೊಳ್ಳೆನೆಂದು ಕಿರ್ಚು ಮೊದಲಾಗೊಡೆಯ ದಿವ್ಯಂಗಳಿಂ ಶುದ್ಧರಾಗಿ ಪೋಪರಿಂದಮುಂ ಕೊಲ್ಲದಂ ಧರ್ಮದೊಳ್ ಧರ್ಮಪುತ್ರನಂ ಸತ್ಯದೊಳ್ ಕರ್ಣನಂ ಕಳವಿಲ್ಲೆಂಬುದಱೊಳ್ ಅರ್ಜುನನಂ ಶೌಚದೊಳ್ಗಾಂಗೇಯನಂ ನಿಷ್ಪರಿಗ್ರಹದೊಳ್ ರಾಮನಂ ಕೊಂಡು ಕೊನೆದು ಪೊಗಟ್ವಪುರಾಣಂ ಗಳಿಂದಮುಮಱಿವುದು ೭೮

ಮೋನದೊಳಿರ್ಪ ಜಿನೇಶ್ವರ
ನೇನಂ ಪೆಱರ್ಗಿತ್ತನೆಂದು ನುಡಿವುದು ಲೋಕಂ
ಭೂನಾರೀಶ್ವರ ಕುಡುಂವೊಡೆ
ಮೋನದೊಳಿರ್ದರ್ಹನೀಗುವುದು ಸಂದೇಹಮೋ ೭೯

ಗದ್ಯ॥ ಅದೆಂತೆಂದೊಡೆ ನೆಲನುಂ ಬಟ್ಟೆಯುಂ ಸೊಡರುಂ ಮನೆಯುಂ ಮೋನಿಗಳಾಗಿರ್ದುಂ ಬಿಡದೆ ತಮ್ಮಂ ಪತ್ತಿ ನಡೆವೊಕ್ಕಲಿಗಂಗಂ ನಡೆವಂಗಂ ಅಱಸುವಂಗಂ ಪೊಕ್ಕಿರ್ಪಂಗಂ ಧಾನ್ಯಮುಮಂ ಬಯಸಿದೆಡೆಯುಮಂ ಕುಸುಕುಱೊಳಿರ್ದ ಮುಟ್ಟುಮಂ ನಿರ್ಬಾಧೆಯುಮಂ ಕುಡುಗು ಮಂತೆ ವೀತರಾಗನಪ್ಪ ಜಿನಸ್ವಾಮಿಯುಂ ಸ್ವರ್ಗಮೋಕ್ಷ ಸುಖಮಂ ತನ್ನನೆ ಬಿಡದೆ ಪತ್ತಿರ್ದ ಮಾನಿಸಂಗಂ ಕುಡುಗುಂ ೮೦

ದ್ರವ್ಯವನ್ನು ತೆಗೆದುಕೊಳ್ಳುವುದಿಲ್ಲ, ಎಂದೂ, ಬೆಂಕಿ ಮೊದಲಾದ ಪರೀಕ್ಷೆಗಳಿಂದ ಶುದ್ಧ ರಾಗಿ ಹೋಗುವವರಿಂದಲೂ, ಕೊಲ್ಲದ ಧರ್ಮದಲ್ಲಿ ಧರ್ಮಪುತ್ರನನ್ನೂ ಸತ್ಯದಲ್ಲಿ ಕರ್ಣನನ್ನೂ ಕಳ್ಳತನವಿಲ್ಲವೆಂಬುದರಲ್ಲಿ ಅರ್ಜುನನನ್ನೂ ಶೌಚ (ಶುದ್ಧ ಚರಿತ್ರ) ದಲ್ಲಿ ಭೀಷ್ಮನನ್ನೂ, ಆಸೆ ಪಡದಿರುವುದರಲ್ಲಿ ರಾಮನನ್ನೂ ಕೊಂಡಾಡಿ ವಿಶೇಷವಾಗಿ ಹೊಗ ಳುವ ಪುರಾಣಗಳಿಂದಲೂ ಆಜಿನಸ್ವಾಮಿಯನ್ನು ತಿಳಿಯತಕ್ಕದ್ದು. ೭೮. ಮೌನದಲ್ಲಿರುವ ಜಿನೇಶ್ವರನು ಹೆರವರಿಗೆ ಏನು ಕೊಟ್ಟಾನೆಂದು ಲೋಕ ನುಡಿಯುತ್ತದೆ. ರಾಜನೇ! ಕೊಡು ವುದಾದರೆ ಮೌನದಲ್ಲಿರುವ ಅರುಹನು ಕೊಡುವನೆಂಬುದರಲ್ಲಿ ಸಂದೇಹವೇ? ೭೯. ಅದು ಹೇಗೆಂದರೆ ನೆಲ, ದಾರಿ, ದೀಪ, ಮನೆ—ಇವು ಮೌನವಾಗಿಯೇ ಇದ್ದರೂ ಬಿಡದೆ ತಮ್ಮನ್ನು ಆಶ್ರಯಿಸುವ ಒಕ್ಕಲಿಗನಿಗೂ, ದಾರಿಹೋಕನಿಗೂ, ಹುಡುಕುವವನಿಗೂ, ಹೊಕ್ಕಿರುವವನಿಗೂ ಧಾನ್ಯವನ್ನೂ, ಕೋರಿದ ಸ್ಥಳವನ್ನೂ ಕಣ್ಮರೆಯಾಗಿದ್ದ ವಸ್ತು ವನ್ನೂ, ನೆಮ್ಮದಿಯನ್ನೂ ಕೊಡುವುವು. ಹಾಗೆಯೇ ವೀತರಾಗನಾದ ಜಿನಸ್ವಾಮಿಯೂ ಸ್ವರ್ಗಮೋಕ್ಷ ಸುಖಗಳನ್ನು ತನ್ನನ್ನು ಬಿಡದೆ ಆಶ್ರಯಿಸಿರುವ ಮನುಷ್ಯನಿಗೆ ಕೊಡು ತ್ತಾನೆ. ೮೦. ಹೊಳೆ, ಶಾಸ್ತ್ರ, ಎಮ್ಮೆ, ದನಗಳು, ಬೀಜ, ಹೊಲಗಳು, ಕೆರೆ, ಹಳ್ಳ,

ತೊಱೆಯುಂ ಶಾಸ್ತ್ರಮುಮೆಮ್ಮೆಯುಂ ಪಶುಗಳುಂ ಬೀಜಂಗಳುಂ ಕೆಯ್ಗಳುಂ
ಕೆಱೆಯುಂ ಪಳ್ಳಮುಮೆಯ್ದೆ ಪಣ್ತಮರನುಂ ತೋಂಟಂಗಳುಂ ವಹ್ನಿಯುಂ
ಮುಱಿವಾ ವಸ್ತುಗಳಂ ಜಿನೇಶ್ವರನವೋಲತ್ಯಂತದಿಂ ದುಃಖಮಂ
ಮೊಱೆದಂಗೀವುವು ವೀತರಾಗಮತಮಂ ಬಿಟ್ಟೀವುವೇ ಲೋಕದೊಳ್ ೭೧

ಗದ್ಯ ॥ ಅದು ಕಾರಣದಿಂ ಸಕಲಮೆಲ್ಲಂ ಜಿನೇಶ್ವರನೊಡಗೂಡಿ ಮೋನಿಗಳಾಗಿ ಫಲಮಂ ಕುಡುವುವಲ್ಲದೆ ತಮಗೆ ತಾವೆ ಕುಡುವುವಲ್ಲಂ ೭೨

ವಿದಿತಂ ಜಿನೇಂದ್ರರೂಪ
ಪ್ಪುದು ನಿರ್ಗ್ರಂಥಂ ಸಮಂತದಂ ನೆಱೆ ತಾಳ್ದಿ
ರ್ಪುದು ದಿವ್ಯಮಪ್ಪ ತಪಮಂ
ತದಱಿಂದಂ ಸಕಲ ಸೌಖ್ಯಮುಂ ಕೈಸಾರ್ಗುಂ ೭೩

ಗದ್ಯ ॥ ನೆಲಂ ನಿರ್ಗ್ರಂಥಮಾದೊಡೆ ಬಿತ್ತುವಂಗೆ ರಾಗಂ ಗಗನಂ ನಿರ್ಗ್ರಂಥಮಾದೊಡೆ ಮದುವೆಗುತ್ಸವಂ, ನೀರ್ ನಿರ್ಗ್ರಂಥಮಾದೊಡೆ ಕುತ್ಸಿದ ಕೇಡು ಕಿರ್ಚು ನಿರ್ಗ್ರಂಥಮಾದೊಡೆ ಅಡುಗೆಯ ಕಾರ್ಯಂ, ಅಕ್ಕಿ ನಿರ್ಗ್ರಂಥಮಾದೊಡೂಟದ ರುಚಿ, ಪಾಲ್ ನಿರ್ಗ್ರಂಥಮಾದೊಡೆ ಳಿಯ ಸವಿ, ಸೂರ್ಯಂ ನಿರ್ಗ್ರಂಥಮಾದೊಡೆ ದಿವಸಶುದ್ಧಿ, ಚಂದ್ರಂ ನಿರ್ಗ್ರಂಥಮಾದೊಡೆ

ಹೆಚ್ಚಾಗಿ ಹಣ್ಣು ಬಿಟ್ಟ ಮರ, ತೋಟಗಳು, ಬೆಂಕಿ, ಇವು ಮೆರೆಯುವ ಆ ವಸ್ತುಗಳನ್ನು ಕಷ್ಟಪಟ್ಟವರಿಗೆ ಜಿನೇಶ್ವರನ ಹಾಗೆ ಕೊಡುತ್ತವೆ. ವೀತರಾಗಮತವನ್ನು ಬಿಟ್ಟು ಈ ಲೋಕದಲ್ಲಿ ಫಲವನ್ನು ಕೊಡುವುವೆ ? ೭೧. ಆ ಕಾರಣದಿಂದ ಸಕಲವೆಲ್ಲವೂ ಜಿನೇಶ್ವರ ನೊಡನೆ ಕೂಡಿ ಮೌನಿಗಳಾಗಿ ಫಲವನ್ನು ಕೊಡುವುವೇ ಹೊರತು ತಮಗೆ ತಾವೇ ಕೊಡುವುದಿಲ್ಲ. ೭೨. ಜಿನೇಂದ್ರನ ರೂಪವು ದಿಗಂಬರವೆಂಬುದು ಪ್ರಸಿದ್ಧವಾದ ವಿಷಯ. ಅದನ್ನು ಸರಿಯಾಗಿ ಧರಿಸಿರುವುದು ದಿವ್ಯವಾದ ತಪಸ್ಸು. ಅದರಿಂದ ಸಕಲ ಸೌಖ್ಯಗಳೂ ಕೈಸೇರುವುವು. ೭೩. ನೆಲವು ನಿರ್ಗ್ರಂಥವಾದರೆ (ಏನೂ ತೊಡಕಿಲ್ಲ ದಿದ್ದರೆ) ಬಿತ್ತುವವನಿಗೆ ಸಂತೋಷ, ಆಕಾಶ ನಿರ್ಗ್ರಂಥವಾದರೆ ಮದುವೆಗೆ ಅನುಕೂಲ ನೀರು ನಿರ್ಗ್ರಂಥ (ಏನೂ ಕಶ್ಮಲವಿಲ್ಲದಿದ್ದರೆ) ರೋಗದ ಹಾನಿ. ಬೆಂಕಿ ನಿರ್ಗ್ರಂಥ ವಾದರೆ ಅಡುಗೆಯ ಕೆಲಸ ಸುಲಭ ; ಅಕ್ಕಿ ನಿರ್ಗ್ರಂಥವಾದರೆ ಊಟದ ರುಚಿ, ಹಾಲು ನಿರ್ಗ್ರಂಥವಾದರೆ ಮಜ್ಜಿಗೆಯ ರುಚಿ, ಸೂರ್ಯ ನಿರ್ಗ್ರಂಥವಾದರೆ ದಿನಶುದ್ಧಿ, ಚಂದ್ರ ನಿರ್ಗ್ರಂಥವಾದರೆ ರಾತ್ರಿ ಶುದ್ಧಿ, ಮನಸ್ಸು ನಿರ್ಗ್ರಂಥವಾದರೆ ಕಾರ್ಯದ ಹೆಚ್ಚಳ,

ರಾತ್ರಿಶುದ್ಧಿ, ಮನಂ ನಿರ್ಗ್ರಂಥಮಾದೊಡೆ ಕಾರ್ಯದೊದವು, ರತ್ನಂ ನಿರ್ಗ್ರಂಥಮಾದೊಡೆ ಬೆಲೆಯ ಪೆರ್ಚು ಪೊನ್ ನಿರ್ಗ್ರಂಥಮಾದೊಡೆ ಮನ್ನಣೆಯಕ್ಕುಂ; ಅಂತೆ ಜಿನೇಶ್ವರನ ತಪದ ನಿರ್ಗ್ರಂಥದಿಂದಮೆ ಲೋಕದ ಕಾರ್ಯಂಗಳೆಲ್ಲಂ ಸಿದ್ಧಿಯಕ್ಕುಂ ೭೪

ಧರೆಯುಂ ಪುಟ್ಟಿದ ಮಕ್ಕಳುಂ ದಿನಪನುಂ ಗೋವೃಂದಮುಂ ವಾರಣೋ
ತ್ಕರಮುಂ ವ್ಯೋಮಮುಮಬ್ಧಿಯುಂ ತುರಗಮುಂ ಕಿರ್ಚುಂ ತರುವ್ರಾತಮುಂ
ಗಿರಿಯುಂ ಲೋಕದೊಳಾದ ವಸ್ತುವನಿತುಂ ನಿರ್ಗ್ರಂಥಮಪ್ಪಾಜಿನೇ
ಶ್ವರಮುದ್ರಾಂಕಿತಮಲ್ಲದುಂಟೆ ಜಗದೊಳ್ ಮತ್ತನ್ಯ ಸಲ್ಲಾಂಛನಂ ೭೫

ಬತ್ತಲೆ ಪೂಜ್ಯಮಲ್ಲದೊಡೆ ಬತ್ತಲೆಯಪ್ಪ ದಿನೇಶಬಿಂಬಮಂ
ಬತ್ತಲೆಯಿರ್ಪ ಮಕ್ಕಳುಗಳುಗಳಂ ರತಿಯಿಂ ನೆರೆವಲ್ಲಿ ರಾಗದಿಂ
ಬತ್ತಲೆಯಿರ್ಪ ಪೆಂಡತಿಯನೋವಣಕಂ ನೆಱೆ ಕಂಡು ಮಾನಿಸರ್
ಸತ್ತವರಾರೊ ಭಾವಿಪೊಡೆ ಬತ್ತಲೆಯಲ್ಲದ ವಸ್ತುವಾವುದೋ ೭೬

ಸವಣರನಣ್ಣ ಕಂಡೊಡತಿ ದೋಷಮೆ ಪುಟ್ಟುಗುಮಪ್ಪೊಡುರ್ವಿಯೊಳ್
ಬವರಮದೇಕೆ ಬೇಡವಡೆಯುಂ ಕೊಲುವಗ್ಗದ ಕಳ್ಳರಪ್ಪರಂ
ವಿವರಿಸೆ ನಾಯ್ಗಳಂ ಪೊಲೆಯರಂ ಕುಲಹೀನರನುಗ್ರರಂ ಮಹೋ
ತ್ಸವದೊಳೆ ಕಂಡೊಡಲ್ಲಿ ಪರಿಪೂರ್ಣತೆಯಕ್ಕುಮೆ ಪುಣ್ಯಬಂಧದಾ ೭೭

ರತ್ನವು ನಿರ್ಗ್ರಂಥವಾದರೆ ಬೆಲೆಯು ಹೆಚ್ಚಳ, ಹೊನ್ನು ನಿರ್ಗ್ರಂಥವಾದರೆ ಮನ್ನಣೆಯಾಗುತ್ತದೆ ; ಹಾಗೆಯೇ ಜಿನೇಶ್ವರನ ತಪಸ್ಸು ನಿರ್ಗ್ರಂಥವಾದ್ದರಿಂದಲೇ ಲೋಕದ ಕೆಲಸಗಳೆಲ್ಲವೂ ಸಿದ್ಧಿಸುತ್ತವೆ. ೭೪. ಭೂಮಿ, ಹುಟ್ಟಿದ ಮಕ್ಕಳು, ಸೂರ್ಯ, ಗೋ, ಸಹವಾ, ಆನೆಗಳ ಸಮೂಹ, ಆಕಾಶ, ಸಮುದ್ರ, ಕುದುರೆಗಳು, ಬೆಂಕಿ, ಗಿಡಗಳ ಸಮೂಹ, ಬೆಟ್ಟ, ಲೋಕದಲ್ಲಿ ಹುಟ್ಟಿದ ವಸ್ತುಗಳೆಲ್ಲವೂ ನಿರ್ಗ್ರಂಥ (ಬೆತ್ತಲೆ) ವಾದ ಆ ಜಿನೇಶ್ವರನ ಮುದ್ರಾಂಕಿತವೇ ಹೊರತು ಜಗತ್ತಿನಲ್ಲಿ ಇನ್ನು ಒಳ್ಳೆಯ ಲಾಂಛನ ಬೇರೆ ಇದೆಯೆ ? ೭೫. ಬೆತ್ತಲೆ ಪೂಜ್ಯವಲ್ಲದಿದ್ದರೆ ಬೆತ್ತಲೆಯಾದ ಸೂರ್ಯಬಿಂಬವನ್ನು ಬತ್ತಲೆಯಿರುವ ಮಕ್ಕಳನ್ನೂ ರತಿಯಲ್ಲಿ ನೆರೆಯುವಾಗ ಸಂತೋಷದಿಂದ ಬತ್ತಲೆಯಿರುವ ಹೆಂಡತಿಯನ್ನು ಓ ! ಅತಿಶಯವಾಗಿ ಕಂಡು ಮನುಷ್ಯರು ಯಾರು ಸತ್ತರು ? ವಿಚಾರ ಮಾಡಿದರೆ ಬತ್ತಲೆಯಿಲ್ಲದ ವಸ್ತು ಯಾವುದೊ ? ೭೬. ಅಣ್ಣ ! ಸವಣರನ್ನು ಕಂಡರೆ ಅತಿ ದೋಷ ಬರುವುದಾದರೆ, ಕಳ್ಳರು, ಬೇಡರ ಸೈನ್ಯ, ಕೊಲ್ಲುವ ಬಲಿಷ್ಠರಾದ ಕಳ್ಳರು, ನಾಯಿಗಳು, ಹೊಲೆಯರು, ಕುಲಹೀನರು, ಕ್ರೂರಿಗಳು ಇವರನ್ನೆಲ್ಲ ಸಂತೋಷದಿಂದ ಕಂಡರೆ ಅಲ್ಲಿ ಪುಣ್ಯದ ಪರಿಪೂರ್ಣತೆಯಾಗುವುದೆ ? ೭೭. ಋಷಿಗಳನ್ನು ಸದಾ ಕಾಣುವವರ ಮನೆಯ

ಗದ್ಯ॥ ಋಷಿಯರನಾಗಳುಂ ಕಾಣ್ಬವರ ಮನೆಯ ಪಶುಗಳುಮೆಮ್ಮೆಗಳುಂ ಕಱೆಯವೆ, ಬಾಡುಮಕ್ಕಿಗಳುಂ ಬೇಯವೆ, ಪುಳ್ಳಿಯಾಳ್ದೊಡಂ ಕಿಚ್ಚುರಿಯವೆ, ಮಕ್ಕಳುಂಮಱಿಗಳುಂ ಸಾವುವೆ, ಉಂಡೊಂಡಂ ಪಸಿವು ಪೋಗದೆ, ನೀರುಂ ಕೂಟುಂ ರುಚಿಯಾಗವೆ ? ಅದಱಿಂ ಕಾಣದೊಡೆ ಲೇಸೆಂಬುದುಮನೇತಱಿಂದಱಿಯಲಕ್ಕುಂ ೭೮

ಸಿರಿಯಿಂ ಮೆಯ್ಯಱಿಯದ ಮ
ರ್ತ್ಯರೆಲ್ಲರುಂ ನೂರ್ವರುಷಮುಂ ಬಾಳ್ವವರುಂ
ಪರಮಾರ್ಥಂ ಕಾಣದೆ ಋಷಿ
ಯರ ರೂಪಂ ಶ್ರೀಯುಮಾಯುಮಂ ತಾಳ್ದಿದರೇ ೭೯

ಕೂಟಿಲ್ಲದೆ ತಿರಿವವರುಂ
ಬಾಟುವೆಯೊಳೆ ಸತ್ತಮನುಜರುಂ ಋಷಿರೂಪಂ
ಕೇಳ ಗಳ ಕಂಡು ತಿರಿವರೆ
ಪೇಟವರೋರಂತೆ ಸತ್ತರೇ ಭೂತಳದೊಳ್ ೮೦

ಪೆಂಡಿರ ಪರಿಭವದಿಂದಂ
ಪಾಂಡವರುಂ ರಾಮಚಂದ್ರನುಂ ವನದೊಳ್ ಗೋ
ಳುಂಡೆಗೊಳುತಿರ್ದರವರೇಂ
ಕಂಡರೆ ಮುಂ ದಿವ್ಯಮಪ್ಪ ಋಷಿಯರ ರೂಪಂ ೮೧

ಹಸು, ಎಮ್ಮೆಗಳು ಹಾಲು ಕರೆಯುವುದಿಲ್ಲವೆ ? ತರಕಾರಿ ಅಕ್ಕಿಗಳು ಬೇಯುವುದಿಲ್ಲವೆ ? ಸೌದೆಯಿದ್ದರೂ ಬೆಂಕಿ ಉರಿಯುವುದಿಲ್ಲವೆ ? ಮಕ್ಕಳು ಮರಿಗಳು ಸಾಯುವುವೆ ? ಊಟ ಮಾಡಿದರೂ ಹಸಿವು ಇಂಗುವುದಿಲ್ಲವೆ ? ಅನ್ನ, ನೀರು ರುಚಿಯಾಗುವುದಿಲ್ಲವೆ ? ಆದ್ದರಿಂದ ಅವರನ್ನು ಕಾಣದಿದ್ದರೆ ಒಳ್ಳೆಯದೆಂಬುದನ್ನು ಹೇಗೆ ತಿಳಿಯಬಹುದು ? ೭೮. ಐಶ್ವರ್ಯದಿಂದ ಮೈಮರೆತ ಮರ್ತ್ಯರೆಲ್ಲರೂ ನೂರು ವರ್ಷ ಬಾಳುವವರೂ ಪರಮಾರ್ಥವನ್ನು ಋಷಿಯರ ರೂಪವನ್ನೂ ಕಾಣದೆ ಐಶ್ವರ್ಯವನ್ನೂ ಪಡೆದರೆ ? ೭೯. ಕೂಳಿಲ್ಲದೆ ಬೇಡುವವರೂ ಬಾಳ್ವೆಯಲ್ಲಿಯೇ ಸತ್ತವರೂ ಋಷಿಗಳ ರೂಪವನ್ನು ಕಂಡುದರಿಂದಲೇ ತಿರಿಯುತ್ತಿರುವರೆ ? ಪೆಚ್ಚಾಗಿ ಸತ್ತರೆ ? ೮೦. ಹೆಂಡತಿಯ ಅಪಮಾನದಿಂದ ಪಾಂಡವರೂ ರಾಮಚಂದ್ರನೂ ಕಾಡಿನಲ್ಲಿ ಗೋಳನ್ನನುಭವಿಸುತ್ತಿದ್ದವರು ಹಿಂದಿನ ಜನ್ಮದಲ್ಲಿ ದಿವ್ಯವಾದ ಋಷಿಗಳ ರೂಪವನ್ನು ಕಂಡಿದ್ದರೆ ? ೮೧. ಭರತ

ಭರತನುಮಾ ಶತ್ರುಘ್ನನು
ಮರವರಿಸದ ಗಂಡನಪ್ಪ ದುರ್ಯೋಧನನುಂ
ಧರೆಯಂ ಪಲಕಾಲಂ ಋಷಿ
ಯರ ರೂಪಂ ಕಾಣದಾಳ್ದರೇ ಪೇಟಿಮಿದಂ ೮೨

ಪುರದೊಳಗಣ ಪಾರುವರೆ
ಲ್ಲರುಮಂ ಮತ್ತನ್ಯಸಮಯಿಗಳುಮಂ ಕಳ್ಳರ್
ಭರದಿಂದಂ ಕಂಡುಂ ಸಾ
ವರಮೋಘಂ ಸೀಳ್ದು ಕೊಲೆ ತಳಾಱರ ಕೈಯೊಳ್ ೮೩

ಎಂದುಂ ಋಷಿಯರ ಕಾಣದ
ಸಂದೂರೊಳಗಣ್ಣ ವಿಪ್ರರಂ ಪೊರ್ದಿರ್ದುಂ
ಸಂದ ತಿರಿಕರ್ಗೆ ಬಡತನ
ಮೆಂದುಂ ಪಱಿಪಟ್ಟುದಿಲ್ಲದೇನಚ್ಚರಿಯೋ ೮೪

ಬಸದಿಗಳ ಋಷಿಯರೆಂಬರ
ದೆಸೆಯಿಲ್ಲೆಂಬಗ್ರಹಾರದೊಳಗಿರ್ದುಂ ಚಿಂ
ತಿಸುವುದುಮಂ ಸಾವುದುಮಂ
ವಸುಮತಿಯೊಳ್ ತಿರಿಯುತಿರ್ಪುದುಮನೇಕುಟಿಯರ್ ೮೫

ಶತ್ರುಘ್ನರೂ ಹಿಂತೆಗೆಯದ ಶೂರನಾದ ದುರ್ಯೋಧನನೂ ರಾಜ್ಯವನ್ನು ಬಹಳ ಕಾಲ ಋಷಿಯರ ರೂಪವನ್ನು ಕಾಣದೆಯೇ ಆಳಿದರೆ ? ಇದನ್ನು ಹೇಳಿ. ೮೨. ಪಟ್ಟಣದಲ್ಲಿನ ಬ್ರಾಹ್ಮಣರೆಲ್ಲರನ್ನೂ ಇನ್ನೂ ಅನ್ಯಮತಗಳವರನ್ನೂ ಕಳ್ಳರು ಕಂಡರೂ, ಸೀಳಿ ಕೊಂದರೆ ತಳವಾರರ ಕೈಯ್ಯಲ್ಲಿ ತಪ್ಪದೆ ಸಾಯುವರು. ೮೩. ಎಂದೂ ಋಷಿಯರನ್ನು ಕಾಣದ ಶ್ರೇಷ್ಠವಾದ ಊರಿನಲ್ಲಿ, ಅಣ್ಣ ! ವಿಪ್ರರನ್ನು ಹೊಂದಿಕೊಂಡಿದ್ದರೂ ತಿರುಕರಿಗೆ ಬಡತನವು ಎಂದೂ ಪರಿಹಾರವಾಗಲಿಲ್ಲ. ಅದೇನು ಆಶ್ಚರ್ಯವೊ ? ೮೪. ಬಸದಿಗಳು. ಜೈನ ಋಷಿಗಳು, ಎಂಬವರ ಸುದ್ದಿಯೇ ಇಲ್ಲದ ಅಗ್ರಹಾರದಲ್ಲಿದ್ದುಕೊಂಡೂ ಕೂಡ ಚಿಂತಿಸುವುದು, ಸಾಯುವುದು, ತಿರುಪೆ ಬೇಡುವುದು–ಇವನ್ನೆಲ್ಲ ಲೋಕದಲ್ಲಿ ಏಕೆ ಬಿಡರು ? ೮೫. ಯುದ್ಧದಲ್ಲಿ ಬಾಣಗಳು ಚುಚ್ಚಿಕೊಳ್ಳಲು ಗೋಳಿಟ್ಟು ಒರಲುತ್ತ

ಕಾಳಗದೊಳಬುಗಳ್ಕೊಳೆ
ಗೋಳಿಟ್ಟೊಳಱುತ್ತುಮಿರ್ಪವರ್ಸವಣರನಾ
ಕಾಳಗದೊಳೇನೊ ಕಂಡು ವೃ
ಥಾಳಾಪಿಗಳಣ್ಣ ಸತ್ತರೇ ಪೇೞಿಮಿದಂ ೮೬

ಜ್ವರದಿಂ ವಾತದಿನುಷ್ಣದಿಂ ಮಱುಕದಿಂ ಕಣ್ಬೇನೆಯಿಂ ಖಾಸದಿಂ
ಕುರುಮಿಂ ಗೋಳಿಡುತಿರ್ಪವರ್ ಸವಣರುಮಂ ಕಂಡರೇ ಕುತ್ತದೊಳ್
ಪೊರಳುತ್ತಿರ್ಪವರನ್ಯಲಿಂಗಿನಳ ರೂಪಂ ಕಂಡು ತದ್ಬಾಧೆಯು
ಬ್ಬರದಿಂ ಪಿಂಗಿ-ಪೊಡರ್ಪುಗುಂದದೆ ಮಹಾಸಂತೋಷದಿಂದಿರ್ದರೇ ೮೭

ಸವಣರುಮಂ ಸಚ್ಛ್ರಾವಕ
ನಿವಹಮುಮಂ ನೋವು ಸಾವು ಕುತ್ತಂ ಬಂದೌಂ
ಕುವುವನ್ಯಸಮಯಿಗಳನೊ
ತ್ತವವೆಂಬುದು ಪಿರಿದುತನವವರ್ಗಳಿಗಕ್ಕುಂ ೮೮

ಗದ್ಯ॥ ಕುಂಚಮಂ ದೋಷಮೆಂಬೊಡೆ ಕುಂಚಮಪ್ಪುದು ಪೀಲಿ, ಪೀಲಿಯುಂ ದೋಷಮಂ ಬೊಡೆ ತಟಿಯುಂ ಸತ್ತಿಗೆಯುಂ ಪಿಡಿದು ಬರ್ಪರೆಲ್ಲರುಮಂ ಕಾಣಲಾಗದು; ನಿರ್ಗ್ರಂಥಮಂ ದೋಷ ಮೆಂಬೊಡೆ ಮಕ್ಕಳುಂ ಮರಂಗಳುಂ ಪಶುಗಳುಂ ನಿರ್ಗ್ರಂಥಮವಂ ಕಾಣಲಾಗದು; ತಟ್ಟುದೋಷ ಮೆಂಬೊಡೆ ಚೋಳ ದೇಶಮೆಲ್ಲಮದಱ ಮೇಲೆ ಪಟ್ಟಿರ್ಪುದು; ತಿವುಳದೇಶದವರೆಲ್ಲರುಮಂ

ಇರುವವರು ಆ ಕಾಳಗದಲ್ಲಿ ಸವಣರನ್ನು ಕಂಡೇ ಸತ್ತರೆ ? ವೃಥಾ ಆಳಾಪಿಸುವ ಅಣ್ಣ, ಇದನ್ನು ಹೇಳಿ. ೮೭. ಜ್ವರದಿಂದ, ವಾತೋಷ್ಣಗಳಿಂದ, ಸಂಕಟದಿಂದ, ಕಣ್ಣುನೋವಿನಿಂದ, ಕೆಮ್ಮು, ಕುರು ಇವುಗಳಿಂದ ನೊಂದು ಗೋಳಾಡುತ್ತಿರುವವರು ಮುಂಚೆ ಸವಣರನ್ನು ಕಂಡಿದ್ದರೆ ? ರೋಗದಿಂದ ನರಳುತ್ತಿರುವ ಬೇರೆ ಮತಗಳವರ ರೂಪವನ್ನು ಕಂಡು ಆ ಬಾಧೆಯ ಉಬ್ಬರವೆಲ್ಲ ಹಿಂಗಿ ಅವರ ಶಕ್ತಿ ಕುಂದದೆ ಮಹಾ ಸಂತೋಷದಿಂದಿರುವರೆ ? ೮೭. ರೋಗ, ನೋವು, ಸಾವುಗಳು ಜೈನ ಸನ್ಯಾಸಿಗಳಾದ ಸವಣರನ್ನೂ ಜೈನಗೃಹಸ್ಥರನ್ನು ಬಂದು ಔಕುತ್ತವೆ ; ಆದರೆ ಅವು ಅನ್ಯಧರ್ಮಗಳವರನ್ನು ಒತ್ತವು (ಪೀಡಿಸುವುದಿಲ್ಲ) ಎಂಬುದು ಸರಿಯಾದರೆ ಅವರಿಗೆ ಹಿರಿತನವಾಗುತ್ತದೆ. ೮೮. ಕುಂಚವನ್ನು (ಸನ್ಯಾಸಿಗಳು ಹಿಡಿದಿರುವ ದೊಂದೆ) ದೋಷವೆಂದರೆ ಅದು ನವಿಲುಗರಿ, ಗರಿಯೂ ದೋಷವೆಂದರೆ ಕೊಡೆಯನ್ನೂ ಸತ್ತಿಗೆಯನ್ನೂ ಹಿಡಿದುಕೊಂಡು ಬರುವವರೆಲ್ಲರನ್ನೂ ಕಾಣಕೂಡದು ; ಬತ್ತಲೆಯನ್ನು ದೋಷವೆನ್ನುವುದಾದರೆ ಮಕ್ಕಳೂ ಮರಗಳೂ, ಪಶುಗಳೂ ಬೆತ್ತಲೆ. ಅವುಗಳನ್ನು ಕಾಣಬಾರದು ; ತಟ್ಟು ದೋಷವೆಂದರೆ ಅದು ಒಂದು ಹಸೆ, ಹಸೆಯನ್ನೇ ದೋಷವೆಂದರೆ ಚೋಳ ದೇಶವೆಲ್ಲ ಅದರ ಮೇಲೆ

ಕಾಣಲಾಗದು; ಗುಂಡಿಗೆ ದೋಷಮೆಂಬೊಡೆ ಗುಂಡಿಗೆಯುಪ್ಪುದು ತೆಂಗಿನಕಾಯಿಯಿಂ, ತೆಂಗಿನ ಕಾಯುಂ ದೋಷಮೆಂಬೊಡೆ ತೆಂಗಿನಕಾಯುಮಂ ತಿಂಬರುಮಂ ಮಾಱುವ ಪರದರುಮಂ ಕಾಣಲಾಗದು; ಮಿಂದುದು ದೋಷಮೆಂಬೊಡೆ ಚಂದ್ರಾದಿತ್ಯರ್ಕಳೆಂದುಂ ಮಿಯ್ಯರವರಂ ಕಾಣಲಾಗದು; ಮಲಮಂ ತಾಳ್ದುವುದು ದೋಷಮೆಂಬೊಡೆ ತಿಪ್ಪೆಯುಂ ತಾಳ್ದಿದ ನೆಲನುಮಂ ಗೊಬ್ಬರ ಮನೊಳಕೊಂಡ ಕೆಯ್ಗಳುಮಂ ಕಾಣಲಾಗದು, ವಮನಂಗೆಯ್ದು ನೀರಂ ಕುಡಿಯದುದೆ ದೋಷಮಪ್ಪೊಡೆ ಪ್ರತಿಜ್ಞೆಯಿಂ ಕುಡುವರಸುಗಳುಮಸಂಕಂಗಳುಮಂ ಕಾಣಲಾಗದು; ನಿಂದುಣಸು ದೋಷಮೆಂಬೊಡೆ ಜೀವಧನಂಗಳುಮಂ ಮರಂಗಳುಮಂ ಕಾಣಲಾಗದು; ಕಯ್ಯೊಲುಂಬುದು ದೋಷಮೆಂಬೊಡೆ ಆನೆಯುಮಂ ಕಾಣಲಾಗದು. ಲೋಚು ದೋಷಮೆಂಬೊಡೆ ತಿರ್ದಿದ ಪುರ್ವಿನವರಂ ತಿರ್ದಿದ ಮಿಸೆಯವರಂ ಕಾಣಲಾಗದು; ಪಂಚಮಹಾವ್ರತಂಗಳಂ ತಾಳ್ದುವುದು ದೋಷಮೆಂಬೊಡೆ ಪಾಂಡವರಂ ಭೀಷ್ಮರಂ ಕರ್ಣನಂ ಪೊಗೞ್ವ ಮನುಷ್ಯರಂ ಕಾಣಲಾಗದು. ಪಲ್ಲಂ ಸುಲಿಯದುದು ದೋಷಮೆಂಬೊಡೆ ಕೊಡುಗೂಸುಗಳುಮಂ ಕುಮಾರರುಮಂ ಕಾಣಲಾಗದು; ಮೋಕ್ಷಸಾಧಕರಪ್ಪ ಋಷಿಯರಂ ಕಂಡೊಡೆ ಲೇಸಲ್ಲದೆ ಪೊಲ್ಲೆಂಬುದಕ್ಕೆ ಕಾರಣಮಿಲ್ಲ ೮೯

ಮಲಗಿರುತ್ತದೆ, ಶಿವುಳ ದೇಶದವರನ್ನೆಲ್ಲ ಕಾಣಕೂಡದು. ಗುಂಡಿಗೆ (ಕಮಂಡಲ) ದೋಷವೆನ್ನುವುದಾದರೆ ಗುಂಡಿಗೆ ತೆಂಗಿನಕಾಯಿಯಿಂದ ಆದದ್ದು, ತೆಂಗಿನಕಾಯಿಯೂ ದೋಷವೆಂದರೆ, ತೆಂಗಿನಕಾಯನ್ನು ತಿನ್ನುವವರನ್ನೂ ಮಾರುವ ವರ್ತಕರನ್ನೂ ಕಾಣಬಾರದು ; ಸ್ನಾನ ಮಾಡದುದು ದೋಷವೆನ್ನುವುದಾದರೆ ಚಂದ್ರಸೂರ್ಯರು ಎಂದೂ ಸ್ನಾನ ಮಾಡುವುದಿಲ್ಲ ; ಅವರನ್ನೂ ಕಾಣಬಾರದು ; ಕೊಳೆಯನ್ನು ಧರಿಸುವುದು ದೋಷವೆಂದರೆ ತಿಪ್ಪೆಯನ್ನು ಹೊತ್ತ ನೆಲವನ್ನೂ ಗೊಬ್ಬರವನ್ನೊಳಕೊಂಡ ಹೊಲ ಗದ್ದೆಗಳನ್ನೂ ಕಾಣಬಾರದು, ವಾಂತಿ ಮಾಡಿ ನೀರನ್ನು ಕುಡಿಯದಿರುವುದೇ ದೋಷವೆಂದರೆ, ಪ್ರತಿಜ್ಞೆಯಿಂದ ಕುಡಿವ ರಾಜರನ್ನೂ ಕಾಳಗಗಳನ್ನೂ ಕಾಣಬಾರದು, ನಿಂತು ತಿನ್ನುವುದು ದೋಷವೆಂದರೆ ಜೀವಧನಗಳನ್ನೂ ಮರಗಳನ್ನೂ ಕಾಣಬಾರದು ; ಕೈಯಲ್ಲಿ ಊಟ ಮಾಡುವುದು ದೋಷವೆಂದರೆ ಆನೆಯನ್ನೂ ನೋಡಬಾರದು. ಲೋಚು ದೋಷವೆಂದರೆ ತಿರ್ದಿದ ಹುಬ್ಬುಳ್ಳವರನ್ನೂ ತಿದ್ದಿದ ಮೀಸೆಯವರನ್ನೂ ನೋಡಬಾರದು. ಪಂಚಮಹಾವ್ರತಗಳನ್ನು ಧರಿಸುವುದು ದೋಷವಾದರೆ ಪಾಂಡವರನ್ನೂ ಭೀಷ್ಮರನ್ನೂ ಕರ್ಣನನ್ನೂ ಹೊಗಳುವ ಮನುಷ್ಯರನ್ನು ಕಾಣಬಾರದು. ಹಲ್ಲನ್ನು ಉಜ್ಜದುದು ದೋಷವೆನ್ನುವುದಾದರೆ ಚಿಕ್ಕಮಕ್ಕಳನ್ನೂ ಕಾಣಬಾರದು. ಮೋಕ್ಷ ಸಾಧಕರಾದ ಋಷಿಗಳನ್ನು ಕಂಡರೆ ಒಳ್ಳೆಯದೇ ಹೊರತು ಕೆಡಕೆಂಬುದಕ್ಕೆ ಕಾರಣವಿಲ್ಲ.
೮೯. ಹಸುವಿನ ನಾಲಗೆಯಲ್ಲಿ. ಹೋಲೆಯುರಿರುವ ಸ್ಥಳದಲ್ಲಿ, ಅಮೃತದೇವಿಯೂ

ಪಶುವಿನ ಜಿಹ್ವೆಯೊಳ್ ಪೊಲೆಯರಿರ್ಪೆಡೆಯೊಳ್ ಸುಧೆದೇವಿ ಪದ್ಮದೊಳ್
ಮಿಸುಗುವ ಲಕ್ಷ್ಮಿಪೊರ್ದಿ ನೆಲಸಿರ್ದಪಳೆಂಬ ಮಹಾತ್ಮರೊಂದಿ ಗ
ರ್ಜಿಸಿ ಯಮಿಯರ್ಕಳಂ ಮುನಿಸಿನಿಂದಱಿಯಟ್ಟಿ ತಗುಳ್ದು ಕಂಡೊಡು
ಬ್ಬಸಮಪಕಾರ್ಯಮೆಂದು ಬಿಡೆ ದೂಱುವರೆಂಬುದಿದಾವ ವಿಸ್ಮಯಂ ೪೦

ಗದ್ಯ ॥ ಮತ್ತಂ ಪೊಗದ ಕೋಂಟೆಯುಂ ಸಾಯದ ಪಗೆಯುಮುಳ್ಳವರ್ ಕೋಂಟೆ
ಪೋಪನ್ನೆಗಂ ಪಗೆ ಸಾವನ್ನೆಗಂ ಕಯ್ಯಲುಂಡೆಂ ಪಲ್ಲಂ ಸುಲಿಯೆಂ ಮಿಾಯೆಂ ಪೆಂಡಿರೊಳ್ ಕೂಡೆಂ
ತಲೆಯಂ ಕಟ್ಟೆಂ ವಿನೋದಮಂ ನೋಡೆಂ ಆಭರಣಂಗಳನೊಲ್ಲೆಂ ಒರ್ಮೆಯುಂಬೆನೆಂದು ಜಿನೇ
ಶ್ವರನ ಪೇಳ್ದ ತಪದೋಜೆಯಿಂ ಪೊಣ್ದು ಕೋಂಟೆಯಂ ಕೊಳ್ವರ್ ಪಗೆಯಂ ಕೊಲ್ವರ್ ಅದು
ಕಾರಣದಿಂ ಸ್ವರ್ಗಾಪವರ್ಗ ದುರ್ಗಮಂ ಸಾಧಿಸುವುದಕ್ಕಂ ಕರ್ಮವೈರಿಗಳಂ ಗೆಲ್ವುದಕ್ಕಂ ಜಿನರ
ಪೇಳ್ದ ತಪಮೆ ಮುಖ್ಯಂ ೪೧

ಜಿನರಂದಮೆ ಜಿನರೋಜೆಯೆ
ಜಿನರೆಂದುದೆ ಜಿನರ ನಡೆವ ನಡೆವಳಿಯೆ ಜಗಂ
ಜಿನರ ವಶಮಾಗಿ ನಡೆವುದು ೪೨
ಜಿನರಾಜ್ಞೆಯನೊಲ್ಲದದಟನೊರ್ವನು ಮೊಳನೇ

ಪದ್ಮದಲ್ಲಿ ಹೊಳೆಯುವ ಲಕ್ಷ್ಮಿಯೂ ಸೇರಿ ನೆಲಸಿರುವಳೆಂಬ ಮಹಾತ್ಮರು, ಒಟ್ಟಿಗೆ ಗರ್ಜಿಸಿ ಋಷಿಗಳನ್ನು ಸಿಟ್ಟಿನಿಂದ ಹೊಡೆದೋಡಿಸುವರು. 'ಅವರನ್ನು ಕಂಡರೆ ಉಬ್ಬಸ. ಅದು ಅಪಕಾರ್ಯ' ಎಂದು ವಿಶೇಷವಾಗಿ ದೂರುವರೆಂಬುದು ಎಂಥ ಆಶ್ಚರ್ಯ! ೪೦. ಇನ್ನು ಪ್ರವೇಶಿಸದ ಕೋಟೆಯನ್ನೂ ಸಾಯದ ಶತ್ರುವನ್ನೂ ಉಳ್ಳವನು ಕೋಟೆ ಹೋಗುವ ತನಕ, ಶತ್ರು ಸಾಯುವ ತನಕ, ಕಯ್ಯಲ್ಲಿಯೇ ಉಣ್ಣುವೆನು, ಹಲ್ಲು ಉಜ್ಜುವುದಿಲ್ಲ. ಸ್ನಾನಮಾಡುವುದಿಲ್ಲ. ಹೆಂಡಿರೊಡನೆ ಕೂಡುವುದಿಲ್ಲ, ತಲೆಯನ್ನು ಕಟ್ಟುವುದಿಲ್ಲ, ವಿನೋದವನ್ನು ನೋಡುವುದಿಲ್ಲ, ಒಡವೆಗಳನ್ನು ಒಲ್ಲೆ. ಒಂದೇ ಸಲ ಊಟ ಮಾಡುತ್ತೇನೆ" ಎಂದು ಜಿನೇಶ್ವರನು ಹೇಳಿದ ತಪದ ಕ್ರಮದಲ್ಲಿಯೇ ಶಪಥ ಮಾಡಿ ಕೋಟೆಯನ್ನು ತೆಗೆದುಕೊಳ್ಳುವರು, ಶತ್ರುವನ್ನು ಕೊಲ್ಲುವರು, ಆದಕಾರಣ ಸ್ವರ್ಗಾಪವರ್ಗಗಳ ದುರ್ಗವನ್ನು ಸಾಧಿಸುವುದಕ್ಕೂ ವೈರಿಗಳನ್ನು ಗೆಲ್ಲುವುದಕ್ಕೂ ಜಿನರಂ ಹೇಳಿದ ತಪಸ್ಸೇ ಮುಖ್ಯ ೪೧. ಜಿನರ ರೀತಿಯೇ ಜಿನರ ಕ್ರಮವೇ, ಜಿನರು ಹೇಳಿದುದೇ ಜಿನರು ನಡೆದುಕೊಳ್ಳುವ ನಡೆವಳಿಕೆಯೇ, ಜಗತ್ತು ಜಿನರ ವಶವಾಗಿ ನಡೆಯಲು ಕಾರಣ. ಜಿನರ ಆಜ್ಞೆಯನ್ನು ಒಲ್ಲದ ಶೂರನೊಬ್ಬನಾದರೂ ಇರುವನೆ ? ೪೨. ಕೊಲೆ, ಸುಳ್ಳು, ಪರವಧುವಿನ ಸಂಗ, ಕಳ್ಳತನ, ಎಂಬಿವು ಬೇಡ, ಬೇಡ, ಬೇಡ, ಎಂಬ

ಕೊಲೆ ಪುಸಿ ಪರವಧೂಸಂಗಂ
ಕಳವೆಂಬಿವು ಬೇಡ ಬೇಡ ಬೇಡೆಂಬೀ ನಿ
ರ್ಮಳವೀತರಾಗನಾಜ್ಞೆಯು
ನುೞಿದಣ್ಪೊಡರ್ಪುಗೆಯ್ವ ಗಂಡರುಮೊಳರೇ ೯೩

ಕಳ್ಳೊಂದನೆ ಶೈವಾದಿಗ
ಳೆಲ್ಲಂ ಜಿನಮತಮನುೞಿದೆ ಲೇಸೆಂದಾರ್ದುಂ
ಕಳ್ಳಂ ಕುಡಿವರನೆಲ್ಲಂ
ಪೊಲ್ಲೆಂಬಿದನಣ್ಣ ಮಾಣಿಸಲ್ ನೆಱೆವರೆ ಪೇೞ್ ೯೪

ಅಡಗೊಂದನೆ ಜಿನರಾಜ್ಞೆಯು
ನೆಡಱಿ ಮಹೀತಳದೊಳಟ್ಟುಱಿಂ ತಿಂದುಂ ತಾ
ವಡಗಟ್ಟಿ ಮಡಕೆಗಳನೊಳ
ಗಿಡಲಾರ್ಪರೆ ಪಾಲಕೆಲದೊಳಂ ಬೋನದೊಳಂ ೯೫

ಕೊಲೆ ವೇಡೆಂಬೀ ಜಿನರು
ಜ್ಜ್ವಳರಾಜ್ಞೆಗೆ ತಪ್ಪಿ ಸೈಂಧವಂ ಕೊಂದು ಮಹಾ
ಬಲನರ್ಜುನನಿಂದೞಿದಂ
ನೆಲದೊಳ್ ಜಿನರಾಜ್ಞೆಗೆಱಿಗದಂಗದು ಪಿರಿದೇ ೯೬

ಈ ನಿರ್ಮಲವಾದ ವೀತರಾಗನ ಆಜ್ಞೆಯನ್ನು ಬಿಟ್ಟು ಪ್ರತಾಪಮಾಡುವ ಶೂರರೂ ಇದ್ದಾರೆಯೆ ? ೯೩. ಜೈನಮತವನ್ನು ಲಕ್ಷಿಸದೆ ಶೈವಾದಿಗಳೆಲ್ಲ ಹೆಂಡವೊಂದನ್ನು ಲೇಸೆಂದು ಆರ್ಭಟಿಸಿಯೂ ಹೆಂಡ ಕುಡಿವವರನ್ನೆಲ್ಲ ಕೆಟ್ಟವರೆಂಬುದನ್ನು ಅಣ್ಣಾ ! ಅದನ್ನು ಬಿಡಿಸಬಲ್ಲರೆ? ೯೪. ಜಿನರಾಜ್ಞೆಯನ್ನು ವಿರೋಧಿಸಿ ಭೂತಳದಲ್ಲಿ ಮಾಂಸವನ್ನು ತಿಂದು ತಾವು ಮಾಂಸದ ಅಡಿಗೆ ಮಾಡಿದ ಮಡಕೆಗಳನ್ನು ಒಳಗೆ ಹಾಲಿನ ಪಕ್ಕದಲ್ಲಿಯೂ ಅನ್ನದೊಳಗೂ ಇಡಬಲ್ಲರೆ ? ೯೫. ಕೊಲೆಬೇಡವೆಂಬ ಜಿನರ ಈ ಉಜ್ಜಲವಾದ ಆಜ್ಞೆಯನ್ನು ಮೀರಿ ಸೈಂಧವನು ಕೊಂದು ಮಹಾಬಲನಾದ ಆರ್ಜುನನಿಂದ ಸತ್ತ, ಲೋಕದಲ್ಲಿ ಜಿನರಾಜ್ಞೆಗೆ ಸೋಲದಿದ್ದರೆ ಒಂದು ಹಿರಿತನವೆ ? ೯೬. ಸುಳ್ಳುಬೇಡವೆಂಬ ಜಿನನ

ಪುಸಿಬೇಡೆಂಬೀ ಜಿನಪತಿ
ಯೆಸೆವಾಜ್ಞೆಯನೊಕ್ಕು ಧರ್ಮಜಂ ಲೋಕಕ್ಕಂ
ಪುಸಿದಣ್ಣದೊಂದು ಕಷ್ಟಂ
ಪೆಸರ್ವಡೆದಂ ಪೊಲ್ಲನೆಂದು ಧರೆ ದೂಱುವಿನಂ ೯೭

ಪರವನಿತೆಯಾಗದೆಂಬೀ
ಯರುಹತ್ಪರಮೇಶ್ವರಾಜ್ಞೆಯಂ ಮೀಱಿ ಸುರೇ
ಶ್ವರವೈರಿ ರಾವಣಂ ರಾ
ಮರ ಕೈಯೊಳ್ ಸತ್ತನಾ ಖಳಂಗದು ಪಿರಿದೇ ೯೮

ಮೇರೆಯೊಳೆ ನಿಲ್ಲಿಮೆಂಬೀ
ವೀರ ಜಿನಾಧೀಶನಾಜ್ಞೆಯಂ ಮೀಱಿ ಕರಂ
ಕೌರವಪತಿ ದುರ್ಯೋಧನ
ನಾರಯ್ಯದೆ ಸತ್ತನೆಂಬುದಂ ಕೇಳ್ದಱಿಯಾ ೯೯

ಜಿನನಾಥನ ಮುದ್ರೆಯೆ ಲೋ
ಕಂ ನಡೆವುದು ನಡೆವ ಲೋಕದ ಕ್ರಮಮುಮಂ ನೆ
ಟ್ಟನೆ ಜಿನರ ನುಡಿಯೆ ಭಾವಿಪೊ
ಡನಿತಱೊಳೊಂದೂನಮುಂಟೆ ವಸುಧಾಧಿಪತೀ ೧೦೦

ಈ ಆಜ್ಞೆಯನ್ನು ತ್ಯಜಿಸಿ ಧರ್ಮಪುತ್ರನು ಲೋಕಕ್ಕೇ ಹುಸಿದು ಅದೊಂದು ನೀಚವಾದ ಹೆಸರು ಪಡೆದ. ಕೆಟ್ಟವನೆಂದು ಲೋಕ ದೂರುಪಂತಾಯಿತು. ೯೭. ಪರಸ್ತ್ರೀ ಸಂಗ ಸರಿಯಲ್ಲವೆಂಬ ಅರ್ಹತ್ಪರಮೇಶ್ವರಾಜ್ಞೆಯನ್ನು ಮೀರಿ ದೇವೇಂದ್ರನ ವೈರಿಯಾದ ರಾವಣನು ರಾಮರ ಕೈಯಲ್ಲಿ ಸತ್ತನು. ಆ ನೀಚನಿಗೆ ಆ ಶಿಕ್ಷೆ ದೊಡ್ಡದೆ ? ೯೮. ನಿಮ್ಮ ನಿಮ್ಮ ಮೇರೆಯಲ್ಲಿಯೇ ನಿಲ್ಲಿರೆಂಬ ವೀರಜಿನೇಶ್ವರನ ಆಜ್ಞೆಯನ್ನು ಮೀರಿ ದುರ್ಯೋಧನನು ವಿಚಾರವಿಲ್ಲದೆ ಸತ್ತನೆಂಬುದನ್ನು ಕೇಳಿ ಅರಿಯೆಯಾ ? ೯೯. ಜಿನೇಶ್ವರನ ಮುದ್ರೆಯೇ ಲೋಕವನ್ನು ನಡೆಸುವುದು. ನಡೆಯುವ ಲೋಕದ ಕ್ರಮವನ್ನೂ ಜಿನರ ಮಾತೇ ನಡೆಸುವುದು. ರಾಜನೇ, ಅದರಲ್ಲಿ ಒಂದು ಲೋಪವುಂಟೇ ? (ಇಲ್ಲ) ೧೦೦. ನಾಡಿನ ಪ್ರಜೆಗಳೆಲ್ಲರೂ ಚಕ್ರವರ್ತಿಯನ್ನು

ಗದ್ಯ ॥ ನಾಡವರೆಲ್ಲಂ ಚಕ್ರವರ್ತಿಯನಱಿಯದನಿತಱಿಂ ಚಕ್ರವರ್ತಿಯಿಲ್ಲೆನಲ್ಬಾರದು ಗೌಂಡಗಳುಂ ಬಲ್ಲೊಕ್ಕಲ್ಗಳುಮಱಿವೊಡೆ ಸಾಲ್ಗುಂ ; ಜಗವೆಲ್ಲಂ ಪೊನ್ನಂ ಪರೀಕ್ಷಿಸಲಱಿಯದ ನಿತಱಿಂ ಪೊನ್ನಂ ಪೊಲ್ಲೆನಲ್ಬಾರದು, ಪರದರುಮಕ್ಕಸಾಲಿಗರುಮಱಿವೊಡೆ ಸಾಲ್ಗುಂ, ಲೋಕಮೆಲ್ಲಂ ಮರ್ದಿನ ಶಕ್ತಿಯನಱಿಯದನಿತಱಿಂ ಮರ್ದಿಂಗೆ ಶಕ್ತಿಯಿಲ್ಲೆನಲ್ಬಾರದು, ವೈದ್ಯರುಂ ಶಾಸ್ತ್ರಜ್ಞರುಮಱಿವೊಡೆ ಸಾಲ್ಗುಂ ; ಅಂತೆ ಕಿಱುಕುಳವ್ಯಂತರಂಗಳ ಪೊಲ್ಲ ಗ್ರಹಂಗಳ ಶೈವಾದಿಗಳ ನೆಗಟ್ಟಿ ಪ್ರಮಾಣಮಲ್ಲದು ; ನೆಲನೆಲ್ಲಂ ಕೊಂಡಾಡುವೆಕ್ಕಲವಿರಿಯುಂ ಬನ ದಬ್ಬೆಯುಂ ಮಹಾಲಕ್ಷ್ಮಿಯುಂ ಕಂಚಿಯ ಕಾಮಕೋಟಿಯುಂ ಕೊಳ್ಳಿಪಾಕೆಯ ಭೂತ ಕೋಟಿಯುಂ ಪಿಟ್ಟಾಪುರದ ಮಾರಿಕಬ್ಬೆ ಶಾಕಿನಿಯುಂ ಪೊಣರ್ಮಾಲೆಯ ಮಂಗಳಾದೇವಿಯುಂ ಮೈಲಾಪುರದ ಕಾಮಾಕ್ಷಿಯೆಂಬಿವರ್ಮೊದಲಾದ ಮಹಾವ್ಯಂತರಂಗಳ್ ಮೋನದಿಂ ಮುಟ್ಟುಪಡಂ ಬೆರಸಿರ್ಪೊಡಂ ಪೊಲೆಯರ ದನಿಯಪ್ಪೊಡಂ ಕೇಳದಂತು ಕಂಚುಪಱೆವೆರಸು ಲೇಸು ನುಡಿ ಲೇಸು ನುಡಿಯೆಂಬ ಮಹಿಮೆಯಿಂದುಣ್ಬರ್ ; ಚಂದ್ರಾದಿತ್ಯಗ್ರಹಂಗಳ್ ಕಳ್ಳಡಗುಂ ಜೇನುಂ ಗಿಣ್ಣಣಂಬೆ ಮೊದಲಾದುವಲ್ಲದೆ ಶುದ್ಧದುಪ್ಪಾಹುತಿಯಂ ಕೊಳ್ಳವು ; ದೇವೇಂದ್ರನುಮಗ್ನಿಯುಂ ಮೊದಲಾದ ದಿಕ್ಪಾಲರೆಲ್ಲರುಂ ಮದ್ಯಮಾಂಸವರ್ಜಿತಮಪ್ಪ ಪೂಜೆಗಳಂ ಕೊಳ್ವರ್ ; ಮೋನದಿಂ

ಅರಿಯದಷ್ಟರಿಂದ ಚಕ್ರವರ್ತಿಯೇ ಇಲ್ಲವೆನ್ನಲು ಬರದು. ಗೌಡರುಗಳೂ ದೊಡ್ಡ ಒಕ್ಕಲುಗಳೂ ತಿಳಿದರೆ ಸಾಕು. ಜಗತ್ತೆಲ್ಲ ಚಿನ್ನವನ್ನು ಪರೀಕ್ಷಿಸಲು ತಿಳಿಯರು, ಅಷ್ಟ ರಿಂದ ಹೊನ್ನನ್ನು ಕೆಟ್ಟದ್ದೆನ್ನಲಾರದು. ವರ್ತಕರೂ ಅಕ್ಕಸಾಲಿಗರೂ ತಿಳಿದಿದ್ದರೆ ಸಾಕು. ಲೋಕವೆಲ್ಲ ಔಷಧದ ಶಕ್ತಿಯನ್ನು ತಿಳಿಯದಿರಬಹುದು. ಅಷ್ಟರಿಂದಲೇ ಔಷಧಕ್ಕೆ ಶಕ್ತಿಯಿಲ್ಲವೆನ್ನಬಾರದು ; ವೈದ್ಯರೂ ಶಾಸ್ತ್ರಜ್ಞರೂ ತಿಳಿದಿದ್ದರೆ ಸಾಕು. ಹಾಗೆಯೇ ಚಿಕ್ಕ ಪುಟ್ಟ ವ್ಯಂತರಗಳ ಮತ್ತು ಕೆಟ್ಟ ಗ್ರಹಗಳ, ಶೈವಾದಿಗಳ ಕೆಲಸ ಪ್ರಮಾಣವಲ್ಲ. ಭೂಮಿಯೆಲ್ಲ ಹೊಗಳುವ ದೊಡ್ಡ ಕಾಡುಹಂದಿಯೂ, ವನದ ಅಬ್ಬೆಯೂ, ಮಹಾಲಕ್ಷ್ಮಿಯೂ ಕಂಚಿಯ ಕಾಮಕೋಟಿಯೂ ಕೊಳ್ಳಿಪಾಕೆಯ ಭೂತಕೋಟಿಯೂ, ಪಿಟ್ಟಾಪುರದ ಮಾರಿಯಬ್ಬೆ ಶಾಕಿನಿಯೂ, ಪೊಣರ್ಮಾಲೆಯ ಮಂಗಳಾದೇವಿಯೂ ಮೈಲಾಪುರದ ಕಾಮಾಕ್ಷಿ, ಎಂಬ ಇವರೇ ಮೊದಲಾದ ಮಹಾ ವ್ಯಂತರಗಳು ಮೌನದಿಂದ ಮುಟ್ಟು ಪಡ ಕಲೆತಿದ್ದರೂ ಹೊಲೆಯರ ಧ್ವನಿಯಾದರೂ ಕೇಳದ ಹಾಗೆ ಕಂಚಿನ ತಮಟೆಯೊಡನೆ 'ಒಳ್ಳೆಯ ಮಾತು ಒಳ್ಳೆಯ ಮಾತು' ಎಂಬ ಗದ್ದಲದ ಮಹಿಮೆಯಿಂದ ಉಣ್ಣುವರು. ಚಂದ್ರ ಸೂರ್ಯ ಗ್ರಹಗಳು, ಹೆಂಡ, ಮಾಂಸ, ಜೇನು, ಗಿಣ್ಣು, ಅಣಬೆ, ಮೊದಲಾದುವನಲ್ಲದೆ ಶುದ್ಧವಾದ ಆಹುತಿಯನ್ನು ಸ್ವೀಕರಿಸು ವುದಿಲ್ಲ ; ದೇವೇಂದ್ರ ಅಗ್ನಿ ಮೊದಲಾದ ದಿಕ್ಪಾಲಕರೆಲ್ಲರೂ ಮದ್ಯಮಾಂಸಗಳಿಲ್ಲದ ಪೂಜೆ ಗಳನ್ನು ಕೈಕೊಳ್ಳುವರು. ಮೌನವಾಗಿ ಮುಟ್ಟುಪಡದಿಂದ ಅನ್ನ ಶುದ್ಧಿಯಿಂದ ಪಾತ್ರಶುದ್ಧಿ

ಮುಟ್ಟುಪಡದಿಂದನ್ನ ಶುದ್ಧಿಯಿಂ ಪಾತ್ರಶುದ್ಧಿಯಿಂದುಣ್ಬುದು ; ತೊವಲ್ ಮೊದಲಾದುವಂ ಮುಟ್ಟದೆ ನೋಡದೆ ಕಾಳಾಮುಖರುಂಬರ್ ; ಕೊಲಲುಂ ಪುಸಿಯಲುಂ ಕಳಲುಂ ಪೆಱರ ಪೆಂಡಿರ್ಗೆಳಸಲುಮಾಗದು, ಜೇನಂ ಗಿಣ್ಣಂ ತಿನವೇಡ, ಮಱೆದುಂ ಯಜ್ಞಶಾಲೆಯೊಳುಣವೇಡ ; ನಾಯ್ಮೊದಲಾದ ಪ್ರಾಣಿಗಳಂ ನೋಯಿಸವೇಡೆಂದು ವ್ರತಂಗಟ್ಟುವಲ್ಲಿ ಮಾಣಿಗಳಂ ಬ್ರಾಹ್ಮಣರ್ ನಿಯಮಿಸುವರಪ್ಪುದಱಿಂ ಲೋಕಮೆಲ್ಲಂ ಜಿನರಾಜ್ಞೆಯಿಂ ನಡೆದಪುದೆಂದಱಿಗೆ ೧೦೧

ಮನೆದೈವಮುಣ್ಣದೆಂದೊ
ಯ್ಯನೆ ಪೊಲಸಂ ತಿಂಬ ಮನುಜರುಂ ಪೊಲಸಿನ ಭಾ
ಜನಮಂ ಪೊಱಗಿರಿಸುವರೆನೆ
ಜಿನಪತಿ ಬೇಡೆಂಬ ವಸ್ತುವಂ ಮನ್ನಿಪರಾರ್ ೧೦೨

ನಿನ್ನೊಳೆ ಧರ್ಮದ ಪೆಂಪುಂ
ನಿನ್ನೊಳೆ ವಿಸ್ತರಮುಮೆಸೆವುವೆಂದೊಡೆ ನಲಿವರ್
ಮುನ್ನಂ ಪಾತಕರಾದೊಡ
ಮಿನ್ನದಱಿಂ ಜಿನರ ನುಡಿಗೆ ಸೋಲದರೊಳರೇ ೧೦೩

ಪರವನಿತೆಗೆಱಗದುದುಮ
ನ್ಯರರ್ಥಮಂ ಬಯಸಲೊಲ್ಲದುದು ನಿನಗೆಸೆಗುಂ
ಕರಮೆನೆ ದುಷ್ಪನುಮೊಸಗೆನೆ
ಪರಮ ಜಿನಾಧೀಶರಾಜ್ಞೆಗೊಸೆಯದರೊಳರೇ ೧೦೪

ಯಿಂದ ಉಣತಕ್ಕದ್ದು. ತೊಗಲು ಮುಂತಾದುವನ್ನು ಮುಟ್ಟದೆ ನೋಡದೆ ಕಾಳಾಮುಖರು ಊಟ ಮಾಡುವರು; ಕೊಲ್ಲಲೂ, ಹುಸಿಯಲೂ, ಕದಿಯಲೂ, ಬೇರೆಯುವರ ಹೆಂಡಿರಿಗೆ ಆಸೆಪಡಲೂ ಆಗದು, ಜೇನು ಗಿಣ್ಣುಗಳನ್ನು ತಿನ್ನಬೇಡ, ಮರೆತೂ ಯಜ್ಞಶಾಲೆಯಲ್ಲಿ ಊಟ ಮಾಡಬೇಡ; ನಾಯಿ ಮೊದಲಾದ ಪ್ರಾಣಿಗಳನ್ನು ನೋಯಿಸಬೇಡವೆಂದು ವ್ರತವನ್ನು ಕಟ್ಟುವಾಗ ಬ್ರಾಹ್ಮಣರು ಹುಡುಗರಿಗೆ ನಿಯಮಿಸುವರಾದ್ದರಿಂದ ಲೋಕವೆಲ್ಲ ಜಿನರಾಜ್ಞೆಯಿಂದ ನಡೆಯುವುದೆಂದು ತಿಳಿಯಿರಿ. ೧೦೧. ಮನೆ ದೇವರು ಉಣ್ಣುವುದಿಲ್ಲವೆಂದು ಮೆಲ್ಲಗೆ ಹೊಲಸನ್ನು ತಿನ್ನುವ ಮನುಷ್ಯರೂ ಹೊಲಸಿನ ಪಾತ್ರೆಯನ್ನು ಹೊರಗೆ ಇರಿಸುತ್ತಾರೆ. ಎಂದರೆ ಜಿನಪತಿಯು ಬೇಡವೆಂಬ ವಸ್ತುವನ್ನು ಮನ್ನಿಸುವವರು ಯಾರು ? ೧೦೨. ಮೊದಲಿಗೆ ಪಾತಕರಾದರೂ ನಿನ್ನಲ್ಲಿಯೇ ಧರ್ಮದ ಹಿರಿಮೆ ನಿನ್ನಲ್ಲಿಯೇ ಧರ್ಮವಿಸ್ತರವಿರುವುದೆಂದರೆ ಸಂತಸಪಡುವರು ಎಂದರೆ ಜಿನರ ಮಾತಿಗೆ ಸೋಲದವರು ಇದ್ದಾರೆಯೆ ? ೧೦೩. ಅನ್ಯರ ಹೆಂಡತಿಗೆ ಆಸೆ ಪಡದಿರುವುದು, ಅನ್ಯರ ದ್ರವ್ಯವನ್ನು ಬಯಸದಿರುವುದು ನಿನಗೆ ಹೆಚ್ಚು ಶೋಭಿಸುವುದೆಂದರೆ ದುಷ್ಟನೂ 'ಸಂತೋಷ'ವೆಂದರೆ, ಪರಮ ಜಿನೇಶ್ವರರ ಮಾತಿಗೆ ಒಲಿಯದವರಿದ್ದಾರೆಯೆ ? ೧೦೪. ಕೊಲೆ, ಅಸತ್ಯ, ಇವನಲ್ಲಿ ನೆಲಸಿವೆಯೆಂದರೆ ಕೊಲ್ಲುವ

ಕೊಲೆಯುಮಸತ್ಯಮಿವನೊಳ್
ನೆಲಸಿದುವೆನೆ ಕೊಲ್ವ ಪುಸಿವ ಕಷ್ಟಂ ಬಡದು
ಮ್ಮಳಿಸಿ ಕಡುನೋವನೆನೆ ಭೂ
ತಳದೊಳ್ ಜಿನರಾಗದೆಂಬುದಂ ಮನ್ನಿಪರಾರ್ ೧೦೫

ಕಳ್ಳನುಮಂ ಪರವನಿತೆಗೆ
ನಲ್ಲನುಮಂ ಕಂಡು ನೀನ ಪಾದರಿಗಂ ನೀಂ
ಕಳ್ಳನೆನೆ ಮುನಿವರೆನೆ ಜಿನ
ವಲ್ಲಭನಾಗೆಂಬುದಕ್ಕೆ ನಲಿವರುಮೊಳರೇ ೧೦೬

ನೆಱೆ ಕಳ್ಗುಡುಹಿಗಳಂ ಕಂ
ಡಱಿಯದೆ ಕಳ್ಗುಡುಹಿಯೆಂದೊಡಾ ನುಡಿಗೆ ಕರಂ
ಮಱುಗುವರೆನೆ ಜಿನರಾಗೆಂ
ಬಱಿಕೆಯ ಕಳ್ಳಿಂಗೆ ಮುನಿಯದಿರ್ಪರುಮೊಳರೇ ೧೦೭

ಗದ್ಯ॥ ಸೊಪ್ಪಾದ ಪೊನ್ನುಮಂ ಕಪ್ಪಾದ ರತ್ನಮುಮಂ ಪೆಸರ್ಪೋದ ಪೆಂಡತಿಯುಮಂ ಮುಕ್ಕುವೋದ ಸುರಗಿಯುಮಂ ತೂತುವೋದ ಮಡಕೆಯುಮಂ ಲೋಕಂ ಕೈಕೊಳ್ಳರೆಂದೊಡೆ ಮೆಯ್ಯೆಲ್ಲಂ ದೋಷಿಯುಪ್ಪ ದೇವನನೇತು ಕೈಕೊಳ್ವರ್, ವ್ಯಸನಿಗಳಪ್ಪರೆ ಕೊಂಡಾಡುವರ್, ಜಗದೊಳ್ ಕೊಲ್ಲದರುಂ ಕೊಲ್ವರುಂ, ಕಳದವರುಂ ಕಳ್ವರುಂ ಪರಸ್ತ್ರೀಗೆಱಗದರುಂ ಪಾದರಿಗರುಂ

ಸುಳ್ಳಾಡುವ ನೀಚತನವನ್ನು ಬಿಡದೆ ಅವನು ದುಃಖಿಸಿ ಬಹಳ ನೊಂದುಕೊಳ್ಳುವನೆಂದರೆ ಲೋಕದಲ್ಲಿ ಜಿನರು ಬೇಡವೆನ್ನುವುದನ್ನು ಮನ್ನಿಸುವವರು ಯಾರು ? ೧೦೫. ಕಳ್ಳನನ್ನು ಪರರ ಹೆಂಡಿರ ಪ್ರೇಮಿಯನ್ನೂ ಕಂಡು 'ನೀನೆ ಹಾದರಿಗ, ನೀನು ಕಳ್ಳ' ಎಂದರೆ ಮುನಿಯುವರು. ಹೀಗೆಂಬಾಗ ಜಿನವಲ್ಲಭನು 'ಆಗದು' ಎನ್ನುವುದಕ್ಕೆ ಒಲಿಯುವವರೂ ಇದ್ದಾರೆಯೆ ? ೧೦೬. ಹೆಚ್ಚಿನ ಹೆಂಡಕುಡುಕರನ್ನು ಕಂಡು ತಿಳಿಯದೆ 'ಹೆಂಡಕುಡುಕ' ಎಂದು ನುಡಿದರೆ ಆ ಮಾತಿಗೆ ಅವನು ಬಹಳ ಸಂಕಟ ಪಡುವನೆಂಬಾಗ ಜಿನರು 'ಆಗದು' ಎಂದು ಹೇಳುವ ಹೆಂಡಕ್ಕೆ ಮುನಿಯದಿರುವವರೂ ಇದ್ದಾರೆಯೆ ? ೧೦೭. ಕಾಂತಿಹೀನವಾದ ಚಿನ್ನವನ್ನೂ ಕಪ್ಪಾದ ರತ್ನವನ್ನೂ ಹೆಸರು ಕೆಟ್ಟ ಹೆಂಡತಿಯನ್ನೂ ಮುಕ್ಕಾದ ಕತ್ತಿಯನ್ನೂ ತೂತು ಬಿದ್ದ ಮಡಕೆಯನ್ನೂ ಲೋಕ ಒಪ್ಪುವುದಿಲ್ಲ. ಮೈಯೆಲ್ಲ ದೋಷಿಯಾದ ದೇವನನ್ನು ಹೇಗೆ ಒಪ್ಪುವರು ? ಕೆಟ್ಟ ಚಟದವರೇ ಹೊಗಳುತ್ತಾರೆ. ಜಗತ್ತಿನಲ್ಲಿ ಕೊಲ್ಲದವರೂ ಕೊಲ್ಲುವವರೂ ಕದಿಯದವರೂ, ಕಳ್ಳರೂ ಪರಸ್ತ್ರೀಗೆ ಸೋಲದವರೂ ಹಾದರಿಗರೂ, ನಿಯಮದಂತೆ ನಡೆಯುವವರೂ ಮೀರಿ ನಡೆಯುವವರೂ

ಮೇರೆಯಿಂ ನಡೆವರುಂ ಮೀಱಿ ನಡೆವರುಂ ಕಳ್ಳಂ ಕುಡಿಯುದರುಂ ಕಳ್ಳಂ ಕುಡಿವವರುಮುಳ್ಳೊಡಂ ಪೊಲ್ಲದಂ ಬಿಟ್ಟು ಜಿನರಾಜ್ಞೆಯಿಂ ನಡೆವ ಮೊದಲವರ್ಗಳುಂ ಪೆಸರ್ಗೊಳ್ವರಪ್ಪುದಱಿಂದ ಮುಂ,ಧಾನ್ಯದೊಳಕ್ಕಿ ಪಾಲೊಳ್ ತನಿವಾಲ್ ತುಪ್ಪದೊಳ್ ಬೆರಸದುದು, ಬಂಟರೊಳ್ ನಿಚ್ಚಟಗಲಿ ತೊಡವಿನೊಳುಜ್ವಳಿಕೆ ಸಿರಿಯೊಳ್ಮಡಿ ಕುಲದೊಳಗ್ಗಳಿಕೆ ರಾಜ್ಯದೊಳಸಹಾಯತನಮುಮುಪ್ಪ ನಿರ್ಗ್ರಂಥಮನೆ ಜನಂ ಬಯಸುವುದಱಿಂದಮುಂ ಲೋಕಮೆಲ್ಲಂ ಜಿನರೋಜೆಯೆ ಜಗಮೆಲ್ಲಂ ಜಿನರ ನಡೆವಳಿಯೆ ಸಕಲಮೆಲ್ಲಂ ಜಿನಪಾಜ್ಞೆಯೆ, ಮತ್ತೊರ್ವರ ಮಹಿಮೆಗೆಡೆಯಿಲ್ಲ! ಬಾೞ್ತೆಯಪ್ಪುವದಱಿಂದಿವೆಲ್ಲಂ ದೈವಮೆಂಬೊಡೆ ಕಾಲ್ಗೆ ಕೆರಪು ಪಸಿವಿಂಗೆ ಕೂೞ್ ತೃಷೆಗೆ ನೀರ್, ತಲೆಗೆಣ್ಣೆ ಬಾಯ್ಗೆಲೆ ಕೆಯ್ಗೆ ಬೇಲಿ ಶಿಶುವಿಂಗೆ ಪಾಲ್,ಪಶುವಿಂಗೆ ಪುಲ್ ಕುದುರೆಗೆ ಖಾಣಂ ಕಱುವಿಂಗೆ ಪಿಟ್ಟು ಮಡಿಗಸಗಂ, ಸೀರೆಗೆ ಪೊಲೆಯುಮಿಂತಿವೆಲ್ಲಂ ದೈವಮಕ್ಕುಂ: ಕೋಪಪ್ರಸಾದಮುಳ್ಳವರೆ ದೈವಮೆಂಬೊಡೆ ಮನ್ನೆಯರುಮರಸರುಂ ತಳಾಱರುಂ ದಂಡಾಧಿಪರುಂ ಪೆರ್ಚಾಳ್ಗಳುಂ ದೈವಮಪ್ಪರ್: ಸಾಮರ್ಥ್ಯಮೆ ದೈವಮೆಂಬೊಡೆ ಸುಣ್ಣದಿಂದರಿಸಿನದಿಂ ಕೆಂಪಪ್ಪುದು,ಎಲೆಯಡಿಕೆ ಸುಣ್ಣದಿಂ ಪಲ್ ಕಱೆಯಪ್ಪುದು, ಅಣಲೆ ತಿಗಡೆಯಿಂ ಬಸಿಱೊಡೆವುದು, ಅಮೇಧ್ಯದಮೇಲುಗುೞೊಡೆ ಗಂಟಲ್ ನೋವುದು, ತ್ರಿಫಲೆಯ ಸೇವೆಯಿಂ ಮಲಶುದ್ಧಿಯಕ್ಕುಂ, ಪುಣಸೆಯುಕೊನರುಮುಪ್ಪುಂ

ಹೆಂಡ ಕುಡಿಯದವರೂ ಕುಡಿಯುವವರೂ ಇದ್ದರೂ, ಕೆಟ್ಟದ್ದನ್ನು ಬಿಟ್ಟು ಜಿನರ ಆಜ್ಞೆಯಿಂದ ನಡೆಯುವ ಮೊದಲಿನವರು ಕೀರ್ತಿಗಳಿಸುವರು. ಆದ್ದರಿಂದ ಧಾನ್ಯಗಳಲ್ಲಿ ಅಕ್ಕಿ ಹಾಲಿನಲ್ಲಿ ತನಿವಾಲು, ತುಪ್ಪದಲ್ಲಿ ಬೆರಕೆಯಿಲ್ಲದುದು, ಭಂಟರಲ್ಲಿ ಶುದ್ಧಕಲಿ ಒಡವೆಯಲ್ಲಿ ಪ್ರಕಾಶ, ಐಶ್ವರ್ಯದಲ್ಲಿ ಹಿರಿಮೆ, ಕುಲದಲ್ಲಿ ಶ್ರೇಷ್ಠತೆ, ರಾಜ್ಯದಲ್ಲಿ ಅಸಹಾಯತನವೂ ಉಳ್ಳ ನಿರ್ಗ್ರಂಥ (ದಿಗಂಬರ ಜೈನಧರ್ಮ) ವನ್ನೇ ಬಯಸುವುದರಿಂದ ಲೋಕವೆಲ್ಲವೂ ಜಿನರ ಕ್ರಮವೇ, ಜಗತ್ತೆಲ್ಲ ಜಿನರ ನಡೆವಳಿಕೆಯೆ, ಸಕಲವೂ ಜಿನೇಶ್ವರರ ಆಜ್ಞೆಯೆ, ಮತ್ತೊಬ್ಬರ ಮಹಿಮೆಗೆ ಅವಕಾಶವಿಲ್ಲ. "ಬೆಲೆ ಬಾಳುವುವಾದ್ದರಿಂದ ಇವೆಲ್ಲ ದೈವವೇ' ಎನ್ನುವುದಾದರೆ ಕಾಲಿಗೆ ಕೆರ, ಹಸಿವಿಗೆ ಅನ್ನ, ದಾಹಕ್ಕೆ ನೀರು, ತಲೆಗೆ ಎಣ್ಣೆ, ಬಾಯಿಗೆ ಎಲೆ, ಗದ್ದೆಗೆ ಬೇಲಿ, ಮಗುವಿಗೆ ಹಾಲು, ದನಕ್ಕೆ ಹುಲ್ಲು, ಕುದುರೆಗೆ ಮೇವು, ಕರುವಿಗೆ ಹಿಟ್ಟು, ಮಡಿಗೆ ಅಗಸ, ಸೀರೆಗೆ ಹೊಲೆಯು. ಇಂತಿವು ಎಲ್ಲವೂ ದೈವವೇ ಆಗುತ್ತವೆ ; ಕೋಪಾನುಗ್ರಹಗಳುಳ್ಳವರೇ ದೈವವೆಂದರೆ, ಪಾಳೆಯಗಾರರು, ರಾಜರು, ತಳವಾರರು, ಸೇನಾಧಿಪರು, ದೊಡ್ಡ ಆಳುಗಳು, ದೈವವಾಗುವರು. ಸಾಮರ್ಥ್ಯವೆ ದೈವವೆನ್ನುವಿರಾದರೆ. ಸುಣ್ಣ ಅರಿಶಿನಗಳಿಂದ ಕೆಂಪು ಆಗುತ್ತದೆ ಎಲೆಯಡಿಕೆಯ ಸುಣ್ಣದಿಂದ ಹಲ್ಲು ಕಪ್ಪಾಗುತ್ತದೆ. ಅಣಲೆ ಮತ್ತು ತಿಗಡೆಗಡ್ಡೆಯಿಂದ ಹೊಟ್ಟೆ ಒಡೆಯುವುದು, ಅಮೇಧ್ಯದಮೇಲೆ ಉಗುಳಿದರೆ ಗಂಟಲು ನೋಯುವುದು, ತ್ರಿಫಲ[1]ದ ಸೇವನೆಯಿಂದ, ಮಲಶುದ್ಧಿಯಾಗುವುದು : ಹುಣಿಸೆಯ ಚಿಗುರೂ ಉಪ್ಪು

1 ಅಳಲೆಕಾಯಿ, ತಾರೆಕಾಯಿ, ನೆಲ್ಲಿಕಾಯಿ – ಈ ಮೂರಕ್ಕೂ ತ್ರಿಫಲವೆಂದು ಹೆಸರು.

ಕಣ್ಬೇನೆಯಂ ಕಳೆವುದು, ಸುಂಟಿಯುಮಮೃತವಳ್ಳಿಯುಂ ಪುಷ್ಕರಮೂಲಮುಂ ಬರಿವದನೆಯುಂ ಜ್ವರದಕೇಡು, ತೊಟ್ಟಿಯೆಲೆಯ ಕಷಾಯಮಜೀರ್ಣಮೆಯುಂ ಕಳೆವುದು, ಅಂತಾದೊಡಿವೆಲ್ಲಂ ದೈವ ಮಕ್ಕುಂ ಎಂಬುದುಂ, ಬಲಿ ಜೀವನಿಲ್ಲೆಂದು ನುಡಿವುದುಂ ಅಕಂಪನಾಚಾರ್ಯರಿಂತೆಂದರ್ ೧೦೮

ಪೆಱಗಣ ಮಾತುಗಳಂ ಮು
ನ್ನಱಿವವರಂ ಮುಂದೆ ಬರ್ಪ ಕಾರ್ಯಮನಿಂತೆಂ
ದಱಿಯದು ಜೀವಂ ಜೀವಂ
ಪಱಿದೊಡೆ ಧಾರಿಣಿಯೊಳಱಿಯಲಾರ್ಕುಂ ದೇಹಂ ? ೧೦೯

ಜಾತಿಸ್ಮರತ್ವದಿಂದಂ
ಭೂತಳದೊಳ್ ತಮ್ಮ ಭವಮನಱಿವರ್ ಕೆಲರುಂ
ಪ್ರೀತಿಯೊಳಸುವಿಲ್ಲದೊಡಂ
ತಾತಂಗಾ ಭವಮನಱಿಯಲೆಂತಾದಪುದೋ ೧೧೦

ಹಮ್ಮಯ್ಸಿ ಕಿಱಿದು ಬೇಟ
ಕ್ಕೊಮ್ಮೆಯೆ ಪೋಪಂದು ಪುಗುವುದಸು ಬೇಗಂ ಜೀ
ವಮ್ಮತ್ತಿಲ್ಲಪ್ಪೊಡೆ ತನು
ವಮ್ಮುದದಿಂದಂ ಬೞಿಕ್ಕೆ ಪುಗದದೇನೋ ೧೧೧

ಕಣ್ಣುರೋಗವನ್ನು ಕಳೆಯುವುದು ; ಶುಂಠಿಯೂ ಅಮೃತಬಳ್ಳಿಯೂ ಪುಷ್ಕರದ ಬೇರೂ ಬರಿವದನೆಯೂ ಜ್ವರಕ್ಕೆ ಹಾನಿ, ತೊಟ್ಟಿಯೆಲೆಯ ಕಷಾಯವು ಅಜೀರ್ಣ ವನ್ನು ಹೋಗಲಾಡಿಸುತ್ತದೆ. ಹಾಗಾದರೆ ಇವೆಲ್ಲವೂ ದೈವವಾಗುವುವು, ಎನ್ನಲು, ಬಲಿಯು ಜೀವಸಿಲ್ಲವೆಂದು ನುಡಿದನು, ಅದಕ್ಕೆ ಅಕಂಪನಾಚಾರ್ಯರು ಹೀಗೆಂದರು: ೧೦೮. ಹಿಂದಿನ ಮಾತುಗಳನ್ನು ಮುನ್ನ ತಿಳಿಯುವವರನ್ನೂ ಮುಂದೆ ಬರುವ ಕೆಲಸವನ್ನು ಹೀಗೆಂದು ಜೀವ ತಿಳಿಯದು. ಜೀವ ಹೋದರೆ ಲೋಕದಲ್ಲಿ ದೇಹವನ್ನು ತಿಳಿಯಬಹುದೆ ? (೧೦೯). ಜನ್ಮಾಂತರ ಸ್ಮರಣೆಯಿಂದ ಲೋಕದಲ್ಲಿ ತಮ್ಮ ಜನ್ಮ ಗಳನ್ನು ತಿಳಿಯುವವರು ಕೆಲವರು. ಪ್ರಾಣವಿಲ್ಲದಿದ್ದರೆ ಆತನಿಗೆ ಆ ಜನ್ಮವನ್ನು ತಿಳಿಯಲು ಹೇಗಾಗುವುದೋ ? ೧೧೦. ಒಂದೇ ಸಲ ಹೋಗುವಾಗ ಪ್ರಾಣ ಬೇಗನೆ ಹೋಗುವುದು. ಮತ್ತೆ ಜೀವವಿಲ್ಲವಾದರೆ, ಚಿಕ್ಕಪ್ರೇಮಕ್ಕೆ ಹಂಬಲಿಸಿ ದೇಹ ವನ್ನು ಮತ್ತೆ ಅದು ಪ್ರವೇಶಿಸುವುದಿಲ್ಲವೇಕೆ ? ೧೧೧. ಹೆಣವನ್ನು ಕಡಿದರೆ ಅಲ್ಲಾ

ಪೆಣನಂ ಕಡಿವೊಡೆ ಮಿಡುಕದೆ
ಪೆಣಯದು ಜೀವಮಿರದೆ ದೇಹಮುಳ್ಳೊಡವುದಿ
ನ್ನಣಕಮುಸುವಿಲ್ಲದೊಡೆ ವಾ
ರುಣಿಯೊಳ್ ಸುಡೆ ಕಲಿಯುಲಿಡುಕದಿರ್ಪುದದೇನೋ ೧೧೨

ಆವಿವರಬ್ಬೆಯೆ ಯುಯ್ಯನೆ
ಯೀವಿಧಿಯಿಂ ಸತ್ತೆವೆಂದು ಪಿಡಿದುಂಬುವು ತ
ದ್ಭಾವದಿನೆನೆ ಭೂತಪಿಶಾ
ಚಾವಳಿಗಳ್ ಮರುಳೆ ಧರೆಯೊಳಸುವಿಲ್ಲೆಂಬಾ ೧೧೩

ಭರದಿಂದಂ ಗ್ರಹವಾದಿ ಬಂದು ನುಡಿಸಲ್ ಕೇಳ್ ತದ್ಗ್ರಹಂ ಬಂದು ನಿ
ಷ್ಠುರನೀತಂ ಕಡುಗೋಪದಿಂ ಮುನಿದು ಮುನ್ನೆನ್ನಂ ಕರಂ ಕಾಡಿದಂ
ಪಿರಿದುಂ ದರ್ಪದಿನೆಂದು ಪೇಳ್ವುದು ಮಹಾಕ್ರೂರಗ್ರಹಂ ಜೀವನು
ರ್ವರೆಯೊಳ್ ತಾನಮಿಲ್ಲದಿರ್ದೊಡದನಿನ್ನೇಕೆಂಬುದಂತಾಗ್ರಹಂ ೧೧೪

ಗದ್ಯ ॥ ಮತ್ತಂ ಮುನ್ನಿನ ಭವದ ಗಂಡನೀಕೆಗೆ ಮಕ್ಕಳಾಗಲೀಯೆನೆಂಬ ಪೂರ್ವಭವದ ಪಗೆವಂ ನಿನ್ನನುಣಲೀಯದೆ ಪಲಕಾಲಂ ಗ್ರಹಮಾಗಿ ಪಿಡಿದಿರ್ದಪನೆಂಬ ನಾಡವರ ನುಡಿಯಿಂದಿವರಿಂತಪ್ಪೆಡೆಯೊಳಿಂತರಾಗಿ ಪುಟ್ಟಿದರೆಂದು ಗ್ರಹವಾದಿಗಳ್ ಪೇಳ್ವ ವ್ಯಂತರನವಚನಂಗಳಿಂ

ಡದು, ಹೆಣೆದುಕೊಳ್ಳುವುದಿಲ್ಲ. ಜೀವವಿಲ್ಲದೆ ದೇಹವಿದ್ದರೆ ಇನ್ನೂ ಅತಿಶಯು ಪ್ರಾಣವಿಲ್ಲದಿದ್ದರೆ (?) ೧೧೨. "ನಾವು ಇವರ ತಾಯಿ, ತಂದೆಯೇ, ಈ ಗತಿಯಿಂದ ಸತ್ತೆವು'. ಎಂದು (ದೆವ್ವವಾಗಿ) ಹಿಡಿದು ಆ ಭಾವದಿಂದ ತಿನ್ನುವುವು. ಎಂದ ಮೇಲೆ ಭೂತ. ಪಿಶಾಚ ಸಮೂಹಗಳು ಲೋಕದಲ್ಲಿ ಇಲ್ಲವೆನ್ನುವೆಯಾ ? ೧೧೩. ಗ್ರಹವಾದಿ ಬಂದು ರಭಸದಿಂದ ಮಾತನಾಡಿಸಿದಾಗ ಆ ಗ್ರಹವು ಬಂದು "ಇವನು ಕ್ರೂರಿ, ಬಹಳ ಕೋಪದಿಂದ ಹಿಂದೆ ನನ್ನನ್ನು ಬಹಳವಾಗಿ ದರ್ಪದಿಂದ ಕಾಡಿಸಿದನು." ಎಂದು ಹೇಳುವುದು, ಲೋಕದಲ್ಲಿ ಜೀವನೇ ಇಲ್ಲವಾದರೆ ಆ ಗ್ರಹ ಹಾಗೇಕೆ ಹೇಳುತ್ತದೆ ? ೧೧೪. ಅಲ್ಲದೆ ಹಿಂದಿನ ಜನ್ಮದ ಗಂಡನು "ಈಕೆಗೆ ಮಕ್ಕಳಾಗಗೊಡೆನು" ಎಂಬ ಪೂರ್ವ ಜನ್ಮದ ವೈರಿಯು "ನಿನ್ನನ್ನು ಊಟ ಮಾಡಗೊಡದೆ ಹಲವು ಕಾಲ ಗ್ರಹವಾಗಿ ಹಿಡಿದಿರುವನು" ಎಂಬ ಜನರ ಮಾತಿನಿಂದ ಇವರು ಇಂಥ ಸ್ಥಳದಲ್ಲಿ ಇಂಥವರಾಗಿ ಹುಟ್ಟಿದರೆಂದು ಗ್ರಹವಾದಿಗಳು ಹೇಳುವ ವ್ಯಂತರನ ಮಾತುಗಳಿಂದ, ಜಾತಕ ಫಲವನ್ನು ನೋಡಿ, ಮತ್ತೆ

ಜಾತಕಫಲವಮಂ ನೋಡಿ ಮತ್ತೀತಂ ಮುನ್ನಿಂತಪ್ಪಾತನೆಂದು ಪೇೞ್ವ ದೈವಜ್ಞರ ಮಾತುಗಳಿಂ, ಕಲೆವೆರಸಿ ಪುಟ್ಟುವ ಮಕ್ಕಳಂ ಕಂಡುಂ, ಜೀವನೊಳವೆಂದಱಿವುದು ; ಕಿಮ್ಮನಾನೆಗಂಡಡಿಯು ನರಸುವ ಮುಂಗೈಯಕಂಕಣಮಂ ಕನ್ನಡಿಯಿಂ ನೋೞ್ಪ ಗಾಂಪರಂತೆ ಗಾವಿಲನಾಗವೇಡೆಂದು ಪಲವು ದೃಷ್ಟಾಂತಗಳಿಂ ಜೀವಸಿದ್ಧಿಯಂ ಮಾೞ್ಪುದುಂ ಬಲಿ ಮತ್ತಿಂತೆಂದಂ ೧೧೫

ಭೂವನಿತೇಶ್ವರನಱಿಯದೆ
ಭಾವಿಸದೆ ತಗುಳ್ದು ನಿನ್ನನತ್ಯಾದರದಿಂ
ದೇವನೆ ದಿಂಡನೆಯೆಂದೊಡೆ
ದೇವಂ ನೀನೆಂತದೆಂತು ದೊಡ್ಡಿದನಪ್ಪೈ ೧೧೬

ಗದ್ಯ ॥ ಪಲವು ಮಾತಂ ಪೆರ್ಚುವೆರ್ಚೆ ಗಟಪದೆ ಜೀವನುಂಟಕ್ಕುಮಪ್ಪೊಡೆ ನಿನ್ನದೇಹದಿಂ ಪೊಱಮಡಿಸಿ ಬೇಗವಿೂ ನೆರೆವಿಗಮರಸಂಗಂ ತೋಱು ಬಱಿದೆ ಮಾತಂ ಬಲ್ಲೆನೆಂದು ನುಡಿಯ ಲ್ವೇಡೆಂಬುದುಮಕಂಪನಾಚಾರ್ಯರಿಂತೆಂದರ್ ೧೧೭

ಮರುಳೆ ಮರುಳ್ತನದಿಂದು
ರ್ವರೀಶನಾಸ್ಥಾನರಂಗದೊಳ್ ನೀಂ ಪಿತ್ತ
ಜ್ವರಮಾದರಂತೆ ಗಟಪುವ
ಸಿರಿಸಿಲ್ಲದೆ ನುಡಿವ ಬಡತನಂ ಚದುರಿಕೆಯೇ ೧೧೮

ಈತನು ಹಿಂದೆ ಇಂಥವನೆಂದು ಹೇಳುವ ದೈವಜ್ಞರ ಮಾತುಗಳಿಂದಲೂ, ಕಲೆಗಳೊಡನೆ ಹುಟ್ಟುವ ಮಕ್ಕಳನ್ನು ಕಂಡೂ, ಜೀವನು ಇದ್ದಾನೆಂದು ತಿಳಿಯತಕ್ಕದ್ದು. ಸುಮ್ಮನೆ ಆನೆಯನ್ನು ಕಂಡು ಪಾದವನ್ನು ಹುಡುಕುವ. ಮುಂಗೈಯಲ್ಲಿನ ಕಂಕಣವನ್ನು ಕನ್ನಡಿ ಯಿಂದ ನೋಡುವ, ದಡ್ಡರಂತೆ ಮಂಕನಾಗಬೇಡವೆಂದು ಹಲವು ದೃಷ್ಟಾಂತಗಳಿಂದ ಜೀವ ಸಿದ್ಧಿಯನ್ನು ಮಾಡಲು ಬಲಿಯು ಪುನಃ ಹೀಗೆಂದನು. ೧೧೫. "ರಾಜನು ತಿಳಿಯದೆ, ಯೋಚಿಸದೆ, ಪ್ರೀತಿಯಿಂದ ನಿನ್ನನ್ನು ಬಹಳ ಆದರದಿಂದ 'ದೇವರೇ ದಿಂಡನೇ' ಎಂದ ಮಾತ್ರದಿಂದ ನೀನು ದೇವರು ಹೇಗಾಗುವೆ ? ದೊಡ್ಡವನು ಹೇಗಾಗುವೆ ? ೧೧೬. ಹಲವು ಮಾತುಗಳನ್ನು ಹೆಚ್ಚಿನ ಗರ್ವದಿಂದ ಹರಟದೆ ಜೀವನಿರುವುದು ನಿಜ ವಾದರೆ ನಿನ್ನ ದೇಹದಿಂದ ಅದನ್ನು ಹೊರಡಿಸಿ ಬೇಗನೆ ಇಲ್ಲಿ ಸೇರಿದ ಸಭೆಗೂ ಅರಸ ನಿಗೂ ತೋರಿಸು, ಮಾತು ಬಲ್ಲೆನೆಂದು ಸುಮ್ಮನೆ ಹರಟಬೇಡ" ಎನ್ನಲಾಗಿ ಅಕಂಪ ನಾಚಾರ್ಯರು ಹೀಗೆಂದರು : ೧೧೭. ದಡ್ಡ, ದಡ್ಡತನದಿಂದ ರಾಜನ ಆಸ್ಥಾನ ರಂಗದಲ್ಲಿ ನೀನು ಪಿತ್ತಜ್ವರ ಬಂದವನ ಹಾಗೆ ತಲೆಯಿಲ್ಲದೆ ಮಾತನಾಡುವ ಬಡತನವೊಂದು ಚಾತುರ್ಯವೇ ? ೧೧೮, ಸೊಗಸಾದ ಪಳಾಗಿಯಕಾಲದಲ್ಲಿ;

ಸೊಗಯಿಪ ಮಾಗಿಯೊಳಂ ಬೇ
ಸಗೆಗಾಲಮನಣ್ಣ ತೋಱಲಕ್ಕುಮೆ ಪೇೞ್ಬೀ
ಸಗೆಯೊಳ್ ಮೞೆಗಾಲಮನೀಂ
ಬಗೆದಂತಿರೆ ಪೇೞ ತೋಱಲಕ್ಕುಮೆ ಬೇಗಂ ೧೧೯

ಗದ್ಯ॥ ಅದು ಕಾರಣದಿಂ ನೀಂ ನುಡಿಯಲಱಿಯದಂಕಱಿನಾಕಾಶಮಂ ನೋಡಿದನೆಂಬಂತೆ, ಎಮ್ಮ ನುಡಿಗುತ್ತರಮಂ ಕಾಣದೇನಾನುಮೆಕ್ಕಸಕ್ಕಂ ಗೞಪಿದೆಯೊಡೊಡಮೇಂ ಪಾಲೊಳಗೆ ತುಪ್ಪಮುಂಟೆಂಬುದುಮಂ ಮರದೊಳಗೆ ಕಿರ್ಚುಂಟೆಂಬುದುಮನೆಲ್ಲರುಂ ಬಲ್ಲನಿತರೊಳೆ ಬೞಿ ದಪ್ಪರದಕ್ಕೆ ತಕ್ಕ ಕ್ರಿಯೆಯಂ ಮಾಡದೊರ್ಮೆಯೆ ಗಮ್ಮನೆ ತೋಱಬಾರದು; ಕ್ರಮದಿಂ ಪಾಲಂ ಕಾಸಿ ಹೆಪ್ಪನಿಟ್ಟು ಕಡೆದು ಬೆಣ್ಣೆಗೊಂಡು ಪದನಱಿದು ಕಾಸಿದಾಗಳ್ ತುಪ್ಪಮಕ್ಕುಂ; ಮರನು ಮನೋಜಾಯಿಲನಾಗಿ ಪೊಸೆಯೆ ಕಿರ್ಚಕ್ಕುಂ ಎಳ್ಳಂ ಗಾಣದೊಳಿಕ್ಕಿ ಪಿೞಿಯೆ ಬೞಿಕ್ಕೆಣ್ಣೆಯಕ್ಕುಂ ಅಂತೆ ಕರ್ಮವಶದಿಂ ಶರೀರಿಯಪ್ಪ ಜೀವಮನೊರ್ಮೆಯೆ ನಿನಗೆ ತೋಱಲ್ಬಾರದು; ದಾನಾದಿ ಧರ್ಮದೊಳ್ ಕೂಡಿ ಏಕಾದಶ ನೆಲೆಯೊಳ್ ಕೂಡಿದ ಧರ್ಮದೊಳಕ್ಕೆ, ದಶಧರ್ಮದೊಳ್ ಕೂಡಿದನಗಾರ ಧರ್ಮದೊಳಕ್ಕೆ ನೆಗೞ್ದು ಪಾಪಾಂಕುರಂಗಳಂ ಕಿೞ್ತೊಟ್ಟಿ ಮೆಲ್ಲನೆ ಸ್ವಸ್ವರೂಪ ನಾಗಿ ಶಾಶ್ವತಸುಖದೊಳ್ ಕೂಡಿದಂದು ಬೇಱಕ್ಕುಮಲ್ಲದಂದು ಮನೆಯ ಬಡತನಕ್ಕೆ ಪೊಡೆಯಂ

ಅಣ್ಣ ! ಬೇಸಗೆ ಕಾಲವನ್ನು ತೋರಿಸಲು ಸಾಧ್ಯವೆ ? ಹೇಳು, ಬೇಸಗೆಯಲ್ಲಿ ಮಳೆಗಾಲ ವನ್ನು ನೀನು ಯೋಚಿಸಿದ ಹಾಗೆ ಬೇಗ ತೋರಿಸಲಾಗುವುದೆ ? ಹೇಳು. ೧೧೯. ಅದ ಕಾರಣ. ನೀನು ಮಾತನಾಡಲು ತಿಳಿಯದೆ, ಜಟ್ಟಿ ಆಕಾಶವನ್ನು ನೋಡಿದನೆಂಬ ಹಾಗೆ, ನಮ್ಮ ಮಾತಿಗೆ ಉತ್ತರವನ್ನು ಕಾಣದೆ ಏನಾದರೂ ಕುಚೋದ್ಯದ ಮಾತನ್ನು ಆಡಿದರೆ ಏನುಫಲ? ಹಾಲಿನಲ್ಲಿ ತುಪ್ಪವಿದೆಯೆಂಬುದನ್ನೂ ಮರದೊಳಗೆ ಬೆಂಕಿಯುಂಟೆಂಬುದನ್ನೂ ಎಲ್ಲರೂ ತಿಳಿದಷ್ಟರಲ್ಲಿಯೇ ಸುಮ್ಮನಾಗುವರು. ಅದಕ್ಕೆ ತಕ್ಕ ಕ್ರಿಯೆಯನ್ನು ಮಾಡದೆ ತಟ್ಟನೆ ಒಂದೇ ಸಲ ತೋರಿಸಲು ಬರುವುದಿಲ್ಲ, ಕ್ರಮವಾಗಿ ಹಾಲನ್ನು ಕಾಸಿ ಹೆಪ್ಪನಿಟ್ಟು, ಕಡೆದು, ಬೆಣ್ಣೆಯನ್ನು ತೆಗೆದುಕೊಂಡು ಹದವರಿತು ಕಾಸಿದಾಗ ತುಪ್ಪವಾಗುವುದು ; ಮರವನ್ನೂ ಬಡಗಿಯಾಗಿ – ಹೊಸೆದರೆ ಬೆಂಕಿ ಹುಟ್ಟುತ್ತದೆ; ಎಳ್ಳನ್ನು ಗಾಣಕ್ಕೆ ಹಾಕಿ ಹಿಂಡಿದರೆ ಬಳಿಕ ಎಣ್ಣೆಯಾಗುತ್ತದೆ, ಹಾಗೆಯೇ ಕರ್ಮವಶ ದಿಂದ ಶರೀರ ಧರಿಸಿದ ಜೀವವನ್ನು ತಟ್ಟನೆ ನಿನಗೆ ತೋರಿಸಲಾಗದು, ದಾನಾದಿ ಧರ್ಮ ಗಳಲ್ಲಿ ಕೂಡಿ ಹನ್ನೊಂದು ನೆಲೆಗಳಲ್ಲಿ ಸೇರಿದ ಧರ್ಮದಲ್ಲಾಗಲಿ ದಶಧರ್ಮದಲ್ಲಿ ಸೇರಿದ ಅನಾಗಾರಧರ್ಮದಲ್ಲಿಯಾಗಲಿ ಆಚರಿಸಿ ಪಾಪದ ಮೊಳಕೆಗಳನ್ನು ಕಿತ್ತು ಒಟ್ಟಿ ಮೆಲ್ಲನೆ ಸ್ವರೂಪ ಹೊಂದಿ ಶಾಶ್ವತ ಸುಖದಲ್ಲಿ ಸೇರಿದಾಗ ಬೇರೆಯಾಗುವುದು. ಅಲ್ಲದಿದ್ದರೆ

ಕೊಯ್ದುರೆಂಬಂತೆ ಮಾಡಿದೊಡೆ ನಿನಗೆ ಕರ್ಮಬಂಧಮಪ್ಪ ಜೀವಮನೇಂತು ಬೇರ್ಕೆಯ್ದು ತೋಱ ಲ್ಬಪ್ಪುದು ೧೨೦

ಸೊರೆಯೊಳಗೆ ತೀವಿ ಮಣ್ಣಂ
ಸರದಿಯೊಳಿಕ್ಕಿದೊಡೆ ನೆಗೆಯಲಾರ್ಪುದೆ ಪಾಪೋ
ತ್ಕರದೊಳ್ ಬೆರೆಸಿದ ಜೀವೋ
ತ್ಕರಮುಂ ನಿರ್ವೃತಿಗೆ ನೆಗೆಯಲಾರ್ಕುಮೆ ಬೇಗಂ ೧೨೧

ತಾರಗೆ ಪಗಲೊಳ್ ಪದುಮಾ
ಕಾರಂ ಮೇಲ್ಕವಿದ ಮುಗಿಲ ಮಱೆಯೊಳ್ ತಮ್ಮಾ
ಕಾರಂಗೆಟ್ಟಿರ್ಪವೊಲಘ
ಭಾರದಿನಂತಿಂತು ಮಿಡುಕಲಾಱವು ಜೀವಂ ೧೨೨

ಜಾಂಡಲಕೆಯ ಬೀಜಂ ಭೂ
ಮಂಡಲದೊಳ್ ಪಸುರಡಂಗಿ ಪಾಱುವ ತೆಱದಿಂ
ಖಂಡಿಸೆ ಪಾಪಸಮೂಹಂ
ಮಂಡಿತ ಮೋಕ್ಷಕ್ಕೆ ಸಾರ್ಗುಮಸುಗಿದು ಸಹಜಂ ೧೨೩

ಗದ್ಯ॥ ಎಂದಿಂತು ದೃಷ್ಟ ಶ್ರುತಾನುಭೂತಂಗಳಿಂದಱಿವುದೆಂದು ಸರ್ವಜ್ಞನುಮಂ ನಿರ್ಗ್ರಂಥ ಮಪ್ಪ ತಪಮುಮಂ ಮೊಱೆಯುಮಂ ಜೀವಮುಮನುಂಟೆಂಬುದುಂ ೧೨೪

ಮನೆಯ ಬಡತನಕ್ಕೆ ಹೊಟ್ಟೆಯನ್ನು ಕೊಯ್ದುರೆಂಬ ಹಾಗೆ ಮಾಡಿದರೆ ನಿನಗೆ ಕರ್ಮಬಂಧ ವಾದ ಜೀವವನ್ನು ಬೇರೆ ಮಾಡಿ ಹೇಗೆ ತೋರಿಸಬಹುದು ? ೧೨೦. ಸೋರೆಯೊಳಕ್ಕೆ ಮಣ್ಣನ್ನು ತುಂಬಿ ಸರದಿಯೊಳಗೆ ಇಕ್ಕಿದರೆ ಅದು ಹಾರಬಲ್ಲುದೆ ? ಪಾಪದ ಹೆಚ್ಚಳ ದಲ್ಲಿ ಸೇರಿದ ಜೀವವೂ ಮೋಕ್ಷಕ್ಕೆ ಬೇಗನೆ ನೆಗೆಯಲು ಸಾಧ್ಯವೆ ? ೧೨೧. ನಕ್ಷತ್ರ ಹಗಲು ಪದ್ಮಾಕಾರ ಮೇಲೆ ಕವಿದ ಮೋಡದ ಮರೆಯಲ್ಲಿ ತಮ್ಮ ಆಕಾರವನ್ನು ಕಳೆದು ಕೊಂಡಿರುವ ಹಾಗೆ ಪಾಪದ ಭಾರದಿಂದ ಜೀವಗಳು ಹಾಗೆ, ಹೀಗೆ,ಅಲ್ಲಾಡಲಾರವು ೧೨೨. ಜಾಂಡಲಿಕೆಯೆಬ ಸಸ್ಯದ ಬೀಜವು ಭೂಮಂಡಲದಲ್ಲಿ ಹಸುರು ಬಣ್ಣ ಅಡಗಿ ಹಾರುವ ಹಾಗೆ, ಪಾಪಸಮೂಹವನ್ನು ಖಂಡಿಸಿದರೆ ಮೋಕ್ಷಕ್ಕೆ ಸೇರುವುದು. ಪ್ರಾಣಕ್ಕೆ ಇದು ಸಹಜ. ೧೨೩. ಎಂದು ಹೀಗೆ ಕಂಡ, ಕೇಳಿದ, ಅನುಭವಗಳಿಂದ ತಿಳಿಯುವುದೆಂದು ಸರ್ವಜ್ಞನನ್ನೂ ನಿರ್ಗ್ರಂಥವಾದ ತಪಸ್ಸನ್ನೂ ನೀತಿಯನ್ನೂ ಜೀವವುಂಟೆಂಬುದನ್ನೂ ಸ್ಥಾಪಿಸಿದರೂ. ೧೨೪, ಹಲವು ಹೊಗಳಿಕೆಗಳಿಂದ ರಾಜನೊಡಗೂಡಿ ಸಭೆಯ ಜನರೆ

ಪಲವು ಪೊಗೞ್ತೆಗಳಿಂ ಭೂ
ತಲನಾಥಂ ಬೆರಸು ಸಭೆಯ ಜನಮೆಲ್ಲಂ ಕೈ
ಕೊಳಲಧಿಕ ವಚನ ರಚನೆಗೆ
ನೆಲೆಯಾದಂ ಸುಕವಿನಿಕರಪಿಕಮಾಕಂದಂ ೧೨೫

ಅಱಿವವರುಂ ಮತ್ತೇನೆಂ
ದಱಿಯದವರುಂ ತಿಳಿಯೆ ನುಡಿದನಮೃತದ ಮೞೆಗಳ್
ಕಱೆವಂತೆ ನಚ್ಚಿ ಪಲವುಂ
ತೆಱದಿಂದಂ ಸುಕವಿನಿಕರಪಿಕಮಾಕಂದಂ ೧೨೬

ಗದ್ಯ॥ ಎಂದು ಜಯವರ್ಮ ಮಹಾರಾಜಂ ಜಿನ ಶ್ರೀಚರಣಾಳಂಕಾರ ಶೀರ್ಷನ ವಾಗ್ಮಿತ್ವಕ್ಕಂ ಭಾವಯುತ ದಿಗಂಬರದಾಸನ ಜಿನಾಗಮಪರಿಣತಿಗಂ ಸುಕವಿಜನಮನಃಪದ್ಮಿನೀರಾಜಹಂಸನ ಕೊಂಕಿಲ್ಲದ ಜಿನಭಕ್ತಿಗಂ ಸಹಜಕವಿಜನಮನಃಪಯೋಧಿಹಿಮಕರನ ಕುಡುವುತ್ತರಕ್ಕಂ ಮುಯ್ಮ್ಮದವಾಗೆ ಕಾಲಮೇಲೆ ಬಿದ್ದು ಮತ್ತೆ ಕಾಲಂ ತಲೆಯ ಮೇಲಿಟ್ಟುಕೊಂಡು ಜೀಯ ಬಾಪೆಂದು ಮತ್ತೆ ಪೊಗೞ್ದು, ನುಡಿದು ಗೆಲ್ವುದು. ತೊಱೆಯನೀಸಾಡಲಾಱದ ನಿಶ್ಯಕ್ತವ ಕಾಲಂ ಪಿಡಿದಂತಾಗೆ ಕಾಳಗದೊಳ್ಸೋಲ್ತು ಪಂದೆ ಪೆಱಗೆ ಲಜ್ಜಿಸಿ ಕೆಱೆಯಂ ಪಾಯ್ದನೆಂಬಂತೆ ಬಲಿ ಜಯವರ್ಮ ಮಹಾರಾಯನ ಮೊಗಮಂ ನೋಡಲ್ ಲಜ್ಜಿಸಿ ತನ್ನ ಸೋಲ್ತುದಕ್ಕೆ ಲಜ್ಜಿಸಿ-ಮೆಯ್ಮಱೆಯದೆ ಮುನಿಸರೋಜಿನೀರಾಜರಾಜಹಂಸನನಿಂತೆಂದಂ ೧೨೭

ಲ್ಲರೂ ಹೊಗಳಲು ಸುಕವಿನಿಕರಪಿತಮಾಕಂದನು ಹೆಚ್ಚಿನ ವಚನಗಳನ್ನು ರಚಿಸಲು ನೆಲೆಯಾದನು. ೧೨೫.ಅಮೃತದ ಮಳೆಗಳು ಸುರಿಯುವಂತೆ ಹಲವು ಬಗೆಯಾಗಿ ಸುಕವಿನಿಕರಪಿಕಮಾಕಂದನು ತಿಳಿದವರೂ ಬೇರೆ ಏನೆಂದು ತಿಳಿಯದವರೂ ತಿಳಿಯುವಂತೆ ಹೇಳಿದನು. ೧೨೬. ಹೀಗೆಂದು ಜಯವರ್ಮ ಮಹಾರಾಜನು ಜಿನನ ಶ್ರೀಚರಣಗಳಲ್ಲಿ ತಲೆಬಾಗಿಸಿದ ಋಷಿಯರ ವಾಗ್ಮಿತೆಗೂ ಭಾವಯುತವಾದ ದಿಗಂಬರದಾಸನ ಜಿನಾಗಮ ಪಾಂಡಿತ್ಯಕ್ಕೂ ಸುಕವಿಜನಮನಃಪದ್ಮಿನೀರಾಜಹಂಸನ ಲೋಪವಿಲ್ಲದ ಜಿನಭಕ್ತಿಗೂ ಸಹಜಕವಿಜನಮನಃಪಯೋಧಿಹಿಮಕರನು ಕೊಡುವ ಉತ್ತರಗಳಿಗೂ (ಅತಿಶಯವಾದ) ಮೂರರಷ್ಟು ಸಂತೋಷವಾಗಲು, ಅವರ ಕಾಲಿಗೆ ಬಿದ್ದು ಪುನಃ ಕಾಲನ್ನು ತನ್ನ ತಲೆಯ ಮೇಲಿಟ್ಟುಕೊಂಡು 'ಜೀಯ, ಭಾಪು' ಎಂದು ಪುನಃ ಹೊಗಳಿದನು. ಮಾತನಾಡಿ ಗೆಲ್ಲುವುದು ಹೊಳೆಯನ್ನು ಈಜಲಾರದ ನಿಶ್ಯಕ್ತನ ಕಾಲನ್ನು ಹಿಡಿದ ಹಾಗಾಗಲು, ಯುದ್ಧದಲ್ಲಿ ಸೋತ ಹೇಡಿಯು ಹಿಂದೆ ನಾಚಿಕೆಪಟ್ಟು ಕೆರೆಗೆ ಹಾರಿದನೆಂಬಂತೆ ಬಲಿಯು ಜಯವರ್ಮ ಮಹಾರಾಜನ ಮುಖವನ್ನು ನೋಡಲು ನಾಚಿಕೆಪಟ್ಟುಕೊಂಡು ತಾನು ಸೋತುದಕ್ಕೆ ಅಪಮಾನಪಟ್ಟು ಪರವಶನಾಗಿ ಮುನಿಸರೋಜಿನೀರಾಜಹಂಸನನ್ನು ಕುರಿತು ಹೀಗೆ ಹೇಳಿದನು : ೧೨೭, ಹೀಗಲ್ಲದೆ ಬೇರೆಯವರು ಬಂದು ಬಹಳ ಭಕ್ತಿಯಿಂದ ನನಗೆ ವಂದಿಸುವು

ಪೆಱರಿಂತಲ್ಲದೆ ಬಿಂದೆನ
ಗೆಱಗರ್ ಕಡುಭಕ್ತಿಯಿಂದವೆಂದುಕ್ಕೆವದಿಂ
ಬಱಿದೇಂ ಮಾಣಿಸಿ ನೀನೊಳ
ಗಱಿಯದರಂ ವಚನರಚನೆಯಿಂ ಸೋಲಿಸುವೈ ೧೨೮

ಮಾಯೆ ತಪಮುಂ ಪೊಣರ್ಚಿಯೆ
ಗಾಯದಿನುಣಲೆಂದು ವಶ್ಯಮಂತ್ರಂಗಳನ
ನ್ಯಾಯಪರನಾಗಿ ಸಾಧಿಸಿ
ಮಾಯಾವಿ ಧರಿತ್ರಿಯಂ ಮರುಳ್ಮಾಡಿದಪೈ ೧೨೯

ಗದ್ಯ॥ ಪಲವು ಮದ್ದುಗಳಿಂ ಮುಖವಶ್ಯಮಂ ಮಾಡಿಕೊಂಡು ಜನವಶ್ಯ ರಾಜವಶ್ಯಮಂತ್ರಂಗಳನುಣ್ಣದಟಱದು ಕುದಿದು ಮಱುಗಿ ಸಾಧಿಸಿ ತನ್ಮಂತ್ರಬಲದಿಂದೆನ್ನ ನಾಲಗೆಯಂ ಸ್ತಂಭಿಸಿ ಗೆಲ್ವೆಯಂತಲ್ಲದೆನ್ನಂ ಗೆಲಲ್ ನಿನ್ನಳವಲ್ಲದೆಂದು ಮುನಿಸಿಂ ಕಣ್ಗಾಣದೆ ಬಾಯ್ಗೆವಂದಂತೆ ನುಡಿವುದಂ ನೆರೆದ ನೆರವಿಯೆಲ್ಲಮಿಂತೆಂದರ್ ೧೩೦

ಜಯವರ್ಮ ಮಹಾರಾಜಂ
ನಯದೆ ಮುನೀಶ್ವರನೊಳೊದವಿ ನುಡಿದಾಂ ಗೆಲ್ವೆಂ
ನಯದಿಂದಮೆಂದು ಬಂದಂ
ಭಯದಿಂದುಳ್ಳಳ್ಕಿ ನುಡಿಯಲಾಱದೆ ಕಷ್ಟಂ ೨೩೧

ದಿಲ್ಲವೆಂದು ಮೋಸದಿಂದ ರಹಸ್ಯವನ್ನು ತಿಳಿಯದವರನ್ನು ನಿನ್ನ ಮಾತಿನ ಜೋಡಣೆಯಿಂದ ಸೋಲಿಸುತ್ತೀಯೆ. ೧೨೮. ಮಾಯಾ ತಪಸ್ಸನ್ನು ಕೂಡಿಸಿಯೇ ಹಾನಿಯಿಂದ ಲಾಭ ಹೊಂದಲೆಂದು ವಶ್ಯಮಂತ್ರಗಳನ್ನು ಅನ್ಯಾಯಾಸಕ್ತನಾಗಿ ಸಾಧಿಸಿ ಎಲವೋ ಮಾಯಾವಿ ! ಜಗತ್ತನ್ನು ಮರುಳು ಮಾಡುವೆ. ೧೨೯. ಹಲವು ಮದ್ದುಗಳಿಂದ ಮುಖವಶ್ಯವನ್ನು ಮಾಡಿಕೊಂಡು ಜನವಶ್ಯ ರಾಜವಶ್ಯ ಮಂತ್ರಗಳನ್ನು, ಉಪವಾಸದಿಂದ ಶಕ್ತಿಗುಂದಿ ಕುದಿದು ಸಾಧಿಸಿ, ಆ ಮಂತ್ರದ ಬಲದಿಂದ ನನ್ನ ನಾಲಗೆಯನ್ನು ಸ್ತಬ್ಧಗೊಳಿಸಿ ಗೆಲ್ಲುವೆ. ಹಾಗಲ್ಲದೆ ನನ್ನನ್ನು ನ್ಯಾಯವಾಗಿ ಗೆಲ್ಲಲು ನಿನಗೆ ಶಕ್ಯವಲ್ಲ" ಎಂದು ಸಿಟ್ಟಿನಿಂದ ಕಣ್ಗಾಣದೆ, ಬಾಯಿಗೆ ಬಂದಂತೆ ನುಡಿಯುತ್ತಲೂ ಸೇರಿದ್ದ ಸಮೂಹವೆಲ್ಲ ಹೀಗೆಂದರು : ೧೩೦. ಜಯವರ್ಮ ಮಹಾರಾಜನ ಒಳ್ಳೆಯತನದಿಂದ ಮುನೀಶ್ವರನೊಡನೆ ಹೆಚ್ಚು ಮಾತನಾಡಿ ನಾನು ಗೆಲ್ಲುವೆನೆಂದು ಬಂದನು. ಈಗ ಈ ನೀಚನು ಭಯದಿಂದ ಮನಸ್ಸಿನಲ್ಲಿ ಅಳುಕಿ ನುಡಿಯಲಾರದೆ ಹೋದನು. ೧೩೧. ಮಾತನಾಡಲಂ

ಗದ್ಯ॥ ಮಾತನಱಿಯದ ಸೂಳೆ ಕುಂಟಣಿಯಂ ಬೈದಳೆಂಬ ನಾಣ್ಣುಡಿಯಂತೆ ಪರಮಾವಧಿ ಲೋಚನನಪ್ಪ ಮಹಾತ್ಮನ ವಚನಕ್ಕುತ್ತರಮಂ ಕುಡಲಾಜಿದೆ ಬಾಯ್ಗೆವಂದಂತೆ ನುಡಿದಪನತಿ ಧೂರ್ತನೆಂದು ಕಂಡರೆಲ್ಲಂ ಜಱೆಯೆ ಜಯವರ್ಮ ಮಹಾರಾಜಂ ಬಲಿಯ ಮಾತಿಂಗೆ ಮುನಿದು ಸಭಾಸದರ್ಗಿಂತೆಂದಂ: ಕರಗಸದ ಬರವುಂ ಪೋಗುಂ ಕಿಚ್ಚಿನುರಿಯುಂ ಪೊಗೆಯುಂ ದುಷ್ಪಾಶ್ವದ ಮುಂತುಂ ಪಿಂತುಂ ಬೆಟ್ಟಮನೇಱುವುದುಮಿೞಿವುದುಂ ಪುಲಿಯ ಕೂರ್ಮೆಯುಂ ಪಗೆಯುಂ ಸುರಿಗಿಯ ಮೊನೆಯುಂ ಬಾಯ್ಧಾರೆಯುಂ ವಿಷದ ಕಯ್ಪುಯುಂ ಸೀಪುಂ ಮೂರ್ಖನ ನಗೆಯುಂ ಮುನಿಸುಂ ಪೇಲ ನುಣ್ಪುಂ ಪೆಂಪುಂ ಕಯ್ಪುಸೋರೆಯ ಮಿಡಿಯುಂ ಕುಡಿಯುಂ ನಾಯ್ವೇಳದ ಕಾಯುಂ ಪಣ್ಣುಂ ಲೋಭಿಯ ಮನಮುಂ ಧನಮುಂ ಕಳ್ಳನ ಚೆನ್ನುಂ ಪೊನ್ನುಂ ಭಯದ ಬಟ್ಟೆಯ ನೀರುಂ ನೆಳಲುಂ ಪೊಲೆಯರ ಮನೆಯ ಕೂಟುಂ ಬಾಡುಂ ಬೆಸನಿಯ ನುಡಿಯುಂ ನಡೆಯುಂ ಪೊಲ್ಲೆಂತಂತೆ ಮಿಥ್ಯಾದೃಷ್ಟಿಯ ನೆಗಟ್ತೆಯುಮೊಂದು ಪೊಲ್ಲೆಂದು ಮುನಿದು ಬಲಿಯನಿಂತೆಂದಂ ೧೩೨

ಪಿರಿಯರಿವರ್ ಸರ್ವಜ್ಞರ  
ದೊರೆಯೆನ್ನದೆ ಸೊರ್ಕಿ ಮೂರ್ಖತನದಿಂ ಕಾಣಂ  
ಹೊರಸೇಱಿದಂತೆ ನುಡಿವೈ  
ಮರುಳಿಂ ಪೆಱರೊಳದೆ ಲೋಕದೊಳ್ ನಿನ್ನಿಂದಂ ೧೩೩

ತಿಳಿಯದ ಸೂಳೆ ಕುಂಟಣಿಯನ್ನು ಬೈದಳೆನ್ನುವಂತೆ ಪರಮಾವಧಿ ಜ್ಞಾನಿಯಾದ ಮಹಾತ್ಮನ ಮಾತಿಗೆ ಉತ್ತರವನ್ನು ಕೊಡಲಾರದೆ ಬಾಯಿಗೆ ಬಂದಂತೆ ನುಡಿಯುತ್ತಾನೆ. ಇವನು ಬಹಳ ಧೂರ್ತ, ಎಂದು ಕಂಡವರೆಲ್ಲರೂ ಬೈಯಲು, ಜಯವರ್ಮ ಮಹಾರಾಜನು ಬಲಿಯ ಮಾತಿಗೆ ಮುನಿಸಿಕೊಂಡು ಸಭಾಸದರಿಗೆ ಹೀಗೆಂದನು : ಗರಗಸದ ಬರುವಿಕೆ, ಹೋಗುವಿಕೆ, ಜ್ವಾಲೆಯ ಉರಿಯೂ ಹೊಗೆಯೂ, ಕೆಟ್ಟ ಕುದುರೆಯ ಮುಂದೆಯೂ ಹಿಂದೆಯೂ ಬೆಟ್ಟವನ್ನು ಹತ್ತುವುದೂ ಇಳಿಯುವುದೂ ಹುಲಿಯ ಸ್ನೇಹವೂ ದ್ವೇಷವೂ ಕತ್ತಿಯ ಮೊನೆಯೂ ಅಲಗಿನ ಧಾರೆಯೂ, ವಿಷದ ಕಹಿಯೂ, ಸಿಹಿಯೂ; ಮೂರ್ಖನ ನಗೆಯೂ ಮುನಿಸೂ, ಹೇಲಿನ ನುಣುಪೂ ಪೆಂಪೂ, ಕಹಿ ಸೋರೆಯ ಮಿಡಿಯೂ ಕುಡಿಯೂ (ಕಾಯಿಯೂ ಚಿಗುರೂ) ನಾಯಿಬೇಲದ ಕಾಯಿ ಹಣ್ಣು, ಲೋಭಿಯ ಮನಸ್ಸೂ ಧನವೂ, ಕಳ್ಳನ ಅಂದವೂ ಹೊನ್ನೂ, ಭಯದ ದಾರಿಯ ನೀರೂ ನೆರಳೂ, ಹೊಲೆಯರ ಮನೆಯ ಅನ್ನವೂ ವ್ಯಂಜನವೂ ಲಂಪಟನ ಮಾತೂ ನಡತೆಯೂ ಹೊಲ್ಲ (ಕೆಟ್ಟದ್ದು) ಹೇಗೋ, ಹಾಗೆಯೇ ಮಿಥ್ಯಾದೃಷ್ಟಿಯ ಕೆಲಸವೂ ಒಂದು ಹೊಲ್ಲ ಎಂದು ಸಿಟ್ಟುಗೊಂಡು ಬಲಿಯನ್ನು ಕುರಿತು ಹೀಗೆಂದನು : ೧೩೨. ಇವರು ಹಿರಿಯರು, ಸರ್ವಜ್ಞರ ಸಮಾನ, ಎಂದೆನ್ನದೆ ಸೊಕ್ಕಿ ಮುರ್ಖತನದಿಂದ ಕುರುಡನು ಮಂಚವನ್ನು ಏರಿದ ಹಾಗೆ ದಡ್ಡತನದಿಂದ ಮಾತನಾಡುವೆ. ನಿನಗಿಂತ ಲೋಕದಲ್ಲಿ ಮೂರ್ಖರು ಇದ್ದಾರೆಯೇ ? ೧೩೩. ನೀನು ಬಹಳ ಧೂರ್ತನೇ.

ನೀನತಿಧೂರ್ತನೆ ದುಷ್ಟಂ
ದೇನಾನುಮನೆನ್ನ ಮುಂದೆ ಮುನಿಪುಂಗವನಂ
ಹೀನವಚನಂಗಳಿಂದಭಿ
ಮಾನಂಗಿಡೆ ನುಡಿದೆಯಾದೊಡೇನಾಯ್ತಿನ್ನುಂ ೧೩೪

ಗದ್ಯ॥ ಒರ್ವಂಗೆ ಪ್ರಾಣಕ್ಕೆ ತಪ್ಪಲಾಗದು ನಿನ್ನ ಮಾಡಿದ ದುಷ್ಟತನಮಪ್ಪೊಡೆ ಕೊಲೆಗೆ ಪ್ರಾಪ್ತಿಯೆಂದು ಜಡಿದು ನುಡಿದರಸಂ ಬಲಿಗೆ ವಿರಸನಾಗಿ ಕೋಪದಿಂ ಬಡಿದು ಪಿರಿದಪ್ಪಪಮಾನಮಂ ಮಾಡಿ ತನ್ನ ಪುರದಿಂ ಪೊಱಮಡಿಸಿ ಕಳೆವುದುಂ ಬಲಿಯ ವಂಶದವರೆಲ್ಲಂ ಪೊೞಲೊಳಿರಲಾಗದೆಂದು ಗೋಸಣೆಗೊಳಿಸೆ ಬಲಿ ಜಯವರ್ಮಮಹಾರಾಜಂ ಮುನಿಪತಿಗೆ ಪುನರ್ನಮಸ್ಕಾರಂಗೆಯ್ದು ಮನೆಗೆ ಪೋದನಿತ್ತಲ್ ಬಲಿಯೊಡವುಟ್ಟಿದರ್ ಶುಕ್ಲ ಬೃಹಸ್ಪತಿ ಪ್ರಹ್ಲಾದರ್ ಮೊದಲಾಗೊಡೆಯ ಬಂಧುಗಳೆಲ್ಲಂ ಪೊಱಮಟ್ಟು ಬಲಿಗೂಡಿ ಚಿಂತಾಕ್ರಾಂತರಾಗಿ ನೆರೆದು ಪೋಗುತ್ತುಂ ಬಲಿಯನಿಂತೆಂದರ್ ೧೩೫

ಅಣ್ಣ ಸುಖೋನ್ನತಿಯಿಂದಂ
ತಣ್ಣನೆ ಲೇಸಾಗಿ ಮುದದಿನುಣ್ಬರ ಬಾಯೊಳ್
ತಿಣ್ಣನೆ ಕಿರ್ಚಂ ಪುಡಿಯುಂ
ಮಣ್ಣಂ ಪೊಯ್ದಿಂತುಮಾಡಿದೈ ದೂರ್ತಿಂದಂ ೧೩೬

ದುಷ್ಟತನದಿಂದ ನನ್ನ ಮುಂದೆ ಮುನಿಶ್ರೇಷ್ಠನನ್ನು ಏನಾದರೂ ಹೀನವಾಕ್ಯಗಳಿಂದ ಅಭಿಮಾನಭಂಗವಾಗುವಂತೆ ಮಾತನಾಡಿದೆ. ಆದರೆ ಇನ್ನೂ, ಏನಾಯಿತು ? ೧೩೪. ಒಂದೇ ಸಲಕ್ಕೆ ಒಬ್ಬನ ಪ್ರಾಣದ ಮೇಲೆ ಸಿಟ್ಟುಗೊಳ್ಳಬಾರದು. ನೀನು ಮಾಡಿದ ದುಷ್ಟತನವಾದರೆ ಕೊಲೆಗೆ ತಕ್ಕದ್ದು, ಎಂದು ಗದರಿಸಿ ನುಡಿದು ಅರಸನು ಬಲಿಯ ಮೇಲೆ ಸಿಟ್ಟಾಗಿ ನುಡಿದು ಹೆಚ್ಚಿನ ಅಪಮಾನ ಮಾಡಿ ತನ್ನ ಪಟ್ಟಣದಿಂದ ಹೊರಡಿಸಿದನು. ಬಲಿಯ ವಂಶದವರು ಯಾರೂ ಪಟ್ಟಣದಲ್ಲಿ ಇರಲಾಗದು ಎಂದು ಘೋಷಣೆ ಹೊರಡಿಸಿದನು. ಬಲಿಷ್ಠನಾದ ಜಯವರ್ಮ ಮಹಾರಾಜನು ಮುನಿಪತಿಗೆ ಪುನರ್ನಮಸ್ಕಾರ ಮಾಡಿ ಮನೆಗೆ ಹೋದನು. ಇತ್ತ ಬಲಿಯ ಸೋದರರಾದ ಶುಕ್ಲ ಬೃಹಸ್ಪತಿ ಪ್ರಹ್ಲಾದರು ಮೊದಲುಗೊಂಡು ಇದ್ದ ಬಂಧುಗಳೆಲ್ಲರೂ ಹೊರಟು ಬಲಿಯೊಡನೆ ಕೂಡಿ ಚಿಂತೆಯಲ್ಲಿ ಮುಳುಗಿದವರಾಗಿ ಗುಂಪು ಕೂಡಿ ಹೋಗುತ್ತ ಬಲಿಯನ್ನು ಕುರಿತು ಹೀಗೆಂದರು : ೧೩೫. "ಅಣ್ಣ, ಹೆಚ್ಚಿನ ಸುಖದಿಂದ ತಣ್ಣಗೆ, ಚೆನ್ನಾಗಿ ಊಟ ಮಾಡುವವರ ಬಾಯಿಗೆ ಹೆಚ್ಚಾಗಿ ಬೆಂಕಿ, ಧೂಳು, ಮಣ್ಣುಗಳನ್ನು ಹೊಯಿದು ಧೂರ್ತತನದಿಂದ ಹೀಗೆ ಮಾಡಿದೆ." ೧೩೬. ಎಂದು ಬಲಿಯನ್ನು ಹಂಗಿಸಿ ಬೈಯಲು, ರಾಜನಿಂದ

ಗದ್ಯ॥ ಎಂದು ಬಲಿಯಂ ಮೊದಲಿಸಿ ಬಯ್ವುದುಂ, ನೃಪನೊಳಾದ ಪರಿಭವಾನಳನುಂ ನಂತರೊಳಾದ ದುಃಖಾನಳನುಂ ತಿಣ್ಣಮಾಗೆ ಮುನೀಂದ್ರೋತ್ತಮನ ಮೇಲೆ ಕೋಪಂ ಪುಟ್ಟೆ ಬಲಿಯಿಂತೆಂದಂ ೧೩೭

ಜಯವರ್ಮಾಧೀಶನಾಸ್ಥಾನದೊಳವಯವದಿಂದೆನ್ನನೇದೋಡು ಮಾಡಿ
ರ್ದ ಯತೀಶಾಂಭೋಜಸೂರ್ಯಂ ಗಳನಳವಡೆ ನಾನಾ ಪ್ರಕಾರಂಗಳಿಂ ಸಂ
ಶಯಮೇಕಿನ್ನಣ್ಣ ನಾಂ ಕೊಲ್ಲದೊಡೆ ಮನುಜನೇ ಮಂತ್ರಿಯೇ ನೋಡಿವೇಂದ
ಪ್ರಿಯವಾಕ್ಯಾಳಾಪನಾಗಳ್ಮನದ ಮುಳಿಸಿನುದ್ರೇಕದಿಂ ನೊಂದು ಪೂಣ್ದಂ ೧೩೮

ಗದ್ಯ॥ ಅಂತು ಪೂಣ್ದು ಹಸ್ತಿನಾಪುರಕ್ಕೆ ವಂದು ಪದ್ಮಂಗಾಳಾಗಿರ್ಪುದುಮೊಂದು ದಿವಸಂ ೧೩೯

ಪರಿತಂದೊರ್ವಂ ಧಾತ್ರೀ
ಶ್ವರಂಗೆ,ಪೊಡೆಮಟ್ಟು ದೇವ ನಮ್ಮಬಲಂ ಭಾ
ಸುರ ಸಿಂಹಕೀರ್ತಿಧರಣೀ
ಶ್ವರನಿಂ ಪಂಭವಮನಾಂತುದಾಹವದೆಡೆಯೊಳ್ ೧೪೦

ಗದ್ಯ॥ ಎಂದು ಬಿನ್ನಪಂಗೆಯ್ವುದುಮರಸಂ ವಿರಸಮಾದ ಸೂಳೆಯಂತೆ ಲಜ್ಜಿಸೆ ಮುನ್ನನೇಕ ಸೂಟ್ ತನ್ನಟ್ಟದ ದಂಡಾತಂಗಮೊಸೆದುದಱಿಂ ಪಿರಿದಪ್ಪ ಲಜ್ಜೆಪುಟ್ಟೆ ಕೊಕ್ಕಳಗುದಿವರಸನ

ಆದ ಅಪಮಾನಾಗ್ನಿಯೂ, ನಂತರಲ್ಲಿ ಆದ ದುಃಖಾಗ್ನಿಯೂ ಹೆಚ್ಚಾಗಲು ಆ ಮುನಿ ಶ್ರೇಷ್ಠನ ಮೇಲೆ ಕೋಪ ಹುಟ್ಟಿ ಬಲಿಯು ಹೀಗೆಂದನು. ೧೩೭. "ಜಯವರ್ಮ ರಾಜನ ಆಸ್ಥಾನದಲ್ಲಿ ಅಂದು ನನ್ನನ್ನು ಬೇಗನೆ ಕ್ಷುದ್ರನಾಗಿ ಮಾಡಿದ ಆಯತೀಶರೆಂಬ ಕಮಲಗಳಿಗೆ ಸೂರ್ಯನನ್ನು, ಶಕ್ತಿ ಸಿದ್ಧಮಾಡಿಕೊಂಡು ನಾನಾ ರೀತಿಗಳಿಂದ, ಅಣ್ಣ, ಇನ್ನು ಸಂಶಯವೇಕೆ ? ನಾನು ಕೊಲ್ಲದಿದ್ದರೆ ಮನುಷ್ಯನೆ, ಮಂತ್ರಿಯೆ? ನೋಡುತ್ತಿರಿ" ಎಂದು ಅಪ್ರಿಯ ವಾಕ್ಯಗಳನ್ನಾಡಿ ಆಗ ಮನಸ್ಸಿನೊಳಗಿನ ಉದ್ರೇಕದಿಂದ ನೊಂದು ಪ್ರತಿಜ್ಞೆ ಮಾಡಿದನು. ೧೩೮. ಹಾಗೆ ಪ್ರತಿಜ್ಞೆ ಹೂಡಿಕೊಂಡು ಹಸ್ತಿನಾಪುರಕ್ಕೆ ಬಂದು ಪದ್ಮನಿಗೆ ಆಳಾಗಿದ್ದನು. ಒಂದು ದಿವಸ ಒಬ್ಬನು ಓಡಿ ಬಂದು ರಾಜನಿಗೆ ನಮಸ್ಕಾರ ಮಾಡಿ "ದೇವ ! ನಮ್ಮ ಸೈನ್ಯ ಪ್ರಸಿದ್ಧನಾದ ಸಿಂಹಕೀರ್ತಿರಾಜನಿಂದ ಯುದ್ಧದಲ್ಲಿ ಸೋಲನ್ನು ಅನುಭವಿಸಿತು." ೧೩೯-೧೪೦. ಎಂದು ಬಿನ್ನಹ ಮಾಡಲು ರಾಜನು ವಿರಸವಾದ ಸೂಳೆಯ ಹಾಗೆ ನಾಚಿಕೆ ಪಡಲು ಹಿಂದೆ ಅನೇಕ ಸಲ ತಾನು ಅಟ್ಟಿದ ದಂಡು ಆತನಿಗೆ ಒಲಿದುದರಿಂದ ಹೆಚ್ಚಾದ ಅಪಮಾನ ಹುಟ್ಟಲು ಕೊಕ್ಕಳಗುದಿಯುತ್ತಿದ್ದ ರಾಜನ

ಮನದ ಹೇವಮನಱಿದು ಬಲಿ ಮನದೊಳೊಳ್ಳಿತಪ್ಪ ಪ್ರಸ್ತಾವಮಾಯ್ತೆಂದು ಪೆರ್ಚಿ ಪದ್ಮಮಹೀಶ್ವರಂಗೆ ಪೊಡೆಮಟ್ಟು ದೇವರೆನಗಾ ಬೆಸನಂ ದಯೆಗೆಯ್ವುದೆಂದು ೧೪೧

ಭರವಸದಿಂ ಬೇಡುವುದುಂ
ನರಪಂ ದಯೆಗೆಯ್ಯೆ ಬೆಸನನಾಗಳೆ ಕೈಕೊಂ
ಡರವರಿಸದೆ ಪಿರಿದು ಬಲಂ
ಬೆರಸರಿಯಂ ಗೆಲ್ವ ಬುದ್ಧಿಯಿಂ ಬಲಿ ನಡೆದಂ ೧೪೨

ಗದ್ಯ॥ ನಡೆದು ಕತಿಪಯ ಪ್ರಯಾಣಂಗಳಿಂ ಕುಂಭಪುರಮನೆಯ್ದಿ ಮೂವಳಸಾಗಿ ಸುತ್ತಿಮುತ್ತಿ ಚಲದಿಂ ತನ್ನಂ ಬಿಟ್ಟು ಕಾದಿ ಕೋಟೆಯಂ ಕೊಂಡು ಸಿಂಹಕೀರ್ತಿಯಂ ಗ್ರಾಮಸಿಂಹಮಂ ಕಟ್ಟುವಂತೆ ಕೋಡಗಗಟ್ಟಂ ಕಟ್ಟಿ ತಂದು ಪದ್ಮಮಹೀವಲ್ಲಭಂಗೊಪ್ಪಿಸುವುದುಂ ಪದ್ಮಮಹಾರಾಜಂ ಮೆಚ್ಚಿ ಮಹಾಮಂತ್ರಿಪದವಿಯಂ ಕೊಟ್ಟು ಮತ್ತಮವಂ ಮಾಡಿದ ಕೆಲಸಕ್ಕೆ ಸಂತೋಷಂಬಟ್ಟು ಮೆಚ್ಚಿದೆಂ ಬೇಡಿಕೊಳ್ಳೆಂಬುದುಂ ೧೪೩

ಬಲಿ ಪಿರಿದುಂ ಪೆರ್ಚಿ ಮಹೀ
ತಳಪತಿ ನಿನ್ನೀವ ಮೆಚ್ಚನನ್ನೆವರಂ ನಿ
ಶ್ಚಲನಾಗಿ ದಿವ್ಯಚಿತ್ತದೊ
ಳಿನಿಸುಂ ತಾಳ್ದಿನ್ನಮನಕೆ ಬಂದವಸರದೊಳ್ ೧೪೪

ಮನಸ್ಸಿನ ದುಃಖವನ್ನು ತಿಳಿದು ಬಲಿಯು ಒಳ್ಳೆಯ ಸಂದರ್ಭವೊದಗಿತೆಂದು ಮನಸ್ಸಿನಲ್ಲಿಯೇ ಎಂದುಕೊಂಡು ಉಬ್ಬಿ ಪದ್ಮರಾಜನಿಗೆ ನಮಸ್ಕಾರ ಮಾಡಿ "ದೇವರು ನನಗೆ ಆ ಕೆಲಸವನ್ನು ದಯೆಪಾಲಿಸಬೇಕು" ಎಂದು ಭರವಸದಿಂದ ಬೇಡಿದನು. ರಾಜನು ಆದರಂತೆ ಆ ಕೆಲಸವನ್ನು ಅವನಿಗೆ ಒಪ್ಪಿಸಿದನು. ಬಲಿಯು ಆಗಲೇ ಕೆಲಸವನ್ನು ವಹಿಸಿಕೊಂಡು ತಡಮಾಡದೆ, ಅನುಮಾನಿಸದೆ ದೊಡ್ಡ ಸೈನ್ಯದೊಡನೆ ಕೂಡಿ ಶತ್ರುವನ್ನು ಗೆಲ್ಲುವ ಸಂಕಲ್ಪದಿಂದ ಹೊರಟನು. ೧೪೨. ಹೊರಟು ಕೆಲವು ಪ್ರಯಾಣಗಳನ್ನು ಮಾಡಿ ಕುಂಭಪುರವನ್ನು ಸೇರಿದನು. ಅಲ್ಲಿ ಮೂರು ಸುತ್ತಾಗಿ ಮುತ್ತಿಗೆ ಹಾಕಿ ಹಟದಿಂದ ದೇಹಭಾನವನ್ನು ಬಿಟ್ಟು ಹೋರಾಡಿ ಕೋಟೆಯನ್ನು ವಶಪಡಿಸಿಕೊಂಡು ಸಿಂಹಕೀರ್ತಿಯನ್ನು ಗ್ರಾಮಸಿಂಹವನ್ನು (ನಾಯಿ) ಕಟ್ಟುವ ಹಾಗೆ ಕೋಡಗಗಟ್ಟು ಕಟ್ಟಿ ಹಿಡಿದು ತಂದು ಪದ್ಮಮಹಾರಾಜನಿಗೆ ಒಪ್ಪಿಸುತ್ತಲೂ, ಪದ್ಮಮಹಾರಾಜನು ಮೆಚ್ಚಿ, ಅವನಿಗೆ ಮಹಾಮಂತ್ರಿ ಪದವಿಯನ್ನು ಕೊಟ್ಟು ಪುನಃ ಅವನು ಮಾಡಿದ ಕೆಲಸಕ್ಕೆ ಸಂತೋಷಪಟ್ಟು "ಮೆಚ್ಚಿದೆ. ಬೇಡಿಕೊ" ಎನ್ನಲು ೧೪೩. ಬಲಿಯು ಬಹಳ ಉತ್ಸಾಹಿಸಿ "ರಾಜನೇ ನೀನು ಕೊಡುವ ವರವನ್ನು ನಿನ್ನ ದಿವ್ಯಚಿತ್ತದಲ್ಲಿ ನಿಶ್ಚಲನಾಗಿ ಸ್ವಲ್ಪ ಕಾಲದವರೆಗೆ ತಡೆ. ನನಗೆ ಆಗತ್ಯವಾದ ಸಂದರ್ಭದಲ್ಲಿ ಬೇಡಿಕೊಳ್ಳುತ್ತೇನೆ" ೧೪೪. ಎನ್ನಲು ಅರಸನು 'ಹಾಗೇ ಆಗಲಿ' ಎಂದು ಒಪ್ಪಿದನು. ಬಲಿ ಅತ್ಯಂತ

ಗದ್ಯ॥ ಬೇಡಿಕೊಂಡಪೆನೆಂಬುದು ಮರಸನುಂ 'ತಥಾಸ್ತು' ಎಂದೊಡಂಬಡುವುದುಂ ಬಲಿ ಪರಮ ವಿಶ್ವಾಸಿಯಾಗಿ ಪಲವು ಕಾಲಮಿರ್ಪುದುಮಕಂಪನಾಚಾರ್ಯರೆಯ್ನೂರ್ವರ್ ಮುನೀಶ್ವರರ್ವೆರಸು ಧರಾತಳಮಂ ಕ್ರಮಕ್ರಮದಿಂ ವಿಹಾರಿಸುತ್ತುಂ ಹಸ್ತಿನಾಪುರಕ್ಕೆ ವಂದಾ ಪುರದ ಬಡಗಣ ದೆಸೆಯ ಪಿರಿದಪ್ಪಸಿತಗಿರಿಯೊಳ್ ಚಾತುರ್ಮಾಸಮಪ್ಪುದಱಿಂ ಯೋಗಂ ಕೈಕೊಂಡಿರ್ದರ್ ಇರ್ಪುದುಂ ೧೪೫

ವರಮುನಿವಲ್ಲಭರಿರ್ದುದ.
ನರಸಂ ಕೇಳ್ದರ್ತಿವಟ್ಟು ರಾಜಕುಮಾರರ್
ವೆರಸು ಮಹೋತ್ಸವದಿಂ ಭಾ
ಸುರತೇಜಂ ಪೋಗಿ ಭಕ್ತಿಪೂರ್ವಕದಿಂದಂ ೧೪೬

ಗದ್ಯ॥ ವಂದಿಸಿ ಕಿಱಿದು ಬೇಗಂ ಧರ್ಮಮಂ ಕೇಳ್ದು ಪುನರ್ನಮಸ್ಕಾರಂಗೆಯ್ದು ರಾಜಭವನಕ್ಕೆ ಬಂದಿರ್ಪುದುಂ ಬಲಿ ರಾಗದಿಂ ಮೆಯ್ಯಱಿಯದಱಸುವ ಬಳ್ಳಿ ಕಾಲೊಳ್ ತೊಡರ್ದುದೆಂಬಂತೆ ಅಱಸಿ ಕೊಲ್ವಪಗೆ ಮನೆಗೆ ವಂದಂ ಪುಣ್ಯಂಗೆಯ್ದೆನೆಂದು ಪದ್ಮಮಹಾರಾಜನಲ್ಲಿಗೆ ವಂದು ಭಂಡಾರದೊಳಿರ್ದಮೆಚ್ಚಂ ಕಾರುಣ್ಯಂಗೆಯ್ವುದೆನೆ ಪದ್ಮಮಹೀನಾಥಂ ಕೊಟ್ಟೆಂ ಬೇಡಿಕೊಳ್ಳೆಂಬುದುಂ ಮಹಾಪ್ರಸಾದಮೆಂದಿಂತೆಂದಂ ೧೪೭

ನಂಬಿಕಸ್ತನಾಗಿ ಹಲವು ಕಾಲ ಇದ್ದುಬಿಟ್ಟನು. ಇತ್ತ ಅಕಂಪನಾಚಾರ್ಯರು ಐನೂರು ಮುನೀಶ್ವರರೊಡನೆ ಭೂಮಂಡಲವನ್ನು ಕ್ರಮಕ್ರಮವಾಗಿ ಸಂಚರಿಸುತ್ತ ಹಸ್ತಿನಾಪುರಕ್ಕೆ ಬಂದು ಆ ಪಟ್ಟಣದ ಉತ್ತರದಿಕ್ಕಿನ ದೊಡ್ಡದಾದ ಅಸಿತಗಿರಿಯಲ್ಲಿ ಚಾತುರ್ಮಾಸ್ಯವಾದ್ದರಿಂದ ಯೋಗವನ್ನು ಕೈಕೊಂಡಿದ್ದರು. ಇರಲು ೧೪೫. ಶ್ರೇಷ್ಠರಾದ ಮುನಿಪತಿಗಳಿದ್ದುದನ್ನು ಕೇಳಿ ರಾಜನು ಆಸೆಪಟ್ಟು ರಾಜಕುಮಾರರೊಡನೆ ಬಹಳ ಉತ್ಸವದಿಂದ ಆ ತೇಜಸ್ವಿಯು ಹೋಗಿ ಭಕ್ತಿಪೂರ್ವಕವಾಗಿ ೧೪೬. ವಂದಿಸಿ ಕೊಂಚ ಹೊತ್ತು ಧರ್ಮವನ್ನು ಕೇಳಿ ಪುನರ್ನಮಸ್ಕಾರ ಮಾಡಿ ರಾಜಭವನಕ್ಕೆ ಬಂದಿದ್ದನು. ಬಲಿ ಸಂತೋಷದಿಂದ ಮೆಯ್ಮರಿಯದೆ ಹುಡುಕುವ ಬಳ್ಳಿ ಕಾಲಿಗೆ ತೊಡರಿಕೊಂಡಿತೆಂಬ ಹಾಗೆ ಹುಡುಕಿಕೊಂಡು ಹೋಗಿ ಕೊಲ್ಲುವ ವೈರಿ ಮನೆಗೆ ಬಂದ. ಪುಣ್ಯಮಾಡಿದೆ, ಎಂದು ಪದ್ಮಮಹಾರಾಜನಲ್ಲಿಗೆ ಬಂದು ಭಂಡಾರದಲ್ಲಿದ್ದ ವರವನ್ನು ಕರುಣೆಯಿಂದ ಕೊಡಬೇಕೆನ್ನಲು ಪದ್ಮಮಹೀಪತಿ "ಕೊಟ್ಟೆ. ಬೇಡಿಕೊ" ಎನ್ನಲು "ಮಹಾಪ್ರಸಾದ" ಎಂದು ಹೀಗೆ ಕೇಳಿದನು. ೧೪೭ : ನಿನಗೂ ನಾಡಿಗೂ ಶಾಂತಿನಿಮಿತ್ತವಾಗಿ ಯಜ್ಞವನ್ನು ಮಹಾ

ನಿನಗಂ ನಾಡಿಂಗಂ ಶಾಂ
ತಿನಿಮಿತ್ತಂ ಯಜ್ಞಮಂ ಮಹೋತ್ಸವದಿಂ ನೆ
ಟ್ಟನೆ ಧಾತ್ರಿ ಪೊಗಟ್ಚಿಮಾಡುವ
ಮನಮಾಗಿರ್ಪುದು ದೇವ ಪುಣ್ಯೋದಯದಿಂ ೧೪೮

ನರನಾಥ ಯಜ್ಞಮೆಂಬುದು
ಪಿರಿದಪ್ಪ ಫಲಕ್ಕೆ ಕಾರಣಂ ಸಕಲಸುರಾ
ಸುರರೆಲ್ಲಂ ಮನದೊಳ್
ಸ್ತರದಿಂದಂ ತೃಪ್ತರಾಗಿ ನಲಿವುದಱಿಂದಂ ೧೪೯

ಗದ್ಯ॥ ದೇವ, ನಿನ್ನ ರಾಜ್ಯಮಂ ಪದಿನೈದು ದಿವಸಂಬರಮೀವುದೆಂದು ಬೇಡುವುದುಂ ಪದ್ಮ ನವನ ಬೇಡಿದನಾಚಾರಕ್ಕಂ ತಾಂ ಬೇಡಿಕೊಳ್ಳೆಂದ.ದಕ್ಕಂ ವಿಸ್ಮಯಂಬಟ್ಟು ದೇವರ್ಗಂ ಕ್ಷತ್ರಿ ಯರ್ಗಂ ಪುನರ್ವಚನಮಂ ನುಡಿಯಲಾಗದೆಂಬ ನೀತಿಯಂ ಭಾವಿಸಿ ಬಲಿಯ ಮನದ ಕಪಟ ಮನೇನೆಂದಱಿಯದೆ ನೀನೇನಂ ಮಾಡಿದೊಡಮುಕ್ಕುಮದನೆನಗೆ ಪೇಳಲ್ವೇಡ ಆನೆನ್ನಮುನ್ನಿನ ನುಡಿದ ಕಾರಣಮಾಗೆ ಪದಿನೈದುದಿವಸದ ರಾಜ್ಯಮಂ ಕೊಟ್ಟೆನೆಂದು ಕೊಟ್ಟು ತನ್ನಂತಃಪುರ ಪುರಂಧ್ರಿಯರೊಳ್ ಕೂಡಿರ್ದನನ್ನೆಗಮಿತ್ತಲ್ ೧೫೦

ಅಂದೆನ್ನಂ ಜಯವರ್ಮನ
ಮುಂದೆ ಮಹಾಭಂಗಮಾಗೆ ಸೋಲಿಸಿದವನಂ
ಕುಂದದೆ ಕೀಳ್ ನಾನಾ ವಿಧ
ದಿಂದಂ ಚಿತ್ತಕ್ಕೆ ಬಂದ ಕೊಲೆಯಿಂ ಕೊಲ್ವೆಂ ೧೫೧

ವೈಭವದಿಂದ ಲೋಕ ಹೊಗಳುವಂತೆ ಮಾಡುವ ಉದ್ದೇಶವುಂಟಾಗಿದೆ. ದೇವ. ಇದು ಪುಣ್ಯೋದಯ. ಯಜ್ಞವೆಂಬುದು ದೊಡ್ಡದಾದ ಫಲಕ್ಕೆ ಕಾರಣ ಸಮಸ್ತ ಸುರಾಸುರ ರೆಲ್ಲರೂ ಮನಸ್ಸಿನಲ್ಲಿ ಕ್ರಮವಾಗಿ ತೃಪ್ತರಾಗಿ ಸಂತೋಷಿಸುವರು. ೧೪೮–೧೪೯. ದೇವ, ನಿನ್ನ ರಾಜ್ಯವನ್ನು ಹದಿನೈದು ದಿನಗಳವರೆಗೆ ಕೊಡಬೇಕೆಂದು ಬೇಡಿಕೊಳ್ಳಲು ಪದ್ಮನು ಅವನು ಬೇಡಿದ ಅನಾಚಾರಕ್ಕೂ ತಾನು ಬೇಡಿಕೊಳ್ಳೆಂದು ಹೇಳಿದುದಕ್ಕೂ ಆಶ್ಚರ್ಯಪಟ್ಟು ದೇವರುಗಳಿಗೂ ಕ್ಷತ್ರಿಯರಿಗೂ ಬದಲು ಮಾತನ್ನು ಆಡಲುಬಾರದು ಎಂಬ ನೀತಿಯನ್ನು ಸ್ಮರಿಸಿ ಬಲಿಯು ಮನಸ್ಸಿನ ಕಪಟವೇನೆಂದು ತಿಳಿಯದೆ "ನೀನೇನು ಮಾಡಿದರೂ ಆಗಬಹುದು. ಅದನ್ನು ನನಗೆ ಹೇಳಬೇಡ. ನಾನು ನಿನಗೆ ಹಿಂದೆ ಹೇಳಿದ್ದ ಕಾರಣದಿಂದ ಹದಿನೈದು ದಿವಸಗಳ ರಾಜ್ಯವನ್ನು ಕೊಟ್ಟೆ." ಎಂದು ನುಡಿದು ಕೊಟ್ಟು ತನ್ನ ಅಂತಃಪುರದ ಸ್ತ್ರೀಯರಲ್ಲಿ ಸೇರಿಕೊಂಡು ಇದ್ದುಬಿಟ್ಟನು, ೧೫೦. ಆ ವೇಳೆಗೆ ಇತ್ತ ಕಡೆ "ಅಂದು ನನ್ನನ್ನು ಜಯವರ್ಮನ ಮುಂದೆ ಮಹಾ ಅಪಮಾನ ವಾಗುವಂತೆ ಸೋಲಿಸಿದವನನ್ನು ಹಿಂದೆಗೆಯದೆ ನಾನಾ ವಿಧವಾಗಿ ಮನಸ್ಸಿಗೆ ಬಂದ ಹಾಗೆ ಕೊಲೆ ಮಾಡುತ್ತೇನೆ" ೧೫೧. ಎಂದು ಮನಸ್ಸಿನಲ್ಲಿ ಆಲೋಚಿಸಿ ಕುಟಿಲ

ಗದ್ಯ॥ ಎಂದು ಮನದೊಳಾಲೋಚಿಸಿ ಕುಟಿಲಬುದ್ಧಿಯಿಂ ತನ್ನೊಳಗನಾರ್ಗಮಱಿಪಲೊಲ್ಲದೆ ಪದ್ಮನುಮಂ ಪುರಮುಮಂ ನಂಬಿಸಲ್ವೇಡಿ ಯಜ್ಞಂ ಮಾಡಿದಪ್ಪೆನೆಂಬಿದನೆ ಪ್ರಕಟಂ ಮಾಡಿ ಮನೆಗೆ ವಂದು ೧೫೨

ಈ ನರವಲ್ಲಭನಪ್ಪೊಡೆ
ತಾನಧಿಕಂ ಜೈನಧರ್ಮದೊಳ್ ಋಷಿವಧೆಯಂ
ತಾನಱಿದನಪ್ಪೊಡೆನ್ನಂ
ನಾನಾ ವಿಧದಿಂಡೆ ಕೊಂದು ತೂಗದೆ ಮಾಣಂ ೧೫೩

ಗದ್ಯ॥ ಅದಱಿಂದೆನ್ನದ್ರೋಹಮರಸನ ಕಿವಿಯಂ ಮುಟ್ಟದಂತಾಗೆ ಮಾಟ್ಪೆನೆಂದುಪಾಯದಿಂ ಜೋಗಂ ಕೈಕೊಂಡು ಋಷಿಯರ್ ಪೋಗರೆಂಬುದನಱಿವನಪ್ಪುದಱಿಂದೆನ್ನಯಜ್ಞಂ ತೀರ್ವನ್ನೆಗಂ ಋಷಿಯರೀಪೊಬಲೊಳಿರವೇಡಿವೆಂದು ಘೋಸಣೆ ನೆಗಟ್ಪುದುಮಕಂಪನಾಚಾರ್ಯರಱಿದು ಸಮಸ್ತ ಋಷಿಯರ್ಗಿಂತೆಂದರ್ ೧೫೪

ಅವರವರ ಪುಣ್ಯ ಪಾಪಂ
ನೆವನೆವದಿಂ ಫಲವನೀಗುಮವರ್ಗಂ ಪೆಱವಂ
ಭುವನದೊಳು ಮಾಟ್ಪೆನೆಂಬಿಂ
ತವರಧಿಕರೆ ಪುಣ್ಯಪಾಪನಿಚಯಕ್ಕಿಳಿಯೊಳ್ ೧೫೫

ಬುದ್ಧಿಯಿಂದ ತನ್ನ ರಹಸ್ಯವನ್ನು ಯಾರಿಗೂ ತಿಳಿಸಲೊಲ್ಲದೆ ಪದ್ಮನನ್ನೂ ಪಟ್ಟಣವನ್ನೂ ನಂಬಿಸಲು ಬಯಸಿ ಯಜ್ಞವನ್ನು ಮಾಡುವೆನೆಂಬಿಷ್ಟನ್ನೇ ಪ್ರಕಟಮಾಡಿ ಮನೆಗೆ ಬಂದನು ೧೫೨. ಈ ರಾಜನಾದರೋ ದೊಡ್ಡ ಜೈನಶ್ರಾವಕ, ಋಷಿವಧೆಯನ್ನು ತಾನು ತಿಳಿದನಾದರೆ ನನ್ನನ್ನು ನಾನಾ ವಿಧವಾಗಿ ಕೊಲ್ಲದೆ ಬಿಡುವುದಿಲ್ಲ. ೧೫೩. ಅದರಿಂದ ನನ್ನ ದ್ರೋಹವು ಅರಸನ ಕಿವಿಗೆ ಮುಟ್ಟದ ಹಾಗೆ ಮಾಡುವೆನೆಂದು ಯೋಚಿಸಿ ಉಪಾಯದಿಂದ, ಯೋಗವನ್ನು ಕೈಕೊಂಡು ಋಷಿಗಳು ಹೋಗರೆಂಬುದನ್ನು ಅರಿತವನಾದ್ದರಿಂದ, 'ನನ್ನ ಯಜ್ಞವು ತೀರುವವರೆಗೆ ಋಷಿಗಳು ಈ ಪಟ್ಟಣದಲ್ಲಿ ಇರುವುದು ಬೇಡ' ಎಂದು ಘೋಷಣೆ ಹೊರಡಿಸಿದನು. ಅಕಂಪನಾಚಾರ್ಯರು ಇದನ್ನು ತಿಳಿದು ಸಮಸ್ತ ಋಷಿಗಳಿಗೂ ಹೀಗೆ ಹೇಳಿದರು : ೧೫೪. ಅವರವರ ಪುಣ್ಯಪಾಪಗಳು ನಾನಾ ನೆವಗಳಿಂದ ಅವರಿಗೆ ಫಲಕೊಡುವುವು. ಅವರಿಗೂ ಬೇರೆ ಮಾಡುವೆನೆಂಬ ಇಂಥವರು ಪುಣ್ಯಪಾಪ ಸಮೂಹಕ್ಕಿಂತ ಲೋಕದಲ್ಲಿ ದೊಡ್ಡವರೆ ? ೧೫೫. ನಿಷ್ಕಾರಣವಾಗಿ ತಿಳಿಯದೆ ದಡ್ಡರು ಮೋಸದಿಂದ ಬೇರೆಯವರನ್ನು ನಾಶ

ನಿಷ್ಕಾರಣಮಱಿಯದೆ ಜಡ
ರುಕ್ಕಿವದಿಂ ಪೆಱರನಳಿವೆವೆಂಬೀಮನದಿಂ
ದಿಕ್ಕೆನೆ ಬೀೞ್ವರ್ ನರಕದೊ
ಳಕ್ಕಟ ದುಃಖಕ್ಕೆ ಮೂರ್ಖರಪ್ಪರೆನೋಂ ತರ್ ೧೫೬

ಬಱಿದೆ ಜಡಮತಿಗಳೇನೆಂ
ದಱಿಯದೆ ಮುನಿಸೊದವೆ ಕೊಲ್ವೆನೆಂಬರ್ ಮನದಿಂ
ಪೆಱರಂ ತಮ್ಮಳವಲ್ಲದು
ಮಱುಕಂ ಕೈಸಾರ್ಗುಮತ್ತಮವರಳಿದಪರೇ ೧೫೭

ನರಕಗತಿಗಿಳಿವೊಡಂ ನಿ
ರ್ಜರನಿಳಯಮನೆಯ್ದಿ ಸುಖಮನುಣ್ಬೊಡಮನ್ಯರ್
ನೆರಮಲ್ಲಿಂದಱಿನನ್ಯರ್
ಭರವಶದಿಂ ಮುನಿದುಮೊಸೆದುಮೇಗೆಯ್ದಪರೋ ೧೫೮

ಎಮ್ಮ ಕತದಿಂದಮೀತಂ
ಕಿಮ್ಮನೆ ದುಃಖಕ್ಕೆ ನೋಡ ಗುಱಿಯಾದಪನೆಂ
ಬುಮ್ಮಳಮಲ್ಲದೆ ಕೊಂದಪ
ನೆಮ್ಮಂ ಖಳನೆಂಬ ನೋವು ಕೇಳೆಮಗುಂಟೇ ೧೫೯

ಮಾಡುವೆವೆಂಬ ಈ ಮನಸ್ಸಿನಿಂದ ನರಕದಲ್ಲಿ 'ದಿಕ್' ಎಂದು ಬೀಳುವರು. ಅಯ್ಯೋ, ಮೂರ್ಖರೇ ಲೋಕದಲ್ಲಿ ದುಃಖಕ್ಕೆ ವ್ರತ ಮಾಡಿದವರು. ೧೫೭. ಸುಮ್ಮನೆ ಜಡ ಮತಿಗಳು ಅವೇನೆಂದು ತಿಳಿಯದೆ ಮುನಿಸು ಬಂದರೆ ಇತರರನ್ನು ಕೊಲ್ಲುವೆವೆನ್ನುವರು. ಆದರೆ ಅದು ತಮ್ಮ ವಶವಲ್ಲ. ಯೋಚಿಸಿದರೆ ಕರುಣೆ ಹುಟ್ಟುವುದು. ಇನ್ನು ಅವರು ನಾಶವಾಗುವರೆ ? ೧೫೭. ನರಕಗತಿಗೆ ಇಳಿಯುವುದಾದರೂ ದೇವಲೋಕ ವನ್ನು ಸೇರಿ ಸುಖವನ್ನು ಅನುಭವಿಸುವುದಿದ್ದರೂ ಅನ್ಯರು ಕಾರಣರಲ್ಲ. ಆದ್ದರಿಂದ ಅನ್ಯರು ರಭಸದಿಂದ ಸಿಟ್ಟುಗೊಂಡರೂ ಒಲಿದರೂ ಏನು ಮಾಡಬಲ್ಲರೋ ! ೧೫೮. ನಮ್ಮ ಕಾರಣದಿಂದ ಈತನು ಸುಮ್ಮನೆ ದುಃಖಕ್ಕೆ ಗುರಿಯಾಗುವನು ಎಂಬ ವ್ಯಥೆಯಲ್ಲದೆ ಈ ದುಷ್ಟನು ನಮ್ಮನ್ನು ಕೊಲ್ಲುವನೆಂಬ ನೋವು ನಮಗೆ ಉಂಟೆ ? ೧೫೯. ಬೇಸಗೆಯ ಬಿಸಿಲು ಅತ್ಯಂತ ಕ್ರೂರವಾಗಿ ಬಿರುಸಾಗಿ ಕಾದರೂ ತಾವರೆಗಳು

ಬೇಸಗೆಯ ಬಿಸಿಲ್ ತಾಪಂ
ತ್ಯಾಕುರಮಾಗೊದವಿ ಕಾಯ್ದೊಡಂ ತಾವರೆಗಳ್
ಬೇಸಱವದಱಿಂ ಪುಣ್ಯನಿ
ವಾಸಿಗಳಂ ಕಿಡಿಪೆವೆಂಬವರ್ಗೆಂಟೆರ್ದೆಯೋ ೧೬೦

ಶಶಿಮಿತ್ರನಾಗಿಯುಂ ಸಂ
ತಸದಿಂ ನೆಯ್ದಿಲನಲರ್ಚಲಾಱಂ ಪಗಲೋಳ್
ಪುಸಿಯಲ್ಲದಱಿಂದಂ ರ
ಕ್ಷಿಸಲಾರ್ಪರೆ ಪುಣ್ಯಹೀನರಂ ಪೆಱರೊಲವಿಂ ೧೬೧

ಗದ್ಯ॥ ಮತ್ತಂ ಪಡೆಯದೈಸಿರಿಗಿಱಿದು ಬೀಳ್ವ, ಪೆಱರ ಪೆಂಡಿರ್ಗೆ ಬಳೆದೊಡಿಸುವ, ಪೆಂಡಿರಂ ಕೊಟ್ಟು ಮಾನ್ಯಂಬಡೆವ, ಮಗಳಂ ಮಾಱಿ ಮದುವೆಯಪ್ಪ, ಪಡಿಯನೊಡೆದು ಮಣೆಯಂ ಮಾಡುವ, ಮಾಳಿಗೆಯಂ ಸುಟ್ಟು ಸೀತನೆಯಂ ತಿಂಬ, ಮಗನಂ ಕೊಂದು ಗಂಡುದೋಱುವ, ನೆಲೆವಾಟಂ ಮಾಱಿ ಸೂಳೆಗೆಯ್ವ, ಬೆಳೆದ ಕೆಯ್ಯಂ ಕೊಟ್ಟು ಕಡಗಮಂ ಕೊಳ್ವ, ಕವಿಲೆಯಂ ಕಱೆದು ನಾಯನೂಡುವ, ಕಂಕಣಮಂ ಕೊಟ್ಟು ಪಿಂಡಿಯಂ ತಿಂಬ ಲೋಗರ ಕಾರ್ಯಕ್ಕೆ ಬಡಿದು ಕೊಳ್ವ ಬಾಡಿಗೆಯ ಮನೆಗೆ ತಿವಿದುಕೊಳ್ವ, ಚತ್ರದ ಕೂೞ್ಗೆ ಮೆಯ್ಯಾಂಪ, ನಡುಮನೆಯೊಳ್

ಬೇಸರಗೊಳ್ಳುವುದಿಲ್ಲ. ಅದರಿಂದ ಪುಣ್ಯನಿವಾಸಿಗಳನ್ನು ಕೆಡಿಸುವುವೆಂಬವರಿಗೆ ಎಂಟೆದೆಯೆ ? (ಅದೇನು ಧೈರ್ಯವೊ !) ೧೬೦. ಚಂದ್ರ ಸ್ನೇಹಿತನಾಗಿಯೂ ಸಂತೋಷದಿಂದ ನೆಯ್ದಿಲೆ ಹೂವನ್ನು ಹಗಲಿನಲ್ಲಿ ಅರಳಿಸಲಾರ ; ಸುಳ್ಳಲ್ಲ, ಅದರಿಂದ ಬೇರೆಯವರು ಪ್ರೀತಿಯಿಂದ ಪುಣ್ಯಹೀನರನ್ನು ಕಾಪಾಡಲು ಶಕ್ತರೆ? ೧೬೧. ಮತ್ತೆ ತಾವು ಪಡೆಯದ ಐಶ್ವರ್ಯಕ್ಕೆ ಅಸೂಯೆಯಿಂದ ಮುರಿದುಕೊಂಡು ಬೀಳುವ, ಇತರರ ಹೆಂಡಿರಿಗೆ ಬಳೆ ತೊಡಿಸುವ, ಹೆಂಡಿರನ್ನು ಕೊಟ್ಟು ಮಾನ್ಯವನ್ನು ಪಡೆಯುವ, ಮಗಳನ್ನು ಮಾರಿ ಮದುವೆಯಾಗುವ, ಕದವನ್ನು ಒಡೆದು ಮಣೆಯನ್ನು ಮಾಡುವ ಮಾಳಿಗೆಯನ್ನು ಸುಟ್ಟು ಸೀತನೆಯನ್ನು ತಿನ್ನುವ ಮಗನನ್ನು ಕೊಂದು ಪೌರುಷವನ್ನು ತೋರಿಸುವ, ವಾಸಸ್ಥಾನದ ಜೀವಿಕೆಯನ್ನು ಮಾರಿ ಸೂಳೆಗಾರಿಕೆ 'ಮಾಡುವ, ಬೆಳೆದ ಗದ್ದೆಯನ್ನು ಕೊಟ್ಟು ಕಡಗವನ್ನು ತೆಗೆದುಕೊಳ್ಳುವ, ಹಸುವನ್ನು ಕರೆದು ನಾಯಿಗೆ ಕುಡಿಸುವ. ಕಂಕಣವನ್ನು ಕೊಟ್ಟು ಹಿಂಡಿಯನ್ನು ತಿನ್ನುವ, ಕಂಡವರ ಕೆಲಸಕ್ಕೆ ಬಡಿದುಕೊಳ್ಳುವ, ಬಾಡಿಗೆಯ ಮನೆಗೆ ತಿವಿದುಕೊಳ್ಳುವ, ಚತ್ರದ ಅನ್ನಕ್ಕೆ ಮೈಯೊಡ್ಡುವ, ನಡುಮನೆಯಲ್ಲಿ ಬಾವಿಯನ್ನು ಅಗೆಯುವ, ಹೊಳೆಗೆ ನೀರನ್ನು ಹೊರುವ, 'ಕನಸಿನ

ಬಾವಿಯನಗಲ್ವ, ತೊಱೆಗೆ ನೀರನಡಕುವ, ಕನಸಿನ ಪೊನ್ನನಗೆಂಬ, ಬೋನಮನೊಡೆದು ಹಲ್ಲಿಯಮಾಡುವ, ಪಟ್ಟೆಯಂ ಪಱಿದು ಚೆಂಡಂ ಮಾಡುವ ಕಟ್ಟೆಗ್ಗರಂತೆ ಶಾಶ್ವತಮಲ್ಲದ ಶರೀರಮಂ ಪಿಡಿದು ರತ್ನತ್ರಯಂಗಳಂ ಕಿಡಿಸುವುದು ಬುದ್ಧಿಯಲ್ಲದಱಿಂ, ತಂತಮ್ಮ ಮಾಡಿದ ತಪದ ದಾನದ ಫಲದಿಂ ಸುಖಮುಂ ದೀರ್ಘಾಯುಷ್ಯಮುಂ ನಿರ್ವಿಘ್ನಮುಮಕ್ಕುಂ ಪೆಱರೇಗೆಯ್ದುಂ ಮುನಿದುಂ ಶ್ರೀಯುಮನಾಯುಷ್ಯಮುಮಂ ನೋವುಮಂ ಮಾಡಲ್ ಸಮರ್ಥರಲ್ಲೆಂದು ಪರಮಾಗಮ ಭಾವನೆಯಿಂ ನಿರ್ಮಳಚಿತ್ತರುಂ ಮಂದರಧೈರ್ಯರುಂ ನಿರ್ಭಯರುಮಾಗಿರಿಮೆಂದೆಲ್ಲರ್ಗಮಱಿಪಿ ಸಕಲ ಋಷಿಯರ್ವೆರಸು ಬಲಿ ಮಾಡುವ ಉಪಸರ್ಗಂ ಪಿಂಗುವನ್ನಂ ಆಹಾರ ಶರೀರ ನಿವೃತ್ತಿಯೆಂದು ಕೈಯ್ಯನಿಕ್ಕಿಕೊಂಡು ಜಿನಪದಾಂಭೋಜಂಗಳಂ ಮನದೊಳ್ ತಾಳ್ದಿದರನ್ನೆಗಮಿತ್ತಲ್ ೧೬೨

ಮುನಿಯರು ಮೆಲ್ಲರುಮಾ ಗೋ
ಸನೆಯುಂ ಕೇಳ್ದಾಗಳಂತೆ ಪೋಟಲಿಂದಂ ಭೋಂ
ಕನೆ ಪೋದರೆಂಬ ಮಾತನೆ
ಘನಮಾಗಿರೆ ಮಾಡಿ ಕುಟಿಲಚಿತ್ತಂ ಪುರದೊಳ್ ೧೬೩

ಹೊನ್ನು ನನಗೆ' ಎಂಬ, ಅನ್ನವನ್ನು ಒಡೆದು ಕಡುಬನ್ನು ಮಾಡುವ, ರೇಷ್ಮೆ ಬಟ್ಟೆಯನ್ನು ಹರಿದು ಚೆಂಡನ್ನು ಮಾಡುವ, ಕಡು ದಡ್ಡರಂತೆ, ಶಾಶ್ವತವಲ್ಲದ ಶರೀರವನ್ನು ಹಿಡಿದು ರತ್ನತ್ರಯಗಳನ್ನು ಕೆಡಿಸಿಕೊಳ್ಳುವುದು. ಬುದ್ಧಿವಂತಿಕೆಯಲ್ಲ. ಆದರಿಂದ ತಾವು ತಾವು ಮಾಡಿದ ತಪಸ್ಸಿನ, ದಾನದ, ಫಲದಿಂದ ಸುಖವೂ ದೀರ್ಘಾಯುಷ್ಯವೂ ನಿರ್ವಿಘ್ನವೂ ಆಗುವುದು. ಇತರರು ಏನು ಮಾಡಿದರೂ, ಮುನಿದರೂ ಐಶ್ವರ್ಯವನ್ನೂ ಆಯುಷ್ಯವನ್ನೂ ನೋವನ್ನೂ ಮಾಡಲು ಸಮರ್ಥರಲ್ಲ, ಎಂದು ಪರಮಾಗಮ ಭಾವನೆಯಿಂದ ನಿರ್ಮಲಚಿತ್ತರೂ. ಮಂದರಪರ್ವತದಂತೆ ಧೈರ್ಯವುಳ್ಳವರೂ ನಿರ್ಭಯರೂ ಆಗಿರಿ" ಎಂದು ಎಲ್ಲರಿಗೂ ತಿಳಿಸಿ ಸಕಲ ಋಷಿಗಳೊಡನೆ ಕೂಡಿ ಬಲಿಯು ಮಾಡುವ ಉಪಸರ್ಗ ಕಳೆಯುವ ತನಕ ಆಹಾರ ಶರೀರ ನಿವೃತ್ತಿಯೆಂದು ಕೈಯಿಟ್ಟುಕೊಂಡು ಜಿನಪಾದ ಕಮಲಗಳನ್ನು ಮನಸ್ಸಿನಲ್ಲಿ ಧರಿಸಿದರು. ಆ ವೇಳೆಗೆ ಇತ್ತ ಮುನಿಗಳೆಲ್ಲರೂ ಈ ಘೋಷಣೆಯನ್ನು ಕೇಳಿ ಆಗಲೇ ಹಾಗೆಯೇ ತಟ್ಟನೆ ಹೊರಟು ಹೋದರೆಂಬ ಮಾತನ್ನೇ ದೊಡ್ಡದು ಮಾಡಿ ಆ ಕುಟಿಲ ಮನಸ್ಕನು ಪುರದಲ್ಲಿ ಪ್ರಚಾರ ಮಾಡಿದನು. ೧೬೨-೩. ಹದಿನೈದು ದಿವಸ ಅರಸನು ಮದದಿಂದ ಪರವಶನಾದುದಕ್ಕೆ

ಪದಿನೈದು ದಿವಸಮರಸಂ
ಮದದಿಂ ಮೈಯಱಿಯದುಕ್ಕೆ ಪುರಜನಮೆಲ್ಲಂ
ಗದಗದಗಂಪಂಗೊಂಡುದು
ಮದವಟ್ಟಿದುದು ಬಲಿಯ ರಾಜ್ಯದುಗ್ರತೆಯಿಂದಂ ೧೬೪

ಗದ್ಯ॥ ಅಂತುಗ್ರನುಂ ಸಂಚಿತಪಾಪಚಿತ್ತನುಮುರ್ವೀಶ್ವರೈಶ್ವರ್ಯನುಮಾಗಿ ಪುರಜನಮುಮಂ ನಾಡುಮಂ ಪರಿಗ್ರಹಮುಮನೊಂದೆರಡು ದಿವಸದೊಳೆ ತನಗೆ ವಶಗತಮಾಡಿ ರಾಜ್ಯಶ್ರೀಯುಂ ಮೈಯಱಿಯದೆ ೧೬೫

ಎನಗೆ ಸಮಾನಮಪ್ಪರಣಮಿಲ್ಲ ಧರಿತ್ರಿಯೊಳೆಂದು ಸಾಗರೇ
ಶನ ಸಿರಿಯಂ ಫಣೀಶ್ವರನ ಮೈಮೆಯನರ್ಕನ ತೇಜಮಂ ಮನೋ
ಜನ ಸೊಬಗಂ ವಿಯಚ್ಚರನ ವೀರಮನಾದಿಯ ಭೂಪರೊಪ್ಪನಿಂ
ದ್ರವವಿಭವತ್ವಮಂ ಪಡೆದು ಪಾಡಿಸುವಂ ಬಲಿ ಕೊರ್ವಿ ನಿಚ್ಚಲುಂ ೧೬೬

ಗದ್ಯ॥ ಅಂತು ಪುಲ್ಲಕಿರ್ಚಿನಂತುರಿದು ಪಿರಿದಪ್ಪ ಪೆರ್ಚಿಂದಮಾನೀ ಪೊಟಲೊಳೇನಂ ಮಾಡಿದೊಡಂ ಬೇಡೆಂದು ಮಾರ್ಕೊಂಡು ಮಾಣಿಸುವ ಗಂಡರಾರೆಂದು ನಾಂದವರೆಯಂತೆ ಪೊಟ್ಟೆಳಿಸಿ ಮುಯ್ಪಂ ನೋಡಿ ಪಾಪಿಯೆ ಬಲ್ಲಾಳೆಂಬ ಮಾತಂ ನನ್ನಿಮಾಡಿ ಮುನೀಂದ್ರೋತ್ತಮರಪ್ಪ ಕಂಪನಾಚಾರ್ಯರಿರ್ದ ಸಿತಗಿರಿಯ ಸಮೀಪಕ್ಕೆ ವಂದು ೧೬೭

ಪುರಜನರೆಲ್ಲ ಗಡಗಡ ನಡುಗಿದರು. ಬಲಿಯ ಕ್ರೌರ್ಯದಿಂದ ರಾಜ್ಯದಲ್ಲೆಲ್ಲರೂ ಕಂಗೆಟ್ಟರು. ಅಹಂಕಾರ ಅಳಿಯಿತು. ೧೬೪. ಹಾಗೆ ಕ್ರೂರಿಯೂ ಪಾಪಚಿತ್ತನೂ ರಾಜನ ಐಶ್ವರ್ಯವುಳ್ಳವನೂ ಆಗಿ ಪುರಜನರನ್ನೂ ದೇಶವನ್ನೂ ಪರಿವಾರವನ್ನೂ ಒಂದೆರಡು ದಿವಸದಲ್ಲಿಯೇ ತನಗೆ ವಶರನ್ನಾಗಿ ಮಾಡಿಕೊಂಡು ರಾಜ್ಯೈಶ್ವರ್ಯವನ್ನು ಹೊಂದಿ ಮೈಯ ಅರಿವಿಲ್ಲದೆ ೧೬೫. ನನಗೆ ಸಮಾನರಾಗುವವರು ಯಾರೂ ಲೋಕದಲ್ಲಿ ಇಲ್ಲವೆಂದು ಸಮುದ್ರರಾಜನ ಐಶ್ವರ್ಯವನ್ನೂ ಆದಿಶೇಷನ ಮಹಿಮೆಯನ್ನೂ ಸೂರ್ಯನ ತೇಜಸ್ಸನ್ನೂ ಮನ್ಮಥನ ಸೊಬಗನ್ನೂ ಖೇಚರನ ವೀರತ್ವವನ್ನೂ ಆದಿಕಾಲದ ರಾಜರ ಶೋಭೆಯನ್ನೂ ಇಂದ್ರನ ವೈಭವವನ್ನೂ ಪಡೆದು ಬಲಿ ಕೊಬ್ಬಿ ನಿತ್ಯವೂ ಹಾಡಿಸುತ್ತಿದ್ದನು, ೧೬೬. ಹಾಗೆ ಹುಲ್ಲಿನ ಬೆಂಕಿಯಂತೆ ಉರಿದು ದೊಡ್ಡದಾದ ಉತ್ಸಾಹದಿಂದ ನಾನೀ ಪಟ್ಟಣದಲ್ಲಿ ಏನು ಮಾಡಿದರೂ ಬೇಡವೆಂದು ಎದುರಿಸಿ ತಪ್ಪಿಸುವ ಶೂರರು ಯಾರೆಂದು ಉಬ್ಬಿ ನೆಂದ ಅವರೆಕಾಳಿನಂತೆ ಹೊಟ್ಟೆಯುಬ್ಬಿಸಿ ಭುಜಗಳನ್ನು ನೋಡಿಕೊಂಡು 'ಪಾಪಿಯೇ ಬಲ್ಲಾಳ' ಎಂಬ ಮಾತನ್ನು ಸತ್ಯಮಾಡಿ ಮುನಿಶ್ರೇಷ್ಠರಾದ ಅಕಂಪನಾಚಾರ್ಯರು ಇದ್ದ ಅಸಿತಗಿರಿಯ ಹತ್ತಿರಕ್ಕೆ ಬಂದನು. ೧೬೭. ಅಲ್ಲಿ

ಪಿರಿದಪ್ಪ ಯಜ್ಞಶಾಲೆಗೆ
ಧರೆಬಯಲಿದು ಬೇಗವಿಲ್ಲಿ ಚೆಲ್ವಾಗಿರೆ ಚ
ಪ್ಪರಮನಳವಡಿಸಿ ಮಾಡುವು
ದಿರವೇಡೆಂದೆಯ್ದೆ ಪೆರ್ಗಡೆಗೆ ಬೆಸಸುವುದುಂ ೧೬೮

ಅರೆಗಾವುದಂತರಂಬರ
ಮರಸಿನ ಬೆಸದಿಂದೆ ಭೂವಿಃಶೋಧನೆಯುಂ ವಿ
ಸ್ತರವಾಗೆ ಮಾಡಿ ಚೆಲ್ವಾ
ಗಿರೆ ಸಮೆದರ್ ಚೆಲ್ವು ಕಣ್ಗೆವರೆ ಶಾವಣಮುಂ ೧೬೯

ಗದ್ಯ॥ ಆಗಳಲ್ಲಿಗುಚಿತವಪ್ಪುವೆಲ್ಲಮುಂ ಮಾಡಿ ಬಂದು ಬಲಿಗೆ ತನ್ನ ಮಾಡಿದ ಬೆಸನಂ ಬಿನ್ನ ಪಂಗೆಯ್ವುದುಂ ಪ್ರಸನ್ನಮನನಾಗಿ ಪೆರ್ಗಡೆಗೆ ಪಸಾಯದಾನಮುಂ ಕೊಟ್ಟು ಯಜ್ಞಶಾಲೆಯಂ ನೋಟ್ಪರ್ತಿಯಿಂ ಗಂಧಗಜಾರೂಢನಾಗಿ ಬಂದು ಚಪ್ಪರಂಗಳ ಚೆಲ್ವುಮಂ ಮಂಟಪಂಗಳ ವಿಳಾಸ ಮುಮಂ ಜಗಲಿಗಳ ಭಂಗಿಗಳುಮಂ ಹೋಮಕುಂಡಂಗಳುಮಂ ನೋಡುತ್ತುಂ ಗುಹೆಯ ಬಾಗಿಲ್ಗೆ ವಂದು ಸಿಕ್ಕಿದರೆಂದು ಮನದೊಳ್ ಕಳಕಳಿಸಿ ನಕ್ಕು ಪೆಱರಂ ವಂಚಿಸಲ್ವೇಡಿ ಕೆಲದೊಳಿರ್ದರ ಮೊಗಮಂ ನೋಡಿ ಕೇಳಿಮಿೂ ಗುಹೆಯೊಳೇನಾನುಂ ಕ್ರೂರಮೃಗಂಗಳಿರ್ದು ಪೋಪ ಬರ್ಪ ಪ್ರಜೆಗೆ

ದೊಡ್ಡದಾದ ಯಜ್ಞಶಾಲೆಗೆ ಈ ಬಯಲುನೆಲ ಚೆನ್ನ. ಇಲ್ಲಿ ಬೇಗನೆ ಅಂದವಾದ ಚಪ್ಪರವನ್ನು ಸಿದ್ಧಪಡಿಸುವುದು; ತಡಮಾಡಬಾರದು, ಎಂದು ಹೆಗ್ಗಡೆಗೆ ಅಪ್ಪಣೆ ಮಾಡಿದನು. ೧೬೮. ಅರ್ಧಗಾವುದ ದೂರದವರೆಗೆ ಅರಸನ ಅಪ್ಪಣೆಯಂತೆ ಭೂಶೋಧನೆಯನ್ನು ವಿಸ್ತಾರವಾಗಿ ಮಾಡಿ ಸುಂದರವಾಗಿ ಕಣ್ಣಿಗೆ ಮೆಚ್ಚಾಗುವ ಹಾಗೆ ಚಪ್ಪರವನ್ನು ಸಿದ್ಧಪಡಿಸಿದರು. ೧೬೯. ಆಗ ಅಲ್ಲಿಗೆ ಯೋಗ್ಯವಾದವುಗಳೆಲ್ಲವನ್ನೂ ಮಾಡಿ ಬಂದು ಬಲಿಗೆ ತಾನು ಮಾಡಿದ ಕೆಲಸವನ್ನು ಬಿನ್ನಹ ಮಾಡಲಾಗಿ, ಪ್ರಸನ್ನಮನಸ್ಕನಾಗಿ ಹೆಗ್ಗಡೆಗೆ ಬಹುಮಾನ ಕೊಟ್ಟು ಯಜ್ಞಶಾಲೆಯನ್ನು ನೋಡುವ ಸಂಭ್ರಮದಿಂದ ಮತ್ತಗಜದ ಮೇಲೆ ಹತ್ತಿಕೊಂಡು ಬಂದು ಚಪ್ಪರಗಳ ಚೆಲುವನ್ನೂ ಮಂಟಪಗಳ ಸೊಗಸನ್ನೂ ಜಗಲಿಗಳ ರೀತಿಗಳನ್ನೂ ಹೋಮಕುಂಡಗಳನ್ನೂ ನೋಡುತ್ತ ಗುಹೆಯ ಬಾಗಿಲಿಗೆ ಬಂದು, 'ಸಿಕ್ಕಿದರು' ಎಂದು ಮನಸ್ಸಿನಲ್ಲಿ ಉತ್ಸಾಹಿಸಿ ನಕ್ಕು ಇತರರನ್ನು ವಂಚಿಸಲು ಬಯಸಿ ಪಕ್ಕದಲ್ಲಿದ್ದವರ ಮುಖವನ್ನು ನೋಡಿ "ಕೇಳಿ, ಈ ಗುಹೆಯಲ್ಲಿ ಏನಾದರೂ ಕ್ರೂರ ಮೃಗಗಳಿದ್ದು ಹೋಗುವ ಬರುವ ಪ್ರಜೆಗಳಿಗೆ ಪೀಡೆಯುನ್ನುಂಟು

೬೩೨

ಮಾಡುಗುಮದಱಿಂದೊಳಗಣ ಪ್ರಾಣಿಗಳಂ ಪೊಱಮಟ್ಟು ಪೋಪಂತು ಮಾಡುವ ಪೇಡೆಯುಂ ವಿಾಗುಹೆಯ ಬಾಗಿಲೊಳ್ ಪಿರಿದಪ್ಪ ಪುಳ್ಳಿಗಳ ನಿಟ್ಟು ಕಿಚ್ಚನಿಡೆಂಬುದುಂ ೧೭೦

ಕರಮೆನಲ್ಪೊಸತಪ್ಪ ಸಾವೆಯಪುಲ್ಲನುಜ್ವಲಮಾಗಿ ತಾ
ನುರಿವ ತಾಱಿಯ ತೆಂಗಿನೆಕ್ಕಿಯ ಮಾವಿನಿಂಧನಮಂ ವಸುಂ
ಧರೆಯೊಳೊಪ್ಪುವನೆಲ್ಲ ಪುಲ್ಲನಮರ್ಕೆಯಿಂ ಕಿಱುವಳ್ಳಿಯಿಂ
ತರಿಸಿ ಮೆಲ್ಲನೆ ತೀವಿದರ್ ಗುಹೆಯಲ್ಲಿ ತತಕ್ಷಣದಿಂ ಭಟರ್ ೧೭೧

ಕಟ್ಟಾರಿದ ಪುಳ್ಳಿಗಳಂ
ನೆಟ್ಟನೆ ಕೊದಳಿಗಳನೆಯ್ದೆ ಕಾಟ್ಪಿರಣಿಗಳಂ
ತೊಟ್ಟನೆ ಪಱಿಸೀರೆಗಳಂ
ಬೆಟ್ಟಾಗಿರೆ ಗುಹೆಯ ಬಾಗಿಲೊಳ್ ತೀವಿಸಿದಂ ೧೭೨

ಗದ್ಯ॥ ಅಂತು ತೀವಿಸಿ ಗುಹೆಯಬಾಗಿಲಂ ನಿಶ್ಛಿದ್ರವಾಗೆಮಾಡಿ ತುಪ್ಪದೆಣ್ಣೆಯ ಕೊಡಂಗಳಂ ತರಿಸಿನಾನಾವಿಧದಿಂದೆನ್ನವಂನಿಸುಪೋಪಿಸಂ ಮನವಾರೆನಾಳೆ ಕಿಚ್ಚಂ ತಗುಳ್ಚಿ ಪೋಗದಂತು ಕೊಲ್ವೆ ನೆಂದಿರ್ಪನ್ನೆಗಂ ವಿದೇಹವಿಷಯದ ಮಿಥಿಲಾಪುರದೊಳ್ ೧೭೩

ಮಾಡುವುವು. ಆದ್ದರಿಂದ ಒಳಗಿನ ಪ್ರಾಣಿಗಳನ್ನು ಹೊರಟು ಹೋಗುವ ಹಾಗೆ ಮಾಡೋಣ. ಈ ಗುಹೆಯ ಭಾಗಿಲಲ್ಲಿ ದೊಡ್ಡ ಪುಳ್ಳಿಗಳನ್ನು ಹಾಕಿ ಬೆಂಕಿ ಹಚ್ಚಿರಿ ಎಂದನು. ೧೭೦. ಹೊಸದಾದ ಸಾವೆಯ ಹುಲ್ಲನ್ನು ಹೆಚ್ಚಾಗಿ ಹಾಕಿ ಉಜ್ವಲವಾಗಿ ಉರಿಯುವ ತಾರೆ, ತೆಂಗು, ಎಕ್ಕೆ, ಮಾವು, ಮೊದಲಾದ ಸೌದೆಗಳನ್ನು ಭೂಮಿಯಲ್ಲಿ ಲಭಿಸುವವುಗಳನ್ನೆಲ್ಲ ಚಿಕ್ಕಹಳ್ಳಿಗಳಿಂದ ತರಿಸಿ ಮೆಲ್ಲನೆ ಗುಹೆಯಲ್ಲಿ ಅಚ್ಚುಕಟ್ಟಾಗಿ ಜೋಡಿಸಿ ತುಂಬಿದರು. ೧೭೧. ಚೆನ್ನಾಗಿ ಒಣಗಿದ ಪುಳ್ಳಿಗಳನ್ನೂ ಎಳ್ಳಿನ ಸಿಪ್ಪೆ ಗಳನ್ನೂ ಹೆಚ್ಚಾಗಿ ಕಾಡು ಬೆರಣಿಗಳನ್ನೂ ಹರಿದ ಸೀರೆಗಳನ್ನೂ ಬೆಟ್ಟದಂತೆ ಗುಹೆಯ ಬಾಗಿಲನಲ್ಲಿ ತುಂಬಿಸಿದನು. ೧೭೨. ತುಂಬಿಸಿ ಗುಹೆಯ ಬಾಗಿಲನ್ನು ರಂಧ್ರ ವಿಲ್ಲದಂತೆ ಮಾಡಿ ತುಪ್ಪದ, ಎಣ್ಣೆಯ ಕೊಡಗಳನ್ನು ತರಿಸಿ 'ನಾನಾ ವಿಧ ವಾಗಿ ನನ್ನ ಸಿಟ್ಟು ಹೋಗುವಂತೆ ನಾಳೆ ಮನಸ್ತೃಪ್ತಿಯಾಗಿ ಬೆಂಕಿಯನ್ನು ಹಾಕಿ, ಹೊರಗೆ ಹೋಗದ ಹಾಗೆ ಕೊಲ್ಲುವೆನು" ಎಂದಿರುವಾಗ ವಿದೇಹ ಪ್ರಾಂತ್ಯದ ಮಿಥಿಲಾ ಪಟ್ಟಣದಲ್ಲಿ ಪರಮ ಗುಣಾಢ್ಯರಾದ ನಿರ್ಮಲಚರಿತ್ರರೂ ಪಾಪಪರಿಹಾರ

ಪರಮಗುಣಾಢ್ಯರ್ ನಿರ್ಮಳ
ಚರಿತರ್ ದುರಿತಾಪಹಾರಿಗಳ್ ಸಶ್ರುತಸಾ
ಗರರವಧಿಲೋಚನರ್ ಮಂ
ದರಧೈರ್ಯರ್ ಸಕಳಭವ್ಯವಂದಿತಪಾದರ್ ೧೭೩

ಗದ್ಯ॥ ವಿಷ್ಣುಗಳೆಂಬಾಚಾರ್ಯರ್ ಸಮುದಾಯಂ ಬೆರಸಲ್ಲಿ ಜೋಗುಗೊಂಡಿರ್ಪುದುಂ ಧರ್ಮರುಚಿಗಳೆಂಬ ಋಷಿಯರ್ ಇರುಳ್ ಕಾಯಶುದ್ಧಿಗೆಂದು ಪೊಱಮಟ್ಟಾಕಾಶಮಂ ನೋಡುವುದುಂ ೧೭೪

ಪರಮತಪೋಧನರ್ಗೆ ಬೆಸಕೆಯ್ವ ಮಹಾತ್ಮರೆ ಸೌಖ್ಯಭಾಜನರ್
ಧರಣಿಯೊಳಂತುಟಂ ಬಗೆಯನೀ ಖಳನುತ್ತಮ ಯೋಗಿಸಂಕುಳ
ಕ್ಕಿರದುಪಸರ್ಗಮಂ ಮುನಿದು ಮಾಡಿ ಮಹಾನರಕಕ್ಕೆ ಸಂದಪಂ
ದುರಿತದಿನಕ್ಕಟಾ ಕುಟಿಲನೆಂದು ದಯೋನ್ನತಿಯಿಂ ಧರಿತ್ರಿಯೊಳ್ ೧೭೬

ಗದ್ಯ॥ ನಡುಗುವಂತೆ ನಡುಗುವ ಶ್ರವಣನಕ್ಷತ್ರಮಂ ತೊಟ್ಟನೆ ಕಂಡು ಮಹಾತಪೋಧನರ್ಗೆಲ್ಲಿ ಯಾನುಂ ಘೋರೋಪಸರ್ಗಮಾಗಲೆವೇಳ್ಕುಮಲ್ಲದಂದೀ ನಕ್ಷತ್ರಮಿಂತು ನಡುಗದೆಂದು ತಮ್ಮೊಳ್ ನುಡಿಯುತ್ತಮೊಳಗಣ್ಗೆ ವಂದು ೧೭೭

ಕರೂ, ಶ್ರುತಸಾಗರರೂ ಅವಧಿಜ್ಞಾನಿಗಳೂ ಮಂದರದಂಥ ಧೈರ್ಯವುಳ್ಳವರೂ ಸಮಸ್ತಭವ್ಯರಿಗೂ ವಂದನಾರ್ಹರೂ ಆದ ವಿಷ್ಣುಗಳೆಂಬ ಆಚಾರ್ಯರು ಸಮುದಾಯದೊಡನೆ ಕೂಡಿ ಅಲ್ಲಿ ಯೋಗದೀಕ್ಷೆಯಲ್ಲಿರಲು ಧರ್ಮರುಚಿಗಳೆಂಬ ಋಷಿಗಳು ಆ ರಾತ್ರಿ ಕಾಯಶುದ್ಧಿಗೋಸ್ಕರ ಹೊರಗೆ ಹೋಗಿದ್ದಾಗ ಆಕಾಶವನ್ನು ನೋಡಿದರು. ೧೭೩–೧೭೪. "ಪರಮ ತಪಸ್ವಿಗಳ ಸೇವೆ ಮಾಡುವ ಮಹಾತ್ಮರೇ ಸೌಖ್ಯಪಾತ್ರರು. ಲೋಕದಲ್ಲಿ ಈ ದುಷ್ಟನು ಅಷ್ಟನ್ನೂ ಯೋಚಿಸನು. ಉತ್ತಮ ಯೋಗಿಸಮೂಹಕ್ಕೆ ಈ ಕುಟಿಲನು ಸುಮ್ಮನೆ ಉಪಸರ್ಗವನ್ನು ಮುನಿಸಿನಿಂದ ಮಾಡಿ ಮಹಾನರಕಕ್ಕೆ ಸೇರುವನು." ಎಂದು ದಯಾಧಿಕ್ಯದಿಂದ ಹೇಳುತ್ತಿರುವುದೋ ಎಂಬಂತೆ ನಡುಗುವ ಶ್ರವಣ ನಕ್ಷತ್ರವನ್ನು ಹಟಾತ್ತಾಗಿ ಕಂಡು 'ಎಲ್ಲಿಯಾದರೂ ಮಹಾ ತಪೋಧನರಿಗೆ ಘೋರವಾದ ಉಪಸರ್ಗವಾಗಿಯೇ ಇರಬೇಕು. ಅಲ್ಲದಿದ್ದರೆ ಈ ನಕ್ಷತ್ರ ಹೀಗೆ ನಡುಗದು' ಎಂದು ತಮ್ಮೊಳಗೇ ಹೇಳಿಕೊಳ್ಳುತ್ತ ಒಳಕ್ಕೆ ಬಂದರು. ೧೭೬–೧೭೭. ಅಲ್ಲಿ ಗುರುಗಳಿಗೆ ತಿಳಿಸುತ್ತಲೂ ಆ ಸಚ್ಚರಿತ್ರರು ಚೆನ್ನಾಗಿ ಕೇಳಿ ಆ

ಗುರುಗಳ್ಗಱಿಪುವುದುಂ ಸ
ಚ್ಚರಿತರ್ ಲೇಸಾಗಿ ಕೇಳ್ದು ತದ್ವಚನಮುನ
ಚ್ಚರಿವಟ್ಟು ನೋಡಿ ಕಂಡರ್
ಪರಮಾವಧಿಯಿಂ ಮುನೀಂದ್ರರುಪಸರ್ಗಮುಮಂ ೧೭೮

ಗದ್ಯ॥ ಅಂತು ಪರಮಾವಧಿಲೋಚನದಿನಱಿದಕ್ಕಟಾ ಕುರುಜಾಂಗಣವಿಷಯದ ಹಸ್ತಿನಾಪುರದೊಳ್ ಜೋಗುಗೊಂಡಿರ್ದ ಅಕಂಪನಾಚಾರ್ಯರ್ಗಮವರೊಡನಿರ್ದೈನೂರ್ವರ್ ಸಾಧುಗಳ್ಗಂ ಬಲಿಯೆಂಬ ರೌದ್ರಾತ್ಮನ ದೆಸೆಯಿಂ ಪಿರಿದಪ್ಪುಪಸರ್ಗಮಾಗಿರ್ದುದೆಂಬುದಂ ಸಿದ್ಧವಿದ್ಯೆಗಳೊಳ್ ಪರಿಣತನುಂ ವಾತ್ಸಲ್ಯರತ್ನಾಕರರುಮಪ್ಪ ಪುಷ್ಪದೇವನೆಂಬ ಬ್ರಹ್ಮಚಾರಿ ಮುನಿದಿಂತೆಂದಂ ೧೭೯

ಕೋಡಗಗಟ್ಟುಗಟ್ಟಿಸನೆ ವಾರಿಧಿಯೊಳ್ ಪಿಡಿದೊತ್ತಿ ಜೀವಮು
ಲ್ಲಾಡೆ ತೊಡಂಕಿ ನೂಂಕಿಸನೆ ಮೇರುನಗಕ್ಕೆಳೆದುಯ್ದು ಮೇಗಣಿಂ
ಕೂಡಿ ಸಮಂತುರುಳ್ವಿಪೆನೆ ಪನ್ನಗಸಂಕುಳದಿಂ ಭಯಂಕರಂ
ಮಾಡಿ ತಗುಳ್ವಿ ಬೆರ್ಚಿಸೆನೆ ಲೋಕಮುಗುರ್ವಿಸಲೆನ್ನ ವಿದ್ಯೆಯಿಂ ೧೮೦

ಮಾತಿಗೆ ಆಶ್ಚರ್ಯಪಟ್ಟು ಅವಧಿ ನೇತ್ರದಿಂದ ನೋಡಿ ಮುನೀಂದ್ರರಿಗೆ ಒದಗಲಿದ್ದ ಉಪಸರ್ಗವನ್ನು ಕಂಡರು. ೧೭೮. ಹಾಗೆ ಪರಮಾವಧಿ ಲೋಚನದಿಂದ ತಿಳಿದು ಅಯ್ಯೋ, ಕುರುಜಾಂಗಣದೇಶದ ಹಸ್ತಿನಾಪುರದಲ್ಲಿ ಯೋಗದಲ್ಲಿರುವ ಅಕಂಪನಾಚಾರ್ಯರಿಗೂ ಅವರೊಡನೆ ಇರುವ ಐನೂರು ಮಂದಿ ಸಾಧುಗಳಿಗೂ ಬಲಿಯೆಂಬ ಕ್ರೂರಾತ್ಮನ ದೆಸೆಯಿಂದ ದೊಡ್ಡದಾದ ಉಪಸರ್ಗವಾಗಿದೆಯೆಂಬುದನ್ನು ಕೇಳಿ ಸಿದ್ಧ ವಿದ್ಯೆಗಳಲ್ಲಿ ಪಂಡಿತನೂ ವಾತ್ಸಲ್ಯರತ್ನಾಕರನೂ ಆದ ಪುಷ್ಪದೇವನೆಂಬ ಬ್ರಹ್ಮಚಾರಿ ಮುನಿದು ಹೀಗೆಂದನು: ೧೭೯. ಆ ನೀಚನನ್ನು ಕೋಡಗಗಟ್ಟುಗಟ್ಟಿಸಲೆ, ಹಿಡಿದೊತ್ತಿ ಜೀವವು ಅಲ್ಲಾಡೆ ತೊಡಕಿಸಿ ಮೇರುಪರ್ವತದ ಮೇಲಕ್ಕೆ ಎತ್ತಿಕೊಂಡು ಹೋಗಿ ನೂಕಿಸಲೆ, ಹಾವಿನ ಸಮೂಹದಿಂದ ಭಯಂಕರವಾಗಿ ಮಾಡಿ ತಾಕಿಸಿ ಬೆದರಿಸಲೆ, ನನ್ನ ವಿದ್ಯೆಯಿಂದ ಲೋಕವೇ ಹೆದರುವಂತೆ, ೧೮೦. ಅವನ ಕಾಲನ್ನು ಔಕಿ ಹಿಡಿದು ಲಕ್ಷ್ಯ ಮಾಡದೆ ಭೋರೆಂದು ಬೀಸಿ ಕಂಬಕ್ಕೆ ಹೊಡೆಯಲೆ ? ಕೆಂಪಗೆ ಕಾದ ಕೊಳ್ಳಿಯಲ್ಲಿ ಅವನ್ನು ತಾಕಿ ಚುಚ್ಚಿಸನೆ ? ಹೆಬ್ಬುಲಿಗಳಿಂದ, ಆನೆಗಳಿಂದ, ಕಣ್ಣಾಲಿ ಮೇಲಕ್ಕೇಳುವಂತೆ ಒಮ್ಮೆಗೆ ತುಳಿಸನೆ ? ಕೊಬ್ಬಿದ ಆ ಗಾಂಪನನ್ನು ನನ್ನ ವಿದ್ಯಾಬಲದಿಂದ ಸಮುದ್ರದ

ಕಾಲನವುಕಿ ಪತ್ತಿ ಪಿಡಿದೋವದೆ ಭೋರೆನೆ ಬೀಸಿ ಕಂಬದೊಳ್
ಲೀಲೆಯಿನಟ್ಟಿ ಮೋದಿಸನೆ ಕಿಚ್ಚನೆ ಕಾಯ್ದುಕನಲ್ದುಕೊಳ್ಳಿಯೊಳ್
ಸೋಲೆ ತಗಳ್ದು ಚುಚ್ಚಿಸನೆ ಪೆರ್ಬುಲಿಯಿಂದಂ ಗಜದಿಂ ಬಿಗುಳ್ದು ಕ
ಣ್ಣಾಲಿ ತುಳುಂಕೆ ಮೆಟ್ಟಿಸನೆ ಕೊರ್ವಿದ ಗಾಂಪನನೆನ್ನ ವಿದ್ಯೆಯಿಂ ೧೮೧

ಶರನಿಧಿವಾರಿಯಂ ತಳದೊಳಾಂಪೆನೊ ದೇವನಗೇಂದ್ರಮಂ ಮನಂ
ಮುರಿಯದೆ ಕಿಱ್ತುತರ್ಪೆನೊ ದಿನೇಶನ ಬಿಂಬಮನುದ್ಧತಿಕ್ಕೆಯಿಂ
ಕರದೊಳಡರ್ತು ನೂಂಕುವೆನೊ ಪನ್ನಗರಾಜನನೊತ್ತಿಕಟ್ಟಿ ಚಿ
ಚ್ಚರಿಪ ಕರಾಗ್ರದೊಳ್ ನಿಱಿಪೆನೋ ಪಿಡಿದೇಱುವೆನೋ ಸುರೇಭಮಂ ೧೮೨

ಲವಣಾಂಭೋರಾಶಿಯಂ ದಾಂಟುವೆನೊ ಕುಳನಗಾನೀಕಮಂ ಪಾದದಿಂ ಭೂ
ಭುವನಕ್ಕಾಶ್ಚರ್ಯಮಪ್ಪಂತೊದೆವೆನೊ ನೆಲೆಯಿಂ ಪಾಱಿ ದಿಕ್ಪಾಲರಂ ಮ
ಜ್ಜವದಿಂ ಜೀಯೆಂಬಿನಂ ಕಟ್ಟುವೆನೊ ಶರಭಮಂ ನೂರನಿನ್ನೂರನತ್ಯು
ತ್ಸವದಿಂ ಕೀಳಿಟ್ಟು ಪೇಟೇಱುವೆನೊ ಧರಣಿಯಂ ಪೊಯ್ವೆನೋ ಕೊಂತುವೋಗಲ್ ೧೮೩

ಗದ್ಯ॥ ಎಂದು ತಾಂ ವಿದ್ಯಾಪರಮೇಶ್ವರನಪ್ಪುದಱಿಂ ವಿಷ್ಣುಮುನೀಶ್ವರನ ಮುಂದೆ ತನ್ನ ಪ್ರತಾಪಮಂ ನುಡಿದು ಬಲಿಯನವಯವದಿಂದೆನ್ನ ವಿದ್ಯೆಗಳಿಂದಡಸಿ ಕಟ್ಟಿ ಸಮುದ್ರದೊಳಟ್ಟಿ ಕೊಂದಪೆನೆಂದು ಮಸಗಿ ಗರ್ಜಿಸುವುದುಂ ವಿಷ್ಣುಮುನೀಶ್ವರಂ ಪುಷ್ಪದೇವನನಿಂತೆಂದಂ ೧೮೪

ನೀರಿನ ತಳಕ್ಕೆ ಒಯ್ಯಲೆ ? ಮೇರುಪರ್ವತವನ್ನು ಅಂಜದೆ ಕಿತ್ತುತರಲೆ ? ಸೂರ್ಯ ಬಿಂಬವನ್ನು ಔದ್ಧತ್ಯದಿಂದ ಕೈಯಲ್ಲಿ ಹಿಡಿದು ನೂಕಲೋ ? ಸರ್ಪರಾಜನನ್ನು ಒತ್ತಿ ಕಟ್ಟಿ ಬೇಗನೆ ಕೈಯಲ್ಲಿ ನಿಲ್ಲಿಸಲೋ,ದೇವತೆಗಳ ಆನೆಯನ್ನು ಹಿಡಿದು ಏರಲೊ? ೧೮೧–೨. ಲವಣಸಮುದ್ರವನ್ನು ದಾಟಲೊ, ಕುಲಪರ್ವತಗಳ ಸಮೂಹವನ್ನು ಲೋಕಗಳಿಗೆಲ್ಲ ಆಶ್ಚರ್ಯವಾಗುವಂತೆ ನನ್ನ ಪಾದದಿಂದ ಒದೆಯಲೊ ? ವೇಗದಿಂದ ನುಗ್ಗಿ ಹೋಗಿ ದಿಕ್ಪಾಲಕರನ್ನು ಜೀಯೆನ್ನಿಸಿ ಕಟ್ಟಿ ಹಾಕಲೆ, ನೂರಿನ್ನೂರು ಶರಭಗಳನ್ನು ಉತ್ಸವದಿಂದ ಕೀಳಿಟ್ಟು ಕಡಿವಾಣಹಾಕಿ ಹತ್ತಿ ಸವಾರಿಮಾಡಲೋ, ಭೂಮಿಯನ್ನು ತೂತು ಬೀಳುವಂತೆ ಹೊಡೆಯಲೋ. ೧೮೩. ಎಂದು ತಾನು ವಿದ್ಯಾಪರಮೇಶ್ವರನಾದುದರಿಂದ ವಿಷ್ಣು ಮುನೀಶ್ವರನ ಮುಂದೆ ತನ್ನ ಪ್ರತಾಪವನ್ನು ಹೇಳಿ 'ಬಲಿಯನ್ನು ಬೇಗನೆ ನನ್ನ ವಿದ್ಯೆ ಗಳಿಂದ ಹಿಡಿದು ಕಟ್ಟಿ ಸಮುದ್ರದಲ್ಲಿ ಅಟ್ಟಿಕೊಲ್ಲುತ್ತೇನೆ, ಎಂದು ರಭಸದಿಂದ ಗರ್ಜಿಸ ಲಾಗಿ ಆ ವಿಷ್ಣುಮುನೀಶ್ವರನು ಪುಷ್ಪದೇವನಿಗೆ ಹೀಗೆ ಹೇಳಿದನು; ೧೮೪. ಮಹಾ

ಕಡುಮೂರ್ಖರ್ ಮಾಡಿದುದಂ
ತಡೆಯದೆ ನಾಂ ಮಾಟ್ಪೆನೆಂದು ಮುಸುಗುವ ಪುರುಷಂ
ಕಡುಕಷ್ಟಂ ನಾಯ್ ಕಚ್ಚಿದೊ
ಡೊಡಗಚ್ಚಲ್ ಬೊಗುಟ ಬೊಗುಟಲೇಂ ಬಂದಪುದೇ ೧೮೩

ಮುನಿಸಿಂ ತನಗಿದಿರಲ್ಲದ
ಮನುಜಂಗಿದಿರಾಗವೇಡದೆಂತೆನೆ ಗಜಗ
ರ್ಜನೆಗೆ ಮುನಿವಂತೆ ಪಂಚಾ
ನನನಡವಿಯೊಳಿರ್ದ ನರಿಗೆ ಮುನಿಗುಮೆ ಜಗದೊಳ್ ೧೮೪

ಗದ್ಯ॥ ಎಂದು ಪುಷ್ಪದೇವನಂ ಮೆಲ್ಲನೆ ಮೃದುವಚನಂಗಳಿಂ ಮಾಣಿಸಿ ವಿಷ್ಣುಕುಮಾರ ಮುನಿತಿಲಕನ ಮೊಗಮಂ ನೋಡಿ ತಪೋಧನರಕ್ಕೆ ಶ್ರಾವಕರಕ್ಕೆ ಪ್ರಭಾವನೆಯುಂ ಮಾಡದಂದು ಪೊಸ ಬಸದಿಯುಂ ಮಾಡಿ ತೂಂತುವೋದ ಕಳಶಮನಿಡುವಂತೆ,ಮಗಳಮದುವೆಯುಂ,ಮಾಡಿ ರಂಡೆ ಯಾಗೆಂದು ಪರಸುವಂತೆ, ಪಟ್ಟಮುಂ ಕಟ್ಟಿ ಸಾಯೆಂದು ಸೇಸೆಯನಿಕ್ಕುವಂತೆ, ಉಯ್ಯಲನಿಕ್ಕಿ ಗೋಮೂತ್ರದಿಂ ಕೈಗರ್ಚಲೆಡೆವಂತೆ ಬಿರ್ದಿಕ್ಕಿ ಕಲ್ಲೊಳಿಡುವಂತೆ, ತೋಂಟಮುಂ ಮಾಡಿ ಕಡಿವಂತೆ, ಕಯ್ಯುಂ ಮಾಡಿ ಕಿಚ್ಚಿಡುವಂತೆ, ಮಗನಂ ನಡೆಪಿ ಬಾವಿಯೊಳ್ ನೂಂಕುವಂತೆ,

ಮೂರ್ಖನು ಮಾಡಿದುದನ್ನು ತಡೆಯದೆ ನಾನು ಮಾಡುವೆನೆಂದು ಸಿಟ್ಟಿನಿಂದ ವಿಜೃಂಭಿಸುವ ಪುರುಷನು ಬಹಳ ಕೀಳು, ನಾಯಿ ಕಚ್ಚಿದರೆ ಒಡನೆ ಅದನ್ನು ಕಚ್ಚಲಾಗುವುದೆ ? ಅದು ಬೊಗಳಿದರೆ ನಾವು ಬೊಗಳಲಾದೀತೆ ? ೧೮೩. ಸಿಟ್ಟಿನಿಂದ ತನಗೆ ಸಮನಲ್ಲದ ಮನುಜನಿಗೆ ನೀನು ಇದಿರು ಬೀಳಬೇಡ.ಅದು ಹೇಗೆಂದರೆ, ಆನೆಯ ಗರ್ಜನೆಗೆ ಮುನಿಯುವಂತೆ ಸಿಂಹವು ಅಡವಿಯಲ್ಲಿರುವನರಿಗೆ ಮುನಿಸಿಕೊಳ್ಳುತ್ತದೆಯೆ ? ೧೮೪. ಎಂದು ಪುಷ್ಪ ದೇವನನ್ನು ಮೆಲ್ಲನೆ ಮೃದುವಾಕ್ಯಗಳಿಂದ ತಪ್ಪಿಸಿ, ವಿಷ್ಣುಕುಮಾರಮುನಿತಿಲಕನ ಮುಖವನ್ನು ನೋಡಿ ತಪೋಧನರಾಗಲಿ, ಶ್ರಾವಕರಾಗಲಿ, ಪ್ರಭಾವನೆಯನ್ನು ಮಾಡದಿದ್ದರೆ ಹೊಸ ಬಸದಿಯನ್ನು ಮಾಡಿ ತೂತು ಬಿದ್ದ ಕಳಶವನ್ನು ಇಡುವ ಹಾಗೆ, ಮಗಳ ಮದುವೆಯನ್ನು ಮಾಡಿ 'ರಂಡೆಯಾಗು' ಎಂದು ಹರಸುವಂತೆ, ಪಟ್ಟವನ್ನು ಕಟ್ಟಿ 'ಸಾಯಿ' ಎಂದು ಸೇಸೆ ಹಾಕುವಂತೆ, ಪಾಯಸವನ್ನು ಬಡಿಸಿ ಗೋಮೂತ್ರವನ್ನು ಕೈತೊಳೆಯಲು ಕೊಡುವಂತೆ, ಔತಣವನ್ನು ಬಡಿಸಿ ಕಲ್ಲಿನಿಂದ ಹೊಡೆಯುವಂತೆ, ತೋಟವನ್ನು ಮಾಡಿ ಕಡಿಯುವಂತೆ, ಗದ್ದೆಯನ್ನು ಮಾಡಿ ಬೆಂಕಿ ಹಚ್ಚುವಂತೆ, ಮಗನನ್ನು ಸಲಹಿ ಬಾವಿಯಲ್ಲಿ ನೂಕುವ ಹಾಗೆ, ಕುದುರೆಯನ್ನು ಸಾಕಿ ಕಳ್ಳರಿಗೆ ಕೊಡುವಂತೆ

ಕುದುರೆಯುಂ ಪೊರೆದು ಕಳ್ಳರ್ಗೆ ಕುಡುವಂತೆ ಸಿಂಹಾಸನಮನೇಱಿ ಮಸಿಯುಂ ಪೂಸುವಂತೆ, ಮಹಾವ್ರತಮುಮಣುವ್ರತಮುಂ ನಿಷ್ಫಲಮಕ್ಕುಮದು ಕಾರಣದಿಂ ೧೮೭

ಮುನಿವರರುಪಸರ್ಗಂ ನೆ
ಟ್ಟನೆ ಕಿಡುವೊಡೆಸರಳಭವ್ಯವಂದಿತಪದ ಮೋ
ದನಿಪೂಜ್ಯ ದಿವಿಜಶೇಖರ
ವಿನಮಿತ ದುರಿತಾಪಹಾರಿ ನಿನ್ನಿಂ ಕಿಡುಗುಂ ೧೮೮

ಗದ್ಯ॥ ಎಂಬುದುಂ ಸುಕವಿನಿಕರಪಿಕಮಾಕಂದಂ ಮುಗುಳ್ನಗೆ ನಕ್ಕು ಮನದೊಳಾಮಾತಿಂಗೆ ಕರಮಲ್ಲದೆ ಲಜ್ಜಿಸಿ ಜಿಷ್ಣು ಮುನಿಪತಿಗೆ ಪೊಡೆಮಟ್ಟು ವಿನಯದಿಂ ತಲೆಯಂ ಬಾಗಿ, ಕರಕಮಲಂಗಳಂ ಮುಗಿದು ೧೮೯

ಸನ್ನುತ ಮುನಿವರರಿರ್ದುಂ
ತನ್ನನೆ ನಿಮ್ಮಡಿಗಳಟ್ಕರಿಂದೇಱಿಸಿ ಸಂ
ಪನ್ನತೆಯಿಂದುಪಸರ್ಗಮ
ದನ್ನಱಿ ಪಿಂಗಿಸುವೆಯೆಂಬುದನುಚಿತಮಲ್ತೇ ೧೯೦

ಗದ್ಯ॥ ನಿಮ್ಮಡಿಗಳೆಮ್ಮ ಮೆಯ್ಯೊಳಾದಾವ ಗುಣಮಂ ಕಂಡೀಮಾತಂ ಬೆಸಸಿದಿರೆಂಬುದುಂ ಜಿಷ್ಣುಮುನೀಶ್ವರರಿಂತೆಂದರ್ ೧೯೧

ಸಿಂಹಾಸನವನ್ನು ಹತ್ತಿಸಿ ಮಸಿಯನ್ನು ಹಚ್ಚುವಂತೆ ಮಹಾವ್ರತವೂ ಅಣುವ್ರತವೂ ನಿಷ್ಫಲವಾಗುವುವು. ಆದಕಾರಣ ೧೮೭. ಮುನಿಶ್ರೇಷ್ಠರ ಉಪಸರ್ಗವು ಬೇಗನೆ ಕೆಡಬೇಕಾದರೆ ಸರಳ ಭವ್ಯವಂದಿತ ಪಾದ, ಲೋಕಪೂಜ್ಯ, ದೇವಶೇಖರವಿನಮಿತ, ಪಾಪಪರಿಹಾರಕ! ನಿನ್ನಿಂದ ಕೆಡುತ್ತದೆ. ೧೮೮. ಎನ್ನಲು ಸುಕವಿನಿಕರಪಿಕಮಾಕಂದನು ಮುಗುಳುನಕ್ಕು ಮನಸ್ಸಿನಲ್ಲಿ ಆ ಮಾತಿಗೆ ಹೆಚ್ಚಾಗಿ ನಾಚಿಕೆಪಟ್ಟು, ಜಿಷ್ಣುಮುನಿಪತಿಗೆ ನಮಸ್ಕಾರಮಾಡಿ ವಿನಯದಿಂದ ತಲೆತಗ್ಗಿಸಿ, ಕರಕಮಲಗಳನ್ನು ಜೋಡಿಸಿ ೧೮೯. ಶ್ರೇಷ್ಠರಾದ ಮುನಿವರರು ಇದ್ದೂ ನನ್ನನ್ನೇ ನಿಮ್ಮ ಪಾದಗಳು ಪ್ರೀತಿಯಿಂದ ಏರಿಸಿ ಸಂಪನ್ನತೆಯಿಂದ 'ಉಪಸರ್ಗವನ್ನು ಹಿಂಗಿಸುತ್ತೀಯೆ' ಎಂದು ಹೇಳುವುದು ಅನುಚಿತವಲ್ಲವೆ ? ೧೯೦. ನಿಮ್ಮಡಿಗಳು ನಮ್ಮ ದೇಹದಲ್ಲಿ ಆದ ಯಾವಗುಣವನ್ನು ಕಂಡು ಈ ಮಾತನ್ನು ಹೇಳಿದಿರೆಂದು ಎನ್ನಲು ಜಿಷ್ಣುಮುನೀಶ್ವರರು ಹೀಗೆ ಹೇಳಿದರು: ೧೯೧,

ನೆಱೆಯೆ ಧರಿತ್ರಿ ಕೈಮುಗಿವಿನಂ ಪದೆಪಿಲ್ಲದೆ ರಾಜ್ಯಲಕ್ಷ್ಮಿಯುಂ
ತೊಱೆದು ಮನುಷ್ಯಲೋಕಸುಖಮಸ್ಥಿರವೆಂದಳಿಪಿಂದೆ ಸೋಲ್ತು ಪೊ
ಚ್ಚಱಗಿಡದಮ್ಮ ಜೀಯೆನಿಸಿ ಯೀವೊಡಲಂ ಜಿನದೀಕ್ಷೆಗೊಡ್ಡಿ ಮ
ತ್ತೀಱಿಕೆಯ ಮೂಱುಮೂಢಮುಮನೊರ್ಮೆಯೆ ಬಿಟ್ಟು ಮಹಾನುರಾಗದಿಂ ೯೫೨

ಗದ್ಯ॥ ಪಗೆಯುಳ್ಳನಂತೆ ಪರಸಮಯಮಂ ಸಾರದೆ, ದೂರದ ನಂಟರಂ ಕಂಡರಂತೆ ಸಂಶಯ ಮಾಗದೆ, ಕಳ್ಳೋಡುವನಂತೆ ಸುಮಾರ್ಗಕ್ಕಂಜದೆ, ಸಾಲಗೊಂಡ ಬಡವನಂತೆ ತಪಕ್ಕೆ ನಡುಗದೆ, ಕಿರ್ಚಿನಂತೆ ಸದ್ಧರ್ಮಕ್ಕೆ ಕಾಯದೆ, ನಿರ್ಮಲಚಿತ್ತದಿಂದುತ್ತಮಮಪ್ಪ ತಪಮಂ ಮನಮಂ ಕ್ಕದೆ ಪೆಱದೆಗೆಯದೆ ಪೆಱನ ನೆವಕ್ಕೆ ಮಾಡದೆ ಮೋಕ್ಷಾಪೇಕ್ಷೆಯಿಂ ನಿಜಬುದ್ಧಿಯಿಂದರ್ತಿವೆರಸು ನೆಗೞ್ದಿ ಯಪ್ಪುದಱಿಂ ನಿನಗೆ ತಪದ ಮಾಹಾತ್ಮ್ಯದಿಂದಣಿಮಾ ಮಹಿಮಾ ಗರಿಮಾ ಲಘಿಮಾ ಪ್ರಾಪ್ತಿ ಪ್ರಾಗಲ್ಭ್ಯಂ ಈಶತ್ವಂ ವಶಿತ್ವಂ ಕಾಮರೂಪಿತ್ವಂ ಎಂಬಷ್ಟಗುಣೈಶ್ವರ್ಯಮುಂ ಪುಟ್ಟಿದುವ ಪ್ಪುದಱಿಂ ನಿನ್ನಿಂದಕಂಪನಾಚಾರ್ಯರುಪಸರ್ಗಂ ಪೋಕುಮೆಂದು ಪೇೞ್ದಿವದಱಿಂ ೯೫೩

ಜೀವವಧೆಯಾಗದಂತಖಿ
ಳಾವನಿತಳಪೂಜ್ಯ ಪೋಗಿ ಪಿಂಗಿಸುವುದು ಸ
ದ್ಭಾವದಿನೆನೆ ದುಷ್ಕೃತವಿ
ದ್ರಾವಣನಪರಿಮಿತಧೈರ್ಯನನುಪಮವಾಕ್ಯಂ ೯೫೪

ಸಮಸ್ತ ಭೂಲೋಕವೇ ಕೈಮುಗಿಯುವಂತೆ ಉತ್ಸಾಹವಿಲ್ಲದೆ, ಆಸೆಯಿಲ್ಲದೆ ರಾಜ್ಯಲಕ್ಷ್ಮಿ ಯನ್ನು ತೊರೆದು ಮನುಷ್ಯಲೋಕಸುಖವು ಅಸ್ಥಿರವೆಂದು ಆಸೆಯಿಂದ ಸೋತು ಬಿಂಕ ಕೆಡದೆ ಜೀಯೆನ್ನೆಸಿ, ಈ ಶರೀರವನ್ನು ಜೀನದೀಕ್ಷೆಗೆ ಒಡ್ಡಿ ಮತ್ತೆ ಪ್ರಸಿದ್ಧವಾದ ಮೂರು ಮೂಢಗಳನ್ನೂ ಒಂದೇಸಲ ಬಹಳ ಸಂತೋಷದಿಂದ ಬಿಟ್ಟು ೯೫೨. ಹಗೆಯುಳ್ಳವನಂತೆ ಪರಸಮಯವನ್ನು (ಅನ್ಯಧರ್ಮ) ವನ್ನು ಸೇರದೆ, ದೂರದ ನಂಟರನ್ನು ಕಂಡವರ ಹಾಗೆ ಸಂಶಯವಾಗದೆ, ಕದ್ದು ಓಡುವವನಂತೆ ಒಳ್ಳೆಯ ಮಾರ್ಗಕ್ಕೆ ಅಂಜದೆ, ಸಾಲ ತೆಗೆದು ಕೊಂಡ ಬಡವನಂತೆ ತಪಸ್ಸಿಗೆ ಅಂಜದೆ ಕಿಚ್ಚಿನಂತೆ ಸದ್ಧರ್ಮಕ್ಕೆ ಕಾಯದೆ (ಸಿಟ್ಟುಗೊಳ್ಳದೆ) ನಿರ್ಮಲ ಚಿತ್ತದಿಂದ ಉತ್ತಮವಾದ ತಪಸ್ಸನ್ನು, ಮನಸ್ಸನ್ನು ತಡೆಯದೆ ಹಿಂತೆಗೆಯದೆ, ಬೇರೆಯವನ ನೆಪಕ್ಕೆ ಮಾಡದೆ, ಮೋಕ್ಷಾಪೇಕ್ಷೆಯಿಂದ ನಿಜಬುದ್ಧಿಯಿಂದ ಆಸಕ್ತಿಯಿಂದ, ಮಾಡಿದ್ದೆಯಾದರಿಂದ ನಿನಗೆ ತಪಸ್ಸಿನ ಮಹಾತ್ಮ್ಯದಿಂದ ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಗಲ್ಭ್ಯ, ಈಶತ್ವ, ವಶಿತ್ವ, ಕಾಮರೂಪಿತ್ವ, ಎಂಬ ಎಂಟು ಗುಣೈಶ್ವರ್ಯಗಳೂ ಹುಟ್ಟಿದುವಾದ್ದರಿಂದ ನಿನ್ನಿಂದ ಅಕಂಪನಾಚಾರ್ಯರ ಉಪಸರ್ಗವು ಹೋಗುವುದೆಂದು ಹೇಳಿದೆವು ೯೫೩. ಆದರಿಂದ ಜೀವವಧೆಯಾಗದ ಹಾಗೆ ಅಖಿಳಾ ವನಿತಳಪೂಜ್ಯನೆ! ಹೋಗಿ ಸದ್ಭಾವದಿಂದ ಆ ಉಪಸರ್ಗವನ್ನು ಹಿಂಗಿಸುವುದು." ಎಂದು ಹೇಳಲು ದುಷ್ಕೃತ ವಿದ್ರಾವಣ (ಪಾಪವನ್ನು ಸೀಳುವವನು) ಅಪರಿಮಿತ ಧೈರ್ಯನು,

ಮುನಿಪನ ಮತಾತಂ ಭಾವಿಸಿ
ಮನದೊಳ್ ಬೆಟಗಾಗಿ ವಿಷ್ಣು ಮುನಿವಲ್ಲಭನೊ
ಯ್ಯನೆ ಜಿಷ್ಣುಮುನಿಗೆ ಪೊಡೆವು
ಟ್ಟನುನಯದಿಂ ಪೋಪೆನೆಂಬ ಬಗೆಯಂ ತಂದಂ ೧೯೫

ಬೀಳನಿಸಿ ನೆಗಟ್ತೆಗೆ ಬೆಂ
ಬೀಟದೆ ತಲ್ಲಣಿಸದಾರ್ತು ಕೂರ್ತವಯವದಿಂ
ಕೇಳ ಪ್ರಭಾವನಾಂಗವು
ನೇಳಿಸದಟ್ಯರ್ತು ತಾಳ್ದವೇಟ್ಪುದು ಭವ್ಯಂ ೧೯೬

ಅಕ್ಷಯಲಕ್ಷ್ಮಿಯನೆಯ್ದುವ
ಪೇಕ್ಷೆಯನುಳ್ಳಂ ಪ್ರಭಾವನಾಂಗಮುದಂ ಪಾ
ಪಕ್ಷಯಮಂ ಮಾಡುವದನು
ಪೇಕ್ಷಸದೆ ಮನೋನುರಾಗಮಂ ತಳೆಗೆಂದಂ ೧೯೭

ಬಡವನೆನವೇಡ ಪೊನ್ನು
ಳ್ಳೊಡೆಯನುಮೆನವೇಡ ಕೇಳ್ ಪ್ರಭಾವನೆಯಂ ನೇ
ರ್ಪಡೆ ಮಾಟ್ಪುದು ಮಾಡದವಂ
ಪಡೆಯಲ್ಕಾರ್ತಪನೆ ದೇವನಿಳಯದ ಸುಖಮಂ ೧೯೮

ಅನುಪಮವಾಕ್ಯನಂ, ಆ ಮುನಿಪಾಲಕನ ಮತಾತನ್ನು ಭಾವಿಸಿ ಮನಸ್ಸಿನಲ್ಲಿ ಬೆರಗಾಗಿ ವಿಷ್ಣುಮುನಿವಲ್ಲಭನು ಮೆಲ್ಲನೆ ಜಿಷ್ಣುಮುನಿಗೆ ನಮಸ್ಕಾರಮಾಡಿ ಪ್ರೀತಿಯಿಂದ ಹೋಗುವೆನೆಂಬ ಸಂಕಲ್ಪ ಮಾಡಿದನು. ೧೯೫. ದಡ್ಡನೆನಿಸಿ ಪ್ರಸಿದ್ಧಿಗೆ ಬೆನ್ನು ಹತ್ತದೆ, ತಲ್ಲಣಗೊಳ್ಳದೆ, ಶಕ್ತನಾಗಿ, ಪ್ರೀತಿಸಿ, ಬೇಗನೆ ಪ್ರಭಾವನಾಂಗವನ್ನು ಅಲಕ್ಷ್ಯ ಮಾಡದೆ ಧೈರ್ಯದಿಂದ ಭವ್ಯನು ತಾಳ್ದಬೇಕು. ೧೯೬. ಅಕ್ಷಯ ಲಕ್ಷ್ಮಿಯನ್ನು ಸೇರುವ ಅಪೇಕ್ಷೆಯುಳ್ಳವನು ಪಾಪಕ್ಷಯವನ್ನು ಮಾಡುವವನು ಪ್ರಭವನಾಂಗವನ್ನು ಉಪೇಕ್ಷೆಮಾಡದೆ ಮನಸ್ಸಿನಲ್ಲಿ ಸಂತೋಷವನ್ನು ಧರಿಸಲಿ; ಎಂದನು. ೧೯೭. ಬಡವನೆನ್ನಬೇಡ. ಹೊನ್ನುಳ್ಳ ಶ್ರೀಮಂತನೆನ್ನಬೇಡ. ಕೇಳು. ಪ್ರಭಾವನೆಯನ್ನು ಸರಿಯಾಗಿ ಮಾಡುವುದು; ಮಾಡದವನು ದೇವಲೋಕದ ಸುಖವನ್ನು ಹೊಂದಲು ಸಮರ್ಥನಾಗುವನೆ? ೧೯೮.

ಮುನಿಯೆನವೇಡ ಶ್ರಾವಕ
ನೆನವೇಡ ಮನೋಜ್ಞೆಯಂ ಪ್ರಭಾವನೆಯಂ ನೆ
ಟ್ಟನೆ ಮಾಡವೇಟ್ಟುದಲ್ಲದೊ
ಡನಂತಸುಖನಿಳಯನಾಗಲಾಱಂ ಕಡೆಯೊಳ್ ೧೯೯

ಅನುಪಮನಿರ್ವಾಣಶ್ರೀ
ವನಿತೆಯ ಪೊಸ ಜವ್ವನಂ ಪ್ರಭಾವನೆಯೆಂದೆಂ
ದನವರತಂ ಬಣ್ಣಿಪೆನಿ
ನ್ನೇನೆಂದಾಂ ಬಣ್ಣಿಪೆಂ ಪ್ರಭಾವನೆಯೊಳ್ಪಂ ೨೦೦

ಗದ್ಯ॥ ಎಂದು ಪ್ರಭಾವನೆಯೊಳಾದ ಪರಮೈಶ್ವರ್ಯಮಂ ಬಗೆದಿದನೇಳಿಸದಿರ್ಪುದು ಸದ್ದೃಷ್ಟಿಯಪ್ಪಂಗಂ ಪಾಪಭೀರುವಪ್ಪಂಗಂ ಧರ್ಮಾನುರಾಗಿಯಪ್ಪಂಗಂ ಸುಜ್ಞಾನಿಯಪ್ಪಂಗಂ ದುರ್ಗತಿಗಮನಭಯಮುಳ್ಳಂಗಂ ಉಚಿತಮಲ್ಲೆಂದು ಬೆಳಗಾದಾಗಳ್ ಗುರುವಂದನೆಯಂ ಮಾಡಿ ಜಿಷ್ಣುಮುನೀಶ್ವರನಾಜ್ಞೆಯಿಂ ಮಿಥಿಲಾಪುರಮಂ ಪೊಱಮಟ್ಟು ಋದ್ಧಿಪ್ರಾಪ್ತನಪ್ಪುದಱಿಂ ಮನದಿಂ ಮುನ್ನಂ ಹಸ್ತಿನಾಪುರಮನೆಯ್ದಿ ಪದ್ಮಮಹಾರಾಜನರಮನೆಯಂ ಪುಗುವುದುಂ ೨೦೧

ಪಿರಿದಪ್ಪ ಭಕ್ತಿಯಿಂ ವಿ
ಷ್ಟರದಿಂದೆರ್ದಟ್ಟಮೞಿಂ ಪುರಂಧ್ರೀನಿಕರಂ
ಬೆರಸಿದಿರ್ವಂದು ಮುನೀಶ್ವರ
ಚರಣದ್ವಯ ಪಲ್ಲವಕ್ಕೆ ಮಱಿದುಂಬಿಯವೋಲ್ ೨೦೨

ಮುನಿ, ಶ್ರಾವಕ, ಎಂಬ ಭೇದ ಮಾಡಬೇಡ. ಮನೋಜ್ಞವಾದ ಪ್ರಭಾವನೆಯನ್ನು ಚೆನ್ನಾಗಿ ಮಾಡಬೇಕು. ಇಲ್ಲದಿದ್ದರೆ ಕೊನೆಯಲ್ಲಿ ಅನಂತ ಸುಖಕ್ಕೆ ಆವಾಸನಾಗಲಾರ. (ಮೋಕ್ಷ ಪಡೆಯಲಾರ) ೧೯೯. ಹೋಲಿಕೆಗೆ ಹೊರತಾದ ಮೋಕ್ಷಲಕ್ಷ್ಮಿಯ ಹೊಸ ಯೌವನವು 'ಪ್ರಭಾವನೆ' ಎನ್ನುವುದೇ ಎಂದು ಸದಾ ಬಣ್ಣಿಸುತ್ತೇನೆ. ಪ್ರಭಾವನೆಯ ಒಳಿತನ್ನು ಇನ್ನು ಏನೆಂದು ವರ್ಣಿಸಲಿ ? ೨೦೦. ಹೀಗೆಂದು ಪ್ರಭಾವನೆಯಿಂದ ಲಭಿಸುವ ಪರಮೈಶ್ವರ್ಯವನ್ನು ಕುರಿತು ಯೋಚಿಸಿ ಇದನ್ನು ಅಸಡ್ಡೆಮಾಡದೆ ಇರತಕ್ಕದ್ದು. ಸದ್ದೃಷ್ಟಿಯಾದವನಿಗೂ ಪಾಪಕ್ಕೆ ಹೆದರುವವನಿಗೂ ಧರ್ಮದಲ್ಲಿ ಪ್ರೇಮವಿರುವಂಥವನಿಗೂ ಸುಜ್ಞಾನಿಯಾದವನಿಗೂ ದುರ್ಗತಿಗೆ ಹೋಗುವುದಕ್ಕೆ ಭಯಪಡುವವನಿಗೂ ಯೋಗ್ಯವಲ್ಲವೆಂದು ಬೆಳಗಾದಾಗ ಗುರುವಂದನೆಯನ್ನು ಮಾಡಿ ಜಿಷ್ಣುಮುನೀಶ್ವರನ ಆಜ್ಞೆಯಂತೆ ಮಿಥಿಲಾಪುರವನ್ನು ಬಿಟ್ಟು ಹೊರಟು ಋದ್ಧಿಪ್ರಾಪ್ತನಾದುದರಿಂದ ಮನಸ್ಸಿಗಿಂತ ಮುಂದಾಗಿಯೇ ಹಸ್ತಿನಾಪುರವನ್ನು ಸೇರಿ ಪದ್ಮ ಮಹಾರಾಜನ ಅರಮನೆಯನ್ನು ಪ್ರವೇಶಿಸಿದನು. ೨೦೧. ಹೆಚ್ಚಾದ ಭಕ್ತಿಯಿಂದ ಆಸನದಿಂದ ಮೇಲೆದ್ದು- ಪ್ರೇಮದಿಂದ ಸ್ತ್ರೀ ಸಮೂಹದೊಡನೆ ಕೂಡಿಕೊಂಡು ಇದಿರುಗೊಂಡು ಮುನೀಶ್ವರನ ಚರಣಪಲ್ಲವಗಳಿಗೆ ಮರಿದುಂಬಿಯ ಹಾಗೆ ೨೦೨. ತಲೆಬಾಗಿಸಿ ರಾಜಭವನದೊಳಕ್ಕೆ ಜತೆಯಲ್ಲಿ ಕರೆದುಕೊಂಡು

ಗದ್ಯ॥ ನಮ್ರಮಸ್ತಕನಾಗಿ ರಾಜಭವನದೊಳಗಣ್ಗೊಡಗೊಂಡು ಬಂದುಚ್ಚಾಸನದೊಳ್ ಕುಳ್ಳಿರಿಸಿ ಕಾಲಂಕರ್ಚಿ ತಳೋದಕಮಂ ತಲೆಯೊಳ್ ತಳಿದುಕೊಂಡು ೨೦೩

ವರವೀಯಲೆಂದು ವಾಸವ
ಪುರದಿಂ ಸುರಭೂಜಮಿಳಿದು ಬಂದುದು ಮತ್ತ
ನ್ನರಮನೆಗೆಂದಾ ಮುನಿಯಂ
ಪರಮೋತ್ಸವದಿಂದೆ ನೋಡಿ ಕಣ್ದಣಿವಿನೆಗಂ ೨೦೪

ಗದ್ಯ॥ ಕೈಗಳಂ ಮುಗಿದು ನಿಮ್ಮಡಿ ಬಿಜಯಂಗೆಯ್ದ ಕಾರಣಮಾವುದು ಬೆಸಸಿಮೆಂಬುದುಂ ವಾತ್ಸಲ್ಯರತ್ನಾಕರನಿಂತೆಂದಂ ೨೦೫

ದುರಿತದ ಮುಂಗಾಲ್ಪಾಪದ
ನೆರೆಮನೆ ಬ್ರಹ್ಮೇತಿಕಾಜಿರಣುಗಿನ ಗಿಳಿ ನಿ
ಷ್ಕರುಣದ ನೆಲೆ ದುರ್ಗುಣದಾ
ಗರಮೆನಿಸುವ ನಿನ್ನಮಂತ್ರಿ ಬಲಿಯೆಂಬ ಖಳಂ ೨೦೬

ಗದ್ಯ॥ ನಿನ್ನರಸಂ ಮಾಣಿಸಿ ಯಜ್ಞದ ನೆವದಿಂ ಕಣ್ಗಟ್ಟಿತಿರಿಪಿ ಮಾಸಾರ್ಧ ರಾಜ್ಯಮಂ ಬೇಡಿಕೊಂಡು ಮುನ್ನಿನ ಕೋಪದಿಂದೆ ಸಿತಗಿರಿಯೊಳಿರ್ದ ಕಂಪನಾಚಾರ್ಯರ್ ಮೊದಲಾದಯ್ನೂರ್ವರ್

ಹೋಗಿ ಶ್ರೇಷ್ಠವಾದ ಪೀಠದ ಮೇಲೆ ಕುಳ್ಳಿರಿಸಿ ಕಾಲು ತೊಳೆದು ಪಾದೋದಕವನ್ನು ತಲೆಯ ಮೇಲೆ ಚಿಮುಕಿಸಿಕೊಂಡು ೨೦೩. "ವರವನ್ನು ಕೊಡುವುದಕ್ಕೆಂದು ಇಂದ್ರನ ಪಟ್ಟಣದಿಂದ ದೇವಲೋಕದ ವೃಕ್ಷ (ಕಲ್ಪತರು) ಇಳಿದು ಬಂದು ತನ್ನ ಅರಮನೆಯನ್ನು ಸೇರಿತು." ಎಂದು ಆ ಮುನಿಯನ್ನು ಅತ್ಯಂತ ಉತ್ಸಾಹದಿಂದ ಕಣ್ಣು ದಣಿಯುವವರೆಗೆ ನೋಡಿದನು. ೨೦೪. ಆಮೇಲೆ ಅರಸನು ಮುನಿಗೆ ಕೈಗಳನ್ನು ಮುಗಿದು ಭಕ್ತಿಯಿಂದ "ತಮ್ಮ ಪಾದ, ಇತ್ತ ಬಿಜಯ ಮಾಡಿಸಿದ ಕಾರಣವನ್ನು ಅಪ್ಪಣೆ ಕೊಡಿಸಿ" ಎಂದು ಪ್ರಾರ್ಥಿಸಿಕೊಂಡನು. ೨೦೫. ಅದಕ್ಕೆ ವಾತ್ಸಲ್ಯರತ್ನಾಕರನು ಹೀಗೆ ಉತ್ತರ ಹೇಳಿದನು : ನಿನ್ನ ಮಂತ್ರಿಯಾದ ಬಲಿ ಎಂಬ ನೀಚನು ದುಷ್ಕೃತಕ್ಕೆ ಯಾವಾಗಲೂ ಮುಂಗಾಲು, ಪಾಪಕ್ಕೆ ಅವನು ನೆರೆಮನೆ, ಬ್ರಹ್ಮೇತಿಕಾರನ ಪ್ರೀತಿಯ ಗಿಣಿ, ನಿಷ್ಕರುಣೆಯ ವಾಸಸ್ಥಾನ, ದುರ್ಗುಣಗಳ ಆಶ್ರಯವೆಂದೆನ್ನಿಸಿಕೊಳ್ಳುವವನು. ೨೦೬. ನಿನ್ನ ರಾಜತ್ವವನ್ನು ತಪ್ಪಿಸಿ ಯಜ್ಞ ಮಾಡುವ ನೆಪದಿಂದ ಕಣ್ಣು ಕಟ್ಟಿ, ತಿರುಗಿಸಿ, ಅರ್ಧತಿಂಗಳ ಕಾಲ ರಾಜ್ಯವನ್ನು ಬೇಡಿ ಪಡೆದುಕೊಂಡು ಹಿಂದಿನ ಕೋಪದಿಂದ ಸಿತಗಿರಿಯಲ್ಲಿರುವ ಅಂಕಪನಾಚಾರ್ಯರೇ ಮೊದಲಾದ ಐನೂರ್ವರು ಮುನಿ

ಮುನಿವರರ್ಗಂ ಘೋರೋಪಸರ್ಗಮಂ ಮಾಡಿದಪನದ ನೀನುಪೇಕ್ಷಿಸಿ ಮಿಥ್ಯಾದೃಷ್ಟಿಗಳಂ ೨೦೭
ತುಸಿರದಿರ್ಪುದುಚಿತಮಲ್ತು

ತೊಡರದೆ ನಮ್ಮಾಮ್ನಾಯದೊ
ಳಿಡೆಯುಡುಗದೆ ಬಂದ ಜೈನಧರ್ಮಮನೆಡೆಯೊಳ್
ಕಿಡಿಸಿ ಮುನಿಸಂಕುಳಕ್ಕಾ
ದ್ದಡರಂ ಕಡೆಗಣಿಸಿ ನೋಡುತಿರ್ಪುದೆ ನೃಪತೀ ೨೦೮

ಗದ್ಯ॥ ಅಂತಲ್ಲದೊಡಂ "ರಾಜ್ಞಾಹಿ ರಕ್ಷಿತೋ ಧರ್ಮಃ" ಎಂಬ ಮಾತುಮಂ 'ದುರ್ಬಲಸ್ಯ ಬಲೋ ರಾಜಾ' ಎಂಬ ರಾಜನೀತಿಯುಮಂ "ಸರ್ವೇಷಾಂ ಪಾರ್ಥಿವೋ ಗುರುಃ" ಎಂಬ ನೀತಿ ವಾಕ್ಯಮುಮಂ "ಭೃತ್ಯಾಪರಾಧಸ್ಯ ಸ್ವಾಮಿನೋ ದಂಡ' ಮೆಂಬ ಪುರಾಣಮುಮಂ ನೆನೆದ ೨೦೯
ಪೊಡಂ ಮುನಿವರರುಪಸರ್ಗಮಂ ಮಾಣಿಸುವುದೆಂಬುದುಂ

ಬೆಱಗಾಗಿ ಕೇಳ್ದು ಕೋಪಂ
ಪೊಱಮಡೆ ಕಣ್ಗಟ್ಟ ಪುಸಿದು ಯಜ್ಞದ ನೆವದಿಂ
ನೆಱೆ ಮುನಿಚಯಕ್ಕೆ ತಪ್ಪುವ
ಕುಱಿಯಂ ತಱಿದೊಟ್ಟ ಕೊಲ್ಲದಂತು ಮಾಣೆಂ ೨೧೦

ಶ್ರೇಷ್ಠರಿಗೂ ಘೋರವಾದ ಉಪಸರ್ಗವನ್ನು ಮಾಡುತ್ತಿದ್ದಾನೆ, ಅದನ್ನು ನೀನು ಉಪೇಕ್ಷೆ ಮಾಡಿ ಮಿಥ್ಯಾದೃಷ್ಟಿಗಳ ಹಾಗೆ ಮಾತನಾಡದೆ ಇರುವುದು ಯೋಗ್ಯವಲ್ಲ. ೨೦೭. ನಮ್ಮ ಪರಂಪರೆಯಲ್ಲಿ ಯಾವ ವಿಘ್ನವೂ ಇಲ್ಲದೆ ಅವಿಚ್ಛಿನ್ನವಾಗಿ (ಮಧ್ಯೆ ಭಂಗ ಹೊಂದದೆ) ಬಂದಂಥ ಜೈನಧರ್ಮವನ್ನು ಮಧ್ಯದಲ್ಲಿ ಕೆಡಿಸಿ ಮುನಿಗಳ ಸಮೂಹಕ್ಕೆ ಒದಗಿದ ಆಪತ್ತನ್ನು ಅಸಡ್ಡೆ ಮಾಡಿ ನೀನು ಸುಮ್ಮನೆ ನೋಡುತ್ತಿರಬಹುದೇ? ಹಾಗೆ ಅಲ್ಲದಿದ್ದರೂ 'ಧರ್ಮವು ರಾಜರಿಂದ ರಕ್ಷಿತವಾದದ್ದು' ಎಂಬ ಮಾತನ್ನೂ 'ದುರ್ಬಲರಿಗೆ ರಾಜನೇ ಬಲ' ಎಂಬ ರಾಜನೀತಿಯನ್ನೂ 'ಎಲ್ಲರಿಗೂ ರಾಜನೇ ಗುರು' ಎಂಬ ನೀತಿವಾಕ್ಯವನ್ನೂ 'ಆಳುಗಳ ಅಪರಾಧಕ್ಕೆ ಒಡೆಯರಿಗೆ ಶಿಕ್ಷೆ' ಎಂಬ ಪುರಾಣವನ್ನೂ ಸ್ಮರಿಸಿಕೊಂಡಾದರೂ ಮುನಿಶ್ರೇಷ್ಠರಿಗೆ ಒದಗಲಿರುವ ಉಪಸರ್ಗವನ್ನು ತಪ್ಪಿಸತಕ್ಕದ್ದು. ಎಂದು ಹೇಳಿದರು. ೨೦೮–೨೦೯. ಅರಸನು ಈ ಮಾತುಗಳನ್ನು ಬೆರಗಿನಿಂದ ಕೇಳಿ ಕೋಪ ಹೊರಬೀಳಲು "ಕಣ್ಣು ಕಟ್ಟಿ ಸುಳ್ಳಾಡಿ ಯಜ್ಞದ ನೆಪದಿಂದ ಮುನಿಸಮೂಹಕ್ಕೆ ವಿಶೇಷವಾಗಿ ಅಪರಾಧ ಮಾಡುವ ಆ ಕುರಿಯನ್ನು ಕತ್ತರಿಸಿ ಕೊಂದಲ್ಲದೆ ಬಿಡುವುದಿಲ್ಲ ೨೧೦. ಇರುವೆಗಳಿಗೆ ರೆಕ್ಕೆ ಹುಟ್ಟಿದ ಹಾಗೆ ಕೊಬ್ಬಿ

ಗದ್ಯ॥ ಇಱುಂಪೆಗೆಱಿಂಕೆ ಮೂಡಿದಂತೆ ಕೊರ್ವಿ ಕೊಱೆದು ಪಾಯ್ದು ರಕ್ಕಸಿಯ ನಿಱಿಯನು ರ್ಚಿದರೆಂಬಂತೆ, ಸಿಂಹದ ಕೇಸರಮಂ ಕಿಟ್ಟರೆಂಬಂತೆ, ಎನ್ನನೇಳಿದಂ ಮಾಡಿ ಮೂಗನರಿದು ಕನ್ನಡಿಯಂ ತೋಱುವಂತೆ ಕಣ್ಣಂ ಕುತ್ತುವ ಚೆಲ್ಲಮನಾಡಿ ಧೂರ್ತನೆನ್ನ ಕೈಯಂಕೊಂಡೆನ್ನ ಕಣ್ಣಂ ಕುತ್ತುವಂತೆ ಸೊಕ್ಕಿ ಎನ್ನ ಗುರುಗಳನೆನ್ನ ಪೊೞಲನೆನ್ನಂ ಬಗೆಯದೆ ನಾನಾವಿಧೋಪಸರ್ಗಮಂ ಮಾಡಿದಪಂ ಗಡಮೆಂದು ೨೧೧

ಬಲಿ ಮಾಡಿದ ದೂರ್ತಿಂಗು
ಮ್ಮಳಮಾಗಿ ಕನಲ್ದುನೊಂದು ಸಿಂಹಾಸನಮಂ
ತಳದೊಳ್ ಪೊಯ್ದು ನರೇಶಂ
ಮುಳಿಸಿಂ ಮೆಯ್ಯಱಿಯದೆಟ್ಟು ಪರಿವವಸರದೊಳ್ ೨೧೨

ಗದ್ಯ॥ ಕಂಡು ವಿಷ್ಣುಕುಮಾರ ಮುನಿಪಂ ಧರಣೀಶ್ವರನ ಮನದ ಭಕ್ತಿಯುಮಂ ಸದ್ಧರ್ಮದೊಳಾದ ಪಕ್ಷಮುಮಂ ಸ್ವಸಮಯದೊಳಾದ ವಾತ್ಸಲ್ಯಮುಮಂ ನೋಡಿ ಮೆಚ್ಚಿ ಬೇಡೆಂದು ಮಾಣಿಸಿ ಧರ್ಮದೊಳಾದ ನಿನ್ನ ತಾತ್ಪರ್ಯಮಂ ನೋಡಲೆಂದು ಬಂದೆವಿಂದು ನಿನ್ನ ಮನದ ನಿರ್ಮಳಿಕೆಯುಮಂ ಧರ್ಮದೊಳಾದಱಿಕೆಯುಮಂ ಸನ್ಮುನಿಗಳೊಳಾದ ಪಕ್ಷಪಾತಮುಮಂ ಕಂಡು ಪಿರಿದು ಸಂತೋಷವಾಯ್ತೆಂದು ಮತ್ತಮಿಂತೆಂದಂ ೨೧೩

ಕೊರೆದು ನುಗ್ಗಿ ರಕ್ಕಸಿಯ ನಿರಿಯನ್ನು ಸೆಳೆದಳೆಂಬ ಹಾಗೆ, ಸಿಂಹದ ಕೇಸರವನ್ನು ಕಿತ್ತರೆನ್ನುವಂತೆ, ನನ್ನನ್ನು ಅಲಕ್ಷ್ಯಮಾಡಿ ಮೂಗನ್ನು ಕೊಯ್ದು ಕನ್ನಡಿಯನ್ನು ತೋರಿಸುವಂತೆ, ಕಣ್ಣನ್ನು ಚುಚ್ಚುವ ಚೆಲ್ಲಾಟವನ್ನಾಡಿ ಆ ದುಷ್ಟನು ನನ್ನ ಕೈಯಿಂದಲೇ ನನ್ನ ಕಣ್ಣನ್ನು ಚುಚ್ಚುವ ಹಾಗೆ ಸೊಕ್ಕಿ ನನ್ನ ಗುರುಗಳನ್ನು, ನನ್ನ ಪಟ್ಟಣವನ್ನು, ನನ್ನನ್ನೂ ಲೆಕ್ಕಿಸದೆ ನಾನಾ ವಿಧವಾದ ಉಪಸರ್ಗಗಳನ್ನುಂಟು ಮಾಡುವನಲ್ಲವೆ? ೨೧೧. ಹೀಗೆ ಬಲಿಯು ಮಾಡಿದ ಧೂರ್ತತನಕ್ಕೆ ದುಃಖವಾಗಿ ಕೋಪಗೊಂಡು ನೊಂದುಕೊಂಡು ತನ್ನ ಸಿಂಹಾಸನವನ್ನು ಕೈಯಲ್ಲಿ ತಟ್ಟಿ ರಾಜನು ಕೋಪದಿಂದ ಪರವಶನಾಗಿ ಎದ್ದು ಓಡುವ ಸಮಯದಲ್ಲಿ ೨೧೨. ವಿಷ್ಣುಕುಮಾರ ಮುನಿಶ್ರೇಷ್ಠನು ಕಂಡು ರಾಜನ ಮನಸ್ಸಿನ ಭಕ್ತಿಯನ್ನೂ ಸದ್ಧರ್ಮದಲ್ಲಿ ಆತನಿಗೆ ಇದ್ದ ಅಭಿಮಾನವನ್ನೂ ಸ್ವಧರ್ಮದ ವಿಷಯದಲ್ಲಿದ್ದ ವಾತ್ಸಲ್ಯವನ್ನೂ ನೋಡಿ ಮೆಚ್ಚಿಕೊಂಡು 'ಬೇಡ' ಎಂದು ತಪ್ಪಿಸಿ ಧರ್ಮದ ವಿಚಾರದಲ್ಲಿ ನಿನಗಿರುವ ಉದ್ದೇಶವನ್ನು ನೋಡುವುದಕ್ಕೋಸ್ಕರ ಬಂದೆವು. ಈದಿನ ನಿನ್ನ ಮನಸ್ಸಿನ ಶುದ್ಧತೆಯನ್ನೂ ಧರ್ಮದ ವಿಷಯದಲ್ಲಿ ಇರುವ ತಿಳಿವಳಿಕೆಯನ್ನೂ ಗಮನಿಸಿ ಬಹಳ ಸಂತೋಷವಾಯಿತು. ಎಂದು ಹೇಳಿ, ಪುನಃ ಹೀಗೆಂದನು : ೨೧೩. "ರಾಜನೇ! ನೀನು ಮುನಿಸಿಕೊಂಡರೆ (ಎಲ್ಲ

ನರಪ ನೀಂ ಮುನಿದಂದು ಕೊಂದಪೆಯೆಲ್ಲರಂ ಕೊಲೆಯಾಗೆ ನಿ
ಷ್ಠುರ ಮಹಾದುರಿತಾಳಿ ಸಾರುಗು ಕರ್ಮ ಸಾರ್ದೊಡೆ ಪೊಲ್ಲಮಿ
ಯರಿ ಬಲೀಂದ್ರನ ಮಾಡುವೊಂದತಿ ಬಾಧೆಯಂ ಕ್ಷಣದಿಂದಮ
ಚ್ಚರಿಯೆನಲ್ಗಡ ಜೀವಬಾಧೆಯುನಾಗದಂತಿರೆ ಬುದ್ಧಿಯಿಂ ೨೧೪

ಗದ್ಯ॥ ಮಾಣಿಸಲಾವೆ ಸಾಲ್ವೆವೆಂದು ಜನಪತಿಯ ಕೋಪಾವೇಶಮಂ ಪಿಂಗೆ ನುಡಿದು ರಾಜ ಭವನದಿಂ ಪೊಱಮಟ್ಟು ಲೀಲೆಯಿಂದಣಿಮಾದ್ಯಷ್ಟ ಗುಣೈಶ್ವರ್ಯನಪ್ಪುದಱಿಂ ತನ್ನರೂಪಂ ಕಿ ಱಿದು ಮಾಡಿ ೨೧೫

ಕೊರಳ ಜನ್ನಿವರಂ ಪೊದಟ್ಕೆಯಿನೆಯ್ದೆ ಮಿಂಚುವ ಬೆಳ್ಳಿಯು
ತ್ತರಿಗೆ ಭಾಸುರಮಪ್ಪ ತೇಜಮಗುರ್ವುಪರ್ವಿರೆ ಚೆಲ್ವಿನಿಂ
ಬೆರಲೊಳೊಪ್ಪುವ ದರ್ಭೆ ಪಿಂಗಳನೇತ್ರಮುಟ್ಟ ದುಕೂಲಮೊ
ಪ್ಪಿರೆ ಧರಾಮರವೇಷಮಂ ಮುನಿಕುಂಜರಂ ನೆಱೆತಾಳ್ದಿದಂ ೨೧೬

ಉರದೊಳಂ ನೆಱೆ ಬಾಹುಮೂಲದೊಳಂ ಲಲಾಟದೊಳಂ ಮನೋ
ಹರಮೆನಲ್ ನಿಡುಬೊಟ್ಟು ಶೋಭಿಸೆ ಪೊಂಗಿ ಬಾಗಿದ ಕುಬ್ಜಕಾ
ಲ್ಕರಮ ಕುರ್ಗಿದ ಹಸ್ತಮೊಪ್ಪುವ ಹೇಮವರ್ಣಮಗಲ್ದುರಂ
ನಿರುಪಮಾಕೃತಿ ಕೆಚ್ಚನಪ್ಪ ಶಿರೋರುಹಂ ಪೊಱೆವಾನನಂ ೨೧೭

ರನ್ನೂ) ಕೊಲ್ಲುವೆ. ಕೊಲೆಯಾದರೆ ಕ್ರೂರವಾದ ಮಹಾ ಪಾಪ ಸಮೂಹವೇ ಬರುತ್ತದೆ. ಕರ್ಮ ಸೇರಿದರೆ ಹೊಲ್ಲ. ಈ ಶತ್ರುವಾದ ಬಲೀಂದ್ರನು ಮಾಡುವ ಒಂದು ಹೆಚ್ಚಿನ ಬಾಧೆಯನ್ನು ಒಂದು ಕ್ಷಣಮಾತ್ರದಲ್ಲಿ ಆಶ್ಚರ್ಯವಾಗುವ ಹಾಗೆ ಜೀವ ಬಾಧೆಯಿಲ್ಲದ ರೀತಿಯಲ್ಲಿ ಬುದ್ಧಿವಂತಿಕೆಯಿಂದ, ತಪ್ಪಿಸಲು ನಾವೇ ಸಾಕು." ಎಂದು ಮಹಾರಾಜನ ಕೋಪದ ಆವೇಶವನ್ನು ಹೋಗಲಾಡಿಸಿ ಅರಮನೆಯಿಂದ ಹೊರಟು ಲೀಲಾಜಾಲವಾಗಿ ಅಣಿಮಾ ಮೊದಲಾದ ಅಷ್ಟಗುಣೈಶ್ವರ್ಯವುಳ್ಳವನಾದ್ದರಿಂದ ತನ್ನ ರೂಪವನ್ನು ಚಿಕ್ಕದಾಗಿ ಮಾಡಿಕೊಂಡನು. ೨೧೫. ಕೊರಳಿನ ಜನಿವಾರ ಹೊಳಪಿನಿಂದ ಕೂಡಿರಲು ಮಿಂಚುವ ಬೆಳ್ಳಿಯ ಉತ್ತರೀಯ, ಪ್ರಕಾಶಮಾನವಾದ ತೇಜಸ್ಸು ಆಧಿಕ್ಯದಿಂದ ಹಬ್ಬಿರಲು, ಚೆಲುವಿನಿಂದ ಬೆರಳಿನಲ್ಲಿ ಒಪ್ಪುವ ದರ್ಭೆ, ಪಿಂಗಳ ನೇತ್ರ (ಕಂದುಬಣ್ಣದ ಕಣ್ಣು), ಉಟ್ಟ ರೇಷ್ಮೆ ವಸ್ತ್ರ ಶೋಭಿಸುತ್ತಿರಲು ಆ ಮುನಿಕುಂಜರನು ಬ್ರಾಹ್ಮಣ ವೇಷವನ್ನು ಚೆನ್ನಾಗಿ ಧರಿಸಿದನು. ೨೧೬. ಎದೆಯ ಮೇಲೆಯೂ ವಿಶೇಷವಾಗಿ ಬಾಹುಮೂಲಗಳಲ್ಲಿಯೂ ಹಣೆಯ ಮೇಲೆಯೂ ಮನೋಹರವೆಂಬಂತೆ ದೊಡ್ಡ ತಿಲಕ ಶೋಭಿಸುತ್ತಿರಲು ಮೆರೆಯುತ್ತ ಬಾಗಿದ ಸಣ್ಣಕಾಲು ಬಹಳ ಚಿಕ್ಕವಾದ ಕೈಗಳು ಒಪ್ಪುವ ಚಿನ್ನದ ಬಣ್ಣ,ವಿಶಾಲವಾದ ಎದೆ, ಇಂತಹ ನಿರುಪಮವಾದ ಆಕೃತಿ, ಕೆಂಪನೆಯ ತಲೆಗೂದಲು, ಹೊಳೆಯುವ ಮುಖ. ೨೧೭. ಹಾಗೆ ವಾಮನಾಕಾರವನ್ನು ಧರಿಸಿ

ಗದ್ಯ॥ ಅಂತು ವಾಮನ ರೂಪಂ ಕೈಕೊಂಡು ಪುರಮೆಲ್ಲಮಚ್ಚರಿವಡೆ ಪೊೞಲೊಳಗಣಿಂ ಪೊಱಮಟ್ಟು ಮೆಲ್ಲನೆ ಸಿತಗಿರಿಗೆ ವರ್ಪುದುಂ ನೆರೆದ ನೆರವಿ ಪರಮೇಶ್ವರನೆಂದು ರೂಪಿಂಗಂ ತೇಜಕ್ಕಂ ಸೋಲ್ತು ಬೆನ್ನನೆ ಜಯ ಜಯ ನಿನಾದದಿಂ ಪೊಗೞುತ್ತುಂ ಪೊಡೆಮಡುತ್ತುಂ ಕವಿದುವರೆ ಯಜ್ಞಶಾಲೆಯ ಪೊಱಗಿರ್ದ ಬಲಿಯುಂ ಶುಕ್ಲನುಂ ಪ್ರಹ್ಲಾದನುಂ ಕಂಡು ಸಾಕ್ಷಾದ್ವಿಷ್ಣುವೆಂದು ೨೧೮

ಮನದೊಳುತ್ಸವಮಾಗೆ ಪೆರ್ಚಿ ಕಡಂಗಿ ನಿಲ್ಲದೆ ಭಕ್ತಿಯಿಂ
ಜನಸಮೇತಮುದಾತ್ತ ವೃತ್ತಿಯಿನಾದರಂ ಬೆರಸಟ್ಟಱಿಂ
ತನಗೆ ಸಂತಸಮೆಂದು ಪುಟ್ಟಿರೆ ರಾಗದಿಂದಿದಿರ್ವಂದು ಕೋ
ಕನದನಾಭನೆ ಗೆತ್ತು ಪಾದಯುಗಕ್ಕೆ ಮುಗ್ಗಿದನಾ ಖಳಂ ೨೧೯

ಎನ್ನ ಮಾಡುವ ಮಾಟಮಂ ನೆಱೆ ಕೇಳ್ದು ವೈಷ್ಣವಲೋಕದಿಂ
ಪನ್ನಗಾಶಯನಕ್ಕಱಿಂದವೆ ನೋಡಲೆಂದನುರಾಗದಿಂ
ತನ್ನ ಕೂರ್ಮೆಯಿನಿಲ್ಲಿಗೋವದೆ ಬಂದನೆಂದೊಡೆ ಭೂತಳ
ಕ್ಕೆನ್ನ ನೋಂತುದನಾರು ನೋಂತರೊ ಭಾವಿಪಂದು ಧರಿತ್ರಿಯೊಳ್ ೨೨೦

ಗದ್ಯ॥ ಎಂದು ಪೆರ್ಚಿ ಮೇಗುಮೆಯ್ಯಱಿಯದೆ ಕೃತಕಧರಾಮರನನಿದಿರ್ಗೊಂಡು ಪೋಗಿ ಯಜ್ಞಶಾಲೆಯುಮಂ ಮಂಟಪಂಗಳುಮಂ ತೋಱಿ ಪಿರಿದಪ್ಪಾಸನದೊಳ್ ಕುಳ್ಳಿರಿಸಿ ಕಾಲಂ ಕರ್ಚಿ

ಪಟ್ಟಣದವರೆಲ್ಲ ಆಶ್ಚರ್ಯ ಪಡಲು ಪಟ್ಟಣದೊಳಗಿನಿಂದ ಹೊರಟು ಮೆಲ್ಲಗೆ ಸಿತಗಿರಿಗೆ ಬರಲಾಗಿ ಅಲ್ಲಿ ಸೇರಿದ್ದ ಗುಂಪು, ಪರಮೇಶ್ವರನೆಂದು ಬಗೆದು ರೂಪಕ್ಕೂ ತೇಜಸ್ಸಿಗೂ ಮೆಚ್ಚಿ ಒಡನೆಯೇ ಜಯಘೋಷಮಾಡುತ್ತ, ನಮಸ್ಕರಿಸುತ್ತ ಸುತ್ತುಗಟ್ಟಿಕೊಂಡು ಬರಲು ಯಜ್ಞಶಾಲೆಯ ಹೊರಗಿದ್ದ ಬಲಿಯೂ ಶುಕ್ಲನೂ ಪ್ರಹ್ಲಾದನೂ ಕಂಡು ಸಾಕ್ಷಾತ್ ವಿಷ್ಣುವೇ ಎಂದು ಭಾವಿಸಿ. ೨೧೮. ಮನಸ್ಸಿನಲ್ಲಿ ಬಹಳ ಉತ್ಸಾಹ ಹುಟ್ಟಿ ಉಬ್ಬಿ ಸುಮ್ಮನೆ ನಿಲ್ಲಲಾರದೆ ಭಕ್ತಿಯಿಂದ ಜನಸಮೇತವಾಗಿ ಉದಾತ್ತ ಸ್ವಭಾವದಿಂದ ಆದರದಿಂದ ಕೂಡಿ ತನಗೆ ಸಂತೋಷವಾಗಿ ಅಕ್ಕರೆಯಿಂದ ಇದಿರುಗೊಂಡು ಕಮಲನಾಭನೆಂದೇ ಭಾವಿಸಿ ಆ ಖಳನು ಆವನ ಕಾಲಿಗೆ ನಮಸ್ಕಾರ ಮಾಡಿದನು. ೨೧೯. "ನಾನು ಮಾಡುವ ಕೆಲಸವನ್ನು ಚೆನ್ನಾಗಿ ಕೇಳಿ ವೈಷ್ಣವ ಲೋಕದಿಂದ ಪನ್ನಗಶಯನನು ಅಕ್ಕರೆಯಿಂದ ನೋಡುವುದಕ್ಕೆಂದೇ ಪ್ರೀತಿಯಿಂದ, ತನ್ನ ಮೇಲಿನ ಸ್ನೇಹದಿಂದ, ಇಲ್ಲಿಗೆ ಹೊರಟು ಬಂದನೆಂದರೆ ಈ ಭೂಲೋಕದಲ್ಲಿ ನನ್ನಷ್ಟು ಪುಣ್ಯಶಾಲಿಗಳು ಬೇರೆ ಯಾರು ?" ೨೨೦. ಎಂದು ಉಬ್ಬಿ ಮೈಮೇಲೆ ಎಚ್ಚರದಪ್ಪಿ ಆ ಕಪಟಬ್ರಾಹ್ಮಣನನ್ನು ಇದಿರುಗೊಂಡು ಸ್ವಾಗತಿಸಿ ಯಜ್ಞಶಾಲೆಯನ್ನೂ ಮಂಟಪಗಳನ್ನೂ ತೋರಿಸಿ ದೊಡ್ಡದಾದ ಆಸನದ ಮೇಲೆ ಕುಳ್ಳಿರಿಸಿ ಕಾಲು ತೊಳೆದು ಪಾದೋದಕವನ್ನು-

ಪಾದೋಂದಕಮಂ ತಲೆಯ ಮೇಲೆ ತಳಿದುಕೊಂಡಂ ಮಗುಳೆ ಪೊಡೆಮಟ್ಟು ಕೈಗಳಂ ಮುಗಿದು ಮುಂದೆ ನಿಂದಿರ್ದಿಂತೆಂದಂ ೨೨೧

ದೇವ ಮಾನವರಾಜವಂದಿತಪಾದಪಂಕಜ ದೈತ್ಯವಿ
ದ್ರಾವಣಾಚ್ಯುತ ವಿಷ್ಣುಲೋಕದಿನೆನ್ನ ಮಾಡಿದ ಪುಣ್ಯದಿಂ
ದೇವ ನೀನವನೀತಟಕ್ಕಿಳಿದಿಲ್ಲಿಗುನ್ನತಿಯಿಂದೆ ಸ
ದ್ಭಾವದಿಂದಮೆ ಬಂದೆಯೆಂದೊಡೆ ನಾನೆ ಧನ್ಯನೆನುರ್ವಿಯೊಳ್ ೨೨೨

ಪಲವು ಕಾಲಮನೇಕ ಪುಷ್ಪನಿಕಾಯದಿಂ ಹರಿ ನಿನ್ನನ
ಗ್ಗಳದ ಭಕ್ತಿಯಿನೆಯ್ದೆ ಪೂಜಿಸಿಯುಂ ಮಹಾತಪದಿಂದಮು
ನ್ಮೀಲಿಸದಾರ್ತು ಶರೀರಮಂ ನೆಲಕಿಕ್ಕಿಯುಂ ನೆಱೆ ಕಾಣದಾಂ
ಜಲರುಹೋದರ ಕಂಡೆ ನಿನ್ನ ಪದಾಬ್ಜಮಂ ಕೃತಕೃತ್ಯನೆಂ ೨೨೩

ಗದ್ಯ॥ ಎನ್ನಂತೆ ಪುಣ್ಯದಿಂದಧಿಕರಲ್ಲೆಂದು ತನ್ನ ಪುಣ್ಯಕ್ಕೆ ತಾನೆ ಪೊಂಗಿ ವಿಸ್ಮಯಂಬಟ್ಟು ಕೃತಕ ವಿಪ್ರನ ಮೊಗಮಂ ನೋಡಿ ಭಕ್ತಿಯಿಂ ವಿನತಮಸ್ತಕನಾಗಿ ದೇವರೀ ಯಜ್ಞಕಾಲದೊಳೆನಗೆ ಸಂತೋಷಮುಮುತ್ಸಾಹಮುಮಪ್ಪಂತಾಗೆ ಮನಕ್ಕೆವಂದ ವಸ್ತುವಂ ಕೈಕೊಳ್ವುದೆಂದು ಪೊಡೆಮಟ್ಟು ಬೇಡಿಕೊಳ್ವುದುಂ, ಮಾಯಾಧರಾಮರನಿಂತೆಂದಂ ೨೨೪

ತಲೆಯ ಮೇಲೆ ಹಾಕಿಕೊಂಡು ಮತ್ತೆ ಅಡ್ಡಬಿದ್ದು, ಕೈಮುಗಿದು ಮುಂದೆ ನಿಂತಿದ್ದು ಹೀಗೆಂದನು. ೨೨೧. "ದೇವರುಗಳಿಂದಲೂ ಮಾನವರಿಂದಲೂ ವಂದನೆ ಹೊಂದುವ ಪಾದಕಮಲಗಳುಳ್ಳವನೇ, ದೈತ್ಯರನ್ನು ಸೀಳಿದ ಅಚ್ಯುತನೇ, ನಾನು ಮಾಡುವ ಪುಣ್ಯದಿಂದ, ನೀನು ವಿಷ್ಣುಲೋಕದಿಂದ, ಈ ಭೂಮಿಗೆ ಇಳಿದು ಇಲ್ಲಿಗೆ ನಿನ್ನ ಉನ್ನತಚಿತ್ತದಿಂದ, ಸದ್ಭಾವದಿಂದಲೇ ಬಂದೆಯೆಂದರೆ ಲೋಕದಲ್ಲಿ ನಾನೇ ಧನ್ಯನು." ೨೨೨. ಬಹಳಕಾಲ "ಅನೇಕ ಪುಷ್ಪಸಮೂಹಗಳಿಂದ ನಿನ್ನನ್ನು ಅತಿಶಯ ವಾದ ಭಕ್ತಿಯಿಂದ ಪೂಜಿಸಿಯೂ ಮಹಾ ತಪಸ್ಸಿನಿಂದ ಉನ್ಮೀಲಿಸದೆ ಶರೀರವನ್ನು ಕೃಶಮಾಡಿಯೂ ಕಾಣದ ನಾನು, ಕಮಲೋದರ ! ಇಂದು ನಿನ್ನ ಪಾದಕಮಲಗಳನ್ನು ಕಂಡೆ, ಕೃತಕೃತ್ಯನಾದೆ. ೨೨೩. ನನ್ನ ಹಾಗೆ ಪುಣ್ಯದಲ್ಲಿ ಅಧಿಕರಿಲ್ಲ," ಎಂದು ತನ್ನ ಪುಣ್ಯಕ್ಕೆ ತಾನೇ ಉಕ್ಕಿ ಆಶ್ಚರ್ಯಪಟ್ಟು ಕಪಟವಿಪ್ರನ ಮುಖವನ್ನು ನೋಡಿ ಭಕ್ತಿಯಿಂದ ತಲೆ ತಗ್ಗಿಸಿದವನಾಗಿ, "ದೇವರವರು ಬಂದದ್ದು ಈ ಯಜ್ಞಕಾಲದಲ್ಲಿ ನನಗೆ, ಸಂತೋಷವೂ ಉತ್ಸಾಹವೂ ಆಗುವಂತಾಯಿತು. ತಮ್ಮ ಮನಸ್ಸಿಗೆ ಬಂದ ವಸ್ತುವನ್ನು ಸ್ವೀಕರಿಸಬೇಕು" ಎಂದು ನಮಸ್ಕರಿಸಿ ಬೇಡಿಕೊಂಡನು. ಆಗ ಆ ಮಾಯಾ ಭೂಸುರನು ಹೀಗೆಂದನು : ೨೨೪. "ನಿನ್ನ ಯಜ್ಞದ ಹೆಚ್ಚಳವನ್ನು ನೋಡಿ ಆಶ್ಚರ್ಯಪಟ್ಟು ಹೊಗಲು ಬಂದೆನು.

ನಿನ್ನಯಜ್ಞದ ಪೆಂಪನಚ್ಚರಿವಟ್ಟು ನೋಡಲುವೇಡಿ ಬಂ
ದೆನ್ನಿರಾಕುಳಮಿಲ್ಲಿ ಸಂತಸಮಾಗಿ ಕಂಡೆನಪೂರ್ವಮಂ
ಎನ್ನ ಚಿತ್ತದೊಳೊಂದುಮಿಲ್ಲತಿಕಾಂಕ್ಷೆ ಬೇಡುವೆನಾವುದಂ
ನಿನ್ನನೆಂಬುದುಮಾಗಳಾ ಬಲಿ ಮಾಣದಾ ದ್ವಿಜಮುಖ್ಯನಂ ೨೨೫

ಎನಗೆ ಸಂತಸಮಾಗೆ ನಿಮ್ಮಡಿ ಹೇಮರಾಶಿಯನಕ್ಕೆ ಯಚ್ಚರಿ
ಯೆನಿಪ್ಪ ಕರೀಂದ್ರರಾಜಿಯನಕ್ಕೆ ಗೋನಿವಹಂಗಳೊಳ್
ಮನಕೆ ವಂದೊದವಿರ್ದ ಧೇನುವನಕ್ಕೆ ವಾಜಿಯನಕ್ಕೆ ಕಾ
ಮಿನಿಯರೊಳ್ ಮಿಗಿಲಪ್ಪ ಕನ್ನೆಯನಕ್ಕೆ ಕೈಕೊಳವೇಟ್ಟುದು ೨೨೬

ಗದ್ಯ॥ ಎಂದು ಪ್ರಾರ್ಥಿಸುವುದುಂ ಕೃತಕಧರಾಮರಂ ಬಲಿಯ ಮಾತಿಂಗೆ ತಲೆಯಂ ತೂಗಿ ನೀವೆಮಗೇನಾನುಮನೀವರ್ತಿಯುಂಟಕ್ಕುಮಪ್ಪೊಡೆ ಧನಧಾನ್ಯಂಗಳ ಮೇಲೆ ಕಾಂಕ್ಷೆಯಿಲ್ಲ ಮೂಅಡಿಯ ಭೂಮಿಯನೆಮಗಮೆಮ್ಮ ಮಾತ್ರಗಂ.(?) ಹೋಮಕುಂಡಕ್ಕಂ ಕುಡುವುದೆಂಬುದುಂ ಹರಿಸಮಾನಮಪ್ಪ ದ್ವಿಜೋತ್ತಮಂಗೆ ಭೂಮಿದಾನಮಂ ಮಾಡಿದೆನೆಂಬ ಪ್ರಸಿದ್ಧಿಗಂ ಭಾಜನನಾದೆನೆಂದು ರಾಗಿಸಿ ಕುಡಲೆಂದು ಪೊಂಗಳಸದ ನೀರಂ ತರಿಸಿ ಮಂಗಳವಱಿಗಳಿಸೆಯೆ ಧಾರೆಯ ನೆಱೆಯಲೆಂದಿರ್ಪುದಂ ವಿಷ್ಣುಕುಮಾರಮುನಿಪುಂಗವನತಳದೊಳಿರ್ದ ಹಲ ಕುಲಿಶ ಶಂಖ ಕಮಲ ತೋರಣಾದಿ ಲಕ್ಷಣಂಗಳಂ ಶುಕ್ರಂ ಕಂಡು ೨೨೭

ಇಲ್ಲಿ ನಿರಾಕುಲವಾಗಿ ಸಂತೋಷದಿಂದ ಅಪೂರ್ವವಾದುದನ್ನು ಕಂಡೆನು. ನನ್ನ ಮನಸ್ಸಿನಲ್ಲಿ ಯಾವ ಅಪೇಕ್ಷೆಯೂ ಇಲ್ಲ. ಯಾವುದನ್ನು ಬೇಡಲಿ ?" ಎನ್ನುತ್ತಲೇ ಆ ಬಲಿ ಅಲ್ಲಿಗೆ ಬಿಡದೆ ಆ ಬ್ರಾಹ್ಮಣಶ್ರೇಷ್ಠನನ್ನು ೨೨೫. "ನನಗೆ ಸಂತೋಷವಾಗುವಂತೆ, ನಿಮ್ಮ ಪಾದ, ಚಿನ್ನದ ರಾಶಿಯನ್ನಾಗಲಿ, ಆಶ್ಚರ್ಯವೆನಿಸುವ ಗಜರಾಜಿಯನ್ನಾಗಲಿ, ಹಸುಗಳ ಮಂದೆಗಳಲ್ಲಿ ಮೆಚ್ಚಿಗೆಯಾದ ಒಂದು ಶ್ರೇಷ್ಠಧೇನುವನ್ನಾಗಲಿ, ಕುದುರೆಯನ್ನಾಗಲಿ, ಕಾಮಿನಿಯರಲ್ಲಿ ಶ್ರೇಷ್ಠಳಾದ ಕನ್ಯೆಯನ್ನಾಗಲಿ ತಾವು ಸ್ವೀಕರಿಸಬೇಕು." ೨೨೬. ಎಂದು ಪ್ರಾರ್ಥಿಸಿದನು. ಆಗ ಮಾಯಾಬ್ರಾಹ್ಮಣನು ಬಲಿಯ ಮಾತಿಗೆ ತಲೆದೂಗಿ "ನೀವು ನಮಗೆ ಏನಾದರೂ ಕೊಡುವ ಸಡಗರವಿರುವುದಾದರೆ ನಮಗೆ ಧನ ಧಾನ್ಯಗಳ ಮೇಲೆ ಅಪೇಕ್ಷೆಯಿಲ್ಲ. ನಮ್ಮ ಅಳತೆಯ ಮೂರು ಹೆಜ್ಜೆಗಳ ಭೂಮಿಯನ್ನು ನಮಗೆ ನಮ್ಮ ಹೋಮಕುಂಡಕ್ಕೆ ಕೊಡುವುದು" ಎಂದನು. ಹರಿಸಮಾನನಾದ ದ್ವಿಜಶ್ರೇಷ್ಠನಿಗೆ ಭೂದಾನವನ್ನು ಮಾಡಿದೆನೆಂಬ ಪ್ರಸಿದ್ಧಿಗೂ ಪಾತ್ರನಾದೆನೆಂದು ಹಿಗ್ಗಿ ಕೊಡಲೆಂದು ಹೊನ್ನ ಕಳಸದಲ್ಲಿ ನೀರನ್ನು ತರಿಸಿ ಮಂಗಳವಾದ್ಯಗಳ ಮೊಳಗಿನಲ್ಲಿ ಧಾರೆಯೆರೆಯಲೆಂದಿರಲು ವಿಷ್ಣುಕುಮಾರ ಮುನಿಪುಂಗವನ ಅಂಗೈಯಲ್ಲಿ ಇದ್ದ ನೇಗಿಲು, ವಜ್ರ. ಶಂಖ, ಕಮಲ, ತೋರಣ ಮೊದಲಾದ ಲಕ್ಷಣಗಳನ್ನು ಕಂಡು ಶುಕ್ರನು ೨೨೭. ಮೆಲ್ಲನೆ

ಪೆಲ್ಲನಣ್ಣನನೊತ್ತಿ ಬಗ್ಗಿಸಿಬಯ್ದು ಸನ್ನೆಯೊಳೀ ದ್ವಿಜಂ
ಬಲ್ಲಿದಂ ಶುಭಲಕ್ಷಣಾಂಕಿತನೆಂದು ಪೇೞ್ದು ಧರಿತ್ರಿಯಂ
ನಿಲ್ಲದಿತ್ತೊಡೆ ಮುಂದೆ ನೆಟ್ಟನೆ ನಮ್ಮ ವಂಶಭವರ್ಗೆ ಕೇಳ್
ಪೊಲ್ಲದಕ್ಕೆದಱಿಂದೆ ಧಾರೆಯನಿಕ್ಕಿ ಪೊಯ್ಯದಿರೆಂಬುದುಂ ೨೨೮

ಗದ್ಯ॥ ಬಲಿ ತಮ್ಮನ ಮಾತಂ ಮೀಱಿ ಸತ್ಪುರುಷಂಗೊರ್ಮೆ ನುಡಿದುದಂ ಕಿಡಿಸಲಾಗದೆಂದು ವಕ್ರಮಾದ ಶುಕ್ರನ ಮಾತಂ ಕೇಳದೆ ಕಳಶಮನೆತ್ತಿ ಮನದನುರಾಗದಿಂ ಕೃತಕ ಧರಾಮರಂಗೆ ಮೂಱಡಿನೆಲನಂ ಕೊಟ್ಟೆನೆಂದು ಧಾರೆಯನೆಱೆವುದುಂ ವಿಷ್ಣುಕುಮಾರಮುನಿ ರಾಜ್ಯಂ ಕೈಕೊಂಡು ಬಲಿಯುಂ ನೆರೆದ ನೆರವಿಯುಂ ನೋಡೆ ನೋಡೆ ಮೂಱಡಿಗೊಟ್ಟಂಗಾಱಡಿಯಾಗಿ ಮಾಡುವೆ ನೆಂಬಂತೆ ಕುಳ್ಳಿರ್ದರೇೞ್ವಂದದಿಂ ತೊಟ್ಟನೆ ಭಯಂಕರಮಾಗೆ ೨೨೯

ದಿವಿಜೇಂದ್ರಾದೀಂದ್ರರೊಳ್ ಮಚ್ಚರಿಸೆ ಸೆಣಸಿ ದಾಕೆರ್ಂಡು ಕೈವೊಯ್ದು ಕೋಪೋ
ದ್ಭವದಿಂದೆಕ್ಕೆಕ್ಕೆಯಿಂ ಮೊದಲಿಸಿ ಬಳೆದನೆಂಬಂದದಿಂ ವ್ಯೋಮಮಂ ಮು
ಟ್ಟುವಿನಂ ಗಾತ್ರಂ ವಿಯನ್ಮಂಡಲಕೆ ತಡೆಯೆ ತೂಂತಿಟ್ಟನೆಂಬಂತೆ ನಿಂದಂ
ಭುವನಕ್ಕಾಶ್ಚರ್ಯಮಾಗಲ್ ದಿವಿಜ ಮನುಜ ವಿದ್ಯಾಧರಾರಾಧ್ಯಪಾದಂ ೩೩೦

ಅಣ್ಣನನ್ನು ಒತ್ತಿ ಬಗ್ಗಿಸಿ ಬೈದು ಸನ್ನೆಯಲ್ಲಿ "ಈ ಬ್ರಾಹ್ಮಣ ದೊಡ್ಡವನು, ಶುಭಲಕ್ಷಣಾಂಕಿತನು, ಎಂದು ಹೇಳಿ ಭೂಮಿಯನ್ನು ನಿಲ್ಲಿಸದೆ ಕೊಟ್ಟರೆ ಮುಂದೆ ಖಂಡಿತವಾಗಿ ನಮ್ಮ ವಂಶಜರಿಗೆ ಕೆಟ್ಟದ್ದಾಗುವುದು. ಆದ್ದರಿಂದ ಧಾರೆಯನ್ನು ಎರೆಯಬೇಡ" ಎಂದನು. ೨೨೮. ಆದರೆ ಬಲಿ ತಮ್ಮನ ಮಾತನ್ನು ಮೀರಿ, ಸತ್ಪುರುಷನಿಗೆ ಒಂದು ಸಲ ಹೇಳಿದುದನ್ನು ಕೆಡಿಸಬಾರದು ಎಂದು ಶುಕ್ರನ ವಕ್ರವಾದ ಮಾತನ್ನು ಕೇಳದೆ ಕಳಶವನ್ನೆತ್ತಿ ಆ ಕಪಟ ಬ್ರಾಹ್ಮಣನಿಗೆ 'ಮೂರು ಹೆಜ್ಜೆ ನೆಲವನ್ನು ಕೊಟ್ಟೆ' ಎಂದು ಧಾರೆಯೆರೆಯಲು ವಿಷ್ಣುಕುಮಾರಮುನಿಯು ರಾಜ್ಯವನ್ನು ತೆಗೆದುಕೊಂಡು ಬಲಿಯೂ ಜನಸಮೂಹವೂ ನೋಡುತ್ತಿದ್ದ ಹಾಗೆಯೇ 'ಮೂರಡಿ ಕೊಟ್ಟವನಿಗೆ ಆರಡಿ ಮಾಡುತ್ತೇನೆ' ಎಂಬ ಹಾಗೆ ಕುಳಿತಿದ್ದವರು ಏಳುವಂತೆ ತಟ್ಟನೆ ಭಯಂಕರವಾಗಲು ೨೨೯. ದೇವೇಂದ್ರನೇ ಮೊದಲಾದ ಇಂದ್ರರಲ್ಲಿ ಮಾತ್ಸರ್ಯದಿಂದ ಹಟತೊಟ್ಟು ಕೈತಟ್ಟಿ ಕೋಪಾಧಿಕ್ಯದಿಂದ, ಪೈಪೋಟಿಯಿಂದ, ಕೆಣಕಿ ಬೆಳೆದನೆಂಬಂತೆ ಆಕಾಶವನ್ನು ಮುಟ್ಟಲು, ಶರೀರವು ಗಗನಮಂಡಲಕೆ ತಡೆದುಕೊಳ್ಳಲು, ತೂತಿಟ್ಟನೆನ್ನುವಂತೆ ನಿಂತನು. ಲೋಕಕ್ಕೆ ಆಶ್ಚರ್ಯವಾಗಲು ದೇವಮಾನವ ವಿದ್ಯಾಧರರಿಗೆ ಪೂಜಾ

ಮಕುಟಂ ಸೌಧರ್ಮಕಲ್ಪಂ ರವಿಹಿಮಕರಣಂ ಕುಂಡಲಂ ನೀಲಮೇಘ
ಪ್ರಕರಂ ತೊಂಗಲ್ಗುರುಳ್ಗಳ್ ಬೆಮರಿನೊಗೆದ ಬಿಂದೂತ್ಕರಂ ಕೂಡೆ ತಾರಾ
ನಿಕರಂ ದೇವೇಂದ್ರಶೈಲಂ ತನು ಕುಲಗಿರಿಗಳ್ ಲೀಲೆಯಿಂ ತೊಂಗಲೆಂಬಂ
ತೆ ಕರಂ ಪೆಂಪಿಂದಗುರ್ವಾವರಿಸೆ ಗಗನಮಂ ಮುಟ್ಟಿನಿಂದಂ ಮುನೀಂದ್ರಂ ೨೩೧

ಗದ್ಯ॥ ಅಂತು ದಿಶಾವಲಯಮೆಲ್ಲಂ ತನುಜ್ಯೋತಿರ್ಮಯಮುಂ ಗಗನತಳಮೆಲ್ಲಂ ಜಯ ಜಯನಿನಾದಮಯಮುಂ ಧರಾವಲಯಮೆಲ್ಲಂ ದೇಹಮಯಮುಮಾಗೆ ಮಂದರಕ್ಕೆ ಪ್ರತಿ ಮಂದರಮಾದಂತೆಯುಂ ಧರಣಿಯು ಗಗನದೆಡೆಯುನಳಿಯಲೆಂದೆತ್ತಿದ ವಿಧಾತ್ರನ ಕಯ್ಯ ದಂಡ ಮೆಂಬಂತೆ ಷೋಡಶಾಭರಣಭೂಷಿತನುಂ ದೇವಾಂಗವಸ್ತ್ರಪರಿವೇಷ್ಟಿತನುಮಾಗಿ ಜಗಕ್ಕಾಶ್ಚ ರ್ಯಮುಮದ್ಭುತಮುಮಾಗೆ ವಿಗುರ್ವಿಸಿ ನಿಂದು ೨೩೨

ಪರಮ ಗುಣಾಂಬುರಾಶಿ ಜಿನಧರ್ಮಮರುತ್ಪಥ ಶೀತರಶ್ಮಿ ಮಾ
ಣ್ದಿರಿಸದೆ ವಜ್ರವೇದಿಕೆಯೊಳೊಂದೆಡೆಯಂ ಭರದಿಂದೆ ಮಾನುಷೋ
ತ್ತರ ಧರಣೀಂದ್ರದೊಳ್ ತಡೆಯದೊಂದಡಿಯಂ ನಯದಿಂದಮಿಟ್ಟು ನಿ
ರ್ಜರಪತಿವಂದ್ಯನೊಂದಡಿಗೆ ಭೂತಳಮಿಲ್ಲದುದಗ್ರ ತೇಜದಿಂ ೨೩೩

ಹರ್ವಾದಪಾದ, ಕಿರೀಟ ಸೌಧರ್ಮಕಲ್ಪ, ಸೂರ್ಯಚಂದ್ರರು ಕರ್ಣಕುಂಡಲಗಳು, ನೀಲಮೇಘಸಮೂಹವು ಗೊಂಚಲಾದ ಕುರುಳುಗಳು, ಬೆವರಿನಿಂದ ಹುಟ್ಟಿದ ಬಿಂದು ಗಳ ಸಮೂಹವೇ ನಕ್ಷತ್ರರಾಶಿ, ಮೇರುಪರ್ವತವೇ ದೇಹ, ಕುಲಗಿರಿಗಳು ವಿನೋದ ಕರವಾದ ಗೊಂಚಲೆಂಬಂತೆ ಬಹಳ ಪೆಂಪಿನಿಂದ ನೋಟಕರಿಗೆ ಭಯವು ಆವರಿಸಿಕೊಳ್ಳಲು, ಗಗನವನ್ನು ಮುಟ್ಟಿ ಮುನೀಂದ್ರನು ನಿಂತನು ! ೨೩೧. ಹಾಗೆ ದಿಙ್ಮಂಡಲವೆಲ್ಲವೂ ದೇಹದ ಜ್ಯೋತಿಯಿಂದ ತುಂಬಿ ಗಗನವೆಲ್ಲ ಜಯಘೋಷಮಯವಾಗಿ ಭೂಮಂಡಲ ವೆಲ್ಲ ದೇಹಮಯವಾಗಲು ಮಂದರಕ್ಕೆ ಪ್ರತಿ ಮಂದರವಾದ ಹಾಗೆಯೂ ಭೂಮಿ ಆಕಾಶಗಳ ಅಂತರವನ್ನು ಅಳೆಯುವುದಕ್ಕೆಂದು ಎತ್ತಿದ ಬ್ರಹ್ಮನ ಕೈಯೊಳಗಿನ ದಂಡ ವೆನ್ನುವ ಹಾಗೆ ಹದಿನಾರು ಆಭರಣಗಳಿಂದ ಅಲಂಕೃತನೂ ದೇವಾಂಗ ವಸ್ತ್ರದಿಂದ ಸುತ್ತಲ್ಪಟ್ಟವನೂ ಆಗಿ ಜಗತ್ತಿಗೆ ಆಶ್ಚರ್ಯವೂ ಅದ್ಭುತವೂ ಆಗುವಂತೆ ಮಾಯೆ ಯನ್ನು ಬೀರಿ ನಿಂತು ೨೩೨. ಪರಮಗುಣಸಾಗರ, ಜಿನಧರ್ಮಾಕಾಶದ ಚಂದ್ರ, ಒಂದು ಪಾದವನ್ನು ವಜ್ರವೇದಿಕೆಯ ಮೇಲೆ ಇರಿಸದೆ ರಭಸದಿಂದ ಮಾನುಷೋತ್ತರ ಧರಣೀಂ ದ್ರದಲ್ಲಿ ತಡೆಯದೆ ಒಂದು ಹಜ್ಜೆಯನ್ನು ಇಟ್ಟು, ದೇವೇಂದ್ರವಂದ್ಯನು ಒಂದು ಹೆಜ್ಜೆಗೆ ಭೂತಳವಿಲ್ಲದೆ ಮಹಾತೇಜಸ್ಸಿನಿಂದ ೨೩೩. ಕಾಲನ್ನು ಆಕಾಶಕ್ಕೆ ಎತ್ತಿ ಜಿನಪಾದ ಭಕ್ತ-

ಮೂಱುಂ ಲೋಕಮೇಕಚ್ಛತ್ರಮೆಂಬಂ
ಗದ್ಯ॥ ಕಾಲನಾಕಾಶಕ್ಕೆತ್ತಿ ಜಿನಪಾದಭಕ್ತನಪ್ಪಾತಂಗೆ
ತಾನುಂ ತದ್ಗಿರೀಂದ್ರದಳವಿಯುಮಂ ಮನುಷ್ಯಕ್ಷೇತ್ರಪ್ರಮಾಣಮುಮಂ ಕಾಲಿಂದಾರಯ್ದು
ನೋಡುವಂತಾನುಂ ಸುತ್ತಿದ ದ್ವೀಪಸಮುದ್ರಂಗಳಂ ಭವ್ಯರ್ಗೆ ಕವಯರಂ ಬರೆದು ತೋಱುವ
ತಾನುಂ ಮಾನವರ್ಗೆ ಮೇರೆಯೆಂದಱಿಪುವಂತಾನುಂ ತಿರಿಪುತ್ತುಮಿರ್ಪುದುಂ ಸಹಸ್ರದೇವ
ಸಮೂಹಕ್ಕಾಸನಕಂಪಮುಂ ಭಯಮುಮಾಗೆ ಬೇಗಮಱಿದು ಚತುರ್ವಿಧ ದೇವನಿಕಾಯಮುಂ
ತಂತಮ್ಮ ಮಹಾವಿಭೂತಿಗಳ್ವೆರಸು ದೇವದುಂದುಭಿಗಳೆಸೆಯೆ ಭೋರೆನೆ ಬಂದು ೨೩೪

ಸುರತರು ನಮೇರು ವರಮಂ
ದರ ಸುಮಮಂ ವಿಷ್ಣುಮುನಿಯ ಮೇಲುತ್ಸಾಹಂ
ಬೆರಸು ನಲಿನಲಿದು ಚಿತ್ತೆಯ
ಸರಿಯಂತಿರೆ ಸುರಿದರರಳನಮಳಗುಣಾಢ್ಯರ್ ೨೩೫

ಪೊಸಮುತ್ತಿನ ಪೊಸವಜ್ರದ
ಪೊಸಪಚ್ಚೆಯ ಪೊಸತೆನಿಪ್ಪ ವೈಡೂರ್ಯದ ರಂ
ಜಿಸುವ ಪೊಸ ಸೂರ್ಯಕಾಂತದ
ಶಶಿಕಾಂತದ ರತ್ನರಾಶಿಯಿಂ ಪೂಜಿಸಿದರ್ ೨೩೬

ನಾದವನಿಗೆ ಮೂರು ಲೋಕವೂ ಏಕಚ್ಛತ್ರಾಧಿಪತ್ಯವೆಂಬಂತೆಯೂ ಆ ಗಿರೀಂದ್ರದ ಶಕ್ತಿಯನ್ನೂ ಮನುಷ್ಯ ಕ್ಷೇತ್ರಪ್ರಮಾಣವನ್ನೂ ಕಾಲಿನಿಂದ ಪರೀಕ್ಷಿಸಿ ನೋಡುವಂತೆಯೂ ಸುತ್ತಿದ್ದ ದ್ವೀಪಸಮುದ್ರಗಳನ್ನು ಭವ್ಯರಿಗೆ ಕೈವಾರವನ್ನು ಬೀಸಿ ಬರೆದು ತೋರಿಸುವಂತೆಯೂ ಮಾನವರಿಗೆ ಮೇರೆಯೆಂದು ತಿಳಿಸುವಂತೆಯೂ ತಿರುಗಿಸುತ್ತ ಇರಲಾಗಿ ಸಹಸ್ರ ದೇವರುಗಳ ಸಮೂಹಕ್ಕೂ ಆಸನ ಕಂಪವೂ ಭಯವೂ ಆಗಲು ಬೇಗನೆ ತಿಳಿದು ನಾಲ್ಕುವಿಧವಾದ ದೇವಸಮೂಹವೂ ತಮ್ಮ ತಮ್ಮ ಮಹಾಮಹಿಮೆಗಳೊಡನೆ, ದೇವ ದುಂದುಭಿಗಳು ಭೋರೆಂದು ಮೊಳಗುತ್ತಿರಲು, ಬಂದರು. ೨೩೪. ಕಲ್ಪವೃಕ್ಷಗಳು, ನಮೇರು, ಮಂದಾರಗಳ ಹೂವುಗಳನ್ನೂ ವಿಷ್ಣುಮುನಿಯ ಮೇಲೆ ಉತ್ಸಾಹದಿಂದ ಕೂಡಿ ಆನಂದಪಟ್ಟು ಚಿತ್ತೆಯ ಮಳೆಯ ಹಾಗೆ ಆ ಗುಣಾಢ್ಯರು ಹೂಗಳನ್ನು ಸುರಿದರು ೨೩೫. ಹೊಸಮುತ್ತಿನ, ಹೊಸವಜ್ರದ, ಹೊಸಪಚ್ಚೆಯ, ಆಶ್ಚರ್ಯವೆನಿಸುವ ವೈಡೂರ್ಯದ ಹೊಳೆಯುವ ಹೊಸ ಸೂರ್ಯಕಾಂತದ ಶಶಿಕಾಂತದ ರತ್ನರಾಶಿಗಳಿಂದ ಪೂಜಿಸಿದರು ೨೩೬. ಅಮೃತದ ಬಲವಾದ ಮಳೆ ಭೂಮಿಯ ಮೇಲೆ ಸುರಿಯುವುದೆಂಬಂತೆ

ಸುರಿದಪದವ್ಯೃತದ ಬಲ್ಸರಿ
ಧರಣಿಯೊಳೆಂಬಂತೆ ವಿಷ್ಣುಮುನಿಪನ ಕೆಲದೊಳ್
ತರತರದಿನಿರ್ದುಪಾಡಿದರ
ರರವಿಂದಾನನೆಯರಮರಿಯರ್ ಬಹುವಿಧದಿಂ ೨೩೭

ಮಂಗಳವಟಿಯ ರವಂ ಗೀ
ತಂಗಳ ನಿಸ್ವನಮನೇಕ ಜಯ ಜಯ ನಾದಂ
ಪೊಂಗುವಡೆದೊಪ್ಪೆ ಸುರರ ಸ
ರಂ ಗಗನದೊಳಾದಮಾನಮೆಸೆದುವು ಪಲವುಂ ೨೩೮

ಶರಣಾಗೆಂಬವಧಾರಿಸೆಂಬ ಮುದದಿಂ ಜೀಯೆಂಬ ದೇವೇಬ ಭಾ
ಸುರತೇಜೋಬ್ಧಿ ಮಹಾಪ್ರಸಾದ ನುಡಿಯೆಂಬಾಶ್ಚರ್ಯಮೆಂಬಟ್ಕಟಿಂ
ಸ್ಥಿರನಾಗೆಂಬ ಮಯ್ಯುಯ್ಯ ಭಾಪು ಮಯ್ಯುಭಾಪಯ್ಯಯ್ಯನೋಡೆಂಬ ದೇ
ವರ ನಾನಾವಿಧ ಸುಸ್ವರಂ ನೆಗೆದುದಾಶಾಂತಂಬರಂ ವ್ಯೋಮದೊಳ್ ೨೩೯

ಜಿನಧರ್ಮದ ಪೆಂಪಂ ಮೋ
ದಿನಿಗಱಿಪುವತೆಱದಿನಮರರಾ ಮುನಿಪದಕೋ
ಕನದದೊಡನೊಡನೆ ತಗುಳ್ದೊ
ಯ್ಯನೆ ರಾಗಂಬೆರಸು ಧಾತ್ರಿಯುಂ ಬಲವಂದರ್ ೨೪೦

ವಿಷ್ಣುಮುನಿಪಾಲಕನ ಪಕ್ಕದಲ್ಲಿ ಸಾಲುಸಾಲಾಗಿ ನಿಂತಿದ್ದು ಕಮಲ ಮುಖಿಯರಾದ ದೇವಸ್ತ್ರೀಯರು ಅನೇಕ ವಿಧವಾಗಿ ಹಾಡಿದರು ೨೩೭. ಮಂಗಳದ ತಮಟೆಯ ಶಬ್ದ, ಹಾಡುಗಳ ಧ್ವನಿ, ಅನೇಕ ಜಯಕಾರಗಳ ನಾದ, ಎಲ್ಲ, ಉಕ್ಕಿ ಶೋಭಿಸುತ್ತಿರಲು ದೇವತೆಗಳ ಸ್ವರವು ಆಕಾಶದಲ್ಲಿ ಹಲವು ರೀತಿಯಲ್ಲಿ ವಿಶೇಷವಾಗಿ ಕೇಳಿಸಿದುವು. ೨೩೮. 'ಶರಣಾಗು' ಎಂಬ, 'ಅವಧರಿಸು' ಎನ್ನುವ, ಸಂತೋಷದಿಂದ 'ಜೀಯಾ' ಎನ್ನುವ "ಪ್ರಕಾಶಮಾನವಾದ ತೇಜಸ್ಸಮುದ್ರವೆ! ಮಹಾಪ್ರಸಾದ, ನುಡಿ" ಎನ್ನುವ, 'ಆಶ್ಚರ್ಯ'! ಎನ್ನುವ, ಪ್ರೀತಿಯಿಂದ 'ಸ್ಥಿರನಾಗು' ಎಂಬ, ಮಯ್ಯು, ಭಾಪು, ಭಾಪು ಅಯ್ಯಯ್ಯ ನೋಡು' ಎನ್ನುವ ದೇವರುಗಳ ನಾನಾಬಗೆಯಾದ ಸುಸ್ವರವು ದಿಕ್ಕಿನ ಕೊನೆಯುವರೆಗೂ ಆಕಾಶದಲ್ಲಿ ಕೇಳಿಸಿತು ೨೩೯. ಜಿನಧರ್ಮದ ಹಿರಿಮೆಯನ್ನು ಲೋಕಕ್ಕೆ ತಿಳಿಸುವ ರೀತಿಯಿಂದ ದೇವರುಗಳು ಆ ಮುನಿಯ ಪಾದ ಕಮಲದೊಡನೆ ತಾಕಿ ಮೆಲ್ಲನೆ ಪ್ರೀತಿಯಿಂದ ಕೂಡಿ ಭೂಮಿಗೆ ಪ್ರದಕ್ಷಿಣೆಮಾಡಿದರು! ೨೪೦, ಹಾಗೆ ಎಲ್ಲರಿಗೂ ಭೀತಿಯಾಗುವಂತೆ ಧೀರತೆಯಲ್ಲಿರಲು ಮುನಿ

ಅಂತಗುರ್ವಪ್ಪಿನಂ ಧೀರತೆಯೊಳಿರ್ಪಿನಂ
ಮುನಿನಿಕರಪೂಜ್ಯನಂ ಸಕಳ ಸಾಮ್ರಾಜ್ಯನಂ
ಕಾಶ್ಮೀರದವರೆಲ್ಲ ಗೊಲ್ಲದೇಶದವರೆಲ್ಲ
ಚೋಳದೇಶದವರೆಲ್ಲ ಚೇರಮಲೆಯಃವರೆಲ್ಲ
ಸೌರಾಷ್ಟ್ರದವರೆಲ್ಲ ಗೌಳದ್ದೇಶದವರೆಲ್ಲ
ವೆಂಗಿನಾಡವರೆಲ್ಲ ಅಂಗದೇಶದವರೆಲ್ಲ
ಕಾಮಾಕ್ಷಿಯವರೆಲ್ಲ ಸೌವಾರದವರೆಲ್ಲ
ಪಾರಿಯಾತ್ರಿಯರೆಲ್ಲ ಮಾಳವಾವನಿಯೆಲ್ಲ
ಕುಂತಳಾವನಿಯೆಲ್ಲ ಗುರ್ಜರಾವನಿಯೆಲ್ಲ
ಪಾಂಡ್ಯನಾಡವರೆಲ್ಲ ಮಲಯವಿಷಯದವರೆಲ್ಲ
ಸುರಪಟಹ ನಿನದಮಂ ದಿವಿಜರ ನಿನಾದಮಂ
ಶಂಖಧ್ವನಿಗಳಂ ಘಂಟಾಧ್ವನಿಗಳಂ ಕಹಳಾರವಂಗಳಂ ಗಾನರವಂಗಳಂ
ಭೋಂಕೆನೊರ್ವೆಯೆ ಕೇಳ್ದು ಸಂತೋಷದಿಂದೆಟ್ದು
ಗಗನತಳಮಂ ನೋಡಿ ನೆರೆದೆಲ್ಲವೊಡಗೂಡಿ
ಕಾರ್ಯವೆಲ್ಲಮನಱಿದು ರಾಗದೊದವಿಂ ನೆಱೆದು
ನಲಿನಲಿದು ಪರಿಪರಿದು ಕೂರ್ಪರು ಕರೆಕರೆದು
ಪಲವುಮರ್ಘ್ಯಂಗಳಿಂ ಪಲವುಮರ್ಚನೆಗಳಿಂ
ಪಲವು ಪಱೆಗಳ್ವೆರಸಿ ಪಲವುತೆಱದಿಂ ಪರಸಿ
ಪೂಜಿಸಿ ಮುನೀಂದ್ರನಂ ಬಣ್ಣಿಸಿ ಯತೀಂದ್ರನಂ

ನಿಕರ ಪೂಜ್ಯನನ್ನು ಆ ಸಕಲಸಾಮ್ರಾಜ್ಯನನ್ನು ಕಾಶ್ಮೀರ, ಗೊಲ್ಲದೇಶ, ಚೋಳದೇಶ, ಚೇರಮಂಡಲ, ಸೌರಾಷ್ಟ್ರ, ಗೌಳದೇಶ, ವೆಂಗಿನಾಡು, ಅಂಗದೇಶ, ಕಾಮಾಕ್ಷಿಯುವರು (ಕಂಚಿ) ಸೌವರ, ಪಾರಿಯಾತ್ರ, ಮಾಳವದೇಶ, ಕುಂತಳರಾಜ್ಯ, ಗುಂರ್ಜರ ದೇಶ, ಪಾಂಡ್ಯ ದೇಶ, ಮಲಯ ದೇಶ, ಈ ಪ್ರಾಂತ್ಯಗಳ ಜನರೆಲ್ಲರೂ ದೇವವಾದ್ಯಗಳ ನಿನಾದವನ್ನೂ ದೇವರುಗಳ ಧ್ವನಿಯನ್ನೂ ಶಂಖಧ್ವನಿಗಳನ್ನೂ ಘಂಟಾನಾದಗಳನ್ನೂ, ಕಹಳೆಯ ವೊಳಗುಗಳನ್ನೂ ಗಾನಧ್ವನಿಗಳನ್ನೂ ಹಟಾತ್ತಾಗಿ ಒಮ್ಮಿಂದೊಮ್ಮೆ ಕೇಳಿ ಸಂತೋಷ ದಿಂದ ಎದ್ದು ಗಗನ ಪ್ರದೇಶವನ್ನು ನೋಡಿ ಎಲ್ಲರೂ ಒಟ್ಟಿಗೆ ಸೇರಿ ನಡೆದ ಕೆಲಸವನ್ನೆಲ್ಲ ತಿಳಿದು ಸಂತೋಷದಿಂದ ಒಟ್ಟುಸೇರಿ ಕುಣಿಕುಣಿದು, ಓಡೋಡಿ ಹೋಗಿ ಪ್ರೀತಿಪಾತ್ರ ರನ್ನು ಕರೆದು ಕರೆದು, ಹಲವು ಅರ್ಘ್ಯಗಳಿಂದಲೂ ಅನೇಕ ಪೂಜಾದ್ರವ್ಯಗಳಿಂದಲೂ ಹಲವಾರು ವಾದ್ಯಗಳಿಂದಲೂ ಕೂಡಿ ಹಲವು ರೀತಿಗಳಿಂದ ಹರಸಿ, ಪೂಜಿಸಿ, ಮುನೀಂದ್ರನನ್ನು ಹೊಗಳಿ, ಯತೀಂದ್ರನನ್ನೂ, ಓಡುವ ದೇವರುಗಳನ್ನೂ, ಸುಳಿದಾಡುವ

ಪರಿವ ದೇವರ್ಕಳಂ ಸುೞಿವ ದೇವರ್ಕಳಂ
ಪೊಡೆಮಡುವ ದಿವಿಜರಂ ಬಣ್ಣಿಸುವ ದಿವಿಜರಂ
ಜೀಯೆಂಬ ದಿವಿಜರಂ ದೇವೆಂಬ ವಿಬುಧರಂ
ಸುತ್ತಿದಮರೇಶರಂ
ಕಣ್‌ತಣಿವಿನಂ ಕಂಡು ಪಿರಿದುಂ ಮನಂಗೊಂಡು
ಕೊಲಲಾಗದೆಂಬ ನುಡಿ ಪುಸಿಯಾಗದೆಂಬ ನುಡಿ
ಕಳಲಾಗದೆಂಬ ನುಡಿ ಜಾರೆ ವೇಡೆಂಬ ನುಡಿ
ಕಾಂಕ್ಷೆ ವೇಡೆಂಬ ನುಡಿ ಕಳ್ಳಾಗದೆಂಬ ನುಡಿ
ಅಡಗಾಗದೆಂಬ ನುಡಿ ಮಧುವಾಗದೆಂಬ ನುಡಿ
ಪೆಱವು ಧರ್ಮದೊಳುಂಟೆ ಪೆಱವು ವಾಕ್ಯದೊಳುಂಟೆ
ಬುದ್ಧಿಯಂ ನೋಡುವೊಡೆ ಚರ್ಚೆಯಂ ಮಾಡುವೊಡೆ
ಜಿನನಾಥನಿಂ ಬಿಟ್ಟು ಜಿನಮುನಿಗಳಿಂ ಬಿಟ್ಟು
ಜಿನಧರ್ಮದಿಂ ಬಿಟ್ಟು ಜಿನಸಮಯದಿಂ ಬಿಟ್ಟು
ಮತ್ತೆ ಪೂಜ್ಯರುಮೊಳರೆ ಮತ್ತೆ ನಿಸ್ಪೃಹರೊಳರೆ
ಮತ್ತೊಂದು ಲೇಸುಂಟೆ ಮತ್ತೊಂದು ಶುಭಮುಂಟೆ
ಮೈಲಾಪದೊಳ್‌ನಿಂದ ನೇಮಿಜಿನಪತಿಯಿಂದ
ವಾರಿನಿಧಿಯೊಳ್‌ನಿಂದ ನೇಮಿಜಿನಪತಿಯಿಂದ
ಚೋಳಮಹಿಯೊಳ್‌ನಿಂದ ದಿವಿಜವಲ್ಲಭನಿಂದ

ದೇವರುಗಳನ್ನೂ ನಮಸ್ಕರಿಸುವ ದೇವರುಗಳನ್ನೂ ಹೊಗಳುವ ದಿವಿಜರುಗಳನ್ನೂ 'ಜೀಯ', ಎಂಬ ದೇವರುಗಳನ್ನೂ, 'ದೇವ' ಎಂಬ ವಿಬುಧರನ್ನೂ ಸುತ್ತುಗಟ್ಟಿದ ಅಮರೇಶ್ವರರನ್ನೂ ಕಣ್ಣು ದಣಿಯುವ ತನಕ ನೋಡಿ, ಬಹಳವಾಗಿ ಮೆಚ್ಚಿಕೊಂಡು, ಕೊಲ್ಲಲಾಗದೆಂಬ ಮಾತು, ಸುಳ್ಳು ಆಗದೆಂಬ ನುಡಿ, ಕದಿಯಲಾಗದು, ಜಾರೆಯರು ಬೇಡ, ಆಸೆ ಬೇಡ, ಹೆಂಡವು ಆಗದು (ಸರಿಯಲ್ಲ), ಮಾಂಸ ಆಗದು, ಮಧು (ಜೇನು) ಆಗದು ಎಂಬ ಈ ಮಾತುಗಳು–ಉಪದೇಶಗಳು, ಬೇರೆ ಧರ್ಮಗಳಲ್ಲಿ ಇರುವವೇ ? ಅನ್ಯವಾಕ್ಯಗಳಲ್ಲಿ ಉಂಟೆ ? ಬುದ್ಧಿಯನ್ನು ನೋಡಿದರೆ, ಚರ್ಚೆಯನ್ನು ಮಾಡುವುದಾದರೆ ಜಿನನಾಥನಿಂದಲ್ಲದೆ, ಜಿನಮುನಿಗಳಿಂದಲ್ಲದೆ, ಜಿನಧರ್ಮದಿಂದ ಹೊರತು, ಜಿನಸಮಯದಿಂದ ಹೊರತು, ಬೇರೆ ಪೂಜ್ಯರು ಇರುವರೆ ? ಬೇರೆ ನಿಸ್ಪೃಹರು ಇದ್ದಾರೆಯೆ ? ಬೇರೊಂದು ಲೇಸು ಇದೆಯೆ ? ಮತ್ತೊಂದು ಶುಭವೆಂಬುದಿದೆಯೆ ? ಮೈಲಾಪದಲ್ಲಿ ನಿಂತ ನೇಮಿಜಿನಪತಿಯಿಂದ, ಸಮುದ್ರದಲ್ಲಿ ನಿಂತ ನೇಮಿಜಿನಪತಿಯಿಂದ, ಚೋಳಭೂಮಿಯಲ್ಲಿ ನಿಂತ ದಿವಿಜವಲ್ಲಭನಿಂದ, ಲಲಿತಪುರ

ಲಲಿತಪುರದೊಳ್‌ನಿಂದ ಶಾಂತಿಜಿನಪತಿಯಿಂದ
ಬಂದಣಿಕೆಯೊಳ್‌ನಿಂದ ಶಾಂತಿಜಿನಪತಿಯಿಂದ
ಶಾರಿಯೂರೊಳ್‌ನಿಂದ ಶಾಂತಿಜಿನಪತಿಯಿಂದ
ಹಾನುಗಲ್ಲೊಳ್‌ನಿಂದ ಮಲ್ಲಿನಾಥಜಿನನಿಂದ
ಎಳವತ್ತಿಯೊಳ್‌ನಿಂದ ಚಂದ್ರಜಿನಪತಿಯಿಂದ
ಮಾಳವದೆ ನೆಲೆನಿಂದ ಸಕ್ಷೀರಜಿನನಿಂದ
ಆಶ್ರವವೊಳೊಪ್ಪಿರ್ದ ಸುವ್ರತೇಶ್ವರನಿಂದ
ಗೌಳಮಹಿಯೊಳ್‌ನಿಂದ ಶಂಭುಜಿನಪತಿಯಿಂದ
ತವನಿಧಿಯೊಳೆ ನಿಂದ ಪಾರ್ಶ್ವಜಿನಪತಿಯಿಂದ
ಕೌಶಾಂಬಿಯೊಳ್‌ನಿಂದ ಪದ್ಮಪರಿವೃಢನಿಂದ
ಅಹಿಚ್ಛತ್ರದೊಳ್‌ನಿಂದ ಪಾರ್ಶ್ವಜಿನಪತಿಯಿಂದ
ಸಾಮರ್ಥ್ಯಮುಂಟೆಂದು ತಾವಱಿವುದಿದನೆಂದು
ಕೊಲ್ಲದೊಡೆ ಕೊಲೆಯಿಲ್ಲ ಪುಸಿಯದೊಡೆ ಪಗೆಯಿಲ್ಲ
ಕಳ್ಳದೊಡೆ ಸಾವಿಲ್ಲ ಶೌಚದಿಂ ನೋವಿಲ್ಲ
ಮೇಱೆಯಿಂ ಕೇಡಿಲ್ಲ..........
ಭಾವಿಸುವೊಡೀವ್ರತಂ ಲೋಕದೊಳ್ ಸುವ್ರತಂ
ಜಿನನಿಗದಿತವ್ರತಂ ಅರ್ತಿಯಿಂದಾವ್ರತಮ
ನಾಚರಿಸೆ ಕೇಡಿಲ್ಲ ನರಕಕ್ಕೆ ಪೋಗಿಲ್ಲ
ಜಿನರ ಸಚ್ಚರಣಮಂ ದುರಿತಕುಲಹರಣಮಂ

ದಲ್ಲಿ ನಿಂತ ಶಾಂತಿಜಿನಪತಿಯಿಂದ, ಬಂದಣಿಕೆಯಲ್ಲಿ ನಿಂತ ಶಾಂತಿಜಿನಪತಿಯಿಂದ ಶಾರಿಯೂರಿನಲ್ಲಿ ನಿಂತ ಶಾಂತಿಜಿನಪತಿಯಿಂದ, ಹಾನುಗಲ್ಲಿನಲ್ಲಿ ನಿಂತ ಮಲ್ಲಿನಾಥಜಿನೇಶ್ವರನಿಂದ, ಎಳವತ್ತಿಯೊಳಗೆ ನಿಂತ ಚಂದ್ರಜಿನೇಶ್ವರನಿಂದ, ಮಾಳವದಲ್ಲಿ ನೆಲೆಯಾಗಿ ನಿಂತ ಸಕ್ಷೀರ ಜಿನಪತಿಯಿಂದ, ಆಶ್ರಮದಲ್ಲಿ ಶೋಭಿಸುತ್ತಿರುವ ಸುವ್ರತೇಶ್ವರನಿಂದ ಗೌಳಭೂಮಿಯಲ್ಲಿ ನಿಂತ ಶಂಭುಜಿನಪತಿಯಿಂದ, ತವನಿಧಿಯೊಳಗೆ ನಿಂತ ಪಾರ್ಶ್ವ ಜಿನಪತಿಯಿಂದ, ಕೌಶಾಂಬಿಯೊಳಗೆ ನಿಂತ ಪದ್ಮಪರಿವೃಢನಿಂದ, ಅಹಿಚ್ಛತ್ರದಲ್ಲಿ ನಿಂತ ಪಾರ್ಶ್ವಜಿನಪತಿಯಿಂದ, ಸಾಮರ್ಥ್ಯವುಂಟೆಂದು ತಾವು ಇದನ್ನು ತಿಳಿಯತಕ್ಕದ್ದು. ಕೊಲ್ಲದಿದ್ದರೆ ನಿಮಗೆ ಕೊಲೆಯಿಲ್ಲ. ಹುಸಿಯದಿದ್ದರೆ ಶತ್ರುವಿಲ್ಲ. ಕದಿಯದಿದ್ದರೆ ಸಾವಿಲ್ಲ. ಶೌಚ(ಶುದ್ಧ ಆಚಾರ)ದಿಂದ ನೋವಿಲ್ಲ. ಮೇರೆ(ನಿಯಮ)ಯಿಂದ ಕೇಡಿಲ್ಲ. ಭಾವಿಸಿದರೆ ಈ ವ್ರತವು ಲೋಕದಲ್ಲಿ ಸುವ್ರತ; ಜಿನನು ಹೇಳಿದ ವ್ರತ. ಆಸೆಯಿಂದ ಆ ವ್ರತವನ್ನು ಆಚರಿಸಿದರೆ ಕೇಡಿಲ್ಲ; ನರಕಕ್ಕೆ ಪ್ರಯಾಣವಿಲ್ಲ. ಜಿನರ ಸಚ್ಚರಣಗಳನ್ನು–ಪಾಪಕುಲಪರಿಹಾರಕಗಳು–ಆಶ್ರಯಿಸಿ

ಪೊರ್ದಿದಂಗರಿದಲ್ಲ ನರಕಗತಿ ಮುನ್ನಿಲ್ಲ
ಸಾಮರ್ಥ್ಯಮುಂಟೆಂದು ತಾವಱಿವುದಿದನೆಂದು
ಜಿನರ ಸದ್ರೂಪಮಂ ಪಾಪಸಂತಾಪಮಂ
ತಾಳ್ದಿವಂಗೆಡರಿಲ್ಲ ದುಃಖಕ್ಕೆಸಲಲಿಲ್ಲ

ಜಿನಪತಿಯನರ್ಚಿಸುಗೆ ಋಷಿಯರಂ ಪೂಜಿಸುಗೆ
ಸದ್ಧರ್ಮಮಂ ಪಿಡಿಗೆ ದುಷ್ಕರ್ಮಮಂ ಬಿಡುಗೆ
ಸಮ್ಯಕ್ತ್ವಮಂ ಪಿಡಿಗೆ ಮಿಥ್ಯಾತ್ವಮಂ ಬಿಡುಗೆ
ಸಕಲಸುಖಮೆಲ್ಲಮಂ ಪಡೆವ ಮನಮುಳ್ಳವಂ ೨೪೧

ಗದ್ಯ॥ ಎಂದು ಜನಮೆಲ್ಲಂ ನಚ್ಚಿಮೆಚ್ಚಿ ಬಿಚ್ಚಳಿಸುತ್ತುಮಿರೆಯಿರೆ ೨೪೨

ಜಿನಪಾದ ಭಕ್ತನೆನಿಸುವ
ಮುನಿಗೀ ತ್ರೈಲೋಕ್ಯಮೆಲ್ಲಮುಂ ಗಹನಮೆ ಪೇ
ೞೆನಿಸೇಕೆ ದೇವಪಾದಮ
ನನಂತಗುಣರಾಶಿ ತಡೆಯದುಡುಗಲೆ ವೇಟ್ಕುಂ ೨೪೩

ಅಣಿಮಾದ್ಯಷ್ಟಗುಣಂಗಳ್
ಕ್ಷಣದಿಂದಂ ನಿಮಗೆ ಜೈನಪದಭಕ್ತಿಯಿನೊ
ಳ್ಗುಣಮುಂ ಪುಟ್ಟಿದುವೆನೆ ಧಾ
ರಿಣಿಯೊಳ್ ನಿಮ್ಮಂತು ದೇವ ನಿರ್ಮಳನಾವಂ ೨೪೪

ದವನಿಗೆ ಮುಂದೆ ನರಕಗತಿಯಿಲ್ಲ. ಜಿನಧರ್ಮಕ್ಕೆ ಸಾಮರ್ಥ್ಯವಿದೆಯೆಂಬುದನ್ನು ತಾವು ಅರಿತುಕೊಳ್ಳಿ, ಪಾಪವನ್ನು ಸಂತಾಪಕ್ಕೆ ಈಡುಮಾಡುವ ಜಿನರ ಸದ್ರೂಪವನ್ನು ಧರಿಸಿದವರಿಗೆ ಎಡರೆಂಬುದಿಲ್ಲ; ಅವರು ದುಃಖಕ್ಕೆ ಗುರಿಯಾಗುವುದಿಲ್ಲ. ಜಿನಪತಿಯನ್ನು ಪೂಜಿಸಿರಿ. ಋಷಿಯನ್ನು ಪೂಜಿಸಿರಿ, ಸದ್ಧರ್ಮವನ್ನು ಹಿಡಿಯಿರಿ; ದುಷ್ಕರ್ಮವನ್ನು ಬಿಡಿರಿ. ಸಮ್ಯಕ್ತ್ವವನ್ನು ಹಿಡಿಯಿರಿ; ಮಿಥ್ಯಾತ್ವವನ್ನು ಬಿಡಿರಿ. ಸಕಲಸುಖಗಳನ್ನೂ ಪಡೆಯುವ ಆಸೆಯುಳ್ಳವರು ಜಿನಧರ್ಮವನ್ನು ಹಿಡಿಯಿರಿ. ೨೪೧. ಹೀಗೆಂದು ಜನರೆಲ್ಲರೂ ನಂಬಿ, ಮೆಚ್ಚಿ, ವಿಸ್ತಾರವಾಗಿ ಹೊಗಳುತ್ತ ಇರಲು ೨೪೨. ಜಿನಪಾದಭಕ್ತನೆನ್ನಿಸುವ ಮುನಿಗೆ ಈ ಮೂರುಲೋಕಗಳೆಲ್ಲವೂ ಕಷ್ಟವೆ? ಹೇಳು. ಇಷ್ಟೇತಕ್ಕೆ ? ಅನಂತಗುಣರಾಶಿಯೆ, ದೇವ, ಪಾದಗಳನ್ನು ಸಾವಕಾಶ ಮಾಡದೆ ಸಂಕೋಚಗೊಳಿಸಬೇಕು. ೨೪೩. ಅಣಿಮಾದಿ ಎಂಟು ಗುಣಗಳು, ಕ್ಷಣದಲ್ಲಿ ನಿಮಗೆ ಜೈನಪದ ಭಕ್ತಿ, ಈ ಒಳ್ಳೆಯ ಗುಣವೂ ಹುಟ್ಟಿದುವೆಂದರೆ ದೇವ ! ನಿಮ್ಮಂತೆ ಈ ಭೂಮಂಡಲದೊಳಗೆ ನಿರ್ಮಲನಾದವನು ಯಾರು? ೨೪೪. ದಯೆಯಿಂದ ಜೈನತತ್ವವನ್ನು ಸಂಶಯವಿಲ್ಲದೆ ಭಾವಿಸುವುದು, ಸ್ಮರಿಸುವುದು,

ದಯೆಯಿಂ ಭಾವಿಸುವುದು ಸಂ
ಶಯಮಿಲ್ಲದೆ ಜೈನತತ್ವಮಂ ನೆನೆವುದು ದು
ರ್ನಯಮಂ ಬಿಡುವುದು ಧರ್ಮ
ಪ್ರಿಯನಪ್ಪುದು ಸುಕವಿನಿಕರಪಿಕಮಾಕಂದಂ ೨೪೫

ಗದ್ಯ॥ ಎಂದು ಸಮಸ್ತ ದಿವಿಜನಿಕುರುಂಬಂ ಪೊಡಮಡುತುಂ ಪಾದದೊಡನೊಡನೆ ತೊಟಲುತ್ತುಂ ಪೂಜಿಸುತ್ತಿರ್ಪನ್ನೆಗಮಿತ್ತಲಿಂದ್ರನ ಬೆಸದಿಂ ದೇವಕುಮಾರರ್ ಬಲಿಯುನಂಬಲಿಯ ಮೊಟ್ಟೆಯುಂ ಕಟ್ಟುವಂತೆ ಕೋಡಗಗಟ್ಟು ಗಟ್ಟಿ ಹಸ್ತಿನಾಪುರದಿಂ ಪೊಱಮಡಿಸಿ ಕಳೆವುದುಂ, ಚಾರಣ ಋಷಿಯುತುಂ ಸೌಧರ್ಮೇಂದ್ರಾದಿ ಸುರೇಂದ್ರರುಂ ಸಿತಗಿರಿಯ ಗುಹೆಯಾ ಬಾಗಿಲೊಳಿರ್ದ ಕಸವಂ ಕಿರ್ಚಂ ಪಿಂಗಿಸಿ ಜಗದುತ್ತುಂಗರುಂ ಕರ್ಮಮದೇಭಸಿಂಹರುಮೆನಿಪಕಂಪನಾಚಾರ್ಯರ ಧೈರ್ಯ ಧರಣೀಧರರೆನಿಸುವಯ್ನೂರ್ವರ್ ಮುನಿವರರ ಘೋರೋಪಸರ್ಗಮಂ ಪಿಂಗಿಸಿ ವಾತ್ಸಲ್ಯರತ್ನಾಕರರಲ್ಲಿಗೆ ವಂದು ೨೪೬

ಮುನಿನಿಕರಕ್ಕೆ ಪಿಂಗಿದುದು ದುಶ್ಚರಿತಾನ್ವಿತನುಗ್ರಮೂರ್ತಿ ದು
ರ್ಮನನೆನಿಸಿರ್ದಪಾಪಿ ಬಲಿ ಮಾಡಿದದೊಂದುಪಸರ್ಗಮಿಂದು ಸ
ಜ್ಜನನುತ ಸಚ್ಚರಿತ್ರ ಗುಣಬೋಧಸುಧಾರ್ಣವ ಭವ್ಯಬಂಧು ನಿ
ರ್ಮಲ ನಿಜತತ್ವ ನೀನುಡುಗು ಪಾದಮನೆಂಬುದುಮಾ ಮುನೀಶ್ವರಂ ೨೪೭

ದುರ್ನಯವನ್ನು ಬಿಡಬೇಕು. ಸುಕವಿನಿಕರಪಿಕಮಾಕಂದನು ಧರ್ಮಪ್ರಿಯನಾಗುವುದು. ೨೪೫. ಎಂದು ಸಮಸ್ತರಾದ ದೇವಸಮೂಹದವರೂ ನಮಸ್ಕರಿಸುತ್ತ ಪಾದಗಳೊಡನೊಡನೆ ಸುತ್ತುತ್ತ ಪೂಜಿಸುತ್ತಿರುವಾಗ, ಇತ್ತ ಇಂದ್ರನ ಅಪ್ಪಣೆಯಂತೆ ದೇವಕುಮಾರರು ಬಲಿಯನ್ನು ಅಂಬಲಿಯನ್ನು ಮೊಟ್ಟೆ ಕಟ್ಟುವಂತೆ ಕೋಡಗಗಟ್ಟು ಕಟ್ಟಿ ಹಸ್ತಿನಾಪುರದಿಂದ ಹೊರಡಿಸಿ ಓಡಿಸಲು ಚಾರಣ ಋಷಿಯರೂ ಸೌಧರ್ಮೇಂದ್ರಾದಿ ಸುರೇಂದ್ರರೂ ಸಿತಗಿರಿಯ ಗುಹೆಯ ಬಾಗಿಲಿನಲ್ಲಿದ್ದ ಕಸವನ್ನೂ ಕಿಚ್ಚನ್ನೂ ಕಳೆದು ಜಗತ್ತಿಗೆ ಉತ್ತುಂಗರೂ (ಶ್ರೇಷ್ಠ) ಕರ್ಮವೆಂಬ ಮದ್ದಾನೆಗೆ ಸಿಂಹಸ್ವರೂಪರಾದವರೂ ಎನಿಸಿದ ಅಕಂಪನಾಚಾರ್ಯರಿಗೂ, ಧೈರ್ಯಪರ್ವತಗಳೆನಿಸುವ ಐನೂರ್ವರು ಮುನಿಶ್ರೇಷ್ಠರಿಗೂ ಆಗಲಿದ್ದ ಘೋರವಾದ ಉಪಸರ್ಗವನ್ನು ಹೋಗಲಾಡಿಸಿ ವಾತ್ಸಲ್ಯರತ್ನಾಕರನ ಬಳಿಗೆ ಬಂದು ೨೪೬. ದುಶ್ಚರಿತ್ರನೂ ಕ್ರೂರಸ್ವರೂಪನೂ ದುರ್ಮದನೂ ಎನ್ನಿಸಿದ ಪಾಪಿಯಾದ ಬಲಿಯು ಮುನಿಸಮೂಹಕ್ಕೆ ಮಾಡಿದ ಒಂದು ಉಪಸರ್ಗವು ಇಂದು ಕಳೆಯಿತು. ಸಜ್ಜನಸ್ತುತಸಚ್ಚರಿತ್ರನೆ, ಗುಣಜ್ಞಾನಾಮೃತಾರ್ಣವನೆ, ಭವ್ಯಬಂಧು ! ನಿರ್ಮಲ ನಿಜತತ್ವಜ್ಞನೆ, ನೀನು ಪಾದವನ್ನು ಹಿಂದಕ್ಕೆ ತೆಗೆದುಕೋ" ಎಂದು ಪ್ರಾರ್ಥಿಸಿದರು. ಆಗ ಆ ಮುನೀಶ್ವರನೂ ೨೪೭. ಮಾಯೆಯನ್ನು ಸಾಕು ಮಾಡಿ ತನ್ನ ಮೊದಲಿನ ರೂಪವನ್ನು ಕೈಕೊಂಡು

ಗದ್ಯ॥ ವಿಗುರ್ವಣೆಯನುಪಸಂಹರಿಸಿ ತನ್ನ ಮುನ್ನಿನ ರೂಪಂ ಕೈಕೊಂಡು ಸಂತೋಷದಿಂದಿರ್ಪುದುಂ ದೇವನಿಕಾಯಮೆಲ್ಲಂ ಸಹಜಕವಿಜನಮನೋಹರೋದ್ಯಾನವನ ಕಳಕಂಠರೂಪನಂ ಕಣ್ಣಾರೆ ನೋಡಿ ಮನದೊಳ್ ಭಕ್ತಿ ಕೈಗಣ್ಮೆ ಪಲವರ್ಚನೆಯಿಂದರ್ಚಿಸಿ ಕರಕಮಲಂಗಳಂ ಮುಗಿದು ೨೪೮

ಜಿನಪದಭಕ್ತಿಯೊಳ್ ಗುಣದೊಳುನ್ನತಿಯೊಳ್ ಸಕಲಾಗಮಾರ್ಥದೊಳ್
ವಿನಯದೊಳುನ್ನತವ್ರತದೊಳೋಜೆಯೊಳೊಪ್ಪುವ ಸಚ್ಚರಿತ್ರದೊಳ್
ಮುನಿಪದಭಕ್ತಿಯೊಳ್ ವಿಮಲ ಧೈರ್ಯದೊಳೂರ್ಜಿತಮಪ್ಪ ಕೀರ್ತಿಯೊಳ್
ನಿನಗೆ ಸಮಾನರಾರ್ ಸದೃಶರಾರ್ ದೊರೆಯೊರೆಣೆಯಾರ್ ಮುನೀಶ್ವರಾ ೨೪೯

ಜನವಿನುತಮೆನಿಸುವೀ ಯೆಂ
ಟನೆಯಂಗಂ ನಿನ್ನ ಮೆಯ್ಯೊಳಿರ್ದುದಱಿಂ ದೇ
ವನಿಕಾಯಪೂಜ್ಯನಾದೈ
ಮುನೀಂದ್ರ ನಿನ್ನಂತು ಧನ್ಯರಾರ್ ಭೂತಳದೊಳ್ ೨೫೦

ಮೋಕ್ಷಶ್ರೀಕಾಮಿನಿಗಿದು
ನಿಕ್ಷೇಪದ ನಿಧಿ ಸುಖಕ್ಕಿದಕ್ಷಯನಿಧಿ ಪಾ
ಪಕ್ಷಯಮೆಂದಿದನಱಿಕೆಯೊ
ಳೀಕ್ಷಿತಿಯೊಳ್ ತಾಳ್ದಿ ನಿಂದವಂಗೆಡರುಂಟೇ ೨೫೧

ಸಂತೋಷದಿಂದ ಇರಲಾಗಿ ದೇವಸಮೂಹವದರೆಲ್ಲರೂ ಸಹಜಕವಿಜನಮನೋಹರೋದ್ಯಾನವನ ಕಳಕಂಠ(ಕೋಗಿಲೆ)ರೂಪನನ್ನು ಕಣ್ಣುತುಂಬಾ ನೋಡಿ ಮನಸ್ಸಿನಲ್ಲಿ ಭಕ್ತಿ ಹೆಚ್ಚಿ ಹಲವು ಅರ್ಚನೆಗಳಿಂದ ಪೂಜಿಸಿ ಕರಕಮಲಗಳನ್ನು ಮುಗಿದು ೨೪೮. ಜಿನಪಾದಭಕ್ತಿಯಲ್ಲಿ, ಗುಣದಲ್ಲಿ, ಔನ್ನತ್ಯದಲ್ಲಿ, ಸಮಸ್ತ ಆಗಮಾರ್ಥದಲ್ಲಿ ವಿನಯದಲ್ಲಿ, ಉನ್ನತವಾದ ವ್ರತಗಳಲ್ಲಿ ತೇಜಸ್ಸಿನಲ್ಲಿ, ಶೋಭಿಸುವ ಸಚ್ಚರಿತ್ರದಲ್ಲಿ ಮುನಿಪಾದಭಕ್ತಿಯಲ್ಲಿ, ಶುದ್ಧ ಧೈರ್ಯದಲ್ಲಿ, ಊರ್ಜಿತವಾದ ಕೀರ್ತಿಯಲ್ಲಿ, ನಿನಗೆ ಸಮಾನರಾಗಲಿ, ನಿನ್ನನ್ನು ಹೋಲುವಂಥವರಾಗಲಿ, ಯಾರಿದ್ದಾರೆ ? ೨೪೯. ಜನಸ್ತುತ್ಯವೆನ್ನಿಸುವ ಈ ಯೆಂಟನೆಯ ಅಂಗವು ನಿನ್ನ ಮೈಯಲ್ಲಿದ್ದುದರಿಂದ ನೀನು ದೇವಸಮೂಹಕ್ಕೆ ಪೂಜಾರ್ಹನಾದೆ. ಮುನೀಂದ್ರ ! ಭೂಮಿಯ ಮೇಲೆ ನಿನ್ನಷ್ಟು ಧನ್ಯರು ಯಾರಿದ್ದಾರೆ ? ೨೫೦. ಮೋಕ್ಷಲಕ್ಷ್ಮೀಕಾಮಿನಿಗೆ ಇದು ನಿಕ್ಷೇಪದ ನಿಧಿ ; ಸುಖಕ್ಕೆ ಇದು ಅಕ್ಷಯವಾದ ನಿಧಿ. ಇದರಿಂದ ಪಾಪಗಳು ಕ್ಷಯವಾಗುತ್ತವೆ. ಹೀಗೆಂದು ಇದನ್ನು ತಿಳಿದು ಲೋಕದಲ್ಲಿ ಬುದ್ಧಿಪೂರ್ವಕವಾಗಿ ಧರಿಸಿ ನಿಂತವನಿಗೆ ಕಷ್ಟಗಳುಂಟೆ ? ೨೫೧. ಎಂದು ನಾನಾ ವಿಧಗಳಿಂದ ಪ್ರಭಾವನಾಂಗವನ್ನೂ ವಾತ್ಸಲ್ಯ

ಗದ್ಯ॥ ಎಂದು ನಾನಾವಿಧದಿಂ ಪ್ರಭಾವನಾಂಗಮುಮಂ ವಾತ್ಸಲ್ಯರತ್ನಾಕರನುಮಂ ಪೊಗೞ್ದು ಚತುರ್ವಿಧದೇವಸಮೂಹಮುಂ ತಂತಮ್ಮ ನಿವಾಸಂಗಳ್ಗೆ ಪೋದರ್. ಪದ್ಮಮಹಾರಾಜಂ ಧರ್ಮದೊಳಾದೈಶ್ವರ್ಯಮುಮಂ ಪ್ರಭಾವನಾಂಗದೊಳಾದ ಮಹಿಮೆಯುಮಂ ಕಂಡು ಮಹಾಭಕ್ತಿಯಿಂ ಸಮ್ಯಕ್ತ್ವಚೂಡಾಮಣಿಯ ಪಾದಪದ್ಮಂಗಳಂ ಮನಪಾರೆ ಪೂಜಿಸಿ ಪೊಡೆಮಟ್ಟು ಪಲವುಂ ಸದ್ವ್ರತಂಗಳಂ ತಾಳ್ದಿ ಧರ್ಮದೊಳ್ ದೃಢಚಿತ್ತನಾಗಿ ಪೋದಂ ೨೫೨

ಬಲಿ ಮುನ್ನಂ ಜಯವರ್ಮಭೂಧರನ ಮುಂದಾರಯ್ಯದುರ್ಕಿಂದೆ ಸಂ
ಚಲಚಿತ್ತಂ ನುಡಿದಾಱದಿರ್ದೊಡೆ ನೃಪಂ ಛೀ ಸೋಲ್ತೆಯಿನ್ನೆಂದೊಡು
ಮ್ಮಳದಿಂದಿಲ್ಲಿಗೆ ವಂದು ಕೊರ್ವಿ ಮುಳಿಸಿಂ ಯೋಗೀಂದ್ರನಂ ಕೊಲ್ವೆನೆಂ
ದಳಿದಂ ಕರ್ಮಮೆ ಕಷ್ಟಮೊರ್ವರಳಿವಂ ಪಾರ್ವಂಗೆ ಲೇಸಕ್ಕುಮೇ ೨೫೩

ಪರರ ಮನೆಯ ಸೂಜಿಯ ಕೇಡಂ ಬಯಸುವ ಕಳ್ಳಂಗೆ ತನ್ನ ಮನೆ
ಯ ಕುಳಂ ಕೆಟ್ಟುದೆಂಬಂತೆ ನಿರ್ದೋಷಿಗಳಪ್ಪಕಂಪನಾಚಾರ್ಯರ್ಗುಪ
ಸರ್ಗಂ ಮಾಡಿದ ಬಲಿ ಪಾಪದ ಫಲದಿಂ ಬೋಂಡಾಗಿ ಕಟ್ಟುವೆತ್ತನೆಂದು
ಪಾಪದೊಳಾದ ಪ್ರತ್ಯಕ್ಷಫಲಮಂ ಕಂಡು ವಿಸ್ಮಯಂಬಟ್ಟರದಱಿಂ ೨೫೪

ರತ್ನಾಕರನನ್ನೂ ಹೊಗಳಿ ಚತುರ್ವಿಧ ದೇವಸಮೂಹವೂ ತಮ್ಮ ತಮ್ಮ ನಿವಾಸಗಳಿಗೆ ಹೋದರು. ಪದ್ಮಮಹಾರಾಜನು ಧರ್ಮದಿಂದ ಆದ ಐಶ್ವರ್ಯವನ್ನೂ ಪ್ರಭಾವನಾಂಗದಿಂದ ಆದ ಮಹಿಮೆಯನ್ನೂ ಕಂಡು ಮಹಾಭಕ್ತಿಯಿಂದ ಸಮ್ಯಕ್ತ್ವ ಚೂಡಾಮಣಿಯ ಪಾದಕಮಲಗಳನ್ನು ಮನಸ್ತೃಪ್ತಿಯಾಗುವಂತೆ ಪೂಜಿಸಿ ನಮಸ್ಕರಿಸಿ ಹಲವು ಸದ್ವ್ರತಗಳನ್ನು ಧರಿಸಿ ಧರ್ಮದಲ್ಲಿ ದೃಢಚಿತ್ತನಾಗಿ ಹೋದನು. ೨೫೨. ಬಲಿ ಹಿಂದೆ ಜಯವರ್ಮಮಹಾರಾಜನ ಮುಂದೆ ವಿಚಾರವಿಲ್ಲದೆ ಉಬ್ಬಿನಿಂದ ಚಂಚಲಚಿತ್ತನಾಗಿ ಮಾತನಾಡಿ ಕೈಲಾಗದಿದ್ದರೆ ರಾಜನು 'ಛೀ ಸೋಲ್ತೆ' ಎಂದರೆ ದುಃಖದಿಂದ ಇಲ್ಲಿಗೆ ಬಂದು ಕೊಬ್ಬಿ ಕೋಪದಿಂದ ಯೋಗೀಂದ್ರನನ್ನು ಕೊಲ್ಲುವೆನೆಂದು ಅವನೇ ಹಾಳಾದ. ಕರ್ಮವೇ ಕಷ್ಟ. ಇನ್ನೊಬ್ಬರ ನಾಶವನ್ನು ನಿರೀಕ್ಷಿಸುವವನಿಗೆ ಒಳ್ಳೆಯದಾಗುವುದೆ ? ೨೫೩. ಕಂಡವರ ಮನೆಯ ಸೂಜಿಯ ನಾಶವನ್ನು ಕೋರುವ ಕಳ್ಳನಿಗೆ ತನ್ನ ಮನೆಯ ಕುಳವು ಕೆಟ್ಟುಹೋಯಿತೆಂಬಂತೆ ನಿರ್ದೋಷಿಗಳಾದ ಅಕಂಪನಾಚಾರ್ಯರಿಗೆ ಉಪಸರ್ಗವನ್ನು ಮಾಡಿದ ಬಲಿಯು ತನ್ನ ಪಾಪದ ಫಲದಿಂದ ಹಲ್ಲು ಕಳೆದುಕೊಂಡು ಕಟ್ಟಿಗೆ ಸಿಕ್ಕಿಬಿದ್ದನೆಂದು ಪಾಪದಿಂದೊದಗಿದ ಪ್ರತ್ಯಕ್ಷ ಫಲವನ್ನು ಕಂಡು ಆಶ್ಚರ್ಯಪಟ್ಟರು. ೨೫೪.

ಕುಸಿಯದೆ ಪೆಱರೞಿವಂ ಚಿಂ
ತಿಸುವಂ ತಾನೞಿಗುಮಂತೆ ತೊದೞಿಲ್ಲದೆ ಚಿಂ
ತಿಸುವಾತಂ ಪೆಱರ್ಗೊಳ್ಪಂ
ವಸುಮತಿಯೊಳ್ ತಾನೆ ಸಿರಿಗೆ ನೆಲೆಯಾಗಿರ್ಕುಂ ೨೫೫

ಮಗಧಾವನೀಶ ಪಾಪಂ
ಪುಗದಂತೆ ನೆಗೞ್ತೆಯ ಪ್ರಭಾವನೆಯುಂ ಕೈ
ಮಿಗೆ ಕೊರ್ತು ಪದಪಿನಿಂ ಮಾ
ಡುಗೆ ಪಾಪಂ ಕಿಡುಗುಮದಱ ಕೇಡಿಂ ಮೋಕ್ಷಂ ೨೫೬

ಮತ್ತೆನ್ನದೆ ದೊರೆಕೊಳ್ಗಂ
ಚಿತ್ತಂ ತಲ್ಲಣಿಸದೊಂದೆ ಮಾನದಿಂ ಗುಣಮಂ
ಪತ್ತುಗೆ ಕಡೆಯಂಗಮದ
ತ್ಯುತ್ತಮಮೆಂದೊಲ್ದು ನಂಬಿ ಪೊರ್ದುಗೆ ಭವ್ಯಂ ೨೫೭

ಗದ್ಯ॥ ಎಂದು ಪ್ರಭಾವನೆಯೊಳಾದ ಪ್ರತ್ಯಕ್ಷಫಲವನ್ನು ಗಣಧರಸ್ವಾಮಿಗಳ್ ಪೇೞೆ ಕೇಳ್ದು
೨೫೮

ವಿಮಳ ಪ್ರಖ್ಯಾತಕೀರ್ತಿಧ್ವಜನಮಳಗುಣಂ ವಾಗ್ವಧೂವಲ್ಲಭಂ ಕಾ
ಮಮದೇಭೇಂದ್ರ ಪ್ರತಾಪಕ್ಷಯಹರಿ ಗಜದುತ್ತುಂಗನತ್ಯೂರ್ಜಿತಂ ರ
ಮ್ಯಮನಂ ತ್ರೈವಿದ್ಯಚಕ್ರೇಶ್ವರನಮಲ ಪದಾಂಭೋಜಭೃಂಗಂ ಯಶಶ್ರೀ
ರಮಣಂ ಸೋತ್ಸಾಹನಾದಂ ಸುಕವಿಜನಮನಃಪದ್ಮಿನೀರಾಜಹಂಸಂ ೨೫೯

ಆದರಿಂದ ಕುಗ್ಗದೆ, (ಹಿಂತೆಗೆಯದೆ) ಅನ್ಯರ ನಾಶವನ್ನು ಯೋಚಿಸುವವನು ತಾನು ನಾಶವಾಗುವನು. ಹಾಗೆಯೇ ಸಂದೇಹವಿಲ್ಲದೆ ಅನ್ಯರಿಗೆ ಒಳ್ಳೆಯದನ್ನು ಯೋಚಿಸುವವನು ಭೂಮಿಯ ಮೇಲೆ ತಾನೇ ಐಶ್ವರ್ಯಕ್ಕೆ ನೆಲೆಯಾಗಿ ಇರುವನು. ೨೫೫. ಮಗಧರಾಜ! ಪಾಪ ಪ್ರವೇಶಿಸಿದಂತೆ ಪ್ರಸಿದ್ಧವಾದ ಪ್ರಭಾವನೆಯನ್ನು ಬಹಳವಾಗಿ ಪ್ರೀತ್ಯುತ್ಸಾಹಗಳಿಂದ ಮಾಡಲಿ. ಪಾಪ ಹಾಳಾಗುವುದು. ಆದರ (ಪಾಪದ) ಕೇಡಿನಿಂದ ಮೋಕ್ಷ. ೨೫೬. ಮತ್ತೆ ಮಾತನಾಡದೆ ಚಿತ್ತವು ತಲ್ಲಣಗೊಳ್ಳದೆ ಒಂದೇ ಮನಸ್ಸಿನಿಂದ ಗುಣವನ್ನು ಆಶ್ರಯಿಸಲಿ. ಕೊನೆಯ ಅಂಗವು, (ಅದು) ಅತ್ಯುತ್ತಮವೆಂದು ಪ್ರೀತಿಯಿಂದ ನಂಬಿ ಭವ್ಯನು ಪ್ರಭಾವನೆಯಲ್ಲಿ ಹೊಂದಿಕೊಳ್ಳಲಿ. ೨೫೭. ಹೀಗೆಂದು ಪ್ರಭಾವನೆಯಿಂದ ಆದ ಪ್ರತ್ಯಕ್ಷ ಫಲವನ್ನು ಗಣಧರಸ್ವಾಮಿಗಳು ಹೇಳಲು, ಕೇಳಿ ೨೫೮. ವಿಮಳ ಪ್ರಖ್ಯಾತ ಕೀರ್ತಿಧ್ವಜನು, ಶುದ್ಧಗುಣವಂತನು ವಾಗ್ವಧೂವಲ್ಲಭನು, ಕಾಮವೆಂಬ ಮದದಾನೆಯ ಪ್ರತಾಪಕ್ಷಯಕರಸಿಂಹನು, ಗಜಗಳಲ್ಲಿ ಅತ್ಯಂತ ಶ್ರೇಷ್ಠನು, ಅತಿ ಊರ್ಜಿತನು, ರಮ್ಯವಾದ ಮನಸ್ಸುಳ್ಳವನು, ತ್ರೈವಿದ್ಯಚಕ್ರೇಶ್ವರನ ಪವಿತ್ರ ಪಾದಕಮಲಗಳಲ್ಲಿ ದುಂಬಿ, ಯಶೋಲಕ್ಷ್ಮೀರಮಣನು, ಸುಕವಿಜನ ಮನಃ ಪದ್ಮಿನೀ ರಾಜಹಂಸನು ಉತ್ಸಾಹಶಾಲಿಯಾದನು. ೨೫೯. ಇದು ಸಮಸ್ತದೇವತೆಗಳ ಶಿರಸಾಷ್ಟಾಂಗ ಪ್ರಣಾಮಗಳನ್ನು

ಗದ್ಯ॥ ಇದು ನಿಖಿಲದಿವಿಜಪರಿವೃಢ ಮಕುಟತಟಘಟಿತ ಮಣಿಗಣವಿಲುಳಿತಕಿರಣ ಚುಂಬನೀಯ ಪರಮಜಿನಚರಣಯುಗಳ ಸರಸಿರುಹ ಮತ್ತಮಧುಕರ ನಿರುಪಮ ಸಹಜಕವಿಜನಪಯಃಪಯೋಧಿಹಿಮಕರ ನುತಭಾವಯುತ ದಿಗಂಬರದಾಸ ನೂತ್ನಕವಿತಾವಿಳಾಸ ಶ್ರೀಮನ್ನಯಸೇನದೇವವಿರಚಿತಮಪ್ಪ 'ಧರ್ಮಾಮೃತ'ದೊಳ್ ದರ್ಶನಾಷ್ಟಮಾಂಗವ್ಯಾವರ್ಣನಂ

## ನವಮಾಶ್ವಾಸಂ

ಹೊಂದಿದ ಜಿನನಪಾದಕಮಲಗಳಲ್ಲಿ ತುಂಬಿಯಾದ ನಿರುಪಮ ಸಹಜಕವಿ, ಕವಿಗಳೆಂಬ ಪಾಲುಕಡಲಿಗೆ ಚಂದ್ರನಾದ 'ದಿಗಂಬರದಾಸ' 'ನೂತ್ನ ಕವಿತಾವಿಳಾಸ' ಎಂಬ ಬಿರುದುಗಳುಳ್ಳ ಶ್ರೀಮನ್ನಯಸೇನದೇವವಿರಚಿತವಾದ 'ಧರ್ಮಾಮೃತ'ದಲ್ಲಿ ದರ್ಶನಾಷ್ಟಮಾಂಗವ್ಯಾವರ್ಣನಂ, ನವಮಾಶ್ವಾಸಂ.

# ದಶಮಾಶ್ವಾಸಂ

ಶ್ರೀದಯಿತೆಗೆ ನಿರ್ವಾಣ
ಶ್ರೀದಯಿತೆಗೆ ದರ್ಶನಾಂಗಮೆಂಟುಂ ಚಿತ್ತಾ
ಹ್ಲಾದಕರಮೆಂದು ನಂಬಿದ
ನಾದರದಿಂ ಸುಕವಿನಿಕರಪಿಕಮಾಕಂದಂ ೧

ಗದ್ಯ॥ ಅಂತು ಮುಕ್ತಿಶ್ರೀಶೀಘ್ರಾಕರ್ಷಣವಾಗಿಸುವ ದರ್ಶನಾಂಗಮುಮಂ ಲೇಸಾಗಿ ಕೇಳ್ದು ಶ್ರೇಣಿಕ ಮಹಾರಾಜಂ ವಿಶ್ವಲೋಕೈಕವಂದ್ಯರೆನಿಸಿದ ಗೌತಮಸ್ವಾಮಿಗಳ್ಗೆ ಪೊಡೆಮಟ್ಟು ಸುಗತ್ಮ ವನಿತೆಯ ಕಡೆಗಣ್ಣ ಚೆಲ್ಲಮೆನಿಸುವ ಕೊಲ್ಲದ ವ್ರತಮನೆನಗಱಿಪುವುದೆಂದು ಕೈಗಳಂ ಮುಗಿದು ಬೆಸಗೊಳ್ವುದುಂ ೨

ಮುನಿರತ್ನಂ ಪರಮ ಜಿನೇ
ಶನಸ್ವಿಮತಮಂ ಸಕಲ ಜೀವಹಿತಮಂ ಗಂಭೀ
ರನಿನಾದದಿಂದೆ
ಮನದೊಳ್ ಕಡುರಾಗವೊದವೆ ನಲಿಯೆ ನರೇಂದ್ರಂ ೩

ಗದ್ಯ॥ ಇಂತೆಂದು ಪೇಟ್ದರ್ ೪

ಶ್ರೀರಮಣಿಗೆ, ಮೋಕ್ಷಲಕ್ಷ್ಮೀರಮಣಿಗೆ ಎಂಟು ದರ್ಶನಾಂಗಗಳೂ ಆಹ್ಲಾದ ಕರವೆಂದು ಶ್ರೇಣಿಕ ಮಹಾರಾಜನು ಆದರ ಪೂರ್ವಕವಾಗಿ ನಂಬಿದನು ೧. ಹಾಗೆ ಮೋಕ್ಷ ಲಕ್ಷ್ಮಿಯನ್ನು ಶೀಘ್ರವಾಗಿ ಆಕರ್ಷಿಸುವ ದರ್ಶನಾಂಗಗಳನ್ನು ಚೆನ್ನಾಗಿ ಕೇಳಿ ಶ್ರೇಣಿಕ ಮಹಾರಾಜನು ಸಮಸ್ತ ಲೋಕಗಳಿಗೂ ವಂದನಾರ್ಹರೆನ್ನಿಸಿಕೊಂಡ ಗೌತಮಸ್ವಾಮಿ ಗಳಿಗೆ ನಮಸ್ಕಾರಮಾಡಿ ಸದ್ಗತಿಯೆಂಬ ವನಿತೆಯ ಕಡೆಗಣ್ಣಿನ ನೋಟದ ವಿಲಾಸವೆನಿಸುವ ಕೊಲ್ಲದ (ಅಹಿಂಸಾ) ವ್ರತವನ್ನು ನನಗೆ ತಿಳಿಯಹೇಳಬೇಕೆಂದು ಕೈಜೋಡಿಸಿಕೊಂಡು ನಿಂತು ಕೇಳಿಕೊಂಡನು ೨. ಮುನಿಗಳಲ್ಲೆಲ್ಲ ಶ್ರೇಷ್ಠನಾದ ಗೌತಮಸ್ವಾಮಿಯು ಸಕಲ ಜೀವ ಹಿತಕರವಾದ ಜಿನೇಶ್ವರನ ಮತವನ್ನು ಗಂಭೀರ ಧ್ವನಿಯಿಂದ ಹೇಳಲು ರಾಜನು ಬಹಳ ಸಂತೋಷದಿಂದ ಕೇಳತೊಡಗಿದನು. ಅವರು ಹೀಗೆ ಹೇಳತೊಡಗಿದರು ೩-೪. ಅಂಬಿನ

ಗದ್ಯ॥ ಕರೆಗೊಯ್ದ ಸೀರೆಯಂತೆ ರಾಶಿಗೆ ಬಂದಾರಂಬದಂತೆ ಪತ್ರಂ ಸೀಳ್ದ ಸಾಲದಂತೆ ಕೈನೀರೆಱೆದ ಮದುವೆಯಂತೆ ಫಲವಾದ ತೋಂಟದಂತೆ, ಕೈಗರ್ಚಿದೂಟದಂತೆ ಗೆಲ್ಲಂಗೊಂಡ ಕಾಳೆಗದಂತೆ ಕಾಲ್ವಿಡಿದ ನಲ್ಲಳಂತೆ ಮೀಸೆ ಬಂದ ಜವ್ವನದಂತೆ ಪೊತ್ತಿಸಿದ ಸೊಡರಂತೆ ದರ್ಶನದೆಂಟಂಗದೊಳಂ ಮುನ್ನಂ ಸಂಪೂರ್ಣವಾಗಿ ನೆರೆದು, ಮಾಡಿದ ಮನೆಯಂ ಪುಗುವಂತೆ ಪಣ್ಣಿದಾನೆಯನೇಱುವಂತೆ ಮಡಿಯನುಡುವಂತೆ ಸಮೆದಾಭರಣಮಂ ತುಡುವಂತೆ ಪರಿದಾಡುವ ಮಗನಂ ಮುದ್ದಾಡುವಂತೆ ಸಜ್ಜನಳಾದ ಸೂಳೆಯಂ ಸಿಂಗಾರಂಗೆಯ್ದಂತೆ ತನಗಾದೂರಂ ಸೇರುವಂತೆ ಹಿತವಂಗೆ ಕಾರ್ಯಮನಱಪುವಂತೆ ಬುದ್ಧಿವಂತನಪ್ಪಮಗಂಗೆ ಬಯ್ಕೆಯಂ ತೋಱುವಂತೆ ಕೇಡಿಂಗಂ ಬಡತನಕ್ಕಮಪ್ಪ ಪೆಂಡತಿಗೆ ಮನೆವಾರ್ತೆಯಂ ನುಡಿವಂತೆ ಕೊಲ್ಲದ ವ್ರತಮಂ ಕೈಕೊಂಡು ೫

ಮನವೊಸೆದು ನಡೆದನಪ್ಪೊಡೆ
ಮನಕತಮಂ ನೋವನೆಲ್ಲಿಯುಂ ಪೊರ್ದದೆ ಮೇ
ದಿನಿಪೂಜ್ಯನಾಗಿ ಮುಕ್ತ್ಯಂ
ಗನೆಗಾತನೆ ಕಾಮನೆನಿಸಿ ಸೊಗಯಿಸಿ ತೋರ್ಕುಂ ೬

ತುದಿಯನ್ನು ಕೊಯ್ದ ಸೀರೆಯಂತೆ[1] ಧಾನ್ಯ ರಾಶಿಯಾದ ಬೇಸಾಯದಂತೆ ಪತ್ರವನ್ನು ಸೀಳಿದ ಸಾಲದಂತೆ (ಸಾಲತೀರಿದಾಗ ಪತ್ರದ ತಲೆಹರಿಯುವುದು ವಾಡಿಕೆ) ಧಾರೆಯೆರೆದ ಮದುವೆಯಂತೆ ಹಣ್ಣಿಗೆ ಬಂದ ತೋಟದಂತೆ ಊಟ ಮುಗಿಸಿ ಕೈತೊಳೆದುಕೊಂಡಂತೆ, ಜಯಪಡೆದ ಕಾಳಗದಂತೆ, ಕಾಲುಹಿಡಿದ ಪ್ರಿಯೆಯಂತೆ, ಮೀಸೆಬಂದ ಯೌವನದಂತೆ, ಹೊತ್ತಿಸಿದ ದೀಪದ ಹಾಗೆ ದರ್ಶನದ ಎಂಟೂ ಅಂಗಗಳನ್ನೂ ಮೊದಲು ಸಂಪೂರ್ಣವಾಗಿ ಗ್ರಹಿಸಿ ಕಟ್ಟಿ ಸಿದ್ಧಪಡಿಸಿದ ಮನೆಗೆ ಪ್ರವೇಶ ಮಾಡುವಂತೆ, ಸಜ್ಜಾದ ಆನೆಯನ್ನು ಏರುವಂತೆ, ಮಡಿಯನ್ನು ಉಟ್ಟುಕೊಳ್ಳುವಂತೆ, ಮಾಡಿದ ಒಡವೆಯನ್ನು ಧರಿಸುವಂತೆ ಹರಿದಾಡುವ ಮಗುವನ್ನು ಮುದ್ದಾಡುವಂತೆ ಕುಲಸ್ತ್ರೀ ಪದವಿಯನ್ನು ಪಡೆದ ಸೂಳೆಯನ್ನು ಅಲಂಕರಿಸುವಂತೆ, ತನಗೆ ಹಿತವಾದ ಊರನ್ನು ಸೇರುವಂತೆ, ಹಿತಕರನಾದವನಿಗೆ ಕೆಲಸವನ್ನು ತಿಳಿಸುವಂತೆ, ಬುದ್ಧಿವಂತನಾದ ಮಗನಿಗೆ ಬಚ್ಚಿಟ್ಟದನ್ನು ತೋರಿಸುವಂತೆ, ಹಾನಿ, ಬಡತನಗಳಲ್ಲಿ ಆಗುವ (ಹೊಂದಿಕೊಳ್ಳುವ) ಹೆಂಡತಿಗೆ ಮನೆವಾರ್ತೆಯನ್ನು ಹೇಳುವಂತೆ ಕೊಲ್ಲಲಾಗದೆಂಬ ವ್ರತವನ್ನು ಹಿಡಿದು ಮನಃಪ್ರೀತಿಯಿಂದ ನಡೆದುಕೊಂಡರೆ ವ್ಯಥೆಯನ್ನೂ ನೋವನ್ನೂ ಎಲ್ಲಿಯೂ ಹೊಂದದೆ ಭೂಲೋಕ ಪೂಜ್ಯನಾಗಿ ಮುಕ್ತಿಯೆಂಬ ಅಂಗನೆಗೆ ಆತನೇ ಕಾಮಣ್ಣನಾಗಿ ಶೋಭಿಸುವನು ೫–೬. ಇನ್ನು ಆ

[1] ಮಗ್ಗದಲ್ಲಿ ಹಲವು ಸೀರೆಗಳು ಒಂದಕ್ಕೊಂದು ಅಂಟಿಕೊಂಡಿರುತ್ತವೆ. ಅವುಗಳನ್ನು ಪ್ರತ್ಯೇಕಿಸಲು ಅಂಚಿನ ತುದಿಯನ್ನು ಕೊಯ್ಯಬೇಕು.

ಗದ್ಯ॥ ಇನ್ನಾ ಸುವ್ರತದೊಳಾದ ಫಲಮೆಂತಪ್ಪುದೆಂದೊಡೆ ೭

ಭರತಕ್ಷ್ಮಾವನಿತೆ ಮನೋ
ಹರಮಾಗುಟ್ಟಿರ್ದ ಪೊಚ್ಚಪೊಸ ಚಿನ್ನದವೋಲ್
ಕರಮೊಪ್ಪುವುದೊದವಿದ ತ
ತ್ಪುರಂಗಳಿಂ ಶೋಭೆವೆತ್ತು ಮಾಳವದೇಶಂ ೮

ನೆಗಟ್ದಿರ್ದಾ ಮಾಳವೋರ್ವೀವಳಯದೊಳಮರಾಧೀಶನಂತಪ್ಪಸದ್ಭೋ
ಗಿಗಳಿಂ ದೇವೇಂದ್ರಧಾತ್ರೀರುಹಮನಿಳಿಪಿ ಕಯ್ವಾರದಿಂದೀವ ಸತ್ತ್ಯಾ
ಗಿಗಳಿಂ ಶ್ರೇಯಾಂಸನೊಳ್ ಮಚ್ಚರಿಸಿ ಬಿಡದೆ ನಿರ್ಲೋಭದಿಂದೀವ ಸದ್ದಾ
ನಿಗಳಿಂದುಜ್ಜೈನಿಯೆಂಬಾ ಪುರವರಮೆಸೆಗುಂ ನಾಡೆಯುಂ ಶೋಭೆಯಿಂದಂ ೯

ಗದ್ಯ॥ ಆ ಪುರಮನಾಳ್ವಂ ವಿಶ್ವಂಧರ ಮಹಾರಾಜನಾತನ ರಾಜಶ್ರೇಷ್ಠಿ ಗುಣಪಾಲನೆಂಬ ನಾತನ ಭಾರ್ಯೆ ಧನಶ್ರೀಯೆಂಬಳ್ ೧೦

ಸುರರಾಜನ ಸತಿಗೆ ವಿಯ
ಚ್ಚರರಾಜನ ಸತಿಗೆ ಕಾಮದೇವನ ಸತಿಗ
ಚ್ಚರಿ ಜಿನಭಕ್ತಿಯೊಳಂ ಸುಂ
ದರರೂಪಿನೊಳಂ ಸಹಸ್ರಮಡಿ ಮಿಗಿಲೆನಿಪಳ್ ೧೧

ಒಳ್ಳೆಯ ವ್ರತದಿಂದಾಗುವ ಸತ್ಫಲವನ್ನು ಕೇಳು ೭. ಭಾರತ ಭೂರಮಣಿಯು ಮನೋಹರವಾಗಿ ಉಟ್ಟಿದ್ದ ಹೊಚ್ಚ ಹೊಸ ಹೊನ್ನಿನ ಸೀರೆಯಂತೆ ಮಾಳವ ದೇಶವು ಹೆಚ್ಚಾದ ಪಟ್ಟಣಗಳಿಂದ ಶೋಭಿಸುತ್ತಿದೆ. ೮. ಪ್ರಸಿದ್ಧವಾದ ಆ ಮಾಳವ ದೇಶದಲ್ಲಿ ಉಜ್ಜಯಿನಿಯೆಂಬ ಪಟ್ಟಣವು ವಿಶೇಷ ವೈಭವದಿಂದ ಕೂಡಿದೆ. ಆದರಲ್ಲಿ ದೇವೇಂದ್ರನಂಥ ಒಳ್ಳೆಯ ಭೋಗಿಗಳು, ಕಲ್ಪ ವೃಕ್ಷವನ್ನು ಕೀಳು ಮಾಡುವಂಥ ಉದಾರಿಗಳಾದ ದಾನಿಗಳು, ಶ್ರೇಯಾಂಸ (ಧನಿಕ) ರಲ್ಲಿ ಅಸೂಯೆ ಪಡದೆ ಲೋಭವಿಲ್ಲದೆ ದಾನಕೊಡುವ ಒಳ್ಳೆಯ ದಾನಿಗಳು, ಆ ಪಟ್ಟಣದಲ್ಲಿ ಅನೇಕರು ಇದ್ದರು. ಆ ಪುರವನ್ನು ಆಳುವವನು ವಿಶ್ವಂಧರ ಮಹಾರಾಜನು. ಅವನ ರಾಜಶ್ರೇಷ್ಠಿ ಗುಣಪಾಲನು. ಆತನ ಹೆಂಡತಿ ಧನಶ್ರೀಯೆಂಬವಳು. ೧೦. ಆಕೆಯು ಜಿನಭಕ್ತಿ, ಸೌಂದರ್ಯಗಳಲ್ಲಿ ದೇವೇಂದ್ರಪತ್ನಿ ಶಚೀದೇವಿಗೂ ಕಾಮದೇವನಸತಿ ರತಿಗೂ ಸಾವಿರ ಪಾಲು ಹೆಚ್ಚೆನ್ನಿಸುವಳು ೧೧. ಆ ವರ್ತಕನು ಲೋಕದಲ್ಲಿ ಜಿನಭಕ್ತಿಯಲ್ಲಿ ಐಶ್ವರ್ಯ

ಸುರರಾಜಂಗಂ ಖಚರೇ
ಶ್ವರಂಗಮಾರಯ್ದು ನೋಟೊಪ್ಪಿಡಿಮ್ಮಡಿ ಮಿಗಿಲು
ವರೆಯೊಳ್ ಜಿನಭಕ್ತಿಯೊಳಂ
ಸಿರಿಯೊಳಮೈಶ್ವರ್ಯದೊದವಿನೊಳಮಾ ಪರದಂ ೧೨

ನೆಗಟ್ದ ಗುಣಪಾಲಂಗಂ
ಮೃಗನಯನೆಯೆನಿಪ್ಪ ತದ್ಧನಶ್ರೀಗಂ ಕೈ
ಮಿಗೆ ರಾಗಂ ಪುಟ್ಟಿದಳು
ರ್ವಿಗೆ ಲಕ್ಷ್ಮಿಯೆ ಪುಟ್ಟುವಂತೆ ಕನ್ಯಾರತ್ನಂ ೧೩

ಗದ್ಯ॥ ಸುಬಂಧುಶ್ರೀಯೆಂಬಳಂತವರ್ ಸುಖಸಂಕಥಾವಿನೋದದಿಂದಿಪ್ಪುದುಂ ಒಂದು ದಿವಸಂ ಧನಶ್ರೀ ಬೆಳಗಪ್ಪ ಜಾವದೊಳ್ ಸುರಗಜಮುಂ ಚಂದ್ರನುಮಾದಿತ್ಯನುಂ ತನ್ನಲ್ಲಿಗೆ ಬಂದುದಂ ಕನಸುಗಂಡು ನೇಸಱ್ ಮೂಡುವುದುಮೆಟ್ಟಿರ್ದು ಗುಣಪಾಲ ಸೆಟ್ಟಿಗಱಿಪುವುದುಂ ಸೆಟ್ಟಿ ತತ್ಸ್ವಪ್ನ ಫಲಂಗಳಂ ಋಷಿಯರಲ್ಲಿ ಬೆಸಗೊಳ್ವಮೆಂದು ಪಲವು ತೆಱದರ್ಚನೆವೆರಸು ಬಸದಿಗೆ ವಂದು ಜಿನಭವನಮಂ ಮೂಱು ಸೂೞ್ಬಲಗೊಂಡು ಒಳಗಂ ಪೊಕ್ಕು ದೇವರನರ್ಚಿಸಿ ಪೊಡೆಮಟ್ಟು ಶ್ರುತಮುಮಂ ಋಷಿಯರುಮಂ ಪೂಜಿಸಿ ಭಕ್ತಿಯಿಂ ವಂದಿಸಿ ವಿನಯದಿಂದಿರ್ವರುಂ ಕೈಮುಗಿದು ಕನಸುಗಳ ಫಲಮಂ ಬೆಸಗೊಳ್ವುದುಂ ಅವರಿಂತೆಂದರ್ ೧೪

ದಲ್ಲಿಯೂ ಸುಖಸಂಪತ್ತುಗಳಲ್ಲಿಯೂ ದೇವೇಂದ್ರ ಖೇಚರೇಂದ್ರರಿಗೂ ಎರಡರಷ್ಟು ದೊಡ್ಡವನಾಗಿದ್ದನು, ೧೨. ಪ್ರಸಿದ್ಧನಾದ ಆ ಗುಣಪಾಲನಿಗೂ ಸುಂದರಿಯಾದ ಆ ಧನಶ್ರೀಗೂ ಸಂತೋಷವುಕ್ಕುವಂತೆ, ಭೂಮಿಗೆ ಲಕ್ಷ್ಮಿಯೇ ಹುಟ್ಟುವಂತೆ ಒಬ್ಬ ಹೆಣ್ಣುಮಗಳು ಹುಟ್ಟಿದಳು, ೧೩. ಆ ಮಗಳೇ ಸುಬಂಧುಶ್ರೀ, ಹಾಗೆ ಅವರು ಸಂತೋಷವಾಗಿ ಕಾಲಕ್ಷೇಪ ಮಾಡುತ್ತಿರಲು ಒಂದು ದಿನ ಧನಶ್ರೀ ಬೆಳಗಿನ ಜಾವದಲ್ಲಿ ದೇವಲೋಕದ ಆನೆಯೂ ಚಂದ್ರಸೂರ್ಯರೂ ತನ್ನ ಬಳಿಗೆ ಬಂದ ಹಾಗೆ ಕನಸು ಕಂಡಳು. ಸೂರ್ಯೋದಯವಾದ ಮೇಲೆ ಅವಳು ಆ ಕನಸಿನ ವಿವರಗಳನ್ನು ಗುಣಪಾಲಸೆಟ್ಟಿಗೆ ತಿಳಿಸಿದಳು. ಆಗ ಸೆಟ್ಟಿ ಆ ಸ್ವಪ್ನದ ಫಲವನ್ನು ಋಷಿಗಳವರಲ್ಲಿ ಕೇಳಿ ತಿಳಿದುಕೊಳ್ಳೋಣವೆಂದು ಹಲವು ಬಗೆಯ ಪೂಜಾದ್ರವ್ಯಗಳನ್ನು ತೆಗೆದುಕೊಂಡು ಬಸದಿಗೆ ಬಂದು ಜಿನಭವನವನ್ನು ಮೂರು ಸಲ ಪ್ರದಕ್ಷಿಣೆ ಮಾಡಿ ಒಳಕ್ಕೆ ಹೋಗಿ ದೇವರ ಅರ್ಚನೆ ನಡೆಸಿ, ನಮಸ್ಕರಿಸಿ, ಶಾಸ್ತ್ರವನ್ನೂ ಋಷಿಗಳವರನ್ನೂ ಪೂಜಿಸಿ ಭಕ್ತಿಯಿಂದ ವಂದನೆ ಸಲ್ಲಿಸಿ ಇಬ್ಬರೂ ಕೈಮುಗಿದುಕೊಂಡು ನಿಂತು ವಿನಯದಿಂದ ಕನಸಿನ ಫಲವನ್ನು ಕೇಳಿದಾಗ ಅವರು ಹೀಗೆ ಹೇಳಿದರು : ೧೪. ಈ ಕಮಲನೇತ್ರೆಯು ದೇವ

ಸರಸಿರುಹನೇತ್ರೆ ಸುರಸಿಂ
ಧುರಮಂ ಕಂಡುದಱಿನಧಿಕ ಜಿನಭಕ್ತನಮು
ರ್ವರೆಪೂಜ್ಯನಂ ಮುನೀಶ್ವರ
ಚರಣಾಂಭೋಜಭೃಂಗನಂ ನೀಂ ಪಡೆವೈ ೧೫

ಶಶಿಯಂ ಕಂಡುದಱಿಂದಂ
ಶಶಿಮುಖಿ ತತ್ವಜ್ಞನಂ ಮಹಾಪ್ರಭುವಂ ಸಂ
ತಸದಿಂದೆ ಪಡೆವೆ ಮಗನಂ
ಕುಸುಮಾಯುಧನಿಭನನುದಿತ ಧರ್ಮಾನ್ವಿತನಂ ೧೬

ರವಿಯಂ ಕಂಡುದಱಿಂದಂ
ಧವಳಾಕ್ಷಿ ಜಿನೇಂದ್ರಸಮಯವರ್ಧನನಂ ಮಾ
ನವರತ್ನನಂ ಧರಿತ್ರೀ
ಧವನಂ ಪಡೆವೈ ಮನೋಜನಿಭನಂ ಮಗನಂ ೧೭

ಗದ್ಯ॥ ಎಂಬುದುಮವರಿರ್ವರುಂ ಸಂತಸವಂತರಾಗಿಯ್ದು "ಸವಣೋ ಅಮೋಘವ ಅಣೋ" ಎಂಬ ಋಷಿವಾಕ್ಯಮೆಂತುಂ ತಪ್ಪಲಱಿಯದೆಂದು ನಿಶ್ಚಯಿಸಿ ನಂಬಿ ದೇವರ್ಗಂ ಪುನರ್ನಮಸ್ಕಾರಂಗೆಯ್ದು ಮನೆಗೆ ವಂದು ಮನವೊಸೆದಿರ್ಪುದುಂ ಕೆಲವು ದಿವಸಕ್ಕೆ ಧನಶ್ರೀಗೆ ಗರ್ಭಮಾಗಿ ಜಿನೇಂದ್ರಪೂಜೆಯಂ ಮಾಡಲುಂ ಜಿನೇಂದ್ರಪೂಜೆಗಳಂ ನೋಡಲುಂ ಜಿನಾಗಮಮುಮನೋದಲುಂ

ಗಜವನ್ನೂ ನೋಡಿದ್ದರಿಂದ ಬಹಳ ಜಿನಭಕ್ತನೂ ಲೋಕ ಪೂಜ್ಯನೂ ಋಷಿಗಳ ಪಾದ ಭಕ್ತನೂ ಆದಮಗನನ್ನು ನೀನು ಪಡೆಯುವೆ. ೧೫. ಚಂದ್ರನನ್ನು ಕಂಡದ್ದರಿಂದ ಚಂದ್ರಮುಖಿ ! ತತ್ವಜ್ಞನನ್ನೂ, ಮಹಾಪ್ರಭುವನ್ನೂ ಪಡೆಯುವೆ. ಆ ಮಗನು ಮನ್ಮಥನಂತೆ ರೂಪವಂತನೂ ಶ್ರೇಷ್ಠ ಧರ್ಮಪರಾಯಣನೂ ಆಗಿರುತ್ತಾನೆ. ೧೬. ಸೂರ್ಯನನ್ನು ನೋಡಿದ್ದರಿಂದ ಜಿನೇಂದ್ರಧರ್ಮವನ್ನು ವೃದ್ಧಿಗೊಳಿಸುವಂಥ ಮಾನವಶ್ರೇಷ್ಠನಾದ ಮಹಾಸುಂದರನಾದ ರಾಜನನ್ನು ಪಡೆಯುವೆ. ೧೭. ಹೀಗೆ ಹೇಳಲು ಅವರಿಬ್ಬರೂ ಸಂತೋಷದ ಪೊರೆಯನ್ನು ಮುಟ್ಟಿದರು. "ಸವಣರು ಅಮೋಘವಾಣಿಗಳು" ಎಂಬ ಋಷಿವಾಕ್ಯವು ಹೇಗೂ ತಪ್ಪುವುದಿಲ್ಲವೆಂದು ನಿಶ್ಚಯ ಮಾಡಿಕೊಂಡು ನಂಬಿ ದೇವರಿಗೂ ಪುನಃ ನಮಸ್ಕಾರಮಾಡಿ ಮನೆಗೆ ಬಂದು ಸಂತೋಷ ದಿಂದ ಇದ್ದರು. ಕೆಲವು ದಿನಗಳಿಗೆ ಧನಶ್ರೀ ಗರ್ಭವತಿಯಾದಳು. ಅವಳು ಜಿನೇಂದ್ರ ಪೂಜೆಯನ್ನು ನೋಡುವುದಕ್ಕೂ ಪೂಜೆ ಮಾಡುವುದಕ್ಕೂ ಜಿನಾಗಮವನ್ನು

ಜಿನಮುನಿವರರಂ ಬಂದಿಸಲುಂ ಮಿಥ್ಯಾದೃಷ್ಟಿಗಳ್ಗಂಜಲುಂ ದಿವ್ಯಾಹಾರಮನುಣಲುಂ ಬಸದಿಗೆ
ಪೋಗಲುಂ ಪಲರಂ ಪೊಡಮಡಿಸಿಕೊಳಲುಂ ಸಿಂಹಾಸನಮನೇಱಲುಂ ಭವ್ಯರಂ ಸದ್ಧರ್ಮಮಂ
ಪಕ್ಷಪಾತದಿಂ ರಕ್ಷಿಸಲುಂ ಪ್ರಜೆಗೆಡೆಯಾಗದಂತುಪಕಾರಂ ಮಾಡಲುಂ ಶ್ರಾವಕಗೋಷ್ಠಿಯೊಳಿರಲುಂ
ಜಿನಸನ್ನಿಧಿವಾಸದೊಳೋಲಗಂ ಗುಡಲುಂ ಜಿನಸ್ತವನಂಗಳನೆ ಮಾಣದೆ ಪಾಡಲುಂ ತ್ರಿಷಷ್ಟಿ
ಶಲಾಕಾಪುರುಷರ ಕಥೆಗಳಂ ಕೇಳಲುಂ ಬಯಕೆ ತಿಣ್ಣಮಾಗೆ ೧೮

ತರುಣಿಗೆ ಸಂತಸಮಪ್ಪಂ
ತಿರೆ ಗೀತಾತೋದ್ಯವಾದ್ಯ ನೃತ್ಯಮನರ್ಹ
ತ್ಪರಮೇಶ್ವರನಾಸ್ಥಾನದೊ
ಳಿರುಳುಂ ಪಗಲುಂ ಸುಭೋಗಮಂ ಮಾಡಿಸುವರ್ ೧೯

ಪಲವು ಪಟಿವೆರಸು ಕೆಲದೊಳ್
ಲಲನೆಯರೋಲಗಿಸೆ ಗೀತವಾದ್ಯಂ ಪದೆದೆ
ತ್ತಲುಮೆಸೆಯೆ ಜಿನರ ಪೂಜೆಯು
ನಲಂಪ್ಯಗುಣನರ್ತಿಯಾಗೆ ಪೊಱಮಡಿಸುತ್ತುಂ ೨೦

ಓದುವುದಕ್ಕೂ ಜಿನಮುನಿ ಶ್ರೇಷ್ಠರನ್ನು ವಂದಿಸುವುದಕ್ಕೂ ಮಿಥ್ಯಾದೃಷ್ಟಿಗಳ ವಿಷಯದಲ್ಲಿ ಅಂಜುತ್ತ, ದಿವ್ಯಾಹಾರವನ್ನು ಭುಜಿಸುವುದಕ್ಕೂ ಬಸದಿಗೆ ಹೋಗುವುದಕ್ಕೂ ಹಲವರಿಂದ ನಮಸ್ಕಾರ ಮಾಡಿಸಿಕೊಳ್ಳಲೂ ಸಿಂಹಾಸನವನ್ನೇರುವುದಕ್ಕೂ ಭವ್ಯರನ್ನೂ ಸದ್ಧರ್ಮವನ್ನೂ ಅಭಿಮಾನದಿಂದ ಕಾಪಾಡುವುದಕ್ಕೂ ಪ್ರಜೆಗಳಿಗೆ ದೂರವಾಗದಂತೆ ಉಪಕಾರ ಮಾಡುವುದಕ್ಕೂ ಶ್ರಾವಕಗೋಷ್ಠಿಯೊಳಗಿರುವುದಕ್ಕೂ ಜಿನಸನ್ನಿಧಿಯಲ್ಲಿ ಓಲೈಸುವುದಕ್ಕೂ ಜಿನಸ್ತೋತ್ರಗಳನ್ನೇ ಬಿಡದೆ ಹಾಡುವುದಕ್ಕೂ ತ್ರಿಷಷ್ಟಿಶಲಾಕಾಪುರುಷರ ಕಥೆಗಳನ್ನು ಕೇಳುವುದಕ್ಕೂ ಬಹಳ ಆಸೆಪಟ್ಟಳು. ೧೮. ಹೆಂಡತಿಗೆ ಸಂತೋಷವಾಗುವಂತೆ ಗೀತೆ ಆತೋದ್ಯ ವಾದ್ಯ ನೃತ್ಯಗಳನ್ನು ಅರ್ಹತ್ಪರಮೇಶ್ವರನ ಆಸ್ಥಾನದೊಳಗೆ ರಾತ್ರಿ ಹಗಲೂ ಸಂಭೋಗವನ್ನು ಮಾಡಿಸುತ್ತಿದನು. ೧೯. ಹಲವು ತವಂಟೆಗಳೊಡನೆ ಕೂಡಿ ಪಕ್ಕದಲ್ಲಿ ಸ್ತ್ರೀಯರು ಓಲೈಸುತ್ತಿರಲು ಗೀತವಾದ್ಯಗಳು ಉತ್ಸಾಹದಿಂದ ಎಲ್ಲ ಕಡೆಗಳಲ್ಲಿಯೂ ಶೋಭಿಸುತ್ತಿರಲು ಜಿನರ ಉತ್ಸವವನ್ನು ಪ್ರೀತಿಯಿಂದ ಸದ್ಗುಣಶಾಲಿಯಾದ ಗುಣಪಾಲಸೆಟ್ಟಿಯು ಹೊರಡಿಸುತ್ತಿದ್ದನು ೨೦. ಆ ಕಮಲ

ಮೊಸರಿಂ ಪಾಲಿಂ ಘೃತದಿಂ
ಪೊಸಕಬ್ಬಿನರಸದಿನಾಗಳುಂ ಜಿನನಾಥಂ
ಗೊಸೆದಭಿಷೇಕವನೊಪ್ಪಿರೆ
ಬಿಸರುಹಮುಃಖಿಗರ್ತಿಯುಪ್ಪಿನಂ ಮಾಡಿಸುವಂ ೨೧

ಇರವಂತಿಯು ಜಾಜಿಯು ಪಾ
ದರಿಯು ಸರೋರುಹದ ಪೂಗಳಿಂದಾದಿ ಜಿನೇ
ಶ್ವರನಾದಿಯಾದ ತೀರ್ಥಂ
ಕರರಂ ತರಳಾಕ್ಷಿಯ ಬಯಕೆ ಪೋಪಿನಂ ಪೂಜಿಸುವಂ ೨೨

ಅರಲಿಂ ಕುಂಕುಮದಿಂ ಕ
ರ್ಪುರದಿಂ ತೀರ್ಥಕರ ದಿವ್ಯ ಚೈತ್ಯಾವಳಿಯುಂ
ಸರಸಿಜನೇತ್ರೆಯು ಮುಂದಾ
ದರದಿಂ ಲೇಸಾಗಿ ಮಾಡುವಂ ಪೂರಣೆಯುಂ ೨೩

ಪಸಿಯುಡಕೆಯು ನಾರಂಗದ
ಮಿಸುಗುವ ಸನ್ಮಾದು ಫಲದ ಫಲನಿಕರದಿನ
ರ್ಚಿಸುತುಂ ಮೃಗೇಂದ್ರಮಧ್ಯೆಯ
ಪೊಸಬಯಕೆಯಲಂಪು ಪೋಪಿನಂ ಜಿನಪತಿಯುಂ ೨೪

ಮುಖಿಗೆ ಸಂತೋಷವಾಗುವಂತೆ ಜಿನನಾಥನಿಗೆ ಹಾಲು, ಮೊಸರು, ತುಪ್ಪ, ಹೊಸ ಕಬ್ಬಿನ ರಸ-ಇವುಗಳಿಂದ ಯಾವಾಗಲೂ ಪ್ರೀತಿಯಿಂದ ಮಾಡಿಸುತ್ತಿದ್ದನು. ೨೧. ಇರವಂತಿ, ಜಾಜಿ ಪಾದರಿ, ಕಮಲ ಮೊದಲಾದ ಹೂಗಳಿಂದ ಜಿನೇಶ್ವರನಾದಿಯಾದ ಸಮಸ್ತ ತೀರ್ಥಂಕರರಿಗೂ ಪೂಜೆ ಮಾಡಿಸಿ ಆ ಚಂಚಲಾಕ್ಷಿಯ ಬಯಕೆಯನ್ನು ಪೂರೈಸುತ್ತಿದ್ದನು. ೨೨. ಸೆಟ್ಟಿಯು ಹೂವು, ಕುಂಕುಮಕೇಸರಿ. ಪಚ್ಚಕರ್ಪೂರಗಳಿಂದ ತೀರ್ಥಂಕರರ ದಿವ್ಯ ಚೈತ್ಯಾವಳಿಗಳ ಬೊಂಬೆಗಳನ್ನು ಆ ಸುಂದರಿಯ ಮುಂದೆ ಮಾಡಿ ತೋರಿಸಿ ಅವಳ ಬಯಕೆಯನ್ನು ಪೂರಣ ಮಾಡಿಸುತ್ತಿದ್ದನು. ೨೩. ಹಸಿಯ ಅಡಕೆ, ಕಿತ್ತಿಳೆ, ಹೊಳೆಯುವ ಶ್ರೇಷ್ಠವಾದ ಮಾದಳ ಮೊದಲಾದ ಹಲವು ಹಣ್ಣುಗಳ ರಾಶಿಗಳಿಂದ ಜಿನಪತಿಯನ್ನು ಪೂಜಿಸಿ ಆ ಸಿಂಹಮಧ್ಯೆಯ ಹೊಸ ಬಯಕೆಯ ಉತ್ಕಟವಾದ ಇಚ್ಛೆಯನ್ನು ನೆರವೇರಿಸುತ್ತಿದ್ದನು. ೨೪. ಕೇಳುವವರಿಗೆ

ಸರಸಕರಣವೆಳರುಣಂಬಡೆ (?)
ಕರಮೊಪ್ಪುವ ಬಂಧಕರಣವೆಂಬಿವಱಿಂದ
ಚ್ಚರಿಯಾಗೆ ಜಿನರ ಕೀರ್ತಿಯ
ನರವಿಂದಾನನೆಯು ಮುಂದೆ ನೆಱೆ ಪಾಡಿಸುತುಂ ೨೫

ಭರತೇಶ್ವರನಷ್ಟಾಪದ
ಗಿರಿಯೊಳ್ ಲೇಸಾಗಿ ಸಮೆದ ಚೈತ್ಯಾವಳಿಯುಂ
ತರಳಾಕ್ಷಿಗೆ ಬಣ್ಣಿಸುತುಂ
ಪುರುಪರಮೇಶ್ವರನ ಚರಿತೆಯುಂ ಕೇಳಿಸುತುಂ ೨೬

ಜಿನರ ಪ್ರತಿಮೆಗಳಂ ನೆ
ಟ್ಟನೆ ಪೊನ್ನಿಂ ಮಾಡಿ ಪಲವು ತೆಱದರ್ಚನೆಯಿಂ
ದನವರತಂ ಪೂಜಿಸುತುಂ
ವನಜಾಸ್ಯೆಗೆ ಪಿರಿದು ಸಂತಸಂ ಪುಟ್ಟುವಿನಂ ೨೭

ಗದ್ಯ॥ ಮತ್ತಂ ಜಿನಭವನಂಗಳೊಳ್ ನಾನಾವಿಧ ರಂಗವಲ್ಲಿಯನಿಕ್ಕಿಸುತ್ತುಂ ಪೊನ್ನಿಂ ಸಮೆದ ವಂಶಮಾಲೆಗಳಂ ಕಟ್ಟಿಸುತ್ತುಂ ನಾನಾ ಧ್ವಜಂಗಳನೆತ್ತಿಸುತ್ತುಂ ಆಹಾರಾಭಯ ಭೈಷಜ್ಯಶಾಸ್ತ್ರ ದಾನಮುಂ ಮಾಡಿಸುತ್ತುಂ ಧನಶ್ರೀಯ ಬಯಕೆಯನೀಮಾರ್ಗದಿಂ ಸಲಿಸುತ್ತುಮಿರ್ಪ್ಪುದುಮೊಂದು ದಿವಸಂ ವಿಶ್ವಂಧರಮಹಾರಾಜಂ ಮಹಾವಿಭೂತಿಯಿಂ ಗಂಧಗಜಾರೂಢನಾಗಿ ವನಕ್ರೀಡೆಗೆ

ಅಚ್ಚರಿಯಾಗುವ ಹಾಗೆ ಆ ಕಮಲಾನನೆಯು ಮುಂದೆ ಜಿನರ ಕೀರ್ತಿವಿಶೇಷಗಳನ್ನು ಸರಸಕರಣ ಬಂಧಕರಣಗಳೆಂಬ ಮಾರ್ಗಗಳಲ್ಲಿ ವಿಶೇಷವಾಗಿ ಹಾಡಿಸಲು ಆತನು ವ್ಯವಸ್ಥೆ ಮಾಡಿದನು. ೨೫. ಭರತ ಚಕ್ರವರ್ತಿಯು ಕೈಲಾಸ ಪರ್ವತದಲ್ಲಿ ಶ್ರೇಷ್ಠವಾಗಿ ರಚಿಸಿದ ಚೈತ್ಯಗಳ ಸಮೂಹವನ್ನು ಆ ಚಂಚಲಾಕ್ಷಿಗೆ ಪ್ರೀತಿಯಿಂದ ವರ್ಣಿಸಿ ಹೇಳುತ್ತ ಪುರುಪರಮೇಶ್ವರನ ಪುಣ್ಯಚರಿತ್ರೆಯನ್ನು ಕೇಳಿಸುತ್ತಿದ್ದನು. ೨೬. ಸೆಟ್ಟಿಯು ಆ ಕಮಲಮುಖಿಗೆ ಹೆಚ್ಚಾಗಿ ಸಂತೋಷವಾಗುವಂತೆ ಜಿನರ ಪ್ರತಿಮೆಗಳನ್ನು ಬಂಗಾರದಿಂದ ಮಾಡಿಸಿ ಹಲವು ರೀತಿಯ ಅರ್ಚನೆಗಳಿಂದ ಸದಾಕಾಲ ಪೂಜಿಸುತ್ತಿದ್ದನು. ೨೭. ಅಲ್ಲದೆ ಜಿನಮಂದಿರಗಳೊಳಗೆ ನಾನಾ ವಿಧವಾದ ರಂಗವಲ್ಲಿಗಳನ್ನು ಹಾಕಿಸುತ್ತ ಚಿನ್ನದಿಂದ ಮಾಡಿದ ವಂಶಮಾಲೆಗಳನ್ನು ಕಟ್ಟಿಸುತ್ತ, ಬಗೆಬಗೆಯ ಬಾವುಟಗಳನ್ನು ಏರಿಸುತ್ತ, ಆಹಾರದಾನ, ಅಭಯದಾನ, ಶಾಸ್ತ್ರದಾನ, ಭೈಷಜ್ಯ (ಚಿಕಿತ್ಸೆ) ದಾನಗಳನ್ನು ಮಾಡಿಸುತ್ತ ಧನಶ್ರೀಯ ಬಯಕೆಯನ್ನು ಈ ಮಾರ್ಗಗಳಲ್ಲಿ ಸಲ್ಲಿಸುತ್ತ ಇದ್ದನು. ಒಂದು ದಿನ ವಿಶ್ವಂಧರಮಹಾರಾಜನು ಮಹಾವೈಭವದಿಂದ ಮದ್ದಾನೆಯನ್ನೇರಿ ಕುಳಿತು ವನವಿಹಾರಕ್ಕೋಸ್ಕರ ಹೋಗುತ್ತ ಇರುವಾಗ ಗುಣಪಾಲಸೆಟ್ಟಿಯ ಮಗಳು ಸುಬಂಧುಶ್ರೀ ತನ್ನ ಮನೆಯ ಹಿಂದಿನ

ಪೋಗುತ್ತುಂ ತನ್ನ ಮನೆಯ ಪೆಱಗಣ ನಂದನವನದೊಳ್ ಶೃಂಗಾರಂಗೆಯ್ದು ವಿರಾಜಿಸಿ ವಿಳಾಸಿನೀಜನಪರಿವೃತೆಯಾಗಿ ಪೊನ್ನುಯ್ಯಲನಾಡುವ ಸುಬಂಧುಶ್ರೀಯಂ ತೊಟ್ಟನೆ ಕಾಣ್ಬುದುಂ ೨೮

ನನೆಯಂಬಂ ತೊಟ್ಟು ಕಾಮಂ ಮುಳಿದು ನರಪನಂ ನೋಡಿ ಲೇಸಾಗಿ ಭೋರ್ಭೋ
ರೆನೆ ಕಾಯ್ಪಿಂದಾರ್ದು ಬಾಣಂ ಬಿಡೆ ಗಱಿಯನಗುರ್ವಪ್ಪಿನಂ ಕಚ್ಚಿ ಬೇಗಂ
ಮನದಿಂ ಮುಂ ಪಾಯ್ದು ಮತ್ತಂ ತುಱುಗಿ ನಡುವಿನಂ ದೇಹಮಂ ನಾಡೆಯುಂ ಕಾ
ಮಿನಿಯುಂ ಶ್ಯಾಮಾಂಗಿಯುಂ ಪತ್ತೆಸಿಸದೆ ಮಱಿಗೊಂಡಿರ್ದು ತೊಳ್ದಿಚ್ಚನಾಗಳ್ ೨೯

ಗದ್ಯ॥ ಅಂತಾ ಪೊಸನನೆಯ ಬಿರಿಮುಗುಳ ಕುಸುಮಬಾಣಂಗಳಿಂ ತೋಡುಂ ಬೀಡುಂ ಕಾಣಬಾರದೆನಿಸಿ ಕಿವಿವರಂ ತೆಗೆದು ನೇರನಱಿದೆಸೆವುದುಂ ವಿಶ್ವಂಧರಮಹಾರಾಜಂ ಝುರ್ಝುರಿತ ಗಾತ್ರನಾಗಿ ಚಿತ್ರದ ರೂಪಿನಂತೆ ಮಿಟ್ಟನೆ ಮಿಡುಕದೆ ನಿಂದು ವಿರಹಾನಳನಿಂ ಬೆಂದು ಸೈರಿಸಲಾಱದೆ ೩೦

ತಡೆಯದೀ ವನಜಾತನೇತ್ರೆಯೊಳಂಗಜಾತನ ಕೈಯ ಕೈ
ಪೊಡೆಯೆನಿಪ್ಪ ವಿದಗ್ಧೆಯೊಳ್ ನೆರೆದಂದು ಕಾಯ್ದುಱಿ ಚುಚ್ಚುವೆ
ನ್ನೊಡಲ ಮನ್ಮಥತಾಪವೋಡುಗು ಮಲ್ಲದಂದು ಮನೋಭವಂ
ಗೊಡಲನೊಪ್ಪಿಸಿ ಪೋಗಲೊಲ್ಲದೆ ಬಾಟಬಾಱದು ನೋವಿನಿಂ ೩೧

ಉದ್ಯಾನವನದೊಳಗೆ ಅಲಂಕಾರಮಾಡಿಕೊಂಡು ವಿಶೇಷವಾಗಿ ರಾರಾಜಿಸುತ್ತ ಸುಂದರಿಯರು ಸೇರಿರಲು ಹೊನ್ನಿನ ಉಯ್ಯಾಲೆಯಲ್ಲಿ ವಿಹರಿಸುತ್ತಿದ್ದುದನ್ನು ಇದ್ದಕ್ಕಿದ್ದಹಾಗೆ ನೋಡಿದನು ೨೮. ಆ ಸಮಯದಲ್ಲಿ ಮನ್ಮಥನು ಶ್ಯಾಮಾಂಗಿಯಾದ ಸುಬಂಧು ಶ್ರೀಯ ಮರೆಯಲ್ಲಿದ್ದುಕೊಂಡು ಹೂಬಾಣಗಳನ್ನು ತೊಟ್ಟು ರಾಜನನ್ನು ನೋಡಿ ಸಿಟ್ಟಿನಿಂದ ಭೋರ್‌ಭೋರೆನ್ನುವಂತೆ ರಭಸದಿಂದ ಆರ್ಭಟಿಸಿ ಬಾಣವನ್ನು ಬಿಡಲು ಆ ಬಾಣಗಳು ಗರಿಯಿಂದ ಭಯಂಕರವಾಗಿ ಮನಸ್ಸಿಗಿಂತ ಮುಂಚೆಯೇ (ಮನಸ್ಸಿಗಿಂತ ಹೆಚ್ಚು ವೇಗವಾಗಿ) ಹಾಯ್ದು ರಾಜನ ಮೈಮೇಲೆ ದಟ್ಟವಾಗಿ ಚುಚ್ಚಿಕೊಂಡವು ೨೯. ಹಾಗೆ ಹೊಸ ಮೊಗ್ಗಿನ ಬಿರಿದ ಮೊಗ್ಗುಗಳ ಹೂಬಾಣಗಳಿಂದ, ಅವನಿಗೆ ಹಳ್ಳವಾವುದು, ಊರಾವುದು ಎಂದು ಕಾಣಬಾರದಂತೆ, ಕಿವಿಯವರೆಗೆ ಸೆಳೆದು ಮರ್ಮಸ್ಥಾನವನ್ನರಿತು ಹೊಡೆಯಲು ವಿಶ್ವಂಧರ ಮಹಾರಾಜನು ಗಾಯಗೊಂಡು ದೇಹ ಸೋತು ಚಿತ್ರದ ಬೊಂಬೆಯಂತೆ ಸ್ವಲ್ಪವೂ ಅಲುಗದೆ ನಿಂತು ವಿರಹಾಗ್ನಿಯಿಂದ ಬೆಂದು ಸಹಿಸಲಾರದೆ ಹೋದನು ೩೦. ಈ ಕಮಲನೇತ್ರೆಯಲ್ಲಿ ಮನ್ಮಥನ ಕೈಯ ಪಟ್ಟಿಯೆನಿಸುವ ಈ ಸುಂದರಿಯಲ್ಲಿ ಕೂಡಿದಾಗ ಹೆಚ್ಚಾಗಿ ಉರಿಯುತ್ತಿರುವ ನನ್ನ ದೇಹದ ಕಾಮತಾಪ ಹೋಗುವುದು. ಹಾಗಾಗದಿದ್ದರೆ ಮನ್ಮಥನಿಗೆ ದೇಹವನ್ನೊಪ್ಪಿಸಿ ಬಿಡಬೇಕು. ಅಷ್ಟೇ ಹೊರತು ಈ ನೋವಿನಿಂದ

[1] ಕೈಪೊಡೆ = ಬಿಲ್ಲುಗಾರರು ಹೆದೆಯಿಂದ ಪೆಟ್ಟಾಗದಿರಲೆಂದು ಕೈಗೆ ಕಟ್ಟಿಕೊಳ್ಳುವ ಚರ್ಮದ ಪಟ್ಟಿ.

ಕನ್ನೆಯನೊಯ್ಯನೆ ಮಱೆಗೊಂ
ಡೆನ್ನಂ ಕಯ್ಗಾಯದೆಚ್ಚಪ್ಪಂ ಮನಸಿಜನೀ
ಕನ್ನೆಯನಗಲ್ದು ಬಿರುದಿಂ
ದೆನ್ನಂ ಮೂದಲಿಸಿ ಕಾದಲಾರ್ಪನೆ ಕಾಮಂ ೩೨

ಅರಲಂಬಂ ಪಿಡಿದೀತಂ
ಸ್ಮರನುರ್ವಿಯ ಜನಮನೆಚ್ಚು ನೋಯಿಸಿ ತವಿಪಂ
ಸರಲಂಬಂ ಪಿಡಿದಿಸುವೊಡೆ
ನರರಂ ಝಷಕೇತು ಕೊಂದು ಕೂಗದೆ ಮಾಣಂ ೩೩

ತನುವಿಲ್ಲದೆಯುಂ ಲೋಕದ
ಜನಮಂ ಕೈಗಾಯದೆಚ್ಚಪಂ ಕೂಗಿಡಲಿಂ
ತನುವುಂಟಪ್ಪೊಡೆ ರತಿನಾ
ಥನ ಕಯ್ಯೊಳ್ ಮಿಡುಕಿ ಪೋಪ ಗಂಡರುಮೊಳರೇ ೩೪

ಬಿಲ್ಲೊಳ್ ಕೋವಿದರೆನಿಸಿದ
ಬಿಲ್ಲಾಳಪ್ಪವರನಱೆವೆನತನುವ ತೆಱದಿಂ
ನಿಲ್ಲದ ಮೆಯ್ಯೊಳ್ ಪುಣ್ಣಿ
ಸಿಲ್ಲದೆ ವೇದನೆಯ ಮಾಟ್ಪ ಗಂಡರುಮೊಳರೇ ೩೫

ಬದುಕಲು ಆಗದು. ೩೧. ಕನ್ನೆಯನ್ನು ಉಪಾಯವಾಗಿ ಮರೆಮಾಡಿಕೊಂಡು ಕೈ ತಡೆಯದೆ ನನ್ನನ್ನು ಈ ಮನ್ಮಥನು ಹೊಡೆಯುತ್ತಿದ್ದಾನೆ. ಕಾಮನು ಈ ಕನ್ನೆಯನ್ನು ಬಿಟ್ಟು ಪರಾಕ್ರಮದಿಂದ ನನ್ನನ್ನು ಮೂದಲಿಸಿ ಕಾಳಗ ಮಾಡಬಲ್ಲನೆ ? ೩೨. ಹೂವಿನ ಬಾಣವನ್ನು ಹಿಡಿದು ಈತನು-ಮನ್ಮಥನು—ಲೋಕದ ಜನರನ್ನೆಲ್ಲ ಹೊಡೆದು ನೋಯಿಸಿ ಕೊಲ್ಲುತ್ತಾನೆ. ಈತನು ಸರಳಿನ ಬಾಣಗಳನ್ನೇ ಹಿಡಿದು ಹೊಡೆಯುವುದಿದ್ದರೆ ಮೀನಕೇತನನಾದ ಈ ಮನ್ಮಥನು ಮಾನವರನ್ನು ಕೊಂದುಹಾಕದೆ ಬಿಡುತ್ತಿರಲಿಲ್ಲ ೩೩. ದೇಹವಿಲ್ಲದೆ ಇದ್ದೂ ಕೂಡ ಇವನು ಕೈ ತಡೆಯದೆ ಲೋಕದ ಜನರನ್ನು ಹೊಡೆಯುತ್ತಿದ್ದಾನೆ. ಇನ್ನು ಅವನಿಗೆ ದೇಹವೂ ಇದ್ದಿದ್ದರೆ ರತಿಪತಿಯ ಕೈಗೆ ಸಿಕ್ಕಿ ತಪ್ಪಿಸಿಕೊಂಡು ಹೋಗಬಲ್ಲ ಶೂರರೂ ಇದ್ದಾರೆಯೆ ?- ೩೪. ಧನುರ್ವಿದ್ಯೆಯಲ್ಲಿ ಪಂಡಿತರೆನಿಸಿದ ಬಿಲ್ಲಾಳುಗಳಾದವರನ್ನು ಬಲ್ಲೆ. ಆದರೆ ಈ ಅನಂಗನ ರೀತಿಯಲ್ಲಿ ಎದುರಿಗೆ ನಿಲ್ಲದೆ ದೇಹದ ಮೇಲೆ ಸ್ವಲ್ಪವೂ ಗಾಯವಿಲ್ಲದ ಹಾಗೆ ಇಷ್ಟು ಯಾತನೆಯನ್ನು ಮಾಡಬಲ್ಲ ಶೂರರು ಇರುವರೆ ? ೩೫. ಹೀಗೆ ಮನಸ್ಸಿನಲ್ಲಿ ಗಾಬರಿಗೊಂಡು ದೇವತೆಗಳಂತೆ ರೆಪ್ಪೆ

ಗದ್ಯ॥ ಎಂದು ಮನದೊಳ್ ಗುಜುಗುಜುಗೊಂಡು ದಿವಿಜರಂತೆವೆಯಿಕ್ಕದೆ ನಿರ್ಜಿತರಾದಂತೆ ಮಿಡುಕದೆ ಕಣ್ಣುಳ್ಳದೈವದಂತೆ ಕಣ್ದಂ ಬಿಟ್ಟು ಮರನಂ ನಟ್ಟಂಬಿನಂತೆ ದಿಟ್ಟಿಯುಂ ತೆಗೆಯಲಾಱದೆ ಬೇಗೆವೋದ ಬೆಟ್ಟದಂತೆ ಮೆಯ್ ಬಿಸುಪನಾಗೆ, ಕಾಳಗದ ನಡುವಾದ ಪಂದೆಯಂತೆ ನಡನಡ ನಡುಗಿ ಉದ್ದಮೇಱಿದ ಪಸುಗೂಸಿನಂತೆ ಪೋಗಲಱಿಯದೆ, ಒಡೆಯರ ಮನೆಗೆ ಬಂದ ಬಂಟರಂತೆ ಕನ್ನೆಯನೆ ನೋಡಿ, ಕೋಣಂ ಪೊಕ್ಕಮಡುವಿನಂತೆ ಮನದೊಳ್ ಕದಡಿ, ಕಿಱಿದಾನುಂ ಬೇಗಮಿರ್ದು, ವನಕ್ರೀಡೆಗೆ ಪೋಗಲೊಲ್ಲದರಮನೆಗರಸಂ ಮಗುಳ್ದು ಬಂದು ಕಣ್ಣೊಳಂ ಮನದೊಳಂ ಸುಬಂಧುಶ್ರೀಯ ರೂಪೆ ತೋಱೆ ಮತಿಗೆಟ್ಟು ವಿಹ್ವಲೀಭೂತನಾಗಿ ಸೈರಿಸಲಾಱದೆ ೩೬

ಪೊಸನೀರೇಜದ ನಾಳದಿಂ ನಿಮಿರ್ದ ನೀಳಾಂಭೋಜಪುಷ್ಪಂಗಳಿಂ
ಪೊಸತಪ್ಪಾಮ್ರ ಮಹೀಜದಾ ತಳಿರ್ಗಳಿಂ ಚೆನ್ನೆಯ್ದಿಲಿಂ ಬಾೞೆಯಿಂ
ದೊಸೆದುಂ ಮಾಡಿದ ಪಾಸಿನೊಳ್ ಪೊರಳುತುಂ ಜೊಂಪಂಗಳೊಳ್ ಪೋಗಿ ಸೇ
ವಿಸುತುಂ ಚಂದನಪಂಕದೊಳ್ ಮುೞುಗುತುಂ ಶೀತಾಂಬುವಂ ಮಿಯ್ಯುತಂ ೩೭

ಗದ್ಯ॥ ಕಾಮಸಂತಾಪಮನೆಂತಾನುಂ ಮಾಣಿಸಲಾಱದೆ ಪೆರ್ಗಡೆಗಳಂ ಕರೆದು ತನ್ನ ಮನದ ಕಾರ್ಯಮನೆಲ್ಲಮಿಂಬಾಗೆ ಪೇೞ್ದು ೩೮

ಹೊಡೆಯದೆ, ಸೋತವರಂತೆ ಅಲುಗಾಡದೆ, ಕಣ್ಣುಗಳಿರುವ ದೇವರ ಹಾಗೆ ಕಣ್ಣು ಬಿಟ್ಟು ಮರದಲ್ಲಿ ನಟ್ಟುಕೊಂಡ ಬಾಣದಂತೆ ದೃಷ್ಟಿಯನ್ನು ಹಿಂತೆಗೆದುಕೊಳ್ಳಲಾರದೆ ಬೆಂಕಿಗೆ ಸಿಕ್ಕಿದ ಬೆಟ್ಟದಂತೆ ದೇಹ ಬಿಸಿಯಾಗಲು, ಯುದ್ಧದ ನಡುವೆ ಸಿಕ್ಕಿಕೊಂಡ ಹೇಡಿಯಂತೆ ಗಡಗಡನೆ ನಡುಗಿ ಎತ್ತರಕ್ಕೆ ಹತ್ತಿದ ಹಸುಮಗುವಿನಂತೆ ಹೋಗಲು ತಿಳಿಯದೆ, ಒಡೆಯರ ಮನೆಗೆ ಬಂದ ಭಂಟರಂತೆ, ಕನ್ಯೆಯನ್ನು ನೋಡಿ, ಕೋಣವು ಪ್ರವೇಶಿಸಿದ ಮಡುವಿನ ಹಾಗೆ ಮನಸ್ಸಿನಲ್ಲಿ ಕದಡಿಹೋಗಿ (ಅಶಾಂತರಾಗಿ) ಕೊಂಚ ಹೊತ್ತು ಇದ್ದು, ವನವಿಹಾರಕ್ಕೆ ಹೋಗಲು ಇಷ್ಟವಾಗದೆ ಅರಮನೆಗೆ ಹಿಂತಿರುಗಿದನು. ಅರಸನು ಮನೆಗೆ ಬಂದು ಮನಸ್ಸಿನಲ್ಲಿಯೂ ಕಣ್ಣಿನಲ್ಲಿಯೂ ಸುಬಂಧುಶ್ರೀಯ ರೂಪವೇ ಕಾಣುತ್ತಿರಲು ಬುದ್ಧಿಗೆಟ್ಟು ವಿಹ್ವಲನಾಗಿ ಸಹಿಸಿಕೊಳ್ಳಲು ಅಸಮರ್ಥನಾದನು ೩೬. ಅವನ ಕಾಮಸಂತಾಪ ಕೈ ಮೀರಿತು. ಹೊಸ ಕಮಲದ ದಂಟುಗಳಿಂದಲೂ ಅರಳಿದ ಕಮಲಪುಷ್ಪಗಳಿಂದಲೂ ಹೊಸದಾದ ಮಾವಿನ ಚಿಗುರುಗಳಿಂದಲೂ ಚೆಲುವಾದ ನೆಯ್ದಿಲೆ ಹೂಗಳಿಂದಲೂ ಬಾಳೆಯ ಎಲೆಗಳಿಂದ ಪ್ರೀತಿಯಿಂದ ಮಾಡಿದ ಹಾಸಿಗೆಯ ಮೇಲೆ ಹೊರಳುತ್ತ, ಬಳ್ಳಿಮನೆಗಳಲ್ಲಿಗೆ ಹೋಗಿ ವಿಹರಿಸುತ್ತ ಚಂದನಪಂಕದಲ್ಲಿ (ತೇದ ಗಂಧದಲ್ಲಿ) ಮುಳುಗುತ್ತ ತಣ್ಣೀರಿನಲ್ಲಿ ಸ್ನಾನಮಾಡುತ್ತ ಆ ಕಾಮಸಂತಾಪವನ್ನು ಹೇಗಾದರೂ ತಪ್ಪಿಸಲಾರದೆ ಹೆಗ್ಗಡೆಗಳನ್ನು ಕರೆದು ತನ್ನ ಮನಸ್ಸಿನ ಉದ್ದೇಶವನ್ನೆಲ್ಲ ಸ್ಪಷ್ಟವಾಗುವಂತೆ ಹೇಳಿ ೩೮, ಯಾವ ಯಾವ ಉಪಾಯಗಳಿಂದಾದರೂ ಇಂದು ನೀವು ಸುಬಂಧುವನ್ನು

ಆವಾವುಪಾಯದಿಂದಂ
ನೀವಿಂದು ಸುಬಂಧುವಂ ಮನೋಹರಮಪ್ಪಂ
ತಾವಗಮೆನ್ನೊಳ್ ನೆರಪುವು
ದಾವಗಮಿಂ ನೆರೆಪದಂದು ನೋವೆ ತಿಬ್ಬಂ ೩೯

ಗದ್ಯ॥ ಎಂದು ಪೆರ್ಗಡೆಗಳಂ ಗುಣಪಾಲಸೆಟ್ಟಿಯಲ್ಲಿಗೆ ಸುಬಂಧಶ್ರೀಯಂ ಬೇಡಿಯಟ್ಟುವುದುಂ ಅವರ್ ಗುಣಪಾಲಸೆಟ್ಟಿಯ ಮನೆಗೆ ವರ್ಪುದುಂ ಸೆಟ್ಟಿ ಪೆರ್ಗಡೆಗಳಂ ವಸ್ತ್ರತಾಂಬೂಲಾದಿಗಳಿಂ ಮನ್ನಿಸಿ ನಿಮ್ಮ ಬಂದ ಕಾರ್ಯಮನೆಮಗಱಿಯೆ ಪೇೞಿಮೆಂಬುದುಮವರಿಂತೆಂದರ್ ೪೦

ಮದಗಜಗಮನೆಯಂಬುಜ
ವದನೆಯಳಿನೀಲ ಕುಟಿಲ ಕುಂತಳೆಯೆಂದಂ
ಬಳ ಹಾವಭಾವ ಲಾವ
ಣ್ಯದ ನಲೆಯಂ ಜಿನಪದಾಬ್ಜಮದಮಧುಕರೆಯಂ ೪೧

ಗದ್ಯ॥ ನಿಮ್ಮ ಮಗಳಪ್ಪ ಸುಬಂಧುಶ್ರೀಯಂ ನಂದನವನದೊಳುಯ್ಯಲಾಡುವಳಂ ವಿಶ್ವಂಭರ ಮಹಾರಾಜಂ ವನಕ್ರೀಡೆಗೆ ನೃಪಕುಮಾರಪರಿವೃಢನಾಗಿ ಪೋಗುತ್ತಂ ಕಂಡು ಕಣ್ಬೇಟಂಗೊಂಡು ಕಾಮಸಂತಾಪದಿಂ ಕರಮಲ್ಲದೆ ನೊಂದು ರಾಜಮಂದಿರಕ್ಕೆ ಬಂದು ಕುಸುಮಾಸ್ತ್ರನ ಕುಸುಮಶರದ ಕೋಳಂಗಿರಲಾಱದೆಮ್ಮನಿಲ್ಲಿಗೆ ಸುಬಂಧುಶ್ರೀಯಂ ಬೇಡಿಯಟ್ಟಿದಂ

ಮನಪೊಪ್ಪಿಸಿ ಶಾಶ್ವತವಾಗಿ ನನ್ನೊಡನೆ ಸೇರುವಂತೆ ಮಾಡುವುದು. ನೀವು ಹಾಗೆ ಸೇರಿಸದಿದ್ದರೆ ಈ ನೋವೇ ತೀವ್ರ ೩೯. ಅರಸನು ಹೀಗೆ ಹೇಳಿ ಹೆಗ್ಗಡೆಗಳನ್ನು ಗುಣಪಾಲಸೆಟ್ಟಿಯ ಬಳಿಗೆ ಸುಬಂಧುಶ್ರೀಯನ್ನು ಬೇಡುವುದಕ್ಕೋಸ್ಕರ ಕಳುಹಿಸಿದನು. ಅವರು ಸೆಟ್ಟಿಯ ಮನೆಗೆ ಹೋಗಿ ಸೇರಲು ಆತನು ಅವರನ್ನು ವಸ್ತ್ರತಾಂಬೂಲ ಮೊದಲಾದ ಕಾಣಿಕೆಗಳನ್ನಿತ್ತು ಮನ್ನಿಸಿದನು. ಆ ಮೇಲೆ "ನೀವು ಬಂದ ಕಾರ್ಯವನ್ನು ನಮಗೆ ತಿಳಿಯುವಂತೆ ಹೇಳಿ" ಎಂದನು. ಆಗ ಅವರು ಹೀಗೆ ಹೇಳಿದರು: ೪೦. "ಮದಗಜಗಮನೆಯಾದ ಕಮಲಮುಖಿ, ಕಪ್ಪಾದ ಗುಂಗುರು ಗುಂಗುರಾದ ಮುಂಗುರುಳುಳ್ಳವಳು, ಹಾವಭಾವ ಲಾವಣ್ಯದ ನೆಲೆಯೆನಿಸುವಂಥ, ಜಿನಪಾದ ಪದ್ಮದ ತುಂಬಿಯಾದ ತಮ್ಮ ಮಗಳು ಸುಬಂಧುಶ್ರೀಯನ್ನು, ಅವಳು ನಿಮ್ಮ ಮನೆಯ ಉದ್ಯಾನವನದಲ್ಲಿ ಉಯ್ಯಾಲೆಯಾಡುತ್ತಿದ್ದಾಗ, ನಮ್ಮ ವಿಶ್ವಂಭರ ಮಹಾರಾಜನು ವನವಿಹಾರಕ್ಕೆ ರಾಜಕುಮಾರರ ಜತೆಯಲ್ಲಿ ಹೋಗುತ್ತ, ಕಂಡನು. ಪ್ರಥಮದರ್ಶನದಲ್ಲಿಯೇ ಪ್ರೇಮ ಮೂಡಿತು; ಕಾಮಸಂತಾಪಕ್ಕೆ ಸಿಕ್ಕಿ ಬಹಳವಾಗಿ ನೊಂದು ವನಕ್ರೀಡೆಯ ಸಂಕಲ್ಪವನ್ನು ಕೈಬಿಟ್ಟು ಅರಮನೆಗೆ ಹಿಂದಿರುಗಿ ಮನ್ಮಥನ ಪೂವಂಬುಗಳ ಹೊಡೆತಕ್ಕೆ ತಡೆಯಲಾರದೆ ನಮ್ಮನ್ನು ಇಲ್ಲಿಗೆ ಕಳುಹಿಸಿದ್ದಾನೆ; ಸುಬಂಧುಶ್ರೀಯನ್ನು ಬೇಡುತ್ತಿದ್ದಾನೆ. ತಲೆಯೊಡೆಯರಾದ

ನೀವು ತಲೆಯೊಡೆಯರ್ಗೆ ತಲೆಸುತ್ತಂ ಮಾರ್ಕೊಂಡರೆನಿಸಿ ನಗೆಯಂ ಮಾಡಿಕೊಳ್ಳದೆ ಸರ್ವಸ್ವಕ್ಕೊಡೆಯನಪ್ಪ ಕುಲಸ್ವಾಮಿಗೆ ಮಾರ್ಕೊಳ್ಳದೆ ತೂಸಂ ಕುಡುವುದೆಂಬಂದುಂ ಪೆರ್ಗಡೆಗಳ ಮಾತಂ ಕೇಳ್ದು ಗುಣಪಾಲಸೆಟ್ಟಿ ಬೆಜಗಾಗಿ ಪೆರ್ಗಡೆಗಳಂ ಚಾಟುಕಾರಿಸಲೆಂದು ಕೃತಕ ವಚನಗಳಿಂನಂಬೆ ನುಡಿದು ಮತ್ತಮಿಂತೆಂದಂ

೪೨

ಅರಸಂ ಗಡ ಪಿರಿದಪ್ಪಾ
ದರದಿಂ ಗಡ ಮತ್ತನೂಜೆಯಂ ಬೇಡಿ ಪುರಂ
ದರವಿಭವನಟ್ಟುವಂ ಗಡ
ನರರೆನ್ನಿಂ ಬಿಟ್ಟು ಧನ್ಯರಾರುರ್ವರೆಯೊಳ್ ೪೩

ಸ್ಮರತಾಪದಿಂದ ಮುರ್ವೀ
ಶ್ವರನೆನ್ನ ಪ್ರಿಯ ತನೂಜೆಯಂ ಕಂಡು ಶವಿ
ಸ್ವರದಿಂ ಸೋಲ್ತಂ ಗಡಮು
ರ್ವರೆಯೊಳ್ ಮತ್ತನಯೆಯಂತು ನೋಂತವರೊಳರೇ ೪೪

ಪರದರ ಮಗವೇಕುರ್ವೀ
ವರನೊಲವಂ ಬೇಡಿ ನಿಮ್ಮನಟ್ಟುವುದೇಕಾ
ದರದಿಂ ಸ್ತ್ರೀಯರ ಸೊಬಗಂ
ನಿರಂತರಂ ಬೇಗವರಿಯರೆಂಬರುಮೊಳರೇ ೪೫

ರಾಜರಿಗೆ, ತಲೆಸುತ್ತಿನಿಂದ ಪ್ರತಿಭಟಿಸಿದರಂತೆ ಹಾಸ್ಯಾಸ್ಪದರಾಗದೆ ಸರ್ವಸ್ವಕ್ಕೂ ಒಡೆಯನಾದ ಕುಲಸ್ವಾಮಿಗೆ ಎದುರಾಡದೆ ಕೂಸನ್ನು ಕೊಡುವುದು" ಎಂದು ಹೇಳಲು ಹೆಗ್ಗಡೆಗಳ ಮಾತನ್ನು ಕೇಳಿ ಗುಣಪಾಲಸೆಟ್ಟಿಯು ಆಶ್ಚರ್ಯಪಟ್ಟು ಹೆಗ್ಗಡೆಗಳನ್ನು ಪ್ರಿಯವಚನಗಳಿಂದ ಸಂತೋಷಪಡಿಸಲೆಂದು ಕಪಟವಾಕ್ಯಗಳಿಂದ ಅವರಿಗೆ ನಂಬಿಕೆಯಾಗುವಂತೆ ಮಾತನಾಡಿ ಆ ಮೇಲೆ ಹೀಗೆ ಹೇಳಿದನು: ೪೨. "ಅರಸನಲ್ಲವೆ? ಆತನು ಹೆಚ್ಚಿನ ಆದರದಿಂದ ನನ್ನ ಮಗಳನ್ನು ಬೇಡಲು, ಇಂದ್ರವೈಭವವುಳ್ಳವನು ಪ್ರೀತಿಯಿಂದ ಕಳುಹಿಸಿದನಲ್ಲವೆ? ಈ ಭೂಮಿಯ ಮೇಲೆ ನಾನಲ್ಲದೆ ಬೇರೆ ಧನ್ಯರು ಯಾರಿದ್ದಾರೆ? ೪೩. ಮನ್ಮಥನ ಸಂತಾಪದಿಂದ ಭೂಪತಿಯು ನನ್ನ ಪ್ರೀತಿಯ ಪುತ್ರಿಯನ್ನು ಕಂಡು ಅತಿಶಯವಾಗಿ ಆಕರ್ಷಿತನಾದನಲ್ಲವೇ? ಈ ಲೋಕದಲ್ಲಿ ನನ್ನ ಮಗಳ ಹಾಗೆ ಪುಣ್ಯಮಾಡಿದವರು ಯಾರಿದ್ದಾರೆ? ೪೪. ವರ್ತಕರ ಮಗಳೇನು? ಭೂಪತಿಯು ಪ್ರೇಮದಿಂದ ಬೇಡಿ ನಿಮ್ಮನ್ನು ಕಳುಹಿಸುವುದೆಂದರೇನು! ಸ್ತ್ರೀಯರ ಸೌಂದರ್ಯವನ್ನು ಬೇಗ ತಿಳಿಯಲಾರರೆಂದು ಹೇಳುವವರೂ ಇರುವರೆ? ೪೫. ನನಗೂ ಮತ್ತು ನನ್ನ ಒಡವೆಗೂ ಪ್ರೀತಿಯ

ಎನಗಂ ಮತ್ತೆನ್ನೊಡವೆಗ
ಮನುನಯದಿಂದೊಡೆಯನೆಂದೊಡೆನ್ನಾತ್ಮಜೆಯಂ
ಜನಪತಿ ಕುಡವೇಟ್ಕೆಂದೆಲೆ
ವನಿತೆಗೇಕಣ್ಣ ಬುದ್ಧಿಯುೞಿಯಂ ಭೂಪಂ ೪೬

ಗದ್ಯ॥ ತಾನೆನ್ನಲ್ಲಿಗೆ ಕೂಸಂ ಬೇಡಿಯಟ್ಟಿದನೆಂದೊಡೆನ್ನಿಂ ಬಿಟ್ಟು ಧನ್ಯರುಂ ಪುಣ್ಯವಂತರುಮಿಲ್ಲೆಂದು ಮೆಳ್ಪಡೆ ನುಡಿದು ಪೆರ್ಗಡೆಗಳನರಮನೆಗೆ ಕಳುಪಿ ಸೆಟ್ಟಿ ತನ್ನೊಳಿಂತೆಂದಂ ೪೭

ಜನಪದಸೇವೆಯಿಲ್ಲದನ ರೂಪು ವಿಳಾಸ ಮಹೋನ್ನತಿಕ್ಕೆ ಮೇ
ದಿನಿ ಸೊಬಗೊಳ್ಪು ತೇಜಮಹಿಮಾಸ್ಪದಮುದ್ಧತಿ ವಿದ್ಯೆ ಶೌಚಮಾ
ತನ ವಿಭವಂ ಕುಲಂ ದಲಮು ಮಾರ್ಪು ಗುಣಾಳಿ ಗಾಡಿ ಯೌ
ವನಮಿನಿತುಂ ಕುಱುಂಬನರಸಗ್ನಿಯ ತಣ್ಪು ವಿಷಾನ್ನ ಭೋಜನಂ ೪೮

ಗಿರಿಶಿಖರಾಗ್ರದಿಂ ಕೆಡೆಯನೊಂಕುವುದೊರ್ಮೆಯೆ ಕಟ್ಟಿತಂದು ನಿ
ಷ್ಠುರ ಗಜರಾಜಯಿಂ ತುಳಿಸಿಕೊಲ್ವುದು ಪೆರ್ಗಡಲಲ್ಲಿ ಗಂಟಲಂ
ಮುರಿದು ತಳರ್ಚದಿಕ್ಕುವುದು ಲೇಸು ಕುದೃಷ್ಟಿಗೆ ಸೋಲ್ತು ಕೂಸನಾ
ದರದೊಳೆ ಬೇಗಮೀವುದಱಿನೆಯ್ದೆ ವಿಚಾರಿಸಿ ನೋಟ್ಪೊಡುರ್ವಿಯೊಳ್ ೪೯

ಗದ್ಯ॥ ಮತ್ತಂ ಮಿಥ್ಯಾದೃಷ್ಟಿಯ ಸಿರಿಯನುರಿಯೆಂದು ಬೆಚ್ಚಲುಂ ಕುದೃಷ್ಟಿಯ ರೂಪು ಸಂತಾಪಮೆಂದು ನಡುಗಲುಂ ಸದ್ಧರ್ಮದೂಷಕನ ಮುಖಮಂ ಯಮಗಜಾರಿ ಪೊಯ್ದು

ಒಡೆಯನೆಂದರೆ, ನನ್ನ ಮಗಳನ್ನು ರಾಜನು ತನಗೆ ಕೊಡಬೇಕೆಂದು ಕೇಳಬೇಕೆ? ಅಣ್ಣ, ಭೂಪನು ಬುದ್ಧಿಯರಿಯನೆ? ಅವನಿಗೆ ತಿಳಿಯದುದೇನಿದೆ ? ೪೬. ಆತನು ಕೂಸನ್ನು ಬೇಡಿ ನನ್ನ ಬಳಿಗೆ ನಿಮ್ಮನ್ನು ಹೇಳಿಕಳುಹಿಸಿದನೆಂದರೆ ನನಗಿಂತ ಧನ್ಯರೂ ಪುಣ್ಯವಂತರೂ ಬೇರೆ ಯಾರೂ ಇಲ್ಲ" ಎಂದು ಹೆಗ್ಗಡೆಗಳನ್ನು ವಂಚಿಸಿ ಮಾತನಾಡಿ, ಅವರನ್ನು ಅರಮನೆಗೆ ಕಳುಹಿಸಿ, ಆಮೇಲೆ ಸೆಟ್ಟಿ ತನ್ನಲ್ಲಿಯೇ ಹೀಗೆ ಯೋಚಿಸಿಕೊಂಡನು ೪೭. ಜನಪಾದ ಸೇವೆಮಾಡದವನ ರೂಪ, ವಿಳಾಸ, ಮಹೋನ್ನತ ಪದವಿ, ರಾಜ್ಯ, ಸೊಬಗು, ಒಳ್ಳೆಯತನ, ತೇಜಸ್ಸು, ಮಹಿಮೆ, ವಿದ್ಯೆ, ಶೌಚಗುಣ, ವೈಭವ, ಕುಲ. ಸೈನ್ಯ, ಪರಾಕ್ರಮ, ಗುಣಾಧಿಕ್ಯ, ಯೌವನ, ಅಂದ, ಎಲ್ಲವೂ ಕುರುಬನ ರಾಜತ್ವ, ಅಗ್ನಿಯ ತಂಪು, ವಿಷಾನ್ನ ಭೋಜನ ೪೮. ಬೆಟ್ಟದ ಶಿಖರದ ತುದಿಯಿಂದ ಬೀಳುವಂತೆ ನೂಕುವುದು, ಒಂದೇ ಸಲ ಕಟ್ಟಿತಂದು ಕ್ರೂರವಾದ ಆನೆ ಹಿಂಡಿನಿಂದ ತುಳಿಸಿ ಕೊಲ್ಲುವುದು, ದೊಡ್ಡ ಸಮುದ್ರದಲ್ಲಿ ಗಂಟಲನ್ನು ತಿರುಚಿ ಅಲ್ಲಾಡದಂತೆ ಇರಿಸುವುದು ಇವಾದರೂ ಲೇಸು ಕುದೃಷ್ಟಿಯವನಿಗೆ ಸೋತು ಮಗಳನ್ನು ಆದರದಿಂದ ಕೊಡುವುದು ಲೇಸಲ್ಲ ೪೯. ಅಲ್ಲದೆ ಮಿಥ್ಯಾದೃಷ್ಟಿಯ ಸಿರಿಯನ್ನು ಉರಿಯೆಂದು ತಿಳಿದು ಬೆಚ್ಚಬೇಕು. ಕುದೃಷ್ಟಿಯ ರೂಪವೇ ಸಂತಾಪವೆಂದು ನಡುಗಬೇಕು, ಶ್ರಾವಕನು ಸದ್ಧರ್ಮವನ್ನು ದೂಷಿಸುವವನ ಮುಖ

ಕೊಲ್ವ ನಖಮೆಂದಂಜಲುಂ ಕುದರ್ಶನ ಪ್ರೀತನ ಭೋಗಮಂ ನಾಗವಿಷಮೆಂದು ತಲ್ಲಣಿಸಲುಂ ಕುಮಾರ್ಗಾನುರಾಗಿಯಪ್ಪರಸನಂ ವಿರಸನೆಂದು ಬಗೆಯಲುಂ, ದರ್ಶನದೂರನ ಶೃಂಗಾರಮಂ ಸಂಹಾರಮೆಂದು ಭಯಂಗೊಳಲುಂ, ನಿಶ್ರೇಯಸಶ್ರೀಯನೆಯ್ದುವೆನೆಂಬ ಶ್ರಾವಕಂಗೆ ಬೇಟ್ಪುದಿನಿತಲ್ಲದೆ ದುರ್ಮೋಹದಿಂ ಮನದೊಳಟ್ಯತ್ತು ಮಿಥ್ಯಾದೃಷ್ಟಿಯಪ್ಪನ ರೂಪುಮಂ ವಿಳಾಸಮುಮಂ ಪ್ರತಾಪಮುಮಂ ಸಂಪತ್ತುಮಂ ಕಂಡು ರಾಗಿಸಿ ಪೊರ್ದಿ ಕೂಸುಗುಡುವನುಂ ಕೆಳೆಗೊಳ್ವನುಂ ನರಕಕ್ಕೆ ಭಾಜನನಕ್ಕುಮಲ್ಲದೆ ಶ್ರಾವಕನಪ್ಪನೇಗೆಯ್ದುಂ ಸುಗತಿಯನೆಯ್ದಲಾಱನೆಂದು ಪರಮಾಗಮಮಂ ಭಾವಿಸಿ ಧನಶ್ರೀಯ ಮನದ ನಿರ್ಮಳಿಕೆಯುಮಂ ಸಮ್ಯಕ್ತ್ವಮುಮನಾರಯಲೆಂದು ಗುಣಪಾಲಸೆಟ್ಟಿಯಿಂತೆಂದಂ
೫೦

ಧರಣೀವಲ್ಲಭನುಗ್ರವೈರಿಹರಣಂ ಬಾಲಾರ್ಕತೇಜಂ ಮಹೀ
ಶ್ವರವಂದ್ಯಂ ಮನವೊಲ್ದು ಸೋಲ್ತು ಪದಪಿಂ ಸದ್ರಾಗದಿಂದಟ್ಟಿದಂ
ಪಿರಿದುಂ ಸ್ನೇಹದಿನಿಂದು ಕೇಳ ಕನಕಾಂಭೋಜಾಕ್ಷಿಯಂ ಬೇಡಿ ನ
ಮ್ಮರಸಂ ನೋಡ ಸುಬಂಧುವಂ ಧರಣಿಯೊಳ್ ನಮ್ಮಂತು ಮುಂ ನೋಂತರಾರ್ ೫೧

ವನ್ನು ನೋಡಿದರೆ ಯಮನೆಂಬ ಸಿಂಹದ, ಹೊಡೆದು ಕೊಲ್ಲುವ ಪಂಜವೆಂದೂ ಅಂಜಬೇಕು. ಕೆಟ್ಟಧರ್ಮದಲ್ಲಿ ಪ್ರೀತಿಯುಳ್ಳವನ ಭೋಗವನ್ನು ನಾಗಸರ್ಪದ ವಿಷವೆಂದು ತಿಳಿದು ತಲ್ಲಣ ಪಡಬೇಕು. ಕುಮಾರ್ಗ ಪ್ರೇಮಿಯಾದ ರಾಜನನ್ನು ವಿರಸನೆಂದೇ ಬಗೆದು ದರ್ಶನದೂರನ ಶೃಂಗಾರವು ಸಂಹಾರವೆಂದು ಬಗೆವುದು, ಮೋಕ್ಷ ಪಡೆಯುವೆನೆಂಬ ಶ್ರಾವಕನಿಗೆ ಅಗತ್ಯ ಲಕ್ಷಣ. ಇಷ್ಟಲ್ಲದೆ ಕೆಟ್ಟ ಮೋಹದಿಂದ ಮನಸ್ಸಿನಲ್ಲಿ ಪ್ರೀತಿಸಿ ಮಿಥ್ಯಾದೃಷ್ಟಿಯಾದವನ ರೂಪ, ವಿಳಾಸ, ಪ್ರತಾಪ, ಸಂಪತ್ತುಗಳನ್ನು ನೋಡಿ ಆಸೆಪಟ್ಟು ಹೊಂದಿಕೊಂಡು ಹೆಣ್ಣುಕೊಡುವವನೂ, ಸ್ನೇಹಮಾಡಿಕೊಳ್ಳುವವನೂ, ನರಕಕ್ಕೆ ಸೇರುತ್ತಾರೆಯೇ ಹೊರತು ಅಂಥ ಶ್ರಾವಕನು ಏನೇ ಮಾಡಿದರೂ ಸದ್ಗತಿಯನ್ನು ಹೊಂದಲಾರನು ; ಪರಮಾಗಮವನ್ನು ಭಾವಿಸಿ, ಧನಶ್ರೀಯ ಮನಸ್ಸಿನ ಶುದ್ಧಿಯನ್ನೂ ಸಮ್ಯಕ್ತ್ವವನ್ನು ಪರೀಕ್ಷಿಸುವುದಕ್ಕಾಗಿ ಗುಣಪಾಲಸೆಟ್ಟಿಯು ಹೀಗೆಂದನು:
೫೦. "ಭೂಪತಿಯು ಉಗ್ರರಾದ ವೈರಿಗಳನ್ನು ಕೊಂದವನು, ಬಾಲಸೂರ್ಯನಂತೆ ತೇಜಸ್ಸುಳ್ಳವನು, ರಾಜಪೂಜ್ಯನು, ಅವನು ಮನಃಪೂರ್ವಕವಾಗಿ ಒಲಿದು, ಸೋತು, ಉತ್ಸಾಹದಿಂದ ಆಸೆಪಟ್ಟು ಹೇಳಿಕಳುಹಿಸಿದ್ದಾನೆ. ಕಮಲಾಕ್ಷಿಯಾದ ನಮ್ಮ ಸುಬಂಧುವನ್ನು ಬೇಡಿ ನಮ್ಮ ಅರಸನು ಹೆಗ್ಗಡೆಗಳನ್ನು ಕಳುಹಿಸಿದ್ದಾನೆ. ಲೋಕದಲ್ಲಿ ನಮ್ಮ ಹಾಗೆ ಬೇರೆ ಪುಣ್ಯವಂತರು ಯಾರಿದ್ದಾರೆ ? ೫೧. ವರ್ತಕರ ಐಶ್ವರ್ಯಕ್ಕೆ ರಾಜರ ಸಿರಿ

ಪರದರಸಿರಿಯಿಂದರಸರ
ಿರಿ ಸರಿಯಲ್ಲದೊಡೆ ಕೂಸನಿತ್ತೊಡಾತನ ದೆಸೆಯಿಂ
ಪಿರಿದಪ್ಪುದವಿದ ಶೌರ್ಯಂ
ದೊರೆಕೊಳ್ಗುಂ ಮೇಲೆ ರಾಜ್ಯಮುಂ ಕೈಸಾರ್ಗುಂ ೫೨

ಕುಲಮಂ ಪೇೞ್ವೊಡೆ ರಾಜಪುತ್ರನದಟಂ ತಾನಲ್ಲನಿನ್ನೆಂಬೊಡು
ಜ್ಜ್ವಲ ಚಂಡಾಂಶುನಿಭಂ ವಿಭೂರ್ಜಿತಯಶಂ ತಾನಲ್ಲವೆಂಬಂದಿಳಾ
ವಲಯಾಧೀಶ್ವರವಂದಿತಕ್ರಮಯುಗಂ ಶ್ರೀಮಂತನಲ್ಲೆಂಬೊಡ
ಗ್ಗಳಮಪ್ಪಿಂದ್ರಸಮಾನನೂರ್ಜಿತಯಶಂ ಗೀರ್ವಾಣಶೈಲಕ್ಷಮಂ ೫೩

ಗದ್ಯ॥ ಸ-ಬಂಧುಶ್ರೀಯನರಸಂಗೆ ಕುಡುವಮೆಂಬುದುಂ ಧನಶ್ರೀ ಸೆಟ್ಟಿಯ ಮಾತಿಂಗೆ ವಿಸ್ಮಯಂಬಟ್ಟು ನೀರೊಳಗಿರ್ದ ನಲ್ಲಳ ನೆಳಲಂ ಕಂಡು ನಲ್ಲಳೆಂದು ಮತಿಗೆಟ್ಟು ಪಾಯ್ದು ಸಾವ ಸಾಧುವಿಟನಂತೆ ನಿತ್ಯಮಲ್ಲದ ಸಂಸಾರಸುಖಕ್ಕಮಲ್ಪಶ್ರೀಗಮಾಸೆಗೆಯ್ದು ಮಿಥ್ಯಾದೃಷ್ಟಿಗೆ ಕೂಸಂ ಕೊಟ್ಟು ಮಗಳ್ಗಂ ತನಗಂ ಪಿರಿದಪ್ಪ ನರಕದುಃಖಮಂ ಮಾಡಿಕೊಂಡಪನೆಂದು ತನ್ನೊಳೆ ಮಱುಗಿ ಸೆಟ್ಟಿಗಿಂತೆಂದಳ್ ೫೪

ಪಲಕಾಲಂ ಸಂಸೃತಿಯೊಳ್
ನೆಲೆಗೊಳ್ಳದೆ ಪಿರಿದು ಪುಣ್ಯದಿಂದಂ ಪಾಪಂ
ತೊಲಗಿದೊಡೆ ನಿನಗೆ ಪುಟ್ಟಿದ
ಳಲಂಘ್ಯಗುಣೆ ರಿಪುಗೆ ಬೆರ್ಚಿ ಮಱೆವುಗುವವೊಲುಂ ೫೫

ಸಮಾನವಲ್ಲದಿದ್ದರೆ,ಹೆಣ್ಣುಕೊಟ್ಟರೆ ಆತನ ದೆಸೆಯಿಂದ ಹೆಚ್ಚಾದ ಶೌರ್ಯ ಲಭಿಸುವುದು ಜತೆಗೆ ರಾಜ್ಯವೂ ಕೈಸೇರುತ್ತದೆ ೫೨. ಕುಲವನ್ನು ಹೇಳಿದರೆ ರಾಜಪುತ್ರ. ಆವನು ಶೂರನಲ್ಲವೆನ್ನುವೆಯಾದರೆ ನಮ್ಮ ಅರಸನು ಉಜ್ವಲ ಸೂರ್ಯನಂಥವನು, ಮಹಾಕೀರ್ತಿಶಾಲಿ. ಲೋಕದ ರಾಜರೆಲ್ಲ ಈತನ ಪಾದಗಳಿಗೆ ವಂದಿಸುತ್ತಾರೆ. ಶ್ರೀಮಂತನಲ್ಲವೆನ್ನುವೆಯಾ? ಅವನು ಶ್ರೇಷ್ಠನಾದ ಇಂದ್ರನಿಗೆ ಸಮಾನ! ಹೆಚ್ಚಾದ ಯಶಸ್ಸುಗಳಿಸಿದ್ದಾನೆ ; ಮಂದರದಂತೆ ಧೀರ! ೫೩. ಸುಬಂಧುಶ್ರೀಯನ್ನು ಅರಸನಿಗೆ ಕೊಡೋಣ" ಎನ್ನುತ್ತಲೂ ಸೆಟ್ಟಿಯ ಮಾತಿಗೆ ಬಹಳ ಆಶ್ಚರ್ಯಪಟ್ಟು, ನೀರೊಳಗಿದ್ದ ಪ್ರೇಯಸಿಯ ನೆರಳನ್ನು ಕಂಡು ಅದು ತನ್ನ ಪ್ರಿಯಳೇ ಎಂದು ಭ್ರಮಿಸಿ ಬುದ್ಧಿಕಳೆದುಕೊಂಡು ನುಗ್ಗಿ ಸಾಯುವ ಸಾಧುವಿಟನ ಹಾಗೆ ಅನಿತ್ಯವಾದ ಸಂಸಾರಸುಖಕ್ಕೂ ಅಲ್ಪವಾದ ಐಸಿರಿಗೂ ಆಸೆಪಟ್ಟು ಮಿಥ್ಯಾದೃಷ್ಟಿ (ಜೈನನಲ್ಲದವನು) ಗೆ ಹೆಣ್ಣುಕೊಟ್ಟು ಮಗಳಿಗೂ ತನಗೂ ಹೆಚ್ಚಾದ ನರಕದುಃಖವನ್ನು ತಂದುಕೊಳ್ಳುವನೆಂದು ಮನಸ್ಸಿನಲ್ಲಿಯೇ ಕುದಿದು ಸಂಕಟಪಟ್ಟು ಆಕೆ ಸೆಟ್ಟಿಗೆ ಹೀಗೆ ಹೇಳಿದಳು : ೫೪. ದೀರ್ಘಕಾಲ ಸಂಸಾರದಲ್ಲಿ ನಿಲ್ಲದೆ ಹೆಚ್ಚಿನ ಪುಣ್ಯದಿಂದ, ಪಾಪ ಕಳೆದುಹೋಗಲು, ಶತ್ರುವಿಗೆ ಅಂಜಿ ಮರೆಹೊಗುವವಳಂತೆ, ನಿನಗೆ ಗುಣವತಿಯಾದ ಮಗಳು ಹುಟ್ಟಿದ್ದಾಳೆ ೫೫. ಹಿಂದೆ ಜಿನಧರ್ಮವೆಂಬುದನ್ನು,

ಜಿನಧರ್ಮವೆಂಬುದುಂ ಮು
ನ್ನನಂತಭವಭವದೊಳೆಲ್ಲಿಯುಂ ಪೊರ್ದದೆ ತಿ
ಬ್ಬನೆ ತಿರಿದು ಪುಣ್ಯವಶದಿಂ
ವನರುಹಮುಖಿ ತನ್ನ ಕರ್ಮದೊಂದುಪಶಮದಿಂ ೫೬

ಗದ್ಯ॥ ಕಾಕತಾಳನ್ಯಾಯದಿಂ ನಿನ್ನಂತಪ್ಪ ಮಹಾಪುರುಷನ ಬಸಿಱೊಳ್ ಬಂದು ಜಿನಧರ್ಮಮಂ ಪೊರ್ದಿದಳಂತು ಪೊರ್ದಿದ ಮಗಳಂ ಕಳ್ಳಂಗಂಜಿದರಂ ಪುಲಿಗೊಪ್ಪಿಸಿದರೆಂಬಂತಾನುಂ ಸಿಂಹದ ಬಾರಿಯೊಳ್ ಬರ್ದುಂಕಿದವನಂ ಪಿಟ್ಟವೆಳಸಿದರೆಂಬಂತಾನುಂ ಪಗೆವರ ಕೊಲೆಯುಂ ಬಂಚಿಸಿ ಪೋಪನಂ ಕರಡಿಯು ಮುಂತಿಕ್ಕಿದರೆಂಬಂತಾನುಂ ಮಿಥ್ಯಾ ದೃಷ್ಟಿಯುಪ್ಪನ ರಾಜ್ಯಶ್ರೀಯುಮಂ ಸಂಪತ್ತುಮಮುನ್ನತಿಕ್ಕೆಯುಮಂ ಕಂಡು ಶೂನ್ಯಹೃದಯರಂತೆ ಮೇಲಣನಂತಭವದ ದುಃಖಮಂ ಭಾವಿಸದೆ ಪೆರ್ಚಿಂದಂ ಕೂಸಂ ಕುಡುವೆನೆಂಬ ನಿಮ್ಮ ಮರುಳ್ತನಕ್ಕೆ ಪಿರಿದುಂ ವಿಸ್ಮಯಮಾದಪುದು ; ನಿಮ್ಮಂತಪ್ಪ ಸದ್ದೃಷ್ಟಿಗಳುಮಿಂತಪ್ಪ ಕಜ್ಜಮಂ ಮನದೆ ಕೊಳ್ವೊರೆಂದೊಡಿಂ ಮತ್ತಿನಱಿಶ್ರಾವಕರ ಮತಿಹೀನತೆಗಂ ಕೇಡಿಂಗಮಂಟಲಲಾಗದು ೫೭

ಸಿರಿ ಭಾವಿಪೊಡೆತ್ತಾನುಂ
ದೊರೆ ಕೊಳ್ಗುಂ ಜೈನಧರ್ಶನಂ ಧಾರಿಣಿಯೊಳ್
ದೊರೆಕೊಳ್ಳದದಱಿನಱಿಪೊಡೆ
ಸಿರಿಗಂ ಸದ್ದರ್ಶನಕ್ಕಮೇನಂತರಮೋ ೫೮

ಅನಂತವಾದ ಈ ಸಂಸಾರದಲ್ಲಿ ಜನ್ಮಜನ್ಮಗಳಲ್ಲಿ ಎಲ್ಲಿಯೂ ಪಡೆಯದೆ ತಿರ್ರನೆ ತಿರುಗಿ ಪುಣ್ಯವಶದಿಂದ ಕಮಲಮುಖಿ ತನ್ನ ಕರ್ಮದ ಉಪಶಮನವಾದ್ದರಿಂದ ಕಾಕತಾಳ ನ್ಯಾಯದಂತೆ ನಿನ್ನಂಥ ಮಹಾಪುರುಷನ ಒಸಿರಲ್ಲಿ ಬಂದು ಜಿನಧರ್ಮವನ್ನು ಸೇರಿದಳು. ಹಾಗೆ ಸೇರಿದ ಮಗಳನ್ನು ಕಳ್ಳನಿಗೆ ಹೆದರಿದವರನ್ನು ಹುಲಿಗೆ ಒಪ್ಪಿಸಿದರೆಂಬಂತೆ. ಸಿಂಹದ ಕಾಟದಿಂದ ಬದುಕಿದವನನ್ನು ಪಿಟ್ಟವನ್ನೆಳೆಯಲು ಗುರಿಮಾಡಿದರೆನಬಂತೆ, ಶತ್ರುಗಳ ಕೊಲೆಯಿಂದ ತಪ್ಪಿಸಿಕೊಂಡು ಹೋಗುವವನನ್ನು ಕರಡಿಯ ಮುಂದೆ ಹಾಕಿದರೆಂಬಂತೆ, ಮಿಥ್ಯಾದೃಷ್ಟಿಯಾದವನ ರಾಜ್ಯಶ್ರೀಯನ್ನೂ ಸಂಪತ್ತನ್ನೂ ಉನ್ನತಿಕೆಯನ್ನೂ ಕಂಡು ಶೂನ್ಯಹೃದಯರ ಹಾಗೆ ಆಮೇಲಿನ ಅನಂತ ಜನ್ಮಗಳ ದುಃಖವನ್ನು ಯೋಚಿಸದೆ ಉತ್ಸಾಹದಿಂದ ಹೆಣ್ಣನ್ನು ಕೊಡುವೆನೆಂಬ ನಿಮ್ಮ ಹುಚ್ಚುತನಕ್ಕೆ ಬಹಳ ಆಶ್ಚರ್ಯವಾಗುತ್ತಿದೆ. ನಿಮ್ಮಂಥ ಸದ್ದೃಷ್ಟಿಗಳೂ ಇಂಥ ಕೆಲಸವನ್ನು ಮನಸ್ಸಿಗೆ ತಂದುಕೊಳ್ಳುವಿರಾದರೆ, ಉಳಿದ ಕೀಳು ಶ್ರಾವಕರ ಮತಿಹೀನತೆಗೂ ಕೇಡಿಗೂ ಅಳಬಾರದು ೫೭. ಐಶ್ವರ್ಯವು ಯೋಚಿಸಿದರೆ ಎಲ್ಲಿಯಾದರೂ ಸಿಕ್ಕುತ್ತದೆ. ಜೈನದರ್ಶನವು ಲೋಕದಲ್ಲಿ ಲಭಿಸದು. ಆದ್ದರಿಂದ ಸಿರಿತನಕ್ಕೂ ಸದ್ಧರ್ಮಕ್ಕೂ ಎಷ್ಟು ವ್ಯತ್ಯಾಸವೊ ? ೫೮. ಹಲವು ಜನ್ಮಗಳಿ

ಪಲವು ಭವಕ್ಕೊಮ್ಮೆ ಮಹೀ
ತಳದೊಳ್ ಸಾಮ್ರಾಜ್ಯಲಕ್ಷ್ಮಿ ದೊರೆಕೊಳ್ಗುಂ ನಿ
ರ್ಮಳಮಪ್ಪ ಜೈನಧರ್ಮಂ
ಮಳರಹಿತಂ ಬೇಗಮಂತೆ ದೊರೆಕೊಂಡಪುದೇ ೫೯

ಬಲದಿಂ ಕುತ್ಸಿತ ದಾನದ
ಫಲದಿಂದೆತ್ತಾನುಮೊರ್ಮೆ ಸಿರಿ ಸಮನಿಸುಗುಂ
ಘಱಿಲಿನಲಱಿವುದದಕ್ಕಂ
ಪಱಿಯಿಲ್ಲದ ದರ್ಶನಕ್ಕಮೇನಂತರಮೋ ೬೦

ಕಿಡುವ ಸಿರಿಗಳಿಪಿ ಕೆಮ್ಮನೆ
ಕಿಡದ ಸುಖಾಸ್ಪದಮನೀವ ಸದ್ದರ್ಶನಮಂ
ಬಿಡುವಾತಂ ಬಿರ್ದೂಟಮ
ನೊಡಬಡದೆ ಗಂಜಿಗುಡಿವ ಮರುಳಂ ಪೋಲ್ಕುಂ ೬೧

ಅಱಿಸಿರಿಗಮಲ್ಪಬುದ್ಧಿಗ
ಮಳಿಪಿ ಸದಾಸುಖಮನೀವ ಸದ್ದರ್ಶನಮಂ
ತಿಳಿವಿಲ್ಲದೆ ಬಿಡುವಂ ಭೂ
ತಳಮಂ ಬಿಸುಟಳಿಪಿ ತಿರಿವ ಮರುಳಂ ಪೋಲ್ಕುಂ ೬೨

ಗೊಂದು ಸಲ ಭೂಲೋಕದಲ್ಲಿ ಸಾಮ್ರಾಜ್ಯಲಕ್ಷ್ಮಿ ಸಿಕ್ಕುತ್ತಾಳೆ. ನಿರ್ಮಲವಾದ ಜೈನ ಧರ್ಮವು ಪಾಪರಹಿತವಾದದ್ದು, ಹಾಗೆ ಬೇಗ ಲಭಿಸುತ್ತದೆಯೆ ? ೫೯. ಬಲದಿಂದ, ನೀಚದಾನದ ಫಲದಿಂದ, ಎಂದಾದರೊಂದು ಸಲ ಐಶ್ವರ್ಯ ಲಭಿಸುವುದು. ಅದಕ್ಕೂ ನಿರ್ದುಷ್ಟವಾದ ದರ್ಶನಕ್ಕೂ ಎಷ್ಟು ಅಂತರವೆಂಬುದನ್ನು ಚೆನ್ನಾಗಿ ಗ್ರಹಿಸಬೇಕು. ೬೦. ಹಾಳಾಗುವ ಐಸಿರಿಗೆ ಆಸೆಪಟ್ಟು ವೃಥಾ, ಶಾಶ್ವತವಾದ ಸುಖಾಶ್ರಯವನ್ನು ಕೊಡುವ ಸದ್ದರ್ಶನವನ್ನು ಬಿಡುವಾತನು ಔತಣದ ಊಟಕ್ಕೆ ಒಪ್ಪದೆ ಗಂಜಿಯನ್ನು ಕುಡಿಯುವ ದಡ್ಡನನ್ನು ಹೋಲುತ್ತಾನೆ. ೬೧ ಅಲ್ಪವಾದ, ನಾಶಹೊಂದುವ, ಐಶ್ವರ್ಯಕ್ಕೂ ಅಲ್ಪಬುದ್ಧಿಗೂ ಆಸೆಪಟ್ಟು ಎಲ್ಲ ಕಾಲಕ್ಕೂ ಸುಖವನ್ನು ನೀಡುವ ಶ್ರೇಷ್ಠವಾದ ದರ್ಶನವನ್ನು ತಿಳಿವಳಿಕೆಯಿಲ್ಲದೆ ಬಿಟ್ಟುಬಿಡುವವನು ರಾಜ್ಯವನ್ನು ತಿರಸ್ಕರಿಸಿ ಆಸೆಯಿಂದ ತಿರುಪೆ ಬೇಡುವ ಹುಚ್ಚನನ್ನು ಹೋಲುವನು. ೬೨. ಹಳ್ಳದಲ್ಲಿನ ಮರ, ಹಣ್ಣುಬಿಟ್ಟ

ದರಿಯುಮರಂ ಪಣ್ಣುಮರಂ
ಸುರಧನು ತಿರಿದುಂಬ ತಿರಿಕರೊಳ್ ಕೂಟಮಿದೊಂ
ದರಿಸಿನದ ಬಣ್ಣಮೆನ್ನದೆ
ಸಿರಿ ಶಾಶ್ವತಮೆಂದು ನಂಬಿ ಪದೆವನೆ ಗಾಂಪಂ ೬೩

ಮರುಳರಸುತನಂ ಮೇಘದ
ನೆರವಿಯು ನೆರೆಪರ್ಕನುಷ್ಣಮಳಿಪನ ಧನಮು
ರ್ವರೆಯೊಳ್ ಸಂಪತ್ತೆನ್ನದೆ
ಕರಮಾದರದಿಂದಮೊಲ್ದು ಪದೆವನೆ ಗಾಂಪಂ ೬೪

ಸಿರಿಯುಳ್ಳವರಂ ಧನದೊಳ್
ಪಿರಿಯರುಮಂ ಕಾಣಲಪ್ಪುದಿಳೆಯೊಳ್ ಪಲರಂ
ದರುಶನಶುದ್ಧರುಮಂ ಸ
ಚ್ಚರಿತರುಮಂ ನೋಡ ಕಾಣಲೇಂ ಬಂದಪುದೇ ೬೫

ಕಲ್ಲುಂ ಕಬ್ಬುನಮುಂ ನೋ
ಡೆಲ್ಲಿಯುಮೋರಂತೆ ಪಡೆಯಲಪ್ಪುದು ಪೊನ್ನಂ
ಸಲ್ಲಲಿತಮಪ್ಪ ರತ್ನಮು
ನೆಲ್ಲಿಯುಮೋರಂತೆ ಪಡೆಯಲಪ್ಪುದೆ ಧರೆಯೊಳ್ ೬೬

ಮರ, ಇಂದ್ರಧನುಸ್ಸು (ಕಾಮನಬಿಲ್ಲು) ತಿರುಪೆಯಿಂದ ಉಣ್ಣುವ ತಿರುಕರಲ್ಲಿ ಸ್ನೇಹ, ಇದೊಂದು ಅರಿಶಿನದ (ಚಿನ್ನವಲ್ಲ) ಬಣ್ಣವೆಂದು ಬಗೆಯದೆ, ಐಶ್ವರ್ಯವು ಶಾಶ್ವತವೆಂದು ನಂಬಿ ಅದಕ್ಕೆ ಆಸೆಪಡುವವನೇ ದಡ್ಡ. ೬೩. ದಡ್ಡನ ರಾಜಪದವಿ, ಮೋಡಗಳ ಸಭೆ, ವೃದ್ಧಸೂರ್ಯನ ಉಷ್ಣ, ಆಸೆಗಾರನ ಹಣ-ಇವು ಲೋಕದಲ್ಲಿ ಸಂಪತ್ತೆಂದು ಭಾವಿಸದೆ, ಆದರದಿಂದ ಒಲಿದು ಆಸೆ ಪಡುವವನೇ ದಡ್ಡ. ೬೪. ಐಶ್ವರ್ಯವುಳ್ಳವರನ್ನೂ ಧನದಲ್ಲಿ ದೊಡ್ಡವರಾದವರನ್ನೂ ಲೋಕದಲ್ಲಿ ಹಲವರನ್ನು ಕಾಣಬಹುದು. ದರ್ಶನಶುದ್ಧರೂ ಸಚ್ಚರಿತ್ರರೂ ಆದವರನ್ನು ಕಾಣಲು ಬರುತ್ತದೆಯೆ? ೬೫. ಕಲ್ಲೂ ಕಬ್ಬಿಣವೂ ನೋಡಿದರೆ ಎಲ್ಲೆಲ್ಲಿಯೂ ಹೆಚ್ಚಾಗಿ ಪಡೆಯಲು ಸಾಧ್ಯವಾಗುವುದು. ಹೊನ್ನನ್ನೂ ಶ್ರೇಷ್ಠವಾದ ರತ್ನವನ್ನೂ ಎಲ್ಲೆಲ್ಲಿಯೂ ಹೆಚ್ಚಾಗಿ ಪಡೆಯಲು ಸಾಧ್ಯವಾಗುತ್ತದೆಯೆ? ೬೬.

ಪಲವು ಭವಕ್ಕೊಮ್ಮೆ ಮಹೀ
ತಳದೊಳ್ ಸಾಮ್ರಾಜ್ಯಲಕ್ಷ್ಮಿ ದೊರೆಕೊಳ್ಗುಂ ನಿ
ರ್ಮಳಮಪ್ಪ ಜೈನಧರ್ಮಂ
ಮಳರಹಿತಂ ಬೇಗಮಂತೆ ದೊರೆಕೊಂಡಪುದೇ ೫೯

ಬಲದಿಂ ಕುತ್ಸಿತ ದಾನದ
ಫಲದಿಂದೆತ್ತಾನುಮೊರ್ಮೆ ಸಿರಿ ಸಮನಿಸುಗುಂ
ಘಟಿಲೆನಲಟುವುದದಕ್ಕಂ
ಪಟುಯಿಲ್ಲದ ದರ್ಶನಕ್ಕಮೇನಂತರವೋ ೬೦

ಕಿಡುವ ಸಿರಿಗಳಿಪಿ ಕಿಮ್ಮನೆ
ಕಿಡದ ಸುಖಾಸ್ಪದಮನೀವ ಸದ್ದರ್ಶನಮಂ
ಬಿಡುವಾತಂ ಬಿದಿರ್ಗುಟಮ
ನೊಡಬಡದೆ ಗಂಜಿಗುಡಿವ ಮರುಳಂ ಪೋಲ್ಕುಂ ೬೧

ಅಟುಸಿರಿಗಮಲ್ಪಬುದ್ಧಿಗ
ಮಳಿಪಿ ಸದಾಸುಖಮನೀವ ಸದ್ದರ್ಶನಮಂ
ತಿಳಿವಿಲ್ಲದೆ ಬಿಡುವಂ ಭೂ
ತಳಮಂ ಬಿಸುಟಳಿಪಿ ತಿರಿವ ಮರುಳಂ ಪೋಲ್ಕುಂ ೬೨

ಗೊಂದು ಸಲ ಭೂಲೋಕದಲ್ಲಿ ಸಾಮ್ರಾಜ್ಯಲಕ್ಷ್ಮಿ ಸಿಕ್ಕುತ್ತಾಳೆ. ನಿರ್ಮಲವಾದ ಜೈನ ಧರ್ಮವು ಪಾಪರಹಿತವಾದದ್ದು, ಹಾಗೆ ಬೇಗ ಲಭಿಸುತ್ತದೆಯೆ ? ೫೯. ಬಲದಿಂದ, ನೀಚದಾನದ ಫಲದಿಂದ, ಎಂದಾದರೊಂದು ಸಲ ಐಶ್ವರ್ಯ ಲಭಿಸುವುದು. ಅದಕ್ಕೂ ನಿರ್ದುಷ್ಟವಾದ ದರ್ಶನಕ್ಕೂ ಎಷ್ಟು ಅಂತರವೆಂಬುದನ್ನು ಚೆನ್ನಾಗಿ ಗ್ರಹಿಸಬೇಕು. ೬೦. ಹಾಳಾಗುವ ಐಸಿರಿಗೆ ಆಸೆಪಟ್ಟು ವೃಥಾ, ಶಾಶ್ವತವಾದ ಸುಖಾಶ್ರಯವನ್ನು ಕೊಡುವ ಸದ್ದರ್ಶನವನ್ನು ಬಿಡುವಾತನು ಔತಣದ ಊಟಕ್ಕೆ ಒಪ್ಪದೆ ಗಂಜಿಯನ್ನು ಕುಡಿಯುವ ದಡ್ಡನನ್ನು ಹೋಲುತ್ತಾನೆ. ೬೧ ಅಲ್ಪವಾದ, ನಾಶಹೊಂದುವ, ಐಶ್ವರ್ಯಕ್ಕೂ ಅಲ್ಪಬುದ್ಧಿಗೂ ಆಸೆಪಟ್ಟು ಎಲ್ಲ ಕಾಲಕ್ಕೂ ಸುಖವನ್ನು ನೀಡುವ ಶ್ರೇಷ್ಠವಾದ ದರ್ಶನವನ್ನು ತಿಳಿವಳಿಕೆಯಿಲ್ಲದೆ ಬಿಟ್ಟುಬಿಡುವವನು ರಾಜ್ಯವನ್ನು ತಿರಸ್ಕರಿಸಿ ಆಸೆಯಿಂದ ತಿರುಪೆ ಬೇಡುವ ಹುಚ್ಚನನ್ನು ಹೋಲುವನು. ೬೨. ಹಳ್ಳದಲ್ಲಿನ ಮರ, ಹಣ್ಣುಬಿಟ್ಟ

ದರಿಯುಮರಂ ಪಣ್ತುಮರಂ
ಸುರಧನು ತಿರಿದುಂಬ ತಿರಿಕರೊಳ್ ಕೂಟಮಿದೊಂ
ದರಿಸಿನದ ಬಣ್ಣಮೆನ್ನದೆ
ಸಿರಿ ಶಾಶ್ವತಮೆಂದು ನಂಬಿ ಪದೆವನೆ ಗಾಂಪಂ ೬೩

ಮರುಳರಸುತನಂ ಮೋಘದ
ನೆರವಿಯ ನೆರೆಪರ್ಕನುಷ್ಣಮುಳಿಪನ ಧನಮು
ರ್ವರೆಯೊಳ್ ಸಂಪತ್ತೆನ್ನದೆ
ಕರಮಾದರದಿಂದಮೊಲ್ದು ಪದೆವನೆ ಗಾಂಪಂ ೬೪

ಸಿರಿಯುಳ್ಳವರಂ ಧನದೊಳ್
ಪಿರಿಯರುಮಂ ಕಾಣಲಪ್ಪುದಿಳೆಯೊಳ್ ಪಲರಂ
ದರುಶನಶುದ್ಧರುಮಂ ಸ
ಚ್ಚರಿತರುಮಂ ನೋಡ ಕಾಣಲೇಂ ಬಂದಪುದೇ ೬೫

ಕಲ್ಲುಂ ಕಬ್ಬುನಮುಂ ನೋ
ಡೆಲ್ಲಿಯುಮೋರಂತೆ ಪಡೆಯಲಪ್ಪುದು ಪೊನ್ನುಂ
ಸಲ್ಲಲಿತಮಪ್ಪ ರತ್ನಮು
ನೆಲ್ಲಯುಮೋರಂತೆ ಪಡೆಯಲಪ್ಪುದೆ ಧರೆಯೊಳ್ ೬೬

ಮರ, ಇಂದ್ರಧನುಸ್ಸು (ಕಾಮನಬಿಲ್ಲು) ತಿರುಪೆಯಿಂದ ಉಣ್ಣುವ ತಿರುಕರಲ್ಲಿ ಸ್ನೇಹ, ಇದೊಂದು ಅರಿಶಿನದ (ಚಿನ್ನವಲ್ಲ)ಬಣ್ಣವೆಂದು ಬಗೆಯದೆ, ಐಶ್ವರ್ಯವು ಶಾಶ್ವತವೆಂದು ನಂಬಿ ಆದಕ್ಕೆ ಆಸೆಪಡುವವನೇ ದಡ್ಡ. ೬೩. ದಡ್ಡನ ರಾಜಪದವಿ, ಮೋಡಗಳ ಸಭೆ, ವೃದ್ಧಸೂರ್ಯನ ಉಷ್ಣ, ಆಸೆಗಾರನ ಹಣ-ಇವು ಲೋಕದಲ್ಲಿ ಸಂಪತ್ತೆಂದು ಭಾವಿಸದೆ, ಆದರದಿಂದ ಒಲಿದು ಆಸೆ ಪಡುವವನೇ ದಡ್ಡ. ೬೪. ಐಶ್ವರ್ಯವುಳ್ಳವರನ್ನೂ ಧನದಲ್ಲಿ ದೊಡ್ಡವರಾದವರನ್ನೂ ಲೋಕದಲ್ಲಿ ಹಲವರನ್ನು ಕಾಣಬಹುದು. ದರ್ಶನಶುದ್ಧರೂ ಸಚ್ಚರಿತ್ರರೂ ಆದವರನ್ನು ಕಾಣಲು ಬರುತ್ತದೆಯೆ? ೬೫. ಕಲ್ಲೂ ಕಬ್ಬಿಣವೂ ನೋಡಿದರೆ ಎಲ್ಲೆಲ್ಲಿಯೂ ಹೆಚ್ಚಾಗಿ ಪಡೆಯಲು ಸಾಧ್ಯವಾಗುವುದು. ಹೊನ್ನನ್ನೂ ಶ್ರೇಷ್ಠವಾದ ರತ್ನವನ್ನೂ ಎಲ್ಲೆಲ್ಲಿಯೂ ಹೆಚ್ಚಾಗಿ ಪಡೆಯಲು ಸಾಧ್ಯವಾಗುತ್ತದೆಯೆ? ೬೬.

ಗದ್ಯ॥ ಅಂತು ಪಡೆಯಲ್ಬಾರದಪೂರ್ವಮಪ್ಪ ದರ್ಶನಮುಂ ಸದ್ಧರ್ಮಮುಂ ಪಿರಿದಪ್ಪ ಪುಣ್ಯದಿಂದಲ್ಲದೆ ಸಮನಿಸವಂತಪ್ಪ ದರ್ಶನಮುಮಂ ಸದ್ಧರ್ಮಮುಮಂ ಔದಾಸೀನ್ಯಂಗೆಯ್ದು ಬಿಟ್ಟು, ಸಂಸಾರದಟಿಸಿರಿಗಂ ಪುರುಳಿಲ್ಲದ ಸಂಪತ್ತಿಗಮಳಿಪಿ, ಪಾದರಿಗಗಂಡನಂ ನಂಬಿ ಮನೆಯ ಗಂಡನಂ ಬಿಡುವಂತೆ ಸಜ್ಜನವೆಂಡತಿಯನೊಲ್ಲದೆ ಗಾಳುವಪ್ಪ ಸೂಳೆಯಂ ಮೆಚ್ಚುವಂತೆ ಮೂಱು ದಿನದ ಪಗರಣಕ್ಕೆ ಗಡ್ಡಮೀಸೆ ಮಂಡೆಯಂ ಬೋಳಿಸಿಕೊಳ್ವಂತೆ ಮುಂದಿರ್ದ ಕೆಱೆಯನೆಯ್ದಲಾದಿನದ ಅದಲಸಿ ಕೆಸಱನೀರಂ ಕುಡಿವಂತೆ ಸ್ವರ್ಗಮೋಕ್ಷದೊಳಪ್ಪನಂತ ಸುಖಮಂ ನೀರೊಳಟ್ಟಿ ನರಕ ತಿರ್ಯಗ್ಗತಿಗಳೊಳ್ ತಿಱ್ಱನೆ ತಿರಿವ ಕಜ್ಜಮನೆತ್ತಿಕೊಳ್ವೊಡೆ ನೀಮಱಿವಿರ್ ; ನಿಮಗಾದಿತ್ಯಂಗೆ ಸೊಡರಂ ತೋಱಿಸಿದರೆಂಬಂತೆ ತೊಱೆಗೆ ನೀರಸಡುಕಿದರೆಂಬಂತೆ ಎನ್ನಂತಪ್ಪ ಜಡಮತಿಗಳ್ ಬುದ್ಧಿವೇಳ್ವುದುಚಿತಮಲ್ಲದು ; ಗಂಡನಿದಿರೊಳ್ ಪೆಂಡತಿ ನುಡಿಯಲಾಗದು ; ಮೀಱಿ ಕೊಟ್ಟಪ್ಪೊಡೆಮಗೆ ಬಸದಿಯೆ ಶರಣೆಂದು ಧನಶ್ರೀ ನುಡಿದು ಮಾಣ್ಬುದುಂ ೬೭

ಸರಸೀರುಹಮುಖಿಯರ್ಹ
ತ್ಪರಮೇಶ್ವರ ಪಾದಪಂಕಜ ಭ್ರಮರಿಯ ಮಾ
ತೆರಡಿಲ್ಲಮೆಂದು ಚಿತ್ತಮ
ನುರುಮುದದಿಂ ನಚ್ಚಿಪೆರ್ಚಿ ವನಿತೆಯ ಮೊಗಮಂ ೬೮

ಹಾಗೆ ಪಡೆಯಲು ಸಾಧ್ಯವಾಗದ ಅಪೂರ್ವವಾದ ದರ್ಶನವನ್ನೂ ಸದ್ಧರ್ಮವನ್ನೂ ದೊಡ್ಡ ಪುಣ್ಯಫಲವಿಲ್ಲದೆ ಪಡೆಯಲು ಸಾಧ್ಯವಲ್ಲ. ಅಂಥ ದರ್ಶನವನ್ನೂ ಶ್ರೇಷ್ಠ ಧರ್ಮವನ್ನೂ ಉದಾಸೀನ ಮಾಡಿ ಬಿಟ್ಟು, ಸಂಸಾರದ ನಶ್ವರವಾದ ಐಶ್ವರ್ಯಕ್ಕೂ ಸಾರವಿಲ್ಲದ ಸಂಪತ್ತಿಗೂ ಆಸೆಪಟ್ಟು ಹಾದರದ ಗಂಡಸನ್ನು ನಂಬಿ ಮನೆಯ ಗಂಡನನ್ನು ಬಿಡುವ ಹಾಗೆ, ಗರತಿಯಾದ ಹೆಂಡತಿಯನ್ನು ಮೆಚ್ಚದೆ ನಾಡಾಡಿಯಾದ ಸೂಳೆಯನ್ನು ಮೆಚ್ಚುವ ಹಾಗೆ, ಮೂರು ದಿನಗಳ ನಾಟಕಕ್ಕೋಸ್ಕರ ಗಡ್ಡ, ಮೀಸೆ, ತಲೆಯನ್ನು ಬೋಳಿಸಿಕೊಳ್ಳುವ ಹಾಗೆ, ಎದುರಿನಲ್ಲಿರುವ ಕೆರೆಯನ್ನು ಸೇರಲಾರದೆ ಸೋಮಾರಿತನ ಪಟ್ಟು ಕೆಸರು ನೀರನ್ನು ಕುಡಿಯುವ ಹಾಗೆ, ಸ್ವರ್ಗಮೋಕ್ಷಗಳಿಂದ ಲಭಿಸುವ ಅನಂತವಾದ ಸುಖವನ್ನು ನೀರೊಳಗೆ ಅದ್ದಿ ನರಕಗತಿ ತಿರ್ಯಕ್‌ಗತಿಗಳಲ್ಲಿ ಒಂದೇ ಸಮನನಾಗಿ ಅಲೆಯುವ ಕೆಲಸವನ್ನು ಆರಿಸಿಕೊಳ್ಳುವುದಾದರೆ ನೀವೇ ಬಲ್ಲಿರಿ. ನಿಮಗೆ, ಸೂರ್ಯನಿಗೆ ದೀಪವನ್ನು ತೋರಿಸಿದರೆನ್ನುವಂತೆ, ಹೊಳೆಗೆ ನೀರು ಹೊತ್ತರೆನ್ನುವಂತೆ, ನನ್ನಂಥ ದಡ್ಡ ಬದ್ಧಿಯವರು ಬುದ್ಧಿ ಹೇಳುವುದು ಯೋಗ್ಯವಾಗದು. ಗಂಡನ ಇದಿರಿನಲ್ಲಿ ಹೆಂಡತಿ ಮಾತನಾಡಕೂಡದು. ಇನ್ನು ಎಲ್ಲವನ್ನೂ ಮೀರಿ ಮಗಳನ್ನು ಅರಸನಿಗೆ ಕೊಟ್ಟದಾದರೆ, ನಮಗೆ ಬಸದಿಯೇ ಶರಣು, ಎಂದು ಧನಶ್ರೀ ಮಾತನಾಡಿ ನಿಲ್ಲಿಸಿದಳು. ೬೭. ಆ ಕಮಲ ಮುಖಿಯು, ಅರ್ಹತ್ಪರಮೇಶ್ವರ ಪಾದಕಮಲ ಭ್ರಮರಿಯ, ಮಾತು ಸ್ಪಷ್ಟ. ಅದರಲ್ಲಿ ಸಂದೇಹವೇ ಇಲ್ಲ" ಎಂದು ಅವಳ ಮನೋಭಾವವನ್ನು ವಿಶೇಷವಾಗಿ ಮೆಚ್ಚಿ ಅವಳ

ಆದರದಿಂದಂ ಹೃದಯಾ
ಹ್ಲಾದದಿನಟ್ಟಿರ್ತುನೋಡಿ ದರ್ಶನದೊಳ್ಮು
ನ್ನಾದಿಯ ಸೀತೆಗೆ ರಂಭೆಗೆ
ಮೇದಿನಿಯೊಳಗೀಕೆ ನೋಡೆ ಪಾಸಟಿಯಪ್ಪಳ್ ೯೯

ಸಿರಿಯೇವುದೊ ಧನಮೇವುದೊ
ಪಿರಿದಪ್ಪೈಶ್ವರ್ಯಮೇವುದವನೀತಳದೊಳ್
ದರುಶನವಿಲ್ಲದ ಪೆಂಡತಿ
ದೊರೆಕೊಂಡ ನರಂಗೆ ರಾಜ್ಯಮೇವುದೊ ಧರೆಯೊಳ್ ೭೦

ದರುಶನವಿಲ್ಲದ ಪೆಂಡಿರ
ವರಭೋಗಂ ನರಕಗತಿಯ ಪೆರ್ಬಟ್ಟೆ ಮಹಾ
ದುರಿತದ ನೆಲೆ ದುರ್ಗುಣದಾ
ಗರಮುದದಿಂದಡಸಿ ಪೊಯ್ವ ಪೆರ್ಬುಲಿಯ ನಖಂ ೭೧

ಒದವಿದ ಧರ್ಮಬುದ್ಧಿ ತನಗಿಲ್ಲದ ಗಂಡನ ಮಾತನೊಲ್ದು ಕೇ
ಳದ ಜಿನಪಾದಮಂ ನೆನೆದು ಪೂಜಿಸಿ ನೋಡುವ ಚಿತ್ತವೃತ್ತಿಯಿ
ಲ್ಲದ ಮುನಿಗನ್ನಮಂ ಕುಡುವುದಾರತೆಯಿಲ್ಲದ ನಿರ್ಮಳಿಕ್ಕೆಯಿ
ಲ್ಲದ ಮುನಿಭಕ್ತಿಯಿಲ್ಲದ ಕುಲಾಂಗನೆಯೇಂ ಸತಿಯೆಂಬ ಲೆಕ್ಕಮೇ ೭೨

ಮುಖವನ್ನು ನೋಡಿದನಂ. ೬೮. ಗುಣಪಾಲಸೆಟ್ಟಿ ಧನಶ್ರೀಯನ್ನು ಆದರದಿಂದಲೂ ಹೃದಯಾನಂದದಿಂದಲೂ ಪ್ರೀತಿಸಿ ನೋಡಿ ದರ್ಶನದೊಳಗೆ ಈಕೆಯು ಆದಿಕಾಲದ ಸೀತೆಗೆ, ರಂಭೆಗೆ, (ಜೈನಪುರಾಣದ ರಂಭೆ) ಸಮಾನಳಾಗಿದ್ದಾಳೆ. ೬೯. ಐಶ್ವರ್ಯದಿಂದೇನು? ಹಣದಿಂದ ಏನು ಪ್ರಯೋಜನ? ಲೋಕದಲ್ಲಿ ದರ್ಶನವಿಲ್ಲದ ಹೆಂಡತಿ ಲಭಿಸಿದರೆ ಮಾನವನಿಗೆ ಲೋಕದ ರಾಜ್ಯವೇ ದೊರೆತರೂ ಏನು ಫಲ? ೭೦. ದರ್ಶನವಿಲ್ಲದ ಹೆಂಡಿರ ಶ್ರೇಷ್ಠವಾದ ಭೋಗವು ನರಕಗತಿಯ ದೊಡ್ಡ ದಾರಿ. ಅದು ಮಹಾಪಾತಕದ ನೆಲೆ, ದುರ್ಗುಣದ ಆಶ್ರಯ. ಅದು ಹಿಡಿದು ಹೊಡೆಯುವ ಹೆಬ್ಬುಲಿಯ ಉಗುರು. (ಪಂಜ), ೭೧. ಹೆಚ್ಚಾದ ಧರ್ಮಬುದ್ಧಿ ತನಗೆ ಇಲ್ಲದೆ, ಗಂಡನ ಮಾತನ್ನು ಪ್ರೀತಿಯಿಂದ ಕೇಳದೆ, ಜಿನಪಾದಗಳನ್ನು ಸ್ಮರಿಸದೆ, ಜಿನಪಾದಗಳನ್ನು ಪೂಜಿಮಾಡದೆ, ಪೂಜೆಯನ್ನು ನೋಡುವ ಇಚ್ಛೆಯಿಲ್ಲದೆ, ಮುನಿಗಳಿಗೆ ಅನ್ನವನ್ನು ಕೊಡುವ ಉದಾರ ಬುದ್ಧಿಯಿಲ್ಲದೆ, ನಿರ್ಮಳತನವಿಲ್ಲದೆ, ಮುನಿಭಕ್ತಿಯಿಲ್ಲದೆ, ಇರುವ ಕುಲಾಂಗನೆಯು ಸತಿಯೆಂಬ ಲೆಕ್ಕಕ್ಕೆ ಸಲ್ಲುವಳೆ? ೭೨. ಎಲ್ಲರಿಗೂ ತಿಳಿದಂತೆ ಸಚ್ಚರಿತ್ರವಿಲ್ಲದ, ನಿರ್ಮಲವಾದ ಜೈನಭಕ್ತಿಯಿಲ್ಲದ, ಗಂಡನಿಗೆ

ವಿದಿತಮೆನಿಪ್ಪ ಸಚ್ಚರಿತವಿಲ್ಲದ ನಿರ್ಮಳ ಜೈನಭಕ್ತಿಯಿ
ಲ್ಲದ ಪತಿಗಂಜಿ ಬೆರ್ಚ ಬೆಸಕೆಯ್ಯದ ದಾನದೊಳರ್ತಿ ತಿಣ್ಣಮಿಂ
ಲ್ಲದ ಪತಿಯೆಂದುದಂ ಪದೆದು ಕೇಳದ ಪಾಪಿಗಳಪ್ಪವರ್ಗೆ ಬೆ
ಚ್ಚದ ಪತಿಯರ್ಥಮಂ ಕಳುವ ಪೆಂಡತಿಯುಂ ಸತಿಯಾಗಿ ಸಲ್ವಳೇ ೭೩

ಗದ್ಯ॥ ಎಂದು ಕುಲಾಂಗನೆಯೊಳಾದ ವಿಪರೀತಭಾವನೆಯಂ ಭಾವಿಸಿ ನೋಡಿ ದರ್ಶನಮುಂ ಧರ್ಮಬುದ್ಧಿಯುಮಿಲ್ಲದ ಪೆಂಡತಿಗಳಿಪಿ ಮೋಹದಿಂದಿರ್ದವಂ ಪಱಿದ ಪಱಿಗೋಲನೇಱಲಾ ಪಱಿಗೋಲುಂ ತಾನುಂ ತೊಱೆಯೊಳದ್ದು ಸಾಯುವಂತೆ ಪೆಂಡತಿಯುಂ ತಾನುಮೊಡನೆ ನರಕಕ್ಕಿೞಿದು ದುಃಖಮಂ ಪೊರ್ದುಗುಂ; ದರ್ಶನಶುದ್ಧಿಯುಂ ಸದ್ಧರ್ಮಸಮೇತೆಯುಮಪ್ಪ ಪೆಂಡತಿಯಂ ನಚ್ಚಿ ಕೂರ್ತು ಕೈಕೊಂಡಾತಂ ಬಲ್ಪೆತ್ತ ಮನೇಱಿದವನೆಂತು ಸಮುದ್ರದೊಳಾೞದ ಸುಖದಿಂ ಸಮುದ್ರದ ತಡಿಯನೆಯ್ದುಗುಮಂತೆ ಪೆಂಡಿರುಂ ತಾನುಂ ಸ್ವರ್ಗಮೋಕ್ಷಮನೆಯ್ದಿ ಪಿರಿದಪ್ಪ ಸುಖಮನೆಯ್ದುವರದಱಿಂ ೭೪

ಈ ವನಿತೆಯನಮಳಾಂಗಿಯ
ನೀ ವನಿತಾಜನ ವಿನೂತ ರತ್ನಿಯನಖಿಳೋ
ರ್ವೀವಳಯಸ್ತುತೆಯಂ ಪಡೆ
ದೀ ವಿಭವಮಿದೆನಗೆ ಪುಣ್ಯದಿಂ ಸಮನಿಸಿತೋ ೭೫

ಅಂಜಿಕೊಂಡು ಸೇವೆಮಾಡದ, ದಾನದಲ್ಲಿ ಹೆಚ್ಚಿನ ಸಂಭ್ರಮವಿಲ್ಲದ, ಗಂಡ ಹೇಳಿದುದನ್ನು ಆಸೆಯಿಂದ ಕೇಳದ, ಪಾಪಿಗಳಾದವರಿಗೆ ಭಯಪಡದ, ಗಂಡನ ದ್ರವ್ಯವನ್ನು ಕದಿಯುವ, ಹೆಂಡತಿಯೂ ಸತಿಯಾಗಿ ಸಲ್ಲುತ್ತಾಳೆಯೆ? ೭೩. ಹೀಗೆ ಕುಲಾಂಗನೆಯಲ್ಲಿ ಉಂಟಾದ ವಿಪರೀತ ಭಾವನೆಯನ್ನು ಯೋಚಿಸಿ ನೋಡಿ, ದರ್ಶನವೂ ಧರ್ಮಬುದ್ಧಿಯೂ ಇಲ್ಲದ ಹೆಂಡತಿಗೆ ಆಸೆಪಟ್ಟು ಮೋಹಮಗ್ನನಾಗಿರುವವನು ಹರಿದ ಹರಿಗೋಲನ್ನೇರಲು ಆ ಹರಿಗೋಲೂ ತಾನೂ ಹೊಳೆಯಲ್ಲಿ ಮುಳುಗಿ ಸಾಯುವಹಾಗೆ ಹೆಂಡತಿಯೂ ತಾನೂ ಒಟ್ಟಿಗೆ ನರಕಕ್ಕೆ ಇಳಿದು, ದುಃಖವನ್ನು ಹೊಂದುವನು, ದರ್ಶನಶುದ್ಧಿಯೂ ಸದ್ಧರ್ಮದಿಂದ ಕೂಡಿದವಳೂ ಆದ ಹೆಂಡತಿಯನ್ನು ನಂಬಿ ಪ್ರೀತಿಸಿ ಕೈಕೊಂಡವನು ದೃಢವಾದ ಹಡಗನ್ನು ಹತ್ತಿದವನು ಹೇಗೆ ಸಮುದ್ರದಲ್ಲಿ ಮುಳುಗದೆ ಸುಖವಾಗಿ ಸಮುದ್ರದ ತೀರವನ್ನು ಸೇರುವನೋ ಹಾಗೆಯೇ ಹೆಂಡಿರೂ ತಾವೂ ಸ್ವರ್ಗ, ಮೋಕ್ಷವನ್ನು ಹೊಂದಿ ಹೆಚ್ಚಾದ ಸುಖವನ್ನು ಹೊಂದುವರು. ಆದ್ದರಿಂದ ಈ ಅಮಲಾಂಗಿಯಾದ ಹೆಂಡತಿಯನ್ನು ಈ ವನಿತಾಜನ ವಿನೂತನ ರತ್ನಳನ್ನು, ಸಮಸ್ತ ಉರ್ವೀವಳಯದ ಸ್ತೋತ್ರಪಾತ್ರಳನ್ನು ಹೊಂದಿದ ಈ ವೈಭವವು ನನಗೆ ಯಾವ ಪುಣ್ಯಬಲದಿಂದ ಸಂಪ್ರಾಪ್ತವಾಯಿತೋ. ೭೪–೭೫. ಮನಸ್ಸಿನಲ್ಲಿ ಆಸೆಪಟ್ಟು ಮಗಳನ್ನು ರಾಜನಿಗೆ ಕೊಟ್ಟು ರಾಜ್ಯ

ಮನದೊಳ್ ರಾಗಿಸಿ ಕೂಸಂ
ಜನನಾಥಂಗಿತ್ತು ಧರೆಯನಾಳ್ವಂ ಸುಖಮಂ
ಬಿನಿತಂ ಬಗೆಯದೆ ಪೇಲ
ಪ್ಪನಿತಂ ಮುಕ್ತಿಯನೆ ಬಗೆದಳಿಂತಿದು ಚೋದ್ಯಂ ೭೬

ಧನಮಂ ಗಳಿಸುವ ಗಂಡನ
ಧನಮಂ ಕಳ್ದೊಡೆವಿ ತಮ್ಮವರ್ಗೀವ ಗುಣಂ
ವನಿತೆಯರ್ಗೆ ಸಹಜಮಿಂತೀ
ವನಿತೆಗಮಾ ಕಷ್ಟೆಯರ್ಗಮೇನಂತರಮೋ ೭೭

ಮುಳಿಸಿಕಿಸುವ ಧರ್ಮಮೆಂದೊಡೆ
ಗುಳುಗುಳಿಸುವ ಗಂಡನಿದಿರೊಳೆದ್ದಾಡುವ ಬೇ
ಳ್ವಳಿಸುಗಳಂ ಕಿಸುಗುಳಿಯರ
ನಳಿವೊಡೆ ಪೋಲಿಪುದೆ ಧರ್ಮರತ್ನಾಕರೆಯಂ ೭೮

ಗದ್ಯ॥ ಎಂದು ಮನದೊಳ್ ಪೊಗಟ್ದು ಧನಶ್ರೀಯ ಸಮ್ಯಕ್ತ್ವದೊಳಾದ ನಂಬುಗೆಗೆ ಕರಂ ಮೆಚ್ಚಿ ಸುತೋಷಂಬಟ್ಟು ಮುಯ್ಪಂ ನೋಡಿ ಕರ್ಮರಾಜನೊಡ್ಡನಿಱಿಯಲ್ ನೆರಂಬಡೆದೆ ನೆಂದು ಪೆರ್ಚಿ ಸುಬಂಧುಶ್ರೀಯ ಸಮ್ಯಕ್ತ್ವಮುಮಂ ಜಿನಭಕ್ತಿಯುಮಂ ಆರಯಲೆಂದು ಮಗಳಂ ಕರೆದು ತೊಡೆಯನೇಱಿಸಿಕೊಂಡು ಕದಪಂ ಕರ್ಚಿ ತಂಬುಲಮನಿಕ್ಕಿ ಮೊಗಮಂ ನೋಡಿ ಕಿಱಿದು ಬೇಗಂ ಮಗಳ ಮುದ್ದುನುಡಿಗಳಂ ಕೇಳ್ದು ಹರ್ಷಚಿತ್ತನಾಗಿ ಗುಣಪಾಲಸೆಟ್ಟಿ ಮೆಲ್ಲನಿಂತೆಂದಂ ೭೯

ವನ್ನು ಸುಖವಾಗಿ ಆಳೋಣವೆಂದು ಯೋಚಿಸದೆ ಮುಂದೆ ಆಗುವಂಥ ಮುಕ್ತಿಯನ್ನೇ ಕುರಿತು ಯೋಚಿಸಿದಳು. ಇದು ಆಶ್ಚರ್ಯವೆ? ೭೬. ಹಣವನ್ನು ಸಂಪಾದಿಸುವ ಗಂಡನ ಧನವನ್ನು ಕದ್ದು ಬಚ್ಚಿಟ್ಟುಕೊಂಡು ತಮ್ಮವರಿಗೆ ಕೊಡುವ ಗುಣವು ಹೆಂಗಸರಿಗೆ ಹುಟ್ಟುಗುಣ. ಈ ಹೆಂಗಸಿಗೂ ಆ ನೀಚೆಯರಿಗೂ ಎಷ್ಟು ಭೇದ? ೭೭. ಧರ್ಮ ವೆಂದರೆ ಮೂತಿ ಸೊಟ್ಟ ಮಾಡಿ ಗೊಣಗುಟ್ಟುವ, ಗಂಡನ ಇದಿರಿನಲ್ಲಿಯೇ ಎದ್ದಾಡುವ ಅಲ್ಪರನ್ನೂ ಈ ಧರ್ಮರತ್ನಾಕರೆಯನ್ನೂ ಹೋಲಿಸುವುದೇ? (ಬೇಳ್ವರಸು?) ೭೮. ಹೀಗೆ ಮನಸ್ಸಿನಲ್ಲಿಯೇ ಹೆಂಡತಿಯನ್ನು ಮೆಚ್ಚಿ ಹೊಗಳಿ, ಧನಶ್ರೀಯ ಸಮ್ಯಕ್ತ್ವವನ್ನು ಕುರಿತ ನಂಬಿಕೆಗೆ ವಿಶೇಷವಾಗಿ ಮೆಚ್ಚಿ ಸಂತೋಷ ಪಟ್ಟು ಭುಜಗಳನ್ನು ನೋಡಿಕೊಂಡು ಕರ್ಮವೆಂಬ ರಾಜನ ಸೈನ್ಯದ ವ್ಯೂಹವನ್ನು ಭೇದಿಸಲು ಸಹಾಯವನ್ನು ಪಡೆದೆನು ಎಂದು ಉಬ್ಬಿ, ಸುಬಂಧುಶ್ರೀಯ ಸಮ್ಯಕ್ತ್ವವನ್ನೂ ಜಿನಭಕ್ತಿಯನ್ನು ನೋಡಬೇಕೆಂದು ಬಗೆದು ಮಗಳನ್ನುಕರೆದು ತೊಡೆಯಮೇಲೆ ಕೂಡಿಸಿಕೊಂಡು ಕೆನ್ನೆಯನ್ನು ಕಚ್ಚಿ ತಂಬುಲ ವನ್ನು ಕೊಟ್ಟು ಮುಖ ನೋಡಿ ಸ್ವಲ್ಪ ಹೊತ್ತು ಮಗಳ ಮುದ್ದು ಮಾತುಗಳನ್ನು ಕೇಳಿ ಮನಸ್ಸಿನಲ್ಲಿ ಹರ್ಷಪಟ್ಟು ಗುಣಪಾಲಸೆಟ್ಟಿಯು ಮೆಲ್ಲಗೆ ಹೀಗೆ ಹೇಳಿದನು : ೭೯.

ನಿನ್ನಂತು ಮಗಳೆ ಪುಣ್ಯ
ಕಿನ್ನೋಂತವರಾರೊ ಮಾಳವೇಶ್ವರನದಟಿಂ
ಸನ್ನುತ ಗುಣಗಣನಿಳಯಂ
ನಿನ್ನಂ ತನಗರಸಿ ಮಾಡಿದಪ್ಪಂ ಪದಪಿಂ ೭೯

ನೀನರಸಿಯಾದೆಯಪ್ಪೊಡೆ
ಮಾನವಪತಿ ನನಗೆ ಮುಖ್ಯಪದಮಂ ಕುಡುಗುಂ
ಶ್ರೀನಿಳಯೆಯಾಗಿ ಸುಖದಿಂ
ನೀನಿರ್ಪೆ ರಾಜ್ಯಲೀಲೆಯಿಂ ಕ್ರೀಡಿಸುತಂ ೮೦

ನೀಂ ಪಟ್ಟದರಸಿಯಾದೊಡೆ
ಪೆಂಪಿಂದಂ ನಿನಗೆ ಪುಟ್ಟಿದಾತಂಗಿಳೆ ಸಾ
ರ್ಗುಂ ಪಡಿಮಾತೊಯ್ಯನೆ ರಾ
ಜ್ಯಂ ಪೆಱತೇನಕ್ಕ ನಮಗೆ ಸಾರ್ಗುಂ ಕ್ರಮದಿಂ ೮೧

ಪರದಂಗೆ ಪುಟ್ಟ ನಿನ್ನಂ
ತರಸುತನಕ್ಕಂ ಮಹಾಭೂತಿಗಮುರ್ವೀ
ಧರನ ಕಡುಗೂರ್ಮೆಗಂ ವಿ
ಸ್ತರದಿಂ ರಾಜ್ಯಾಸ್ಪದಕ್ಕಮಿಂ ನೋಂತವರಾರ್ ೮೨

"ಮಗಳೆ, ನಿನ್ನಹಾಗೆ ಪುಣ್ಯ ಫಲವನ್ನು ಪಡೆದು ಬಂದವರು ಯಾರಿದ್ದಾರೆ ? ಮಾಳವೇಶ್ವರನು ಶೂರಶ್ರೇಷ್ಠ. ಗುಣಸಮೂಹಕ್ಕೆ ಮನೆಯಂತೆ ಆಶ್ರಯನಾದವನು. ಅವನು ನಿನ್ನನ್ನು ತನಗೆ ಆಸೆಯಿಂದ ಅರಸಿಯನ್ನಾಗಿ ಮಾಡಿಕೊಳ್ಳಲಿದ್ದಾನೆ. ೭೯. ನೀನು ರಾಣಿಯಾದರೆ ನರಪತಿಯು ನಿನಗೆ ಮುಖ್ಯ ಪದವಿಯನ್ನು ಕೊಡುತ್ತಾನೆ. ನೀನು ಲಕ್ಷ್ಮೀನಿಲಯಳಾಗಿ ಸುಖವಾಗಿರುವೆ; ರಾಜ್ಯಲೀಲೆಯಿಂದ ಕ್ರೀಡಿಸುತ್ತೀಯೆ. ೮೦. ನೀನು ಪಟ್ಟದ ರಾಣಿಯಾದರೆ ನಿನಗೆ ಹುಟ್ಟಿದ ಮಗನಿಗೆ ರಾಜ್ಯವು ಸೇರುತ್ತದೆ. ಇನ್ನು ಬೇರೆ ಮಾತೇನು, ಕ್ರಮವಾಗಿ ರಾಜ್ಯವು ನಮ್ಮದೇ ಆಗುತ್ತದೆ ೮೧. ವರ್ತಕನಿಗೆ ಹುಟ್ಟಿ ನಿನ್ನ ಹಾಗೆ ಅರಸುತನಕ್ಕೂ ಮಹಾವೈಭವಕ್ಕೂ ರಾಜನ ಹೆಚ್ಚಾದ ಪ್ರೇಮಕ್ಕೂ ವಿಸ್ತಾರವಾದ ರಾಜ್ಯಕ್ಕೂ ಒಡತಿಯಾಗುವಂಥ ಪುಣ್ಯಕ್ಕೆ ಪಾತ್ರರಾದವರು ಯಾರು ? ೮೨. ಸೆಟ್ಟಿಯು

ಗದ್ಯ॥ ಎಂಬುದುಂ ಸುಬಂಧುಶ್ರೀ ತಂದೆಯ ಮಾತಿಂಗೆ ನಕ್ಕು ನಿಮ್ಮಂತಪ್ಪ ಮಹಾಪುರುಷ ರಿಂತಪ್ಪ ನಿರ್ಬುದ್ಧಿತನಮಂ ಮಾಡಲಾಗದೀ ಶ್ರೀಗೆಳಿಗಿ ಧರ್ಮಮಂ ಬಿಡುವುದಾವ ಬುದ್ಧಿ, ಕಂಚಂ ಬಿಟ್ಟೋಡಂ ಪಿಡಿವ, ತಾಯಂ ಬಿಟ್ಟು ರಕ್ಕಸಿಯಂ ಪೊರ್ದುವ ಭೂಪರಂ ಬಿಟ್ಟು ಪೊಲೆಯರಂ ಕೆಳೆಗೊಳ್ವ ನಂಟರಂ ಬಿಟ್ಟು ಪಗೆಯಂಕೂಡುವ, ಕುದುರೆಯನೊಲ್ಲದೆ ನಾಯನೇಱುವ, ಪಟ್ಟದಾನೆಯಂ ಕೊಟ್ಟು ಕೋಡಗಮಂ ಕೊಳ್ವ, ಪಾಲನೊಲ್ಲದೆ ನಂಜಂ ಕುಡಿವ' ಸಕ್ಕರೆಯನೊಲ್ಲದೆ ಮಳಲಂಮೆಲ್ವ, ಕಂಕಣಮನೊಲ್ಲದೆ ಬಳೆಯಂ ತುಡುವ, ಧಾನ್ಯಮಂಕೊಟ್ಟು ಪೊಳ್ಳಂಕೊಳ್ವ, ನೆಲೆವಾೞಂ ಬಿಟ್ಟು ತಿರಿದುಂಬ, ಮರುಳಂ ಪೋಲ್ಕುಂ, ಬೆಕ್ಕುಪಾಲಂ ಕಾಣ್ಬುದಲ್ಲದೆ ಮೇಗೆ ಬಂದಡಸುವ ಬಡಿಗೆಯಂ ಕಾಣದಂತೆ ಮೂರ್ಖರಪ್ಪರುಮಿಲ್ಲಿಯ ಸುಖ ಮನೆ ಶಾಶ್ವತಮಾಗಿ ಕಾಣ್ಬರಲ್ಲದೆ ಮೇಗಣ ನರಕದೊಳಾದ ಮಹಾದುಃಖಮನಱಿಯರೆ ನಗಿಂತಪ್ಪ ಮಾಯಾವಚನಂಗಳಿಂ ಮಕ್ಕಳ ಕೈಯ ಮಾಣಿಕಮಂ ಗುಗ್ಗುರಿಯಂ ತೋಱಿ ನಂಬಿಸಿ ಕೊಳ್ವಂತೆ ಸುದರ್ಶನಮಂ ಬಿಡಿಸಿ ಕಿಡುವ ಕಜ್ಜಮಂ ಪೇೞ್ವ ಈ ಶ್ರೀಯುಮನಲ್ಪ ಸುಖಮುಮಂ ತೋಱಿ ಟಕ್ಕಿಕ್ಕಿ ಮಾತಾಡಬೇಡ ೮೩

ಹೇಳಿದ ಮಾತನ್ನು ಕೇಳಿ ಸುಬಂಧುಶ್ರೀಗೆ ನಗು ಬಂತು. ಅವಳು ತಂದೆಯನ್ನು ಕುರಿತು "ನಿಮ್ಮಂಥ ಮಹಾಪುರುಷರು ಇಂಥ ಬುದ್ಧಿಹೀನತೆಯನ್ನು ತೋರಿದರೆ ಹೇಗೆ? ಈ ಸಿರಿಗೆ ಆಸೆಪಟ್ಟು ಧರ್ಮವನ್ನು ಬಿಡುವುದು ಯಾವ ಬುದ್ಧಿವಂತಿಕೆ? ಕಂಚನ್ನು ಬಿಟ್ಟು ಮಣ್ಣಿನ ಓಡನ್ನು ಹಿಡಿಯುವುದೆ ? ತಾಯಿಯನ್ನು ಬಿಟ್ಟು ರಕ್ಕಸಿಯನ್ನು ಆಶ್ರಯಿಸುವುದೆ ? ಭೂಪಾಲಕರನ್ನು ಬಿಟ್ಟು ಹೊಲೆಯರ ಗೆಳೆತನ ಮಾಡುವುದೆ? ನೆಂಟರನ್ನು ಬಿಟ್ಟು ಶತ್ರುಗಳನ್ನು ಸೇರುವುದೆ ? ಕುದುರೆಯನ್ನು ಮೆಚ್ಚದೆ ನಾಯಿಯನ್ನು ಏರುವುದೆ ? ಪಟ್ಟದಾನೆಯನ್ನು ಕೊಟ್ಟು ಕೋತಿಯನ್ನು ಕೊಳ್ಳುವುದೆ ? ಇದು, ಹಾಲನ್ನು ಮೆಚ್ಚದೆ ವಿಷವನ್ನು ಕುಡಿಯುವ, ಸಕ್ಕರೆಯನ್ನು ಒಲ್ಲದೆ ಮರಳನ್ನು ಮೆಲ್ಲುವ, ಚಿನ್ನದ ಕಂಕಣವನ್ನು ಬಿಟ್ಟು ಗಾಜಿನ ಬಳೆಯನ್ನು ತೊಡುವ, ಧಾನ್ಯವನ್ನು ಕೊಟ್ಟು ಜೊಳ್ಳನ್ನು ಕೊಳ್ಳುವ, ಸ್ಥಿರವಾದ ಬಾಳುವೆಯನ್ನು ಬಿಟ್ಟು ತಿರುಪೆಬೇಡಿ ಉಣ್ಣುವ ದಡ್ಡತನವನ್ನು ಹೋಲುತ್ತದೆ. ಬೆಕ್ಕು ಹಾಲನ್ನು ಕಾಣುವುದೇ ಹೊರತು ಮೇಲೆ ಬಂದು ಒದಗುವ ದೊಣ್ಣೆಯನ್ನು ಕಾಣದು. ಹಾಗೆಯೇ ಮೇಲೆ ಬಂದು ಒದಗುವ ನರಕವನ್ನೂ ಅಲ್ಲಿನ ಮಹಾ ದುಃಖವನ್ನೂ ತಿಳಿಯದೆ ಮೂರ್ಖರು ಇಲ್ಲಿಯ ಸುಖವನ್ನೇ ಶಾಶ್ವತವೆಂದು ತಿಳಿಯುತ್ತಾರೆ. ನನಗೆ ಇಂಥ ಮಾಯೆಯ ಮಾತುಗಳಿಂದ ಮಕ್ಕಳ ಕೈಲಿರುವ ಮಾಣಿಕ್ಯವನ್ನು ಗುಗ್ಗುರಿಯನ್ನು ತೋರಿಸಿ ನಂಬಿಸಿ ಕಸಿದುಕೊಳ್ಳುವಂತೆ ಒಳ್ಳೆಯ ಜೈನದರ್ಶನವನ್ನು ಬಿಡಿಸಿ ಕೆಡುವ ಕೆಲಸವನ್ನು ಹೇಳುವ, ಈ ಸಿರಿಯನ್ನೂ ಅಲ್ಪ ಸುಖವನ್ನೂ ತೋರಿಸಿ ಠಕ್ಕಿನ ಮಾತನ್ನಾಡಬೇಡ ೮೩. ಜಿನಧರ್ಮವು ಪ್ರಾಣೆ

ಜಿನಧರ್ಮಂ ಪ್ರಾಣಿಗಾರ್ಮಂ ತ್ರಿಭುವನತಿಲಕಂ ಸರ್ವಲೋಕೈಕ ಪೂಜ್ಯಂ
ಮನುಜೇಂದ್ರಶ್ರೀವಿಲಾಸಂ ವಿಬುಧಪತಿನುತ ಶ್ರೀವಧೂಕರ್ಣಪೂರಂ
ಘನಮುಕ್ತಿಶ್ರೀರಮಾಂಗೀವಿಮಳಮುಖ ಲಸದ್ದರ್ಪಣಂ ಖೇಚರಶ್ರೀ
ವನಿತಾಲಂಕಾರಮಾದ್ಯತ್ಸಕಲ ಸುಖಮುಮಂ ಬೇಗಮೀವಿಂದ್ರಭೂಜಂ ೮೪

ಆಸದ್ಧರ್ಮಂ ಪುಣ್ಯನಿ
ವಾಸಿಗೆ ದೊರೆಕೊಳ್ಗುಮಘಸಮೇತಂಗನೃತಾ
ವಾಸಂಗೆ ಮಿಕ್ಕ ಪುರುಷಾ
ಭಾಸಂಗಸುಖಾವಹಂಗೆ ದೊರೆಕೊಂಡಪುದೇ ೮೫

ವಿಮಳಮಿದೆನಿಸುವ ಜೈನಾ
ಗಮಮಂ ನೀಮಱಿದು ಮಱೆಯದೆಗ್ಗರ ತೆಱದಿಂ
ರಮಣೀಯಮೆಂದು ರಾಜ್ಯ
ಕ್ರಮಕ್ಕೆ ಬೆಚ್ಚಿಲ್ಲದೆಳಸಲಪ್ಪುದೆ ಮನದೊಳ್ ೮೬

ಗದ್ಯ॥ ಅಂತಲ್ಲದೊಡಂ ಕರ್ಮರಾಜನೆಂಬ ವ್ಯಾಧರಾಜಂ ಕೋಪಮೆಂಬ ತೀವ್ರಾಯುಧಮನುರ್ಚಿಕೊಂಡು ಮಿಥ್ಯಾತ್ವರುಚಿಯೆಂಬ ಕುದುರೆಯನೇಱಿ ಮಾಯೆಯೆಂಬಡ್ಡಣಮಂ ಪಿಡಿದು ಮೋಹಮೆಂಬ ಸುರಗಿಯಂ ಕಟ್ಟಿ ಲೋಭಮೆಂಬ ಸವಂಗಮಂ ತೊಟ್ಟು ಮಾಣದಮಷ್ಟಮದಮೆಂಬ

ಗಳಿಗೆ ಆಶ್ರಯಸ್ಥಾನ. ಅದು ಮೂರು ಲೋಕಗಳಿಗೂ ತಿಲಕದಂತಹುದು, ಸಮಸ್ತ ಲೋಕಗಳಿಗೂ ಪೂಜ್ಯ. ರಾಜೇಂದ್ರರ ಐಶ್ವರ್ಯವಿಲಾಸ, ದೇವರಾಜನ ಸ್ತೋತ್ರಪಾತ್ರಳಾದ ಶ್ರೀವಧುವಿನ ಕಿವಿಯ ಓಲೆ, ಶ್ರೇಷ್ಠಳಾದ ಮೋಕ್ಷ ಲಕ್ಷ್ಮಿಗೆ ಇದು ಶುದ್ಧ ಪ್ರಕಾಶದ ಮುಖದರ್ಪಣ. ಖೇಚರಶ್ರೀವನಿತೆಯ ಅಲಂಕಾರ, ಮೋಹಕವಾದ ಸಕಲ ಸುಖಗಳನ್ನೂ ಬೇಗನೆ ಕೊಡುವ ಕಲ್ಪವೃಕ್ಷ, ಜೈನಧರ್ಮ. ೮೪. ಆ ಒಳ್ಳೆಯ ಧರ್ಮ ಪುಣ್ಯಶಾಲಿಗೆ ಲಭಿಸುವುದು. ಪಾಪಸಮೇತನಿಗೆ, ಸುಳ್ಳಿಗೆ ನೆಲೆಯಾಗಿರುವವನಿಗೆ, ಅಲ್ಪ ಸುಖದ ಆವಾಸರಾದವರಿಗೆ, ಪುರುಷಾಭಾಸರಿಗೆ ಅದು ಲಭಿಸುವುದೆ ? ೮೫. ಪರಿಶುದ್ಧವಾದ ಜೈನಾಗಮವನ್ನು ನೀನು ತಿಳಿದೂ ತಿಳಿಯದ ದಡ್ಡರಂತೆ ಭಯವಿಲ್ಲದೆ, ಇದು ರಮ್ಯವೆಂದು ರಾಜ್ಯಸುಖಕ್ಕೆ ಮನಸ್ಸಿನಲ್ಲಿ ಆಸೆ ಪಡಬಹುದೆ ? ೮೬. ಹಾಗಲ್ಲದಿದ್ದರೂ ಕರ್ಮರಾಜನೆಂಬ ಬೇಡನು ಕೋಪವೆಂಬ ಹರಿತವಾದ ಆಯುಧವನ್ನು ಸೆಳೆದುಕೊಂಡು, ಮಿಥ್ಯಾತ್ವದಲ್ಲಿ ಪ್ರೀತಿಯೆಂಬ ಕುದುರೆಯ ಮೇಲೆ ಹತ್ತಿ ಮಾಯೆಯೆಂಬ ಗುರಾಣಿಯನ್ನು ಹಿಡಿದು ಮೋಹವೆಂಬ ಕತ್ತಿಯನ್ನು ಕಟ್ಟಿ ಲೋಭ (ದುರಾಸೆ) ವೆಂಬ ಕವಚವನ್ನು ಧರಿಸಿ ಬಿಡದ ಎಂಟು ಮದಗಳೆಂಬ ಗೊಂಚಲ

ಬುಂಭುಳಮನಿಕ್ಕಿ ರಾಗದ್ವೇಷಮೆಂಬ ಕೀಲಂ ಪಿಡಿದು ತ್ರಿದಂಡಮೆಂಬ ನೋಟಂ ಬೆರಸು ಶಂಕಾದ್ಯಷ್ಟಮಳಮೆಂಬ ಮೇಳದಾಳ್ವೆರಸು ಆರ್ತರೌದ್ರಧ್ಯಾನಮೆಂಬ ಮುಂಗೊಳೆಯದ ನಾಯಕರ್ವೆರಸು ದುರ್ಜನರ ಕೂಟಮೆಂಬ ಪಿಂಗೊಳೆಯದ ವೀರರ್ವೆರಸು ಕುದಾನಪ್ರೀತಿಯೆಂಬ ಪೊಣ್ಮೆಯಾಳ್ವೆರಸು ದುರ್ಬುದ್ಧಿಯೆಂಬ ಪೊಲಂಬಿಗರ್ವೆರಸು ನಿಲ್ಲದೆಲ್ಲಿಯುಂ ಬೆನ್ನಟ್ಟಿತಗುಳ್ದು ಸದ್ದರ್ಶನಾಂತರಾಯಮೆಂಬೇಱುಗಳಿಂ, ಋಷಿದೂಷಣಮೆಂಬ ಬಡಿಗಳಿಂ ಕೆಡೆಯೆ ಮೋದುತ್ತುಂ ಸುತತ್ವ ಭೀತಿಗಳೆಂಬಂಬುಗಳಿಂದಂ ಮೆಯ್ಗಾಣದೆ ಸುಯ್ಯುತ್ತುಂ ಬಳಲ್ದರ ಮೊಗದೊಳ್ ನೀರಂ ತಳಿದು ಬೀಸಿ ಚೇತರಿಸಿದಾಗಳ್ ಮತ್ತಂ ದಂಡಣೆಗಳಂ ಮಾಡುವಂತೆ ಕೋಟಿ ಕೋಟಿಸಾಗರೋಪಮಕಾಲಕ್ಕೊರ್ಮೆ ಹೀನ ರಾಜ್ಯಮುಮನಲ್ಪಶ್ರೀಯುಮನಱಿಸುಖಮುಮಂ ತೋಱಿ ನರಕದೊಳಂ ತಿರಿಕದೊಳಮೆಡೆಯಱಿಯದೆ ನಿಷ್ಕರುಣನಾಗಿ ಮೆಚ್ಚಿದ ಕೊಲೆಗಳಿಂ ಕೊಲ್ವಾತನಂ ಕಂಡು ಬೆಚ್ಚಿ ಶರಣರಪ್ಪರೊರ್ವರುಮಿಲ್ಲದೊಳಱಿ ಪೆಳಱಿ ಬಾಯ್ವಿಟ್ಟೆಂತಾನುಮೆನ್ನಭಾಗ್ಯದಿಂ ಸದ್ಧರ್ಮಸಮೇತನಪ್ಪ ನಿನ್ನಂ ಶರಣ್ಬುಗುವಂತೆ ಪುಟ್ಟಿದೆನ್ನಂ ರಕ್ಷಿಸದೆ ಕರ್ಮರಾಜಂಗೆ ಮಗುಳೆ ಪಿಡಿದೊಪ್ಪಿಸುವುದು ಪಾೞಿಯಲ್ಲದೆಂತುಂ ನಿಮಗೆನ್ನ ಮೇಲೆ ಮುಳಿಸುಳ್ಳೊಡೆ ನಿಮ್ಮ ಮೆಚ್ಚಿದ ದಂಡನೆಯಂ ಮಾಡಿಮೇಗೆಯ್ದುಂ ಮಿಥ್ಯಾದೃಷ್ಟಿಗೆ ಕುಡುವೆಮೆಂಬ ಬಗೆಯಂ ಮಾಣ್ಬುದೆಂದು ಕಣ್ಣ

ನ್ನಿಟ್ಟು ರಾಗ ದ್ವೇಷಗಳ ಕೀಳುಗಳನ್ನು ಹಿಡಿದು ತ್ರಿದಂಡವೆಂಬ ನೋಟದಿಂದ ಕೂಡಿ ಶಂಕೆ ಮೊದಲಾದ ಎಂಟು ಮಲಗಳೆಂಬ ಜತೆಯ ಆಳುಗಳಿಂದ ಕೂಡಿ ದುರ್ಜನರ ಕೂಟವೆಂಬ ಹಿಂದಿನ ಗುಂಪಿನ ವೀರರಿಂದಲೂ ಆರ್ತರೌದ್ರಧ್ಯಾನವೆಂಬ ಮುಂದಿನ ಗುಂಪುಗಳ ನಾಯಕರಿಂದಲೂ ಕೂಡಿ ಕೆಟ್ಟದಾನದ ಪ್ರೀತಿಯೆಂಬ ಪ್ರತಿಜ್ಞಾವೀರರಿಂದ ಕೂಡಿ ದುರ್ಬುದ್ಧಿಯೆಂಬ ದಾರಿಗರೊಡನೆ ಸೇರಿ ನಿಲ್ಲದೆ ಎಲ್ಲ ಕಡೆಗೂ ಬೆನ್ನಟ್ಟಿ ತಾಕಿ, ಸದ್ದರ್ಶನಕ್ಕೆ ವಿಘ್ನವೆಂಬ ಏಟುಗಳಿಂದ, ಋಷಿದೂಷಣವೆನ್ನುವ ದೊಣ್ಣೆಗಳಿಂದ ಬೀಳುವಂತೆ ಹೊಡೆಯುತ್ತ ಸುತತ್ವಭೀತಿಯೆಂಬ ಬಾಣಗಳಿಂದ ಸೋತು ನಿಟ್ಟುಸಿರು ಬಿಡುತ್ತ, ಬಳಲಿದವರ ಮುಖದಲ್ಲಿ ನೀರು ತಟ್ಟಿ, ಬೀಸಿ ಚೇತರಿಸಿಕೊಂಡಾಗ ಮತ್ತೆ ದಂಡನೆಗಳನ್ನು ಮಾಡುತ್ತ ಇರುವಂತೆ ಕೋಟಿ ಕೋಟಿ ಸಾಗರೋಪಮಕಾಲಕ್ಕೆ ಒಂದು ಸಲ ಹೀನರಾಜ್ಯವನ್ನೂ ಅಲ್ಪ ಐಶ್ವರ್ಯವನ್ನೂ, ನೀಚಸುಖವನ್ನೂ ತೋರಿಸಿ ನರಕದಲ್ಲಿಯೂ ತಿರ್ಯಕ್ ಗತಿಯಲ್ಲಿಯೂ ಬಿಡುವಿಲ್ಲದೆ ನಿರ್ದಯನಾಗಿ ಇಷ್ಟಬಂದ ರೀತಿಯಲ್ಲಿ ಕೊಲ್ಲುವವನನ್ನು ಕಂಡು ಬೆಚ್ಚಿ, ರಕ್ಷಕರಾಗುವವರೊಬ್ಬರೂ ಇಲ್ಲದೆ ಅರಚಿ ಕಿರಿಚಿ, ಭಯಪಟ್ಟು ಬಾಯಿಬಿಟ್ಟು ಗೋಳಿಡುತ್ತ ಹೇಗೋ ನನ್ನ ಭಾಗ್ಯವಶದಿಂದ ಸದ್ಧರ್ಮಯಾದ ನಿನ್ನಲ್ಲಿ ಮರೆಹೊಗುವ ಹಾಗೆ ಹುಟ್ಟಿದ ನನ್ನನ್ನು ಕಾಪಾಡದೆ ಕರ್ಮರಾಜನಿಗೆ ಮತ್ತೆ ಹಿಡಿದು ಒಪ್ಪಿಸುವುದು ಧರ್ಮವಲ್ಲ. ಹೇಗೂ ನಿಮಗೆ ನನ್ನ ಮೇಲೆ ಸಿಟ್ಟಿದ್ದರೆ ನೀವು ಮೆಚ್ಚಿದ ದಂಡನೆಯನ್ನು ಮಾಡಿ. ಏನಾದರೂ ಮಿಥ್ಯಾದೃಷ್ಟಿಗೆ ಕೊಡುವೆವೆಂಬ ಯೋಚನೆಯನ್ನು ಬಿಡಿ.” ಎಂದು ಕಣ್ಣೀರು ಹಾಕಿದಳು. ಮಗಳ ಮನಸ್ಸಿನ ನಿರ್ಮಳತೆಗೂ

ನೀರಂ ನೆಗಪುವುದುಂ ಮಗಳ ಮನದ ಸ್ವಚ್ಛತೆಗಂ ಸಮ್ಯಕ್ತ್ವದೊಳಾದ ನಂಬುಗೆಗಂ ಗುಣಪಾಲ
ಸೆಟ್ಟಿ ಮನದೊಳಚ್ಚರ್ಕತ್ತುರ್ ೮೭

ಎನ್ನ ಗುಣಕ್ಕಂ ಬಗೆವಂ
ದೆನ್ನ ವಧೂಟಿಯ ಗುಣಕ್ಕಮೀಕೆಯ ಗುಣಮು
ತ್ಕೃನ್ನತಮೆನಿಸಿದುದಱಿಂ
ದೆನ್ನಂತಾರ್ ಪುಣ್ಯವಂತರವನೀತಳದೊಳ್ ೮೮

ಬದರೀಕಂಟಕರೆಂದೆನಿ
ಸದೆ ಪಂದೆಯ ಯುದ್ಧದಂತೆ ಸದ್ಧರ್ಮಕ್ಕಂ
ಜಿದರಿವರೆನಿಸದೆ ಸಮ್ಯ
ಕ್ತ್ವದೊಳಿಂತಿವರಿರ್ವರಂತೆ ನೇರಿದರೊಳರೇ ೮೯

ದುರಿತಾರಿಯನದಟತೆದೋ
ಸರಿಸದೆ ಮೋಕ್ಷಕ್ಕೆಸಲ್ವ ಜೀವಾದಿಗಮು
ರ್ವರೆಯೊಳ್ ಸುತತ್ವರುಚಿ ತಾಂ
ಸಿರಿಖಂಡದ ಕಂಪಿನಂತೆ ಸಹಜಮೆನಿಕ್ಕುಂ ೯೦

ದುರಿತಯುತನಾಗಿ ಗಮ್ಮನೆ
ನರಕಕ್ಕಿಟಿಯಲ್ಕೆ ಬಗೆವ ಜೀವಾಳಿಗಮು
ರ್ವರೆಯೊಳ್ ಕುತತ್ವರುಚಿ ತಾಂ
ದೊರೆಕೊಳ್ಗುಂ ಪೇಲ್ಗೆ ಪುಟ್ಟುವಂತಸುಗಂಧಂ ೯೧

ಸಮ್ಯಕ್ತ್ವದಲ್ಲಿ ಇದ್ದ ನಂಬಿಕೆಗೂ ಗುಣಪಾಲಸೆಟ್ಟಿ ಮನಸ್ಸಿನಲ್ಲಿಯೇ ಸಂಭ್ರಮಪಟ್ಟನು. ೮೭. ನನ್ನ ಗುಣಕ್ಕಿಂತ, ನನ್ನ ಹೆಂಡತಿಯ ಗುಣಕ್ಕಿಂತ, ಈಕೆಯ ಗುಣವು ಅತಿ ದೊಡ್ಡದು. ಆದ್ದರಿಂದ ನನಗಿಂತ ಈ ಲೋಕದಲ್ಲಿ ಪುಣ್ಯವಂತರು ಯಾರು ? ೮೮. ಬದರೀ ಕಂಟರೆಂದೆನ್ನಿಸಿಕೊಳ್ಳದೆ, ಹೇಡಿಯ ಕಾಳಗದಂತೆ ಸದ್ಧರ್ಮಕ್ಕೆ ಹೆದರಿದವರು ಇವರು, ಎನ್ನಿಸಿಕೊಳ್ಳದೆ. ಸಮ್ಯಕ್ತ್ವದಲ್ಲಿ ಹೀಗೆ ಇವರಿಬ್ಬರಂತೆ ಅತಿಶಯರಾದವರು ಇದ್ದಾರೆಯೆ ? ೮೯. ಪಾಪವೆಂಬ ಶತ್ರುವನ್ನು ಬೆನ್ನಟ್ಟಿ ಪರಿಹರಿಸದೆ. ಅಸಡ್ಡೆ ಇಲ್ಲದೆ ಮೋಕ್ಷಕ್ಕೆ ಸಲ್ಲುವ ಜೀವಾದಿಗಳಿಗೂ ಲೋಕದಲ್ಲಿ ಸುತತ್ವ ಪ್ರಕಾಶವು ಶ್ರೀಗಂಧದ ಪರಿಮಳದಂತೆ ಸಹಜವೆನಿಸುವುದು. ೯೦. ಪಾಪಯುಕ್ತನಾಗಿ ನೆಟ್ಟಗೆ ನರಕಕ್ಕೆ ಇಳಿಯಲು ಯೋಚಿಸುವ ಜೀವಾಳಿಗೂ ಲೋಕದಲ್ಲಿ ಕುತತ್ವದಲ್ಲಿ ತಾನಾಗಿ ರುಚಿ ಹುಟ್ಟುವುದು, ಹೇಲಿಗೆ ಕೆಟ್ಟ ವಾಸನೆ ಹುಟ್ಟುವಂತೆ ! ೯೧. ಕಸ್ತೂರಿ,

ಗದ್ಯ॥ ಮತ್ತಂ ಕತ್ತುರಿಕರ್ಪೂರ ಶ್ರೀಖಂಡಾದಿದ್ರವ್ಯಂಗಳಂ ಸೋಂಕಿ ಪಂವ ಗಾಳಿ ಗಂಮಪ್ಪಂತೆ ಪಾಪದೊಳ್ಪೊರ್ದದ ಪೊಲ್ಲಮೆಯೊಳೊಂದದ ಜಿನೇಂದ್ರ ಧರ್ಮಮಂ ಪೊರ್ದಿದ ಮಹಾತ್ಮರ್ಗೆ ಸುತತ್ವವಿಚಾರಮುಂ ಮಿಥ್ಯಾತ್ವಭೀರುತ್ವಮುಂ ಸಹಜಮಕ್ಕುಂ ; ಅಮೇಧ್ಯ ಕಳ್ಮಾಂಸಾದಿ ದುರ್ಗಂಧಮಪ್ಪಂತೆ ಲೋಲತೆಯೊಳ್ ಪೊರ್ದಿದ, ಪೊಲ್ಲಮೆಯೊಳೊಂದಿದ ಮಿಥ್ಯಾದರ್ಶನಂಗಳಂ ಪೊರ್ದಿದ ದುರಾತ್ಮಂಗೆ ಕುಮಾರ್ಗಾನುರಾಗಮುಂ ಕುತತ್ವರುಚಿಯುಂ ಮಿಥ್ಯಾತ್ವಪ್ರೀತಿಯುಂ ಸಹಜಮೆಂದು ತನ್ನೊಳ್ ವಿಚಾರಿಸಿ ಧನಶ್ರೀಯ ಗುಣಂಗಳಂ ಮನದೊಳ್ ಪೊಗಟ್ದು ತನ್ನ ಮನದ ಕಾರ್ಯಮನಿರ್ವರ್ಗಂ ತಿಳಿಯೆ ಪೇೞ್ದು ೯೨

ತಡೆದಿಲ್ಲಿ ನಿಂದೆನಪ್ಪೊಡೆ
ಕುಡವೇೞ್ಕುಂ ಭೂಭುಜಂಗೆ ಮಗಳಂ ಕೂಸಂ
ಕಡುಗೂರ್ತು ಕೊಟ್ಟೆನಪ್ಪೊಡೆ
ಕಿಡುಗುಂ ಮೇಲಪ್ಪ ನಮ್ಮ ಮೋಕ್ಷದ ಸೌಖ್ಯಂ ೯೩

ಗದ್ಯ॥ ಎಂದಾಲೋಚಿಸಿ ಧನಶ್ರೀ ಗರ್ಭಿಣಿಯಪ್ಪ ಕಾರಣದಿಂದೊಡಗೊಂಡು ಪೋಗಲೊಲ್ಲದೆ ತನ್ನ ಪ್ರಾಣಮಿತ್ರನಪ್ಪ ಶ್ರೀದತ್ತನೆಂಬ ಪರದನ ಮನೆಯೊಳ್ ಗುಪ್ತದಿಂದಿರಿಸಿ ನೂರೆಂಟು ಕೋಟಿ ಪೊನ್ನುಮಂ ನಿರ್ವಾಹಮುಮಂ ಬಿಸುಟ್ಟು ೯೪

ಕರ್ಪೂರ ಶ್ರೀಗಂಧವೇ ಮೊದಲಾದ ವಸ್ತುಗಳನ್ನು ಸೋಕಿ ಬೀಸುವ ಗಾಳಿ ಸುವಾಸನೆಯಾಗುವಂತೆ ಪಾಪದಲ್ಲಿ ಸೇರದ, ಹೊಲ್ಲಮೆಗೆ ಹೊಂದದ. ಜಿನೇಂದ್ರಧರ್ಮವನ್ನು ಸೇರಿದ ಮಹಾತ್ಮರಿಗೆ ಒಳ್ಳೆಯ ತತ್ವವಿಚಾರವೂ ಮಿಥ್ಯಾತ್ವದಲ್ಲಿ ಭಯವೂ ಸಹಜವಾಗುತ್ತವೆ. ಅಮೇಧ್ಯ. ಹೆಂಡ, ಮಾಂಸ ಮೊದಲಾದುವು ದುರ್ಗಂಧವಾಗುವಂತೆ ಲೋಲಾಪ್ತಿಯಲ್ಲಿ ಹೊಂದಿದ, ಕೆಟ್ಟತನದಲ್ಲಿ ಸೇರಿದ, ಮಿಥ್ಯಾದರ್ಶನಗಳನ್ನು ಸೇರಿದ ದುರಾತ್ಮನಿಗೆ ಕೆಟ್ಟ ಮಾರ್ಗದಲ್ಲಿ ಪ್ರೀತಿಯೂ ಮಿಥ್ಯಾತ್ವದ ಮೇಲೆ ಪ್ರೇಮವೂ ಸ್ವಾಭಾವಿಕವೆಂದು ತನ್ನಲ್ಲಿಯೇ ಯೋಚಿಸಿ ಧನಶ್ರೀಯ ಗುಣಗಳನ್ನು ಮನಸ್ಸಿನಲ್ಲಿ ಹೊಗಳಿ, ತನ್ನ ಮನಸ್ಸಿನಲ್ಲಿದ್ದ ಕಾರ್ಯವನ್ನು ಅವರಿಗೂ ತಿಳಿಯ ಹೇಳಿದನು ೯೨. "ಇಲ್ಲಿ ತಡಮಾಡಿ ನಿಂತೆನಾದರೆ ರಾಜನಿಗೆ ಹೆಣ್ಣನ್ನು ಕೊಡಬೇಕು. ಬಹಳವಾಗಿ ಪ್ರೀತಿಸಿ ಕೂಸನ್ನು ಕೊಟ್ಟೆನಾದರೆ ಮುಂದೆ ಆಗುವ ನಮ್ಮ ಮೋಕ್ಷದ ಸೌಖ್ಯವು ಕೆಟ್ಟು ಹೋಗುತ್ತದ" ೯೩. ಎಂದು ಆಲೋಚನೆ ಮಾಡಿ ಧನಶ್ರೀಯು ಆಗ ಗರ್ಭವತಿಯಾಗಿದ್ದ ಕಾರಣದಿಂದ ಜತೆಯಲ್ಲಿ ಕರೆದುಕೊಂಡು ಹೋಗಲು ಇಷ್ಟಪಡದೆ ತನ್ನ ಪ್ರಾಣಸ್ನೇಹಿತನಾದ ಶ್ರೀದತ್ತನೆಂಬ ವರ್ತಕನ ಮನೆಯಲ್ಲಿ ರಹಸ್ಯವಾಗಿ ಬಿಟ್ಟು ನೂರೆಂಟು ಕೋಟಿ ಹೊನ್ನುಗಳಷ್ಟು ಧನವನ್ನೂ ವಹಿವಾಟನ್ನೂ ಬಿಟ್ಟು ೯೪. ಮಗಳನ್ನು ಜತೆಯಲ್ಲಿ ಕರೆದುಕೊಂಡು ಬೇರೆ ವಿಷಯಗಳನ್ನೇ ಯೋಚಿಸದೆ

ಮಗಳನೊಡಗೊಂಡು ಪುರದಿಂ
ಬಗೆಯದೆ ಪೆಱಪೆಱತನಲಿಪದೊಂದಕ್ಕಂ ಕೈ
ಮಿಗೆ ಜೈನಧರ್ಮವಾರಿಧಿ
ಮೃಗಾಂಕನನುಪಮಗುಣಾಂಬುನಿಧಿ ಪೊಱಮಟ್ಟಂ ೯೫

ಗದ್ಯ॥ ಅಂತು ಪೊಱಮಟ್ಟು ಕತಿಪಯಪ್ರಯಾಣಂಗಳಿಂ ಕೌಶಾಂಬಿಯೆಂಬ ಪುರಮನೆಯ್ದಿ ೯೬

ಸಿರಿಯಂ ಚಿಂತಿಸಿ ಕಂದಿಕುಂದಿರದೆ ನಿರ್ವಾಹಕ್ಕೆ ಕೇಡಾದುದೆಂ
ದಿರುಳೆಲ್ಲಂ ಮತಿಗೆಟ್ಟು ಬಾಯ್ಬಿಡದೆ ದೇಶತ್ಯಾಗವಾಯ್ತೆಂದು ನಿ
ಷ್ಠುರದುಃಖಕ್ಕೆಡೆಯಾಗದುತ್ತಮಗುಣಂ ಚಾರಿತ್ರಪಾರಾಯಣಂ
ಪಿರಿದುಂ ಸಂತಸದಿಂದಮಿರ್ದನಮಳ ಶ್ರೀಧರ್ಮರತ್ನಾಕರಂ ೯೭

ಗದ್ಯ॥ ಆಂತಿರ್ಪುದುಮಿತ್ತಲರಸಂ ಗುಣಪಾಲಸೆಟ್ಟಿ ಪೆಂಡಿರಮಕ್ಕಳ ಕೈಯಂ ಪಿಡಿದು ಪಿರಿದಪ್ಪ ಧನಮುಮಂ ನಿರ್ವಾಹಮುಮನೀಡಾಡಿ ಪೋದನೆಂಬುದಂ ಕೇಳ್ದು ಬೆಱಗಾಗಿ ಪ್ರಧಾನರ ಮೊಗಮಂ ನೋಡಿ ೯೮

ತನ್ನ ತನೂಜೆಯನೆನಗಿ
ತ್ತುನ್ನತಿಯಿಂದಿರದೆ ಬಿಟ್ಟು ನಿರ್ವಾಹಮುಮಂ
ಪೊನ್ನುಮನೋಡುವ ಮರುಳವ
ನನ್ನರ್ಪೆಱರೊಳರೆ ಬಗೆವೊಡುರ್ವೀತಳದೊಳ್ ೯೯

ಬೇರೆ ಒಂದಕ್ಕೂ ಆಸೆ ಪಡದೆ ಜೈನಧರ್ಮವೆಂಬ ಸಮುದ್ರಕ್ಕೆ ಚಂದ್ರನಂಥವನಾದ ಅನುಪಮವಾದ ಗುಣಸಮುದ್ರನಾದ ಗುಣಪಾಲಸೆಟ್ಟಿ ಪಟ್ಟಣದಿಂದ ಹೊರಟನು. ೯೫. ಹಾಗೆ ಹೊರಟು ಕೆಲವು ದಿನಗಳ ಪ್ರಯಾಣ ಮಾಡಿ ಕೌಶಾಂಬಿಯೆಂಬ ಪಟ್ಟಣವನ್ನು ಸೇರಿಕೊಂಡನು, ೯೬. ಐಶ್ವರ್ಯವನ್ನು ಕುರಿತು ಚಿಂತಿಸುತ್ತ ಕುಗ್ಗಿ ಕಾಂತಿಹೀನನಾಗದೆ, ತನ್ನ ವ್ಯಾಪಾರಕ್ಕೆ ನಷ್ಟವಾಯಿತೆಂದು ಕ್ರೂರವಾದ ದುಃಖಕ್ಕೆ ಗುರಿಯಾಗದೆ, ರಾತ್ರಿ ನಿದ್ದೆಗೆಟ್ಟು ಬುದ್ಧಿಕೆಡಿಸಿಕೊಂಡು ಗೋಳಾಡದೆ ದೇಶಬಿಟ್ಟು ಬಂದೆನೆಂದು ಸಂಕಟಪಡದೆ ಉತ್ತಮ ಗುಣವಂತನೂ ಚಾರಿತ್ರವಂತನೂ ಆದ ಆ ಧರ್ಮಶೀಲನು ಬಹಳ ಸಂತೋಷದಿಂದ ಕಾಲಕ್ಷೇಪ ಮಾಡುತ್ತಿದ್ದನು. ೯೭. ಇತ್ತ ರಾಜನು ಗುಣಪಾಲ ಸೆಟ್ಟಿ ಹೆಂಡಿರು ಮಕ್ಕಳನ್ನು ಕರೆದುಕೊಂಡು ಹೆಚ್ಚಾದ ಹಣವನ್ನೂ ವ್ಯಾಪಾರವನ್ನೂ ಬಿಟ್ಟು ಕಳೆದು ಹೋದನೆಂಬುದನ್ನು ಕೇಳಿ ಆಶ್ಚರ್ಯಪಟ್ಟು ತನ್ನ ಮಂತ್ರಿಗಳ ಮುಖವನ್ನು ನೋಡಿ ೯೮. "ತನ್ನ ಮಗಳನ್ನು ನನಗೆ ಕೊಟ್ಟು ಗೌರವದಿಂದ ಇರದೆ ತನ್ನ ಐಶ್ವರ್ಯವನ್ನೂ ಧನವನ್ನೂ ಹಿಂದೆ ಬಿಟ್ಟು ಓಡಿ ಹೋಗುವ ಹುಚ್ಚ. ಅವನಂಥವರು ಬೇರೆ ಯಾರಾದರೂ ಇರುವರೆ, ಲೋಕದಲ್ಲಿ ? ೯೯. ತಾನಾದರೋ ವೈಶ್ಯನ

ತಾನಪ್ಪೊಡೆ ವೈಶ್ಯಾತ್ಮಜ
ನಾನಪ್ಪೊಡೆ ರಾಜಪುತ್ರನೆಂ ದೊರೆಯಲ್ಕೆಂ
ದೇನಿರದೆ ಪೋದನಪ್ಪೊಡ
ವೇಂನಂತರವಣ್ಣ ನೋಱಿಪ್ಪೊಡೆನಗಂ ತನಗಂ ೧೦೦

ಸುತೆಯುಂ ಕೊಟ್ಟೆನಗಖಿಳ
ಕ್ಷಿತಿಯುಮನಾಳ್ದಿರದೆ ಸುಖದಿನತಿಚಪಳಂ ದು
ರ್ಮತಿಯಾಗಿ ಬೆಚ್ಚಿ ಪೋಪೊಂ
ದತಿಶಯಮೇಕಿಂತು ಪುಣ್ಯಹೀನರುಮೊಳರೇ ೧೦೧

ಗದ್ಯ॥ ಎಂದು ಹಾಸ್ಯಂ ಮಾಡಿ ನಗುವರಸಂಗೆ ಪೆರ್ಗಡೆಗಳಿಂತೆಂದರ್ ೧೦೨

ದೇವಲೋಕವಿಭೂತಿಗಂ ವರಚಕ್ರವರ್ತಿಯ ಲಕ್ಷ್ಮಿಗಂ
ಭಾವಿಪಂದಪವರ್ಗಲಕ್ಷ್ಮಿಯ ಕೂರ್ಮೆಗಂ ಪಿರಿದಪ್ಪ ವಾ
ಕ್ಶ್ರೀವಧೂಪ್ರಿಯನಲ್ಮೆಗಂ ಸುಖದೊಂದು ಪತ್ತುಗೆಗಂ ಜಯ
ಶ್ರೀವಧೂವರಮಪ್ಪ ವೈಮೆಗಮುನ್ನತಿಕ್ಕೆಗಮಾಜ್ಞೆಗಂ ೧೦೩

ಗದ್ಯ॥ ಕೊಲೆಯೊಳ್ ಪೊರ್ದದಿರ್ದ ಸದ್ಧರ್ಮಮೆ ಮುಖ್ಯಮಪ್ಪುದಱಿಂ ಧರ್ಮದ ಮೋಹ ದಿಂ ಶ್ರೀಯುಮಂ ಸಂಪತ್ತುಮನುದಾಸೀನಂ ಮಾಡಿ ದೇವ ನೀಂ ಶ್ರಾವಕನಲ್ಲಮಪ್ಪುದಱಿಂ

ಮಗ ; ನಾನು ರಾಜಪುತ್ರ, ಕ್ಷತ್ರಿಯ, ಹೀಗಿದ್ದರೂ ಅವನು ಏಕೆ ಓಡಿಹೋದನೋ ? ನನಗೂ ಅವನಿಗೂ ಭೇದವೇನಿದೆ ? ೧೦೦. ನನಗೆ ಮಗಳನ್ನು ಕೊಟ್ಟು ಅಖಂಡ ರಾಜ್ಯವನ್ನು ಸುಖವಾಗಿ ಆಳಿಕೊಂಡಿರದೆ, ಅತ್ಯಂತ ಚಪಲಚಿತ್ತನೂ ದುರ್ಮತಿಯೂ ಆಗಿ ಹೆದರಿ ಹೋಗುವಂಥ ಅತಿಶಯವೇನು ? ಇಂಥ ಪುಣ್ಯಹೀನರೂ ಇರುವರೆ ? ೧೦೧. ಹೀಗೆ ಹಾಸ್ಯಮಾಡಿ ನಗುತ್ತಿದ್ದ ಅರಸನಿಗೆ ಹೆಗ್ಗಡೆಗಳು ಹೀಗೆ ಹೇಳಿದರು: ೧೦೨. ದೇವಲೋಕದ ವೈಭವಕ್ಕಿಂತ, ಶ್ರೇಷ್ಠಚಕ್ರವರ್ತಿಯ ಐಶ್ವರ್ಯಕ್ಕಿಂತ, ಮೋಕ್ಷಲಕ್ಷ್ಮಿಯ ಪ್ರೇಮಕ್ಕಿಂತ, ದೊಡ್ಡದಾದ ವಾಕ್‌ಶ್ರೀವಧೂಪ್ರಿಯನ ಸ್ನೇಹ ಕ್ಕಿಂತ, ಸುಖದ ಸೌಭಾಗ್ಯಕ್ಕಿಂತ, ಜಯಲಕ್ಷ್ಮಿಯ ವರದಿಂದ ಲಭಿಸುವ ಮಹಿಮೆ, ಉನ್ನತಿ, ದರ್ಪಗಳಿಗಿಂತಲೂ ೧೦೩. ಕೊಲೆಯಲ್ಲಿ ಸಂಪರ್ಕವಿಲ್ಲದಿರುವ ಒಳ್ಳೆಯ ಧರ್ಮವೇ ಮುಖ್ಯ. ಆದ್ದರಿಂದ ಧರ್ಮದ ಮೇಲಿನ ಪ್ರೇಮದಿಂದ ಐಶ್ವರ್ಯ ವನ್ನೂ ಸಂಪತ್ತನ್ನೂ ಅಸಡ್ಡೆ ಮಾಡಿ, ನೀನು ಶ್ರಾವಕನಲ್ಲವಾದುದರಿಂದ, ಮಿಥ್ಯಾತ್ವಕ್ಕೆ

ಮಿಥ್ಯಾತ್ವಕ್ಕಂ ಮೇಲೆ ಬರ್ಪ ನರಕದುಃಖಕ್ಕಂ ಭಯಸ್ಥನಾಗಿ ಕೊಡಲೊಲ್ಲದೆ ಪೋದನೆಂಬುದುಂ
ವಿಶ್ವಂಧರಮಹಾರಾಜಂ ಚೋದ್ಯಂಬಟ್ಟು ೧೦೪

ಸಿರಿಯುಂ ಬಿಟ್ಟು ವಿಭೂತಿಯುಂ ತೊಱೆದು ನಿರ್ವಾಹಕ್ಕೆ ತಚ್ಚಿತ್ತದೊಳ್
ಪಿರಿದುಂ ಮೋಹಿಸಲೊಲ್ಲದಂಜಿ ಮಗಳಂ ವೈಶ್ಯಾತ್ಮಜಂ ಸಂತಸಂ
ಬೆರಸುತ್ತಾನಹದಿನೀಯದೆನ್ನ ಸಿರಿಯಂ ಪೆಂಪಂ ಮನಂಗೊಳ್ಳದಾ
ದರಮಂ ಧರ್ಮದೊಳುಂಟು ಮಾಡಿ ಪೊಱಮಟ್ಟೀ ದೇಶದಿಂದೋಡಿದಂ ೧೦೫

ಅದಱಿಂದಾತಂ ನಂಬಿ
ದುದೆ ದೈವಂ ವೈಶ್ಯವಂಶತಿಳಕಂ ಪಿಡಿದು
ದುದೆ ಧರ್ಮಮೆಂದು ನಚ್ಚಿದ
ನುದಿತೋದಿತಕೀರ್ತಿ ಮಾಳವೋರ್ವೀನಾಥಂ ೧೦೬

ಪಿರಿದಪ್ಪ ಸಿರಿಯನೊಲ್ಲದೆ
ಪರತ್ರೆಯನೆ ನಂಬಿ ಪಿಡಿದನೆಂದಂದಿಂತೀ
ಧರೆಯೊಳಗಾ ವೈಶ್ಯಾಂಬರ
ತರಣಿಯ ನಚ್ಚಿರ್ದ ಧರ್ಮಮದುವೆ ಸುಧರ್ಮಂ ೧೦೭

ಮುಂದೆ ಒದಗಲಿರುವ ನರಕ ದುಃಖಕ್ಕೆ ಭಯಪಟ್ಟು ನಿನಗೆ ಹೆಣ್ಣು ಕೊಡಲು ಇಷ್ಟ ವಿಲ್ಲದೆ ಹೋದನು ! ಹೆಗ್ಗಡೆಗಳ ಈ ಮಾತನ್ನು ಕೇಳಿ ವಿಶ್ವಂಧರಮಹಾರಾಜನು ಆಶ್ಚರ್ಯಪಟ್ಟು ಸಿರಿಯನ್ನು ಬಿಟ್ಟು ಸಮಸ್ತ ವೈಭವವನ್ನೂ ತೊರೆದು, ತನ್ನ ವಹಿವಾಟಿಗೂ ಮನಸ್ಸಿಲ್ಲದೆ, ಪಾತಕಕ್ಕೆ ಅಂಜಿಕೊಂಡು ಆ ವೈಶ್ಯಪುತ್ರನು ಸಂತೋಷವಾಗಿ ತನ್ನ ಮಗಳನ್ನು ನನಗೆ ಕೊಡಲು ಇಷ್ಟಪಡದೆ, ನನ್ನ ಐಸಿರಿಯನ್ನೂ ಹೆಚ್ಚಳವನ್ನೂ ಮನಸ್ಸಿಗೆ ತಂದುಕೊಳ್ಳದೆ ತನ್ನ ಧರ್ಮದಲ್ಲಿಯೇ ಆದರವನ್ನು ವಹಿಸಿ ಊರು ಬಿಟ್ಟು ಹೋಟು ದೇಶವನ್ನೇ ಪರಿತ್ಯಜಿಸಿದನು. ೧೦೫. ಆದ್ದರಿಂದ ಆತನು ನಂಬಿದುದೇ ದೇವರು. ಆ ವೈಶ್ಯವಂಶಶ್ರೇಷ್ಠನು ಹಿಡಿದಿದ್ದುದೇ ಧರ್ಮ. ಹೀಗೆ ಯೋಚಿಸಿ ಆ ಮಾಳವ ದೇಶದ ದೊರೆಯು ಮೆಚ್ಚಿ ಉದಿತೋದಿತ ಕೀರ್ತಿಶಾಲಿಯಾದನು ೧೦೬. ದೊಡ್ಡದಾದ ಐಶ್ವರ್ಯವನ್ನು ಒಲ್ಲದೆ, ಪರಲೋಕವನ್ನೇ ನಂಬಿ ಹಿಡಿದನೆಂದ ಮೇಲೆ ಈ ಭೂಮಿಯ ಮೇಲೆ ಆ ವೈಶ್ಯಲೋಕವೆಂಬ ಆಕಾಶದ ಸೂರ್ಯನು (ಆ ವೈಶ್ಯಶ್ರೇಷ್ಠನ) ನಂಬಿರುವ ಧರ್ಮವೇ ಶ್ರೇಷ್ಠಧರ್ಮ ೧೦೭.

ಗದ್ಯ॥ ಎಂದಾ ಜಿನಧರ್ಮದೊಳ್ ಪ್ರೀತಿಯುಂ ಕುಧರ್ಮದೊಳ್ ಭೀತಿಯುಂ ಪುಟ್ಟೆ ಗುಣಪಾಲಸೆಟ್ಟಿಯಮೇಲೆ ಮೋಹಮುಂ ಸ್ನೇಹಮುಮಾಗೆ ಮನೆಗಂ ಭಂಡಾರಕ್ಕಂ ಕಾಪಂ ಪೇಳ್ದು ಜಿನಸಮಯವಾರ್ಧಿವರ್ಧನ ಚಂದ್ರನನೆಲ್ಲಿಯುಂ ಮಟ್ಟಿಯಱಿಸಿ ತನ್ನಿಮೆಂದು ದೆಸೆದೆಸೆಗೆ ಪರಿಚಾರಕರನಟ್ಟಿದ ನಿತ್ತ ಧನಶ್ರೀ ೧೦೮

ಗುಣಪಾಲಸೆಟ್ಟಿಯಪ್ಪೊಡೆ
ಗುಣಾಢ್ಯನವಿನೀತನಲ್ಲನಾರ್ಗಂ ವೈಶ್ಯಾ
ಗ್ರಣಿ ಪುಣ್ಯನಿಳಯನಾಯದ
ಕಣಿ ಸತ್ಯನಿಧಾನನೆಲ್ಲಿಯುಂ ಕೆಟ್ಟಪನೇ ೧೦೯

ಗದ್ಯ॥ ವಾತ್ಸಲ್ಯರತ್ನಾಕರನಪ್ಪೊಡಧಿಕ ಪುಣ್ಯನುಂ ವಣಿಗ್ವಂಶಾಗ್ರಗಣ್ಯನುಮಪ್ಪನೆಲ್ಲಿ ಪೊಕ್ಕೊಡಮಾಪತ್ತುಮೆಡರುಮಿಲ್ಲೆಂದು ಮನಮಂ ಸಂತೈಸಿಕೊಂಡು ಸುಖದಿಂ ಕೆಲವು ದಿವಸಮಿರ್ದುಮೊಂದು ದಿವಸಂ ಶಿವಗುಪ್ತರೆಂಬಾಚಾರ್ಯರ್ ತ್ರಿಗುಪ್ತರೆಂಬ ತಮ್ಮ ಶಿಷ್ಯವೆರಸು ಚಂದ್ರಗತಿಯಿಂ ಚರಿಗೆಗೆ ವರ್ಪುದುಂ ಶ್ರೀದತ್ತಸೆಟ್ಟಿ ಕಂಡು ೧೧೦

ಎಂದು ಆ ಜಿನ ಧರ್ಮದ ಮೇಲೆ ಪ್ರೀತಿಯೂ ನೀಚಧರ್ಮದಲ್ಲಿ ಭೀತಿಯೂ ಹುಟ್ಟಿ ಗುಣಪಾಲ ಸೆಟ್ಟಿಯ ಮೇಲೆ ಮೋಹವೂ ಸ್ನೇಹವೂ ಆಗಲು ಅವನ ಮನೆಗೂ ಭಂಡಾರಕ್ಕೂ ಹೆಚ್ಚು ಕಾವಲನ್ನು ಏರ್ಪಡಿಸಿ ಜಿನಮತ ಸಮುದ್ರ ವರ್ಧನೆಗೆ ಚಂದ್ರನೋಪಾದಿಯಲ್ಲಿರುವ ಆತನನ್ನು ಎಲ್ಲಿದ್ದರೂ ಹುಡುಕಿ ತರಬೇಕೆಂದು ಆಜ್ಞಾಪಿಸಿ ದಿಕ್ಕು ದಿಕ್ಕುಗಳಿಗೂ ಸೇವಕರನ್ನು ಅಟ್ಟಿದನು ೧೦೮. ಇತ್ತ ಗುಣಪಾಲಸೆಟ್ಟಿಯ ಹೆಂಡತಿ ಧನಶ್ರೀಯು "ಗುಣಪಾಲ ಸೆಟ್ಟಿಯಾದರೋ ಗುಣಾಢ್ಯನು. ಅತನು ಯಾರಿಗೂ ಅವಿನಯಪರನಲ್ಲ, ಆ ವೈಶ್ಯ ಶ್ರೇಷ್ಠನು ಪುಣ್ಯನಿಲಯನಾದವನು, ಧರ್ಮದ ಗಣಿ, ಸತ್ಯದ ನಿಕ್ಷೇಪವುಳ್ಳವನು. ಅವನು ಎಲ್ಲಿಯೇ ಆದರೂ ಕೆಡುವುದಿಲ್ಲ. ೧೦೯. ವಾತ್ಸಲ್ಯರತ್ನಾಕರನಾದ ಆತನು ಬಹಳ ಪುಣ್ಯವಂತನೂ ವೈಶ್ಯವಂಶಗಳವರಲ್ಲಿ ಅಗ್ರಗಣ್ಯನೂ ಆದವನು. ಅವನು ಎಲ್ಲಿ ಹೊಕ್ಕರೂ ಯಾವ ಆಪತ್ತೂ ವಿಘ್ನವೂ ಇಲ್ಲದೆ ಇರುವನು" ಎಂದು ತನ್ನ ಮನಸ್ಸಿನಲ್ಲಿಯೇ ಸಮಾಧಾನ ಮಾಡಿಕೊಂಡು ಸುಖದಿಂದ ಕೆಲವು ದಿನ ಕಾಲಕ್ಷೇಪಮಾಡಿದಳು. ಹೀಗಿರಲು ಒಂದು ದಿನ ಶಿವಗುಪ್ತಾರ್ಯರು ತ್ರಿಗುಪ್ತರೆಂಬ ತಮ್ಮ ಶಿಷ್ಯರೊಡನೆ ಕೂಡಿ ಚಂದ್ರಗತಿಯಿಂದ ಚರಿಗೆಗೆ ಬರಲಾಗಿ ಶ್ರೀದತ್ತ ಸೆಟ್ಟಿಕಂಡನು ೧೧೦.

ಕರಮಾದರದಿಂದಾ ಮುನಿ
ವರರಂ ಸದ್ಭಕ್ತಿಪೂರ್ವಕಂ ನಿಲಿಸಿ ದುರಂ
ತರಚರಿತರಂ ಮಹಾಗುಣ
ನಿರತರನಘನಿಕರತೀವ್ರವಜ್ರಾಯುಧರಂ ೧೧೧

ಒಳಗಣ್ಗದಿರ್ಗೊಂಡೊಯ್ಯನೆ
ಬಳಸಿದ ಪಿಪ್ಪರದೊಳಿರಿಸಿ ಕಾಲಂ ಚಿತ್ತೋ
ಜ್ವಲನಾಗಿ ಕರ್ಚಿ ತಾಂ ತ
ಜ್ಜಳವಂ ಮಸ್ತಕದೊಳಾಂತು ಪೂಜಿಸಿ ಪದವಂ ೧೧೨

ಪದಪಿಂ ಶುದ್ಧಾನ್ನಮನೀ
ವುದುಮುಂಡು ಮುನೀಂದ್ರರಿರ್ವರುಂ ಕುಳ್ಳಿರೆ ಸಂ
ಮುದದಿಂ ಮುನೀಂದ್ರವಂದ್ಯನ
ಪದಯುಗಳಮನೊತ್ತುತಿರ್ದನಿರ್ದನ್ನೆವರಂ ೧೧೩

ಗದ್ಯ॥ ಧನಶ್ರೀ ವಂದಿಸಿ ಪೋಪುದುಂ ತ್ರಿಗುಪ್ತಮುನೀಂದ್ರಂ ಧನಶ್ರೀಯುಂ ಕಂಡು ಮನದೊಳ್ ವಿಸ್ಮಯಂಬಟ್ಟು ಶಿವಗುಪ್ತಭಟ್ಟಾರಕರ್ಗೆ ಪೊಡೆವಟ್ಟು ಕೈಗಳಂ ಮುಗಿದು ವಿನಯದಿಂ ತಂದಂ ೧೧೪

ಆಚಾರ್ಯರನ್ನು ಶ್ರೀದತ್ತ ಸೆಟ್ಟಿಯು ಬಹಳ ಆದರದಿಂದ, ಅತಿಶಯ ಭಕ್ತಿಪೂರ್ವಕವಾಗಿ ನಿಲ್ಲಿಸಿ ಆ ದುರಂತರ ಚರಿತ್ರರನ್ನು, ಮಹಾಗುಣ ನಿರತರನ್ನು, ಪಾಪಸಮೂಹಕ್ಕೆ ಹರಿತವಾದ ವಜ್ರಾಯುಧದಂಥವರನ್ನು, ೧೧೧. ನಿಲ್ಲಿಸಿ ಇದಿರುಗೊಂಡು ಸ್ವಾಗತಮಾಡಿ ಮೆಲ್ಲನೆ ಮನೆಯೊಳಕ್ಕೆ ಕರೆದುಕೊಂಡು ಹೋಗಿ ಪೀಠಗಳ ಮೇಲೆ ಕೂಡಿಸಿ ಚಿತ್ತೋತ್ಸಾಹವುಳ್ಳವನಾಗಿ ಅವರ ಕಾಲುಗಳನ್ನು ತೊಳೆದು ತಾನು ಆ ಪಾದೋದಕವನ್ನು ತನ್ನ ತಲೆಯ ಮೇಲೆ ಚಿಮುಕಿಸಿಕೊಂಡು ಪಾದಪೂಜೆಯನ್ನು ಮಾಡಿದನು ೧೧೨. ಆ ಮೇಲೆ ಪ್ರೀತಿಯಿಂದ ಶುದ್ಧವಾದ ಅನ್ನವನ್ನು ನೀಡಿದನು. ಆಚಾರ್ಯರು ಸಂತೋಷದಿಂದ ಊಟಮಾಡಿ ಇಬ್ಬರೂ ಕುಳಿತಿದ್ದರು. ೧೧೩. ಆ ಸಮಯದಲ್ಲಿ ಧನಶ್ರೀಯು ಅಲ್ಲಿಗೆ ಬಂದು ಆಮುನಿಗಳಿಗೆ ವಂದನೆ ಸಲ್ಲಿಸಿ ಒಳಕ್ಕೆ ಹೋದಳು. ಆಗ ತ್ರಿಗುಪ್ತಮುನೀಂದ್ರನು ಆಕೆಯನ್ನು ಗಮನಿಸಿ ಮನಸ್ಸಿನಲ್ಲಿ ಆಶ್ಚರ್ಯಪಟ್ಟನು. ಆತನು ಶಿವಗುಪ್ತ ಭಟ್ಟಾರಕರಿಗೆ ನಮಸ್ಕಾರಮಾಡಿ ಕೈಮುಗಿದು ವಿನಯದಿಂದ ಹೀಗೆ ಕೇಳಿದನು ೧೧೪. ಈ ಕಮಲವು

ಈವನಜಾಸ್ಯೆಗುತ್ತಮಗುಣಾನ್ವಿತೆಗಗ್ಗಳ ಭದ್ರಲಕ್ಷಣಂ
ತೀವಿದುವೈದೆ ಭಾವಿಸುವೊಡೆಲ್ಲೆಡೆಯುಂ ನೆರೆದೊಪ್ಪೆ ಚೆಲ್ವಿನಿಂ
ಶ್ರೀವಧುವನ್ನಳನ್ನಳೆನಿಪೀ ವಧುವುಂ ಕಡು ಕಂದಿ ಕುಂದಿ ಸ
ದ್ಭಾವಮನೊಕ್ಕು ಹೀನರವೊಲನ್ಯನಿವಾಸದೊಳಿರ್ಪುದಾಂದೇಂ ೧೧೫

ಗದ್ಯ॥ ಸಂಸಾರದೊಳ್‌ಬಿಟ್ಟು ಪೆಱತೊಂದು ಕಷ್ಟಮಿಲ್ಲೆಂಬುದುಂ ಶಿವಗುಪ್ತಭಟ್ಟಾರಕರಿಂತೆಂದರ್ ೧೧೬

ಅಂತೆನವೇಡ ಧಾರಿಣಿಯೊಳೀ ಲಲಿತಾಂಗಿಯೆ ಪುಣ್ಯವಂತೆ ಭೂ
ಕಾಂತನಡರ್ತು ತನ್ನ ಮಗಳಂ ಕುಡವೇಟ್ಕೆನಲೀಕೆಯಾಣ್ಮನೋ
ರಂತೆ ಜಿನೇಂದ್ರಧರ್ಮಯುತನಲ್ಲದವಂಗೆ ಮದಾತ್ಮಜಾತೆಯುಂ
ಸಂತತಮೀಯೆನೆಂದು ಬಿಸುಟಗ್ಗದ ಧಾನ್ಯಧನಂ ಗೃಹಂಗಳಂ ೧೧೭

ಗದ್ಯ॥ ಪೋಗುತ್ತುಮೀಪಸತಿ ಗರ್ಭಿಣಿಯಪ್ಪುದಱಿಂದೊಡಗೊಂಡು ಪೋಗಲೊಲ್ಲದೆ ಶ್ರೀದತ್ತಸೆಟ್ಟಿ ತನಗಿಪ್ಪನಪ್ಪುದಱಿಂದಿಲ್ಲಿ ಗುಪ್ತದೊಳಿರಿಸಿ ಪೋದನದಱಿಂದೀ ಧನಶ್ರೀ ಕಂದಿ ಕುಂದಿದಳೆಂಬುದುಂ, ಇಂತೀ ಧನಶ್ರೀಯ ಗರ್ಭದ ಕೂಸೀ ಮಂಡಳಕ್ಕೆಲ್ಲಮೊಡೆಯನಕ್ಕುಮೆಂದು ತಮ್ಮೊಳ್ ನುಡಿದು ಪೋಪುದುಂ ಶ್ರೀದತ್ತಸೆಟ್ಟಿ ಕೇಳ್ದು ಕಾರಣಮಿಲ್ಲದೆ ಮುಳಿದು ೧೧೮

ಖಿಯು ಉತ್ತಮಳು, ಗುಣವಂತಳು. ಇವಳಿಗೆ ಹಲವು ಮಂಗಳ ಲಕ್ಷಣಗಳು ತುಂಬಿವೆ. ವಿಚಾರಮಾಡಿದರೆ ಈಕೆ ಎಲ್ಲವಿಷಯಗಳಲ್ಲಿಯೂ ಶೋಭಿಸುವಂತೆ, ಸೌಂದರ್ಯದಲ್ಲಿ ಆ ಲಕ್ಷ್ಮೀದೇವಿಯಂಥವಳೆನ್ನಿಸಿರುವ ಈ ಹೆಣ್ಣು ಬಹಳ ಕಾಂತಿಹೀನಳಾಗಿ ಕುಗ್ಗಿ ಸಂತೋಷವನ್ನು ಕಳೆದುಕೊಂಡು ಹೀನರ ಹಾಗೆ ಅನ್ಯರಮನೆಯಲ್ಲಿ ಇರುವುದು ಏಕೆ ? ಈಕೆ ಯಾರು ? ಇದು ಏನು ? ೧೧೫. ಸಂಸಾರದಲ್ಲಿ ಅಲ್ಲದೆ ಬೇರೆಲ್ಲಿಯೂ ಒಂದು ಕಷ್ಟವಿಲ್ಲ" ವೆಂದು ನುಡಿಯಲು ಶಿವಗುಪ್ತಭಟ್ಟಾರಕರು ಹೀಗೆ ಉತ್ತರ ಕೊಟ್ಟರು : ೧೧೬. "ಹಾಗೆ ಹೇಳಬೇಡ. ಭೂಮಿಯ ಮೇಲೆ ಈ ಸುಂದರಾಂಗಿಯೇ ಪುಣ್ಯವಂತಳು. ರಾಜನೇ ಆಸೆಪಟ್ಟು ಈಕೆಯ ಮಗಳನ್ನು ತನಗೆ ಕೊಡಬೇಕೆಂದು ಕೇಳಲು ಈಕೆಯ ಗಂಡನು ವಿಶೇಷವಾಗಿ ಜಿನೇಂದ್ರಧರ್ಮದಲ್ಲಿಲ್ಲದವನಿಗೆ ತನ್ನ ಮಗಳನ್ನು ಎಂದಿಗೂ ಕೊಡುವುದಿಲ್ಲವೆಂದು ಶ್ರೇಷ್ಠವಾದ ಮನೆ, ವಿಪುಲವಾದ ಧನ ಧಾನ್ಯಗಳನ್ನು ಬಿಟ್ಟು ಬೇರೆ ಊರಿಗೆ ಹೋಗುತ್ತ ಈ ಹೆಂಗಸು ಗರ್ಭವತಿಯಾದ್ದರಿಂದ ಕರೆದುಕೊಂಡು ಹೋಗಲಿಲ್ಲದೆ, ಶ್ರೀದತ್ತಸೆಟ್ಟಿ ತನಗೆ ಸ್ನೇಹಿತನಾದ್ದರಿಂದ ಇಲ್ಲಿ ಗುಟ್ಟಾಗಿ ನಿಲ್ಲಿಸಿ ಹೋದನು. ಆದರಿಂದ ಈ ಧನಶ್ರೀ ಕಂದಿ ಕುಂದಿದ್ದಾಳೆ" ಎಂದು ಹೇಳಿದುದಲ್ಲದೆ "ಈ ಧನಶ್ರೀಯ ಗರ್ಭದಲ್ಲಿರುವ ಕೂಸು ಈ ರಾಜ್ಯಕ್ಕೆಲ್ಲ ಒಡೆಯನಾಗುವನು" ಎಂದು ತಮ್ಮ ತಮ್ಮಲ್ಲಿಯೇ ಮಾತನಾಡಿಕೊಂಡರು, ಈ ಮಾತನ್ನು ಕೇಳಿ ಶ್ರೀದತ್ತಸೆಟ್ಟಿ ನಿಷ್ಕಾರಣವಾಗಿ ಕೋಪಗೊಂಡನು.

ಈ ಸಸಿವದನೆಯು ಗರ್ಭದ
ಕೂಸೀ ದೇಶಕ್ಕೆ ಮುಖ್ಯನಪ್ಪಂ ಗಡ ನಾ
ನಾ ಸಿಸುವನುಪಾಯದೊಳೆ ವಿ
ನಾಶಂ ಮಾಡಲ್ಕೆ ವೇಟ್ಕುಮೆಂದತಿ ಮುಳಿಸಿಂ ೧೧೯

ಗದ್ಯ॥ ಪೂರ್ವವೈರಮುಂಟಪ್ಪುದಱಿಂ ಮಸಗಿ ಕೃತಕದಿನಿರ್ವರ್ ತೊೞ್ತಿರನೀ ಧನಶ್ರೀ ಪೆಱ ಲೊಡಮೆಮಗಱಿಪಿಮೆಂದು ಬೇರೇಕಾಂತದೊಳ್ ಕಲಿಸಿ ಕೂರ್ಪರಂತೀ ಧನಶ್ರೀಗೆ ಸಂಘಾತ ಮಾಗಿರಿಮೆಂದಿರಿಸುವುದುಂ ಧನಶ್ರೀ ನವಮಾಸಂ ನೆಱೆದು ಗಂಡುಗೂಸಂ ಪೆಱುವುದುಂ ಮುನ್ನ ಮಿರಿಸಿದ ತೊೞ್ತಿರಿರ್ವರುಂ ಪರಿತಂದು ಶ್ರೀದತ್ತಸೆಟ್ಟಿಗಱಿಪುವುದುಂ ೧೨೦

ಮುನಿಸೊದವೆ ಕೊಲ್ವೆನೆಂಬೀ
ಮನದಿಂ ಪರಿತಂದು ನೋಡಿ ಕೂಸಂ ಕಂಡೊ
ಯ್ಯನೆ ಕೂರ್ಪರಂದದಿಂದಂ
ವನಿತೆಯನಟ್ಕರ್ತು ತಡವಿ ಕೃತಕದಿನಾಗಳ್ ೧೨೧

ಕುವಳಯನೇತ್ರೆಗೆ ಗರ್ಭ
ಸ್ರುವಮಾದುದು ಕೆಟ್ಟೆನೆನಗೆ ಕೈಲೆಡೆಯೆಂದೀ
ಧವಳಾಕ್ಷಿಯನಣ್ಣವಣ
ಗ್ಫವನಿರಿಸಿದನಕಟ ಪೊಲ್ಲದಾಯ್ತೆಂದಾಗಳ್ ೧೨೨

ಆ ಮುನಿಗಳಿಬ್ಬರೂ ಹೊರಟು ಹೋದ ಮೇಲೆ ಅವನು "ಈ ಚಂದ್ರಮುಖಿಯ ಮಗು ಈ ದೇಶಕ್ಕೆ ಮುಖ್ಯನಾಗುವನಲ್ಲವೆ ? ನಾನು ಆ ಶಿಶುವನ್ನು ಉಪಾಯವಾಗಿ ನಾಶ ಮಾಡಬೇಕು" ಎಂದು ಬಹಳ ಸಿಟ್ಟಿನಿಂದ ಯೋಚಿಸಿದನು ೧೧೭-೧೧೯. ಪೂರ್ವವೈರ ವಿದ್ದುದರಿಂದ ಬಹಳ ಕೋಪಗೊಂಡು ಕೆರಳಿ, ಮೋಸದಿಂದ ಇಬ್ಬರು ದಾಸಿಯರನ್ನು ಧನಶ್ರೀ ಹೆತ್ತ ಕೂಡಲೆ ತನಗೆ ತಿಳಿಸುವಂತೆ ನೇಮಿಸಿದನು. ಪ್ರೀತಿಯ ಸ್ನೇಹಿತರಂತೆ ಧನಶ್ರೀಗೆ ಸಂಗಾತಿಯರಾಗಿ ಇರಬೇಕೆಂದು ಅವರಿಗೆ ಏಕಾಂತದಲ್ಲಿ ಹೇಳಿಕೊಟ್ಟನು. ಧನಶ್ರೀಗೆ ಒಂಬತ್ತು ತಿಂಗಳು ತುಂಬಿ ಗಂಡು ಮಗುವನ್ನು ಹೆತ್ತಳು. ಮೊದಲೇ ನೇಮಿಸಿದ್ದ ದಾಸಿಯರು ಓಡಿಬಂದು ಶ್ರೀದತ್ತಸೆಟ್ಟಿಗೆ ಸುದ್ದಿಕೊಟ್ಟರು. ೧೨೦. ಹೆಚ್ಚಾದ ಕೋಪದಿಂದ ಕೊಲ್ಲುವೆನೆಂಬ ಸಂಕಲ್ಪದಿಂದ ಓಡಿಬಂದು ಕೂಸನ್ನು ನೋಡಿ ಮೆಲ್ಲನೆ ಸ್ನೇಹಿತರ ರೀತಿಯಲ್ಲಿ ಆ ಹೆಂಗಸನ್ನು ಅಕ್ಕರೆಯಿಂದಲೆಂಬಂತೆ ತಡವಿ ಮೋಸದಿಂದ, "ಆ ಸುಂದರಿಗೆ ಗರ್ಭಸ್ರಾವವಾಯಿತು, ಕೆಟ್ಟೆ. ನನ್ನಲ್ಲಿ ನ್ಯಾಸವೆಂದು ಈಕೆಯನ್ನು ಅಣ್ಣ ಸೆಟ್ಟಿಯು ಇರಿಸಿದನು. ಅಯ್ಯೋ ಕೆಟ್ಟದ್ದಾಯಿತು" ಎಂದು

ಗದ್ಯ॥ ಧನಶ್ರೀಯಂ ಪಾಸಿನಮೇಲೆ ಪಟ್ಟಿರಿಸಿ ಕೂಸಿನ ಪೊರೆಯೊಳಿರ್ದವರೆಲ್ಲರುಮಂ ಪೊಱಮಡಿಸಿ ಕಳೆದು ಕೂಸು ಸತ್ತುದೆಂದು ಪುಸಿದು ಪೊಱಗಣ್ಗೆ ಕೂಸನೊಯ್ದು ಮೆಲ್ಲನೇಕಾಂತದೊಳೊರ್ವ ಕ್ರೂರನಪ್ಪ ಪೊಲೆಯಂಗೆ ಸಾಲ್ವನಿತು ಪೊನ್ನಂ ಕೊಟ್ಟು ಮುನ್ನಮೆ ಸಮಕಟ್ಟಿ ಕೊಲ್ಲೆಂದಾತನ ಕಯ್ಯೊಳ್ ಕೊಟ್ಟು ಕಳೆದಿತ್ತರ್ ೧೨೩

ಸಾವಿಲ್ಲದೊಡೀ ಕೂಸಿನ
ಭಾವಮುಮೀ ಶಿಶುವಿನೋಜೆಯುಂ ಗುಣಮುಂ ಸ
ದ್ಭಾವಮುಮೊಳ್ಪುಂ ಸಕಳೋ
ರ್ವೀವಳಯಮುಮುಮನೆಱಗಿಪ್ಪುದಿದು ಸಂದೆಯಮೇ ೧೨೪

ಎನ್ನನೆ ನಂಬಿ ತನ್ನ ಸತಿಯಂ ಗುಣಪಾಲನುದಾತ್ತ ವೈಶ್ಯವಂ
ಶೋನ್ನತನಟ್ಟುಱಿಂದಿರಿಸಿಪೋದನವಂಗೆ ಮನೋನುರಾಗದಿಂ
ದೆನ್ನ ಸಖಿತ್ವಮಂ ಮೆಱೆದು ಕೂಸುಮನೀಕೆಯುಮಂ ಸಮಂತು ಸಂ
ಪನ್ನತೆಯಿಂದಮೊಪ್ಪಿಸುವ ಭಾಗ್ಯಮನಾಂ ಪಡೆಯೆಂ ದುರಾತ್ಮನೆಂ ೧೨೫

ಪೊಂಗಂ ಮುದದಿಂದಾದಿ
ತ್ಯಂಗಂ ಪುಟ್ಟಿದವೊಲಧಿಕತೇಜಂ ಚೆಲ್ವಿಂ
ಗಂಗಜನನಿಟಿಪ ರೂಪು ಬೆ
ಡಂಗು ಸತ್ತನಗೆ ಪೊಲ್ಲದಾಯ್ತೆಂದಟ್ಟಂ ೧೨೬

ಆಗ ಧನಶ್ರೀಯನ್ನು ಹಾಸಿಗೆಯ ಮೇಲೆ ಮಲಗಿಸಿ ಪಕ್ಕದಲ್ಲಿದ್ದವರನ್ನೆಲ್ಲ ಹೊರಕ್ಕೆ ಕಳುಹಿಸಿಬಿಟ್ಟು ಕೂಸು ಸತ್ತಿತೆಂದು ಸುಳ್ಳಾಡಿ ಕೂಸನ್ನು ಹೊರಕ್ಕೆ ತೆಗೆದುಕೊಂಡು ಹೋಗಿ ಉಪಾಯವಾಗಿ ಏಕಾಂತದಲ್ಲಿ ಒಬ್ಬ ಕ್ರೂರನಾದ ಹೊಲೆಯನಿಗೆ ಬೇಕಾದಷ್ಟು ಹೊನ್ನನ್ನು ಕೊಟ್ಟು ಮೊದಲೇ ಏರ್ಪಡಿಸಿದಂತೆ ಕೊಲ್ಲುವುದಕ್ಕೆಂದು ಅವನ ಕೈಯಲ್ಲಿ ಕೊಟ್ಟು ಕಳುಹಿಸಿಬಿಟ್ಟನು. ೧೨೧–೧೨೩. "ಸಾವು ಇಲ್ಲದಿದ್ದರೆ ಈ ಕೂಸಿನ ಭಾವ, ಇದರ ಓಜಸ್ಸು, ಗುಣ, ಸದ್ಭಾವ, ಒಳ್ಳೆಯತನ, ಇವೆಲ್ಲ ಸಮಸ್ತ ಭೂಮಂಡಲವನ್ನೂ ಸೋಲಿಸುತ್ತವೆ. ಇದರಲ್ಲಿ ಸಂದೇಹವೇನಿದೆ? ೧೨೪. ನನ್ನನ್ನೇ ನಂಬಿ ತನ್ನ ಹೆಂಡತಿಯನ್ನು ಉದಾತ್ತನಾದ ವೈಶ್ಯಶ್ರೇಷ್ಠ ಗುಣಪಾಲನು ಪ್ರೀತಿಯಿಂದ ಬಿಟ್ಟುಹೋದನು. ಅವನಿಗೆ ಸಂತೋಷವಾಗುವಂತೆ ನನ್ನ ಸ್ನೇಹವನ್ನು ತೋರಿಸಿ ಈಕೆಯನ್ನು ಕೂಸಿನೊಡನೆ ಸುಖವಾಗಿ ಒಪ್ಪಿಸುವ ಭಾಗ್ಯವನ್ನು ನಾನು ಪಡೆಯಲಿಲ್ಲ. ನಾನು ದುರಾತ್ಮ. ಈ ಧೀರನು (ಮಗು) ಸೂರ್ಯನಿಗೆ ಹುಟ್ಟಿದ ಹಾಗೆ ಅಧಿಕ ತೇಜಸ್ಸು, ಸೌಂದರ್ಯದಲ್ಲಿ ಮನ್ಮಥನನ್ನು ತಿರಸ್ಕರಿಸುವ ರೂಪ, ಬೆಡಗು, ಇದ್ದ ಹುಡುಗ ಹಾಳಾದ. ನನಗೆ ಕೆಟ್ಟು ದಾಯಿತಂ" ಎಂದು ಅತ್ತನು. (೧೨೫–೬) ಹೀಗೆ ಧನಶ್ರೀಯ ಮನಸ್ಸಿನ ಸಂಕಲ್ಪವು

ಗದ್ಯ॥ ಎಂದು ಧನಶ್ರೀಯು ಮನದ ಸಂಕಲ್ಪಂ ಪೋಪಂತಾಗೆ ಮಾಯಾ ವಿಪ್ರಲಾಪಂಗೆಯ್ಯೆ ಧನಶ್ರೀ ಅವನ ಮನದ ಕಪಟಮನಱಿಯದೆ ನಿಶ್ಚಯಮತ್ತಪನೆಂದು ನಂಬಿ ದುಃಖಮನಾಱಿ ಸಲೆಂದಿಂತೆಂದಳ್ ೧೨೭

ಕೞಿದವರ್ಗೇಕೆ ಪಂಬಲಿಪುದೇಕೆ ಪಲುಂಬುವುದೇಕೆ ಚಿತ್ತದೊಳ್
ಕೊೞೆವುದದೇಕೆ ಚಿಂತಿಸುವುದೇಕೆ ಬೞಲ್ವುದದೇಕೆ ದುಃಖದೊಳ್
ಮುೞುಗುವುದೇಕೆ ಬಾಯ್ವಿಡುವುದೇಕೆ ಕನಲ್ವುದದೇಕೆ ಶೋಕದೊಳ್
ಪೞಯಿಸುತಿರ್ಪುದೇಕೆ ಬಗೆಗೆಟ್ಟು ಬೞಲ್ವುದದೇಕೆ ನೋವುದೋ. ೧೨೮

ಗದ್ಯ॥ ಬೇಡೆಂದು ಮಾಣಿಸುವುದುಂ ಮಾಯಾ ವಿಪ್ರಲಾಪಮಂ ಮಾಣ್ದು ಋಷಿಯರ ವಚನಮಂ ಪುಸಿಮಾಡಿದರ್ದೆಯಂ ನೀವಿಕೊಂಡು ಮಗವು ಸತ್ತುದೆಂದು ರಾಗಿಸಿರ್ದನಿತ್ತಲ್ ಪೊಲೆಯಂ ಪಸುಗೂಸಂ ನಿರ್ಮಾನುಷ್ಯಮಪ್ಪಡವಿಗೊಯ್ದು ಗೞಲಂ ಮುಱಿದು ಕೊಲ್ವೆನೆಂದು ಮಗವಂ ನೋಡುವುದುಂ ೧೨೯

ಅರುಣತೆಯಿಂದಮೊಪ್ಪುವಧರಂ ಕನಕಚ್ಛವಿ ನೀಳ್ದ ಬಾಹುಪಂ
ಕರುಹಮುಖಂ ನಿಮಿರ್ಕೆವಡೆದೊಪ್ಪುವ ನಾಭಿ ನೊಸಲ್ ಪೊದಳ್ದ ಭಾ
ಸುರತರ ಕೆಂಪಿನಿಂದೆಸೆವ ಪಾಣಿತಳಂ ನಸುಗೆಂಪನಾಳ್ದ ಸ
ತ್ತರಳವಿಲೋಚನೋದಯಮಗಲ್ದುರಮುನ್ನತಿವೆತ್ತ ಮಸ್ತಕಂ ೧೩೦

ಹೋಗುವಂತೆ ಮಾಯಾವಿ ಪ್ರಲಾಪ ಮಾಡಲು, ಧನಶ್ರೀಯು ಅವನ ಮನಸ್ಸಿನೊಳಗಿನ ಕಪಟವನ್ನು ತಿಳಿಯದೆ ನಿಶ್ಚಯವಾಗಿಯೂ ಅಳುವನೆಂದು ನಂಬಿ ಅವನ ದುಃಖವನ್ನು ಶಾಂತಗೊಳಿಸಲೆಂದು ಹೀಗೆ ಹೇಳಿದಳು. ೧೨೭. "ಸತ್ತವರಿಗೋಸ್ಕರ ಏಕೆ ಹಂಬಲಿಸುವುದು? ಪಲುಬುವುದಾದರೂ ಏಕೆ? ಸುಮ್ಮನೆ ಮನಸ್ಸಿನಲ್ಲಿ ಮರುಗುವುದೇಕೆ? ಏಕೆ ಬಳಲಬೇಕು? ದುಃಖದಲ್ಲಿ ಮುಳುಗುವುದೇಕೆ? ವೃಥಾ ಗೋಳಾಡುವುದೇಕೆ? ಅಥವಾ ಅವರಿವರ ಮೇಲೆ ಸಿಟ್ಟಾಗುವುದೇಕೆ ? ಮನಸ್ಸನ್ನು ಕೆಡಿಸಿಕೊಂಡು ಹಳವಿಸುತ್ತ ಬಳಲಿ ನೋಯುವುದೇಕೆ ? ೧೨೮. ಬೇಡ" ಎಂದು ಸಮಾಧಾನ ಹೇಳಲು ಅವನು ತನ್ನ ಕೃತಕವಾದ ಗೋಳಾಟವನ್ನು ಬಿಟ್ಟು ಋಷಿಗಳ ಮಾತನ್ನು ಸುಳ್ಳುಮಾಡಿದೆನೆಂದು ಎದೆ ನೀವಿಕೊಂಡು ಸಮಾಧಾನಪಟ್ಟು ಕೂಸು ಸತ್ತಿತೆಂದು ಸಂತೋಷಪಟ್ಟನು. ಇತ್ತ ಆ ಹೊಲೆಯನು ಹಸುಳೆಯನ್ನು ನಿರ್ಮಾನುಷವಾದ ಅಡವಿಗೆ ಹೊತ್ತುಕೊಂಡು ಹೋಗಿ ಗಂಟಲನ್ನು ಮುರಿದು ಕೊಲ್ಲುವೆನೆಂದು ಸಂಕಲ್ಪಿಸಿ ಆ ಮಗುವನ್ನು ನೋಡಿದನು. ೧೨೯. ಕೆಂಪು ಬಣ್ಣದಿಂದ ಶೋಭಿಸುವ ತುಟಿ, ಬಂಗಾರದ ಕಾಂತಿಯುಳ್ಳ ಉದ್ದವಾದ ತೋಳುಗಳು, ಕಮಲದಂಥ ಮುಖ, ದೀರ್ಘವಾದ ನಾಭಿ, ನೊಸಲು, ಹೊರಹೊಮ್ಮಿದ ಪ್ರಕಾಶಮಾನವಾದ ಕೆಂಪಿನಿಂದ ಕೂಡಿ ಹೊಳೆಯುವ ಅಂಗೈಗಳು, ನಸುಗೆಂಪನ್ನು ಹೊಂದಿದ ಚಂಚಲನೇತ್ರಗಳು, ವಿಶಾಲವಾದ ಎದೆ, ಉನ್ನತಿಯಿಂದ ಕೂಡಿದ ತಲೆ ೧೩೦. ಇವೆಲ್ಲ ಸೊಗಸಾಗಿ ತೋರಲು

ಸೊಗಯಿಸಿ ತೋಱೆ ಕರಂ ಮಿಗೆ
ಮೊಗಮಂ ನೋಡುತ್ತೆ ನಲಿವ ಶಿಶುವಂ ಪೊಲೆಯಂ
ಮಿಗೆ ನೋಡಿ ನೋಡಿ ತನ್ನೊಳ್
ಬಗೆದಂ ದಯೆಪುಟ್ಟೆ ಮೋಹಮೊದವಿರೆ ಮನದೊಳ್ ೧೩೧

ಗದ್ಯ॥ ಕೊಲೆಯನುಡುಗಿ ಒಂದು ಪಳ್ಳದೊಳ್ ಮಳಲಂ ಬಗೆದು ಮಾವಿನೆಳೆದಳಿರ್ಗಳಂ ಪಾಸಿ ಕೂಸನಲ್ಲಿ ಪಟ್ಟಿರಿಸಿ ಸುರರಾಜನಿಭನಪ್ಪೀತನೀ ತೀವ್ರಮಪ್ಪಬಿಸಿಲೊಳ್ ತಾನೆ ಹಃಡು ಹುಡುನೆ ಮಃಗ್ಗಿ ಮಿಡುಮಿಡುಮಿಡುಕಿ ಸಾಯದೆ ಷಾಣನಾನೇಕೆ ಪಾಪಮಂ ಮಾಡಿಕೊಳ್ವೆನೆಂದು ಶಿರದೆ ಪೋದನನ್ನೆಗಮಾತನ ಪುಣ್ಯಮೆ ಬರ್ಪಂತೆ ಖಿಲ್ವಬಿಲ್ವ ಸಂಯೋಗದಿಂ ಶ್ರೀದತ್ತಸೆಟ್ಟಿಯ ಮೈದುನ ನಪ್ಪಿಂದ್ರದತ್ತಸೆಟ್ಟಿಪರದುಃಪೋಗುತ್ತುಮಲ್ಲಿ ಬಿಟ್ಟಿರ್ಪುದರ್ದುಂ, ಆತನ ಬೀಡಿನವರಿಂಧ ನಾರ್ಥಮತ್ತಿತ್ತ ತೊಟಲುತ್ತುಮೆಳದಳಿರ ಮೇಲೆ ಪಟ್ಟಿರ್ದುದ ನಲಿವ ಶಿಶುವಂ ಕಂಡು ೧೩೨

ಕರಮೊಳ್ಳಿತಾಯ್ತುಸೆಟ್ಟಿಗೆ
ಪಿರಿದುತ್ಸವಮಾಗೆರಾಗದಿಂ ಶಿಶುವಂ ನಾಂ
ತ್ವರಿತದಿನೆಯೆಯ್ದೊಪ್ಪಿಸಿ ಕೊಡೆ
ಪಿರಿದಪ್ಪೊಂದರ್ಥಲಾಭಮುಂ ನಮಗಕ್ಕುಂ ೧೩೩

ಒಂದೇ ದೃಷ್ಟಿಯಿಂದ ಮುಖವನ್ನು ನೋಡುತ್ತ ನಗುವ ಆ ಮಗುವನ್ನು ಹೊಲೆಯನು ದೃಷ್ಟಿಸಿ ನೋಡಿ ಮನಸ್ಸಿನಲ್ಲಿ ದಯೆ ಹುಟ್ಟಿ ಮೋಹವುಂಟಾಗಲು ತನ್ನಲ್ಲಿಯೇ ಯೋಚಿಸಿದನು. ೧೩೧. ಕೊಲೆಯ ಯೋಚನೆಯನ್ನು ಬಿಟ್ಟು, ಹಳ್ಳದಲ್ಲಿ ಮರಳನ್ನು ತೋಡಿ ಮಾವಿನ ಎಳೆಯ ಚಿಗುರುಗಳನ್ನು ಹಾಸಿ ಕೂಸನ್ನು ಅಲ್ಲಿ ಮಲಗಿಸಿ "ದೇವೇಂದ್ರನನ್ನು ಹೋಲುವ ಈತನು ತೀವ್ರವಾದ ಈ ಬಿಸಿಲಿನಲ್ಲಿ ತಾನೇ ಬೆಚ್ಚಗೆ ಸೀದು ಅಸಹಾಯನಾಗಿ ಒದ್ದಾಡಿ ಸಾಯದೆ ಇರುವುದಿಲ್ಲ, ನಾನೇಕೆ ಆ ಪಾಪವನ್ನು ಕಟ್ಟಿಕೊಳ್ಳಲಿ ?" ಎಂದು ಮಾತನಾಡದೆ ಹೊರಟು ಹೋದನು. ಆ ವೇಳೆಗೆ ಅವನ ಪುಣ್ಯವೇ ಬರುವಂತೆ ಖಿಲ್ವಬಿಲ್ಲ ಸಂಯೋಗದಂತೆ (ಬೋಳನೆತ್ತಿಯವನು ಬರುವುದಕ್ಕೂ ಬಿಲ್ವಪತ್ರೆಕಾಯಿ ಬೀಳುವುದಕ್ಕೂ ಸರಿಯಾಯಿತು) ಶ್ರೀದತ್ತಸೆಟ್ಟಿಯ ಮೈದುನನಾದ ಇಂದ್ರದತ್ತಸೆಟ್ಟಿ ವ್ಯಾಪಾರಕ್ಕೆ ಹೋಗುತ್ತ ಅಲ್ಲಿಗೆ ಹತ್ತಿರದಲ್ಲಿ ಬೀಡುಬಿಟ್ಟಿದ್ದನು. ಆತನ ಬೀಡಿನವರು. ಸೌದೆಗೋಸ್ಕರ ಅತ್ತಿತ್ತ ಸುತ್ತಾಡುತ್ತ ಎಳೆಯ ಚಿಗುರಿನ ಮೇಲೆ ಮಲಗಿದ್ದು ನಲಿಯುವ ಮಗುವನ್ನು ಕಂಡರು ೧೩೨. "ಬಹಳ ಒಳ್ಳೆಯದಾಯಿತು. ಸೆಟ್ಟಿಗೆ ದೊಡ್ಡ ಸಂತೋಷವಾಗುತ್ತದೆ, ಪ್ರೀತಿಯಿಂದ ಈ ಮಗುವನ್ನು ನಾನು ಬೇಗನೆ ತೆಗದುಕೊಂಡು ಹೋಗಿ ಒಪ್ಪಿಸಿಕೊಟ್ಟರೆ ಹೆಚ್ಚಿನ ಅರ್ಥಲಾಭವು ನನಗೆ ಆಗುತ್ತದೆ" ಎಂದು ಯೋಚಿಸಿ ಆ ಎಳೆಯ ಮಗುವನ್ನು ನಿಧಿಯನ್ನು ಎತ್ತುವ ಹಾಗೆ ಎತ್ತಿಕೊಂಡು ಬಂದು ಇಂದ್ರದತ್ತ ಸೆಟ್ಟಿಗೆ ಒಪ್ಪಿಸಿದನು. ಅವನು ತನಗೆ ಮಕ್ಕಳಿಲ್ಲದ್ದರಿಂದ ಬಡವನು ಬಚ್ಚಿಟ್ಟಿದ್ದ ನಿಧಿಯನ್ನು ಕಂಡ ಹಾಗೆ ಉಬ್ಬಿ ತನ್ನ ಹೆಂಡತಿ, ಶ್ರೀದತ್ತನ ತಂಗಿಯಾದ ರಾಧೆಯನ್ನು ಕರೆದು

ಗದ್ಯ॥ ಎಂದು ಕೂಸಂ ನಿಧಾನಮನೆತ್ತುವಂತೆತ್ತಿಕೊಂಡು ಬಂದಿಂದ್ರದತ್ತಸೆಟ್ಟಿಗೊಪ್ಪಿಸುವುದುಂ ತನಗೆ ಮಕ್ಕಳಿಲ್ಲದುದಱಿಂ ಬಡವಂ ಕಡಾರದ ಪೊನ್ನಂ ಕಂಡಂತೆ ಪೆರ್ಚಿ ತನ್ನ ಭಾರ್ಯೆ ಶ್ರೀದತ್ತನ ತಂಗೆಯಪ್ಪ ರಾಧೆಯಂ ಕರೆದು ನಿನಗೆ ಪುತ್ರಲಾಭಮಾಯ್ತೆಂದು ಬಾಲಾರ್ಕಸನ್ನಿಭ ಶಿಶುವಂ ಕೊಟ್ಟು ಕೂಸಂ ತಂದವರ್ಗೆ ಗುಪ್ತದಿಂ ಬೇಟ್ಪನಿತು ಪೊನ್ನಂ ಕೊಟ್ಟು ಸೆಟ್ಟಿತಿ ಗೂಢಗರ್ಭದಿಂ ಗಂಡುಗೂಸಂ ಪೆತ್ತಳೆಂದೊಸಗೆಯುಮಂ ಜಿನಾಭಿಷೇಕ ಪೂಜೆಯುಮಂ ಮಾಡಿ ಸಂತೋಷದಿಂದಿರ್ಪುದುಂ ೧೩೪

ಪಡೆದನೊಪ್ಪುವ ಪುತ್ರನಂ ಸುರರಾಜಸನ್ನಿಭನಂ ಮನಂ
ಬಿಡೆ ಮನೋಭವರೂಪನಂ ಪಡೆದಿಂದ್ರದತ್ತವಣಿಗ್ವರಂ
ತಡೆಯದೆಂಬುದನೆಯ್ದೆ ತೊಟ್ಟನೆ ಕೇಳ್ದು ವಿಸ್ಮಯಮಾದುದೆಂ
ದುಡುಗದಾ ವಚನಕ್ಕೆ ನಾಡೆಯುಮಳ್ಕಿ ಬಳ್ಕಿನಿರಂತರಂ ೧೩೫

ಗದ್ಯ॥ ಎನ್ನ ತಂಗೆಯಪ್ಪ ರಾಧೆಗೆ ಗರ್ಭಮಿಂದುವರಮಿಲ್ಲೆಂಬುದನಿಂಬಾಗಿ ಬಲ್ಲೆಂ ಭೋಂಕನೆ ಮಗನಂ ಪಡೆದಳೆಂಬ ಮಾತಾದುದು ಧನಶ್ರೀಯ ಮಗನಕ್ಕುಮೋ ವಿಪರೀತಮಿದನಾರೈವೆನೆಂದು ಬೆಗಡುಗೊಂಡು ತಂಗೆಯ ಮನೆಗೆ ವಂದು ಗುಣಪಾಲಸೆಟ್ಟಿಯೊಳಚ್ಚೊತ್ತಿದಂತಪ್ಪ ಶಿಶುವಂ ಕಂಡಱಿದು ಬೆರ್ಚಿ ಕಲ್ಲಂ ತಾಗಿದ ಏಂಟೆಯಂತೆ ಮುಟ್ಟುಗೆಟ್ಟು ಪೆಂಡಿರ ಪೊಲ್ಲಮೆಯಂ ಕಂಡ

'ನಿನಗೆ ಪುತ್ರಲಾಭವಾಯಿತು' ಎಂದು ಹೇಳಿ ಬಾಲಸೂರ್ಯನನ್ನು ಹೋಲುವಂಥ ಮಗುವನ್ನು ಕೊಟ್ಟು, ಆ ಕೂಸನ್ನು ತಂದವರಿಗೆ ಗುಟ್ಟಾಗಿ ಬೇಡಿದಷ್ಟು ಹೊನ್ನುಗಳನ್ನು ಕೊಟ್ಟು, ಸೆಟ್ಟಿಯ ಹೆಂಡತಿಯು ಗೂಢಗರ್ಭದಿಂದ ಗಂಡುಮಗುವನ್ನು ಹೆತ್ತಳು" ಎಂದು ಹೇಳಿ ಉತ್ಸವವನ್ನೂ ಜಿನಾಭಿಷೇಕ ಪೂಜೆಗಳನ್ನು ಮಾಡಿ ಸಂತೋಷದಿಂದಿದ್ದನು ೧೩೪. "ಇಂದ್ರದತ್ತನೆಂಬ ವರ್ತಕಶ್ರೇಷ್ಠನು ದೇವೇಂದ್ರನನ್ನು ಹೋಲುವಂಥ, ಮನ್ಮಥನಂತೆ ರೂಪವಂತನಾದ ಶ್ರೇಷ್ಠನಾದ ಮಗನನ್ನು ಪಡೆದನು" ಎಂಬ ಸುದ್ದಿಯನ್ನು ಇದ್ದಕ್ಕಿದ್ದ ಹಾಗೆ ಕೇಳಿ ಬಹಳ ಆಶ್ಚರ್ಯಪಟ್ಟು ಅಲ್ಲಿಗೆ ಬಿಡದೆ ಆ ಸುದ್ದಿಗೆ ಬಹಳವಾಗಿ ಅಂಜಿಕೊಂಡು ನಡುಕ ಹುಟ್ಟಲು ೧೩೫. "ನನ್ನ ತಂಗಿಯಾದ ರಾಧೆಗೆ ಇಂದಿನ ತನಕ ಗರ್ಭವಾಗಿರಲಿಲ್ಲವೆಂಬುದನ್ನು ನಾನು ಚೆನ್ನಾಗಿ ಬಲ್ಲೆ. ಹಟಾತ್ತಾಗಿ ಅವಳು ಮಗುವನ್ನು ಹೆತ್ತಳೆಂಬ ಮಾತು ಹುಟ್ಟಿದೆ. ಅದು ಧನಶ್ರೀಯ ಮಗುವೇ ಆಗಿರಬಹುದೆ? ಈ ವಿಪರೀತದ ಸುದ್ದಿಯನ್ನು ಪರೀಕ್ಷಿಸುತ್ತೇನೆ." ಎಂದು ಭಯಾಶ್ಚರ್ಯಗಳಿಂದ ತಂಗಿಯ ಮನೆಗೆ ಬಂದನು. ಅಲ್ಲಿ ಗುಣಪಾಲಸೆಟ್ಟಿಯಲ್ಲಿ ಅಚ್ಚೊತ್ತಿದ ಹಾಗೆ ಇದ್ದ ಮಗುವನ್ನು ಕಂಡು ಬೆಚ್ಚಿ, ಕಲ್ಲನ್ನು ತಾಕಿದ ಹೆಂಟೆಯಂತೆ ಶಕ್ತಿಗುಂದಿ, ಉಪಾಯ ತೋರದೆ, ಹೆಂಗಸಿನ ಕೆಟ್ಟತನವನ್ನು ಕಂಡ ಗಂಡನ ಹಾಗೆ ಮನಸ್ಸು ಮುರಿದು,

ಗಂಡನಂತೆ ಮನಂ ಮುಱಿದು ಬೇಸಗೆಯೊಳುಪ್ಪಂ ತಿಂದನಂತೆ ಮಲ್ಮಲಂ ಮಱುಗಿ ಮತ್ತಂ ಕೊಲ್ವೆನೆಂಬ ಬಗೆಯಂ ತಂದುಪಾಯದಿಂ ಶ್ರೀದತ್ತಸೆಟ್ಟಿ ಪುಸಿಗೂರ್ಮೆಯಿಂದಿಂದ್ರದತ್ತ ಸೆಟ್ಟಿಯ ನಿಂತೆಂದಂ ೧೩೬

ಅನುಜೆಗೆಪುತ್ರರಿಲ್ಲ ಸಿರಿಯುಂ ಧನಮುಂ ವ್ಯಥೆಯಾದುದೆಂದು ಮ
ನ್ಮನದೊಳಗಾಗಳುಂ ಮಱುಗುತಿರ್ದೆನಿಳಾವಳಯೈಕವಂದ್ಯನಂ
ತನಯನನೀಗಳರ್ತಿವೆರಸಾದರದಿಂ ನೆಱೆ ಕಂಡು ಸಂತಸಂ
ಮನದೊಳುದಾತ್ತಮಾದುದೆಲೆ ಪೋದುದು ಚಿಂತೆಯುಮೆನ್ನ ದುಃಖಮುಂ ೧೩೭

ಗದ್ಯ॥ ಎಂದು ಚಾಟುಕಾರವಚನಂಗಳಿಂ ನಂಬೆ ನುಡಿದು ತಂಗೆಯ ಮೈದುನನ ಮೊಗಮಂ ನೋಡಿ ಮುನ್ನಪ್ಪೊಡಿನಿತುಕಾಲಮಱಿಯದನಲ್ಲೆಂ ರಾಧೆಗೆ ಗರ್ಭಮಿಲ್ಲೆಂಬುದಂ ಬಲ್ಲೆನಿದೆನ ಗಾಶ್ಚರ್ಯಮಾದಪುದಿದನೆನಗಱಿವಂತಾಗೆ ಪೇೞಿಮೆನೆ ದಿಟಮೀತನೆನಗೆ ಕೂರ್ಪನೆಂದು ಕೂಸಿನ ವೃತ್ತಾಂತಮೆಲ್ಲಮಂ ಪೇೞೆ ರಾಧೆಯ ಮಾತಂ ಕೇಳ್ದು ಕೃತಕದಿಂ ರಾಗಿಸಿ ೧೩೮

ಒಸಗೆಯನಿಂಬಾಗಿರೆ ಸಂ
ತಸದಿಂ ಮಾಡಿಸೆನೆಗೆವುವುಗೇನೊಪ್ಪಿರೆ ? ಕ
ಟ್ಟಸೆನೆ ಬಯಕೆಯುಮನೀಯೆನೆ
ಪೊಸತಾಗಿರೆ ನಂಟರಟ್ಕಱಿಂ ನೋಡುವಿನಂ ೧೩೯

ಬೇಸಗೆಯೊಳಗೆ ಉಪ್ಪನ್ನು ತಿಂದವನ ಹಾಗೆ ಮಲಮಲನೆ ಮರುಗಿ, 'ಪುನಃ ಕೊಲ್ಲುವೆನು' ಎಂಬ ಸಂಕಲ್ಪ ಮಾಡಿ ಉಪಾಯದಿಂದ ಶ್ರೀದತ್ತಸೆಟ್ಟಿಯು ಸುಳ್ಳು ಪ್ರೀತಿಯನ್ನು ನಟಿಸಿ ಇಂದ್ರದತ್ತ ಸೆಟ್ಟಿಗೆ ಹೀಗೆ ಹೇಳಿದನು. ೧೩೬. "ತಂಗಿಗೆ ಮಕ್ಕಳಿಲ್ಲ. ಐಸಿರಿಯೂ ಧನವೂ ವ್ಯರ್ಥವಾದುವು, ಎಂದು ನನ್ನ ಮನಸ್ಸಿನಲ್ಲಿ ಆಗಾಗ ವ್ಯಥೆ ಪಡುತ್ತಿದ್ದೆ. ಈ ಭೂಮಂಡಲಕ್ಕೇ ವಂದನಾರ್ಹನಾದ ಮಗನನ್ನು ಈಗ ಪ್ರೀತ್ಯಾದರಗಳಿಂದ ಕಂಡು ಮನಸ್ಸಿಗೆ ಅತಿಶಯವಾದ ಸಂತೋಷವಾಯಿತು; ನನ್ನ ಚಿಂತೆಯೂ ದುಃಖವೂ ಹೋದುವು" ೧೩೭. ಎಂದು ಪ್ರಿಯವಚನಗಳಿಂದ ನಂಬುವಂತೆ ನುಡಿದು ತಂಗಿ ಮತ್ತು ಮೈದುನರ ಮುಖಗಳನ್ನು ನೋಡಿ, "ಹಿಂದೆಂದಾದರೂ ನನಗೆ ತಿಳಿಯದೆ ಇರಲಿಲ್ಲ. ರಾಧೆಗೆ ಗರ್ಭವಿಲ್ಲವೆಂಬುದನ್ನು ಬಲ್ಲೆ. ಇದು ನನಗೆ ಆಶ್ಚರ್ಯವಾಗಿದೆ. ಇದನ್ನು ನನಗೆ ತಿಳಿಯುವಂತೆ ಹೇಳಿ" ಎಂದನು. ನಿಜವಾಗಿಯೂ ಇವನು ನಮ್ಮನ್ನು ಪ್ರೀತಿಸುವವನೆಂದು ಭಾವಿಸಿ, ಆ ಕೂಸಿನ ವೃತ್ತಾಂತವೆಲ್ಲವನ್ನೂ ಹೇಳಲು ರಾಧೆಯ ಮಾತನ್ನು ಕೇಳಿ ಕಪಟ ಸಂತೋಷವನ್ನು ನಟಿಸಿದನು. ೧೩೮. "ವೈಭವದಿಂದ ಉತ್ಸವವನ್ನು ಮಾಡಿಸದಿರುವೆನೆ ? ನಂಟರೆಲ್ಲರೂ ಸಂಭ್ರಮದಿಂದ ನೋಡುವಂತೆ ಸಂಭ್ರಮವನ್ನು ಮಾಡಿ ತಂಗಿ ಬಯಸಿದ್ದನ್ನು ಕೊಡದೆ ಇರುವೆನೆ ? ೧೩೯. ಬಡವರ ಮಕ್ಕಳ ಹಾಗೆ ಹೀನವಾದ ರೀತಿಯಲ್ಲಿ ಉತ್ಸವವನ್ನು ಮಾಡದೆ

ಬಡವರ ಮಕ್ಕಳಂತೆ ಹೀನೋತ್ಸಾಹವಂ ಮಾಡದೆನ್ನ ತಂಗೆಯುಮನೆನ್ನಳಿಯ
ಗದ್ಯ॥ ಪಿರಿದಪ್ಪುತ್ಸಾಹವಂ ಮಾಡವೇಟ್ಟುಗುಮೆಂದಿಂದ್ರದತ್ತಸೆಟ್ಟಿ
ನುಮನೆನ್ನೂರಿಂಗೊಡಗೊಂಡು ಕೂಸುಮನುಜ್ಜಯಿನಿಗೊಡಗೊಂಡು ಬಂದು ಕಪಟೋ
ಯುಮನೊಡಂಬಡಿಸಿ ರಾಧೆಯುಮಂ ಕೆಲವು ದಿವಸಂ ಒಟಿಕ್ಕೆ ನಿಷ್ಠುರನಪ್ಪೊರ್ವ ಮಾದೆಗಂಗೆ ಪಿರಿದಪ್ಪರ್ಥಮಂ
ತ್ಸಾಹವಂ ಮಾಡಿ ನಡಪುವ ದಾದಿಯುನೊಡಂಬಡಿಸಿ ಕೂಸು ಸತ್ತಿತೆಂದು ಮಾಡಿ ಪೊರಗಣ್ಗೊ
ಕೊಟ್ಟೊಡಂಬಡಿಸಿ ಮಾದೆಗನ ಕೈಯೊಳ್ ಕೊಲ್ಲೆಂದು ಕೊಟ್ಟಟ್ಟಿ ರಾಧೆಯುಮಂ ತನ್ನ ಪೆಂಡಿತಿಯಪ್ಪ
ಯ್ದು ವಿಶಾಖೆಯುಮಂ ತನ್ನ ಮಗನಪ್ಪ ಮಹಾಬಳನುಮಂ ನಂಬಿಸಲ್ವೇಡಿ ಮಾಯಾಪ್ರಳಾಪಮಂ
ಪಣ್ಣೆ ೧೪೦

ಪಿರಿದಪ್ಪರ್ಥವನೀವೆನೆನ್ನ ಮಗಳಂ ಕೂರ್ತೀವೆನಟ್ಕಿರ್ತುರ್.ಮಾ
ಣ್ದಿರದುತ್ಸಾಹಮನೀ ಪುರಕ್ಕೆ ವಿಭವಂ ತಾನಾಗೆ ಮಾಟ್ಪೆಂ ನರೇ
ಶ್ವರನಂ ಮಾಣಿಸಿ ಭೂಷಣಾವಳಿಗಳಿಂ ಚೆಲ್ವಾಗಿ ಮುಂದಿರ್ದು ಚೆ
ಚ್ಚರದಿಂ ಮಾಡಿಸಿ ಕೂರ್ಮೆಯಿಂ ಕುಡುವೆನೆಂದಿರ್ದೆಂ ಮಹೋತ್ಸಾಹದಿಂ ೧೪೧

ಎನ್ನ ಪಡೆದೊಡಮೆಗಂ ವೈ
ಶ್ಯೋನ್ನತನೆನಿಸಿರ್ದ ನಿನ್ನ ತಂದೆಯು ಪಡೆದಾ
ಪೊನ್ನಂಗೆ ನೀನೆ ಮುಖ್ಯನೆ
ನಿಕ್ಕುಂ ನಿನ್ನಂತು ಭಾಗ್ಯಹೀನರುಮೊಳರೇ ೧೪೨

ನನ್ನ ತಂಗಿಯನ್ನೂ ಅಳಿಯನನ್ನೂ ನನ್ನ ಊರಿಗೆ ಕರೆದುಕೊಂಡು ಹೋಗಿ ೧೪೧; ದೊಡ್ಡ ಉತ್ಸವವನ್ನು ಮಾಡಬೇಕು." ಎಂದು ಇಂದ್ರದತ್ತ ಸೆಟ್ಟಿಯನ್ನೂ ಒಪ್ಪಿಸಿ ರಾಧೆಯನ್ನೂ ಕೂಸನ್ನೂ ಉಜ್ಜಯಿನಿಗೆ ಕರೆದುಕೊಂಡು ಬಂದು ಕಪಟದ ಉತ್ಸಾಹವನ್ನು ಮೆರೆದು ಕೆಲವು ದಿನಗಳ ತರುವಾಯ ಕ್ರೂರಿಯಾದ ಒಬ್ಬ ಮಾದಿಗನಿಗೆ ಹೆಚ್ಚಿನ ಧನವನ್ನು ಕೊಟ್ಟು ಒಪ್ಪಿಸಿ ಸಾಕುವ ದಾದಿಯನ್ನೂ ಒಪ್ಪಿಸಿ ಕೂಸು ಸತ್ತು ಹೋಯಿತೆಂದು ಹೇಳಿ ಹೊರಕ್ಕೆ ತೆಗೆದುಕೊಂಡು ಹೋಗಿ ಆ ಮಾದಿಗನ ಕೈಯಲ್ಲಿ ಕೊಟ್ಟು ಕೊಲ್ಲೆಂದು ಹೇಳಿ ಕಳುಹಿಸಿ ರಾಧೆಯನ್ನೂ ತನ್ನ ಹೆಂಡತಿ ವಿಶಾಖೆಯನ್ನೂ ತನ್ನ ಮಗನಾದ ಮಹಾಬಲನನ್ನೂ ನಂಬಿಸುವುದಕ್ಕಾಗಿ ಗೋಳಾಟವನ್ನು ನಟಿಸುತ್ತ ಇದ್ದನು. ೧೪೦. ಹೆಚ್ಚಾದ ಹಣ ಕೊಡುತ್ತೇನೆ, ನನ್ನ ಮಗಳನ್ನು ಪ್ರೀತಿಯಿಂದ ಕೊಡುತ್ತೇನೆ. ಸಂಭ್ರಮದಿಂದ ಈ ಊರಿಗೇ ಉತ್ಸಾಹವಾಗುವಂತೆ ವೈಭವದ ಮದುವೆ ಮಾಡುತ್ತೇನೆ. ರಾಜರನ್ನೂ ವಿಚಾರಿಸಿ ಮದುಮಕ್ಕಳಿಗೆ ಭೂಷಣಾದಿಗಳನ್ನು ನಾನೇ ಇದಿರಿನಲ್ಲಿದ್ದುಕೊಂಡು ಮಾಡಿಸಿ ಕೊಡುತ್ತೇನೆ, ಎಂದು ಬಹಳ ಆಸೆಯಿಂದಿದ್ದೆ, ನಾನು ಗಳಿಸಿದ ಐಶ್ವರ್ಯಕ್ಕೂ ವೈಶ್ಯೋತ್ತಮನಿಂದ ನಿನ್ನ ತಂದೆ ಸಂಪಾದಿಸಿದ ಹೊನ್ನಿಗೂ ನೀನೇ ಮುಖ್ಯಸ್ಥನಾಗುತ್ತಿದ್ದೆ, ನಿನ್ನಂಥ ಭಾಗ್ಯಹೀನರೂ ಉಂಟೆ ? ೧೪೨. ದೇವರನ್ನು ಹೋಲುವಂಥ, ಚಂದ್ರನನ್ನೂ ವಿಚಾರಿಸುವಂಥ

ಅನಿಮಿಷಸನ್ನಿಭನಂ ಚಂ
ದ್ರನನಿಟಿಸುವ ಸೌಮ್ಯರೂಪನಂ ಪಡೆದುಂ ನಂ
ದನನಂ ಪಡೆಯದ ತೆಱದಿಂ
ನಿನಗಾದುದು ದುಃಖಮಕ್ಕ ಪಾಪೋದಯದಿಂ ೧೪೩

ಕಂದರ್ಪನಿಭಂ ತಂಗೆಗೆ
ನಂದನನುದಯಾರ್ಕತೇಜನಾದಂ ಲೇಸಾ
ಯ್ತೆಂದಿರ್ದೆನೆನ್ನತನು ದ
ಳ್ಳೆಂದುರಿದಪುದೀಗಳೆತ್ತವೋಪೆನೊ ಕಟಾವೇ ೧೪೪

ಗದ್ಯ॥ ಎಂದು ತಂಗೆಯುಮೇಱಲುಮಿೞಿಯಲುಮಂ ನೋಡಿ ಕೃತಕದಿಂ ಪ್ರಳಾಪಂಗೆಯ್ಯುತಿರ್ದ ನಿತ್ತಲ್ ಮಾದೆಗಂ ಕೂಸನಡವಿಗೊಯ್ದು ಗಂಟಲಂ ಮೆಟ್ಟಿ ಕೊಲ್ವೆನೆಂದು ಕೂಸಂ ಪೆಗಲಿಂ ನೆಲಕ್ಕಿೞಿಪುವುದುಮಿೞಿಯಲೊಲ್ಲದೆ ಮಾದೆಗನ ಪಱಿಗಡ್ಡಮನೆಡಗಯ್ಯೊಳ್ ಪಿಡಿದು ಬಲದ ಕಯ್ಯೊಳ್ಮೊಗಮಂ ಪೊಯ್ಯುತ್ತುಂ ಕುಂಕುಮದುಂಡೆಯನನುಕರಿಸಿರ್ಪ ಪಡಂಗಳಿಂದೆರ್ದೆಯ ನೊದೆಯುತ್ತುಮಿರೆ ದುರಾತ್ಮಂ ಶಿಶುವಿನ ರೂಪುಮಂ ಗಾಡಿಯುಮಂ ವಿಳಾಸಮುಮಂ ಮುದ್ದಾಟಮುಮಂ ನೋಡಿ ಕರುಣಮುಂ ಸ್ನೇಹಮುಂ ತಿಣ್ಣಮಾಗೆ ಕೊಲಲಾರದೆ ತೊಱೆ ಪುಳಿನಸ್ಥಳದೊಳ್ ಮಳಲ ಪಾಸಂ ಮಾಡಿ ಮೆಲ್ಲನಲ್ಲಿ ಪಟ್ಟಿರಿಸಿ ನಿನ್ನ ಮೆಚ್ಚಿದಂತಾಗೆಂದು ಪೋದ ನನ್ನೆಗಂ ೧೪೫

ಸೌಮ್ಯರೂಪವುಳ್ಳ ಮಗನನ್ನು ಪಡೆದೂ ಸಹ ಪಡೆಯದವಳ ಹಾಗೆಯೇ ಅಕ್ಕಾ, ನಿನಗೆ ದುಃಖವುಂಟಾಯಿತು. ಇದು ಯಾವ ಪಾಪಫಲವೊ! ೧೪೩. ತಂಗಿಗೆ ಮನ್ಮಥನಂಥ ಸುರೂಪವುಳ್ಳ, ಉದಯಸೂರ್ಯನಂಥ ತೇಜಸ್ಸುಳ್ಳ ಮಗ ಹುಟ್ಟಿದ. ಒಳ್ಳೆಯದಾಯಿತು, ಎಂದಿದ್ದೆ. ಈಗ ನನ್ನ ದೇಹವೇ ದಳ್ಳೆಂದುರಿಯುತ್ತಿದೆ. ಎಲ್ಲಿ ಹೋಗಲೋ ಮಗುವೆ ?" ೧೪೪. ಎಂದು ತಂಗಿಯನ್ನು ಮೇಲೆ ಕೆಳಗೆ ನೋಡಿ ಕಪಟದಿಂದ ಗೋಳಾಡುತ್ತಿದ್ದನು, ಇತ್ತ ಆ ಮಾದಿಗನು ಕೂಸನ್ನು ಅಡವಿಗೆ ಎತ್ತಿ ಕೊಂಡು ಹೋಗಿ ಗಂಟಲನ್ನು ಮೆಟ್ಟಿ ಕೊಲ್ಲುವೆನೆಂದು ಆ ಕೂಸನ್ನು ಹೆಗಲಿನಿಂದ ನೆಲಕ್ಕಿಳಿಸಲು, ಇಳಿಯಲು ಒಪ್ಪದೆ, ಮಾದಿಗನ ಹರಕಲು ಗಡ್ಡವನ್ನು ಎಡಗೈಲಿ ಹಿಡಿದು ಬಲಗೈಲಿ ಮುಖವನ್ನು ಹೊಡೆಯುತ್ತ ಕುಂಕುಮದ ಉಂಡೆಯನ್ನು ಹೋಲು ತ್ತಿರುವ ಪಾದಗಳಿಂದ ಎದೆಯನ್ನು ಒದೆಯುತ್ತಿರಲು ಆ ದುರಾತ್ಮನು ಮಗುವಿನ ರೂಪ ಭಾವ ವಿಲಾಸಗಳನ್ನೂ ಮುದ್ದಾಟವನ್ನೂ ನೋಡಿ ಕರುಣೆಯೂ ಸ್ನೇಹವೂ ಅಧಿಕ ವಾಗಲು, ಕೊಲ್ಲಲಾರದೆ, ಹಳ್ಳದ ಮರಳ ಜಾಗದಲ್ಲಿ ಮರಳಿನ ಹಾಸಿಗೆ ಮಾಡಿ ಮೆಲ್ಲನೆ ಅಲ್ಲಿ ಮಲಗಿಸಿ 'ನಿನಗೆ ಇಷ್ಟ ಬಂದಂತೆ ಆಗು' ಎಂದು ಹೋದನು. ಆ ವೇಳೆಗೆ

ತೊಱೆಯೊಳ್ ನೀರುಣಲೆಂದು ಬಂದು ತುಱುಗಳ್ ಪೆಟ್ಟಿರ್ದ ಪೂರ್ಣೇಂದುವಂ
ನೆಱೆ ಪೋಲ್ತುನ್ನತನಂ ಸುರೇಂದ್ರನಿಭನಂ ತದ್ಬಾಲನಂ ಕಂಡು ಮೂ
ಗಿಱಿಯುತ್ತುಂ ಕುಡಿವಾಲಮೆತ್ತಿ ಕನೆಯುತ್ತಾನಂದದಿಂ ಸುತ್ತಿ ಮ
ತ್ತಿಱಿದತ್ತಿತ್ತಲವುಂಕಿ ಪೋಗದಿರೆ ಕಂಡೆಯ್ತಂದು ಗೋಪಾಲಕರ್ ೧೪೬

ಗದ್ಯ॥ ಇದೇನಾನೊಂದಾಶ್ಚರ್ಯವಾಗಲೆವೇಟ್ಕುಮೆಂಬು ಬಳಸಿರ್ದ ಜೀವಧನಂಗಳಂ
ತೊಲಗಬಡಿದು ನೋಟ್ಪುದುಂ ೧೪೭

ಲೀಲೆಯೊಳೆ ಮಳಲ ಜಗಲಿಯ
ಮೇಲೆ ಸರೋಜಾತಸಖಗೆ ಮಿಗಿಲೆನಿಸುವ ಸ
ಲ್ಲೀಲೆಯ ತೇಜೋಧಿಕನಂ
ಬಾಲಕನಂ ನಲಿಯುತಿರ್ದನಂ ಕಂಡಾಗಳ್ ೧೪೮

ಈತಂ ಭಾವಿಸಿ ನೋಟ್ಪೊಡೆ
ಭೂತಳನಾಥಂಗೆ ಪುಟ್ಟಿದನ್ನಂ ಧರಣೀ
ಖ್ಯಾತಂ ಕೇವಲಮಲ್ಲಂ
ಪ್ರೀತಿಯಿನೀ ಶಿಶುವನೊಯ್ದು ಕರಮುತ್ಸವದಿಂ ೨೪೯

ಗದ್ಯ॥ ನಮ್ಮಾಳ್ದಂಗೆ ಕುಡುವೆಮೆಂದು ಗೋಪಾಲರಾ ಶಿಶುವನೆತ್ತಿಕೊಂಡು ಬಂದು ಗೋವಿಂದ
ನೆಂಬ ತುಱಿಗಾಱಂಗೆ ಕುಡುವುದುಮಾತಂ ಕರಮೊಸೆದು ಗೋಪಾಲರ್ಗೆ ಮೆಚ್ಚುಗೊಟ್ಟು ತನ್ನ

ಹೊಳೆಯಲ್ಲಿ ನೀರು ಕುಡಿಯುವುದಕ್ಕೆಂದು ಬಂದು ಹಸುಗಳು ಮಲಗಿದ್ದ ಪೂರ್ಣ ಚಂದ್ರನನ್ನು ಹೋಲುತ್ತಲಿದ್ದ ಶ್ರೇಷ್ಠಬಾಲಕ, ದೇವೇಂದ್ರ ಸದೃಶನನ್ನು ಕಂಡು ಮೂಸುತ್ತ ಕೊನೆ ಬಾಲಗಳನ್ನೆತ್ತಿ ಕೂಗುತ್ತ ಆನಂದದಿಂದ ಸುತ್ತ ಮುತ್ತಿಕೊಂಡು ಅತ್ತಿತ್ತ ಅಲುಗದೆ ಇರಲು ದನ ಕಾಯುವವರು ಕಂಡು "ಇದೇನೋ ಒಂದು ಆಶ್ಚರ್ಯವಿರಲೇ ಬೇಕು" ಎಂದು ಸುತ್ತುಗಟ್ಟಿದ್ದ ಜೀವಧನ (ಹಸು)ಗಳನ್ನು ಹೊಡೆದು ಹೊರಡಿಸಿ ನೋಡಿದರು. ೧೪೬–೧೪೭. ಮರಳಿನ ಜಗಳಿಯ ಮೇಲೆ ಕಮಲಮಿತ್ರ (ಸೂರ್ಯ)ನಿಗೆ ಹೆಚ್ಚಿನದೆನ್ನಿಸುವಂಥ ತೇಜಸ್ಸನ್ನು ಹೊಂದಿದ, ಆನಂದದಿಂದ ಆಡಿ ಕೊಳ್ಳುತ್ತಿದ್ದ ಬಾಲಕನನ್ನು ಅವರು ಕಂಡರು. ೧೪೮. "ಗಮನಿಸಿ ನೋಡಿದರೆ ಇವನು ಭೂಪತಿಗೆ ಹುಟ್ಟಿದವನು. ಇವನು ಲೋಕವಿಖ್ಯಾತನಾಗುವನು; ಸಾಮಾನ್ಯನಲ್ಲ, ನಾವು ಪ್ರೀತಿಯಿಂದ ಈ ಮಗುವನ್ನು ಎತ್ತಿಕೊಂಡು ಹೋಗಿ ಸಂತೋಷದಿಂದ ನಮ್ಮ ಪ್ರಭುವಿಗೆ ಕೊಡೋಣ" ಎಂದು ಆ ಗೋಪಾಲಕರು ಆ ಮಗುವನ್ನು ಎತ್ತಿಕೊಂಡು ಬಂದು ಗೋವಿಂದನೆಂಬ ದೊಡ್ಡ ಗೋಪಾಲಕನಿಗೆ ಕೊಟ್ಟರು. ಆತನು ಬಹಳ ಸಂತೋಷಪಟ್ಟು ದನಕಾಯುವವರಿಗೆ ಬಹುಮಾನವನ್ನು ಕೊಟ್ಟು ತನ್ನ ಹೆಂಡತಿಯಾದ

ಪೆಂಡತಿಯಪ್ಪ ನಂದೆಯೆಂಬ ತುಱುಗಾರ್ತಿಯಂ ಕರೆದು ಪುತ್ರಲಾಭಮಾದುದೆಂದು ಮಗನಂ ಕೊಟ್ಟು ತುಱುಪಟ್ಟಿಯೊಳೊಸಗೆಯಂ ಮಾಡಿ ಕೂಸಿಂಗೆ ಧನಕೀರ್ತಿಯೆಂದು ಪೆಸರಿಟ್ಟುಕೊಂಡಾಡಿ ನಡಪುತ್ತುಮಿರ್ಪುದುಂ ಶುಕ್ಲಪಕ್ಷದ ಚಂದ್ರನಂತೆ ಬಳೆದು ೧೫೦

ಧನಕೀರ್ತಿಕುಮಾರಂ ಕಾ
ಮನಿಭಂ ತುಱುಪಟ್ಟಿಗರಸನಾಗಿರ್ಪಿನೆಗಂ
ಮನವೊಲ್ದೊಂದು ದಿನಂ ವೈ
ಶ್ಯನುತಂ ಶ್ರೀದತ್ತಸೆಟ್ಟಿ ಕರಮಾದರದಿಂ ೧೫೧

ಗದ್ಯ॥ ತನ್ನ ಮಗಳಪ್ಪ ಶ್ರೀಮತಿಯ ಮದುವೆಯಂ ಮಾಟ್ಪೆನೆಂದು ತುಪ್ಪಮಂ ಕೊಳಲೆಂದು ಪಲಂಬರ್ ಭೃತ್ಯರ್ವೆರಸು ತುಱುಪಟ್ಟಿಗೆ ವಂದು ಗೋಪಾಲ ಪರಿವೃಢನಾಗಿರ್ದ ಧನಕೀರ್ತಿಕುಮಾರನಂ ಕಂಡು ಗುಣಪಾಲಸೆಟ್ಟಿಯ ಮಗನಪ್ಪನೆಂದು ನಿಶ್ಚಯಿಸಿ ಮನದೊಳ್ ಬೆಗಡುಗೊಂಡು ೧೫೨

ಪಿಂಗದೆ ನಾನಾ ಮಾದೀ
ಗಂಗೆ ಮಹಾನಿಷ್ಠುರಂಗೆ ಪಲವಂ ಪೊನ್ನಂ
ಭಂಗಿಯೊಳೆ ಕೊಟ್ಟು ಮತ್ತೊಂ
ದಂ ಗಡ ಬಗೆದಳಿಪದೊಯ್ದು ಬೇಗಂ ಶಿಶುವಂ ೧೫೩

ನಂದೆಯೆಂಬ ಗೊಲ್ಲತಿಯನ್ನು ಕರೆದು ಪುತ್ರಲಾಭವಾಯಿತೆಂದು ಮಗುವನ್ನು ಅವಳ ಕೈಲಿ ಕೊಟ್ಟು ಗೊಲ್ಲರ ಹಟ್ಟಿಯಲ್ಲಿ ಉತ್ಸವವನ್ನು ಮಾಡಿ ಆ ಮಗುವಿಗೆ ಧನಕೀರ್ತಿಯೆಂಬ ಹೆಸರಿಟ್ಟು ಕೊಂಡಾಡಿ ಸಾಕುತ್ತಿರುವಾಗ ಅವನು ಶುಕ್ಲಪಕ್ಷದ ಚಂದ್ರನ ಹಾಗೆ ಬೆಳೆದನು. ೧೪೯-೧೫೦. ಧನಕೀರ್ತಿಕುಮಾರನು ಕಾಮಣ್ಣನನ್ನು ಹೋಲುತ್ತಿದ್ದನು. ಅವನು ಆ ಗೋಕುಲಕ್ಕೆ ಒಡೆಯನಾಗಿರಲು, ಒಂದು ದಿನ ವೈಶ್ಯಸ್ತುತನಾದ ಶ್ರೀ ದತ್ತ ಸೆಟ್ಟಿಯು ಅಲ್ಲಿಗೆ ಬಂದನು. ೧೫೧. ತನ್ನ ಮಗಳಾದ ಶ್ರೀಮತಿಯ ಮದುವೆಯನ್ನು ವೈಭವದಿಂದ ಮಾಡುವ ಉದ್ದೇಶದಿಂದ ತುಪ್ಪವನ್ನು ಕೊಳ್ಳಲೆಂದು ಹಲವರು ಸೇವಕರೊಡನೆ ಗೊಲ್ಲರ ಹಟ್ಟಿಗೆ ಬಂದು ಗೋಪಾಲಕರ ಮುಖಂಡನಾಗಿದ್ದ ಧನಕೀರ್ತಿ ಕುಮಾರನನ್ನು ಕಂಡು ಅವನು ಗುಣಪಾಲಸೆಟ್ಟಿಯ ಮಗನೇ ಹೌದೆಂದು ನಿಶ್ಚಯಿಸಿ ಕೊಂಡು ಭಯಾಶ್ಚರ್ಯಗಳಿಂದ ಕಂಗೆಟ್ಟನು. ೧೫೨. "ಮಹಾ ಕ್ರೂರಿಯಾದ ಆ ಮಾದಿಗನಿಗೆ ಹಲವು ಹೊನ್ನುಗಳನ್ನು ಧಾರಾಳವಾಗಿ ಕೊಟ್ಟು ಕಳುಹಿಸಿದರೂ ಅವನು ಮಗುವನ್ನು ಕೊಂಡೊಯ್ದು ನನಗೆ ದ್ರೋಹ ಬಗೆದನು: ೧೫೩. ಕೊಲ್ಲತಕ್ಕದ್ದೆಂದು

ಕೊಲ್ಲೆಂದಟ್ಟಿದೊಡಾತಂ
ಕೊಲ್ಲದೆ ಕಡುಕಷ್ಟನಾಗಿ ತುಱುಗಾಱಂಗಿ
ತ್ತಲ್ಲಿಯುಮರ್ಥವನೋವದೆ
ಮೆಲ್ಲನುಪಾರ್ಜಿಸಿದನಕ್ಕುಮತಿಲೋಭತೆಯಿಂ ೧೫೪

ಗದ್ಯ॥ ಆದೊಡಮೇನಾಯ್ತು ಬೋಜಂಗನ ಕಷ್ಟತಿಕ್ಕೆಯಲ್ಲದೆ ಸೂಳೆ ಗಂಡರಿಲ್ಲದಿರಳೆಂಬಂತೆ ಮಾದೆಗನ ಕಷ್ಟತಿಕ್ಕೆಯುಕ್ಕು ಮಲ್ಲದಾನೆಂತುಮಿವನಂ ಕೊಲ್ಲದೆ ಮಾಣೆನೆಂದು ತನ್ನೊಳ್ ಗುಜು ಗುಜಿಸಿಕೊಂಡು ತುಱುಗಾಱನಂ ವಸ್ತ್ರತಾಂಬೂಲ ಭೋಜನಾದಿಗಳಿಂ ತನಗೆ ವಶಗತಂ ಮಾಡಿ ಕೆಳೆಗೊಂಡು ಪತ್ತೆಂಟು ದಿವಸಮಲ್ಲಿರ್ದೊಂದು ದಿವಸಂ ಗೋವಿಂದನಂ ಬರಿಸಿ ತಾಂಬೂಲಮಂ ಕೊಟ್ಟು ಶ್ರೀದತ್ತನಿಂತೆಂದಂ ೧೫೫

ಪಿರಿದಪ್ಪವಸರಮಾದುದು
ಭರವಶದಿಂದೆನ್ನ ಪುತ್ರನಲ್ಲಿಗೆ ಬೇಗಂ
ಬರೆದೋಲೆಯನೀಗಳೆ ಚೆ
ಚ್ಚರದಿಂದಂ ಪೋಗಿ ಕುಡುವನಂ ತಕ್ಷಣದಿಂ ೧೫೬

ಗದ್ಯ॥ ನೀಂ ಪೇಳ್ವುದೆಂಬುದುಂ ಗೋವಿಂದಂ ತನ್ನ ಮಾನಿಸರ ಮೊಗಮಂ ನೋಡಿ ಪೇಟ ಲೆಂದಿರ್ಪುದುಂ ಶ್ರೀದತ್ತನಿಂತೆಂದಂ ೧೫೭

ನಾನು ಹೇಳಿದರೆ ಅವನು ಮಹಾನೀಚನಾಗಿ ಗೋಪಾಲನಿಗೆ ಕೊಟ್ಟು ಅವ ನಿಂದಲೂ ಬಿಡದೆ ಅತಿ ಆಸೆಯಿಂದ ಹಣವನ್ನು ಸಂಪಾದಿಸಿಕೊಂಡನಾದೀತು ! ೧೫೪. ಆದರೆ ತಾನೆ ಏನು? ವಿಟನ ಕಷ್ಟತನವೇ ಹೊರತು ಸೂಳೆಗೆ ಮಿಂಡರಿಲ್ಲದೆ ಇರುವುದಿಲ್ಲ ವೆಂಬಂತೆ ಮಾದೆಗನ ನೀಚತನವಾಯಿತು. ಆದರೆ ಹೇಗೂ ಇವನನ್ನು ನಾನು ಕೊಲ್ಲದೆ ಬಿಡುವುದಿಲ್ಲ" ಎಂದು ತನ್ನಲ್ಲಿಯೇ ಯೋಚಿಸಿಕೊಂಡು ಗೊಲ್ಲರ ಮುಖಂಡನನ್ನು ವಸ್ತ್ರ ತಾಂಬೂಲಾದಿಗಳನ್ನು ಕೊಟ್ಟು ಭೋಜನ ಮಾಡಿಸಿ ಅವನನ್ನು ತನ್ನ ಕಡೆಗೆ ಒಲಿಸಿ ಕೊಂಡು ಹತ್ತೆಂಟು ದಿನ ಅಲ್ಲಿಯೇ ಇದ್ದು ಒಂದು ದಿನ ಗೋವಿಂದನನ್ನು ಬರಮಾಡಿ ಕೊಂಡು ತಾಂಬೂಲವನ್ನು ಕೊಟ್ಟು ಶ್ರೀದತ್ತನು ಹೀಗೆ ಹೇಳಿದನು: "ದೊಡ್ಡ ಸಮಯ ವಾಗಿದೆ. ನನ್ನ ಮಗನ ಬಳಿಗೆ ನಂಬಿಕೆಯಾದವನ ಕೈಲಿ ಒಂದು ಪತ್ರವನ್ನು ಈಗಲೇ ಹೋಗಿ ಕೊಡತಕ್ಕಂಥವನನ್ನು ಕಳಿಸಬೇಕಾಗಿದೆ ೧೫೬. ಅಂಥವನು ಯಾರಿದ್ದಾರೆ ? ಹೇಳು" ಎನ್ನಲು ಗೋವಿಂದನು ತನ್ನ ಜನರ ಮುಖ ನೋಡುತ್ತ ಯಾರನ್ನು ಹೆಸರಿಸು ವುದೆಂದು ಯೋಚಿಸುತ್ತಿದ್ದಾಗ ಶ್ರೀದತ್ತನೇ ಹೀಗೆ ಹೇಳಿದನು : ೧೫೭. "ಉಳಿದ ಬಂಟ

ಮತ್ತಿನ ಬಂಟರೊಳಾಗದು
ಚಿತ್ತಜನಿಭನೆನಿಪ ನಿನ್ನಮಗನಂ ಸೌಂದ
ರ್ಯೋತ್ತಮನಂ ಧನಕೀರ್ತಿಯ
ನುತ್ತಮಗುಣಗಣನನಟ್ಟವೇಟ್ಟುದು ಬೇಗಂ ೧೫೮

ಗದ್ಯ॥ ಎಂಬುದುಂ ಗೋವಿಂದಂ ಶ್ರೀದತ್ತಂ ಮುಂ ಕೊಟ್ಟ ಕೊಟ್ಟ ದ್ರವ್ಯಾದಿಗಳಂ ನೆನೆದು ಮಱುಮಾತನೀಯದೆ ತನೂಜನಂ ಪೋಗವೇಟ್ಟುದುಂ ತಕ್ಷಣದಿಂ ೧೫೯

ಧನಕೀರ್ತಿಗೆ ಕೂರ್ಪಂತೊ
ಯ್ಯನೆ ಮಾಯಾಪುಂಜನಿತ್ತು ತಾಂಬೂಲಮುಮಂ
ಧನಮುಮನಾತನ ಚಿತ್ತ
ಕ್ಕನುನಯಮಪ್ಪಂತು ಮಾಡಿ ಕೃತಕದಿನಾಗಳ್ ೧೬೦

ಗದ್ಯ॥ ತನ್ನ ಪಂಕ್ತಿಯೊಳುಣಲಿಕ್ಕಿಸಿ ಚಿತ್ತೋತ್ಸಾಹಮಂ ಮಾಡಿ ತನ್ನ ಪಾಸಿನ ಕೆಲದೊಳ್ ಮತ್ತೊಂದು ಪಾಸನಿಕ್ಕಿಸಿ ನೀನಿಲ್ಲಿ ಪಟ್ಟಿರೆಂದೇಕಾಂತಕ್ಕೆ ಪೋಗಿ ೧೬೧

ಎನಗೆ ಕೂರ್ಪೊಡೆ ಬೇಗದಿಂ ತಡವಿಲ್ಲದಿಂದೆ ಮಹಾಬಲಾ
ಮನೆಯ ಪಿತ್ತಿಲೊಳೀತನಂ ಪಿಡಿದೊಯ್ದು ಭೋಂಕನೆ ಕೊಂದು ಪ
ಟ್ಟನೆ ಪೆಱರ್ಗನುರಾಗದಿಂದಮೆ ಪೇೞದೊರ್ಮೆಯೆ ಗುಪ್ತದಿಂ
ಮನದೆಗೊಂಡುೞಿ ಪೂೞ್ವುದೆಂದು ಕಷಾಯದಿಂ ಬರೆದೋಲೆಯಂ ೧೬೨

ರಿಂದ ಇದು ಆಗದು. ಮನ್ಮಥನಂಥವನೆನ್ನಿಸಿದ ನಿನ್ನ ಮಗನನ್ನು, ಉತ್ತಮ ಗುಣ ರೂಪಗಳುಳ್ಳ ಧನಕೀರ್ತಿಯನ್ನೇ ಬೇಗ ಕಳುಹಿಸಬೇಕು" ೧೫೮. ಗೋವಿಂದನು ಶ್ರೀದತ್ತನು ಹೇಳಿದುದನ್ನು ಕೇಳಿ, ಆಪನು ಮೊದಲು ತನಗೆ ಪ್ರೀತಿಯಿಂದ ಕೊಟ್ಟ ಧನಕನಕಾದಿಗಳನ್ನು ಸ್ಮರಿಸಿ ಪ್ರತ್ಯುತ್ತರ ಕೊಡದೆ ಮಗನನ್ನು ಕಳುಹಿಸಿದನು ೧೫೯. ಆ ಕ್ಷಣವೇ ಧನಕೀರ್ತಿಗೆ ಆ ಮಾಯಾವಿಯು ಸ್ನೇಹಿತನಂತೆ ತಾಂಬೂಲವನ್ನೂ ಹಣವನ್ನೂ ಕೊಟ್ಟು ಕಾಪಟ್ಯದಿಂದ ಆತನ ಮನಸ್ಸಿನಲ್ಲಿ ಪ್ರೀತಿ ಹುಟ್ಟುವಂತೆ ಮಾಡಿದನು ೧೬೦. ಆಗ ಧನಕೀರ್ತಿಗೆ ತನ್ನ ಪಂಕ್ತಿಯಲ್ಲಿಯೇ ಕೂಡಿಸಿಕೊಂಡು ಭೋಜನ ಮಾಡಿಸಿ ತನ್ನ ಹಾಸಿಗೆಯ ಪಕ್ಕದಲ್ಲಿಯೇ ಮತ್ತೊಂದು ಹಾಸಿಗೆಯನ್ನು ಹಾಕಿಸಿ 'ನೀನಿಲ್ಲಿ ಮಲಗಿರು' ಎಂದು ಹೇಳಿ ತಾನು ಏಕಾಂತಕ್ಕೆ ಹೋಗಿ ೧೬೧. "ಮಹಾಬಲ! ನನ್ನ ಮೇಲೆ ಪ್ರೀತಿಯುಳ್ಳವನಾದರೆ ಬೇಗನೆ, ಸ್ವಲ್ಪವೂ ತಡಮಾಡದೆ ನಮ್ಮ ಮನೆಯ ಹಿತ್ತಿಲಲ್ಲಿ ಈತನನ್ನು ತಟ್ಟನೆ ಕೊಂದು ಇತರರಿಗೆ ಹೇಳದೆ ಒಡನೆಯೇ ಗುಟ್ಟಾಗಿ ಹೂಳತಕ್ಕದ್ದು" ಎಂದು ತನ್ನ ಮಗ ಮಹಾಬಲನಿಗೆ ಒಂದು ಕಾಗದವನ್ನು ಬರೆದು ೧೬೨. ಅದಕ್ಕೆ ಮುದ್ರೆ ಹಾಕಿ ಬೆಳಗಿನ ಜಾವದಲ್ಲಿ ಧನಕೀರ್ತಿಯ ಕೈಯಲ್ಲಿ

ಗದ್ಯ॥ ಮುದ್ರಿಸಿ ಬೆಳಗಪ್ಪ ಜಾವದೊಳ್ ಧನಕೀರ್ತಿಯ ಕೈಯೊಳ್ ಕೊಟ್ಟು ಪೋಗೆಂದಟ್ಟು ವುದುಂ ಆತಂ ಪೊಱಮಟ್ಟು ಪವನವೇಗದಿಂದುಜ್ಜಯಿನಿಗೆ ಪಂದು ಪಥಶ್ರಾಂತನಾಗಿ ಬಟಲ್ದು ಸಿಂಪಾನದಿಯಂ ಪೊಕ್ಕುಮೆಯ್ಯಂ ಕರ್ಚಿಕೊಂಡು ತೃಷೆ ಪೋಪಿನಂ ನೀರಂ ಕುಡಿದು ತನ್ನದೀತೀರ ದೊಳೊಪ್ಪುವ ಕೆಂದಳಿರ ಮಾವಿನ ಕೆಳಗೆ ಪಟ್ಟಿರ್ದನನ್ನೆಗಮಿತ್ತಲ್, ಮೃಗಸೇನೆಯೆಂಬ ಸೂಳೆ ಪೊತ್ತುವೋಗಿಂಗೆ ಕೆಳದಿಯರ್ವೆರಸು ಪೊಟಲಿಂ ಪೊಱಮಟ್ಟು ಸಿಂಪಾನದಿಯ ತಡಿವಿಡಿದು ಬರುತ್ತುಂ ೧೬೩

ಕೆಂದಳಿರೊಳಿಯಿಂ ಮೆಱೆವ ತುಂಬಿಗಳಿಂ ನೆರೆದಿರ್ದ ಕೋಕಿಲಾ
ನಂದದಿನೊಪ್ಪಿ ಮನ್ಮಥಮಹೀಶ್ವರನೋಲಗಶಾಲೆಯಂತಿರಾ
ನಂದದನಿರ್ದ ಮಾಮರದ ಚೆಲ್ವುಲತಾಂಗಿಯ ಕಣ್ಗೆ ಸೋಲಮಂ
ಕುಂದದೆ ಮಾಡೆ ಬಣ್ಣಿಸುತೆ ಮಾವುಮರನಲ್ಲಿಗೆ ಮೆಲ್ಲನೆರ್ತಿಯಿಂ ೧೬೪

ಗದ್ಯ॥ ಮೃಗಸೇನೆ ಬಂದು ತಚ್ಚೂತಮಹೀಜಾತದ ಕೆಳಗೆ ಪಟ್ಟಿರ್ದ ಜಿನಸಮಯವಾರ್ಧಿ ವರ್ಧನಚಂದ್ರನಂ ಕಂಡು ಕಳೆದ ಭವಮಂ ಕಣ್ಣಱಿದುದೆಂಬ ಮಾತಂ ದಿಟಂಮಾಡಿ ೧೬೫

ತಂದೆಯನೆ ಕಂಡ ತೆಱದಿಂ
ದಿಂದೀವರನಯನೆ ಮನದೊಳಟ್ಕರ್ತುರ್ಗೆ ಮಹೀ
ವಂದಿತನಂ ಗುಣನಿಳಯನ
ನಂದಾಗಳ್ ನೋಡಿ ಪೋಗಲಾಱದೆ ಪದೆಪಿಂ ೧೬೬

ಕೊಟ್ಟು ಕಳುಹಿಸಿದನು. ಅವನು ಅಲ್ಲಿಂದ ಹೊರಟು ಮಹಾವೇಗದಿಂದ ಉಜ್ಜಯನಿಗೆ ಪ್ರಯಾಣ ಮಾಡಿ ಮಾರ್ಗಾಯಾಸದಿಂದ ಬಳಲಿ ಸಿಂಪಾನದಿಯನ್ನು ಪ್ರವೇಶಿಸಿ ಮೈ ತೊಳೆದುಕೊಂಡು ದಾಹ ಇಂಗುವಂತೆ ನೀರು ಕುಡಿದು ಆ ನದೀ ತೀರದಲ್ಲಿ ಶೋಭಿಸುವ ಕೆಂಪುಚಿಗುರಿನ ಮಾವಿನ ಮರದ ಕೆಳಗೆ ಮಲಗಿ ನಿದ್ದೆ ಹೋದನು, ಇತ್ತ ಉಜ್ಜಯನಿಯ ಲ್ಲಿನ ಸೂಳೆಯಾದ ಮೃಗಸೇನೆಯೆಂಬವಳು ಹೊತ್ತು ಕಳೆಯುವುದಕ್ಕಾಗಿ ಗೆಳತಿಯರ ಜೊತೆಯಲ್ಲಿ ಪಟ್ಟಣದಿಂದ ಹೊರಟು ಸಿಂಪಾ ನದಿಯ ದಡವನ್ನೇ ಅನುಸರಿಸಿಕೊಂಡು ಬರುತ್ತ ಕೆಂಪು ಚಿಗುರಿನ ಸಮೂಹದಿಂದ ಮೆರೆಯುವ. ತುಂಬಿಗಳಿಂದ ಕೂಡಿ ಕೋಗಿಲೆ ಗಳ ಆನಂದದ ನಾದದಿಂದ ಒಪ್ಪುತ್ತ ಮನ್ಮಥ ಮಹಾರಾಜನ ಓಲಗಶಾಲೆಯಂತೆ ಆನಂದ ವಾಗಿದ್ದ ಮಾವಿನ ಮರಗಳ ಚೆಲುವು ಆ ಸುಂದರಿಯ ಕಣ್ಣಿಗೆ ಆಕರ್ಷಣೆಯನ್ನುಂಟು ಮಾಡಲು ಅವಳು ಅದನ್ನು ಹೊಗಳುತ್ತ ಸಂಭ್ರಮದಿಂದ ಆ ಮಾವಿನ ಮರದ ಬುಡ ವನ್ನು ಸೇರಿದಳು ೧೬೩–೧೬೪. ಮೃಗಸೇನೆ ಬಂದು ಆ ಮಾವಿನ ಮರದ ಬುಡದಲ್ಲಿ ಮಲಗಿದ್ದ ಜೈನಧರ್ಮವೆಂಬ ಸಮುದ್ರಕ್ಕೆ ಚಂದ್ರನೋಪಾದಿಯಲ್ಲಿದ್ದ ಧನಕೀರ್ತಿಯನ್ನು ನೋಡಿ ಹಿಂದಿನ ಜನ್ಮವನ್ನು ಕಣ್ಣು ತಿಳಿಯಿತೆಂಬ ಮಾತನ್ನು ನಿಜವಾಗಿಸಿದಳು ೧೬೫. ತಂದೆಯನ್ನೇ ಕಂಡ ಹಾಗೆ ಆ ಇಂದೀವರನಯನೆಯು ಮನಸ್ಸಿನಲ್ಲಿ ಪ್ರೀತಿ ಹುಟ್ಟಿ ಆ ಲೋಕ ವಂದ್ಯನೂ ಗುಣನಿಲಯನೂ ಆದ ಆ ಯುವಕನನ್ನು ನೋಡಿ ಮುಂದಕ್ಕೆ

ಗದ್ಯ॥ ಸಾರೆ ಕುಳ್ಳಿರ್ದು ೧೬೭

ತಳಿರನಿಱಿಸುವ ಪಾದಮಂ ಬಾಳೆಯ ಕಂಬದಂತೊಪ್ಪುವ ನೀಳ್ದೊಡೆಗಳಂ
ಪೊಳೆವ ನಯನಮಂ ನಿಡಿದೋಳನುನ್ನತವಿಶಾಲ ಲಲಾಟಮಂ ಬಾಯ್ದೆರೆಯಂ
ಕುಲಿಶ ಚಕ್ರಾದಿ ಲಕ್ಷಣಾಂಕಿತಮಪ್ಪ ಕೆಂದಳದೊಳೊಪ್ಪುವ ರೇಖೆಗಳಂ
ಜಲರುಹಾನನೆ ಮನವೋತು ನೋಡುತುಂ ಬಂಬಳಬಾಡುತುಂ ಸ್ನೇಹದಿಂದಂ ೧೬೮

ಗದ್ಯ॥ ಅಂತಿರ್ದು ತೊಟ್ಟನೆ ಕೊಳೆ ಸೋಗಿಲೊಳಿರ್ದೋಲೆಯಂ ಕಂಡು ತಾಂ ಜಾಣೆಯುಂ ಸಕಲಶಾಸ್ತ್ರಪ್ರವೀಣೆಯುಮಪ್ಪುದಱಿಂ ಕಳೆದುಕೊಂಡು ಮುದ್ರೆಯನೊಡೆದು ವಾಚಿಸಿ ನೋಡಿ ಚಿಂತಾಕ್ರಾಂತೆಯಾಗಿ ತನ್ನೊಳಿಂತೆಂದಳ್ ೧೬೯

ಮನಸಿಜರೂಪನಂ ಸುರಸಮಾನನನುನ್ನತ ಸೂರ್ಯತೇಜನಂ
ಮುನಿನುತನಂ ಸಮಸ್ತ ಶುಭಲಕ್ಷಣಯುಕ್ತನನೆಂತು ಕೊಲ್ವೆನಂ
ಬಿನಿತನೊಡರ್ಚಿ ಕೊಲ್ವ ಬಗೆದಂದನೊ ತೊಟ್ಟನೆ ಪಾಪಕರ್ಮನೆಂ
ದನುಪಮಚಿತ್ತೆ ನೊಂದು ಸುರಿದಳ್ ಬಸಮಲ್ಲದ ಕಣ್ಣನೀರ್ಗಳಂ ೧೭೦

ಗದ್ಯ॥ ಅಂತಾ ಮನದ ನೋವಿಂದಿರಲಾಱದೆ ಸೈರಣೆಗೆಟ್ಟು ಕಣ್ಣನೀರನಿಕ್ಕಿ ಕುಮಾರನ ಮೋಹದಿಂ ಶ್ರೀದತ್ತನಟ್ಟಿದೋಲೆಯಂ ಸೀಳ್ದು ಸಿಂಪಾನದಿಯೊಳಿಕ್ಕಿ ಕೆಳದಿಯನಟ್ಟಿ ಮನೆಯಿಂ ದೋಲೆಯುಮಂ ಕಂತಮುಮಂ ತರಿಸಿ ಮಹಾಬಲ ನನಗೆ ಕೂರ್ಪನಪ್ಪೊಡೆ ಈ ಪೋಲೆಗಂಡಾ

ಹೋಗಲಾರದೆ ಆಸೆಯಿಂದ ಹತ್ತಿರ ಕುಳಿತುಕೊಂಡಳು ೧೬೬-೬೭ ಚಿಗುರಿಗಿಂತ ಕೋಮಲವಾದ ಪಾದಗಳು. ಬಾಳೆಯ ಕಂಬದಂತೆ ಒಪ್ಪುವ ನೀಳವಾದ ತೊಡೆಗಳು, ಹೊಳೆಯುವ ಕಣ್ಣುಗಳು, ದೀರ್ಘಬಾಹುಗಳು, ಉನ್ನತವಾದ ಹಣೆ, ತುಟಿಗಳು, ವಜ್ರ ಚಕ್ರ ಮೊದಲಾದ ಲಕ್ಷಣಗಳಿಂದ ಕೂಡಿದ ಕೆಂಪನೆಯ ಪಾದಗಳಲ್ಲಿ ರಾಜಿಸುವ ರೇಖೆಗಳು–ಇವೆಲ್ಲವುಗಳನ್ನೂ ಆ ಕಮಲಮುಖಿಯು ನೋಡಿ ಮನಃಪ್ರೀತಿಯುಂಟಾಗಿ ಸ್ನೇಹಪರವಶಳಾದಳು, ೧೬೮. ಆಗ ತಟ್ಟನೆ ಆವನ ಮಡಿಲಲ್ಲಿ ಸಿಕ್ಕಿದ್ದ ಪತ್ರವನ್ನು ನೋಡಿ, ತಾನು ಜಾಣೆಯೂ ಸಕಲಶಾಸ್ತ್ರ ಪ್ರವೀಣೆಯೂ ಆದುದರಿಂದ ಅದನ್ನು ಸೆಳೆದುಕೊಂಡು ಮುದ್ರೆಯನ್ನು ಒಡೆದು ಓದಿನೋಡಿ ಯೋಚನಾಮಗ್ನಳಾಗಿ ತನ್ನಲ್ಲಿಯೇ ಹೀಗೆಂದುಕೊಂಡಳು : ೧೬೯. "ಮನ್ಮಥರೂಪಿಯೂ ದೇವಸಮಾನನೂ, ಸೂರ್ಯತೇಜಸ್ಸುಳ್ಳವನೂ, ಮುನಿಸ್ತುತನೂ, ಸಮಸ್ತಶುಭಲಕ್ಷಣಗಳಿಂದ ಕೂಡಿದವನೂ ಆದ ಈತನನ್ನು ಹೇಗೆ ಕೊಲ್ಲುವುದೆಂದು ಯೋಚಿಸಿ ಇಷ್ಟೆಲ್ಲ ತಂತ್ರವನ್ನು ಹೂಡಿದನೋ ಆ ಪಾಪಕರ್ಮಿ!" ಎಂದು ಆ ಅನುಪಮಚಿತ್ತಳು ತನ್ನ ವಶವಲ್ಲದ ದುಃಖದಿಂದ ಕಣ್ಣೀರು ಸುರಿಸಿದಳು. ೧೭೦. ಹಾಗೆ ಆಗ ಆ ಮನೋಯಾತನೆ

ಕ್ಷಣದೊಳ್ ಶೀಘ್ರಂ ತನ್ನತಂಗೆಯಪ್ಪ ಶ್ರೀಮತಿಯನೀತನೊಳ್ ತಡೆಯದಿಂದೆ ನೆರಪುವುದು, ನೆರಪದೊಡೆನ್ನಾಣೆ ಕಡೆಗಣಿಸವೇಡೆಂದು ಬರೆದು ಮುನ್ನಿನಂತೋಲೆಯಂ ಮುದ್ರಿಸಿ ಧನ ಕೀರ್ತಿಯ ಸೋಗಿಲೊಳಿಕ್ಕಿ ತನ್ನ ವಾಸಕ್ಕೆ ಪೋದಳನ್ನೆಗಮಿತ್ತಲ್ ಕುಮಾರನೆಚ್ಚತ್ತು ೧೭೧

ಪೊಟಲೊಳಗೆ ಬಂದು ವೈಶ್ಯನ
ನಿಳಯಮನಾರಯ್ದುಪೊಕ್ಕು ವೈಶ್ಯಾತ್ಮಜನಂ,
ಬಲಯುತನಂ ಕಂಡು ಮಹಾ
ಬಲನಂ ಮಾತಾಡಿ ಮುನ್ನ ಮುಖವಾರ್ತೆಗಳಂ ೧೭೨

ಶ್ರೀದತ್ತನಟ್ಟಿದೋಲೆಯ
ನಾದರದಿಂದೀಯೆ ಕಳೆದುಕೊಂಡಂತದನ
ತ್ಯಾದರ್ದಿಂ ಪೊಡೆಮಟ್ಟು
ಶ್ರೀದಯಿತಂ ಬಿಟ್ಟು ನೋಡಿ ಸಂತಸದಿಂದಂ ೧೭೩

ಕರಮೊಳ್ಳಿಕೆಯ್ದನಯ್യಂ
ಸ್ಮರಸದೃಶನಿವನೆನ್ನ ತಂಗೆಗೆ ವರನಾ
ಗಿರೆ ಮಾಡಿ ಬಗೆವೊಡೀಕೆಗೆ
ವರನೀತನೆ ತಕ್ಕನುಟಿದವರ್ ತಗಲಿಳೆಯೊಳ್ ೧೭೪

ಯಿಂದ ಸುಮ್ಮನಿರಲಾರದೆ ಸ್ವೈರಣೆ ಕಳೆದಕೊಂಡು ಆ ಕುಮಾರನ ಮೇಲಿನ ಮೋಹ ದಿಂದ ಶ್ರೀದತ್ತನ ಪತ್ರವನ್ನು ಸೀಳಿ ಸಿಂಪಾನದಿಗೆ ಎಸೆದು ಗೆಳತಿಯನ್ನು ಕಳುಹಿಸಿ ಮನೆಯಿಂದ ಓಲೆಯನ್ನೂ ಕಂಠವನ್ನೂ ತರಿಸಿ "ಮಹಾಬಲ ! ನನಗೆ ಒಲಿದವನಾದರೆ, ಈ ಓಲೆಯನ್ನು ಕಂಡಕೂಡಲೆ ನಿನ್ನ ತಂಗಿ ಶ್ರೀಮತಿಯನ್ನು ಈತನಿಗೆ ಕೊಟ್ಟು ಮದುವೆ ಮಾಡತಕ್ಕದ್ದು. ಹಾಗೆ ಇವರನ್ನು ಸೇರಿಸದಿದ್ದರೆ ನನ್ನಾಣೆ" ಎಂದು ಬರೆದು ಮೊದಲಿ ನಂತೆ ಓಲೆಯನ್ನು ಮುದ್ರಿಸಿ ಧನಕೀರ್ತಿಯ ಮಡಿಲಲ್ಲಿ ಸೆಕ್ಕಿಸಿ ಮನೆಗೆ ಹೋದಳು, ಆಮೇಲೆ ಇತ್ತ ಧನಕೀರ್ತಿಕುಮಾರನು ಎಚ್ಚತ್ತನು ೧೭೧. ಅವನು ಪಟ್ಟಣದೊಳಕ್ಕೆ ಬಂದು ವೈಶ್ಯಪುತ್ರನಾದ ಮಹಾಬಲವನ್ನು ಕಂಡು ಮಾತನಾಡಿಸಿ ಬಾಯಿಮಾತು ಗಳಿಂದ ಹೇಳಬೇಕಾದುದನ್ನೆಲ್ಲ ಹೇಳಿ ೧೭೨. ಆಮೇಲೆ ಶ್ರೀದತ್ತಸೆಟ್ಟಿ ಕಳುಹಿಸಿಕೊಟ್ಟ ಓಲೆಯನ್ನು ಆದರಪೂರ್ವಕವಾಗಿ ಕೊಟ್ಟನು. ಅದನ್ನು ಮಹಾಬಲನು ಸೆಳೆದುಕೊಂಡು ಒಡೆದು ಓದಿ, ಅದಕ್ಕೆ ಪ್ರೀತಿಯಿಂದ ನಮಸ್ಕರಿಸಿ ಶ್ರೀದತ್ತನ ಪುತ್ರನು ಸಂತೋಷ ಪಟ್ಟನು ೧೭೩. "ಅಯ್ಯ ಬಹಳ ಒಳ್ಳೆಯ ಕೆಲಸ ಮಾಡಿದ. ಮನ್ಮಥನನ್ನು ಹೋಲುವ ಇವನು ನನ್ನ ತಂಗಿಗೆ ವರನಾಗಲು ಯೋಗ್ಯನು. ಉಳಿದವರು ಯೋಗ್ಯರಲ್ಲ" ೧೭೪.

ಗದ್ಯ॥ ಎಂದು ಪೇೞ್ವ ಮಹಾಬಲಂ ತಮ್ಮಯ್ಯಂಗತಿಭಕ್ತನಪ್ಪುದಱಿಂದಿದನೇಟಿಸಿರಲಾಗ ದೆಂದು ತಮ್ಮಬ್ಬೆಯಪ್ಪ ವಿಶಾಖೆಗಱಿಪಿ ಮೌಹೂರ್ತಿಕರಂ ಕರೆದು ಶ್ರೀಮತಿಯ ಮದುವೆಗೆ ದಿವ ಸಮಂ ಬೆಸಗೊಳ್ವುದುಂ ಅವರಿಂತೆಂದರ್ ೧೩೫

ಇಂದೀ ಮಗವಿನ ಮದುವೆಯ
ನೊಂದುಂ ಭಯಮಿಲ್ಲದುತ್ಸವಂಬೆರಸು ಧರಾ
ವಂದಿತ ಮಾಡಿದೆಯಪ್ಪೊಡೆ
ಮುಂದೀಯಾಣ್ಮಂ ಧರಾತಳಾಧಿಪನಕ್ಕುಂ ೧೭೬

ಈಲಗ್ನದೊಳ್ಮಹಾಬಲ
ಮೇಲೆನಿಸುವ ನಿನ್ನ ತಂಗೆಗುತ್ಸವದಿಂದಂ
ಲೀಲೆಯೊಳೆ ಮದುವೆಮಾಡಿದೊ
ಡಾಲಲನೆಯ ಗಂಡನಿಳೆಗೆ ವಲ್ಲಭನಕ್ಕುಂ ೧೭೭

ಗದ್ಯ॥ ಮತ್ತಮಿಂದಿನ ದಿನಶುದ್ಧಿಯುಮಂ ಲಗ್ನದ ಫಲಮುಮಂ ಪೇೞ್ವೊಡೀ ಕನ್ನೆಯು ಮೀಕೆಯ ವಲ್ಲಭನುಂ ಜಿನಸಮಯ ವಜ್ರಪ್ರಾಕಾರರುಂ, ಮಾಳವದೇಶಾಧೀಶ್ವರರುಂ ಸದ್ಧರ್ಮಾ ರಾಗಿಗಳುಮಪ್ಪರೆಂದಾದೇಶಂಗೆಯ್ವುದುಂ ನೈಮಿತ್ತಿಕರ ಮಾತಂ ಮಹಾಬಲಂ ಕೇಳ್ದು

ಹೀಗೆ ಉಬ್ಬಿ ಉತ್ಸಾಹಪಟ್ಟು ಮಹಾಬಲನು ತನ್ನ ತಂದೆಗೆ ಬಹಳ ಭಕ್ತನಾದ್ದರಿಂದ ಇದನ್ನು ಅಸಡ್ಡೆಮಾಡಬಾರದೆಂದು ಯೋಚಿಸಿ ತನ್ನ ತಾಯಿಯಾದ ವಿಶಾಖೆಗೆ ತಿಳಿಸಿ ಜೋತಿಷ್ಕರನ್ನು ಕರೆದು ಶ್ರೀಮತಿಯ ಮದುವೆಗೆ ಶುಭ ದಿವಸ ಹೇಳಬೇಕೆಂದು ಕೇಳಲು ಅವರು ಹೀಗೆಂದರು ೧೭೫. "ಈ ಹೊತ್ತು ಈ ಮಗಳ ಮದುವೆಯನ್ನು ಏನೊಂದೂ ಭಯವಿಲ್ಲದೆ ಉತ್ಸಾಹದಿಂದ ಮಾಡಿದೆಯಾದರೆ ಮುಂದೆ ಈಮನು ರಾಜನೇ ಆಗು ವನು ೧೭೬. ಈ ಲಗ್ನದಲ್ಲಿ ಶ್ರೇಷ್ಠಳಾದ ನಿನ್ನ ತಂಗಿಗೆ ಸಂಭ್ರಮದಿಂದ ಮದುವೆ ಮಾಡಿ ದರೆ ಈ ಲಲನೆಯ ಗಂಡನು ಭೂಪತಿಯಾಗುವನು ೧೭೭. ಮತ್ತು, ಇಂದಿನ ದಿನ ಶುದ್ಧಿಯನ್ನೂ ಲಗ್ನದ ಫಲವನ್ನೂ ಹೇಳುವುದಾದರೆ ಈ ಕನ್ಯೆಯೂ ಈಕೆಯ ಗಂಡನೂ ಜೈನ ಧರ್ಮಕ್ಕೆ ವಜ್ರಪ್ರಾಕಾರರಂತೆ ಶೋಭಿಸುತ್ತಾರೆ (ಜೈನ ಧರ್ಮದ ರಕ್ಷಕರಾಗು ತ್ತಾರೆ). ಇವರು ಮಾಳವ ದೇಶದ ಒಡೆಯರೂ ಸದ್ಧರ್ಮಪ್ರೇಮಿಗಳೂ ಆಗುತ್ತಾರೆ," ಹೀಗೆ ಜ್ಯೋತಿಷ್ಕರು ಹೇಳಲಾಗಿ ಅವರ ಮಾತನ್ನು ಮೆಚ್ಚಿಕೊಂಡು ಮಹಾಬಲ

ಸಂತೋಷಂ ಬಿಟ್ಟು ಮೆಚ್ಚಿ ಮೆಚ್ಚುಗೊಟ್ಟು ಎಮ್ಮಯ್ಯಂ ದಿನವೊಳ್ಳಿತಪ್ಪ ಕಾರಣದಿಂದವಧಿ ಮಾಡಿ ವರನನಟ್ಟಿದ ಕಾರ್ಯಮನೇಟಿಸಲಾಗದೆಂದು ೧೭೮

ಸರಸಿಜನೇತ್ರೆಯರ್ ನೆರೆದು ಮಂಗಳಮಂ ಮನವೊಲ್ದು ಪಾಡೆ ಭೋ
ರ್ಗರೆಯೆ ಸಮುದ್ರದಂತೆ ಪಟಹಂಗಳ್ ಪಲವುಂ ಪಸುರ್ಮಂದರೊಪ್ಪೆ ಚಾ
ಮರಮನನಂಗಜಂಗಮಲ ಲತಾಂಗಿಯರಿಕ್ಕೆ ಮನೋನುರಾಗದಿಂ
ಪರಸಿ ಸಮಸ್ತ ಬಂಧುತತಿ ಸೇಸೆಯನಿಕ್ಕೆ ಮಹೋತ್ಸವಂಗಳಿಂ ೧೭೯

ಗದ್ಯ॥ ಶ್ರೀಮತಿಗಂ ಧನಕೀರ್ತಿಗಂ ಪಾಣಿಗ್ರಹಣಂ ಮಾಡಿ ಸುಖಮಿರ್ಪುದುಂ ಶ್ರೀದತ್ತ ಸೆಟ್ಟಿ ಧನಕೀರ್ತಿಯನುಪಾಯದಿಂ ಮುಗ್ಗಿಸಿದೆನೆಂದು ತನ್ನ ಬುದ್ಧಿಗಂ ಚಾತುರ್ಯಕ್ಕಂ ಮೆಚ್ಚಿ ತುಱುಪಟ್ಟಿಯೊಳೆರಡು ಮೂಱುದಿವಸಂಬರವಿರ್ದು ತುಱುಪಟ್ಟಿಯುಂ ಪೊಱಮಟ್ಟುಜ್ಜಯಿನಿಗೆ ವಂದು ತನ್ನ ಮನೆಯಂ ಪೊಕ್ಕು ತನ್ನಮಗಳ್ಗೆ ಮದುವೆಯಾದ ಧನಕೀರ್ತಿಯುಂ ಕಂಡು ಬೆಱಗಾಗಿ ೧೮೦

ಇಂತಲ್ಲದೆ ಕೊಲಬಾರದು
ಸಂತತಮೀ ಖಳನನೆಂದುಪಾಯದೊಳಾನೇ
ಕಾಂತದೊಳೋಲೆಯನಟ್ಟಿದೊ
ಡಿಂತಾದುದು ಪುಣ್ಯಮುಳ್ಳವರ್ ಸತ್ತಪರೇ ೧೮೧

ಸಂತೋಷಪಟ್ಟು ಅವರಿಗೆ ಅಭಿಮಾನದಿಂದ ಬಹುಮಾನವನ್ನು ಕೊಟ್ಟು 'ನಮ್ಮ ತಂದೆ ಯು ಇಂದು ಒಳ್ಳೆಯ ದಿನ ವಾದುದರಿಂದ ಗಡುವನ್ನು ಮಾಡಿ ವರನನ್ನು ಕಳುಹಿಸಿದನು. ಆ ಕೆಲಸವನ್ನು ಅಸಡ್ಡೆ ಮಾಡತಕ್ಕದ್ದಲ್ಲ" ಎಂದು ೧೭೮. ಕಮಲ ಮುಖಿಯರು ಸೇರಿ ಸಂತೋಷದಿಂದ ಮಂಗಳ ಗೀತೆಗಳನ್ನು ಹಾಡಲು, ತಮಟೆಗಳು ಸಮುದ್ರದ ಹಾಗೆ ಭೋರ್ಗರೆಯುತ್ತಿರಲು, ಹಸಿರು ಚಪ್ಪರ ಶೋಭಿಸಲು, ಲತಾಂಗಿಯರು ಮನಸ್ಸಂತೋಷ ದಿಂದ ಚಾಮರ ಹಾಕುತ್ತಿರಲು ಸಮಸ್ತ ಬಂಧುಗಳೂ ಸೇರಿ ಅಕ್ಷತೆಯನ್ನು ಹಾಕಲು ಶ್ರೀಮತಿಗೂ ಧನಕೀರ್ತಿಗೂ ಮಹಾ ಉತ್ಸವದಿಂದ ಪಾಣಿಗ್ರಹಣ ಮಾಡಿಸಿ ಸುಖವಾಗಿ ದ್ದನು. ಶ್ರೀದತ್ತಸೆಟ್ಟಿಯು ಧನಕೀರ್ತಿಯನ್ನು ಉಪಾಯದಿಂದ ನಾಶಮಾಡಿಸಿದೆನೆಂದು ತನ್ನ ಬುದ್ಧಿಗೂ ಚಾತುರ್ಯಕ್ಕೂ ತಾನೇ ಮೆಚ್ಚಿಕೊಂಡು ಎರಡು ಮೂರು ದಿನ ಗಳ ತರುವಾಯ ಗೊಲ್ಲಹಟ್ಟಿಯಿಂದ ಹೊರಟು ಉಜ್ಜಯಿನಿಗೆ ಬಂದು ತನ್ನ ಮನೆಯನ್ನು ಸೇರಿ ತನ್ನ ಮಗಳಿಗೆ ಮದುವೆಯಾದ ಧನಕೀರ್ತಿಯನ್ನು ನೋಡಿ ಆಶ್ಚರ್ಯ ಪಟ್ಟು ೧೭೯–೮೦. "ಹೀಗಲ್ಲದೆ ಬೇರಾವ ರೀತಿಯಲ್ಲಿಯೂ ಈ ನೀಚ ನನ್ನು ಕೊಲ್ಲಲು ಅಸಾಧ್ಯವೆಂದು ಬಗೆದು ಉಪಾಯವಾಗಿ ನಾನೇ ರಹಸ್ಯವಾಗಿ ಓಲೆಯನ್ನು ಕಳುಹಿಸಿದರೆ ಹೀಗಾಯಿತು; ಪುಣ್ಯವುಳ್ಳವರು ಸಾಯುವರೆ ?" ೧೮೧.

ಗದ್ಯ॥ ಒಳಗಿಱಿಯಲೆಂದು ಪೊಕ್ಕುತಾಂ ಮೂಗರಿಯಪಟ್ಟನೆಂಬಂತೆ, ಕಳಲೆಂದು ಪೋವಾತನುಟ್ಟುದಂ...ಮುನಿದಿಂತಲ್ಲದೆ ಸಾಯನೆಂದುಬಗೆದಿಲ್ಲಿಗಟ್ಟಿದೊಡಂ ಸಾವು ತಪ್ಪಿ ತನೂಜೆಗೆ ಮದವಣಿಗನಾಗಿರ್ದನೆಂದು ಚಿಂತಿಸಿ ಪೊಲೆಯರೊಳ್ ಕೆಟ್ಟುದಂ ಕೆಳೆಯಂಗಮಱಿಪಲಾಗೆಂಬ ನಾಣ್ನುಡಿಯನವಧಾರಿಸಿ ತನ್ನ ಬಗೆಯನೊರ್ವಂಗಮಪ್ಪೊಡಮಱಿಪಲೊಲ್ಲದೆನ್ನ ಮುನಿಸಿಂತಲ್ಲದೆ ಪೋಗದೆಂದು ಶ್ರೀಮತಿ ರಂಡೆಯಾದೊಡಮಕ್ಕೆಂದು ಮತ್ತಂ ಧನಕೀರ್ತಿಯುಂ ಕೊಲ್ವ ಕಜ್ಜಮನೆತ್ತಿಕೊಂಡು ಮತ್ತಂ ೧೮೨

ಕ್ರೂರನಪ್ಪನನೊರ್ವನಂ ಕ್ಷಣದಿಂ ತಳಾಱನ ನಂಟನಂ
ಬೀರನಂ ಕರೆದೊಯ್ಯನಾತನ ಬೇಡಿದರ್ಥಮನಿತ್ತು ಸಂ
ಹಾರಿಸಿಂದುರಗಾಲಯಕ್ಕೆ ನಿವೇದ್ಯಮಂ ಶುಚಿಯಾಗಿ ವಿ
ಸ್ತಾರದಿಂದಿರುಳಣ್ಣ ತಂದವನಂ ವಿಚಾರಿಸದಾಕ್ಷಣಂ ೧೮೩

ಗದ್ಯ॥ ಎಂದು ಸಮಕಟ್ಟಿ ನಾಗಾಲಯದೊಳಾತನನಿರಿಸಿ ಬಂದು ಮನೆಯವರನಱಿಯಲೀಯದೆ ಅಳಿಯನಪ್ಪ ಧನಕೀರ್ತಿಯುಂ ಬೇರೆ ಕರೆದು ನಿನಗಂ ಶ್ರೀಮತಿಗಂ ವಿಘ್ನಮಿಲ್ಲದೆ ವಿವಾಹಮಾಗೆ ನಾಗೇಂದ್ರಂಗೆ ನಿನ್ನಿಂದಮೆ ಚರುವನಿಡಿಸುವೆನೆಂದು ಪರಸಿದೆನದಂ ಪುಸಿಮಾಡಲಾಗದು ಭಯಮಿ

"ಒಳಗೆ ಭೇದಿಸುವುದಕ್ಕೆಂದು ಹೊಕ್ಕು ಮೂಗು ಕೊಯ್ಸಿಕೊಂಡನೆಂಬಂತೆ ಕದಿಯಲೆಂದು ಹೋದವನು ಉಟ್ಟ ಬಟ್ಟೆಯನ್ನು ಕಳೆದುಕೊಂಡಂತೆ—ಮುನಿಸಿಕೊಂಡು 'ಹೀಗಲ್ಲದೆ ಸಾಯನು' ಎಂದು ಯೋಚಿಸಿ ಇಲ್ಲಿಗೆ ಕಳುಹಿಸಿದರೆ ಇವನಿಗೆ ಸಾವು ತಪ್ಪಿ ಮಗಳಿಗೆ ಮದುವಣಿಗನಾಗಿದ್ದಾನೆ" ಎಂದು ಚಿಂತಿಸಿ ಹೊಲೆಯರಲ್ಲಿ ಕಳೆದುಕೊಂಡುದನ್ನು ಗೆಳೆಯನಿಗೂ ತಿಳಿಸಲಾಗದೆಂಬ ಗಾದೆಯಿದ್ದುದನ್ನು ಗಮನಿಸಿ ತನ್ನ ಯೋಚನೆಯನ್ನು ಒಬ್ಬನಿಗೂ ತಿಳಿಸಲಿಷ್ಟಪಡದೆ, 'ನನ್ನ ಕೋಪ ಹೀಗಲ್ಲದೆ ಹೋಗದು' ಎಂದು ನಿರ್ಧರಿಸಿ, ಶ್ರೀಮತಿ ಮುಂಡೆಯಾದರೂ ಆಗಲೆಂದು ಮತ್ತೆ ಧನಕೀರ್ತಿಯನ್ನು ಕೊಲ್ಲುವ ಕೆಲಸವನ್ನು ಕೈಕೊಂಡು ಪುನಃ ೧೮೨. ಕ್ರೂರನಾದ ಒಬ್ಬ ತಳವಾರನ ನಂಟನನ್ನು ಆ ಕ್ಷಣವೇ ಕರೆದು ಅವನು ಕೇಳಿದಷ್ಟು ಧನವನ್ನು ಕೊಟ್ಟು "ಇಂದು ಉರಗಾಲಯಕ್ಕೆ ನೈವೇದ್ಯವನ್ನು ಮಡಿಯಲ್ಲಿ ತಂದವನನ್ನು ರಾತ್ರಿ ವಿಚಾರವನ್ನೇ ಮಾಡದೆ ಆ ಕ್ಷಣವೇ ಸಂಹರಿಸು" ೧೮೩. ಎಂದು ಏರ್ಪಡಿಸಿ ನಾಗಾಲಯದಲ್ಲಿ ಆತನನ್ನು ನಿಲ್ಲಿಸಿ ಬಂದು ಮನೆಯವರಿಗೆ ತಿಳಿಯದ ಹಾಗೆ ಧನಕೀರ್ತಿಯನ್ನು ಬೇರೆಯಾಗಿ ಕರೆದು "ನಿನಗೂ ಶ್ರೀಮತಿಗೂ ನಿರ್ವಿಘ್ನವಾಗಿ ಮದುವೆ ನಡೆದರೆ ನಾಗೇಂದ್ರನಿಗೆ ನಿನ್ನಿಂದಲೇ ಅನ್ನವನ್ನು ಇಡಿಸುತ್ತೇನೆಂದು ಹರಿಸಿಕೊಂಡಿದ್ದೇನೆ. ಅದನ್ನು ಸುಳ್ಳುಮಾಡಕೂಡದು, ಭಯವಿಲ್ಲದೆ

ಲ್ಲದೀ ನಾಗಾಲಯದ ಧರಣೇಂದ್ರಂಗೆ ತೋಱಿ ಪೊಡೆವಟ್ಟು ಬಾಯೆಂದು ಬೇರೊಂದು ಮನೆಯೊಳಿರಿಸಿದ ಚರುಗಮಂ ಕೊಡುವುದುಂ ಅನ್ನೆಗಂ ಚರುವನೊಯ್ವಾತನಂ ಮಹಾಬಳನಿದಿರೊಳ್ ಕಂಡೆಲ್ಲಿಗೆ ಪೋದಪೆಯೆಂದು ಬೆಸಗೊಳ್ವುದುಂ ಧನಕೀರ್ತಿಯಿಂತೆಂದಂ ೧೮೪

ಉರಗಾಲಯಕ್ಕೆ ನೀನೀ
ಚರುವಂ ಕೊಂಡೊಯ್ದು ನಾಗರಾಜಂಗತ್ಯಾ
ದರದಿಂ ತೋಱಿ ಬಟಿಕ್ಕಾ
ದರದಿಂ ಪೊಡಿವಟ್ಟು ಬರ್ಪುದೆಂದಿರದೆನ್ನಂ ೧೮೫

ಗದ್ಯ॥ ಎಂದು ಮಾವಂ ಬೆಸಸಿದೊಡೆ ಪೋದಪೆನೆಂಬುದುಂ ಮಹಾಬಲಂ ತಮ್ಮಯ್ಯಂಗೆ ಮುನಿದು ೧೮೬

ಮರುಳೀ ಮದವಣಿಗನನಾ
ದರಿಸದೆ ದೇಸಿಗನನಟ್ಟುವಂತಿರೆ ಮತ್ತೊ
ರ್ವರನಟ್ಟದಿವನ ಕಯ್ಯೊಳ್
ಚರುವಂ ಕೊಟ್ಟಟ್ಟಿ ಪೊಲ್ಲಗೆಯ್ದಂ ಮೂರ್ಖಂ ೧೮೭

ಗದ್ಯ॥ ಎಂದು ತಮ್ಮಯ್ಯನ ಕಪಟವೃತ್ತಿಯನಱಿಯದೆ ಬಯ್ದು ಮೈದುನನ ಕಯ್ಯ ಚರುವಂ ಕಳೆದುಕೊಂಡು ಧನಕೀರ್ತಿಯಂ ಮನೆಗೆ ಪೋಗೆಂದಟ್ಟಿ ನಾಗಾಲಯಕ್ಕೆ ಮಹಾಬಲನೊರ್ವನೆ ಬಂದು ಭಯಮಿಲ್ಲದೆ ಪುಗುವುದುಂ ೧೮೮

ಈ ನಾಗಾಲಯದ ಧರಣೇಂದ್ರನಿಗೆ ತೋರಿಸಿ ನಮಸ್ಕಾರ ಮಾಡಿ ಬಾ" ಎಂದು ಹೇಳಿ ಬೇರೊಂದು ಮನೆಯಲ್ಲಿ ಇರಿಸಿದ್ದ ಬಲಿಯನ್ನವನ್ನು (ಚರುಗ) ಕೊಡಲು; ಆಮೇಲೆ, ಆ ಚರುವನ್ನು ತೆಗೆದುಕೊಂಡು ಹೋಗುತ್ತಿದ್ದವನನ್ನು ಮಹಾಬಳನು ಇದಿರಿನಲ್ಲಿ ಕಂಡು 'ಎಲ್ಲಿ ಹೋಗುವೆ? ' ಎಂದು ಕೇಳಲು ಧನಕೀರ್ತಿಯು ೧೮೪. "ನಾಗಾಲಯಕ್ಕೆ ಈ ನೈವೇದ್ಯದನ್ನವನ್ನು ಕೊಂಡು ಹೋಗಿ ನಾಗರಾಜಂಗೆ ಅತ್ಯಾದರದಿಂದ ತೋರಿ ಬರತಕ್ಕದ್ದೆಂದು ನನ್ನನ್ನು ೧೮೫. ಮಾವನು ಆಜ್ಞಾಪಿಸಿದ್ದರಿಂದ ಹೋಗುತ್ತಿದ್ದೇನೆ." ಎನ್ನಲು ಮಹಾಬಲನು ತಮ್ಮ ಅಯ್ಯನ ಮೇಲೆ ಕೋಪಗೊಂಡು ೧೮೬. ಈ ಮದುವಣಿಗನನ್ನು ಆದರಿಸದೆ ಭಿಕ್ಷುಕನನ್ನು ಕಳುಹಿಸುವ ಹಾಗೆ ಮತ್ತೊಬ್ಬರನ್ನು ಕಳಿಸದೆ ಇವನ ಕೈಯಲ್ಲಿ ಅನ್ನವನ್ನು ಕೊಟ್ಟು ಮರುಳುತನದಿಂದ ಮೂರ್ಖ ಕಾರ್ಯ ಮಾಡಿದ" ೧೮೭ ಎಂದು ತಮ್ಮ ಅಪ್ಪನ ಕಪಟ ಕಾರ್ಯವನ್ನು ತಿಳಿಯದೆ ಬೈದು ಮೈದುನನ ಕೈಲಿದ್ದ ಚರುವನ್ನು ಕಿತ್ತುಕೊಂಡು ಧನಕೀರ್ತಿಯನ್ನು ಮನೆಗೆ ಹೋಗೆಂದು ಕಳುಹಿಸಿ ನಾಗಾಲಯಕ್ಕೆ ಮಹಾಬಲನೊಬ್ಬನೇ ಬಂದು ಭಯವಿಲ್ಲದೆ ಪ್ರವೇಶಿಸಿದನು ೧೮೮. ಅವರಿವರೆಂದು ಯೋಚಿಸದೆ

ಅವರಿವರೆಂದು ಭಾವಿಸದೆ ನೋಡದೆ ಭೋಂಕನೆ ಬಾಗಿಲಲ್ಲಿ ನಿಂ
ದವನವಂದೊತ್ತಿ ಸಾರ್ಚಿ ತಲೆಯಂ ಪಿಡಿದೊತ್ತಿ ಧರಿತ್ರಿಗಿಕ್ಕಿ ಮ
ತ್ತವಯವದಿಂ ಕಟುತ್ತಿಱಿದು ಕೊಂದು ಮಹಾಬಲನಂ ತಳಾಱನಂ
ತವಿತಥಮಪ್ಪ ಪನ್ನಗನಿವಾಸದಿನೋಡಿದನಂಜಿ ನಿರ್ದಯಂ ೧೮೯

ಗದ್ಯ॥ ಅಂತು ಮಹಾಬಲಂ ಪರಲೋಕಪ್ರಾಪ್ತನಪ್ಪುದುಮಿತ್ತಲ್ ಧನಕೀರ್ತಿಯಂ ಶ್ರೀದತ್ತ ಸೆಟ್ಟಿ ಮನೆಯೊಳ್ ಕಂಡು ವಿಸ್ಮಯಂ ಬಿಟ್ಟು ಸಾರೆವಂದು ಚರುವನೇಗೆಯ್ದೆಯೆಂದು ಬೆಸಗೊಳ್ವುದುಂ ಧನಕೀರ್ತಿಯಿಂತೆಂದಂ ೧೯೦

ಎಮ್ಮ ಭಾವನುದಾರಗುಣಂ ನಾಗಾಲಯದಲ್ಲಿಗೆ ಭಕ್ತಿಯಿಂ
ನಿಮ್ಮ ಪೇಟ್ಕೆಯಿನುತ್ಸವದಿಂ ಪೋಪೆನ್ನನಿದೆಲ್ಲಿಗೆ ಪೋದಪ್ಪೆ
ಕೆಮ್ಮನೆಂಬುದುಮಾಂ ಭಯದಿಂ ನೀವೆಂದುದನೆಂದೊಡೆ ಕೋಪದಿಂ
ನಿಮ್ಮನೋವದೆ ಬಯ್ದು ಮಗುಳ್ನೀನೆಂದು ಮಗುಳ್ಚಿ ನಿವೇದ್ಯಮಂ ೧೯೧

ಗದ್ಯ॥ ಎನ್ನ ಕಯ್ಯ ಚರುವಂ ಕಳೆದುಕೊಂಡು ನಾಗಾಲಯಕ್ಕೆ ಪೋದನೆಂಬುದುಂ ಪಾಟ್ವಸಿಱೊಳ್ ಸಾಸವೆಯಂ ಕುಡಿದರಂತೆ ಮಱುಗಿ ಸುಂಟತಿಂದ ಬಾಯೊಳ್ ಬಿಸಿನೀರಂ ಕುಡಿದರಂತೆ ಮಿಡುಮಿಡುಮಿಡುಕಿ ನಾಗಭವನಕ್ಕೊರ್ವನೆ ಪರಿತಂದು ಕಡಿಖಂಡವಾಗೆ ಪೊಯ್ಸಿಕೊಂಡು

ನೋಡದೆ ತಟ್ಟನೆ, ಬಾಗಿಲಿನಲ್ಲಿ ನಿಂತವನನ್ನು ಮೇಲೆ ಬಿದ್ದು ಕೆಡವಿ ತಲೆಯನ್ನು ನೆಲಕ್ಕಿಕ್ಕಿ ಬೇಗನೆ ಕತ್ತರಿಸಿ ಕೊಂದು ತಳವಾರನು ಅನ್ವರ್ಥವಾದ ಪನ್ನಗನಿವಾಸ (ಹಾವಿನ ಮನೆ) ದಿಂದ ಆ ನಿರ್ದಯನು ಓಡಿಹೋದನು ೧೮೯. ಹಾಗೆ ಮಹಾಬಲನು ಪರಲೋಕವನ್ನು ಸೇರಿದನು. ಇತ್ತ ಧನಕೀರ್ತಿಯನ್ನು ಶ್ರೀದತ್ತಸೆಟ್ಟಿಯು ಮನೆಯಲ್ಲಿ ಕಂಡು ಆಶ್ಚರ್ಯಪಟ್ಟು ಹತ್ತಿರ ಹೋಗಿ "ಚರುವನ್ನು ಏನು ಮಾಡಿದೆ? ಎಂದು ಕೇಳಲು ಧನಕೀರ್ತಿಯು ಹೀಗೆ ಹೇಳಿದನು ೧೯೦. "ನಿಮ್ಮ ಹೇಳಿಕೆಯಂತೆ ಭಕ್ತಿಯಿಂದ ನಾಗಾಲಯಕ್ಕೆ ಹೋಗುತ್ತಿದ್ದ ನನಗೆ ಭಾವನು ಇದಿರಾಗಿ ಬಂದು 'ಇದೆಲ್ಲಿಗೆ ಹೋಗುತ್ತೀಯೆ?' ಎಂದು ಕೇಳಿದನು. ನಾನು ಭಯದಿಂದ ನೀವು ಹೇಳಿದುದನ್ನು ತಿಳಿಸಿದೆ, ಆಗ ಉದಾರ ಗುಣನಾದ ನಮ್ಮ ಭಾವನು ಕೋಪದಿಂದ ನಿಮ್ಮನ್ನು ಲಕ್ಷ್ಯವಿಡದೆ ಬೈದು 'ನೀನು ಹಿಂತಿರುಗು' ಎಂದು ನನ್ನನ್ನು ಹಿಂದಕ್ಕೆ ಕಳುಹಿಸಿ ನೈವೇದ್ಯವನ್ನು ನನ್ನ ಕೈಯಿಂದ ಎಳೆದುಕೊಂಡು ನಾಗಾಲಯಕ್ಕೆ ಹೋದನು" ಎಂದು ಹೇಳಿದ ಧನಕೀರ್ತಿಯ ಮಾತುಗಳನ್ನು ಕೇಳುತ್ತಲೇ ಹಾಳುಹೊಟ್ಟೆ (ಬರಿಹೊಟ್ಟೆ)ಯಲ್ಲಿ ಸಾಸವೆಯನ್ನು (ಅರೆದು) ಕುಡಿದವರ ಹಾಗೆ ಸಂಕಟಪಟ್ಟು ಶುಂಠಿಯನ್ನು ತಿಂದ ಬಾಯಲ್ಲಿ ಬಿಸಿನೀರನ್ನು ಕುಡಿದವರಂತೆ ಅಸಹಾಯನಾಗಿ ಮಿಡುಕಿ ಒಬ್ಬನೇ ನಾಗಭವನಕ್ಕೆ ಓಡಿ ಬಂದು ತುಂಡು ತುಂಡಾಗಿ ಕಡಿಸಿಕೊಂಡು

ಸತ್ತಿರ್ದ ಮಗನ ಪೆಣನಂ ಕಂಡು ಮಹಾದುಃಖಿತನಾಗಿ ಮನೆಗೆ ವಂದು ನಗರಜನಕ್ಕಂ ಕಳ್ಳರೆನ್ನ ಮಗನಂ ಕೊಂದರೆಂದು ಕೃತಕದಿಂ ಸಾವಂ ಪ್ರಕಟಂ ಮಾಡಿ ಪೆಣನಂ ಮನೆಗೆ ತಂದು ಮಱು ದಿವಸಂ ಸಂಸ್ಕರಿಸಿ ನೀರಿಟ್ಟಿದು ಲೌಕಿಕಕ್ರಿಯೆಯೆಲ್ಲಮಂ ನೆಱೆಯೆ ತೀರ್ಚಿ ೧೯೨

ಮಗನಂ ನೆನೆನೆನೆದಿರುಳುಂ
ಪಗಲುಂ ಪಂಬಲಿಸಿ ಮಱುಗಿ ಕಳ್ಳನ ತಾಯಂ
ತಗಣಿತದುಃಖದಿನೊಳಗೊಳ
ಗೊಗೆದ ಮಹಾಶೋಕದಹನದಿಂ ಬೇಯುತ್ತುಂ ೧೯೩

ಈತನಂ ಕೊಲಲೆಂದತಿ ಧೂರ್ತರ್ಗಗ್ಗದ ನಿಷ್ಠುರರಪ್ಪ
ರ್ಗೀತು ಮಾಣದೆ ಮೂರ್ಖನೆ ನಾನಂದರ್ಥಮನಿತ್ತೊಡಮೆಲ್ಲರುಂ
ಪ್ರೀತಿಯಿಂ ಕೊಲಲೊಲ್ಲದೆ ಪೋದರ್ ನಾನೆ ದರಿದ್ರನೆನಾದೆನು
ರ್ವೀತಳಸ್ತುತನಪ್ಪ ಮಗಂಗೆ ಕೇಡಿನಿತಾದುದು ಪಾಪದಿಂ ೧೯೪

ಗದ್ಯ॥ ಪಣ್ಣಂಗಿಟ್ಟೊಡೆ ಕಾಯ್ ಬಿರ್ದುದೆಂಬ ನಾಣ್ಣುಡಿ ನುಡಿವರ ಮಾತೆನಗಾದುದೆಂದು ಮೂಗಟ್ಟಿಯುಟ್ಟು ಧನಕೀರ್ತಿಯ ಮೇಲೆ ತೀವ್ರಮಪ್ಪ ಮುನಿಸಾಗಿ ೧೯೫

ಸತ್ತು ಬಿದ್ದಿದ್ದ ಮಗನ ಹೆಣವನ್ನು ಕಂಡು ಮಹಾದುಃಖಪಟ್ಟು ಮನೆಗೆ ಬಂದು ನಗರದ ಜನರಿಗೆ 'ಕಳ್ಳರು ನನ್ನ ಮಗನನ್ನು ಕೊಂದರು" ಎಂದು ಕಪಟದಿಂದ ಸಾವನ್ನು ಪ್ರಕಟಿಸಿ ಹೆಣವನ್ನು ಮನೆಗೆ ತಂದು ಮರುದಿನ ಶವಸಂಸ್ಕಾರಮಾಡಿ ಸ್ನಾನಮಾಡಿ ಲೌಕಿಕ ಕ್ರಿಯೆಗಳೆಲ್ಲವನ್ನೂ ಸಂಪೂರ್ಣವಾಗಿ ಮಾಡಿ ಮುಗಿಸಿದನು ೧೯೨. ಮಗನನ್ನು ಮತ್ತೆ ಮತ್ತೆ ಸ್ಮರಿಸಿ ಹಗಲೂ ರಾತ್ರಿಯೂ ಹಂಬಲಿಸಿ ಸಂಕಟಪಟ್ಟು ಕಳ್ಳನ. ತಾಯಿಯಂತೆ ಅಪಾರ ದುಃಖದಿಂದ ಒಳಗೊಳಗೇ ಹುಟ್ಟಿದ ಮಹಾಶೋಕಾಗ್ನಿಯಲ್ಲಿ ಬೇಯುತ್ತ ಇದ್ದನು. ೧೯೩. "ಈತನನ್ನು ಕೊಲ್ಲುವುದಕ್ಕೆಂದು ಮಹಾನೀಚರಿಗೆ, ಕ್ರೂರವಾದವರಿಗೆ", ಒಲಿದು ಮೂರ್ಖನಾದ ನಾನು ಅಂದು ಹಣವನ್ನು ಕೊಟ್ಟರೂ ಅವರೆಲ್ಲ ಕೊಲ್ಲಲು ಇಷ್ಟಪಡದೆ ಪ್ರೀತಿಯಿಂದ ಮಗುವನ್ನು ಬಿಟ್ಟು ಹೋದರು, ನಾನೇ ದರಿದ್ರನಾದೆ, ಲೋಕದ ಸ್ತೋತ್ರಕ್ಕೆ ಪಾತ್ರನಾದ ಮಗನಿಗೆ ನನ್ನ ಪಾಪದಿಂದ ಇಷ್ಟು ಕೆಡಕಾಯಿತು. 'ಹಣ್ಣಿಗೆ ಹೊಡೆದರೆ ಕಾಯಿಬಿತ್ತು' ಎಂಬ ಗಾದೆಯು ಮಾತು ನನಗೆ ಆಯಿತು. ಎಂದು ಮೂಗಳುವನ್ನು ಅತ್ತು, ಧನಕೀರ್ತಿಯ ಮೇಲೆ ಹೆಚ್ಚಾದ ಮುನಿಸು ಉಂಟಾಯಿತು. ೧೯೫. ಉದಾರಗುಣನಾದ ನನ್ನ ಮಗ

ಎನ್ನ ಕಂದನುದಾರಗುಣಂ ಮತ್ತೀತನ ಕಾರಣದಿಂದೆ ಸ
ತ್ತೆನ್ನನಾಱಡಿಗೊಂಡನಿದಂ ನಾಂ ಚಿಂತಿಸಿ ಸಾಯದೆ ಬುದ್ಧಿಯಿಂ
ದೆನ್ನ ವೈರಿಯನೀತನ ನಾನಿಂದಿಲ್ಲಿಯೆ ಮೆಲ್ಲನೆ ಕೊಂದು ಕೇ
ಳೆನ್ನ ಚಿತ್ತದೊಳಾದಟಲಂ ನೋವಂ ಛಲದಿಂದಮೆ ತೀರ್ಚುವೆಂ ೧೯೬

ಗದ್ಯ॥ ಎಂದು ಮನದೊಳಾಲೋಚಿಸಿ ವಿಶಾಖೆಯಂ ಕರೆದು ಏಕಾಂತದೊಳ್ ಧನಕೀರ್ತಿಯ ಪ್ರಪಂಚಮನೆಲ್ಲಮನಱಿಪಿ ನೀನೀತನಳಿಯನೆಂದು ಮೋಹಿಸದೆನಗೆ ಕೂರ್ಪೊಡೆನ್ನ ಮಾತನಂತಿಂತೆನ್ನದುದಾಸೀನಂ ಮಾಡದೆನ್ನ ಮನದಟಲುಂ ಮಹಾಬಲನ ಪಗೆಯುಂ ಪೋಪಂತು ವಿಷ ಪ್ರಯೋಗದಿಂದೊರ್ವರುಮಱಿಯದಂತಿರಿದು ನಾಳಿನೊಳಗೆ ತಡೆಯದೆ ಕೊಲಲ್ವೇಟ್ಕುಮೆಂದು ಕಯ್ಯಂ ಮುಗಿದು ಪ್ರಾರ್ಥಿಸುವುದುಂ ೧೯೭

ಸರಸಿಜಾಕ್ಷಿ ವಿಶಾಖೆ ಗಂಡನ ಮಾತನೇಳಿಸಲಾಗದೆಂ
ದುರಗರಾಜಸಮಾನಭೋಗಿಯನಿಂದು ಮಾಣದೆ ಕೊಲ್ವೆನೆಂ
ದಿರದೆ ದೊಡ್ಡಿದುವಪ್ಪ ಲಡ್ಡುಗೆಯಲ್ಲಿ ತೀವ್ರದ ನಂಜನೋ
ಸರಿಸದಿಕ್ಕಿ ಮಗಳ್ಗೆ ನಿನ್ನವರಂಗೆ ನೀನನುರಾಗದಿಂ ೧೯೮

ಇವನ ಕಾರಣದಿಂದ ಸತ್ತು ನನ್ನನ್ನು ಹಿಂಸೆಗೆ ಗುರಿಮಾಡಿದ. ಇದನ್ನು ನಾನು ಚಿಂತಿಸುತ್ತ ಸಾಯದೆ, ಬುದ್ಧಿ ಚಮತ್ಕಾರದಿಂದ ನನ್ನ ವೈರಿಯಾದ ಇವನನ್ನು ಇಂದು. ಇಲ್ಲಿಯೇ, ಉಪಾಯವಾಗಿ ಕೊಂದು ನನ್ನ ಮನಸ್ಸಿನಲ್ಲಿ ಉಂಟಾದ ದುಃಖವನ್ನು ನೋವನ್ನೂ ಛಲದಿಂದಲೇ ತೀರಿಸಿಕೊಳ್ಳುತ್ತೇನೆ," ೧೯೬. ಎಂದು ತನ್ನ ಮನಸ್ಸಿನಲ್ಲಿಯೇ ಯೋಚಿಸಿ ವಿಶಾಖೆಯನ್ನು ಕರೆದು, ಏಕಾಂತದಲ್ಲಿ ಧನಕೀರ್ತಿಯ ವಿಸ್ತಾರವಾದ ವೃತ್ತಾಂತವನ್ನೆಲ್ಲವನ್ನೂ ತಿಳಿಸಿ, "ನೀನು, ಈತನು ಅಳಿಯನೆಂದು ಮೋಹವಿಟ್ಟು ಕೊಳ್ಳದೆ. ನನಗೆ ಒಲಿದದ್ದುಂಟಾದರೆ, ನನ್ನ ಮಾತಿನಂತೆ, ಹಾಗೆ, ಹೀಗೆ, ಎಂದು ಅಡ್ಡ ಹೇಳದೆ, ಉದಾಸೀನ ಮಾಡದೆ, ನನ್ನ ಮನಸ್ಸಿನ ದುಃಖವೂ ಮಹಾ ಬಲನ ಹಗೆಯೂ ಹೋಗುವ ಹಾಗೆ ವಿಷಹಾಕಿ ಒಬ್ಬರಿಗೂ ತಿಳಿಯದಂತೆ ಈವೊತ್ತು ನಾಳೆಯೊಳಗೆ, ತಡಮಾಡದೆ ಕೊಲ್ಲಬೇಕು" ಎಂದು ಕೈ ಮುಗಿದು ಬೇಡಿ ಕೊಂಡನು. ೧೯೭. ವಿಶಾಖೆಯು ಗಂಡನ ಮಾತನ್ನು ಅಲಕ್ಷ್ಯ ಮಾಡಲಾರದೆ ಉರಗ ರಾಜನಿಗೆ ಸಮಾನನಾದ ಭೋಗಿಯನ್ನು ಈದಿನ ಬಿಡದೆ ಕೊಲ್ಲುವೆನೆಂದು ತಡವಿಲ್ಲದೆ ದೊಡ್ಡದಾದ ಲಡ್ಡುಗೆಗಳಲ್ಲಿ ತೀಕ್ಷ್ಣವಾದ ವಿಷವನ್ನು ಹಾಕಿ ಮಗಳಿಗೆ, "ನಿನ್ನ ಗಂಡನಿಗೆ ಪ್ರೀತಿಯಾಗುವಂತೆ ಕೊಡು" ಎಂದು ಹೇಳಿ ವಿಶಾಖೆಯು ನೆರೆಮನೆಗೆ ಹೋಗಿ ಏನೂ

ಗದ್ಯ॥ ತಡೆಯದಿಕ್ಕುವುದೆಂದು ಪೇೞ್ದು ವಿಶಾಖೆ ನೆರೆಮನೆಗೆ ಪೋಗಿ ದೂರ್ತಿಂದಱಿಯದವಳಂ ತಿರ್ಪುದುಂ ಶ್ರೀಮತಿ ಧನಕೀರ್ತಿಯ ಕಾಲಂ ಕರ್ಚಿ ವಿನಯದಿಂದೊಳಗಣ್ಗೆ ಕರೆದು ಪ್ರಿಯದಿಂ ದೇಱಲಿಕ್ಕಿ ತಳಿಗೆಯೊಳಿಕ್ಕುವುದುಂ, ಆ ಪ್ರಸ್ತಾವದೊಳ್ ೧೯೯

ಹಿಂಸಾವಿರಹಿತನೈ ನೀ
ನಿಂ ಸಲೆ ಬಾೞ್ ಪಾಪಕರ್ಮನೆಂ ಪೆಱರೞಿವಂ
ಹಿಂಸೆಯನೆ ಬಯಸಿ ಮಱುಗುವ
ನಾಂ ಸತ್ತಪೆನೆಂದು ಪೂಣ್ದು ಬರ್ಪನ ತೆಱದಿಂ ೨೦೦

ಗದ್ಯ॥ ಶ್ರೀದತ್ತಸೆಟ್ಟಿಯುಂ ಪಸಿದು ಬರ್ಪುದುಂ ಇದಿರಾಗಿ ಪರಿತಂದು ಶ್ರೀಮತಿ ಕಾಲಂ ಕರ್ಚಿ ಬೇಗಮೊಳಗಣ್ಗೆ ಕರೆದು ವಿಸ್ತರಮಪ್ಪ ವಿಷ್ಟರಮನಿಕ್ಕಿ ಪಿರಿಯಡ್ಡಣಿಗೆಯುಮಂ ಪರಿಯಣಮುಮನಿಟ್ಟು ೨೦೧

ದೊಡ್ಡಿದುವಾಗಿ ನುಣ್ಪೆಸೆದು ಸರ್ಕರೆಯೊಳ್ ಸಮನಪ್ಪ ಪೆಂಪಿನಾ
ಲಡ್ಡುಗೆಯುಂ ಮನೋಮುದದಿಂದೆನ್ನ ವರಂಗಳಿಪಿಂದೆ ಮುನ್ನಮಾರಿ
ಬಡ್ಡಿಸಿದಂದು ನೋಡ ಪದೆದೀಗಳೆ ಡೊಂಬಿತಿ ಜೋಡೆ ಸೋಲದಿಂ
ಬಡ್ಡಿಸಿದಪ್ಪಳೆಂದು ನೆಱೆ ದೂರುವರೆನ್ನನವಜ್ಞೆಯಿಂ ಪೆಱರ್ ೨೦೨

ತಿಳಿಯದವಳಂತೆ ಇದ್ದುಬಿಟ್ಟಳು. ಶ್ರೀಮತಿಯು ಮನೆಗೆ ಬಂದ ಧನಕೀರ್ತಿಯ ಕಾಲನ್ನು ತೊಳೆದು ವಿನಯದಿಂದ ಒಳಕ್ಕೆ ಕರೆದು ಪ್ರೀತಿಯಿಂದ ಮಣೆ ಹಾಕಿ ತಳಿಗೆಯಲ್ಲಿ ಬಡಿಸಿದಳು. ೧೯೮-೧೯೯. ಆ ಸಂದರ್ಭದಲ್ಲಿ "ನೀನು ಹಿಂಸಾರಹಿತನಾದವನು, ನೀನು ಚೆನ್ನಾಗಿ ಬಾಳು. ಪಾಪಕರ್ಮಿಯಾದ ನಾನು, ಇತರರ ನಾಶವನ್ನೇ ಬಯಸುವ, ಹಿಂಸೆಯನ್ನೇ ಬಯಸಿ ಸಂಕಟಪಡುವ ನಾನು, ಸಾಯುತ್ತೇನೆ" ಎಂದು ಪ್ರತಿಜ್ಞೆಮಾಡಿ ಬರುವವನ ಹಾಗೆ ೨೦೦. ಶ್ರೀದತ್ತಸೆಟ್ಟಿಯೂ ಹಸಿದು ಬರಲು ಶ್ರೀಮತಿಯು ಇದಿರಾಗಿ ಓಡಿ ಬಂದು ಅವನ ಕಾಲು ತೊಳೆದು, ದೊಡ್ಡ ಪೀಠವನ್ನು ಇಟ್ಟು ದೊಡ್ಡ ಮುಕ್ಕಾಲು ಮಣೆಯನ್ನೂ ಹರಿವಾಣವನ್ನೂ ಇಟ್ಟಳು ೨೦೧. ದೊಡ್ಡದಾಗಿ ನುಣುಪಿನಿಂದ ಕೂಡಿ ಹೊಳೆಯುತ್ತಿದ್ದ, ಸಕ್ಕರೆಗೆ ಸಮನಾದ ಸವಿಯಿಂದ ಕೂಡಿದ ಆ ದೊಡ್ಡ ಲಾಡುಗಳನ್ನು ತನ್ನ ಮನಸ್ಸಂತೋಷದಿಂದ ಗಂಡನಿಗೆ ಬಡಿಸಿದರೆ ತನ್ನನ್ನು ಹಿರಿಯರು ಹಾಸ್ಯ ಮಾಡಬಹುದೆಂದು ಶ್ರೀಮತಿ ಹೆದರಿದಳು, "ಇನ್ನೂ ಈಗತಾನೆ ಮದುವೆಯಾದವಳು. ಆಗಲೇ ಗಂಡನ ಮೇಲೆ ಎಷ್ಟು ಅಭಿಮಾನ? ಎಂದು ಎಲ್ಲರೂ ದೂರುವರೆಂದು ಯೋಚಿಸಿದಳು. ೨೦೨. ಅವಳು ಸಣ್ಣ ಲಡ್ಡುಗೆಗಳನ್ನು ಧನಕೀರ್ತಿಗೆ ಬಡಿಸಿ ವಿಷದಿಂದ

ಗದ್ಯ॥ ಎಂದು ಕಿಱಿಯವಪ್ಪಲಡ್ಡುಗೆಗಳಂ ಧನಕೀರ್ತಿಗಿಕ್ಕಿ ವಿಷದೊಳ್ ಪುದಿದಿರ್ದ ದೊಡ್ಡಿದುವಪ್ಪ ಲಡ್ಡುಗೆಗಳಂ ತಂದೆಗೆ ಬಡಿಸುವುದುಮಿರ್ವರುಂ ರುಚಿಕರಮಾದುದೆಂದು ಬಾಯ್ಸವಿಗೆ ಸೋಲ್ತು ಮೆಲ್ವುದುಂ ಶ್ರೀದತ್ತಂ ವಿಷಮಾವರಿಸಿ ನಿಲಲಾಱದೆ ಕಣ್ತಿರಿದು ನೆಲಕ್ಕೆ ಬಿರ್ದು ನಿಶ್ಶಕ್ತನಾಗಿ ಮೆಯ್ಯಱಿಯದೆ ಬೆಮರ್ತು ೨೦೩

ಪೆಱರಳಿವಂ ಬಯಸುವರೀ
ತೆಱದಿಂ ಮತಿಗೆಟ್ಟು ಸಾವರೆಂದೆಲ್ಲರ್ಗಂ
ನೆಱೆ ಸಾಱಿ ತೋಱಿ ಬೇಗದಿ
ನಱಿಪುವವೋಲ್ ಯಮಪುರಕ್ಕೆ ಸರಿದಂ ಕುಟಿಲಂ ೨೦೪

ತಂದೆಯ ನೋವಂ ತೊಟ್ಟನೆ
ನಂದನೆ ಕಂಡಟ್ಟು ಬೆರ್ಚಿ ಬಾಯ್ಬಿಟ್ಟು ಮನಂ
ಗುಂದಿ ಪಿರಿದಪ್ಪ ತಲ್ಲಣ
ದಿಂದಂ ಮೆಯ್ಯಱಿಯದಯ್ಯನಂ ನೋಡುತ್ತುಂ ೨೦೫

ಇರೆ ಮದವಣಿಗಂ ಮಾವನ
ಮರಣಕ್ಕತಿ ದುಃಖಿಪಾಗೆ ಮನದೊಳ್ ಮಱುಗು
ತ್ತಿರೆ ವನೆಯವರೆಲ್ಲಂ ಭೋ
ಗರೆದೞುತುಂ ನೊಂದು ಬೆಂದು ಪಳವಿಸುತಿರ್ದರ್ ೨೦೬

ತುಂಬಿದ್ದ ದೊಡ್ಡ ಲಡ್ಡುಗೆಗಳನ್ನು ತನ್ನ ತಂದೆಗೆ ಬಡಿಸಿದಳು, ಅವರಿಬ್ಬರೂ ರುಚಿಕರವಾಗಿದೆಯೆಂದು ರುಚಿಗೆ ಮೆಚ್ಚಿ ಚೆನ್ನಾಗಿ ಮೆದ್ದರು. ಶ್ರೀದತ್ತನು ವಿಷವೇರಿ ನಿಲ್ಲಲಾರದೆ ಕಣ್ಣು ತಿರುಗಿ ನೆಲಕ್ಕೆ ಬಿದ್ದು ನಿಶ್ಶಕ್ತನಾಗಿ ಮೈಯ ಮೇಲೆ ಎಚ್ಚರವಿಲ್ಲದೆ ಬೆವರಿದನು. ೨೦೩. ಹೆರವರ ನಾಶವನ್ನು ಬಯಸುವವರು ಈ ರೀತಿಯಾಗಿ ಸಾಯುವರೆಂದು ಎಲ್ಲರಿಗೂ ಸಾರಿ ಹೇಳಿ ತೋರಿಸುವಂತೆ ಆ ಮೋಸಗಾರನು ಯಮಪುರವನ್ನು ಸೇರಿದನು. ೨೦೪. ತಂದೆಯ ನೋವನ್ನು ತಟ್ಟನೆ ಕಂಡು ಮಗಳು ಅತ್ತು ಭಯದಿಂದ ಬಾಯಿಬಿಟ್ಟು ಗೋಳಾಡಿ ಮನಸ್ಸು ಕುಗ್ಗಿ ಹೆಚ್ಚಾದ ತಲ್ಲಣದಿಂದ ಮೈಯರಿಯದೆ ತಂದೆಯನ್ನೇ ನೋಡುತ್ತಿದ್ದಳು. ೨೦೫. ಮದವಣಿಗನು ಮಾವನ ಸಾವಿಗೆ ಬಹಳ ದುಃಖಪಟ್ಟು ಮನಸ್ಸಿನಲ್ಲಿ ಮರುಗುತ್ತ ಇರುವಾಗ ಮನೆಯವರೆಲ್ಲರೂ ಭೋರೆಂದು ಅಳುತ್ತ ನೊಂದು ಹಳವಿಸುತ್ತಿದ್ದರು ೨೦೬. ಹಾಗೆ ಅವರ ಹಾಹಾಕಾರವನ್ನೂ ಅಳುವನ್ನೂ ನೆರೆಮನೆ

ಗದ್ಯ॥ ಅಂತವರ ಹಾಹಾಕ್ರಂದನಮಂ ನೆರೆಮನೆಯೊಳಿರ್ದ ವಿಶಾಖೆ ಕೇಳ್ದು ಧನಕೀರ್ತಿ ಸತ್ತ ನೆಂದು ಗಂಡನ ಸಾವನಱಿಯದೆ ರಾಗಿಸಿ ಶ್ರೀದತ್ತಸೆಟ್ಟಿ ಬೇಳಾಗಿ ತನ್ನರ್ಥಮಂ ಪಲವು ಸೂೞ್ ಕ್ರೂರರಪ್ಪವರ್ಗೆ ಕೊಟ್ಟು ಕೊಲಲಾಱದಂತಪ್ಪ ಧನಕೀರ್ತಿಯಂ ಕಿವಿಗೇಳದಂತಱಿಯದಂತವಯ ವದಿಂದೊರ್ಮೆಯ ಘುಮ್ಮನೆ ಕೊಂದೆವೆಂದು ಪೆಟ್ಟುವೆರ್ಚಿ ಪೆಱರಂ ನಂಬಿಸಲ್ವೇಡಿ ಹಾಹಾ ಶೋಕಮಂ ಪಣ್ಣಿ ಕೇಳ್ದು ಕೆಟ್ಟೆನೞಿದೆನೆಂದು ಪುಯ್ಯಲಿಟ್ಟೞುತ್ತುಮಱಿಯದಂತೆ ಬಂದೊಳಗೆ ಪೊಕ್ಕು ಸತ್ತಿರ್ದ ಗಂಡನುಮಂ ಕೆಲದೊಳ್ ಕುಳ್ಳಿರ್ದಳಿಯನುಮಂ ಕಂಡು ೨೦೭

ಬೇಱಾಗಿ ತಳೋದರಿ ಮೆ
ಯ್ಯಱಿಯದೆ ನಿಲಲಾಱದೆಟ್ಟು ಗೋೞಿಟ್ಟೞುತುಂ
ಮಱುಕದಿನಾಣ್ಮನ ಪೆಣನಂ
ಪೆಱೆಮುಖಿ ತಕ್ಕೈಸಿಕೊಂಡು ಕೆಟ್ಟೆನೆನುತ್ತುಂ ೨೦೮

ಆನೊಂದು ಬಗೆಯಲ್ ಬಿದಿ
ತಾನೊಂದಂ ಬಗೆದು ವಾರ್ಧಿಗರ್ದಿದುದೆನ್ನಂ
ನೀನೞಿವೆಯೆಂದು ಮಾಡಿದೊ
ಡಾನೞಿದೆಂ ಮಗಳೆ ನಿನ್ನ ಪುಣ್ಯಂ ಕಿಱಿದೇಂ ೨೦೯

ಯೊಳಗಿದ್ದ ವಿಶಾಖೆಯು ಕೇಳಿ ಧನಕೀರ್ತಿಯೇ ಸತ್ತಿರಬೇಕೆಂದು ಭಾವಿಸಿ, ಗಂಡನು ಸತ್ತ ನೆಂಬುದು ತಿಳಿಯದೆ ಮನಸ್ಸಿನಲ್ಲಿಯೇ ಸಂತಸಪಟ್ಟು "ಶ್ರೀದತ್ತ ಸೆಟ್ಟಿಯು ದಡ್ಡನಾಗಿ ತನ್ನ ಹಣವನ್ನು ಹಲವುಸಲ ಕ್ರೂರಿಗಳಾದವರಿಗೆ ಕೊಟ್ಟು ಕೊಲ್ಲುವುದಕ್ಕಾಗದಂಥ ಧನ ಕೀರ್ತಿಯನ್ನು ಇನ್ನೊಬ್ಬರ ಕಿವಿಗೆ ಬೀಳದಂತೆ, ಯಾರಿಗೂ ತಿಳಿಯದಂತೆ ಬೇಗನೆ ಒಂದೇ ಸಲಕ್ಕೆ ಗಮ್ಮನೆ ಕೊಂದೆ" ಎಂದು ಗರ್ವಪಟ್ಟು, ಇತರರನ್ನು ನಂಬಿಸುವುದಕ್ಕೋಸ್ಕರ ಹಾಹಾಕಾರ ಮಾಡುತ್ತ ಶೋಕವನ್ನು ಅಭಿನಯಿಸುತ್ತ 'ಕೆಟ್ಟೆ, ಹಾಳಾದೆ' ಎಂದು ಹುಯ್ಯಲಿಟ್ಟು ತಿಳಿಯದವಳಂತೆ ಒಳಹೊಕ್ಕು ಸತ್ತಿದ್ದ ಗಂಡನನ್ನೂ ಪಕ್ಕದಲ್ಲಿ ಕುಳಿತಿದ್ದ ಅಳಿಯ ನನ್ನೂ ನೋಡಿದಳು ೨೦೭. ನೋಡಿ, ಬೆಪ್ಪಾಗಿ, ಆ ಕೃಶಾಂಗಿಯು ಮೈಮೇಲೆ ಎಚ್ಚರ ವಿಲ್ಲದೆ ನಿಲ್ಲಲಾರದೆ ಗೋಳಾಡಿ ಅಳುತ್ತ ಸಂಕಟದಿಂದ ತನ್ನ ಗಂಡನ ಹೆಣವನ್ನು ಆಲಿಂಗಿಸಿ ಕೊಂಡು ಆ ಚಂದ್ರಮುಖಿ ಕೆಟ್ಟೆನೆನುತ್ತ ಅತ್ತಳು ೨೦೮. "ನಾನೊಂದು ಬಗೆದರೆ ವಿಧಿ ತಾನೊಂದನ್ನು ಯೋಚಿಸಿ ನನ್ನನ್ನು ಸಮುದ್ರದಲ್ಲಿ ಮುಳುಗಿಸಿತು. ನೀನು ಹಾಳಾಗುವೆ ಯೆಂದು ಮಾಡಿದರೆ ನಾನು ಹಾಳಾದೆ. ಮಗಳೇ ನಿನ್ನ ಪುಣ್ಯ ಸ್ವಲ್ಪವಲ್ಲ ೨೦೯.

ಕುಂದದೆ ಕಿಱಿಯಂದಿಂ ತೊ ೨೨೧
ಟ್ಟಂದುವರಂ ನಿನ್ನನಟಿಪುಪಾಯಮನದಟಿಂ
ಸಂದಿಸಿ ಮಾಡಿದ ಫಲಮಂ
ಸಂದೆಯಮಿಲ್ಲಣ್ಣ ತಾನೆ ಕಂಡಂ ತುದಿಯೊಳ್ ೨೨೦

ಕೊಲೆಯಿಲ್ಲದ ಜಿನಧರ್ಮದ
ಫಲದಿಂ ನೀನುಗ್ರಮಪ್ಪಕಂಟಕಮಂ ಮುಂ
ಪಲವಂ ನೀಗಿದೆ ಹಿಂಸೆಯ
ಫಲದಿಂದೆನ್ನಾಣ್ಮನೆಯ್ದಿದಂ ಯಮಪುರಮಂ ೨೧೧

ಮುನಿವರರೆಂದ ದಿವ್ಯವಚನಂ ಪುಸಿಯಪ್ಪುದೆ ಕಂದ ಮಾಳವಾ
ವನಿಪತಿಯಾಗಿ ಜೈನಸಮಯಾಂಬುಧಿಗಗ್ಗದ ಚಂದ್ರನಾಗಿ ಮೇ
ದಿನಿಪತಿವಂದ್ಯನಾಗಿ ಪರಮಾಂಡಳಿಕರ್ ಬೆಸಕೆಯ್ಯೆರಾಜ್ಯಗೋ
ಮಿನಿಧರನಪ್ಪ ನಿನ್ನನಘಮಿಶ್ರಿತರಿನ್ನಟಿಯಲ್ಕೆಬರ್ಕುಮೇ ೨೧೨

ಗದ್ಯ॥ ಎಂದಳಿಯನ ಮೊಗಮಂ ನೋಡಿ ಬಸಿಱಂ ಬಡಿದುಕೊಂಡಟ್ಟು ೨೧೩

ನರಪತಿ ಪೂಜ್ಯನಪ್ಪ ಧನಕೀರ್ತಿಗೆ ಪೆಂಡತಿಯಾಗಿ ಪುಣ್ಯದಿಂ
ಧರಣಿಯನಾಳ್ದು ಬೆರ್ಚಿ ಬೆಸಕೆಯ್ಯೆ ವಿಳಾಸಿನಿಯರ್ ವಿಳಾಸದಿಂ
ಪರಮವಿಭೂತಿಯಂ ಪಡೆಯಲಿರ್ದವಳಂ ಮುನಿದಕ್ಕ ನಿನ್ನನ
ಚ್ಚರಿಯೆನೆ ರಂಡೆ ಮಾಡುವಳಿಪಂ ಬಗೆವರ್ಗಟಿವಾಗದಿರ್ಕುಮೇ ೨೧೪

ಚಿಕ್ಕಂದಿನಿಂದ ತೊಡಗಿ ಇಂದಿನವರೆಗೂ ಬಿಡದೆ ನಿನ್ನನ್ನು ಕೊಲ್ಲಲು ಉಪಾಯಮಾಡಿದನು. ಆದರಿಂದ ಅಣ್ಣ ! (ಧನಕೀರ್ತಿ) ಅದರ ಫಲವನ್ನು ಈಗ ಕೊನೆಯಲ್ಲಿ ತಾನೇ ಕಂಡನು ೨೧೦. ಕೊಲೆಯಿಲ್ಲದ ಜಿನಧರ್ಮದ ಫಲದಿಂದ ನೀನು ಭಯಂಕರವಾದ ಹಲವು ಕಂಟಕಗಳನ್ನು ದಾಟಿದೆ. ಹಿಂಸಾಕರ್ಮದ ಫಲವಾಗಿ ನನ್ನ ಸ್ವಾಮಿಯೇ ಈಗ ಯಮಪುರಕ್ಕೆ ಹೋದನು ೨೧೧. ಮುನಿಶ್ರೇಷ್ಠರು ಹೇಳಿದ ದಿವ್ಯವಾಕ್ಯವು ಸುಳ್ಳಾಗುವುದೆ ? ಮಗನೆ, ಮಾಳವದೇಶಕ್ಕೆ ಒಡೆಯನಾಗಿ, ಜೈನಧರ್ಮಕ್ಕೆ, ಸಮುದ್ರಕ್ಕೆ ಚಂದ್ರನಂ ಹೇಗೋ, ಹಾಗೆ ಉತ್ಸಾಹದಾಯಕನಾಗಿ, ರಾಜಪೂಜ್ಯನಾಗಿ ಅನ್ಯ ರಾಜರು ಸೇವೆ ಮಾಡುತ್ತಿರಲು ರಾಜಭೂಧರನಾದ ನಿನ್ನನ್ನು ಪಾಪ ದೂಷಿತರು ಕೊಲ್ಲಲು ಬರುವುದೇ ? ೨೧೨. ಎಂದು ಅಳಿಯನ ಮುಖವನ್ನು ನೋಡಿ ಹೊಟ್ಟೆ ಹೊಡೆದುಕೊಂಡು ಅತ್ತು, "ರಾಜಪೂಜ್ಯನಾದ ಧನಕೀರ್ತಿಗೆ ಹೆಂಡತಿಯಾಗಿ, ಪುಣ್ಯದಿಂದ ಭೂಮಿಯನ್ನು ಆಳಿ, ವಿಳಾಸಿನಿಯರು ಭಯಭಕ್ತಿಗಳಿಂದ ಸೇವೆಮಾಡುತ್ತಿರಲು ಆನಂದ ವೈಭವಾತಿಶಯಂಗಳನ್ನು ಹೊಂದಲಿರುವವಳನ್ನು ನಿನ್ನನ್ನು ಸಿಟ್ಟಿನಿಂದ ರಂಡೆಯಾಗಿ ಮಾಡುವ ಸಂಕಲ್ಪ ಮಾಡಿದವರಿಗೆ ನಾಶವು ಒದಗದಿರುವುದೆ?' ೨೧೪. ಎಂದು ಮಗಳ ಮುಖವನ್ನು ನೋಡಿ

ಗದ್ಯ॥ ಎಂದು ಮಗಳ ಮೊಗಮಂ ನೋಡಿ ಪಳಯಿಸಿ ತಲೆಯಂ ಪೊಯ್ದುಕೊಂಡಟ್ಟು ನೆರೆದ ನಂಟರ ಬಳಸಿರ್ದ ಪೌರರ ಮೊಗಮಂ ನೋಡಿ ೨೧೫

ಇರುಳೊಳ್ ಚಂದ್ರನ ರಶ್ಮಿಯಂ ಕಿಡಿಸಲೆಂದಿರ್ಪಾತನಂ, ಕೋಪದು
ಬ್ಬರದಿಂದಂ ಪಗಲೊಳ್ ದಿವಾಕರನ ತೀವ್ರೋಷ್ಣಾಂಶುವಂ ಮಾಣಿಪೆಂ
ಭರದಿಂದೆಂಬನುಮುರ್ವಿಯೊಳ್ ನಿಖಿಲ ಪುಣ್ಯಾಂಭೋಧಿಯಪ್ಪಾತನಂ
ಪುರುಡಿಂದಂ ಕೊಲಲೆಂದು ಕಾಯ್ವ ನರನುಂ ಗಾಂಪಂ ಪೆಱರ್ ಗಾಂಪರೇ ೨೧೬

ಮರುಳಾಗಿ ಕಿಮ್ಮನೀತನ
ನುಱಿಯಂ ಕಾಣ್ಬಂತೆ ಕಂಡು ಱಿಕ್ಕಟ ಮುನಿಸಿಂ
ಹರಿಯಿಸುವೆನೆಂದು ಪಾಪದ
ಭರದಿಂ ನರಕಕ್ಕೆ ಜಗುಳ್ದನೆನ್ನಾತ್ಮೇಶಂ ೨೧೭

ಪೆಱರಂ ನಂಬದೆ ನಂಬಿ ತನ್ನ ಸತಿಯಂ ಪೋಗುತ್ತುಮಿರ್ದೆನ್ನಯ್ಯನ
ಟ್ಟೆನ್ನಾಣ್ಮನನಾಪ್ತನೆಂದು ಗುಣಪಾಲಂ ಗುಪ್ತದಿಂ ಬುದ್ಧಿವೇ
ಟ್ದುಱ್ ತಾಂ ಕೈಯೆಡೆಯೆಂದು ಪೋಱ್ರಿಸಿಪೋದಂತಪ್ಪುದಂ ಗಾವಿಲಂ
ಮಱೆದಂತಾತನ ಪುತ್ರನಂ ಕಿಡಿಪೆನೆಂಬಾತಂಗಿದೇಂ ಚೋದ್ಯಮೋ ೨೧೮

ಹಳವಿಸಿ ತಲೆಯನ್ನು ಹೊಡೆದುಕೊಂಡು ಅತ್ತು ಸೇರಿದ ನಂಟರನ್ನೂ ಸುತ್ತ ಇದ್ದ ಪುರಜನರ ಮುಖಗಳನ್ನೂ ನೋಡಿ ೨೧೫. "ರಾತ್ರಿ, ಚಂದ್ರನ ಕಿರಣವನ್ನು ಕೆಡಿಸಬೇಕೆಂದಿರುವವನೂ ಮಹಾಕೋಪದಿಂದ ಹಗಲು ಸೂರ್ಯನ ತೀಕ್ಷ್ಣವಾದ ಬಿಸಿಕಿರಣಗಳನ್ನು ತಪ್ಪಿಸುತ್ತೇನೆಂದು ರಭಸದಿಂದ ಹೇಳುವವನೂ ಲೋಕದಲ್ಲಿ ಸಮಸ್ತ ಪುಣ್ಯಗಳ ಆಶ್ರಯನಾಗಿರುವವನನ್ನು' ಹಟದಿಂದ ಕೊಲ್ಲಲೆಂದು ದ್ವೇಷಿಸುವ ಮನುಷ್ಯನೂ ಗಾಂಪರೇ ಹೊರತು ಬೇರೆಯವರಲ್ಲ ೨೧೬. ನಿಷ್ಕಾರಣವಾಗಿ ಈತನನ್ನು ಬೆಂಕಿಯನ್ನು ಕಾಣುವಂತೆ ಕಂಡು (ದ್ವೇಷಿಸಿ) ಕೊಲ್ಲಿಸುವೆನೆಂದು ವ್ಯರ್ಥವಾಗಿ ಪಾಪದ ಹೆಚ್ಚಳದಿಂದ ನನ್ನ ಗಂಡನು ನರಕಕ್ಕೆ ಬಿದ್ದನು ೨೧೭. ಇತರರನ್ನು ನಂಬದೆ ನನ್ನ ಗಂಡನನ್ನು ಸ್ನೇಹಿತನೆಂದು, ಅಪ್ತನೆಂದು, ನಂಬಿ ಗುಣಪಾಲಸೆಟ್ಟಿಯಂ ತನ್ನ ಹೆಂಡತಿಯನ್ನು ಕರೆದುಕೊಂಡು ಹೋಗಲಾರದೆ ರಕ್ಷಣೆಗೆಂದು ಗುಟ್ಟಾಗಿ ನಮ್ಮಲ್ಲಿ ಬಿಟ್ಟು ಹೋದರೆ ಆತನ ನಂಬಿಕೆಗೆ ತಪ್ಪಿ, ಆತನ ಮಗನನ್ನು ಕೊಲ್ಲುವೆನೆಂಬಾತನಿಗೆ ಇದೇನು ಆಶ್ಚರ್ಯವೆ ?" ೨೧೮. ಎಂದು

ಗದ್ಯ॥ ಎಂದು ಕಪಟವಿಲ್ಲದೆ ಮಾಯೆಯುಮಂ ಬಿಟ್ಟು ಶ್ರೀದತ್ತಂ ಮಾಡಿದ ಪೊಲ್ಲಮೆಯೆಲ್ಲಮ ನೊಂದುಗುಂದದೆಲ್ಲಮನೆಲ್ಲರ್ಗಮಱಿಪಿ ಗುಣಪಾಲಸೆಟ್ಟಿಯ ಮಗನೆಂದಱಿಯೆ ಪೇೞ್ದು ಧನಕೀರ್ತಿ ಕುಮಾರನಂ ಮಾಳವಾಧೀಶ್ವರನಾಗಿ ಜಿನಧರ್ಮದೋಜೆಯಿಂ ನಡೆದು ಪ್ರಾಣಿಗಳನೋವಿ ವಾತ್ಸಲ್ಯ ರತ್ನಾಕರನೆನಿಸಿ ಸುಖದಿಂ ರಾಜ್ಯಂಗೆಯ್ಯೆಂದು ಪರಸಿ ಮಗಳುಮಂ ದರ್ಶನಶುದ್ಧಿ ಯೊಳ್ ಶಚೀಮಹಾದೇವಿಯುಮಂ ಪತಿವ್ರತಾಗುಣದೊಳ್ ಪ್ರಭಾವತಿಯುಮಂ ಸೀತೆಯುಮಂ ದೃಢವ್ರತದೊಳ್ ಚೇಳಿನಿಯುಮಂ ಸದ್ದರ್ಶನ ಗುರುಭಕ್ತಿಗಳೊಳ್ ರುಕ್ಮಿಣೀ ಮಹಾದೇವಿ ಯುಮಂ ಸುಲೋಚನೆಯುಮಂ ಪೋಲ್ತು ಪಟ್ಟದರಸಿಯಾಗೆಂದು ಪರಸಿ ಪಲರುಂ ಬೇಡವೇಡನೆ ಮನದಟಲಿಂದಿರಲಾಱದೆ ವಿಷಪೂರಿತಮಪ್ಪಲಡ್ಡುಗೆಗಳಂ ತಿಂದು ವಿಶಾಖೆಯುಂ ಸಾವುದುಂ ೨೧೯

ಪುರಜನಮುಂ ಬಾಂಧವರುಂ
ತರಳಾಕ್ಷಿಯ ವಚನದಿಂದಮಱಿದಾತನ ನಿ
ಷ್ಕರುಣತೆಗೆ ನಾಡೆಯುಂ ಕೊ
ಕ್ಕರಿಸಿ ಮನಂ ನೊಂದು ಮಱುಗಿ ಚೋದ್ಯಂಬಟ್ಟರ್ ೨೨೦

ಜಿನಸಮಯದಾಗಮಂಗಳ
ನನುನಯದಿಂ ಕೇಳದೋದದಾನೊಳ್ಳಿದನೆಂ
ದನವರತಂ ಪೊಂಗಿಪ್ಪಾ
ತನ ಮಾಡುವ ಧರ್ಮದಲ್ಲಿ ಪುರುಳಱಸುವುದೇ ೨೨೧

ಕಪಟವಿಲ್ಲದೆ ಮೋಸವನ್ನು ಬಿಟ್ಟು ಶ್ರೀದತ್ತನು ಮಾಡಿದ ಕೆಟ್ಟತನವನ್ನೆಲ್ಲ, ಒಂದೂ ಬಿಡದೆ ಎಲ್ಲರಿಗೂ ತಿಳಿಸಿ, ಅಳಿಯನು ಗುಣಪಾಲಸೆಟ್ಟಿಯ ಮಗನೆಂದು ಎಲ್ಲರಿಗೂ ತಿಳಿಯಂ ಹೇಳಿ ಧನಕೀರ್ತಿಯನ್ನು "ಮಾಳವರಾಜನಾಗಿ ಜಿನಧರ್ಮದ ಕ್ರಮದಲ್ಲಿ ನಡೆದು, ಪ್ರಾಣಿ ಗಳನ್ನು ರಕ್ಷಿಸಿ ವಾತ್ಸಲ್ಯರತ್ನಾಕರನೆನ್ನಿಸಿಕೊಂಡು ಸುಖವಾಗಿ ರಾಜ್ಯವಾಳು" ಎಂದು ಹರಸಿ ಮಗಳನ್ನೂ "ದರ್ಶನ ಶುದ್ಧಿಯಲ್ಲಿ ಶಚೀ ಮಹಾದೇವಿಯನ್ನೂ ಪತಿವ್ರತಾಗುಣ ದಲ್ಲಿ ಪ್ರಭಾವತಿಯನ್ನೂ ಸೀತೆಯನ್ನೂ ದೃಢವ್ರತದಲ್ಲಿ ಚೇಳಿನಿಯನ್ನೂ ಸುಲೋಚನೆ ಯನ್ನೂ ಹೋಲುತ್ತ ಪಟ್ಟಣದ ರಾಣಿಯಾಗು" ಎಂದು ಹರಸಿ ಹಲವರು ಬೇಡ ಬೇಡ ವೆಂದರೂ ಮನಸ್ಸಿನ ಸಂಕಟದಿಂದ ಇರಲಾರದೆ ವಿಷತುಂಬಿದ ಲಡ್ಡುಗೆಗಳನ್ನು ತಿಂದು ವಿಶಾಖೆಯೂ ಸತ್ತಳು. ೨೧೯. ಪುರಜನರೂ ಬಂಧುಗಳೂ ಆ ಹೆಂಗಸಿನ ಹೇಳಿಕೆಯಿಂದ ಶ್ರೀದತ್ತನ ನಿಷ್ಕರುಣ ಸ್ವಭಾವವನ್ನು ತಿಳಿದು ಬಹಳವಾಗಿ ಅಸಹ್ಯಪಟ್ಟು, ಮನಸ್ಸಿನಲ್ಲಿ ನೊಂದುಕೊಂಡು ಮಱುಗಿ ಆಶ್ಚರ್ಯಪಟ್ಟರು. ೨೨೦. ಜಿನಮತದ ಆಗಮಗಳನ್ನು ಪ್ರೀತಿಯಿಂದ ಕೇಳದೆ, ಓದದೆ, 'ನಾನು ಒಳ್ಳೆಯವನು' ಎಂದು ಸದಾ ಉಬ್ಬಿರುವಾತನು ಮಾಡುವ ಧರ್ಮದಲ್ಲಿ ಸಾರವನ್ನು ಹುಡುಕುವುದೆ ? ೨೨೧. ಚರಿತಪುರಾಣಗಳನ್ನೂ,

ಚರಿತಪುರಾಣಮುಂ ಸಮಯದುನ್ನತಿಯುಂ ಭುವನತ್ರಯಂಗಳೊಂ
ದಿರವನಪೂರ್ವಮಪ್ಪ ಜಿನಧರ್ಮದ ಪೆಂಪಿನಗುರ್ವುವೆತ್ತ ದು
ರ್ಧರ ತಪಮುಂ ಚತುಸ್ಸಮಯದೋಜೆಯನೊಳ್ಪಿದನಾಗಿ ನಿಚ್ಚಲುಂ
ವರಮುನಿನಾಥರೊಳ್ ನೆಱೆ ವಿಚಾರಿಸಲೊಲ್ಲದನಾಂ ಮನುಷ್ಯನೇ ೨೨೨

ಗದ್ಯ॥ ಎಂದು ತಮ್ಮೊಳ್ ನುಡಿದು ಶ್ರೀದತ್ತಸೆಟ್ಟಿಯ ಮಾಡಿದ ಕಷ್ಟತೆಗೆ ಬೈದು ಜೈನಧರ್ಮಮನಱಿಯದ ಜಡಂ ಮಾಡದ ಪಾಪಮಿಲ್ಲೆಂದು ಪೇಸಿ ಶ್ರೀದತ್ತನ ವಿಶಾಖೆಯ ಪೆಣಂಗಳ್ಗಂ ದಹನಕ್ರಿಯೆಗಳಂ ಮಾಡಿ ಲೌಕಿಕಕ್ರಿಯೆಲ್ಲಮಂ ನೆಱಪುವುದುಂ ೨೨೩

ಪಿರಿದಪ್ಪಾಪತ್ತಂ ಪರಿ
ಹರಿಸಿ ಮಹಾಪುಣ್ಯಮೂರ್ತಿನಿಧಾನಂ
ಪರಮಾರ್ಥಂ ಬದುಕಿದನು
ರ್ವರೆಯೊಳಿದಾಶ್ಚರ್ಯಮೆಂದು ಕೈಮುಗಿದು ಜನಂ ೨೨೪

ಗದ್ಯ॥ ಒಂದೆ ಕೊರಲೊಳ್ ಪೊಗೞುತ್ತುಮಿರೆ ೨೨೫

ನಿನ್ನಂತು ನೋಂತರಾರ್ ಧೈ
ರ್ಯೋನ್ನತ ನಿನ್ನಂತು ಪುಣ್ಯಮೂರ್ತಿಗಳಾರ್ ನಿ
ನ್ನನ್ನರ್ ಗುಣವಂತರದಾರ್
ನಿನ್ನಂತಾರ್ ಧರೆಗೆ ಕೀರ್ತಿಭಾಜನರಾದರ್ ೨೨೬

ಮತದ ಹೆಚ್ಚಳವನ್ನೂ, ಮೂರುಲೋಕಗಳ ಒಂದು ಸ್ಥಿತಿಯನ್ನೂ ಅಪೂರ್ವವಾದ ಜಿನಧರ್ಮದ ಆಧಿಕ್ಯದ ಹಿರಿಮೆಯನ್ನು ಹೊಂದಿದ ಕಷ್ಟಸಾಧ್ಯವಾದ ತಪಸ್ಸನ್ನೂ ಚತುಸ್ಸಮಯ (ನಾಲ್ಕು ಮತಗಳು) ಗಳ ಕ್ರಮವನ್ನೂ ಶ್ರೇಷ್ಠರಾದ ಮುನಿನಾಥರಲ್ಲಿ ಪೂರ್ಣವಾಗಿ ವಿಚಾರಮಾಡಲು ಇಷ್ಟಪಡದವನೂ ಒಬ್ಬ ಮನುಷ್ಯನೆ ? ೨೨೨. ಎಂದು ತಮ್ಮಲ್ಲಿಯೇ ಹೇಳಿಕೊಂಡು ಶ್ರೀದತ್ತಸೆಟ್ಟಿಯು ಮಾಡಿದ (ತಪ್ಪಿಗೆ) ಹೀನತನಕ್ಕೆ, ಬೈದು; ಜೈನಧರ್ಮವನ್ನು ತಿಳಿಯದ ದಡ್ಡನು ಮಾಡದ ಪಾಪವಿಲ್ಲವೆಂದು ಹೇಸಿಕೊಂಡರು ಶ್ರೀದತ್ತ ವಿಶಾಖೆಯರ ಹೆಣಗಳಿಗೆ ದಹನಾದಿ ಕ್ರಿಯೆಗಳನ್ನು ಮಾಡಿ ಲೌಕಿಕ ಕರ್ಮಗಳನ್ನೆಲ್ಲ ನೆರವೇರಿಸಿದರು. ೨೨೩. ದೊಡ್ಡದಾದ ಆಪತ್ತನ್ನು ತಪ್ಪಿಸಿಕೊಂಡು ಮಹಾಪುಣ್ಯಸ್ವರೂಪನೂ, ಕೀರ್ತಿ ನಿಧಾನನೂ ಆದ ಧನಕೀರ್ತಿಯು ಲೋಕದ ಜನರು 'ಇದು ಆಶ್ಚರ್ಯ' ಎಂದು ಕೈಮುಗಿಯುವ ಹಾಗೆ ಪರಮಾರ್ಥ ಸಾಧಕನಾಗಿ ಬದುಕಿದನು. ೨೨೪. ಜನ ಒಟ್ಟಿಗೆ ಹೊಗಳುತ್ತಿರಲು "ನಿನ್ನ ಹಾಗೆ ಪುಣ್ಯಶಾಲಿಗಳು ಯಾರು ? ಉನ್ನತ ಧೈರ್ಯನೆ, ನಿನ್ನಂತೆ ಪುಣ್ಯ ಸ್ವರೂಪರಾದವರು ಯಾರು ? ನಿನ್ನಂಥ ಗುಣಶಾಲಿಗಳು ಯಾರು, ಭೂಲೋಕದಲ್ಲಿ ನಿನ್ನ ಹಾಗೆ ಕೀರ್ತಿಪಾತ್ರರಾದವರು ಯಾರು ? ೨೨೫. ನೀನೂ ನಿನ್ನ ತಂದೆಯಂತೆ ವೈಶ್ಯರಿಗೆ ಅಗ್ರಗಣ್ಯನೂ ವಿಶೇಷ

ಗದ್ಯ॥ ನೀನುಂ ನಿಮ್ಮಯ್ಯನಂತೆ ವೈಶ್ಯಾಗ್ರಗಣ್ಯನುಂ ವಿಶೇಷ ಪುಣ್ಯನುಂ ಜಿನಸಮಯವಾರ್ಧಿವರ್ಧನನುಮಾಗಿ ಬಾಳೆಂದು ಪುರಜನಮುಂ ಬಂಧುವರ್ಗಮುಂ ನೆರೆದು ಪರಮಾಶೀರ್ವಚನ ಶತಸಹಸ್ರಂಗಳಿಂ ಪರಸಿ ನಾನಾಪ್ರಕಾರದಿಂ ಪೊಗಟ್ದು ಶ್ರೀದತ್ತಸೆಟ್ಟಿಯ ಮನೆಗಮರ್ಥಕ್ಕಮೊಡೆಯನಾಗೆಂದಿರಿಸಿ ಪೋದರದಂ ವಿಶ್ವಂಧರ ಮಹಾರಾಜಂ ಕೇಳ್ದು ೨೨೭

ಮಾಳವಪತಿಯಪ್ಪಂ ಗಡ
ಪಾಲಿಸುವಂ ಗಡ ಸಮಸ್ತ ಭೂಪಾಲಕರಂ
ಲೀಲೆಯೊಳೆ ವೀರದೊಳೆ ಬಾ
ಯ್ಕೇಳಿಸುವಂ ಗಡ ಸಮಸ್ತ ವಸುಧಾತಳಮಂ ೨೨೮

ಜಿನಸಮಯವರ್ಧನಂ ಗಡ
ಮನವರತಂ ಭವ್ಯಜನ ವಿನೋದಂ ಗಡಮಾ
ತನನಿಂದು ನೋಟ್ಪೆವೆಂದಿಂ
ತನುಪಮ ಗುಣನಿಳಯನಟ್ಕಱಿಂ ನಲಿಯುತ್ತುಂ ೨೨೯

ಧನಕೀರ್ತಿ ಕುಮಾರನರಮನೆಗೆ ಮಹಾವಿಭೂತಿಯಿಂ ರಾಜಕುಮಾರಪರಿವೃತನಾಗಿ ಮಾಳಪಾಧೀಶಂ ಬಂದು ವಾತ್ಸಲ್ಯರತ್ನಾಕರನಂ ನೋಡಿ ಮೆಚ್ಚಿ ೨೩೦

ಪುಣ್ಯಶೀಲನೂ ಜಿನಮತವಾರಿಧಿವರ್ಧನನೂ ಆಗಿ ಬಾಳು" ಎಂದು ಪುರಜನರೂ ಬಂಧುವರ್ಗದವರೂ ಸೇರಿ ಪರಮಾಶೀರ್ವಾದ ಸಹಸ್ರಗಳಿಂದ ಹರಸಿ ನಾನಾ ರೀತಿಗಳಿಂದ ಹೊಗಳಿ, ಶ್ರೀದತ್ತಸೆಟ್ಟಿಯ ಮನೆಗೂ ಐಶ್ವರ್ಯಕ್ಕೂ ಒಡೆಯನಾಗೆಂದು ನಿಲ್ಲಿಸಿ ಹೋದರು. ಅದನ್ನು ವಿಶ್ವಂಧರ ಮಹಾರಾಜನು ಕೇಳಿದನು. ೨೨೫–೨೨೭. ಮಾಳವ ಪತಿಯಾಗುವವನಲ್ಲವೆ ? ಸಮಸ್ತ ರಾಜರನ್ನೂ ಲೀಲಾಜಾಲವಾಗಿ ಪರಾಕ್ರಮದಿಂದ ವಿಧೇಯರನ್ನಾಗಿಸುವವನಲ್ಲವೆ ? ಸಮಸ್ತ ಭೂಮಂಡಲವನ್ನೂ ಪಾಲಿಸುವವನಲ್ಲವೆ ? ೨೨೮. ಜಿನಮತ ವರ್ಧನನಲ್ಲವೆ ? ಸದಾ ಕಾಲ ಭವ್ಯಜನವಿನೋದನಲ್ಲವೆ ? ಆತನನ್ನು ಈ ಹೊತ್ತು ನೋಡೋಣವೆಂದು ಅನುಪಮಗುಣನಿಳಯನು ಪ್ರೀತಿಯಿಂದ ೨೨೯. ಧನಕೀರ್ತಿ ಕುಮಾರನ ಅರಮನೆಗೆ ಮಹಾ ವೈಭವದಿಂದ ರಾಜಕುಮಾರ ಪರಿವೃತನಾಗಿ ಮಾಳವರಾಜನು ಬಂದು ವಾತ್ಸಲ್ಯರತ್ನಾಕರನನ್ನು ನೋಡಿ ಮೆಚ್ಚಿದನು. ೨೩೦.

ಈ ತೇಜಮುಮಿರೂಪುಂ
ಮಾತೇನಿಂತಪ್ಪ ವಿನಯಮುಂ ಗುಣಮುಂ ವಿ
ಖ್ಯಾತಿಯುಮಿಾತನನಿನಿತುಂ
ಭೂತಳಪತಿ ಮಾಟ್ಪುದೆಂಬುದೊಂದಚ್ಚರಿಯೇ ೨೩೧

ಗದ್ಯ॥ ತನ್ನೊಳೆ ನುಡಿದು ಬಟಿಕ್ಕಮಾತನ ವೃತ್ತಾಂತಮೆಲ್ಲಮಂ ಕೇಳ್ದು ತಲೆಯಂ ತೂಗಿ ಗುಣಪಾಲಸೆಟ್ಟಿಯಪ್ಪೊಡೆ ಪುಣ್ಯಮೂರ್ತಿಯುಂ ದೃಢವ್ರತಮುಪ್ಪನಂತಪ್ಪ ಮಹಾಪುರುಷಂಗೆ ಪುಟ್ಟಿದನೆಂದೊಡೀತನುಂ ಕೇವಳನಲ್ಲನಾದೇಶಪುರುಷನಪ್ಪನೆಂದು ಧನಕೀರ್ತಿಯನರಮನೆಗೊಡ ಗೊಂಡು ಪೋಗಿ ವಿಶ್ವಾವತಿ ಕನ್ನೆಯುಮನರ್ಧರಾಜ್ಯಮುಮಂ ಕುಡಲೆಂದಿರ್ಪುದುಂ ೨೩೨

ಗುಣಪಾಲಸೆಟ್ಟಿ ವೈಶ್ಯಾ
ಗ್ರಣಿ ದೇವ ಮನೋನುರಾಗದಿಂದಿರ್ದಂ ಧಾ
ರಿಣಿಪೂಜ್ಯನಪ್ಪ ನರರ
ಗ್ರಣಿ ಕೌಶಾಂಬಿ ಪುರಿಯೊಳ್ ಮಹೋನ್ನತಿಯಿಂದಂ ೨೩೩

ಎಂದೊರ್ವಂ ಬಿನ್ನವಿಪ್ಪುದು
ಮಂದಾಗಳ್ ಕೇಳ್ದು ಭೂಭುಜಂ ಮೆಚ್ಚಿ ಸದಾ
ನಂದಂ ಮೆಯ್ಯಾಟಿಯದೆ ಮುದ
ದಿಂದಂ ಮೆಯ್ಬೀರ್ಚಿ ನಲಿದು ರಾಗಿಸಿ ನಯದಿಂ ೨೩೪

"ಈ ತೇಜಸ್ಸು, ಈ ರೂಪ, ಹೆಚ್ಚು ಮಾತೇನು ? ಇಂಥ ವಿನಯವೂ ಗುಣವೂ ಕೀರ್ತಿಯೂ ಈತನನ್ನು ರಾಜನನ್ನಾಗಿ ಮಾಡುವುದೆಂಬುದೊಂದು ಆಶ್ಚರ್ಯವೆ ?" ಎಂದು ತನ್ನೊಳಗೇ ಹೇಳಿಕೊಂಡು ತರುವಾಯ ಆತನ ವೃತ್ತಾಂತವನ್ನೆಲ್ಲ ಕೇಳಿ ತಲೆದೂಗಿ ಗುಣಪಾಲಸೆಟ್ಟಿಯಾದರೆ ಪುಣ್ಯಸ್ವರೂಪನೂ ದೃಢವ್ರತನೂ ಆದಂಥ ಮಹಾಪುರುಷ. ಆತನಿಗೆ ಹುಟ್ಟಿದನೆಂದರೆ ಈತನೂ ಸಾಮಾನ್ಯನಲ್ಲ. ಇವನು ಕಾರಣ ಪುರುಷನೇ ಆದವನೆಂದು ಧನಕೀರ್ತಿಯನ್ನು ಅರಮನೆಗೆ ಕರೆದುಕೊಂಡು ಹೋಗಿ ವಿಶ್ವಾವತಿಯೆಂಬ ತನ್ನ ಮಗಳನ್ನೂ ಅರ್ಧರಾಜ್ಯವನ್ನೂ ಕೊಡಬೇಕೆಂದಿದ್ದನು. ೨೩೨. "ದೇವ ! ವೈಶ್ಯಾಗ್ರಣಿಯಾದ ಗುಣಪಾಲಸೆಟ್ಟಿಯು ಲೋಕಪೂಜ್ಯರಾದ ಮಾನವರಲ್ಲಿ ಅಗ್ರಗಣ್ಯನಾಗಿ ಕೌಶಾಂಬಿ ಪಟ್ಟಣದಲ್ಲಿ ಮಹಾವೈಭವದಿಂದ ಆನಂದವಾಗಿದ್ದಾನೆ" ಎಂದು ಒಬ್ಬನು ಬಂದು ಬಿನ್ನಹ ಮಾಡಿದನು. ಆಗ ಅದನ್ನು ಕೇಳಿ ರಾಜನು ಮೆಚ್ಚಿಕೊಂಡು ಉತ್ಸಾಹಾತಿಶಯದಿಂದ ನಲಿದು ಸಂತೋಷಪರವಶನಾದನು. ೨೩೪. ಬಂದು ಸುದ್ದಿ

ಗದ್ಯ॥ ಬಂದ ದೂತಂಗಂಗಚಿತ್ತಮಂ ಕೊಟ್ಟು ಮೞುದಿವಸಂ ಕೌಶಾಂಬಿಗೆ ಪೆರ್ಗಡೆಗಳನಟ್ಟಿ ಗುಣಪಾಲಸೆಟ್ಟಿಯುಂ ಬರಿಸಿ ಪುರದೊಳಪ್ಪಶೋಭೆಯುಂ ಮಾಡಿಸಿ ಸಕಳಸಾಮಂತ ಪರಿವೃತನಾಗಿ ಧನಕೀರ್ತಿಯುಂ ತಾನುಂ ಮಹಾವಿಭೂತಿಯಿಂದಿದಿರ್ಗೊಂಡು ಮನೆಯಂ ಪುಗಿಸಿ ಮುನ್ನಿನ ಪದವಿಯಂ ಕೊಟ್ಟು ೨೩೫

ನಿನ್ನರ್ಥಮುಮಂ ಮನೆಯುಮ
ನಿನ್ನೆವರಂ ಕಾದು ಮೋಹದಿಂ ರಕ್ಷಿಸಿದೆಂ
ನಿನ್ನರ್ಥಮುಮಂ ಮನೆಯುಮ
ನುನ್ನತ ಕೈಕೊಂಡು ಸುಖದೊಳಿರ್ ಸಂತಸದಿಂ ೨೩೬

ನಿನ್ನಭಿಮಾನಮುಮಂ ವ್ರತ
ದುನ್ನತಿಯುಮನಱಿದು ಬಱಿಕೆ ಚೋದ್ಯಂಬಟ್ಟೆಂ
ನಿನ್ನಂ ತಳ್ಪಿಲ್ಲದೆ ಕಾ
ಣ್ಬನ್ನೆವರಂ ದಿವ್ಯಭೋಗಮಂ ತೊಱೆದಿರ್ದೆಂ ೨೩೭

ಎನಗೆ ಸಖನಾಗಿಯುಂ ನಂ
ಟನಾಗಿಯುಂ ನೀನೆ ನಿನ್ನ ನಂಬಿರ್ದ ಜಿನೇ
ಶನಧರ್ಮದಂದಮಂ ಪೇ
ಳ್ದನುಪಮಜಿನಪಾದಸೇವೆಯಂ ಮಾಡೆನಗಂ ೨೩೮

ಗದ್ಯ॥ ಎಂದು ತನ್ನ ಕೂರ್ಮೆಯಂ ಸಭೆಗೆಲ್ಲಂ ತೋಱುವಂತೆ ನುಡಿದು ೨೩೯

ಹೇಳಿದ ದೂತನಿಗೆ ಪಾರಿತೋಷಕವನ್ನು ಕೊಟ್ಟು ಮೂರನೆಯ ದಿನ ಕೌಶಾಂಬಿಗೆ ಹೆಗ್ಗಡೆಗಳನ್ನು ಕಳುಹಿಸಿ ಗುಣಪಾಲಸೆಟ್ಟಿಯನ್ನು ಬರಮಾಡಿಕೊಂಡು ಪಟ್ಟಣದಲ್ಲಿ ಸೆಟ್ಟಿಯ ಸ್ವಾಗತಕ್ಕಾಗಿ ಅಪ್ಪಶೋಭೆಯನ್ನು ಮಾಡಿಸಿದನು. ಅರಸನು ಸಮಸ್ತ ಸಾಮಂತರಿಂದ ಕೂಡಿ ಧನಕೀರ್ತಿಯೂ ತಾನೂ ಮಹಾ ವೈಭವದಿಂದ ಇದಿರುಗೊಂಡು ಮನೆಯನ್ನು ಪ್ರವೇಶಮಾಡಿಸಿ ಮೊದಲಿನ ಪದವಿಯನ್ನು ಕೊಟ್ಟನು. ೨೩೫. "ನಿನ್ನ ಹಣವನ್ನೂ ಮನೆಯನ್ನೂ ಇದುವರೆಗೆ ಅಭಿಮಾನದಿಂದ ಕಾಪಾಡಿದ್ದೇನೆ. ನಿನ್ನ ಧನವನ್ನೂ ಮನೆಯನ್ನೂ ಕೈಕೊಂಡು ವೈಶ್ಯಶ್ರೇಷ್ಠ ! ಸುಖವಾಗಿರು ೨೩೬. ನಿನ್ನ ಅಭಿಮಾನವನ್ನೂ ವ್ರತಾಚರಣೆಯ ಹಿರಿಮೆಯನ್ನೂ ತಿಳಿದು ನೀನು ಹೊರಟುಹೋದ ಮೇಲೆ ಆಶ್ಚರ್ಯಪಟ್ಟೆ. ನಿನ್ನನ್ನು ಮತ್ತೆ ಕಾಣುವವರೆಗೆ ನಾನು ದಿವ್ಯ ಭೋಗವನ್ನು ತೊರೆದಿದ್ದೇನೆ. ೨೩೭. ನನಗೆ ಸ್ನೇಹಿತನಾಗಿಯೂ ನಂಟನಾಗಿಯೂ, ನೀನು ನಂಬಿರುವ ಜಿನೇಶ್ವರ ಧರ್ಮವನ್ನು ನೀನೇ ಹೇಳಿ ನನಗೂ ಅನುಪಮವಾದ ಜಿನಸೇವೆಯನ್ನು ಕೊಡ ಮಾಡು." ೨೩೮. ಎಂದು ತನ್ನ ಸ್ನೇಹವನ್ನು ಸಭೆಗೆಲ್ಲ ತಿಳಿಯುವ ಹಾಗೆ ಹೇಳಿ ೨೩೯. ನಿನ್ನ

ನಿನ್ನತನೂಭವಂಗೆ ಧನಕೀರ್ತಿಗೆ ಮಾಳವದೇಶದರ್ಧಮಂ
ಭಿನ್ನ ಸರೋಜವಕ್ತ್ರವೆರಸಿತ್ತಪೆನರ್ತಿಯೊಳೀತಿದಕ್ಕೆ ಮ
ತ್ತೆನ್ನದೆ ಸತ್ಯ ಶೌಚನಿಧಿ ಮಾನವವಂದಿತ ಮರ್ತ್ಯರತ್ನ ವೈ
ಶ್ಯೋನ್ನತ ನೀನೊಡಂಬಡುವುದೆಂದು ಮಹೀಶ್ವರವಂದಿತಕ್ರಮಂ ೨೪೦

ಗದ್ಯ॥ ಕೈಮುಗಿದು ಬೇಡಿಕೊಂಡು ಮತ್ತಮಿಂತೆಂದಂ ೨೪೧

ಜಿನಪಾದಭಕ್ತನಲ್ಲಂ
ಜನೇಶನೆಂದೆನ್ನದೆಸೆಗೆ ಬೆಚ್ಚದೆ ಮುನ್ನಂ
ವಿನುತವ್ರತಮಂ ಕೊಟ್ಟೊ
ಯ್ಯನೆ ನಂಬಿ ಬಟಿಕ್ಕೆ ವೈಶ್ಯವಂಶಲಲಾಮಾ ೨೪೨

ಗದ್ಯ॥ ಧನಕೀರ್ತಿಗೆನ್ನ ಮಗಳಂ ಪ್ರಾಣವಲ್ಲಭೆ ಮಾಡೆಂದು ಮುನ್ನಾತನ ಮನವನಱಿವ ನಪ್ಪುದಱಿಂ ಗುಣಪಾಲಸೆಟ್ಟಿಯ ಮನದ ಸಂಶಯಂ ಪೀಗೆ ನುಡಿದೊಡಂಬಡಿಸಿ ರಾಜಭವನಕ್ಕೆ ಪೋಗಿ ಗುಣಪಾಲಸೆಟ್ಟಿಯ ದರ್ಶನಶುದ್ಧಿಯೊಳಾದ ದೃಢತೆಯನಂದಿನ ದಿವಸಮೆಲ್ಲಂ ಪೊಗಟ್ದು ಮಱುದಿವಸಂ ನೈಮಿತ್ತಿಕರಂ ಕರೆದು ಶುಭದಿನಮಂ ಬೆಸಗೊಂಡು ೨೪೩

ಪಸೆ ಪಸುರ್ವಂದರೊಪ್ಪೆ ಗಣಿಕಾನಿಕರಂ ಮನವೊಲ್ದು ಪಾಡೆ ಸಂ
ತಸದಿನಮರ್ಕೆವೆತ್ತಿರೆ ವಿವಾಹ ಗೃಹಂ ವರರತ್ನದಿಂ ವಿರಾ
ಜಿಸೆ ಪಟಹಗಳ್ಪಯೋಧಿವೊಲಾರ್ವುತಿರೆ ತವೋಳಗುರ್ವುವೆತ್ತುಘೂ
ರ್ಣಿಸೆ ಜಿನಪೂಜೆಯೊಪ್ಪೆ ಪೊಗಟುತ್ತೆ ಸುತ್ತಲುಮಿರ್ದುಬರ್ಪವರ್ ೨೪೪

ಮಗನಿಗೆ–ಧನಕೀರ್ತಿಗೆ ಮಾಳವದೇಶದ ಅರ್ಧವನ್ನೂ ಕಮಲಮುಖಿಯಾದ ನನ್ನ ಮಗಳ ಜತೆಯಲ್ಲಿ ಸಂತೋಷದಿಂದ ಕೊಡುತ್ತೇನೆ. ಇದಕ್ಕೆ ಪ್ರತಿಯಾಡದೆ ಸತ್ಯ ಶೌಚ ನಿಧಿ ! ಮಾನವ ವಂದಿತ, ಮರ್ತ್ಯರಲ್ಲಿ ರತ್ನಪ್ರಾಯನಾದವನೇ, ವೈಶ್ಯಶ್ರೇಷ್ಠ ! ನೀನು ಒಪ್ಪಿಕೊಳ್ಳಬೇಕು" ಎಂದು ಆ ರಾಜಶ್ರೇಷ್ಠನು ಕೈಮುಗಿದು ಬೇಡಿಕೊಂಡು ಮತ್ತೆ "ಇವನು ಜಿನಪಾದಭಕ್ತನಲ್ಲವೆಂದು ನನ್ನ ವಿಷಯಕ್ಕೆ ಭಯಪಡಬೇಡ. ಮುಂಚೆ ಶ್ರೇಷ್ಠವಾದ ವ್ರತವನ್ನು ಕೊಟ್ಟು ಆ ಮೇಲೆ ಕ್ರಮವಾಗಿ ಧನಕೀರ್ತಿಗೆ ನನ್ನ ಮಗಳನ್ನು ಪ್ರಾಣವಲ್ಲಭೆಯಾಗಿ ಮಾಡು" ಎಂದು ಆತನ ಮನಸ್ಸನ್ನು ತಿಳಿದವನಾದುದರಿಂದ ಗುಣಪಾಲಸೆಟ್ಟಿಯ ಮನಸ್ಸಿನ ಅನುಮಾನವು ಹೋಗುವಂತೆ ನುಡಿದು ಒಪ್ಪಿಸಿ ಅರಮನೆಗೆ ಕರೆದುಕೊಂಡು ಹೋಗಿ ಗುಣಪಾಲಸೆಟ್ಟಿಯ ದರ್ಶನಶುದ್ಧಿಯಿಂದಾದ ದೃಢಚಿತ್ತತೆ ಯನ್ನು ಅಂದಿನ ದಿವಸವೆಲ್ಲ ಹೊಗಳಿ ಮರುದಿವಸ ಜ್ಯೋತಿಷ್ಕರನ್ನು ಕರೆಯಿಸಿ ಶುಭ ದಿವಸವನ್ನು ವಿಚಾರಿಸಿ ತಿಳಿದುಕೊಂಡರು. ೨೪೦–೨೪೩. ಹಸಿರುವಾಣಿ ಚಪ್ಪರದಲ್ಲಿ ಹಸೆ ಶೋಭಿಸುತ್ತಿತ್ತು. ಗಣಿಕಾ ಸಮೂಹದವರು ಮನಸ್ಸಂತೋಷದಿಂದ ಹಾಡುತ್ತಿದ್ದರು. ಮದುವೆಯ ಮನೆ ಸಂತೋಷಭರಿತವಾಗಿತ್ತು. ವಾದ್ಯಗಳು ಸಮುದ್ರ ಗರ್ಜನೆಯಂತೆ

ಧನಕೀರ್ತಿಕುಮಾರಂಗಂ
ತನೂಜೆಗಂ ಮನದೊಳೊಸೆದು ಪರಮೋತ್ಸವದಿಂ
ಜಿನಗಂಧೋದಕದಿಂದಂ
ಜನಾಧಿಪಂ ತಾನೆ ಬಂದು ಕೈನೀರೆಱೆದಂ ೨೪೫

ಗದ್ಯ॥ ಅಂತು ಕೈನೀರೆಱೆದು ವಿವಾಹಮಂ ಮಾಡಿ ಗುಣಪಾಲಸೆಟ್ಟಿ ಮೊದಲಾದ ಬಂಧು ಸಮೂಹಕ್ಕಂ ರಾಜನಿಕುರುಂಬಕ್ಕಮುಡಲುಂ ತುಡಲುಂ ಕೊಟ್ಟು ತದನಂತರಂ ಹಯವಾರಣ ಭಂಡಾರಗಳೊಳರ್ಧಮನಳಿಯಂಗೆ ಕೊಟ್ಟು ಕ್ಷೀರೋದಕನ್ಯಾಯದಿಂದೊಡಗೂಡಿ ರಾಜ್ಯಶ್ರೀಯ ನನುಭವಿಸುತ್ತುಂ ಪತ್ತೆಂಟುದಿವಸಮನುಭವಿಸುತ್ತಿರ್ಪನ್ನೆಗಂ ೨೪೬

ನಿಮಗೆ ಸಮಾನವಿಲ್ಲ ಧರಣೀತಳದೊಳ್ ತಡವೇಕೆ ಬೇಗಮೊ
ಪ್ಪುವ ಜಿನಮಾರ್ಗಮಂ ದುರಿತಹಾರಿಯನಕ್ಷಯ ಸೌಖ್ಯದಾಯಿಯಂ
ಪ್ರವರಗುಣಾಬ್ಧಿಯಂ ನೆಱೆ ವಿಚಾರಿಸಿ ಪೊರ್ದುವುದೆಂದು ಪೇಟಲೆಂ
ದವಿತಥ ಮೋಕ್ಷಲಕ್ಷ್ಮಿ ಪದೆದಟ್ಟಿದ ದೂತನೆ ಬರ್ಪಮಾರ್ಗದಿಂ ೨೪೭

ಮೊಳಗುತ್ತಿದ್ದವು. ಜಿನಪೂಜೆ ಶೋಭಾಯಮಾನವಾಗಿ ನಡೆಯಿತು. ಸುತ್ತಮುತ್ತ ಇದ್ದವರೆಲ್ಲ ಉತ್ಸಾಹದಿಂದ ಹೊಗಳುತ್ತಿದ್ದರು ೨೪೪. ಧನಕೀರ್ತಿಕುಮಾರನಿಗೂ ರಾಜ ಪುತ್ರಿಗೂ ಮನಃಪ್ರೀತಿಯಿಂದ ಸ್ವಯಂ ರಾಜನೇ ಮಹೋತ್ಸವದಿಂದ ಜಿನ ಗಂಧೋದಕದಿಂದ ಧಾರೋದಕವನ್ನು ಎರೆದನು ೨೪೫. ಹಾಗೆ ಕೈನೀರೆರೆದು ಮದುವೆ ಯನ್ನು ಮಾಡಿ ಗುಣಪಾಲಸೆಟ್ಟಿ ಮೊದಲಾದ ಬಂಧುಸಮೂಹಕ್ಕೂ ರಾಜಸಮೂಹಕ್ಕೂ ಉಡುಗೊರೆಗಳನ್ನೂ ಆಭರಣಗಳನ್ನೂ ಕೊಟ್ಟು ಆಮೇಲೆ ಆನೆ, ಕುದುರೆ, ಭಂಡಾರಗಳಲ್ಲಿ ಅರ್ಧವನ್ನು ಅಳಿಯನಿಗೆ ಕೊಟ್ಟು ಕ್ಷೀರೋದಕನ್ಯಾಯ ದಂತೆ (ಹಾಲು ನೀರು ಬೆರೆತಂತೆ) ಒಟ್ಟುಗೂಡಿ ರಾಜ್ಯಲಕ್ಷ್ಮಿಯನ್ನು ಅನುಭವಿಸುತ್ತ ಹತ್ತೆಂಟು ದಿನ ಒಟ್ಟಿಗೆ ಇದ್ದಾಗ ೨೪೬. “ನಿಮಗೆ ಸಮಾನರಿಲ್ಲ, ಸಾವಕಾಶವೇಕೆ ? ಬೇಗನೆ ಶ್ರೇಷ್ಠವಾದ ಜಿನಮಾರ್ಗವನ್ನು ಅನುಸರಿಸಿ, ಪಾಪಪರಿಹಾರಕವೂ ಅಕ್ಷಯ ಸೌಖ್ಯವನ್ನು ಕೊಡುವಂಥದೂ ಶ್ರೇಷ್ಠ ಗುಣಗಳ ದೊಡ್ಡ ಸಮುದ್ರವೂ ಆದ ಜಿನಧರ್ಮ ವನ್ನು ವಿಚಾರ ಮಾಡಿ ಹೊಂದತಕ್ಕದ್ದು” ಎಂಬುದಾಗಿ ಮೋಕ್ಷಲಕ್ಷ್ಮಿಯೇ ಪ್ರೀತಿ ಯಿಂದ ಕೊಟ್ಟು ಕಳುಹಿಸಿದ ದೂತನೋ ಎಂಬಂತೆ ಯಶೋಧರರೆಂಬ ಮುನಿಗಳು ಆ ಊರಿಗೆ ಬಂದರು ೨೪೭. ಯಶೋಧರರು ಏಕವಿಹಾರಿಗಳು. ಅವರು ಸಂಚರಿಸುತ್ತ

ಗದ್ಯ॥ ಯಶೋಧರರೆಂಬರೊರ್ವರೇಕವಿಹಾರಿಗಳ್ ವಿಹಾರಿಸುತ್ತುಮುಜ್ಜಯಿನಿಗೆ ವಂದು ಪೊಱವೊೞಲೊಳಿರ್ಪುದುಂ ಋಷಿನಿವೇದಕಂ ಕಂಡು ಬಂದು ವಿಶ್ವಂಧರ ಮಹಾರಾಜಂಗೆ ಬಿನ್ನಪಂಗೆಯ್ವುದುಂ ಋಷಿನಿವೇದಕಂಗಂಗಚಿತ್ತಮಂ ಕೊಟ್ಟಾನಂದ ಭೇರಿಯುಂ ಪೊಯ್ಸಿ ಗುಣಪಾಲಸೆಟ್ಟಿ ಮೊದಲಾದ ಶ್ರಾವಕರುಂ, ಧನಕೀರ್ತಿ ಮೊದಲಾದ ಕುಮಾರಕರುಂ ವಿಶ್ವಾವತಿ ಮೊದಲಾದ ನಂದನೆಯರುಂ ಧನಶ್ರೀಯುಂ ಶ್ರೀಮತಿಯುಂ ಮೊದಲಾದ ಶ್ರಾವಕಿತಿಯರುಂ, ಲಕ್ಷ್ಮೀಮತಿ ಮೊದಲಾದರಸಿಯರುಂ ಬೆರಸು ಅರಸುವ ಬಳ್ಳಿ ಕಾಲೊಳ್ ತೊಡರ್ದುದೆಂಬಂತೆ ಸುವ್ರತಾರೂಢರಾಗಲೆಂದಿರ್ದಮಗೆ ಮಹಾಪುರುಷರ್ ಭಾಗ್ಯದಿಂದಿದಿರ್ವಂದರೆಂದು ವಿಶ್ವಂಧರ ಮಹಾರಾಜಂ ೨೪೮

ರಾಗದಿನತಿಶಯದಿಂ ತಳು
ವಾಗದೆ ಪೊಱಮಟ್ಟು ಬಂದು ಪಿರಿದುತ್ಸವದಿಂ
ಯೋಗೀಂದ್ರವಂದ್ಯಪಾದನ
ನಾಗಳ್ ಬಲವಂದು ಮೂಱುಸೂೞವನೀಶಂ ೨೪೯

ಗದ್ಯ॥ ಪಲವರ್ಚನೆಯಿಂ ತ್ರಿಕರಣಶುದ್ಧಿಯಿಂ ಬಂದಿಸಿ ಪೊಡೆವಟ್ಟು ಕುಳ್ಳಿರೆ ಗುಣಪಾಲಸೆಟ್ಟಿ ಸುಕವಿನಿಕರಪಿಕಮಾಕಂದಂಗಭಿಮುಖನಾಗಿ ಕರಕಮಲಂಗಳಂ ಮುಗಿದು ವಿನಯದಿಂದಾಪ್ತಾಗಮಪದಾರ್ಥಂಗಳಂ ಚಿತ್ತದ ಶಂಕೆ ಪೋಪಿನಂ ಕೇಳ್ದು, ಅರಸನುಂ ಧನಕೀರ್ತಿಯುಂ ಮೊದ

ಉಜ್ಜಯನಿಗೆ ಬಂದು ಪಟ್ಟಣದ ಹೊರಗೆ ನಿಲ್ಲಲು ಋಷಿನಿವೇದಕನು ಕಂಡು ವಿಶ್ವಂಧರ ಮಹಾರಾಜನಲ್ಲಿಗೆ ಬಂದು ಬಿನ್ನಹಮಾಡಿದನು, ದೊರೆ ಅವನಿಗೆ ಬಹುಮಾನ ಕೊಟ್ಟು ಆನಂದಭೇರಿಯನ್ನು ಹೊಡೆಯಿಸಿ ಗುಣಪಾಲಸೆಟ್ಟಿ ಮೊದಲಾದ ಶ್ರಾವಕರೂ ಧನಕೀರ್ತಿ ಮೊದಲಾದ ಕುಮಾರಕರೂ ವಿಶ್ವಾವತಿಯೇ ಮೊದಲಾದ ಹೆಣ್ಣು ಮಕ್ಕಳೂ ಧನಶ್ರೀ, ಶ್ರೀಮತಿ, ಮೊದಲಾದ ಶ್ರಾವಕಿಯರೂ ಲಕ್ಷ್ಮೀಮತಿ ಮೊದಲಾದ ರಾಣಿಯರೂ ಸೇರಿ ಹುಡುಕುವ ಬಳ್ಳಿ ಕಾಲಿಗೆ ತೊಡರಿಕೊಂಡಿತೆಂಬಹಾಗೆ ಸುವ್ರತಾರೂಢರಾಗಬೇಕೆಂದಿದ್ದ ನಮಗೆ ಮಹಾಪುರುಷರು ಭಾಗ್ಯದಿಂದ ಇದಿರುಬಂದರು. ಎಂದು ವಿಶ್ವಂಧರ ಮಹಾರಾಜನು ೨೪೮. ಸಂತೋಷಾತಿಶಯದಿಂದ ತಡವಾಗದಂತೆ ಹೊರಟು ಬಂದು ಬಹಳ ಉತ್ಸವದಿಂದ ಯೋಗೀಂದ್ರರಿಗೂ ವಂದ್ಯನಾದ ಮುನಿಯನ್ನು ಮೂರು ಸಲ ಪ್ರದಕ್ಷಣೆ ಮಾಡಿದನು ೨೪೯. ಹಲವು ಅರ್ಚನೆಗಳನ್ನು ಮಾಡಿ ತ್ರಿಕರಣ ಶುದ್ಧಿಯಿಂದ ವಂದನೆ ಸಲ್ಲಿಸಿ ನಮಸ್ಕಾರ ಮಾಡಿ ಕುಳಿತಿರಲು ಗುಣಪಾಲಸೆಟ್ಟಿಯು ಆ ಸುಕವಿನಿಕರ ಪಿಕಮಾಕಂದನಿಗೆ ಅಭಿಮುಖವಾಗಿ ಕೈಜೋಡಿಸಿ ವಿನಯದಿಂದ ಆಪ್ತಾಗಮ ಪದಾರ್ಥಗಳನ್ನು ಮುನಿಗಳಿಂದ ತನ್ನ ಚಿತ್ತದಲ್ಲಿನ ಸಂದೇಹ ಹೋಗುವುದಕ್ಕಾಗಿ ಕೇಳಿ ರಾಜನೂ ಧನಕೀರ್ತಿಯೂ ಮೊದಲಾದ ಅನೇಕರು ಕೇಳಿ, ನಂಬಿ, ಪಂಚ ಅಣುವ್ರತ

ಲಾದನೇಕರುಂ ಕೇಳ್ದು ನಂಬಿ ಪಂಚಾಣುವ್ರತ ಮಹಾವ್ರತ ರತ್ನಂಗಳಂ ಧರಿಯಿಸಲೆಂದಿರ್ಪುದುಂ ಗುಣಪಾಲಸೆಟ್ಟಿ ಧರ್ಮಶ್ರವಣಾನಂತರಂ ಪರಮಾವಧಿಲೋಚನರಪ್ಪ ತಪೋನಿಧಿಗಳಂ ಧನಕೀರ್ತಿಗೆ ಶ್ರೀದತ್ತಸೆಟ್ಟಿ ಮಾಡಿದೈದುಂ ಕಂಟಕಂಗಳುಂ ತಪ್ಪಿ ರಾಜ್ಯಮಾದುದಾವಭವದ ಪುಣ್ಯಮೆಂದು ಬೆಸಗೊಳ್ವುದುಂ ೨೫೦

ಪರಮಾವಧಿಲೋಚನದಿಂ
ದುರಿತೇಂಧನದಹನನಱಿದು ಪೇಳ್ದಂ ಸಭೆ ಝುಂ
ಕರಿಸಿ ಧನಕೀರ್ತಿ ಧರಣೀ
ಶ್ವರವಂದಿತ ಪಾದಯುಗನ ಮುನ್ನಿನ ಭವಮಂ ೨೫೧

ಸುರರಾಜನ ಪುರವರದೊಳ್
ದೊರೆಯೆನಿಸಿ ನೆಗೞ್ತೆವೆತ್ತ ಪುರಮುಜ್ಜಯಿನೀ
ಪುರಮದರ ಕೆಲದೊಳಿರ್ಪುದು
ಸಿರಿಷ್ಟಮೆಂಬೂರ್ ಧರಿತ್ರಿಯೊಳ್ ಕಡುರಮ್ಯಂ ೨೫೨

ಗದ್ಯ॥ ಆ ಶಿರಿಷ್ಟಗ್ರಾಮದೊಳ್ ಮೃಗಸೇನನೆಂಬ ಮೀಂಬಲಿಗನಿರ್ಪನಾತನ ಪೆಂಡತಿ ಘಂಟೆಯೆಂಬಳಾ ಯಿರ್ವರುಂ ಪಲಕಾಲಂ ಪಾಪಾನುರಾಗದಿಂದಿರ್ದೊಂದು ದಿವಸಂ ಬಲೆಯುಂ ಕೊಂಡು ಸಿಂಪಾನದಿಗೆ ಪೋಗುತ್ತುಮೆಡೆಯೊಳ್ ಯಶೋಧರರೆಂಬ ಋಷಿಯರ ಕೆಲದೊಳ್ ಧರ್ಮಮಂ

ಮಹಾವ್ರತ ರತ್ನಗಳನ್ನು ಧರಿಸಬೇಕೆಂದಿದ್ದರು, ಆಗ ಗುಣಪಾಲಸೆಟ್ಟಿಯು ಧರ್ಮಶ್ರವಣವಾದ ಮೇಲೆ ಪರಮಾವಧಿ ಜ್ಞಾನಿಗಳಾದ ತಪೋನಿಧಿಗಳನ್ನು. ಧನಕೀರ್ತಿಗೆ ಶ್ರೀದತ್ತಸೆಟ್ಟಿ ಮಾಡಿದ ಐದು ಆಪತ್ತುಗಳೂ ತಪ್ಪಿ ರಾಜ್ಯಲಭಿಸಿದ್ದು ಯಾವ ಜನ್ಮದ ಪುಣ್ಯಫಲ? ಎಂದು ಕೇಳಿದನು ೨೫೦. ಪರಮಾವಧಿ ಜ್ಞಾನದಿಂದ, ದುರಿತವೆಂಬ ಸೌದೆಯನ್ನು ಸುಟ್ಟವರಾದ ಆ ಮುನಿಗಳು ಈ ಪ್ರಶ್ನೆಯನ್ನು ಕೇಳಿ ಆ ಸಭೆಯವರು ಬೆರಗಾಗುವಂತೆ ಧನಕೀರ್ತಿರಾಜನ ಹಿಂದಿನ ಜನ್ಮಕಥೆಯನ್ನು ತಿಳಿದು ಹೇಳಿದರು ೨೫೧. ಇಂದ್ರನ ರಾಜಧಾನಿಯನ್ನು ಹೋಲುವುದೆಂಬ ಪ್ರಶಸ್ತಿಯನ್ನು ಪಡೆದ ಪಟ್ಟಣ, ಉಜ್ಜಯಿನಿ, ಅದರ ಪಕ್ಕದಲ್ಲಿ ಶಿರಿಷ್ಟವೆಂಬ ಒಂದು ಬಹಳ ರಮ್ಯವಾದ ಊರು ಇದೆ, ಆ ಶಿರಿಷ್ಟಗ್ರಾಮದಲ್ಲಿ ಮೃಗಸೇನನೆಂಬ ಬೆಸ್ತನಿದ್ದ, ಅವನ ಹೆಂಡತಿ ಘಂಟೆ, ಆಯಿಬ್ಬರೂ ಬಹಳ ಕಾಲ ಪಾಪಾಸಕ್ತಿಯಿಂದ ಇದ್ದು ಒಂದು ದಿನ ಬಲೆಯನ್ನು ತೆಗೆದುಕೊಂಡು ಸಿಂಪಾನದಿಗೆ ಹೋಗುತ್ತ ಮಧ್ಯದಲ್ಲಿ ಯಶೋಧರಋಷಿಯರ ಬಳಿ ಧರ್ಮವನ್ನು ಕೇಳುವ ಸಮೂಹ

ಕೇಳ್ವ ನೆರವಿಯಂ ಕಂಡು ಪಾಪದುಪಶಮದಿಂದೇನಾನುಮೊಂದು ಚೋದ್ಯಮಾಗಲೆವೇಟ್ಕು ಮೆಂದು ನೋಡಲರ್ತಿವೆರಸು ಶಾಂತರೂಪದಿಂದೆಯ್ದೆವಂದು ಬಲೆಯನಿಟಿಪಿ ದೂರದೊಳೆ ಕುಳ್ಳಿರ್ದು ತನ್ನೊಳಿಂತೆಂದಂ ೨೫೩

ಹಾರದ ಮುತ್ತಿನೈಸರದ ವಜ್ರದ ಕಂಕಣದೊಪ್ಪುವೆತ್ತ ಕೇ
ಯೂರದ ರತ್ನಕುಂಡಲದ ವಸ್ತ್ರದ ಮುದ್ರಿಕೆಯೊಂದು ಘಿಕ್ಕಲಂ
ಕಾರದ ವಾರಮಪ್ಪ ಪುರುಷರ್ ನೆರೆದದ್ಭುತಮಲ್ತೆ ಕಟ್ಟಲುಂ
ಸೀರೆಯುಮಿಲ್ಲದೀ ಗುರುವನರ್ಚಿಸಿ ಕೈಮುಗಿದಂಜಿ ಸುತ್ತಲುಂ ೨೫೪

ಗದ್ಯ॥ ಇರ್ದಪರೀತಂ ಪ್ರತ್ಯಕ್ಷದೇವನಾಗಲೆವೇಟ್ಕುಮೆಂದು ತಾನುಂ ಕಯ್ಮುಗಿದು ಧರ್ಮಮಂ ಕೇಳುತ್ತುಮಿರೆ ೨೫೫

ವರಮುನಿ ಮಧುರಸ್ವರದಿಂ
ಪರಮಾಗಮಮಂ ಸಮಸ್ತ ಭವ್ಯಜನಕ್ಕಾ
ದರದಿಂ ಪೇಟುತ್ತಿರೆ ನಿ
ಷ್ಕರುಣದ ನೆರೆ ಜಾಲಗಾರನುಂ ಕೇಳುತ್ತುಂ ೨೫೬

ಗದ್ಯ॥ ಇರ್ದನನ್ನೆಗಂ ಸಕಲಶ್ರಾವಕರುಂ ತಂತಮ್ಮ ಬಯಸುವ ವ್ರತಂಗಳಂ ಕಯ್ಕೊಂಡು ದರ್ಶನದೊಳಂ ದೃಢರಾಗಿ ಮುನಿವರಂಗೆ ಪೊಡೆಮಟ್ಟು ಪೋಪುದುಂ ಮೃಗಸೇನನುಮೆರ್ದು ನಿಂದಿರ್ದು ಕಯ್ಯಂ ಮುಗಿದು ’ ೨೫೭

ವನ್ನು ಕಂಡು, ಪಾಪದ ಉಪಶಾಂತಿಯಾಗುವ ಕಾಲದಲ್ಲಿ ಏನಾದರೂ ಒಂದು ಆಶ್ಚರ್ಯ ನಡೆಯಲೇಬೇಕಾದ್ದರಿಂದ, ತಾನೂ ಅದನ್ನು ನೋಡಲು ಆಸೆಪಟ್ಟು ಶಾಂತ ರೂಪದಿಂದ ಸಮೀಪಿಸಿ ಬಲೆಯನ್ನು ಇಳಿಸಿ ದೂರದಲ್ಲಿಯೇ ಕುಳಿತಿದ್ದು ಹೀಗೆ ಯೋಚಿಸಿದನು, ೨೫೩. “ಹಾರ, ಮುತ್ತಿನ ಐದೆಳೆಯ ಸರ, ವಜ್ರದ ಕಂಕಣ, ಹೊಳೆಯುವ ಏಕಾವಳಿ, ರತ್ನಕುಂಡಲಗಳು, ವಸ್ತ್ರಗಳು, ಉಂಗುರಗಳು, ಇನ್ನೂ ಹಲವು ಅಲಂಕಾರ ಹೊಂದಿದ ಪುರುಷರು ಗುಂಪು ಸೇರಿ ಕಟ್ಟಲು ಬಟ್ಟೆಯೇ ಇಲ್ಲದ ಈ ಗುರುವನ್ನು ಪೂಜೆಮಾಡಿ, ಕೈಮುಗಿದು, ಅಂಜಿಕೊಂಡು ಸುತ್ತಲೂ ಇದ್ದು ಧರ್ಮವನ್ನು ಕೇಳುತ್ತಿದ್ದಾರೆ ! ಈ ಮುನಿ ಪ್ರತ್ಯಕ್ಷದೇವನೇ ಆಗಿರಬೇಕು” ಎಂದು ತಾನೂ ಕೈಮುಗಿದು ಧರ್ಮವನ್ನು ಕೇಳಿದನು ೨೫೪-೫. ಆ ಮುನಿಶ್ರೇಷ್ಠನು ಪರಮಾಗಮವನ್ನು ಮಧುರಸ್ವರದಲ್ಲಿ ಸಮಸ್ತ ಭವ್ಯ ಜನರಿಗೂ ಪ್ರೀತಿಯಿಂದ ಹೇಳುತ್ತಿರಲು ನಿಷ್ಕರುಣನಾದ ಜಾಲಗಾರನೂ ಕೇಳಿದನು ೨೫೬. ಕೇಳಿ ಎಲ್ಲ ಶ್ರಾವಕರೂ ತಾವು ಬಯಸುವ ವ್ರತಗಳನ್ನು ಕೈಕೊಂಡು ದರ್ಶನದಲ್ಲಿ ದೃಢರಾಗಿ ಮುನಿಶ್ರೇಷ್ಠನಿಗೆ ನಮಸ್ಕಾರ ಮಾಡಿ ಹೋದುದನ್ನು ಗಮನಿಸಿ, ಮೃಗಸೇನನೂ ಎದ್ದು ನಿಂತು ಕೈಮುಗಿದು ೨೫೭,

೭೩೩

ದೇವ ಮಹಾ ಪ್ರಸಾದ ಪರಮೇಶ್ವರ ನಿನ್ನನವಜ್ಞೆಗೆಯ್ದು ಸ
ದ್ಭಾವಮನೊಕ್ಕು ಬತ್ತಲಿಗನೆಂದೆಳಸಿರ್ದನನಂತಕಾಲಮುಂ
ಕೇವಲಮೆನ್ನ ಕರ್ಮವಶದಿಂ ನೆರೆದೀ ಪ್ರಜೆಗೆಲ್ಲಮರ್ತಿಯಿಂ
ಭಾವಿಸಿ ಬೇಡಿದಂತುಟನೆ ನೀನೊಸೆದೀವುದನೆಯ್ದೆ ಕಂಡು ಕೇಳ್ ೨೫೮

ಗದ್ಯ॥ ದೇವನೆಂದಾನೀಗಳ್ ನಂಬಿದೆನೆನಗೊಂದು ವ್ರತಮಂ ದಯೆಗೆಯ್ವುದೆನೆ ಮುನೀಶ್ವರ ರಿಂತೆಂದರ್

೨೫೯

ಕಳ್ಳಂ ಮಾಣೆನೆ ನಿಮ್ಮಡಿ
ಕಳ್ಳಿಲ್ಲದೊಡಿಂದೆ ಸಾವೆನೆನೆ ಮುನಿ ಮತ್ತಂ
ಪೊಲ್ಲದು ಕೊಲೆಯುಂ ಮಾಣೆನೆ
ಕೊಲ್ಲದೊಡಾನೆಂತು ಪೊರೆವೆನೆನ್ನಂಗನೆಯಂ ೨೬೦

ಪುಸಿಯಂ ಮಾಣೆನೆ ನಿಮ್ಮಡಿ
ಪುಸಿಯಂ ಮಾಣ್ದಂದು ಬಾಟಬಾರದು ಧರೆಯೊಳ್
ಪುಸಿ ಮುಖ್ಯಮೆಂಬುದುಂ ಭಾ
ವಿಸಿ ಮುನಿಪಂ ಕಳವನುಱಿವುದೆಂಬುದುಮಾಗಳ್ ೨೬೧

ಕಳವೆಂಬುದು ಮುನಿಪತಿ ಮ
ತ್ಕುಲಕ್ಕೆ ಬಿಡಬಾರದದನೆ ಬಿಟ್ಟೊಡೆ ಬಾಟಿಪ್ಪಂ
ದಳವಾವುದೊ ಪೇಟಿಂ ಭೂ
ತಳದೊಳ್ ಮಿಾಂಗುಲಿಗನಪ್ಪವಂಗದು ಮುಖ್ಯಂ ೨೬೨

"ದೇವ, ಮಹಾಪ್ರಸನ್ನ ಪರಮೇಶ್ವರ! ನಿನ್ನನ್ನು ತಿರಸ್ಕಾರಮಾಡಿ ಸದ್ಭಾವವನ್ನು ಬಿಟ್ಟು ನನ್ನ ಪಾಪಫಲದಿಂದ ಬತ್ತಲೆಯುವನೆಂದು ಭಾವಿಸಿದ್ದೆ. ನೀನು ಈ ಪ್ರಜೆಗಳಿಗೆಲ್ಲ ಪ್ರೀತಿಯಿಂದ ಅವರು ಯೋಚಿಸಿ ಬೇಡಿಕೊಂಡದ್ದನ್ನು ಕೊಟ್ಟುದನ್ನುಕಂಡೆ ೨೫೮. ಈಗ ನಾನು ನಿಮ್ಮನ್ನು ದೇವರೆಂದೇ ನಂಬಿದ್ದೇನೆ. ನನಗೆ ಒಂದು ವ್ರತವನ್ನು ಕರುಣಿಸಬೇಕು. 'ಎನ್ನಲು ಮುನಿಶ್ರೇಷ್ಠರು ಹೀಗೆಂದರು: ೨೫೯. "ಹೆಂಡವನ್ನು ಬಿಡು". ಅದಕ್ಕೆ ಅವನು "ನಿಮ್ಮ ಪಾದ, ಹೆಂಡವಿಲ್ಲದಿದ್ದರೆ ಈ ಹೊತ್ತೇ ಸಾಯುತ್ತೇನೆ" ಎಂದನು. ಮುನಿಗಳು ಮತ್ತೆ 'ಕೆಟ್ಟದಾದ ಕೊಲೆಯನ್ನು ಬಿಡು' ಎನ್ನಲು "ಕೊಲ್ಲದಿದ್ದರೆ ನಾನು ನನ್ನ ಹೆಂಡತಿಯನ್ನು ಹೇಗೆ ಸಾಕಲಿ?" ಎಂದನು ೨೬೦. "ಸುಳ್ಳನ್ನು ಬಿಡು" ಎನ್ನಲು, "ಸುಳ್ಳನ್ನು ಬಿಟ್ಟರೆ ಲೋಕದಲ್ಲಿ ಜೀವಿಸಲಾಗದು, ಸುಳ್ಳು ಮುಖ್ಯ" ಎಂದನು. ಆಗ ಮುನಿಯು ಯೋಚಿಸಿ "ಕಳ್ಳತನವನ್ನು ಬಿಡು" ಎಂದನು. ೨೬೧. ಆಗ ಆ ಬೆಸ್ತನು "ಕಳವು ನನ್ನ ಕುಲಕ್ಕೆ ಬಿಡಲು ಬರುವಂಥದಲ್ಲ. ಅದನ್ನು ಬಿಟ್ಟರೆ ಬಾಳುವ ದಾರಿ ಯಾವುದೋ ಹೇಳಿ. ಭೂಮಿಯ ಮೇಲೆ ಮಿಾನುಗಾರನಾದವನಿಗೆ ಕಳವು ಮುಖ್ಯ" ಎಂದನು ೨೬೨.

ಗದ್ಯ॥ ಎಂಬುದುಂ ಪಂಚಾಣುವ್ರತವೊಂದುಂ ಕೈಕೊಳ್ಳದೆನೆ ಮತ್ತೆ ನೀ ಬಲೆಯಂ ಬೀಸಿದಲ್ಲಿ ಮೊದಲ್ ಸಿಕ್ಕಿದೊಂದು ಮೀನಂ ಬಿಡುವುದೆನೆ, ಅಂತೆಗೆಯ್ವೆನೆಂದು ಬಲೆಯಂ ಕೊಂಡು ಸಿಂಪಾನದಿಯ ಪೆರ್ಮಡುವಿಂಗೆ ಪೋಗಿ ಜಾಲಮಂ ಬೀಸುವುದುಂ ಪಿರಿದಪ್ಪಮೀನ್ ಬಂದೊಡೆ ಗುರುವಚನಮನುಲ್ಲಂಘಿಸಲಾಗದೆಂದು ಕುಱುಪಿಂಗೆ ನೇಣಂ ಕಟ್ಟಿ ಮಗುೞೆ ಮಡುವಿನೊಳ್ ಬಿಟ್ಟು ಸಿಂಪಾನದಿಯ ತಡಿವಿಡಿದರೆಗಾವುದಂತರಮಂ ಪೋಗಿ ಬಲೆಯಂ ಬಿಡುವುದುಂ ಮುನ್ನಂ ಬಿಟ್ಟ ಮೀನೆ ಸಿಕ್ಕೆ ಕುಱುಪಂ ಕಂಡಱಿದು ೨೬೩

ಯತಿಪತಿವಂದ್ಯಂ ಕೊಟ್ಟಾ
ವ್ರತಮಂ ನೆನೆದಾಗಳಂತೆ ಬಿಟ್ಟಾ ಮೀನಂ
ದ್ರುತಿವೆರಸು ತೊಱೆಯ ತಡಿವಿಡಿ
ದತಿಶಯದಿಂ ಪೋಗಿ ನೂಱು ಮಾರಂತರಮಂ ೨೬೪

ಬಲೆಯಂ ಬೀಸುವುದುಂ ಸಂ
ಚಲಮೆನಿಸದೆ ಮತ್ತಮಾ ಮಹಾ ಮತ್ಸ್ಯಮೆ ನಿ
ಶ್ಚಲಮಾಗೆ ಬಂದೊಡಾ ಮೀಂ
ಗುಲಿಗಂ ಬೆಱಗಾಗಿ ನೆನೆದು ತನ್ನ ವ್ರತಮಂ ೨೬೫

"ಹೀಗೆ ಐದು ಅಣು ವ್ರತಗಳಲ್ಲಿ ಒಂದನ್ನೂ ಕೈಕೊಳ್ಳಲಾಗದೇದರೆ, ನೀನು ಬಲೆಯನ್ನು ಬೀಸಿದಾಗ ಮೊದಲು ಸಿಕ್ಕಿದ ಒಂದು ಮೀನನ್ನು ಬಿಟ್ಟುಬಿಡು" ಎಂದು ಮುನಿಗಳು ಹೇಳಲು ಬೆಸ್ತನು, "ಹಾಗೆ ಮಾಡುತ್ತೇನೆ" ಎಂದು ಹೇಳಿ ಬಲೆಯನ್ನು ತೆಗೆದುಕೊಂಡು ಹೋಗಿ ಸಿಂಪಾನದಿಯ ದೊಡ್ಡಮಡುವಿಗೆ ಹೋಗಿ ಬಲೆಯನ್ನು ಬೀಸುತ್ತಲೇ ದೊಡ್ಡದಾದ ಮೀನು ಬರಲು ಗುರುವಾಕ್ಯ ಮೀರತಕ್ಕದ್ದಲ್ಲವೆಂದು, ಗುರುತಿಗೆ ಒಂದು ದಾರವನ್ನು ಕಟ್ಟಿ ಅದನ್ನು ಪುನಃ ಮಡುವಿನಲ್ಲಿ ಬಿಟ್ಟು ಸಿಂಪಾನದಿಯ ದಡವನ್ನು ಹಿಡಿದು ಅರ್ಧಗಾವುದ ದೂರ ಹೋಗಿ ಬಲೆಯನ್ನು ಬಿಡುತ್ತಲೇ ಮತ್ತೆ ಮೊದಲು ಬಿಟ್ಟಮೀನೇ ಸಿಕ್ಕಿತು. ಗುರುತು ಹಿಡಿದು ತಿಳಿದುಕೊಂಡು ೨೬೩. ಯತಿಶ್ರೇಷ್ಠನು ಕೊಟ್ಟ ಆ ವ್ರತವನ್ನು ನೆನಸಿಕೊಂಡು ಆಗ ಆ ಮೀನನ್ನು ಹಾಗೆಯೇ ಬಿಟ್ಟು ವೇಗದಿಂದ ನದಿಯ ತೀರದಲ್ಲಿಯೇ ನೂರು ಮಾರು ದೂರಹೋಗಿ ೨೬೪. ಬಲೆಯನ್ನು ಬೀಸಿದರೆ ಆ ದೊಡ್ಡ ಮೀನೇ ಬಂದಿತು ! ಆ ಬೆಸ್ತನು ಬೆರಗಾಗಿ ತನ್ನ ವ್ರತವನ್ನು ಸ್ಮರಿಸಿದನು ೨೬೫. ಪುನಃ

ಗದ್ಯ॥ ಮಗುೞ್ ತೊಱೆಯೊಳ್ ಬಿಟ್ಟು ಮತ್ತಮರೆಗಾವುದಂತರಂ ತೊಱೆಯ ತಡಿ ವಿಡಿದು ಪೋಗಿ ಬಲೆಯಂ ಬೀಸುವುದುಂ, ಮುನ್ನಿನ ಮೀನೆ ಬರ್ಪುದುಂ ಮುನಿ ಕೊಟ್ಟ ವ್ರತಮಂ ೨೬೬

ಅವಧರಿಸಿ ಮಗುೞ್ ತೊಱೆಯೊಳ್
ವಿವೇಕದಿಂ ಬಿಟ್ಟು ತೊಱೆಯ ತಡಿವಿಡಿದು ಮಹೋ
ತ್ಸವದಿಂ ಮೃಗಸೇನಂ ಮಾ
ನವರತ್ನಂ ನೂಱು ಮಾರಿನಂತರದೆಡೆಯೊಳ್ ೨೬೭

ಗದ್ಯ॥ ಪೋಗಿ ಜಾಲಮಂ ಬೀಸುವುದುಂ ಮುನ್ನಿನ ಮಹಾ ಮತ್ಸ್ಯಮೆ ಬಲೆಯೊಳ್ ಬರೆ ವಿಸ್ಮಯಂಬಟ್ಟು ನಿಂದಿರ್ಪುದುಂ ೨೬೮

ಕೊಲೆಯೊಳ್ ಮತಿಯಂ ಮಾಣದೆ
ನಿಲಿಸುವರೀ ಮಾರ್ಗದಿಂದೆ ನರಕಕ್ಕಿೞಿವರ್
ಚಲದಿಂದಮೆಂದು ತೋರ್ಪವೊ
ಲಲಂಘ್ಯಗುಣನರ್ಕನಪರವಾರಿಧಿಗಿೞಿದಂ ೨೬೯

ಗದ್ಯ॥ ಅಂತು ನೇಸಱ್ ಪಡುವುದುಂ ಬಱಿದೆ ಪೋಗಲಾಗದೆಂದು ಪುಳ್ಳಿಗಳಂ ಕೊಂಡು ಮನೆಗೆ ವರ್ಪುದುಂ ತಳ್ವಿದನೆಂದು ಕನಲುತ್ತುಮಿರ್ದ ಘಂಟಿ ಮೀನಿಲ್ಲದ ಬಱಿದೆ ಪುಳ್ಳಿಯುಂ

ಆ ಮೀನನ್ನು ತೊಱೆಯೊಳಕ್ಕೇ ಬಿಟ್ಟು ಮತ್ತೆ ಅರ್ಧಗಾವುದ ದೂರ ಹೋಗಿ ಬಲೆಯನ್ನು ಬೀಸಿದನು. ಪುನಃ ಆ ಹಳೆಯ ಮೀನೇ ಬಂತು. ಮತ್ತೆ ಮುನಿಯು ಕೊಟ್ಟ ವ್ರತವನ್ನು ಸ್ಮರಿಸಿಕೊಂಡನು ೨೬೬. ವ್ರತವನ್ನು ಗಮನಿಸಿ ಆ ಮೀನನ್ನು ಪುನಃ ತೊರೆಗೇ ಬಿಟ್ಟು ನದಿಯ ದಡವನ್ನೇ ಅನುಸರಿಸಿಕೊಂಡು ಮಹಾ ಉತ್ಸಾಹದಿಂದ ಮೃಗಸೇನನು ನೂರು ಮಾರಿನಷ್ಟು ದೂರದಲ್ಲಿ ೨೬೭. ಹೋಗಿ ಬಲೆಬೀಸಲು ಮೊದಲಿನ ಆ ಮಹಾಮತ್ಸ್ಯವೇ ಬರಲು ಆಶ್ಚರ್ಯಪಟ್ಟು ನಿಂತನು ೨೬೮. ಆ ಸಮಯಕ್ಕೆ ಸರಿಯಾಗಿ ಸಂಜೆಯಾಯಿತು. "ಕೊಲೆಯಲ್ಲಿ ಬುದ್ಧಿಯನ್ನು ಬಿಡದೆ ಛಲದಿಂದ ನಿಲ್ಲಿಸುವವರು ಈ ದಾರಿಯಿಂದ ನರಕಕ್ಕೆ ಇಳಿಯುತ್ತಾರೆ" ಎಂದು ತೋರಿಸುತ್ತಿರುವಂತೆ ಅಲಂಘ್ಯ ಗುಣಶಾಲಿಯಾದ ಸೂರ್ಯ ಅಪರ ಸಮುದ್ರಕ್ಕೆ ಇಳಿದನು! (ಸೂರ್ಯಮುಳುಗಿದ) ೨೬೯. ಹಾಗೆ ಸೂರ್ಯನು ಮುಳುಗುತ್ತಲೇ ಬರಿಗೈಯಲ್ಲಿ ಮನೆಗೆ ಹೋಗಬಾರದೆಂದು ಪುಳ್ಳಿಗಳನ್ನು ತೆಗೆದುಕೊಂಡು ಮನೆಗೆ ಹೋದನು. ಆ ವೇಳೆಗಾಗಲೇ ತಡಮಾಡಿದನೆಂದು ಸಿಟ್ಟುಗೊಂಡಿದ್ದ ಘಂಟೆ ಮೀನಿಲ್ಲದೆ ಬರಿಯ ಸೌದೆ ತಂದ ಮೃಗಸೇನನನ್ನು ಕಂಡು

ಕೊಂಡು ಬಂದ ಮೃಗಸೇನನಂ ಕಂಡು ಕಿನಿಸಿ ಪೊಱಗಣ್ಗೆ ನೂಂಕುವುದುಂ ಭಯಸ್ಥನಾಗಿ ಕಾಲ ಮೇಲೆ ಬಿರ್ದು ತಳ್ವಾದ ಕಾರಣಮೆಲ್ಲಮಂ ಪೇೞೆ ಕಣ್ಗಳಿಂ ಕಿಡಿಯುಂ ಕೆಂಡಮುಂ ಪಾಯೆ ೨೭೦

ಕೆಲನಂ ಪೊಯ್ಯೆ ತಗುಳ್ದು ಬಿರ್ದ ಮೊಲೆಗಳ್ ಪರ್ದಾಡುವಂತಿರ್ದು ಕೆಂ
ದಲೆ ಕೋಪೋದ್ಭವದುಗ್ರದಿಂ ನಡುಗೆ ಸೀಳ್ಪೊಂದಾಗಿ ನೀರ್ಪಾಯ್ವಿನಂ
ಕೊೞೆಗಣ್ಮಿಳ್ಕಿಸೆ ದೊಡ್ಡ ಪೊಟ್ಟೆ ಕುಣಿಯಲ್ ಪೊಯ್ದಳ್ ಮಹಾ ಕೋಪಿ ಕಾ
ವಲಿಯಂತಪ್ಪ ಕರಾಗ್ರದಿಂದೊದೆಯುತುಂ ಕರ್ಗಿರ್ದ ಪಾದಂಗಳಿಂ ೨೭೧

ಗದ್ಯ॥ ಅಂತು ನುಗ್ಗಾಗೆ ಬಡಿದು ನಿನಗೆ ವ್ರತಮನಿತ್ತ ಋಷಿಯರ ಮನೆಗೆ ಪೋಗೆಂದು ಪೊಱ ಮಡಿಸಿ ಪಡಿಯಂ ಕೀಱುವುದುಂ ಮೃಗಸೇನಂ ದುಃಖಿತನಾಗಿ ೨೭೨

ಒಂದು ದಿನಂ ವ್ಯವಸಾಯಂ
ಕುಂದಿದೊಡೀ ಕಾಂತೆ ಮುಳಿದು ಬಯ್ದಪಳದಱಿಂ
ಸೌಂದರಿಯುಂ ಸುತರುಂ ಬೇ
ಡೆಂದಱಿಪುವ ದಿವ್ಯ ಮುನಿಯ ವಚನಮನೀಗಳ್ ೨೭೩

ಅನ್ನೆವರ ಕಂಡು ಪಾಪದಿ
ನುನ್ನತ ಸದ್ಧರ್ಮ ರತ್ನಮಂ ಬಿಟ್ಟೆಳಸಿಂ
ದೆನ್ನ ಸತಿಯೆಂದು ನಂಬಿದೆ
ನಿನ್ನಱಿದೆಂ ಸತಿಯರಾಗದೆಂಬುದನೀಗಳ್ ೨೭೪

ಸಿಟ್ಟಾಗಿ ಹೊರಕ್ಕೆ ನೂಕಿದಳು. ಅವನು ಭಯಪಟ್ಟು ಅವಳ ಕಾಲಮೇಲೆ ಬಿದ್ದು ತಡವಾದ ಕಾರಣವನ್ನೆಲ್ಲ ಹೇಳಲು ಕಣ್ಣುಗಳಿಂದ ಕಿಡಿಯೂ ಕೆಂಡವೂ ಸಿಡಿದುವು ೨೭೦. ಪಕ್ಕಿಗೆ ಹೊಡೆಯಲು ತಾಕಿಬಿದ್ದ ಅವಳ ಮೊಲೆಗಳು ಹದ್ದು ಆಡುವಂತೆ ಇದ್ದು ಕೆಂಪಾದ ತಲೆ ಹೆಚ್ಚಾದ ಕೋಪದಿಂದ ನಡುಗಲು ಅವಳ ಕೊಳೆಗಣ್ಣುಗಳು ಸೀಳಿಒಂದಾಗಿ ನೀರು ಹಾಯುವಂತೆ ಆಲುಗುತ್ತಿರಲು ದೊಡ್ಡ ಹೊಟ್ಟೆ ಕುಣಿಯುತ್ತಿತ್ತು. ಮಹಾ ಕೋಪಿಷ್ಠಳಾದ ಘಂಟೆಯು ಕಾವಲಿಯಂಥ ಕೈಗಳಿಂದ ಹೊಡೆದು ಕಪ್ಪಾದ ಕಾಲುಗಳಿಂದ ಒದೆಯುತ್ತಿದ್ದಳು. ೨೭೧. ಹಾಗೆ ನುಗ್ಗುನುಚ್ಚಾಗುವಂತೆ ಹೊಡೆದು "ನಿನಗೆ ವ್ರತವನ್ನು ಕೊಟ್ಟ ಋಷಿಗಳ ಮನೆಗೆ ಹೋಗು" ಎಂದು ಹೊರಡಿಸಿ ಕದವನ್ನು ಮುಚ್ಚಿಕೊಂಡಳು. ಮೃಗಸೇನ ದುಃಖಪಟ್ಟು "ಒಂದು ದಿನ ವ್ಯವಸಾಯ ಕಡಿಮೆಯಾದರೆ ಈ ಹೆಣ್ಣು ಸಿಟ್ಟುಗೊಂಡು ಬೈಯುತ್ತಾಳೆ. ಆದ್ದರಿಂದ ಹೆಂಡತಿ ಮಕ್ಕಳು ಬೇಡವೆಂದು ಹೇಳುವ ಮುನಿವಾಕ್ಯವನ್ನೂ ಇದುವರೆಗೆ ಕಂಡರೂ ಪಾಪವಶದಿಂದ ಉನ್ನತ ಸದ್ಧರ್ಮ ರತ್ನವನ್ನು ಬಿಟ್ಟು ಆಸೆಯಿಂದ ನನ್ನ ಹೆಂಡತಿಯೆಂದು ನಂಬಿದೆ. ಹೆಂಗಸರು ಆಗದೆಂಬುದನ್ನು ಈಗ ತಿಳಿದೆ. ೨೭೪. ಸಿಟ್ಟುಗೊಂಡು ನನ್ನ ಮೇಲೆ ಕರುಣೆಯಿಲ್ಲವೆ ಹೆಚ್ಚಾಗಿ

೭೩೭

ಮುಳಿದೆನ್ನಂ ಕರುಣಿಸದ
ಗ್ಗಳವಾಗಿರೆ ಬಡಿದ ಸತಿಯುಮಂ ಮನೆಯುಮನು
ಜ್ವಲವಾಗಿ ತೋಱಿದು ನೆಟ್ಟನೆ
ಮಲರಹಿತನನೆಯ್ದಿ ಕೇಳ ಬೆಳಗಾದಾಗಳ್ ೨೭೫

ಗದ್ಯ॥ ಶ್ರಾವಕ ಕ್ರಮಂ ಕೊಳ್ವೆನೆಂದು ಚಿತ್ತದೊಳ್ ನೆನೆಯುತ್ತುಂ ನಿದ್ರೆಗೆಯ್ವುದುಂ ನಡು ವಿರුಳಪ್ಪಾಗಳ್ ಕಪ್ಪೆಯನಟ್ಟುತ್ತುಂ ಬಂದ ಪಾವು ಕಪ್ಪೆ ತಪ್ಪಿ ಮೃಗಸೇನನಂಗುಟಮಂ ಪಿಡಿವುದುಂ ವಿಷಮೇಱಿ ಕಂಠಗತ ಪ್ರಾಣನಾಗಿ ಸುವ್ರತದ ಫಲದಿಂ ನಿನಗೆ ಧನಕೀರ್ತಿಯಾಗಿ ಪುಟ್ಟಿದಂ ೨೭೬

ಭರವಸದಿಂದಾ ಮಿಾನಂ
ಗುರುವಚನಮನೊಳ್ಪಿತಾಗಿ ಮನದೊಳ್ ನೆನೆದಾ
ದರದಿಂದಮಯ್ದು ಸೂಟ್ವರ
ಭರದಿಂದಂ ಬಿಟ್ಟನಪ್ಪ ಕಾರಣದಿಂದಂ ೨೭೭

ಗದ್ಯ॥ ಶ್ರೀದತ್ತಂ ಮಾಡಿದೈದುಂ ಕೊಲೆಯುಂ ಪರಿಹರಿಸಿ ವಿಶ್ವಂಧರ ಮಹಾರಾಜನ ರಾಜ್ಯದ ರ್ಧಕ್ಕೆ ಮುಖ್ಯನಾದನಿಂತು ೨೭೮

ಮೃಗಸೇನನ ಪೆಣನಂ ತೊ
ಟ್ಟಗೆ ಸವಳದೆ ಘಂಟೆ ಕಂಡು ದುಃಖಿಸಿ ತಾನುಂ
ಮೃಗಸೇನನ ಸುವ್ರತಮಂ
ಮೃಗಾಕ್ಷಿ ಕೇಳ್ದಾನುಮೆಯ್ದೆ ತಾಳ್ದಿದೆನೆನುತುಂ ೨೭೯

ಬಡಿದ ಹೆಂಡತಿಯನ್ನೂ ಮನೆಯನ್ನೂ ಪ್ರಕಟವಾಗಿ ತೋರೆದು ಕೂಡಲೆ ಪಾಪರಹಿತನನ್ನು ಸೇರಿ ಬೆಳಗಾಗುತ್ತಲೂ ಶ್ರಾವಕದೀಕ್ಷೆಯನ್ನು ಸ್ವೀಕರಿಸುತ್ತೇನೆ ೨೭೫. ಎಂದು ಮನಸ್ಸಿನಲ್ಲಿ ಯೋಚಿಸುತ್ತ ನಿದ್ದೆಮಾಡಿದನು. ಮಧ್ಯರಾತ್ರಿಯಲ್ಲಿ ಕಪ್ಪೆಯನ್ನು ಅಟ್ಟಿಸಿಕೊಂಡು ಬಂದ ಹಾವು ಕಪ್ಪೆ ತಪ್ಪಲು ಮೃಗಸೇನನ ಉಂಗುಷ್ಠವನ್ನು ಕಚ್ಚಲು ವಿಷವೇರಿ ಪ್ರಾಣ ಕಂಠಗತವಾಯಿತು. ಆವನು ಸುವ್ರತದ ಫಲವಾಗಿ ನಿನಗೆ ಧನಕೀರ್ತಿಯಾಗಿ ಹುಟ್ಟಿದನು. ೨೭೬. ನಂಬಿಕೆಯಿಂದ ಗುರುವಚನವನ್ನು ಚೆನ್ನಾಗಿ ಸ್ಮರಿಸಿಕೊಂಡು ಆ ಮೀನನ್ನು ಮನಃಪೂರ್ವಕವಾಗಿ ಐದು ಸಲ ಬಿಟ್ಟನಾದ್ದರಿಂದ. ೨೭೭. ಶ್ರೀದತ್ತನು ಮಾಡಿದ ಐದು ಕೊಲೆಯ ಪ್ರಯತ್ನಗಳನ್ನೂ ತಪ್ಪಿಸಿಕೊಂಡು ವಿಶ್ವಂಧರ ಮಹಾರಾಜನ ಅರ್ಧರಾಜ್ಯಕ್ಕೆ ಮುಖಂಡನಾದನು. ೨೭೮, ಮೃಗಸೇನನ ಹೆಣವನ್ನು ಹಟಾತ್ತಾಗಿ ಕಂಡು ಘಂಟೆಯು ಬಹಳ ದುಃಖಪಟ್ಟು ತಾನೂ ಮೃಗಸೇನನ ಸುವ್ರತವನ್ನು ಕೇಳಿ ತಾನೂ ಧರಿಸಿದೆನೆಂದೆನ್ನುತ್ತ ಈಟಿಯಿಂದ (ತಿವಿದುಕೊಂಡು) ಸತ್ತಳು. ೨೭೯. ಗಂಡನ

ಗದ್ಯ॥ ಗಂಡನೊಡನೆ ಸತ್ತು ತದ್ವ್ರತಮಂ ಕೈಕೊಂಡೆನೆಂದ ಫಲದಿಂ ಘಂಟೆಯುಂ ಶ್ರೀದತ್ತ ಸೆಟ್ಟಿಗೆ ಶ್ರೀಮತಿಯೆಂಬ ಮಗಳಾಗಿ ಮತ್ತಂ ಧನಕೀರ್ತಿಗೆ ವಲ್ಲಭೆಯಾದಳಾ ಮಿಾನುಮಿಾಪುರ ದೊಳ್ ಮೃಗಸೇನೆಯೆಂಬ ಸೂಳೆಯಾಗಿ, ಪೊತ್ತು ಪೋಗಿಂಗೆ ಕೆಳದಿಯರ್ವೆರಸು ಸಿಂಪಾನದಿಯ ತಡಿವಿಡಿದು ಬರುತ್ತುಂ ಕೆಂದಳಿರ ಮಾವಿನ ಕೆಳಗೆ ಪಟ್ಟಿರ್ದ ಧನಕೀರ್ತಿಯಂ ಕಂಡು ತಂದೆಯಂ ಕಂಡಂತೆ ಸ್ನೇಹಿತೆಯಾಗಿ ಸಾರೆ ಕುಳ್ಳಿರ್ದು ರೂಪನಳ್ಕರ್ತು ನೋಡುತ್ತುಂ ಸೋಗಿಲೊಳಿರ್ದೋ ಲೆಯಂ ಕಂಡು ವಾಚಿಸಿ ನೋಡಿ ಮಱುಗಿ ತಲ್ಲೇಖಮಂ ಸೀಳ್ದೀಡಾಡಿ ಶ್ರೀಮತಿಯನೀವೋಲೆ ಗಾಣಲೊಡನೆ ಮಹಾಬಳನೀತಂಗೆ ಕುಡುವುದೆಂದು ಬರೆದು ಮಗುಳೆ ಮುದ್ರಿಸಿ ಮುನ್ನಿನಂತೆ ಸೋಗಿನೊಳಕ್ಕಿ ಪೋದಳಪ್ಪುದಱಿಂ ಧನಕೀರ್ತಿಯ ಸಾವು ತಪ್ಪಿತೆಂದು ಮೂವರ ಭವಮುಮಂ ಪೇಳ್ದಂ ೨೮೦

ಮುನಿಪತಿ ಪೇಟೆ ಕೇಳ್ದು ಗುಣಪಾಲವಣಿಗ್ವರನುಂ ಮಹೀಶನುಂ
ವನರುಹನೇತ್ರೆಯುಂ ಸಕಲ ಭೂಭುಜರುಂ ಧನಕೀರ್ತಿ ಭೂಮಿಪಾ
ಲನು ಮೃಗಸೇನೆಯುಂ ಮನದೊಳಚ್ಚರಿವಟ್ಟು ಜಿನೇಂದ್ರಧರ್ಮಮಂ
ಜನನುತಮಂ ಕರಂ ಪಡೆದು ನಂಬಿದವರ್ಗಿಡರುಂಟೆ ಲೋಕದೊಳ್ ೨೮೧

ಸಂಗಡ ಸತ್ತು ಆ ವ್ರತವನ್ನು ತಾನೂ ಕೈಕೊಂಡೆನೆಂದು ಹೇಳಿದ ಫಲವಾಗಿ ಘಂಟೆಯು ಶ್ರೀದತ್ತಸೆಟ್ಟಿಗೆ ಶ್ರೀಮತಿಯೆಂಬ ಮಗಳಾಗಿ, ಧನಕೀರ್ತಿಗೆ ಹೆಂಡತಿಯಾದಳು. ಆ ಮಿಾನು ಈ ಪಟ್ಟಣದಲ್ಲಿ ಮೃಗಸೇನೆಯೆಂಬ ಸೂಳೆಯಾಗಿ, ಹೊತ್ತು ಹೋಗುವುದಕ್ಕೆ ಗೆಳತಿಯರೊಡನೆ ಸಿಂಪಾನದಿಯ ದಡದಲ್ಲಿಯೇ ಬರುತ್ತ ಚಿಗುರಿದ್ದ ಮಾವಿನ ಮರದ ಕೆಳಗೆ ಮಲಗಿದ್ದ ಧನಕೀರ್ತಿಯನ್ನು ಕಂಡು ತಂದೆಯನ್ನು ಕಂಡಹಾಗೆ ಸ್ನೇಹವುಳ್ಳವಳಾಗಿ ಹತ್ತಿರ ಕುಳಿತು ಅವನ ರೂಪವನ್ನು ಪ್ರೀತಿಯಿಂದ ನೋಡಿ ಮಡಿಲಲ್ಲಿದ್ದ ಓಲೆಯನ್ನು ಕಂಡು ಓದಿನೋಡಿ ಸಂಕಟಪಟ್ಟು ಆ ಲೇಖವನ್ನು ಹರಿದು ಬಿಸಾಟು ಶ್ರೀಮತಿಯನ್ನು ಈ ಓಲೆ ಕಂಡ ಕೂಡಲೆ ಮಹಾಬಲನು ಈತನಿಗೆ ಕೊಡಬೇಕೆಂದು ಬರೆದು ಮತ್ತೆ ಮುದ್ರಿಸಿ ಮಡಿಲಲ್ಲಿಟ್ಟು ಹೋದಳಾದ್ದರಿಂದ ಧನಕೀರ್ತಿಯ ಸಾವು ತಪ್ಪಿತು. ಎಂದು ಮೂವರ ಹಿಂದಿನ ಜನ್ಮಕಥೆಯನ್ನೂ ವಿವರಿಸಿ ಹೇಳಿದರು, ೨೮೦. ಮುನಿಪತಿಯು ಹೇಳಲು ಕೇಳಿ ಗುಣಪಾಲವರ್ತಕ ಶ್ರೇಷ್ಠನೂ ರಾಜನೂ ಕಮಲನೇತ್ರೆಯೂ ಸಕಲ ರಾಜರೂ ಧನಕೀರ್ತಿ ಭೂಮಿಪಾಲನೂ ಮೃಗಸೇನೆಯೂ ಮನಸ್ಸಿನಲ್ಲಿ ಆಶ್ಚರ್ಯಪಟ್ಟು "ಜನರ ಸ್ತೋತ್ರಕ್ಕೆ ಪಾತ್ರವಾದ ಜಿನೇಂದ್ರಧರ್ಮವನ್ನು ಪಡೆದುಕೊಂಡು ಚೆನ್ನಾಗಿ ನಂಬಿದವರಿಗೆ ಈ ಲೋಕದಲ್ಲಿ ಆಪತ್ತು ಉಂಟೆ ? ಚಿಕ್ಕದಾದ ಈ ವ್ರತದಿಂದ

ಕಿಱಿದಪ್ಪೀ ವ್ರತದಿಂದಮೀ ಮಹಿಮೆಯುಂ ಮತ್ತೀ ಮಹಾಧೈರ್ಯಮುಂ
ನೆಱೆದೀ ರಾಜ್ಯಮನೀ ಸುಖೋನ್ನತಿಯನೀ ಸದ್ರೂಪನೀ ತೇಜಮಂ
ತಱಿಸಂದೀ ಧನಕೀರ್ತಿ ಪೆತ್ತನೆನೆ ಪಂಚಾಣುವ್ರತಾನೀಕಮಂ
ನೆಱೆ ಕೈಕೊಂಡ ನರಂಗೆ ನಿರ್ವೃತಿ ಕೈಸಾರ್ವುದೇನದ್ಭುತಂ ೨೮೨

ಗದ್ಯ॥ ಎಂದು ತಮ್ಮೊಳ್ ನುಡಿದು ದಂಟನೂದುವಂಗೆ ಕೊಟಲ್ ದೊರೆಕೊಂಡಂತೆ ಕೋಣನ ನೇಱುವಂಗೆ ಮದಕರಿ ದೊರೆಕೊಂಡಂತೆ ಪುಲ್ಗುಡಿಸಿಲಿನೊಳಿರ್ಪಂಗೆ ಮಣಿಮಾಡಮಾದಂತೆ ನಾಯಕತನಂಗೆಯ್ವಂಗೆ ಚಕ್ರವರ್ತಿತ್ವಮಾದಂತೆ ಮುನ್ನಮೆ ಬ್ರತಮಂ ಕೊಳಲೆಂದಿರ್ದವ ರಹಿಂಸಾವ್ರತದ ಪ್ರತ್ಯಕ್ಷ ಫಲಮಂ ಕಂಡು ವಿಶ್ವಂಧರ ಮಹಾರಾಜನುಂ ಗುಣಪಾಲಸೆಟ್ಟಿಯುಂ ಲಕ್ಷ್ಮೀಮತಿ ಮಹಾದೇವಿಯುಂ ಧನಶ್ರೀಯುಂ ಜಿನದೀಕ್ಷೆಯಂ ಕೈಕೊಂಡರ್. ಧನಕೀರ್ತಿ ಕುಮಾರಂ ಮೊದಲಾಗೆ ಸಮಸ್ತ ರಾಜಕುಮಾರರುಂ ಶ್ರೀಮತಿ ಮೊದಲಾಗೆ ಪಲಂಬರರಸಿಯರುಂ ಸಕಲ ಪರಿಜನಮುಂ ನಿರ್ವಾಣಲಕ್ಷ್ಮಿಯ ತೊಡವಿನೊಳ್ ಕೀಲೆನಿಸಿರ್ದ ಪಂಚರತ್ನಮೆನಿಪ ಪಂಚಾಣುವ್ರತಂಗಳಂ ಕೈಕೊಂಡು ದರ್ಶನದೊಳ್ ದೃಢರಾಗಿ ಮುನಿರಾಜಹಂಸನಂ ಬಂದಿಸಿ ಪೊಟಲ್ಗೆವಂದು ಸಂತೋಷಂ ಬೆರಸಿರ್ದು ೨೮೩

ಈ ಮಹಿಮೆಯನ್ನೂ ಮತ್ತು ಈ ಮಹಾಧೈರ್ಯವನ್ನೂ ದೊಡ್ಡದಾದ ಈ ರಾಜ್ಯವನ್ನೂ ಈ ಉನ್ನತ ಸೌಖ್ಯವನ್ನೂ ಈ ಒಳ್ಳೆಯ ರೂಪವನ್ನೂ ಈ ತೇಜಸ್ಸನ್ನೂ ಈ ಧನಕೀರ್ತಿಯು ಪಡೆದನೆಂದರೆ ನಿರ್ಧಾರದಿಂದ ಪಂಚಾಣುವ್ರತ ಸಮೂಹವನ್ನು ಪೂರ್ಣವಾಗಿ ಕೈಕೊಂಡ ಮನುಷ್ಯನಿಗೆ ನಿರ್ವೃತಿ (ಮೋಕ್ಷ) ಸೌಖ್ಯವು ಲಭಿಸುವುದು ಏನು ಆಶ್ಚರ್ಯವೇ ?" ೨೮೨. ಎಂದು ತಮ್ಮಲ್ಲಿಯೇ ಹೇಳಿಕೊಂಡು ದಂಟನ್ನು ಊದುವವನಿಗೆ ಕೊಳಲು ಲಭಿಸಿದಂತೆ ಕೋಣವನ್ನು ಏರುವವನಿಗೆ ಮದ್ದಾನೆ ಸಿಕ್ಕಿದಂತೆ ಹುಲ್ಲುಗುಡಿಸಿಲಿನಲ್ಲಿ ಇರುವವನಿಗೆ ರತ್ನದುಪ್ಪರಿಗೆಯಾದ ಹಾಗೆ ನಾಯಕತನವನ್ನು ಮಾಡುವವನಿಗೆ ಚಕ್ರವರ್ತಿತ್ವವು ಸಿಕ್ಕಿದಂತೆ ಮೊದಲೇ ವ್ರತವನ್ನು ಹಿಡಿಯಬೇಕೆಂದಿದ್ದವರು ಅಹಿಂಸಾವ್ರತದ ಪ್ರತ್ಯಕ್ಷ ಫಲವನ್ನು ಕಂಡು ವಿಶ್ವಂಧರ ಮಹಾರಾಜನೂ ಗುಣಪಾಲಸೆಟ್ಟಿಯೂ ಲಕ್ಷ್ಮೀಮತಿ ಮಹಾದೇವಿಯೂ ಧನಶ್ರೀಯೂ ಜಿನದೀಕ್ಷೆಯನ್ನು ಕೈಕೊಂಡರು. ಧನಕೀರ್ತಿಕುಮಾರನು ಮೊದಲಾದ ಎಲ್ಲ ರಾಜಕುಮಾರರೂ ಶ್ರೀಮತಿ ಮೊದಲಾಗಿ ಹಲವರು ರಾಣಿಯರೂ ಸಕಲ ಪರಿಜನರೂ ಮೋಕ್ಷಲಕ್ಷ್ಮಿಯ ಒಡವೆಯಲ್ಲಿ ಕೆತ್ತಿದ್ದ ಪಂಚರತ್ನಗಳೆಂದೆನ್ನಿಸುವ ಪಂಚ ಅಣುವ್ರತಗಳನ್ನು ಕೈಕೊಂಡು ದರ್ಶನದಲ್ಲಿ ದೃಢಚಿತ್ತರಾಗಿ ಆ ಮುನಿರಾಜಹಂಸನನ್ನು ವಂದಿಸಿ ಪಟ್ಟಣಕ್ಕೆ ಹಿಂದಿರುಗಿ ಸಂತೋಷದಿಂದಿದ್ದರು. ೨೮೩. ಭರತ, ಸಗರ, ಇಂದ್ರ, ಮಘವ, ರಾಘವ, ವಜ್ರ

ಭರತನ ಸಗರನ ಮಘವನ
ಸುರಪನ ರಾಘವನ ವಜ್ರಜಂಘನ ಲಕ್ಷ್ಮೀ
ಧರನ ದೊರೆ ಜೈನಧರ್ಮದೊ
ಳುರು ಮುದದಿಂ ಮಿಕ್ಕರೆನಿಸಿ ವಸುಮತಿಯೆಲ್ಲಂ ೨೮೪

ಗದ್ಯ॥ ಕೈವಾರದಿಂ ಪೊಗಟೆ ಸನತ್ಕುಮಾರ ಚಕ್ರವರ್ತಿಯಂತೆ ತೇಜಸ್ವಿಯುಂ ಜಿನಧರ್ಮೋದ್ಧಾರಕನುಂ ಶ್ರೀಷೇಣ ಮಹಾರಾಜನಂತೆ ವೀರನುಂ ಅನ್ನದಾನ ವಿನೋದನುಂ ಪಂಚಮ ಚಕ್ರಧರನಂತೆ ಸದ್ಧರ್ಮ ನಿಶ್ಶಂಕನುಂ ಶ್ರುತವಿನೂತನಂ ಅಭಯಕುಮಾರನಂತೆ ಕುಶಲನುಂ ಅಭಯದಾನ ಸಮೇತನುಂ ನಾಗಕುಮಾರನಂತೆ ಸುಭಗನುಂ ಜಿನಪೂಜಾನಂದನುಂ ಧನ್ಯಕುಮಾರನಂತೆ ಮುನಿಜನಾನಂದನುಂ ವಿನೀತನುಮಾಗಿ ಧನಕೀರ್ತಿ ಮಹಾರಾಜಂ ಪಲಕಾಲಂ ರಾಜ್ಯಂಗೆಯ್ಯುತ್ತುಮಿರ್ದೊಂದು ದಿವಸಂ ಕೆನ್ನೆಯ ನರೆಯಂ ಕಂಡು ೨೮೫

ಎನ್ನಂತಪ್ಪತಿಮೂರ್ಖರಿಲ್ಲ ಜಗದೊಳ್ ಬೇಳಾಗಿ ನಿಷ್ಕಾರಣಂ
ಚೆನ್ನಂ ಸ್ತ್ರೀಯರ ಭೋಗಮಂ ಮಹಿಮೆಯುಂ ಶ್ರೀಯುಂ ಮಹೀಚಕ್ರಮಂ
ತನ್ನಿಂ ತಾನಟಿಯುತ್ತುಮಿರ್ಪ ತನುವಂ ನಂಬಿರ್ದು ಕೆಟ್ಟೆಂ ಜವಂ
ಗೆನ್ನಂ ತಿಂಗುರಿಮಾಡದೀಗಳೆ ಜಿನಶ್ರೀದೀಕ್ಷೆಯಂ ತಾಳ್ದುವೆಂ ೨೮೬

ಜಂಘ, ಲಕ್ಷ್ಮೀಧರ – ಇವರಿಗಿಂತ ಜೈನಧರ್ಮದಲ್ಲಿ ಮಿಗಿಲೆಂದು ಲೋಕವೆಲ್ಲ ಹೊಗಳಿತು. ೨೮೪, ಸನತ್ಕುಮಾರ ಚಕ್ರವರ್ತಿಯ ಹಾಗೆ ತೇಜಸ್ವಿಯೂ ಜಿನಧರ್ಮವನ್ನು ಉದ್ಧಾರ ಮಾಡುವವನೂ, ಶ್ರೀಷೇಣ ಮಹಾರಾಜನಂತೆ ವೀರನೂ ಅನ್ನದಾನದಲ್ಲಿ ವಿನೋದಪಡುವವನೂ ಐದನೆಯ ಚಕ್ರಧರನಂತೆ ಸದ್ಧರ್ಮದಲ್ಲಿ ನಿಶ್ಶಂಕನೂ ಶ್ರುತವಿನೂತನೂ ಅಭಯಕುಮಾರನಂತೆ ಕುಶಲನೂ ಅಭಯದಾನಪರನೂ, ನಾಗಕುಮಾರನ ಹಾಗೆ ಸುಭಗನೂ, ಜಿನಪೂಜೆಯಲ್ಲಿ ಆನಂದ ಕಾಣುವವನೂ, ಧನ್ಯಕುಮಾರನಂತೆ ಮುನಿಜನರಿಗೆ ಆನಂದಪ್ರದನೂ, ವಿನಯವಂತನೂ ಆಗಿ ಧನಕೀರ್ತಿ ಮಹಾರಾಜನು ದೀರ್ಘಕಾಲ ರಾಜ್ಯವಾಳುತ್ತಿದ್ದು ಒಂದು ದಿವಸ ತನ್ನ ಕೆನ್ನೆಯ ಮೇಲೆ ನರೆಗೂದಲನ್ನು ಗಮನಿಸಿದನು. ೨೮೫. ಜಗತ್ತಿನಲ್ಲಿ ನನ್ನಂಥ ಅತಿ ಮೂರ್ಖರು ಬೇರೆ ಇಲ್ಲ. ಬೆಪ್ಪನಾಗಿ ನಿಷ್ಕಾರಣವಾಗಿ ಸೌಂದರ್ಯವನ್ನೂ, ಸ್ತ್ರೀಯರ ಭೋಗವನ್ನೂ ಮಹಿಮೆ, ಐಶ್ವರ್ಯಗಳನ್ನೂ ರಾಜ್ಯವನ್ನೂ, ತನ್ನಿಂದ ತಾನೇ ನಶಿಸುತ್ತಿರುವ ದೇಹವನ್ನೂ ನಂಬಿಕೊಂಡಿದ್ದು ಕೆಟ್ಟೆ. ಯಮನಿಗೆ ನನ್ನನ್ನು ಆಹಾರ ಮಾಡದೆ ಈಗಲೇ ಜಿನದೀಕ್ಷೆಯನ್ನು ಧರಿಸುತ್ತೇನೆ. ೨೮೬. ಉಡು, ತಾನು ಕಣ್ಣುಮುಚ್ಚಿ

ಉಡು ಕಣ್ಣಂ ಮುಚ್ಚಿರ್ದ
ನ್ನೆಡೆಯುಂ ಕೇಳಾರುಮಱಿಯರೆಂಬೆಗ್ಗಿಂದಂ
ಮಡಿವಂತೆ ಮೂಢ ಜಡರುಂ
ಕಿಡುವರ್ ಧನ ಗೇಹಮೆನ್ನದೆಂಬಳಿಪಿಂದಂ ೨೮೭

ಉದಯಂಗೆಯ್ದಾದಿತ್ಯಂ
ಪದುಳಂ ನಡೆದಸ್ತಮಾನಮಪ್ಪಂತೆವೊಲಂ
ಮುದದಿಂ ನರರುಂ ಕ್ರಮದಿಂ
ವಿದಿತಂ ನೀಡಿಲ್ಲದಟಿದು ದುರ್ಗತಿಗಿೞ್ವರ್ ೨೮೮

ಮಾಗಿಯ ಕಾಲಂ ತೊಟ್ಟನೆ
ಬೇಗಂ ಹಿಮಮೆಯ್ದುವಂತೆ ಸಾವೆಯ್ದುವುದುಂ
ನೀಗದ ದುಃಖಂ ಘಮ್ಮನ
ಲಾಗಳೆ ಬಂದಿರ್ಕುಮಲ್ಲಿ ಸಂದೆಯಮುಂಟೇ ೨೮೯

ಊರಂ ಸಾರದೆ ಸಾರವಸ್ತುಚಯಮುಂ ತಾಳ್ದೊಪ್ಪಿ ನಿರ್ಗ್ರಂಥದಿಂ
ದಾರಣ್ಯಂಗಳೊಳಿರ್ಪನುಂ ಕನಕ ಭಂಡಾರಕ್ಕೆ ಕಾಪಿಲ್ಲದು
ಗ್ರಾರಣ್ಯಂಗಳೊಳುಣ್ಮಿ ಪೊಣ್ಮಿ ಚಲದಿಂ ಪೋಪಾತನುಂ ಕಷ್ಟಸಂ
ಸಾರೋಗ್ರಾಹಿಗೆ ಬೆಚ್ಚಲೊಲ್ಲದವನುಂ ಕೇಡೆಯ್ದುವಂ ನಿಶ್ಚಯಂ ೨೯೦

ಕೊಡಿರುವುದರಿಂದ ತಾನಿರುವ ಸ್ಥಳವನ್ನು ಯಾರೂ ತಿಳಿಯರೆಂಬ ದಡ್ಡತನದಿಂದ ಸಾಯುವ ಹಾಗೆ ದಡ್ಡರು ಮೋಸ ಹೋಗಿ, ಧನ, ಮನೆಗಳು ನನ್ನದೆಂಬ ಆಸೆಯಿಂದ ಸಾಯುತ್ತಾರೆ. ೨೮೭. ಉದಯವಾದ ಸೂರ್ಯನು ಕ್ಷೇಮದಿಂದ ನಡೆದು ಅಸ್ತಮಾನವಾಗುವಂತೆ ಮನುಷ್ಯರೂ ಕ್ರಮವಾಗಿ ಉದಯಾಸ್ತಗಳನ್ನು ಹೊಂದಿ ತಡವಿಲ್ಲದೆ ಅಳಿದು ದುರ್ಗತಿಗೆ ಇಳಿಯುತ್ತಾರೆ. ೨೮೮. ಮಾಗಿಯಕಾಲದಲ್ಲಿ ತಟ್ಟನೆ ಹಿಮವು ಬೀಳುವಂತೆ ಸಾವು ಸಮೀಪಿಸುತ್ತಲೇ ಕಳೆಯಲಾಗದ ದುಃಖವು ಗಮ್ಮನೆ ಆಗಲೇ ಬಂದಿರುತ್ತದೆ. ಆದರಲ್ಲಿ ಸಂದೇಹವುಂಟೆ ? ೨೮೯, ಸಾರವಸ್ತು ಸಮೂಹವನ್ನು ಹೊಂದಿ ಊರನ್ನು ಸೇರದೆ ಲೌಕಿಕ ಬಂಧನಗಳನ್ನು ಕಳೆದುಕೊಂಡು ಅರಣ್ಯದಲ್ಲಿರುವವನೂ ಕನಕ ಭಂಡಾರಕ್ಕೆ ಕಾವಲಿಲ್ಲದೆ ಉಗ್ರವಾದ ಅರಣ್ಯಗಳಲ್ಲಿ ಉತ್ಸಾಹ ಧೈರ್ಯಗಳಿಂದ ಹೋಗುತ್ತಿರುವವನೂ ನೀಚವಾದ ಸಂಸಾರವೆಂಬ ಉಗ್ರ ಸರ್ಪಕ್ಕೆ ಬೆದರಲೊಲ್ಲದವನೂ ನಿಶ್ಚಯವಾಗಿ ನಾಶಹೊಂದುವನು. ೨೯೦.

ಗದ್ಯ॥ ಎಂದು ಸಂಸಾರಕ್ಕೆ ಪೇಸಿ ಸುಕೀರ್ತಿಯೆಂಬ ತನ್ನ ಪಿರಿಯಮಗೇಗೆ ಪಟ್ಟಮಂ ಕಟ್ಟಿ ರಾಜ್ಯಮಂ ತೊಱೆದು ಮುನ್ನಿನ ಯಶೋಧರ ಭಟ್ಟಾರಕರಲ್ಲಿ ಜಿನದೀಕ್ಷೆಯಂ ಕೈಕೊಂಡು ಸಕಲ ಶ್ರುತಪಾರಾವಾರಪಾರಗನಾಗಿ ಗುರುಗಳಾಜ್ಞೆಯಿಂದೇಕವಿಹಾರಮನೆತ್ತಿಕೊಂಡುಗ್ರೋಗ್ರಮಪ್ಪ ತಪದೊಳ್ ಪ್ರಾಯೋಪಗಮನದಿಂ ಸಂನ್ಯಸನವಿಧಿಯಿಂ ಮುಡಿಪಿ ಸರ್ವಾರ್ಥಸಿದ್ಧಿಯೊಳ್ ಮೂವತ್ತಾಮೂಱು ಸಾಗರೋಪಮಕಾಲವಾಯುಷ್ಯಮನೊಡೆಯನುಮಹಮಿಂದ್ರನುಮಾಗಿ ಪುಟ್ಟಿದಂ ೨೯೧

ಸಿರಿಯಂ ಬಿಟ್ಟು ಸಮಸ್ತ ಭೂವಳಯಮಂ ಕೈಕೊಳ್ಳದೋರಂತೆ ಸೌಂ
ದರ ಹೇಮಾಂಗಿಯರೆಲ್ಲರಂ ತೊಱೆದು ಬಿಟ್ಟಾನಂದಮಂ ಭೋಗಮಂ
ಪರಮಶ್ರೀವಧುವಿಂಗೆ ಸೋಲ್ತು ಜಿನಪಾದಾಂಭೋಜಮಂ ಪೊರ್ದಿ ಸ
ಚ್ಚರಿತಂ ಮತ್ಪತಿ ಜೈನದೀಕ್ಷೆಗೊಡಲಂ ತಾನೊಡ್ಡಿದಂ ಧೈರ್ಯದಿಂ ೨೯೨

ಗದ್ಯ॥ ಎನ್ನ ಸಂಪತ್ತೇನೆಂದು ಮಗನ ಮೋಹಮುಮಂ ರಾಜ್ಯದ ಕಾಂಕ್ಷೆಯುಮಂ ಬಿಸುಟು ಶ್ರೀಮತಿಯುಂ ವಿನಯಮತಿಯುಮೆಂಬ ಕಂತಿಯರಲ್ಲಿ ದೀಕ್ಷೆಯಂ ಕೈಕೊಂಡು ನಿರ್ಮಾಯೆಯಾಗಿ ನೆಗಟ್ದು ಕಡೆಯೊಳ್ ಸಮಾಧಿವಿಧಿಯಿಂ ಮುಡಿಪಿ ದೇವಲೋಕದೊಳ್ ಪುಟ್ಟಿದಳ್ ವಿಶ್ವಂಧರ

ಎಂದು ಸಂಸಾರಕ್ಕೆ ಅಸಹ್ಯಪಟ್ಟು ಸುಕೀರ್ತಿಯೆಂಬ ತನ್ನ ಹಿರಿಯ ಮಗನಿಗೆ ಪಟ್ಟಕಟ್ಟಿ ರಾಜ್ಯವನ್ನು ತ್ಯಜಿಸಿ ಮೊದಲಿನ ಯಶೋಧರ ಭಟ್ಟಾರಕರಲ್ಲಿ ಜಿನ ದೀಕ್ಷೆಯನ್ನು ಸ್ವೀಕರಿಸಿ ಸಕಲಶ್ರುತ ಪಾರಾವಾರಪಾರಗ (ಎಲ್ಲ ಶಾಸ್ತ್ರ ಸಮುದ್ರದ ಪಾರವನ್ನು ದಾಟಿದ)ನಾಗಿ ಗುರುಗಳ ಆಜ್ಞೆಯಿಂದ ಏಕವಿಹಾರವನ್ನು ಕೈಕೊಂಡು ಉಗ್ರವಾದ ತಪಸ್ಸಿನಲ್ಲಿ ತೊಡಗಿ ಪ್ರಾಯೋಪಗಮನದಿಂದ ಸಂನ್ಯಸನವಿಧಿಯಂತೆ ಸತ್ತು ಸರ್ವಾರ್ಥ ಸಿದ್ಧಿಯಲ್ಲಿ ಮೂವತ್ತು ಮೂರು ಸಾಗರೋಪಮ ಕಾಲದ ಆಯುಸ್ಸುಳ್ಳವನೂ ಅಹಮಿಂದ್ರನೂ ಆಗಿ ಹುಟ್ಟಿದನು. ೨೯೧. "ಐಶ್ವರ್ಯವನ್ನು ಬಿಟ್ಟು ಸಮಸ್ತ ಭೂಮಂಡಲವನ್ನೂ ತ್ಯಜಿಸಿ ಮಹಾಸುಂದರರಾದ ಹೇಮಾಂಗಿಯರೆಲ್ಲರನ್ನೂ ಬಿಟ್ಟು ಆನಂದವನ್ನೂ ಭೋಗವನ್ನೂ ಬಿಟ್ಟು ಪರಮಶ್ರೀ (ಮೋಕ್ಷ) ವಧುವಿಗೆ ಸೋತು ಜಿನಪಾದಕಮಲಗಳನ್ನು ಸೇರಿ ಸಚ್ಚರಿತ್ರನಾದ ನನ್ನ ಪತಿಯು ಜೈನ ದೀಕ್ಷೆಯನ್ನು ತೆಗೆದುಕೊಂಡು ದೇಹದ ದಂಡನೆ ಮಾಡಿದ. ೨೯೨. ಇನ್ನು ನನ್ನ ಸಂಪತ್ತೇನು ? ಎಂದು ಶ್ರೀಮತಿಯೂ ವಿನಯಮತಿಯರೆಂಬ ಕಂತಿಯರಲ್ಲಿ ದೀಕ್ಷೆಯನ್ನು ಸ್ವೀಕರಿಸಿ ಮಾಯೆಯನ್ನು ಕಳೆದುಕೊಂಡು ಕಡೆಯಲ್ಲಿ ಸಮಾಧಿ ವಿದಿಯಂತೆ ಮಡಿದು ದೇವಲೋಕದಲ್ಲಿ ಹುಟ್ಟಿದಳು. ವಿಶ್ವಂಧರ

ಮುನಿಕುಂಜರನುಂ ಗುಣಪಾಲಮುನಿಯುಂ ಲಕ್ಷ್ಮೀಮತಿಯುಂ ಧನಶ್ರೀಯುಂ ಮೃಗಸೇನೆಯುಂ ತಪದೊಳುತ್ತರೋತ್ತರಂ ನೆಗಟ್ದು ಸಮಾಧಿಮರಣದಿಂ ಮುಡಿಪಿ ದೇವಲೋಕದೊಳ್ ಪುಟ್ಟಿದ ರದುಕಾರಣದಿಂ ೨೯೩

ಕೊಲೆಯುಂ ಬಿಟ್ಟ ಮಹಾತ್ಮಂ
ಸುಲಲಿತ ಕೈವಲ್ಯ ಕಾಮಿನೀಶ್ವರನಕ್ಕುಂ,
ಪಲವುಂ ಮಾತಿನೊಳೇನೊ
ಳ್ಗಲಿಯಾಗಿ ಸಮಸ್ತ ಧಾತ್ರಿಯುಂ ತಾನಾಳ್ಗುಂ ೨೯೪

ಕೊಲೆಯೊಳ್ ಕೂಡಿದ ಕಷ್ಟಂ
ತಲೆಕೆಳಗಾಗಿರ್ಕುಮುಗ್ರನರಕಾರ್ಣವದೊಳ್
ಸಲೆ ತಿರಿಕಯೋನಿಯೊಳ್ ತಾಂ
ಸಲೆ ತಿರುಗುಗುಮಾವಕಾಲಮುಂ ಭವಭವದೊಳ್ ೨೯೫

ಗದ್ಯ॥ ಎಂದಹಿಂಸಾವ್ರತದ ಪ್ರತ್ಯಕ್ಷ ಫಲಮುಂ ಹಿಂಸೆಯೊಳಾದ ಪೊಲ್ಲಮೆಯುಮಂ ಗಣಧರಸ್ವಾಮಿಗಳ್ ಪೇಟ್ ಕೇಳ್ದು ೨೯೬

ವರಭವ್ಯಾಂಭೋಜಸೂರ್ಯಂ ನಿರುಪಮಗುಣನುದ್ಯತ್ತಪಂ ದೇವಧಾತ್ರೀ
ಧರಧೈರ್ಯಂ ವಾಗ್ವಧೂವಲ್ಲಭನಘಕುಲವಿದ್ರಾವಣಂ ಸತ್ಯರತ್ನಾ
ಭರಣಂ ತ್ರೈವಿದ್ಯ ಚೂಡಾಮಣಿ ವಿಮಲಪದಾಂಭೋಜಭೃಂಗಂ ವಿನೇಯಾಂ
ಬರಚಂದ್ರಂ ತುಷ್ಟನಾದಂ ಸುಕವಿಜನಮನಃಪದ್ಮಿನೀರಾಜಹಂಸಂ ೨೯೭

ಮುನಿಶ್ರೇಷ್ಠನೂ ಗಂಣಪಾಲಮುನಿಯೂ ಲಕ್ಷ್ಮೀಮತಿಯೂ ಧನಶ್ರೀಯೂ ಮೃಗಸೇನೆಯೂ ತಪಸ್ಸಿನಲ್ಲಿ ಹೆಚ್ಚು ಹೆಚ್ಚು ವೃದ್ಧಿಯನ್ನು ಹೊಂದಿ ಸಮಾಧಿಮರಣದಿಂದ ಮಡಿದು ದೇವಲೋಕದಲ್ಲಿ ಹುಟ್ಟಿದರು. ೨೯೩ ಆದಕಾರಣ ಕೊಲೆಯನ್ನು ಬಿಟ್ಟ ಮಹಾತ್ಮನು ಶ್ರೇಷ್ಠಳಾದ ಕೈವಲ್ಯಕಾಮಿನಿಗೆ ಗಂಡನಾಗುವನು. ಹಲವು ಮಾತುಗಳಿಂದೇನು, ಒಳ್ಳೆಯ ಶೂರನಾಗಿ ಸಮಸ್ತ ಭೂಮಿಯನ್ನೂ ತಾನು ಆಳುವನು. ೨೯೪. ಕೊಲೆಯಲ್ಲಿ ಮನಸ್ಸಿಟ್ಟ ನೀಚನು ಭಯಂಕರವಾದ ನರಕಸಮುದ್ರದಲ್ಲಿ ತಲೆಕೆಳಕನಾಗಿರುವನು, ಅಥವಾ ಎಲ್ಲ ಕಾಲಕ್ಕೂ ಜನ್ಮಜನ್ಮದಲ್ಲಿಯೂ ತಿರ್ಯಗ್ಜಂತುವಾಗಿ ಸಂಸಾರದಲ್ಲಿ ತಿರುಗುತ್ತಿರುತ್ತಾನೆ. ೨೯೫. ಎಂದು ಅಹಿಂಸಾವ್ರತದ ಪ್ರತ್ಯಕ್ಷಫಲವನ್ನೂ ಹಿಂಸೆಯಿಂದಾದ ಕೆಡಕನ್ನೂ ಗಣಧರ ಸ್ವಾಮಿಗಳು ಹೇಳಿದುದನ್ನು ಕೇಳಿ ೨೯೬. ಶ್ರೇಷ್ಠರಾದ ಭವ್ಯರೆಂಬ ಕಮಲಗಳಿಗೆ ಸೂರ್ಯನಂಥ, ನಿರುಪಮ ಗುಣವುಳ್ಳವನು, ವಿಶೇಷ ತಪಸ್ಸು ಮಾಡಿದವನು, ಮೇರುಧೈರ್ಯವುಳ್ಳವನು, ವಾಗ್ವಧೂವಲ್ಲಭನು, ಪಾಪಸಮೂಹವನ್ನು ಸೀಳಿದವನು, ಸತ್ಯವೆಂಬ ರತ್ನಾಭರಣವುಳ್ಳವನು, ತ್ರೈವಿದ್ಯಚೂಡಾಮಣಿಯ ವಿಮಲವಾದ ಕಮಲಗಳಲ್ಲಿ ಭೃಂಗನಾಗಿರುವವನು, ವಿನೇಯರೆಂಬ ಆಕಾಶಕ್ಕೆ ಚಂದ್ರನೂ ಆದಂಥ

ಇದು ನಿಖಿಲ ದಿವಿಜ ಪಂವೃಢ ಮುಕುಟತಟಘಟಿತಮಣಿಗಣವಿಲುಳಿತಕಿರಣ ಚುಂಬನೀಯ ಪರಮ ಜಿನಚರಣಯುಗಳಸರಸಿರುಹಮತ್ತ ಮಧುಕರ ನಿರುಪಮ ಸಹಜಕವಿಜನಪಯಃಪಯೋಧಿಹಿಮಕರ ನುತಭಾಯುತ ದಿಗಂಬರದಾಸ ನೂತ್ನಕವಿತಾವಿಳಾಸ ಶ್ರೀಮನ್ನಯಸೇನ ದೇವವಿರಚಿತಮಪ್ಪ ಧರ್ಮಾಮೃತದೊಳ್

## ದಶಮಾಶ್ವಾಸಂ

ಸುಕವಿಜನಮನಃ ಪದ್ಮಿನೀರಾಜಹಂಸನಾದ ಶ್ರೇಣಿಕಮಹಾರಾಜನು ಸಂತೋಷಪಟ್ಟನು.

೨೯೭. ಇದು ಸಮಸ್ತದೇವ ಮುಖಂಡರ ಕಿರೀಟಗಳಲ್ಲಿ ಕೆತ್ತಿದ ಮಣಿಗಣದಿಂದ ಹೊರಟ ಕಿರಣಗಳಿಂದ ಚುಂಬಿತವಾದ ಪರಮಜಿನ ಚರಣಯುಗಳವೆಂಬ ಕಮಲಗಳಲ್ಲಿನ ಮದಿಸಿದ ಮಧುಕರ(ದುಂಬಿ)ನಾದ ನಿರುಪಮ ಸಹಜಕವಿಜನರೆಂಬ ಹಾಲ್ಗಡಲಿಗೆ ಚಂದ್ರನಾದ ನುತಭಾವಯುತನಾದ' ದಿಗಂಬರದಾಸ' 'ನೂತ್ನಕವಿತಾ ವಿಳಾಸ'ನೆಂಬ ಬಿರುದಾಂಕಿತನಾದ ಶ್ರೀಮನ್ನಯಸೇನದೇವನು ವಿರಚಿಸಿದಂಥ 'ಧರ್ಮಾಮೃತ'ದಲ್ಲಿ

## ದಶಮಾಶ್ವಾಸ.

# ಏಕಾದಶಾಶ್ವಾಸಂ

ಶ್ರೀಮದಹಿಂಸಾವ್ರತಮಿದು
ಸಾಮಾನ್ಯಮೆ ಸಕಲಸುಖಮನೀವಗ್ಗದ ಚಿಂ
ತಾಮಣಿಯೊಂದೊಸೆದಂ ಧರ
ಣೀಮಹಿತಂ ಸುಕವಿನಿಕರಪಿಕಮಾಕಂದಂ ೧

ಗದ್ಯ॥ ಅಂತಹಿಂಸಾವ್ರತದ ಕಥೆಯುಂ ಕೇಳ್ದು ಮನದ ಪೆರ್ಚಿಂ ಮಗಧನಾಯಕಂ ಮತ್ತಂ ಗಣಧರ ಸ್ವಾಮಿಗಳ್ಗೆ ಪೊಡೆಮಟ್ಟು ಮುಂದಣ ಸತ್ಯವ್ರತದ ಕಥೆಯುಂ ಬೆಸಸುವುದೆಂದು ಕೈಗಳಂ ಮುಗಿದಿರ್ಪುದುಂ ನಿರ್ವೃತಿಕಾಂತೆಯ ಕೂಟಕ್ಕಿದು ತಥ್ಯಮೆನಿಸುವ ಸತ್ಯವ್ರತದ ಕಥೆಯುಂ ಗೌತಮಸ್ವಾಮಿಗಳಿಂತೆಂದು ಪೇಳ್ದರ್ : ವೀರದೊಳ್ ಕೂಡಿ ಪರಿಗೆಯುಂ ಬಟ್ಟೇಱುಂಬೆರಸಿರ್ಪಂತೆ, ಕ್ಷತ್ರಿಯಂಗೆ ಪುಟ್ಟಿ ಸಿಂಹಾಸನಮುಂ ಬೆಳ್ಗೊಡೆಯುಂ ಬೆರಸಿರ್ಪಂತೆ, ಶಕ್ತಿಯೊಳ್ ಕೂಡಿ ಪೆಂಡಿರುಂ ಮಕ್ಕಳುಂ ಬೆರಸಿರ್ಪಂತೆ, ಶ್ರೀಯೊಳ್ ಕೂಡಿ ತೇಜಮುಂ ಮಹಿಮೆಯುಂ ಬೆರಸಿರ್ಪಂತೆ, ಜಾತ್ಯಶ್ವಮನೇಱಿ ಸಬಳಮುಮಡಾಯುಧಮುಂ ಬೆರಸಿರ್ಪಂತೆ, ಬಲ್ಗೋಂಟೆಯೊಳ್ ಪೊಕ್ಕು ನೀರುಂ ಧಾನ್ಯಮುಂ ಬೆರಸಿರ್ಪಂತೆ ಬೀಜದೊಳ್ ನೆರೆದು ಬಂಟರೆತ್ತಿನೊಳ್ ಬೆರಸಿರ್ಪಂತೆ, ಭೂಬಲದೊಳ್ ಕೂಡಿ ಬಲದೊಳಂ ಬೆರಸಿರ್ಪಂತೆ ಜವ್ವನದೊಳ್ ಕೂಡಿ ವಿಳಾಸ

"ಶ್ರೇಷ್ಠವಾದ ಈ ಅಹಿಂಸಾವ್ರತವು ಸಾಮಾನ್ಯವೆ? ಇದು ಸಕಲ ಸುಖಗಳನ್ನು ಕೊಡುವ ಶ್ರೇಷ್ಠವಾದ ಚಿಂತಾಮಣಿ" ಎಂದು ಸುಕವಿನಿಕರಪಿಕಮಾಕಂದನಾದ ರಾಜನು ಬಹಳ ಹರ್ಷಪಟ್ಟನು. ೧. ಹಾಗೆ ಅಹಿಂಸಾವ್ರತದ ಕಥೆಯನ್ನು ಕೇಳಿ ಮನಸ್ಸಿನ ಉತ್ಸಾಹದಿಂದ ಮಗಧರಾಜ್ಯದ ಶ್ರೇಣಿಕ ಮಹಾರಾಜನು ಗಣಧರಸ್ವಾಮಿಗಳಿಗೆ ಪುನಃ ನಮಸ್ಕಾರ ಮಾಡಿ ಮುಂದಿನ ಸತ್ಯವ್ರತದ ಕಥೆಯನ್ನು ಹೇಳಬೇಕೆಂದು ಕೈಮುಗಿದು ಬೇಡಿಕೊಂಡನು. ಮೋಕ್ಷಕಾಂತೆಯನ್ನು ಸೇರುವುದಕ್ಕೆ ಇದು ಸತ್ಯವಾದ ದಾರಿಯೆನ್ನಿಸುವ ಸತ್ಯವ್ರತದ ಕಥೆಯನ್ನು ಗೌತಮ ಸ್ವಾಮಿಗಳು ಹೀಗೆಂದು ಹೇಳಿದರು. ವೀರದಿಂದ ಕೂಡಿ ಗುರಾಣಿಯನ್ನು ಬಿಟ್ಟು ಕಾಳಗಕ್ಕೆ ಹೋಗುವಂತೆ, ಕ್ಷತ್ರಿಯನಿಗೆ ಹುಟ್ಟಿ ಸಿಂಹಾಸನವೂ ಶ್ವೇತ ಛತ್ರಿಯೂ ಹೊಂದಿರುವಂತೆ ಶಕ್ತಿಯಿಂದ ಕೂಡಿ ಪೆಂಡಿರು ಮಕ್ಕಳೊಡನೆ ಸೇರಿರುವಂತೆ ಜಾತಿ ಕುದುರೆಯನ್ನು ಹತ್ತಿ ಸಬಳ (ಈಟಿ) ಅಡಾಯುಧಗಳನ್ನು ಹೊಂದಿರುವಂತೆ ಬಲವಾದ ಕೋಟೆಯನ್ನು ಹೊಕ್ಕು ನೀರೂ ಧಾನ್ಯವೂ ಸೇರಿರುವಂತೆ ಬೀಜದಲ್ಲಿ ಸೇರಿ ಬಂಟರ ಎತ್ತಿನಲ್ಲಿ ಕೂಡಿರುವಂತೆ ಭೂಸೈನ್ಯದಲ್ಲಿ ಸೇರಿ ಬಲದಿಂದ ಕೂಡಿರುವಂತೆ, ಯವ್ವನದಲ್ಲಿ ವಿಳಾಸ ಶೃಂಗಾರಗಳಿಂದ ಕೂಡಿರುವಂತೆ ಸಮ್ಯಗ್ದರ್ಶನದಲ್ಲಿ ಕೂಡಿ

ದೊಳಂ ಶೃಂಗಾರದೊಳಂ ಕೂಡಿರ್ಪಂತೆ, ಸಮ್ಯಗ್ದರ್ಶನದೊಳ್ ಕೂಡಿ ಕೊಲ್ಲದ ವ್ರತದೊಳಂ
ಪುಸಿಯದ ವ್ರತದೊಳಂ ಬೆರಸಿರ್ಪುದು ೨

ವಸುಧಾವಳಯಂ ವಿಶ್ವಾ
ಸಿಸಿ ಪೊರ್ದುವುದಿವನೆ ದೇವನೆಂದೆಲ್ಲಂ ಪೂ
ಜಿಸುವುದದಱಿಂದಮಗ್ಗಳ
ಪುಸಿಯಿಲ್ಲದ ಸುವ್ರತಕ್ಕೆ ದೊರೆ ಪೆಱತೊಳವೇ ೩

ಗದ್ಯ॥ ಇನ್ನದಱ ಪೆಂಪೆತೆಂದೊಡೆ ೪

ತುಱುಗಿದ ನಂದನಾವಳಿಯಿನೊಪ್ಪುವ ವಾರಿಜಷಂಡದೋಳಿಯಿಂ
ನೆಱೆದತಿ ಶೋಭೆಯಿಂ ಬಳಸಿದೂರ್ಗಳಿನೊಪ್ಪುವ ಕೆಯ್ವೊಲಂಗಳಿಂ
ಮಿಱುಗುವ ರತ್ನದಿಂದೆಸೆವ ಜೈನನಿವಾಸದಿನೆಯ್ದೆ ನೀಳ್ದು ಸು
ತ್ತಿಱಿದ ತಟಾಕದಿಂ ಕರಮೆ ರಂಜಿಸುತಿರ್ಪುದು ವೆಂಗಿಮಂಡಲಂ ೫

ತದ್ವೆಂಗಿಮಂಡಲದೊಳಂ
ವಿದ್ವಜ್ಜನದಿಂ ಸುರೇಶ್ವರನಿಭಾನ್ವಿತರಿಂ
ಸದ್ವಚನಯುಕ್ತರಿಂ ದೃಢ
ಸದ್ವ್ರತರಿಂ ವಿಟವಿಟೀನಿಕಾಯದಿನಧಿಕಂ ೬

ಕೊಲ್ಲದ ವ್ರತದಲ್ಲಿಯೂ ಹುಸಿಯಾಡದ ವ್ರತದಲ್ಲಿಯೂ ಸೇರಿ ಇರತಕ್ಕದ್ದು. ೨. ಲೋಕವೆಲ್ಲ ಇವನೇ ದೇವನೆಂದು ನಂಬಿ ಪೂಜಿಸುವುದು. ಆದ್ದರಿಂದ ಹುಸಿಯಿಲ್ಲದ ಶ್ರೇಷ್ಠವ್ರತಕ್ಕೆ ಬೇರೆ ಸಮಾನವಾದದ್ದುಂಟೆ ? ೩. ಇನ್ನು ಅದರ ಹೆಚ್ಚಳವನ್ನು ಕೇಳಿ. ೪. ದಟ್ಟವಾದ ಉದ್ಯಾನ ಸಮೂಹಗಳಿಂದ ಶೋಭಿಸುವ ಕಮಲ ಸರೋವರಗಳ ಸಾಲಿನಿಂದ ಕೂಡಿ ಅತಿ ಶೋಭೆಯಿಂದ ಸುತ್ತುಗಟ್ಟಿದ ಊರುಗಳಿಂದ ಒಪ್ಪುವ, ಹೊಲಗದ್ದೆಗಳಿಂದ ಹೊಳೆಯುವ ರತ್ನ ದೀಪಿಕೆಗಳಿಂದ ಶೋಭಿಸುವ, ಜೈನರ ಮನೆಗಳಿಂದ, ಉದ್ದಕ್ಕೆ ಸುತ್ತ ವ್ಯಾಪಿಸಿರುವ ಕೆರೆಗಳಿಂದ ಈ ವೆಂಗಿಮಂಡಲವು ಬಹಳ ರಮಣೀಯವಾಗಿತ್ತು. ೫. ಆ ವೆಂಗಿಮಂಡಲದಲ್ಲಿಯೂ ವಿದ್ವಜ್ಜನರಿಂದ, ದೇವೇಂದ್ರನಿಗೆ ಸದೃಶರಾದವರಿಂದ, ಒಳ್ಳೆಯ ವಾಕ್ಶಕ್ತಿಯಿಂದ ಕೂಡಿದ, ಸದ್ವ್ರತಗಳಲ್ಲಿ ದೃಢರಾದ ವಿಟವಿಟಿಯರ ಸಮೂಹದಿಂದ ದೊಡ್ಡದೆನಿಸಿ. ೬. ಪ್ರತಿಪಾಲ ಪುರವೆಂಬ ಪಟ್ಟಣ ಬಹಳ ಸುಂದರವಾಗಿತ್ತು.

ಗದ್ಯ॥ ರಮಣೀಯಮಪ್ಪುದು ಪ್ರತಿಪಾಲಪುರಮೆಂಬುದಧದನಾಳ್ವಂ ಧನದ ಮಹಾರಾಜನೆಂಬ ಮಹಾಮಾಂಡಳಿಕನಾತಂ ೭

ಜಿನನಾಥಾರ್ಚನೆಯೊಳ್ ಸುರಾಧಿಪತಿಯುಂ ಶ್ರೇಯಾಂಸನಂ ದಾನದೊಳ್
ಮುನಿಪಾದಾಂಬುಜ ಭಕ್ತಿಯೊಳ್ ಮಘವನಂ ನಾಗೇಂದ್ರನಂ ಭೋಗದೊಳ್
ಧನದೊಳ್ ಖೇಚರರಾಜನಂ ಚೆಲುವಿನೊಳ್ ಕಂದರ್ಪನಂ ಬುದ್ಧಿಯೊಳ್
ಮನುವೇ ತೇಜದೊಳರ್ಕನಂ ಭರತ ಚಕ್ರಾಧೀಶನಂ ಪೆಂಪಿನೊಳ್ ೮

ಗದ್ಯ॥ ಪೋಲ್ತು ಸುಖ ಸಂಕಥಾ ವಿನೋದದಿಂ ರಾಜ್ಯಲಕ್ಷ್ಮೀ ಮನೋಹರನಾಗಿರ್ಪುದು ಮೊಂದು ದಿವಸಂ ಚರನೊರ್ವನರಸನ ಚಿತ್ತವೃತ್ತಿಯನಱಿದು ತನ್ನ ಮನದ ಕಾರ್ಯಮನಱಿಪಿ ಮೆಚ್ಚುಗೊಳ್ವಪೇಕ್ಷೆಯಿಂ ಮೆಲ್ಲನೆ ಸಾರ್ದು ಸಾಷ್ಟಾಂಗವೆಱಗಿ ಪೊಡಮಟ್ಟು ದೂರದೊಳ್ ನಿಂದು ಕೈಗಳಂ ಮುಗಿದು ಬಿನ್ನಪಮೆಂದೀತೆಂದಂ ೯

ಮದನನ ಕೈಪಿಡಿ ಕಾಮನ
ಪದಪಿನ ತೀವಶ್ರಿಪಿ ಮನ್ಮಥನ ನಚ್ಚಿನ ನಂ
ಬಿದ ಕೈದು ಕಾಮದೇವನ
ಮದದಾನೆ ಮನೋಜನೃಪನ ಪೂವಿನ ಬಾಣಂ ೧೦

ಬಿದಿ ಕಾಡಲೆಂದು ಜಗಮಂ
ಸುದತಿಯನಟ್ಕರ್ತು ಪಡೆದು ಮೆಲ್ಲನೆ ಕೊಟ್ಟಂ
ಮದನಂಗೆ ಬಿದಿಯ ಬೆಸದಿಂ
ಮದನನುಮವಳಿಂದಮಲೆಯದಿರ್ದಪನಿಳೆಯಂ ೧೧

ಅದನ್ನು ಧನದ ಮಹಾರಾಜನೆಂಬ ಮಾಂಡಳಿಕನು ಆಳುತ್ತಿದ್ದನು. ೭. ಜಿನನಾಥನ ಪೂಜೆಯಲ್ಲಿ ದೇವೇಂದ್ರನನ್ನೂ, ದಾನದಲ್ಲಿ ಶ್ರೇಯಾಂಸನನ್ನೂ ಮುನಿಪಾದಕಮಲ ಭಕ್ತಿಯಲ್ಲಿ ಮಘವನನ್ನೂ ಭೋಗದಲ್ಲಿ ನಾಗೇಂದ್ರನನ್ನೂ (ಭೋಗ= ಸುಖ, ಹೆಡೆ) ಹಣದಲ್ಲಿ ಖೇಚರ ರಾಜನನ್ನೂ ಸೌಂದರ್ಯದಲ್ಲಿ ಮನ್ಮಥನನ್ನೂ ಬುದ್ಧಿಯಲ್ಲಿ ಮನು ವನ್ನೂ ತೇಜಸ್ಸಿನಲ್ಲಿ ಸೂರ್ಯನನ್ನೂ ಆಧಿಕ್ಯದಲ್ಲಿ ಭರತಚಕ್ರವರ್ತಿಯನ್ನೂ ಹೋಲುತ್ತ ಸುಖವಾಗಿ ರಾಜ್ಯಲಕ್ಷ್ಮೀ ಮನೋಹರನಾಗಿರಲು ಒಂದು ದಿನ ಒಬ್ಬ ಸೇವಕನು ಅರಸನ ಮನೋಭಾವವನ್ನು ತಿಳಿದು ತನ್ನ ಮನಸ್ಸಿನ ಉದ್ದೇಶವನ್ನು ತಿಳಿಸಿ ಬಹುಮಾನ ಪಡೆಯುವ ಆಸೆಯಿಂದ ಮೆಲ್ಲನೆ ಸಮೀಪಿಸಿ ಸಾಷ್ಟಾಂಗ ನಮಸ್ಕಾರ ಮಾಡಿ ದೂರದಲ್ಲಿ ನಿಂತು ಕೈಗಳನ್ನು ಜೋಡಿಸಿ 'ಬಿನ್ನಹ' ಎಂದು ಹೀಗೆ ಹೇಳಿದನು : (೮–೯) 'ಮನ್ಮಥನ ಕೈಪಿಡಿ, ಕಾಮನ ಪ್ರೀತಿಯ ಹರಿತವಾದ ಕತ್ತಿ, ಮದನನ ನಂಬಿಕೆಯ ಆಯುಧ, ಕಾಮ ದೇವನ ಮದ್ದಾನೆ, ಮನೋಜನೃಪನ ಹೂವಿನ ಬಾಣ, ವಿಧಿ ಜಗತ್ತನ್ನು ಕಾಡಿಸಲೆಂದು ಯುವತಿಯನ್ನು ಅಕ್ಕರೆಯಿಂದ ಸೃಷ್ಟಿಸಿ ಮೆಲ್ಲನೆ ಕಾಮನಿಗೆ ಕೊಟ್ಟ. ವಿಧಿಯ ಆಜ್ಞೆ

ಆ ಪದ್ಮಾಕ್ಷಿಯ ಸೊಗಯಿಪ
ರೂಪಂ ಕೇಳ್ದವರುಮಳಿಪಿ ಮಱುಗುವರೆನೆ ಧಾ
ತ್ರೀಪಾಲಕ ತದ್ವನಿತೆಯ
ರೂಪಂ ನೆಱೆ ಕಂಡೊಡೞಿಪದಿರ್ಪವನಾವಂ ೧೨

ಸಂಘಶ್ರೀಯೆಂಬ ಬುದ್ಧಪಾಶಕನಾತನ ಮಗಳ್ ಕಮಳಶ್ರೀಯೆಂಬ ಕನ್ಯೆಯಿರ್ದಪಳಾ
ಗದ್ಯ॥ ಕನ್ಯೆ ದೇವರ್ಗೆ ಪ್ರಾಣವಲ್ಲಭೆಯಾಗಲ್ ತಕ್ಕವಳೆಂಬುದುಂ ಧನದ ಮಹಾರಾಜನಾತಂಗಂಗಚಿತ್ತ
ಮನಿತ್ತು ಪೆರ್ಗಡೆಗಳಂ ಸಂಘಶ್ರೀಯಲ್ಲಿಗೆ ಕಳುಪಿ ಕಮಲಶ್ರೀಯಂ ಬೇಡಿಯಟ್ಟುವುದುಂ
ಸಂಘಶ್ರೀ ಪೆರ್ಗಡೆಗಳ ಬರವನಱಿದಿದಿರ್ಗೊಂಡು ಪೋಗಿ ಪಿರಿದಪ್ಪ ವಿಷ್ಟರಮನಿಕ್ಕಿ ವಸ್ತ್ರ
ತಾಂಬೂಲಾದಿಗಳಿಂ ಸಂತೋಷಂಬಡಿಸಿ ಬೆಸನಾವುದೆಂಬುದುಂ ಪೆರ್ಗಡೆಗಳಿಂತೆಂದರ್ ೧೩

ನಿನ್ನ ತನೂಜೆಯಂ ವನಜಲೋಚನೆಯಂ ಲಲಿತಾಂಗಿಯಂ ವಿಳಾ
ಸೋನ್ನತೆಯಂ ಮನೋಜಗಜಗಾಮಿನಿಯಂ ರಮಣೀಯ ವಕ್ತ್ರೆಯಂ
ಸನ್ನುತರೂಪೆಯಂ ಧನದಭೂಪತಿ ಭೂವಳಯೈಕವಂದ್ಯನ
ತ್ಯುನ್ನತತೇಜನಿಂದ್ರವಿಭವಂ ನಯದಿಂ ಜಿನಪಾದಶೇಖರಂ ೧೪

ಯಿಂದ ಮದನನೂ ಅವಳಿಂದ ಲೋಕವನ್ನು ಕಾಡಿಸದೆ ಇದ್ದಾನೆ. ಆ ಪದ್ಮಾಕ್ಷಿಯ ಸುಂದರ ರೂಪವನ್ನು ಕೇಳಿದವರು ಆಸೆಪಟ್ಟು ಸಂಕಟಪಡುವರೆಂದರೆ, ರಾಜನೆ! ಆ ವನಿತೆಯ ರೂಪವನ್ನು ಪೂರ್ಣವಾಗಿ ನೋಡಿದರೆ ಆಸೆ ಪಡದಿರುವವನು ಯಾವನು? ೧೦-೧೨. ಸಂಘಶ್ರೀಯೆಂಬ ಬುದ್ಧಪಾಶಕನಿದ್ದಾನೆ. ಅವನ ಮಗಳು ಕಮಲಶ್ರೀಯೆಂಬ ಕನ್ಯೆ ಇದ್ದಾಳೆ. ಆ ಕನ್ಯೆ ಸ್ವಾಮಿಗೆ ಪ್ರಾಣವಲ್ಲಭೆಯಾಗಲು ತಕ್ಕವಳು" ಎಂದು ಹೇಳಲು ಧನದ ಮಹಾರಾಜನು ಅವನಿಗೆ ಪಾರಿತೋಷಕವನ್ನು ಕೊಟ್ಟು ಹೆಗ್ಗಡೆಗಳನ್ನು ಸಂಘಶ್ರೀಯ ಬಳಿಗೆ ಕಳುಹಿಸಿ ಕಮಲಶ್ರೀಯನ್ನು ಕೇಳುವಂತೆ ಆಜ್ಞಾಪಿಸಿದನು. ಹೆಗ್ಗಡೆಗಳ ಬರವನ್ನು ತಿಳಿದು ಸಂಘಶ್ರೀ ಇದಿರುಗೊಂಡು ದೊಡ್ಡ ಪೀಠವನ್ನು ಹಾಕಿ, ವಸ್ತ್ರ ತಾಂಬೂಲಾದಿಗಳನ್ನು ಕೊಟ್ಟು ಸಂತೋಷಪಡಿಸಿ 'ಏನಪ್ಪಣೆ?' ಎನ್ನಲು ಹೆಗ್ಗಡೆಗಳು ಹೀಗೆ ಹೇಳಿದರು : ಲಲಿತಾಂಗಿಯೂ ಕಮಲಲೋಚನೆಯೂ ಮಹಾವಿಳಾಸವತಿಯೂ ಆದ ನಿನ್ನ ಮಹಾರೂಪವತಿ ಪುತ್ರಿಯನ್ನು ಧನದ ರಾಜನು ಬೇಡಿ ಕಳುಹಿಸಿದ್ದಾನೆ. ಅವನು ಲೋಕವಂದ್ಯನೂ ಅತ್ಯುನ್ನತ ತೇಜಸ್ವಿಯೂ ಇಂದ್ರವೈಭವವುಳ್ಳವನೂ ಜಿನಭಕ್ತಶ್ರೇಷ್ಠನೂ ಆಗಿದ್ದಾನೆ." ೧೪. ಇದನ್ನು

ಗದ್ಯ॥ ಬೇಡಿಯಟ್ಟಿದನೆಂಬುದುಂ ಪೊಲೆಯಂಗೆ ಪೊನ್‌ದೊರೆಕೊಂಡಂತೆ ಪೆರ್ಚಿ ತಿಮಿರವ್ಯಾಧಿಯುಳ್ಳರಂತೆ ಮೆಯ್ಯರಿಯದೆ ಸಂಘಶ್ರೀ ತನ್ನ ಮನದೊಳೆ ಗುಡಿಗಟ್ಟಿ ಧನದ ಮಹಾರಾಜನಪ್ಪೊಡೆ ಋಷಿಯರ್ಗಮತಿಭಕ್ತನಾತನೆನ್ನೊಡೆಯಂ. "ಯಥಾರಾಜಾತಥಾ ಪ್ರಜಾಃ" ಎಂಬೀ ನೀತಿವಾಕ್ಯದಂತೆ ನಾಡುಂ ಬೀಡುಂ ಪ್ರಜೆಯುಂ ಪರಿಗ್ರಹಮುಂ ಮೊದಲಾಗೆಲ್ಲರುಂ ಜೈನರೆ ; ಎನ್ನಪಿಡಿದ ಬುದ್ಧಸಮಯಮೀತನ ದೇಶದೋಳಂ ಪುರದೊಳಮೆಸೆಗುಮೀತನೆಯೆನ್ನ ಮಗಳಪ್ಪ ಕಮಳಶ್ರೀಯುಂ ತಂದನಪ್ಪೊಡೆ, ಮತ್ತೆನಿಸದಾಕೆ ಕಾರಣಮಾಗಿ ಮೋಹದಿನೆನ್ನಿಷ್ಟದೈವಮಪ್ಪ ಸುಗತಂಗಂ ಭಕ್ತನಕ್ಕುಮೆನಗುಂ ಪಿರಿದಪ್ಪ ನಿರ್ವಾಹಮಾತನ ದೆಸೆಯಿಂ ದೊರೆಕೊಳ್ಗುಮೆಂದಾಳೋಚಿಸಿ ಪೆರ್ಗಡೆಗಳ್ಗಿಂತೆಂದಂ ೧೫

ಧರಣೀಶಂ ಬೇಟ್ಪಂ ಗಡ
ಮರವಿಂದಾನನೆಯನೆನ್ನಮಗಳಂ ಜಗದೊಳ್
ಪಿರಿದಪ್ಪ ಜನಕ್ಕೆನ್ನಂ
ತಿರೆ ನೋಂತರಾರ್ ಮನುಷ್ಯರೊಳ್ ನಿಶ್ಚಯದಿಂ ೧೬

ಧರಣೇಶ್ವರ ಜಿನಪಾದಾಂ
ಬುರುಹಂ ಭವ್ಯಜನವಾರಿಜಾರ್ಕಂ ಬೇಡಲ್
ತರುಣಿಯನೀಯದೆ ಮಾಣ್ಬೆನೆ
ಸಿರಿ ಬರೆ ಮೊಣಕಾಲನಾಂಪ ಗಾಂಪರುಮೊಳರೇ ೧೭

ಕೇಳಿ ಹೊಲೆಯನಿಗೆ ಹೊನ್ನು ಸಿಕ್ಕಿದಂತೆ ಉಬ್ಬಿ ತಿಮಿರ ವ್ಯಾಧಿ (ಕಜ್ಜಿ?)[1] ಯುಳ್ಳವರಂತೆ ಮೆಯ್ಯರಿಯದೆ ಸಂಘಶ್ರೀ ತನ್ನ ಮನಸ್ಸಿನಲ್ಲಿಯೇ ಬಹಳ ಉತ್ಸಾಹಗೊಂಡು (ಸಂಭ್ರಮಪಟ್ಟು) "ಧನದ ಮಹಾರಾಜನಾದರೋ ಜೈನಋಷಿಯರಿಗೆ ಅತಿ ಭಕ್ತನು ಆತನು ನನ್ನ ಒಡೆಯ. "ಯಥಾರಾಜಾ ತಥಾಪ್ರಜಾ." ಎಂಬ ನೀತಿವಾಕ್ಯದ ಹಾಗೆ ದೇಶವೆಲ್ಲ, ಊರು, ಹಳ್ಳಿ, ಪ್ರಜೆಗಳು, ಪರಿವಾರ, ಎಲ್ಲರೂ ಜೈನರೇ ; ನಾನು ಹಿಡಿದ ಬುದ್ಧಮತವು ಈತನ ದೇಶದಲ್ಲಿಯೂ ಪಟ್ಟಣದಲ್ಲಿಯೂ ಶೋಭಿಸುತ್ತಿದೆ. ಈತನೇ ನನ್ನ ಮಗಳಾದ 'ಕಮಲಶ್ರೀಯನ್ನು ತಂದುಕೊಂಡನಾದರೆ ಅಡ್ಡಿಯಿಲ್ಲದೆ ಆಕೆಯ ಕಾರಣದಿಂದ ಮೋಹದಿಂದ ನನ್ನ ಇಷ್ಟದೈವವಾದ ಸುಗತನಿಗೂ ಭಕ್ತನಾಗುವನು. ನನಗೂ ದೊಡ್ಡ ಸಂಪತ್ತು ಆತನಿಂದ ಲಭಿಸುವುದು." ಎಂದು ಆಲೋಚಿಸಿ ಹೆಗ್ಗಡೆಗಳೊಡನೆ ಹೀಗೆಂದನು ೧೫. ಸುಂದರಿಯಾದ ನನ್ನ ಮಗಳನ್ನು ರಾಜನು ಬೇಡುವವನಲ್ಲವೆ ? ನನ್ನ ಹಾಗೆ ಮನುಷ್ಯರಲ್ಲಿ ಪುಣ್ಯಶಾಲಿ ಇನ್ನು ಯಾರಿದ್ದಾರೆ? ೧೬. ರಾಜನಂ ಜಿನಪಾದಕಮಲಭಕ್ತನು, ಭವ್ಯಜನರೆಂಬ ಕಮಲಗಳಿಗೆ ಸೂರ್ಯ. (ಸಂತೋಷದಾಯಕ) ಅವನು ಕೇಳಿದರೆ ಕೊಡದೆ ಬಿಡುವೆನೆ? ಲಕ್ಷ್ಮಿ ಬಂದರೆ ಮೊಣ

---

[1] ಕಜ್ಜಿಯಿರುವವರು ಎಚ್ಚರವಿಲ್ಲದೆ ಕೆರೆದುಕೊಳ್ಳುತ್ತಿರುತ್ತಾರೆ

ಎಂದು ಪೇರ್ಚಿ ನುಡಿದು ಕಮಲಶ್ರೀಯನೊಡಗೊಂಡು ಪೋಗಿಮೆಂಬುದುಂ ಪೆರ್ಗಡೆ

ಗದ್ಯ॥ ಎಂದು ಪೇರ್ಚಿ ನುಡಿದು ಕಮಲಶ್ರೀಯನೊಡಗೊಂಡು ಪೋಗಿಮೆಂಬುದುಂ ಪೆರ್ಗಡೆಗಳ್ ಕುಮಾರಿಯನಾನೆಯನೇಱಿಸಿಕೊಂಡು ಅರಮನೆಗೆ ವಂದು ಅರಸಂಗೊಪ್ಪಿಸುಪುದುಂ ೧೮

ಅರಸು ಕನ್ನೆಯ ರೂಪಂ
ಪರಿಭಾವಿಸಿ ನೋಡಿ ನೋಡಿ ಲಾವಣ್ಯಕ್ಕೆ
ಚ್ಚರಿವಟ್ಟು ತೂಗಿ ತಲೆಯಂ
ಸುರೇಂದ್ರಸತಿಗೀಕೆ ಚೆಲ್ವಿನೊಳ್ ಮಿಗಿಲಪ್ಪಳ್ ೧೯

ಆತನ ಪೇಟ್ಕೆಗೆ ರೂಪುಪ
ಮಾತೀತಂ ಚೆಲ್ವಿನೇಟ್ಗೆಯೊಳ್ ಮೇನಕೆಗಂ
ಸೀತೆಗಮುಬ್ಬಾನನೆ ತಾಂ
ಭೂತಳದೊಳಗೀಕೆ ನಾಲ್ವೆರಲ್ಮಿಗಿಲಪ್ಪಳ್ ೨೦

ಗದ್ಯ॥ ಎಂದು ಮನದೊಳ್ ಪೊಗಟ್ಟು ಕಮಲಶ್ರೀಯುಂ ೨೧

ಸಿರಿಯೊಳ್ ನಾರಾಯಣಂ ರಂಭೆಯೊಳಮರವರಾಧೀಶ್ವರಂ ಸೀತೆಯೊಳ್ ಭೂ
ಧರವಂದ್ಯಂ ರಾಘವೇಶಂ ರತಿಯೊಳಮಳಚಿತ್ತೋದ್ಭವಂ ರೋಹಿಣೀಸೌಂ
ದರಶೋಭಾಕಾರೆಯೊಳ್ ಚಂದ್ರಮನನುನಯದಿಂ ಕೂರ್ತು ಕೂಡಿರ್ಪವೋಲ್ ಭೂ
ಧರಧೈರ್ಯಂ ಕನ್ಯೆಯೊಳ್ ಸಂತಸದಿನೊಸೆದು ಕೂಡಿರ್ದನುತ್ಸಾಹದಿಂದಂ ೨೨

ಕಾಲನ್ನು ಅಡ್ಡ ವಿಕ್ಕುವ ದಡ್ಡರೂ ಉಂಟೆ ? ೧೭. ಎಂದು ಉಬ್ಬಿ ನುಡಿದು ಕಮಲಶ್ರೀಯನ್ನು ಕರೆದುಕೊಂಡು ಹೋಗಿರೆಂದನು. ಹೆಗ್ಗಡೆಗಳು ಕುಮಾರಿಯನ್ನು ಆನೆಯ ಮೇಲೆ ಏರಿಸಿಕೊಂಡು ಅರಮನೆಗೆ ಬಂದು ಅರಸನಿಗೆ ಒಪ್ಪಿಸಿದರು. ೧೮. ಅರಸನು ಕನ್ಯೆಯ ರೂಪವನ್ನು ಪರೀಕ್ಷೆಯಾಗಿ ನೋಡಿ ನೋಡಿ ಅವಳ ಲಾವಣ್ಯಕ್ಕೆ ಆಶ್ಚರ್ಯಪಟ್ಟು ತಲೆದೂಗಿ "ಈಕೆ ಸೌಂದರ್ಯದಲ್ಲಿ ಶಚಿದೇವಿಗೂ ಮಿಗಿಲಾಗಿದ್ದಾಳೆ." ಅವನು ಹೇಳಿದಂತೆ ಇವಳ ರೂಪ ಹೋಲಿಕೆಯಿಲ್ಲದ್ದು. ಅಂದದ ಏಳಿಗೆಯಲ್ಲಿ ಇವಳು ಮೇನಕೆ, ಸೀತೆಗೂ ನಾಲ್ಕು ಬೆರಳಷ್ಟು ದೊಡ್ಡವಳು !" ೧೯-೨೦. ಎಂದು ಮನಸ್ಸಿನಲ್ಲಿಯೇ ಕಮಲಶ್ರೀಯನ್ನು ಹೊಗಳಿದನು. ೨೧. ನಾರಾಯಣನು ಲಕ್ಷ್ಮಿಯೊಡನೆ, ಇಂದ್ರನು ರಂಭೆಯೊಡನೆ, ಶ್ರೀರಾಮನು ಸೀತೆಯೊಡನೆ, ಮನ್ಮಥನು ರತಿಯೊಡನೆ, ಸುಂದರ ಶುಭಾಕಾರೆಯಾದ ರೋಹಿಣಿಯೊಡನೆ ಚಂದ್ರನು ಕೂಡಿರುವ ಹಾಗೆ ಧನದ ರಾಜನು ಉತ್ಸಾಹದಿಂದ, ಸಂತೋಷದಿಂದ ಆ ಕನ್ಯೆಯೊಡನೆ ಕೂಡಿದ್ದನು. ೨೨.

ಅಂತಿರ್ದೊಂದು ದಿನಂ ಭೂ
ಕಾಂತಂ ಜಿನಪಾದಪದ್ಮಮಧುಪಂ ರಿಪುಭೂ
ಪಾಂತಕನೊರ್ವೆಯೆ ತನ್ನೊಳ್
ಚಿಂತಿಸಿದಂ ಸಾರಮಲ್ಲದೀ ಸಂಸೃತಿಯಂ ೨೩

ಪೆಂಡಿರ ವಶವಾಗಿ ಮಹೀ
ಮಂಡಲದೊಳ್ ಪಲರುಮೆಯ್ದಿದರ್ ದುರ್ಗತಿಯಂ
ಪಂಡಿತರಪ್ಪವರದಱಿಂ
ಪೆಂಡಿರ ಬಳಸಿಂಗೆ ಬೇಗಮೆಳಸುವರಲ್ಲಂ ೨೪

ಜಿನಪಾದಸೇವೆಯಂ ಬಿ
ಟ್ಟನವರತಂ ಪೆಂಡಿರೆಱಕದಿಂದಿರ್ಪಾತಂ
ಜನನಿಯನೊಲ್ಲದೆ ರಾಕ್ಷಸ
ವನಿತೆಯನಟ್ಟಿತರ್ತು ಪೊರ್ದುವೆಗ್ಗನನಿೞಿಕುಂ ೨೫

ಜಿನಮುನಿಗಳ ಭಕ್ತಿಯನೞಿ
ದನುನಯದಿಂ ಪೆಂಡಿರೞಕದಿನಿರ್ಪಾತಂ
ಕನಕಮನೀಡಾಡಿ ಮರು
ಳ್ತನದಿಂದಿದ್ದಿಲನೆ ಕೊಳ್ವ ಮರುಳಂ ಪೋಲ್ಕುಂ ೨೬

ಹಾಗಿದ್ದು ಒಂದು ದಿನ ಭೂಕಾಂತನು, ಜಿನಪಾದಪದ್ಮಮಧುಪನು, ರಿಪುರಾಜರಿಗೆ ಆತಂಕವಾದವನು, ಇದ್ದಕ್ಕಿದ್ದಂತೆ ಸಾರವಿಲ್ಲದ ಈ ಸಂಸಾರವನ್ನು ಕುರಿತು ಚಿಂತಿಸಿದನು. ೨೩. ಹೆಂಡಿರಿಗೆ ವಶನಾಗಿ ಈ ಭೂಮಂಡಲದಲ್ಲಿ ಅನೇಕರು ಪಂಡಿತರೂ ಸಹ ದುರ್ಗತಿಯನ್ನು ಹೊಂದಿದರು. ಆದ್ದರಿಂದ ಹೆಂಡಿರ ಸ್ನೇಹಕ್ಕೆ ವಿವೇಕಿಗಳು ಬೇಗ ಆಸೆಪಡುವುದಿಲ್ಲ. ೨೪. ಜಿನಪಾದ ಸೇವೆಯನ್ನು ಬಿಟ್ಟು, ಸದಾಕಾಲ, ಹೆಂಡಿರ ಸ್ನೇಹದಿಂದಿರುವವನು ತಾಯಿಯನ್ನು ಒಲ್ಲದೆ ರಾಕ್ಷಸಿಯನ್ನು ಆಸೆಯಿಂದ ಸೇರುವ ದಡ್ಡನನ್ನು ಹೋಲುವನು. ೨೫. ಜಿನಮುನಿಗಳ ಭಕ್ತಿಯನ್ನು ಬಿಟ್ಟು ಪ್ರೇಮವಶನಾಗಿ ಹೆಂಡಿರ ಸ್ನೇಹದಲ್ಲಿರುವವನು ಚಿನ್ನವನ್ನು ಬಿಸಾಟು ದಡ್ಡತನದಿಂದ ಇದ್ದಿಲನ್ನೇ ಕೊಳ್ಳುವ ಹುಚ್ಚನನ್ನು ಹೋಲುವನು. ೨೬. ಜಿನಭಕ್ತಿಯಿಲ್ಲದವಳಲ್ಲಿ ಮನ್ಮಥವಶನಾಗಿ ಸೋತು ಕೂಡಿರುವವನು

ಜಿನಭಕ್ತಿಯಿಲ್ಲದಾಕೆಯೊ
ಳನಂಗವಶನಾಗಿ ಸೋಲ್ತು ಕೂಡಿರ್ಪಾತಂ
ತನಗೆ ಕಡುಮುಳಿವ ನರನಾ
ಮನೆಯಂ ಪೊಕ್ಕಿರ್ಪ ಗಾಂಪನಂ ನೆಱೆ ಪೋಲ್ಕುಂ ೨೭

ಗದ್ಯ॥ ನಡುಮನೆಯೊಳ್ ನಿಧಾನಮಂ ಕಂಡದನಗೆಟ್ವನಿತು ಕಾಯಕ್ಲೇಶಕ್ಕಾಱದೆ ಬಡತನದೊಳ್ನವೆವನಂ ಪಲಕಾಲಂ ದೊರೆಕೊಳ್ಳದ ಸದ್ಧರ್ಮಂ ಪುಣ್ಯದಿಂ ದೊರೆಕೊಂಡೊಡೆ ಧರ್ಮದೊಳಾದಲ್ಪದುಃಖಕ್ಕೆ ತನುವುಮಂ ಧನಮುಮನೊಡ್ಡಲಾಱದೆ ಪೆಂಡಿರ ರಾಜ್ಯದ ಧನಶ್ರೀಯೊಳಾದಲ್ಪಸುಖಕ್ಕಳಿಪಿ ನರಕದೊಳ್ ಬಿರ್ದು ಮಹಾದುಃಖದೊಳ್ ಕುದಿವರುಮೊಗ್ಗರೆಂದು ಭಾವಿಸಿ ಕಮಳಶ್ರೀಯೊಳಾದ ವಿರಹಾಗ್ನಿಯುಂ ಜಿನವಚನವಾರಿಯಿಂ ಮೆಲ್ಲನೆ ನಂದಿಸಿ ಪಲವು ತೆಱದ ಧರ್ಮಶ್ರವಣದಿಂ ಕಮಳಶ್ರೀಯುಂ ಸದ್ಧರ್ಮಕ್ಕೆ ತಂದು ಸಕಳ ಶ್ರಾವಕ ವ್ರತಂಗಳಂ ದೇವ ಗುರು ಸನ್ನಿಧಾನದೊಳ್ ಕೈಕೊಳಿಸಿ ದರ್ಶನಶುದ್ಧಿಯಪ್ಪಂತು ಮಾಡಿ ಸಂಘಶ್ರೀಯುಮಂ ಶ್ರಾವಕನಂ ಮಾಳ್ಪ ಬಗೆಯಂ ತಂದು ತನ್ನೊಳಿಂತೆಂದಂ ೨೮

ಮುಳ್ಳುಳ್ಳ ವೃಕ್ಷಮಂ ಕರ
ಮಲ್ಲದೆ ಪೊರ್ದಿದ ಲತಾಳಿ ಕಿಡುವಂತಿರೆ ಪೆಂ
ಪಿಲ್ಲದ ಕುಮಾರ್ಗಿಗಳುಮಂ
ಮೆಲ್ಲನೆ ಪೊರ್ದಿರ್ದ ನರರ ಗುಣಮುಂ ಕಿಡುಗುಂ ೨೯

ತನ್ನನ್ನು ಬಹಳವಾಗಿ ದ್ವೇಷಿಸುವವನ ಮನೆಗೆ ಪ್ರವೇಶಿಸಿದ ದಡ್ಡನನ್ನು ಹೋಲುವನು. ೨೭. ನಡುಮನೆಯಲ್ಲಿರುವ ನಿಧಿಯನ್ನು ಕಂಡು ಅದನ್ನು ಅಗೆಯುವ ಶ್ರಮಕ್ಕೆ ಶಕ್ತನಾಗದೆ, ಬಡತನದಲ್ಲಿ ಕೃಶಿಸುವವನೂ ಹಲವು ಕಾಲದಿಂದ ಲಭಿಸದಿದ್ದ ಸದ್ಧರ್ಮವು ಪುಣ್ಯವಶದಿಂದ ಲಭಿಸಿದರೆ, ಧರ್ಮದಲ್ಲಿ ಆದ ಅಲ್ಪ ದುಃಖಕ್ಕೆ ದೇಹ ಧನಗಳನ್ನು ಈಡು ಮಾಡಲಾರದೆ ಹೆಂಡಿರು, ರಾಜ್ಯ, ಧನ, ಇವುಗಳಿಂದಾಗುವ ಅಲ್ಪಸುಖಕ್ಕೆ ಆಸೆ ಪಟ್ಟು ನರಕದಲ್ಲಿ ಬಿದ್ದು ಮಹಾದುಃಖದಲ್ಲಿ ಕುದಿಯುವವರೂ ದಡ್ಡರು" ಎಂದು ಯೋಚಿಸಿ ಕಮಲಶ್ರೀಯ ದೆಸೆಯಿಂದಾದ ವಿರಹವೇದನೆಯನ್ನು ಜಿನವಚನದ ಜಲದಿಂದ ಉಪಾಯವಾಗಿ ಆರಿಸಿ ಪಲವು ರೀತಿಯ ಧರ್ಮಶ್ರವಣದಿಂದ ಕಮಲಶ್ರೀಯನ್ನು ಸದ್ಧರ್ಮಕ್ಕೆ ತಂದು ಸಕಲಶ್ರಾವಕ ವ್ರತಗಳನ್ನೂ ದೇವಗುರು ಸನ್ನಿಧಾನದಲ್ಲಿ ಕೊಡಿಸಿ ದರ್ಶನಶುದ್ಧಳಾಗುವ ಹಾಗೆ ಮಾಡಿ, ಸಂಘಶ್ರೀಯನ್ನೂ ಶ್ರಾವಕನಾಗಿ ಮಾಡುವ ಯೋಚನೆಯಿಂದ ತನ್ನಲ್ಲಿಯೇ ಹೀಗೆ ಯೋಚಿಸಿದನು. ೨೮. ಮುಳ್ಳಿರುವ ಮರವನ್ನು ಯತ್ನವಿಲ್ಲದೆ ಸೇರಿದ ಬಳ್ಳಿಗಳ ಸಮೂಹ ಕೆಡುವ ಹಾಗೆ ಅಭ್ಯುದಯವಿಲ್ಲದ ಕುಮಾರ್ಗಿಗಳನ್ನು ಹೊಂದಿದ ಮನುಷ್ಯರ ಗುಣವೂ ಕೆಡುತ್ತದೆ. ೨೯. ಎಂಜಲಗುಳಿ

ಬಿಡದೆಂಜಲಕುಟಿಯಿಂ ನೇ
ರ್ಪಡೆ ಪೊರ್ದಿದ ವಾರಿ ಪೊಲ್ಲದೆನಿಪವೊಲಳಿಪಿಂ
ಕಡುಪೊಲ್ಲರಪ್ಪ ಮಾನವ
ರೊಡಗೂಡಿದ ಮಾನಿಸರ್ಗೆ ಸದ್ಗುಣವಳಿಗುಂ ೩೦

ಗದ್ಯ॥ ಅದು ಕಾರಣದಿಂ ಪೆಂಡತಿಗೆ ಕೂರ್ಪಾತನತ್ತೆಯೊಡನೆ ಕಿರ್ಚುವೊಕ್ಕನೆಂಬ ನಾಣ್ಣುಡಿಯಂ ನನ್ನಿಮಾಡಿ, ಕಿಮ್ಮನಪ್ಪ ಕುಮತಪ್ರೀತನುಂ ದುಷ್ಕರ್ಮ ಸಮೇತನುಮಪ್ಪ ಸಂಘಶ್ರೀಯಂ ಕಮಳಶ್ರೀಯ ಮೋಹದಿಂ ಪಿಡಿದು ಕೊಂಡಾಡಿ ಸುಗತಿಯಿಂ ಕೆಟ್ಟು ಸದ್ಧರ್ಮಮಂ ಬಿಟ್ಟು ದುರ್ಗತಿಗೆ ಸಲ್ವಕಜ್ಜಮಂ ಬಗೆಯಲಾಗದಾತನುಮಂ ಧರ್ಮದೊಳ್ ದೃಢನಪ್ಪಂತು ಮಾಡಿ ಬಳಿಕ್ಕಾತನಮೇಲೆ ಮೋಹಮಂ ಮಾಡುವೆನೆಂದು ದಿವಸಕ್ಕಂ ಕ್ರಮಕ್ರಮದಿಂ ನಿರ್ವೃತಿಯ ಸೈದಾರಿಯೆನಿಪ ಜಿನಾಗಮಮನಿಂತೆಂದು ಪೇಟ್ದಂ ೩೧

ಆರಯ್ದು ನೋಡಿ ನಾಡೆ ವಿ
ಚಾರಿಸಿ ಸದ್ಧರ್ಮಮಪ್ಪುದಂ ಪಿಡಿಯದೆ ನಿ
ಷ್ಕಾರಣಮವಿಚಾರತೆಯಿಂ
ಸಾರಂಗೆಟ್ಟಿರ್ದ ಧರ್ಮಮಂ ಪೊರ್ದುವುದೇ ೩೨

ಯೊಳಕ್ಕೆ ಹರಿದ ನೀರು ಕೆಟ್ಟದ್ದಾಗುವ ಹಾಗೆ ಆಸೆಯಿಂದ ಕಡು ನೀಚರಾದ ಮಾನವರ ಸಂಗಡ ಸೇರಿದವರ ಸದ್ಗುಣವು ನಾಶಹೊಂದುತ್ತದೆ. ೩೦. ಆದ ಕಾರಣ ಹೆಂಡತಿ ಯನ್ನು ಪ್ರೀತಿಸುವವನು ಅತ್ತೆಯೊಡನೆ ಬೆಂಕಿ ಹೊಕ್ಕನೆಂಬ ಗಾದೆಯನ್ನು ಸತ್ಯಮಾಡಿ, ವೃಥಾ ಕುಮಂತಪ್ರೀತನೂ ದುಷ್ಕರ್ಮಿಯೂ ಆದ ಸಂಘಶ್ರೀಯನ್ನು ಕಮಲಶ್ರೀಯ ಮೇಲಿನ ಮೋಹದಿಂದ ಹಿಡಿದು ಕೊಂಡಾಡಿ ಸುಗತಿಯನ್ನು ಕೆಡಿಸಿಕೊಂಡು ಸದ್ಧರ್ಮ ವನ್ನು ಬಿಟ್ಟು, ದುರ್ಗತಿಗೆ ಸಲ್ಲುವ ಕೆಲಸವನ್ನು ಯೋಚಿಸಲೂ ಬಾರದು, ಆತನನ್ನೂ ಧರ್ಮದಲ್ಲಿ ದೃಢಚಿತ್ತನಾಗುವಂತೆ ಮಾಡಿ ಆತನ ಮೇಲೆ ಪ್ರೀತಿ ಮಾಡುವೆನೆಂದು ದಿನದಿನಕ್ಕೆ ಕ್ರಮವಾಗಿ ಮೋಕ್ಷದ ನೇರ ದಾರಿಯೆನಿಸುವ ಜಿನಾಗಮವನ್ನು ಹೀಗೆ ಹೇಳಿದನು. ೩೧. ಪರೀಕ್ಷಿಸಿ ನೋಡಿ ಚೆನ್ನಾಗಿ ವಿಚಾರಮಾಡಿ ಸದ್ಧರ್ಮವಾದುದನ್ನು ಹಿಡಿಯದೆ ನಿಷ್ಕಾರಣವಾಗಿ ಅವಿಚಾರದಿಂದ ಸಾರಹೀನವಾದ ಧರ್ಮವನ್ನು ಸೇರು ವುದೆ ? ೩೨. ವ್ರತದ ಆಚರಣೆಗೆ ಹಿಂತೆಗೆದು ಅತಿಶಯವಾದ ಶ್ರೇಷ್ಠಸದ್ಧರ್ಮವನು

ವ್ರತದ ನೆಗಟ್ಟ್ಗೆ ಬೆಂಬಿ
ರ್ದತಿಶಯು ಸದ್ಧರ್ಮರತ್ನಮಂ ಬಿಟ್ಟು ಮಹೋ
ನ್ನತಿಯಿಂ ಕುಧರ್ಮಮಂ ಸಂ
ತತಮಳಿಪಿಂ ಪಿಡಿದು ನಲಿವ ಮನುಜನೆ ಗಾಂಪಂ ೩೩

ತನ್ನಯ ಮನವ ವಿಚಾರಿಸೆ
ತನ್ನ ಮನಂಬೊಕ್ಕ ಬಳಿಕೆ ಮುಕ್ತಿಯನೀವ
ತ್ಯುನ್ನತಧರ್ಮಮನಱಿವಿಂ
ಸನ್ನುತಮತಿಯಾಗಿ ಪಿಡಿಯದಾತನೆ ಗಾಂಪಂ ೩೪

ಗದ್ಯ॥ ಊರಾವುಗಳೋಡುವುದಂ ಕಂಡು ಕುರುಡಾವುಂ ಓಡಿತೆಂಬಂತೆ ವಿಜ್ಞಾನಹೀನರುಂ ದುರ್ಗತಿ ಭಾಜನರುಂ ಅಘಸಮೇತರುಮವಿಚಾರಿಗಳುಮಪ್ಪ ದುರ್ಮತಿಗಳಂ ಕಂಡು ಬೆಳಬೆಂ ಜನನಾಗಿ ಕೊಲೆಯೊಳ್ ಪೊರ್ದಿದ, ಪುಸಿಯೊಳೊಡಂಬಟ್ಟ, ಕಳವಿನೊಳ್ ಕೂಡಿದ ಪರಸ್ತ್ರೀಯ ಕೂಳೊಂದಿದ ಪರಿಗ್ರಹಾಪೇಕ್ಷೆಯಿಂ ಮತಿಗೆಟ್ಟು ಮುಱುಗುವ ಕುತ್ಸಿತ ಧರ್ಮಮುಮಂ, ರಾಗ ದ್ವೇಷಾದಿ ದೋಷಯುಕ್ತನುಂ ವನಿತಾಸಕ್ತನುಂ, ರೌದ್ರಾತ್ಮನುಂ ನಿರ್ದಯನುಮಪ್ಪ ದೇವ ನುಮಂ, ಪೆಸರಿಲ್ಲದುಪದೇಶಮಿಲ್ಲದ ನಿಯಮಮಿಲ್ಲದ ನಿಷ್ಠೆಯಿಲ್ಲದ, ದುರಾಚಾರದೊಳ್ ಪೊರ್ದಿದ ವ್ರತಮುಮಂ, ಅಭಿಮಾನಮಿಲ್ಲದ ಧೈರ್ಯಮಿಲ್ಲದ ಶಾಂತರೂಪಲ್ಲದ ಕೋಪದೊಳ್

ಬಿಟ್ಟು ಮಹೋನ್ನತಿಯಿಂದ (ನೀಚ) ಕೆಟ್ಟ ಧರ್ಮವನ್ನು ಸಂತತವಾಗಿ ಆಸೆಯಿಂದ ಹಿಡಿದು ಸಂತೋಷಿಸುವ ಮನುಷ್ಯನೇ ಗಾಂಪ ೩೩. ತನ್ನ ಮನದ ವಿಚಾರದಿಂದ ಆಧರ್ಮವನ್ನು ಹೊಕ್ಕ ಬಳಿಕ. ಮುಕ್ತಿಯನ್ನು ಕೊಡುವ ಅತ್ಯುನ್ನತವಾದ ಧರ್ಮ ವನ್ನು ತಿಳಿವಳಿಕೆಯಿಂದ ಬುದ್ಧಿವಂತನಾಗಿ ಹಿಡಿಯದವನೇ ದಡ್ಡ. ೩೪. ಊರಿನ ಹಸುಗಳು ಓಡುವುದನ್ನು ಕಂಡ ಕುರುಡ ಹಸುವೂ ಓಡಿತೆಂಬ ಹಾಗೆ ವಿಜ್ಞಾನಹೀನರೂ ದುರ್ಗತಿಗೆ ಪಾತ್ರರೂ ಪಾಪಸಮೇತರೂ ವಿಚಾರಹೀನರೂ ಆದು ದುರ್ಮತಿಗಳನ್ನು ಕಂಡು ಬೆಪ್ಪನಾಗಿ. ಕೊಲೆಯಲ್ಲಿ ಹೊಂದಿದ, ಸುಳ್ಳಿ ಗೊಡಂಬಟ್ಟ ಕಳ್ಳತನದಲ್ಲಿ ಕೂಡಿದ. ಪರಸ್ತ್ರೀಯರಲ್ಲಿ ಸಂಸರ್ಗಹೊಂದಿದ, ಸಂಪಾದನೆಯ ಅಪೇಕ್ಷೆಯಿಂದ, ಬುದ್ಧಿಕಳೆದುಕೊಂಡು ಕುದಿಯುವ ನೀಚಧರ್ಮವನ್ನು ರಾಗದ್ವೇಷಾದಿ ದೋಷಗಳಿಂದ ಕೂಡಿದವನೂ ಸ್ತ್ರೀಲೋಲನೂ ಕ್ರೂರಾತ್ಮನೂ ನಿರ್ದಯನೂ ಆದ ದೇವರನ್ನೂ, ಹೆಸರಿಲ್ಲದ. ಉಪದೇಶವಿಲ್ಲದ. ನಿಯಮವಿಲ್ಲದ, ನಿಷ್ಠೆಯಿಲ್ಲದ, ದುರಾಚಾರದಲ್ಲಿ ಹೊಂದಿದ ವ್ರತವನ್ನೂ ಅಭಿಮಾನವಿಲ್ಲದ, ಧೈರ್ಯ ವಿಲ್ಲದ, ಶಾಂತರೂಪು ಅಲ್ಲದ, ಕೋಪದಿಂದ ಕೂಡಿದ, ಮಾಯಾವಿಯಾಗಿ ಇಷ್ಟಬಂದ

ಕೂಡಿದ ಮಾಯಾವಿಯಾಗಿ ಮೆಚ್ಚಿದಂತೆ ನೆಗಟ್ಟ ತಪಮುಮಂ, ಕೊಂಡಾಡುವ, ಕೈಕೊಳ್ವ ಕೈಮುಗಿವ, ಸುಗತಿವಡೆವೆನೆಂಬ ಮಾನಿಸಂ ಕಟ್ಟಗ್ಗನಕ್ಕುಮದೆಂತೆಂದೊಡೆ, ಮತ್ತಿಯೆಲೆಯಂ ತಾಂಬೂಲದೆಲೆಯೆಂದು ಮೆಲ್ದುಪಲ್ಲಱಿಗಾಸೆಗೆಯ್ವನುಮಂ ಬೂದಿಯ ಬೆಳ್ಪುಮಂ ನುಣ್ಪುಮಂ ಕಂಡು ಕಳವೆಯಕ್ಕಿಯ ಪಿಟ್ಟೆಂದು ಕಾವಲಿಯೊಳಿಱಿದಾಗನಡುವೆನೆಂಬನುಮಂ ಪೋಲ್ಕುಮಿಂತು ೩೫

ಕಸಮಂ ಸೋದಿಸಿ ಮೊಣದುತ್ತು ಮನೆಯುಂ ಸದ್ಭಾರ್ಯೆಯುಂ ಬಿಟ್ಟು
ಸಂಕಿಸದೋರಂತಿರೆ ಕಾದು ಪಟ್ಟು ಪದೆಪಿಂ ಮಣ್ಣಿಕ್ಕಿ ಲೇಸಾಗಿ ಬಿ
ತ್ತಿಸಮಂತೊಯ್ಯನೆ ಧಾನ್ಯಮಂ ಪಡೆವವೊಲ್ ಸದ್ಧರ್ಮದಿಂದಾದ ಬೇ
ವಸಮಂ ಸೈರಿಸಿ ನಿಂದು ಮುಕ್ತಿಸುಖಮಂ ಕೈಕೊಳ್ವುದಾನಂದದಿಂ ೩೬

ಗದ್ಯ॥ ನೀರೊಳಗಣ ಮರದಂತೆ ಮೆಚ್ಚಿದಂತು ಪರಿಯದೆ ಕಡುವೆಳೆದ ಮರದಂತೆ ಮನದೊಳಲ್ಲಾಡದೆ ಪಂದೆಯಪ್ಪನಂಕದಂತೆ ಪಲವಂ ನೆನೆಯದೆ ಕಲಿಯಪ್ಪ ಮೂರ್ಖನಂತೆ ಮೆಯ್ಮಱೆಯದೆ ಪಲಕಾಲದ ವೃದ್ಧನಂತೆ ಮತಿಗಿಡದೆ ಪಾಣ್ಬೆಯಪ್ಪ ಸಜ್ಜನೆಯಂತೆ ಸಿಡಿಮಿಡಿಗೊಳ್ಳದೆ, ಪೊಲೆಬೂತಿನಂತೆ ಕಿಡೆನುಡಿಯದೆ ಪಾದರಸದಂತೆ ನೆಲೆಗಟ್ಟು ಪರಿಯದೆ ಬೆಂದ ಮುತ್ತುಗಳಂತೆ ಪಟ್ಟು

ಹಾಗೆ ಮಾಡುವ ತಪಸ್ಸನ್ನೂ ಹೊಗಳುವ, ಅಂಗೀಕರಿಸುವ, ಕೈಮುಗಿಯುವ, ಸಂಗತಿಯನ್ನು ಪಡೆಯುವೆನೆಂಬ ಮನುಷ್ಯನು ಶುದ್ಧ ದಡ್ಡನಾಗುವನು, ಅದು ಹೇಗೆಂದರೆ ಮತ್ತಿಯ ಎಲೆಯನ್ನು ತಾಂಬೂಲದ ಎಲೆಯೆಂದು ಭ್ರಮಿಸಿ ಮೆದ್ದು, ಹಲ್ಲಿನ ಕರೆಗೆ ಆಸೆ ಪಡುವವನನ್ನೂ ಬೂದಿಯ ಬಿಳುಪನ್ನೂ ನುಣುಪನ್ನೂ ನೋಡಿ ಇದು ನೆಲ್ಲಕ್ಕಿಯ ಹಿಟ್ಟೆಂದು ಭಾವಿಸಿ ಕಾವಲಿಯೊಳಗೆ ಹಾಕಿ ಕಡುಬನ್ನು ಮಾಡುವೆನೆಂಬವನನ್ನು ಹೋಲುವನು. ೩೫. ಹೀಗೆ ಕಸವನ್ನು ಶೋಧಿಸಿ ಬಿಡದೆ ಉತ್ತು, ಮನೆಯನ್ನೂ ಒಳ್ಳೆಯ ಹೆಂಡತಿಯನ್ನೂ ಬಿಟ್ಟು ಸಂದೇಹಪಡದೆ ಒಂದೇ ಸಮನೆ ಕಾವಲುಮಾಗಿ ಆಸೆಯಿಂದ ಮಣ್ಣು ಹಾಕಿ ಚೆನ್ನಾಗಿ ಬಿತ್ತಿ ಕ್ರಮವಾಗಿ ಧಾನ್ಯವನ್ನು ಪಡೆಯುವ ಹಾಗೆ ಸದ್ಧರ್ಮದ ಆಚರಣೆಯಲ್ಲಿ ಆದ ಕಷ್ಟವನ್ನು ಸೈರಿಸಿ ನಿಂತು ಆನಂದದಿಂದ ಮುಕ್ತಿ ಸುಖವನ್ನು ಪಡೆಯಂತಕ್ಕದ್ದು. ೩೬. ಅಲ್ಲದೆ ನೀರಿನೊಳಗಿರುವ ಮರದ ಹಾಗೆ, ಇಷ್ಟ ಬಂದ ಹಾಗೆ ಓಡದೆ, ಹೆಚ್ಚಾಗಿ ಬೆಳೆದ ಮರದಂತೆ ಮನಸ್ಸಿನಲ್ಲಿ ಅಲ್ಲಾಡದೆ (ಚಂಚಲನಾಗದೆ) ಹೇಡಿಯ ಕಾಳಗದಂತೆ ಹಲವನ್ನು ಯೋಚಿಸದೆ, ಶೂರನಾದ ಮೂರ್ಖನಂತೆ ಮೈಮರೆಯದೆ (ಎಚ್ಚರ ತಪ್ಪದೆ) ಬಹಳ ವಯಸ್ಸಾದ ಮುದುಕನಂತೆ ಬುದ್ಧಿ ಕಳೆದುಕೊಳ್ಳದೆ, ಸ್ವೈರಿಣಿಯಾದ ಕುಲಸ್ತ್ರೀಯಂತೆ ಸಿಡಿಮಿಡಿಗೊಳ್ಳದೆ, ಕೆಟ್ಟ ನಾಚಿಕೆಗೇಡಿಯಂತೆ ಕೆಟ್ಟ ಮಾತನಾಡದೆ ಪಾದರಸದ ಹಾಗೆ ನೆಲೆಯನ್ನು ಕಳೆದುಕೊಂಡು ಹರಿದಾಡದೆ (ಓಡದೆ) ಬೆಂದ ಮುತ್ತುಗಳ ಹಾಗೆ ಗರ್ವಪಡದೆ, ಬಕದ ಹಾಗೆ

ವೆರ್ಚದೆ ಬಕದಂತೆ ಪೊಲ್ಲಮೆಯಂ ಪಾರದೆ ಬೇಸಗೆಯ ಪೊನಲಂತೆ ಕ್ಷಣಿಕನಾಗದೆ ಪಗರಣಿಗನಂತೆ ಬೇಳಂಬವಾಗದೆ ಪುಲ್ಲೆಯ ನೋಟದಂತೆ ಸಂಚಳನಾಗದೆ ಕಪ್ಪುರ ನನ್ನಿಯಂತೆ ಕಿಡದೆ ಕುಲ ಜನಂ ಕಂಡ ಪೊಲೆಯನಂತೆ ಪುಸಿಯದೆ ನಿಂದು ಸುವ್ರತಂಗಳಂ ತಾಳ್ದಿ ಪರತ್ರೆಯ ಮಹಾಸುಖಮಂ ಪಡೆವುದು ೩೭

ಕಿಮ್ಮನೆ ಮೂರ್ಖರ ಪೇಟ್ಕೆಗೆ
ತಮ್ಮ ಮನಂ ಸೋಲ್ತು ಸುವ್ರತಕ್ಕಾಱದೆ ಕಾ
ಡೆಮ್ಮೆಯ ತೆಱದಿಂ ಮಲೆವರ್
ಕಿಮ್ಮನೆ ಸದ್ದರ್ಶನಕ್ಕೆ ಮುನಿವರ್ ಧೂರ್ತರ್ ೩೮

ಪಿಡಿಯಚ್ಚುವಿಡಿದು ಕಿಮ್ಮನೆ
ಜಡಮತಿಗಳ್ ತಮ್ಮ ಬೆಸನಮಂ ಸಲಿಸುವುದಂ
ಬಿಡಲಾಱದೆ ನಿರ್ವೃತಿಯಂ
ಕಿಡಿಸಿ ಕುಕಿಲ್ದೆಯ್ದೆ ಪೊರ್ದುವರ್ ದುರ್ಮತಮಂ ೩೯

ಮುಱುವಿಕ್ಕಿ ಪೊರೆದು ಗೊಡ್ಡಂ
ಕಱೆದೊಡೆ ಪಾಲುಂಟೆ ದೋಷಿಯಪ್ಪಾತನುಮಂ
ಪೆಱಪಿಂಗದೆ ಪಿಡಿದಿರ್ದೊಡೆ
ನೆಱೆ ನಿರ್ವೃತಿಸುಖಮನೆಯ್ದೆ ಪೇಟ್ಪಡೆದಪರೇ ೪೦

ಕೆಟ್ಟದ್ದನ್ನು ಗಮನಿಸದೆ, ಬೇಸಗೆಯ ಪ್ರವಾಹದಂತೆ ಕ್ಷಣಿಕನಾಗದೆ, ಹಗರಣದ ನಟರಂತೆ ಆಸೆಪಡದೆ, ಹುಲ್ಲೆಯ ನೋಟದಂತೆ ಚಂಚಲನಾಗದೆ, ಅಲ್ಪರ ಸತ್ಯದಂತೆ ಕೆಡದೆ, ಕುಲಸ್ಥನನ್ನು ಕಂಡ ಹೊಲೆಯನ ಹಾಗೆ ಸುಳ್ಳಾಡದೆ, ನಿಂತು ಶ್ರೇಷ್ಠವಾದ ವ್ರತಗಳನ್ನು ಧರಿಸಿ ಪರಲೋಕದ ಮಹಾಸುಖವನ್ನು ಪಡೆಯುವುದು. ೩೭. ಮೂರ್ಖರ ಹೇಳಿಕೆಗೆ ತಮ್ಮ ಮನಸ್ಸನ್ನು ವೃಥಾ ಸೋತು ಸುವ್ರತಕ್ಕೆ ಶಕ್ತನಾಗದೆ ಕಾಡೆಮ್ಮೆಯ ರೀತಿಯಾಗಿ ಕೊಬ್ಬುವವರು, ಸದ್ದರ್ಶನಕ್ಕೆ ನಿಷ್ಕಾರಣವಾಗಿ ಮುನಿಸಿಕೊಳ್ಳುವವರು, ಧೂರ್ತರು. ೩೮. ದಡ್ಡರು ತಮ್ಮ ವ್ಯಸನಗಳನ್ನು ತೃಪ್ತಿಗೊಳಿಸುವುದನ್ನು ಬಿಡಲಾರದೆ ವೃಥಾ ಪಟ್ಟುಹಿಡಿದು ನಿರ್ವೃತಿ ಸೌಖ್ಯವನ್ನು ಕೆಡಿಸಿ ಕೂಗಾಡಿ ದುರ್ಮತವನ್ನು ಸೇರುತ್ತಾರೆ. ೩೯, ಮಿಡ್ಡಿ, ಕಲಗಚ್ಚನ್ನು ಕೊಟ್ಟು ಸಾಕಿ ಗೊಡ್ಡು ಹಸುವನ್ನು ಕರೆದರೆ ಹಾಲು ಸಿಕ್ಕುತ್ತದೆಯೆ ? ದೋಷಿಯಾದವನನ್ನು ಬಿಡದೆ ಆಶ್ರಯಿಸಿಕೊಂಡಿದ್ದರೆ, ಅಣ್ಣಾ, ನಿರ್ವೃತಿ ಸುಖವನ್ನು ಪಡೆಯುತ್ತಾರೆಯೆ ? ೪೦. ಒರೆಯಿಟ್ಟು ಈ

ಒರೆಗೀ ಪೊನ್ಗೀ ಪೊನ್ನಿನ
ಪಿರಿದೀ ಪೊನ್ನಿದು ಸಮಂತು ಕಿಱಿದೆಂದಾರ
ಯ್ದುರು ಮುದದಿನಱಿಯದಾಡುವ
ಪರದನವೊಲ್ ದೈವಮಱಿಯದವನುಂ ಕಿಡುಗುಂ ೪೧

ಗದ್ಯ॥ ಪದನಱಿದು ಬಿತ್ತದ ಬೆಳಸುಂ, ಪ್ರಾಯಮಱಿದು ಪಡೆಯದ ಸೂಳೆಯ ಪಡಪುಂ, ಲಾಭಮಱಿಯದಾಡಿದ ಪರದುಂ, ಪಾಲಱಿದುಮಾಱುಗೊಳ್ಳದ ಪಯನುಂ, ವಿಚಾರಮಱಿಯದೆ ತಿರ್ದುವ ತಿರ್ದುಂ, ಜಾತಿಯಱಿಯದೆ ಕುಡುವ ಕೂಸುಂ, ಬೀರಮಱಿಯದೆ ಪೊರೆದ ಬಂಟನುಂ ಶೀಲಮಱಿಯದ ಪೆಂಡಿರ ಕೂರ್ಮೆಯುಂ, ಪೊನ್ನಳವಿಯಱಿಯದಾತನ ಪರದುಂ, ರುಚಿಯಱಿಯದೂಟಮುಂ ಬಡತನಮಱಿಯದ ಬೇಟಮುಂ, ಶಕ್ತಿಯಱಿಯದ ಪೊಱೆಯುಂ, ಪೆಸರಱಿಯದಂಗೆ ಕೊಟ್ಟ ಸಾಲಮುಂ, ಪೊಲನಱಿಯದ ತೋಂಟಮುಂ, ಮನಮಱಿಯದಾಟಮುಂ, ಸಲುಗೆಯಾದವನ ಪುರುಡುಂ ದೇವನುಮಂ ಧರ್ಮಮುಮಂ ವ್ರತಮುಮನಱಿಯದೆ ಮೂಗಂ ಪೋಲೆತ್ತಿ ಪೊಟ್ಟೆಱಿಸಿ ದುರ್ಮಾರ್ಗಮಂ ತನ್ನಿಚ್ಛೆಗೆ ನಚ್ಚಿ ಮೆಚ್ಚಿ ಕೊಂಡಾಡಿ ಮುದದಿಂದೆನ್ನ ಪಿಡಿದುದೆ ದೈವಮೆನ್ನ ಮಾಡುವುದೆ ಧರ್ಮಮೆನ್ನ ನೆಗೞ್ದುದೆ ತಪಮೆಂದು ಮುಯ್ಯಂ ನೋಡುವ ಮಾನಿಸರುಂ ತುದಿಯೊಳ್ ಮಹಾದುಃಖಮನೆಯ್ದುವರಲ್ಲದೆ ಸುಖಮನೆಯ್ದುವರಲ್ಲರಿಂತು ೪೨

ಹೊನ್ನಿಗೂ ಆ ಹೊನ್ನಿಗೂ ಇಷ್ಟು ಶ್ರೇಷ್ಠ, ಇಷ್ಟು ಕೀಳು, ಎಂದು ವಿಚಾರಮಾಡಿ ತಿಳಿಯದೆ ಸಂಮ್ಮನೆ ಮಾತಾಡುವ ವ್ಯಾಪಾರಿಯ ಹಾಗೆ ದೈವವನ್ನು ತಿಳಿಯದವನೂ ಕೆಡುತ್ತಾನೆ, ೪೧. ಹದವನ್ನು ತಿಳಿದು ಬಿತ್ತದ ಬೆಳೆಯೂ ಪ್ರಾಯವನ್ನು ಅರಿತು ಕೊಂಡು ಸಂಪಾದನೆ ಮಾಡದ ಸೂಳೆಯ ಲಾಭವೂ ಲಾಭವನ್ನು ತಿಳಿಯದೆ ಮಾಡಿದ ವ್ಯಾಪಾರವೂ, ಹಾಲು ತಿಳಿದು ಮಾರಾಟ ಮಾಡದ ಹಯನೂ, ವಿಚಾರವನ್ನು ಅರಿಯದೆ ತಿದ್ದುವ ಶಿಕ್ಷಣವೂ ಜಾತಿ ಗೊತ್ತಿಲ್ಲದೆ ಕೊಡುವ ಕೂಸೂ, ವೀರತನವನ್ನು ಪರಿಕಿಸದೆ ಸಾಕಿದ ಭಂಟನೂ, ಶೀಲವರಿಯದ ಹೆಂಡಿರ ಪ್ರೇಮವೂ ಹೊನ್ನಿನ ಬೆಲೆಯನ್ನು ತಿಳಿಯದವನ ವ್ಯಾಪಾರವೂ, ರುಚಿ ತಿಳಿಯದ ಊಟವೂ, ಬಡತನವನ್ನು ತಿಳಿಯದ ಪ್ರೇಮವೂ, ಶಕ್ತಿಯನ್ನು ತಿಳಿಯದ ಹೊರೆಯೂ ಹೆಸರು ತಿಳಿಯದವನಿಗೆ ಕೊಟ್ಟ ಸಾಲವೂ, ದಾರಿತಿಳಿಯದ ತೋಟವೂ, ಮನಸ್ಸನ್ನು ತಿಳಿಯದ ಆಟವೂ ಸಲುಗೆಯಾಗಿರುವವನ ಸ್ಪರ್ಧೆಯೂ, ದೇವ, ಧರ್ಮ, ವ್ರತಗಳನ್ನು ತಿಳಿಯದೆ ಮೂಗೇರಿಸಿ ಹೊಟ್ಟೆಬ್ಬಿಸಿ (ವ್ಯರ್ಥಚರ್ಚೆಮಾಡಿ) ದುರ್ಮಾರ್ಗವನ್ನು ತನ್ನ ಇಷ್ಟದಂತೆ ನಂಬಿ ಮೆಚ್ಚಿ ಕೊಂಡಾಡಿ ಸಂತೋಷದಿಂದ "ನಾನು ಹಿಡಿದದ್ದೇ ದೈವ, ನಾನು ಮಾಡುವುದೇ ಧರ್ಮ ನಾನು ಮಾಡಿದುದೇ ತಪಸ್ಸು" ಎಂದು ಜಂಬ ಮಾಡುವ ಮನುಷ್ಯರೂ ಕೊನೆಯಲ್ಲಿ ಮಹಾದುಃಖವನ್ನು ಹೊಂದುವರಲ್ಲದೆ ಸುಖವನ್ನು ಹೊಂದುವುದಿಲ್ಲ;

ತೆಂಗಿನಕಾಯದೊಂದು ಕಠಿನತ್ವಮನೊರ್ವೆಯೆ ಕಂಡು ಪೊಲ್ಲದೆಂ
ದೇಂ ಗಳ ಬೆಚ್ಚಿ ಭೀರುತನದಿಂ ಬಿಡದೊಯ್ಯನೆ ಮೂಸಿ ನೋಡಿ ನಾ
ಯ್ಪೆಂಗಿದುದೆಂಬ ಬೆಳ್ತನಮನೊಯ್ಯನೆ ಮಾಡದೆ ಬುದ್ಧಿವಂತರುಂ
ಪಿಂಗದೆ ಪೊರ್ದಿ ಮೆಲ್ಲನೆ ವಿಚಾರಿಸಿ ಪೊರ್ದುವುದಾಪ್ತನಪ್ಪನಂ ೪೩

ಗದ್ಯ॥ ದಕ್ಕಿನೊಳೆ ಮಾಡಿದ ಮನೆ ಸೊಕ್ಕಿದಾನೆ ಸೋಂಕೆ ಕೆಡೆದು ಬೀಟ್ಪಂತೆ ದೋಷಿಯಪ್ಪ ದೇವನಂ ಪಿಡಿದ ಮಾನಿಸನುಂ ಕರ್ಮರಾಜನೊಡ್ಡಂ ಮಾರ್ಕೊಳಲಾಱದೆ ನರಕದೊಳ್ ತಲೆ ಕೆಳಗಾಗಿ ಬೀಟ್ಗುಮಿಂತು ೪೪

ಮಿಳಿಯೊಳ್ ಮಾತಂಗಮಂ ಕಟ್ಟಿದೊಡೆ ನಿಲುಗುಮಂತಲ್ಲದಂದು ಕೂರ್ಪಂ
ಬಲದಿಂ ಮುಯ್ವಾಂತು ಪೇರಾನೆಯುನವಯದಿಂ ಪಂಜಿಯೊಳ್ ಕಟ್ಟಿದಂದು
ಮ್ಮಳದಿಂ ಮತ್ತದ್ವಿಪಂ ನಿಂದಪುದೆ ಮರುಳೆ ಸದ್ಧರ್ಮದಿಂದಲ್ಲದುರ್ವೀ
ತಳದೊಳ್ ದುಷ್ಕರ್ಮಬಂಧಂ ಕಿಡಲಱಿಗುಮೆ ಮತ್ತನ್ಯ ಧರ್ಮಂಗಳಿಂದಂ ೪೫

ಗದ್ಯ॥ ಕಾಟ್ಗಿಚ್ಚಿಗಂಜಿದಾತಂ ಪೆರ್ಮಡುವಂ ಪೊಕ್ಕೊಡೆ ಬಾಟ್ಗುಮುದ್ಧತಿಯಿಂ ಕರಂಡಮಂ ಪೊಕ್ಕೊಡೆ ಕಟಿಮುಟಿಯಾಗಿ ಬೇಗುಮಂತೆ ನರಕ ತಿರಿಕಂಗಳೊಳ್ ಕರಟದ ಕದಿರಂತೆ ತಿರಿಪುವ

೪೨. ಒಂದು ನಾಯಿ ತೆಂಗಿನಕಾಯಿನ ಕಾಠಿಣ್ಯವನ್ನು ತಟ್ಟನೆ ಕಂಡು ಕೆಟ್ಟದ್ದೆಂದು ಹೆದರಿ, ಭೀರುತನದಿಂದ ಕೂಡಲೆ ಬಿಡದೆ ಮೆಲ್ಲಗೆ ಮೂಸಿ ನೋಡಿ ಹೊರಟುಹೋಯಿ ತೆಂಬಂತೆ ಬೆಪ್ಪುತನವನ್ನು ಮಾಡದೆ ಬುದ್ಧಿವಂತರು ಹಿಮ್ಮೆಟ್ಟದೆ ಸೇರಿ ಮೆಲ್ಲನೆ ಎಲ್ಲವನ್ನೂ ವಿಚಾರ ಮಾಡಿ ಆಪ್ತನಾದವನನ್ನು ಹೊಂದಬೇಕು. ೪೩. ಕಡ್ಡಿಗಳಿಂದ ಮಾಡಿದ ಮನೆ ಕೊಬ್ಬಿದ ಆನೆ ಸೋಕಿದರೆ ಮುರಿದು ಬೀಳುವಂತೆ ದೋಷಿಯಾದ ದೇವನನ್ನು ಹಿಡಿದ (ಆಶ್ರಯಿಸಿದ) ಮನುಷ್ಯನೂ ಕರ್ಮರಾಜನ ವ್ಯೂಹವನ್ನು ಎದುರಿಸಲಾರದೆ ನರಕದಲ್ಲಿ ತಲೆಕೆಳಕಾಗಿ ಬೀಳುವನು, ೪೪. ಹಗ್ಗದಿಂದ ಆನೆಯುನ್ನು ಕಟ್ಟಿದರೆ ನಿಲ್ಲುವುದು. ಹಾಗಲ್ಲದೆ ಶೂರನಾದವನು ಬಲದಿಂದ ಇದಿರು ನುಗ್ಗಿ ಹಂಜಿಯಲ್ಲಿ ದೊಡ್ಡ ಆನೆಯನ್ನು ಕಷ್ಟದಿಂದ ಕಟ್ಟಿದರೆ ಮದಿಸಿದ ಆನೆಯು ಬೇಗನೆ ನಿಲ್ಲುವುದೇ ? ಮರುಳೆ ! ಸದ್ಧರ್ಮದಿಂದಲ್ಲದೆ ಭೂಮಿಯ ಮೇಲೆ ದುಷ್ಕರ್ಮಬಂಧನವು ಅನ್ಯ ಧರ್ಮಗಳಿಂದ ಕೆಡುವುದು ಸಾಧ್ಯವೆ ? ೪೫. ಕಾಡುಕಿಚ್ಚಿಗೆ ಅಂಜಿದವನು ದೊಡ್ಡ ಮಡುವನ್ನು ಹೊಕ್ಕರೆ ಬದುಕುವನು; ಕೊಬ್ಬಿನಿಂದ ಬಿದಿರಿನ ಬುಟ್ಟಿಯುನ್ನು ಹೊಕ್ಕರೆ ಸುಟ್ಟು ಕರಕಾಗಿ ಬೆಂದು ಹೋಗುತ್ತಾನೆ. ಹಾಗೆಯೇ ಕರಟದಲ್ಲಿನ ಕದಿರಿನ ಹಾಗೆ ಒಂದೇಸಮನೆ ನರಕತಿರ್ಯಕ್‌ಗತಿಗಳಲ್ಲಿ ತಿರುಗುವ ಕರ್ಮಕ್ಕೆ ಅಂಜುವವನು

ಕರ್ಮಕಂಜುವಾತಂ ಸದ್ಧರ್ಮಮಂ ಪಿಡಿದೊಡೆ ಸುಖಿಯಕ್ಕುಮಲ್ಲದೆ ಕೊಲೆಯೊಳ್ ಕೂಡಿದ ಕುಧರ್ಮಮಂ ಪಿಡಿದೊಡೆ ನರಕಮಂ ಪೊಕ್ಕು ಮಹಾದುಃಖಮನೆಯ್ದುಗುಂ ೪೬

ಬೇವಿಂಗೆ ಕಯ್ಪು ಸಹಜಂ
ಭೂವಳಯದೊಳೆಂಬ ತೆಱದಿನತಿ ಪಾಪಿಗಳುಂ
ಶ್ರೀವರ ಸದ್ಧರ್ಮದ ದೆಸೆ
ಗೋವದೆ ಮುನಿಯುತ್ತುಮಿರ್ಪರಘವಶದಿಂದಂ ೪೭

ಒಡೆಯರ ಸಿರಿಯುಂ ಕಂಡೊಡೆ
ಬಡವರ್ ಮುನಿವಂತೆ ನರಕಗತಿಗಿೞಿವವರುಂ
ತಡೆಯದೆ ನಿರ್ವೃತಿ ಸುಖಮಂ
ಪಡೆವವರಂ ಕಂಡೊಡಾಗಳುಂ ಕಡುಗಾಯ್ವರ್ ೪೮

ಪೊನ್ನುಳ್ಳವರಂ ಕಳ್ಳರ್
ಬೆನ್ನಟ್ಟಿ ತಗುಳ್ವ ತೆಱದಿನತಿ ನಿರ್ಮಳರಂ
ಸನ್ನುತ ದರ್ಶನಶುದ್ಧರ
ನುನ್ನತರ ಪಾಪಿಯಪ್ಪರುಂ ನೆಱೆ ತಗುಳ್ವರ್ ೪೯

ಗದ್ಯ॥ ಮೞೆ ಮೊಕ್ಕಳಮಾದೊಡೆ ತೊಱೆ ಪೆರ್ಚಿ ಪರಿಗುಮಲ್ಲದೆ ಸಮುದ್ರಂ ಪೆರ್ಚಿ ಪರಿಯದಂತೆ ಕುತ್ಸಿತ ಧರ್ಮದ ಮಹಿಮೆಗೆ ಮಿಥ್ಯಾದೃಷ್ಟಿಗಳಪ್ಪ ದುರಾತ್ಮರ್ ಪೆರ್ಚುವರಲ್ಲದೆ ಸದ್ದೃಷ್ಟಿಗಳಪ್ಪ ಮಹಾತ್ಮರ್ ಪೆರ್ಚಲಱಿಯರ್ ೫೦

ಸದ್ಧರ್ಮವನ್ನು ಹಿಡಿದರೆ ಸುಖಿಯಾಗುವನು. ಅಲ್ಲದೆ ಕೊಲೆಯಲ್ಲಿ ಕೂಡಿದ ನೀಚ ಧರ್ಮವನ್ನು ಹಿಡಿದರೆ ನರಕವನ್ನು ಹೊಕ್ಕು ಮಹಾದುಃಖವನ್ನು ಹೊಂದುತ್ತಾನೆ. ೪೭. ಲೋಕದಲ್ಲಿ ಬೇವಿಗೆ ಕಹಿ ಹುಟ್ಟುಗುಣವೆಂಬಂತೆ ಅತಿಪಾಪಿಗಳು ಶ್ರೇಷ್ಠವಾದ ಉತ್ತಮಧರ್ಮದ ವಿಷಯಕ್ಕೆ ಒಲಿಯದೆ ಪಾಪವಶರಾಗಿ ಮುನಿಸುಗೊಳ್ಳುತ್ತಿರುತ್ತಾರೆ. ೪೮. ಧಣಿಗಳ ಐಶ್ವರ್ಯವನ್ನು ನೋಡಿ ಬಡವರು ಮುನಿಯುವಂತೆ ನರಕಗತಿಗೆ ಇಳಿಯುವವರೂ ತಡವಿಲ್ಲದೆ ಮೋಕ್ಷ ಸುಖವನ್ನು ಪಡೆಯುವವರನ್ನು ಕಂಡರೆ ಯಾವಾಗಲೂ ಬಹಳ ಕೋಪಗೊಳ್ಳುವರು. ೪೯. ಚಿನ್ನವಿರುವವರನ್ನು ಕಳ್ಳರು ಬೆನ್ನಟ್ಟಿ ಆಕ್ರಮಿಸುವ ಹಾಗೆ ಅತಿನಿರ್ಮಳರನ್ನೂ ಸ್ತೋತ್ರಪಾತ್ರರಾದ ದರ್ಶನ ಶುದ್ಧರನ್ನೂ ಉನ್ನತರನ್ನೂ ಪಾಪಿಗಳಾದವರು ಬಹಳವಾಗಿ ಬೆನ್ನಟ್ಟುವರು. ೫೦. ಮಳೆ ಹೆಚ್ಚಾದರೆ ತೊರೆಗಳು ಹೆಚ್ಚಿ ಹರಿಯುವುವೇ ಹೊರತು ಸಮುದ್ರವು ಹೆಚ್ಚಿ ಹರಿಯುವುದಿಲ್ಲ, ಹಾಗೆಯೇ ನೀಚಧರ್ಮದ ಮಹಿಮೆಗೆ ಮಿಥ್ಯಾದೃಷ್ಟಿಗಳಾದ ದುರಾತ್ಮರು ಹೆಚ್ಚುವರೇ ಹೊರತು ಸದ್ದೃಷ್ಟಿಗಳಾದ ಮಹಾತ್ಮರು ಹೆಚ್ಚು(ಕೊಬ್ಬು)ವು ದಿಲ್ಲ. ೫೦. ಬಂಗಾರದ ಭಂಡಾರಕ್ಕೆ ಆಸೆಪಟ್ಟು ಶ್ರೇಷ್ಠವಾದ ಕಾವಲನ್ನು ಹಾಕಂ

ಸಾರಂ ಚಾಮೀಕರಭಂ
ಡಾರಕ್ಕಟ್ಕರ್ತು ಕಾಪನಿಡುವವೊಲಿಲೆ ಸಂ
ಸಾರ ಭಯಮುಳ್ಳ ಭವ್ಯನು
ವೋರಂತಿರೆ ಕಾದುಕೊಳ್ಗೆ ರತ್ನತ್ರಯಮಂ ೫೧

ಏಗೆಟ್ಟುದೆಂದು ಹೀನೋ
ದ್ಯೋಗದಿನೇಱಿದರ ಮಾತನಾಲಿಸಿ ಕಿಡದು
ದ್ಯೋಗಿಯಿವನೆನಿಪ ಭವ್ಯಂ
ಬೇಗಂ ತಿಳಿದಾರ್ತು ಪಿಡಿಗೆ ಸದ್ದರ್ಶನಮಂ ೫೨

ಗದ್ಯ॥ ಮತ್ತಂ ಹೋಮಮಂ ಮಾಡುವ ಬ್ರಾಹ್ಮಣಂ ನೊಣವು ಬೆನ್ನನೂಱಿದೊಡೆ ಸೈರಿಸಲಾಱದೆ ಬೆನ್ನಂ ಪೊಯ್ದುಕೊಳ್ವುದುಂ ಕೆಲದೊಳಿರ್ದವರೆಲ್ಲಂ ಕೊಡನ ತುಪ್ಪದೊಳ್ ಕೈಯನದ್ದಿಕೊಂಡು ತಮ್ಮ ಬೆನ್ಗಳಂ ಪೊಯ್ದುಕೊಂಡರೆಂಬ ಗಾವಿಲಿಕೆಯುಂ ಮಾಡಿ ಲೋಕವಾಡಿದಂತಾಡಿ ಕುಮಾರ್ಗಮಂ ಪತ್ತದೆ ಮೂಢತ್ರಯಮಂ ಬಿಟ್ಟು ಮುಕ್ತಿಯನೆಯ್ದಿಸುವ ಸದ್ಧರ್ಮಮಂ ನಿರ್ದೋಷಿಯಪ್ಪ ದೇವನುಮಂ ಮಹಾ ಪರೀಷಹಂಗಳಂ ಗೆಲ್ವಂತಪ್ಪ ತಪಮುಮಂ ಪೊರ್ದುವುದೆಂದು ಧನದ ಮಹಾರಾಜನಾಪ್ತ ಧರ್ಮದ ತಪದ ಸ್ವರೂಪಮಂ ಪೇೞ್ವೊಡಂ ಸಂಘಶ್ರೀ ಧರ್ಮಕ್ಕಂತುಂ ಬಾರದಿರ್ಪುದುಮೊಂದು ದಿವಸಂ ೫೩

ವಂತೆ ಸಂಸಾರಭಯವುಳ್ಳ ಭವ್ಯನು ತನ್ನ ರತ್ನತ್ರಯ (ದರ್ಶನ, ಜ್ಞಾನ, ಚಾರಿತ್ರ)ಗಳನ್ನು ಒಂದೇ ಸಮನಾಗಿ ರಕ್ಷಿಸಿಕೊಳ್ಳಬೇಕು. ೫೧. 'ಈಗ ಏನು ನಷ್ಟವಾಯಿತಂ?' ಎಂದು ಅಲಕ್ಷ್ಯಭಾವದಿಂದ, ಹೀನವಾದ ಕೆಲಸಗಳಿಂದ ಮೇಲಕ್ಕೆ ಬಂದವರ ಮಾತನ್ನು ಕೇಳಿ ಕೆಡದೆ ಪ್ರಯತ್ನಶೀಲನೆನ್ನಿಸಿಕೊಳ್ಳುವ ಭವ್ಯನು ಬೇಗನೆ ಸದ್ದರ್ಶನವನ್ನು ಪ್ರಯತ್ನದಿಂದ ತಿಳಿದುಕೊಂಡು ಆಶ್ರಯಿಸಲಿ. ೫೨. ಅಲ್ಲದೆ ಹೋಮವನ್ನು ಮಾಡುವ ಬ್ರಾಹ್ಮಣನು ನೊಣ ಬೆನ್ನನ್ನು ಕಚ್ಚಿದಾಗ ಸಹಿಸಲಾರದೆ ಬೆನ್ನನ್ನು ಹೊಡೆದುಕೊಂಡರೆ ಪಕ್ಕದಲ್ಲಿರುವವರು ಕೊಡದಲ್ಲಿನ ತುಪ್ಪದಲ್ಲಿ ಕೈಯದ್ದಿಕೊಂಡು ತಮ್ಮ ಬೆನ್ನು ಚಪ್ಪರಿಸಿಕೊಂಡರೆಂದು ದಡ್ಡತನದ ಮಾತನಾಡಿ, ಲೋಕ ಆಡಿದ ಹಾಗೆಲ್ಲ ಆಡಿ ಕೆಟ್ಟದಾರಿಯನ್ನು ಸೇರದೆ ಮೂರು ಮೌಢ್ಯಗಳನ್ನೂ ಬಿಟ್ಟು ಮೋಕ್ಷಕ್ಕೆ ಸೇರಿಸುವ ಸದ್ಧರ್ಮವನ್ನೂ ನಿರ್ದೋಷಿಯಾದ ದೇವನನ್ನೂ, ಮಹಾಪರೀಷಹಗಳನ್ನೂ ಗೆಲ್ಲುವಂಥ ತಪಸ್ಸನ್ನೂ ಹೊಂದಬೇಕೆಂದು ಧನದಮಹಾರಾಜನು ಆಪ್ತಧರ್ಮದ ಮತ್ತು ತಪಸ್ಸಿನ ಸ್ವರೂಪವನ್ನು ಹೇಳಲಾಗಿ ಸಂಘಶ್ರೀ ಹೇಗೂ ಧರ್ಮಕ್ಕೆ ಬರದಿರುವುದನ್ನು ಗಮನಿಸಿ ಬಂದು ದಿನ. ೫೩. ಮಹಾತಪೋಧನರಾದ, ಪಾಪಪರಿಹಾರಕರಾದ

ಪರಮ ತಪೋಧನರ್ ದುರಿತ ಸಂಹರಣರ್ ನಿಖಿಲಾಗಮಾನ್ವಿತರ್
ಗುರುಪದ ಭಕ್ತರೂರ್ಜಿತ ಯಶರ್ ಜಿನಧರ್ಮ ಸರೋರುಹಾರ್ಕರು
ತ್ತಮಗುಣರಿಂದ್ರ ಶೈಲಸದೃಶಕ್ಷಮರುಗ್ರ ಕಷಾಯಹೀನರುಂ
ಸುರನರ ಪೂಜಿತ ಕ್ರಮ ಪಯೋರುಹರುನ್ನತ ಪುಣ್ಯಮೂರ್ತಿಗಳ್ ೫೪

ಗದ್ಯ॥ ಪೂರ್ವ ವಿದೇಹದಿಂ ಚಾರಣ ಋಷಿಯರ್ ವೈಕ್ರಿಯಿಕಋದ್ಧಿಪ್ರಾಪ್ತರಪ್ಪುದರಿಂ ತಮ್ಮ ಪಂಚಶತ ಚಾಪೋತ್ಸೇಧಮಪ್ಪ ದೇಹಮಂ ಭರತಕ್ಷೇತ್ರದವರ ದೇಹದನಿತು ಪ್ರಮಾಣಂ ಮಾಡಿ ಪೊಳೆವೆರೆಯಂತೆ ತೊಳ ತೊಳ ತೊಳಗುವ ದೇಹಮನೊಡೆಯರಂತರಿಕ್ಷದೊಳ್ ಪೋಗು ತ್ತಿರ್ದರವರಂ ಸಾಮಂತ ರಾಜಕುಮಾರ ಮಕುಟಬದ್ಧ ಪರಿವೃತನಾಗಿದ್ದ ವಾತ್ಸಲ್ಯರತ್ನಾಕರಂ ಕಂಡು ೫೫

ಖರಕರನುದಯದೊಳರಲದ
ಸರೋಜದಂತಾಗಳೆಯ್ದೆ ಭಕ್ತಿಯ ಭರದಿಂ
ಕರಮಲ್ಲದರಲೆ ಮುಖ ಪಂ
ಕರುಹಂ ಧರಣೀಶನೆರ್ದು ಸಿಂಹಾಸನದಿಂ ೫೬

ಚಾರಣ ಋಷಿಯರ ರೂಪಂ
ಚಾರುಗುಣಂ ನೋಡಿ ಸಂತಸಂ ಮಿಗೆ ಹಸ್ತಾಂ
ಭೋರುಹಮಂ ಮುಗಿದು ಗುಣಾ
ಧಾರಂ ಕಳಕಳಿಸಿ ನಕ್ಕು ಮಂತ್ರಿಯ ಮುಖಮಂ ೫೭

ಎಲ್ಲ ಆಗಮಂಗಳನ್ನು ಕಲಿತವರೂ ಗುರುಪಾದಭಕ್ತರೂ ವಿಶೇಷ ಯಶಸ್ಸನ್ನು ಗಳಿಸಿದವರೂ ಜಿನಧರ್ಮವೆಂಬ ಕಮಲಕ್ಕೆ ಸೂರ್ಯನಂಥವರೂ ಉತ್ತಮ ಗುಣಶಾಲಿಗಳೂ ಮೇರುಸದೃಶ ಧೈರ್ಯವುಳ್ಳವರೂ ಉಗ್ರ ಕಷಾಯಗಳನ್ನು ಗೆದ್ದವರೂ ದೇವ ಮಾನವರಿಂದ ಪಾದಪೂಜೆ ಹೊಂದಿದವರೂ ಮಹಾ ಪುಣ್ಯಮೂರ್ತಿಗಳೂ ಆದ ಪೂರ್ವವಿದೇಹದಿಂದ ಬಂದ ಚಾರಣ ಋಷಿಗಳವರು ಮಾಯಾ ಋದ್ಧಿ ಲಭಿಸಿದವರಾದ್ದರಿಂದ ತಮ್ಮ ಐನೂರು ಬಿಲ್ಲುಗಳಷ್ಟು ದೊಡ್ಡ ದೇಹವನ್ನು ಭರತಕ್ಷೇತ್ರದ ಜನರ ದೇಹದ ಅಳತೆಯಷ್ಟೇ ಮಾಡಿಕೊಂಡು ಹೊಳೆಯುವ ಚಂದ್ರಮಂಡಲದಂತೆ ವಿಶೇಷವಾಗಿ ಹೊಳೆಯುವ ದೇಹಧರಿಸಿ ಅಂತರಿಕ್ಷದಲ್ಲಿ ಹೋಗುತ್ತಿದ್ದರು. ಅವರನ್ನು ಸಾಮಂತ ರಾಜಪುತ್ರರ ನಡುವೆ ಇದ್ದ ಧನದ ಮಹಾರಾಜನು ಕಂಡು ೫೫. ಸೂರ್ಯ ಹುಟ್ಟಿದಾಗ ಅರಳದ ಕಮಲದ ಹಾಗೆ ಆಗ ಭಕ್ತಿಯ ಆಧಿಕ್ಯದಿಂದ ಅತಿಶಯವಾಗಿ ಅರಳಿದ ಮುಖಕಮಲವುಳ್ಳವನಾಗಿ ಅರಸನು ಸಿಂಹಾಸನದಿಂದ ಎದ್ದನು. ೫೬. ಚಾರಣ ಋಷಿಗಳ ರೂಪವನ್ನು ಆ ಗುಣಶಾಲಿ ನೋಡಿ ಹೆಚ್ಚಿದ ಸಂತೋಷದಿಂದ ಕರಕಮಲಗಳನ್ನು ಜೋಡಿಸಿ ಉತ್ಸಾಹದಿಂದ ನಕ್ಕು, ಮಂತ್ರಿಯ ಮುಖವನ್ನು ನೋಡಿ “ಸದ್ಧರ್ಮದಿಂದಾದ ಮಹಿಮೆ

ಗದ್ಯ॥ ನೋಡಿ, ನೋಡ ಸದ್ಧರ್ಮದೊಳಾದ ಮಹಿಮೆಯನೆಂದು ಮುನಿಯುಗಳಮಂ ತೋಱಿ ತಪದೊಳಪ್ಪ ಋದ್ಧಿಗಳುಮಂ ದಾನದಿಂದಪ್ಪ ಮಹಾ ಭೋಗಂಗಳುಮಂ ಪೂಜೆ ಯಿಂದಪ್ಪ ಪರಮೈಶ್ವರ್ಯಂಗಳುಮಂ ಸಮ್ಯಕ್ತ್ವದಿಂದಪ್ಪ ನಿರ್ವೃತಿ ಶ್ರೀಯುಮಂ ಪೇೞೆ ಸಂಘಶ್ರೀ ಕೇಳ್ದು ಧರ್ಮದ ಪ್ರತ್ಯಕ್ಷ ಫಲಮಂ ಕಣ್ಣಾರೆ ಕಂಡು ಸದ್ಧರ್ಮಾಭಿಮುಖವಾಗಿ ಮನದ ಶಂಕೆ ಪೋಗೆ ಮಿಥ್ಯಾತ್ವಕ್ಕೆ ಹೇಸಿ ಶ್ರಾವಕ ವ್ರತಂಗಳನೇಱಿಸಿಕೊಂಡು ದೃಢವ್ರತಿಯ ಪ್ಪುದುಂ ಧನದ ಮಹಾರಾಜಂ ರಾಗದಿಂದಿರ್ಪುದುಂ ೫೮

ದೊರೆಕೊಳ್ಳದ ಜಿನಧರ್ಮಂ
ದೊರೆಕೊಂಡುದು ಧನದ ಭೂಪನಿಂದೆನಗೆಂದಾ
ದರದಿಂ ಸಂಘಶ್ರೀ ಸುರ
ನರಪೂಜಿತ ಜಿನಪದಾಬ್ಜಮಂ ನಂಬುಗೆಯಿಂ ೫೯

ಗದ್ಯ॥ ಪೂರ್ದಿ ಮತ್ತಿನ ಕುಮಾರ್ಗಾಳಾಪಮಂ ಪತ್ತುವಿಟ್ಟು ಧನದ ಮಹಾರಾಜಂಗೆ ಪರಮ ಮಿತ್ರನಾಗಿ ಸಲುತ್ತುಮಿರ್ದೊಂದು ದಿವಸಂ ಅರಸನ ವಂಶಾವತಾರಮಂ ತದ್ರಾಜಧಾನಿಗೆ ಪ್ರತಿ ಪಾಲಪುರಮೆಂಬ ಪೆಸರಾದ ಕಾರಣಮಂ ಬೆಸಗೊಳ್ವೆನೆಂಬರ್ತಿಯಿಂದೋಲಗಂ ಗೊಟ್ಟಿರ್ದ ಸಮ್ಯಕ್ತ್ವ ಚೂಡಾಮಣಿಗೆ ಪೊಡೆಮಟ್ಟು ವಿನಯದಿಂ ಕೈಗಳಂ ಮುಗಿದು ಬಿನ್ನಪಮೆಂದು ತನ್ನ ಮನದೆಱಕದಿಂ ಬೆಸಕೊಳ್ವುದುಮರಸಂ ಬುದ್ಧಿಸಾಗರನೆಂಬ ಪೆರ್ಗಡೆಯ ಮೊಗಮಂ ನೋಡು ವುದುಂ ೬೦

ಯನ್ನು ನೋಡು" ಎಂದು ಹೇಳುತ್ತ ಆ ಇಬ್ಬರು ಮುನಿಗಳನ್ನು ತೋರಿಸಿ ತಪಸ್ಸಿನಿಂದ ಆಗುವ ಋದ್ಧಿಯನ್ನೂ ದಾನದಿಂದ ಲಭಿಸುವ ಭೋಗಗಳನ್ನೂ ಪೂಜೆಯಿಂದಾಗುವ ಪರಮೈಶ್ವರ್ಯಗಳನ್ನೂ ಸಮ್ಯಕ್ತ್ವದಿಂದ ಸಿಕ್ಕುವ ಮೋಕ್ಷ ಸಂಪತ್ತನ್ನೂ ಹೇಳಲು ಸಂಘಶ್ರೀಯು ಕೇಳಿ ಧರ್ಮದ ಪ್ರತ್ಯಕ್ಷ ಫಲವನ್ನು ಕಣ್ಣು ತುಂಬ ನೋಡಿ ಸದ್ಧರ್ಮ ದಲ್ಲಿ ಆಸಕ್ತನಾಗಿ ಮನಸ್ಸಿನ ಸಂದೇಹ ಹೋಗಲು ಮಿಥ್ಯಾತ್ವಕ್ಕೆ ಹೇಸಿ ಶ್ರಾವಕ ವ್ರತ ಗಳನ್ನು ಹಿಡಿದು ದೃಢವ್ರತಿಯಾಗಲು ಧನದ ಮಹಾರಾಜನು ಸಂತೋಷಪಟ್ಟನು. ೫೭-೫೮. 'ಲಭಿಸದೆ ಇರುವ ಜಿನಧರ್ಮವು ಮಹಾರಾಜನಿಂದ ನನಗೆ ಲಭಿಸಿತು' ಎಂದು ಆದರದಿಂದ ಸಂಘಶ್ರೀ ಸುರನರರಿಂದ ಪೂಜಿತವಾದ ಜಿನಪಾದ ಕಮಲವನ್ನು ನಂಬಿ ೫೯. ಆಶ್ರಯಿಸಿ ಹಿಂದಿನ ಕುಧರ್ಮದ ಮಾತನ್ನು ಬಿಟ್ಟು ಧನದರಾಜನಿಗೆ ಪರಮಮಿತ್ರ ನಾಗಿ ಒಂದು ದಿನ ಅರಸನ ವಂಶಾವತಾರವನ್ನೂ ಆ ರಾಜಧಾನಿಗೆ ಪ್ರತಿಪಾಲಪುರವೆಂಬ ಹೆಸರು ಬಂದ ಕಾರಣವನ್ನೂ ಕೇಳುವ ಆಸೆಯಿಂದ ಓಲಗದಲ್ಲಿದ್ದ ರಾಜನಿಗೆ ನಮಸ್ಕರಿಸಿ ಕೈಜೋಡಿಸಿ 'ಬಿನ್ನಹ' ಎಂದು, ತನ್ನ ಮನಸ್ಸಿನ ಆಸೆಯನ್ನು ಹೇಳಲು ಅರಸನು ಬುದ್ಧಿಸಾಗರನೆಂಬ ಹೆಗ್ಗಡೆಯ ಮುಖ ನೋಡಿದನು. ೬೦. ರಾಜನ ಮನೋದಯ

ಅರಸನ ಚಿತ್ತಮನಱಿದೋ
ಸರಿಸದೆ ಸಮ್ಯಕ್ತ್ವಜಲಧಿಯನ್ವಯಮಂ ವಿ
ಸ್ತರದಿಂ ಸಂಘಶ್ರೀಗು
ರ್ವರೆ ಪೂಜ್ಯಂ ನುಡಿದನಂಬುನಿಧಿಸ್ವನದಿಂ ೬೧

ಶ್ರೀ ವಾಸುಪೂಜ್ಯಜಿನನ ಮ
ಹಾವನಿಪಾಲಾರ್ಚಿತಾಂಘ್ರಿಪದಯುಗನ ವರ
ಶ್ರೀವರನ ತೀರ್ಥಕಾಲದೊ
ಳೀ ವಿಭುವಿನ ವಂಶಜಂ ಯಶೋಧರನೆಂಬಂ ೬೨

ಗದ್ಯ॥ ಇಕ್ಷ್ವಾಕುವಂಶಪವಿತ್ರನಂಗವಿಷಯದ ಚಂಪಾಪುರಮನಾಳ್ವನಾತನರಸಿ ಸೌಂದರಿ ಮಹಾದೇವಿಯೆಂಬಳಾಯಿರ್ವರ್ಗಂ ಪುಟ್ಟಿದ ಕುಮಾರರನಂತವೀರ್ಯನುಂ ಪ್ರಿಯಬಳನುಮೆಂಬ ರಂಗಜ ಸನ್ನಿಭರವರೊಳ್ ಕೂಡಿ ಯಶೋಧರ ಮಹಾರಾಜಂ ರಾಜ್ಯಂಗೆಯ್ಯುತ್ತು ಮಿರ್ದೊಂದು ದಿವಸಂ ತನ್ನೊಳಿಂತೆಂದು ಬಗೆದಂ ೬೩

ಪರಮಂಡಲದರಸುಗಳಂ
ನಿರಾಕುಳಂ ಬೀರದಿಂದ ಮಂಜಿಸಿ ಕಪ್ಪಂ
ಬೆರಸು ಬೆಸಕೆಯ್ಸಿಕೊಳ್ಳದ
ರರಸದು ಚತುರಂಗದರಸನನನುಕರಿಸಿರ್ಕುಂ ೬೪

ವನ್ನು ತಿಳಿದು ಹಿಂತೆಗೆಯದೆ ಆ ಸಮ್ಯಕ್ತ್ವ ಸಮುದ್ರನಾದ ಧನದನ ವಂಶಕಥೆಯನ್ನು ಆ ಹೆಗ್ಗಡೆ ಸಮುದ್ರ ಘೋಷದಂತೆ ಇದ್ದ ಸ್ವರದಲ್ಲಿ (ಗಟ್ಟಿಯಾಗಿ) ಹೇಳಿದನು. ೬೧ ಶ್ರೀವಾಸುಪೂಜ್ಯಜಿನನ, ರಾಜಪೂಜಿತಪಾದಯುಗಳನ, ಶ್ರೇಷ್ಠನಾದ ಶ್ರೀವರನ. ತೀರ್ಥಕಾಲದಲ್ಲಿ ಯಶೋಧರನೆಂಬ, ಈ ಪ್ರಭುವಿನ ಪೂರ್ವಿಕನು ೬೨. ಇಕ್ಷ್ವಾಕು ವಂಶದಿಂದ ಪವಿತ್ರನಾದ, ಅಂಗದೇಶದ ಚಂಪಾಪುರದ ಆಳುವ ದೊರೆ. ಆತನ ರಾಣಿ ಸೌಂದರಿ ಮಹಾದೇವಿಯೆಂಬವಳು. ಆ ಇಬ್ಬರಿಗೂ ಕುಮಾರರು ಇಬ್ಬರು ಹುಟ್ಟಿದರು: ಅನಂತವೀರ್ಯ ಮತ್ತು ಪ್ರಿಯಬಳ. ಅವರು ಮನ್ಮಥನಂತೆ ರೂಪವಂತರು. ಅವರೊಡನೆ ಯಶೋಧರ ಮಹಾರಾಜನು ರಾಜ್ಯವಾಳುತ್ತಿದ್ದು ಒಂದು ದಿನ ತನ್ನಲ್ಲಿಯೇ ಹೀಗೆ ಯೋಚಿಸಿದನು. ೬೩. ಶತ್ರುಮಂಡಲಗಳ ರಾಜರನ್ನು ಸುಲಭವಾಗಿ ಹೆದರಿಸಿ ಕಪ್ಪ ವಸೂಲು ಮಾಡಿ ಅವರಿಂದ ಸೇವೆ ಮಾಡಿಸಿಕೊಳ್ಳದೆ ಇರುವ ರಾಜನು ಚದುರಂಗದ ಅರಸನನ್ನೇ ಹೋಲುವನು. ೬೪. ಸಮಸ್ತ ಭೂಮಂಡಲವನ್ನೂ ಶುದ್ಧಚರಿತನಾಗಿ

ಸಕಲ ಧರಿತ್ರೀತಲಮುಮ
ಕಳಂಕಚಂದ್ರನಾಗಿ ಬೆಸಕೆಯ್ಸಿ ಯಶಃ
ಪ್ರಕಟಂ ಮಾಡದೆ ವೈರಿ
ಪ್ರಕರಮನೆಱಗಿಸದನರಸು ವಿರಸಮೆನಿಕ್ಕುಂ ೬೫

ಭರದಿಂ ಷಟ್ಖಂಡ ಭೂಮಂಡಲಮನಿದಿರ ನಿಕ್ಷೇಪಮಂ ಬೇಗದಿಂ ಕೊಂ
ಡುರುತೇಜಂ ತೇಜದಿಂದಬ್ಬರಿಸಿ ಪೊರೆದು ಸದ್ಧರ್ಮಮಂ ರಾಜ್ಯ ಸೌಖ್ಯೋ
ತ್ಕರನಾಗಿರ್ದರ್ದು ಬೆಂಬೀಟದೆ ನರಕದೊಳಾನಂದದಿಂ ಮುಕ್ತಿವೆತ್ತಂ
ಭರದಿಂ ತ್ರೈಲೋಕ್ಯವಂದ್ಯಂ ಬಗೆವೊಡೆ ಧರಣೀನಾಥರಿಂತಾಗವೇಡಾ ೬೬

ಗದ್ಯ॥ ಅದು ಕಾರಣದಿಂ ಸಮುದ್ರಮುದ್ರಿತವಸುಂಧರಾಚಕ್ರದೊಳ್ ಕೀರ್ತಿಲತೆಯುಂ ಧರ್ಮಮುಂ ಪೆರ್ಚುವಂತಾಗೆ ರಾಜ್ಯಂಗೆಯ್ಯದರಸಂ ಕಡಬರಸಂ ನಿಶ್ಚಯಮರಸಲ್ಲೆಂದು ತನ್ನೊಳ್ ಭಾವಿಸಿ ರಿಪು ನೃಪರನಲ್ಲಾಡಿಸಲುಂ ಪ್ರತಾಪಪರರಪ್ಪ ಭೂಪರನೊತ್ತಿ ಕಪ್ಪಂಗೊಳಲುಂ ಭವ್ಯನಿಕರದ ಮನಕ್ಕಾಹ್ಲಾದಮಂ ಮಾಡಲುಂ ಸದ್ಧರ್ಮಮಂ ಬೆಳಗಲುಂ ವಿರೋಧಿನೃಪ ಸಾಧನಮಂ ಬೆಂಕೊಳ್ಳಲುಂ ಬಗೆದು ೬೭

ವಿಧೇಯರನ್ನಾಗಿಸಿ ಯಶಸ್ಸನ್ನು ಗಳಿಸದೆ, ಶತ್ರುಸಮೂಹವನ್ನು ಸೋಲಿಸಿದ ಅರಸು ವಿರಸನೆನಿಸಿಕೊಳ್ಳುತ್ತಾನೆ. ೬೫. ರಭಸದಿಂದ ಷಟ್ಖಂಡ ಭೂಮಂಡಲವನ್ನೂ, ಕಣ್ಣೆದುರಿಗಿನ ನಿಕ್ಷೇಪದಂತೆ, ಬೇಗನೆ ವಶಪಡಿಸಿಕೊಂಡು, ಹೆಚ್ಚಾದ ತೇಜಸ್ಸಿನಿಂದ ಅಬ್ಬರಿಸಿ, ಜೈನಧರ್ಮವನ್ನು ಪೋಷಿಸಿ ರಾಜ್ಯ ಸೌಖ್ಯದಲ್ಲಿ ಆಸಕ್ತನಾಗಿದ್ದು, ಅದರಲ್ಲಿಯೇ ಮುಳುಗಿ ಸೋಲದೆ, ನರಕದಲ್ಲಿ ಬೀಳದೆ, ಆನಂದದಿಂದ ಮುಕ್ತಿಯನ್ನು ಪಡೆದು ಮೂರು ಲೋಕಗಳಿಗೂ ವಂದ್ಯನಾದನು. ಯೋಚಿಸಿದರೆ ರಾಜರು ಹೀಗಾಗಬೇಡವೆ ? ೬೬. ಆದಕಾರಣ ಸಮುದ್ರವೇ ಮೇರೆಯಾಗಿರುವ ಭೂಮಂಡಲದಲ್ಲಿ ಕೀರ್ತಿಯೂ ಧರ್ಮವೂ ಹೆಚ್ಚುವ ಹಾಗೆ ರಾಜ್ಯಭಾರ ಮಾಡದ ಅರಸನು [1]ಕಡಬರಸನೇ ಹೊರತು ರಾಜನಲ್ಲ". ಎಂದು ತನ್ನೊಳಗೇ ಯೋಚಿಸಿ ಶತ್ರುರಾಜರನ್ನು ಸೋಲಿಸಿ, ಪ್ರತಾಪಶಾಲಿಗಳನ್ನು ಸೋಲಿಸಿ ಕಪ್ಪವನ್ನು ಕೊಳ್ಳುವುದಕ್ಕೂ, ಭವ್ಯರ ಮನಸ್ಸಿಗೆ ಆನಂದವನ್ನುಂಟು ಮಾಡುವುದಕ್ಕೂ ಜೈನಧರ್ಮವನ್ನು ಬೆಳಗುವುದಕ್ಕೂ ವಿರೋಧಿ ರಾಜರ ಸೈನ್ಯಗಳನ್ನು ಬೆನ್ನಟ್ಟುವುದಕ್ಕೂ ಯೋಚಿಸಿ ೬೭. ತನ್ನ ಮಂತ್ರಿಗಳನ್ನು ಕರೆದು ರಾಜನು ತನ್ನ

1. ಕಡಬರಸ = ಈಚಲುರಸ = ಹೆಂಡ

ಕರೆದು ನಿಜಮಂತ್ರಿವರ್ಗಮ
ನರಸಂ ಲೇಸಾಗಿ ತನ್ನ ಬಗೆಯಂ ಪೇಳ್ದ
ಚ್ಚರಿಯಾಗೆ ತಡೆದು ನಿಲ್ಲದೆ
ಬರವೇಳ್ದು ಸಮಸ್ತ ಮಕುಟಬದ್ಧರನಾಗಳ್ ೧೮

ಶರನಿಧಿಗಳ್ ಘೂರ್ಣಿಸುವಂ
ತಿರೆ ತೂರ್ಯ್ಯರವಂಗಳೆಸೆಯೆ ಜಿನಪೂಜೆಯುಮಂ
ನಿರುಪಮ ಜಿನಾಭಿಷವಮುಮ
ನರಸಂ ನೆಱೆ ಮಾಡಿ ಮೂಱುದಿವಸಂ ಬರೆಗಂ ೧೯

ತದನಂತರಮೊಸೆದು ಮಹೀ
ಸುದತೀಶಂ ವೈರಿಭೂಮಿಪಾಲಚಿತ್ತಂ
ಬೆದಱೆ ಯಶೋಧರ ಭೂಪಾ
ಭ್ಯುದಯಂ ಪೊಯ್ಸಿ ಪ್ರಯಾಣಭೇರಿಯನಾಗಳ್ ೨೦

ಗದ್ಯ॥ ದಕ್ಷಿಣ ದಿಶಾವರಕೆತ್ತಿ ಮಾಳವಮಗಧ ಕರ್ಣಾಟ ಗೊಲ್ಲ ಕರಹಾಟ ಗೌಳ ಲಾಟ ಚೋಳಚೇರ ಪಾಂಡ್ಯ ಕಳಿಂಗಾದಿವಿಷಯಂಗಳಂ ಸಾಧಿಸಿ ಕಪ್ಪಂಗೊಂಡು ತನಗೆ ಬೆಸಕೆಯ್ವಂತು ಮಾಡಿ ವೆಂಗಿಮಂಡಳಕ್ಕೆ ವಂದು ತದ್ವಿಷಯದೊಳಾದ ಚೆಲ್ವಿಂಗೆ ಸೋಲ್ತೆನಗಿರ್ಪೊಡೀವಿಷಯಮೆ ತಕ್ಕುದೆಂದು ತನ್ನ ಮನದೊಳ್ ಬಗೆದು ಸಮಸ್ತಧಾತ್ರೀವಳಯಮುಮಂ ತಾನೊರ್ವನೆ ಪ್ರತಿ

ಯೋಚನೆಯನ್ನು ಚೆನ್ನಾಗಿ ಹೇಳಿ, ಆ ಜನ ಆಶ್ಚರ್ಯಪಟ್ಟರೂ ನಿಲ್ಲಿಸದೆ ಎಲ್ಲ ಕಿರೀಟ ಧಾರಿಗಳಾದ ರಾಜರನ್ನೂ ಬರಹೇಳಿ ೧೮. ಸಮುದ್ರಗಳು ಘೋಷವೆಬ್ಬಿಸುವಂತೆ ವಾದ್ಯಗಳು ಮೊಳಗುತ್ತಿರಲು ಜಿನಪೂಜೆಯನ್ನೂ ನಿರುಪಮವಾದ ಜಿನಾಭಿಷೇಕವನ್ನೂ ರಾಜನು ಅತಿಶಯವಾಗಿ ಮಾಡಿ ಮೂರು ದಿನ ಉತ್ಸವ ನಡೆಸಿ ೧೯. ಆಮೇಲೆ ವೈರಿರಾಜರ ಮನಸ್ಸು ಬೆದರುವ ಹಾಗೆ ಉತ್ಸಾಹದಿಂದ ಯಶೋಧರ ಮಹಾರಾಜನು ಅಭ್ಯುದಯಪರನಾಗಿ, ಪ್ರಯಾಣಭೇರಿಯನ್ನು ಹೊಡೆಸಿದನು. ೨೦. ದಕ್ಷಿಣದಿಕ್ಕಿಗೆ ದಂಡೆತ್ತಿ ಹೊರಟು ಮಾಳವ, ಮಗಧ, ಕರ್ಣಾಟ, ಗೊಲ್ಲ, ಕರಹಾಟ, ಗೌಳ, ಲಾಟ, ಚೋಳ, ಚೇರ, ಪಾಂಡ್ಯ, ಕಳಿಂಗ ಮೊದಲಾದ ಪ್ರಾಂತ್ಯಗಳನ್ನು ಗೆದ್ದು ವಶಪಡಿಸಿ ಕೊಂಡು ಕಪ್ಪವನ್ನು ಪಡೆದು ತನಗೆ ವಿಧೇಯರನ್ನಾಗಿ ಮಾಡಿ ವೆಂಗಿ ಮಂಡಲಕ್ಕೆ ಬಂದು ಆ ಪ್ರಾಂತ್ಯದ ಸೌಂದರ್ಯಕ್ಕೆ ಸೋತು 'ನನಗೆ ಇರುವುದಕ್ಕೆ ಈ ಪ್ರಾಂತ್ಯವೇ ಯೋಗ್ಯ ವಾದದ್ದೆಂದು ತನ್ನ ಮನಸ್ಸಿನಲ್ಲಿ ಯೋಚಿಸಿ ಸಮಸ್ತ ಭೂಮಂಡಲವನ್ನೂ ತಾನೊಬ್ಬನೇ ಪ್ರತಿಪಾಲಿಸಿದವನಾದ್ದರಿಂದ ಪ್ರಪಂಚಕ್ಕೆ ತನ್ನ ಶಕ್ತಿ ಸಾಮರ್ಥ್ಯಗಳನ್ನು ತಿಳಿಯಪಡಿಸು

ಪಾಲಿಸಿದನಪ್ಪುದಱಿಂ ಲೋಕಕ್ಕೆ ತನ್ನಳವುಮಂ ಪ್ರಕಟಂ ಮಾಳ್ಪಂತೆ ಪಿರಿದಪ್ಪಪೊೞಲಂ ಮಾಡಿ
ಪ್ರತಿಪಾಲಪುರಮೆಂದು ಪೆಸರಿಟ್ಟುಕೊಂಡಾಡಿ ೭೧

ಸುರುಚಿರ ರತ್ನಾಳಿಗಳಿಂ
ಸುರರ ವಿಮಾನಂಗಳೆನಿಪ ಜಿನಭವನಮನಾ
ಪುರವರದ ಸುತ್ತಲು ಭಾ
ಸುರತೇಜಂ ಗುಣಕರಂಡಕಂ ಮಾಡಿಸಿದಂ ೭೨

ತನ್ನಾಳ್ದಮಹೀವಳಯದೊ
ಳುನ್ನತಿಯಿಂ ಕೂಡೆ ಪಲವು ಜಿನಮಂದಿರಮಂ
ಸನ್ನುತಮತಿ ಮಾಡಿದನೆನೆ
ಲಿನ್ನಾತನ ಧರ್ಮದಳವನೇವಣ್ಣಿಪುದೋ ೭೩

ಜಿನಪತಿಯೆ ದೇವನಾ ಜಿನ
ಮುನಿಗಳೆ ಸದ್ಗುರುಗಳಾಜಿನಾಧೀಶ್ವರಭ
ಕ್ತನೆ ನಂಟನೆಂಬನಿನ್ನಾ
ಜನಪನ ಸಮ್ಯಕ್ತ್ವದಳವನೇವಣ್ಣಿಪುದೋ ೭೪

ಸುರರ ವಿನೋದದೊಳ್ ಜಿನರ ಪೂಜೆಯೊಳುತ್ತಮಮಪ್ಪ ಧಾರಿಣೀ
ಸ್ತುತರೆನಿಸಿರ್ದ ದಿವ್ಯಮುನಿನಾಥರ ಸೇವೆಯೊಳೈದೆ ಭವ್ಯಸಂ
ತತಿಯ ವಿನೋದದೊಳ್ ಪದಪದಾರ್ಥ ವಿಚಾರಣೆಯೊಳ್ ತಗುಳ್ದು ಭೂ
ಪತಿ ಬುಧಗೋಷ್ಠಿಯೊಳ್ ಜನಪರೋಲಗದೊಳ್ ಮನವೊಲ್ದು ನಿಚ್ಚಲುಂ ೭೫

ವಂತೆ ದೊಡ್ಡದಾದ ಪಟ್ಟಣವನ್ನು ಕಟ್ಟಿಸಿ ಅದಕ್ಕೆ ಪ್ರತಿಪಾಲಪುರವೆಂದು ಹೆಸರು ಕೊಟ್ಟು ಕೊಂಡಾಡಿದನು. ೭೧. ಸುಂದರವಾದ ರತ್ನಸಮೂಹಗಳಿಂದ ದೇವತೆಗಳ ವಿಮಾನಗಳೋ ಎನ್ನುವಂತಿದ್ದ ಜಿನಭವನಗಳನ್ನು ಆ ಪುರವರದ ಸುತ್ತಲೂ ಮಹಾ ತೇಜಸ್ವಿಯೂ ಗುಣಕರಂಡಕನೂ ಆದ ಆ ದೊರೆ ಕಟ್ಟಿಸಿದನು. ೭೨. ತಾನು ಆಳುತ್ತಿದ್ದ ರಾಜ್ಯದಲ್ಲಿ ಹಿರಿಮೆಯಿಂದ ಬೇಗನೆ ಅನೇಕ ಜಿನಮಂದಿರಗಳನ್ನು ಆ ಸನ್ನುತಮತಿಯು ಮಾಡಿಸಿದನೆಂದ ಮೇಲೆ ಆತನ ಧರ್ಮದ ಆಧಿಕ್ಯವನ್ನು ಏನೆಂದು ವರ್ಣಿಸುವುದು ? ೭೩. ಜಿನೇಶ್ವರನೇ ದೇವನು. ಆ ಜೈನಮುನಿಗಳೇ ಸದ್ಗುರುಗಳು. ಆ ಜಿನಾಧೀಶ್ವರನ ಭಕ್ತನೇ ನೆಂಟನೆಂದು ಹೇಳುವ ಆ ರಾಜನ ಸಮ್ಯಕ್ತ್ವದ ಅತಿಶಯವನ್ನು ಏನೆಂದು ವರ್ಣಿಸಬಹುದು ? ೭೪. ದೇವರುಗಳ ವಿನೋದದಲ್ಲಿ, ಜಿನರ ಪೂಜೆಗಳಲ್ಲಿ, ಶ್ರೇಷ್ಠರಾದ ಲೋಕಸ್ತೋತ್ರಕ್ಕೆ ಪಾತ್ರರಾದ, ದಿವ್ಯಮುನಿಶ್ರೇಷ್ಠರ ಸೇವೆಯಲ್ಲಿ, ಹೆಚ್ಚಾಗಿ ಭವ್ಯ ಸಮೂಹಗಳವರ ವಿನೋದಗಳಲ್ಲಿ, ಪದ ಪದಾರ್ಥಗಳ ವಿಚಾರ ಕಾರ್ಯದಲ್ಲಿ ತೊಡಗಿ ರಾಜನು ನಿತ್ಯವೂ ವಿದ್ವಾಂಸರ ಗೋಷ್ಠಿಯಲ್ಲಿ, ರಾಜರ ಓಲಗದಲ್ಲಿ ಮನಃಪೂರ್ವಕವಾಗಿ ಒಲಿದು ೭೫. ಕಾಲಕಳೆಯುತ್ತಿದ್ದನು. ಒಂದು ದಿವಸ ಸಮಸ್ತ ಅಂತಃಪುರಸ್ತ್ರೀಯು

ಗದ್ಯ॥ ಕಾಲಮಂ ಕಳೆಯುತ್ತಿರ್ದೊಂದು ದಿವಸಂ ಸಕಲಾಂತಃಪುರ ಪುರಂಧ್ರಿಯರ್‌ವೆರಸು ವನಕ್ರೀಡೆಗೆ ಪೋಗಿ ೭೬

ಒಳಿಯೊಳಂಗಸಂಭವನ ಬೀಡಿನಕೆಂಗುಡಿಯಂತೆ ಸುತ್ತಲುಂ
ಲೀಲೆಯಿನಂಕುರಪ್ರಕರದಿಂ ಮಿಡಿಯಿಂ ತಳಿರಿಂ ಮುಸುಂಕಿ ಭೂ
ಪಾಲನ ಸೈನ್ಯಮಂ ಪದೆಪಿನಿಂದಿದಿರ್ಗೊಳ್ವಪೊಲಿರ್ದ ಭೂ
ಜಾಳಿಗಳೊಪ್ಪಮಂ ಮನದ ಸೋಲದಿನಚ್ಚರಿವಟ್ಟು ಭೂಭುಜಂ ೭೭

ಗದ್ಯ॥ ನೋಡುತ್ತುಂ ನಂದನವನದೊಳಗೆ ಪೊಕ್ಕು ಜಲಕ್ರೀಡೆಯುಮಂ ಪಿರಿದು ಪೊತ್ತಾಡಿ ನೆಱೆಯೆ ಶೃಂಗಾರಂಗೆಯ್ದು ಗರಿಧಸಿಂಧುರಾರೂಢನಾಗಿ ದಿವಿಜೇಂದ್ರಲೀಲೆಯಿಂ ಪುರಕ್ಕೆ ಮಗುಟ್ವಾತಂ ರಾಜಪತ್ನಿಯರುಂ ವಿಳಾಸಿನಿಯರುಂ ವಿನೋದದಿಂ ತಿರಿಯೆ ತಱಿಂಟಾದ ಮಾವಿನ ಬಱಿಗೊಂಬುಗಳಂ ಕಂಡು ಬೆಱಗಾಗಿ ೭೮

ತಳಿರಿಂದೊಪ್ಪುವ ಚೂತಭೂಜನಿಕರಂ ದುತ್ಸೈನ್ಯದಿಂ ನೋಡೆ ನೋ
ಡೆ ಲಯಕ್ಕೆಯ್ದಿದುವಕ್ಕಟಾ ನರರ ಪೆಂಪುಂ ಶ್ರೀಯುಮಾಯುಷ್ಯಮುಂ
ಬಳಮುಂ ಪೆಂಡಿರ ಭೋಗಮುಂ ಮಹಿಮೆಯುಂ ಸೌಭಾಗ್ಯಮುಂ ಭೋಗಮುಂ
ತಿಳಿವಂದೀ ತೆಱದಿಂದೆ ಘಮ್ಮನಱಿಗುಂ ಕೇಳಲ್ಲಿ ಸಂದೇಹಮೇಂ ೭೯

ರೊಡನೆ ಕೂಡಿ ವನವಿಹಾರಕ್ಕೆ ಹೋದನು. ೭೬. ಸಾಲಾಗಿ ಮನ್ಮಥನ ಸೈನ್ಯದ ಕೆಂಪು ಬಾವುಟಗಳಂತೆ ಸುತ್ತಲೂ ಕೆಂಪು ಚಿಗುರುಗಳಿಂದ ಕೂಡಿ, ಸುತ್ತಲೂ ಮೊಳಕೆಗಳ ಸಮೂಹ, ಚಿಗುರು, ಮಿಡಿಗಳು, ಗಳಿಂದ ಮುಸುಕಿ ರಾಜನ ಸೈನ್ಯವನ್ನು ಉತ್ಸಾಹದಿಂದ ಎದುರುಗೊಳ್ಳುವ ಹಾಗೆ ಇದ್ದ ವೃಕ್ಷ ಸಮೂಹಗಳ ಅಂದವನ್ನು, ಮನಸ್ಸಿನ ಆಕರ್ಷಣೆಯಿಂದ ಆಶ್ಚರ್ಯಪಟ್ಟು ರಾಜನು ನೋಡುತ್ತ ೭೭. ನಂದನವನದೊಳಕ್ಕೆ ಪ್ರವೇಶಿಸಿ, ಜಲಕ್ರೀಡೆಯನ್ನೂ ಬಹಳ ಹೊತ್ತು ಆಡಿ ಹೆಚ್ಚಾಗಿ ಶೃಂಗಾರಮಾಡಿ ಮದ್ದಾನೆಯ ಮೇಲೆ ಕುಳಿತು ದೇವೇಂದ್ರ ವೈಭವದಲ್ಲಿ ಪಟ್ಟಣಕ್ಕೆ ಹಿಂತಿರುಗಿ ರಾಜಪತ್ನಿಯರೂ ವಿಲಾಸಿನಿಯರೂ ವಿನೋದದಿಂದ ಗಿಡದ ಎಲೆಗಳನ್ನು ಕೀಳಲು ಬೋಳಾದ ಮಾವಿನಮರಗಳ ಬರಿಯ ಕೊಂಬುಗಳನ್ನು ನೋಡಿ ಅರಸನು ಬೆರಗುಗೊಂಡನು ೭೮. ಚಿಗುರಿನಿಂದ ಶೋಭಿಸುತ್ತಿದ್ದ ಮಾವಿನ ಮರಗಳ ಸಮೂಹವು ನನ್ನ ಸೈನ್ಯದಿಂದ ನೋಡ ನೋಡುತ್ತಿದ್ದಂತೆಯೇ ವಿನಾಶ ಹೊಂದಿದುವು. ಅಯ್ಯೋ! ಮಾನವರ ಹೆಚ್ಚಳವೂ ಐಶ್ವರ್ಯವೂ ಆಯುಷ್ಯವೂ, ಬಲವೂ, ಹೆಂಡಿರ ಭೋಗವೂ, ಮಹಿಮೆಯೂ ಸೌಭಾಗ್ಯವೂ, ಭೋಗವೂ, ಈ ರೀತಿಯೇ ಎಂದು ತಟ್ಟನೆ ಅರಿತುಕೊಂಡನು, ಅದರಲ್ಲಿ ಸಂದೇಹವೇನಿದೆ ? ೭೯. ಅಲ್ಪನ ಮಾತು ನಂಬಿ ಯುದ್ಧಕ್ಕೆ ಹೋಗುವವನೂ, ಕಳ್ಳನನ್ನು ಜತೆ

ಗದ್ಯ॥ ಬೂತಿನ ಮಾತಂ ನಂಬಿ ಕಾಳೆಗಕ್ಕೆ ಪೋಪನುಂ, ಕಳ್ಳನೊಡಗೂಡಿ ವ್ಯವಹಾರಕ್ಕೆ ಪೋಪನುಂ, ಸೋಂಬನೊಡಗೂಡಿ ಕೆಲಸಂಗೆಯ್ಯದಿರ್ಪನುಂ ಬಂದಿಕಾಱನ ಮಾತ ನಂಬಿ ಸಂಚಿತಧನಮಂ ತೋರ್ಪನುಂ, ತಳಾಱನ ಮಾತಂ ನಂಬಿ ಪೊಲ್ಲಮೆಯಂ, ಪೇೞ್ವನುಂ, ಧೂರ್ತನಂ ನಂಬಿ ಬಾವಿಯೊಳ್ ಬೀಳ್ವನುಂ, ಟಕ್ಕನವಚನಮಂ ನಂಬಿ ನೆರೆಯೂರ್ಗೆ ಪೋಪನುಂ, ಡೊಂಬನಮಾತಂ ನಂಬಿ ಕೂಸುಗುಡುವವನುಂ, ಪಂಚೇಂದ್ರಿಯಂಗಳ ವಸಮಾಗಿ ಸಂಸಾರದಲ್ಪಭೋಗಮಂ ಪತ್ತಿ ಧರ್ಮಮಂ ಬಿಟ್ಟು ನೆಗೞ್ವನುಂ, ದುಃಖಕ್ಕಂ ದುರ್ಯಶಕ್ಕಂ ಭಾಜನನಕ್ಕುಮಲ್ಲದೆ ಮಱೆದಪ್ಪೊಡಂ ಸುಖಮನೆಯ್ದಲಾಱಂ ೮೦

ಜಲಮಂ ಕಡೆದು ಧರಿತ್ರೀ
ತಳದೊಳ್ ಬೆಣ್ಣೆಗೊಳಲಿರ್ಪ ನರನುಂ ವಿಷಯಂ
ಗಳೊಳೆಳಸಿ ನಿಂದು ಸೌಖ್ಯ
ಕ್ಕೆಳಸುವನುಂ ಮರುಳಬಾಲವಾಗದೆ ಪೋಗಂ ೮೧

ಮಿಂಚಿನ ಬೆಳಕಂ ನಂಬಿ ಕ
ರಂ ಬಲದಿಂ ಬಟ್ಟೆವೋಪೆನೆಂಬನುಮೞಿಪಿಂ
ಪಂಚೇಂದ್ರಿಯಸುಖಮಂ ಪಿಡಿ
ದಂಚಿತಮೋಕ್ಷಕ್ಕೆ ಪೋಪನೆಂಬವನೆಗ್ಗಂ ೮೨

ಮಾಡಿಕೊಂಡು ವ್ಯವಹಾರಕ್ಕೆ ಹೋಗುವವನೂ, ಸೋಮಾರಿಯೊಡನೆ ಸೇರಿ ಕೆಲಸ ಮಾಡದಿರುವವನೂ, ಕಳ್ಳನ ಮಾತನ್ನು ನಂಬಿ ಕೂಡಿಟ್ಟ ಧನವನ್ನು ತೋರಿಸುವವನೂ ತಳವಾರನ ಮಾತನ್ನು ನಂಬಿ ಕೆಟ್ಟ ಸುದ್ದಿಯನ್ನು ಹೇಳುವವನೂ, ಧೂರ್ತನನ್ನು ನಂಬಿ ಬಾವಿಗೆ ಬೀಳುವವನೂ ಠಕ್ಕನ ಮಾತನ್ನು ನಂಬಿ ಪಕ್ಕದೂರಿಗೆ ಹೋಗುವವನೂ, ಮೋಸಗಾರನ ಮಾತನ್ನು ನಂಬಿ ಹೆಣ್ಣುಕೊಡುವವನೂ ಪಂಚೇಂದ್ರಿಯಗಳಿಗೆ ವಶನಾಗಿ ಸಂಸಾರದಲ್ಲಿ ಅಲ್ಪ ಭೋಗಕ್ಕೋಸ್ಕರ ಧರ್ಮವನ್ನು ಬಿಟ್ಟು ಆಚರಿಸುವವನೂ, ದುಃಖಕ್ಕೂ ಅಪಕೀರ್ತಿಗೂ ಪಾತ್ರರಾಗುವರೇ ಹೊರತು ಮರೆತು ಕೂಡ ಸುಖವನ್ನು ಹೊಂದಲಾರರು ೮೦. ನೀರನ್ನು ಕಡೆದು ಲೋಕದಲ್ಲಿ ಬೆಣ್ಣೆಯನ್ನು ಪಡೆಯಲಿರುವವನೂ ವಿಷಯ ಸುಖಗಳಲ್ಲಿಯೇ ಆಸೆಯಿಂದ ನಿಂತು ಸೌಖ್ಯಕ್ಕೆ ಆಶಿಸುವವನೂ ಬೆಪ್ಪರ ಬಾಲವಾಗದೆ ಹೋಗುವುದಿಲ್ಲ ೮೧. ಮಿಂಚಿನ ಬೆಳಕನ್ನು ನಂಬಿಕೊಂಡು ಪಟ್ಟು ಹಿಡಿದು ದಾರಿ ನಡೆಯುವೆನೆಂಬವನೂ ಆಸೆಯಿಂದ ಪಂಚೇಂದ್ರಿಯಸುಖವನ್ನು ಹಿಡಿದು ಶ್ರೇಷ್ಠವಾದ ಮೋಕ್ಷಕ್ಕೆ ಹೋಗುವೆನೆಂಬುವನೂ ದಡ್ಡರು ೮೨. ಒಡೆದುಹೋದ

ಒಡೆಗೆಱೆಯುಂ ನಂಬಿ ಮನಂ
ಬಡೆ ಬೆಳಸಿಂಗಾಸೆಗೆಯ್ವನುಂ ಸಂಸೃತಿಯೊಳ್
ಕಿಡುವೊಡಲಂ ನಂಬಿ ಸುಖ
ಕ್ಕೊಡರಿಸುವವನೆಯ್ದಲಾಱನೆಂತು ಫಲಮಂ ೮೩

ಎನಗೆಂದುಂ ಸಾವಿಲ್ಲೆಂ
ದನವರತಂ ಸೊರ್ಕವೇಡ ಸಾವುಳ್ಳವನೊ
ಯ್ಯನೆ ಸಾವ ಮನುಜರಂ ಕಂ
ಡೆನಗಂ ಸಾವುಂಟು ಬೇಗಮೆಂದಱೆಗಱೆವಂ ೮೪

ಸಾವವರಂ ಕಂಡಿರ್ದುಂ
ಸಾವೆಯ್ದಿದ ನರರನೊಯ್ದು ಸುಟ್ಟುಂ ಮತ್ತಂ
ಸಾವೆನಗಿಲ್ಲೆಂದಿರ್ಪನೆ
ಗಾವಿಲನಾರಯ್ದು ನೋಡುವಂದುರ್ವರೆಯೊಳ್ ೮೫

ಸಿರಿಕೆಟ್ಟು ಕರ್ಮವಶದಿಂ
ತಿರಿವವರಂ ಕಂಡು ಕಂಡು ಶಾಶ್ವತಮೆಂದಾ
ಸಿರಿಯಂ ನಂಬಿರ್ಪಾತಂ
ಮರುಳಿಳೆಯೊಳ್ ಮತ್ತೆ ಮರುಳ್ಗೆ ಕೋಡೆರಡೊಳವೇ ೮೬

ಮುನ್ನಿನ ಚಾಗಿಗಳಾವೆಡೆ
ಮುನ್ನಿನ ವಿಭವಾನ್ವಿತರ್ಕಳಾವೆಡೆ ಮತ್ತಂ
ಮುನ್ನಿನ ಸದ್ಧರ್ಮರಾವೆಡೆ
ಮುನ್ನಿನ ಚಕ್ರೇಶರೆಲ್ಲಿದರ್ ವಸುಮತಿಯೊಳ್ ೮೭

ಕೆರೆಯುನ್ನು ನಂಬಿಕೊಂಡು ಮನಸ್ತೃಪ್ತಿಯಾಗಿ ಬೆಳೆಗೆ ಆಸೆ ಪಡುವವನೂ ಸಂಸಾರದಲ್ಲಿ ನಶ್ವರವಾದ ಶರೀರವನ್ನು ನಂಬಿ ಸುಖಕ್ಕೆ ಪ್ರಯತ್ನಿಸುವವನೂ ಹೇಗೆಯೂ ಫಲವನ್ನು ಪಡೆಯಲಾರರು ೮೩. 'ನನಗೆ ಎಂದಿಗೂ ಸಾವಿಲ್ಲ' ಎಂದು ಎಲ್ಲ ಕಾಲವೂ ಸೊಕ್ಕಬೇಡ. ಸಾವುಳ್ಳವನು ಸಾಯುವ ಮನುಷ್ಯರನ್ನು ನೋಡಿ 'ನನಗೂ ಸಾವು ಉಂಟು' ಎಂದು ಬೇಗ ತಿಳಿದುಕೊಳ್ಳುವವನೇ ಜ್ಞಾನಿ ೮೪. ಸಾಯುವವರನ್ನು ಕಂಡಿದ್ದೂ, ಸಾವನ್ನು ಹೊಂದಿದ ಜನರನ್ನು ಹೊತ್ತುಕೊಂಡುಹೋಗಿ ಸುಟ್ಟು ಕೂಡ, ಮತ್ತೆ ತನಗೆ ಸಾವಿಲ್ಲವೆಂದಿರುವವನೇ ಲೋಕದಲ್ಲಿ ದಡ್ಡ ೮೫. ಕರ್ಮಫಲದಿಂದ ಐಶ್ವರ್ಯವನ್ನು ಕಳೆದುಕೊಂಡು ತಿರುಪೆ ಬೇಡುವವರನ್ನು ಕಂಡು ಕಂಡೂ, ಆ ಐಶ್ವರ್ಯ ಶಾಶ್ವತವೆಂದು ನಂಬಿಕೊಂಡಿರುವವನು ಈ ಲೋಕದಲ್ಲಿ ದಡ್ಡ. ಇನ್ನು ದಡ್ಡನಿಗೇನು ಎರಡು ಕೊಂಬುಗಳುಂಟೆ? ೮೬. ಹಿಂದಿನ ಕಾಲದ ತ್ಯಾಗಿಗಳು ಈಗ ಎಲ್ಲಿ ? ಮೊದಲಿನ ವೈಭವದಿಂದ ಬಾಳಿದವರು ಈಗೆಲ್ಲಿ? ಮೊದಲಿನ ಸದ್ಧರ್ಮವನ್ನು ಅನುಸರಿಸಿದವರು ಈಗೆಲ್ಲಿ? ಮುಂಚಿನ ಚಕ್ರವರ್ತಿ

ಅಱಿಂತದೊಳು ಪಿರಿಯನೆಂಬಂ
ಕುಱಿಯಾಗದೆ ನಂಬಿ ಕಿಡದೆ ಸಂಸೃತಿಯನಿದಂ
ತೊಱೆದು ತಪದಿಂದೆ ತನ್ನಂ
ಮಱೆದು ಸದಾಚಾರನಾಗಿ ನೆಗಟಲ್ವೇಡಾ ೮೮

ನಿಲ್ಲದ ತನುವನಿದಂ ತಳು
ಎಲ್ಲದೆ ತಪದಿಂದೆ ತವಿಸಿ ಕೈವಲ್ಯಶ್ರೀ
ವಲ್ಲಭನಾಗಲ್ವೇಡಾ
ಒಲ್ಲಂ ಸಂಸಾರದಟವಿವನೆಂಬ ಮನುಷ್ಯಂ ೮೯

ಗದ್ಯ॥ ಎಂದು ಭಾವಿಸಿ ಪಟ್ಟದರಸಿಯರ ರೂಪುಗಳಂ ನೋಡುವುದುಂ, ಎಮಗೆ ಕಾಂಕ್ಷೆಯಂ ಮಾಡಿದಿರಪ್ಪೊಡೆ ನಿಮ್ಮಾತ್ಮಕಾರ್ಯಕ್ಕೆಡಱಲ್ಲದೆ ಸಯ್ಪಾಗಲಱಿಯದೆಂದು ಪೇಟ್ವಂತೆ ಕೊಂಕಿದ ಕುರುಳ್ಗಳುಮಂ ಎಮಗೆಱಕಂ ಮಾಡಿದಿರಪ್ಪೊಡೆ ಕೀನಾಶನ ಸುತ್ತುವಲೆಗೊಳಗಪ್ಪಿರೆಂದು ಪೇಟ್ವಂತಿರ್ದ ಮೇಖಳೆಯುಮಂ, ಎಮಗಪೇಕ್ಷೆ ಮಾಡಿದಿರಪ್ಪೊಡೆ ಕರ್ಮರಾಜಂ ಪಿಡಿಯಿಂದಲ್ಲಾಡಿಸದೆ ಮಾಣನೆಂದುಪೇಟ್ವಂತಲ್ಲಾಡುವ ಮೇಲುದುಮಂ, ಎಮಗೆಱಗಿದಿರಪ್ಪೊಡೆ ಅಂತಕನಿಂದಿಱುಂಕೆ ಪಡುವಿರೆಂದು ಪೇಟ್ವಂತಿರ್ದ ತೊಡೆಯೋಳಱುಂಕಿದ ನಿಱಿಯುಮಂ ಎಮಗೆ ಮನಂಗೊಟ್ಟಿರ ಪ್ಪೊಡೆ ಸಂಸೃತಿಯ ಕೈಗೊಳಗಪ್ಪಿದರೆಂದು ಪೇಟ್ವಂತಿರ್ದ ತೋಳುಮಂ, ಎಮಗಟ್ಕರ್ತಿರಪ್ಪೊಡೆ ನಾರಕರ ಕಾಲ ತುಳಿಪಕ್ಕೊಳಗಪ್ಪಿರೆಂದು ಪೇಟ್ವಂತಿರ್ದ ಚರಣಾರವಿಂದಂಗಳುಮಂ ಎಮಗೆ

ಗಳು ಪ್ರಪಂಚದಲ್ಲಿ ಈಗ ಎಲ್ಲಿದ್ದಾರೆ ? ೮೭. ತಿಳಿವಳಿಕೆಯಲ್ಲಿ ದೊಡ್ಡವನಾದವನು ಕುರಿಯಂತೆ ಆವರಿವರನ್ನು ಕೇಳಿ. ನಂಬಿ ಕೆಟ್ಟುಹೋಗದೆ ಈ ಸಂಸಾರವನ್ನು ತೊರೆದು ತಪಶ್ಚರ್ಯೆಯಲ್ಲಿ ತೊಡಗಿ ತನ್ನ ಹಿರಿಮೆಯನ್ನು ಮರೆದು.ಸದಾಚಾರ ಪ್ರವೃತ್ತನಾಗಿ ಬಾಳಬೇಡವೆ ? ೮೮. ಶಾಶ್ವತವಾಗಿ ನಿಲ್ಲದ ಈ ದೇಹವನ್ನು ತಡಮಾಡದೆ ತಪಸ್ಸಿನಿಂದ ಕೃಶವಾಗಿಸಿ ಸಂಸಾರದ ನಾಶವನ್ನು ಬಯಸನೆಂಬ ಮನುಷ್ಯನು ಕೈವಲ್ಯ ಲಕ್ಷ್ಮಿಗೆ ವಲ್ಲಭನಾಗಬೇಡವೇ ? ೮೯. ಹೀಗೆ ಯೋಚಿಸಿ ಪಟ್ಟದ ರಾಣಿಯರ ರೂಪಗಳನ್ನು ನೋಡಲಾಗಿ, ನಮಗೆ ಆಸೆ ಪಟ್ಟರೆ ನಿಮ್ಮ ಕೆಲಸಕ್ಕೆ ವಿಘ್ನವಲ್ಲದೆ ಅನುಕೂಲವಾಗದೆಂದು ಹೇಳುವಂತೆ ಸೊಟ್ಟಗಿದ್ದ ಮುಂಗೂದಲುಗಳನ್ನು, ನಮ್ಮಲ್ಲಿ ಪ್ರೀತಿಯಿಟ್ಟರೆ ಯಮನ ಸುತ್ತುವಲೆಗೊಳಗಾಗುವಿರೆಂದು ಹೇಳುವಂತೆ ಇದ್ದ ಡಾಬನ್ನೂ ನಮಗೆ ಆಪೇಕ್ಷೆಪಟ್ಟರೆ ಕರ್ಮರಾಜನು ಹಿಡಿದು ಅಲ್ಲಾಡಿಸದೆ ಬಿಡುವುದಿಲ್ಲವೆಂದು ಹೇಳುವಂತೆ ಅಲ್ಲಾಡುವ ಉತ್ತರೀಯವನ್ನು, ನಮಗೆ ಸೋತಿರಾದರೆ ಯಮನಿಂದ ಇರುಕಿಗೆ ಸಿಕ್ಕುವಿರೆಂದು ಹೇಳುವಂತಿದ್ದ ತೊಡೆಯಲ್ಲಿ ಇರುಕಿಸಿದ ನಿಱಿಯನ್ನು ನಮಗೆ ಮನಸ್ಸು ಕೊಟ್ಟಿರಾದರೆ ಸಂಸಾರ ಸಂಸಾರದ ಕೈಗೆ ಒಳಗಾಗುವಿರೆಂದು ಹೇಳುವಂತಿದ್ದ ತೋಳುಗಳನ್ನೂ ನಮ್ಮ ಮೇಲೆ ಅಕ್ಕರೆಯಿಟ್ಟರೆ ನಾರಕಿಗಳ ಕಾಲಿನ ತುಳಿತಕ್ಕೆ ಸಿಕ್ಕುವಿರೆಂದು ಹೇಳುವಂತೆ

ಮೋಹಿಸಿದಿರಪ್ಪೊಡೆ ನಿರ್ಬುದ್ಧಿಗಳಪ್ಪಿರೆಂದು ಪೇಟ್ವಂತಿರ್ದ ದೊಡ್ಡಿದುವಪ್ಪ ಮುಡಿಗಳುಮಂ, ಎಮಗೆಸ್ನೇಹಂಗೆಯ್ದಿರಪ್ಪೊಡೆ ಕುಮಾರ್ಗಕ್ಕೆ ಸಲ್ವಿರೆಂದು ಪೇಟ್ವಂತೆ ಕೆಳಗಿಱಿದ ಬಾಸೆಗಳುಮಂ, ಎಮಗೆ ಬಗೆಗೊಟ್ಟಿರಪ್ಪೊಡೆ ನರಕಕ್ಕೀವಿರೆಂದು ಪೇಟ್ವಂತೆ, ನಸು ಜೋಲ್ದಮೊಲೆಗಳುಮಂ, ಎಮಗೆ ಪತ್ತುಗೆಯುಂ ಮಾಡಿದಿರಪ್ಪೊಡೆ ಸುಖದೊಳ್ ನೆಲಸದೆ ತಿರಿವಿರೆಂದು ಪೇಟ್ವಂತೆ ಸಂಚಳಿಸುವ ಕಣ್ಗಳುಮಂ, ನೋಡಿ ವೈರಾಗ್ಯಂ ಪೆರ್ಚೆ, ಪೆಱರ ಮನೆಯ ಮದುವೆಯೊಳ್ ಲೋಗರಂ ನಂಟಮಾಡಿಕೊಳ್ಳದವನುಂ, ಶಾಶ್ವತಮಲ್ಲಿದೊಡಲುಮಂ ನಿರಂತರಮಲ್ಲದ ಧನಮುಮಂ ತವಿಸಿ ಧ್ರುವಮಪ್ಪಸುಖಮಂ ಪಡೆಯದವನುಂ, ಬುದ್ಧಿವಂತರಲ್ಲರೆಂದು ತನ್ನೊಳ್ ನುಡಿದು ಸಂಸಾರವಲ್ಲಿಯುಂ ಬೇರ್ವೆರಸಿ ಕಿೞ್ತೀಡಾಡುವ ಕಜ್ಜಮನೆತ್ತಿಕೊಂಡು ರಾಜಮಂದಿರಕ್ಕೆ ವಂದು ಮಱುದಿವಸಮನಂತವೀರ್ಯಂ ಮೊದಲಾದ ಕುಮಾರರಂ ಬರಿಸಿ ಮುಂದೆ ಕುಳ್ಳಿರಿಸಿ ಯಶೋಧರ ಮಹಾರಾಜನಿಂತೆಂದಂ ೯೦

ಸಕಳೋರ್ವೀ ಚಕ್ರಮಂ ಸಾಧಿಸಿ ಭುಜಬಲದಿಂ ತಾಳ್ದು ವೀರತ್ವದಿಂ ಭೂ
ಪಕದಂಬಂ ಹಸ್ತಕಂಜದ್ವಯ ಮುಕುಳಿತರಾಗಿರ್ದು ಕೈವಾರದಿಂ ಸೇ
ವಕರಾಗಿರ್ಪಂತು ಮಾಡಿ ಪ್ರಕಟಿಸಿ ಜಸಮಂ ವಾರ್ಧಿಯಂ ತಾಪಿನಂ ಶ
ತ್ರು ಕದಂಬಂ ಬೆರ್ಚೆ ಕಪ್ಪಂದಱಿಸಿದೆನೊಲವಿಂದಿನ್ನೆಗಂ ಲೀಲೆಯಿಂದಂ ೯೦

ಇದ್ದ ಚರಣಕಮಲಗಳನ್ನು ನಮ್ಮನ್ನು ಮೋಹಿಸಿದರೆ ಬುದ್ಧಿಹೀನರಾಗುವಿರೆಂದು ಹೇಳುವಂತಿದ್ದ ದೊಡ್ಡಮುಡಿಗಳನ್ನು, ನಮ್ಮ ಸ್ನೇಹಕ್ಕೆ ಆಸೆ ಪಟ್ಟರೆ ಕುಮಾರ್ಗಕ್ಕೆ ಬೀಳುವಿರೆಂದು ಹೇಳುವಂತಿದ್ದ ಕೆಳಗಿಳಿದ ಬಾಸೆ (ತ್ರಿವಳಿ)ಗಳನ್ನು, ನಮಗೆ ಮನಸ್ಸು ಕೊಟ್ಟಿರಾದರೆ ನರಕಕ್ಕೆ ಇಳಿಯುವಿರೆಂದು ಹೇಳುವಂತಿದ್ದ ಸ್ವಲ್ಪ ಜೋತು ಬಿದ್ದಿದ್ದ ಮೊಲೆಗಳನ್ನೂ, ನಮ್ಮ ಸ್ನೇಹ ಮಾಡಿದರೆ ಸುಖವಾಗಿ ನೆಲಸದೆ ತಿರುಗುವಿರೆಂದು ಹೇಳುವಂತೆ ಇದ್ದ ಕಣ್ಣುಗಳನ್ನೂ ನೋಡಿ, ವೈರಾಗ್ಯವು ಹೆಚ್ಚಿ, ಇತರರ ಮನೆಯ ಮದುವೆಯಲ್ಲಿ ಕಂಡವರನ್ನು ನಂಟರು ಮಾಡಿಕೊಳ್ಳದವನೂ, ಶಾಶ್ವತವಲ್ಲದ ಶರೀರವನ್ನೂ ನಿರಂತರವಲ್ಲದ ಧನವನ್ನೂ ಕೃಶವಾಗಿಸಿ (ಸವೆಯಿಸಿ); ಶಾಶ್ವತವಾದ ಸುಖವನ್ನು ಪಡೆಯದವನೂ ಬುದ್ಧಿವಂತರಲ್ಲವೆಂದು ತನ್ನೊಳಗೇ ಹೇಳಿಕೊಂಡು ಅರಮನೆಗೆ ಬಂದು ಮಾರನೆಯ ದಿನ ಯುವರಾಜರನ್ನು ಬರಮಾಡಿ ಎದುರಿಗೆ ಕೂಡಿಸಿಕೊಂಡು ಯಶೋಧರ ಮಹಾರಾಜನು ಹೀಗೆ ಹೇಳಿದನು: ೯೦. ಸಮಸ್ತ ಭೂಮಂಡಲವನ್ನೂ ಗೆದ್ದು ಬಾಹುಬಲದಿಂದ ಧರಿಸಿ ರಾಜಸಮೂಹವೆಲ್ಲ ಕೈಮುಗಿದುಕೊಂಡು ಸ್ತುತಿಸುತ್ತಾ ಹೊಗಳುವ ಸೇವಕರಾಗಿರುವಂತೆ ಮಾಡಿ ನನ್ನ ಯಶಸ್ಸನ್ನು ಸಮುದ್ರವನ್ನು ತಾಕುವ ತನಕ ಹಬ್ಬಿಸಿ, ಶತ್ರು ಸಮೂಹವನ್ನು ಹೆದರಿಸಿ ಕಪ್ಪವನ್ನು ತರಿಸಿ ಇಲ್ಲಿಯುವರೆಗೆ ಆನಂದದಿಂದ ರಾಜ್ಯವಾಳಿದೆ. ೯೧. 'ಇನ್ನು ನನಗೆ

ಗದ್ಯ॥ ರಾಜ್ಯಂಗೆಯೆ ನಿನ್ನನಗೆ ತಡೆಯಲೆಡೆಯಿಲ್ಲ ಮುಕ್ತಿಶ್ರೀಯುಂ ಕುಡುವ ಜಿನೇಂದ್ರ ಪದಪದ್ಮಂಗಳಂ ಶರಣ್ಬುಗಲ್ವೇಟ್ಪುದು ಧರಾಭಾರಮಂ ಕೈಕೊಳ್ಳಿಮೆಂಬುದುಮನಂತವೀರ್ಯ ನಿಂತೆಂದಂ ೯೨

ದೇವ ಮರುಳಲ್ಲೆನೆನಗಂ
ದೇವರ್ ಕೈಕೊಂಬ ತಪಮೆ ಸಾಲ್ಗುಂ ಮುಕ್ತಿ
ಶ್ರೀವನಿತೆಯಲ್ಲದಳಿಪಿ ಮ
ಹೀ ವನಿತೆಗೆ ಸೋಲ್ತು ಕಿಡುವ ಗಾಂಪನೆನಲ್ಲೆಂ ೯೩

ಈ ಭವದ ಸುಖಕ್ಕೆನಗೆ ಮ
ಹಾಭಯಮೇಗೆಯ್ದುಮೊಲ್ವೆನಲ್ಲೆಂ ನೆಱೆ ಧಾ
ತ್ರೀ ಭಾರಮನವನೀಶ ಧ
ರಾಭಾರಮನಾಂತು ಕಿಡಿಸಲಾಱೆಂ ಸುಖಮಂ ೯೪

ಎನಗೆ ದಯೆಗೆಯ್ವುದವನೀ
ವಸಿತೇಶ್ವರ ದಿವ್ಯಮಪ್ಪ ಜಿನದೀಕ್ಷೆಯೆ ಸಾ
ಲ್ಗಿನಿತೆಂಬುದುಂ ನೃಪಂ ಪ್ರಿಯ
ತನಯನ ಮಾತಿಂಗೆ ಪೆರ್ಚೆ ಮನದಾದರದಿಂ ೯೫

ಈತಂ ಸಂಸಾರಕ್ಕತಿ
ಭೀತಂ ರಾಜ್ಯಕ್ಕೆ ಮೋಹಮುಳ್ಳವನಲ್ಲಂ
ಭೂತಳಭಾರಮನೆತ್ತುವೆ
ನೀತನ ತಮ್ಮಂಗೆ ತಡೆಯದೀಗಳೆ ಮುದದಿಂ ೯೬

ಇಲ್ಲಿ ನಿಲ್ಲಲು ಸಾವಕಾಶವಿಲ್ಲ. ಮೋಕ್ಷಲಕ್ಷ್ಮಿಯನ್ನು ಕೊಡುವ ಜಿನೇಂದ್ರ ಪಾದಕಮಲಗಳನ್ನು ಮೊರೆ ಹೋಗಬೇಕು. ರಾಜ್ಯಭಾರವನ್ನು ನೀವು ತೆಗೆದುಕೊಳ್ಳಿ' ಎನ್ನಲು ಅನಂತವೀರ್ಯನು ಹೀಗೆ ಹೇಳಿದನು ೯೨: "ದೇವ! ನನಗೆ ದಡ್ಡತನವಿಲ್ಲ. ತಾವು ಕೈಕೊಳ್ಳುವ ತಪಸ್ಸೇ ನನಗೂ ಸಾಕು. ಮೋಕ್ಷಲಕ್ಷ್ಮಿಗಲ್ಲದೆ ಈ ರಾಜ್ಯಲಕ್ಷ್ಮಿಗೆ ಆಸೆಪಟ್ಟು ಕೆಡುವ ದಡ್ಡ ನಾನಲ್ಲ." ೯೩. ಈ ಜನ್ಮದ ಸುಖಕ್ಕೆ ನನಗೆ ಬಹಳ ಭಯ. ಏನೇ ಮಾಡಿದರೂ ನಾನು ರಾಜ್ಯಭಾರಕ್ಕೆ ಒಲ್ಲೆ. ಆ ಹೊರೆ ಹೊತ್ತುಕೊಂಡು ನನ್ನ ಮೋಕ್ಷವನ್ನು ಹಾಳುಮಾಡಿಕೊಳ್ಳಲಾರೆ. ೯೪. ಮಹಾರಾಜನೇ! ನನಗೆ ತಾವು ಜಿನದೀಕ್ಷೆಯನ್ನು ಅನುಗ್ರಹಿಸಬೇಕು. ನನಗೆ ಅದೇ ಸಾಕು" ಎಂದು ಹೇಳಲು ರಾಜನು ಪ್ರೀತಿಯ ಮಗನ ಮಾತಿಗೆ ಉತ್ಸಾಹಿಸಿದನು. ೯೫. ಆತನು ಮನಸ್ಸಿನಲ್ಲಿ ಆದರದಿಂದ "ಇವನು ಸಂಸಾರಕ್ಕೆ ಬಹಳ ಭೀತನಾಗಿದ್ದಾನೆ; ರಾಜ್ಯದ ಮೋಹವಿರುವವನೂ ಅಲ್ಲ. ಈತನ ತಮ್ಮನಿಗೆ ರಾಜ್ಯಭಾರವನ್ನು ಹೊರಿಸುತ್ತೇನೆ. ಈಗಲೆ, ತಡಮಾಡದೆ, ಸಂತೋಷದಿಂದ ನಡೆಸುತ್ತೇನೆ. ೯೬. ಎಂದು ಯಶೋಧರ ಮಹಾರಾಜನು ಶ್ರೀಧರಕುಮಾರನ ಮುಖ

ಗದ್ಯ॥ ಎಂದು ಯಶೋಧರ ಮಹಾರಾಜಂ ಶ್ರೀಧರಕುಮಾರನ ಮೊಗಮಂ ನೋಡಿ ವೆಂಗಿ ಮಂಡಲಂ ಮೊದಲಾದ ಸಮುದ್ರಮುದ್ರಿತ ಮಹೀವಳಯಮೆಲ್ಲಮಂ ಕೊಂಡು ರಾಜ್ಯಲಕ್ಷ್ಮೀ ಮನೋಹರನಾಗಿ ಸುಖದಿಂದಿರ್ಪುದೆಂಬುದಂ ವಾತ್ಸಲ್ಯರತ್ನಾಕರಂ ಮುಗುಳ್ನಗೆನಕ್ಕಿಂತೆಂದಂ ೯೭

ದೇವರ್ ಧರಿಯಿಸುವಿಳೆಯಂ
ಭೂವಳಯದೊಳೆಮ್ಮವಂದಿಗರ್ ತಮ್ಮಳವಂ
ಭಾವಿಸದೆ ಸೊಕ್ಕಿ ಪೆಂಪಿಂ
ಗಾವಿಲತನದಿಂದ ಮುಟ್ಟಿಧರಿಯಿಸಲಳವೇ ೯೮

ದೇವರ್ ದಯೆಗೆಯ್ವೊಡೆ ಸ
ದ್ಭಾವದಿನಪವರ್ಗಲಕ್ಷ್ಮಿಯಂ ತತ್ಕ್ಷಣದಿಂ
ದೀವ ಜಿನರಾಜದೀಕ್ಷೆಯು
ನೀವುದು ಪೆಱತೇವುದೆವಗೆ ನಾಡುಂ ಬೀಡುಂ ೯೯

ಗದ್ಯ॥ ಕಳವೆಯ ಕೂೞುಮಂ ತಿಳಿದುಪ್ಪಮುಮಂ ಬಿಸುಟ್ಟು ನುಚ್ಚುಗೂೞುಮನೆಣ್ಣೆಯು ಮನುಣ್ಬನುಮಂ ಬಾೞೆಯ ಪಣ್ಣುಮಂ ಖಂಡಶರ್ಕರೆಯುಮಂ ಬಿಸುಟು ಎಱೆಯ ಮಣ್ಣ ಮೆಲ್ವನುಂ ಪಾಸುವುಂ ಬಿಸುಟ್ಟು ಸಱೆಯ ಮೇಲೆ ಪಡುವನುಂ ನಂಟರುಮಂ ಕೆಳೆಯರುಮಂ ಬಿಟ್ಟು ದಾಯಿಗರಂ ಪೊರ್ದುವನುಂ ಕುದುರೆಯುಮನಾನೆಯುಮನೊಲ್ಲದೆ ನಾಯನೇಱುವನುಂ

ವನ್ನು ನೋಡಿ "ವೆಂಗಿಮಂಡಲವೇ ಮೊದಲಾದ, ಸಮುದ್ರ ಸುತ್ತುಗಟ್ಟಿರುವ ಭೂಮಂಡಲವೆಲ್ಲವನ್ನೂ ಸ್ವೀಕರಿಸಿ ರಾಜ್ಯಲಕ್ಷ್ಮಿಗೆ ಪ್ರಿಯನಾಗಿ ಸುಖದಿಂದಿರತಕ್ಕದ್ದು" ಎಂದು ಹೇಳುತ್ತಲೂ ಆ ವಾತ್ಸಲ್ಯ ರತ್ನಾಕರನಾದ ಶ್ರೀಧರಕುಮಾರನು ಮುಗುಳುನಗೆ ನಕ್ಕು ಹೀಗೆಂದನು. ೯೭. ದೇವರವರು ಧರಿಸುವಂಥ ಭೂಮಿಯನ್ನು ಲೋಕ ದಲ್ಲಿ ನಮ್ಮಂಥರು ತಮ್ಮ ಶಕ್ತಿಯನ್ನು ಕುರಿತು ಯೋಚಿಸದೆ ಗರ್ವಪಟ್ಟು ಹೆಮ್ಮೆಯಿಂದ ಅದನ್ನು ಹಿಡಿದು ಧರಿಸುವುದು ಸಾಧ್ಯವೆ ? ೯೮. ದೇವರವರು ಅಪವರ್ಗಲಕ್ಷ್ಮಿಯನ್ನು ಸದ್ಭಾವದಿಂದ ಅನುಗ್ರಹಿಸುವುದಾದರೆ ಈ ಕೂಡಲೆ ಜಿನ ರಾಜದೀಕ್ಷೆಯನ್ನು ಕೊಡಬೇಕು.. ಈ ನಾಡೂ ಬೀಡೂ, ನನಗೆ ಏಕೆ ? ೯೯. ನೆಲ್ಲಕ್ಕಿಯ ಅನ್ನವನ್ನೂ ತಿಳಿಯಾದ ತುಪ್ಪವನ್ನೂ ಬಿಸಾಟು ನುಚ್ಚಿನ ಅನ್ನವನ್ನೂ ಎಣ್ಣೆಯನ್ನೂ ಉಣ್ಣುವವನನ್ನೂ ಬಾಳೆಯ ಹಣ್ಣನ್ನೂ ಕಲ್ಲುಸಕ್ಕರೆಯನ್ನೂ ಬಿಟ್ಟು ಎರೆಯ ಮಣ್ಣನ್ನು ಮೆಲುವವನೂ ಹಾಸಿಗೆಯನ್ನು ಬಿಟ್ಟು ಬಂಡೆಯ ಮೇಲೆ ಮಲಗು ವವನೂ ನಂಟರನ್ನೂ ಸ್ನೇಹಿತರನ್ನೂ ಬಿಟ್ಟು ದಾಯಾದಿಗಳನ್ನು ಸೇರುವವನೂ ಕುದುರೆ ಯನ್ನೂ ಆನೆಯನ್ನೂ ಒಲ್ಲದೆ ನಾಯಿಯನ್ನು ಸವಾರಿ ಮಾಡುವವನೂ, ಅಮೂಲ್ಯ

ಅಮೂಲ್ಯಮಪ್ಪ ಅಣುವ್ರತಮಹಾವ್ರತಂಗಳುಮನ:ದಾಸೀನಂಗೆಯ್ದು ಸಂಸಾರದಲ್ಪಸುಖಮಂ
ಪೊರ್ದುವನುಂ ಮರುಳರಲ್ಲದೆ ಚತುರರಲ್ಲರ್ ೧೧೦

ಅದಱಿಂ ಕೈವಲ್ಯಶ್ರೀ
ಸುದತಿಯನಾರ್ತೀವ ಜೈನದೀಕ್ಷೆಯನೆ ಶುಭಾ
ಭ್ಯುದಯಮನೆ ಕುಡುವುದಲ್ಲದೆ
ವಿದಿತಂ ದಯೆಗೆಯ್ಯಬೇಡ ರಾಜ್ಯಶ್ರೀಯಂ ೧೧೧

ಎನಗೆಳ್ಳನಿತುಂ ಸಾಸವೆ
ಯನಿತುಂ ಸೀರನಿತು ಮೋಹಮಿಲ್ಲವನಿಯ ಮೇ
ಲೆನಗೆ ಪಿರಿದಪ್ಪಮೋಹಂ
ಜಿನದೀಕ್ಷೆಯೊಳುಂಟು ದೇವ ನಿಶ್ಚಯದಿಂದಂ ೧೧೨

ಗದ್ಯ॥ ಎಂದು ಪಲವಂ ನುಡಿಯದೊಂದನೆ ಪರಿಚ್ಛೇದವಾಗಿ ನುಡಿದು ಮಾಣ್ಬುದುಂ ಯಶೋಧರ ಮಹಾರಾಜಂ ಸಮ್ಯಕ್ತ್ವ ಚೂಡಾಮಣಿಯ ಮನದ ನಿರ್ಮಳಿಕೆಯಂ ನಱಿದು ಪೆಱತಂ ನುಡಿಯದೀ ಪ್ರಿಯಬಂಧುಕುಮಾರಂಗೆ ಪಟ್ಟಮಂ ಕಟ್ಟಿ ಧರಾಭಾರಮಂ ಕೊಟ್ಟು ಮೆಯ್ಸುಖಕ್ಕೆಳಸದನಂತವೀರ್ಯಕುಮಾರನುಂ ವಾತ್ಸಲ್ಯರತ್ನಾಕರನುಂ ಬೆರಸು ಪೊಟಲಂ ಪೊಱಮಟ್ಟು ಪೋಗಿ ವಿಶ್ವಸೇನರೆಂಬಾಚಾರ್ಯರಲ್ಲಿ ಜಿನದೀಕ್ಷೆಯಂ ಕೈಕೊಂಡು ಸಕಳಶ್ರುತ ಮುಮನೋದಿ ೧೧೩

ವಾದ ಅಣುವ್ರತ ಮಹಾವ್ರತಗಳನ್ನು ಉದಾಸೀನ ಮಾಡಿ ಸಂಸಾರದ ಅಲ್ಪ ಸುಖಕ್ಕೆ ಆಸೆಪಡುವವನೂ ದಡ್ಡರೇ ಹೊರತು ಜಾಣರಲ್ಲ. ೧೧೦. ಆದ್ದರಿಂದ ಕೈವಲ್ಯ ಲಕ್ಷ್ಮಿ ಯೆಂಬ ವನಿತೆಯನ್ನು ಪ್ರೀತಿಯಿಂದ ಕೊಡುವ ಜೈನದೀಕ್ಷೆಯನ್ನೇ, ಶುಭವಾದ ಅಭ್ಯುದಯವನ್ನೇ ಅನುಗ್ರಹಿಸಬೇಕೇ ಹೊರತು ಈ ರಾಜ್ಯೈಶ್ವರ್ಯವನ್ನು ಕೊಡ ಬಾರದು. ೧೧೧. ರಾಜ್ಯದ ಮೇಲೆ ನನಗೆ ಎಳ್ಳಷ್ಟೂ, ಸಾಸಿವೆಯಷ್ಟೂ, ಹೇಸಿನ ಮೊಟ್ಟೆಯಷ್ಟೂ ಮೋಹವಿಲ್ಲ. ದೇವ ! ನಿಶ್ಚಯವಾಗಿಯೂ ನನಗೆ ಜಿನದೀಕ್ಷೆಯ ಮೇಲೆ ಹೆಚ್ಚಾದ ಪ್ರೀತಿಯುಂಟು. ೧೧೨. ಹೀಗೆ ಹಲವು ಮಾತುಗಳನ್ನಾಡದೆ ಒಂದೇ ಅಭಿಪ್ರಾಯವನ್ನು ನಿರ್ಧಾರವಾಗಿ ಹೇಳಿ ಸುಮ್ಮನಿರಲು ಯಶೋಧರ ರಾಜನು ಶ್ರೀಧರ ಕುಮಾರನ ಮನಸ್ಸಿನ ಪರಿಶುದ್ಧಿಯನ್ನ ತಿಳಿದು ಬೇರೆ ಉತ್ತರ ಹೇಳದೆ ಪ್ರಿಯಬಂಧು ಕುಮಾರನಿಗೆ ಪಟ್ಟಕಟ್ಟಿ ರಾಜ್ಯಭಾರವನ್ನು ವಹಿಸಿ ದೇಹಸುಖಕ್ಕೆ ಆಸೆಪಡದ ಅನಂತ ವೀರ್ಯಕುಮಾರನನ್ನೂ ವಾತ್ಸಲ್ಯರತ್ನಾಕರನೆನಿಸಿದ ಶ್ರೀಧರಕುಮಾರನನ್ನೂ ಕರೆದು ಕೊಂಡು ಪಟ್ಟಣವನ್ನು ಬಿಟ್ಟು ಹೋಗಿ ವಿಶ್ವಸೇನರೆಂಬ ಆಚಾರ್ಯರಲ್ಲಿ ಜಿನದೀಕ್ಷೆ ಯನ್ನು ಗ್ರಹಿಸಿ ಎಲ್ಲ ಶ್ರುತಗಳನ್ನೂ ಓದಿದರು. ೧೧೩. ಗುರುಪಾದ ಸೇವೆಯಿಂದ,

ಗುರುಪದಸೇವೆಯಿಂದಮಳಚಿತ್ತದಿನುಜ್ಜ್ವಲಮಪ್ಪದೊಂದು ದು
ರ್ಧರಚರಿತಂಗಳಿಂದಮರ್ದ ಸಂಯಮದಿಂ ಮನದೋಜೆಯಿಂ ಮನಂ
ಮುರಿಯದೆ ಬಾಹ್ಯ ದಿವ್ಯ ತಪದುನ್ನತಿಯಿಂ ಪಲವುಂ ಪರೀಷಹೋ
ತ್ಕರದೊಳಮಿರ್ದ ಬಾಧೆಗೆ ಮನಂಗಿಡದೂರ್ಜಿತಮಪ್ಪ ಧೈರ್ಯದಿಂ ೧೧೪

ಇವರ್ಗೆ ದೊರೆಯಿಲ್ಲ ಬಗೆವೊಡೆ
ಭುವನದೊಳೆಂದರ್ತಿವೆರಸು ಭಕ್ತಿಯ ಭರದಿಂ
ಪುರರ ಗುಣಾಢ್ಯರ್ ಬಣ್ಣಿಸೆ
ವಿವಿಧ ಗುಣರ್ ತಪದೊಳುತ್ತರೋತ್ತರಮಾದರ್ ೧೧೫

ಮುನ್ನಿನ ಸಿರಿಯಂ ನೆನೆಯದೆ
ಮುನ್ನಿನ ಲೀಲೆಗಳನೆಯ್ದೆ ಪಂಬಲಿಸದೆ ಭೂ
ಪೋನ್ನತರಟ್ಟ ತಪದೊಳ್
ಮುನ್ನಿನ್ನ ಸಚ್ಚರಿತರೋಜೆಗೆಣೆಯೆನೆ ನೆಗಟ್ಟರ್ ೧೧೬

ಬೆಂಬೀಟದೆ ಪೆಟಪೆಟಿತಂ
ಪಂಬಲಿಸದೆ ಕರ್ಮವೈರಿಗೆಡೆಗುಡದೆ ಶರೀ
ರಂ ಬಡವಾದಪುದೆನ್ನದೆ
ಡೊಂಬಿಲ್ಲದೆ ಶುದ್ಧವೃತ್ತಿಯೊಳ್ ನೆಣ್ ನೆಗಟ್ದರ್ ೧೧೭

ಶುದ್ಧಚಿತ್ತದಿಂದ ಉಜ್ವಲವಾದ ದುಷ್ಕರವಾದ ಚಾರಿತ್ರ್ಯದಿಂದ, ಅಳವಟ್ಟ ಆತ್ಮ ಸಂಯಮದಿಂದ ಮನಸ್ಸಿನ ಕ್ರಮದಿಂದ ನಿರ್ಧಾರ ಮುರಿಯದೆ ಹೊರಗಿನ ದಿವ್ಯ ತಪಸ್ಸಿನ ಹೆಚ್ಚಳದಿಂದ ಅನೇಕ ಪರೀಷಹಗಳಲ್ಲಿನ ಹಿಂಸೆಗೂ ಮನಸ್ಸು ಕೆಡದೆ, ಊರ್ಜಿತವಾಗುವ ಧೈರ್ಯದಿಂದ ಕೂಡಿ ೧೧೪. ಇವರಿಗೆ ಸಮಾನರಾದ ತಪಸ್ವಿಗಳು ಲೋಕದಲ್ಲಿ ಎಲ್ಲಿಯೂ ಇಲ್ಲವೆಂದು ಗುಣಾಢ್ಯರಾದವರು ಸಂಭ್ರಮದಿಂದ ಹೊಗಳುವ ಹಾಗೆ ಈ ರಾಜಕುಮಾರರು ತಪಸ್ಸಿನಲ್ಲಿ ಕ್ರಮವಾಗಿ ವೃದ್ಧಿಹೊಂದಿದರು. ೧೧೫. ಹಿಂದಿನ ಐಶ್ವರ್ಯವನ್ನು ನೆನೆಸಿಕೊಳ್ಳದೆ ಹಿಂದಿನ ಲೀಲಾ ವಿನೋದಗಳಿಗೆ ಹಂಬಲಿಸದೆ ಆ ರಾಜ ಶ್ರೇಷ್ಠರು ತಪಸ್ಸಿನಲ್ಲಿ ತೀವ್ರವಾಗಿ ಸಾಧನೆ ಮಾಡಿ ಪೂರ್ವದ ಸಚ್ಚರಿತ್ರರ ಕ್ರಮಕ್ಕೆ ಸಮಾನರೆನ್ನುವಂತೆ ಆಚರಿಸಿದರು. ೧೧೬. ಹಿಂತೆಗೆಯದೆ, ಬೇರೆ ಬೇರೆಯುವ್ರಗಳನ್ನು ಹಂಬಲಿಸದೆ ಕರ್ಮವೆಂಬ ಶತ್ರುವಿಗೆ ಅವಕಾಶ ಕೊಡದೆ ಈ ಶರೀರವು ಬಡವಾಗುವುದೆಂದು ಯೋಚಿಸದೆ ಡಂಭವಿಲ್ಲದೆ ಶುದ್ಧವಾದ ನಡತೆಯಲ್ಲಿ ಪ್ರಸಿದ್ಧರಾದರು. ೧೧೭.

ಎಂತುಟು ಜಿನೇಂದ್ರವಚನಮ
ದಂ ತಪ್ಪದೆ ಪೆಱರ ಪೂಜೆಗೆಳಸದೆ ಸುಖಮಂ
ಚಿಂತಿಸದೆ ನಿರ್ವೃತಿ ಶ್ರೀ
ಕಾಂತೆಯ ಕೂಟಮಂ ಬಯಸಿ ನೆಗಲ್ದರ್ ತಪದೊಳ್ ೧೦೮

ಗದ್ಯ॥ ಪಾವಸೆಗಲ್ಲಂ ಮೆಟ್ಟಿದಂತೆ ಸನ್ಮಾರ್ಗಮಂ ಮೀಱಿ ಪರಿಯದೆ ತ್ರಿದಂಡರಹಿತರುಂ ತ್ರಿಶಲ್ಯವರ್ಜಿತರುಂ ಚತುಷ್ಕಷಾಯದೂರರುಂ ತ್ರಯೋದಶವಿಧಚಾರಿತ್ರ ಸಂಪನ್ನರುಂ ಪಂಚಾಚಾರಯುಕ್ತರುಂ ದಶಧರ್ಮಧರರುಮಾಗಿ ಗುರುಗಳಾಜ್ಞೆಯಿಂ ಗುರುಗಳನಗಲ್ದು ವಿಹಾರಿಸುತ್ತುಂ ಬಂದು ಜಟಾಶಿಖರಮೆಂಬ ಪರ್ವತಮನೆಯ್ದಿ ತದ್ಗಿರಿಯೊಳ್ ಯಶೋಧರ ಭಟ್ಟಾರಕರುಮನಂತವೀರ್ಯಮುನಿಪುಂಗವನುಂ ಅಷ್ಟಕರ್ಮಮಂ ಕಿಡಿಸಿ ಪರಮಶ್ರೀಮನಃ ಪ್ರಿಯರಾದರಕಳಂಕರೆನಿಸಿದ ಶ್ರೀಧರಾಚಾರ್ಯರಾ ಗಿರಿಯೊಳುಗ್ರೋಗ್ರಮಪ್ಪ ತಪದೊಳ್ ನೆಗಟ್ತುತ್ತುಮಿರ್ದರನ್ನೆಗಂ ೧೦೯

ಪ್ರತಿಪಾಲಪುರಮುಮಂ ಸಂ
ತತಮವನೀತಳಮುಮಂ ಮಹೋನ್ನತಿಯಿಂದು
ದ್ಧತವೈರಿದರ್ಪದಳನಂ
ನುತ ಸತ್ಪ್ರಿಯ ಬಲಕುಮಾರಕಂ ಪಾಲಿಸುತುಂ ೧೧೦

ಜಿನೇಂದ್ರವಚನವೆಷ್ಟಿದೆಯೋ ಅದಷ್ಟನ್ನೂ ತಪ್ಪದೆ, ಇತರರ ಗೌರವಕ್ಕೆ ಆಸೆಪಡದೆ, ತಮ್ಮ ದೇಹಸೌಖ್ಯವನ್ನು ಕುರಿತು ಯೋಚಿಸದೆ ಮೋಕ್ಷಲಕ್ಷ್ಮಿಯ ಸೇರುವಿಕೆಯನ್ನೇ ಬಯಸಿ ತಪಸ್ಸನ್ನು ಮಾಡಿದರು. ೧೦೮. ಪಾಚಿಯ ಕಲ್ಲನ್ನು ತುಳಿದಂತೆ ಸನ್ಮಾರ್ಗವನ್ನು ಉಲ್ಲಂಘಿಸಿ ನಡೆಯದೆ ತ್ರಿದಂಡಗಳಿಲ್ಲದೆ, ತ್ರಿಶಲ್ಯಗಳನ್ನು ವರ್ಜಿಸಿ ನಾಲ್ಕು ಕಷಾಯ ಗಳಿಂದ ದೂರವಿದ್ದು ಹದಿಮೂರು ವಿಧವಾದ ಚಾರಿತ್ರದಿಂದ ಕೂಡಿದವರಾಗಿ ಪಂಚಾ ಚಾರಗಳಿಂದ ಕೂಡಿದವರೂ ದಶಧರ್ಮಗಳನ್ನು ಧರಿಸಿದವರೂ ಆಗಿ ಗುರುಗಳ ಆಜ್ಞೆ ಯಂತೆ ಅವರನ್ನು ಬಿಟ್ಟು ಹೊರಟು ವಿಹಾರಿಸುತ್ತ ಬಂದು ಜಟಾಶಿಖರವೆಂಬ ಪರ್ವತ ವನ್ನು ಸೇರಿ ಆ ಗಿರಿಯಲ್ಲಿ ಯಶೋಧರ ಭಟ್ಟಾರಕರೂ ಅನಂತವೀರ್ಯಮುನಿಶ್ರೇಷ್ಠರೂ ಅಷ್ಟಕರ್ಮವನ್ನು ನಾಶಮಾಡಿ ಮೋಕ್ಷಲಕ್ಷ್ಮಿಗೆ ಮನಃಪ್ರಿಯರಾದರು. ಅಕಳಂಕರಾದ ಶ್ರೀಧರಾಚಾರ್ಯರು ಆ ಗಿರಿಯಲ್ಲಿ ಮಹಾ ಉಗ್ರವಾದ ತಪಸ್ಸನ್ನು ಆಚರಿಸುತ್ತಿದ್ದರು. ೧೦೯. ಆ ವೇಳೆಗೆ ಪ್ರತಿಪಾಲಪುರವನ್ನೂ ಸಮಸ್ತ ಭೂಮಂಡಲವನ್ನೂ ಮಹಾ ಪರಾಕ್ರಮದಿಂದ ಕೊಬ್ಬಿದ ಶತ್ರುಗಳ ದರ್ಪಹರನಾದ ಸ್ತೋತ್ರಪಾತ್ರನಾದ ಪ್ರಿಯಂಬಲ ಕುಮಾರಕನು ಪಾಲಿಸುತ್ತ ೧೧೦. ಸುಖವಾಗಿರುವಾಗ ಒಂದು ದಿವಸ ಒಬ್ಬ ವನಪಾಲಕ

ಗದ್ಯ॥ ಸುಖಸಂಕಥಾವಿನೋದದಿಂದಿರ್ಪುದುಮೊಂದು ದಿವಸಂ ವನಪಾಲಕನೊರ್ವಂ ಬಂದು ಜಿನಸಮಯವಾರ್ಧಿವರ್ಧನಚಂದ್ರಸಂ ಕಂಡು ತನ್ನ ತಂದ ಪೊಸಮಾವಿನೆಳದಳಿರುಮಂ ಜಾದಿಯ ಮಲ್ಲಿಗೆಯ ಪಾದರಿಯ ಪೊಸ ಪುಷ್ಪಮುಮಂ ಕೊಟ್ಟು ಪೊಡೆಮಟ್ಟು ೧೧೧

ಅಳಿಗಳ ಗಾಯನಂ ನಿವಿಃಟ ಕೋಕಿಲನಿಸ್ವನಮುಣ್ಮೆ ಕೇಕಿಸಂ
ಕುಳರವಮೊಪ್ಪೆ ಕೆಂದಳಿರ ಗೊಂದಣದಿಂ ಸಹಕಾರಭೂರುಹಾ
ವಳಿ ಕಡುರಮ್ಯಮಾಗೆ ವನಜಂಗಳರಲ್ದಿರೆ ಕೂಡೆ ಚಂದ್ರನು
ಜ್ಜ್ವಳಿಸಿ ವಿನೋದದಿಂ ಪದೆಯೆ ಬಂದನೊರಲ್ದು ವಸಂತವಲ್ಲಭಂ ೧೧೨

ಗದ್ಯ॥ ಅಂತು ಬಂದ ವಸಂತಮಾಸಮಂ ವ್ಯರ್ಥಮಾಡದೆ ವನಕ್ರೀಡೆಗೆ ಬಿಜಯಂಗೆಯ್ವುದೆಂದು ಬಿನ್ನಪಂಗೆಯ್ವುದುಂ, ಪ್ರಿಯಬಳಕುಮಾರಂ ವನಪಾಲಕನ ಮಾತಿಂಗೆ ಮೆಚ್ಚಿ ಪಸಾಯದಾನಮಂ ಕೊಟ್ಟು ವನಮಂ ಲೇಸುಮಾಡೆಂದು ಕಳುಪಿ ಮಱುದಿವಸಮುತ್ಸಾಹಭೇರಿಯಂ ಪೊಯ್ಸಿ ೧೧೩

ನೆಲೆವೊಳೆ ಶೋಭೆವೆತ್ತಿರೆ ಮುಖಾಂಬುರುಹಂ ಕಡುರಮ್ಯಮಾಗೆ ಸಂ
ಚಲನಯನದ್ವಯಂ ಪೊಳೆಯೆ ಕರ್ಣಯುಗಂ ಕರಮೊಪ್ಪೆ ನೀಲಕುಂ
ತಲದ ಬೆಡಂಗು ಶೋಭೆವಡೆದುನ್ನತಿವೆತ್ತಿರೆ ಗಾಡಿವೆತ್ತ ಕೋ
ಮಲೆಯರಿನೊಪ್ಪಿ ಬಂದನವನೀಶ್ವರನಂದಮರೇಂದ್ರಲೀಲೆಯಿಂ ೧೧೪

ಗದ್ಯ॥ ಅಂತು ಬಂದು ತನ್ನ ಬರವಿಂಗೆ ತೋರಣಂಗಟ್ಟಿದಂತಿರ್ದ ಮಾಧವೀ ಲತೆಗಳುಮಂ, ತನ್ನ ಬರವಿಂಗೆ ವನದೇವತೆಯರ್ ನೆರೆದು ಮಂಗಳಂ ಪಾಡುವಂತೆ ಮೃದುನಿನಾದದಿಂ ಪಾಡುವ

ಬಂದು ಜೈನಧರ್ಮವರ್ಧನನನ್ನು ಕಂಡು, ತಾನು ತಂದ ಹೊಸಮಾವಿನ ಎಳೆಯ ಚಿಗುರನ್ನೂ ಜಾಜಿಮಲ್ಲಿಗೆ, ಪಾದರಿಗಳ ಹೊಸ ಹೂಗಳನ್ನು ಕೊಟ್ಟು ೧೧೧. ದುಂಬಿಗಳ ಗಾನ, ಕೋಕಿಲೆಗಳ ಮಧುರ ಧ್ವನಿ, ನವಿಲುಗಳ ಸಮೂಹದ ಶಬ್ದ, ಕೆಂಪು ಚಿಗುರಿನ ಗೊಂಚಲುಗಳಿಂದ ಮಾವಿನ ಮರಗಳು ಬಹಳ ರಮ್ಯವಾಗಲು ಹೂವುಗಳೆಲ್ಲ ಅರಳಿರಲು ಜತೆಗೆ ಚಂದ್ರನು ಪ್ರಕಾಶಿಸಿ ವಿನೋದದಿಂದ ಆಸೆ ಹುಟ್ಟಿಸಲು ವಸಂತವಲ್ಲಭನು ಬಂದಿದ್ದಾನೆ ೧೧೨. ಹಾಗೆ ಬಂದ ವಸಂತಮಾಸವನ್ನು ವ್ಯರ್ಥಮಾಡದೆ ವನವಿಹಾರಕ್ಕೆ ಬಿಜಯಮಾಡಿಸಬೇಕೆಂದು ಬಿನ್ನಹ ಮಾಡಿಕೊಂಡನು. ಪ್ರಿಯಬಲ ಕುಮಾರನು ವನಪಾಲಕನ ಮಾತಿಗೆ ಮೆಚ್ಚಿ ಪಾರಿತೋಷಕವನ್ನು ಕೊಟ್ಟು ವನವನ್ನು ಲೇಸು ಮಾಡೆಂದು ಹೇಳಿಕಳಿಸಿ ಮಾರನೆ ದಿನ ಉತ್ಸಾಹಭೇರಿಯನ್ನು ಹೊಡೆಸಿದನು ೧೧೩. ರಾಜಪುತ್ರನು ಅಮರೇಂದ್ರನ ರೀತಿಯಲ್ಲಿ ಪರಿವಾರ ಸಮೇತನಾಗಿ ವನಕ್ಕೆ ಬಂದನು. ಅವನ ಜತೆಯಲ್ಲಿ ಅನೇಕ ಕೋಮಲೆಯರು ಬಂದರು. ಅವರು ತಮ್ಮ ನೆಲೆವೊಳೆಗಳು, ಬಹು ರಮ್ಯವಾದ ಮುಖ ಕಮಲಗಳು, ಹೊಳೆಯುವ ಚಂಚಲ ನೇತ್ರಗಳು, ವಿಶೇಷವಾಗಿ ಒಪ್ಪುತ್ತಿರಲು ನೀಲಕುಂತಲಗಳ ಬೆಡಗು, ಶೋಭೆವೆತ್ತು ಅಂದಗಾತಿಯರಾಗಿದ್ದರು ೧೧೪. ಹಾಗೆ ಬಂದು ತನ್ನ ಬರುವಿಕೆಗೋಸ್ಕರ ತೋರಣವನ್ನು ಕಟ್ಟಿದ ಹಾಗೆ ಇದ್ದ ಮಲ್ಲಿಗೆಯ ಬಳ್ಳಿ

ಮಱಿದುಂಬಿಗಳುಮಂ, ತನ್ನ ಪಡೆಯನಿದಿರ್ಗೊಳ್ವಂತಿರ್ದ ಸರೋವರಗಳುಮಂ ತನ್ನಪಡೆಗೆ ವಸಂತರಾಜಂ ಬಿರ್ದಂ ಸಮೆದನೆಂಬಂತೆ ತನಿರಸದಿಂ ತೀವಿ ಬೀಗಿ ಬೆಳೆದ ಪಣ್ಗಳ ಭಾರದಿಂ ಮುಱಿವಂತಿರ್ದ ಮ್ಯೆದವಾಳಿಗಳುಮಂ ತನ್ನ ಬರವಿಂಗೆ ಪೂವಲಿಗೆದಱಿದರೆಂಬಂತೆ ನೆಲದೊಳಿಕ್ಕಿರ್ದ ಸುರಗಿಯ ನಾಗಸಂಪಗೆಯ ಪಾದರಿಯ ಪೂಗಳುಮಂ, ತನ್ನಪಡೆಗೆ ಬಿಡಲೆಂದು ಕಾಮದೇವಂ ಸಮೆದ......ಲತಾಮಂಟಪಂಗಳುಮಂ ನೋಡುತ್ತುಂ, ನಂದನವನದೊಳಗೆ ಪೊಕ್ಕು ಪಿರಿದು ಬೇಗಂ ತನ್ನ ಮನದಲಪುಪೋಪಂತೆ ವನಕ್ರೀಡೆಯುಮನಾಡಿ ಮತ್ತಂ ತದ್ವನದಿಂ ಪೊಱಮಟ್ಟು ಪೋಗಲಾಱದೆ ವಿನೋದದಿಂ ತೊಳಲುತ್ತುಮೊಂದು ಲತಾಮಂಟಪದೊಳಗೆ ಪೊಕ್ಕು ಕರ್ಪೂರದ ಜಗುಲಿಯ ಮೇಲೆ ಕಂಕೆಲ್ಲಿಯ ಪಲ್ಲವಂಗಳಿಂ ಸಮೆದ ತಳಿರ್ವಾಸಿನಮೇಲೆ ಪವಡಿಸಿ ೧೧೫

ನರನಾಥಂ ಸುಖದಿಂರೆ
ಕರಮುಗ್ರವಿಷಾಹಿಯಪ್ಪ ಪಾವೆಯ್ತಂದೋ
ಸಂಸದೆ ನೃಪನುಂಗುಟಮಂ
ಭರದಿಂದಂ ಕಪ್ಪೆಯೆಂದು ಪಿಡಿವುದುಮರಸಂ ೧೧೬

ಬೆಱಗಾಗಿ ತನ್ನತನಃಮಂ
ತೊಱಿದು ಮಹಾರಾಜ್ಯಲಕ್ಷ್ಮಿಯಂ ನೆನೆದು ಕರಂ
ಮಱುಗದೆ ಜಿನೇಂದ್ರಪದಮಂ
ಸೆಱಿವಿಡಿದಂ ಜ್ಞಾನಿಯಪ್ಪವಂ ಕಿಟ್ಟಿಪನೇ ೧೧೭

ಗಳನ್ನು ವನದೇವತೆಯರು ಗುಂಪು ಸೇರಿ ಮಂಗಳಗೀತೆಗಳನ್ನು ಹಾಡುತ್ತಿರುವರೋ ಎಂಬಂತೆ ಮೃದುನಾದದಿಂದ ಹಾಡುವ ಮರಿದುಂಬಿಗಳನ್ನೂ ತನ್ನ ಸೈನ್ಯವನ್ನು ಇದಿರುಗೊಳ್ಳುವಂತಿದ್ದ ಸರೋವರಗಳನ್ನು ವಸಂತರಾಜನು ತನ್ನ ಸೈನ್ಯಕ್ಕೆ ಔತಣವನ್ನು ಸಿದ್ಧಪಡಿಸಿದನೆಂಬುತೆ ಸವಿಯಾದ ರಸದಿಂದ ತುಂಬಿ ಕೊಬ್ಬಿ ಬೆಳೆದ ಹಣ್ಣುಗಳ ಭಾರದಿಂದ ಮುರಿಯುವಹಾಗಿದ್ದ ಮೈಂದವಾಳೆಗಳನ್ನೂ, ತನ್ನ ಬರವಿಗೋಸ್ಕರ ಪುಷ್ಪಬಲಿಯನ್ನು ಚೆಲ್ಲಿದರೋ ಎಂಬ ಹಾಗೆ ನೆಲದ ಮೇಲೆ ಚೆಲ್ಲಿದ್ದ ಸುರಗಿ, ನಾಗಸಂಪಗೆ, ಪಾದರಿ ಹೂಗಳನ್ನು, ತನ್ನ ಸೈನ್ಯದ ಬೀಡಾರಕ್ಕೆಂದು ಕಾಮದೇವನು ರಚಿಸಿದ ಲತಾಮಂಟಪಗಳನ್ನು, ನೋಡುತ್ತ ನಂದನವನವನ್ನು ಹೊಕ್ಕು ಬಹಳ ಹೊತ್ತು ತನ್ನ ಮನಸ್ಸಿನ ಬೇಸರ ಹೋಗುವಂತೆ ವನಕ್ರೀಡೆಯನ್ನಾಡಿ ಆಮೇಲೆ ಆ ವನದಿಂದ ಹೊರಟು ಹೋಗಲೊಲ್ಲದೆ ಸುತ್ತಾಡುತ್ತ ಒಂದು ಬಳ್ಳಿಮನೆಯೊಳಕ್ಕೆ ಹೋಗಿ ಕರ್ಪೂರದ ಜಗಲಿಯ ಮೇಲೆ ಅಶೋಕದ ಚಿಗುರುಗಳಿಂದ ಮಾಡಿದ ಚಿಗುರುಹಾಸಿನ ಮೇಲೆ ಸುಖವಾಗಿ ಮಲಗಿ ೧೧೫. ನರನಾಥನು ಸಂತೋಷದಿಂದ ಇರಲು ಬಹಳ ಕ್ರೂರವಾದ ಒಂದು ವಿಷಸರ್ಪವು ಬಂದು ಬಿಡದೆ ರಾಜನ ಉಂಗುಷ್ಟವನ್ನು ಕಪ್ಪೆಯೆಂದು ಭ್ರಮಿಸಿ ಬಲವಾಗಿ ಕಚ್ಚಿತು. ೧೧೬. ಅರಸನು ಬೆರಗಾದನು. ಅವನು ಆ ಸಮಯದಲ್ಲಿ ರಾಜ್ಯಲಕ್ಷ್ಮಿಯನ್ನು ನೆನೆಯದೆ, ಹೆಚ್ಚಾಗಿ ಮರುಗದೆ ಜಿನಪಾದಗಳನ್ನೇ ಧ್ಯಾನಿಸುತ್ತ ದೇಹಬಿಟ್ಟನು. ಜ್ಞಾನಿ

ಜಿನಪದಯುಗವಾರಿಜಮಂ
ನೆನೆಯುತ್ತಂ ರಾಜ್ಯಮೋಹಮಂ ಬಿಟ್ಟು ಧರಾ
ವನಿತೇಶಂ ಗೀರ್ವಾಣಾಂ
ಗನೆಯರೊಳೊಡಗೂಡಿದಂ ಸಮಾಧಿಯ ಫಲದಿಂ ೧೧೮

ಗದ್ಯ॥ ಇತ್ತಲಿಂದ್ರಪ್ರಭನೆಂಬ ಪೆರ್ಗಡೆ ಪ್ರಿಯಬಳ ಕುಮಾರಂ ಪರಲೋಕ ಪ್ರಾಪ್ತನಪ್ಪುದ ನಱಿದು ಮನದೊಳೆ ಮಲಮಲ ಮಱುಗಿ ೧೧೯

ಸಂತತಿಯಿಲ್ಲದ ರಾಜ್ಯಂ
ಪಿಂತಾದುದು ವೈರಿಭೂಭುಜರ್ಗೆಡೆಯಾಯ್ತು
ನ್ನೆಂತಕ್ಕುಮೊ ಪೇೞ್ ಬಿದಿಯೆಂ
ದಂತರದೊಳ್ ಮಱುಗಿ ಕುದಿದು ಬೆದೆಬೆದೆ ಬೆಂದಂ ೧೨೦

ಗದ್ಯ॥ ಅಂತು ಕುಮಾರನ ಸಾವಿಂಗಂ ಪೆಱಗಣ ರಾಜ್ಯಭಾರಮಂ ತಾಳ್ವಂತಪ್ಪ ಸಂತತಿಯಿಲ್ಲ ದುದಕ್ಕಂ ಬೆಜಗಾಗಿ ಕುಮಾರಂ ಸತ್ತನೆಂಬುದನಾರ್ಗಮಱಿಪದೆ ಗುಪ್ತದಿಂದರಸಂ ವನಕ್ರೀಡೆ ಯಾಡಿ ಬಟಲ್ದನೆಂದು ರಾಜಭವನಕ್ಕೆ ತಂದು ರಾತ್ರಿಯೊಳ್ ಸಂಸ್ಕರಿಸಿ ನಾಡಗಡಿಗೆ ಪರಮಾಂಡ ಲಿಕರಂ ಬಾಧೆಯಾಗದಂತೆ ದಂಡಂ ಪೇೞ್ದು ವಾತ್ಸಲ್ಯರತ್ನಾಕರಂ ಋಷಿನಿವಾಸ ಪರ್ವತದೊಳಿರ್ದ ನೆಂಬುದಂ ಚರರ ದೆಸೆಯಿಂದಮಱಿದು ತನ್ನ ಪಿರಿಯ ಮಗಂಗರಸನವಸಾನಮನಱಿಪಿ ಬೀಡಿನ ಕಾಪಂ ಪೇೞ್ದು ೧೨೧

ಯಾದವನು ತಪ್ಪುಮಾಡುವನೆ? ೧೧೭. ಜಿನಪಾದಕಮಲಯುಗಳವನ್ನು ನೆನೆಯುತ್ತ ರಾಜ್ಯಮೋಹವನ್ನು ಬಿಟ್ಟು ರಾಜನು ಸಮಾಧಿಯ ಫಲದಿಂದ ದೇವಲೋಕದ ಸ್ತ್ರೀಯ ರೊಡನೆ ಕೂಡಿದನು. ೧೧೮. ಇತ್ತ ಇಂದ್ರಪ್ರಭನೆಂಬ ಹೆಗ್ಗಡೆಯು ಪ್ರಿಯಬಲ ಕುಮಾರನು ಪರಲೋಕಗತನಾದುದನ್ನು ತಿಳಿದು ಮನಸ್ಸಿನಲ್ಲಿಯೇ ಬಹಳವಾಗಿ ಮರುಗಿ ಕುದಿದು ಬೆಂದನು. ೧೧೯. "ಮಕ್ಕಳಿಲ್ಲದೆ ರಾಜ್ಯ ಹೀದೆ ಬಿತ್ತು. ಶತ್ರು ರಾಜರಿಗೆ ಅವಕಾಶವಾಯಿತು. ಇನ್ನು ಹೇಗಾಗುವುದೋ, ವಿಧಿಯೇ, ಹೇಳು !" ಎಂದು ಬಹಳವಾಗಿ ಸಂಕಟಪಟ್ಟ. ೧೨೦. ಹಾಗೆ ಕುಮಾರನ ಸಾವಿಗೂ ಮುಂದಿನ ರಾಜ್ಯಭಾರವನ್ನು ವಹಿಸುವಂಥ ಸಂತತಿಯಿಲ್ಲದ್ದಕ್ಕೂ ಭೀತನಾಗಿ, ರಾಜನು ಸತ್ತ ನೆಂಬುದನ್ನು ಯಾರಿಗೂ ತಿಳಿಸದೆ ಗುಟ್ಟಾಗಿ, ಅರಸನು ವನವಿಹಾರದಿಂದ ಬಳಲಿದ್ದಾ ನೆಂದು ಹೇಳಿ, ಅರಮನೆಗೆ ತಂದು ರಾತ್ರಿಯಲ್ಲಿ ಸಂಸ್ಕಾರಮಾಡಿ ದೇಶದ ಗಡಿಗಳಿಗೆ ಶತ್ರುರಾಜರುಗಳಿಂದ ತೊಂದರೆಯಾಗದ ಹಾಗೆ ಸೈನ್ಯವನ್ನು ನಿಯಮಿಸಿ ವಾತ್ಸಲ್ಯ ರತ್ನಾಕರ (ಶ್ರೀಧರಕುಮಾರ)ನು ಋಷಿನಿವಾಸಪರ್ವತದಲ್ಲಿರುವನೆಂಬುದನ್ನು ಚಾರರ ಮೂಲಕ ತಿಳಿದು, ತನ್ನ ಹಿರಿಯ ಮಗನಿಗೆ ರಾಜನ ಸಾವನ್ನು ತಿಳಿಸಿ ಬೀಡಿಗೆ ಕಾವಲಿಟ್ಟು

ತೆಂಕಣ ಭೂಪಾಲಕರಂ
ಭೋಂಕನೆ ಪರಿದೆಯ್ದಿ ದರ್ಪಮಂ ಕಿಡಿಸಿ ಮನಂ
ಶಂಕಿಸದೆ ಕಾದಿ ಚಲದಿಂ
ದಂ ಕಪ್ಪಂದರ್ಪುದೆಂದು ವೆಂಗಿಯ ನಾಥಂ ೧೨೨

ಗದ್ಯ॥ ಎನಗೆ ಬೆಸಸಿದನೆಂದು ಕೃತಕ ವಚನಮಂ ಪೊಟಲೊಳಗೆಲ್ಲಂ ಪ್ರಕಟಂ ಮಾಡಿ ಚಾತು ರಂಗಬಲಂ ಬೆರಸು ಪೊಱಮಟ್ಟು ಕತಿಪಯ ಪ್ರಯಾಣಂಗಳಿಂ ಋಷಿನಿವಾಸ ಪರ್ವತಮನೆಯ್ದಿ ಪರ್ವತನಿತಂಬದೊಳ್ ಬೀಡಂ ಬಿಟ್ಟು ಕತಿಪಯಜನಂಬೆರಸು ಪರ್ವತಮನೆಯ್ದೇಱಿ ಜಿನ ಭವನಂಗಳಂ ಪೂಜಿಸಿ ಶ್ರೀಧರಾಚಾರ್ಯರಲ್ಲಿಗೆ ವಂದು ತನ್ಮುನೀಂದ್ರನ ಪಾದಪಂಕಜಂಗಳಂ ಪಲವ ರ್ಚನೆಯಿಂದರ್ಚಿಸಿ ಪೊಡೆಮಟ್ಟು ಮುಂದೆ ಕುಳ್ಳಿರ್ದು ಕಿಱಿದು ಬೇಗಂ ಧರ್ಮಮಂ ಕೇಳ್ದು ಕೃತಕ ವಿನಯದಿಂದಿಂತೆಂದಂ ೧೨೩

ಪರಮ ಮುನೀಶ್ವರ ನೀವೀ
ಗಿರಿಯೊಳ್ ನೆಲೆಸಿರ್ದಿಪಂಬುದಂ ಕೇಳ್ದು ಸದಾ
ಚರಿತ ಗುಣರಾಶಿ ನಿಮ್ಮಯ
ಚರಣ ಸರೋಜಾತಯುಗಳಮಂ ನಿಶ್ಚಯದಿಂ ೧೨೪

ಗದ್ಯ॥ ಕಾಣ್ಬವೆಂಬರ್ತಿಯಿಂ ವೆಂಗಿಮಂಡಲದಿಂ ಬಂದೆವಾವಪ್ಪೊಡೆ ಪರದರೆವಾಮುಯದ (?) ಶ್ರಾವಕರವಿನ್ನುಂ ನಿಮ್ಮಡಿಗಳ ಶ್ರೀಪಾದಮಂ ಕಾಣಲೆಂದು ಪಲಂಬರುಂ ಪಿರಿದಪ್ಪ ವ್ರತಂ

೧೨೧. ದಕ್ಷಿಣದ ರಾಜರನ್ನು ತಟ್ಟನೆ ಹೋಗಿ ದರ್ಪವನ್ನು ಕೆಡಿಸಿ ಮನಸ್ಸಿನಲ್ಲಿ ಶಂಕೆಪಡದೆ ಯುದ್ಧಮಾಡಿ ಛಲದಿಂದ ಕಪ್ಪವನ್ನು ತರುವುದೆಂದು ವೆಂಗಿಯ ರಾಜನು ನನಗೆ ಹೇಳಿದ್ದಾನೆ. ೧೨೨. ಎಂದು ಕಪಟವಾಕ್ಯವನ್ನು ನಗರದಲ್ಲೆಲ್ಲ ಪ್ರಕಟಿಸಿ ಚತು ರಂಗಸೈನ್ಯದೊಡನೆ ಕೂಡಿ ಹೊರಟು ಕೆಲವು ದಿನ ಪ್ರಯಾಣ ಮಾಡಿ ಋಷಿನಿವಾಸ ಪರ್ವತವನ್ನು ಸೇರಿ ಬೆಟ್ಟದ ತಿಂದೆ ತಪ್ಪಲಲ್ಲಿ ಬೀಡುಬಿಟ್ಟು ಕೆಲವು ಜನರೊಡನೆ ಬೆಟ್ಟದಮೇಲಕ್ಕೆ ಹತ್ತಿ ಜಿನಭವನಗಳನ್ನು ಪೂಜಿಸಿ ಶ್ರೀಧರಾಚಾರ್ಯರಲ್ಲಿಗೆ ಬಂದು ಆ ಮುನಿಶ್ರೇಷ್ಠನ ಪಾದಕಮಲಗಳನ್ನು ಅನೇಕ ಅರ್ಚನೆಗಳಿಂದ ಪೂಜಿಸಿ ನಮಸ್ಕರಿಸಿ ಮುಂದೆ ಕುಳಿತು ಕೊಂಚ ಹೊತ್ತು ಧರ್ಮಶ್ರವಣಮಾಡಿ ಕಪಟ ವಿನಯದಿಂದ ೧೨೩. "ಪರಮಮುನೀಶ್ವರ ! ನೀವು ಈ ಗಿರಿಯಲ್ಲಿ ನೆಲೆಸಿದ್ದೀರೆಂಬುದನ್ನು ಕೇಳಿ ಸಚ್ಚರಿತ್ರಗುಣರಾಶಿ ! ನಿಮ್ಮ ಚರಣಕಮಲದ್ವಂದ್ವವನ್ನು ತಪ್ಪದೆ ಕಾಣುವೆವೆಂಬ ಆಸೆಯಿಂದ ವೆಂಗಿಮಂಡಲದಿಂದ ಬಂದೆವು. ನಾವಾದರೋ ವರ್ತಕರು, ಶ್ರಾವಕರು. ನಿಮ್ಮ ಪಾದಗಳನ್ನು ಕಾಣಲೆಂದು ಇನ್ನೂ ಅನೇಕರು ದೊಡ್ಡವ್ರತಹಿಡಿದು ಬಂದು

ಬೆರಸು ಬಂದು ಪರ್ವತದ ಕೆಳಗಿರ್ದರೀ ಗಿರಿಯನೇಱಲಾಱರ್ ಕಡುವೃದ್ಧರವರಂ ನಿಮ್ಮಡಿಗಳ್ ಬಿಜಯಂಗೆಯ್ದು ಪರಸಿ ಸಂತೋಷಮಂ ಮಾಳ್ಪುದೆಂದು ಪ್ರಾರ್ಥಿಸಿ ಮಗುಳೆ ವಂದಿಸಿ ತಮ್ಮ ಬಿಟ್ಟ ಬೀಡಿಂಗೆ ಬಂದರನ್ನೆಗಂ ಮುನಿಮುಖ್ಯನವರ ಮಾತಿಂಗೆ ಕರುಣಿಸಿ ಮಧ್ಯಾಹ್ನದೊಳ್ ಚರ್ಯಾಮಾರ್ಗದಿಂ ಪೊಱಮಟ್ಟು ೧೨೫

ಅವರ ಮಾತುಗಳೆಲ್ಲಮಂ ಮುನಿಪುಂಗವಂ ದಿಟಮೆಂದು ಭೂ
ಭುವನ ವಂದಿತ ಪಾದಪಂಕಜನಾದರಂ ಬೆರಸರ್ತಿಯಿಂ
ವಿವಿಧ ಶೀಲಗುಣಾಬ್ಧಿ ನಂಬಿದನಂತು ಮೆಲ್ಲನೆ ಶೈಲದಿಂ
ದವನಿಗೆಯ್ತರೆ ನೋಡಿ ಕಂಡು ಮನೋನುರಾಗದಿನಾ ಖಳಂ ೧೨೬

ಗದ್ಯ॥ ಭಕ್ತಿಪೂರ್ವಕಂ ನಿಲಿಸಿ ನಿದ್ರೆ ಪಿರಿದಪ್ಪಂತಪ್ಪಮರ್ದುಗಳ್ ಕೂೞೊಳ್ ಬೆರಸಿ ಕಯ್ಯಲಿಕ್ಕುವುದುಂ ಶ್ರೀಧರಮುನಿನಾಥನವರ ಕಪಟ ವೃತ್ತಿಯನಱಿಯದುಂಡು ಸೊಕ್ಕಿ ಮೆಯ್ಯಱಿಯದೆ ಟಕ್ಕನಿಕ್ಕಿದಂತು ಕೆಡೆದು ನಿದ್ರೆಗೆಯ್ದುದುಂ ಪೆರ್ಚಿ ಪಿರಿದಪ್ಪುತ್ಸವದಿಂ ಸಿವಿಗೆಯೊಳಿಕ್ಕಿ ದಾಟಾಪಾಟಿಯಿಂ ಬಂದು ಪ್ರತಿಪಾಲ ಪುರಮಂ ಪೊಕ್ಕು ಮಱಿದು ಪಟ್ಟ ಮುನಿಪತಿಗೆ ರತ್ನಾಭರಣಂಗಳಂ ತುಡಿಸಿ ಸುಗಂಧ ದ್ರವ್ಯಗಳಂ ಪೂಸಿ ದಿವ್ಯವಸ್ತ್ರಮನುಡಿಸಿ ರೋಮಜಮೆಂಬ ಪಾಸಿನ ಮೇಲೆ ಪಡಿಸಿ ಸುತ್ತಿಮುತ್ತಿ ಬಂದೋಲಗಿಸುತ್ತುಮಿರ್ಪುದುಂ ಮೂಱನೆಯ ದಿವಸಕ್ಕೆ ೧೨೭

ಬೆಟ್ಟದ ಕೆಳಗಿದ್ದಾರೆ. ಅವರು ಈ ಬೆಟ್ಟವನ್ನು ಹತ್ತಿಬರಲಾರರು ; ಅವರು ಬಹಳ ಮುದುಕರು. ತಾವು ದಯವಿಟ್ಟು ವಿಜಯಮಾಡಿಸಿ ಅವರನ್ನು ಹರಸಿ ಸಂತೋಷಪಡಿಸಬೇಕು." ಎಂದು ಪ್ರಾರ್ಥಿಸಿ ಮತ್ತೆ ವಂದಿಸಿ ತಾವು ಬಿಟ್ಟಬೀಡಿಗೆ ಬಂದರು. ಆ ವೇಳೆಗೆ ಮುನಿಶ್ರೇಷ್ಠನು ಅವರ ಮಾತಿಗೆ ಕರುಣಿಸಿ ಮಧ್ಯಾಹ್ನದ ವೇಳೆಯಲ್ಲಿ ಚರ್ಯಾಮಾರ್ಗದಿಂದ ಹೊರಟನು. ೧೨೫. ಅವರ ಮಾತುಗಳೆಲ್ಲವನ್ನೂ ಮುನಿಶ್ರೇಷ್ಠನು ನಿಜವೆಂದೇ ನಂಬಿ ಆ ಲೋಕಪೂಜ್ಯನು ಆದರ ಪ್ರೀತಿಗಳಿಂದ ಮೆಲ್ಲನೆ ಪರ್ವತದಿಂದ ಭೂಮಿಗೆ ಇಳಿದು ಬರಲು ನೋಡಿ, ಆ ಖಳನು ದರ್ಶನ ಮಾಡಿ ಮನಃಪ್ರೀತಿಯಿಂದ ಭಕ್ತಿಪೂರ್ವಕವಾಗಿ ಭಿಕ್ಷೆಗೆ ನಿಲ್ಲಿಸಿ ಹೆಚ್ಚು ನಿದ್ದೆ ಬರುವಂಥ ಮದ್ದುಗಳನ್ನು ಅನ್ನದಲ್ಲಿ ಕಲೆಸಿ ಕೈಯಲ್ಲಿ ಬಡಿಸಲು ಶ್ರೀಧರ ಮುನಿನಾಥನು ಅವರ ಕಪಟ ಚೇಷ್ಟೆಯನ್ನು ತಿಳಿಯದೆ ಉಂಡು ಮೈಮರೆತು ತಟ್ಟನೆ ಕೆಳಗೆ ಬಿದ್ದು ನಿದ್ದೆ ಮಾಡಿದನು, ಆ ಹೆಗ್ಗಡೆ ಉಬ್ಬಿ ಮಹಾಸಂತೋಷದಿಂದ ಮೇನೆಯಲ್ಲಿಟ್ಟು ಆತುರಾತುರವಾಗಿ ನಿಟ್ಟೋಟದಿಂದ ಬಂದು ಪ್ರತಿಪಾಲಪುರವನ್ನು ಪ್ರವೇಶಿಸಿ ಮೈಮರೆವಿನಿಂದ ಮಲಗಿದ ಮುನಿಶ್ರೇಷ್ಠನಿಗೆ ರತ್ನಾಭರಣಗಳನ್ನು ತೊಡಿಸಿ ಪರಿಮಳ ದ್ರವ್ಯಗಳನ್ನು ಹಚ್ಚಿ ದಿವ್ಯ ವಸ್ತ್ರವನ್ನು ಉಡಿಸಿ ರೋಮಜವೆಂಬ ಹಾಸಿನ ಮೇಲೆ ಮಲಗಿಸಿ ಸುತ್ತಮುತ್ತಿಕೊಂಡು ಓಲೈಸುತ್ತಿದ್ದರು, ೧೨೬. ಮೂರನೆಯ ದಿನ ವೇಳೆಗೆ ಯತಿಗೆ

ಪರವು ಗುಣಾಂಬುರಾಶಿ ಖಳನಿಕ್ಕಿದ ಮರ್ದಿನ ತೀವ್ರಮಪ್ಪ ನಿ
ಷ್ಠುರ ವಿಷದುಕ್ಕು ಪೋಗೆ ತನು ಘುರ್ಮ್ಮಿಸಲೊರ್ವೆ ಯೆ ನೊಚ್ಚಿತಾಗೆ ತ
ದ್ಗಿರಿಯೊಳೆ ನಿಂದೆನೆಂಬ ಬಗೆಯಿಂ ಮುಱಿದೊಯ್ಯನೆ ಮೆಯ್ಯನಾದರಂ
ಬೆರಸು ನಿಮಿರ್ಚಿ ಕಾಲನೊದೆದೆರ್ದು ಕರಂಗಳಿನಾತ್ಮ ದೇಹಮಂ ೧೨೮

ಗದ್ಯ॥ ತಡವರಿಸಿ ನೋಡಿ ತುಡಿಸಿದ ತೊಡವುಗಳುಮನುಡಿಸಿದ ಸೀರೆಯುಮಂ ಪೂಸಿದ ಶ್ರೀಖಂಡಮುಮಂ ಪಟ್ಟಿರ್ದ ಪಾಸುಮಂ ಸುತ್ತಿಮುತ್ತಿರ್ದ ಮುಕುಟಬದ್ಧರುಮಂ ಕಂಡು ಬೆಱಗಾಗಿ ೧೨೯

ಸುರವರ ಪೂಜ್ಯಮಪ್ಪ ದಿವಿಜೇಶ್ವರ ಲಕ್ಷ್ಮಿಗಮೂಲ್ಯಮಪ್ಪ ಸೌಂ
ದರಮೆನಿಸಿರ್ದ ನಿರ್ವೃತಿಯುಮಂನೆಯ್ದಿಸಲಾರ್ಪ ಸಮಸ್ತ ದೋಷದೊಳ್
ಪೊರೆಯದ ದುಃಖಮಂ ಮಱೆದು ಪೊರ್ದಿಸಲೀಯದ ಜೈನದೀಕ್ಷೆಯಂ
ಪರಿಹರಿಪಂತುಟೊಂದು ವಿಧಿಯುಂ ದೊರೆಕೊಂಡುದು ಕರ್ಮದೇೞ್ಗೆಯಿಂ ೧೩೦

ಪುಸಿದು ದುರಾತ್ಮನೆನ್ನ ಗುಣಮಂ ಭುವನತ್ರಯ ಪೂಜ್ಯನಪ್ಪುದಂ
ಕುಸಿಯಿಸಿ ತನ್ನ ಬಾೞ್ಕೆಗೆಡೆಯಿಲ್ಲದೆ ವೈಶ್ಯರೆಮೆಂದು ಬಂದು ನಂ
ಬಿಸಿ ಕಡು ದೂರ್ತಿನಿಂ ಪಲವು ಟಕ್ಕುಗಳಿಂ ಸಮೆದನ್ನಮಂ ಸಮಂ
ಜಸಿಕೆಯನೊಕ್ಕು ಬೇಗಮೆನಗಿಕ್ಕಿ ಬೞಿಕ್ಕೆ ಮನೋನುರಾಗದಿಂ ೧೩೧

ನಿದ್ದೆ ತಿಳಿಯಿತು. ಪರಮಗುಣಸಮುದ್ರನು ಆ ನೀಚನು ಹಾಕಿದ ಮದ್ದಿನ ತೀವ್ರವಾದ ವಿಷದ ಉಕ್ಕು ಹೋಗಲು, ದೇಹ ಘುರ್ಮ್ಮಿನ್ನಲು ತಟ್ಟನೆ ಮೈಹಗುರವೆನಿಸಲು ಆ ಬೆಟ್ಟದ ಮೇಲೆ ಇರುವೆನೆಂಬ ನಂಬಿಕೆಯಿಂದ ಆತನು ಮೈಮುರಿದು ಕಾಲು ಕೈಗಳನ್ನು ಚಾಚಿ ದೇಹವನ್ನು ಕೈಗಳಿಂದ ತಡವರಿಸಿ ನೋಡಿ ತೊಡಿಸಿದ ಒಡವೆಗಳನ್ನೂ ಧರಿಸಿದ ಬಟ್ಟೆಯನ್ನೂ ಹಚ್ಚಿದ ಶ್ರೀಗಂಧವನ್ನೂ ಮಲಗಿದ್ದ ಹಾಸಿಗೆಯನ್ನೂ ಸುತ್ತ ಮುತ್ತಿಕೊಂಡಿದ್ದ ಕಿರೀಟಬದ್ಧರನ್ನೂ ನೋಡಿ ಬೆರಗುಗೊಂಡನು ೧೨೮-೯. ದೇವೇಂದ್ರ ಪೂಜಿತವಾದ ದಿವಿಜೇಶ್ವರಲಕ್ಷ್ಮಿಗೂ ಅಮೂಲ್ಯವೂ ಸುಂದರವೂ ಆದ ಮೋಕ್ಷವನ್ನು ಸೇರಿಸಬಲ್ಲ, ಯಾವ ದೋಷಗಳಿಂದಲೂ ಕೂಡದ, ದುಃಖವನ್ನು ಮರೆತೂ ಮುಟ್ಟಗೊಡದ ಜೈನದೀಕ್ಷೆಯನ್ನು ಪರಿಹರಿಸುವಂಥ ಒಂದು ವಿಧಿ ನನ್ನ ಕರ್ಮದ ಆಧಿಕ್ಯದಿಂದ ಸಂಪ್ರಾಪ್ತವಾಯಿತು ೧೩೦. ಆ ದುರಾತ್ಮನು ಸುಳ್ಳಾಡಿ ಮೂರು ಲೋಕಗಳಿಗೂ ಪೂಜ್ಯವಾದ ನನ್ನ ಗುಣವನ್ನು ಕುಸಿಯುವಂತೆ ಮಾಡಿ ತನ್ನ ಬಾಳಿಕೆಗೆ ಅವಕಾಶವಿಲ್ಲದೆ, ತಾವು ವೈಶ್ಯರೆಂದು ಹೇಳಿ ನಂಬಿಸಿ ಬಹಳ ಧೂರ್ತತನದಿಂದ ಹಲವು ಠಕ್ಕುಗಳನ್ನು ಮಾಡಿ ಅನ್ನವನ್ನು ಸಿದ್ಧಪಡಿಸಿ ಎಲ್ಲ ಸಮಂಜಸ ರೀತಿಯನ್ನೂ ಬಿಟ್ಟು ಮೊದಲು ನನಗೆ ಬಡಿಸಿದನು ೧೩೧. ಆಮೇಲೆ ತನ್ನ ಇಷ್ಟಾನುಸಾರ

ಗದ್ಯ॥ ಇಲ್ಲಿಗೆ ತಂದು ತಮ್ಮಂತು ಮಾಡಿದನೆಂದು ಕೇಡಿಂಗೆ ಬಿಸುಸುಯ್ದು ಪಾಸಿನ ಮೇಲೆ ಬೀೞ್ವುದುಂ ಶೀತಲ ಕ್ರಿಯೆಗಳಿಂದೆಚ್ಚಱಿಸಿ ಸಯ್ತು ಕುಳ್ಳಿರಿಸಿ ಸಮ್ಯಕ್ತ್ವ ಚೂಡಾಮಣಿಗೆ ಸಮಸ್ತ ಬಂಧು ಜನಮುಂ ಪ್ರಧಾನರುಂ ಮೆಯ್ಯನಿಕ್ಕಿ ಬಿನ್ನಪಮೆಂದಿಂತೆಂದರ್ : ೧೩೨

ಸಂತತಿಯಿಲ್ಲದ ರಾಜ್ಯಮು
ನಿಂತಿದನಡಿಗರ್ದ್ದಿ ಕಿಡಿಸದುನ್ನತ ಗುಣ ನಿ
ಶ್ಚಿಂತಂ ನಿಱಿಸಿ ಬೞಿಕ್ಕಂ
ಸಂತತಿಯಂ ಮಾಡಿ ದೇವ ತಪದೊಳ್ ನಿಲ್ ನೀಂ ೧೩೩

ಪರಮಾಂಡಳಿಕರ್ ಭಯದಿಂ
ಕರಂಗಳಂ ಮುಗಿದು ಕಪ್ಪಮಂ ತಂದೀವರ್
ಕರಮಂಜಿ ನಿನ್ನ ಜನಕಂ
ಗೆರಡಿಲ್ಲದೆ ದೇವ ನೀನಿದಂ ಕಿಡಿಸುವುದೇ ೧೩೪

ಗದ್ಯ॥ ಎಂದು ಬಿನ್ನಪಂಗೆಯ್ದು ಕಾರುಣ್ಯಮಪ್ಪಂತು ಕಣ್ಣ ನೀರ್ಗಳನಿಕ್ಕಿ ನಿಷ್ಕರುಣಿಯಾಗಿ ಪೋಪೆನೆಂಬ ಬಗೆಯುಳ್ಳೊಡನಿಬರುಮಂ ಕೊಂದು ಪೋಗೆಂದು ಮದದಾನೆಯುಂ ಕಂಬಕ್ಕೆ ತರ್ಪಂ ತೆಲಲ್ಲೆಗೆಯ್ದು ಬಲ್ಲಾಳ್ತನದಿಂ ಪಟ್ಟಮಂ ಕಟ್ಟಿ ಸಿಂಹಮಂ ಸೆಱೆಯಿಡುವಂತೆ ರಾಜ್ಯದೊಳ್ ನಿಱಿಸಿ ಪಲವು ತೆಱದ ಕಾಪುಗಳಿಂ ಮಿಡುಕಬಾರದಂತಾಗೆ ಕಾದು ರಾಜ್ಯಂಗೆಯ್ಸುವುದುಂ ೧೩೫

ನನ್ನನ್ನು ಇಲ್ಲಿಗೆ ತಂದು ತಮ್ಮ ವಶಪಡಿಸಿಕೊಂಡನೆಂದು, ಆದ ಕೇಡಿಗೆ ಬಿಸುಸುಯ್ದು ಹಾಸಿಗೆಯ ಮೇಲೆ ಬಿದ್ದನು. ಕೂಡಲೆ ಶೈತ್ಯೋಪಚಾರಮಾಡಿ ಚೇತರಿಸಿಕೊಂಡ ಮೇಲೆ ಸರಿಯಾಗಿ ಕೂಡಿಸಿ ಆ ಸಮ್ಯಕ್ತ್ವಚೂಡಾಮಣಿಗೆ ಎಲ್ಲ ಬಂಧು ಜನರೂ ಪ್ರಧಾನರೂ ನಮಸ್ಕಾರ ಮಾಡಿ 'ಬಿನ್ನಹ' ವೆಂದು ಹೀಗೆ ಹೇಳಿದರು : ೧೩೨ "ಸಂತತಿಯಿಲ್ಲದ ರಾಜ್ಯವನ್ನು ತಳದಲ್ಲಿ ಮುಳುಗಿಸಿ ಕೆಡಿಸದೆ, ಗುಣಶ್ರೇಷ್ಠನೆ! ನಿಶ್ಚಿಂತೆಯಾಗಿ ನಿಲ್ಲಿಸಿ ಬಳಿಕ ಸಂತತಿಯನ್ನು ಮಾಡಿ ನೀನು ತಪಸ್ಸಿನಲ್ಲಿ ನಿಲ್ಲು" ೧೩೩. ಶತ್ರುರಾಜರು ಭಯದಿಂದ ಕೈಮುಗಿದು ಕಪ್ಪಗಳನ್ನು ನಿಮ್ಮ ಜನಕನಿಗೆ ಅಂಜಿ ತಂದುಕೊಡುತ್ತಿದ್ದರು. ಸ್ವಾಮಿ, ನೀನು ಇದನ್ನು ಕೆಡಿಸಬಹುದೆ?" ೧೩೪. ಎಂದು ಬಿನ್ನಹ ಮಾಡಿ ಕರುಣೆ ಹುಟ್ಟುವಂತೆ ಕಣ್ಣೀರು ಹಾಕಿ "ನಿಷ್ಕರುಣಿಯಾಗಿ ಹೋಗುವೆನೆಂಬ ಮನಸ್ಸಿದ್ದರೆ ಎಲ್ಲ ರನ್ನೂ ಕೊಂದು ಹೋಗಿ" ಎಂದು ನುಡಿದು ಮದಿಸಿದ ಆನೆಯನ್ನು ಕಂಬಕ್ಕೆ ತರುವ ಹಾಗೆ ಲಲ್ಲೆಯ ಮಾತನಾಡಿ ಬಲವಂತದಿಂದ ಪಟ್ಟ ಕಟ್ಟಿ ಸಿಂಹವನ್ನು ಸೆರೆಯಲ್ಲಿಡುವ ಹಾಗೆ ರಾಜ್ಯದಲ್ಲಿ ನಿಲ್ಲಿಸಿ ಹಲವು ರೀತಿಯ ಕಾವಲುಗಳಿಂದ ಅಲ್ಲಾಡದ ಹಾಗೆ ಕಾದು ರಾಜ್ಯ ಭಾರ ಮಾಡಿಸಿದರು. ೧೩೫. ಶ್ರೇಷ್ಠವಾದ ರಾಜ್ಯೈಶ್ವರ್ಯವನ್ನು ತೊರೆದು ಅಸದೃಶ

ಬಿಸುಟು ನುತ ರಾಜ್ಯಲಕ್ಷ್ಮಿಯ
ನಸದೃಶವೆನಿಸಿರ್ದ ಮುಕ್ತಿ ಗೋಮಿನಿಯೊಳ್ ಸಂ
ತಸದೊಳ್ ಕೂಡುವುದೆಂಬಂ
ತಸಹಾಯ ಪರಾಕ್ರಮಂ ಮಗಂ ಪುಟ್ಟುವುದುಂ ೧೩೬

ಕರಮಲ್ಲದೊಸೆದು ರಾಗಂ
ಬೆರಸು ಮಹೀಪಾಲನಾತ್ಮ ಪುತ್ರಂಗೆ ಮನೋ
ಹರಮಪ್ಪ ತನ್ನ ತಂದೆಯ
ವರನಾಮವನಿಟ್ಟು ಕಟ್ಟಿ ಪಟ್ಟಮನಾಗಳ್ ೧೩೭

ಸೆಱೆಮನೆಯೊಳಿರ್ದ ಮನುಜಂ
ಸೆಱೆ ಬಿಟ್ಟ ಬೞಿಕ್ಕ ನಿಲ್ಲದೋಡುವ ತೆಱದಿಂ
ಪೆಱಪಿಂಗಿ ಸೆಡೆದು ನಿಲ್ಲದೆ
ತಱಿಸಲದಿಂ ಬಿಟ್ಟು ಸಕಲ ರಾಜ್ಯಶ್ರೀಯುಂ ೧೩೮

ಗದ್ಯ॥ ಪೋಗಿ ಜಿನದೀಕ್ಷೆಯುಂ ಕೈಕೊಂಡು ದ್ವಾದಶ ವಿಧ ತಪದೊಳುತ್ತರೋತ್ತರಂ ನೆಗಟ್ದು ಮುನ್ನಿನ ಋಷಿನಿವಾಸ ಪರ್ವತದೊಳ್ ಪಲವು ಕಾಲಮಿರ್ದು ಕರ್ಮಕ್ಷಯಂಗೆಯ್ದು ನಿರ್ವಾಣ ಶ್ರೀ ಸಮೇತನಾದನಂದಿನಿಂದಿತ್ತಲಿಂ ಋಷಿನಿವಾಸಗಿರಿ ಶ್ರೀಧರಾಚಾರ್ಯರ ಪೆಸರೆ ಪೆಸರಾಗಿ ಶ್ರೀಪರ್ವತಮೆಂದು ಪ್ರಸಿದ್ಧಿಗೆ ಸಂದುದು. ತದ್ಗಿರಿಯ ದಕ್ಷಿಣ ಭಾಗದೊಳೊಂದು ವಟ ವೃಕ್ಷದ ಕೆಳಗಿರ್ದು ಮುಕ್ತಿಗೆ ಸಂದರಪ್ಪುದಱಿಂದಾಸ್ಥಾನಕ್ಕೆ ಸಿದ್ಧವಟವೆಂದು ಪೆಸರಾಯ್ತು.

ವಾದ ಮುಕ್ತಿ ವನಿತೆಯಲ್ಲಿ ಸಂತೋಷದಿಂದ ಸೇರುವುದೆಂಬಂತೆ ಅಸಹಾಯಪರಾಕ್ರಮಿಯಾದ ಮಗನು ಹುಟ್ಟಿದನು. ೧೩೬. ಅತಿಶಯವಾಗಿ ಸಂತೋಷಪಟ್ಟು ಪ್ರೀತಿಯಿಂದ ಕೂಡಿ ರಾಜನು ಆತ್ಮಪುತ್ರನಿಗೆ ತನ್ನ ತಂದೆಯ ಶ್ರೇಷ್ಠವಾದ ಹೆಸರನ್ನಿಟ್ಟು ಪಟ್ಟವನ್ನು ಕಟ್ಟಿ ಆಗಲೇ ಸೆರೆಮನೆಯಲ್ಲಿದ್ದ ಮನುಷ್ಯನು ಸೆರೆಬಿಟ್ಟ ಮೇಲೆ ನಿಲ್ಲದೆ ಓಡುವ ರೀತಿಯಾಗಿ ಹಿಮ್ಮೆಟ್ಟಿ ಅಂಜಿ ನಿಲ್ಲದೆ ನಿರ್ಧಾರದಿಂದ ಸಕಲ ರಾಜ್ಯೈಶ್ವರ್ಯವನ್ನೂ ತ್ಯಜಿಸಿ ಹೋಗಿ ಜಿನದೀಕ್ಷೆಯನ್ನು ಸ್ವೀಕರಿಸಿ ಹನ್ನೆರಡು ವಿಧ ತಪಸ್ಸುಗಳಲ್ಲಿ ಹೆಚ್ಚು ಹೆಚ್ಚು ಪ್ರಗತಿಹೊಂದಿ ಮೊದಲಿನ ಋಷಿನಿವಾಸ ಪರ್ವತದಲ್ಲಿ ಕೊಂಚಕಾಲವಿದ್ದು ಕರ್ಮಕ್ಷಯವನ್ನು ಸಾಧಿಸಿಕೊಂಡು ನಿರ್ವಾಣಲಕ್ಷ್ಮೀ ಸಮೇತನಾದನು. ಅಂದಿನಿಂದ ಆ ಋಷಿನಿವಾಸಗಿರಿ ಶ್ರೀಧರಾಚಾರ್ಯರ ಹೆಸರಿನಲ್ಲಿ ಶ್ರೀ ಪರ್ವತವೆಂದು ಪ್ರಸಿದ್ಧಿಗೆ ಸಂದಿತು. ಆ ಗಿರಿಯ ದಕ್ಷಿಣ ಭಾಗದಲ್ಲಿ ಒಂದು ವಟವೃಕ್ಷದ ಕೆಳಗೆ ಇದ್ದು ಮುಕ್ತಿಗೆ ಹೋದರಾದ್ದರಿಂದ ಆ ಸ್ಥಾನಕ್ಕೆ ಸಿದ್ಧವಟವೆಂದು ಹೆಸರಾಯಿತು. ಶ್ರೀಧರ ಕೇವಲಿಗಳಿಗೆ ಕೇವಲ ಜ್ಞಾನಪೂಜೆ

ಶ್ರೀಧರಕೇವಲಿಗಳ್ಗೆ ಕೇವಲಜ್ಞಾನ ಪೂಜೆಯಂ ಮಾಡಲೆಂದು ಚತುರ್ವಿಧ ದೇವನಿಕಾಯಂ ನೆರೆದರಪ್ಪುದಱಿಂದಾ ಸ್ಥಾನಕ್ಕಮರಾವತಿಯೆಂದು ಪೆಸರಾಯ್ತು. ತನ್ಮುನಿ ತಪಂಗೆಯ್ವ ಕಾಲದೊಳ್ ಅರ್ಜುನ ವೃಕ್ಷದ ಕೆಳಗಿರ್ದರಂ ಖೇಚರರ್ ಮಲ್ಲಿಗೆಯರಳಿಂ ಪೂಜಿಸಿದರಪ್ಪುದಱಿಂದಾ ಸ್ಥಾನಕ್ಕೆ ಮಲ್ಲಿಕಾರ್ಜುನವೆಸರಾಯ್ತು. ಇಂದ್ರಪ್ರಭನಾ ಮುನಿಯಂ ಛದ್ಮಿಸಲ್ವೇಡಿ ವೃದ್ಧರ್ ಬಂದಿರ್ದರೆಂದೊಡೆ ವೃದ್ಧಗಿರಿಯಾದುದು. ಯಶೋಧರ ಕುಮಾರಂ ಋಷಿಪುತ್ರನಪ್ಪುದಱಿಂದಾತನ ಮೈದುನರ್ ಮೇಳದಿಂ ಮುಂಡಿಯ ವಂಶಜನೆಯೆಂದು ಕುಮಾರನೊಡನೆ ನಗುವುದಱಿಂದದುವೆ ಪ್ರಸಿದ್ಧಮಾಗಿ ಮುಂಡಿಯ ವಂಶಮಾದುದೆಂದು ಬುದ್ಧಿಸಾಗರಂ ಧನದ ಮಹಾರಾಜನ ವಂಶಾವತಾರಮುಮಂ ಪ್ರತಿಪಾಲಪುರದ ಪೆಸರ ವೃತ್ತಾಂತಮುಮಂ ಪೇೞೆ ಸಂಘಶ್ರೀ ಸಂತೋಷಂಬಟ್ಟು ೧೩೯

ಈತನ ವಂಶದವರ್ ವಿ  
ಖ್ಯಾತರ್ ಸಾಮಾನ್ಯರಲ್ಲರೆಂದುಂ ಧರ್ಮೋ  
ಪೇತರದಱಿಂದಮೀ ನೃಪ  
ಜಾತನನಾನೆನಿತು ಪುಣ್ಯದಿಂ ಪೊರ್ದಿದೆನೋ ೧೪೦

ಏನೆಂದಱಿಯದೆ ಮುನ್ನಪ  
ಮಾನಂಗೆಯ್ದಿರ್ದೆನುೞಿದು ಜಿನತತ್ತ್ವಮನ  
ಜ್ಞಾನತೆಯಿನೀಗಳಱಿದೆಂ  
ಮಾನವಪತಿಯಿಂದಮೊಳ್ಳಿತೆಂಬುದನಿಂಬಂ ೧೪೧

ಯನ್ನು ಮಾಡುವುದಕ್ಕೆಂದ ಚತುರ್ವಿಧರಾದ ದೇವಸಮೂಹವು ಅಲ್ಲಿ ಸೇರಿತ್ತಾದ್ದರಿಂದ ಆ ಸ್ಥಾನಕ್ಕೆ ಅಮರಾವತಿಯೆಂದು ಹೆಸರಾಯಿತು. ಆ ಮುನಿಯು ತಪಸ್ಸು ಮಾಡುವ ಕಾಲದಲ್ಲಿ ಅರ್ಜುನವೃಕ್ಷ (ಮತ್ತಿ) ದ ಕೆಳಗಿದ್ದವರನ್ನು ಖೇಚರರು ಮಲ್ಲಿಗೆಯ ಹೂಗಳಿಂದ ಪೂಜಿಸಿದರಾದ್ದರಿಂದ ಆ ಸ್ಥಾನಕ್ಕೆ ಮಲ್ಲಿಕಾರ್ಜುನನೆಂದು ಹೆಸರಾಯಿತು. ಇಂದ್ರಪ್ರಭನು ಆ ಮುನಿಯನ್ನು ಮೋಸಮಾಡ ಬಯಸಿ ಮುದುಕರು ಬಂದಿರುವರೆಂದು ಹೇಳಿದ್ದಕ್ಕೆ ಅದು 'ವೃದ್ಧಗಿರಿ'ಯಾಯಿತು. ಯಶೋಧರ ಕುಮಾರನು ಋಷಿಪುತ್ರನಾದುದರಿಂದ ಆತನ ಮೈದುನರು ಹಾಸ್ಯದಿಂದ "ಮುಂಡಿ[1]ಯ ಮಶಜನೆ !" ಎಂದು ಕುಮಾರನೊಡನೆ ಹೇಳಿದ್ದರಿಂದ ಅದೇ ಪ್ರಸಿದ್ಧವಾಗಿ, ಮುಂಡಿಯ ವಂಶವಾಯಿತೆಂದು ಬುದ್ಧಿಸಾಗರನು ಧನದ ಮಹಾರಾಜನ ವಂಶಾವತಾರವನ್ನೂ ಪ್ರತಿಪಾಲಪುರದ ಹೆಸರಿನ ವೃತ್ತಾಂತವನ್ನೂ ಹೇಳಲು ಸಂಘಶ್ರೀ ಸಂತೋಷಬಟ್ಟನು. ೧೩೯. "ಈತನ ವಂಶದವರು ವಿಶೇಷ ಖ್ಯಾತಿಯುಳ್ಳವರೇ ಹೊರತು ಸಾಮಾನ್ಯರಲ್ಲ. ಯಾವಾಗಲೂ ಧರ್ಮಮಾರ್ಗದವರು. ಆದ್ದರಿಂದ ಈ ರಾಜನನ್ನು ನಾನು ಎಷ್ಟು ಪುಣ್ಯದಿಂದ ಸೇರಿದೆನೊ ! ೧೪೦. ಏನೆಂದು ತಿಳಿಯದೆ ಮೊದಲು ಅಪಮಾನಮಾಡಿದ್ದೆ. ಜಿನತತ್ವವನ್ನು ಅಜ್ಞಾನದಿಂದ

1. ಮುಂಡಿ–ಸನ್ಯಾಸಿ, ಮುಂಡನ ಮಾಡಿಸಿಕೊಂಡವನು.

ನರನಾಥನ ದೆಸೆಯಿಂ ಭಾ
ಸುರ ಮೋಕ್ಷಮನೀವ ಧರ್ಮಮುಂ ಪಿರಿದಪ್ಪೀ
ಸಿರಿಯುಂ ದೊರೆಕೊಂಡುದು ವಿ
ಸ್ತರದಿಂದೆನ್ನಂತು ನೋಂತನಾವನೊ ಜಗದೊಳ್ ೧೪೨

ಗದ್ಯ॥ ಎಂದು ಸಂತೋಷಂಬಟ್ಟು ಸುಖದಿಂದಿರ್ಪುದುಮೊಂದು ದಿವಸಂ ಸಂಘಶ್ರೀಯ ಮುನ್ನಿನ ಗುರು ಬುದ್ಧಶ್ರೀಯೆಂಬ ಭಿಕ್ಷುಕಂ ಸಂಘಶ್ರೀ ಧನದ ಮಹಾರಾಜನ ಪೇಟ್ಕೆಯಿಂ ಶ್ರಾವಕನಾದನೆಂಬುದಂ ಕೇಳ್ದು ಮುನಿದು ಮನೆಗೆ ಬರ್ಪುದುಂ ಸಂಘಶ್ರೀ ಮುನ್ನಿನ ಮಾರ್ಗದಿಂ ಪೊಡೆಮಡದೆ ಮನ್ನಿಸದೆ ಮೋನಂಗೊಂಡುದಾಸೀನಂಗೆಯ್ದಿರ್ಪುದುಂ ೧೪೩

ಮುನ್ನಿನ ಮಾರ್ಗದೊಳೆನ್ನಂ
ಮನ್ನಿಸದೀ ಖಳನನಾವ ಪಾಂಗಿನೊಳಂ ಸಂ
ಪನ್ನತೆಯಿಂ ಕಿಡಿಸುವೆನೆಂ
ದುನ್ನತಿಯಿಂ ಪೂಣ್ದು ನೋಡಿ ಸಂಘಶ್ರೀಯಂ ೧೪೪

ನೀನಪ್ಪೊಡೆ ಧನದ ಧರಿ
ತ್ರೀನಾಥನ ಮನೆಗೆ ಮುಖ್ಯನೈ ನಿನ್ನ ಗೃಹ
ಕ್ಕಾನಿಂದು ಬಂದೊಡಿಂತಪ
ಮಾನಂ ಮಾಡುವುದು ಮಂತ್ರಿಗಿದು ಗುಣದೊಳವೇ ೧೪೫

ಬಿಟ್ಟು ಈಗ ರಾಜನಿಂದ ನನಗೆ ಒಳ್ಳೆಯದಾಯಿತೆಂದು ಚೆನ್ನಾಗಿ ತಿಳಿದೆನು. ೧೪೧. ರಾಜನ ಕಾರಣದಿಂದ ಶ್ರೇಷ್ಠವಾದ ಮೋಕ್ಷವನ್ನು ಕೊಡುವ ಈ ಧರ್ಮವೂ ಹೆಚ್ಚಿನದಾದ ಈ ಐಶ್ವರ್ಯವೂ ಧಾರಾಳವಾಗಿ ಲಭಿಸಿದುವು. ಈ ಜಗತ್ತಿನಲ್ಲಿ ನನ್ನಷ್ಟು ಪುಣ್ಯಗಳಿಸಿದವನು ಯಾರು ?" ೧೪೨. ಎಂದು ಅವನು ಸಂತೋಷಪಟ್ಟು ಸುಖದಿಂದಿರಲು ಒಂದು ದಿವಸ ಸಂಘಶ್ರೀಯ ಮೊದಲಿನ ಧರ್ಮಗುರುವಾದ ಬುದ್ಧಶ್ರೀಯೆಂಬ ಭಿಕ್ಷುಕನು ಧನದ ಮಹಾರಾಜನ ಹೇಳಿಕೆಯಂತೆ ಜಿನಧರ್ಮಕ್ಕೆ ಸೇರಿ ಶ್ರಾವಕನಾದನೆಂದು ಕೇಳಿ ಸಿಟ್ಟಾಗಿ ಅವನ ಮನೆಗೆ ಬಂದನು. ಆದರೆ ಸಂಘಶ್ರೀ ಅವನಿಗೆ ಮೊದಲಿನ ರೀತಿಯಲ್ಲಿ ನಮಸ್ಕಾರ ಮಾಡಲಿಲ್ಲ ; ಮನ್ನಿಸಲಿಲ್ಲ. ಅವನು ಮೌನವಹಿಸಿ ಉದಾಸೀನ ಮಾಡಿದನು. ೧೪೩. ಇದರಿಂದ ಬುದ್ಧಶ್ರೀಗೆ ಇನ್ನಷ್ಟು ಕೋಪ ಹೆಚ್ಚಿತು. ಹಿಂದಿನ ಮಾರ್ಗದಲ್ಲಿ ನನ್ನನ್ನು ಮನ್ನಿಸದೆ ಇರುವ ಈ ದುಷ್ಟನನ್ನು ಯಾವ ರೀತಿಯಿಂದ ಕೆಡಿಸಬಹುದು, ಎಂದು ಯೋಚಿಸಿ ಸಂಘಶ್ರೀಯನ್ನು ದೃಷ್ಟಿಸಿ ನೋಡಿದನು. ೧೪೪. "ನೀನಾದರೋ ಧನದ ಮಹಾರಾಜನ ಮನೆಗೆ ಮುಖ್ಯನಾದವನು. ನಿನಗೋಸ್ಕರ ನಿನ್ನ ಮನೆಗೆ ಈ ಹೊತ್ತು ಬಂದರೆ ಹೀಗೆ ಅಪಮಾನ ಮಾಡುವುದು ರಾಜನ ಮಂತ್ರಿಗೆ ಇದು ಗುಣವೆ ? ಭೂಷಣವೆ ? ೧೪೫. ಇದು ನಿನಗೆ ಧರ್ಮವಲ್ಲ. ಮುಖಕೊಟ್ಟು ಮಾತನಾಡದೆ,

ನಿನಗಿದು ಪಾೞಿಯಲ್ತು ಮೊಗಮಾಯದೆ ಮನ್ನಿಸದುದ್ಧತಿಕ್ಕೆಯಿಂ
ಮುನಿದವರಂತೆ ಕೀೞ್ ನುಡಿಯದಿರ್ಪುದು ನೆಟ್ಟನೆ ಮುನ್ನಿನಂತೆ ನೀ
ನೆನಗತಿಭಕ್ತನೆಂದು ಬಗೆಗೆಟ್ಟು ಭವದ್ಭನಕ್ಕೆ ಬಂದೆನಿಂ
ತಿನಿತಪಮಾನಮಂ ನೆಱೆಯೆ ಮಾೞ್ಪೊಡೆ ಬರ್ಪೆನೆ ಹೀನವೃತ್ತಿಯಿಂ ೧೪೬

ಆವನಾದೊಡಮಕ್ಕೆ ತನ್ನ ಗೃಹಕ್ಕೆ ಬಂದೊಡೆ ಗರ್ವದಿಂ
ದೇವನಂತಿಱಿಸಿರ್ಪುದುಂ ಕಡುಪೊಂಗಿ ಬಿಂಕದಿನಿರ್ಪುದುಂ
ಭಾವಕಂಗೆ ಬುಧಂಗೆ ಮಂತ್ರಿಗೆ ಸಜ್ಜನಪ್ರಿಯನಪ್ಪವಂ
ಗಾವುದೊಳ್ಗುಣಮಾವುದುನ್ನತಿ ಪೆಂಪದಾವುದು ಧಾತ್ರಿಯೊಳ್ ೧೪೭

ಗದ್ಯ॥ ಎಂದು ಮೃದುವಚನಂಗಳಿಂ ಸಂಘಶ್ರೀಯ ಮನಂಗೊಳಿಸಲೆಂದು ನುಡಿದಾತನಂ ಸದ್ಧರ್ಮದಿಂ ಪತ್ತುವಿಡಿಸಿ ಮಿಥ್ಯಾತ್ವಮಂ ಪೊರ್ದಿಸುವ ಬುದ್ಧಿಯಿನಿಂತೆಂದಂ ೧೪೮

ನೀಂ ಬುದ್ಧಾಗಮದೊಳ್ ಕುಶ
ಲಂ ಬಗೆಪೊಡೆ ನಿನ್ನದೊರೆಯ ಚತುರನುಮಾದಂ
ನಂಬಿ ಪೆಱತೊಂದು ಸಮಯಮ
ನಿಂಬಿಂ ಪೊರ್ದಿರ್ದನೆಂದೊಡಿಂತಿದು ಚೋದ್ಯಂ ೧೪೯

ಉದ್ಧತನಾಗಿ ಸಿಟ್ಟುಗೊಂಡವರ ಹಾಗೆ ಮಾತನ್ನೇ ಆಡದಿರುವುದು ನಿನಗೆ ಸರಿಯಲ್ಲ: ಹಿಂದಿನಂತೆಯೇ ನೀನು ನನಗೆ ಬಹಳ ಭಕ್ತನಾದ ಶಿಷ್ಯನೆಂದು ಬಗೆದು ಬುದ್ಧಿಗೆಟ್ಟು ಈಗ ನಿನ್ನ ಮನೆಗೆ ಬಂದೆ. ಹೀಗೆ ನೀನು ಇಷ್ಟು ಅಪಮಾನವನ್ನು ಮಾಡುವುದಾದರೆ ನಾನು ಮತ್ತೆ ಇಲ್ಲಿಗೆ ಹೀನಬುದ್ಧಿಯಿಂದ ಬರುವೆನೆ ? ೧೪೬. ಯಾವನಾದರೂ ಆಗಲಿ, ತನ್ನ ಮನೆಗೆ ಬಂದರೆ ಗರ್ವದಿಂದ ದ್ವೇಷಿಯಂತೆ ಕೀಳಾಗಿಸಿರುವುದೂ, ಬಹಳ ಕೊಬ್ಬಿ ಬಿಂಕದಿಂದ ಸುಮ್ಮನಿರುವುದೂ ಭಾವಕನಾದ ವಿದ್ವಾಂಸನಿಗೆ, ಮಂತ್ರಿಗೆ, ಸಜ್ಜನಪ್ರಿಯನಾದವನಿಗೆ ಯಾವ ಒಳ್ಳೆಯ ಗುಣ ? ಇದು ಯಾವ ಹೆಚ್ಚಿಗೆ ? ಲೋಕದಲ್ಲಿ ಇದು ಯಾವ ಪೆಂಪು ? ೧೪೭. ಎಂದು ಮೃದುವಾಕ್ಯಗಳಿಂದ ಸಂಘಶ್ರೀಯ ಮನಸ್ಸನ್ನು ಆಕರ್ಷಿಸಲೆಂದು ನುಡಿದು ಅವನನ್ನು ಜೈನಧರ್ಮದಿಂದ ಕಳಚಿಬಿಟ್ಟು ಮಿಥ್ಯಾತ್ವವನ್ನು ಹೊಂದಿಸುವ ಸಂಕಲ್ಪದಿಂದ ಹೀಗೆ ಹೇಳಿದನು : ೧೪೮. "ನೀನು ಬುದ್ಧಾಗಮದಲ್ಲಿ ಪಂಡಿತ. ಯೋಚಿಸಿದರೆ ನಿನ್ನಂಥ ಚತುರನೂ ಸಮರ್ಥನೂ ಆದವನು ಬೇರೊಂದು ಮತವನ್ನು ನಂಬಿ. ಸಂತೋಷದಿಂದ ಸೇರಿದೆಯೆಂದರೆ ಇದು ಬಹಳ ಆಶ್ಚರ್ಯದ ಸಂಗತಿ. ೧೪೯. ವ್ರತವನ್ನು ಆಚರಿಸಿ

ವ್ರತಮಂ ಪಾಲಿಸಿ ದೇಹಮಂ ತೊಱೆದು ವಿದ್ಯಾನೀಕಮಂ ಬಿಟ್ಟು ಪೆಂ
ಡತಿಯಂ ಧಾನ್ಯಮನಾತ್ಮಜಪ್ರತತಿಯಂ ಮುಂಬಿಟ್ಟು ಗಾಂಪಿಂದೆ ನಿ
ರ್ವೃತಿಯಂ ಸಾಧಿಪೆನೆಂಬ ಸಾಹಸಿಗರಂ ದಿಗ್ವಾಸರಂ ನಂಬಿ ದು
ರ್ಮತನೀಂ ಗಾವಿಲರಂತಿದೇಕೆ ಕಿಡಿಪೈ ಸಂಸಾರಸೌಖ್ಯಂಗಳಂ ೧೫೦

ಸುರತದೊಳಿಚ್ಛೆಯಂ ಸಲಿಸುವಂಬುರುಹಾಕ್ಷಿಯರೊಳ್ ನಿರಂತರಂ
ನೆರೆವುದು ದಿವ್ಯಭೋಜನಮನುಣ್ಬುದು ತನ್ನ ಮನಕ್ಕೆ ಪಂದರೊಳ್
ಪರಿಸುವುತಿರ್ಪು(?)ದುದ್ಧತಿಯಿನಿಂದ್ರಿಯದಿಚ್ಛೆಯೊಳಿರ್ಪುದಾಗಳುಂ
ಮರುಳೆ ವಿನೋದದಿಂ ನಲಿಯುತಿರ್ಪುದು ಮೋಕ್ಷಮನಾರು ಕಂಡವರ್ ೧೫೧

ಗದ್ಯ॥ ಎಂಬುದುಂ ಸಂಘಶ್ರೀಯಿಂತೆಂದಂ ೧೫೨

ಜಿನವಚನಂ ಪುಸಿಯಪ್ಪೊಡೆ
ಧನದ ಮಹಾರಾಜನೆನಗೆ ತೋಱಿದನಘಜೀ
ವನದ ಬಡಬಾಗ್ನಿಯೆನಿಸುವ
ಮುನಿಯುಗಳಮನಂತರಿಕ್ಷದೊಳ್ ಪೋಪವರಂ ೧೫೩

ವರತಪದೊಳಾದ ವೃದ್ಧಿಯ
ನರಡಿಲ್ಲದೆ ಕಂಡು ನಂಬಿದೆಂ ಜಿನಮತಮಂ
ಮರುಳಲ್ಲೆನಗೆ ನಿನ್ನೀ
ಪುರುಳಿಲ್ಲದ ಧರ್ಮ ಬಾರ್ತೆಯಲ್ಲದು ಮತ್ತಂ ೧೫೪

'ದೇಹವನ್ನು ತ್ಯಜಿಸಿ ವಿದ್ಯಾನೀಕವನ್ನೂ, ಹೆಂಡತಿ, ಧಾನ್ಯ, ಮಕ್ಕಳ ಗುಂಪು—ಎಲ್ಲವನ್ನೂ ಪರಿತ್ಯಾಗ ಮಾಡಿ ದಡ್ಡತನದಿಂದ ಮೋಕ್ಷವನ್ನು ಸಾಧಿಸುವೆನೆಂಬ ಸಾಹಸಿಗರನ್ನೂ ದಿಗಂಬರರನ್ನೂ ನಂಬಿ, ದುರ್ಬುದ್ಧಿಯೇ ! ನೀನು ದಡ್ಡರ ಹಾಗೆ ಸಂಸಾರ ಸೌಖ್ಯ ವನ್ನು ಏಕೆ ಹಾಳುಮಾಡಿಕೊಳ್ಳುತ್ತೀಯೆ ? ೧೫೦. ಸುರತದಲ್ಲಿ ಇಷ್ಟವನ್ನು ನೆರವೇರಿ ಸುವ ಕಮಲಾಕ್ಷಿಯರ ಸಂಗಡ ಸದಾ ನೆರೆಯುವದು ; ದಿವ್ಯಭೋಜನವನ್ನು ಉಣ್ಣು ವುದು, ನಿನ್ನ ಮನಸ್ಸಿಗೆ ಬಂದವರೊಡನೆ ವಿಹರಿಸುವುದು. ಇಂದ್ರಿಯಗಳ ಇಚ್ಛೆಯನ್ನು ಸಲ್ಲಿಸುವುದು. ಹುಚ್ಚ ! ಮೋಕ್ಷವನ್ನು ಯಾರು ಕಂಡಿದ್ದಾರೆ ? ಯಾರೂ ಕಾಣದ ಮೋಕ್ಷವನ್ನು ಬೆನ್ನುಹತ್ತದೆ ಇಹಜೀವನದಲ್ಲಿ ವಿನೋದದಿಂದ ನಲಿಯುವುದು. ೧೫೧. ಎಂದು ಹೇಳಲು ಸಂಘಶ್ರೀ ಹೀಗೆಂದನು : ಜಿನವಾಕ್ಯ ಹುಸಿಯಾದರೆ ಧನದ ಮಹಾ ರಾಜನು ನನಗೆ ಪಾಪ ಜೀವನದ ಬಡಬಾನಲರೆನ್ನಿಸುವ, ಅಂತರಿಕ್ಷದಲ್ಲಿ ಹೋಗುತ್ತಿದ್ದ ಇಬ್ಬರು ಮುನಿಗಳನ್ನು ತೋರಿಸಿದನು. ೧೫೨-೧೫೩. ಉತ್ತಮ ತಪಸ್ಸಿನಿಂದ ಲಭಿಸಿದ ವೃದ್ಧಿಯನ್ನು ಸಂಶಯವಿಲ್ಲದಂತೆ ಕಂಡುದರಿಂದ ಜಿನಮತವನ್ನು ನಂಬಿದೆ. ನನಗೆ ಹುಚ್ಚಿಲ್ಲ. ಸಾರವಿಲ್ಲದ ನಿನ್ನ ಈ ಧರ್ಮ ಪ್ರಯೋಜನವಿಲ್ಲ ೧೫೪. ಎಂದು ನುಡಿ

ಗದ್ಯ॥ ಎಂದು ನುಡಿವುದುಂ ಬುದ್ಧಶ್ರೀ ಸಂಘಶ್ರೀಯುನೆಂತಾದೊಡಂ ಕಿಡಿಸುವೆನೆಂಬ ಕಜ್ಜದಿ ನಿಂತೆಂದಂ- ೧೫೫

ಧನದ ಮಹೀಶ್ವರಂ ವಿಬುಧ ಬಂಧು ಚತುರ್ಬಲದಿಂದ ಕಾದಿ ಜೀ
ವನಧಿ ಪರೀತ ಭೂವಳಯಮಂ ನೆಱೆ ಸಾಧಿಸಿಕೊಂಡನೆಂದೊಡಿಂ
ನಿನಗೆ ಜನೇಶನಂಬರದೊಳಿರ್ವರನುತ್ಸವದಿಂ ಮುನೀಂದ್ರರಂ
ಮನಮುರಿತೋಱಿ ತನ್ನ ವಶಮಾಗಿರೆ ಮಾಟ್ಪುದದಾವ ವಿಸ್ಮಯಂ ೧೫೬

ಗದ್ಯ॥ ಎಂದು ಕಳಕಳಿಸಿ ನಕ್ಕು ಮತ್ತಮನಿತಾನುಂ ಕುತ್ಸಿತಮಪ್ಪುದಾಹರಣೆಗಳಂ ತೋಱಿ ಶೂನ್ಯವಾದಮಂ ಮಾಡಿ ತಡಂಗಾಲ್ವೊಯ್ಯುದುಂ ಸಂಘಶ್ರೀ ಬುದ್ಧಶ್ರೀಯ ವೃಥಾಲಾಪಕ್ಕೊಳಗಾಗಿ ಲೋಚನಹೀನನಂತೆ ಶೋಭೆಗೆಟ್ಟು ತಿಗಂಗೆಟ್ಟ ಕುದುರೆಯಂತೆ ಮನಂಗೆಟ್ಟು, ಮಾಗಿಯ ತೊಱೆಯಂತೊಳಸಾರ್ದು, ಇರುಳ್ ಕಣ್ಕಾಣದರಂತೆ ತೊಟ್ಟನೆ ಕಣ್ಗೆಟ್ಟು ಸದ್ಧರ್ಮ ವಿಮುಖನಾಗಿ "ಪುನಃ ಶ್ವಾನೋಭವಿಷ್ಯತಿ"ಯೆಂಬ ನೀತಿಯನ್ನುಂಟುಮಾಡಿ ಮಿಥ್ಯಾತ್ವಮಂ ಪೊರ್ದಿದನಿಂತು ೧೫೭

ಎನ್ನ ಚಲಂ ಕೂಡಿದುದೆಂ
ದುನ್ನತಿಯಿಂ ಪೆಟ್ಟುವೆರ್ಚೆ ಬುದ್ಧಶ್ರೀ ಪೋ
ದನ್ನಯದೊಳಿತ್ತಲಘಚಯ
ದುನ್ನತಿಯಂ ಕಪ್ಪನಾದನಪಗತಪುಣ್ಯಂ ೧೫೮

ಯಲು ಬುದ್ಧಶ್ರೀ ಸಂಘಶ್ರೀಯನ್ನು ಹೇಗಾದರೂ ಕೆಡಿಸುವೆನೆಂಬ ಉದ್ದೇಶದಿಂದ ಮತ್ತೆ ಹೀಗೆ ಹೇಳಿದನು : ೧೫೫. "ಧನದ ಮಹಾರಾಜನು ದೇವಬಂಧುಗಳ ಚತುರಂಗ ಸೈನ್ಯವನ್ನು ಕಾದಿ ಸಮುದ್ರದಿಂದ ಸುತ್ತುಗಟ್ಟಲ್ಪಟ್ಟ ಭೂಮಂಡಲವನ್ನು ಸಂಪೂರ್ಣವಾಗಿ ಸಾಧಿಸಿ ವಶಪಡಿಸಿಕೊಂಡನೆಂದ ಮೇಲೆ ನಿನಗೆ ರಾಜನು ಆಕಾಶದಲ್ಲಿ ಇಬ್ಬರು ಮುನಿಶ್ರೇಷ್ಠರನ್ನು ನಿನ್ನ ಮನಸ್ಸನ್ನು ತಿರುಗಿಸುವುದಕ್ಕೋಸ್ಕರ ತೋರಿಸಿ ತನ್ನ ವಶಮಾಡಿಕೊಳ್ಳುವುದು ಏನು ಆಶ್ಚರ್ಯ ?" ೧೫೬. ಎಂದು ಹೇಳಿ ಗಟ್ಟಿಯಾಗಿ ನಕ್ಕು ಇನ್ನೂ ಎಷ್ಟೋ ಕುತ್ಸಿತವಾದ ಉದಾಹರಣೆಗಳನ್ನು ತೋರಿಸಿ ಶೂನ್ಯವಾದವನ್ನು ಮಾಡಿ ಅಡ್ಡಗಾಲು ಹಾಕಲು ಸಂಘಶ್ರೀ ಬುದ್ಧಶ್ರೀಯ ವ್ಯರ್ಥವಾದ ಮಾತಿಗೆ ಒಳಗಾಗಿ ಕಣ್ಣಿಲ್ಲದವನಂತೆ ಅಂದಗೆಟ್ಟು ಪೃಷ್ಠಕೆಟ್ಟ ಕುದುರೆಯ ಹಾಗೆ ಮನಸ್ಸು ಕೆಟ್ಟು ಹೋಗಿ ಮಾಗಿಯ ಕಾಲದ ತೊರೆಯಂತೆ ಬಹಳ ತಗ್ಗಿಹೋಗಿ, ರಾತ್ರಿ ಕಣ್ಣು ಕಾಣಸದವರಂತೆ ತಟ್ಟನೆ ಕಂಗೆಟ್ಟು ಸದ್ಧರ್ಮಕ್ಕೆ ಹಿಮ್ಮೊಗನಾಗಿ "ಮತ್ತೆ ನಾಯಿಯೇ ಆಗುತ್ತಾನೆ" ಎಂಬ ನೀತಿಯನ್ನು ನಿಜಮಾಡಿ ಮಿಥ್ಯಾತ್ವವನ್ನು ಹಿಡಿದನು. ೧೫೭. ಬುದ್ಧಶ್ರೀ ತನ್ನ ಛಲ ಗೆದ್ದಿತೆಂದು ಹೆಮ್ಮೆಪಟ್ಟು ಉಬ್ಬಿ ಗರ್ವಪಟ್ಟು ಹೊರಟುಹೋದನು. ಇತ್ತ ಪಾಪಸಮೂಹದ ಹೆಚ್ಚಳದಿಂದ ಪುಣ್ಯವನ್ನು ಕಳೆದುಕೊಂಡು ಸಂಘಶ್ರೀ ನೀಚನಾದನು.

ಜಿನಪದ ಸೇವನೆಯಂ ಬಿ
ಟ್ಟನೇಕ ದುರ್ಮತಿಗಳೊಡನೆ ಕೂಡಿ ಮಹಾ ದು
ರ್ವಿನಯದಿನನಂತ ಸುಖಮಂ
ತನಗೀವಂತಪ್ಪ ಧರ್ಮತರುವಂ ಕಡಿದಂ ೧೫೯

ವಿಮಲಗುಣ ಗುಣಮನೊಕ್ಕು
ತ್ತಮ ಧರ್ಮಮನೊಲ್ಲದಧಿಕ ಪಾಪಂ ಶೂನ್ಯಾ
ಗಮಮಂ ಪೊರ್ದಿದನದಱಿಂ
ಸಮಂತು ಸದ್ಧರ್ಮವಿರ್ಪುದಂ ಕಂಡವರಾರ್ ೧೬೦

ತಡೆಯದೆ ಮಹಾನಿಧಾನಂ
ಬಡವನ ಕೈಸಾರ್ದು ಭೂಪರಱಿಯದೆ ನೆಲಸಿ
ರ್ಪೊಡಮೊಳ್ಳಿತಪ್ಪ ಧರ್ಮಂ
ಕಿಡದಿರ್ಪೊಡಮವರ ಪುಣ್ಯವಂತರ್ ಧರೆಯೊಳ್ ೧೬೧

ಗದ್ಯ॥ ಕುಂಕುಮಮಂ ಬಿಟ್ಟು ಜಾದಂ ಪೂಸುವಂತೆ ಮನೆಯಂ ಬಿಟ್ಟು ಬೀದಿಯೊಳಿರ್ಪಂತೆ ಪಟ್ಟಣಮಂ ಬಿಟ್ಟು ಪೊಲೆಗೇರಿಯೊಳ್ ಪಡುವಂತೆ, ಪಾಲಂ ಬಿಟ್ಟು ಕಳ್ಳಂ ಕುಡಿವಂತೆ ರಾಜ ಕುಮಾರನ ಕೆಳೆಯಂ ಬಿಟ್ಟು ಪುಲ್ಲಡಕಿಯೊಳ್ ಕೆಳೆಗೊಳ್ವಂತೆ ಸೀರೆಯಂ ಬಿಟ್ಟು ನಾರನುಡುವಂತೆ ದಿವ್ಯಾಭರಣಂಗಳಂ ಬಿಟ್ಟು ಬಳ್ಳಿಗಳಂ ಕಟ್ಟುವಂತೆ, ಸೊಡರ ಬೆಳಗಂ ಬಿಟ್ಟು ಕೊಳ್ಳಿಯ ಬೆಳಗಿ

೧೫೮. ಜಿನಪಾದ ಸೇವೆಯನ್ನು ಬಿಟ್ಟು ಅನೇಕ ದುರ್ಮತಿಗಳ ಸಂಗಡ ಸೇರಿಕೊಂಡು ಬಹಳ ದುರ್ವಿನಯದಿಂದ, ತನಗೆ ಅನಂತವಾದ ಮೋಕ್ಷ ಸುಖವನ್ನು ಕೊಡುವ ಧರ್ಮ ವೃಕ್ಷವನ್ನು ಕಡಿದನು. ೧೫೯. ವಿಮಲಗುಣನೇ ! ಗುಣವನ್ನು ಬಿಟ್ಟು ಉತ್ತಮ ವಾದ ಧರ್ಮವನ್ನು ತಿರಸ್ಕರಿಸಿ ಮಹಾಪಾಪಿ ಶೂನ್ಯಾಗಮವನ್ನು ಹೊಂದಿದನು. ಆದರಿಂದ ನಿಜವಾಗಿ ಸದ್ಧರ್ಮವಿರುವುದನ್ನು ಕಂಡವರು ಯಾರು ? ೧೬೦. ತಡ ವಿಲ್ಲದೆ ಮಹಾನಿಕ್ಷೇಪವು ಬಡವನ ಕೈಸೇರಿ ರಾಜರಿಗೆ ತಿಳಿಯದಂತೆ ಸ್ಥಿರವಾಗಿ ನಿಲ್ಲಬೇಕಾ ದರೂ, ಒಳ್ಳೆಯದಾದ ಧರ್ಮ ಕೆಡದೆ ಇರಬೇಕಾದರೂ, ಅವರು ಲೋಕದಲ್ಲಿ ಪುಣ್ಯ ಶಾಲಿಗಳಾಗಿರಬೇಕು. ೧೬೧. ಕುಂಕುಮಕೇಸರಿಯನ್ನು ಬಿಟ್ಟು ಗೈರಿಕಧಾತುವನ್ನು ಹಚ್ಚಿ ಕೊಳ್ಳುವಂತೆ, ಮನೆಯನ್ನು ಬಿಟ್ಟು ಬೀದಿಯಲ್ಲಿರುವ ಹಾಗೆ, ಪಟ್ಟಣವನ್ನು ಬಿಟ್ಟು ಹೊಲೆಗೇರಿಯಲ್ಲಿ ಮಲಗುವಂತೆ, ಹಾಲನ್ನು ಬಿಟ್ಟು ಹೆಂಡವನ್ನು ಕುಡಿಯುವಂತೆ, ರಾಜ ಪುತ್ರನ ಗೆಳೆತನವನ್ನು ಬಿಟ್ಟು ಹುಲ್ಲು ಹೊರುವವನಲ್ಲಿ ಸ್ನೇಹ ಮಾಡುವಂತೆ, ಬಟ್ಟೆ ಯನ್ನು ಬಿಟ್ಟು ನಾರನ್ನು ಉಡುವಂತೆ, ಒಳ್ಳೆಯ ಒಡವೆಗಳನ್ನು ಬಿಟ್ಟು ಬಳ್ಳಿಗಳನ್ನು ಕಟ್ಟುವ ಹಾಗೆ, ದೀಪದ ಬೆಳಕನ್ನು ಬಿಟ್ಟು ಕೊಳ್ಳಿಯ ಬೆಳಕಿನಲ್ಲಿ ಊಟಮಾಡುವಂತೆ,

ನೊಳುಣ್ಬಂತೆ ಕಱುವಮಾಡಮಂ ಬಿಟ್ಟು ಪುಲ್ಗುಡಿಸಲನಾಶ್ರಯಿಸುವಂತೆ ಜಾದಿಯ ಪೂವಂ ಬಿಟ್ಟು ಬೇವಿನ ಪೂವಂ ತುಱುಂಬುವಂತೆ ಸದ್ಧರ್ಮಮಂ ಬಿಟ್ಟು ಮಿಥ್ಯಾತ್ವಪ್ರೀತನಾಗಿರ್ಪುದುಂ ವಾತ್ಸಲ್ಯರತ್ನಾಕರನಱಿದು ತನ್ನೊಳಿಂತೆಂದಂ ೧೬೨

ಮಾಱಲೆಂದಳಿಪಿಂ ವಣಿಗ್ವರನೊಯ್ದು ಕರ್ಪೂರಮಂ ಕರಂ
ತೋಱಿ ಭಾವಿಸಿ ನೋಡಿ ತಾಂ ಪೊಲೆಯಂ ದಿಟಂ ಕಳುಹಿಂಗೆ(?) ನೀಂ
ತೋಱು ಕೊಂಡಪೆನೆನ್ನ ಬಳ್ಳದೊಳೆಂಬವೋಲ್ ವರಧರ್ಮಮಂ
ಕೇಱಿ ಪೇೞ್ದೊಡಮೊಲ್ವರಲ್ಲರಘಾನ್ವಿತರ್ ಗುಣವರ್ಜಿತರ್ ೧೬೩

ನಾಯಕುನ್ನಿಗೆ ಕೂರ್ತು ರಾಜ್ಯಮನಿತ್ತು ಪಾಸಿನ ಮೇಲೆ ತಂ
ದಾಯತಿಕ್ಕೆಯಿನೊಪ್ಪವಾಗಿರಿಸಿ ಪ್ರಭೂತ್ಮರಮಿರ್ದು ಕ
ಟ್ಟಾಯದಿಂದೊಡನೋವದೋಲಗಿಸುತ್ತುಮಿರ್ಪೊಡೆ ಮತ್ತಮಾ
ನಾಯಕುನ್ನಿ ಸಮಂತು ಮಾಣ್ಬುದೆ ಪೇಲ ತಿಂಬುದನೆಲ್ಲಿಯುಂ ೧೬೪

ಗದ್ಯ॥ ಎಂದು ಭಾವಿಸಿ ಸಂಘಶ್ರೀಯಂ ಬರಿಸಿ ಮುಂದೆ ಕುಳ್ಳಿರಿಸಿ ಧರ್ಮಶ್ರವಣಮಂ ಮಾಡೆ ಮೂಗರಂತೆ ಮಱುಮಾತುಗುಡದೆ ಮರದಂತೆ ಬಿಟ್ಟಾಡದೆ ಬೆಳ್ವೊರಸಿನಂತೆ ಶೂನ್ಯ ಹೃದಯನಾಗಿ ಬೆಳೆದ ಕೆಯ್ಯಂತೆ ತಲೆಯಂ ಬಾಗಿ ಮಿಥ್ಯಾತ್ವಗ್ರಹಾವಿಷ್ಟನಾಗಿ ಕೇಳದಿರ್ಪುದುಂ,

ಉಪ್ಪರಿಗೆಯನ್ನು ಬಿಟ್ಟು ಹುಲ್ಲುಗುಡಿಸಲನ್ನು ಆಶ್ರಯಿಸುವಂತೆ, ಜಾಜಿಯ ಹೂವನ್ನು ಬಿಟ್ಟು ಬೇವಿನ ಹೂವನ್ನು ಮುಡಿಯುವಂತೆ, ಸದ್ಧರ್ಮವನ್ನು ಬಿಟ್ಟು ಮಿಥ್ಯಾತ್ವದಿಂದ ಪ್ರೀತನಾಗಿರಲು ವಾತ್ಸಲ್ಯ ರತ್ನಾಕರನು (ಧನದ) ತಿಳಿದು ಹೀಗೆಂದುಕೊಂಡನು. ೧೬೨.
"ವರ್ತಕಶ್ರೇಷ್ಠನು ಮಾರುವುದಕ್ಕಾಗಿ ಆಸೆಯಿಂದ ಕರ್ಪೂರವನ್ನು ತೆಗೆದುಕೊಂಡು ಹೋಗಿ ತೋರಿಸಿದರೂ ಗಮನಿಸಿ ನೋಡಿ ಹೊಲೆಯನು, ಅವನನ್ನು ಕಳುಹಿಸಿ ಬಿಡಲು "ನೀನು ತೋರಿಸು, ನನ್ನ ಬಳ್ಳದಲ್ಲಿ ಕೊಳ್ಳುತ್ತೇನೆ" ಎನ್ನುವಂತೆ ಶ್ರೇಷ್ಠವಾದ ಧರ್ಮವನ್ನು ಚೀರಿ ಹೇಳಿದರೂ ಗುಣವರ್ಜಿತರಾದ ಪಾಪಿಗಳು ಒಲಿಯುವುದಿಲ್ಲ." ೧೬೪.
ಹೀಗೆ ಚಿಂತಿಸಿ ಸಂಘಶ್ರೀಯನ್ನು ಬರಮಾಡಿ ಎದುರಿಗೆ ಕೂಡಿಸಿಕೊಂಡು ಧರ್ಮಶ್ರವಣ ಮಾಡಿಸಲು ಮೂಕರ ಹಾಗೆ ಮೌನವಾಗಿ ಮರದಂತೆ ಬಿಳಿಯ ಕಪೋತ[1]ದಂತೆ ಶೂನ್ಯ ಹೃದಯನಾಗಿ ಬೆಳೆದ ಗದ್ದೆಯಂತೆ ತಲೆಯನ್ನು ಬಗ್ಗಿಸಿ ಮಿಥ್ಯಾತ್ವವೆಂಬ ಗ್ರಹದ ಆವೇಶಕ್ಕೆ ಸಿಕ್ಕಿ ಕೇಳದೆ ಇದ್ದನು. ಹಲವು ದಿನ ಆತನನ್ನು ಹೇಗೂ ಧರ್ಮಕ್ಕೆ ತರಲು

1 ಬಿಳಿಯ ಪಾರಿವಾಳ ಅಪಶಕುನದ ಹಕ್ಕಿ

ಪಲವು ದಿವಸಮಾತನನೆಂತುಂ ಧರ್ಮಕ್ಕೆ ತರಲಾಱದೆ ಕಮಳಶ್ರೀಯು ಸಾಮಂತರ ಮೊಗಮಂ ನೋಡಿ ಧನದಮಹಾರಾಜನಿಂತೆಂದಂ ೧೬೫

ಕಲ್ಲೆಂತುಂ ನನೆಯದವೋಲ್
ಪೊಲ್ಲಮೆಯೊಳ್‌ಕೂಡಿ ರೌರವಕ್ಕಿೞಿವವರುಂ
ಸಲ್ಲಲಿತಮಪ್ಪ ಧರ್ಮ
ಕ್ಕಿಲ್ಲಿಯುಮೋರಂತೆ ಬಾರರಘವಶದಿಂದಂ ೧೬೬

ಇರುಳಪ್ಪಾಗಳ್ ಪಶ್ಚಿಮ
ಶರನಿಧಿಗಿೞಿವಂತೆ ಸೂರ್ಯನಘಸಂಕುಲದಿಂ
ಪೊರೆದಿರ್ದ ತೀವ್ರರುಂ ನಿ
ಷ್ಠುರ ನರಕಕ್ಕಿೞಿವರಲ್ಲಿ ಸಂದೆಯಮುಂಟೆ ? ೧೬೭

ಎನಿತು ಕಡುಗೂರ್ತೊಡಂ ಬೇ
ವಿನ ಮರನಂ ಮಳಯೋರ್ವಿಜಂ ಮಾಡುವೆನೆಂ
ಬನೆ ಗಾಂಪನಂತೆ ಪಾತಕ
ರೆನಿತೆಂದೊಡಮಮಳಧರ್ಮಮಂ ಪೊರ್ದುವರೇ ೧೬೮

ಗದ್ಯ॥ ಎಂದು ನುಡಿಯುತ್ತುಂ ಧರ್ಮವಾತ್ಸಲ್ಯದಿಂ ಕಾರುಣ್ಯರಸಮೊದವೆ ಸಂಘಶ್ರೀಯುಂ ನರಕಕ್ಕೆ ಸಲಲೀಯದೆ ಪಂಚಮಗತಿಯನೆಯ್ದುಸುವೆನೆಂಬ ಮೋಹದಿಂದೆನಿತಾನುಂ ತೆಱದ ಕಥೆಗಳುಮಂ ದೃಷ್ಟಾಂತಂಗಳುಮಂ ತೋಱಿ ನುಡಿದುಂ ವ್ರತಕ್ಕೆ ತರಲಾಱದೆ ೧೬೯

ಸಾಧ್ಯವಾಗದೆ, ಕಮಲಶ್ರೀ ಮತ್ತು ಸಾಮಂತರ ಮುಖ ನೋಡಿ ಧನದ ಮಹಾರಾಜನು ಹೀಗೆಂದನು:೧೬೫ ಕಲ್ಲು ಹೇಗೆ ನೆನೆಯಂದೆ ಇರುವುದೋ ಹಾಗೆಯೇ ಕೆಟ್ಟತನದಿಂದ ಕೂಡಿ ರೌರವಕ್ಕೆ ಇಳಿಯುವವರೂ ಶ್ರೇಷ್ಠವಾದ ಧರ್ಮಕ್ಕೆ ಪಾಪವಶದಿಂದ ಎಲ್ಲಿಯೂ ಬರುವುದಿಲ್ಲ. ೧೬೬. ರಾತ್ರಿಯಾಗುವಾಗ ಸೂರ್ಯನು ತಪ್ಪದೆ ಪಶ್ಚಿಮ ಸಮುದ್ರಕ್ಕಿಳಿಯುವ ಹಾಗೆ ಪಾಪಸಮೂಹದಿಂದ ತುಂಬಿರುವ ಉಗ್ರರೂ ಕ್ರೂರವಾದ ನರಕಕ್ಕೆ ಇಳಿಯುವರು. ಅದರಲ್ಲಿ ಸಂಶಯವುಂಟೆ ? ೧೬೭. ಎಷ್ಟು ಪ್ರೀತಿಸಿದರೂ ಬೇವಿನ ಮರವನ್ನು ಶ್ರೀಗಂಧದ ಮರವನ್ನಾಗಿ ಮಾಡುವೆನೆನ್ನುವವನೇ ದಡ್ಡ. ಹಾಗೆಯೇ ಎಷ್ಟು ಹೇಳಿದರೂ ಪಾಪಿಗಳು ಶುದ್ಧಧರ್ಮಕ್ಕೆ ಹೋದುವುದಿಲ್ಲ. ೧೬೮. ಎಂದು ಹೇಳುತ್ತ ಧರ್ಮಪ್ರೇಮದಿಂದ ಕಾರುಣ್ಯ ಹುಟ್ಟಲು ಸಂಘಶ್ರೀಯನ್ನು ನರಕಕ್ಕೆ ಸೇರಗೊಡದೆ ಪಂಚಮಗತಿಗೆ ಸೇರಿಸುವೆನೆಂಬ ಮೋಹದಿಂದ ಎಷ್ಟೋ ರೀತಿಯ ಕಥೆಗಳನ್ನೂ ದೃಷ್ಟಾಂತಗಳನ್ನೂ ಹೇಳಿ ಅವನನ್ನು ಮತ್ತೆ ವ್ರತಕ್ಕೆ ತರಲು ಅಸಮರ್ಥನಾಗಿ ೧೬೯. "ಶ್ರೇಷ್ಠರಾದ ಚಾರಣ

ವರಚಾರಣ ಋಷಿಯರನಂ
ಬರದೊಳ್ ಪೋಗುತ್ತುಮಿರ್ದರಂ ನಿನಗಂದಾ
ದರದಿಂ ತೋಱಿದೆನದನ
ಚ್ಚರವಟ್ಟು ಮನೋನುರಾಗದಿಂ ಕಂಡು ನೀಂ ೧೭೦

ಗದ್ಯ॥ ಜಡಮತಿಯಾಗಿ ನಿರ್ಬುದ್ಧಿತನದಿಂ ಮಿಥ್ಯಾತ್ವಯುತರಪ್ಪ ಧೂರ್ತರ ಮಾತಂ ಕೇಳ್ದು ಪರತ್ರೆಯುಮಿಲ್ಲ ದೈವಮುಮಿಲ್ಲೆಂದು ಬೆಣಕಱಂ ಗೆಡೆಯಬೇಡ ೧೭೧

ಅನುಪಮ ತಪದ ಫಲಂ ಮೇ
ದಿನಿಯೊಳ್ ಪೇೞಿಲ್ಲದಂದು ಪ್ರತ್ಯಕ್ಷಂ ನೀಂ
ಘನಪಥದೊಳ್ ಪೋಪವರಂ
ಮುನಿವರರಂ ವೃದ್ಧಿಯುಕ್ತರಂ ನಿಶ್ಚಯದಿಂ ೧೭೨

ಕಂಡಿರ್ದುಂ ಮತ್ತಂ ವೇ
ತಂಡದವಿೂಹಮನೆ ಮಾಡಿ ಸುವ್ರತಮಂ ಕೈ
ಕೊಂಡು ಮತಿಗೆಟ್ಟುಬಿಡುವೀ
ವಿಂಢರ ಮಾತಿಂಗೆ ಬೆಚ್ಚಿ ಸದ್ದರ್ಶನಮಂ ೧೭೩

ಗದ್ಯ॥ ನಿನ್ನ ಗುರುವಪ್ಪ ಬೆಳಪುಂಜನ ವಚನಮುಮಂತಿರಿಸು, ನೀನೆ ಪ್ರತ್ಯಕ್ಷಮಾಗೆ ನಭೋಂಗಣದೊಳ್ ಪೋಪ ಚಾರಣಋಷಿಯರಂ ಕಂಡುದುಂಟೋ ಪೇೞಿಲ್ಲವೋ ಪುಸಿಯದೆ ಪೇೞೆನೆ ಬುದ್ಧ

ಋಷಿಗಳನ್ನು ಆಕಾಶದಲ್ಲಿ ಹೋಗುತ್ತಿದ್ದಾಗ ನಿನಗೆ ಆ ದಿನ ಆದರದಿಂದ ತೋರಿಸಿದೆ; ಅದನ್ನು ಆಶ್ಚರ್ಯಪಟ್ಟು ಮನಃಸಂತೋಷದಿಂದ ನೀನು ನೋಡಿದೆ. ೧೭೦. ಈಗ ಮಂದ ಬುದ್ಧಿಯಾಗಿ ದಡ್ಡತನದಿಂದ ಮಿಥ್ಯಾತ್ವದಿಂದ ಕೂಡಿದ ಧೂರ್ತರ ಮಾತನ್ನು ಕೇಳಿ ಪರಗತಿಯೂ ಇಲ್ಲ, ದೈವವೂ ಇಲ್ಲವೆಂದು ಆಬದ್ಧ ಹರಟಬೇಡ" ೧೭೧. ಅನುಪಮವಾದ ತಪಸ್ಸಿನ ಫಲ ಲೋಕದಲ್ಲಿ ಇಲ್ಲವೇ ? ಹೇಳು. ಆಂದು ಪ್ರತ್ಯಕ್ಷವಾಗಿ ನೀನು ಮೇಘ ಮಾರ್ಗದಲ್ಲಿ ಹೋಗುತ್ತಿದ್ದ ಮುನಿಶ್ರೇಷ್ಠರನ್ನು, ಋದ್ಧಿಯುಕ್ತರಾದವರನ್ನು ನಿಶ್ಚಯವಾಗಿಯೂ ಕಂಡಿದ್ದೂ ಪುನಃ ಗಜಸ್ನಾನ[1]ವನ್ನೇ ಮಾಡಿ, ಸುವ್ರತವನ್ನು ಧರಿಸಿಯೂ ಪುನಃ ಮತಿಹೀನನಾಗಿ ಅದನ್ನು ಬಿಟ್ಟುಬಿಡುವ ಈ ವಿಟಂಡರ ಮಾತಿಗೆ ಬೆದರಿ ೧೭೩. ಸದ್ದರ್ಶನವನ್ನು ತಿರಸ್ಕರಿಸುವೆಯಾ ? ನಿನ್ನ ಗುರುವಾದ ಬೆಳಪುಂಜನ ಮಾತನ್ನು ಹಾಗೆ ಇರಿಸು. ನೀನೇ ಕಣ್ಣಿಂದ ಆಕಾಶ ಮಾರ್ಗದಲ್ಲಿ ಹೋಗುತ್ತಿದ್ದ ಚಾರಣಋಷಿಗಳನ್ನು ಕಂಡದ್ದು ಉಂಟೋ ಇಲ್ಲವೋ ಹೇಳು; ಹುಸಿಯದೆ ಹೇಳು." ಎನ್ನಲು ಬುದ್ಧ

1 ಆನೆ ಸ್ನಾನ ಮಾಡಿದ ಮೇಲೆ ಮೈಮೇಲೆ ಮಣ್ಣೆರಚಿ ಕೊಳ್ಳುತ್ತದೆ.

ಶ್ರೀಯು ಕುಹೇತು ದೃಷ್ಟಾಂತವನೆ ನಂಬಿ ತಱಟಿಗವೊಱಟಿಗಂ ಮರ್ದಿಲ್ಲೆಂಬುದಂ ನನ್ನಿಮಾಡಿ ಚಾರಣಋಷಿಯರಂ ಕಾಣೆನೆಂದು ತಲೆಮುಟ್ಟಿರಸನೊಡನೆ ಬಾಯಂಬಡಿವುದುಂ ೧೭೪

ಪುರದೇವತೆಗಳ್ ಮುನಿಸಿಂ
ಪರಿತಂದು ದುರಾತ್ಮನೆರಡು ಕಣ್ಗಳುಮಂ ನಿ
ಷ್ಠುರವಾಗಿ ಪೊಯ್ಯೆ ತೊಟ್ಟನೆ
ಕುರುಡಾದಂ ಪುಸಿಯ ಪೊಟ್ಟಣರ್ಗದು ಪಿರಿದೇ ೧೭೫

ತಲೆನೋಯೆ ಕಣ್ಗಳೆರಡು
ನೆಲದೊಳ್ ಬರ್ದಿರೆ ಸಭಾಳಿ ಬೆಱಗಾಗೆ ಖಳಂ
ನೆಲನಂ ತಡವರಿಸುತ್ತುಂ
ಪೊಲೆಯರ ತೆಱದಿಂದೆ ದೂರದೊಳ್ ಕುಳ್ಳಿರ್ದಂ ೧೭೬

ಗದ್ಯ॥ ಅಂತಿರ್ದ ಸಂಘಶ್ರೀಯಂ ಸಭಾಜನಂ ನೋಡಿ ಪಾಪದ ಪ್ರತ್ಯಕ್ಷಫಲಮಂ ಕಂಡು ತಮ್ಮೊಳಿಂತೆಂದರ್ ೧೭೭

ಸರಸಿಜಮಿತ್ರನಂತೆ ತನುಶೋಭಿಸೆ ಮಾನವ ದೇವ ಖೇಚರೇ
ಶ್ವರ ನತಪಾದಪಂಕರುಹರುತ್ತಮರೂರ್ಜಿತರಂದು ಚಾರಣರ್
ನಿರುಪಮರಂತರಿಕ್ಷದೊಳಗುರ್ವಿಸಿ ಪೋಪರನೊಳ್ಪಿತಾಗೆ ಭಾ
ಸುರಗುಣ ತೋಱೆ ಕಂಡು ಖಳನಕ್ಕಟ ನೋಡಿರೆ ಕಾಣೆನೆಂದಪಂ ೧೭೮

ಶ್ರೀಯು ನೀಚವಾದ ಹೇತುದೃಷ್ಟಾಂತವನ್ನೇ ನಂಬಿ ಬೋಳತಲೆಗೂ ಒರಟುತನಕ್ಕೂ ಮದ್ದಿಲ್ಲವೆಂಬುದನ್ನು ನಿಜಮಾಡಿ ಚಾರಣಋಷಿವರರನ್ನು ಕಾಣೆನೆಂದು ತಲೆ ಮುಟ್ಟಿಕೊಂಡು ಅರಸನೆದುರಿಗೆ ಬಾಯಿಬಡಿದನು. ೧೭೪. ಆ ಕೂಡಲೆ ಪುರದೇವತೆಗಳು ಸಿಟ್ಟಿನಿಂದ ಓಡಿ ಬಂದು ಆ ದುರಾತ್ಮನ ಎರಡು ಕಣ್ಣುಗಳನ್ನೂ ಕ್ರೂರವಾಗಿ ಹೊಡೆಯಲು ತಟ್ಟನೆ ಕುರುಡನಾದನು. ಸುಳ್ಳಿನ ಗರ್ವಿತರಿಗೆ ಅದು ಹೆಚ್ಚಿನದೆ ? ೧೭೫. ಎರಡು ಕಣ್ಣುಗಳೂ ನೆಲಕ್ಕೆ ಬಿದ್ದಿದ್ದುವು, ತಲೆ ನೋಯುತ್ತಿತ್ತು. ಸಭೆಯವರೆಲ್ಲ ಭಯಾಶ್ಚರ್ಯಗಳಲ್ಲಿ ಮುಳುಗಿದರು. ಆ ದುಷ್ಟನು ನೆಲವನ್ನು ತಡವರಿಸುತ್ತ ಎಲ್ಲರ ಜತೆಯಲ್ಲಿರಲಾರದೆ ಹೊಲೆಯರ ಹಾಗೆ ದೂರದಲ್ಲಿ ಕುಳಿತುಕೊಂಡನು. ೧೭೬. ಹಾಗೆ ಇದ್ದ ಸಂಘಶ್ರೀಯನ್ನು ಸಭಾಜನರು ನೋಡಿ ಪಾಪದ ಫಲ ಪ್ರತ್ಯಕ್ಷವಾದುದನ್ನು ಕಂಡು ತಮ್ಮಲ್ಲಿಯೇ ಹೀಗೆಂದರು. ೧೭೭. "ಸೂರ್ಯನ ಹಾಗೆ ದೇಹ ಹೊಳೆಯುತ್ತಿರಲು, ಮಾನವ, ದೇವ, ಖೇಚರರ ರಾಜರು ನಮಿಸಿದ ಪಾದಕಮಲಗಳುಳ್ಳ, ಉತ್ತಮರೂ, ಶ್ರೇಷ್ಠರೂ, ಆದ ಚಾರಣರು ಆ ದಿನ ಅಂತರಿಕ್ಷದಲ್ಲಿ ಆಶ್ಚರ್ಯವಾಗುವಂತೆ ಹೋಗುತ್ತಿದ್ದುದನ್ನು ಕಂಡು ಗುಣಶಾಲಿಯಾದ ದೊರೆ ತೋರಿಸಲು ಕಂಡು ಈ ದುಷ್ಟನು ಈಗ ಕಾಣೆನೆನ್ನುವನು, ನೋಡಿರಾ ? ೧೭೮. ಇವನಿಗಿಂತ ಇನ್ನು ಹೆಚ್ಚಿನ ಬ್ರಹ್ಮೇತಿಕಾರರೂ ದುಃಖಪಾತ್ರರೂ,

ಗದ್ಯ॥ ಇವನಿಂ ಬಿಟ್ಟು ಬ್ರಹ್ಮೇತಿಕಾಱರುಂ ದುಃಖಭಾಜನರುಮಸತ್ಯವಾದಿಗಳುಮಿಲ್ಲೆಂದು ಮತ್ತಮಿಂತೆಂದರ್ ೧೭೯

ಉಳ್ಳುದನಿಲ್ಲೆಂದೀತಂ
ಕಳ್ಳಂ ನುಡಿದಂತೆ ಪುಸಿದ ಪಾಪದ ಫಲದಿಂ
ದೆಲ್ಲಿಯುಂ ನಿಲ್ಲದೆ ತಾಂ ತಳು
ವಿಲ್ಲದೆ ಕಣ್ಣೊಡೆದು ದುಃಖಭಾಜನನಾದಂ ೧೮೦

ವಸುಮತಿಯೊಳ್ ವಿಬುಧರ್ ಭಾ
ವಿಸುವೊಡೆ ನರಕಕ್ಕೆ ಪೋಪ ಪೆರ್ದಾರಿ ಮಹಾ
ವ್ಯಸನಕ್ಕೆ ಮೂಲಮಱಿವೊಡೆ
ಪುಸಿಯಿಂದಂ ಬಿಟ್ಟು ಪಾತಕಂ ಪೆಱತೊಳವೇ ೧೮೧

ಗದ್ಯ॥ ಎಂದು ಸಮಸ್ತ ಜನಮುಂ ಸಂಘಶ್ರೀಯನಶ್ರೀಯಂ ಕಂಡಂತೆ ಬಯ್ಯುತ್ತಿರೆ ಧನದ ಮಹಾರಾಜಂ ಮಿಥ್ಯಾತ್ವಕ್ಕೆ ಗಡಗಡ ನಡುಗಿ ಕಣ್ಣೊಡೆದು ನೆಲದೊಳ್ ಪೊರಳ್ವ ಸಂಘಶ್ರೀಯಂ ಮನೆಗೆ ಪೊತ್ತುಕೊಂಡು ಪೋಗಿಮೆಂದು ಪೇಟ್ದು ಕಟಿಪುವುದುಂ ಸಂಘಶ್ರೀ ಚಿಂತೆಯಿಂ ಜರ್ಜರನೆ ಜಱಿದು ದುಃಖಪೀಡಿತನಾಗಿ ಕೆಲವು ದಿವಸಕ್ಕೆ ಸತ್ತು ನರಕಕ್ಕಿೞಿದು ದೀರ್ಘಸಂಸಾರಿಯಾದನವ ನೇೞ್ಪಲೆವರೆಗಂ ಪುಟ್ಟಿದ ಮಕ್ಕಳೆಲ್ಲಮಂಧಕರಪ್ಪುದಱಿಂದಾ ದೇಶಕ್ಕಂಧಕವಿಷಯಮೆಂದು

ಅಸತ್ಯವಾದಿಗಳೂ ಇಲ್ಲ" ಎಂದು ಹೇಳಿ ೧೭೯. ಪುನಃ ಹೀಗೆ ಹೇಳಿದರು; ಇರುವುದನ್ನು ಇಲ್ಲವೆಂದು ಈತನು ಕಳ್ಳನು ಹೇಳಿದಂತೆ ಸುಳ್ಳಾಡಿದ ಪಾಪದ ಫಲದಿಂದ ತಡವಿಲ್ಲದೆ, ಕಣ್ಣುಗಳು ಒಡೆದು ದುಃಖಕ್ಕೆ ಗುರಿಯಾದನು. ೧೮೦. ಭೂಮಿಯ ಮೇಲೆ, ಪಂಡಿತರು ಯೋಚಿಸುವುದಾದರೆ, ನರಕಕ್ಕೆ ಹೋಗುವ ಹೆದ್ದಾರಿ, ಮಹಾವ್ಯಸನಕ್ಕೆ ಮೂಲ ಕಾರಣ, ತಿಳಿಯುವುದಾದರೆ, ಹುಸಿಗಿಂತ ದೊಡ್ಡ ಪಾತಕ ಬೇರೊಂದು ಇದೆಯೆ? ೧೮೧. ಹೀಗೆ ಜನರೆಲ್ಲರೂ ಸಂಘಶ್ರೀಯನ್ನು ಅಲಕ್ಷ್ಮಿಯನ್ನು ಕಂಡ ಹಾಗೆ ಬೈಯುತ್ತಿದ್ದರು. ಆಗ ಧನದ ಮಹಾರಾಜನು ಮಿಥ್ಯಾತ್ವಕ್ಕೆ ಹೆದರಿ ಗಡಗಡನೆ ನಡುಗಿದನು. ಕಣ್ಣುಗಳು ಒಡೆದು ಬಿದ್ದು ನೆಲದ ಮೇಲೆ ಹೊರಳುವ ಸಂಘಶ್ರೀಯನ್ನು ಮನೆಗೆ ಹೊತ್ತುಕೊಂಡು ಹೋಗಿರೆಂದು ಹೇಳಿ ಕಳಿಸಲು ಸಂಘಶ್ರೀ ಚಿಂತೆಯಿಂದ ಸರ್ರನೆ ಜರಿದು, ದುಃಖಪೀಡಿತನಾಗಿ ಕೆಲವು ದಿನಗಳಲ್ಲಿ ಸತ್ತು ನರಕಕ್ಕೆ ಇಳಿದು ದೀರ್ಘಸಂಸಾರದಲ್ಲಿ ಮುಳುಗಿದನು. ಅವನನಂತರುವಾಯ ಏಳು ತಲೆಮಾರುಗಳವರೆಗೂ ಹುಟ್ಟಿದ ಮಕ್ಕಳೆಲ್ಲರೂ ಅಂಧಕರಾದ್ದರಿಂದ ಆ ದೇಶಕ್ಕೆ ಅಂಧಕವಿಷಯುವೆಂದು ಹೆಸರಾಯಿತು. ವೇಗಿವಲ್ಲಭನಾದ ಧನದ ಮಹಾ

ಪೆಸರಾಯ್ತು. ವಂಗಿವಲ್ಲಭನಪ್ಪ ಧನದ ಮಹಾರಾಜನಿತ್ತಲ್ ಸಂಸಾರದ ವಿಚಿತ್ರಮಂ ಕಂಡು ರಾಜ್ಯಕ್ಕೆ ಬೆಚ್ಚಿ ವಿಷಯ ಸುಖಕ್ಕೆ ಭಯಸ್ಥನಾಗಿ ೧೮೨

ಚಾರಣ ಋಷಿಪದಯುಗಳಮ
ನೋರಂತಿರೆ ಕಂಡು ಕಾಣೆನೆಂದಂ ದುಷ್ಟ
ಪ್ರೇರಣೆಯಿಂದೇನಾಗದೊ
ಧಾರಿಣಿಯೊಳ್ ದುಷ್ಟಸಂಗತಂ ಪೊಲ್ಲದಱಿಂ ೧೮೩

ಗದ್ಯ॥ ಕಣ್ಗೊಳವಾಗಿಯುಂ ಕತ್ತಲೆಯೊಳ್ ಮುಂದಿರ್ದ ಮಾನಿಸರಂ ಕಾಣದಂತೆ ಜೀವಕ್ಕೆ ಮೂಱುಂ ಲೋಕಮನಱಿಪ ಶಕ್ತಿಯುಂಟಾಗಿಯುಂ ಕರ್ಮದ ತೀವ್ರತೆಯಿಂ ಸದ್ದರ್ಶನಮನಱಿಯಲಾಱದುದಱಿಂದಾ ಪಾಪಮೆ ಕಡು ಬಲ್ಲಿತ್ತೆಂದು ೧೮೪

ಮಿಥ್ಯಾತ್ವ ಬಂಧದಿಂದಂ
ಮಿಥ್ಯಾದೃಷ್ಟಿಗಳ ಮಾತೆ ರುಚಿಯಾಗಿರ್ಕುಂ
ಮಿಥ್ಯಾಹಾರಕರೆಂದುದೆ
ಪಥ್ಯಂ ಜೀವಕ್ಕೆ ಬಗೆದು ನೋೞ್ಪೊಡೆ ಜಗದೊಳ್ ೧೮೫

ಗದ್ಯ॥ ಮತ್ತಂ ಕೋಡಗಂ ಮಾನಿಸರಂತಾಗಿಯುಂ ಮಾನಿಸ ಗುಣಮಂ ಪೋಲದಂತೆ, ಬೆಕ್ಕು ಪುಲಿಯ ರೂಪಾಗಿಯುಂ ಪುಲಿಯಲ್ಲದಂತೆ, ಪಿತ್ತಳೆ ಪೊನ್ನಂತಾಗಿಯುಂ ಪೊನ್ನಲ್ಲದಂತೆ, ಹೊಱಸು

ರಾಜನು ಇತ್ತ, ಸಂಸಾರದ ವಿಚಿತ್ರಕ್ಕೆ ಬೆದರಿ ವಿಷಯಸುಖದ ವಿಷಯದಲ್ಲಿ ಭಯಪಟ್ಟನು. ೧೮೩. ಚಾರಣ ಋಷಿಗಳ ಪಾದಯುಗಳವನ್ನು ಒಂದೇ ಸಮನಾಗಿ ಕಂಡೂ ಕಾಣೆನೆಂದನು. ದುಷ್ಟರ ಪ್ರೇರಣೆಯಿಂದ ಏನೇನಾಗದು ? ಆದರಿಂದ ಲೋಕದಲ್ಲಿ ದುಷ್ಟರ ಸಂಗವು ಕೆಟ್ಟದ್ದು. ೧೮೪. ಕಣ್ಣುಗಳು ಇವೆಯಾದರೂ ಕತ್ತಲೆಯಲ್ಲಿ ಎದುರಿನಲ್ಲಿದ್ದ ಮನುಷ್ಯರನ್ನು ಕಾಣದಿರುವ ಹಾಗೆ ಮೂರು ಲೋಕಗಳನ್ನೂ ತಿಳಿದುಕೊಳ್ಳುವ ಶಕ್ತಿಯಿದೆ. ಆದರೂ ಕರ್ಮದ ಹೆಚ್ಚಳದಿಂದ ಸದ್ದರ್ಶನ (ಜೈನಧರ್ಮ) ವನ್ನು ತಿಳಿಯಲು ಸಾಧ್ಯವಲ್ಲ. ಆದ್ದರಿಂದ ಆ ಪಾಪವೇ ಬಹಳ ಬಲವಾದದ್ದು. ೧೮೪. ಮಿಥ್ಯಾತ್ವದ ಬಂಧದಿಂದ, ಮಿಥ್ಯಾದೃಷ್ಟಿಗಳ ಮಾತೇ ರುಚಿಯಾಗಿರುತ್ತದೆ. ಮಿಥ್ಯಾವಾದಿಗಳು ಹೇಳಿದ್ದೇ ಜಗದಲ್ಲಿ ಜೀವಿಗಳಿಗೆ ಪಥ್ಯವೆಂದು ತೋರುತ್ತದೆ. ೧೮೫. ಅಲ್ಲದೆ ಕಪಿ ಮನುಷ್ಯರ ಹಾಗಿದ್ದರೂ ಮಾನವ ಗುಣವನ್ನು ಹೋಲದು, ಬೆಕ್ಕು ಹುಲಿಯ ರೂಪವಾಗಿದ್ದರೂ ಹುಲಿಯಲ್ಲ. ಹಾಗೆಯೇ ಹಿತ್ತಾಳೆ ಹೊನ್ನಿನಂತೆ ಕಂಡರೂ ಹೊನ್ನಲ್ಲ. ಹಾಗೆಯೇ ಹೊರಸು ಹಂಸದಂತೆ ಇದ್ದರೂ ಹಂಸೆಯಲ್ಲ. ಹಾಗೆಯೇ ದಾಸಿಯು

ಪಂಸೆಯುಂತಾಗಿಯುಂ ಹಂಸೆಯಲ್ಲದಂತೆ, ತೊತ್ತು ವ್ಯವಸಾಯವಂತೆಯಾಗಿಯುಂ ಪೆಂಡತಿಯಲ್ಲದಂತೆ, ಪೊಲೆಯರ್ ಧನಕ್ಕೊಡೆಯರಾಗಿಯುಂ ಮೇಲ್ಜಾತಿಯಾಗದಂತೆ, ಪಱಹೆ ಮಡಿಯಾಗಿಯುಂ ಬಲ್ವಸ್ತ್ರಮಾಗದಂತೆ, ಬೇಡಗೊಟ್ಟಮೂರಾಗಿಯುಂ ಪಟ್ಟಣಮಾಗದಂತೆ, ಬಳೆತುಡಿಗೆಯಾಗಿಯುಂ ಸರಿಗೆಯಲ್ಲದಂತೆ, ಸಾವೆ ಬೆಳಸೆಯಾಗಿಯುಂ ಕಳವೆಯ ಬೆಳೆಯಲ್ಲದಂತೆ, ಪಗರಣಗನರಸಂಗಿಯುಂ ಕ್ಷತ್ರಿಯನಲ್ಲದಂತೆ ಪಕ್ಷಿಗಳಾಕಾಶದೊಳ್ ಪೋಪುವಾಗಿಯುಂ ವಿದ್ಯಾಧರರಲ್ಲದಂತೆ ನಾಯ್ ಸಿಂಹಾಕಾರಮಾಗಿಯುಂ ಸಿಂಹಮಲ್ಲದಂತೆ, ಜಾದು ಕೆಚ್ಚನಾಗಿಯುಂ ಕುಂಕುಮಮಲ್ಲದಂತೆ ಗುಡಿಸಲ್ ಚೆಲ್ವಾಗಿಯುಂ ಮಾಳಿಗೆಯಲ್ಲದಂತೆ, ಬೂತೊಳ್ಪಿದನಾಗಿಯುಂ ಪ್ರಭುವಲ್ಲದಂತೆ, ಪಗಿನಿನಿದಾಗಿಯುಂ ಬೆಲ್ಲಮಲ್ಲದಂತೆ ಕಾಲುಗುರುದ್ಧಮಾಗಿಯುಂ ಸೆಳ್ಳುಗುರಲ್ಲದಂತೆ, ದೂರಭವ್ಯರುಮಭವ್ಯರುಂ ಶ್ರಾವಕರಾಗಿಯುಂ ಋಷಿಯರಾಗಿಯುಂ ಮೋಕ್ಷಗಾಮಿಗಳಲ್ಲರ್ : ಬೆಳಗುಂ ಬೆಂಕಿಯುಂಬೆರಸಾದಿತ್ಯನೆಂತು, ಬಣ್ಣಮುಮೊರೆಯುಂ ಬೆರಸು ಪೊನ್ನೆಂತು, ಕಾಂತಿಯುಂ ಸೌಮ್ಯತೆಯುಂ ಬೆರಸು ಚಂದ್ರನೆಂತು, ಕಂಪುಂ ಕೆಂಪುಂಬೆರಸು ಸಂಪಗೆಯೆಂತು, ಗುಣ್ಪುಮಗಲಮುಂ ಬೆರಸು ಸಮುದ್ರಮೆಂತು ತೋರಮುಮುದ್ದಮುಂ ಬೆರಸು ಮಂದರಮೆಂತು, ಪಾಸುಂ ಪೊಕ್ಕುಂಬೆರಸು ಸೀರೆಯೆಂತು, ಮದವಣಿಗನುಂ ಮದವಳಿಗೆಯುಂ ಬೆರಸು ಮದುವೆಯೆಂತು, ನಾಡುಂ ಬೀಡುಂ ಬೆರಸು ರಾಜ್ಯಮೆಂತು, ಬಿಲ್ಲುಮಂಬುಂಬೆರಸು ಬಿಲ್ಗಾಱನೆಂತು

ವ್ಯವಸಾಯವಂತೆಯಾದರೂ ಹೆಂಡತಿಯಲ್ಲ, ಹೊಲೆಯರು ಧನಕ್ಕೆ ಒಡೆಯರಾದರೂ ಮೇಲ್ಜಾತಿಯಲ್ಲ, ನಾರು ಸೀರೆ ಮಡಿಯಾದರೂ ಶ್ರೇಷ್ಠ ವಸ್ತ್ರವಾಗದು. ಬೇಡರಹಟ್ಟಿ ಊರಾದರೂ ಪಟ್ಟಣವಲ್ಲ, ಬಳೆ ಒಡವೆಯಾದರೂ ಸರಿಗೆಯಲ್ಲ, ಸಾವೆ ಬೆಳೆಯೇ ಆದರೂ ನೆಲ್ಲಿನ ಬೆಳೆಯಲ್ಲ, ನಾಟಕದ ರಾಜನು ಕ್ಷತ್ರಿಯನಲ್ಲ, ಹಕ್ಕಿಗಳು ಆಕಾಶದಲ್ಲಿ ಹೋಗುವುವಾದರೂ ವಿದ್ಯಾಧರರಲ್ಲ, ಹಾಗೆಯೇ ನಾಯಿ ಸಿಂಹದ ಆಕಾರವಾಗಿದ್ದರೂ ಸಿಂಹವಲ್ಲ, ಗಿರಿಧಾತು ಕೆಂಪಗಿದ್ದರೂ, ಕೇಸರಿಯಲ್ಲ, ಗುಡಿಸಲು ಚೆಲುವಾಗಿದ್ದರೂ ಮಾಳಿಗೆಯಲ್ಲ, ಭಂಡನು ಒಳ್ಳೆಯವನಾದರೂ ಪ್ರಭುವಲ್ಲ, ಗಿಡಿದರಸ (ಗೋಂದು) ಸಿಹಿಯಾದರೂ ಬೆಲ್ಲವಲ್ಲ, ಕಾಲುಗುರು ಉದ್ದವಾಗಿದ್ದರೂ ಸೆಳ್ಳುಗುರಲ್ಲ, ಹಾಗೆಯೇ ಅಭವ್ಯರೂ, ದೂರಭವ್ಯರೂ ಶ್ರಾವಕರಾದರೂ, ಋಷಿಯರಾದರೂ, ಮೋಕ್ಷಕ್ಕೆ ಹೋಗುವವರಲ್ಲ; ಬೆಳಕೂ ಬೆಂಕಿಯೂ ಕೂಡಿ ಸೂರ್ಯನೂ ಹೇಗಾಗುವನೊ, ಬಣ್ಣವೂ ಬರೆಯೂ ಸೇರಿ ಹೊನ್ನು ಹೇಗೋ ಕಾಂತಿಯೂ ಸೌಮ್ಯತೆಯೂ ಕೂಡಿ ಚಂದ್ರನು ಹೇಗೊ, ಕಂಪೂಕೆಂಪೂ ಸೇರಿ ಸಂಪಗೆ ಹೇಗೊ, ಆಳಅಗಲಗಳು ಸೇರಿ ಸಮುದ್ರ ಹೇಗೊ ಗಾತ್ರವೂ ಉದ್ದವೂ ಸೇರಿ ಮಂದರ ಹೇಗೊ, ಹಾಸೂ ಹೊಕ್ಕೂ ಸೇರಿ ಸೀರೆ ಹೇಗೊ, ಮದವಣಿಗನೂ ಮದುವಣಗಿತ್ತಿಯೂ ಸೇರಿ ಮದುವೆ ಎಂತೊ, ನಾಡೂ ಬೀಡೂ ಸೇರಿ ರಾಜ್ಯ ಹೇಗೋ, ಬಿಲ್ಲು ಬಾಣಗಳು ಸೇರಿ ಬಿಲ್ಲುಗಾರ ಹೇಗೋ, ಹಾಗೆಯೇ ಭಾವ

ಕರವೊಪ್ಪುಗುಮಂತೆ ಭಾವದೊಳಂ ಸಮ್ಯಕ್ತ್ವದೊಳಂ ಒಳ್ಪಿದರೆನಿಸಿ ನೆಗಟ್ದಾಸನ್ನಭವ್ಯರೆ ಮೋಕ್ಷಗಾಮಿಗಳೆಂದು ಮನದೊಳ್ ಭಾವಿಸಿ ೧೮೬

ಹೆಪ್ಪಿಟ್ಟೊಡೆ ಪಾಲ್ ಮೊಸರಾ
ಗಿಪ್ಪಂತಿರೆ ನೀರ್ಗಳಾಗಲಱಿಗುಮೆ ಭವ್ಯರ್
ಬಪ್ಪಂತಿರೆ ಭವ್ಯರ್ಕಳ್
ಟಪ್ಪರೆ ಸದ್ದರ್ಶನಕ್ಕೆ ಬಾರದೆ ಪೋಪರ್ ೧೮೭

ಗದ್ಯ॥ ಎಣ್ಣೆನುಣ್ಪಂ ಮಾಡುವಂತೆ ಕಳ್ಳಿಮಾಡುಗುಮೆ, ಕೂಟ್ ತಣಿವಂ ಮಾಡುವಂತೆ ಬಾಡುಮಾಡುಗುಮೆ, ಸಿರಿಮೆಯ್ಯೊಪ್ಪಂ ಮಾಡುವಂತೆ ಗೋಣಿಮಾಡುಗುಮೆ, ಕಿಚ್ಚುಪುಳ್ಳಿಯಂ ಬೂದಿಮಾಡುವಂತೆ ಬಿಸಿಲ್ ಮಾಡುಗುಮೆ, ಮಾಡಲಾಱವಂತೆ ಸಮ್ಯಕ್ತ್ವಂ ಕರ್ಮಗಳ್ಗೆ ಕೇಡಂ ಮಾಡುವಂತೆ ಮಿಥ್ಯಾತ್ವಂ ಮಾಡಲಾಱದಾ ಸಮ್ಯಕ್ತ್ವದ ಮಿಥ್ಯಾತ್ವದ ಭೇದಮಂ ಪೇಟ್ಯೊಡೆ, ತೋಂಟದಗಿಡುವಿನ, ಮಾಳದ ಗಿಡುವಿನ, ಸಮರ್ಥರ ಶಿಶುವಿನ, ಪೊಲೆಯರ ಶಿಶುವಿನ, ಪೊನ್ನ ರಾಶಿಯು ಮಣ್ಣರಾಶಿಯು, ರತ್ನದ ತೊಡವಿನ, ನೂಲತೊಡವಿನ, ಸೊಡರಿನ ಕಾಟ್ಕಿಚ್ಚಿನ, ರಕ್ಷೆಯಂ ತಂದುಮೇಳಿದಮಕ್ಕುಂ ೧೮೮

ದಲ್ಲಿಯೂ ಸಮ್ಯಕ್ತ್ವದಲ್ಲಿಯೂ ಒಳ್ಳೆಯವರೆನ್ನಿಸಿಕೊಂಡು ಆಚರಿಸುವ ಆಸನ್ನ ಭವ್ಯರೇ ಮೋಕ್ಷಕ್ಕೆ ಹೋಗುವವರೆಂದು ಮನಸ್ಸಿನಲ್ಲಿ ಭಾವಿಸಿದನು. ೧೮೬. ಹೆಪ್ಪು ಹಾಕಿದರೆ ಹಾಲು ಮೊಸರಾಗುವ ಹಾಗೆ ನೀರು ಆಗಬಲ್ಲುದೆ ? ಭವ್ಯರು ಸದ್ದರ್ಶನಕ್ಕೆ ಒಲಿಯುವ ಹಾಗೆ ಅಭವ್ಯರು ಬರುವರೆ ? ಬಾರದೆ ಹೋಗುತ್ತಾರೆ. ೧೮೭. ಎಣ್ಣೆ ನುಣುಪನ್ನು ಮಾಡುವ ಹಾಗೆ ಕಳ್ಳಿ ಮಾಡುವುದೆ ? ಅನ್ನ ತೃಪ್ತಿಯನ್ನುಂಟು ಮಾಡುವ ಹಾಗೆ ಬಾಡು ಮಾಡುತ್ತದೆಯೆ ? ಐಶ್ವರ್ಯವು ದೇಹಕಾಂತಿಯನ್ನು ಮಾಡುವಂತೆ ಗೋಣಿ ಮಾಡುತ್ತದೆಯೆ ? ಬೆಂಕಿ ಪುಳ್ಳೆಗಳನ್ನು ಬೂದಿ ಮಾಡುವಂತೆ ಬಿಸಿಲು ಮಾಡುವುದೆ ? ಮಾಡಲಾರವು. ಹಾಗೆಯೇ ಸಮ್ಯಕ್ತ್ವವು ಕರ್ಮಗಳಿಗೆ ಕೇಡನ್ನು ಮಾಡುವಂತೆ ಮಿಥ್ಯಾತ್ವವು ಮಾಡಲಾರದು. ಸಮ್ಯಕ್ತ್ವ ಮಿಥ್ಯಾತ್ವಗಳ ಆ ಭೇದವನ್ನು ಹೇಳುವುದಾದರೆ, ತೋಟದ ಗಿಡಕ್ಕೂ ಮನೆಯ (ಕುಂಡದ) ಗಿಡಕ್ಕೂ, ಸಮರ್ಥರ ಮಗುವಿಗೂ ಹೊಲೆಯರ ಮಗುವಿಗೂ, ಹೊನ್ನಿನ ರಾಶಿ ಮಣ್ಣಿನ ರಾಶಿಗಳಿಗೂ ರತ್ನದ ತೊಡಿಗೆಗೂ ನೂಲಿನ ತೊಡಿಗೆಗೂ, ಸೊಡರು ಕಾಳ್ಗಿಚ್ಚುಗಳಿಗೂ ಇರುವ ಭೇದದಂತೆ ಅಸಾಧ್ಯವೂ ಹಾಸ್ಯಾಸ್ಪದವೂ ಆಗಿರುತ್ತದೆ. ೧೮೮. ಬೆಣ್ಣೆ

ಕಾಸಿದೊಡೆ ಬೆಣ್ಣೆ ತುಪ್ಪಂ
ಲೇಸಪ್ಪವೊಲೆಣ್ಣೆ ಕಾಸೆ ಘೃತಮಪ್ಪದೆ ಕೇ
ಳಾಸನ್ನಭವ್ಯನಮೃತ
ಶ್ರೀಸತಿಗಿರದೆಱಗುವಂತೆ ಖಳನೆಱಗುಗುಮೇ ೧೭೯

ಗದ್ಯ॥ ಕಸಱೊಳ್ ನೆಲ್ ಬೆಳೆಗುಮಲ್ಲದೆ ಜೋಳಂ ಬೆಳೆಯಲಱಿಯದು ಬಯಲೊಳ್ ಜೋಳಂ ಬೆಳೆವಂತೆ ನೆಲ್ ಬೆಳೆಯಲಱಿಯದಂತೆ ಪುಸಿವ ಕಷ್ಟರುಂ, ಪುಸಿವರನೆ ಪೊರ್ದುವರಲ್ಲದೆ ಸತ್ಯಮುಳ್ಳರಂ ಪೊರ್ದಲಱಿಯರ್, ಸತ್ಯಮುಳ್ಳವರ್ ಸತ್ಯಮುಳ್ಳವರನಲ್ಲದೆ ಪುಸಿವರಂ ಪೊರ್ದಲಱಿಯರೆಂದು ಭಾವಿಸಿ ಮಿಥ್ಯಾತ್ವದ ಪ್ರತ್ಯಕ್ಷಫಲಮಂ ಕಣ್ಣಾರೆ ಕಂಡು ಮತ್ತೆ ಪುಸಿಯೊಳ್ ಪೊರ್ದದ ಕೊಲೆಯೊಳ್ ಪೊರೆಯದ ಜಿನೇಂದ್ರ ದೀಕ್ಷೆಯನುದಾಸೀನಂಗೆಯ್ದು ಸಂಘಶ್ರೀಯಂತೆ ಮಿಥ್ಯಾತ್ವಕ್ಕೆಡೆಗೊಟ್ಟು ನರಕದೊಳ್ ತಲೆಕೆಳಗಾಗಿ ಬಿರ್ದು ಮಱುಗುತಿರ್ಪುದು ಕಜ್ಜಮಲ್ಲೆಂದು ತನ್ನೊಳ್ ಬಗೆದು ೧೮೦

ಪರಮಜಿನೇಂದ್ರದೀಕ್ಷೆಯನುದಾರತೆಯಿಂ ನೆಱೆತಾಳ್ದಿ ಕರ್ಮಭೂ
ಮಿರುಹಮನೊಪ್ಪದಿಂ ಕಡಿದು ಶಾಶ್ವತಸೌಖ್ಯಮನೆಯ್ದುವೆಂ ವಸುಂ
ಧರೆ ಮಱುಭಾಪು ಜೀಯೆನೆ ಧರಿತ್ರಿಯ ಭಾರಮನಾಂತು ಬಿಕ್ಕಟೆ
ನರಕದೊಳರ್ದುದುಃಖ ಜಲರಾಶಿಯನೀಸುವ ಗಾಂಪದೇವುದೋ ೧೮೧

ಯನ್ನು ಕಾಸಿದರೆ ತುಪ್ಪ ಚೆನ್ನಾಗುವ ಹಾಗೆ ಎಣ್ಣೆಯನ್ನು ಕಾಸಿದರೆ ತುಪ್ಪ ಆಗುತ್ತದೆಯೆ ? ಕೇಳು. ಆಸನ್ನಭವ್ಯನು ಅಮೃತಲಕ್ಷ್ಮೀ ಸತಿಗೆ (ಮೋಕ್ಷಕ್ಕೆ) ಸೋಲುವ ಹಾಗೆ ದುಷ್ಟನು ಸೋಲುತ್ತಾನೆಯೆ ? (ಇಲ್ಲ) ೧೭೯. ನೆಲ್ಲು ಕೆಸರುಗದ್ದೆಯಲ್ಲಿ ಬೆಳೆಯುವುದೇ ಹೊರತು ಜೋಳ ಬೆಳೆಯಲಾರದು. ಬಯಲಿನಲ್ಲಿ ಜೋಳ ಬೆಳೆಯುವ ಹಾಗೆ ನೆಲ್ಲು ಬೆಳೆಯುವುದು ಸಾಧ್ಯವಲ್ಲ. ಹಾಗೆಯೇ ಸುಳ್ಳಾಡುವ ಅಲ್ಪರು ಸುಳ್ಳಾಡುವವರನ್ನೇ ಸೇರುವರು ; ಸತ್ಯವುಳ್ಳವರನ್ನು ಸೇರುವುದಿಲ್ಲ. ಸತ್ಯವುಳ್ಳವರು ಸತ್ಯವಂತರನ್ನಲ್ಲದೆ ಹುಸಿಯುವವರನ್ನು ಸೇರಲರಿಯರು, ಎಂದು ಭಾವಿಸಿ ಮಿಥ್ಯಾತ್ವದ ಪ್ರತ್ಯಕ್ಷಫಲವನ್ನು ಕಣ್ಣಾರೆ ಕಂಡು ಮತ್ತೆ ಸುಳ್ಳಿನಲ್ಲಿ ಬೆರೆಯದ ಕೊಲೆಯಲ್ಲಿ ಹೊಂದದ ಜಿನೇಂದ್ರದೀಕ್ಷೆಯನ್ನು ಉದಾಸೀನ ಮಾಡಿ ಸುಘಶ್ರೀಯ ಹಾಗೆ ಮಿಥ್ಯಾತ್ವಕ್ಕೆ ಅವಕಾಶ ಕೊಟ್ಟು ನರಕದಲ್ಲಿ ತಲೆಕೆಳಕಾಗಿ ಬಿದ್ದು ಸಂಕಟಪಡುತ್ತಿರುವುದು ಕೆಲಸವಲ್ಲವೆಂದು ತನ್ನಲ್ಲಿಯೇ ಚಿಂತಿಸಿದನು. ೧೮೦. "ಪರಮ ಜಿನೇಂದ್ರ ದೀಕ್ಷೆಯನ್ನು ಸಂತೋಷದಿಂದ ಧಾರಾಳವಾಗಿ ಒಪ್ಪಿ ಸ್ವೀಕರಿಸಿ ಕರ್ಮವೃಕ್ಷವನ್ನು ಲಕ್ಷಣವಾಗಿ ಕತ್ತರಿಸಿ ಮಯ್ಯು, ಭಾಪು, ಜೀಯು, ಎನ್ನುವಂತೆ ಶಾಶ್ವತ ಸೌಖ್ಯವನ್ನು ಹೊಂದುತ್ತೇನೆ, ರಾಜ್ಯದ ಭಾರವನ್ನು ಹೊತ್ತು ವ್ಯರ್ಥವಾಗಿ ನರಕದಲ್ಲಿ ಮುಳುಗಿ ದುಃಖಸಮುದ್ರವನ್ನು ಈಜುವ ಆ ದಡ್ಡತನದಿಂದ ಏನು ಪ್ರಯೋಜನ ? ೧೮೧. ಹೀಗೆ ತೀರ್ಮಾನಿಸಿ ತನ್ನ ಮಗನಾದ

ಗದ್ಯ॥ ಎಂದು ಪರಿಚ್ಛೇದಿಸಿ ತನ್ನ ಮಗನಪ್ಪ ಇಂದ್ರಗುಪ್ತನಂ ಬರಿಸಿ ಮುಂದೆ ಕುಳ್ಳಿರಿಸಿ ಧರಣೀಭಾರಮನೊಪ್ಪುಗೊಳ್ಳೆಂಬುದುಮಾತನಿಂತೆಂದಂ ೧೯೨

ಕರಿ ತಾಳ್ದಿನಿಂದ ಪುಷ್ಪಕ
ಭರಮಂ ಭರದಿಂದೆ ತಾಳ್ದಲಾರ್ಪುದೆ ಕಪಿ ದೇ
ವರ ತಾಳ್ದಿನಿಂದ ಧರಣೀ
ಭರಮಂ ತಾಳಲ್ಕೆ ದೇವ ಪೇಟೆನ್ನಳವೇ ೧೯೩

ಗದ್ಯ॥ ಎಂಬುದುಂ ಮಗನಮಾತಿಂಗಂ ವಿನಯಕ್ಕಂ ಮೆಚ್ಚಿ ತಕ್ಕೈಸಿಕೊಂಡು ಮೊಗಮಂ ನೋಡಿ ಪಲತೆಱದ ಮೃದುವಚನಂಗಳಿಂದೆಂತಾನುಮೊಡಂಬಡಿಸಿ ೧೯೪

ನೆರೆದು ಲತಾಂಗಿಯರ್ ಪದೆದು ಮಂಗಳಮಂ ಮೃದುನಾದದಿಂದೆ ಸು
ಸ್ವರದಿನಗುರ್ವಿನಿಂದೊದವಿ ಪಾಡೆ ವಿದಗ್ಧೆಯರೊಲ್ದು ಪೊನ್ನ ಚಾ
ಮರಮನಲುರ್ಕೆಯಿಂ ಮುದದಿನಿಕ್ಕೆ ಪಯೋನಿಧಿಯಂತೆ ದುಂದುಭಿ
ಸ್ವರಮೆಸೆದೊಪ್ಪೆ ಕಟ್ಟಿದನಿಳಾಧಿಪನಾತ್ಮಸುತಂಗೆ ಪಟ್ಟಮಂ ೧೯೫

ಗದ್ಯ॥ ಅಂತು ಪಟ್ಟಮಂ ಕಟ್ಟಿ ವೆಂಗಿಮಂಡಲಂ ಮೊದಲಾಗೆ ಸಕಲಧರಾಭಾರಮಂ ಕೊಟ್ಟು ಧರ್ಮಮುಮಂ ಜಿನೇಂದ್ರಪದಸೇವೆಯುಮಂ ಚಾತುರ್ವರ್ಣ್ಯಸಂಘದೊಳಾದ ಕೂರ್ಮೆ

ಇಂದ್ರಗುಪ್ತನನ್ನು ಬರಮಾಡಿ ಎದುರಿಗೆ ಕೂಡಿಸಿಕೊಂಡು ರಾಜ್ಯಭಾರವನ್ನು ಒಪ್ಪಿಕೊಳ್ಳಬೇಕೆಂದು ಹೇಳಲು ಆತನು ಹೀಗೆಂದನು. ೧೯೨: "ಆನೆ ಧರಿಸಿದ ಪುಷ್ಪಕದ ಭಾರವನ್ನು ಒಂದು ಕಪಿ ರಭಸದಿಂದ ಧರಿಸಬಲ್ಲುದೆ ? ದೇವರವರು ಧರಿಸಿದ ರಾಜ್ಯದ ಭಾರವನ್ನು ಧರಿಸುವುದಕ್ಕೆ ನನಗೆ ಸಾಧ್ಯವೆ ?" ೧೯೩. ಹೀಗೆನ್ನಲು ಮಗನ ಮಾತಿಗೂ ವಿನಯಕ್ಕೂ ಮೆಚ್ಚಿ ಆಲಿಂಗಿಸಿಕೊಂಡು ಮುಖ ನೋಡಿ ಹಲವು ರೀತಿಯ ಮೃದುವಾಕ್ಯಗಳನ್ನು ಆಡಿ ಹೇಗೋ ಒಪ್ಪಿಸಿದನು. ೧೯೪. ಲತಾಂಗಿಯರು ಸೇರಿ ಮಂಗಳಗೀತೆಗಳನ್ನು ಹಾಡಿದರು, ಅವರ ಹಾಡು ಮೃದು ನಾದ, ಸುಸ್ವರ, ಅದ್ಭುತಗಳಿಂದ ಕೂಡಿತ್ತು. ವಿದಗ್ಧೆಯರು ಪ್ರೀತಿಯಿಂದ ಹೊನ್ನಿನ ಚಾಮರಗಳನ್ನು ಸಂತೋಷಸಂಭ್ರಮಗಳಿಂದ ಬೀಸುತ್ತಿದ್ದರು. ದುಂದುಭಿಗಳ ಧ್ವನಿ ಸಮುದ್ರಘೋಷದಂತೆ ಶೋಭಿಸುತ್ತಿತ್ತು. ಆ ಸಂಭ್ರಮದ ಸುಮುಹೂರ್ತದಲ್ಲಿ ರಾಜನು ತನ್ನ ಮಗನಿಗೆ ಪಟ್ಟವನ್ನು ಕಟ್ಟಿದನು. ೧೯೫. ಹಾಗೆ ಪಟ್ಟವನ್ನು ಕಟ್ಟಿ ವೆಂಗಿಮಂಡಲ ಮೊದಲುಗೊಂಡು ಸಮಸ್ತ ಭೂಮಂಡಲವನ್ನೂ ಕೊಟ್ಟು "ಧರ್ಮವನ್ನೂ ಜಿನೇಂದ್ರಪಾದಸೇವೆಯನ್ನೂ ಚಾತುರ್ವರ್ಣ್ಯ ಸಂಘದಲ್ಲಿ

ಯುಮಂ ದರ್ಶನದೊಳಾದ ನಂಬುಗೆಯುಮಂ ಭವ್ಯರೊಳಾದ ಕೆಳೆಯುಮಂ ಸುಕವಿಗಳೊಳಾದ ಗೋಷ್ಠಿಯುಮಂ ದಾನದೊಳಾದ ವಿನೋದಮುಮಂ ಪೂಜೆಯೊಳಾದಾನಂದಮುಮಂ ಬಿಡ ಬೇಡೆಂದು ಬುದ್ಧಿವೇಳ್ದು ಕೈಮುಗಿದು ಬೇಡಿಕೊಂಡು ೧೯೬

ಧರಣಿಯ ಮೋಹದಿಂ ಸಡೆದು ನಿಲ್ಲದೆ ಪುತ್ರನ ಮೋಹದಿಂ ಮನಂ
ಮುರಿಯದೆ ಮೆಯ್ಸುಖಕ್ಕೆಳಸಿ ನಿಲ್ಲದೆ ಪೆಂಡಿರೊಳಾದ ಮೋಹಮಂ
ಸ್ಮರಿಯಿಸಿ ಮೆಲ್ಲಮೆಲ್ಲನೊಳಸಾರದೆ ವಾರಣ ತಂತ್ರ ವಾಹನೋ
ತ್ಕರದಟ್ಟಮೋಹದಿಂ ಸೆಱಗುವಾರದೆ ಚಿಕ್ಕನೆ ಬಿಟ್ಟು ರಾಜ್ಯಮಂ ೧೯೭

ಗದ್ಯ॥ ನಾನೂರ್ವರರಸುಮಕ್ಕಳ್ವೆರಸು ಪುರದಿಂ ಪೊಱಮಟ್ಟು ಪೋಗಿ ಶ್ರುತಾರ್ಣವರೆಂಬಾಚಾರ್ಯರಲ್ಲಿ ಜಿನದೀಕ್ಷೆಯಂ ಕೈಕೊಂಡು ದ್ವಾದಶಾಂಗಶ್ರುತಧರರಾಗಿ ಗುರುಗಳಾಜ್ಞೆಯಿಂದೇಕವಿಹಾರಮನೆತ್ತಿಕೊಂಡು ೧೯೮

ಹಿಮಮಂ ತರ್ಕೈಸಿಕೊಂಡುದ್ಧತಿಯಿನಡರಿ ಸನ್ಮಾರುತಂ ತೀಡೆ ಧಾತ್ರೀ
ರಮಣಿ ಪ್ರಖ್ಯಾತೆ ಮುತ್ತಿಂ ಸಮೆದ ತುಡಿಗೆಯಂ ತೊಟ್ಟಳೆಂಬಂದದಿಂದಂ
ಕ್ರಮದಿಂ ಮಂಜೊಪ್ಪೆ ಶೀತಂ ಜಗಮನೊಱೆಯೆ ಬಂದೌಕಿತೋದ್ಯೈಕಿಲೊಳ್ ಕೇ
ಳ ಮನಂಗೆಟ್ಟೋಡದಿರ್ದರ್ ತೊಱೆಯ ಕೆಱೆಯ ತೀರಂಗಳೊಳ್ ಧೈರ್ಯದಿಂದಂ ೧೯೯.

ಆದ ಸ್ನೇಹವನ್ನೂ ದರ್ಶನದಲ್ಲಾಗುವ ನಂಬಿಕೆಯನ್ನೂ ಭವ್ಯರಲ್ಲಿ ಆದ ಗೆಳೆತನವನ್ನೂ ಸುಕವಿಗಳಲ್ಲಿ ಆದ ಗೋಷ್ಠಿಯನ್ನೂ ದಾನದ ವಿನೋದವನ್ನೂ ಪೂಜೆಯಿಂದಾಗುವ ಆನಂದವನ್ನೂ ಬಿಡಬೇಡ" ಎಂದು ಹೇಳಿ ಕೈ ಮುಗಿದು ಬೇಡಿಕೊಂಡನು. ೧೯೬. ರಾಜ್ಯದ ಮೋಹದಿಂದ ಸೆಟೆದು ನಿಲ್ಲದೆ, ಮಗನ ಮೋಹದಿಂದ ಮನಸ್ಸನ್ನು ತಿರುಗಿಸದೆ, ದೇಹ ಸುಖಕ್ಕೆ ಆಸೆಪಟ್ಟು ನಿಲ್ಲದೆ, ಹೆಂಡಿರಲ್ಲಾದ ಮೋಹವನ್ನು ನೆನೆಸಿಕೊಳ್ಳದೆ, ಉತ್ಸಾಹ ಕುಗ್ಗದೆ, ಗಜ ಸೈನ್ಯ ವಾಹನೋತ್ಕರದ ಕೀಳುಮೋಹದಿಂದ ಪಕ್ಕಗಳನ್ನು ನೋಡದೆ (ಚಂಚಲನಾಗದೆ) ರಾಜ್ಯವನ್ನು ಒಂದೇಸಲ ತ್ಯಜಿಸಿದನು. ೧೯೭. ನಾನೂರು ಮಂದಿ ರಾಜಪುತ್ರರೊಡನೆ ಹೊರಟುಹೋಗಿ ಶ್ರುತಾರ್ಣವರೆಂಬ ಆಚಾರ್ಯರಲ್ಲಿ ಜಿನದೀಕ್ಷೆಯನ್ನು ಪರಿಗ್ರಹಿಸಿ ದ್ವಾದಶಾಂಗ ಶ್ರುತಧರರಾಗಿ ಗುರುಗಳ ಅಪ್ಪಣೆಯಂತೆ ಏಕವಿಹಾರವನ್ನು ಆರಂಭಿಸಿದನು ೧೯೮. ಶ್ರೇಷ್ಠನಾದ ಮಾರುತನು ಹಿಮವನ್ನು ತಬ್ಬಿಕೊಂಡು ಕೊಬ್ಬಿನಿಂದ ಮೇಲೇರಿ ಬೀಸಲು, ಭೂದೇವಿಯು ಮುತ್ತಿನಿಂದ ರಚಿಸಿದ ಆಭರಣಗಳನ್ನು ಧರಿಸಿದಳೋ ಎಂಬ ಹಾಗೆ ಕ್ರಮವಾಗಿ ಮಂಜು ಮುಸುಕಿಕೊಳ್ಳಲು ಶೀತವು ಜಗತ್ತನ್ನು ಅಲ್ಲಾಡಿಸಿತು. ಮೇಲೆ ನುಗ್ಗಿ ಬಂದು ಔಕಿದ ಹಿಮದಲ್ಲಿ ಸಿಕ್ಕಿ ಧೈರ್ಯಕುಂದಿ ಓಡದೆ ನದೀತೀರದಲ್ಲಿ ಕೆರೆಗಳ ತೀರದಲ್ಲಿ ಧೈರ್ಯದಿಂದ ಇದ್ದರು. ೧೯೯, ಹೀಗೆ ದಢ್ಢಮನಂಷ್ಯ

ಗದ್ಯ॥ ಅಂತು ಬೆಳ್ಳಾಳಂತೆ ತಲ್ಲಣಿಸದೆ ಮಾಗಿಯ ನಾಲ್ಕು ತಿಂಗಳುಂ ಬೆಳವಾಸ ?ದೊಳಿರ್ದು ೨೦೦

ಬಿಸಿಲುರ್ವಿಂದಳ್ಕಿಬೆಂಬೀಟದೆ ತೃಷೆಯೊದವಿಂಗಳ್ಕಿ ಬಾಯ್ವಿಟ್ಟು ಬೇಗಂ
ಕುಸಿದೋರಂತಣ್ಮುಗೆಟ್ಟೋಡದೆ ಸುರಧರಣೀಂದ್ರಂಬೊಲುರ್ವೀತಳಂ ಸಂ
ತಸದಿಂದಂ ಜೀಯ ಭಾಪೆಂದಧಿಕವಿನಯದಿಂ ನಿಲ್ಲದೋರಂದದಿಂ ಬ
ಣ್ಣಿಸೆ ನಿಂದಂ ಯೋಗಿವಂದ್ಯಂ ಗಿರಿಶಿಖರದೊಳುಗ್ರೋಗ್ರಮಾತಂಗಸಿಂಹಂ ೨೦೧

ಗದ್ಯ॥ ಅಂತು ದೇಸಿಗನ ಕಾಳಗದಂತೋಸರಿಸಿ ನುಸುಟ್ದು ಪೋಗದೆ ಬೇಸಗೆಯ ನಾಲ್ಕು ತಿಂಗಳುಂ ಕಲ್ನೆಲೆ ನಿಂದು ೨೦೨

ಕುಡುಮಿಂಚಾಶ್ಚರ್ಯಮಂ ಪುಟ್ಟಿಸುತಿರೆ ಭಯಮಂ ಮಾಡೆ ಮೇಘಸ್ವನಂ ನೇ
ರ್ಪಡೆ ಪಾವಂ ವ್ಯೋಮದಿಂದಂ ತಡೆಯದೆಟತೆಯೋಳಿಕ್ಕಿದಂತೆಲ್ಲಿಯುಂ ಮಾ
ಣ್ದುಡುಗಿತ್ತೆಂಬೊಂದು ಮಾತಂ ಪಡೆಯದೆ ಮಟಿೞ್ಭೋರೆಂದು ಕೀಳ್ ಪೊಯ್ಯೆ ವೀರಂ
ದೃಢಚಿತ್ತಂ ಶಂಕೆಯಿಂ ಬೆಚ್ಚದೆ ಮರಮೊದಲೊಳ್ ನಿಂದನತ್ಯಂತ ಧೈರ್ಯಂ ೨೦೩

ಗದ್ಯ॥ ಅಂತು ಮಟಿೞ್ಗಾಲದ ನಾಲ್ಕುತಿಂಗಳುಂ ದರವುರಿಗರಂತರವರಿಸದೆ ಮರಮೊದಲೊಳಿರ್ದು ೨೦೪

ನಂತೆ ಗಾಬರಿಗೊಳ್ಳದೆ ಮಾಗಿಯ ಕಾಲದ ನಾಲ್ಕು ತಿಂಗಳೂ ಪ್ರವಾಹದ ಮಧ್ಯದಲ್ಲಿ ನಿಂತು ತಪಸ್ಸು ಮಾಡಿದರು. ೨೦೦. ಬಿಸಿಲಿನ ಉಬ್ಬಿಗೆ ಅಂಜಿ ಹಿಮ್ಮೆಟ್ಟದೆ, ದಾಹದ ಆಧಿಕ್ಯಕ್ಕೆ ಹೆದರಿ ಬೇಗನೆ ಕುಗ್ಗಿ ಹೆಚ್ಚಾಗಿ ಧೈರ್ಯಹೀನರಾಗಿ ಓಡಿ ಹೋಗದೆ ಸುರಧರಣೀಂದ್ರನ ಹಾಗೆ ಭೂಮಂಡಲವೇ ಸಂತೋಷದಿಂದ 'ಜೀಯ, ಬಾಪು' ಎಂದು ಹೆಚ್ಚಿನ ವಿನಯದಿಂದ ಒಂದೇ ಸಮನೆ ಹೊಗಳಲು ಆ ಯೋಗಿವಂದ್ಯನು ಗಿರಿಶಿಖರದಲ್ಲಿ ಉಗ್ರ ಕರ್ಮವೆಂಬ ಆನೆಗೆ ಸಿಂಹದೋಪಾದಿಯಲ್ಲಿ ನಿಂತನು. ೨೦೧. ಹಾಗೆ ದೇಸಿಗನ ಕಾಳಗದ ಹಾಗೆ ಪಕ್ಕಕ್ಕೆ ಸರಿದು ನುಸುಳಿಕೊಂಡು ಹೋಗದೆ ಬೇಸಗೆಯ ನಾಲ್ಕು ತಿಂಗಳುಗಳಲ್ಲಿಯೂ ಕಲ್ಲಿನಂತೆ ನೆಲೆಯಾಗಿ ನಿಂತು ೨೦೨. ಮಳೆಗಾಲದಲ್ಲಿ ಕುಡುಮಿಂಚು ಹಾವನ್ನು ಆಕಾಶದಿಂದ ನೇತು ಬಿಟ್ಟಂತೆ ಆಶ್ಚರ್ಯವನ್ನು ಹುಟ್ಟಿಸುತ್ತಿರಲು ಗುಡುಗು ಶಬ್ದ ಭಯ ಹುಟ್ಟಿಸಲು ಮಳೆ ಒಂದು ಕಡೆ ನಿಂತಿತೆಂಬ ಮಾತಿಗೆ ಅವಕಾಶವಿಲ್ಲದೆ ಭೋರೆಂದು ಸುರಿಯುತ್ತಿರಲು ದೃಢಚಿತ್ತನೂ ವೀರನೂ ಆದ ಧನದನು ಅತ್ಯಂತ ಧೈರ್ಯಶಾಲಿಯಾಗಿ ಮರದ ಬುಡದಲ್ಲಿ ನಿಂತನು. ೨೦೩. ಹಾಗೆ ಮಳೆಗಾಲದ ನಾಲ್ಕು ತಿಂಗಳೂ ಶಂಕಿತರ ಹಾಗೆ ವಿಚಾರ ಮಾಡದೆ, (ಪೇಚಾಡದೆ) ಮರದ ಬುಡದಲ್ಲಿದ್ದು ಪಾಪವೆಂಬ

ದುರಿತವಿರೋಧಿಯನದಟಲೆ
ದರವರಿಸದೆ ಮೋಕ್ಷಮೆಂಬ ಬಲ್ಗೋಟೆಯನಾ
ದರದಿಂದೀಭವದೊಳ್ ಬೆ
ಚ್ಚರದಿಂದಂ ಕೊಳ್ವೆನೆಂಬ ಮನದೊಲವಿಂದಂ ೨೦೫

ಧರೆ ಜೀಯೆನೆ ದೇವೇಂದ್ರ
ರ್ವೆರಸು ಸುರರ್ ನಚ್ಚಿಮೆಚ್ಚಿ ಬಣ್ಣಿಸುತಿರೆ ದು
ರ್ಧರ ಘೋರವೀರ ತಪದೊಳ್
ಚರಿಯಿಸಿದಂ ಸುಕಪಿನಿಕರಪಿಕಮಾಕಂದಂ ೨೦೬

ಗದ್ಯ॥ ಜಿನತತ್ವಾನುರಾಗನುಂ ವಾತ್ಸಲ್ಯರತ್ನಾಕರನುಂ ಚತುಷ್ಕಷಾಯ ದೂರನುಂ ನಿಷ್ಕಳಂಕನುಂ ನವವಿಧಬ್ರಹ್ಮಚರ್ಯೋಪೇತನುಂ ಚತುರ್ಗತಿಗಮನ ಭೀತನುಂ ಷಡ್ವಿಧಜೀವೋಪೇತನುಂ ಲೋಕಪೂಜಾಲಾಭನಿರಪೇಕ್ಷನುಮಾಗಿ ತಪದೊಳತಿವೆಂಸು ನೆಗಟ್ದು ಅವಂತಿ ವಿಷಯದ ವಿದಿಸೆಯೆಂಬ ತೊಱೆಯ ತಡಿಯೈರಣೆಯೆಂಬ ಪರ್ವತದೊಳಷ್ಟವಿಧಕರ್ಮಂಗಳಂ ಕಿಡಿಸಿ ಕೈವಲ್ಯಲಕ್ಷ್ಮೀಮನಃಪ್ರಿಯನಾದನದಱಿಂ ೨೦೭

ಪುಸಿಯಿಂದಂ ಸಂಘಶ್ರೀ
ಕುಸಿದಿರ್ದಂ ರೌರವಾಂಬುರಾಶಿಯೊಳದಱಿಂ
ಪುಸಿಪೊಲ್ಲೆಂದಂಜುವ ಮಾ
ನಿಸನಯ್ದುಗುಮಲ್ತೆ ನಿರ್ವೃತಿ ಶ್ರೀಸುಖಮಂ ೨೦೮

ಶತ್ರುವನ್ನು ಬೆನ್ನಟ್ಟಿ ಹಿಂತೆಗೆಯದೆ ಮೋಕ್ಷವೆಂಬ ಬಲವಾದ ಕೋಟೆಯನ್ನು ಆದರದಿಂದ ಈ ಜನ್ಮದಲ್ಲಿಯೇ ಬೇಗನೆ ಹಿಡಿದುಕೊಳ್ಳುವೆನೆಂಬ ಮನಸ್ಸಿನ ಆಸೆಯಿಂದ, ಲೋಕವೆಲ್ಲ ಹೊಗಳಿ ದೇವೇಂದ್ರಸಮೇತರಾದ ಸುರರೆಲ್ಲ ಮೆಚ್ಚಿ ಪ್ರೀತಿಯಿಂದ ಹೊಗಳುತ್ತಿರಲು ದುರ್ಧರವಾದ ಘೋರ ತಪಸ್ಸನ್ನು ಸುಕಪಿನಿಕರಪಿಕಮಾಕಂದನು ನಡೆಸಿದನು. ೨೦೬. ಜಿನತತ್ವ ಪ್ರೇಮಿಯೂ ವಾತ್ಸಲ್ಯ ರತ್ನಾಕರನೂ ನಾಲ್ಕು ಕಷಾಯಗಳಿಂದ ದೂರನಾದವನೂ ನಿಷ್ಕಳಂಕನೂ ನವವಿಧ ಬ್ರಹ್ಮಚರ್ಯದಿಂದ ಕೂಡಿದವನೂ ಚತುರ್ಗತಿ (ದೇವ, ಮಾನವ, ತಿರ್ಯಕ್, ನಾರಕ)ಗಳಲ್ಲಿ ಸಂಚರಿಸುವುದಕ್ಕೆ ಭಯಪಟ್ಟವನೂ, ಆರು ವಿಧ ಜೀವಗಳಿಂದ ಕೂಡಿದವನೂ, ಲೋಕ ಪೂಜಾ ಲಾಭಗಳಲ್ಲಿ ಅಪೇಕ್ಷೆಯಿಲ್ಲದವನೂ ಆಗಿ ತಪಸ್ಸಿನಲ್ಲಿ ಸಂಭ್ರಮದಿಂದ ಕೂಡಿ ಆಚರಿಸಿ ಅವಂತಿ ದೇಶದ ವಿದಿಸೆಯೆಂಬ ತೊರೆಯ ದಡದ ಐರಣೆಯೆಂಬ ಪರ್ವತದಲ್ಲಿ ಅಷ್ಟವಿಧ ಕರ್ಮಗಳನ್ನು ಕೆಡಿಸಿ ಮೋಕ್ಷಲಕ್ಷ್ಮೀಪ್ರಿಯನಾದನು. ೨೦೭. ಸುಳ್ಳಿನಿಂದ ಸಂಘಶ್ರೀ ರೌರವ ಸಮುದ್ರದೊಳಕ್ಕೆ ಕುಸಿದನು. ಆದ್ದರಿಂದ ಸುಳ್ಳು ಕೆಟ್ಟದ್ದೆಂದು ಅಂಜುವ ಮಾನವನು ನಿರ್ವೃತಿ ಸೌಖ್ಯವನ್ನು ಹೊಂದುವವನು ೨೦೮. ಸುಳ್ಳು ಕೆಟ್ಟದ್ದೆಂದು ಅಂಜಿ ರಾಜನು ಹೆಚ್ಚಿನ

ಪುಸಿ ಪೊಲ್ಲೆಂದಂಜಿ ಕರಂ
ವಸುಧೇಶಂ ತಪದೊಳೆಸಗಿ ನಿರ್ವೃತಿಯಂ ಸಂ
ತಸದಿಂ ಪೊರ್ದಿದನದಱಿಂ
ಪುಸಿ ಪೊಲ್ಲೆಂದಂಜಿ ಬೆಚ್ಚಿ ನಡೆವುದು ಪುರುಷಂ ೨೦೯

ಗದ್ಯ॥ ಎಂದು ಸತ್ಯದೊಳಾದ ಸುಖಮುಮನಸತ್ಯದೊಳಾದ ದುಃಖಮುಮಂ ಪ್ರತ್ಯಕ್ಷಮಾಗೆ ಗಣಧರಸ್ವಾಮಿಗಳ್ ಪೇೞ್ವುದುಂ ೨೧೦

ಪರಮಶ್ರೀ ಜೈನತತ್ತ್ವಾಮೃತಜಲನಿಧಿ ವಿಸ್ತೀರ್ಣ ಸಂಪೂರ್ಣಚಂದ್ರಂ
ಸುರಶೈಲೇಂದ್ರಕ್ಷಮಂ ವಾಗ್ವಧುಪತಿಧರಣೀಸ್ತುತ್ಯನತ್ಯಂತ ಶುದ್ಧಾ
ಭರಣಂ ತ್ರೈವಿದ್ಯ ಚಕ್ರೇಶ್ವರ ವಿಮಲಪದಾಂಭೋಜ ಭೃಂಗಂ ಮುನೀಂದ್ರಾಂ
ಬುರುಹಾರ್ಕಂ ಹೃಷ್ಟನಾದಂ ಸುಕವಿಜನಮನಃಪದ್ಮಿನೀರಾಜಹಂಸಂ ೨೧೧

ಗದ್ಯ॥ ಇದು ನಿಖಿಲ ದಿವಿಜ ಪರಿವೃಢಮಕುಟತಟಘಟಿತಮಣಿಗಣವಿಲುಳಿತ ಕಿರಣಚುಂಬನೀಯ ಪರಮಜಿನ ಚರಣಯುಗಳ ಸರಸಿರುಹ ಮತ್ತಮಧುಕರನಿರುಪಮ ಸಹಜಕವಿಜನಪಯಃಪಯೋಧಿಹಿಮಕರ ನುತಭಾವಯುತ ದಿಗಂಬರದಾಸ ನೂತ್ನಕವಿತಾವಿಳಾಸ ಶ್ರೀಮನ್ನಯಸೇನದೇವ ವಿರಚಿತಮಪ್ಪ 'ಧರ್ಮಾಮೃತ'ದೊಳ್ ಸತ್ಯವ್ರತವರ್ಣನಂ

## ಏಕಾದಶಾಶ್ವಾಸಂ

ತಪಸ್ಸನ್ನು ಆಚರಿಸಿ ನಿರ್ವೃತಿಯನ್ನು ಸುಖವಾಗಿ ಪಡೆದನು. ಆದರಿಂದ ಮನುಷ್ಯನು ಸುಳ್ಳು ಕೆಟ್ಟದ್ದೆಂದು ಭಯದಿಂದ ನಡೆದುಕೊಳ್ಳತಕ್ಕದ್ದು. ೨೦೯. ಹೀಗೆ ಸತ್ಯದಿಂದ ಆದ ಸುಖವನ್ನೂ ಅಸತ್ಯದಿಂದ ಆದ ದುಃಖವನ್ನೂ ಪ್ರತ್ಯಕ್ಷ್ಯವಾಗುವಂತೆ ಗಣಧರ ಸ್ವಾಮಿಗಳು ಹೇಳಲಾಗಿ. ೨೧೦. ಪರಮ ಶ್ರೀಜೈನತತ್ವಾಮೃತಸಮುದ್ರಕ್ಕೆ ಚಂದ್ರನಂಥವನೂ, ದೇವಪರ್ವತದಂಥ ಧೈರ್ಯವುಳ್ಳವನೂ, ವಾಗ್ವಧೂಪತಿ, ಲೋಕದ ಸ್ತೋತ್ರಕ್ಕೆ ಪಾತ್ರನೂ, ಅತ್ಯಂತ ಶುದ್ಧನೂ ತ್ರೈವಿದ್ಯಚಕ್ರೇಶ್ವರನ ವಿಮಲಪಾದಕಮಲಗಳಲ್ಲಿನ ತುಂಬಿಯೂ ಮುನೀಂದ್ರರೆಂಬ ಕಮಲಗಳಿಗೆ ಸೂರ್ಯನೂ, ಆದ ಸುಕವಿಜನ ಮನಃ ಪದ್ಮಿನೀ ರಾಜಹಂಸನು ಹರ್ಷಪಟ್ಟನು. ೨೧೧. ಇದು ಸಮಸ್ತದೇವತೆಗಳ ಮುಖಂಡರ ಕೀರಿಟಗಳಲ್ಲಿ ಕೆತ್ತಿದ ರತ್ನಗಣಗಳಿಂದ ಹೊರಬರುವ ಕಿರಣಗಳು ತಾಕುವ ಪರಮ ಜಿನ ಚರಣಕಮಲಮತ್ತಮಧುಕರ, ನಿರುಪಮ ಸಹಜಕವಿಜನ ಪಯಃಪಯೋಧಿಗೆ ಚಂದ್ರನಾದ, ನುತಭಾವಯುತ, ದಿಗಂಬರದಾಸ, ನೂತ್ನಕವಿತಾ ವಿಳಾಸನಾದಂಥ ಶ್ರೀಮನ್ನಯಸೇನದೇವವಿರಚಿತವಾದ 'ಧರ್ಮಾಮೃತ'ದಲ್ಲಿ ಸತ್ಯವ್ರತವರ್ಣನವೆಂಬ ಏಕಾದಶಾಶ್ವಾಸಂ.

# ದ್ವಾದಶಾಶ್ವಾಸಂ

ಶ್ರೀ ಸತ್ಯವ್ರತಮಮೃತ
ಶ್ರೀ ಸತಿಯುವಿಳಾಸಮೆಂದು ಸಮ್ಯಕ್ತ್ವಗುಣಾ
ವಾಸಂ ನಲಿದಂ ಮನದೊಳ್
ಲೇಸಾಗಿರೆ ಸುಕವಿನಿಕರಪಿಕಮಾಕಂದಂ ೧

ಗದ್ಯ॥ ಅಂತು ಸತ್ಯವ್ರತದ ಕಥೆಯಂ ಮನದರ್ತಿವೆರಸು ಕೇಳ್ದು ಮತ್ತಂ ಮಗಧಾಧಿಪತಿ ಮುನೀಂದ್ರೋತ್ತಮಂಗೆ ಭಕ್ತಿಯಿಂ ಪೊಡೆಮಟ್ಟು ಕೈಗಳಂ ಮುಗಿದು ೨

ಮುನಿಜನವಂದಿತ ಪದಯುಗ
ವನರುಹ ಪೆಱಗಣ ಕಥಾಳಿಯಂ ನಿಮ್ಮಡಿ ಕೇ
ಳ್ದೆನಗೆ ಕಡುರಾಗಮಾದುದು
ಮನಸಿಜಮದಹರಣ ದುರಿತತಮಭಾನುನಿಭಾ ೩

ಗುಣಜಲನಿಧಿ ನಯದಿಂ ಮುಂ
ದಣ ಕಳದಾ ದಿವ್ಯಮಪ್ಪ ಸುವ್ರತಮಂ ಧಾ
ರಿಣಿ ಮೆಚ್ಚೆ ತಾಳ್ದ ಲೋಕಾ
ಗ್ರಣಿಯಾದರ ಕಥೆಯನೆನಗೆ ಬೆಸಸಲ್ವೇಳ್ಕುಂ ೪.

ಶ್ರೀ ಸತ್ಯವ್ರತವು ಅಮೃತಶ್ರೀಸತಿಯ ಲೀಲೆಯೆಂದು ಸಮ್ಯಕ್ತ್ವ ಗುಣಕ್ಕೆ ವಾಸಸ್ಥಾನನಾಗಿದ್ದ ಸುಕವಿನಿನಿಕಪಿಕಮಾಕಂದನಾದ ಶ್ರೇಣಿಕನು ಮನಸ್ಸಿನಲ್ಲಿ ಬಹಳವಾಗಿ ಸಂತೋಷಪಟ್ಟನು. ೧. ಹಾಗೆ ಸತ್ಯವ್ರತದ ಕಥೆಯನ್ನು ಮನಸ್ಸಿನ ಪ್ರೀತಿಯಿಂದ ಕೇಳಿ ಮಗಧರಾಜನು ಮುನಿಶ್ರೇಷ್ಠನಾದ ಗೌತಮಸ್ವಾಮಿಗೆ ಭಕ್ತಿಯಿಂದ ನಮಸ್ಕರಿಸಿ ಕೈ ಮುಗಿದು. ೨. ಮುನಿಜನರಿಂದ ವಂದಿತವಾದ ಪಾದಗಳುಳ್ಳವನೇ, ಹಿಂದಿನ ಕಥಾವಳಿಯನ್ನು ಕೇಳಿ ನನಗೆ ಬಹಳ ಸಂತೋಷವಾಯಿತು. ಮನ್ಮಥ ನಮದವನ್ನು ಹರಣ ಮಾಡಿದವನೆ ! ಪಾಪವೆಂಬ ಕತ್ತಲೆಗೆ ಸೂರ್ಯನಂತಿರುವವನೇ ! ಗುಣಸಮುದ್ರನೆ ! ಮುಂದಿನ ಕಳ್ಳತನ ಮಾಡದ ಆ ದಿವ್ಯವಾದ ಸುವ್ರತವನ್ನು ಲೋಕ ಮೆಚ್ಚುವಂತೆ ಧರಿಸಿ ಲೋಕಕ್ಕೆ ಅಗ್ರಣಿಯಾದವರ ಕಥೆಯನ್ನು ನನಗೆ ಹೇಳಬೇಕು ಎಂದನು. ೩, ೪. ಆ ಶ್ರೇಣಿಕನ

ಗದ್ಯ॥ ಎಂಬುದುಂ ಗೌತಮಸ್ವಾಮಿಗಳ್ ದುರಿತದ ಬಲಕ್ಕೆ ನಿಸ್ತೇಜಂ ಮಾಳ್ಪಸ್ತೇಯವ್ರತದ ಕಥೆಯನಿಂತೆಂದು ಪೇಟ್ದಿರ್ : ಅರಸಿನೊಳ್ ಕೂಡಿ ಪರಿಗ್ರಹದಿಂದರಸಿಯರಿಂ ಪರಿಜನದಿಂದರ ಮನೆಯೊಪ್ಪುವಂತೆ, ಮಱಿಯೊಳ್ ಕೂಡಿ ಕೆಱೆಯಿಂ ಕೆಯ್ಯಿಂ ತೋಂಟದಿಂ ಪೊಲನೊಪ್ಪು ವಂತೆ, ತಂಬುಲದೊಳ್ ಕೂಡಿ ನಾಲಗೆಯಿಂ ಪಲ್ಲಿಂದಧರದಿಂ ಬಾಯೊಪ್ಪುವಂತೆ ಕಾಡಿಗೆಯೊಳ್ ಕೂಡಿ ಬಿಳಿಯಾಲಿಯಿಂ ಕಱಿಯಾಲಿಯಿಂದೆವೆಯಿಂ ಕಣ್ಣೊಪ್ಪುವಂತೆ, ಬಲ್ಲಿದರೊಳ್ ಕೂಡಿ ಗಿರಿ ದುರ್ಗದಿಂ ಜಲದುರ್ಗದಿಂ ವನದುರ್ಗದಿಂ ಕೋಟೆಯೊಪ್ಪುವಂತೆ, ಕೂರ್ಮೆಯೊಳ್ ಕೂಡಿ ಪುರುಡಿಂ ಮುದ್ದಿಂ ಪೆರ್ಮೆಯಿಂ ಪೆಂಡಿರೊಪ್ಪುವಂತೆ, ಬಲ್ಗುದುರೆಯೊಳ್ ಕೂಡಿ ಮಱು ಗೋಡಿಂದಂ ಕವಣೆಯಿಂ ಬಲದಿಂದಶ್ವಧಾರಿಯೊಪ್ಪುವಂತೆ ಶುದ್ಧಮಾಸದೊಳ್ ಕೂಡಿ ಚಂದ್ರ ಬಲದಿಂ ತಾರಾಬಲದಿಂ ಮದುವೆಯೊಪ್ಪುವಂತೆ, ಸಮ್ಯಕ್ತ್ವದೊಳ್ ಕೂಡಿ ಕೊಲೆಯಿಂ ಪುಸಿಯಿಂ ಕಳವಿಂದಗಲ್ದು ಸುವ್ರತಂಗಳಿಂ ಭವ್ಯರುವೊಪ್ಪುವೆರಸಿರ್ಪುದು ೫

ಮನಮಂ ಪೇಟ್ವುದು ಬಯಕೆಯು
ಧನಮುಮನಱಿಪುವುದು ನೀನೆ ಶರಣೆಂಬುದು ಮೇ
ದಿನಿ ಚಕ್ರಂ ಕಡುಗೂರ್ಮೆಯೊ
ಳಿನೆ ನೆಗಟ್ದೀ ಸುವ್ರತಾಧಿಪಂಗೆಣೆಯೊಳರೇ ೬

ಗದ್ಯ॥ ಇನ್ನಾವ್ರತದ ಮಹಿಮೆಯಂ ಪೇಟ್ವೊಡೆ ೭

ಪ್ರಾರ್ಥನೆಗೆ ಓಗೊಟ್ಟು, ಗೌತಮಸ್ವಾಮಿಗಳವರು ಪಾಪದ ಬಲಕ್ಕೆ ತೇಜೋಹಾನಿ ಯನ್ನುಂಟುಮಾಡುವಂಥ ಅಸ್ತೇಯ (ಕದಿಯದಿರುವುದು)ದ ವ್ರತದ ಕಥೆಯನ್ನು ಹೀಗೆ ಹೇಳಿದರು : ಅರಮನೆಯು ರಾಜ, ಪರಿವಾರ ಮತ್ತು ರಾಣಿಯರುಗಳಿಂದ ಕೂಡಿ ಶೋಭಿಸುವುದು ; ಮಳೆಯಿಂದ, ಕೆರೆ ಗದ್ದೆತೋಟಗಳಿಂದ ಕೂಡಿ, ಹೊಲ ಶೋಭಿಸು ವಂತೆ.ಬಾಯಿ ತಾಂಬೂಲ, ನಾಲಗೆ, ಹಲ್ಲು, ತುಟಿಗಳಿಂದ ಕೂಡಿ ಒಪ್ಪುವುವು. ಕಣ್ಣು ಕಪ್ಪನೆಯ ಆ ಬಿಳಿಯ ಪಾಪೆ, ಎವೆ, ಕಾಡಿಗೆಯಿಂದ ಕೂಡಿ ಶೋಭಿಸುವುದು. ಕೋಟೆ, ವನ ದುರ್ಗ, ಜಲದುರ್ಗ, ಗಿರಿದುರ್ಗಗಳಿಂದಲೂ ಬಲಿಷ್ಠರಿಂದಲೂ ಕೂಡಿ ಶೋಭಿಸು ತ್ತದೆ. ಹೆಂಡಿರು ಉತ್ಸಾಹ, ಮುದ್ದು ಹಿರಿಮೆಯಿಂದ ಒಪ್ಪುವರು. ಕುದುರೆ ಸೈನ್ಯ ಕವಣೆ, ಮಱುಗೋಡು(?) ಮತ್ತು ಬಲಿಷ್ಠರಿಂದ ಕೂಡಿ ಒಪ್ಪುವುದು. ಹಾಗೆಯೇ ಶುಕ್ಲ ಪಕ್ಷದಲ್ಲಿ ಚಂದ್ರಬಲ ತಾರಾಬಲಗಳಿಂದ ಕೂಡಿ ಮದುವೆಯೊಪ್ಪುವುದು. ಹಾಗೆಯೇ ಸಮ್ಯಕ್ತ್ವದಿಂದ ಕೂಡಿ ಕೊಲೆ, ಸುಳ್ಳು ಕಳವುಗಳನ್ನು ಬಿಟ್ಟು, ಭವ್ಯರು ಒಳ್ಳೆಯ ವ್ರತಗಳಿಂದ ಶೋಭಿಸಬೇಕು ೫. ಲೋಕವು 'ನೀನೇಗತಿ' ಎನ್ನುತ್ತಿದೆ. ತನ್ನ ಮನಸ್ಸಿನ ಕೋರಿಕೆಯನ್ನು ಹೇಳುತ್ತಿದೆ ; ಎನ್ನುವಾಗ ಸುವ್ರತಾಧಿಪನಿಗೆ (ಅಸ್ತೇಯ ವ್ರತಕ್ಕೆ) ಸಮಾನವಾದುದು ಯಾವುದಿದೆ? ೬. ಇನ್ನು ಆ ವ್ರತದ ಮಹಿಮೆಯನ್ನು ಹೇಳಿದರು ೭.

ಬಳಸಿದ ನಂದನವನದಿಂ
ತಳೆದಿರ್ದ ಸರೋರುಹಾಕರಂಗಳಿನೆತ್ತಂ
ಬಳಸಿದ ಪಲವುಂ ಗ್ರಾಮಂ
ಗಳಿನೊಪ್ಪುವುದೊಪ್ಪುವೆತ್ತವಂತೀವಿಷಯಂ ೮

ಗದ್ಯ॥ ಆ ವಿಷಯದೊಳ್ ತದ್ಧರಾಂಗನೆಯು ತೊಟ್ಟ ಮಣಿಭೂಷಣದಂತೆ ನಾನಾ ಶೋಭೆಗಳಿಂದುಜ್ಜಯಿನಿಯೆಂಬ ಪೊಟಲೊಪ್ಪುಗುಮಾಪೊಟಲನಾಳ್ವಂ ಧರ್ಮಧರಮಹಾರಾಜನೆಂಬನಾತನರಾಜಶ್ರೇಷ್ಠಿ ೯

ಅನುಪಮ ಗುಣನಿಳಯಂ
ಜಿನಪಾದಪಯೋಜಪಟ್ಪದಂ ಜನನುತನಿಂ
ದ್ರನಿಭನಮಳಾಂಗನಿರ್ಪಂ
ಜಿನದತ್ತಂ ಜೈನಸಮಯವಾರಿಧಿಚಂದ್ರಂ ೧೦

ಆತನ ಪೆಂಡತಿ ಧರಣೀ
ಖ್ಯಾತೆ ಸದಾ ಶುದ್ಧಚರಿತೆ ಭವ್ಯಜನೈಕ
ಪ್ರೀತೆ ಸಮಸ್ತಗುಣಾಂಬುಧಿ
ಮಾತೇನೊ ಜಿನೇಂದ್ರದಾಸಿಯೆಂಬಳ್ ಪೆಸರಿಂ ೧೧

ನೆಗಳ್ದ ಜಿನದತ್ತಂಗಂ
ಮೃಗನಯನೆ ಜಿನೇಂದ್ರದಾಸಿಗಂ ಮದನನಿಭಂ
ಜಗತೀಪೂಜ್ಯಂ ವಿಕ್ರಮ
ಮೃಗಾರಿ ಜಿನದಾಸನೆಂಬನಗ್ರತನೂಜಂ ೧೨

ಅವಂತಿದೇಶವು ಅನೇಕ ಉದ್ಯಾನಗಳಿಂದ ಕೂಡಿದ ಸರೋವರಗಳಿಂದಲೂ ಅನೇಕ ಗ್ರಾಮಗಳಿಂದಲೂ ಶೋಭಿಸುತ್ತಿತ್ತು ೮. ಆ ರಾಜ್ಯದಲ್ಲಿ ಆ ಭೂದೇವಿಯು ಧರಿಸಿದ ರತ್ನಾಭರಣದಂತೆ, ನಾನಾ ಶೋಭೆಗಳಿಂದ ಕೂಡಿ ಉಜ್ಜಯಿನಿಯೆಂಬ ಪಟ್ಟಣವು ಒಪ್ಪುತ್ತಿತ್ತು. ಆ ನಗರದ ದೊರೆ ಧರ್ಮಧರನೆಂಬವ. ಆತನ ರಾಜಶ್ರೇಷ್ಠಿಯು ಗುಣನಿಳಯನು ; ಜಿನಪಾದ ಪದ್ಮಗಳಲ್ಲಿ ಭಕ್ತ, ಜನಪ್ರಿಯನಾದ ಆ ಸೆಟ್ಟಿ ಇಂದ್ರನಂಥವನೂ ಪರಿಶುದ್ಧನೂ ಆದ ಜಿನದತ್ತನು ಜೈನಮತವೆಂಬ ಸಮುದ್ರಕ್ಕೆ ಚಂದ್ರನೋಪಾದಿಯಲ್ಲಿದ್ದನು ೯–೧೦. ಜಿನದತ್ತನ ಹೆಂಡತಿ ಶುದ್ಧಚರಿತ್ರಳೂ ಭವ್ಯಜನರ ಪ್ರೀತಿಪಾತ್ರಳೂ ಸಮಸ್ತ ಗುಣಸಮುದ್ರಳೂ ಆದ ಜಿನೇಂದ್ರದಾಸಿ ೧೧. ಪ್ರಸಿದ್ಧನಾದ ಜಿನದತ್ತನಿಗೂ ಜಿನೇಂದ್ರದಾಸಿಗೂ ಮನ್ಮಥನಂಥ, ಜಗತ್ಪೂಜ್ಯ, ವಿಕ್ರಮಸಿಂಹ, ಜಿನದಾಸನೆಂಬವನು ಜ್ಯೇಷ್ಠಪುತ್ರ ೧೨. ಹಾಗೆ ಅವರು ಬಹಳ ಕಾಲ ಸುಖದಿಂದ

ಗದ್ಯ॥ ಅಂತವರ್ ಸುಖದಿಂ ಪಲಕಾಲಮಿರ್ಪನ್ನೆಗಂ ೧೩

ದುರಿತಘನಪವನರುಜ್ವಲ
ಚರಿತರ್ ಜೈನಾಗಮಾಂಬುನಿಧಿ ಹಿಮಕಿರಣರ್
ಧರಣೀಸ್ತುತ್ಯರ್ ಮುನಿಜನ
ಪರಿವೃಢರಂಗಜಮದೇಭ ವಿಘಟನಸಿಂಹರ್ ೧೪

ಗದ್ಯ॥ ಜಿನಪಾಲಿತರೆಂಬ ತಪೋಧನರೊರ್ವರೇಕವಿಹಾರಿಗಳ್ ವಸುಧಾವಳಯಮಂ ತೊಳ ಲುತ್ತುಂ ಬಂದುಜ್ಜಯಿನಿಗೆ ಬಂದು ನೇಸಱ್ ಪಟ್ಟ ಬೞಿಕ್ಕಂ ತೊಳಲ್ವುದು ಸಂಯಮಧರರಪ್ಪ ಋಷಿಯರ್ಗೆ ಮಾರ್ಗಮಲ್ಲೆಂದು ಗಂಧವತಿಯೆಂಬ ತೊಱೆಯ ತಡಿಯೊಳ್ ರೌದ್ರಮಪ್ಪ ಶ್ಮಶಾನ ಭೂಮಿಯ ನಡುವೆ ೧೫

ಪೊಲ್ಲೆನಿಸದ ಜೀವಾಳಿಗ
ಳಿಲ್ಲದ ರಮಣೀಯಮಪ್ಪ ಪಾಸಱೆಯಂ ತ
ಳ್ವಿಲ್ಲದೆ ಬೆಳಗಿನೊಳಾರ
ಯ್ದುಳ್ಳಳ್ಕದ ಗುಂಡನಘಕಮಂದದಿನೇಶಂ ೧೬

ವಾಸವಾಗಿದ್ದರು. ೧೩. ಆಗ ಒಂದು ದಿನ ಜಿನಪಾಲಿತಮುನಿಗಳೆಂಬವರು ಆ ನಗರಕ್ಕೆ ಬಂದರು. ಪಾತಕವೆಂಬ ಮೋಡಗಳಿಗೆ ವಾಯುಸ್ವರೂಪರೂ, ಶುದ್ಧಚರಿತ್ರರೂ ಜೈನಾಗಮ ಸಮುದ್ರವನ್ನು ಉಕ್ಕಿಸುವಂಥ ಚಂದ್ರನಂಥವರೂ ಲೋಕದ ಸ್ತೋತ್ರಕ್ಕೆ ಪಾತ್ರರಾದವರೂ ಮುನಿಜನರಿಗೆ ಮುಖಂಡರು. ಅವರು ಮನ್ಮಥನೆಂಬ ಮದ್ದಾನೆಯನ್ನು ಸೀಳುವವರಲ್ಲಿ ಸಿಂಹದಂಥವರು. ಮನ್ಮಥವಿಕಾರವನ್ನು ನಿಗ್ರಹಿಸಿಕೊಂಡವರೆಂದು ಭಾವ ೧೪. ಆ ಜಿನಪಾಲಿತ ಮುನಿಶ್ರೇಷ್ಠರು ಒಬ್ಬ ಏಕವಿಹಾರಿಗಳು. ಅವರು ಭೂಮಂಡಲದಲ್ಲೆಲ್ಲ ಸಂಚರಿಸುತ್ತ ಬಂದು ಅವಂತಿ ದೇಶದ ರಾಜಧಾನಿಯಾದ ಉಜ್ಜಯಿನಿಯನ್ನು ಸೇರಿದರು. ಆದರೆ ಆಗ ಸೂರ್ಯಾಸ್ತಮಯವಾಗಿತ್ತು. ಆ ಹೊತ್ತಿನಲ್ಲಿ ನಗರದಲ್ಲಿ ಸಂಚರಿಸುವುದು ಸಂಯಮಿಗಳಾದ ಋಷಿಗಳವರಿಗೆ ಸಮನಲ್ಲವೆಂದು ಯೋಚಿಸಿ ಗಂಧವತಿಯೆಂಬ ಹೊಳೆಯ ದಡದಲ್ಲಿ ಭಯಂಕರವಾದ ಶ್ಮಶಾನವನ್ನು ಪ್ರವೇಶಿಸಿದರು. ೧೫. ಕೆಟ್ಟದೆನಿಸದ, ಬೇರೆ ಜೀವಿಗಳಿಲ್ಲದ, ಸುಂದರವಾದ ಒಂದು ಹಾಸು ಬಂಡೆಯನ್ನು ಇನ್ನೂ ಕಣ್ಣು ಬೆಳಕಿರುವಾಗಲೇ ಹುಡುಕಿಕೊಂಡು ಮನಸ್ಸಿನಲ್ಲಿ ಅಂಜಿಕೆಯಿಲ್ಲದ ಧೀರ. ಪಾತಕವೆಂಬ ಕತ್ತಲೆಗೆ ಸೂರ್ಯನಂಥ ಆ ಋಷಿ ೧೬. ಸೂರ್ಯೋದಯವಾಗುವವರೆಗೆ ಇನ್ನು ಅಲುಗುವುದಿಲ್ಲ

ಸನ್ನುತ ರವಿಯುದಯಂಗೆ
ಯ್ವನ್ನೆವರಂ ಮಿಸುಕೆನೆಂದು ಮಂದರ ಧೈರ್ಯಂ
ತನ್ನಣ್ಮಿಂದಂ ಮಿಡುಕದೆ
ಸನ್ನುತಮತಿಯೊಂದೆ ಮುಗ್ಗುಲೊಳ್ ಪಟ್ಟಿರ್ದಂ ೧೭

ಗದ್ಯ॥ ಅಂತು ಗುಣಗಣಾಭರಣಂ ನಿತ್ಯಯೋಗಂಗೊಂಡೇಱಿಸಿದ ಬಿಲ್ಲಂತೆ ಶರೀರಮಂ ಚಳಿಯಿಸದೆ ಪಾರ್ಶ್ವದೊಳ್ ಪಟ್ಟಿರ್ಪುದುಮಿತ್ತಲುಜ್ಜಯಿನಿಯಿಂದೊರ್ವ ವಿಡಂಬನೆಂಬ ಸಾಧಕಂ ನಿಧಿನಿಕ್ಷೇಪಗಳಂ ಸಾಧಿಸಲೆಂದು ಯಥೋಚಿತಮಪ್ಪ ಬಲಿವೆರಸು ಪಲ್ಲಂ ಸುಲಿದು ಮಿಂದು ಶುಚಿರ್ಭೂತನಾಗಿ ಧೌತಾಂಬರಮನುಟ್ಟು ವೀರದಿನುಪವಾಸಂ ಕೈಕೊಂಡು ತನ್ನ ನಿವಾಸಮಂ ಪೊಱಮಟ್ಟು ನಟ್ಟಿರುಳ್ ತನ್ನ ಕಟ್ಟಾಳ್ತನದಿಂ ೧೮

ಪಲವುಂ ಪೂಣ್ಕೆಗಳಿಂದಂ
ಚಲದಿಂದಸಹಾಯ ವಿಕ್ರಮಂ ತನ್ನಳವಂ
ಕಲಿತನಮಂ ನಂಬಿ ಬಲಂ
ತಳರದೆ ಸಾಧಿಸುವೆನೆಂಬ ಬಳಕೆಯಿನಾತಂ ೧೯

ಗದ್ಯ॥ ಕರಡಿಯ ತೊವಲಂ ಕಾಡಿಗೆಯೊಳದ್ದಿ ವಿಧಾತ್ರಂ ಲೋಕಮಂ ಬಾಸಣಿಸಿದನೆಂಬಂತಪ್ಪ ಕತ್ತಲೆಯೊಳ್ ಕೂಡಿದ ರಾತ್ರಿಯೊಳ್ ಗಂಧವತಿಯ ತಡಿವಿಡಿದು ಬಂದು ಪಿತೃವನಮಂ ಪೊಕ್ಕು ತನ್ನ ಕೈಯ ಸೊಡರಿಂ ೨೦

ವೆಂದು ಯೋಚಿಸಿ ಮಂದರದಂಥ ಧೈರ್ಯವುಳ್ಳವನಾಗಿ ತನ್ನ ಧೈರ್ಯದಿಂದ ಅಲ್ಲಾಡದೆ ಆ ಋಷಿಯು ಒಂದೇ ಮಗ್ಗುಲಲ್ಲಿ ಮಲಗಿದನು. ೧೭. ಗುಣಗಣಗಳೇ ಆಭರಣಗಳಾಗಿ ಉಳ್ಳ ಆ ಯತಿಯು ಹಾಗೆ ನಿತ್ಯಯೋಗವನ್ನು ಧರಿಸಿ ಹೆದೆಯೇರಿಸಿದ ಬಿಲ್ಲಿನಂತೆ, ದೇಹವನ್ನು ಅಲುಗಿಸದೆ ಮಗ್ಗುಲಾಗಿ ಮಲಗಿರಲಾಗಿ ಇತ್ತ ಉಜ್ಜಯಿನಿಯಿಂದ ವಿಡಂಬನೆಂಬ ಒಬ್ಬ ಸಾಧಕನು ನಿಧಿ, ನಿಕ್ಷೇಪ(ಬಚ್ಚಿಟ್ಟ ಹಣ)ಗಳನ್ನು ಸಾಧಿಸಬೇಕೆಂದು, ಯಥೋಚಿತವಾದ ಬಲಿಯೊಡನೆ, ಹಲ್ಲುಜ್ಜಿ. ಸ್ನಾನಮಾಡಿ, ಶುಚಿಯಾಗಿ ಬಿಳಿಯ ಬಟ್ಟೆಯನ್ನುಟ್ಟು ಪ್ರತಿಜ್ಞೆಯಿಂದ ಉಪವಾಸ ಮಾಡಿ ತನ್ನ ಮನೆಯಿಂದ ಹೊರಟು ಮಧ್ಯರಾತ್ರಿ ತನ್ನ ಧೈರ್ಯದಿಂದ ೧೮. ಹಲವು ಪ್ರತಿಜ್ಞೆಗಳಿಂದ, ಛಲದಿಂದ, ಅಸಹಾಯಶೂರನು ತನ್ನ ಸಾಮರ್ಥ್ಯವನ್ನೂ ಶೌರ್ಯವನ್ನೂ ನಂಬಿ, ಆ ಬಲಿಷ್ಠನು ಚಂಚಲತೆಯಿಲ್ಲದೆ ಸಾಧಿಸುವೆನೆಂಬ ಸಂಕಲ್ಪದಿಂದ ಹೊರಟನು. ೧೯. ಕರಡಿಯ ತೊಗಲನ್ನು ಕಾಡಿಗೆಯಲ್ಲಿ ಅದ್ದಿ ಬ್ರಹ್ಮನು ಈ ಲೋಕವನ್ನು ಮುಚ್ಚಿದನೆಂಬ ಹಾಗೆ ಕತ್ತಲೆಯಿಂದ ಕೂಡಿದ ಆ ರಾತ್ರಿಯಲ್ಲಿ ವಿಡಂಬನು ಗಂಧವತೀನದಿಯ ದಡವನ್ನೇ ಅನುಸರಿಸಿಕೊಂಡು ಬಂದು ಶ್ಮಶಾನವನ್ನು ಪ್ರವೇಶಿಸಿ ತನ್ನ ಕೈಲಿದ್ದ ದೀಪದ ಬೆಳಕಿನಲ್ಲಿ ದಾರಿ ನಡೆದನು. ೨೦. ಅಲ್ಲಿ

ತಲೆ ಪಱಿದಿರ್ದ ಪೆರ್ದಸಿಯ ಮೇಲೆ ಮಹಾದ್ಭುತದಿಂದಮಿದ್ದು ಕ
ಣ್ಗಳನರೆಮುಚ್ಚಿಕೊಂಡು ಕೆಡೆದಿರ್ದ ಕರುಳ್ ಪಱಿದಿರ್ದ ಭೂ
ತಳಮನೆ ಕಚ್ಚಿ ಮೈಮಱೆಯುತಿರ್ದ ಭಯಂಕರಮಾಗಿ ಪಟ್ಟು ಕ
ಣ್ಗೊಳೆ ತೆಗೆದಿರ್ದ ವೇದನೆಗೆ ಸೈರಣೆಗೆಟ್ಟಲುತಿರ್ದ ಭೀತರಂ ೨೧

ಗದ್ಯ॥ ನೋಡುತ್ತುಂ ಬಂದೇಕಪಾರ್ಶ್ವದೊಳ್ ಪಟ್ಟಿರ್ದ ಜಿನಪಾಲಿತ ಮುನಿಯಂ ಕಂಡು ಪೆಣನೆಂದು ಬಗೆದು ಬೇಗದಿನಲ್ಲಿಗೆ ಮತ್ತೆರಡು ಪೆಣಂಗಳಂ ತಂದು ಮೂಱುದಲೆಯನೊಲೆ ಗಲ್ಲೊಡ್ಡಿ ಕೆಳಗೆ ಕಿರ್ಚಂ ಪೊತ್ತಿಸಿ ಚರುವನಡುತ್ತಿರ್ಪುದುಂ ೨೨

ಭೋರನೆ ಕಿಚ್ಚಿನ ನಾಲಗೆ
ನೇರಿದವಾಗಳುರೆ ನೋವಿನೊಳ್ ಸೈರಣೆಗೆ
ಟ್ಟೋರಂತೆ ಮಱುಗಿ ಕುದಿಯದೆ
ಧೀರಂ ಜಿನಪಾದಪದ್ಮಮಂ ನೆನೆಯುತ್ತುಂ ೨೩

ಗದ್ಯ॥ ಮಿಾಯದೆ ಮೆಯ್ಯೊಳ್ ಶ್ರೀಖಂಡಮಂ ಪೂಸುವೆನೆಂಬ, ಪಿಂಡುಗೂಟಿೞೊಳಗಗುಳ ನುಣ್ಬೆನೆಂಬ, ಮದುವೆಯಾಗದೆ ಮಕ್ಕಳ್ಪಡೆವೆನೆಂಬ ಗಡ್ಡಂ ಬಾರದಂದವಿಡುವೆನೆಂಬ, ಕಡೆಯದೆ ಬೆಣ್ಣೆಗೊಳ್ವೆನೆಂಬ, ಬೆಳೆಯದೆ ಹಗವಂ ತೋಡುವೆನೆಂಬ, ಪುಟ್ಟದ ಕೂಸಿಂಗೆ ಪೆಸರಿಡುವೆ

ತಲೆ ಕತ್ತರಿಸಿ ಬಿದ್ದವರನ್ನೂ ದೊಡ್ಡ ಶೂಲದ ಮೇಲೆ ಮಹಾ ಅದ್ಭುತವಾಗಿ ನಿಂತಿದ್ದು ಕಣ್ಣುಗಳನ್ನು ಅರ್ಧಮುಚ್ಚಿಕೊಂಡು ಬಿದ್ದಿದ್ದವರನ್ನೂ, ಕರುಳು ಹರಿದಿದ್ದು ನೆಲವನ್ನೇ ಕಚ್ಚಿ ಮೈಮರೆತಿದ್ದು ಭಯಂಕಾರವಾಗಿ, ಮಲಗಿ ಕಣ್ಣು ತೆರೆದುಕೊಂಡು ವೇದನೆಯಿಂದ ಸಹನೆಗೆಟ್ಟು ಅಳುತ್ತಿದ್ದ ಭಯಗ್ರಸ್ತರನ್ನೂ ೨೧. ನೋಡುತ್ತ ಬಂದು, ಒಂದೇ ಮಗ್ಗುಲಲ್ಲಿ ಮಲಗಿದ್ದ ಜಿನಪಾಲಿತಮುನಿಯನ್ನು ಕಂಡು ಹೆಣವೆಂದು ಭಾವಿಸಿ ಬೇಗನೆ ಅಲ್ಲಿಗೆ ಇನ್ನೆರಡು ಹೆಣಗಳನ್ನು ಎಳೆತಂದು ಆ ಮೂರು ಹೆಣಗಳ ತಲೆಗಳನ್ನೂ ಒಲೆಯ ಕಲ್ಲುಗಳಂತೆ ಜೋಡಿಸಿ ಕೆಳಗೆ ಬೆಂಕಿ ಹಚ್ಚಿ ಅನ್ನವನ್ನು ಬೇಯಿಸುತ್ತಿದ್ದನು. ೨೨. ಇದ್ದಕಿದ್ದಂತೆ ಬೆಂಕಿಯ ಜ್ವಾಲೆಗಳು ನೇರವಾಗಿ ವ್ಯಾಪಿಸಲು ನೋವಿನಿಂದ ಸೈರಣೆ ಕಳೆದುಕೊಂಡು ಹೆಚ್ಚಾಗಿ ಸಂಕಟಪಟ್ಟು ಆತುರಗೊಳ್ಳದೆ ಧೀರನಾದ ಜಿನಪಾಲಿತ ಮುನಿಯು ಜಿನಪಾದ ಕಮಲಗಳನ್ನು ಸ್ಮರಿಸುತ್ತಿದ್ದನು. ೨೩. ಸ್ನಾನಮಾಡದೆ ಮೈಗೆ ಶ್ರೀಗಂಧವನ್ನು ಲೇಪಿಸುವೆನೆಂಬ, ಹಿಂಡಿದ ಕೂಳಿನಲ್ಲಿ ಒಂದು ಅಗುಳನ್ನು ತಿನ್ನುವೆನೆನ್ನುವ, ಮದುವೆಯಾಗದೆ ಮಕ್ಕಳನ್ನು ಹೆರುವೆನೆನ್ನುವ, ಗಡ್ಡವೇ ಬರದಿರುವವನು ಅಂದವಾಗಿ ಬಿಡುವೆನೆನ್ನುವ, ಕಡೆಯದೆಯೇ ಬೆಣ್ಣೆಯನ್ನು ತೆಗೆಯುವೆನೆನ್ನುವ, ಧಾನ್ಯಬೆಳೆಯದೆಯೇ ಹಗೇವನ್ನು ತೋಡುವೆನೆನ್ನುವ, ಹುಟ್ಟದಿರುವ ಕೂಸಿಗೆ ಹೆಸರಿಡುವೆನೆನ್ನುವ, ಸಾಲ ಕೊಡದೆ ಬಡ್ಡಿ

ನೆಂಬ, ಸಾಲಿಸದೆ ಬಡ್ಡಿವೇಟ್ಕೆಂಬ, ನೆಯ್ಯದೆ ಸೀರೆಯನುಡುವೆನೆಂಬ, ಮಾಡದೆ ಮನೆಯಂ ಪೊಕ್ಕಪೆನೆಂಬ ಮರುಳನಂತೆ, ಪೆಱವುಣಸುಗಳನರೋಚಕಂ ಮಾಟ್ಪ ತುಯ್ಯಲ್ ತುಪ್ಪದಂತಪ್ಪ ಮತ್ತಿನ ಪೆಂಡಿರ್ಗೆ ಪೇಸುಗೆಯಂ ಪುಟ್ಟಿಸುವ ನಾಯಕಸ್ತ್ರೀಯಂತಪ್ಪ, ಪೊಲ್ಲ ನೀರ್ಗೆ ಮನಂಗಿಡಿಸುವ ಶೀತಲಜಲದಂತಪ್ಪ, ಹೀನದ್ರವ್ಯಂಗಳ್ಗೆ ಚಿತ್ತಮಂ ಮಾಡದ ಪೊನ್ನರಾಶಿಯಂತಪ್ಪ, ಕಪ್ಪವಸ್ತ್ರಂಗಳ್ಗೆ ಒಗೆಯಂ ಮಾಡದ ದುಕೂಲವಸ್ತ್ರದಂತಪ್ಪ, ಪುಲ್ವನೆಗೆ ಪೆರ್ಚಂ ಮಾಡದ ಮಣಿಮಾಡದಂತಪ್ಪ, ಕಿಡುವ ಬೆಳಗುಗಳ್ಗೆ ಕಪ್ಪಮಂ ಮಾಟ್ಪ ಸೂರ್ಯರಶ್ಮಿಯಂತಪ್ಪ, ಕಾಜಿನ ತುಡಿಗೆಗೆ ನಿಸ್ತೇಜಂ ಮಾಟ್ಪ ಮುತ್ತಿನಾಭರಣದಂತಪ್ಪ, ಹೀನಶ್ರೀಗಂ ಕಿಱುಕುಳ ಭೋಗಕ್ಕಮೂನ ಸುಖಕ್ಕಂ ವಿರಾಗಂ ಮಾಡಿ ಮುಕ್ತಿಶ್ರೀಯೊಳ್ ಕೂಡುವ, ಚಕ್ರವರ್ತಿ ಪದವಿಯುಮಂ ದೇವೇಂದ್ರ ಪದವಿಯುಮಂ ಮೊದಲ ಮೂಱು ಸಂಹನನಮುಮಂ ಶ್ರುತಬುದ್ಧಿಯ ಸಂಪೂರ್ಣತೆಯುಮಂ ಕ್ಷಪಕ ಶ್ರೇಣಿಯನೆಯ್ದಿಸುವ ಮಹಿಮೆಯುಮಂ ಪುಟ್ಟಿಸುವ ಪುಣ್ಯಮಂ ನೆರೆಪುವ ಪಂಚಪರಮೇಷ್ಠಿಗಳ ಭಕ್ತಿಯುಮಂ ಪೂಜೆಯುಮಂ ಕೊಂಡಾಟಮುಮಂ ನಚ್ಚುಗೆಯುಮಂ ಬಿಸುಟು, ನೆಲ್ಲನಕ್ಕಿ ಮಾಡಲಲಸಿ ಲೇಸೆಂದಟ್ಟುಂಬ, ಕಲ್ಲಂ ನುಣ್ಪುಮಾಡದೆ ಚಿತ್ರಂಬರೆವ, ಪೊನ್ನನಾಭರಣಂ ಮಾಡದೆ

ಬೇಕೆನ್ನುವ ನೆಯ್ಯದೆ ಸೀರೆಯನ್ನು ಉಡುವೆನೆನ್ನುವ, ಕಟ್ಟಿ ಸಿದ್ಧಮಾಡದೆ ಮನೆಯನ್ನು ಹೊಗುವೆನೆನ್ನುವ ಹುಚ್ಚನ ಹಾಗೆ, ಬೇರೆ ತಿಂಡಿಗಳನ್ನು ಅರುಚಿಯೆಂದೆನ್ನಿಸುವಂಥ ಪಾಯುಸತುಪ್ಪಗಳಂಥ, ಉಳಿದ ಹೆಂಡರ ವಿಷಯದಲ್ಲಿ ಹೇಸಿಗೆಯನ್ನು ಹುಟ್ಟಿಸುವ ನಾಯಕಸ್ತ್ರೀಯ ಹಾಗಿನ, ಕೆಟ್ಟ ನೀರಿಗೆ ಧೈರ್ಯ ಕೆಡಿಸುವಂಥ ತಣ್ಣನೆಯ ನೀರಿನಂಥ, ನೀಚ ವಸ್ತುಗಳಿಗೆ ಮನಸ್ಸು ಹುಟ್ಟದಂತೆ ಮಾಡುವ ಚಿನ್ನದ ರಾಶಿಯಂಥ, ಕೀಳು ವಸ್ತ್ರಗಳಲ್ಲಿ ಆಸೆ ಹುಟ್ಟಿಸದ ರೇಶ್ಮೆಯ ವಸ್ತ್ರದಂಥ, ಹುಲ್ಲುಮನೆಗೆ ಹೆಚ್ಚಳವನ್ನು ಮಾಡದ ಮಣಿಮಾಡದಂಥ, ನಶ್ವರವಾದ ಬೆಳಕುಗಳಿಗೆ ಅಲ್ಪತೆಯನ್ನು ಮಾಡುವ ಸೂರ್ಯಕಿರಣದಂಥ, ಗಾಜಿನ ಒಡವೆಗೆ ತೇಜೋಹಾನಿಯನ್ನು ಮಾಡುವ ಮುತ್ತಿನ ಒಡವೆಯಂಥ, ಅಲ್ಪೈಶ್ವರ್ಯಕ್ಕೂ ಕಿರುಕುಳ ರಾಜ್ಯಭೋಗಕ್ಕೂ ಕೊರತೆಯಿಂದ ಕೂಡಿದ ಸುಖಕ್ಕೂ ವಿರಕ್ತಿ ಹೊಂದಿ ಮುಕ್ತಿ ಲಕ್ಷ್ಮಿಯೊಡನೆ ಕೂಡುವ, ಚಕ್ರವರ್ತಿ ಪದವಿಯನ್ನೂ ದೇವೇಂದ್ರ ಪದವಿಯನ್ನೂ ಮೊದಲಿನ ಮೂರು ಸಂಹನನಗಳನ್ನೂ, ಶ್ರುತ ಬುದ್ಧಿಯ ಸಂಪೂರ್ಣತೆಯನ್ನೂ ಕ್ಷಪಕ[1] ಶ್ರೇಣಿಗೆ ಸೇರಿಸುವ ಮಹಿಮೆಯನ್ನೂ ಹುಟ್ಟಿಸುವಂಥ, ಪುಣ್ಯವನ್ನು ಶೇಖರಿಸುವ, ಪಂಚಪರಮೇಷ್ಠಿಗಳ ಭಕ್ತಿಯನ್ನೂ ಪೂಜೆಯನ್ನೂ ಹೊಗಳಿಕೆ ನಂಬಿಕೆಗಳನ್ನೂ ಬಿಟ್ಟು, ನೆಲ್ಲನ್ನು ಅಕ್ಕಿ ಮಾಡಲು ಸೋಮಾರಿತನ ಮಾಡಿ ಹಾಗೆಯೇ ಬೇಯಿಸಿ ತಿನ್ನುವ, ಕಲ್ಲನ್ನು ನುಣುಪು ಮಾಡದೆ ಚಿತ್ರ

---

1 ಕ್ಷಪಕ-ಕರ್ಮವಿನಾಶಹೊಂದಿದವನು.

ತುಡುವ, ಕೈಯ್ಯನುಜದೆ ಬಿತ್ತುವ, ನೂಲಂ ಪೊಸೆಯದೆ ಮಣಿಯಂ ಕೋವ, ಘಳ್ಳಿಯಿಲ್ಲದೆ ಕರ್ಚಿನೊಳಡುವ, ಗಾಲಿಯಿಲ್ಲದೆ ಬಂಡಿವರಿಯಿಸುವ, ಬಲವಿಲ್ಲದೆ ಕಾದುವ, ಕೂಟಿಲ್ಲದೆ ಮದ್ದಳೆಯಂ ಬಡಿವ, ಕಱಿಯದೆ ಪಾಲಂ ಬಯಸುವ ಬೆಲೆಗುಡದೆ ಬಂಡಮರಸುವ, ಬದಿರಿಲೆ ಯೊಳ್ ರಸಮನಱಸುವ ಕಳ್ಳಿಯ ಪಾಲೊಳ್ ಬೆಣ್ಣೆಯನಱಸುವ ತೊಱೆಯ ಸಿಪ್ಪಿನೊಳ್ ಮುತ್ತನಱಸುವ ; (.. ?) ಧಾನ್ಯದಂತೆ ಪಸಿಯ ಧಾನ್ಯದಂತೆ ಒಣಗಿದ ಧಾನ್ಯದಂತೆ, ಮಿಡಿಯು ತ್ತಿರ್ಪ ಧಾನ್ಯದಂತೆ ಉಯ್ವೆರಸಿರ್ದ ಧಾನ್ಯದಂತೆ ಕೇಸಕ್ಕಿಯಂತೆ ತಳಿಸಿದಕ್ಕಿಯಂತೆ, ಕರ್ಚಿದಕ್ಕಿ ಯಂತೆ ಬೇವ ಕೂಟನಂತೆ, ಬೇದಿಟ್ಟಿಪಿದ ಕೂಟನಂತೆ, ತಳಿಗೆಗೆ ವಂದ ಕೂಟನಂತೆ, ಬಾಡು ತುಪ್ಪಂ ಮೊದಲಾದ ಪರಿಕರಂವೆರಸುಣ್ಬ ಕೂಟನಂತೆ, ನೆಲದಂತೆ ಭೂಮಿಶೋಧನೆಯಂತೆ, ಗುಂಡೋತ್ತರದಂತೆ, ನೆಲಗಟ್ಟಸಂತೆ ರಂಗಘಟ್ಟಣೆಯಂತೆ, ಕಂಭನಿಱಿಸುಗೆಯಂತೆ ಕರುಮಾಡ ದಂತೆ ಬೋದಿಗೆಯ ಕೂಟದಂತೆ ಮುಚ್ಚಳಂತೆ ಪ್ರತಿಷ್ಠೆಯಂತೆ ಮೇಲಣ ಬೆಸದಂತೆ, ಸೊದೆ ಯಂತೆ ಕಳಶಾರೋಹಣದಂತೆ, ಕೆಯ್ಯಂತೆ, ಕೆಯ್ಯುಟುಮೆಯಂತೆ, ಕೆಯ್ಯೊಳ್ ಪದಂ ಬಡೆವಂತೆ ಬಿತ್ತಣದಂತೆ ಸಸಿಯಂತೆ ಪೊಡೆಯಂತೆ ಪಾಲ್ದೆನೆಯಂತೆ ಕೊಯ್ಲಾದಂತೆ, ಸೂಡಿನಂತೆ ಕಳಕ್ಕೆ ವರ್ಪಂತೆ, ಒಕ್ಕಣದಂತೆ ರಾಶಿಯಂತೆ ಮಿಥ್ಯಾದೃಷ್ಟಿ ಸಾಧನ ಸಮ್ಯಗ್ದೃಷ್ಟಿ ಸಮ್ಯಙ್ಮಿಥ್ಯಾ ದೃಷ್ಟಿ, ಅಸಂಯುತ ಸಮ್ಯಗ್ದೃಷ್ಟಿ ದೇಶಸಂಯುತ ಪ್ರಮತ್ತ ಅಪ್ರಮತ್ತ ಅಪೂರ್ವಕರಣ

ವನ್ನು ಬರೆಯುವ, ಚಿನ್ನದಿಂದ ಒಡವೆಯನ್ನು ಮಾಡದೆ ಧರಿಸುವ, ಗದ್ದೆಯನ್ನು ಉಳದೆ ಬಿತ್ತುವ, ನೂಲನ್ನು ಹೊಸೆಯದೆ ಮಣಿಯನ್ನು ಪೋಣಿಸುವ, ಸೌದೆ ಯಿಲ್ಲದೆ ಬೆಂಕಿಯಲ್ಲಿ ಅಡಿಗೆಮಾಡುವ, ಚಕ್ರವಿಲ್ಲದೆ ಬಂಡಿ ನಡೆಸುವ, ಬಲವಿಲ್ಲದೆ ಯುದ್ಧಮಾಡುವ, ಅನ್ನವಿಲ್ಲದೆ ಮದ್ದಲೆಯನ್ನು ಬಡೆಯುವ, ಕರೆಯದೆ ಹಾಲನ್ನು ಬಯಸುವ, ಬೆಲೆಕೊಡದೆ ಸರಕನ್ನು ಬೇಡುವ, ಬಿದಿರಿನ ಎಲೆಯಲ್ಲಿ ರಸವನ್ನು ಹುಡುಕುವ, ಕಳ್ಳಿಯ ಹಾಲಿನಲ್ಲಿ ಬೆಣ್ಣೆಯನ್ನು ಅಪೇಕ್ಷಿಸುವ, ಹೊಳೆಯ ಚಿಪ್ಪಿನಲ್ಲಿ ಮುತ್ತನ್ನು ಹುಡುಕುವ, ಹಸಿಯ ಧಾನ್ಯ, ಒಣಗಿದಧಾನ್ಯ, ಕೇಸಕ್ಕಿ, ಬೆಳತಿಗೆ, ತೊಳೆದಕ್ಕಿ, ಕುದಿಯುವ ಅನ್ನ, ಬೆಂದು ಇಳಿಸಿದ ಅನ್ನ, ತಟ್ಟೆಯಲ್ಲಿಗೆ ಬಂದ ಅನ್ನದಂತೆ, ವ್ಯಂಜನ, ಮೊದಲಾದ ಪರಿಕರಗಳೊಡನೆ ಉಣ್ಣುವ ಅನ್ನದಂತೆ, ನೆಲ, ಭೂಮಿಶೋಧನೆ, ತಳಹದಿ, ನೆಲಗಟ್ಟು, ರಂಗದ ಘಟ್ಟನೆ, ಕಂಬವನ್ನು ನಿಲ್ಲಿಸುವಿಕೆ ಕರುಮಾಡ, ಬೋದಿಗೆಗಳ ಹೊಂದಿಕೆ, ಮುಚ್ಚಳ (ಮಾಳಿಗೆ) ಪ್ರತಿಷ್ಠೆ, ಮೇಲಿನ ಕೆಲಸ ಸುಣ್ಣ ಬಳಿಯುವುದು, ಕಳಶವನ್ನು ಹಾಕುವುದು, ಇದರಂತೆ, ಹೊಲ, ಉಳುಮೆ, ಹದ ಮಳೆ, ಬಿತ್ತುವೆ, ಮೊಳಕೆ, ಹೊಡೆ, ಹಾಲುತೆನೆ (ತೆನೆಗೆ ಹಾಲುತುಂಬುವುದು) ಕೊಯಿಲಾ ದಂತೆ, ಸಿವುಡುಗಟ್ಟುವುದು, ಕಣಕ್ಕೆ ಬರುವಿಕೆ, ಒಕ್ಕುವುದು, ಧಾನ್ಯರಾಶಿ,–ಇವು ಗಳಂತೆಯೇ ಮಿಥ್ಯಾದೃಷ್ಟಿ, ಸಾಧನಸಮ್ಯಕ್‌ದೃಷ್ಟಿ, ಸಮ್ಯಕ್‌ಮಿಥ್ಯಾದೃಷ್ಟಿ, ಅಸಂಯುತ ಸಮ್ಯಗ್ದೃಷ್ಟಿ, ದೇಶಸಂಯುತ, ಪ್ರಮತ್ತ ಅಪ್ರಮತ್ತ, ಅಪೂರ್ವಕರಣ, ಅನಿವೃತ್ತ

ಅನಿವೃತ್ತಿಕರಣ, ಸೂಕ್ಷ್ಮ ಸಾಂಪರಾಯ ಉಪಶಾಂತ ಕಷಾಯ ಸಂಯೋಗಿ ಅಯೋಗಿ ಎಂಬೀ ಪದಿಮೂಱು ಗುಣಸ್ಥಾನಂಗಳಿರ್ದಪುವು ಅವಱೊಳಗಾವ ಗುಣಸ್ಥಾನದೊಳ್ ತಾನಿರ್ದಪನಾ ಗುಣಸ್ಥಾನಕ್ಕೆ ತಕ್ಕುದಂ ನೆಗಟ್ವುದು ; ನೆಗಟಲೊಲ್ಲದೆ ಮತ್ತೊಂದು ಗುಣಸ್ಥಾನದೊಳ್ ನೆಗಟ್ವೆನೆಂದು ನೆಗಱುತ್ತುಮಿರ್ಪೊಡೆ ಪೊಡೆಯುಂ ಕೊಯ್ದು ಧಾನ್ಯವರಸುವ ಪಸಿಯಂ ಕುಟ್ಟಿಯು ಕ್ಕಿಯಱಸುವ ಬೇವ ಕೂಟನೊಳ್ ರುಚಿಯುಱಸುವ, ನೆಲ್ಲನಟ್ಟು ಮೃದುಗೂಟನಱಸುವ, ನೆಲ ಗಟ್ಟಿನ ಮೇಲೆ ಕಳಶಮನಿಡುವ, ಗುಂಡೋತ್ತರದ ಮೇಲೆ ಸೊದೆಯಂ ಬಟಿವ ಕಂಭನಿಱಿಗೆ ಯಿಲ್ಲದೆ ಜಿನ ಭವನಮಂ ಮಾಟ್ಪ, ಮುಚ್ಚಳಮಿಲ್ಲದೆ ಪ್ರತಿಷ್ಠೆಯುಂ ಮಾಟ್ಪ, ರಂಗಮಿಲ್ಲದೆ ಕಂಭಮಂ ನಿಱಿಸುವ, ಪಾಲ್ದೆನೆಯನೊಕ್ಕುವ, ಸಸಿಯಂ ಕೊಯ್ದು ಮೆದೆಯನೊಟ್ಟುವ, ಬಿತ್ತುವ ಕಾಲದೊಳ್ ಬೆಳಸನಱಸುವ, ಬಿತ್ತದೆ ಸಸಿಯುಂ ನೋಡುವ, ಕಟ್ಟೆಗ್ಗನಂ ಪೋಲು ಮದು ಕಾರಣದಿಂದನ್ನೆವರಂ ದೇಶಸಂಯುತ ಗುಣಸ್ಥಾನದೊಳಂ ಪ್ರಮತ್ತಾ ಪ್ರಮತ್ತ ಗುಣ ಸ್ಥಾನದೊಳಮಿರ್ಪನ್ನೆವರಮಣುವ್ರತಿಗಳುಂ ಮಹಾವ್ರತಿಗಳುಂ ಮಱೆಯದೇಕ ಚಿತ್ತದಿಂದಾ ಹಾರಾಭಯ ಭೈಷಜ್ಯಶಾಸ್ತ್ರ ದಾನದೊಳಂ, ಅನಶನಾದಿ ತಪದೊಳಮಾರ್ತಣ್ಮೆ ನೆಗಱುತ್ತುಂ ಜಿನ ಸ್ವಾಮಿಯಂ ಪೂಜಿಸುವುದು ಬಣ್ಣಿಸುವುದು ನಿಚ್ಚ ನಿಚ್ಚಲೆಂದು ಪರಮಾಗಮದೋಜೆಯಂ ಭಾವಿಸಿ

೨೪

ಕರಣ, ಸೂಕ್ಷ್ಮಸಾಂಪರಾಯ, ಉಪಶಾಂತಕಷಾಯ ಸಂಯೋಗಿ, ಅಯೋಗಿ, ಎಂಬ ಈ ಹದಿಮೂರು ಗುಣಸ್ಥಾನಗಳಿರುವುವು. ಅವುಗಳೊಳಗೆ ಯಾವ ಗುಣಸ್ಥಾನದಲ್ಲಿ ತಾನು ಇರುವನೋ, ಆ ಗುಣಸ್ಥಾನಕ್ಕೆ ತಕ್ಕದ್ದನ್ನು ಮಾಡುವುದು ; ಮಾಡಲೊಲ್ಲದೆ ಬೇರೊಂದು ಗುಣಸ್ಥಾನದಲ್ಲಿ ಮಾಡುವೆನೆಂದು ಆಚರಿಸುತ್ತಿದ್ದರೆ, ಎಳೆಯ ತೆನೆಯನ್ನು ಕೊಯಿದು ಧಾನ್ಯವನ್ನು ಹುಡುಕುವ, ಹಸಿಯ ಕಾಳನ್ನು ಕುಟ್ಟಿ ಅಕ್ಕಿಯನ್ನು ಹುಡು ಕುವ, ಬೇಯುತ್ತಿರುವ ಅನ್ನದಲ್ಲಿ ರುಚಿಯನ್ನು ಹುಡುಕುವ, ನೆಲ್ಲನ್ನು ಬೇಯಿಸಿ ಮೃದು ವಾದ ಅನ್ನವನ್ನು ಬಯಸುವ, ತಳಹದಿಯ ಮೇಲೆ ಕಳಶವನ್ನು ಇಡುವ, ಅಡಿಪಾಯದ ಮೇಲೆ ಸುಣ್ಣ ಹಚ್ಚುವ, ಕಂಬಗಳನ್ನು ನಿಲ್ಲಿಸದೆ ಜಿನಮಂದಿರವನ್ನು ಕಟ್ಟುವ, ಮಾಳಿ ಗೆಯೇ ಇಲ್ಲದೆ ಪ್ರತಿಷ್ಠೆ ಮಾಡುವ, ರಂಗವಿಲ್ಲದೆ ಕಂಬವನ್ನು ನಿಲ್ಲಿಸುವ, ಹಾಲು ತೆನೆ ಯನ್ನೇ ಒಕ್ಕುವ, ಮೊಳಕೆಯನ್ನು ಕೊಯ್ದು ಮೆದೆ ಹಾಕುವ, ಬಿತ್ತುವ ಕಾಲಲ್ಲಿ ಬೆಳ ಸನ್ನು ಬಯಸುವ, ಬಿತ್ತದೆ ಮೊಳಕೆಯನ್ನು ನಿರೀಕ್ಷಿಸುವ, ಕಡು ದಡ್ಡನನ್ನು ಹೋಲು ತ್ತದೆ. ಆದಕಾರಣ ಅಲ್ಲಿಯ ತನಕ ದೇಶ ಸಂಯುತ ಗುಣಸ್ಥಾನದಲ್ಲಿಯೂ ಪ್ರಮತ್ತಾ ಪ್ರಮತ್ತ ಗುಣಸ್ಥಾನದಲ್ಲಿಯೂ ಇರುವವರೆಗೆ ಅಣುವ್ರತಿಗಳೂ, ಮಹಾವ್ರತಿಗಳೂ (ಶ್ರಾವಕರೂ ಶ್ರಮಣಕರೂ) ಮರೆಯದೆ ಒಂದೇ ಮನಸ್ಸಿನಿಂದ ಆಹಾರ, ಅಭಯ, ಭೈಷಜ್ಯ, ಮತ್ತು ಶಾಸ್ತ್ರದಾನಗಳಲ್ಲಿಯೂ ಅನಶನವೇ ಮೊದಲಾದ ತಪಸ್ಸಿನಲ್ಲಿಯೂ ಶ್ರದ್ಧೆ ಧೈರ್ಯಗಳಿಂದ ಆಚರಿಸುತ್ತ, ಜಿನಸ್ವಾಮಿಯನ್ನು ನಿತ್ಯನಿತ್ಯವೂ ಪೂಜಿಸಬೇಕು,

ನಯವಿದನಪ್ಪುದಱಿಂ ದು
ರ್ನಯಮಂ ಬಿಸುಟೇಕಚಿತ್ತದಿಂ ನಂಬಿರ್ದಂ
ಭಯಮಿಲ್ಲದೆ ಜಿನಪತಿಯಂ
ನಯಸೇನಂ ಸುಕವಿನಿಕರ ಪಿಕಮಾಕಂದಂ ೨೪

ದಿವಿಜೇಂದ್ರಂ ಜಿನಪೂಜೋ
ತ್ಸವದೆಸಕದಿನಿಲ್ಲಿ ಬಂದು ಮುಕ್ತಿವಧೂಟೀ
ಧವನಪ್ಪನೆಂದೊಡಿನ್ನೊ
ಪ್ಪುವ ಜಿನರಂ ನಂಬಿದಂಗೆ ಕೇಳೆರಡುಂಟೇ ೨೫

ಜಿನರೂಪಿಂದಮಭವ್ಯನು
ಮಿನಿತು ನವಗ್ರೈವೆಯಲ್ಲಿ ಪುಟ್ಟುವನೆನೆ ಮೇ
ದಿನಿಯೊಳ್ ಜಿನೇಂದ್ರಭಕ್ತಂ
ಗನಘ ಶ್ರೀ ಸೋಲ್ವಳೆಂಬುದಾವುದು ಗಹನಂ ೨೬

ಕಿಱಿದಪ್ಪ ವ್ರತವಿಂಗಂ
ದೆಱಗಿದ ಮಾದಿಗನುಮುಗ್ಗದ ವ್ಯಂತರಿಗ
ರ್ಗೊಡೆಯಂ ತಾನಾದಂ ಪದೆ
ದೆಱಗೆ ಜಿನಂಗಮೃತ ಪದವಿ ಗಹನವೆ ಜಗದೊಳ್ ೨೭

ಭಜಿಸಬೇಕು, ಎಂದು ಪರಮಾಗಮದ ಕ್ರಮವನ್ನು ಮನಸ್ಸಿನಲ್ಲಿ ಭಾವಿಸಿಕೊಳ್ಳುತ್ತಿ ೨೪. ನೀತಿಜ್ಞನಾದ್ದರಿಂದ ದುರ್ನೀತಿಯನ್ನು ಬಿಟ್ಟು ಏಕಚಿತ್ತದಿಂದ ನಂಬಿದ್ದವನು, ಭಯವಿಲ್ಲದೆ ಜಿನಪಾಲಿತಮುನಿಯು ಜಿನಪತಿಯನ್ನು ಧ್ಯಾನಿಸುತ್ತಿದ್ದನು. ೨೫. ದೇವೇಂದ್ರನು ಜಿನಪೂಜೆಯ ಮಹಿಮೆಯಿಂದ ಇಲ್ಲಿಗೆ ಬಂದು ಮೋಕ್ಷಲಕ್ಷ್ಮಿಯನ್ನು ಹೊಂದುವನೆಂದರೆ ಇನ್ನು ಶ್ರೇಷ್ಠರಾದ ಜಿನರನ್ನು ನಂಬಿದವರಿಗೆ ಹಾನಿಯುಂಟೆ ? ೨೬. ಜಿನರೂಪದಿಂದ ಅಭವ್ಯನೂ ಇಷ್ಟು ನವಗ್ರೈವೆಯಲ್ಲಿ ಹುಟ್ಟುವನೆಂದರೆ ಲೋಕದಲ್ಲಿ ಜಿನೇಂದ್ರ ಭಕ್ತನಿಗೆ (ಅನಘ=ಪಾಪರಹಿತ) ಮೋಕ್ಷಲಕ್ಷ್ಮಿ ಸೋಲುವಳೆಂಬುದು ಯಾವ ಗಹನ ವಿಚಾರ? ೨೭. ಸಣ್ಣದಾದ ವ್ರತಕ್ಕೆ ಅಂದು ಸೋತ ಮಾದಿಗನೂ ಶ್ರೇಷ್ಠನಾದ ವ್ಯಂತರಿಗರಿಗೆ ಒಡೆಯನಾದನು. ಲೋಕದಲ್ಲಿ ಪ್ರೀತಿಯಿಂದ ಜಿನಸ್ವಾಮಿಗೆ ಸೋತರೆ ಅಮೃತ ಪದವಿ ಕಷ್ಟವೇ ? ೨೮. ಖದಿರಸಾಗರನೆಂಬವನು ಕಾಗೆಯ ಮಾಂಸದ ಬಿಡುಪಿಗೆ ? ದೇವ

ಪದೆಪಿಂ ಕಾಗೆಯು ಮಾಂಸದ
ಬಿದುಪಿಂಗಂ ಖದಿರ ಸಾಗರಂ ದಿವಿಜ ಸುಖಾ
ಸ್ಪದನಾದನೆಂದೊಡರ್ಹ
ತ್ಪದಮಂ ಪಿಡಿದಂಗೆ ಮೋಕ್ಷಮಾವುದು ಗಹನಂ ೨೯

ಓದನಮುಂಡಂ ಮನ್ನಣೆ
ಗಾದ ಮಹಾಮೋದದಿಂದೆ ತಪಮಂ ಕೈಕೊಂ
ಡಾದಂ ಸುರೇಶನನೆ ಜಿನ
ಪಾದ ಶರಣ್ಯಂಗೆ ಜಗದೊಳರಿದೊಂದುಂಟೇ ೩೦

ದೃಢಸೂರ್ಪನೆಂಬ ಕಳ್ಳಂ
ಗಡ ಜಿನ ಶರಣೆಂಬ ಪೆಂಪಿನಾಱಕ್ಕರಮಂ
ಪಿಡಿದಮರನಾದನೆಂದೊಡೆ
ಪಿಡಿದಂಗರಿದುಂಟೆ ಲೋಕದೊಳ್ ಜಿನಪದಮಂ ೩೧

ವರದತ್ತಯೋಗಿಗಿಕ್ಕಿದ
ಪರಮಾನ್ನದಿನಂದು ಸೋಮಶರ್ಮನ ಸತಿ ಭಾ
ಪುರೆ ಯಕ್ಷಿಯಾದಳೆಂದೊಡೆ
ಪರಮ ಜಿನಂಗೆಱಗಿದಂಗೆ ಪೇಟರಿದುಂಟೇ ೩೨

ಲೋಕ ಸುಖ ಪಡೆದನೆಂದರೆ ಅರ್ಹತನ ಪಾದವನ್ನು ಹಿಡಿದವನಿಗೆ ಮೋಕ್ಷ ಯಾವ ಕಷ್ಟ? ೨೯. ಅನ್ನವನ್ನು ತಿಂದವನು ಗೌರವಕ್ಕೆ ಆದ ಮಹಾಸಂತೋಷದಿಂದ ತಪಸ್ಸನ್ನು ಕೈಕೊಂಡು ಸುರೇಶ್ವರನಾದನೆಂದರೆ ಜಿನಪಾದಗಳಲ್ಲಿ ಶರಣು ಹೊಂದಿದವನಿಗೆ ಜಗತ್ತಿನಲ್ಲಿ ಅಸಾಧ್ಯವಾದದ್ದೂ ಇದೆಯೆ ? ೩೦. ದೃಡಸೂರ್ಪನೆಂಬ ಹೆಸರಿನ ಒಬ್ಬ ಕಳ್ಳನು 'ಜಿನನೇ ಶರಣು' ಎಂಬ ಹೆಚ್ಚಳದ ಆರು ಅಕ್ಷರಗಳನ್ನು ಹಿಡಿದು ಅಮರಗತಿಯನ್ನು ಪಡೆದನೆಂದಮೇಲೆ ಜಿನಪಾದಗಳನ್ನು ಆಶ್ರಯಿಸಿದವನಿಗೆ ಲೋಕದಲ್ಲಿ ಅಸಾಧ್ಯವಾದದ್ದು ಇದೆಯೆ? ೩೧. ಶ್ರೇಷ್ಠನಾದ ದತ್ತಯೋಗಿಗೆ ಬಡಿಸಿದ ಪರಮಾನ್ನದಿಂದ ಅಂದು ಸೋಮಶರ್ಮನ ಹೆಂಡತಿಯು ಯಕ್ಷಿಯೇ ಆದಳು. ಭಾಪುರೇ ! ಪರಮ ಜಿನೇಶ್ವರನಿಗೆ ನಮಸ್ಕರಿಸಿದವರಿಗೆ ಅಸಾಧ್ಯವಾದುದ್ದು ಉಂಟೆ ? ೩೨. ಪುರು

ಪುರುದೇವನನಾರಾಧಿಸೆ
ಧರಣೇಂದ್ರಂ ಬಂದು ನಮಿವಿನಮಿಗಳ್ಗೆ ವಿಯ
ಚ್ಚರ ಪದಮನಿತ್ತನೆಂದೊಡೆ
ಪರಮ ಜಿನೇಶ್ವರನ ಪೆಂಪು ಸಾಧಾರಣಮೇ ೩೩

ದ್ರುಮಸೇನಂ ಜಿನನಾಥ
ಕ್ರಮಮಂ ಮತಿಯಲ್ಲಿ ನಿಲಿಸಿ ಕರ್ಮಂಗಳನ
ಶ್ರಮದಿಂ ಕಿಡಿಸಿದನೆಂದೊಡೆ
ವಿಮಳ ಜಿನಾರಾಧಕಂಗೆ ದುರ್ಗಮೆ ಮೋಕ್ಷಂ ೩೪

ಬಿಡದೆ ರಥನೇಮಿ ಜಿನರಂ
ಬಿಡದೆ ಮಹಾವ್ಯಸನಿಯಾಗಿಯುಂ ನಿರ್ವೃತಿಯುಂ
ಪಡೆದನನೆ ಕೇಳ ಬಲ್ಪಿಡಿ
ವಿಡಿದಂಗೆಡಱುಂಟೆ ಜಿನರಚರಣದ್ವಯಮಂ ೩೫

ಜಿನನಾಳ್ದಂ ಬಂಟನೆ ನಾಂ
ಜಿನಪತಿಗೆಂಬನಿತಱಿಂ ಶಿಳಾಪುತ್ರಂ ನೆ
ಟ್ಟನೆ ಮುಕ್ತನಾದನೆಂದೊಡೆ
ಜಿನಪತಿಗಾಳಾಗೆ ಮುಕ್ತಿಪದಮರಿದಾಯ್ತೇ ೩೬

ದೇವನನ್ನು ಆರಾಧಿಸಿದ ನಮಿವಿನಮಿಗಳಿಗೆ ಧರಣೇಂದ್ರನು ಬಂದು ಖೇಚರ ಪದವಿಯನ್ನು ಕೊಟ್ಟನೆಂದ ಮೇಲೆ ಪರಮ ಜಿನೇಶ್ವರನ ಹಿರಿಮೆ ಸಾಧಾರಣವಾದದ್ದೆ ? ೩೩. ದ್ರುಮಸೇನನು ಜಿನನಾಥನ ಪಾದಗಳನ್ನು ಮನಸ್ಸಿನಲ್ಲಿ ನಿಲ್ಲಿಸಿ ಕರ್ಮಗಳನ್ನು ಕಷ್ಟವಿಲ್ಲದೆ ಕೆಡಿಸಿ ಬಿಡುಗಡೆ ಪಡೆದನೆಂದರೆ ಪರಿಶುದ್ಧನಾದ ಜಿನನ ಆರಾಧಕನಿಗೆ ಮೋಕ್ಷ ಸಾಧನೆ ಕಷ್ಟವೆ ? ೩೪. ರಥನೇಮಿ ಜಿನರನ್ನೂ ಬಿಡದೆ ಮಹಾವ್ಯಸನಗಳಿಂದ ಕೂಡಿದ್ದರೂ ಮೋಕ್ಷವನ್ನು ಪಡೆದನು ಅಂದರೆ, ಕೇಳು ! ಜಿನರ ಪಾದಯುಗಳವನ್ನು ಬಲವಾಗಿ ಹಿಡಿದು ಆಶ್ರಯಿಸಿದವರಿಗೆ ವಿಪತ್ತು ಉಂಟೆ ? ೩೫. 'ಜಿನನೇ ಸ್ವಾಮಿ, ನಾನು ಸೇವಕ' ಎಂದು ಹೇಳಿದಷ್ಟರಿಂದಲೇ ಶಿಳಾಪುತ್ರನು ತಟ್ಟನೆ ಮೋಕ್ಷ ಪಡೆದನೆಂದರೆ, ನಿಜವಾಗಿಯೂ ಜಿನಸ್ವಾಮಿಗೆ ಸೇವಕನಾದವನಿಗೆ ಮುಕ್ತಿಪದವಿಯು ಅಸಾಧ್ಯವಾದೀತೆ? ಇಲ್ಲಿಯೋ (ಇಹ

ಇಲ್ಲಿಯೆ ಜೈನವ್ರತಮಂ
ಬಲ್ಲಿತುಪಿಡಿದಂಗೆ ಬಾಧೆಯಾಗದು ಬಿಟ್ಟಂ
ಗೆಲ್ಲಿಲ್ಲದ ಪೀಡೆಗಳುಂ
ನಿಲ್ಲದೆ ಬಂದಡಸುಗೆಲ್ಲರುಂ ಬಲ್ಲರಿದಂ ೩೭

ಗದ್ಯ॥ ಕೊರಳ ಶಕ್ತಿಯಿಲ್ಲದೊರಳಂ ನುಂಗುವೆನೆಂಬ, ಕಯ್ಯ ಶಕ್ತಿಯಿಲ್ಲದೆ ಕಳ್ಳನಂ ಪಿಡಿವೆನೆಂಬ, ತಲೆಯ ಶಕ್ತಿಯಿಲ್ಲದೆ ಪೆರ್ಗಲ್ಲಂ ಪೊಱುವೆನೆಂಬ, ಮೆಯ್ಯಶಕ್ತಿಯಿಲ್ಲದೆ ಬಲ್ಲೂಟಮನುಣ್ಬೆನೆಂಬ ನಿರ್ಬುದ್ಧಿಯಂತೆ, ವರುಷಮಱುದಿಂಗಳುಪವಾಸಂ ಮಾಳ್ಪ, ವರುಷಮಱುದಿಂಗಳೊಂದೆಡೆಯೊಳ್ ನಿಲ್ವ, ಬೇಡರ ಪಗೆವರ ಕ್ರೂರಮೃಗಂಗಳ ನಿಷ್ಠುರಮಪ್ಪ ಬಾಧೆಯಂ ಸೈರಿಸುವ, ಸಕಳ ಶ್ರುತಮುಮನಱಿವ, ಮುನ್ನಿನ ಮಹಾಪುರುಷರ್ಗೆ ಧ್ಯಾನಮೆರಡು ಗಳಿಗೆಯಿಂ ಮೇಲೆ ನಿಲ್ಲದೆಂದು "ಉತ್ತಮಸಂಹನನಸ್ಯೈಕಾಗ್ರಚಿಂತಾನಿರೋಧೋಧ್ಯಾನಮಂತರ್ಮುಹೂರ್ತಾತ್" ಎಂಬೀಸೂತ್ರಮಂ ಪೂರ್ವಾಚಾರ್ಯರ್ ನುಡಿದರದು ಕಾರಣದಿಂ ಬೇಳಾಗದೆ "ದರ್ಶನಶುದ್ಧತಾ ವಿನಯ ಸಂಪನ್ನತಾ ಶೀಲವ್ರತೇಷ್ವನತಿಚಾರಃ" ಎಂಬ ಜಿನೋದಿತಮಂ ನಂಬಿ ತಮ್ಮ ಗುಣಸ್ಥಾನಮನಱಿದು ಪ್ರಥಮಾನುಯೋಗದ ಕರಣಾನುಯೋಗದ ದ್ರವ್ಯಾನುಯೋಗದ ಪೇಟ್ದ ಕ್ರಮಮಂ ತಪ್ಪಲೀಯದೆ ಲೇಸಾಗಿ ಭಾವಿಸಿ, ಸಸಿ ಧಾನ್ಯದೊಳ್ ತೋಂಟಂ ಗಿಡುವಿನ ಫಲದೊಳ್ ಶಿಶು ಕುಮಾರತ್ವದೊಳ್

ಲೋಕದಲ್ಲಿಯೇ) ಜೈನವ್ರತವನ್ನು ದೃಢವಾಗಿ ಹಿಡಿದವನಿಗೆ ಏನೂ ಬಾಧೆಯಾಗುವುದಿಲ್ಲ. ಹಾಗೆ ಹಿಡಿಯದೆ ವ್ರತವನ್ನು ಬಿಟ್ಟವನಿಗೆ ಎಲ್ಲಿಲ್ಲದ ಪೀಡೆಗಳೂ ತಪ್ಪದೆ ಬಂದು ಹಿಡಿದುಕೊಳ್ಳುತ್ತವೆ. ಇದನ್ನು ಎಲ್ಲರೂ ಬಲ್ಲರು. ೩೭. ಕೊರಳಲ್ಲಿ ಶಕ್ತಿಯಿಲ್ಲದೆ ಬರಳನ್ನು ನುಂಗುವೆನೆನ್ನುವ, ಕೈಯಲ್ಲಿ ಬಲವಿಲ್ಲದೆ ಕಳ್ಳನನ್ನು ಹಿಡಿಯುತ್ತೇನೆನ್ನುವ, ತಲೆಯ ಬಲವಿಲ್ಲದೆ ದೊಡ್ಡಕಲ್ಲನ್ನು ಹೊರುತ್ತೇನೆನ್ನುವ, ದೇಹಸಾಮರ್ಥ್ಯವಿಲ್ಲದೆ ಬಲವಾದ ಊಟ (ಔತಣ)ವನ್ನು ಅರಗಿಸಿಕೊಳ್ಳುವೆನೆನ್ನುವ, ಬುದ್ಧಿಹೀನರಂತೆ, ವರುಷ, ಆರು ತಿಂಗಳು ಉಪವಾಸವನ್ನು ಮಾಡುವ, ವರುಷ, ಆರು ತಿಂಗಳು ಒಂದೇ ಕಡೆಯಲ್ಲಿ ನಿಲ್ಲುವ, ಬೇಡರು, ಶತ್ರುಗಳು, ಕ್ರೂರಮೃಗಗಳು, ಮಾಡುವ ಬಾಧೆಯನ್ನು ಸಹಿಸಿಕೊಳ್ಳುವ, ಸಮಸ್ತ ಶ್ರುತವನ್ನೂ ತಿಳಿಯುವ, ಹಿಂದಿನ ಮಹಾಪುರುಷರಿಗೆ ಧ್ಯಾನವೂ ಎರಡು ಗಳಿಗೆಗಳ ಮೇಲೆ ನಿಲ್ಲದೆಂದು, "ಉತ್ತಮ ಸಂಹನನ ಸ್ಯೈಕಾಗ್ರ ಚಿಂತಾನಿರೋಧೋ ಧ್ಯಾನ ಮಂತರ್ಮುಹೂರ್ತಾತ್" ಎಂಬ ಈ ಸೂತ್ರವನ್ನು ಪೂರ್ವಾಚಾರ್ಯರು ಹೇಳಿದರು, ಆ ಕಾರಣದಿಂದ ಭ್ರಾಂತಿಗೊಳ್ಳದೆ "ದರ್ಶನ ಶುದ್ಧತಾ ವಿನಯ ಸಂಪನ್ನತಾ ಶೀಲಾ ವ್ರತಗಳಲ್ಲಿ ತಪ್ಪದಿರುವಿಕೆ" ಎಂಬ ಜಿನೋಕ್ತವಾದ ಮಾತನ್ನು ನಂಬಿ ತಮ್ಮ ಗುಣಸ್ಥಾನವನ್ನು ತಿಳಿದುಕೊಂಡು ಮೊದಲನೆ ಅನುಯೋಗದ ಕರಣಾನುಯೋಗ, ದ್ರವ್ಯಾನುಯೋಗದಲ್ಲಿ ಹೇಳಿದ ಕ್ರಮವನ್ನು ತಪ್ಪಗೊಡದೆ ಚೆನ್ನಾಗಿ ಧ್ಯಾನಿಸಿ, ಸಸಿಯು ಧಾನ್ಯದಲ್ಲಿ ತೋಟ ಗಿಡದ ಫಲದಲ್ಲಿ, ಮಗು ಕುಮಾರತ್ವದಲ್ಲಿ, ಕಬ್ಬು ರಸದಲ್ಲಿ, ವೀರರು ವಿಜಯದಲ್ಲಿ,

ಕಬ್ಬು ರಸದೊಳ್ ವೀರರ್ ಗೆಲ್ಲದೊಳ್ ಪಾಲ್ ತುಪ್ಪದೊಳ್ ಕಾರ್ ಮಱಿಯೊಳ್ ಭೂಪರ್ ತೆಱಿಯೊಳ್ ಮಗಂ ಮುಪ್ಪಿನೊಳ್ ಪೆಂಡತಿ ಕುತ್ತದೊಳ್ ಫಲವಂ ತೋರ್ಪಂತೆ, ಮುನ್ನಮ ಧ್ಯಾತ್ಮಂ ಮೊದಲಾದ ಜೈನಾಗಮಮನಱಿದು ಆತ್ಮತತ್ವಫಲಮಂ ನಿರ್ವೃತಿಯ ಫಲಮುಮನ ಯ್ದುವ ಶ್ರಾವಕಂಗೆ ದಾನಾದಿ ಧರ್ಮಂ ಋಷಿಯರ್ಗೆ ಕ್ಷಮೆ ಮೊದಲಾದ ದಶಧರ್ಮವಿವ ಱೊಳ್ ಶಕ್ತಿಗೆ ತಕ್ಕಂತು ನೆಗಱ್ದು ಕಡೆಯೊಳೆಲ್ಲಮಂ ತೊಱೆವುದಧ್ಯಾತ್ಮದ ಫಲಮಿನಿತಲ್ಲದೆ ತಳಾ ಱನ ಮನೆಯಂ ಕಳ್ಳಂ ಪೊಕ್ಕನೆಂಬ ಮಾಸಾಳು ಕುತ್ತನೆಂಬ ನೀರುರಿದುದೆಂಬ ಸೊಬಗೆಗೆ ಸವತಿ ಯಾದಳೆಂಬ ಜೋಯಿಸನ ಮಗಳ್ ಪಸೆಯಮೇಲೆ ರಂಡೆಯಾದಳೆಂಬ ಸಕುನಿಗನುಟ್ಟುದಂ ಕೊಟ್ಟ ನೆಂಬ ಕಲಿ ಬಡಿವೆತ್ತನೆಂಬ ಕಷ್ಟತಿಕ್ಕೆಯಂ ಮಾಡಿ ಪೆಱರ್ ತತ್ವಮನೆನ್ನಂತಾರಱಿಯರೆಂದು ಪೊಟ್ಟೇ ಱಿಸಿ ತನ್ನ ಶಕ್ತಿಯುಮಂ ಮತಿಯುಮನೊಂದುಮನಱಿಯದೆ ಶುದ್ಧಾಚಾರಮಂ ಬಿಟ್ಟು ವಜ್ರ ವೃಷಭ ನಾರಾಚ ಸಂಹನನದವರಂ ನೋಡಿ ತಾನುಂ ಷಡಾವಶ್ಯಕಕ್ರಿಯೆಗಳಂ ಪರಿಹರಿಸಿ ಮೆಚ್ಚಿ ದಂತೆ ನೆಗಟ್ದು ಜಿನರನಗಲ್ದು ಮುಕ್ತಿವಡೆವೆನೆಂಬುದು ಸೊಡರುಮಾದಿತ್ಯನುಂ ಚಂದ್ರನುಮಿಲ್ಲದೆ ಕಾಣ್ಬೆನೆಂಬ, ಕಿರ್ಚಿಲ್ಲದೆ ಸೊಡರಂ ಪೊತ್ತಿಸುವೆನೆಂಬ ಬೆಳ್ತನಮಕ್ಕುಮದಱಿಂ ಕ್ಷೀಣಕಷಾಯ ರಾಗದನ್ನೆವರಮಿತ್ತಣವರ್ಗೆಲ್ಲಂ ಜಿನೇಂದ್ರಪದಮೆಂಬ ಬಟ್ಟೆಯಂ ಪೊರ್ದದೆ ಜಿನೇಂದ್ರ ಭಕ್ತಿ

ಹಾಲು ತುಪ್ಪದಲ್ಲಿ, ಕಾರ್ಗಾಲ ಮಳೆಯಲ್ಲಿ, ರಾಜರು ತೆರಿಗೆಯಲ್ಲಿ, ಮಗ ಮುಪ್ಪಿನಲ್ಲಿ, ಫಲವನ್ನು ತೋರುವಂತೆ ಮೊದಲು ಆಧ್ಯಾತ್ಮ ಮೊದಲಾದ ಜೈನಾಗಮವನ್ನು ತಿಳಿದುಕೊಂಡು ಆತ್ಮ ತತ್ವದ ಫಲವನ್ನೂ ನಿರ್ವೃತಿಯ ಫಲವನ್ನೂ ಹೊಂದುವ ಶ್ರಾವಕನಿಗೆ ದಾನವೇ ಮೊದಲಾದ ಧರ್ಮವೂ, ಋಷಿಗಳಿಗೆ ಕ್ಷಮೆಯೇ ಮೊದಲಾದ ದಶಧರ್ಮಗಳೂ ಇವುಗಳಲ್ಲಿ ಶಕ್ತಿಗೆ ತಕ್ಕ ಹಾಗೆ ಆಚರಿಸಿ ಕೊನೆಯಲ್ಲಿ ಎಲ್ಲವನ್ನೂ ತ್ಯಜಿಸುವುದು. ಅಧ್ಯಾತ್ಮದ ಫಲವು ಇಷ್ಟಲ್ಲದೆ, ತಳವಾರನ ಮನೆಗೆ ಕಳ್ಳಹೊಕ್ಕನೆಂಬ, ಸಾಹಸದ ವೀರನು ರೋಗಿಯೆಂಬ, ನೀರು ಉರಿಯಿತೆನ್ನುವ, ಸುಂದರಿಗೆ ಸವತಿಯಾದಳೆಂಬ, ಜೋಯಿಸನ ಮಗಳು ಹಸೆಯ ಮೇಲೆಯೇ ವಿಧವೆಯಾದಳೆನ್ನುವ, ಶಕುನಜ್ಞನು ಉಟ್ಟ ಬಟ್ಟೆಯನ್ನೇ ಕೊಟ್ಟನೆನ್ನುವ, ಶೂರನು ಪೆಟ್ಟುತಿಂದನೆಂಬ ಅಲ್ಪತನವನ್ನು ಮಾಡಿ ಇತರರು ನನ್ನ ಹಾಗೆ ಯಾರೂ ತತ್ವವನ್ನು ತಿಳಿಯರೆಂದು ಗರ್ವಪಟ್ಟು, ತನ್ನ ಶಕ್ತಿಯನ್ನೂ ಬುದ್ಧಿಯನ್ನೂ ಒಂದನ್ನೂ ತಿಳಿಯದೆ ಶುದ್ಧವಾದ ಆಚಾರವನ್ನು ಬಿಟ್ಟು ವಜ್ರ, ವೃಷಭ, ನಾರಾಚ ಸಂಹನನದವರನ್ನು ನೋಡಿ ತಾನೂ ಆರು ಆವಶ್ಯಕ ಕ್ರಿಯೆಗಳನ್ನು ಬಿಟ್ಟು ಜಿನರನ್ನು ಬಿಟ್ಟು ಇಷ್ಟ ಬಂದಂತೆ ನಡೆದು ಮೋಕ್ಷವನ್ನು ಪಡೆಯುವೆನೆನ್ನುವುದು, ಸೂರ್ಯಚಂದ್ರರೂ ದೀಪವೂ ಇಲ್ಲದೆ ಕಾಣುವೆನೆಂಬ, ಬೆಂಕಿಯಿಲ್ಲದೆ ದೀಪವನ್ನು ಹೊತ್ತಿಸುವೆನೆನ್ನುವ ಬೆಪ್ಪುತನವಾಗುತ್ತದೆ. ಆದ್ದರಿಂದ ಕಷಾಯಗಳನ್ನು ಕಳೆದುಕೊಳ್ಳದೆ ಇರುವತನಕ ಇತ್ತಕಡೆಯವರಿಗೆಲ್ಲ ಜಿನೇಂದ್ರಪಾದವೆಂಬ ದಾರಿಯನ್ನು ಸೇರದೆ, ಜಿನೇಂದ್ರಭಕ್ತಿಯೆಂಬ ಕುದುರೆಯನ್ನು ಏರದೆ, ಜಿನೇಂದ್ರಾರಾಧನೆ ಯೆಂಬ

ಯೆಂಬ ಕುದುರೆಯನೇಱದೆ, ಜಿನೇಂದ್ರಾರಾಧನೆಯೆಂಬ ಪೊಲಂಬಿಗನಿಲ್ಲದೆ ಜಿನೇಂದ್ರನಮಸ್ಕಾರ ಮೆಂಬ ನೆರವಂ ಪಾರದೆ ಜಿನೇಂದ್ರಾಲೋಕನಾನಂದಮೆಂಬ ಸಂಬಳಮಿಲ್ಲದೆ ನಿರ್ವಾಣಪುರಕ್ಕೆ ಪೋಗಲ್ಬಾರದೆಂದು ಜಿನಾಗಮದಿಷ್ಟದಿಂ ತತ್ವಮಂ ಮನದೊಳವಧಾರಿಸಿ ೩೮

ಜಿನನೆ ಗುರು ಜಿನನೆ ದೈವಂ
ಜಿನನೆ ಕುಲಸ್ವಾಮಿ ಜಿನನೆ ನಂಬಿರ್ದಾಳ್ವಂ
ತನಗೆಂಬ ಪೆರ್ಚಿನಿಂ ನೆ
ಟ್ಟನೆ ನಲಿದಂ ಸುಕವಿನಿಕರಪಿಕಮಾಕಂದಂ ೩೯

ಮನದೊಳ್ ಜಱಿಯದೆ ಬೆರ್ಚದೆ
ಮುನಿಯದೆಸೆಡೆಯದೆ ನಿಳಿಂಪನಗನಿಭಧೈರ್ಯಂ
ತನುವಿನ ಮೇಲಣ ಮೋಹಂ
ತನಗಿಲ್ಲದೆ ತಳರದಿರ್ದನುನ್ನತಚಿತ್ತಂ ೪೦

ಗದ್ಯ॥ ಅಂತು ಚಿತ್ತದೊಳಳ್ಕದೆ ಜಿನಾಗಮಮಂ ಭಾವಿಸುತ್ತುಮಿರ್ಪುದುಂ ಪೆಗಲೆಲ್ಲಂ ಬೆಂದು ತೋಳವೊದಲಂ ಕಿರ್ಚಳುರ್ವಾಗಳ್ ನರವುಗಳ್ ತೆಗೆದು ತೋಳ್ ತನಗೆ ತಾನೆ ನೆಗೆವುದುಂ, ವಿಡಂಬಂ ಸೊಡರಂ ಕಂಡ ಕೋಡಗದಂತೆ ಬೆಬ್ಬಳಿಸಿ ಕಾಡೆರ್ದುದೆಂದು ಬೆರ್ಚಿ ಬೆಗಡುಗೊಂಡು, ತಾಂ ಮಂತ್ರವ್ಯಾಕರಣಮನಱಿಯನಪ್ಪುದಱಿಂ ಮಂತ್ರದೊಳಾದ ಹೀನಾಧಿಕಮನಱಿಯದೆ ಮತಿಗೆಟ್ಟು ೪೧

ಮಾರ್ಗದರ್ಶಕನಿಲ್ಲದೆ ಜಿನೇಂದ್ರನಮಸ್ಕಾರವೆಂಬ ಸಹಾಯವನ್ನು ನಿರೀಕ್ಷಿಸದೆ, ಜಿನೇಂದ್ರಾಲೋಕನ (ಜಿನದರ್ಶನ)ದ ಆನಂದವೆಂಬ ಸಂಬಳ (ದಾರಿಯ ಬುತ್ತಿ) ವಿಲ್ಲದೆ, ಮೋಕ್ಷ ನಗರಕ್ಕೆ ಹೋಗಲು ಸಾಧ್ಯವಾಗುವುದಿಲ್ಲವೆಂದು ಜಿನಾಗಮದ ಇಷ್ಟದಂತೆ ತತ್ವವನ್ನು ಮನಸ್ಸಿನಲ್ಲಿ ಧ್ಯಾನಿಸಿ ೩೮. ತನಗೆ ಜಿನನೇ ಗುರು, ಜಿನನೇ ದೇವರು, ಜಿನನೇ ಕುಲಸ್ವಾಮಿ ಜಿನನೇ ನಂಬಿದ ಒಡೆಯ, ಎಂಬ ಹೆಮ್ಮೆಯಿಂದ ಸುಕವಿನಿಕರಪಿಕಮಾಕಂದ (ಜಿನಪಾಲಿತ ಮುನಿ) ಹರ್ಷಪಟ್ಟನು. ಮನಸ್ಸಿನಲ್ಲಿ ಅಂಜದೆ, ಸಿಟ್ಟಾಗದೆ, ನಿರಾಶನಾಗದೆ ಮಂದರ ಧೈರ್ಯನಾದ ಮುನಿಯು ದೇಹದ ಮೇಲಿನ ಮೋಹವು ತನಗೆ ಇಲ್ಲದೆ ಹೋದುದರಿಂದ ಆ ಉನ್ನತಚಿತ್ತನು ಅಲ್ಲಾಡದೆ ಇದ್ದನು. ೪೦. ಹಾಗೆ ಚಿತ್ತದಲ್ಲಿ ಹೆದರದೆ ಜಿನಾಗಮವನ್ನು ಧ್ಯಾನಿಸುತ್ತ ಇರಲಾಗಿ ಅವನ ಹೆಗಲೆಲ್ಲ ಸುಟ್ಟು ತೋಳಿನ ಬುಡವನ್ನು ಬೆಂಕಿ ವ್ಯಾಪಿಸಲು ನರಗಳು ಕಿತ್ತು ತೋಳು ತನ್ನಷ್ಟಕ್ಕೆ ತಾನೇ ನೆಗೆಯಿತು ! ಆಗ, ವಿಡಂಬನು ದೀಪವನ್ನು ನೋಡಿದ ಕೋತಿಯ ಹಾಗೆ ಗಾಬರಿಗೊಂಡು 'ಕಾಡು ಎದ್ದಿತು' ಎಂದು ಭಯಪಟ್ಟು ಬೆಗಡುಗೊಂಡು ತಾನು ಮಂತ್ರ ವ್ಯಾಕರಣವನ್ನು ಅರಿತವನಲ್ಲವಾದ್ದರಿಂದ ಮಂತ್ರದಲ್ಲಿ ಆದ ಹೆಚ್ಚು ಕಡಿಮೆಗಳು ತಿಳಿಯದೆ ಮತಿಹೀನನಾದನು ೪೧. ಆ ಶ್ಮಶಾನದಲ್ಲಿ

ಮರನುಂ ಗಿಡುವುಂ ಪೊದರುಂ
ತರತರದಿಂದಿರ್ದ ತರುನಿಕಾಯಮುಮೆರ್ದು
ಬ್ಬರವಾಗೆ ಬಂದು ತನ್ನಂ
ಸೆರಗಿಲ್ಲದೆ ನುಂಗುವಂತೆ ತೋರ್ಪುದುಮಾಗಳ್ ೪೨

ಗದ್ಯ॥ ಕೆಟ್ಟೆನೆಂದು ಬಾಯ್ಬಿಟ್ಟು ತಡವರಿಸಿ ಪೆಱಗಣ್ಗೆ ಬಿರ್ದಟ್ಟುದುಮಂ ಸುರಗಿಯುಮ ನೀಡಾಡಿ ಮೆಯ್ಯಱಿಯದೆ ಕೊಳ್ಪಟ್ಟರಂತೆ ಬತ್ತಲೆ ಕರುಳ್ ಪಱಿವಿನಮೋಡುವುದುಂ ಜಿನಪಾಲಿತ ಮುನಿನಾಥಂ ಪಾಪಭೀರುವಪ್ಪುದಱಿಂದಾತನ ಪಾದಘಟ್ಟನೆಯಿಂ ತ್ರಸಸ್ಥಾವರ ಜೀವಂಗಳ್ಗೆ ಬಾಧೆಯಾಗದೆ ಮಾಣದಕ್ಕಟಾ ಪೊಲ್ಲದಾಯ್ತೆಂದು ಕಾರುಣ್ಯಹೃದಯನಾಗಿರ್ಪುದುಂ, ವನದೇವತೆಯರುಂ ನಗರದೇವತೆಯರುಂ ನೆರೆದು, ವಿಡಂಬನ ಡೋಂಬಾಟಕ್ಕಂ ಸಮ್ಯಕ್ತ್ವಚೂಡಾಮಣಿಯ ಧೈರ್ಯಕ್ಕಂ ಮನದೊಳಾದ ಜೀವದಯೆಗಂ ವಿಸ್ಮಯಂಬಟ್ಟು ಜಯ ಜಯನಿನಾದಮುಂ ದೇವದುಂದುಭಿಯು ಮೊಡನೊಡನೆ ಸಮುದ್ರದಂತೆ ಘೂರ್ಣಿಸೆ ಮೆಯ್ಯಱಿಯದೆ ರಾಗದಿಂ ಬಂದು ನಮೇರು ಮಂದಾರ ಪಾರಿಜಾತ ಕಲ್ಪವೃಕ್ಷದರಲ್ಗಳಂ ಮುನಿಪುಂಗವನ ಮೇಲೆ ಸುರಿದು ಕರಕಮಲಂಗಳಂ ಮುಗಿದು ೪೩

ನಾನಾ ರೀತಿಯಾಗಿದ್ದ ಮರಗಿಡಗಳೂ, ಪೊದೆಗಳೂ, ಇತರ ತರು ಸಮೂಹವೂ ರಭಸದಿಂದ ಎದ್ದು ಬಂದು ತನ್ನನ್ನು ದಯೆಯಿಲ್ಲದೆ ನುಂಗುವಂತೆ ತೋರಿತು ೪೨. ಆಗ ಅವನು 'ಕೆಟ್ಟೆ' ಎಂದು ಗಟ್ಟಿಯಾಗಿ ಕೂಗಿಕೊಂಡು ಕತ್ತಲಲ್ಲಿ ತಡವರಿಸಿಕೊಂಡು ಹಿಮ್ಮೆಟ್ಟಿ, ಮಾಡಿದ್ದ ಅಡಿಗನ್ನೂ ಕತ್ತಿಯನ್ನೂ ಅಲ್ಲಿಯೇ ಬಿಸಾಟು, ಮೈಮೇಲೆ ಎಚ್ಚರವಿಲ್ಲದವನಂತೆ, ಸೂರೆ ಹೋದವರಂತೆ, ಬತ್ತಲೆಯಾಗಿ ಕರುಳು ಹರಿಯುವಂತೆ ಓಡಿದನು. ಜಿನಪಾಲಿತ ಮುನಿನಾಥನು ಪಾಪಕ್ಕೆ ಭಯಪಡುವವನಾದ್ದರಿಂದ ಆ ವಿಡಂಬನ ಕಾಲುತುಳಿತದಿಂದ ಚರಸ್ಥಿರ ಜೀವಿಗಳಿಗೆ ಕಷ್ಟವಾಗದೆ ಹೋಗುವುದಿಲ್ಲ. ಅಯ್ಯೋ! ಕೆಟ್ಟದ್ದಾಯಿತು ಎಂದು ಕರುಣಾ ಹೃದಯನಾಗಿದ್ದನು. ಆಗ ವನದೇವತೆಯರೂ ನಗರದೇವತೆಯರೂ ಸೇರಿ ವಿಡಂಬನ ಡೊಂಬಾಟಕ್ಕೂ ಸಮ್ಯಕ್ತ್ವ ಚೂಡಾಮಣಿಯಾದ ಜಿನಪಾಲಿತ ಮುನಿಯ ಧೈರ್ಯ, ಜೀವದಯೆಗೂ ಆಶ್ಚರ್ಯಪಟ್ಟು ಜಯ ಜಯಕಾರಗಳನ್ನು ಮಾಡುತ್ತ ದೇವದುಂದುಭಿಗಳು ಒಟ್ಟೊಟ್ಟಿಗೆ ಸಮುದ್ರದಂತೆ ಗರ್ಜಿಸುತ್ತಿರಲು ಪರವಶರಾಗಿ ಪ್ರೇಮದಿಂದ ಬಂದು ನಮೇರು ಮಂದಾರ ಪಾರಿಜಾತ ಕಲ್ಪವೃಕ್ಷದ ಹೂವುಗಳನ್ನು ಮುನಿಶ್ರೇಷ್ಠನ ಮೇಲೆ ಸುರಿದು ಕರಕಮಲಗಳನ್ನು ಜೋಡಿಸಿದರು. ೪೩.
"ಈ ಮುನಿಶ್ರೇಷ್ಠನ ಹಾಗೆ ಮನಸ್ಸಿನಲ್ಲಿ ಸ್ವಲ್ಪವೂ ಅಳುಕದೆ ನಿಂತ ಧೀರರು ಯಾರು?

ಈ ಮುನಿನಾಥನಂತೆ ಮನದೊಳ್ ಕರಮಳ್ಕದೆ ನಿುದ ಧೀರರಾ
ರೀ ಮುನಿವಂದ್ಯನಂತೆ ತನುವಂ ತೊಱೆದಳ್ಕದೆ ನಿಲ್ವ ಧೀರರಾ
ರೀ ಮುನಿರಾಜನಂತೆ ಜಿನತತ್ವದೊಳುನ್ನತನಾದನಾವನಿ
ನ್ನೀ ಮುನಿಪೂಜ್ಯನಂತೆ ದೃಢರಾರೊ ಮನಸ್ವಿಗಳಾರೊ ಲೋಕದೊಳ್ ೪೪

ತನ್ನಳವಂ ವಿಚಾರಿಸದೆ ನೋಡದೆ ಕೆಮ್ಮನೆ ತನ್ನ ವೀರಮಂ
ಕಿನ್ನರ ಭೂತ ಕಿಂಪುರುಷ ದೈತ್ಯನಿವಾಸಮನೆಯ್ದಿ ಡೊಂಬಿನಿಂ
ದುನ್ನತಚಿತ್ತನಂ ಪೆಣನೆಗೆತ್ತು ಬಿಳಂ ಪಿರಿದಪ್ಪುರ್ಚಿನಿಂ
ದನ್ನೆಱೆಸುಟ್ಟೊಡಂ ಮನದೊಳಳ್ಕದೆ ಬಳ್ಕದೆ ಮಂದರಕ್ಷಮಂ ೪೫

ಮುನಿನಾಥನ ನಿಡುದೋಳ್ನೆಗೆ
ದನಿತಱೊಳೋಡಾಗಿ ಸಾಧಕಂ ಭಯದಿಂ ಭೋಂ
ಕೆನೆ ಕೆಟ್ಟೆನೆಂದೊಡೀ ಪಿತೃ
ವನಮಂ ಪುಗುವಂಗೆ ಮುತ್ತಮೇಂಟೆರ್ದೆಯೊಳವೇ ೪೬

ತನುವಂ ಧನಮಂ ತೊಱೆದಿರ
ಲನುಪಮರೆನಿಸಿರ್ದ ಜೈನಯೋಗಿಗಮಭಿಮಾ
ನನಿಧಾನರಪ್ಪುಪಾಸಕ
ಜನಕ್ಕಮಳವಡುಗುಮುೞಿದವರ್ಗದು ಪೊಗ್ಗೇ ೪೭

ಈ ಮುನಿವಂದ್ಯನ ಹಾಗೆ ದೇಹದ ಅಭಿಮಾನವನ್ನು ತ್ಯಜಿಸಿ ಭಯಪಡದೆ ನಿಲ್ಲುವ ಧೈರ್ಯಶಾಲಿಗಳು ಯಾರು ? ಈ ಮುನಿರಾಜನ ಹಾಗೆ ಜಿನತತ್ವದಲ್ಲಿ ಶ್ರೇಷ್ಠರಾದವರು ಯಾರು? ಲೋಕದಲ್ಲಿ ಈ ಮುನಿಪೂಜ್ಯನ ಹಾಗೆ ದೃಢಚಿತ್ತರೂ, ಮನಸ್ವಿಗಳೂ ಯಾರಿದ್ದಾರೆ !" ೪೪. ಆ ವಿಡಂಬನು ತನ್ನ ಶಕ್ತಿಯನ್ನು ಕುರಿತು ಯೋಚಿಸದೆ, ತನ್ನ ವೀರತನವನ್ನು ನೋಡಿಕೊಳ್ಳದೆ ವೃಥಾ ಈ ಕಿನ್ನರ ಕಿಂಪುರುಷ ದೈತ್ಯನಿವಾಸವನ್ನು ಸೇರಿ ಡಾಂಭಿಕತೆಯಿಂದ, ಈ ಉನ್ನತಚಿತ್ತನಾದ ಮುನಿಯನ್ನು ಹೆಣವೆಂದೇ ಭಾವಿಸಿ ಹೆಚ್ಚಿನ ಬೆಂಕಿಯಿಂದ ವಿಶೇಷವಾಗಿ ಸುಟ್ಟರೂ ಮನಸ್ಸಿನಲ್ಲಿ ಹೆದರದೆ, ನಡುಗದೆ ಮಂದರ ಧೈರ್ಯನು ತಾಳಿಕೊಂಡನು. ೪೫. ಮುನಿನಾಥನ ಉದ್ದವಾದ ತೋಳು ಮೇಲಕ್ಕೆ ನೆಗೆದಷ್ಟರಿಂದಲೇ ಅಂಜುಬುರುಕನಾಗಿ ಆ ಸಾಧಕನು ಭಯದಿಂದ ಭೋರೆಂದು ಕೂಗಿಕೊಳ್ಳುತ್ತ ಓಡಿಹೋದನು. ಈ ಶ್ಮಶಾನವನ್ನು ಪ್ರವೇಶಿಸುವವನಿಗೇನು ಎಂಟು ಎದೆಗಳಿರುವುವೆ ? ೪೬. ದೇಹವನ್ನೂ ಧನವನ್ನೂ ತೊರೆದು ಅದರಲ್ಲಿ ಆಸಕ್ತಿಯಿಲ್ಲದವನಾಗಿರಲು ಜೈನಯೋಗಿಗೆ, ಅಭಿಮಾನದ ನಿಧಾನರಂತಿರುವ ಉಪಾಸಕ ಜನಕ್ಕೆ ಸಾಧ್ಯವಾಗುವುದೇ ಹೊರತು ಅದು ಬೇರೆಯವರಿಗೆ ಸುಲಭಸಾಧ್ಯವೆ ? ೪೭. ದೇಹಧ

ತನುವಿನ ಮೋಹಮಂ ಬಿಸುಟು ಪೆಂಡಿರ ಮಕ್ಕಳ ಪೊನ್ನ ಮೋಹದಿಂ
ಮನಮುಂಬಿಟ್ಟು ಮೆಯ್ಸುಖಮನೊಲ್ಲದೆ ಬರ್ಪ ಪರೀಷಹಂಗಳಂ
ಘನತರಮಾಗೆ ತಾಳ್ದಿ ಪರಮಂ ನೆಱೆ ಸಾಧಿಸಲಯ್ಯ ಭಾಪು ಭಾ
ಪನುಪಮ ಜೈನಯೋಗಿಗಳೆ ಬಲ್ಲರಿಳಾತಳದೊಳ್ ನಿರಂತರಂ ೪೮

ಮನೆಯ ಕುಟುಂಬಮಂ ಪೊರೆಯಲೆಂದೆಡೆಯಾಡಿ ಪಲಂಬರಲ್ಲಿಗೊ
ಯ್ಯನೆ ಸುರರಾಯುಮಕ್ಕೆ ಸಿರಿಯಕ್ಕೆ ಮಹಾಸುಖಮಕ್ಕೆ ಮಕ್ಕಳ
ಕ್ಕೆನುತುಮಭೀಷ್ಟಮಂ ಉಸಿದು ಪಲ್ದಿಱಿದಕ್ಕಟಬೇಡಿ ಬಾಳ್ವ ದು
ರ್ಜನತತಿ ಪೇಟ ಪೆತ್ತಪರೆ ಜೈನರವೊಲ್ ಸುರರಾಜಸೌಖ್ಯಮಂ ೪೯

ಪರಿಯದೆ ವಾರವಾಳಿಯುಣಸಿಂಗೆ ಸಮರ್ಥರನಾಸೆವಟ್ಟು ಬಂ
ದೆರೆಯದೆ ದೈನ್ಯವೃತ್ತಿಗೊಳಗಾಗದೆ ಸಂಸೃತಿವಾರ್ಧಿಯಲ್ಲಿ ಬಿ
ದ್ದುರುಳದೆ ವೀರವೃತ್ತಿಯನೆ ಪಾಟಿಸಿ ಮೋಕ್ಷಸುಖಕ್ಕೆ ಚಿತ್ತಮಂ
ತಿರಿಪುತುಮಿರ್ದ ಜೈನಮುನಿಪುಂಗವರಿಂ ಮಿಗಿಲಾರೊ ಲೋಕದೊಳ್ ೫೦

ಗದ್ಯ॥ ಎಂದು ಪಲತೆಱದಿಂ ಪೊಗೞ್ವದೇವನಿಕಾಯದ ಕಳಕಳಮಂ ಪೊಯ್ವಪಂಚಮಹಾಶಬ್ದ ಪ್ರಘೋಷಮಂ ಪುರದವರೆಲ್ಲಂ ಕೇಳ್ದು ವಿಸ್ಮಯಂಬಡುತಿರ್ದರನ್ನೆಗಂ ೫೧

ಮೇಲಿನ ಮೋಹವನ್ನು ಬಿಟ್ಟು ಹೆಂಡಿರು, ಮಕ್ಕಳು, ಚಿನ್ನ—ಇವುಗಳ ಮೇಲಿನ ಮೋಹದಿಂದ ಮನಸ್ಸನ್ನು ಬಿಡಿಸಿ ದೇಹ ಸುಖವನ್ನು ಅಪೇಕ್ಷಿಸದೆ, ಬರುವ ಪರೀಷಹಗಳನ್ನು ಬಹಳ ಗಾಂಭೀರ್ಯದಿಂದ ಸಹಿಸಿಕೊಂಡು ಪರಲೋಕದ ಸದ್ಗತಿಯನ್ನು ಸಂಪೂರ್ಣವಾಗಿ ಸಾಧಿಸುವುದಕ್ಕೆ ಅನುಪಮರಾದ ಜೈನ ಯೋಗಿಗಳೇ ಬಲ್ಲರು. ಲೋಕದಲ್ಲಿ ಅನ್ಯರಿಗೆ ಅದು ಸಾಧ್ಯವಲ್ಲ. ೪೮. ಮನೆಯಲ್ಲಿನ ಸಂಸಾರವನ್ನು ಕಾಪಾಡುವುದಕ್ಕೆಂದು ಓಡಾಡಿ ಹಲಬರಲ್ಲಿಗೆ ಹೋಗಿ ಅವರಿಗೆ "ಸುರರ ಆಯುಷ್ಯವಾಗಲಿ, ಮಹಾ ಸುಖ ಲಭಿಸಲಿ, ಮಕ್ಕಳಾಗಲಿ" ಎನ್ನುತ್ತ ಅವರ ಅಭೀಷ್ಟಗಳನ್ನು ನುಡಿದು ಹಲ್ಲುಕಿರಿದು ಬೇಡಿಕೊಂಡು ಜೀವಿಸುವ ದುರ್ಜನ ಸಮೂಹವು ಜೈನರ ಹಾಗೆ ದೇವೇಂದ್ರ ಸೌಖ್ಯವನ್ನು ಎಂದಿಗಾದರೂ ಪಡೆಯುವರೆ ? ೪೯. ವಾರ, ವಾಳಿ ಮೊದಲಾದ ಸಮಯಗಳಲ್ಲಿ ದೊರೆಯುವ ಊಟಗಳಿಗೋಸ್ಕರ ಓಡದೆ, ಶ್ರೀಮಂತರಲ್ಲಿಗೆ ಹೋಗಿ ಆಸೆಪಟ್ಟು ಬೇಡದೆ, ದೈನ್ಯದ ಬದುಕಿಗೆ ಬೀಳದೆ, ಸಂಸಾರ ಸಮುದ್ರದಲ್ಲಿ ಬಿದ್ದು ಉರುಳದೆ, ವೀರ ಜೀವನವನ್ನೇ ನಡೆಸಿ ಮೋಕ್ಷಸುಖಕ್ಕೆ ಚಿತ್ತವನ್ನು ತಿರುಗಿಸುತ್ತ ಇರುವ ಜೈನಮುನಿ ಶ್ರೇಷ್ಠರಿಗಿಂತ ಮಿಗಿಲಾದವರು ಈ ಲೋಕದಲ್ಲಿ ಯಾರಿದ್ದಾರೆ ? ೫೦. ಎಂದು ಹಲವು ರೀತಿಗಳಿಂದ ಹೊಗಳುವ ದೇವಸಮೂಹದ ಕಳಕಳ ಶಬ್ದವನ್ನೂ ಬಾರಿಸುತ್ತಿದ್ದ ಪಂಚ ಮಹಾ ಶಬ್ದಗಳ ಬಲವಾದ ಘೋಷವನ್ನೂ ಊರಿನವರೆಲ್ಲ ಕೇಳಿ ಆಶ್ಚರ್ಯಪಡುತ್ತಿದ್ದರು. ೫೧. ಆ ವೇಳೆಗೆ ಮನ್ಮಥನೆಂಬ ಆನೆಗೆ ಸಿಂಹದಂಥವನು, ಜಿನಾಗಮದ

ಮನಸಿಜನಾಗಕೇಸರಿ ಜಿನಾಗಮದೊಳೆಸೆಯಿಸಿದ್ರಿಯಂತೆ ನಿಂ
ದನುಪಮಚಿತ್ತನಂ ಗುಣಕರಂಡನನುಜ್ವಳ ಕೀರ್ತಿಕಾಂತನಂ
ಮುನಿಜನವಂದ್ಯನಂ ತಡೆಯದೀಗಳೆ ನೋಡುವೆನೆಂಬ ಮಾಟ್ಕೆಯಿಂ
ದಿನಕರನೇಱಿದಂ ದಿವಿಜರಾಜದಿಶಾವರಧಾರಿಣೀಧ್ರಮಂ ೫೨

ಗದ್ಯ॥ ಅಂತಾದಿತ್ಯಂ ಪೂರ್ವಾಚಲ ಶಿಖರಶೇಖರನಪ್ಪುದುಂ ಯೋಗಮಂ ನಿರ್ವರ್ತಿಸಿ ತಡೆಯದಲ್ಲಿಂದೆರ್ದುಬರ್ಪುದುಂ ತನ್ಮುನಿನಾಥನಂ ಜಿನದತ್ತಂ ಕಂಡು ಮನದಾದರದಿಂ ವಂದಿಸಿ ತಮ್ಮ ಮನೆಗೆ ಒಡಗೊಂಡು ಬಂದು ದೇಹಾರದೊಳಿರಿಸಿ ೫೩

ಅಲ್ಲಿಗೆ ದಿವ್ಯೌಷಧಮಂ
ಬಲ್ಲವರಂ ತರಿಸಿ ವೈಶ್ಯತಿಲಕಂ ಮುಂದಿ
ರ್ದಲ್ಲಿಂದಗಲದೆ ಬೀಯ
ಕ್ಕಳ್ಳಕದೆ ಕೊಟ್ಟು ಪೊಂಗಳಂ ಪ್ರಿಯದಿಂದಂ ೫೪

ಗದ್ಯ॥ ಮತ್ತಂ ತಾನೆ ಕೆಲದೊಳಿರ್ದು ಪಥ್ಯಪಾನಂಗಳಂ ಪ್ರಯತ್ನದಿಂ ಮಾಡಿ ನಿರ್ದಯನಂತೆ ನಿಷ್ಕರುಣಿಯಾಗದೆ ಪಾವಂ ಪಿಡಿದವರಂತೆ ದೂರದೊಳಿರದೆ, ಕುವಿಟರೊಳ್ ಕೂಡಿದ ಸೂಳೆಯಂತೆ ಮೊಗಂದಿರುಪದೆ ಮನೆಯ ಗಂಡನಂ ಕಂಡ ಪಾದರಿಗಗಂಡನಂತೋಸರಿಸದೆ, ಜೀವಿತಂ

ಕ್ರಮವನ್ನು ಬೆಟ್ಟದಂತೆ ಅಚಲನಾಗಿ ನಿಂತು ಧ್ಯಾನಿಸಿದ ಅನುಪಮಚಿತ್ತನೂ ಗುಣಗಳ ಭರಣಿಯಂತಿದ್ದವನೂ ಕೀರ್ತಿಕಾಂತನೂ, ಮುನಿ ಜನರವಂದನೆಗೆ ಅರ್ಹನೂ ಆದ ಆ ಮುನಿಯನ್ನು ಈಗಲೇ ನೋಡಬೇಕೆಂಬ ಆತುರದಿಂದಲೋ ಎಂಬಂತೆ ಸೂರ್ಯನು ಉದಯಾಚಲ ಶಿಖರವನ್ನು ಏರಿಬಂದನು (ಬೆಳಗಾಯಿತು) ೫೨. ಹಾಗೆ ಆದಿತ್ಯನು ಉದಯ ಪರ್ವತದ ಶಿಖರವನ್ನೇರಲು, ತನ್ನ ಶಪಥ ತೀರಿ ಜಿನಪಾಲಿತ ಮುನಿಯು ತನ್ನ ಯೋಗವನ್ನು ಮುಗಿಸಿ ತಡಮಾಡದೆ ಅಲ್ಲಿಂದ ಎದ್ದು ಬಂದನು. ಆಗ ಆ ಮುನಿಶ್ರೇಷ್ಠನನ್ನು ಕಂಡು ಜಿನದತ್ತ ಸೆಟ್ಟಿಯು ಮನಃ ಪೂರ್ವಕವಾದ ಆದರದಿಂದ ವಂದಿಸಿ ತಮ್ಮ ಮನೆಗೆ ಕರೆದುಕೊಂಡು ಹೋಗಿ ತನ್ನ ದೇವಮಂದಿರದಲ್ಲಿ ನಿಲ್ಲಿಸಿದನು. ೫೩. ಅಲ್ಲಿಗೆ ದಿವ್ಯವಾದ ಔಷಧವನ್ನು ಬಲ್ಲ ವೈದ್ಯರನ್ನು ಕರೆಯಿಸಿ, ಆ ವೈಶ್ಯಕುಲಶ್ರೇಷ್ಠನು ಎದುರಿಗೇ ಇದ್ದುಕೊಂಡು ಅಲ್ಲಿಂದ ಕದಲದೆ, ವೆಚ್ಚಕ್ಕೆ ಮನಸ್ಸಿನಲ್ಲಿ ಹಿಂಜರಿಯದೆ ಹೊನ್ನುಗಳನ್ನು ಪ್ರೀತಿಯಿಂದ ಕೊಟ್ಟನು. ೫೪. ಅಲ್ಲದೆ ತಾನೇ ಹತ್ತಿರ ನಿಂತಿದ್ದು ಪಥ್ಯಪಾನಗಳನ್ನು ಪ್ರಯತ್ನಪೂರ್ವಕವಾಗಿ ನಡೆಸಿ ನಿಷ್ಕರುಣಿಯಾಗದೆ, ಹಾವನ್ನು ಹಿಡಿದವರಂತೆ ದೂರದಲ್ಲಿ ನಿಲ್ಲದೆ; ನೀಚರಾದ ವಿಟರನ್ನು ಕೂಡಿದ ಸೂಳೆಯ ಹಾಗೆ ಮುಖ ತಿರುಗಿಸದೆ, ಮನೆಯ ಗಂಡನನ್ನು ಕಂಡ ಹಾದರದವನ ಹಾಗೆ ಹಿಮ್ಮೆಟ್ಟದೆ, ಜೀವನಕ್ಕೆ ಕೊಡದ ಸ್ವಾಮಿಯ ಕೆಲಸಕ್ಕೆ

ಗುಡದಾಳ್ದನ ಬೆಸಕ್ಕಂಜುವ ಬಂಟನಂತೆ ಮನದೊಳ್ ಜಱಿಯದೆ, ಕ್ರೂರರೊಡನೆ ಬಟ್ಟೆವೋಪ ದ್ರವ್ಯಪತಿಯಂತೆ ಪೆಱಗುಟಱಿಯದೆ, ಪೊಲೆಬೂತಿಂಗೆ ಕೊಡುವರ್ಥದಂತೆ ಪೆಱರ ಮೇಲೆ ನೆವಮಿಕ್ಕದೆ, ಅಳಿಯನಂ ಕಂಡತ್ತೆಯಂತೆ ಲಜ್ಜಿಸದೆ, ಕೀೞ್ಜಾತಿಯಂ ಕಂಡ ಕುಲಜನದಂತುದಾಸೀನಂಗೆಯ್ಯದೆ, ಪರಮಭಕ್ತಿಯಿಂದೋವುದುಂ, ಕೆಲವು ದಿವಸಕ್ಕೆ ಪುಣ್ಣೆಲ್ಲಂ ಮಾಯ್ದು ಲೇಸಪ್ಪುದುಂ ಜಿನಪಾಲಿತಮುನಿ ತನ್ನೊಳಿಂತೆಂದಂ ೫೫

ವಿಪರೀತದ ಪುಣ್ಣಿನಿದಂ
ಕೃಪೆಯಿಂ ಸಾರಿರ್ದ ವೈಶ್ಯಕಲಲಾಮಂ
ಸುಪರೀಕ್ಷೆಯುಳ್ಳ ವೈದ್ಯರಿ
ನಪಹರಿಸಿದನಿಂತು ಸಾರ್ದ್ರಹೃದಯರುಮೊಳರೇ ೫೬

ಗದ್ಯ॥ ಎಂದು ಮನದೊಳ್ಮೆಚ್ಚಿ ಕಿರ್ಚಿನೊಳಾದ ವೇದನೆಯುಂ ಮನದೊಳಾದ ಸಂಕ್ಲೇಶಮುಂ ತೀರ್ದುದೆನಿತುಕಾಲಮಿಲ್ಲಿರ್ದೆನನಿತೆ ಸಾಲ್ಗುಮಿನ್ನು ಧರಣೀವಳಯದೊಳ್ ವಿಹಾರಿಸುವೆನೆಂಬ ಬಗೆಯಂ ತಂದು ಸೆಟ್ಟಿಗೆ ತಮ್ಮ ಪೋಗಂ ಪೇೞ್ದು ತದಾಲಯದಿಂ ಪೊಱಮಡುವುದುಂ ೫೭

ವರಮುನಿಪಾದಾಂಬುರುಹಮ
ನುರುವಂದನೆಗೆಯ್ದುಮಗಲಲಾಱದೆ ವೈಶ್ಯಾಂ
ಬರಭಾನು ಪೆಱಗೆ ನಿಲ್ಲದೆ
ಕರಮಾದರದಿಂದೆ ತಾನುಮಾತ್ಮಾಲಯದಿಂ ೫೮

ಹಿಂದೆಗೆಯುವ ಬಂಟನ ಹಾಗೆ ಮನಸ್ಸಿನಲ್ಲಿ ಬೈದುಕೊಳ್ಳದೆ, ಕ್ರೂರಿಗಳೊಡನೆ ದಾರಿ ನಡೆಯುವ ಹಣಗಾರನಂತೆ ಹಿಂದೆ ಉಳಿಯದೆ ಹೊಲೆಯರ ಭೂತಕ್ಕೆ(ಭೂತದ ಪೂಜೆ) ಕೊಡುವ ಹಣದಂತೆ ಬೇರೆಯವರ ಮೇಲೆ ನೆವವಿಕ್ಕದೆ, ಅಳಿಯನನ್ನು ಕಂಡ ಅತ್ತೆಯ ಹಾಗೆ ನಾಚಿಕೆ ಪಡದೆ, ಕೀಳು ಜಾತಿಯನ್ನು ಕಂಡ ಕುಲಜನರ ಹಾಗೆ ಉದಾಸೀನ ಮಾಡದೆ, ಪರಮ ಭಕ್ತಿಯಿಂದ ರಕ್ಷಿಸಲಾಗಿ ಸ್ವಲ್ಪ ದಿನಗಳಲ್ಲಿ ಹುಣ್ಣೆಲ್ಲವೂ ವಾಸಿಯಾಗಿ ಆರೋಗ್ಯವಾಗಲು ಜಿನಪಾಲಿತಮುನಿಯು ತನ್ನಲ್ಲಿಯೇ ಹೀಗೆ ಯೋಚಿಸಿದನು. ೫೫. 'ವಿಪರೀತವಾಗಿದ್ದ ಈ ಹುಣ್ಣನ್ನು ಕೃಪೆಯಿಂದ ಇಲ್ಲಿರುವ ವೈಶ್ಯಶ್ರೇಷ್ಠನು ಒಳ್ಳೆಯ ಪರೀಕ್ಷಾ ಶಕ್ತಿಯಿರುವ ವೈದ್ಯರಿಂದ ಹೋಗಲಾಡಿಸಿದು. ಇಂಥ ದಯಾರ್ದ್ರ ಹೃದಯರೂ ಇರುವರೆ ? ೫೬. ಹೀಗೆ ಮನಸ್ಸಿನಲ್ಲಿಯೇ ಮೆಚ್ಚಿ "ಬೆಂಕಿಯಿಂದ ಆದ ನೋವೂ ಮನಸ್ಸಿನಲ್ಲಿ ಹುಟ್ಟಿದ ಕ್ಲೇಶವೂ ತೀರಿಹೋದವು. ಇಲ್ಲಿ ಎಷ್ಟು ಕಾಲ ಇದ್ದೆನೋ, ಅಷ್ಟೇ ಸಾಕು. ಇನ್ನು ಭೂಮಿಯ ಮೇಲೆ ಸಂಚರಿಸುವೆನು" ಎಂದು ಸಂಕಲ್ಪಿಸಿ, ತಾವು ಹೊರಡುವುದನ್ನು ಸೆಟ್ಟಿಗೆ ಹೇಳಿ ಆ ಮನೆಯಿಂದ ಮುನಿ ಹೊರಟನು. ೫೭. ಆ ವೈಶ್ಯಕುಲಗಗನ ಸೂರ್ಯನಾದ ಜಿನದತ್ತಸೆಟ್ಟಿಯು ಆ ಮುನಿಶ್ರೇಷ್ಠನ ಪಾದಕಮಲಗಳಿಗೆ ವಂದನೆ ಸಲ್ಲಿಸಿಯೂ ಆತನನ್ನು ಬಿಟ್ಟು ಇರಲಾರದೆ, ಹಿಂದೆ ನಿಲ್ಲದೆ ಬಹಳ ಪ್ರೀತಿಯಿಂದ ತಾನೂ

ಪೊಱಮಟ್ಟು ಬರ್ಪುದುಂ ಮುನಿ
ಕಿಱಿದಂತರದಲ್ಲಿ ನಿಂದು ಸದ್ಧರ್ಮಮನುಂ
ಮಱೆಯದೆ ಸನ್ಮುನಿಮತಮಂ
ತಱುವಲಿತನದಿಂದಮೋಡಿಸದೆ ನೀಂ ಮಗನೇ ೫೮

ಗದ್ಯ॥ ಸದ್ಧರ್ಮಸಮೇತನುಂ ಸನ್ಮಾರ್ಗಪ್ರೀತನುಮಪ್ಪುದೆಂದು ಜಿನದತ್ತಸೆಟ್ಟಿಯುಂ ಮೃದು ವಚನಂಗಳಿಂ ಬೋಧಿಸಿ ಮನೆಗೆ ಮಗುಳ್ದು ಪೋಗಿಮೆಂಬುದುಂ ಮಹಾಪ್ರಸಾದಮಂತೆಗೆಯ್ವೆ ನೆಂದು ಪ್ರದಕ್ಷಿಣಂ ಮಾಡಿ ಬಂದಿಸಿ ಮನೆಗೆ ಬಂದಿರ್ಪನ್ನೆಗಂ ೬೦

ತಂದೆಯ ಪೋಗಂ ಕಂಡಾ
ನಂದದಿನರ್ಥಕ್ಕೆಮುನ್ನಮಡಹಡಿಸಿ ಮನಂ
ಗಂದಿ ಕಡುನೊಂದು ಮನದೊಳ್
ಬೆಂದು ಮಹಾಮಱುಕದಿಂದಮಿರ್ಪ ದುರಾತ್ಮಂ ೬೧

ಮನೆಯುವರಂ ಬಂಚಿಸಿ ಮೆ
ಲ್ಲನೆ ದೂರ್ತಿಂ ಕೊಂಡು ಬೀಯಗದ ಕಯ್ಯುಂ ನೆ
ಟ್ಟನೆ ತೆಱೆದು ಪಡಿಯನೊರ್ವನೆ
ಮನಮಂಜದೆ ಪೊಕ್ಕು ಕಂಡು ಕನಕಮನಾಗಳ್ ೬೨

ತನ್ನ ಮನೆಯಿಂದ ಹೊರಟು ಬಂದನು. ೫೮. ಜಿನಪಾಲಿತಮುನಿಯು ಕೊಂಚ ದೂರ ದಲ್ಲಿ ನಿಂತು "ಸದ್ಧರ್ಮವನ್ನು ಮರೆಯದೆ ಶ್ರೇಷ್ಠವಾದ ಮುನಿಮತವನ್ನು ತಿರಸ್ಕರಿ ಸದೆ ತಬ್ಬಲಿತನದಿಂದ ವರ್ತಿಸದೆ, ಮಗನೇ ! ಸದ್ಧರ್ಮದಿಂದ ಕೂಡಿದವನೂ ಸನ್ಮಾರ್ಗ ದಲ್ಲಿ ಪ್ರೀತಿಯುಳ್ಳವನೂ ಆಗಬೇಕು" ಎಂದು ಪ್ರಿಯವಚನಗಳಿಂದ ಜಿನದತ್ತಸೆಟ್ಟಿಗೆ ಬೋಧನೆ ಮಾಡಿ "ಇನ್ನು ಮನೆಗೆ ಹಿಂತಿರುಗಿ ಹೋಗಿ" ಎಂದು ಹೇಳಿದನು. ಆಗ ಸೆಟ್ಟಿ "ಮಹಾಪ್ರಸಾದ, ಹಾಗೆಯೇ ಮಾಡುತ್ತೇನೆ." ಎಂದು ಹೇಳಿ ಮುನಿಗೆ ಪ್ರದಕ್ಷಿಣೆ ಮಾಡಿ ನಮಸ್ಕರಿಸಿ ಮನೆಗೆ ಬಂದನು. ೫೯-೬೦. ಆಗ ಸೆಟ್ಟಿಯ ಮಗ ಹಣದ ಆಸೆ ಹೆಚ್ಚಾಗಿ ಉಳ್ಳವನು. ತನ್ನ ತಂದೆ ಹೊರಕ್ಕೆ ಹೋದುದನ್ನು ಗಮನಿಸಿ ಆನಂದದಿಂದ ಇದು ಸಮಯವೆಂದು ಯೋಚಿಸಿದನು. ಹಣದ ಆಸೆಯಿಂದ ಮನನೊಂದು ಮರುಗು ತ್ತಿದ್ದ ಆ ದುರಾತ್ಮನು ಮನೆಯುವರನ್ನು ಮೋಸಪಡಿಸಿ ಧೂರ್ತತನದಿಂದ ಬೀಗದ ಕೈಯನ್ನು ಮೆಲ್ಲಗೆ ತೆಗೆದುಕೊಂಡು ಚಿನ್ನವಿದ್ದ ಕೋಣೆಯ ಕದವನ್ನು ತಟ್ಟನೆ ತೆರೆದು ಒಬ್ಬನೇ ಅಂಜದೆ ಒಳನುಗ್ಗಿ ಅಲ್ಲಿದ್ದ ಚಿನ್ನವನ್ನು ನೋಡಿದನು. ೬೧-೬೨. ಆಗ

ಗದ್ಯ॥ ಸಂತೋಷಂಬಟ್ಟು ಮುನ್ನಿನಂತೆ ಪಡಿಯಂ ಕಿತ್ತು ಪೊನ್ನನಿಂದು ನೋಡಿ ಕಣ್ಬೇಱತನದಿಂ ತನ್ನಾರ್ಪನಿತಂ ಕಟ್ಟಿಕೊಂಡು ಪೋಪೆನೆಂದಿರ್ಪುದುಂ ಜಿನದತ್ತಸೆಟ್ಟಿ ಬಂದು ಪೆಱತೊಂದುಮಂ ನೋಡದೆ ತನಗೆ ಪೊನ್ನೊಳಾದ ಮೋಹಂ ಪಿರಿದಪ್ಪುದಱಿಂ ಪೊನ್ನೆಡೆಯೊಳ್ ನಾಯುಮಪ್ಪೊಡಂ ನಂಬಲಾಗದೆಂಬ ನಾಣ್ನುಡಿಯನವಧರಿಸಿ ಪೊನ್ನಿರ್ದೋವರಿಯ ಬಾಗಿಲಂ ನೋಡಿ ತನ್ನಿಕ್ಕಿದ ಬೀಯಗಮಂ ಕಾಣದೆ ಪಡಿಯಂ ನೂಂಕುವುದುಂ ಜಿನದಾಸಂ ತಂದೆ ಬಂದನೆಂದಱಿದು ಮನ ದೊಳ್ ಬೆಗಡುಗೊಂಡು ನಾಡೆಯುಂ ಭಯಸ್ಥನಾಗಿ ಪೊಱಮಟ್ಟುಪೋಗಲಣ್ಮದೆ ಚಿನ್ನದ ದಿಂಡಿ ರ್ದೆಡೆಯಂ ಪೊಕ್ಕು ಮೇಲೊಂದು ಚಿನ್ನದದಿಂಡಂ ತೆಗೆದುಕೊಂಡು ತಾನಲ್ಲದಂತುಸಿರದಿರ್ಪುದುಂ ಸೆಟ್ಟಿಮನೆಯೊಳಗೆ ಪೊಕ್ಕುನೋಡಿ ಪೊನ್ನರಾಸಿಯೊಳ್ ಕಿಱಿದು ಪೊನ್ ಪೋದುದಂ ಕಂಡು ೬೩

ಮಱುಕಂ ತೊಟ್ಟನೆ ಪುಟ್ಟಿ ನೊಂದು ಮತಿಗೆಟ್ಟೋವೆಂದು ಜಾಣ್ಗೆಟ್ಟು ಬೆಂ
ದಱಿತಂಗೆಟ್ಟಿರ್ದೆಗೆಟ್ಟು ಮೆಯ್ಮಱಗಿ ಕೆಟ್ಟೆಂ ಬಾೞೆನೆಂದತ್ತು ಬಾ
ಯ್ದೞಿದೋರಂತಿರೆ ಕಂದಿ ಕುಂದಿ ಮನದೊಳ್ ಮಂಕಾಗಿ....ಮೆ
ಯ್ಮಱೆದಿನ್ನೇಗುವೆನೆಂದು ಮೋಹದೊದವಿಂ ಬಿರ್ದಂ ಧರಾಚಕ್ರದೊಳ್ ೬೪

ಗದ್ಯ॥ ಅಂತು ಬಿರ್ದು ಕಿಱಿದು ಬೇಗದಿನೆರ್ದು ಕಳ್ಳನಿರ್ದನೆಂದು ಕೋಣೆಯಿಟ್ಟೆಡೆ ಕುಸು ಕುಱೊಳೆಲ್ಲಂ ನೋಡಿ ತದಾವಾಸದೊಳಾರುಮಂ ಕಾಣದೆ ಮನೆಯಂ ಪೊಱಮಟ್ಟು ಪಡಿಯು

ಅವನು ಸಂತೋಷಪಟ್ಟು ಮೊದಲಿನ ಹಾಗೆ ಕದವನ್ನು ಮುಚ್ಚಿ ಅಂದು ಕಣ್ಣಿಗೆ ತೃಪ್ತಿ ಯಾಗುವ ತನಕ ಕನಕವನ್ನು ನೋಡಿ,ತನಗೆ ಬೇಕಾದಷ್ಟನ್ನು ತೆಗೆದು ಗಂಟು ಕಟ್ಟಿ ಕೊಂಡು ಹೋಗಬೇಕೆಂದಿರುವಾಗ ಜಿನದತ್ತಸೆಟ್ಟಿ ಬಂದು ಬೇರೊಂದನ್ನೂ ನೋಡದೆ, ತನಗೆ ಚಿನ್ನದ ಮೇಲೆ ಮಹಾಮೋಹವಾದ್ದರಿಂದ,'ಬಂಗಾರವಿರುವ ಕಡೆ ನಾಯಿಯನ್ನೂ ನಂಬಬಾರದು' ಎಂಬ ಗಾದೆಯನ್ನು ಜ್ಞಾಪಿಸಿಕೊಂಡು ಚಿನ್ನವಿದ್ದ ಕೋಣೆಯ ಬಾಗಿಲನ್ನು ನೋಡಿ ನಾನು ಹಾಕಿದ್ದ ಬೀಗವನ್ನು ಕಾಣದೆ ಕದವನ್ನು ನೂಕಿದನು. ಒಳಗಿದ್ದ ಸೆಟ್ಟಿಯ ಮಗ ಜಿನದಾಸನು ತಂದೆ ಬಂದನೆಂದು ತಿಳಿದು ಮನಸ್ಸಿನಲ್ಲಿ ಬಹಳ ಭಯಪಟ್ಟು ಹೋಗಲು ಧೈರ್ಯವಿಲ್ಲದೆ ಚಿನ್ನದ ದಿಂಡು ಇದ್ದ ಸ್ಥಳವನ್ನು ಹೊಕ್ಕು ಮೇಲೆ ಒಂದು ಚಿನ್ನದ ದಿಂಡನ್ನು ತೆಗೆದುಕೊಂಡು ತಾನಲ್ಲವೆಂಬಂತೆ ಉಸಿರಾ ಡದೆ ಇರಲು ಸೆಟ್ಟಿಯು ಮನೆಯೊಳಗೆ ಹೊಕ್ಕು ನೋಡಿ ಚಿನ್ನದ ರಾಶಿಯಲ್ಲಿ ಕೊಂಚ ಚಿನ್ನ ಹೋಗಿದ್ದುದನ್ನು ಗಮನಿಸಿದನು. ೬೩. ತಟ್ಟನೆ ಸಂಕಟ ಹುಟ್ಟಿ ನೊಂದು ಬುದ್ಧಿ ಕಳೆದುಕೊಂಡು ಅಯ್ಯೋ, ಎಂದು ನೊಂದು ಧೈರ್ಯಹೀನನಾಗಿ "ಕೆಟ್ಟೆ, ಬದುಕಲಾರೆ" ಎಂದು ಅತ್ತು ಗೋಳಿಟ್ಟು ಇನ್ನೇನು ಮಾಡುವುದೆಂದು ತೋರದೆ ಮೈಮರೆದು ಬಿದ್ದನು. ೬೪. ಹಾಗೆ ಬಿದ್ದು ಕೊಂಚ ಹೊತ್ತಿಗೆ ಎಚ್ಚತ್ತು ಬೇಗನೆ ಎದ್ದು ಕಳ್ಳನಿರಬಹುದೆಂದು ಕೋಣೆಯ ಮೂಲೆಗಳನ್ನೂ ಸಂದುಗಳನ್ನೂ ಹುಡುಕಿ ನೋಡಿ ಆ ಕೋಣೆಯೊಳಗೆ ಯಾರನ್ನೂ ಕಾಣದೆ ಮನೆಯಿಂದ ಹೊರಟು ಕದವನ್ನು ಭದ್ರಪಡಿಸಿ ಮೊದಲಿನ ಹಾಗೆ

ಕೆತ್ತ್ರಮುನ್ನಿನಂತೆ ಮುದ್ರಿಸಿ ಬಿಲ್‌ಕೆಟ್ಟವರ್ ಕೀಲಂ ತಡವರಿಸಿದರೆಂಬಂತೆ ಕುದುರೆ ಕೆಟ್ಟವರ್ ಬಾದಣಮಂ ನೋಡಿದರೆಂಬಂತೆ, ನಾಣ್ಣುಡಿಯಂ ನನ್ನಿಮಾಡಿ ಮನದ ಮಱುಕದಿಂ ಭ್ರಮೆಗೊಂಡು ಜಿನಪಾಲಿತಮುನಿನಾಥನೆ ಕೊಂಡು ಪೋದನೆಂದು ಬೆನ್ನನೆ ಪರಿದು ಮುನಿಕುಂಜರನನೆಯ್ದಿ ಮಾಯಾವಿನಯದಿಂ ಪೊಡೆಮಟ್ಟು ೬೫

ಇನ್ನೆಗಮೆನ್ನನುತ್ತಮಗುಣಾಂಬುಧಿ ಭವ್ಯಪಯೋರುಹಾರ್ಕಮ
ತ್ತೆನ್ನದೆ ಕೂರ್ಮೆಯಿಂ ಪರಸುತಿರ್ದಿರಮೋಘದಿನಿಂದು ಪೋಗಲಾ
ಗೆನ್ನನವಜ್ಞೆಗೆಯ್ದು ಬಿಸಿಲಾದುದು ನಿಮ್ಮಡಿ ನಾಳೆ ಪೋಪುದೆಂ
ದುನ್ನತಶೀಲರಂ ತೆಗೆವುದುಂ ನಯದಿಂ ಪಲವುಂ ವ್ರತಂಗಳಂ ೬೬

ಗದ್ಯ॥ ಮುನಿನಾಥಂ ಕಾರುಣ್ಯದಿಂ ಮಗುಳ್ವುದುಂ ಜಿನದತ್ತಸೆಟ್ಟಿ ತನ್ನ ಮನೆಗೊಡಗೊಂಡು ಬಂದು ಪೊನ್ನಿರ್ದೋವರಿಯ ಬಾಗಿಲ್ಲಿ ಪಿರಿದಪ್ಪ ಮಣೆಯಂ ತಂದಿಕ್ಕಿಸಿ ಯತಿನಾಥನಂ ಕುಳ್ಳಿರಿಸಿ ತಾನುಂ ಕೆಲದೊಳ್ ಕುಳ್ಳಿರ್ದು ತನ್ನೊಳಿಂತೆಂದಂ ೬೭

ತನುವಂ ಬಿಟ್ಟು ಪರತ್ರೆಯಂ ಪಡೆವೆನೆಂಬಾಕಾಂಕ್ಷೆಯಿಂ ಜೈನ ಸೇ
ವನೆಯಂ ಮಾಡುತುಮಿರ್ದು ನಿಷ್ಕಪಟದಿಂ ಪಾಪಾರಿಯಂ ಗೆಲ್ದನೆ
ಟ್ಟನೆ ಕೈವಲ್ಯ ವಿಭೂತಿಯಿಂ ಪಡೆಯದಂತೀ ಸಾಧು ಬೇಳಾಗಿ ಕೆ
ಮ್ಮನೆ ಮೋಹೋದಯದಿಂದಮೆನ್ನ ಧನಮಂ ತಾನೇಕೆ ಕಳ್ದೊಯ್ದನೋ ೬೮

ಬೀಗ ಹಾಕಿ ಮುದ್ರೆ ಮಾಡಿ ಬಿಲ್ಲು ಕಳೆದುಕೊಂಡವರು ಕೀಲನ್ನು ತಡಕಿದರೆನ್ನುವ ಹಾಗೆ ಕುದುರೆ ಕಳೆದುಕೊಂಡವರು ಗವಾಕ್ಷಿಯನ್ನು ನೋಡಿದರೆನ್ನುವಂತೆ, ನಾಣ್ನುಡಿಯನ್ನು ಸತ್ಯವಾಗಿಸಿ ಮನದಲ್ಲಿ ಸಂಕಟದಿಂದ ಭ್ರಮಿತನಾಗಿ ಜಿನಪಾಲಿತ ಮುನಿಶ್ರೇಷ್ಠನೇ ತೆಗೆದುಕೊಂಡು ಹೋಗಿರುವನೆಂದು ಯೋಚಿಸಿ ಹಿಂದೆಯೇ ಬಂದು ಮುನಿಶ್ರೇಷ್ಠನನ್ನು ಸಮೀಪಿಸಿ ಮಾಯಾವಿನಯವನ್ನು ತೋರಿ ಅಡ್ಡಬಿದ್ದು, ೬೫. "ಗುಣಸಮುದ್ರನೇ! ಭವ್ಯರೆಂಬ ಕಮಲಗಳಿಗೆ ಸೂರ್ಯಸದೃಶನೇ! ಇದುವರೆಗೆ ತಾವು ನನ್ನನ್ನು ಅಮೋಘವಾಗಿ ಹರಸುತ್ತ ಪ್ರೀತಿಯಿಂದ ಇದ್ದಿರಿ, ತಾವು ಈ ದಿನ ನನ್ನನ್ನು ತಿರಸ್ಕರಿಸಿ ಹೋಗಬಾರದು, ಈಗ ಬಿಸಿಲಾಯಿತು. ತಾವು ನಾಳೆ ಹೊರಡಬಹುದು" ಎಂದು ಆ ಶೀಲೋನ್ನತರನ್ನು ಹಲವು ವ್ರತಗಳನ್ನು ಸೂಚಿಸಿ ಉಪಾಯದಿಂದ ಕರೆದನು. ೬೬. ಆಗ ಮುನಿನಾಥನು ಕರುಣೆಯಿಂದ ಹಿಂತಿರುಗಲಾಗಿ ಜಿನದತ್ತಸೆಟ್ಟಿ ಅವರನ್ನು ತನ್ನ ಮನೆಗೆ ಜತೆಯಲ್ಲಿ ಕರೆದುಕೊಂಡು ಹೋಗಿ ಚಿನ್ನವಿದ್ದ ಕೋಣೆಯ ಬಾಗಿಲಲ್ಲಿ ದೊಡ್ಡದಾದ ಮಣೆಯನ್ನು ತರಿಸಿ ಹಾಕಿ ಅದರ ಮೇಲೆ ಯತಿಶ್ರೇಷ್ಠನನ್ನು ಕೂಡಿಸಿ ತಾನೂ ಪಕ್ಕದಲ್ಲಿ ಕುಳಿತುಕೊಂಡು ಹೀಗೆ ಯೋಚಿಸಿದನು. ೬೭. "ದೇಹಾಭಿಮಾನವನ್ನು ಬಿಟ್ಟು ಪರಗತಿಯನ್ನು ಪಡೆಯುವ ಆಸೆಯಿಂದ ಜೈನ ಸೇವೆಯನ್ನು ನಿಷ್ಕಪಟವಾಗಿ ಮಾಡುತ್ತಿದ್ದ ಪಾಪವೆಂಬ ವೈರಿಯನ್ನು ಗೆದ್ದು ನೇರವಾಗಿ ಕೈವಲ್ಯ ಭಾಗ್ಯವನ್ನು ಪಡೆಯದೆ ಈ ಸಾಧು ದಡ್ಡನಾಗಿ

ಗದ್ಯ॥ ಎಂದು ತನ್ನ ದುರ್ಭಾವದಿಂ ಲೋಭಿ ಗುಣ ವಿಶೇಷಮನಱಿಯನೆಂಬುದಂ ನನ್ನಿ ಮಾಡಿ ಮುನಿನಾಥನಂ ಕಳ್ಳನೆಂದು ನಿಶ್ಚಯಿಸಿ ಪೊನ್ನನೊರ್ಮೆಯೆ ಬೇಡಿದೆನಪ್ಪೊಡೆ ಮಹಾ ತಪೋಧನರಂ ಬಱಿದೆ ಕಾಡುತುಮಿರ್ದಪನನ್ಯಾಯಿಯೆಂದು ಕೆಲದವರೆಲ್ಲಮೆನ್ನಂ ದೂಱಿ ಕೊಲ್ವ ರದು ಕಾರಣದಿಂ ಮೆಲ್ಲನುಪಾಯದಿಂ ನುಡಿದು ಪೊಲ್ಲಮೆಯುಂ ದುರ್ಯಶಮುಮಾಗದಂತೆ ಬುದ್ಧಿಯಿಂದೆನ್ನ ಪೊನ್ನಂ ಕೊಳ್ವೆನೆಂದು ಮೆಲ್ಲನಲ್ಲಿಗೆ ತಕ್ಕಂತಪ್ಪ ಕಥೆಯಂ ಪೇಳ್ದಪೆನೆಂದಿಂತೆಂದಂ ೬೯

ಮುನಿಪತಿ ಕೇಳ್ ಪೇೞ್ವೆಂ ಕಥೆ
ಯನಿದೊಂದಂ ವ್ಯಾಘ್ರಖೇಡಮೆಂಬಾ ಪೊಟಲೊಳ್
ದಿನಕರ ಸನ್ನಿಭನಿರ್ಪಂ
ದಿನಕರನೆಂಬೊರ್ವನಾತನಗ್ರತನೂಜಂ ೭೦

ಗದ್ಯ॥ ಕರಾಳನೆಂಬನಾತಂ ದುಷ್ಟಗೋಷ್ಠಿಯಿಂ ಸಪ್ತವ್ಯಸನ ಸಮೇತನಾಗಿ ಪಲಕಾಲ ಮಿರ್ದೊಂದು ದಿವಸಂ ಸೂಳೆಗೆ ಕುಡಲರ್ಥಮಿಲ್ಲದೆ ರಾಜಭವನಮಂ ಕನ್ನಮನಿಕ್ಕಿ ಪೊಕ್ಕು ತನ್ನಾರ್ಪನಿತು ಪೊನ್ನಂ ಕೊಂಡು ಮುನ್ನಿನ ಪರಿಯಿಂ ಪೊಱಮಡುವುದುಂ ತೊಟಲ್ವ ತಳಾಱರ್ ಕಂಡು ೭೧

ವೃಥಾ ಮೋಹಾತಿಶಯದಿಂದ ನನ್ನ ಧನವನ್ನು ತಾನೇಕೆ ಕದ್ದು ತೆಗೆದುಕೊಂಡು ಹೋದನೊ ?" ೬೮. ಹೀಗೆ ತನ್ನ ಕೆಟ್ಟ ಯೋಚನೆಯಿಂದ 'ಲೋಭಿಯು ಗುಣವಿಶೇಷ ವನ್ನು ತಿಳಿಯನು' ಎಂಬುದನ್ನು ನಿಜ ಮಾಡಿ ಮುನಿನಾಥನನ್ನೇ ಕಳ್ಳನೆಂದು ನಂಬಿ, "ಒಂದೇ ಸಲ ಚಿನ್ನವನ್ನು ಕೊಡೆಂದು ಕೇಳಿದರೆ ಮಹಾತಪೋಧನರನ್ನು ವೃಥಾಕಾಡು ತ್ತಿರುವ ಅನ್ಯಾಯಪರನೆಂದು ಅಕ್ಕಪಕ್ಕದವರೆಲ್ಲ ನನ್ನನ್ನು ಆಕ್ಷೇಪಿಸಿ ಕೊಲ್ಲುವರು. ಆದ್ದ ರಿಂದ ಉಪಾಯವಾಗಿ ಮಾತನಾಡಿ ಕೆಟ್ಟತನವೂ ಅಪಕೀರ್ತಿಯೂ ಆಗದಂತೆ ಜಾಣತನ ದಿಂದ ನನ್ನ ಹೊನ್ನನ್ನು ತೆಗೆದುಕೊಳ್ಳುತ್ತೇನೆ," ಎಂದು ಆ ಸಮಯಕ್ಕೆ ಸರಿಯಾದ ಒಂದು ಕಥೆಯನ್ನು ಹೇಳಲು ಸಂಕಲ್ಪಿಸಿ ಹೀಗೆಂದನು. ೬೯. "ಮುನಿಶ್ರೇಷ್ಠ, ಕೇಳು, ಇದೊಂದು ಕಥೆಯನ್ನು ಹೇಳುತ್ತೇನೆ. ವ್ಯಾಘ್ರಖೇಡವೆಂಬ ಪಟ್ಟಣದಲ್ಲಿ ಸೂರ್ಯನ ಹಾಗೇ ತೇಜಸ್ವಿಯಾದ ಗೃಹಸ್ಥನಿದ್ದನು. ಆತನಿಗೆ ದಿನಕರನೆಂದೇ ಹೆಸರು. ಅವನ ಮಗ ಕರಾಳನು ಕೆಟ್ಟವರ ಸಹವಾಸದಿಂದ ಸಪ್ತವ್ಯಸನಗಳಿಗೆ ಸಿಕ್ಕಿ ಬಹಳ ಕಾಲ ಇದ್ದು ಒಂದು ದಿನ ಸೂಳೆಗೆ ಕೊಡುವುದಕ್ಕೆ ಹಣವಿಲ್ಲದೆ ಅರಮನೆಗೆ ಕನ್ನ ಹಾಕಿ ಪ್ರವೇಶಿಸಿ ತನಗೆ ಶಕ್ತಿಯಿದ್ದಷ್ಟು ಚಿನ್ನವನ್ನು ತೆಗೆದುಕೊಂಡು ಹೊಕ್ಕದಾರಿಯಾ ಗಿಯೇ ಹೊರಬಿದ್ದನು. ಸಂಚರಿಸುತ್ತಿದ್ದ ತಳವಾರರು ಅವನನ್ನು ಕಂಡು ೭೧. ಕಲ್ಲು

ಕಲ್ಲಿಂ ಗುಂಡಿಂ ಬಡಿಯಿಂ
ನಿಲ್ಲದೆ ಕೈವಾರವಿಡುತುಮವರೆಯ್ದುವುದುಂ
ತಲ್ಲಣಿಸಿ ಕರಾಳಂ ತಳು
ವಿಲ್ಲದೆ ನಿಲ್ಲದೆ ಭಯಸ್ಥನಾಗಿ ದುರಾತ್ಮಂ ೭೨

ಗದ್ಯ॥ ಬೆನ್ನನೆ ಕೞಲಾಗಿಸುತ್ತುಮಿನ್ನೆತ್ತ ಪೋದಪೆನೆಂದು ಬೆಗಡುಗೊಂಡು ಪಱಿದು ಪಱಿಯಲಾಱದೆ ಬಂದೊರ್ವ ಪರದನ ಕಾಲ ಮೇಲೆ ಬಿರ್ದು ೭೩

ಸಾವಾದುದೆನಗೆ ನೀನೀ
ಸಾವಂ ಪೋಗಿಸುವುದೊಲ್ಲೆನೆಂದೊಡಮವರುಂ
ನಾನಾ ವಿಧದಿಂ ಕೊಂದಪ
ರಾವಂಗಂ ಕಾಯಬಾರದಿಂದಿನ ಕೊಲೆಯಂ ೭೪

ಗದ್ಯ॥ ಎಂದು ದೈನ್ಯವೃತ್ತಿಯಿಂ ನುಡಿದು ಕಳ್ಳನೊಳ್ಳಿದನಿಲ್ಲ ನಾಯ್ ಮೋನಿಯಿಲ್ಲೆಂಬ ನೀತಿಯುಂ ಭಾವಿಸದೆ ಕಾರುಣ್ಯದಿಂ ಕರಾಳನಂ ತೆಗೆದು ತನ್ನ ಸಾರೆ ಕುಳ್ಳಿರಿಸಿ ಸೀರೆಯುಂ ಪೊದೆದು ಕೊಂಡಿರ್ದನನ್ನೆಗಂ ತಳಾಱರ್ ಪರಿತಂದೀ ಮನೆಯಂ ಪೊಕ್ಕನೆಂದು ಮನೆಯೊಳಗಱಸಿ ಕಾಣದೆ ಮುಂದೆ ಕುಳಿತಿರ್ದ ಸೆಟ್ಟಿ ಡೊಳ್ಳಿಗನಪ್ಪುದಱಿಂ ಪರೀಕ್ಷಿಸದೆ ಪೋದರಿತ್ತಲ್ ೭೫

ಗುಂಡುಗಳಿಂದಲೂ ಬಡಿಗೆಗಳಿಂದಲೂ ತಡಮಾಡದೆ ಕೂಗಿಡುತ್ತ ಅಟ್ಟಿಸಿಕೊಂಡು ಬರಲು ಗಾಬರಿಯಾಗಿ ಕರಾಳನು ಸಾವಕಾಶ ಮಾಡದೆ ಎಲ್ಲಿಯೂ ನಿಲ್ಲದೆ, ಭಯಪಟ್ಟು ಬಿನ್ನಿತ್ತು ಓಡುತ್ತ ಇನ್ನೆಲ್ಲಿಗೆ ಹೋಗಲೆಂದು ಯೋಚಿಸಿ ಭಯಪಟ್ಟು ಓಡಿ ಹೆಚ್ಚು ದೂರ ಓಡಲಾರದೆ ಬಂದು ಒಬ್ಬ ಸೆಟ್ಟಿಯ ಕಾಲಮೇಲೆ ಬಿದ್ದನು. ೭೩. "ನನಗೆ ಸಾವು ಒದಗಿದೆ. ನೀನು ಇದನ್ನು ತಪ್ಪಿಸಬೇಕು. ನೀನು ಒಲ್ಲೆನೆಂದರೆ ಅವರು ನನ್ನನ್ನು ನಾನಾ ವಿಧವಾಗಿ ಹಿಂಸಿಸಿ ಕೊಲ್ಲುತ್ತಾರೆ. ಈ ದಿನದ ಈ ವಿಪತ್ತು ಇನ್ನಾರಿಂದಲೂ ತಪ್ಪಲಾರದು" ೭೪. ಎಂದು ದೀನನಾಗಿ ಹೇಳಿಕೊಂಡನು. ಆ ಸೆಟ್ಟಿಯು ಆಗ 'ಕಳ್ಳನು ಒಳ್ಳೆಯವನಲ್ಲ, ನಾಯಿ ಮೌನಿಯಲ್ಲ' ಎಂಬ ನೀತಿಯನ್ನು ಸ್ಮರಿಸದೆ ಕರುಣೆಯಿಂದ ಕರಾಳನನ್ನು ಕರೆದು ತನ್ನ ಪಕ್ಕದಲ್ಲಿ ಕೂಡಿಸಿ ಬಟ್ಟೆಯನ್ನು ಹೊದಿಸಿದನು. ಆ ವೇಳೆಗೆ ತಳವಾರರು ಓಡಿ ಬಂದು "ಈ ಮನೆಯನ್ನು ಹೊಕ್ಕ" ಎಂದು ಒಳಗೆ ನುಗ್ಗಿ ಹುಡುಕಿ ಕಾಣದೆ ಎದುರಿಗೆ ಕುಳಿತಿದ್ದ ಸೆಟ್ಟಿ ಡೊಳ್ಳು ಹೊಟ್ಟೆಯವನಾದ್ದ(ಶ್ರೀಮಂತ)ರಿಂದ ಪರೀಕ್ಷಿಸದೆ ಹೊರಟು ಹೋದರು. ೭೫. ಇತ್ತ ಊರಿನಲ್ಲಿ ಆದ ಗದ್ದಲವೆಲ್ಲ ತಟ್ಟನೆ ಉಡುಗಲು ಮನಸ್ಸಿನ

ಊರೊಳಗಾದುಲಿಯೆಲ್ಲಂ
ಭೋರೆನಲಂದುಡುಗೆ ಮನದ ನಿರ್ವೇಗಂ ವಿ
ಸ್ತಾರದೊಳ್ ಪೋಗೆ ಪರದನ
ಚೀಲಮನೊಳಗಿರ್ದು ಮೆಲ್ಲನೀಕ್ಷಿಪಿ ಚೋರಂ ೭೬

ಪುಸಿಯ ತಾಯ್ಮನೆ ಪಾಪದಾಗರಮಿಂದ್ರಿಯಂಗಳ ಪೆರ್ಚು ಶೋ
ಭಿಸುವ ಪೆಂಪಿನ ಕೇಡು ಕೋಪದ ಪುತ್ತು ದುಃಖದ ಬಿತ್ತು ದು
ರ್ವ್ಯಸನದಿಕ್ಕೆಯು ತಾವು ರೌರವ ಪಂಥಮಲ್ಲದೆ ಮನ್ಮಥ
ವ್ಯಸನಮೆಂಬ ಜಿನೇಂದ್ರವಾಕ್ಯಮನಾ ಖಳಂ ನೆಱೆ ತೋಱಿದಂ ೭೭

ಗದ್ಯ॥ ಮತ್ತಂ ವ್ಯಸನಿಯಿಂ ಬಿಟ್ಟು ಪಾತಕರುಂ, ಪುಲಿಯಿಂ ಬಿಟ್ಟು ಕ್ರೂರರುಮಿಲ್ಲೆಂಬ ಮಾತಂ ನನ್ನಿ ಮಾಡಿ ೭೮

ಈ ಪರದನ ಕತದಿಂದೆನ
ಗಾಪತ್ತಿದು ಪೋದುದಱಿದೊಡವನಿಯೊಳೆನಗಿ
ನ್ನೀ ಪರದನೆ ಸಖನೆನ್ನದೆ
ಪಾಪಯುತಂ ಪೊನ್ನೊಳಾದ ಪದೆಪನೆ ಬಗೆದಂ ೭೯

ಗದ್ಯ॥ ಪುಸಿವಂಗೆ ಮಾಡಿದ ಹಿತಮುಂ ಕಳ್ಳಂಗೆ ಮಾಡಿದುಪಕಾರಮುಂ ಸಮುದ್ರದೊಳ್ ಒಳಕೊಂಡ ಮಱಿಯುಂ ಗ್ರಾಮಣಿಗೆ ಮಾಡಿದ ಗುಣಮುಂ ವ್ಯರ್ಥಮೆಂಬುದಂ ಮಾಡಿ ತನ್ನ ಕಟ್ಟಿದ ಗೇಣಿಂ ಪರದನಂ ಜಾಲೆಯಾಡಂ ಕೊಲ್ವಂತೆ ಪೊರಟ್ಚಿ ಕೊಂದು ಚೀಲಮಂ ಕೊಂಡು

ಆತಂಕ ಬಹಂಮಟ್ಟಿಗೆ ಹೋಗಲು, ಆ ಕಳ್ಳನು ಸೆಟ್ಟಿಯ ಚೀಲವನ್ನು ಉಪಾಯವಾಗಿ ನೋಡಿದನು. ೭೬. ಆ ದುಷ್ಟನು, ಇಂದ್ರಿಯಗಳ ರಭಸ, ಹುಸಿಯ ತವರುಮನೆ, ಪಾಪದ ಆಶ್ರಯ, ಇವು ಶೋಭಾಯಮಾನವಾದ ಪೆಂಪಿಗೆ ಕೆಡಕು, ಕೋಪದ ಹುತ್ತ, ದುಃಖದ ಬೀಜ, ದುರ್ವ್ಯಸನಗಳಿಗೆ ವಾಸದ ಸ್ಥಾನ, ಅದು ರೌರವದ ದಾರಿಯಲ್ಲದೆ ಬೇರೇನೂ ಅಲ್ಲವೆಂಬ ಜಿನೇಂದ್ರ ವಾಕ್ಯವನ್ನು ನಿದರ್ಶನ ಮಾಡಿಕೊಟ್ಟನು. ೭೭. ಅಲ್ಲದೆ ವ್ಯಸನಿಗಳಿಗಿಂತ ಹೆಚ್ಚು ಪಾಪಿಗಳೂ ಹುಲಿಗಿಂತ ಹೆಚ್ಚಿನ ಕ್ರೂರಿಗಳೂ ಇಲ್ಲವೆಂಬ ಮಾತನ್ನು ನಿಜ ಮಾಡಿದನು. ೭೮. ಈ ವರ್ತಕನ ಕಾರಣದಿಂದ ತನಗೆ ಅಂದಿನ ಆಪತ್ತು ಕಳೆದುಹೋದುದರಿಂದ ತನಗೆ ಲೋಕದಲ್ಲಿ ಆ ವರ್ತಕನೇ ಸ್ನೇಹಿತನೆನ್ನದೆ ಪಾಪಯುಕ್ತನು ಬಂಗಾರದ ಮೇಲಿನ ಆಸೆಯನ್ನೇ ಯೋಚಿಸಿದನು. ೭೯. ಸುಳ್ಳನಿಗೆ ಮಾಡಿದ ಹಿತವೂ ಕಳ್ಳನಿಗೆ ಮಾಡಿದ ಉಪಕಾರವೂ ಸಮುದ್ರದಲ್ಲಿ ಮುಳುಗಿದ ಜಿಂಕೆಯೂ ಗ್ರಾಮ ಮುಖಂಡನಿಗೆ ಮಾಡಿದ ಮೇಲ್ಮೆಯೂ ವ್ಯರ್ಥವೆಂಬುದನ್ನು ನಿಜಮಾಡಿ ತಾನು ಕಟ್ಟಿಕೊಂಡಿದ್ದ ಕತ್ತಿಯಿಂದ ವರ್ತಕನನ್ನು ಬೆಂಕಿ ಆಡನ್ನು ಕೊಲ್ಲುವ ಹಾಗೆ ಹೊರಳಿಸಿ ಕೊಂದು ಚೀಲವನ್ನು ತೆಗೆದುಕೊಂಡು ಹೋದನು. ಹಾಗೆ ಕೆಲವರು ದೌರ್ಜನ್ಯವನ್ನು

ಪೋದನಂತೆ ಕಿಲಲ್ ದುರ್ಜನತ್ವಮಂ ಮಾಳ್ಪರಲ್ಲದೆ ಪರಮೋಪಕಾರಮಂ ನೆನೆಯರೆಂದು ಪೇಳ್ದುಸಿರದಿರ್ಪುದುಂ ಮುನಿಕುಂಜರರ್ ಜಿನದತ್ತ್ರಂ ಪೇಳ್ದ ಕಥೆಯುಂದಕ್ಕೆ ವಿಸ್ಮಯಂಬಟ್ಟು ೮೦

ಇಂದೀ ಜಿನದತ್ತನ ಕಥೆ
ಯುಂದಂ ಲೇಸಲ್ಲದಿದಱ ಭಾವಂ ಬೇಱೀ
ನೆಂದಪನೊ ತಿಳಿಯದೀತನ
ಮಂದಿರದೊಳ್ ಕೇಳ ವಸ್ತುವೊಂದೇನಾನುಂ ೮೧

ಕಿಟ್ಟುದಱಿಂದೀತಂ ಬಾ
ಯ್ವಿಟ್ಟು ಮಹಾ ಮೋಹದಿಂದೆ ಮೆಯ್ಯಱಿಯದೆ ಜಾ
ಣ್ಗೆಟ್ಟು ಮತಿಗೆಟ್ಟು ಗತಿಯಂ
ಬಿಟ್ಟೆಮ್ಮಂ ಕಳ್ಳನೆಂದು ಶಂಕಿಪನಕ್ಕುಂ ೮೨

ಗದ್ಯ॥ ಇದೆಲ್ಲಮೀತನ ಗೊಟ್ಟಾಟಮಲ್ಲ ದುಷ್ಕರ್ಮದ ಗೊಟ್ಟಾಟಮೆಂದು ಮನದೊಳ್ ನಕ್ಕು ವಣಿಗ್ಸುತಂಗೆ ನಂಬುಗೆಯುಪ್ಪಂತಿಲ್ಲಿಗೊಂದು ಕಥೆಯಂ ಮೆಲ್ಲನೆ ಪೇಟ್ಟೊಂದು ಪೊಲ್ಲಮೆಯುಂ ಕಳೆದುಕೊಳ್ವಮೆಂದು ಸೆಟ್ಟಿಗಿಂತೆಂದರ್ ೮೩

ಅತಿಶಯದಿಂ ಕೇಳ್ ದ್ವಾರಾ
ವತಿಯೆಂಬುದು ರಾಜಧಾನಿ ವೈಶ್ಯೋತ್ತಮ ಭೂ
ನುತನರ್ಧಚಕ್ರಿ ಧಾತ್ರೀ
ಪತಿ ನಾರಾಯಣನುದಾತ್ತನದನಾಳ್ವರಸಂ ೮೪

ಮಾಡುವವರೇ ಹೊರತು ದೊಡ್ಡ ಉಪಕಾರವನ್ನೂ ನೆನೆಸಿಕೊಳ್ಳುವುದಿಲ್ಲ ಎಂದು ಹೇಳಿ ಮೌನವಹಿಸಲು ಮುನಿಶ್ರೇಷ್ಠರು ಜಿನದತ್ತನು ಹೇಳಿದ ಕಥೆಯ ರೀತಿಗೆ ಆಶ್ಚರ್ಯ ಪಟ್ಟರು. ೮೦. ಈ ದಿನ ಜಿನದತ್ತನ ಕಥೆಯ ರೀತಿ ಸರಿಯಾಗಿಲ್ಲ, ಇದರ ಭಾವ ಬೇರೆ. ಇವನು ಏಕೆ ಹೇಳುತ್ತಿರುವನೋ ತಿಳಿಯದು. ಈತನ ಮನೆಯಲ್ಲಿ ಯಾವುದಾದರೂ ವಸ್ತುವೇನಾದರೂ ಕಳೆದುಹೋದದ್ದರಿಂದ ಈತನು ಮಹಾಮೋಹಪರವಶನಾಗಿ ಬುದ್ಧಿ ವಿವೇಕಗಳನ್ನು ಕಳೆದುಕೊಂಡು ಸದ್ಗತಿಯ ಚಿಂತೆಯನ್ನೂ ಬಿಟ್ಟು ನಮ್ಮನ್ನೇ ಕಳ್ಳನೆಂದು ಸಂದೇಹಿಸುತ್ತಿರುವನಾದೀತು. ೮೨. ಇದೆಲ್ಲವೂ ಈತನ ಕಪಟ ತಂತ್ರವಲ್ಲ; ಇದು ದುಷ್ಕರ್ಮದ ಗೊಟ್ಟಾಟವೆಂದು ಮನಸ್ಸಿನಲ್ಲಿಯೇ ನಕ್ಕು ಆ ವರ್ತಕ ಪುತ್ರನಿಗೆ ನಂಬಿಕೆಯಾಗುವಂತೆ ಈ ಸಂದರ್ಭಕ್ಕೆ ತಕ್ಕಂಥ ಒಂದು ಕಥೆಯನ್ನು ಉಪಾಯವಾಗಿ ಹೇಳಿ ಈ ಒಂದು ಅಪವಾದವನ್ನು ಕಳೆದುಕೊಳ್ಳೋಣವೆಂದು ಅವರು ಆ ಸೆಟ್ಟಿಗೆ ಹೀಗೆ ಹೇಳಿದರು : ೮೩. ಎಲೈ ವೈಶ್ಯೋತ್ತಮನೇ ಶ್ರದ್ಧೆಯಿಂದ ಕೇಳು. ದ್ವಾರಾವತಿಯೆಂಬ ನಗರ ರಾಜಧಾನಿ. ಅದಕ್ಕೆ ಭೂಮಂಡಲದ ಹೊಗಳಿಕೆಯನ್ನು ಪಡೆದ ಅರ್ಧ

ಆತನ ಪುರಕ್ಕೆ ಧರಣೀ
ಖ್ಯಾತರ್ ಗುಣಗಣಸಮೇತರುನ್ನತಶೀಲರ್
ಪ್ರೀತಿಯಿನಪಗತದುರಿತ
ವ್ರಾತರ್ದ್ವಯನಿಳಯರಮರಗಿರಿ ನಿಭ ಧೈರ್ಯರ್ ೮೫

ಗದ್ಯ॥ ದಂಡಕರೆಂಬ ಋಷಿಯರ್ ಬರ್ಪುದುಮವರ ಬರವಂ ಋಷಿನಿವೇದಕನಿಂದಱಿದು ನಾರಾಯಣ ಪರಿಜನ ಸಮೇತಂ ಬಂದು ವಂದಿಸಿ ಕಿಱಿದು ಬೇಗಂ ಧರ್ಮಮಂ ಕೇಳ್ದು ಪಿರಿದಪ್ಪ ವ್ಯಾಧಿಯಿಂ ಮುನಿಪತಿ ಗಿಡಿಗಿಡಿಜಂತ್ರಮಾಗಿರ್ಪುದಂ ಕಂಡು ತದ್ವ್ಯಾಧಿಯಂ ತೀರ್ಚುವೆನೆಂಬ ಬಗೆಯಿಂ ತಂದು ಬುದ್ಧಿವಂತನಪ್ಪುದಱಿಂ ನಿಮ್ಮಡಿ ನೀವೆನಗೆ ಕಾರುಣ್ಯಂಗೆಯ್ವರಪ್ಪೊಡೆ ಚಾತುರ್ಮಾಸ್ಯಮನೆನ್ನ ಪೊೞಲೊಳ್ ಮಾಡಿ ಪರಸುತ್ತುಮಿರ್ಪುದೆಂದು ಪಲವುಂ ವ್ರತವಿಶೇಷದಿಂ ಬೇಡಿಕೊಳ್ವುದುಂ ದಂಡಕ ಋಷಿ ಮೞೆಗಾಲಮುಮಡಸಿತಪ್ಪುದಱಿಂದೊಡಂಬಟ್ಟು "ತಥಾಸ್ತು" ಎಂಬುದುಂ ನಾರಾಯಣಂ ತನ್ನದೇಹಾರಕೊಡಗೊಂಡು ಪೋಗಿ ೮೬

ಶ್ರೀಕಾಂತಂ ಸದ್ವೈದ್ಯನ
ನೇಕಾಂತದೊಳೆಂದನೀ ಮುನೀಂದ್ರರ ರುಜೆಯಂ
ವ್ಯಾಕುಳನಾಗದೆ ಕಳೆ ನಿ
ರ್ವ್ಯಾಕುಲಮಪ್ಪಂತು ಬೇಗಮೆಂಬುದುಮಾತಂ ೮೭

ಚಕ್ರಿಯಾದ ಭೂಪತಿ, ನಾರಾಯಣನು ಅದನ್ನು ಆಳುವ ದೊರೆ. ೮೪. ಆತನ ಪಟ್ಟಣಕ್ಕೆ ಲೋಕಪ್ರಸಿದ್ಧರಾದ ಗುಣವಂತರೂ ಉನ್ನತ ಶೀಲವಂತರೂ ಪಾಪರಹಿತರೂ ಇಹಪರಗಳಿಗೆ ನಿಲಯರೂ ಪರ್ವತ ಧೈರ್ಯರೂ ಆದ ದಂಡಕರೆಂಬ ಋಷಿಗಳು ಬಂದರು. ೮೫. ಅವರ ಆಗಮನವನ್ನು ಋಷಿನಿವೇದಕನಿಂದ ತಿಳಿದು ನಾರಾಯಣನು ಪರಿಜನ ಸಮೇತನಾಗಿ ಬಂದು ವಂದನೆ ಸಲ್ಲಿಸಿ ಕೊಂಚ ಹೊತ್ತು ಧರ್ಮವನ್ನು ಕೇಳಿ, ದೊಡ್ಡದಾದ ವ್ಯಾಧಿಯಿಂದ ಆ ಮುನಿಪತಿ ಶಿಥಿಲ ದೇಹನಾಗಿ ಬಡಕಲಾಗಿದ್ದುದನ್ನು ಕಂಡು ಆ ವ್ಯಾಧಿಯನ್ನು ಕಳೆಯಬೇಕೆಂಬ ಯೋಚನೆಯಿಂದ ಬುದ್ಧಿವಂತನಾದ್ದರಿಂದ "ನಿಮ್ಮ ಪಾದ ನೀವು ನನಗೆ ಕರುಣೆ ತೋರುವಿರಾದರೆ ಈ ಚಾತುರ್ಮಾಸ್ಯವನ್ನು ನನ್ನ ಪಟ್ಟಣದಲ್ಲಿ ಮಾಡಿ ಹರಸುತ್ತ ಇರಬೇಕು" ಎಂದು ಹಲವು ವ್ರತ ವಿಶೇಷದಿಂದ ಬೇಡಿಕೊಂಡನು. ಆಗ ದಂಡಕ ಋಷಿಯು ಮಳೆಗಾಲ ಸಂಪ್ರಾಪ್ತವಾಯಿತಾದ್ದರಿಂದ ಸಮ್ಮತಿಸಿ "ತಥಾಸ್ತು" ಎಂದರು. ನಾರಾಯಣನು ಸಂತೋಷಪಟ್ಟು ದಂಡಕ ಋಷಿಯನ್ನು ಜತೆಯಲ್ಲಿ ಕರೆದುಕೊಂಡು ಹೋಗಿ ತನ್ನ ದೇಹಾರ (ದೇವಮಂದಿರ)ದಲ್ಲಿ ನಿಲ್ಲಿಸಿದನು. ೮೬. ಶ್ರೀಕಾಂತನು ಶ್ರೇಷ್ಠನಾದ ವೈದ್ಯನೊಬ್ಬನನ್ನು ಏಕಾಂತವಾಗಿ ಕರೆಸಿಕೊಂಡು ಹೀಗೆ ಹೇಳಿದನು. "ಈ ಮುನಿಶ್ರೇಷ್ಠರ ರೋಗವನ್ನು ಬೇಸರ ಮಾಡಿಕೊಳ್ಳದೆ ಹೋಗಲಾಡಿಸು. ಆತನಿಗೆ ಬೇಗನೆ ಗುಣವಾಗಲಿ" ೮೭. ಅರಸನ ಈ

ಗದ್ಯ॥ ಅಂತೆಗೆಯ್ವೆನೆಂದು ಬೆಸನಂ ಕೈಕೊಂಡು ಪೋಗಿ ತದ್ವ್ಯಾಧಿಗೆ ತಕ್ಕಂತಪ್ಪ ದಿವ್ಯೌಷಧಂಗಳಂ ಕೂಡಿ ತಂದು ಭೂಪಾಲನ ಕೈಯೊಳ್ ಕುಡುವುದುಮರಸಂ ತನ್ಮುನೀಂದ್ರರೌಷಧಮೆಂದೊಡೆ ಕೊಳ್ಳರೆಂದುಪಾಯದಿಂದೀ ಪರ್ವಮಿದುಂಡೆಯ ಪರ್ವಮೆಂದು ಪ್ರಕಟಂ ಮಾಡಿ ಮದ್ದಂ ನವಣೆಯ ಪಿಟ್ಟಿನೊಳ್ ಕೂಡಿ ಕಿಱಿಯುವಪ್ಪುಂಡೆಗಳಂ ಮಾಡಿ ತನ್ನ ಪದಿನಾಱು ಸಾಸಿರ್ವರರಸಿಯರ ಮನೆಗೆಲ್ಲಮಿಾಪುಂಡೆಗಳಂ ಮುನಿಮಂದ್ಯರಿಂಗಿಳ್ಕುವುದೆಂದಟ್ಟುವುದುಂ ೮೮

ಅರಸಿಯರಾತ್ಮವಲ್ಲಭನ ಪೇೞ್ಕೆಯೊಳಾ ಮುನಿಮಂದ್ಯನಂ ಮನಂ
ಮುರಿಯದೆ ನಿಚ್ಚಲುಂ ನಿಲಿಸಿ ನಿಮ್ಮಡಿಯುಂಡೆಯ ಪರ್ವಮೀಗಳೀ
ಪುರದೊಳಮೀ ಮಹೀಶ್ವರನ ಗೇಹದೊಳಂ ಬಗೆವ ದಿವೂಟಮೆಂ
ದಿರದವನಿಕ್ಕೆ ಕಾಂತೆಯರ ಮಾತನೆ ನಂಬಿ ಮುನೀಂದ್ರನಂತವಂ ೮೯

ಗದ್ಯ॥ ಮೆಲುತ್ತುಮಿರ್ಪುದುಂ ಕೆಲವಾನುಂ ದಿವಸಕ್ಕೆ ತನುವಿನೊಳಾದ ಕುತ್ತಮೆಲ್ಲಂ ಕ್ರಮದಿಂ ಪಿಂಗಿ ಪೋಪುದುಂ ನಾರಾಯಣಂ ದಂಡಕ ಋಷಿಯ ವ್ಯಾಧಿಪೋದುದಕ್ಕೆ ಮುಯ್ಯುಮ್ಮದಮಾಗಿ ಸಂತೋಷದಿಂದಿರ್ಪುದುಂ, ವೈದ್ಯನುಂ ತನ್ನ ಮಾಡಿದ ಮದ್ದಿಂದಂ ರುಜೆಯೆಲ್ಲಂ ಪೋಯ್ತೆನ್ನಿಂ ವೈದ್ಯರಧಿಕರಾರೆಂದು ಪೆರ್ಚಿ ಮೆಯ್ಯಱಿಯದೆ ತನ್ನ ವೈದ್ಯದ ಮಹಿಮೆಯಂ ನಾರಾಯಣಂಗೆ

ಪ್ರಾರ್ಥನೆಯನ್ನು ಮನ್ನಿಸಿ ಆ ವೈದ್ಯನು ಹಾಗೆಯೇ ಮಾಡುವೆನೆಂದು ಆ ಕೆಲಸವನ್ನು ಒಪ್ಪಿಕೊಂಡು ಆ ವ್ಯಾಧಿಗೆ ಯೋಗ್ಯವಾದ ದಿವ್ಯೌಷಧಗಳನ್ನು ಒಟ್ಟುಗೂಡಿಸಿ ತಂದು ರಾಜನ ಕೈಯಲ್ಲಿ ಕೊಟ್ಟನು. ಆಗ ಅರಸನು ಆ ಮುನಿಶ್ರೇಷ್ಠರು ಔಷಧವೆಂದು ಹೇಳಿದರೆ ತೆಗೆದುಕೊಳ್ಳುವುದಿಲ್ಲವಾದ್ದರಿಂದ ಉಪಾಯವಾಗಿ 'ಈ ಹಬ್ಬ ಉಂಡೆಯ ಹಬ್ಬ' ಎಂದು ಪ್ರಕಟಿಸಿ ತನ್ನ ಹದಿನಾರು ಸಾವಿರ ಮಂದಿ ಅರಸಿಯರ ಮನೆಗಳಿಗೂ ಆ ಮದ್ದನ್ನು ನವಣೆಯ ಹಿಟ್ಟಿನಲ್ಲಿ ಕಲಸಿ ಚಿಕ್ಕ ಚಿಕ್ಕ ಉಂಡೆಗಳನ್ನು ಮಾಡಿ ಕಳುಹಿಸಿ "ಇವುಗಳನ್ನು ಮುನಿಶ್ರೇಷ್ಠರಿಗೆ ನೀಡಬೇಕು" ಎಂದು ಹೇಳಿಕಳುಹಿಸಿದನು. ೮೮. ಅರಸಿಯರು ತಮ್ಮ ವಲ್ಲಭನ ಹೇಳಿಕೆಯಂತೆ ಸಂಕಲ್ಪ ಭಂಗವಾಗದಂತೆ ನಿತ್ಯವೂ ಆ ಮುನಿಪೂಜ್ಯನನ್ನು ನಿಲ್ಲಿಸಿ, "ಸ್ವಾಮಿ, ಈಗ ಉಂಡೆಯ ಹಬ್ಬ. ಈಗ ಈ ಪುರದಲ್ಲಿಯೂ ಈ ದೇಶದ ರಾಜನ ಮನೆಯಲ್ಲಿಯೂ ಇವೇ ಊಟದ ಸಾಮಗ್ರಿಯೆಂದು ಹೇಳಿ ಅವುಗಳನ್ನು ಬಡಿಸಿದರು. ಆ ಕಾಂತೆಯರ ಮಾತನ್ನು ನಂಬಿ ಆ ಮುನಿಶ್ರೇಷ್ಠನು ಅವುಗಳನ್ನು ಸ್ವೀಕರಿಸಿ ಮೆಲ್ಲುತ್ತಿರಲು ಕೆಲವು ದಿವಸಗಳಲ್ಲಿ ದೇಹದಲ್ಲಿ ಹುಟ್ಟಿದ್ದ ರೋಗವೆಲ್ಲವೂ ಕ್ರಮವಾಗಿ ಕಳೆದುಹೋಗಲು ನಾರಾಯಣನು ದಂಡಕ ಋಷಿಯ ವ್ಯಾಧಿಯು ಹೋದುದಕ್ಕೆ ಮುಪ್ಪಟ್ಟು ಸಂತೋಷವಾಗಿ ಆನಂದದಿಂದ ಇರಲು, ವೈದ್ಯನೂ ತಾನು ಮಾಡಿದ ಮದ್ದಿನಿಂದ ರೋಗವೆಲ್ಲವೂ ಹೋಯಿತೆಂದೂ ತನಗಿಂತ ಹೆಚ್ಚಿನ ವೈದ್ಯರು ಯಾರೂ ಇಲ್ಲವೆಂದೂ ಹೆಮ್ಮೆಪಟ್ಟು ಎಚ್ಚರತಪ್ಪಿ ತನ್ನ ವೈದ್ಯದ ಮಹಿಮೆಯನ್ನು ನಾರಾಯಣನಿಗೆ ತೋರಿಸಿ

ತೋಱಿ ಮೆಚ್ಚುಗೊಳ್ವೆನೆಂದು ದಂಡಕ ಋಷಿಯಂ ಸಾರೆ ಕುಳ್ಳಿರ್ದ ನಾರಾಯಣನಲ್ಲಿಗೆ ವಂದು ೯೦

ಅರಸಂಗಂ ಮುನಿಪತಿಗಂ
ಕರಮಾದರದಿಂದಮೆಱಗಿ ಕುಳ್ಳಿರ್ದು ಮುನೀ
ಶ್ವರಮುಖಕಮಲಮುಮಂ ವಿ
ಸ್ತರದಿಂದಂ ನೋಡಿ ನುಡಿದನಾಗಳ್ ವೈದ್ಯಂ ೯೧

ನಿತ್ತರಿಸಬಾರದೆನಿಸುವ
ಕುತ್ತಂ ಕಯ್ಕೊಂಡು ಬಿಡದೆ ಪತ್ತಿರ್ದುದು ಲೋ
ಕೋತ್ತಮರನಿನ್ನೆವರೆಗಂ
ಮತ್ತನಿಸದೆ ಬಿಟ್ಟುಪೋದುದೀಗಳ್ ನಯದಿಂ ೯೨

ಕಡುಲೇಸಾಯ್ತೆಂದಾತಂ
ತಡವಿಲ್ಲದೆ ಭಾಷೆಯಿಂದಮೆಂದೊಡೆ ಮುನಿಪಂ
ನುಡಿದಂ ಕರ್ಮದಿನಕ್ಕುಂ
ಕಡುದುಃಖಂ ಕಿಡುಗುಮತ್ತಮದಱುಪಶಮದಿಂ ೯೩

ಗದ್ಯ॥ ಅದಾವುದು ಚೋದ್ಯಂ ದುಃಖಂ ಕರ್ಮದೊದವಿನೊಳಮದಱುಪಶಮದಿಂ ಸುಖಂ ಸಮನಿಸುಗುಮೆಂದು ಮುನಿರಾಯನವನಭಿಪ್ರಾಯಮನಱಿಯದೆ ಜಿನಾಗಮದೋಜೆಯಿಂದುಳ್ಳ

ಬಹುಮಾನವನ್ನು ತೆಗೆದುಕೊಳ್ಳುವೆನೆಂದು ದಂಡಕ ಋಷಿಯನ್ನು ಸಮೀಪಿಸಿ ಹತ್ತಿರ ಕುಳಿತಿದ್ದ ನಾರಾಯಣನಲ್ಲಿಗೆ ಬಂದನು. ೯೦. ಅರಸನಿಗೂ ಮುನಿಶ್ರೇಷ್ಠನಿಗೂ ಬಹಳ ಆದರದಿಂದ ನಮಸ್ಕರಿಸಿ ಕುಳಿತುಕೊಂಡು ಮುನೀಶ್ವರನ ಮುಖವನ್ನು ಬಹಳವಾಗಿ ದೃಷ್ಟಿಸಿ ನೋಡಿ ಆಗ ವೈದ್ಯನು ಹೀಗೆ ಹೇಳಿದನು. ೯೧. ಸಹಿಸಲು ಸಾಧ್ಯವಲ್ಲವೆಂಬಂಥ ರೋಗವು ಈ ಲೋಕೋತ್ತಮರನ್ನು ಹಿಡಿದುಕೊಂಡು ನಿರಂತರವಾಗಿ ಇಂದಿನವರೆಗೂ ಬಾಧಿಸುತ್ತಿದ್ದದ್ದು ಈಗ ಸುಲಭವಾಗಿ ಬಿಟ್ಟುಹೋಯಿತು.” ೯೨. ಅದು ಬಹಳ ಚೆನ್ನವಾಯಿತೆಂದು ತಡಮಾಡದೆ ಮಾತಿನಲ್ಲಿ ಹೇಳುತ್ತಲೂ ಆ ಮುನಿಶ್ರೇಷ್ಠನು “ಕರ್ಮಫಲವಾಗಿ ಕಡುದುಃಖವುಂಟಾಗುವುದು. ಮತ್ತು ಆ ಕರ್ಮ ಉಪಶಮಿಸಿದಾಗ ಆ ದುಃಖ ಹೋಗುತ್ತದೆ” ಎಂದು ಹೇಳಿದನು ೯೩ ಅದು ಯಾವ ಆಶ್ಚರ್ಯ ? ದುಃಖ ಕರ್ಮದ ಆಧಿಕ್ಯದಿಂದ. ಅದರ ಉಪಶಮನದಿಂದ ಸುಖಪ್ರಾಪ್ತಿಯಾಗುವುದೆಂದು ಮುನಿರಾಯನು, ಅವನ ಅಭಿಪ್ರಾಯವನ್ನು ಅರಿಯದೆ ; ಜಿನಾಗಮದ ಕ್ರಮದಂತೆ

ದನುಳ್ಳಂತೆ ನುಡಿವುದುಂ ವೈದ್ಯಂ ಮುನಿದೆನ್ನಮಾಡಿದ ದಿವ್ಯೌಷಧದಿಂದುಪಶಮಮಪ್ಪುದೆನ್ನದೆ ಶುಭಕರ್ಮೋದಯಂ ಕಳೆದುದೆಂದೆನ್ನ ವೈದ್ಯಮನರಸನ ಮುಂದೆ ಕುಂಟುಮಾಡಿದನೆಂದು ಋಷಿಯಮೇಲೆ ಕೋಪಂ ಪುಟ್ಟಿ ಪಲಕಾಲಕ್ಕೆ ಪಿರಿದಪ್ಪಾರ್ತೆಪುಟ್ಟಿ ಸತ್ತು ಕೋಡಗಮಾಗಿ ಪುಟ್ಟಿದನಿತ್ತಲ್ ೮೩೫

ಯತಿನಾಥನುಮಾ ದ್ವಾರಾ
ವತಿಯಂ ಪೊಱಮಟ್ಟು ಮುನ್ನಿನಾ ಕ್ರಮದಿಂದಂ
ಕ್ಷಿತಿಯೊಳ್ ವಿಹಾರಿಸುತ್ತುಂ
ನುತವಾಕ್ಯಂ ತತ್ಕಪೀಂದ್ರನಿರ್ದಾ ಬನಮಂ ೮೪

ಗದ್ಯ॥ ಪೊಕ್ಕೊಂದು ಮಾವಿನಮರದ ಕೆಳಗೆ ಶುದ್ಧಮಪ್ಪೆಡೆಯಂ ಪ್ರತಿಲೇಖಿಸಂಗೆಯ್ದು ಕುಳ್ಳಿರ್ದು ಪಂಥಾತಿಚಾರಮಂ ಮಾಡುತ್ತುಮಿರ್ಪುದುಂ ಮುನ್ನಿನ ವೈದ್ಯಚರನಪ್ಪ ಕೋಡಗಂ ಕಂಡು ಜಾತಿಸ್ಮರನಾಗಿ ಪೂರ್ವವೈರಮಂ ನೆನೆದು ೮೫

ಸೊಕ್ಕಿಂದಂದೆನ್ನಂ ಕರ
ಮುಕ್ಕಿಸಿಯಂಭೋರುಹಾಕ್ಷನಾಸ್ಥಾಯಿಕೆಯೊಳ್
ದಕ್ಕುಂದಲೆವಾಯ್ದೀ ಮುನಿ
ಯುಕ್ಕಂ ಲೇಸಾಗಿ ಕಿಡಿಸಿ ನೋವಂ ಮಾೞ್ಪಿಂ ೮೬

ಇದ್ದದ್ದನ್ನು ಇದ್ದ ಹಾಗೆ ನುಡಿಯಲು, ವೈದ್ಯನಿಗೆ ಸಿಟ್ಟು ಬಂತು. ತಾನು ಮಾಡಿದ ದಿವ್ಯೌಷಧದಿಂದ ಉಪಶಮವಾಯಿತೆಂದು ಹೇಳದೆ ಶುಭಕರ್ಮೋದಯವೇ ರೋಗವನ್ನು ಕಳೆಯಿತೆಂದು ಹೇಳಿ ತನ್ನ ವೈದ್ಯವನ್ನು ಅರಸನ ಎದುರಿನಲ್ಲಿ ಕುಂಟು ಮಾಡಿದನೆಂದು ಆ ಋಷಿಯಮೇಲೆ ಕೋಪ ಹುಟ್ಟಿತು. ಹಲವು ಕಾಲದ ಮೇಲೆ ದೊಡ್ಡ ರೋಗ ಹುಟ್ಟಿ ಸತ್ತು ಆ ವೈದ್ಯನು ಕೋತಿಯ ಜನ್ಮವನ್ನು ಹೊಂದಿದನು. ೮೪. ಇತ್ತ ಯತಿಶ್ರೇಷ್ಠನು ಆ ದ್ವಾರಾವತಿಯಿಂದ ಹೊರಟು ಮೊದಲಿನ ಕ್ರಮದಂತೆ ಲೋಕದಲ್ಲಿ ಸಂಚರಿಸುತ್ತ ಆ ಸ್ತೋತ್ರಪಾತ್ರನು ಕಪೀಂದ್ರನು ಇದ್ದ ಆ ವನವನ್ನು ಪ್ರವೇಶಿಸಿದನು. ೮೫. ಆ ವನವನ್ನು ಹೊಕ್ಕು ದಂಡಕಋಷಿಯು ಒಂದು ಮಾವಿನಮರದ ಕೆಳಗೆ ಪ್ರತಿಲೇಖನ ಮಾಡಿ ಕುಳಿತು ಪಂಥಾತಿಚಾರವನ್ನು ಮಾಡುತ್ತಿದ್ದರು. ಆಗ ಹಿಂದೆ ವೈದ್ಯನಾಗಿದ್ದ ಆ ಕೋತಿಯು ಅವರನ್ನು ಕಂಡು ಪೂರ್ವಜನ್ಮಸ್ಮರಣೆ ಹೊಂದಿ ಹಿಂದಿನ ವೈರವನ್ನು ನೆನೆಸಿಕೊಂಡು "ಆ ದಿನ ಕೊಬ್ಬಿನಿಂದ ನನ್ನನ್ನು ಕಮಲಾಕ್ಷನ ಆಸ್ಥಾನದಲ್ಲಿ ವಿಶೇಷವಾಗಿ ಕೆರಳಿಸಿಯೂ ತಲೆ ದಕ್ಕಿಸಿಕೊಂಡು ಹೊರಬಿದ್ದ ಈ ಮುನಿಯ ಗರ್ವವನ್ನು ಚೆನ್ನಾಗಿ ಕೆಡಿಸಿ ನೋವನ್ನುಂಟು ಮಾಡುತ್ತೇನೆ" ೮೬. ಎಂದು ಆ ಕಪಿಯು ಕೋಪದಿಂದ ರೇಗಿ ತನ್ನ ಮರ್ಕಟ

ಎಂದು ಕಪಿ ಮಸಗಿ ಮರ್ಕಟ
ವೃಂದಂ ಬೆರಸೊಂದು ಮಾವಿನೊಣಗಿದಕೊಂಬಂ
ತಂದಿಕ್ಕುವುದುಂ ಮುನಿಜನ
ವಂದಿತಪದಯುಗನ ತೊಡೆಯನಿಮ್ಮೆಯ್ಗಾಣಲ್ ೯೮

ಅದು ಚೆಕ್ಕೆನಲುರ್ಚುವುದುಂ
ಸದಮಲಚಾರಿತ್ರನಳ್ಕಿತಲ್ಲಣಸದೆ ಬೆ
ಚ್ಚದೆ ನೋದೆನೆಂದು ಮನದೊಳ್
ಕುದಿಯದೆ ತನುವೆನ್ನದಲ್ಲದೆಂಬಂತಿರ್ದಂ ೯೯

ಮೋನದಿಂ ಮುನಿನಾಥನಿರ್ಪುದುಮಾಗಳಾ ಕಪಿ ನೋಡಿ ಸು
ಜ್ಞಾನಿ ಮಂದರಧೈರ್ಯನೀ ಮುನಿ ತನ್ನ ದೇಹಮನೊಲ್ಲದಂ
ಗಾನು ಮಾಡುವೆನೆಂಬುದೆಗ್ಗಟಿವೈದ್ಯಮಂ ಕಡುಪಾಪಿಯೆಂ
ಹೀನನೆಂ ಕರಮೆಗ್ಗನೆಂ ಮುನಿಸಿಂ ವಿಚಾರಣೆಯಿಲ್ಲದಾಂ ೧೦೦

ಗದ್ಯ॥ ನಿರಪರಾಧಿಗೆ ನೋವಂ ಮಾಡಿದೆನೆಂದು ತನ್ನಂ ತಾನೆ ನಿಂದಿಸಿಕೊಂಡು ಪಲವು ಕೋಡಗಗಳ್‌ವೆರಸು ತೊಡೆಯುನುರ್ಚಿ ನಟ್ಟಿರ್ದ್ದ ಕೊರಡಂ ಕಿಟ್ಟು ಕಳೆದು ತಾಂ ಮುನ್ನಂ ವೈದ್ಯನಪು ದಱಿಂದಲ್ಲಿಗೆ ತಕ್ಕ ಮರ್ದಂ ಮಾಡಿ ಪುಣ್ಣಂ ಕಳೆದು ಬಟಿಕ್ಕಣುವ್ರತಧಾರಿಯಾಗಿ ಮುಡಿಪಿ

ಸಮೂಹದೊಡನೆ ಕೂಡಿಕೊಂಡು ಒಣಗಿದ ಒಂದು ಮಾವಿನ ಕೊಂಬನ್ನು ತಂದು ಹೊಡೆಯುತ್ತಲೇ, ಆ ಮುನಿಪೂಜಿತನ ತೊಡೆಯನ್ನು ರಂಧ್ರವಾಗುವಂತೆ ೯೮. 'ಚಕ್' ಎಂದು ಚುಚ್ಚಿತು. ಆದರೆ ಆ ಶುದ್ಧಚಾರಿತ್ರನು ಅಂಜದೆ, ಗಾಬರಿಗೊಳ್ಳದೆ, ಬೆಚ್ಚಿ ಬೀಳದೆ, ನೋವಾಯಿತೆಂದು ಮನಸ್ಸಿನಲ್ಲಿ ಸಂಕಟಪಡದೆ, ಆ ದೇಹವೇ ತನ್ನದಲ್ಲವೆಂಬಂತೆ ಉದಾಸೀನನಾಗಿ ಇದ್ದುಬಿಟ್ಟನು. ೯೯. ಮುನಿಶ್ರೇಷ್ಠನು ಮೌನದಿಂದ ಇರಲು ಆಗ ಆ ಕಪಿ ನೋಡಿ "ಸುಜ್ಞಾನಿಯೂ ಮಂದರಪರ್ವತದಂತೆ ಅಚಂಚಲ ಧೈರ್ಯವುಳ್ಳವನೂ ತನ್ನ ದೇಹದ ಮೇಲೆಯೇ ಅಪೇಕ್ಷೆಯಿಲ್ಲದವನೂ, ಆದ ಈ ಮಹಾಮುನಿಗೆ ನಾನು ಅಲ್ಪವಾದ ವೈದ್ಯವನ್ನು ಮಾಡುವುದು ದಡ್ಡತನ. ನಾನು ಬಹಳ ಪಾಪಿ, ನೀಚ, ಬಹಳ ದಡ್ಡ, ನಾನು ಈ ಕೋಪದಿಂದ ವಿಚಾರವನ್ನೇ ಮಾಡದೆ ಯಾವ ಅಪರಾಧವನ್ನೂ ಮಾಡದವನಿಗೆ ನೋವನ್ನುಂಟುಮಾಡಿದೆನೆಂದು ತನ್ನನ್ನು ತಾನೇ ನಿಂದಿಸಿಕೊಂಡು ಹಲವು ಕೋಡಗಗಳ ನೆರವಿನಿಂದ ತೊಡೆಗೆ ಚುಚ್ಚಿ ನೆಟ್ಟುಕೊಂಡಿದ್ದ ಕೊರಡನ್ನು ತೆಗೆದು ತಾನು ಹಿಂದೆ ವೈದ್ಯನಾಗಿದ್ದುದರಿಂದ ಅದಕ್ಕೆ ತಕ್ಕ ಮದ್ದನ್ನುಮಾಡಿ ಆ ಹುಣ್ಣನ್ನು ವಾಸಿಮಾಡಿತು. ಆಮೇಲೆ ಅದು ಅಣುವ್ರತಧಾರಿಯಾಗಿ ಸತ್ತು ದೇವಗತಿಯನ್ನು ಪಡೆಯಿತು. ಹಾಗೆ

ದೇವಗತಿವಡೆದುದಂತೆ ಕೆಲಂಬರ್ ಮೂರ್ಖರ್ ವಿಚಾರಣೆಯಿಲ್ಲದೆ ಸಾಧುಗಳಪ್ಪವರಂ ಬಱಿದೆ ಕಾಡುವರೆಂಬುದುಂ ಜಿನದತ್ತಸೆಟ್ಟಿ ತನ್ನೊಳಿಂತೆಂದಂ ೧೦೦

ಪಡೆಯಲ್ ಬಾರದ ಧನಮಂ
ಕಡುಲೋಭಂ ಕೊಂಡು ಕೈಗೆ ವಂದದನೆಂತುಂ
ಬಿಡಲಾಱದೆನ್ನ ಪೊನ್ನಂ
ಪಿಡಿದಿರ್ದಪನೇವೆನೆಂದು ಮನದೊಳ್ ನೋವಿಂ ೧೦೧

ಗದ್ಯ॥ ಮಲಮಲಮಱುಗಿ ಕಿಱಿದು ಬೇಗಂ ಹಮ್ಮದಂ ಬೋದರಂತುಸಿರದಿರ್ದು ಸೈರಿಸಲಾಱದಿನ್ನುಂ ಕಥೆಯನುಪಾಯದಿಂ ಪೇಟ್ದಿನ್ನ ಪೊನ್ನಂ ಕೊಳ್ವೆನೆಂದು ಮತ್ತೊಂದು ಕಥೆಯನಿಂತೆಂದು ಪೇಟ್ದಂ ೧೦೨

ಭಾನುಪುರಮೆಂಬ ಪುರದೊಳ
ನೂನಗುಣಂ ಕಪಿಲನೆಂಬಪಾರ್ವಂ ಸುಖದಿಂ
ತಾನಿರ್ದು ತನ್ನೊಳೊಮ್ಮೆ ಮ
ಹೀನುತನಾರಯ್ದು ಕಂಡನೊಂದೊಳ್ಪಯುಮಂ ೧೦೪

ಅನುಪಮವಿದ್ಯೆಗಳಂ ಬ
ಲ್ಲೆನವೋಘಂ ಬಲ್ಲೆನಾಗಿಯುಂ ಗಾರುಡಮೊಂ
ದನೆ ಕಲ್ಲದನ್ನವರೆಗಂ
ಜನಕೆಲ್ಲಂ ವಿದ್ಯೆಯಿಂದೆ ಬಣ್ಣದನಲ್ಲಂ ೧೦೫

ಕೆಲವರು ಮೂರ್ಖರು ಯೋಚನೆ ಮಾಡದೆ ಸಾಧುಗಳಾದವರನ್ನು ಸುಮ್ಮನೆ ಕಾಡಿಸುವರು. ಇಷ್ಟು ಹೇಳಿ ಸುಮ್ಮನಾಗಲು ಜಿನದತ್ತಸೆಟ್ಟಿ ತನ್ನೊಳಗೇ ಹೀಗೆ ಯೋಚಿಸಿದನು: ೧೦೧. ಸಂಪಾದಿಸಲು ಸಾಧ್ಯವಾಗದಷ್ಟು ಧನವನ್ನು ಮಹಾಲೋಭದಿಂದ ತೆಗೆದುಕೊಂಡು ಈಗ ಕೈಗೆ ಬಂದದ್ದನ್ನು ಹೇಗೂ ಬಿಡಲಾರದೆ ನನ್ನ ಚಿನ್ನವನ್ನು ಹಿಡಿದಿಟ್ಟುಕೊಂಡಿದ್ದಾನೆ. ಈಗ ಏನು ಮಾಡಲಿ" ಎಂದು ಮನಸ್ಸಿನ ನೋವಿನಿಂದ ತೀವ್ರವಾಗಿ ಸಂಕಟಪಟ್ಟು ಸ್ವಲ್ಪಹೊತ್ತು ಮೂರ್ಛೆಹೋದವರಂತೆ ಮಾತನಾಡದೆ ಮೌನದಿಂದ ಇದ್ದು ಸಹಿಸಲಾರದೆ ಇನ್ನೂ ಕಥೆಯನ್ನು ಹೇಳಿ ಉಪಾಯದಿಂದ ತನ್ನ ಚಿನ್ನವನ್ನು ಪಡೆದುಕೊಳ್ಳುವ ಯೋಚನೆಯಿಂದ ಸೆಟ್ಟಿಯು ಮತ್ತೊಂದು ಕಥೆಯನ್ನು ಹೇಳಲು ತೊಡಗಿದನು. ೧೦೩. ಭಾನುಪುರವೆಂಬ ಪಟ್ಟಣದಲ್ಲಿ ಸಂಪೂರ್ಣಗುಣಶಾಲಿಯಾದ ಕಪಿಲನೆಂಬ ಬ್ರಾಹ್ಮಣನು ತಾನು ಸುಖವಾಗಿ ಜೀವಿಸುತ್ತಿದ್ದು ಒಂದು ಸಲ ಆ ಮಹೀಪೂಜ್ಯನು ತನ್ನ ಮನಸ್ಸಿನಲ್ಲಿಯೇ ವಿಚಾರಮಾಡಿ ಒಂದು ಒಳ್ಳೆಯ ನೀತಿಯನ್ನು ಕಂಡನು. ೧೦೪. "ನಾನು ಉಪಮೆಯಿಲ್ಲದಂಥ ಹಲವು ವಿದ್ಯೆಗಳನ್ನು ಬಲ್ಲೆ. ಆದರೂ ಗಾರುಡವಿದ್ಯೆಯೊಂದನ್ನೇ ಕಲಿಯಲಿಲ್ಲ, ಅದನ್ನು ಕಲಿತ ಹೊರತು ಎಲ್ಲ ಜನರಿಗಿಂತ ಹೆಚ್ಚಿನ ವಿದ್ಯಾವಂತನೆನ್ನಿಸಿಕೊಳ್ಳುವುದಿಲ್ಲ" ೧೦೫. ಹೀಗೆ ಯೋಚಿಸಿ ಲಾಭವೂ

ಗದ್ಯ॥ ಎಂದು ಚಿಂತಿಸಿ ಲಾಭಮುಂ ಕೀರ್ತಿಯುಮಿಂತಲ್ಲದಾಗದೆಂದು ಭಾನುಪುರಮಂ ಪೊಱ ಮಟ್ಟು ಗಾರುಡವಿದ್ಯೆಯನೆಲ್ಲಿ ಪೊಕ್ಕಪ್ಪೊಡಂ ಕಲಿವೆನೆಂದು ಪೂಣ್ದು ಪೂರ್ವದೇಶಕ್ಕೆ ಹೋಗಿ ತದ್ದೇಶದೊಳೊರ್ವ ಪ್ರಸಿದ್ಧನಪ್ಪ ಮಂತ್ರವಾದಿಯಂ ಪೊರ್ದಿ ೧೦೬

ತಿರಿದುಂಡಾತನ ಪೇೞ್ದಗೆಯ್ದು ಕಪಟೋಪಾಯಂಗಳಿಂ ಲಲ್ಲೆಯಿಂ
ದರಿದೆಂದೋವದೆ ಶಿಷ್ಯವೃತ್ತಿಯನವಂ ಪೂಣ್ದೊರ್ಪುದುಂ ನಾಡೆಯುಂ
ಕರುಣಂಬಟ್ಟುಪದೇಶಮಂ ಕುಡುವುದುಂ ಕೈಕೊಂಡು ತದ್ದೇಶದಿಂ
ಬಱುತುಂ ಬಟ್ಟೆಯೊಳೊಂದು ಸತ್ತ ಪುಲಿಯಂ ಕಂಡಾಗಳಂತಾ ದ್ವಿಜಂ ೧೦೭

ಗದ್ಯ॥ ಪಾವುಕೊಂಡು ಸತ್ತಿತ್ತೆಂದಱಿದು ಕಾರುಣ್ಯದಿಂ ತನ್ನ ಮಂತ್ರಮಂ ನಚ್ಚುವವ ನಪ್ಪುದಱಿಂ ೧೦೮

ನೀರಂ ಮಂತ್ರಿಸಿ ತಳಿಯೆ ಪು
ಮಾರಂ ವಿಷಮಿಱಿದು ರಾಗದಿಂದೆರ್ದು ಮಹಾ
ಕ್ರೂರತೆಯಿಂ ವಿಪ್ರನನುಪ
ಕಾರಂಬುದುಲಂಡ (?) ಮೆಂಬ ನಾಣ್ಣುಡಿಯವೋಲ್ ೧೦೯

ಕೀರ್ತಿಯೂ ಹೀಗಲ್ಲದೆ ಆಗುವುದಿಲ್ಲವೆಂದು ನಿರ್ಧರಿಸಿಕೊಂಡು ಊರಿನಿಂದ ಹೊರಟು ಎಲ್ಲಿ ಹೋದರೆ ಗಾರುಡ ವಿದ್ಯೆಯನ್ನು ಕಲಿಯಬಹುದೆಂದು ಚಿಂತಿಸಿ ಪೂರ್ವದೇಶಕ್ಕೆ ಹೋದನು. ಆ ದೇಶದಲ್ಲಿ ಪ್ರಸಿದ್ಧನಾಗಿದ್ದ ಒಬ್ಬ ಮಂತ್ರವಾದಿಯನ್ನು ಆಶ್ರಯಿಸಿದನು. ೧೦೭. ಭಿಕ್ಷಾನ್ನವನ್ನು ಉಂಡು ಆತನು ಹೇಳಿದಂತೆ ಮಾಡಿ ಕಪಟೋಪಾಯಗಳಿಂದಲೂ ಪ್ರೀತಿಯ ಲಲ್ಲೆ ಮಾತುಗಳಿಂದಲೂ ಹಿಂತೆಗೆಯದೆ ಶಿಷ್ಯವೃತ್ತಿಯನ್ನು ಪ್ರತಿಜ್ಞೆಯಂತೆ ಆಚರಿಸಿಕೊಂಡಿರಲು ಅವನು ಬಹಳ ಕರುಣೆಯನ್ನು ವಹಿಸಿ ಉಪದೇಶ ಕೊಟ್ಟನು. ಆ ಉಪದೇಶವನ್ನು ಪಡೆದುಕೊಂಡು ಆ ದೇಶದಿಂದ ಹಿಂದಿರುಗಿ ಬರುತ್ತಿದ್ದಾಗ ದಾರಿಯಲ್ಲಿ ಒಂದು ಹುಲಿಯ ಶವವನ್ನು ಕಂಡನು. ೧೦೭. ಆ ಹುಲಿ ಹಾವು ಕಚ್ಚಿದ್ದರಿಂದ ಸತ್ತಿತೆಂದು ತಿಳಿದು ಆ ಬ್ರಾಹ್ಮಣನು ಕರುಣೆಯಿಂದ, ತನ್ನ ಮಂತ್ರವನ್ನು ನಂಬಿದ್ದವನಾದ್ದರಿಂದ, ೧೦೮. ನೀರನ್ನು ಮಂತ್ರಿಸಿ ಆ ಶವದ ಮೇಲೆ ಚಿಮುಕಿಸಲು ಆ ಹುಲಿಯು ವಿಷವಿಳಿದು ಸಂತೋಷದಿಂದ ಎದ್ದು ಆ ವಿಪ್ರನನ್ನು, ಅವನು ಉಪಕಾರಿಯೆಂಬುದನ್ನು ಲೆಕ್ಕಿಸದೆ ಕ್ರೂರವಾಗಿ ಹಿಡಿದು

ಪಿಡಿದೊತ್ತಿ ಸೀಟ್ಟಿ ತಿಂದುದು
ಗಡ ನಿಮ್ಮಡಿ ತನ್ನನುಗ್ರಹಣೆ ಮುಳಿಸಿಂದಂ
ಪುಡಿಪಿಡಿದೊಡೆತ್ತಿದನಂ ಕೊ
ಗಿಡೆ ನುಣ್ಣನೆ ನೊಣೆದೊಡಾವ ಧರ್ಮಂ ಮುನಿಪಾ

೧೧೦

ಗದ್ಯ॥ ಎಂದುಸಿರದಿರ್ಪುದುಂ ಜಿನದತ್ತನ ಮನದ ಕಪಟವೃತ್ತಿಯನಱಿದು ತಮ್ಮ ಮನದ ಶುದ್ಧವೃತ್ತಿಯನುಪಾಯದಿಂದಾತಂಗೆ ಪೇೞ್ವಂತೆ ಮತ್ತೊಂದು ಕಥೆಯನಿಂತೆಂದು ಪೇೞ್ದರ್ ೧೧೧

ಕೇಸರಿಪುರಮೆಂಬುದದಂ
ವಾಸವನೆಂಬವನಿಪಾಲನಾಳುತ್ತಿರ್ಪಂ
ಭಾಸುರ ಕೀರ್ತಿಪತಾಕಂ
ವಾಸವನಿಭವಿಭವನಮಳನೆಂಬಂ ಪೆಸರಿಂ

೧೧೨

ಗದ್ಯ॥ ರಾಜಶ್ರೇಷ್ಠಿತದ್ವಣಿಗ್ವಾತನ ನಂದನಂ ವಿಮಳನೆಂಬ ಶಿಶು ಬಾಲಾಭರಣಸಮೇತನಾಗಿ ನಿಚ್ಚಲುಂ ತನ್ನ ಮನೆಯಂಗಣದೊಳಾಡುತ್ತಿರ್ಪುದುಂ

೧೧೩

ನೆರೆಮನೆಯಾಕೆ ಕಂಡು ಕಡುಮೋಹದಿನಾ ಶಿಶು ತೊಟ್ಟ ಮಿಂಚುವಾ
ಭರಣಮನೊಯ್ಯನೊಯ್ಯನಳಿಪಿಂ ಪೆಱರೇಗುವರೆನ್ನನೆಂದು ನಿ
ಷ್ಠುರೆ ಕರಮಲ್ಲದಂಮ್ಮಳಿಸಿ ತಚ್ಛಿಶುವಂ ಪಿಡಿದೊತ್ತಿ ಗಂಟಲಂ
ಪಱಿಱಿದು ಕವರ್ತೆಗೊಳ್ವತೆಱದಿಂ ಬಿಡದಾಭರಣಂಗಳೆಲ್ಲಮಂ

೧೧೪

ಹೊಡೆದು, ಸೀಳಿ, ತಿಂದಿತು. ಮುನಿಶ್ರೇಷ್ಠನೆ! ಆ ಕ್ರೂರವಾದ ಹಾವು ಸಿಟ್ಟಿನಿಂದ ಕೊಂದಿರಲು ಅದನ್ನು ಜೀವದಿಂದ ಎತ್ತಿದವನನ್ನು ಕೊಂದು ತಿಂದರೆ ಅದು ಯಾವ ಧರ್ಮ?" ೧೧೦. ಹೀಗೆ ಹೇಳಿ ಸುಮ್ಮನಾಗಲು ಜಿನದತ್ತನ ಮನಸ್ಸಿನ ಕಪಟ ಯೋಚನೆಯನ್ನು ತಿಳಿದುಕೊಂಡು ತಮ್ಮ ಮನಸ್ಸಿನ ಶುದ್ಧ ಸ್ವಭಾವವನ್ನು ಉಪಾಯದಿಂದ ಆತನಿಗೆ ತಿಳಿಯ ಹೇಳುವ ಉದ್ದೇಶದಿಂದ ಮತ್ತೊಂದು ಕಥೆಯನ್ನು ಮುನಿಯು ಹೇಳಿದನು: ೧೧೧. ಕೇಸರಿಪುರವೆಂಬ ಪಟ್ಟಣ. ಅದರ ಅರಸ ವಾಸವನೆಂಬವನು. ಅವನು ಬಹಳ ಕೀರ್ತಿವಂತನಾಗಿ ಇಂದ್ರ ಸದೃಶವಾದ ವೈಭವದಿಂದ ಆಳುತ್ತಿದ್ದನು. ೧೧೨. ಅಮಲನೆಂಬ ಹೆಸರಿನ ರಾಜಶ್ರೇಷ್ಠಿ ಇದ್ದನು. ಆ ವೈಶ್ಯ ಪುತ್ರನ ವಿಮಳನೆಂಬ ಎಳೆಯ ಮಗು ಮಕ್ಕಳ ಒಡವೆಗಳೊಡನೆ ನಿತ್ಯವೂ ತನ್ನ ಮನೆಯ ಅಂಗಳದಲ್ಲಿ ಆಡುತ್ತಿದ್ದನು. ೧೧೩. ನೆರೆಮನೆಯಾಕೆ ಆ ಮಗುವನ್ನೂ ಅದರ ಆಭರಣ ಗಳನ್ನೂ ಗಮನಿಸಿ ಆಸೆಪಟ್ಟು ತನ್ನನ್ನು ಇತರರು ಏನು ಮಾಡಿಯಾರೆಂದು ಧೈರ್ಯ ದಿಂದ ಆ ಕ್ರೂರಾತ್ಮಳು ಆ ಮಗುವನ್ನು ಹಿಡಿದು ಗಂಟಲನ್ನು ಒತ್ತಿ ಮುರಿದು ಸೂರೆ ಗೊಳ್ಳುವ ಹಾಗೆ ಆ ಆಭರಣಗಳನ್ನೆಲ್ಲ ೧೧೪. ತೆಗೆದುಕೊಂಡು ಮಗುವಿನ ಹೆಣವನ್ನು

ಗದ್ಯ॥ ಕೊಂಡು ಮಗುವಿನ ಪೆಣನನೀಮನೆಯೊಳ್ ಪೂೞ್ದೆನಪ್ಪೊಡೆ ವಿಷಮರಪ್ಪ ತಳಾಱರ ದೆಸೆಯಿಂದೆನಗೆ ಕೇಡು ಪುಟ್ಟುಗುಂ ಕಷ್ಟಮಲ್ಲದಿದನೀಗಳೆ ಕೊಂಡೊಯ್ದು ಬೀದಿಯೊಳಾಡುವ ಸಾದುಬಸವನ ಕೋಡಿನೊಳಗಿಕ್ಕಿ ಬುದ್ಧಿಯಿಂದೆತ್ತು ಕೊಂದುದು ಕೂಸನೆಂಬಂತು ಮಾಡಿ ದೂಱ ನೆತ್ತಿನ ಮೇಲಿಕ್ಕಿ ಸುಖದಿಂದಿರ್ಪೆನೆಂಬ ಸಮಕಟ್ಟನೆತ್ತಿಕೊಂಡು ಕೂಸಿನ ಪೆಣನನೊಯ್ದು ೧೧೫

ಪಗಲೆಲ್ಲಂ ತಿರಿತಂದು ಬೀದಿಗಳೊಳಾರಾನುಂ ಭರಂಗೆಯ್ದು ಕ
ಬ್ಬುಗಳಂ ಜೋಳಮನಕ್ಕಿಯುಂ ಕಡಲೆಯುಂ ತೌಡಂ ಮನಂ ಪೆರ್ಚಿ ಪಿಂ
ಡಿಗಳಂ ಪುಲ್ಗಳನಿಕ್ಕೆ ಮೇದು ತಣಿವಿಂ ಮೆಲ್ಕೊತ್ತುತ್ತುಗುಂ ನೋಡ ಪ
ಟ್ಟಗವೇಂದ್ರಾಧಿಪನಲ್ಲಿಗಾ ಕುಟಿಲೆ ಬಂದಾಗಳ್ ಮನೋರಾಗದಿಂ ೧೧೬

ಕೂಸಿನ ಪೆಣನಂ ತಾಟಕಿ
ಲೇಸಾಗಿರೆ ಬಸವನೆಡಕೋಡಿನ ಮೇಲ
ತ್ಯಾಸುರಮಪ್ಪಂತಿಕ್ಕಿ ನಿ
ವಾಸಕ್ಕಾ ಧೂರ್ತೆ ಪೋದಳನ್ನೆಗಮಿತ್ತಲ್ ೧೧೭

ಅಮರ್ದಿನೊಳ್ಪೊರೆಯಪ್ಪ ಬಾೞೆಯ ಪಣ್ಣನೊಯ್ಯನೆ ಕೊಂಡು ಬಂ
ದಮಿತ ಸೌಖ್ಯನುದಾರನಾ ವಣಿಗೀಶ್ವರಂ ಮಗನೆಲ್ಲಿದಂ
ಕಮಲಲೋಚನನೆಂದು ಪುತ್ರನ ಮೋಹದಿಂ ಬೆಸಗೊಳ್ವುದುಂ
ಭ್ರಮೆಯಿನೆಲ್ಲರುಮಲ್ಲಿಗಲ್ಲಿಗೆ ನೋಡಿ ಕಾಣದೆ ದುಃಖದಿಂ ೧೧೮

ಆ ಮನೆಯಲ್ಲಿ ಹೂತಳಾದರೆ ಗಟ್ಟಿಗರಾದ ತಳವಾರರ ದೆಸೆಯಿಂದ ತನಗೆ ಕೆಡಕು ಉಂಟಾಗುವುದರಿಂದ ಅದು ಸರಿಯಲ್ಲವೆಂದು ಬಗೆದು ಅದನ್ನು ಈಗಲೇ ತೆಗೆದುಕೊಂಡು ಹೋಗಿ ಬೀದಿಯಲ್ಲಿ ಓಡಾಡುವ ಸಾಧು ಬಸವನ ಕೊಂಬಿಗೆ ಸಿಕ್ಕಿಸಿ ಎತ್ತು ಕೊಂದಿತೆಂಬ ಊಹೆ ತಟ್ಟುವಂತೆ ಮಾಡಬೇಕೆಂದು ಯೋಚಿಸಿದಳು. ಹಾಗೆ ದೂರನ್ನು ಎತ್ತಿನ ಮೇಲೆ ಹಾಕಿ ತಾನು ಸುಖವಾಗಿ ಇರುವೆನೆಂಬ ಯೋಚನೆಯಿಂದ ಆ ಮಗುವಿನ ಹೆಣವನ್ನು ತೆಗೆದುಕೊಂಡು ಹೋದಳು. ೧೧೫. ಹಗಲೆಲ್ಲ ಸಂಚಾರ ಬೀದಿಗಳಲ್ಲಿ ಮಾಡಿ ಯಾರಾದರೂ ಧಾರಾಳಮಾಡಿ ಕಬ್ಬು, ಜೋಳ, ಅಕ್ಕಿ, ಕಡಲೆ, ತೌಡಂಗಳನ್ನು ಮನಸ್ಸಿನ ಉತ್ಸಾಹದಿಂದ ಹಿಂಡಿ, ಹುಲ್ಲುಗಳನ್ನು, ಹಾಕಿದರೆ ಮೇದು ತೃಪ್ತಿಯಿಂದ ಮೆಲುಕು ಹಾಕುತ್ತಾ ಪಟ್ಟದ ಬಸವನಂತೆ ಇರುತ್ತಿದ್ದ ಆ ಎತ್ತಿನ ಬಳಿಗೆ ಮನದ ಆಸೆಯಿಂದ ಆ ಮೋಸಗಾತಿ ಬಂದಳು. ೧೧೬. ಆ ತಾಟಕಿಯು ಆ ಕೂಸಿನ ಹೆಣವನ್ನು ಸರಿಯಾಗಿ ಬಸವನ ಎಡಗಡೆಯ ಕೊಂಬಿನ ಮೇಲೆ ಬಹಳ ರಭಸದಿಂದ ಇಕ್ಕಿ ಆ ಧೂರ್ತೆಯು ತನ್ನ ಮನೆಗೆ ಹೊರಟುಹೋದಳು. ೧೧೭. ಇತ್ತ ಆ ಮಗುವಿನ ತಂದೆ. ಅಮಿತಸೌಖ್ಯವಂತನೂ ಉದಾರನೂ ಆದ ಆ ವರ್ತಕಶ್ರೇಷ್ಠನು ಅಮೃತಕ್ಕೆ ಸಮಾನವಾದ ಬಾಳೆಯ ಹಣ್ಣುಗಳನ್ನು ತೆಗೆದುಕೊಂಡು ಬಂದು "ಮಗನೆಲ್ಲಿ ?, ಆ ಕಮಲಲೋಚನನೆಲ್ಲಿ ?" ಎಂದು ಮಗನ ಮೇಲಿನ ಮೋಹದಿಂದ ಕೇಳಿದನು. ಆಗ ಮಗುವನ್ನು ಕಾಣದೆ ಮನೆ

ಗದ್ಯ॥ ಬೀದಿ ಬೀದಿಗಳೊಳೆಲ್ಲಂ ಪರಿದು ನೋಡುತ್ತುಮಿರ್ದು ಬಸವನ ಕೋಡಿನೊಳಿರ್ದ ಪೆಣನಂ ಕಂಡು ಮೆಯ್ಮಱಗಿ ಸೈರಿಸಲಾಱದೆ ಪಾಪಂಗೆಯ್ದೆತ್ತು ಕೊಂದುದೆಂದು ಸುತ್ತಿಮುತ್ತಿ ಕೊಂಡು ಬಾಲಮಂ ಬಡಿದು ಕಂಡರ್ ಕಂಡ ಮುಖದೊಳೆ ನುಗ್ಗುನುಗ್ಗಾಗೆ ಬಡಿವುದುಂ ಬಸವಂ ವೇದನೆಗಿರಲಾಱದೆ ಗೋೞಿಟ್ಟೊಳಱಿ ದೆಸೆಗೆ ಬಿರ್ದು ಪರಿಯುತ್ತುಂ ತನ್ನ ಮನದ ನಿರ್ಮಲತೆಯನೆಲ್ಲರ್ಗಂ ತೋಱುವಂತೆ ಕಮ್ಮಱನ ಮನೆಯಂ ಪೊಕ್ಕು ಕಾಸುತಿರ್ದ ಕಾಯ್ದ ಕಬ್ಬುನಮಂ ಕರ್ಚಿ ನೆರೆದ ನೆರವಿಗೆ ಇದಿರಾಗಿ ಬರ್ಪುದುಂ ೧೧೯

ನೆರೆದು ನೋಡುವ ನೋಟಕರ್ ಬೆಱಗಾಗಿ ಮಾಣಿಸಿ ಪೊಯ್ಗಳಂ
ನಿರುತಮಿಂತಿದು ಕೊಲ್ಲದೀ ಮಗನಂ ಪೆಱರ್ ಧನವಂಚಕರ್
ಕರುಣಮಿಲ್ಲದೆ ಕೊಂದರೆಂದು ತಳಾಱನಂ ಕ್ಷಣಮಾತ್ರದಿಂ
ಕರೆದು ನೀನಿದನಿಂತುಪೇಕ್ಷಿಸಿ ಪೋಗಲೀಯದೆ ಕಳ್ಳನಂ ೧೨೦

ತರವೇೞ್ಕುಮೆಂದು ಪೇೞ್ವುದು
ಮರವರಿಸದೆ ಪೋಗಿ ನೋಡಿ ಬುದ್ಧಿಯ ಬಲದಿಂ
ಪರಿಣತನಾರಯ್ದಱಿದಂ
ದುರಿತಂ ಪೊಳ್ಳುಂಟೆ ಕೊಂದವರ್ ಬದ್ದಪರೇ ೧೨೧

ಯವರೆಲ್ಲರೂ ಬುದ್ಧಿಭ್ರಮಿತರಾದವರಂತೆ ಆ ಕೂಸನ್ನು ಹುಡುಕಾಡುತ್ತ ಅಲ್ಲಲ್ಲಿಗೆ ಓಡಿದರು. ೧೧೮. ಮಗುವನ್ನು ಎಲ್ಲಿಯೂ ಕಾಣದೆ ದುಃಖದಿಂದ ಬೀದಿ ಬೀದಿಗಳಲ್ಲೆಲ್ಲ ಓಡಾಡಿ ನೋಡುತ್ತಿದ್ದು ಬಸವನ ಕೋಡಿನಲ್ಲಿದ್ದ ಹೆಣವನ್ನು ಕಂಡು ಬಹಳ ಸಂಕಟ ಪಟ್ಟು ಸಹಿಸಲಾರದೆ ಪಾಪಿಷ್ಠವಾದ ಎತ್ತು ಕೊಂದಿತೆಂದು ಅದರ ಸುತ್ತ ಮುತ್ತಿಕೊಂಡು ಬಾಲವನ್ನು ತಿರುಚಿ ಕಂಡಕಂಡವರೆಲ್ಲರೂ ಬಸವನನ್ನು ಕ್ರೂರವಾಗಿ ಬಡಿದರು. ಬಸವಣ್ಣನು ನೋವಿಗೆ ತಡೆಯಲಾರದೆ ಗೋಳಿಟ್ಟು ಅರಚಿ ದಿಕ್ಕುಗೆಟ್ಟು ಓಡುತ್ತ ತನ್ನ ಮನಸ್ಸಿನ ನಿರ್ಮಲತೆಯನ್ನು ಎಲ್ಲರಿಗೂ ತೋರಿಸುವುದಕ್ಕೆಂಬಂತೆ ಒಬ್ಬ ಕಮ್ಮಾರನ ಮನೆಯನ್ನು ಪ್ರವೇಶಿಸಿ ಅವನು ಕಾಯಿಸುತ್ತಿದ್ದ ಕಬ್ಬಿಣವನ್ನು ಕರ್ಚಿ ಗುಂಪುಕೂಡಿದ ಜನರ ಇದಿರಿಗೆ ಬಂದಿತು. ೧೧೯. ಗುಂಪು ಸೇರಿ ನೋಡುತ್ತಿದ್ದ ನೋಟಕರು ಆಶ್ಚರ್ಯ ಪಟ್ಟು ಅದನ್ನು ಹೊಡೆಯುವುದನ್ನು ತಪ್ಪಿಸಿ "ಖಂಡಿತವಾಗಿಯೂ ಈ ಎತ್ತು ಮಗುವನ್ನು ಕೊಲ್ಲಲಿಲ್ಲ. ಈ ಮಗುವನ್ನು ಬೇರೆ ಯಾರೋ ಧನವಂಚಕರು ಕರುಣೆಯಿಲ್ಲದೆ ಕೊಂದಿರಬೇಕೆಂದು" ನಿರ್ಣಯಿಸಿ ತಳವಾರನನ್ನು ಕೂಡಲೆ ಬರಮಾಡಿ, "ನೀನು ಇದನ್ನು ಹೀಗೆಯೇ ಉಪೇಕ್ಷೆ ಮಾಡದೆ ಕಳ್ಳನನ್ನು ಹಿಡಿದು ತರಬೇಕು" ಎಂದು ಹೇಳಲಾಗಿ ಅವನು ಹಿಂತೆಗೆಯದೆ ಎಲ್ಲವನ್ನೂ ಗಮನಿಸಿ ನೋಡಿ ಬುದ್ಧಿಬಲದಿಂದ ಪರಿಣತನಾದ್ದರಿಂದ ವಿಚಾರಿಸಿ ಪತ್ತೆ ಹಚ್ಚಿದನು. ಪಾಪ ವೃಥಾ ಹೋಗುವುದೆ ? ಕೊಂದವರು ಬದುಕುತ್ತಾರೆಯೇ ? ೧೨೧. ಹಾಗೆ ಕಳ್ಳಿಯನ್ನು ಹಿಡಿದು ಒಡವೆಗಳೊಡನೆ ತಂದು

ಗದ್ಯ॥ ಅಂತು ಕಳ್ಳಿಯುಂ ಪಿಡಿದಂಗಂಬೆರಸು ತಂದು ಪ್ರಜೆಗೊಪ್ಪಿಸುವುದುಂ ಬೞಿಕ್ಕೆ ಬಡ ಸಾಧುಗೊಂದೆಯುಂ ಬಱಿದೆ ವಿಚಾರಣೆಯಿಲ್ಲದೆ ಮುಱಿಯೆ ಮೋದಿದೆವೆಂದು ತಮ್ಮಂ ತಾವೆ ಬಯ್ದುಕೊಂಡರದಱಿಂ ಮಹಾತ್ಮರಪ್ಪರವಿಚಾರಿಗಳಾಗದೆ ವಿಚಾರಿಸಿ ನೆಗೞ್ವುದೆಂಬುದುಂ ಜಿನದತ್ತಸೆಟ್ಟಿ ಯತಿಪತಿ ವಚನಮಂ ಕೈಕೊಳ್ಳದೆ ಮತ್ತಮಾ ಮಹಾತ್ಮನೆ ಕಳ್ಳನೆಂದು ಬಗೆದು ತನ್ನ ಮನದ ಮುಳುಕದಿಂ ನಿಲಲಾಱದೆ ಮುನಿನಾಥಂಗಿನ್ನೊಂದು ಕಥೆಯುಂ ಪೇೞ್ದು ಪೆಱ್ಲನೆನ್ನ ಪೊನ್ನಂ ತೆಗೆವನೆಂದು ಮತ್ತೊಂದು ಕಥೆಯನೀತೆಂದು ಪೇೞ್ದಂ ೧೨೨

ಭಾರತಿಯೆಂಬೊಂದು ನದೀ
ತೀರದೊಳೊರ್ವಂ ಕಪಾಲಿಯೆಂಬಂ ಗೊರವಂ
ಧೀರಂ ತಾಪಸ ತಪಸಿನೊ
ಳಾರಿಂದಂ ಕರಮ ಪಿರಿಯನೆಂದೊಸೆದಿರ್ದಂ ೧೨೩

ಅಂತಿರ್ಪುದುಮೊಂದು ದಿನಂ
ಸಂತತಮುಱಿಯುಟ್ಟ ಪಾವ ನೆಟಲಿಕ್ಕಿದವೋಲ್
ತಾಂ ತಗುಟ್ತು ಕರೆವುದುಂ ಮೞೆ
ಕಾಂತಾರದ ಗಿರಿಯ ಪಿರಿಯ ಪೆರ್ವೊನಲೆಲ್ಲಂ ೧೨೪

ಪ್ರಜೆಗಳಿಗೆ ಒಪ್ಪಿಸಿದನು. ಆಮೇಲೆ, ಆ ಸಾಧು ಬಸವನನ್ನು ನಿಷ್ಕಾರಣವಾಗಿ ಬೆನ್ನು ಮುರಿಯುವಂತೆ ಹೊಡೆದೆವೆಂದು ತಮ್ಮನ್ನು ತಾವೇ ಬೈದುಕೊಂಡರು. ಆದ್ದರಿಂದ ಮಹಾತ್ಮರಾದವರು ಅವಿಚಾರಮಗ್ನರಾಗದೆ ಯೋಚನೆಮಾಡಿ ಕೆಲಸಮಾಡಬೇಕೆಂದು ಹೇಳಲು ಜಿನದತ್ತಸೆಟ್ಟಿಯು ಆ ಯತಿಶ್ರೇಷ್ಠನ ಮಾತನ್ನು ಒಪ್ಪದೆ ಪುನಃ ಆ ಮಹಾತ್ಮನೇ ಕಳ್ಳನೆಂದು ಭಾವಿಸಿ ತನ್ನ ಮನಸ್ಸಿನ ಸಂಕಟವನ್ನು ಇನ್ನು ತಡೆದುಕೊಳ್ಳಲಾರದೆ ಮುನಿಶ್ರೇಷ್ಠನಿಗೆ ಇನ್ನೊಂದು ಕಥೆಯನ್ನು ಹೇಳತೊಡಗಿದನು : ೧೨೨. ಭಾರತೀ ಎಂಬ ಒಂದು ನದಿಯ ತೀರದಲ್ಲಿ ಒಬ್ಬ ಕಪಾಲಿಯೆಂಬ ಗೊರವಯ್ಯನಿದ್ದನು. ಅವನು ತಾಪಸನು. ತಪಸ್ಸಿನಲ್ಲಿ ಮಿಕ್ಕೆಲ್ಲರಿಗಿಂತ ಹಿರಿಯನೆಂಬಂತೆ ಶೋಭಿಸುತ್ತಿದ್ದನು. ೧೨೩. ಹಾಗಿರಲು ಒಂದು ದಿನ ನಿರಂತರವಾಗಿ ಒಂದೇ ಸಮನೆ, ಹಾವುಗಳನ್ನು ನೇತು ಹಾಕಿದ ಹಾಗೆ, ಮಳೆ ಸುರಿಯುತ್ತಿರಲು, ಆ ಅಡವಿಯ ಬೆಟ್ಟದ ಹಿರಿಯ ಹೊಳೆಗಳೆಲ್ಲ ೧೨೪. ಒಂದಾಗಲು ಕೂಡಲೆ ತೊಱೆಯ ಹೆಚ್ಚಳದಿಂದ ಸಮುದ್ರವೇ ಮೇರೆ

ಒಂದಾಗೆ ಕೂಡೆ ತೊಱೆ ಪೆ
ರ್ಚಿಂದಂ ವಾರಾಶಿ ಮೇರೆದಪ್ಪಿದುದೆಂಬೊಂ
ದಂದದೊಳೆ ಬರ್ಪನುಂ ಧರೆ
ಗೊಂದಾಶ್ಚರ್ಯಮಃದ್ಭುತಂ ಪುಟ್ಟುವಿನಂ ೧೨೫

ಗದ್ಯ॥ ಅಂತು ಪೊಲನೂ ನೆಲನುಂ ಜಲಪ್ರಳಯವಾಗೆ ಬಾದ ತೊಱೆಯೊಳೊಂದಾನೆಯ ಮಱಿ ಬಿರ್ದು ಪ್ರಾಣಭಯದಿಂ ತಲ್ಲಣಿಸಿ ಬೆರ್ಚಿ ಬೇರ್ವೆರಸಿ ಕಿತ್ತು ಬರ್ಪ ಮತ್ತಿಯ ಪೆರ್ಮರನಂ ಪಿಡಿದುಕೊಂಡು ಮರನುಂ ತಾನುಂ ಬರುತ್ತಿರ್ಪುದುಂ ಕಪಾಲಿ ಭಿಕ್ಷುಕಂ ಕಂಡು ೧೨೬

ಕರುಣಂ ಕೈಮಿಗೆ ಮನದೊಳ್
ನಿರುತಂ ತೊಱೆಯೊಳಗೆ ಪೊಕ್ಕೊಡೀಯವಸರದೊಳ್
ಮರಣಮೆನಗಕ್ಕುಮೆಂದರ
ವರಿಸದೆ ನೆರೆದಿರ್ದ ತನ್ನ ಚಟ್ಟುಂ ತಾನುಂ ೧೨೭

ಗದ್ಯ॥ ಬುದಿಲೆನೆ ತೊಱೆಯಂ ಪಾಯ್ದು ಮಾತಂಗ ಕಳಭಮಂ ಪಿಡಿದು ಮರಂಬೆರಸು ತಡಿಗೆ ತಂದು ಮರನಂ ಪೋಗೆ ಬಿಟ್ಟು ತತ್ಕರಿಯಂ ಪೊಱಗಣ್ಗೆ ನೋಯಲೀಯದೆ ತೆಗೆದು ತದ್ಗಜದ ಮನದ ಭಯಮಂ ಪಿಂಗಿಸಿ ತನ್ನ ಮಠಕ್ಕೆ ತಂದು ೧೨೮

ದಪ್ಪಿದುದೆಂಬ ರೀತಿಯಲ್ಲಿ ನೀರು ಹರಿದು ಬರಲು ಲೋಕಕ್ಕೆ ಆಶ್ಚರ್ಯ ಹುಟ್ಟುವಂತೆ ಆಯಿತು. ೧೨೫. ಹಾಗೆ ಹೊಲವೂ ನೆಲವೂ ಜಲಪ್ರಳಯದಂತೆ ಬಂದ ಹೊಳೆಯಲ್ಲಿ ಒಂದು ಆನೆಯಮರಿ ಬಿದ್ದು ಪ್ರಾಣಭಯದಿಂದ ಗಾಬರಿಗೊಂಡು ಕಂಗೆಟ್ಟು ಬೇರು ಸಮೇತವಾಗಿ ಕಿತ್ತು ಬರುತ್ತಿದ್ದ ಒಂದು ದೊಡ್ಡ ಮತ್ತಿಯ ಮರವನ್ನು ಹಿಡಿದುಕೊಂಡು ಮರವೂ ತಾನು ಬರುತ್ತಿರಲು ಕಪಾಲಿಯೆಂಬ ಭಿಕ್ಷುವು ಕಂಡನು, ೧೨೬. ಕರುಣೆ ಕೈ ಮೀರಲು ಈ ಸಮದಲ್ಲಿ ಹೊಳೆಗೆ ಹೊಕ್ಕರೆ ತನಗೆ ಮರಣವೇ ಆಗುವುದೆಂದು ಅಂಜಿ ಹಿಂಜರಿಯದೆ ಅಲ್ಲಿ ಸೇರಿದ್ದ ಶಿಷ್ಯನೂ ತಾನೂ ೧೨೭. ತಟ್ಟನೆ ತೊರೆಗೆ ದುಮ್ಮಿಕ್ಕಿ ಆನೆಯಮರಿಯನ್ನು ಹಿಡಿದು ಮರದ ಸಮೇತವಾಗಿ ದಡಕ್ಕೆ ತಂದು, ಮರವನ್ನು ಹೋಗಲು ಬಿಟ್ಟು ಆ ಆನೆಯನ್ನು ನೋವಾಗದಂತೆ ಹೊರಕ್ಕೆ ತೆಗೆದು ಅದರ ಮನಸ್ಸಿನ ಭೀತಿಯನ್ನು ಕಳೆದು ತನ್ನ ಮಠಕ್ಕೆ ಕರೆತಂದನು. ೧೨೮. ಹುಳಿಯನ್ನವನ್ನೂ

ಪೞಿಗೂಟಂ ತದಿಕಿನ ಕೆಂ
ದಳಿರಂ ಪಾಲ್ಗೆನೆಯನೆಳೆಯ ಪುಲ್ಲಂ ಕಬ್ಬಂ
ಬಲವಂತನಕ್ಕುಮೆಂದು
ಜ್ಜ್ವಲಚಿತ್ತಂ ತಂದು ಪೊರೆವುದುಂ ಗಜಶಿಶುವಂ ೧೨೯

ಕರಿಪತಿ ಬೆಳೆದು ಸುರೇಶನ
ಕರಿಗಂ ಮಿಗಿಲೆನಿಸಿ ಮಠದೊಳಿರೆ ಪಿಸುಣರ್ ತ
ತ್ಕರಿಯಿರ್ದುದನೊಯ್ಯನೆ ತ
ಮ್ಮರಸಂಗಱಿಪುವುದುಮರಸನಱಿದಾ ಕರಿಯಂ ೧೩೦

ಕವಿಲೆಗಳಲ್ಲದೆ ಗೊರವ
ರ್ಗೆ ವಿರುದ್ಧಂ ಮದಗಜೇಂದ್ರಮೇವುದು ತಾನಾ
ದಿವಿಜಗಜನಿಭ ಕರೀಂದ್ರಮ
ನೆವಗಟ್ಟುವುದಟ್ಟದಿರ್ದೊಡಂ ತಾನಱಿವಂ ೧೩೧

ಗದ್ಯ॥ ಎಂದರಸಂ ಕಾಪಾಲಿಯಲ್ಲಿಗಾನೆಯಂ ಬೇಡಿಯಟ್ಟುವುದುಂ ಕಾಪಾಲಿ ರಾಜಭೃತ್ಯರ ದೆಸೆಯಿಂದೆ ತತ್ಪ್ರಪಂಚಮನೆಲ್ಲಮನಱಿದು ಭಯಸ್ಥನಾಗಿ ಮದಸಿಂಧುರಮಂ ಕುಡುವುದುಂ ಅವರಾನೆಯನರಸನಲ್ಲಿಗೊಯ್ದೊಪ್ಪಿಸುವುದುಂ ಮಹೀಧರನಾನೆಯಂ ಕೈಕೊಂಡಿರ್ಪುದುಂ ೧೩೨

ಆನೆಬೇಲದ ಕೆಂಪನೆಯ ಚಿಗುರನ್ನೂ ಹಾಲಿನ ಕೆನೆಯಂಥ ಎಳೆಯ ಹುಲ್ಲನ್ನೂ ಕಬ್ಬನ್ನೂ ತಂದುಕೊಟ್ಟು ಆ ಗಜಶಿಶು ಬಲಿಷ್ಠವಾಗಲೆಂದು ಪ್ರೀತಿಯಿಂದ ಆ ಶುಭ್ರಚಿತ್ತನು ಸಲಹಿದನು. ೧೨೯. ಆ ಗಜೇಂದ್ರ ಬೆಳೆದು ದೇವೇಂದ್ರನ ಆನೆಗೂ ಹೆಚ್ಚೆನಿಸಿಕೊಂಡು ಮಠದಲ್ಲಿ ಇರಲು ಚಾಡಿಕೋರರು ಆ ಆನೆ ಇದ್ದುದನ್ನು ಬೇಗನೆ ತಮ್ಮ ರಾಜನಿಗೆ ತಿಳಿಸಿದರು. ಅರಸನು ಅವರ ಮಾತು ಕೇಳಿ ಆ ಆನೆಯನ್ನು (ಅಪೇಕ್ಷಿಸಿದನು). ೧೩೦. ಹಸುಗಳಲ್ಲದೆ ಗೊರವರಿಗೆ ಮದ್ದಾನೆಯೇತಕ್ಕೆ ? "ಇದು ಗೊರವರಿಗೆ ವಿರುದ್ಧ. ಆ ದೇವೇಂದ್ರನ ಆನೆಯನ್ನು ಹೋಲುವಂಥ ಆ ಆನೆಯನ್ನು ನಮಗೆ ಕಳುಹಿಸಬೇಕು. ಕಳಿಸದಿದ್ದರೂ ನಾನು ಅದನ್ನು (ಹಿಡಿಯಲು) ಬಲ್ಲೆ." ೧೩೧. ಎಂದು ರಾಜನು ಆ ಆನೆಯನ್ನು ಕೋರಿ ಕಾಪಾಲಿಯ ಬಳಿಗೆ ಹೇಳಿ ಕಳುಹಿಸಿದನು. ಕಾಪಾಲಿ ರಾಜಸೇವಕರ ಮೂಲಕ ಆ ಸಮಾಚಾರವನ್ನೆಲ್ಲ ತಿಳಿದುಕೊಂಡು ಭಯಪಟ್ಟು ಮದ್ದಾನೆಯನ್ನು ಕೊಟ್ಟುಬಿಟ್ಟನು. ಅವರು (ರಾಜಭೃತ್ಯರು) ಆನೆಯನ್ನು ರಾಜನಿಗೆ ಒಪ್ಪಿಸಿದರು. ರಾಜನು ಆನೆಯನ್ನು ಸ್ವೀಕರಿಸಲಾಗಿ ೧೩೨. ಆ ಆನೆ ಅರಮನೆಯೊಳಗೆ ಇರಲಾರದೆ

ಅರಮನೆಯೊಳಗಿರಲಾಱದೆ
ಕರಿ ಪಿಡಿವಿಡಿಗೊಂಡು ನೆನೆದು ಮುನ್ನಿನ ನೆಲೆಯಂ
ಪರಿಹರಿಸಿ ಕಾಪಿನವರಂ
ಪರಿತಂದುದು ಮಠಕೆ ಮನದ ಮೋಹದಿನಾಗಳ್ ೧೩೩

ಗದ್ಯ॥ ಅಂತು ಬಂದಿರ್ಪುದುಂ ಧರಣೀನಾಥಂ ಮದಮಾತಂಗಂ ಕಾಪಿನವರಂ ಕೊಂದು ತನ್ನ ಮುನ್ನಿನ ಮಠಕ್ಕೆ ಪೋದುದೆಂದು ಕೇಳ್ದು ತನಗಾ ಗಜದ ಮೇಲೆ ಮೋಹಮುಂಟಪ್ಪುದಱಿಂ ಮಾನಿಸರನಟ್ಟಿ ಮಗುೞ್ಚಿ ತರಿಸಿ ಮುನ್ನಿನೆಡೆಯೊಳ್ ಕಟ್ಟಿಸುವುದುಂ ಮತ್ತಂ ನಿಲಲಾಱದೆ ಮಠವೆ ಗುಱಿಯಾಗಿ ಪೋಪುದುಂ ಮಹೀನಾಥಂ ಪಲವು ಸೂೞ್ತರಿಸಿ ಬೇಸತ್ತು ಕಪಾಲಿಗೆ ಮುಳಿದೆನಗೆ ಕೊಟ್ಟಾನೆಯುಂ ಕುಡಲಾಱದೆ ತನ್ನ ಮಠವನೆ ನಚ್ಚಿಸಿ ಪಿಡಿದಿರ್ದಡೇನಾಯ್ತು ತಾನೆನ್ನ ದೇಶದಿಂ ಪೊಱಮಟ್ಟು ಪೋಪುದೆಂದಟ್ಟುವುದುಂ ಕಪಾಲಿ ಭಯಸ್ಥನಾಗಿ ತಾನುಂ ತನ್ನ ಚಟ್ಟಂಗಳುಮಾನೆಯನರಮನೆಗೆ ತಂದರಸಂಗೊಪ್ಪಿಸಿ ತನ್ನ ಪೊಲ್ಲಮೆಯುಂ ಪಿಂಗಿಸಿ ಮಗುೞ್ದು ಬಂದಿರ್ಪುದುಂ ಕರಿ ಮನದೊಳ್ ಮುಳಿದು ೧೩೪

ಅರಸಂ ನಾಟ್ಕಡಿ ಪೋಗವೇೞ್ದೊಡೆ ಭಯಂಗೊಂಡೆನ್ನನಾ ಸಾಧು ತಂ
ದರಸಂಗೊಪ್ಪಿಸಿ ಪೋದನಾತನೊಳಗೇಂ ಕೇಳ್ದೋಷಮಿಲ್ಲೆಂದು ನಿ
ಷ್ಕರುಣಂ ಮಾಣದೆ ಕೊಲ್ಲನೆಂಬ ಮುಳಿಸಿಂ ಬಂದಾತನಂ ಕೊಂದುದು
ರ್ವರೆಯೊಳ್ ನಿರ್ದಯರಪ್ಪ ದುರ್ಗುಣಯುತರ್ ತಾವೊಳ್ಳಿತಂ ಮಾೞ್ಪರೇ ೧೩೫

ಬಹಳ ಬೇಸರಪಟ್ಟು ಸಿಟ್ಟಾಗಿ ಹಿಂದಿನ ತನ್ನ ವಾಸಸ್ಥಾನವನ್ನು ನೆನೆಸಿಕೊಂಡು ಕಾವಲಿನವರನ್ನು ನಿಗ್ರಹಿಸಿ ತನ್ನ ಮನಸ್ಸಿನ ಮೋಹದಿಂದ ಮಠಕ್ಕೆ ಓಡಿಬಂದಿತು. ೧೩೩. ಹಾಗೆ ಬಂದಿರಲು ರಾಜನು ಮದ್ದಾನೆಯು ಕಾವಲುಗಾರನನ್ನು ಕೊಂದು ತನ್ನ ಮುಂಚಿನ ಮಠಕ್ಕೆ ಹೋಯಿತೆಂದು ಕೇಳಿ ಆ ಆನೆಯ ಮೇಲೆ ಮೋಹವಿದೆಯಾದ್ದರಿಂದ ಜನರನ್ನು ಕಳಿಸಿ ಮತ್ತೆ ಹಿಡಿತರಿಸಿ ಮೊದಲಿನ ಸ್ಥಳದಲ್ಲಿ ಕಟ್ಟಿಸಿದನು. ಅದು ಅಲ್ಲಿ ನಿಲ್ಲಲಾರದೆ ಪುನಃ ಮಠವೇ ತನ್ನ ಗುರಿಯಾಗಿ ಹೊರಟುಹೋಯಿತು. ರಾಜನು ಹಲವು ಸಲ ತರಿಸಿ ಬೇಸರಪಟ್ಟು ಕಪಾಲಿಯ ಮೇಲೆ ಸಿಟ್ಟಾಗಿ ತನಗೆ ಕೊಟ್ಟ ಆನೆಯನ್ನು ಬಿಡಲಾರದೆ ತನ್ನ ಮಠದಲ್ಲಿಯೇ ಅದಕ್ಕೆ ನಚ್ಚು ಹುಟ್ಟಿಸಿ ಹಿಡಿದರೆ ಏನಾಯಿತು ? ಅವನು ತನ್ನ ದೇಶದಿಂದಲೇ ಹೊರಟುಹೋಗತಕ್ಕದ್ದೆಂದು ಹೇಳಿ ಕಳುಹಿಸಿದನು. ಆಗ ಕಪಾಲಿ ಭಯಪಟ್ಟು ತಾನೂ ತನ್ನ ಶಿಷ್ಯರೂ ಆನೆಯನ್ನು ಅರಮನೆಗೆ ತಂದು ರಾಜನಿಗೆ ಒಪ್ಪಿಸಿ ತನ್ನ ಮೇಲಿನ ಅಪವಾದವನ್ನು ಕಳೆದುಕೊಂಡು ಹಿಂತಿರುಗಿ ಬರಲು ಆ ಆನೆ ಮನಸ್ಸಿನಲ್ಲಿ ಸಿಟ್ಟಾಗಿ ೧೩೪. "ಅರಸನು ನಾಡನ್ನು ದಾಟಿ ಹೋಗಲು ಹೇಳಿದರೆ ಭಯಪಟ್ಟು ನನ್ನನ್ನು ಆ ಸಾಧು ತಂದು ಅರಸನಿಗೆ ಒಪ್ಪಿಸಿದನು. ಆತನಲ್ಲಿ ಏನೂ ತಪ್ಪಿಲ್ಲ" ಎಂದು ಯೋಚಿಸದೆ ಆ ನಿಷ್ಕರುಣವಾದ ಆನೆ ನುಗ್ಗಿ ಬಂದು ಆ ಕಾಪಾಲಿಯನ್ನು ಕೊಂದಿತು. ಈ ಲೋಕದಲ್ಲಿ ನಿರ್ದಯರಾದ ದುರ್ಗುಣಿಗಳು ತಾವು ಒಳ್ಳೆಯದನ್ನು ಮಾಡುವರೆ ?

ಧರೆಯುಂ ಮೆಟ್ಟೆ ಪಲಂಬರುಂ ದಯೆಯನೊಕ್ಕಾಕಾನಂದದಿಂದೀಕ್ಷಿಸು
ತ್ತಿರ ಕಾಪಾಲಿ ಮಹೀನುತಂ ಕರುಣದಿಂ ಪೊಕ್ಕೆನ್ನನಂದೆಯ್ದಿ ವಿ
ಸ್ತರದಿಂ ರಕ್ಷಿಸಿ ಕಾದನೆನ್ನದೆ ಗಜೇಂದ್ರಂ ಕೋಪದಿಂ ಬಂದು ನ
ಟ್ಟಿರುಳೊಳ್ ಕೊಂದುದು ಬೌದ್ಧನಂ ಧರಣಿಯೊಳ್ ನಿರ್ಧರ್ಮರೇಗೆಯ್ಯರೋ ೧೩೩

ಗದ್ಯ॥ ಎಂದು ಜಿನದತ್ತಸೆಟ್ಟಿ ಮಾಣ್ದು ಸಿರದಿರ್ಪುದುಂ, ಜಿನಪಾಲಿತ ಮುನಿನಾಥಂ ನಕ್ಕು ಲೋಭಿಯ ಮನಮುಂ ಬಂದ ತೊಱೆಯುಂ ಶುದ್ಧಮಾಗಲಱಿಯುವೆಂಬ ಸಾಣ್ಣುಡಿಯನೀತಂ ನನ್ನಿಮಾಡಿದನಿನ್ನುಮೊಂದು ಕಥೆಯಂ ಪೇಟ್ದಿನ್ನ ಮೇಗಣ ಪೊಲ್ಲಮೆಯಂ ಪಿಂಗಿಸಿಕೊಳ್ವೆನೆಂದು ಮತ್ತೊಂದು ಕಥೆಯನಿಂತೆಂದು ಪೇಟ್ದಂ ೧೩೭

ದಂತಿಪುರವೆಂಬ ಪೊಟಲೊಳ್
ಕಂತುವಿನಸರಲಂಬೆ ಪೆಣ್ಣ ರೂಪಾಯ್ತೆನ್ನಂ
ಬಂತೆಸೆವ ಚೆಲ್ವೆಯೊರ್ವಳ
ನಂತಶ್ರೀಯೆಂಬ ಸೂಳೆ ಸುಖದಿಂದಿರ್ಪಳ್ ೧೩೮

ಗದ್ಯ॥ ಆಕೆಯ ಕೆಳದಿ ವಾಸವದತ್ತೆಯೆಂಬಳನಂತಶ್ರೀಗೊಂದು ಗಿಳಿಯಂ ಮಾಱುಗೊಂಡು ಕೂರ್ಮೆಯಿಂ ತಂದುಕೊಡುವುದುಂ ಗಿಳಿಯ ಚೆಲ್ವಿಂಗೆ ನಾಡೆಯುಂ ಮನದೊಳ್ ಸೋಲು

೧೩೩. ಭೂಮಿಯನ್ನು ಮೆಟ್ಟಿ ಹಲವರು ದಯಾರಹಿತರಾಗಿ ಸುಮ್ಮನೆ ನೋಡುತ್ತ ನಿಂತಿದ್ದಾಗ ಈ ಲೋಕಪೂಜ್ಯನು ಕರುಣೆಯಿಂದ ನದೀ ಪ್ರವಾಹವನ್ನು ಪ್ರವೇಶಿಸಿ ತನ್ನನ್ನು ಅಂದು ಸಾಹಸದಿಂದ ಕಾಪಾಡಿ ಸಲಹಿದನೆಂಬುದನ್ನು ಯೋಚಿಸದೆ, ಆ ಆನೆಯು ಕೋಪದಿಂದ ನಡುರಾತ್ರಿಯಲ್ಲಿ ಬಂದು ಬೌದ್ಧನನ್ನು ಕೊಂದಿತು. ಧರ್ಮಹೀನರು ಲೋಕದಲ್ಲಿ ಏನನ್ನು ತಾನೆ ಮಾಡುವುದಿಲ್ಲ ? ೧೩೭. ಎಂದು ಜಿನದತ್ತಸೆಟ್ಟಿ ಹೇಳಿ ಮಾತು ನಿಲ್ಲಿಸಿ ಸುಮ್ಮನಿರಲು, ಜಿನಪಾಲಿತಮುನಿಯು ನಕ್ಕು 'ಲೋಭಿಯ ಮನಸ್ಸೂ ಪ್ರವಾಹ ಬಂದ ತೊರೆಯೂ ಶುದ್ಧವಾಗುವುದು ಅಸಾಧ್ಯವೆಂಬ ಗಾದೆಯನ್ನು ಈತನು ನಿಜ ಮಾಡಿದನು. ಇನ್ನೂ ಒಂದು ಕಥೆಯನ್ನು ಹೇಳಿ ನನ್ನ ಮೇಲಿನ ಕಳಂಕವನ್ನು ಕಳೆದುಕೊಳ್ಳುವೆ"ನೆಂದು ಯೋಚಿಸಿ ಇನ್ನೊಂದು ಕಥೆಯನ್ನು ಹೀಗೆ ಹೇಳಲು ತೊಡಗಿದನು. ೧೩೭. ದಂತಿಪುರವೆಂಬ ಪಟ್ಟಣದಲ್ಲಿ ಮನ್ಮಥನ ಹೂವಿನ ಬಾಣವೇ ಹೆಣ್ಣಿನ ರೂಪವಾಯಿತೆಂಬಂತೆ ಶೋಭಿಸುವ ಒಬ್ಬ ಚೆಲುವೆಯು ಅನಂತಶ್ರೀ ಎಂಬ ಸೂಳೆ ಸುಖದಿಂದಿದ್ದಳು. ೧೩೮. ಆಕೆಯ ಗೆಳತಿ ವಾಸವದತ್ತೆಯೆಂಬವಳು ಅನಂತಶ್ರೀಗೆ ಒಂದು ಗಿಳಿಯನ್ನು ಕೊಂಡು ತಂದು ಪ್ರೀತಿಯಿಂದ ಕೊಟ್ಟಳು. ಅನಂತಶ್ರೀ ಆ ಗಿಳಿಯ ಚೆಲುವಿಗೆ ಮನ

ವಾಸವದತ್ತೆಗೆ ಮೆಚ್ಚುಗೊಟ್ಟು, ಪೊನ್ನ ಪಂಜರದೊಳ್ ಗಿಳಿಯನಿರಿಸಿ ನಾನಾಪ್ರಕಾರದ ಸೂಳೆ ೮೪೭
ಮಾತುಗಳಂ ಶೃಂಗಾರ ವೃತ್ತಂಗಳುಮಂ ಕಲಿಸುತ್ತುಂ ಪರಮಸ್ನೇಹದಿಂ ಗಿಳಿಯ ವಿನೋದಮೆ
ವಿನೋದಮಾಗಿ ಪಲವು ದಿವಸಂ ಪೋಗೆವೋಗೆ

೧೪೯

ಸಿರಿಗಂ ಸೌಭಾಗ್ಯಕ್ಕಂ
ಪಿರಿಯಳ್ ಕೈಕೊಳ್ಳದಾರುಮಂ ಮದದಿಂದಂ
ಧರಣಿಯೊಳಿನ್ನೆನಗಾರುಂ
ಸರಿಯಲ್ಲರಮೋಘಮೆನುತುಮಿರ್ಪಳಗುರ್ವಿಂ

೧೫೦

ಗದ್ಯ॥ ಮತ್ತಮವಳ ಸೌಭಾಗ್ಯದ ಪೆಂಪೆಂಬ ಪೆಸರೊಳಡಕೆಯ ಭಾಗದ ಭಾಗಮಿಲ್ಲೆಂದು

ಪುರದೊಳಗಣ ಸೂಳೆಯರೆ ೧೫೧
ಲ್ಲರುಮಾಕೆಗೆ ಮುನಿದು ಕೊಲ್ವ ಬಗೆಯಂ ತಂದಾ
ದರದಿಂ ವಾಸವದತ್ತೆಯ
ನೆರಡಿಲ್ಲದೆ ತಮಗೆ ಮಾಡಿಕೊಂಡನುನಯದಿಂ

೧೫೨

ಮೆಲ್ಲನೆ ವಾಸವದತ್ತೆಗೆ
ಕೊಲ್ಲಾಕೆಯನೆಂದು ಕೊಟ್ಟು ಪಲವುಂ ಪೊನ್ನಂ
ಕಳ್ಳೊಳಗೆ ಕಾಳಕೂಟಮ
ನೆಲ್ಲರುಮೊಂದಾಗಿ ಕೂಡಿ ಕೊಡುವುದುಮಾಗಳ್

೧೫೩

ಸೋತಂ ವಾಸವದತ್ತೆಗೆ ಬಹುಮಾನ ಕೊಟ್ಟು ಅದನ್ನು ಚಿನ್ನದ ಪಂಜರದಲ್ಲಿ ಇರಿಸಿ ಆ ಗಿಳಿಗೆ ನಾನಾ ರೀತಿಯ ಸೂಳೆಮಾತುಗಳನ್ನೂ ಶೃಂಗಾರ ವೃತ್ತಗಳನ್ನೂ ಕಲಿಸುತ್ತ ಬಹಳ ಪ್ರೀತಿಯಿಂದ ಗಿಳಿಯ ವಿನೋದವೇ ವಿನೋದವಾಗಿ ಹಲವು ದಿನಗಳನ್ನು ಕಳೆದರು. ೧೪೯. "ಅನಂತಶ್ರೀ ಹೆಸರಿಗೆ ತಕ್ಕಂತೆ ಐಶ್ವರ್ಯ ಸೌಭಾಗ್ಯಗಳಲ್ಲಿ ಹಿರಿಯಳು. ಅವಳು ಕೊಬ್ಬಿನಿಂದ ಬೇರೆ ಯಾರನ್ನೂ ಮೆಚ್ಚಳು. ಲೋಕದಲ್ಲಿ ಇನ್ನು ತನಗೆ ಯಾರೂ ಸರಿಯಲ್ಲ ಎಂದು ಆಧಿಕ್ಯದಿಂದ ಹೇಳಿಕೊಳ್ಳುತ್ತಾಳೆ. ೧೫೦. ಆದರೆ ಅವಳ ಸೌಭಾಗ್ಯದ ಪೆಂಪೆಂಬ ಹೊಗಳಿಕೆಯಲ್ಲಿ ಅಡಕೆಯ ಭಾಗದ ಒಂದು ಚೂರಿನಷ್ಟೂ, ನಿಜವಾಗಿ ಇಲ್ಲ" ಎಂದು ೧೫೧. ಊರಿನೊಳಗಣ ಸೂಳೆಯರೆಲ್ಲರೂ ಅವಳ ಮೇಲೆ ಸಿಟ್ಟುಗೊಂಡು ಅವಳನ್ನು ಕೊಂದು ಬಿಡುವ ಯೋಚನೆ ಮಾಡಿ ಉಪಾಯವಾಗಿ ಅನಂತಶ್ರೀಯ ಗೆಳತಿಯಾದ ವಾಸವದತ್ತೆಯನ್ನು ಕಪಟವಿಲ್ಲದ ಪ್ರೀತಿಯಿಂದ ತಮ್ಮ ಕಡೆಗೆ ಒಲಿಸಿಕೊಂಡರು, ೧೫೨. ಮೆಲ್ಲನೆ ವಾಸವದತ್ತೆಗೆ "ಆಕೆಯನ್ನು ಕೊಲ್ಲು" ಎಂದು ಹೇಳಿ ಹಲವು ಚಿನ್ನದ ನಾಣ್ಯಗಳನ್ನು ಕೊಟ್ಟು ಹೆಂಡದೊಳಕ್ಕೆ ಕಾಳಕೂಟದಂಥ ಕ್ರೂರವಾದ ವಿಷವನ್ನು ಬೆರಸಿ ಎಲ್ಲರೂ ಸೇರಿ ವಾಸವದತ್ತೆಯ ಕೈಗೆ ಕೊಟ್ಟರು. ೧೫೩. ವಾಸವದತ್ತೆಯು ಹೊನ್ನಿನ ಮೇಲಿನ ಆಸೆ

ಪಲರಸುಮತದಿಂ ಕಳ್ಳಂ
ಗದ್ಯ॥ ವಾಸವದತ್ತೆ ಪೊನ್ನಮೋಹದಿಂದಂತೆಗೆಯ್ವೆನೆಂದು
ಕೊಂಡು ಬಂದು ಕೊಟ್ಟಳ್ ತನ್ನನಂತಶ್ರೀಗೆ ಕುಡುವುದುಂ ಅನಂತಶ್ರೀಯುಂ ೧೪೪

ಇಲ್ಲಿರಿಸಿ ಪೋಗು ಕಳ್ಳಂ
ಮೆಲ್ಲನೆ ಬಯ್ಗಿಂಗೆ ಕುಡಿವಮಿರ್ವರು ನೀನಿಂ
ತಿಲ್ಲಿಗೆ ಬಾ ಯೆಂದಾಕೆಗೆ ೧೪೫
ಸಲ್ಲಲಿತಾಂಗಿ ಮೆಚ್ಚುಗೊಟ್ಟಾದರದಿಂ

ಕಳ್ಳಂ ಮಂಚದ ಕೆಳಗಿರಿಸಿ ತನ್ನ
ಗದ್ಯ॥ ಮನ್ನಿಸುವುದುಮಾಕೆಯುಂ ಸಂತೋಷಂಬಟ್ಟು ಪಂಜರದೊಳಿರ್ದ ಗಿಳಿ
ಮನೆಗೆ ಪೋದಳಿತ್ತಲನಂತಶ್ರೀಯುಂ ಪಾಸಿನ ಮೇಲೆ ಪಟ್ಟಿರ್ದಳನ್ನೆಗಂ
ಕಾಜಿನ ಬಟ್ಟಲೊಳಿರ್ದ ಸುರಾಪಾನಮಂ ನೋಡುತ್ತುಮಿರ್ಪುದುಂ ಕಳ್ಳ ಗಂಧಕ್ಕೆ ಮೊಗಸಿದ
ನೊಣಂಗಳೆಲ್ಲಂ ಸಾವುದಂ ಕಂಡು ವಿಷಮೆಂದಱಿದು ತನ್ನೊಳಪ್ಪ ಕಾರುಣ್ಯಬುದ್ಧಿಯಿಂದೀ
ಕಳ್ಳಂ ಕುಡಿದಳಪ್ಪೊಡನಂತಶ್ರೀ ಸಾಯ್ಗುಮೆಂದು ಗೂಡಿಂ ನೆಲಕ್ಕೆ ಪಾಯ್ದು ಬಟ್ಟಲ ಕಳ್ಳಂ
ನೆಲಕ್ಕುಗುವುದುಂ ೧೪೬

ಬೇಗಮನಂತಶ್ರೀ ಮುಳಿ
ದಾಗಿಳಿಯುಂ ಕೊಂದು ಬಟಿಕಮಾ ಕಳ್ಳಂ ನಿ
ರ್ವೇಗಂಬಟ್ಟುಟುತುಂ ನೋ ೧೪೭
ಟ್ಪಾಗಳ್ ಕಳ್ಗೆಱಗಿ ಸಾವ ಮಾಕ್ಷಿಕ ತತಿಯಂ

ಯಿಂದ 'ಹಾಗೆಯೇ ಮಾಡುತ್ತೇನೆ' ಎಂದು ಹೇಳಿ ಹಲವರ ಒಪ್ಪಿಗೆಯಂತೆ ಹೆಂಡವನ್ನು ತೆಗೆದುಕೊಂಡು ಬಂದು ಪ್ರೀತಿಯ ತನ್ನ ಅನಂತಶ್ರೀಗೆ ಕೊಟ್ಟಳು. ಅನಂತಶ್ರೀಯೂ ೧೪೪. "ಇಲ್ಲಿರಿಸಿ ಹೋಗು. ಸಂಜೆ ಕಳ್ಳನ್ನು ಇಬ್ಬರೂ ಕುಡಿಯೋಣ, ನೀನೂ ಇಲ್ಲಿಗೇ ಬಾ" ಎಂದು ಹೇಳಿ ಆಕೆಗೆ ಬಹುಮಾನ ಕೊಟ್ಟು ಆದರದಿಂದ ಮನ್ನಿಸಿದಳು. ೧೪೫. ಆಕೆಯೂ ಸಂತೋಷಪಟ್ಟು, ಹೆಂಡವನ್ನು ಮಂಚದ ಕೆಳಗೆ ಇರಿಸಿ ಹೋದಳು. ಇತ್ತ ಅನಂತಶ್ರೀ ಹಾಸಿಗೆಯ ಮೇಲೆ ಮಲಗಿದ್ದಳು. ಆ ವೇಳೆಗೆ ಪಂಜರದೊಳಗಿದ್ದ ಗಿಳಿ ಗಾಜಿನ ಬಟ್ಟಲಲ್ಲಿದ್ದ ಸುರಾಪಾನವನ್ನು ನೋಡುತ್ತಿರುವಾಗ ಹೆಂಡದ ಗಂಧಕ್ಕೆ ಆಸೆ ಪಟ್ಟು ನುಗ್ಗಿದ ನೊಣಗಳೆಲ್ಲ ಸತ್ತುದನ್ನು ಕಂಡು ಅದರಲ್ಲಿ ವಿಷವಿದೆಯೆಂದು ಗ್ರಹಿಸಿತು. ತನ್ನ ಮೇಲೆ ಕರುಣೆಯುಳ್ಳ ಅನಂತಶ್ರೀ ಈ ಹೆಂಡವನ್ನು ಕುಡಿದಿದ್ದೇ ಆದರೆ, ಅವಳು ಸಾಯುವಳೆಂದು ಚಿಂತಿಸಿ ಗೂಡಿನಿಂದ ನೆಲಕ್ಕೆ ಧುಮುಕಿ ಬಟ್ಟಲನ್ನು ನೆಲಕ್ಕುರುಳಿಸಿತು. ಅದರಲ್ಲಿನ ಹೆಂಡ ಚೆಲ್ಲಿ ಹರಿಯಿತು. ೧೪೬. ಬೇಗನೆ ಅನಂತಶ್ರೀ ಅದನ್ನು ಕಂಡು ಸಿಟ್ಟಾಗಿ ಗಿಳಿಯನ್ನು ಹೊಡೆದು ಕೊಂದು ನಿರಾಸೆ ಹೊಂದಿ ಆ ಮದ್ಯವನ್ನು ನೋಡುತ್ತ ಅಳುತ್ತಿರಲು ಆ ಹೆಂಡಕ್ಕೆ ಆಸೆಪಟ್ಟು ನುಗ್ಗಿ ಕುಡಿದು ಸತ್ತು ಬಿದ್ದ ನೊಣಗಳ ಸಮೂಹವನ್ನೆಲ್ಲ ಕಂಡಳು. ೧೪೭. ಅದರಿಂದ ಮನಸ್ಸು ಕೆಟ್ಟು ಹೋಗಿ ಎದೆಯನ್ನು ನೀವಿ

೮೪೯

ತೊಟ್ಟನೆ ಕೊಳೆ ಕಂಡು ಮನಂ
ಗೆಟ್ಟೆರ್ದೆಯುಂ ನೀವಿಕೊಂಡು ವಿಷಯುಕ್ತಮಿದಂ
ನೆಟ್ಟನೆ ಕುಡಿದೊಡೆ ಮರಣಂ
ತೊಟ್ಟನೆ ಸಮನಿಸುಗುಮಲ್ಲಿ ಸಂದೆಯಮುಂಟೇ ೧೪೮

ಗದ್ಯ॥ ಈ ಗಿಳಿಯಿಂ ಧರ್ಮದಿಂದೊರ್ಮೆಗೆ ಬರ್ದುಂಕಿದೆನೆನಗುಪಕಾರಂ ಮಾಡಿದ ಗಿಳಿಯುಂ ವಿಚಾರಿಸದೆ ಕಳ್ಗುಡಿಕಿಗಳುಂ ನಿರ್ದಯರುಂ ಮಾಡದ ಪಾಪಮಿಲ್ಲೆಂಬ ನುಡಿಯುಂ ನನ್ನಿ ಮಾಡಿದೆಂ ಮಹಾಪಾಪಿಯೆಂದು ತನ್ನಂ ತಾನೆ ಬಯ್ದುಕೊಂಡು ಬಳಿಕ್ಕಂ ಮಱುಗಿ ಗಿಳಿಯ ಪೆಣನನೆರ್ದೆಯ ಮೇಲಿಕ್ಕಿಕೊಂಡತ್ತಳೆಂಬಂತೆ ಬುದ್ಧಿವಂತರಪ್ಪರಾಕೆಯಂತವಿವೇಕಿಗಳಾಗದೆ ನೆಗಳ್ವುದಲ್ಲದೆ ಕಿಮ್ಮನುದ್ಧತಿಕೆಯಿಂ ನಿರ್ದೋಷಿಗಳ ಮೇಲೆ ದೋಷಮಂ ಮಾಡವೇಡೆಂಬುದುಂ. ೧೪೯

ಮುನಿಪತಿಯ ಮಾತನೆಂತುಂ
ಮನದೊಳ್ ಕೈಕೊಂಡು ಶುದ್ಧರೆನ್ನದೆ ಮತ್ತಂ
ಧನದೆಱಕದಿಂದಮಾ ಮುನಿ
ಜನವಂದಿತ ಪಾದಪಂಕಜಂಗಾ ಪರದಂ ೧೫೦

ಗದ್ಯ॥ ಮತ್ತಮೊಂದು ಕಥೆಯನಿಂತೆಂದು ಪೇಳ್ದಂ ೧೫೧

ಕೊಂಡು(ಧೈರ್ಯಪಟ್ಟು) "ವಿಷದಿಂದ ಕೂಡಿದ ಈ ಹೆಂಡವನ್ನು ಕುಡಿದಿದ್ದರೆ ಆಕ್ಷಣವೇ ಸಾವು ಬರುತ್ತಿತ್ತು. ಅದಕ್ಕೆ ಸಂದೇಹವುಂಟೆ? ೧೪೮. ಈ ಗಿಳಿಯ ಧರ್ಮದಿಂದ ನಾನು ಈ ಸಾರಿಗೆ ಬದುಕಿಕೊಂಡೆ ನನಗೆ ಉಪಕಾರ ಮಾಡಿದ ಗಿಳಿಯನ್ನು ಆಲೋಚಿಸದೆ ಕೊಂದೆ 'ನಿರ್ದಯರೂ ಮದ್ಯಪಾಯಿಗಳೂ ಮಾಡದ ಪಾಪವಿಲ್ಲ' ಎಂಬ ಗಾದೆಯನ್ನು ನಿಜ ಮಾಡಿದೆ; ಮಹಾಪಾಪಿ" ಎಂದು ತನ್ನನ್ನು ತಾನೇ ಬೈದುಕೊಂಡು ಆಮೇಲೆ ಆಗಿಳಿಯ ಹೆಣವನ್ನು ಎದೆಯ ಮೇಲಿಟ್ಟುಕೊಂಡು ಅತ್ತಳು. "ಬುದ್ಧಿವಂತರಾದವರು ಆಕೆಯಂತೆ ಅವಿವೇಕಿಗಳಾಗದೆ ನಡೆದುಕೊಳ್ಳಬೇಕಲ್ಲದೆ ಸುಮ್ಮನೆ ಔದ್ಧತ್ಯದಿಂದ ನಿರ್ದೋಷಿಯ ಮೇಲೆ ದೋಷವನ್ನು ಹೊರಿಸಬಾರದು" ಎಂದು ಹೇಳಿದನು ೧೪೯. ಮುನಿಶ್ರೇಷ್ಠನ ಮಾತನ್ನು ಹೇಗೂ ಮನಸ್ಸಿನಲ್ಲಿ ಒಪ್ಪಿಕೊಂಡು ಅವನನ್ನು ಶುದ್ಧನೆಂದು ಹೇಳದೆ ಇನ್ನೂ ಹಣದ ಮೋಹದಿಂದ ಆ ಮುನಿಪೂಜ್ಯನಾದ ಆ ಮಹಾತ್ಮನಿಗೆ ಸೆಟ್ಟಿಯು ೧೫೦. ಮತ್ತೊಂದು ಕಥೆಯನ್ನು ಹೀಗೆ ಹೇಳಿದನು. ೧೫೧. ಮುನಿಶ್ರೇಷ್ಠನೇ, ಆಶ್ಚರ್ಯಕರ

ವರಮುನಿವಲ್ಲಭ ಕೇಳ
ಚ್ಚರಿಯಪ್ಪೀ ಕಥೆಯನವನಿಭೂಷಣಮೆಂಬಾ
ಪುರದೊಳ್ ಬಡಗಿಯದೊರ್ವಂ
ಕರಕುಶಲಂ ಬುದ್ಧಿವಂತನಿರ್ದೊಂದು ದಿನಂ ೧೫೨

ಗದ್ಯ॥ ಮರನಂ ಕಡಿಯಲೆಂದು ವಿಂಧ್ಯಾಚಳ ಪರ್ವತಕ್ಕೆ ಪೋಗಿ ೧೫೩

ತರತರದಿಂದಂ ಗಗನಂ
ಬರಗು ನೀಳ್ದೊಪ್ಪಿ ತೋರ್ಪ ಭೂಜಂಗಳನಾ
ದರದಿಂ ನೋಡುತುಮಿರ್ಪವ
ಸರದೊಳ್ ಮದದಾನೆಯೊಂದು ಕಂಡತಿ ಭರದಿಂ ೧೫೪

ಗಿಬ್ಬನೆ ಪರಿತರೆ ಬಡಗಿಯು
ಸುಬ್ಬನೆ ಸುಗಿದಂಜಿ ನಡುಗಿ ವನದೊಳಗೆಲ್ಲಂ
ತಿಬ್ಬನೆ ತಿರಿತಂದು ಖಳಂ
ಖಬ್ಬನೆ ತನು ಕಂದಿ ಕುಂದಿ ಭಯವಶದಿಂದಂ ೧೫೫

ಗದ್ಯ॥ ಓಡಲಾಱದೊಂದು ಪೆರ್ಮರನನೇಱುವುದುಂ ಮದಗಜೇಂದ್ರಂ ಕೊಲಲಾಱದೆ ಕಿಱಿದು ಬೇಗಮಿರ್ದು ಮತ್ತೊಂದು ದೆಸೆಗೆ ಪೋಪುದುಂ ಬಡಗಿ ಮರದಿಂದಮಿೞಿದು ೧೫೬

ವಾದ ಈ ಕಥೆ ಕೇಳು. ಅವನಿಭೂಷಣವೆಂಬ ಪುರದಲ್ಲಿ ಒಬ್ಬ ಬಡಗಿ ಬಹಳ ಕುಶಲನಾಗಿದ್ದನು. ಅವನು ಒಂದು ದಿನ ಮರ ಕಡಿಯುವುದಕ್ಕೆಂದು ವಿಂಧ್ಯಪರ್ವತಕ್ಕೆ ಹೋಗಿ ವಿಧವಿಧವಾದ, ಆಕಾಶದೆತ್ತರಕ್ಕೆ ಬೆಳೆದ ಮಹಾವೃಕ್ಷಗಳನ್ನು ಆಸೆಯಿಂದ ನೋಡುತ್ತಿದ್ದ ಸಂದರ್ಭದಲ್ಲಿ ಒಂದು ಮದಿಸಿದ ಆನೆ ನುಗ್ಗಿ ಬಂತು. ಅದನ್ನು ಬಡಗಿ ಕಂಡನು. ೧೫೨-೫೪. ಆಗ ಅವನು ಆತುರದಿಂದ ಗಿರ್ರನೆ ಓಡಿ ಹೆದರಿಕೊಂಡು ಕುಗ್ಗಿ ನಡುಕ ಹತ್ತಿ ಕಾಡಿನಲ್ಲೆಲ್ಲ ತಿರುಗಿ ಕೊನೆಗೆ ಭಯವಶನಾಗಿ ಓಡಲಾರದೆ ಬಡಗಿ ಒಂದು ಹೆಮ್ಮರವನ್ನು ಹತ್ತಿದನು, ಆ ಮದ್ದಾನೆಯು ನುಗ್ಗಿ ಬಂತಾದರೂ ಬಡಗಿಯನ್ನು ಕೊಲ್ಲಲಾರದೆ ಕೊಂಚ ಹೊತ್ತು ಆ ಮರದ ಬಳಿ ಕಾದಿದ್ದು ಬೇರೊಂದು ದಿಕ್ಕಿಗೆ ಹೊರಟು ಹೋಯಿತು. ಆಗ ಬಡಗಿ ಮರದ ಮೇಲಿಂದ ಇಳಿದನು. ೧೫೫-೧೫೬. ಆ ಮದ್ದಾನೆಯು ಕೋಪ

ಆ ಮದೇಭಮದರ್ತು ಕೋಪದಿನೆನ್ನನಟ್ಟಿ ತಗುಳ್ದು ಬಂ
ದೀ ಮಹೀಜಮನೇಱಿ ಬರ್ದೆನದಿಲ್ಲದಂದೆರಡಿಲ್ಲದಾ
ಸಾಮಜಂ ತುಳಿದಿಕ್ಕಿ ಕೊಲ್ಲದೆ ಮಾಣದಾನದಱಿಂದಮಿಂ
ತೀ ಮರಕ್ಕೞಿವಂ ವಿಮೋಹಿಸಿ ಮಾಡಲಾಗದು ನಿಶ್ಚಯಂ ೧೫೭

ಎನ್ನದೆ ಬಡಗಿ ಕನಿಷ್ಠಂ
ತನ್ನಳಿಪಿಂ ಕಡಿದನಾಗಳಾಮರನಂ ಮ
ತ್ತೆನ್ನದೆ ದುರ್ಜನನಪ್ಪಂ
ಸನ್ನುತರಂ ಕಿಡಿಪನೆಂಬುದಾವುದು ಚೋದ್ಯಂ ೧೫೮

ಗದ್ಯ॥ ಎಂದು ವೈಶ್ಯಾತ್ಮಜನುಸಿರದಿರ್ಪುದುಂ ಮುನಿಕುಂಜರಂ ಸೆಟ್ಟಿಯ ಮಾತಿಗೆ ವಿಸ್ಮಯಂಬಟ್ಟು ಸಂಶಯತುಲಾರೋಹಣನಪ್ಪೀತನನೆಂತುಂ ನಂಬಿಸುವುದರಿದೆಂದು ನಕ್ಕು ಮತ್ತಂ ತನ್ನ ಪೊಲ್ಲಮೆಯುಂ ಪಿಂಗಿಸಲೆಂದು ಇಂತೆಂದಂ ೧೫೯

ಜಿನದತ್ತ ಕೇಳ ಕಥೆಯೊಂ
ದನಪೂರ್ವಮನಮರಖೇಟಮೆಂಬೂರೊಳ್ ಮೇ
ದಿನಿದೇವನೊರ್ವನಿರ್ಪಂ
ಜನವಿನುತಂ ಚಂದ್ರದತ್ತನೆಂಬಾ ಪೆಸರಿಂ ೧೬೦

ಗದ್ಯ॥ ಆತನ ಪೆಂಡತಿ ಯಜ್ಞದತ್ತೆಯೆಂಬಳಾಕೆಯೊಂದು ಮುಂಗುರಿಯಂ ನಡಪಿ ಪಿರಿದು ಮಟ್ಟುಕಿಱಿಂ ಕೊಂಡಾಡುತ್ತುಮಿರ್ದೊಂದು ದಿವಸಂ ೧೬೧

ದಿಂದ ತನ್ನನ್ನು ಅಟ್ಟಿಸಿಕೊಂಡು ಬಂದಾಗ ತಾನು ಆ ವೃಕ್ಷವನ್ನು ಆಶ್ರಯಿಸಿ ಬದುಕಿದನಲ್ಲದೆ ಬೇರಿಲ್ಲ. ಆ ಮರದ ಆಶ್ರಯವಿಲ್ಲದಿದ್ದರೆ ಸಂದೇಹವಿಲ್ಲದೆ ಆ ಆನೆ ತನ್ನನ್ನು ತುಳಿದು ಕೊಲ್ಲುತ್ತಿತ್ತೆಂಬುದನ್ನು ಯೋಚಿಸಿದರೆ ಆ ಮರಕ್ಕೆ ಬಡಗಿ ಕೇಡು ಮಾಡಬಾರದಾಗಿತ್ತು ೧೬೭. ಆದರೆ ಆ ಬಡಗಿ ಹಾಗೆ ಯೋಚಿಸಲಿಲ್ಲ. ಆ ನೀಚನು ಆಸೆಯಿಂದ ಆ ದೊಡ್ಡ ಮರವನ್ನು ಅಂದೇ ಕಡಿದನು. ದುರ್ಜನನಾದವನು ಸಜ್ಜನರನ್ನು ಯೋಚನೆಯೇ ಇಲ್ಲದೆ ಕಾಡಿಸಿ ಕೆಡಿಸುವವನೆಂಬುದು ಯಾವ ಆಶ್ಚರ್ಯ ? ೧೫೮. ಹೀಗೆ ಜಿನದತ್ತಸೆಟ್ಟಿ ಹೇಳಿ ಸುಮ್ಮನಾದನು. ಆ ಮುನಿಶ್ರೇಷ್ಠನು ಸೆಟ್ಟಿಯ ಮಾತಿಗೆ ಆಶ್ಚರ್ಯಪಟ್ಟು ಸಂಶಯದ ತಕ್ಕಡಿಯನ್ನು ಏರಿದ ಈತನನ್ನು ಹೇಗೆಯೂ ನಂಬಿಸುವುದು ಅಸಾಧ್ಯವೆಂದು ನಕ್ಕು ಪುನಃ ತನ್ನ ಅಪನಿಂದೆಯನ್ನು ಕಳೆಯಲೆಂದು ಹೀಗೆ ಹೇಳಿದನು: ೧೫೯. ಜಿನದತ್ತ ! ಕೇಳು. ಅಮರಖೇಟವೆಂಬ ಒಂದು ಅಪೂರ್ವವಾದ ಊರು. ಅದರಲ್ಲಿ ಚಂದ್ರದತ್ತನೆಂಬ ಹೆಸರಿನ ಬ್ರಾಹ್ಮಣನೊಬ್ಬನಿದ್ದನು, ೧೬೦. ಆತನ ಹೆಂಡತಿ ಯಜ್ಞದತ್ತೆಯೆಂಬವಳು. ಆಕೆ ಒಂದು ಮುಂಗುಸಿಯನ್ನು ಸಲಹಿ ಪ್ರೀತಿಯಿಂದ ಕೊಂಡಾಡುತ್ತಿದ್ದಳು.

ತೊಟ್ಟಿಲೊಳು ತನ್ನ ಕೂಸಂ
ಪಟ್ಟಿರಿಸಿ ಲತಾಂಗಿ ಪೊತ್ತುವೋಗಿಂಗೆ ಮನಂ
ಮುಟ್ಟಿದೆಡೆವೋದಳನ್ನೆಗ
ಮೊಟ್ಟಜೆಯಿಂ ಪಾವು ನಿದ್ರೆಗೆಯ್ದಾ ಮಗವಂ ೧೬೨

ಬಂದು ಕೊಲಲಿರ್ಪುದುಂ ಪರಿ
ತಂದುರಗನನಟ್ಟಿ ಪಿಡಿದು ಮುಂಗುರಿ ಕೊಂದಾ
ನಂದಂಬೆರಸಿದಿರಂ ಪರಿ
ತಂದಾಕೆಯ ಕಾಲಮೇಲೆ ಪೊರಟ್ಟುದುಮಾಗಳ್ ೧೬೩

ಗದ್ಯ॥ ಮುಂಗುರಿಯ ಬಾಯ ನೆತ್ತರಂ ಕಂಡು ಶಿಶುವಂ ಕೊಂದುದೆಂದು ಮುನಿದು ತನ್ನ ಪಿಡಿದಿರ್ದೊನಕೆಯನೆತ್ತಿ ಮುಂಗುರಿಯ ತಲೆಯನಿರ್ಪೋಳಾಗೆ ಪೊಯ್ದುಕೊಂದು ೧೬೪

ಮಱುಗಿ ಕುದಿದೊಳಱಿ ಕೆಟ್ಟೆಂ
ಕಱುವೇ ನಾನೇವೆನೆಂದು ಬಂದೊಳಗಂ ಪೊ
ಕ್ಕೊಱಗುವ ಕಂದನುಮಂ ಸ
ತ್ತುಱಿಕೆಯ ವಿಷಧರನ ಪೆಣನುಮಂ ಕಂಡಾಗಳ್ ೧೬೫

ಒಂದು ದಿನ ತನ್ನ ಹಸು ಮಗುವನ್ನು ತೊಟ್ಟಿಲೊಳಗೆ ಮಲಗಿಸಿ ಆ ಹೆಂಗಸು ಕಾಲಕ್ಷೇಪಕ್ಕೋಸ್ಕರ ತನ್ನ ಮನಸ್ಸಿಗೆ ಮೆಚ್ಚಿಗೆಯಾದ ಸ್ಥಳಕ್ಕೆ ಹೋಗಿದ್ದಳು. ಅಷ್ಟರಲ್ಲಿ ಒಂದು ಹಾವು ಆವೇಶದಿಂದ ಬಂದು ನಿದ್ದೆಮಾಡುತ್ತಿದ್ದ ಆ ಮಗುವನ್ನು ಕೊಲ್ಲುವುದರಲ್ಲಿತ್ತು. ೧೬೧-೨ ಹಾಗೆ ಹಾವು ಕೊಲ್ಲುವ ಹವಣಿಕೆಯಲ್ಲಿದ್ದಾಗ ಆ ಮುಂಗುಸಿಯು ಓಡಿ ಬಂದು ಆ ಸರ್ಪವನ್ನು ಅಟ್ಟಿಸಿಕೊಂಡು ಹೋಗಿ ಹಿಡಿದು ಕೊಂದಿತು. ಹಾಗೆ ಕೊಂದ ಆನಂದದಿಂದ ಓಡಿ ಬಂದು ಆ ಬ್ರಾಹ್ಮಣಿತಿಯ ಕಾಲಮೇಲೆ ಹೊರಳಾಡಿತು. ೧೬೩. ಆಗ ಆಕೆಯು ಮುಂಗುಸಿಯ ಬಾಯಿ ರಕ್ತವನ್ನು ನೋಡಿ ಅದು ಮಗುವನ್ನು ಕಚ್ಚಿ ಕೊಂದಿತೆಂದೇ ಭಾವಿಸಿ ಸಿಟ್ಟುಗೊಂಡು ತಾನು ಹಿಡಿದುಕೊಂಡಿದ್ದ ಒನಕೆಯಿಂದ ಆ ಮುಂಗುಸಿಯ ತಲೆ ಎರಡು ಹೋಳಾಗುವಂತೆ ಎತ್ತಿ ಹೊಡೆದಳು. ಅದು ಸತ್ತು ಹೋಯಿತು. ೧೬೪. ಆಕೆ ಮಗು ಸತ್ತಿತೆಂದು ಸಂಕಟಪಟ್ಟು, ಕೆಟ್ಟೆ, ಅಯ್ಯೋ ಮಗುವೆ! ನಾನೇನು ಮಾಡಲಿ? "ಎಂದು ಗೋಳಿಡುತ್ತ ಮನೆಗೆ ಬಂದು ಒಳಕ್ಕೆಹೋಗಿ ತೊಟ್ಟಿಲಲ್ಲಿ ಮಲಗಿ ನಿದ್ರಿಸುತ್ತಿದ್ದ ತನ್ನ ಕಂದನನ್ನೂ ಹತ್ತಿರದಲ್ಲಿಯೇ ಸತ್ತುಬಿದ್ದಿದ್ದ ಪ್ರಸಿದ್ಧವಾದ ಹಾವಿನ ಹೆಣವನ್ನೂ ಕಂಡಳು. ೧೬೫. ಆಗ ಅವಳು ಮತಿಗೆಟ್ಟಳಂ, ಮುಂಗುಸಿ

ಮತಿಗೆಟ್ಟುಮಗುಳೆ ನೋಡಹಿ
ಪತಿಯಂ ಕೊಂದಿಕ್ಕಿ ಬೇಗಮೆನ್ನಾತ್ಮಜನಂ
ಧೃತಿವೆರಸು ಕಾದ ಮುಂಗುಲಿ
ಗತಿಶಯಮಂ ಮಾಡಿ ಪಿರಿದುಮತ್ಯಾದರದಿಂ ೧೬೬

ಗದ್ಯ॥ ಕೊಂಡಾಡದೆ ಕೊಂದೆನೆಂದು ಬಟ್ಟಿಕ್ಕಂ ಮಿಡುಮಿಡುಮಿಡುಕಿ ಮಱುಗಿದಳಂತೆ ಸತ್ಪುರುಷರುಮಾಕೆಯಂತವಿಚಾರಿಗಳಾಗದೆ ವಿಚಾರಿಸಿ ನೆಗಟ್ವುದೆಂಬುದುಂ ಜಿನದತ್ತಸೆಟ್ಟಿ ಮತ್ತಂ ಮನದ ಸಂಶಯಂ ಪೋಗದೆ ಮೋಹವಶದಿಂ ಮುನೀಂದ್ರನ ಮಾತಂ ಕೈಕೊಳದೆ ಧನದೆಱಕದಿಂ ದಿನ್ನುಪಾಯದಿನೆನ್ನ ಪೊನ್ನಂ ಕೊಳ್ವೆನೆಂದು ಮತ್ತೊಂದು ಕಥೆಯನಿಂತೆಂದು ಪೇಳ್ದಂ ೧೬೭

ಜಿನಪಾಲಿತಮುನಿ ಮೋ
ದಿನಿವಂದಿತ ಕಥೆಯನೊಂದನವಧಾರಿಸಿ ಕೇ
ಳನಘ ಮನವೊಲ್ದು ಕಾಮುಕ
ವನಮೆಂಬುದು ದುರ್ಗಮುಂಟು ಕೇಳ್ ತದ್ವನದೊಳ್ ೧೬೮

ಗದ್ಯ॥ ಪಿರಿದಪ್ಪ ಪುರಾಣಕೂಪಮುಂಟಾ ಕೂಪದೊಳ್ ೧೬೯

ಗರಧರನುಂ ಪುಲಿಯುಂ ವಾ
ನರನುಂ ಬಿಡದಕ್ಕಸಾಲೆಯುಂ ಬಿರ್ದಿರೆ ಭೂ
ಸುರನೊರ್ವಂ ಗಂಗೆಗೆ ಸ
ಚ್ಚರಿತಂ ಪೋಗುತ್ತುಮಿರ್ದು ಕೌಶಿಕನೆಂಬಂ ೧೭೦

ಹಾವನ್ನು ಕೊಂದುಹಾಕಿತು. ಸಮಯದಲ್ಲಿ ತನ್ನ ಮಗನನ್ನು ಕಾಪಾಡಿದ ಮುಂಗುಸಿಗೆ ಅತಿಶಯ ಪ್ರೀತ್ಯುಪಚಾರಮಾಡದೆ, ಕೊಂಡಾಡದೆ, ಕೊಂದೆನಲ್ಲಾ ಎಂದು ಬಹಳವಾಗಿ ಮರುಗಿ ದುಡುಕಿನ ತನ್ನ ಕೃತ್ಯಕ್ಕೆ ಬಹಳವಾಗಿ ಮಿಡುಕಿದಳು. ಹಾಗೆ ಸತ್ಪುರುಷರು ಅವಿಚಾರಿಗಳಾಗಬಾರದು. ಚೆನ್ನಾಗಿ ವಿಚಾರ ಮಾಡಿ ಕೆಲಸಮಾಡಬೇಕು. ಎಂದು ಮುನಿ ಹೇಳಲು ಜಿನದತ್ತಸೆಟ್ಟಿ ಮನಸ್ಸಿನ ಸಂಶಯ ಹೋಗದೆ ಪುನಃ ಮೋಹವಶನಾಗಿ ಮುನಿಶ್ರೇಷ್ಠನ ಮಾತನ್ನು ಒಪ್ಪಿಕೊಳ್ಳದೆ ಹಣದ ಆಸೆಯಿಂದ 'ಇನ್ನೂ ಉಪಾಯದಿಂದ ನನ್ನ ಹೊನ್ನನ್ನು ತೆಗೆದುಕೊಳ್ಳುತ್ತೇನೆ' ಎಂದು ಮತ್ತೊಂದು ಕಥೆಯನ್ನು ಆರಂಭಿಸಿದನು, ೧೬೬-೧೬೭. ಭೂಲೋಕವಂದಿತನೆ, ಜಿನ ಪಾಲಿತಮುನಿಯೆ ! ಈ ಕಥೆಯೊಂದನ್ನು ಗಮನವಿಟ್ಟು ಕೇಳು, ಕಾಮುಕವನವೆಂಬುದೊಂದು ದುರ್ಗಮವಾದ ಕಾಡು ಇದೆ, ಆ ವನದಲ್ಲಿ, ೧೬೮. ದೊಡ್ಡದಾದ ಒಂದು ಹಳೆಯ ಬಾವಿಯಿತ್ತು. ಆ ಬಾವಿಯಲ್ಲಿ ಒಂದು ಹಾವೂ, ಹುಲಿಯೂ ಒಂದು ಕೋತಿಯೂ ಬಿದ್ದಿದ್ದುವು. ಅವುಗಳ ಮಧ್ಯೆ ಒಬ್ಬ ಅಕ್ಕಸಾಲೆಯೂ ಅದರೊಳಗೆ ಬಿದ್ದಿದ್ದನು. ಆಗ ಕೌಶಿಕವೆಂಬ ಒಬ್ಬ ಬ್ರಾಹ್ಮಣನು ಗಂಗಾಯಾತ್ರೆ ಹೊರಟು ದಾರಿ ನಡೆಯುತ್ತಾ ಆ ವನವನ್ನು ಪ್ರವೇಶಿಸಿದನು, ೧೬೯-೧೭೦. ಅಲ್ಲಿ ಅವನಿಗೆ ಧಾಹವಾಗಿ

ಗದ್ಯ॥ ನೀರಡಸಿ ತತ್ಕೂಪದೆಡೆಯಂ ವನಚರರಿಂದಱಿದು ಬಾವಿಯ ತಡಿಯೊಳ್ ನಿಂದು ತನ್ನಟ್ಟುಂಬ ಮಡಕೆಯ ಕೊರಲೊಳ್ ಬಳ್ಳಿಯಂ ಕಟ್ಟಿ ನೀರಂ ಸೇದಲೆಂದು ಬಾವಿಯೊಳಗಿಕ್ಕುವುದುಂ ೧೭೧

ತಡೆಯದೆ ಸೇದೆಯ ನೇಣಂ
ಪಿಡಿದಿರೆ ಪುಲಿ ತೋಯಮೆಂದು ತದ್ವಿಪ್ರಂ ನೇ
ರ್ಪಡೆ ಪೆರ್ಚಿ ತೆಗೆಯೆ ಪುಲಿ ಬಂ
ದೊಡೆ ಭಯದಿಂ ನೋಡುತಿರ್ಪುದುಂ ತದ್ವ್ಯಾಘ್ರಂ ೧೭೨

ಗದ್ಯ॥ ಕೌಶಿಕಂಗೆ ಪೊಡೆವಟ್ಟು ನಿಮ್ಮ ಪ್ರಸಾದದಿಂ ಪ್ರಾಣಭಯಂ ಪಿಂಗಿದುದೆನ್ನಂ ಬೆಸಕೆಯ್ಸಿಕೊಳ್ವುದೆಂದು ತನ್ನ ನೆಲೆಗೆ ಪೋಯ್ತಿತ್ತಲ್ ೧೭೩

ನೀರಟ್ಕೆ ಪೆರ್ಚೆ ವಿಪ್ರನು
ದಾರಂ ಮತ್ತಿಕ್ಕೆ ಬಾವಿಯೊಳ್ ಸೇದೆಯನಂ
ತೋರಂತೆ ಪಾವು ಪಿಡಿದಿರೆ
ವೀರಂ ನೀರೆಂದು ತೆಗೆವುದುಂ ತತ್ಕ್ಷಣದಿಂ ೧೭೪

ಗದ್ಯ॥ ಪಾವು ಬಂದೊಡೆ ಪಾವಂ ನೋಡಿ ಬೆಱಗಾಗಿರ್ಪುದುಂ ಫಣಿಪತಿ ಕೌಶಿಕಂಗೆ ಪೊಡೆವಟ್ಟು ನಿಮ್ಮ ಪ್ರಸಾದದಿಂದೊಂದು ಕಂಟಕಂ ಪೋಯ್ತೆಂದು ನಿಮ್ಮ ಮಾಡಿದುಪಕಾರಮನೇಂದಿಂಗಂ

ಆ ಬಾವಿಯ ಸ್ಥಳವನ್ನು ಕಾಡು ಜನರಿಂದ ತಿಳಿದು ಬಾವಿಯ ದಡದಲ್ಲಿ ನಿಂತು ತಾನು ಅಡಿಗೆ ಮಾಡಿಕೊಳ್ಳುತ್ತಿದ್ದ ಮಡಿಕೆಗೆ ಕೊರಳಲ್ಲಿ ಒಂದು ಬಳ್ಳಿಯನ್ನು ಕಟ್ಟಿ ನೀರನ್ನು ಸೇದುವುದಕ್ಕೆಂದು ಬಾವಿಯೊಳಕ್ಕೆ ಬಿಡಲು. ೧೭೧. ಆ ಸೇದುವ ಬಳ್ಳಿಯನ್ನು ಹಿಡಿದು ತಟ್ಟನೆ ಹುಲಿ ಮೇಲಕ್ಕೆ ನೆಗೆದುಬಂದಿತು, ನೀರೆಂದು ಭಾವಿಸಿ ಸೇದಿದ ಬ್ರಾಹ್ಮಣನಿಗೆ ಹುಲಿಯನ್ನು ಕಂಡು ಭಯವಾಯಿತು. ಆ ಹುಲಿ ಕೌಶಿಕನಿಗೆ ನಮಸ್ಕಾರಮಾಡಿ 'ನಿಮ್ಮ ಅನುಗ್ರಹದಿಂದ ನನ್ನ ಪ್ರಾಣಭಯ ಕಳೆಯಿತು. ನನ್ನ ಕೈಲಿ ಸೇವೆ ಮಾಡಿಸಿಕೊಳ್ಳಬೇಕು. ಎಂದು ಹೇಳಿ ತನ್ನ ವಾಸಸ್ಥಳಕ್ಕೆ ಹೊರಟುಹೋಯಿತು. ೧೭೨-೧೭೩. ಇತ್ತ ಬಾಯಾರಿಕೆ ಹೆಚ್ಚಾಗಿ ಆ ಬ್ರಾಹ್ಮಣನು ಮತ್ತೆ ಮಡಕೆಯನ್ನು ಕಟ್ಟಿ ನೀರಿಗೆ ಬಿಟ್ಟನು. ಆಗ ಆ ಮಡಕೆಯನ್ನು ಭಾವಿಯೊಳಗಿದ್ದ ಹಾವು ಹಿಡಿಯಿತು. ನೀರೆಂದು ಭ್ರಮಿಸಿ ಅವನು ಸೇದಲು ಆ ಕ್ಷಣವೇ ಹಾವು ಮೇಲಕ್ಕೆ ಬಂದಿತು, ಕೌಶಿಕ ಬೆಱಗುಗೊಂಡನು, ಆಗ ಆ ಹಾವು ಕೌಶಿಕನಿಗೆ ಅಡ್ಡ ಬಿದ್ದು "ನಿಮ್ಮ ದಯೆಯಿಂದ ನನಗೆ ಇಂದು ಒಂದು ಕಂಟಕ ಕಳೆಯಿತು. ಇಂದು ನೀವು ಮಾಡಿದ ಉಪಕಾರವನ್ನು ನಾನೂ ಎಂದಿಗೂ

ಮಱೆಯಲ್‌ಬಾರದು ನಿಮಗೊಂದೇನಾನುಮಾಪತ್ತಾದೊಡೆ ಮಱೆಯದೆ ನೆನೆವುದೆಂದು ತನ್ನ ಪರ್ಣವಾಸಕ್ಕೆ ಪೋಯ್ತನ್ನೆಗಂ ೧೭೫

ಪಿರಿದಪ್ಪ ತೃಷ್ಣೆಯಿಂ ಭೂ
ಸುರನಾಗಳೆ ಮತ್ತೆ ಸೇದೆಯಂ ಬಾವಿಯೊಳೊ
ಪ್ಪಿರೆ ಬೇಗಮಿಕ್ಕೆ ನೇಣಂ
ತ್ವರಿತಂ ಭಯದಿಂದೆ ಪಿಡಿಯೆ ವಾನರನಾಗಳ್ ೧೭೬

ಗದ್ಯ॥ ನೀರೆಂದು ತೆಗೆವುದುಂ ಕೋಡಗಂ ಪೊಱಮಡೆ ಕೌಶಿಕಂ ಬೆಱಗಾಗಿರ್ಪುದುಂ ಮರ್ಕಟಂ ದ್ವಿಜಂಗೆ ವಿನತನಾಗಿ ನಿನ್ನ ಧರ್ಮದಿಂದೊಂದು ಸೂಟ್ನಗೆ ಬಂದಪಮೃತ್ಯು ಪಿಂಗಿಪೋಯ್ತು ನಿನಗಾನೇನಂ ಮಾಡಿದೊಡಂ ಮಾಟಮಲ್ಲೆನ್ನಿರ್ಕೆಯುಮೀ ಕಾಮುಕವನಮೆ ನಿನ್ನ ಚಿತ್ತದೊಳವ ಧರಿಸಿ ಕಾರುಣ್ಯದಿಂದೊಂದವಸರದೊಳ್ ನೆನೆವುದೆಂದು ನಿಜಸ್ಥಾನಕ್ಕೆ ಪೋಪುದುಂ ೧೭೭

ಅಡಹಡಿಸಿ ತೃಷ್ಣೆಯಿಂದಾ
ಗಡೆ ವಿಪ್ರಂ ಬಾವಿಯೊಳಗೆ ಸೇದೆಯನಿಕ್ಕಲ್
ಕಡು ಭಯದಿಂದಂ ಮನದೊಳ್
ನಡುಗುತ್ತಿರ್ಪಕ್ಕಸಾಲಿ ಸೇದೆಯ ನೇಣಂ ೧೭೮

ಮರೆಯಲು ಸಾಧ್ಯವಿಲ್ಲ. ನಿಮಗೆ ಏನಾದರೂ ಆಪತ್ತು ಬಂದಾಗ ಮರೆಯದೆ ನನ್ನನ್ನು ನೆನೆಯಿರಿ" ಎಂದು ಹೇಳಿ ಹೊರಟುಹೋಯೀತು. ೧೭೪_೧೭೫. ಆಗ ಹೆಚ್ಚಾದ ದಾಹದಿಂದ ಬ್ರಾಹ್ಮಣನು ಮತ್ತೆ ನೀರು ಸೇದಲು ಬಾವಿಗೆ ಬಿಟ್ಟಾಗ ತಡಮಾಡದೆ ಕೋಡಗ ಅದನ್ನು ಬಲವಾಗಿ ಹಿಡಿಯಿತು. ೧೭೬. ಅದು ನೀರೆಂದು ತಿಳಿದು ಆಸೆ ಪಟ್ಟು ಮೇಲಕ್ಕೆಳೆಯಲು ಕೋಡಗ ಹೊರಕ್ಕೆ ಬಂದಿತು. ಅದನ್ನು ಕಂಡು ಭಯ ಪಟ್ಟಿದ್ದ ಕೌಶಿಕನಿಗೆ ಆ ವಾನರ ನಮಸ್ಕಾರಮಾಡಿ "ನಿನ್ನ ಧರ್ಮದಿಂದ ಈ ಸಲ ಒದಗಿದ್ದ ಅಪಮೃತ್ಯು ತಪ್ಪಿ ಹೋಯಿತು. ನಿನಗೆ ನಾನೇನು ಮಾಡಿದರೂ ಅದು ದೊಡ್ಡದಲ್ಲ, ನಾನು ಇರುವ ಸ್ಥಳವೂ ಕಾಮುಕವನವೇ, ನಿನ್ನ ಮನಸ್ಸಿನಲ್ಲಿಟ್ಟುಕೊಂಡು ಕರುಣೆವಹಿಸಿ ಯಾವುದಾದರೂ ಒಂದು ಸಂದರ್ಭದಲ್ಲಿ ನನ್ನನ್ನು ನೆನಸಿಕೊಳ್ಳಿ" ಎಂದು ಬಿನ್ನವಿಸಿ ತನ್ನ ಸ್ಥಳಕ್ಕೆ ಹೋಯಿತು. ೧೭೭. ಬಾಯಾರಿಕೆಯಿಂದ ಬಹಳ ಚಡಪಡಿಸಿ ಬಾವಿಯೊಳಗಿನಿಂದ ಮಡಕೆಯನ್ನು ಸೇದಲು ಬಹಳ ಭಯದಿಂದ ನಡುಗುತ್ತಿದ್ದ ಅಕ್ಕ ಸಾಲೆ ಸೇದೆಯನ್ನು ಹಿಡಿದುಕೊಂಡನು, ೧೭೮. ಮತ್ತೆ ಅದನ್ನು ಸೇದಿದಾಗ ಆ ಅಕ್ಕ

ಗದ್ಯ॥ ಪಿಡಿವುದುಂ ನೀರೆಂದು ಪೊಱಗಣ್ಗೆ ತೆಗೆಯೆ ಸ್ವರ್ಣಕಾರಂ ಬರೆ ಕೌಶಿಕಂ ನೋಡಿ ಚೋದ್ಯಂಬಟ್ಟಪ್ಪುದುಮಕ್ಕಸಾಲಿ ವಿಪ್ರಂಗೆ ಪೊಡೆಮಟ್ಟು ೧೭೯

ನೀನಿತ್ತ ಜೀವಮಿದು ಧರ
ಣೀನುತ ನೀನಿಲ್ಲದಂದು ಸಾವದು ಋಷಿಯೇ
ಕಾನನದೊಳಿಲ್ಲಿ ನಿಮಗಾ
ನೇನಂ ಮಾಡುವೆನೊ ಮಾಡದಿರ್ದೊಡೆ ಕಷ್ಟಂ ೧೮೦

ಈ ನೆಗಟ್ಟವನದ ಪೊರೆಯೊಳ್
ತಾನಗ್ಗದ ತಾಮ್ರಕೂಟಮೆಂಬುದು ಪೊಟಲಂ
ತಾ ನಗರದೊಳಾನಿರ್ಪೆಂ
ನೀನಲ್ಲಿಗೆ ಬರ್ಪುದೆಂದು ಕೈಮುಗಿದಾತಂ ೧೮೧

ಗದ್ಯ॥ ಪ್ರಾರ್ಥಿಸುವುದುಂ ಮಗುಟ್ದು ಬರ್ಪಾಗಳ್ ನಿನ್ನಲ್ಲಿಗೆ ಬಂದಲ್ಲದೆನ್ನನೆಲೆಗೆ ಪೋಗೆನೆಂದಕ್ಕಸಾಲೆಯುಮನೊಡಂಬಡಿಸುವುದುಮಾತನೊಡಂಬಟ್ಟು ತನ್ನಪುರಕ್ಕೆ ಪೋದನಿತ್ತಲ್ ಕೌಶಿಕಂ ತನ್ನಿಷ್ಟಸ್ಥಾನಕ್ಕೆ ಪೋಗಿ ಕೆಲವು ದಿವಸಕ್ಕೆ ಮಗುಟ್ದು ಬರುತಂ ಕಾಮುಕವನಕ್ಕೆ ಬಂದು ಕೋಡಗನಿರ್ದಲ್ಲಿಗೆ ವರ್ಪುದುಂ ವಾನರನಾನರನನಱಿದು ಮುನ್ನಿನುಪಕಾರಮಂ ನೆನೆದು ಪಣ್ಪಲಂಗಳಂ ತಂದಿಕ್ಕುವುದುಂ ಪಸಿವು ಪೋಪಿನಂ ಮೆಲ್ದು ಪಥಪರಿಶ್ರಮಮಂ ಕಳೆದು ೧೮೨

ಸಾಲಿ ಮೇಲಕ್ಕೆ ಬಂದು ವಿಪ್ರನಿಗೆ ನಮಸ್ಕಾರ ಮಾಡಿ, ಆಯ್ಯಾ, ನೀನು ಕೊಟ್ಟ ಜೀವ, ಇದು, ಭೂಸುರನೇ, ಇಂದು ನೀನಿಲ್ಲಿಗೆ ಬರದಿದ್ದರೆ ನಾನು ಸಾಯುತ್ತಿದ್ದದ್ದು ಸುಳ್ಳೆ ? ಈ ಆಡವಿಯಲ್ಲಿ ನಿಮಗೆ ನಾನೇನು ಮಾಡಬಲ್ಲೆ ? ಪ್ರತ್ಯುಪಕಾರ ಮಾಡದಿದ್ದರೆ ನೀಚನಾಗುತ್ತೇನೆ. ೧೭೯–೧೮೦. ಈ ಪ್ರಸಿದ್ಧವಾದ ವನದ ಪಕ್ಕದಲ್ಲಿಯೇ ತಾಮ್ರಕೂಟವೆಂಬ ದೊಡ್ಡ ಪಟ್ಟಣವಿದೆ, ಆ ನಗರವೇ ನನ್ನ ವಾಸಸ್ಥಳ. ನೀನು ಅಲ್ಲಿಗೆ ಬರಬೇಕು." ಎಂದು ಆತನು ನಮಸ್ಕರಿಸಿ ಕೌಶಿಕನಿಗೆ ಬಿನ್ನವಿಸಿಕೊಂಡನು. ಅವನ ಪ್ರಾರ್ಥನೆಗೆ ಮನಸ್ಸು ಕರಗಿ ಕೌಶಿಕನು, ನಾನು ಗಂಗೆಯಿಂದ ಹಿಂತಿರುಗಿ ಬರುವಾಗ ನಿನ್ನಲ್ಲಿಗೆ ಬರುತ್ತೇನೆ. ನಿನ್ನಲ್ಲಿಗೆ ಬಂದಲ್ಲದೆ ನನ್ನ ಸ್ಥಳಕ್ಕೆ ಹೋಗುವುದಿಲ್ಲ" ಎಂದು ಭಾಷೆಕೊಟ್ಟನು. ಹಾಗೆ ಅವನು ಅಕ್ಕಸಾಲೆಯನ್ನು ಒಪ್ಪಿಸಲು ಆತನು ಒಪ್ಪಿ ತನ್ನ ಪಟ್ಟಣಕ್ಕೆ ಹೋದನು. ಇತ್ತ ಕೌಶಿಕನು ತಾನು ಇಷ್ಟಪಟ್ಟ ಸ್ಥಾನಕ್ಕೆ ಹೋಗಿ ಕೆಲವು ದಿವಸವಾದ ಮೇಲೆ ಹಿಂತಿರುಗಿ ಬರುವಾಗ ಕಾಮುಕವನವನ್ನು ಸೇರಿದನು. ಅದರಲ್ಲಿ ತನಗೆ ಬೇಕಾಗಿದ್ದ ಕಪಿ ಇರುವ ಕಡೆಗೆ ಬರಲು ಆ ಕಪಿಯು ಆ ಬ್ರಾಹ್ಮಣನು ಬರುತ್ತಿರುವುದನ್ನು ಗಮನಿಸಿ ತನಗೆ ಆತನು ಹಿಂದೆ ಮಾಡಿದ್ದ ಉಪಕಾರವನ್ನು ಸ್ಮರಿಸಿಕೊಂಡು ಹಣ್ಣುಹಂಪಲುಗಳನ್ನು ತಂದುಕೊಟ್ಟಿತು, ಕಾಶಿಕನು ಆ ಹಣ್ಣುಹಂಪಲುಗಳನ್ನು ತೃಪ್ತಿಯಾಗಿ ಮೆದ್ದು ತನ್ನ ಹಸಿವನ್ನು ನೀಗಿಕೊಂಡನು. ದಾರಿ ನಡೆದ ಆಯಾಸ ಕಳೆಯಿತು.

ಪುಲಿಯಿರ್ಪ ಗುಹೆಗೆ ಬರ್ಪುದು
ಮಲಂಘ್ಯಗುಣನೆನ್ನನೆತ್ತಿದಾತಂ ಬಂದಂ
ಫಲವಿತ್ತುದೆನ್ನ ಪುಣ್ಯಂ
ಕುಲಸಫಲಮೆಂದು ಪೆರ್ಚಿ ಪುಲಿ ಬಂದಿದಿರಂ ೧೮೩

ಅಂದು ಪೊಡೆಮಟ್ಟು ಪರಮಾ
ನಂದದಿನಟ್ಕರ್ತು ತಂದು ರತ್ನದ ತೊಡವಂ
ಮುಂದಿಡೆ ತದ್ವಿಪ್ರನುಮಾ
ನಂದದಿನವರ್ತಿವೆರಸು ಕೊಂಡಾ ವನದಿಂ ೧೮೪

ಗದ್ಯ॥ ಪೊಱಮಟ್ಟು ತಾಮ್ರಕೂಟಕ್ಕೆ ಬಂದು ಸ್ವರ್ಣಕಾಜನ ಮನೆಗೆ ಬರ್ಪುದುಂ ಪೂರ್ವೋಪಕಾರಮಂ ನೆನೆದಿದಿರಂ ಪರಿತಂದು ಪೊಡೆಮಟ್ಟಭ್ಯಾಗತ ಪ್ರತಿಪತ್ತಿಯಂ ಮಾಡಿ ಬಟ್ಟೆಯ ಬಟಲ್ಕೆಯುಂ ಕಳೆದು ಕೌಶಿಕನಂ ಕೊಂಡಾಡುತಿರ್ಪುದುಂ ಮಱುದಿವಸಂ ಬೃಹಸ್ಪತಿರವಿಶ್ವಾಸಂ ಎಂಬೀ ನೀತಿಯಂ ಮಱೆದು ಚಮೂರನಿತ್ತ ಪೊನ್ನಾಭರಣಗಳೆಲ್ಲಮಂ ಗಟ್ಟಿಮಾಡಿ ಕುಡುವುದೆಂದೇಕಾಂತದೊಳಕ್ಕಸಾಲೆಯ ಕೈಯೊಳ್ ಕುಡುವುದು ಮಾತನಂತೆ ಗೆಯ್ವೆನೆಂದು ೧೮೫

೧೮೧–೧೮೨. ಅಲ್ಲಿಂದ ಆ ಬ್ರಾಹ್ಮಣನು ಹೊರಟು ಹುಲಿಯಿದ್ದ ಗುಹೆಯ ಬಳಿಗೆ ಹೋದನು. ಆಗ ಆ ಹುಲಿಯು ತನ್ನನ್ನು ಬಾವಿಯಿಂದ ಮೇಲಕ್ಕೆತ್ತಿದ ಉನ್ನತ ಗುಣಶಾಲಿ ಬಂದ, "ನನ್ನ ಪುಣ್ಯ ಫಲಿಸಿತು, ಕುಲ ಸಾರ್ಥಕವಾಯಿತು" ಎಂದು ಉತ್ಸಾಹದಿಂದ ಕೌಶಿಕನನ್ನು ಇದಿರುಗೊಂಡು ೧೮೩. ನಮಸ್ಕಾರ ಮಾಡಿ ಬಹಳ ಆನಂದದಿಂದ, ಅಕ್ಕರೆಯಿಂದ ಹಲವು ರತ್ನದ ಒಡವೆಗಳನ್ನು ತಂದು ಮುಂದಿಟ್ಟಿತು. ಆ ಬ್ರಾಹ್ಮಣನೂ ಆನಂದದಿಂದ, ಸಂಭ್ರಮಪಟ್ಟು ಅವುಗಳನ್ನು ತೆಗೆದುಕೊಂಡನು. ೧೮೪. ಆಮೇಲೆ ಆ ವನದಿಂದ ಹೊರಹೊರಟು ತಾಮ್ರಕೂಟ ಪಟ್ಟಣಕ್ಕೆ ಹೋದನು. ಅಲ್ಲಿ ಆ ಅಕ್ಕಸಾಲೆಯ ಮನೆಗೆ ಬರುತ್ತಲೇ ಅವನು ತನಗೆ ಕೌಶಿಕನು ಹಿಂದೆ ಮಾಡಿದ್ದ ಉಪಕಾರವನ್ನು ಸ್ಮರಿಸಿಕೊಂಡು ಇದಿರಿಗೆ ಓಡಿಬಂದು ಅಡ್ಡಬಿದ್ದು ಅಭ್ಯಾಗತನಿಗೆ ಮಾಡಬೇಕಾದ ಉಪಚಾರಗಳನ್ನೆಲ್ಲ ಮಾಡಿ ಮಾರ್ಗಾಯಾಸವನ್ನು ಹೋಗಲಾಡಿಸಿ ಕೌಶಿಕನ ಉಪಕಾರವನ್ನು ಹೊಗಳುತ್ತಿದ್ದನು. ಮಾರನೆಯದಿನ "ಬೃಹಸ್ಪತಿಯನ್ನೂ ನಂಬಬಾರದು" ಎಂಬ ಈ ನೀತಿಯನ್ನು ಮರೆತು ಆ ಬ್ರಾಹ್ಮಣನು ಹುಲಿಯು ಕೊಟ್ಟಿದ್ದ ಚಿನ್ನದ ಒಡವೆಗಳನ್ನೆಲ್ಲವನ್ನೂ ಕರಗಿಸಿ ಗಟ್ಟಿಮಾಡಿಕೊಡಬೇಕೆಂದು ರಹಸ್ಯವಾಗಿ ಅಕ್ಕಸಾಲೆಯ ಕೈಯಲ್ಲಿ ಕೊಟ್ಟನು. ಆಗ ಅವನು ಹಾಗೆಯೇ ಮಾಡುವೆನೆಂದು ಹೇಳಿದನು. ೧೮೫. ಆದರೆ

ಮನದೊಳ್ಭಾವಿಸಿ ನೋಡಿನೋಡಿ ಪಿರಿದಪ್ಪೀ ದ್ರವ್ಯಮಂ ಸಾರ್ಚಿ ಮೇ
ದಿನಿಕಾಂತಾಪತಿಯಲ್ಲಿ ಮೆಚ್ಚುಗೊಳುವೆಂ ನಿಷ್ಕಾರಣಂ ಕೊಟ್ಟು ಕಿ
ಮ್ಮನೆ ವಿಪ್ರೋನ್ನತನಲ್ಲಿ ಬರ್ಪ ಪಡಪೇನೆಂದಾ ದುರಾತ್ಮಂ ಮಹೀ
ಶನನಾನಂದದಿನೆಯ್ದಿ ಪೇಟ್ದೊಡರಸಂ ಕೇಳ್ದಾಗಳುತ್ಸಾಹದಿಂ ೧೮೬

ಗದ್ಯ॥ ತಳಾಱನಂ ಕರೆದು ನೀನೀ ಸ್ವರ್ಣಕಾರಕಂ ತೋಱಿದ ಹಾರ್ವನಂ ಸೆಱೆಯಿಡೆಂಬುದುಂ ತಳಾಱನಕ್ಕಸಾಲೆಯೊಡನೆ ಪೋಗಿ ಕೌಶಿಕನಂ ಪಿಡಿತಂದು ಕೋಳದೊಳಿಕ್ಕುವುದುಂ ಕೌಶಿಕಂ ಬೆಱಗಾಗಿ ೧೮೭

ಎನಗರ್ಥಮುಳ್ಳುದಂ ಮೇ
ದಿನಿಪತಿಯೆಂತಱಿವನೀ ದುರಾತ್ಮನೆ ಪೇಟ್ದಂ
ಧನಮುಂಟೆಂಬುದನೀ ದು
ರ್ಜನನಿಂ ಕೇಡಾದುದೆಂದು ಚಿಂತಿಸಿ ವಿಪ್ರಂ ೧೮೮

ಫಣಿಪತಿಯಂ ನೆನೆವುದುಮಾ
ಫಣಿಪತಿ ಬಂದೇಕೆ ನೆನೆದಿರೆಂಬುದುಮಾ ಧಾ
ರಿಣಿ ದೇವನೇದನೀ ನಿ
ಷ್ಠುರನಿಂದೆನಗಾದ ದುಃಖಮಂ ತತ್ಕ್ಷಣದಿಂ ೧೮೯

ಅವನು ಆ ಒಡವೆಗಳನ್ನೆಲ್ಲ ನೋಡಿ ನೋಡಿ ಮನಸ್ಸಿನಲ್ಲಿ ಬಹಳ ಹೊತ್ತು ಯೋಚಿಸಿ "ಹೆಚ್ಚಾದ ಈ ಧನವನ್ನು ಒಪ್ಪಿಸಿ ಈ ದೇಶದ ರಾಜನಲ್ಲಿ ಬಹುಮಾನವನ್ನು ಪಡೆದು ಕೊಳ್ಳುತ್ತೇನೆ. ಈ ಬ್ರಾಹ್ಮಣನಿಗೆ ಕೊಟ್ಟದ್ದರಿಂದ ನನಗೆ ಬರುವ ಲಾಭವೇನು ?" ಎಂದು ಕೆಟ್ಟ ನಿರ್ಣಯಕ್ಕೇ ಒಲಿದನು. ಆ ದುರಾತ್ಮನು ಅಲ್ಲಿನ ರಾಜನನ್ನು ಕಂಡು ಹೇಳಲು ಅವನು ಸಂತೋಷಪಟ್ಟು ತಳವಾರನನ್ನು ಕರೆಸಿ "ಈ ಅಕ್ಕಸಾಲೆಯೊಡನೆ ಹೋಗಿ ಅವನು ತೋರಿಸುವ ಬ್ರಾಹ್ಮಣನನ್ನು ಹಿಡಿದು ತಂದು ಸೆರೆಯಲ್ಲಿಡು" ಎಂದನು ಆದರಂತೆ ತಳವಾರನು ಅಕ್ಕಸಾಲೆಯ ಜತೆಯಲ್ಲಿ ಹೋಗಿ ಕೌಶಿಕನನ್ನು ಹಿಡಿದು ತಂದು ಕೋಳದಲ್ಲಿ ಹಾಕಿದನು. ಕೌಶಿಕನಿಗೆ ಭಯಾಶ್ಚರ್ಯಗಳುಂಟಾದುವು. ೧೮೬–೧೮೭. "ನನ್ನಲ್ಲಿ ದ್ರವ್ಯವಿರುವುದನ್ನು ದೊರೆ ಹೇಗೆ ತಿಳಿದ ? ಈ ದುರಾತ್ಮನೇ ಹೇಳಿದ್ದಾನೆ. ಈ ದುರ್ಜನನಿಂದ ಕೆಡಕಾಯಿತೆಂದು ಚಿಂತಿಸಿ ಆ ಬ್ರಾಹ್ಮಣನು ೧೮೮. ಫಣಿಪತಿಯನ್ನು ನೆನೆಸಿದನು. ಆ ಕೂಡಲೆ ಆ ಸರ್ಪನು ಬಂದು ತನ್ನನ್ನು ಏಕೆ ಸ್ಮರಿಸಿದಿರೆಂದು ಕೇಳಿತು. ಆ ಬ್ರಾಹ್ಮಣನು ಆ ಕ್ರೂರಿಯಾದ ಅಕ್ಕಸಾಲಿಯಿಂದ ತನಗಾದ ದುಃಖವನ್ನು ಹೇಳಿ ಕೊಂಡು ೧೮೯. ಅದನ್ನು ಕೂಡಲೆ ಕಳೆಯಬೇಕೆಂದು ಕೇಳಿಕೊಂಡನು. ಆಗ ಆ ಸರ್ಪನು

ಗದ್ಯ॥ ಪಿಂಗಿಸುವುದೆಂಬುದುಂ ತದ್ರಾಜಸುತನಂ ಕೊಂಡು ಆರ್ಗಮಿಂಟಿಯುದಿರೆ ಕೌಶಿಕಂ ನಿರ್ವಿಷಂ ಮಾಡಿ ಮೆಚ್ಚುಗೊಂಡು ತದ್ವೃತ್ತಾಂತಮೆಲ್ಲಮನರಸಂಗೆ ಪೇಟ್ ಮಹೀನಾಥಂ ಚೋದ್ಯಂಬಟ್ಟು ಮುನಿದು ಅಕ್ಕಸಾಲೆಯುಂ ವಿಶ್ವಾಸಘಾತಕನಿವನಂ ಕವರ್ದೊಡೆ ದೋಷ ಮಿಲ್ಲೆಂದು ಕವರ್ದುಕೊಂಡನಂತೆ ಕೆಲರ್ಉಪಕಾರಶೂನ್ಯರೊಳರೆಂದು ಜಿನದತ್ತಸೆಟ್ಟಿ ನುಡಿದು ಸಿರದಿರ್ಪುದುಂ ಜಿನಪಾಲಿತಮುನಿ ವಿಸ್ಮಯಂಬಟ್ಟು ಸೆಟ್ಟಿಯ ಮುಖಮಂ ನೋಡಿ ೧೮೦

ಅವಧರಿಸು ವೈಶ್ಯವಂಶ
ಪ್ರವರ ಮಹಾಚೋದ್ಯಮಪ್ಪ ಕಥೆಯನಿದಂ ಭೂ
ಭುವನಕ್ಕೆ ರೂಢಿವೆತ್ತಿ
ರ್ದವಂತಿಯೆಂಬೊಂದು ನಾಡು ತದ್ಧಾರಿಣಿಯೊಳ್ ೧೮೧

ಗದ್ಯ॥ ಉಜ್ಜೈನಿಯೆಂಬುದು ಪುರಮದನಾಳ್ವಂ ಮಹೇಂದ್ರನೆಂಬರಸನಾತನ ರಾಜಶ್ರೇಷ್ಠಿ ಕುಬೇರನೆಂಬನಾ ಪುರದನೊರ್ವ ಜಲಯಾತ್ರೆಗೆ ಪೋಗಿ ಪಿರಿದಪ್ಪರ್ಥಲಾಭಮಾಗಿರ್ಪುದುಮೊರ್ವ ನೊಂದು ಮಾವಿನಪಣ್ಣಂ ತಂದು ಕುಬೇರನಂ ಕಂಡು ಅಪೂರ್ವಮಪ್ಪ ಮಾವಿನ ಪಣ್ಣಿದಂ ಮೆಲ್ದೊಡೆ ಸಕಲರುಜೆಗಳುಂ ಕಿಡುಗುಮಿದಱ ಪೆಸರುಂ ಸರ್ವರುಜಾಪಹಾರಿಯೆಂಬುದೆಂದು ಕುಡುವುದುಂ ಸೆಟ್ಟಿಯಾತಂಗೆ ಪಾಲ್ವನಿತು ಪೊನ್ನಂ ಕೊಟ್ಟು ಸಂತೋಷಂಬಡಿಸಿ ಕಳಿಪೆ ಮಾವಿನ ಪಣ್ಣಂ ನೋಡಿ ೧೮೨

ಆ ರಾಜನ ಮಗನನ್ನು ಕಚ್ಚಿತು. ಯಾರೇನು ಮಾಡಿದರೂ ವಿಷ ಇಳಿಯಲಿಲ್ಲ. ಆಗ ಕೌಶಿಕನು ಅದಕ್ಕೆ ಪರಿಹಾರ ಮಾಡಿ ಅರಸನಿಂದ ಬಹುಮಾನವನ್ನು ಪಡೆದು ಆ ವೃತ್ತಾಂತ ವನ್ನೆಲ್ಲ ಅರಸನಿಗೆ ಹೇಳಲು, ರಾಜನು ಆಶ್ಚರ್ಯಪಟ್ಟು "ಅಕ್ಕಸಾಲೆ ನಂಬಿಕೆ ದ್ರೋಹಿ, ಇವನನ್ನು ಲೂಟಿಮಾಡಿದರೆ ತಪ್ಪಿಲ್ಲ" ಎಂದು ನಿರ್ಧರಿಸಿ ಸಿಟ್ಟಾಗಿ ಅವನ ಐಶ್ವರ್ಯವ ನ್ನೆಲ್ಲ ಮುಟ್ಟುಗೋಲು ಹಾಕಿಕೊಂಡನು. ಹೀಗೆ ಕೆಲವರು ಉಪಕಾರ ಶೂನ್ಯರಿರುವರೆಂದು ಹೇಳಿ ಜಿನದತ್ತಸೆಟ್ಟಿ ಸುಮ್ಮನಾಗಲು, ಜಿನಪಾಲಿತಮುನಿಯು ಆಶ್ಚರ್ಯಪಟ್ಟು ಸೆಟ್ಟಿಯ ಮುಖವನ್ನು ನೋಡಿ ೧೮೦. ಎಲೈ ವೈಶ್ಯವಂಶ ಶ್ರೇಷ್ಠನೆ! ಮಹಾ ಆಶ್ಚರ್ಯಕರವಾದ ಈ ಕಥೆಯನ್ನು ಗಮನವಿಟ್ಟು ಕೇಳು" ಎಂದು ನುಡಿದು ಕಥೆ ಹೇಳಲು ತೊಡಗಿದನು. ಪ್ರಪಂಚದಲ್ಲೆಲ್ಲ ಪ್ರಸಿದ್ಧಿಹೊಂದಿದ ಅವಂತಿಯೆಂಬ ನಾಡಿತ್ತು. ಆ ನಾಡಿನಲ್ಲಿ ೧೮೧. ಉಜ್ಜಯಿನಿಯೆಂಬ ಪಟ್ಟಣವೇ ರಾಜಧಾನಿ. ಅಲ್ಲಿ ಮಹೇಂದ್ರನೆಂಬ ಅರಸನಿದ್ದನು. ಅವನ ರಾಜ ಶ್ರೇಷ್ಠಿ ಕುಬೇರನೆಂಬವನು. ಆ ಸೆಟ್ಟಿ ಒಮ್ಮೆ ಜಲಯಾತ್ರೆಗೆ ಹೋಗಿ ಹೆಚ್ಚಾದ ದ್ರವ್ಯಲಾಭವನ್ನು ಹೊಂದಿದನು. ಆಗ ಒಬ್ಬನು ಅವನಿಗೆ ಒಂದು ಮಾವಿನ ಹಣ್ಣನ್ನು ತಂದುಕೊಟ್ಟು "ಇದು ಅಪೂರ್ವವಾದ ಹಣ್ಣು. ಇದನ್ನು ತಿಂದರೆ ಎಲ್ಲ ರೋಗಗಳೂ ಹೋಗುವುವು ಇದರ ಹೆಸರು ಸರ್ವರುಜಾಪಹಾರಿಯೆಂದೇ ಇದೆ" ಎಂದು ಹೇಳಲು ಸೆಟ್ಟಿಯು ಅವನಿಗೆ ಸಾಲುವಷ್ಟು ಚಿನ್ನದ ನಾಣ್ಯಗಳನ್ನು ಕೊಟ್ಟು ಸಂತೋಷಪಡಿಸಿ ಕಳಿಸಿದನು. ೧೮೨. ಆ ಮಾವಿನ ಹಣ್ಣನ್ನು ನೋಡಿ ಆ ಸೆಟ್ಟಿ

ಇದನಿಲ್ಲಿ ಮೆಲ್ದು ಕಿಡಿಸದೆ
ಪದುಳಂ ಕೊಂಡೊಯ್ದು ಮಾಳವೇಶಂಗಿತ್ತ
ಭ್ಯುದಯಶ್ರೀಯುಂ ಪಡೆವೆಂ
ಮುದದಿಂದಾನೆಂದು ಮೆಲ್ಲದಂತಾ ಪಣ್ಣಂ ೧೯೩

ಗದ್ಯ॥ ಪ್ರಯತ್ನದಿಂ ತಂದುಜ್ಜೈನಿಯುಂ ಪೊಕ್ಕು ೧೯೪

ತೊಳಗುವ ವಸ್ತುಗಳಂ ಪರಿ
ಯಳದೊಳ್ ಲೇಸಾಗಿ ತೀವಿ ಮಾವಿನಪಣ್ಣಂ
ಬೆಳಗುವ ರತ್ನದ ಮೇಲು
ಜ್ಜ್ವಳಕೀರ್ತಿಪತಾಕವಿಟ್ಟು ತಂದವನಿಪನಂ ೧೯೫

ಗದ್ಯ॥ ಕಂಡು ಪೊಡಮಟ್ಟು ರತ್ನದಿಂ ತೀವಿದ ಪರಿಯಣಮಂ ಭೂಪಾಲನ ಮುಂದಿಡುವುದುಂ ೧೯೬

ಅರಸಂ ಮಾವಿನಪಣ್ಣಂ
ಕರಮಾದರದಿಂದೆ ಕಳೆದುಕೊಂಡೆಂದಂ ಭೂ
ಧರಧೈರ್ಯ ! ಚೂತಫಲಮಿದು
ಧರಣೀಚಕ್ರದೊಳಪೂರ್ವಮಾದುದೆ ಮರುಳೇ ೧೯೭

ಗದ್ಯ॥ ಅಮೂಲ್ಯಮಪ್ಪ ವಸ್ತುಗಳನೇಕಾರಣದಿಂ ತಂದಿಕ್ಕುಟು ತಂದಿರೆಂಬುದುಂ ಕುಬೇರ ನಿಂತೆಂದಂ ೧೯೮

"ಇದನ್ನು ಇಲ್ಲಿಯೇ ತಿಂದು ಹಾಳುಮಾಡದೆ ಎಚ್ಚರದಿಂದ ತೆಗೆದುಕೊಂಡು ಹೋಗಿ ಮಾಳವರಾಜನಿಗೆ ಕೊಟ್ಟು ಅಭ್ಯುದಯಲಕ್ಷ್ಮಿಯನ್ನು ಸಂತೋಷದಿಂದ ಪಡೆಯುತ್ತೇನೆ". ಎಂದು ಆ ಹಣ್ಣನ್ನು ತಿನ್ನದೆ ತೆಗೆದಿಟ್ಟನು. ೧೯೩. ಆಮೇಲೆ ಸ್ವದೇಶಕ್ಕೆ ಹೊರಟು ಆ ಹಣ್ಣನ್ನು ಪ್ರಯತ್ನಪೂರ್ವಕವಾಗಿ ತಂದು ಉಜ್ಜಯಿನಿಯನ್ನು ಪ್ರವೇಶಿಸಿ ೧೯೪. ಹೊಳೆಯುವ ವಸ್ತುಗಳನ್ನು ಇಟ್ಟಿದ್ದ ಒಂದು ತಟ್ಟೆಯಲ್ಲಿ ಹಲವು ರತ್ನಗಳನ್ನು ತುಂಬಿ ಅದರ ಮೇಲೆ ಚೆನ್ನಾಗಿ ಅಲಂಕರಿಸಿದಂತೆ ಆ ಹಣ್ಣನ್ನಿಟ್ಟು ತಂದು ಅರಸನನ್ನು ಕಂಡು ನಮಸ್ಕರಿಸಿ ರತ್ನಗಳಿಂದ ತುಂಬಿದ ಹರಿವಾಣವನ್ನು ರಾಜನ ಮುಂದಿಟ್ಟನು. ೧೯೫-೧೯೬. ಅರಸನು ಮಾವಿನ ಹಣ್ಣನ್ನು ಬಹಳ ಆದರದಿಂದ ತೆಗೆದುಕೊಂಡು "ಎಲೈ ಪರ್ವತಧೈರ್ಯನೇ ! ಈ ಮಾವಿನಹಣ್ಣು ಲೋಕದಲ್ಲಿ ಅಷ್ಟು ಅಪೂರ್ವವಾದದ್ದೆ ? ನಿನಗೇನು ಮರುಳೆ ? ಅಮೂಲ್ಯವಾದ ವಸ್ತುಗಳ ಜತೆಯಲ್ಲಿ ಇದನ್ನೇಕೆ ತಂದೆ ?" ಎಂದು ಕೇಳಲು ಕುಬೇರನು ಹೀಗೆಂದನು ; ೧೯೭-೧೯೮. "ನರೆಗೂದಲಿನ ಮುದುಕರು ಇದನ್ನು ತಿಂದರೆ ತಾರುಣ್ಯವನ್ನು

ನರೆಬಂದ ನರರ್ ಮೆಲ್ದಿರೆ
ತರುಣತ್ವಮನೆಯ್ದುವರ್ ಮಹಾವ್ಯಾಧಿಗಳಿಂ
ಕರಗುವವರ್ ಮೆಲ್ದೊಡೆ ನಿ
ರ್ಜರಸನ್ನಿಭರಪ್ಪರೆಂದು ಪೇಟ್ದುದುಮರಸಂ ೯೯

ಗದ್ಯ॥ ವಿಸ್ಮಯಂಬಟ್ಟು ಕುಬೇರಂಗೆ ಮೆಚ್ಚಂಕೊಟ್ಟು ಮನೆಗೆ ಕಳಿಪಿ ಮಾವಿನಪಣ್ಣಂ ಭಾವಿಸಿ ನೋಡಿ ೨೦೦

ಮಟೆಯುಂ ಸಿಂಧುನಿಕಾಯಮುಂ ಪಶುಗಳುಂ ವೈದ್ಯಾಂಗನಾನೀಕಮುಂ
ಬೆಳಸುಂ ಪಣ್ಫಲಮುಂ ಜಿನೇಂದ್ರಮತಮುಂ ಸರ್ವೋಪಕಾರಂಗಳಿಂ
ತಿಳಿಯೊಳ್ ಸದ್ಗುಣನಪ್ಪ ಮಾನಿಸನುಮಿನ್ನಾಮಾರ್ಗದಿಂ ಬಾಟ್ಗು ತ
ನ್ನಳವಂ ಮಾಸಿಸಿ ಲೋಗರಂ ಕಿಡಿಸುತಿರ್ಪಾಕಷ್ಪನುಂ ಮರ್ತ್ಯನೇ ೨೦೧

ಗದ್ಯ॥ ಅದುಕಾರಣದಿಂ ಪರೋಪಕಾರಿಯಪ್ಪನ ಬಾಟ್ಕೆ ಸಫಲಮೆಂದು ಪಣ್ಣನೊರ್ವನೆ ಮೆಲ್ಪುದು ಕಷ್ಟಂ ಪುರಮುಂ ಪರಿವಾರಮುಮರಸಿಯುರುಂ ಕುಮಾರರುಂ ಬೆರಸು ಮೆಲ್ವೆನೆಂದು ಪಣ್ಣನರಮನೆಯ ಪೆಜಗಣ ನಂದನವನದೊಳ್ ಬಿತ್ತಿಸುವುದುಮದು ಬೆಳೆದು ಪೆರ್ಮರನಾಗಿ ಫಲಮಪ್ಪುದುಂ ೨೦೨

ಪಡೆಯುವರು, ಮಹಾ ರೋಗಗಳಿಂದ ನರಳುವವರು ತಿಂದರೆ ದೇವಸದೃಶರಾಗುವರು" ೧೯೯. ಹೀಗೆ ಹೇಳಲು ಅರಸನು ಆಶ್ಚರ್ಯಪಟ್ಟು ಕುಬೇರನಿಗೆ ಬಹುಮಾನಕೊಟ್ಟು ಕಳಿಸಿ ಆ ಮಾವಿನ ಹಣ್ಣನ್ನು ಗಮನಿಸಿ ನೋಡಿದನು. ೨೦೦. ಮಳೆ, ನದೀ ಸಮೂಹ, ಪಶುಗಳು, ವೈದ್ಯರು, ಸ್ತ್ರೀ ಸಮೂಹವೂ, ಬೆಳೆ, ಹಣ್ಣು ಹಂಪಲುಗಳೂ ಜಿನೇಂದ್ರ ಮತವೂ ಎಲ್ಲರಿಗೂ ಉಪಕಾರಮಾಡುವಂಥವು. ಹಾಗೆಯೇ ಲೋಕದಲ್ಲಿ ಸದ್ಗುಣಿಯಾದ ಮನುಷ್ಯನೂ ಆ ದಾರಿಯಲ್ಲಿಯೇ ಜೀವಿಸುವನು. ತನ್ನ ಯೋಗ್ಯತೆಯನ್ನೂ ಕೆಡಿಸಿಕೊಂಡು ಕಂಡವರನ್ನೂ ಕೆಡಿಸುತ್ತಿರುವ ನೀಚನೂ ಒಬ್ಬ ಮಾನವನೆ ? ೨೦೧. ಆದಕಾರಣ ಪರೋಪಕಾರಿಯಾದವನ ಬಾಳುವಿಕೆಯೇ ಸಫಲವೆಂದು ಭಾವಿಸಿ ಆ ಹಣ್ಣನ್ನು ತಾನೊಬ್ಬನೇ ತಿನ್ನುವುದು ಅಲ್ಪತನವೆಂದೂ ಪಟ್ಟಣದವರೂ ಪರಿವಾರ ದವರೂ ರಾಣಿ ವಾಸದವರೂ ಮಕ್ಕಳೂ ಸೇರಿ ತಿನ್ನುವೆನೆಂದು ಯೋಚಿಸಿ ಆ ಹಣ್ಣನ್ನು ಅರಮನೆಯ ಹಿಂದಿನ ಉದ್ಯಾನವನದಲ್ಲಿ ಬಿತ್ತಿಸಿದನು. ಆ ಹಣ್ಣು ಮೊಳಕೆಯಾಗಿ ಬೆಳೆದು ಹೆಮ್ಮರವಾಗಿ ಫಲಕ್ಕೆ ಬಂತು. ೨೦೨. ಆ ಗಿಡದಲ್ಲಿ ಅನೇಕ ಕಾಯಿಗಳು

ಉರಗನನೊಂದು ಪರ್ದುಪಿಡಿದಾ ಮರನಂ ಪರಿದೇಱೆ ತದ್ವಿಷಂ
ತ್ವರಿತದಿನಾಗಳೊಂದು ಫಲದೊಳ್ ನೆಲೆಗೊಳ್ವುದುಮಾಫಲಂ ಸವಿ
ಸ್ತರದೊಳೆ ಪಣ್ತು ಬೀೞೆ ವನಪಾಲಕನಂತದನೊಯ್ದು ಕೊಟ್ಟೊಡಂ
ದರಸನುವರ್ತಿಯಿಂ ಕೆಲದೊಳಿರ್ದ ಮಗಂಗಿರದೀವುದುಂ ಮಗಂ ೨೦೩

ಗದ್ಯ॥ ಮೆಲ್ದು ವಿಷಪೂರಿತನಾಗಿ ಸಾವುದುಂ ಮಹೇಂದ್ರಭೂಮೀಶ್ವರಂ ಮಗನ ಸಾವಿಂ ಗಟಲ್ದು ವಿಷವೃಕ್ಷಮಿದಂ ಕಡಿದು ಕಳೆಯಿಮೆಂದು ಕಡಿದೀದಾಡಿಸಿ ಕುಬೇರನಂ ಸಾಯೆಬಡಿಸಿ ಸರ್ವಸ್ವಮಂ ಕವರ್ದುಕೊಂಡನನ್ನೆಗಂ ಪುರದೊಳಗಣ ತೊನ್ನರುಂ ಪೆಳವರುಂ ಕುಂಟರುಂ ಪರಿತಂದು ಸಾವೆವೆಂದು ಪಣ್ಣುಮಂ ಕಾಯುಮಂ ತಿಂದು ಸುವರ್ಣಮಯಶರೀರರಪ್ಪುದು ಮರಸನವರಂ ಕಂಡು ವಿಸ್ಮಯಂಬಟ್ಟು ಮಱುಗಿ ಕುಬೇರನರ್ಥಮಂ ಕೊಟ್ಟು ಕ್ಷಮೆಗೊಂಡು ಮಾವಿನ ಮರನಂ ಪಾತಕನಂ ವಿಚಾರಿಸದೆ ಕಡಿಸಿದೆನೆಂದು ಚಿಂತಿಸಿದನಂತೆ ಕೆಲರವಿಚಾರತೆಯುಂ ಮಾಡುವರದಱಿಂ ಸಜ್ಜನರ್ ಪುರುಷರ್ ವಿಚಾರಿಸಿ ನೆಗೞ್ವುದೆಂದು ಜಿನಪಾಲಿತಮುನಿ ಮೋನಂ ಗೊಂಡಿರ್ಪುದುಂ ಮನಮಂ ಪಿಡಿಯಲಾಱದೆ ಜಿನದತ್ತಂ ೨೦೪

ಪಕ್ವವಾಗಿದ್ದ ಕಾಲದಲ್ಲಿ ಒಂದು ದಿನ ಒಂದು ಹದ್ದು ಒಂದು ಹಾವನ್ನು ಹಿಡಿದು ಆ ಮರದಮೇಲೆ ಹಾರಲು ಆ ವಿಷವು ಬೇಗನೆ ಒಂದು ಹಣ್ಣಿನಲ್ಲಿ ನೆಲೆ ನಿಂತಿತು, ಆ ಫಲ ದೊಡ್ಡದಾಗಿದ್ದು, ಚೆನ್ನಾಗಿ ಮಾಗಿ ಕೆಳಕ್ಕೆ ಬೀಳಲು ವನಪಾಲಕನು ಅದನ್ನು ತಂದು ರಾಜನಿಗೆ ಕೊಟ್ಟನು. ಅವನು ಆಗ ತನ್ನ ಹತ್ತಿರ ಕುಳಿತಿದ್ದ ಮಗನಿಗೆ ಪ್ರೀತಿಯಿಂದ ತಟ್ಟನೆ ಕೊಟ್ಟುಬಿಟ್ಟನು ೨೦೩. ರಾಜಪುತ್ರನು ಆ ಹಣ್ಣನ್ನು ತಿಂದು ವಿಷವೇರಿ ಸತ್ತನು. ಮಹೇಂದ್ರರಾಜನು ಮಗನ ಸಾವಿಗೆ ಬಹಳ ದುಃಖಪಟ್ಟು, ವಿಷವೃಕ್ಷವೆಂದು ತಿಳಿದು ಅದನ್ನು ಕಡಿದುಹಾಕಲು ಅಪ್ಪಣೆ ಮಾಡಿ ಕುಬೇರನನ್ನು ಸಾಯಬಡಿದನು; ಅವನ ಸರ್ವಸ್ವವನ್ನೂ ಮುಟ್ಟುಗೋಲು ಹಾಕಿಕೊಂಡುಬಿಟ್ಟನು. ಆ ವೇಳೆಗೆ ನಗರದ ತೊನ್ನರು, ಕುರುಡರು, ಕುಂಟರು ಇದನ್ನು ಕೇಳಿ ಓಡಿಬಂದು ತಾವೂ ಸಾಯುವ ಅಪೇಕ್ಷೆಯಿಂದ ಆ ಗಿಡದ ಹಣ್ಣು, ಕಾಯಿಗಳನ್ನೆಲ್ಲ ತಿಂದರು. ಅವರೆಲ್ಲ ಚಿನ್ನದಂತೆ ತೇಜಸ್ಸನ್ನು ಪಡೆದರು, ಅವರ ರೋಗ ಹೋಯಿತು! ರಾಜನು ಅವರನ್ನು ನೋಡಿ ಆಶ್ಚರ್ಯಪಟ್ಟು, ತನ್ನ ತಪ್ಪಿಗೆ ಸಂಕಟಪಟ್ಟು ಕುಬೇರನ ಆಸ್ತಿಯನ್ನೆಲ್ಲ ಹಿಂತಿರುಗಿಸಿ ಕೊಟ್ಟು ಅವನನ್ನು ಕ್ಷಮೆ ಕೇಳಿ "ಮಾವಿನ ಮರವನ್ನು ಆಲೋಚಿಸದೆ ಕಡಿಸಿಹಾಕಿದೆ; ನಾನು ಮಹಾ ಪಾಪಿ" ಎಂದು ಚಿಂತಿಸಿದನು, ಹಾಗೆ ಕೆಲವರು ಅವಿಚಾರದಿಂದ ಕೆಲಸ ಮಾಡುವರು. ಆದ್ದರಿಂದ ಸಜ್ಜನರಾದ ಪುರುಷರು ಚೆನ್ನಾಗಿ ಯೋಚಿಸಿ ನಡೆಯಬೇಕು, ಎಂದು ಜಿನಪಾಲಿತಮುನಿ ಮೌನವಹಿಸಿರಲು ತನ್ನ ಮನಸ್ಸನ್ನು ಹಿಡಿಯಲಾರದೆ ಜಿನದತ್ತನು ಮತ್ತೆ ಹೇಳತೊಡಗಿದನು: ೨೦೪. ಪೂಜ್ಯನೇ, ಇನ್ನು ಹಲವುಮಾತೇಕೆ?

ವಂದಿತಗುಣ ಪಲವೇಕಿ
ನ್ನೊಂದನೆ ಕೇಳ್ ಕಥೆಯನತ್ಯಪೂರ್ವಮಿದಂ ಸಾ
ನಂದಗಿರಿಯೆಂಬ ಪುರದೊಳ್
ಸಂದಿರ್ದಂ ಪುಳಿಂದನಮಿತನೆಂಬಂ ಪೆಸರಿಂ ೨೦೫

ಗದ್ಯ॥ ಆತನೊಂದು ದಿವಸಂ ತೊಳಲುತ್ತುಂ ದೈತ್ಯವನಮೆಂಬಡವಿಯೊಳ್ ನೀರಡಸಿ ಪೋಗಲಾಱದೆ ಕುಳ್ಳಿರ್ದುದುಮವನನೊಂದು ಕೋಡಗಂ ಕಂಡು ೨೦೬

ಕರುಣಿಸಿ ನೀರೆಡೆಯಂ ವಾ
ನರನಾಥಂ ತೋಱೆ ಕುಡಿದು ಬೇಡಂ ತದ್ವಾ
ನರನೆನಗುಪಕಾರಮನೊ
ಪ್ಪಿರೆ ಮಾಡಿದನೆಂಬ ಬಗೆಯನುೞಿದಳಿಪಿಂದಂ ೨೦೭

ಗದ್ಯ॥ ಎನ್ನ ಪೋಪೆಡೆಯುಪ್ಪೊಡೆ ದೂರಮೀನೀರಿರ್ದೆಡೆಯೊಳ್ ನೀರಂ ತುಂಬುವೆಂ ನೀರಿಲ್ಲದೆ ತೃಷ್ಣೆಯಿಂ ಸಾಯೆ ಬಾರದೆಂದು ಕೋಡಗಮಂ ಕೊಂದದಱತೊವಲೊಳ್ ನೀರಂ ತುಂಬಿಕೊಂಡು ಪೋದನಂತೆ ಕೆಲರುಪಕಾರಶೂನ್ಯರೊಳರೆಂದು ವಣಿಕ್ಪತಿ ನುಡಿಯದಿರ್ದುದುಂ ಮುನಿವೃಂದಾರಕಂ ನಾಡೆಯುಂ ವಿಸ್ಮಯಂಬಟ್ಟು ೨೦೮

ಅತ್ಯಪೂರ್ವವಾದ ಇದೊಂದು ಕಥೆಯನ್ನು ಕೇಳು. ಸಾನಂದಗಿರಿಯೆಂಬ ಪುರದಲ್ಲಿ ಪುಳಿಂದನೊಬ್ಬನು ವಾಸವಾಗಿದ್ದನು. ಅವನ ಹೆಸರು ಅಮಿತ. ೨೦೫. ಅವನು ಒಂದು ದಿನ ಅಲೆದಾಡುತ್ತ ದೈತ್ಯವನವೆಂಬ ಅಡವಿಯಲ್ಲಿ ನೀರಡಿಕೆ ಹೆಚ್ಚಾಗಿ ಮುಂದೆ ಹೋಗಲಾರದೆ ಕುಳಿತುಬಿಟ್ಟನು. ಆಗ ಅವನನ್ನು ಕಂಡ ಒಂದು ಕೋತಿ ೨೦೬. ಕನಿಕರಿಸಿ ನೀರಿರುವ ಸ್ಥಳವನ್ನು ತೋರಿಸಿತು. ಬೇಡನು ದಾಹ ತೀರುವಂತೆ ನೀರು ಕುಡಿದು ಆ ವಾನರ ತನಗೆ ಉಪಕಾರವನ್ನು ಮಾಡಿತೆಂಬುದನ್ನು ಸ್ವಲ್ಪವೂ ಯೋಚಿಸದೆ ಹೋದನು ೨೦೭. ಅವನು ದುರಾಸೆಯಿಂದ, "ನಾನು ಹೋಗುವ ಸ್ಥಳವಾದರೋ ದೂರವಾಗಿದೆ. ನೀರು ಇರುವ ಈ ಸ್ಥಳದಲ್ಲಿಯೇ ತುಂಬಿಕೊಳ್ಳುತ್ತೇನೆ. ನೀರಿಲ್ಲದೆ ಬಾಯಾರಿಕೆಯಿಂದ ಸಾಯಬಾರದು" ಎಂದು ಯೋಚಿಸಿ ಆ ಕೋಡಗವನ್ನು ಕೊಂದು ಅದರ ತೊಗಲಿನಲ್ಲಿ ನೀರನ್ನು ತುಂಬಿಕೊಂಡುಹೋದನು. ಹಾಗೆ ಕೆಲವರು ಉಪಕಾರ ಶೂನ್ಯರಿರುತ್ತಾರೆಂದು ಆ ವರ್ತಕ ಶ್ರೇಷ್ಠನು ಹೇಳಿ ಸುಮ್ಮನಾಗಲು ಆ ಮುನಿಶ್ರೇಷ್ಠನು ಬಹಳ ಆಶ್ಚರ್ಯಪಟ್ಟು ೨೦೮. "ವೈಶ್ಯೋತ್ತಮನೆ, ಕೇಳು, ಲೋಕದಲ್ಲಿ ಇದು

ವರವೈಶ್ಯೋತ್ತಮ ಕೇಳು
ರ್ವರೆಯೊಳಿದಾಶ್ಚರ್ಯಮಪ್ಪ ಕಥೆಯಂ ನೀನಾ
ದರದಿಂ ಧಾತ್ರಿಯೊಳೊಪ್ಪುವ
ದುರುಮುದದಿಂ ಧನದರೆನಿಪ ವೈಶ್ಯಾತ್ಮಜರಿಂ ೨೦೯

ಗದ್ಯ॥ ಕೌಶಾಂಬಿಯೆಂಬ ಪುರಮದಱೊಳ್ ವಿಶಾಖನಂದನನೆಂಬ ಪರದನಿರ್ಪನಾತನ ಮಗನಂಗಾರಕನೆಂಬನಾತನೊಂದು ದಿವಸವೊಂದು ಪದ್ಮರಾಗಮಂ ಬಱಿವಿಡಿದು ಪೊಱಗೆ ಪಟ್ಟವಣೆಯ ಮೇಗೆ ದಿವ್ಯವಸ್ತ್ರಮಂ ಪಾಸಿ ತದ್ವಸ್ತ್ರದ ಮೇಲೆ ತದ್ರತ್ನಮನಿಕ್ಕಿ ನೋಡುತ್ತುಮಿರ್ಪನ್ನೆಗಂ ೨೧೦

ತ್ವರಿತಂ ಮೇಧಾವಿಮುನೀ
ಶ್ವರರೆಂಬರ್ ಚರಿಗೆವರ್ಪುದುಂ ವೈಶ್ಯಕುಲಾಂ
ಬರಭಾನು ಕಂಡು ಪರಮಾ
ದರದಿಂ ಪರಿತಂದು ಭಕ್ತಿಯಿಂ ನಿಲಿಸುವುದುಂ ೨೧೧

ಗದ್ಯ ಮುನಿನಾಥಂ ನಿಲ್ವುದುಂ ಕೃತಾರ್ಥನಾದೆನೆಂದು ಮನೆಯೊಳಗಣ್ಗೊಡಗೊಂಡು ಪೋದನನ್ನೆಗಮಿತ್ತಲ್ ಪದ್ಮರಾಗಮಾಣಿಕ್ಯಮಂ ನೆರೆಮನೆಯಂಗಣದೊಳಾಡುತ್ತುಮಿರ್ದ ನವಿಲ್ ಮಾಂಸಮೆಂದು ಬಗೆದು ಪರಿತಂದು ನುಂಗಿಪೋಯ್ತು ; ವಿಶಾಖನಂದನಂ ೨೧೨

ಆಶ್ಚರ್ಯಕರವಾದ ಕಥೆ, ಲೋಕದಲ್ಲಿ ಕೌಶಾಂಬಿಯೆಂಬ ಪಟ್ಟಣ ಕುಬೇರರೆನ್ನಿಸಿಕೊಂಡ ವೈಶ್ಯಪುತ್ರರಿಂದ ಕೂಡಿ ಬಹಳ ವೈಭವವಾಗಿತ್ತು ೨೦೯. ಅದರಲ್ಲಿ ವಿಶಾಖನಂದನನೆಂಬ ವರ್ತಕನಿದ್ದನು. ಆತನ ಮಗ ಅಂಗಾರಕನೆಂಬವನು. ಅವನು ಒಂದು ದಿನ ಪದ್ಮರಾಗವನ್ನು ಪಡೆದು ಹೊರಗೆ ಒಂದು ದೊಡ್ಡ ಮಣೆಯ ಮೇಲೆ ದಿವ್ಯನಾದ ಬಟ್ಟೆಯನ್ನು ಹಾಸಿ ಅದರ ಮೇಲೆ ಆ ರತ್ನವನ್ನಿರಿಸಿ ಪರಿಕಿಸಿ ನೋಡುತ್ತಿದ್ದನು. ೨೧೦. ಆ ಹೊತ್ತಿನಲ್ಲಿ ಮೇಧಾವಿ ಮುನೀಶ್ವರರೆಂಬವರು ಚರಿಗೆಗೆ ಬರಲು ಆ ವೈಶ್ಯಶ್ರೇಷ್ಠನು ಕಂಡು ವಿಶೇಷವಾದ ಆದರದಿಂದ ಓಡಿಬಂದು ಭಕ್ತಿಯಿಂದ ಭಿಕ್ಷೆಗೆ ನಿಲ್ಲಿಸಿದನು. ೨೧೧. ಮುನಿಶ್ರೇಷ್ಠನು ನಿಂತನು. ಆಗ ವರ್ತಕನು ಧನ್ಯನಾದೆನೆಂದು ಭಾವಿಸಿ ಮನೆಯೊಳಕ್ಕೆ ಕರೆದುಕೊಂಡು ಹೋದನು. ಈ ಮಧ್ಯೆ ಇತ್ತ ಆ ಪದ್ಮರಾಗ ಮಾಣಿಕ್ಯವನ್ನು ಪಕ್ಕದ ಮನೆಯ ಅಂಗಳದಲ್ಲಿ ಕುಣಿಯುತ್ತಿದ್ದ ನವಿಲು ಕಂಡು ಅದು ಮಾಂಸದ ಚೂರೆಂದು ಭ್ರಮೆಪಟ್ಟು ಓಡಿಬಂದು ನುಂಗಿ ಹೊರಟುಹೋಯಿತು ; ೨೧೨. ವಿಶಾಖನಂದನನು ಆ ಮುನಿಗೆ ನವವಿಧ ಪುಣ್ಯದಿಂದ ಅನ್ನವನ್ನು ನೀಡಲು ಆ

ನವವಿಧಪುಣ್ಯದಿಂ ಕುಡುವುದುಂ ಮುನಿಗನ್ನಮನೆಂದು ತನ್ಮುನಿ
ಪ್ರವರನುದಾತ್ತಚಾರುಚರಿತಂ ಬಟಿಕಕ್ಷಯದಾನಮೆಂದು ಭೂ
ಭುವನಹಿತಂ ಸಮಸ್ತನುತನಾಗಳೆ ಪೋಪುದು ವಿತ್ತಲಾವಣ
ಕ್ಪ್ರವರನಮರ್ಕೆವೆತ್ತು ಬರಲಲ್ಲಿಗೆ ರಾಗಿಸಿ ಬಂದು ರತ್ನಮಂ ೨೧೩

ಗದ್ಯ॥ ಕಾಣದೆ ಮಱುಗಿ ಲೋಭಿಯೆ ಕಡುಪಾಪಿ ತುಡುಗುಣಿಯೆ ಕಡುಧೂರ್ತನೆಂಬ ಮಾತಂ ದಿಟಂ ಮಾಡಿ ಮೇಧಾವಿಮುನೀಂದ್ರನೆ ರತ್ನಮಂ ಕೊಂಡು ಪೋದನೆಂದು ಪೆಱಗೆ ಪರಿತಂದು ಕೃತಕದಿಂ ಪೊಡೆವಟ್ಟು ಮನೆಗೊಡಗೊಂಡು ಬಂದು ಕುಳ್ಳಿರಿಸಿ ನಿಮ್ಮಡಿಗಳ್ ಸಕಲ ವಸ್ತುಮಂ ತೊಱೆದುಂ ನಿಮಗೆ ಮತ್ತೀ ರತ್ನದ ಮೋಹಮೇಕೆ ಕಾಡವೇಡ ಬೇಗಮೆನ್ನ ಪದ್ಮರಾಗದ ಮಣಿಯನೀಯಿಮೆಂದು ಗಜಱಿ ಗರ್ಜಿಸಿ ೨೧೪

ನುಡಿದೊಡೆ ಮುನೀಂದ್ರವಂದ್ಯಂ
ಕಡುಮೂರ್ಖನ ನುಡಿಗೆ ಸಾಡೆಯುಂ ಚೋದ್ಯಂಬ
ಟ್ಟೊಡಮೆಯನೀತಂ ಕಾಣದೆ
ಕಿಡೆನುಡಿದವಿಚಾರಿ ಕಳ್ಳನೆಂದಪನೆನ್ನಂ ೨೧೫

ಆ ಪದ್ಮರಾಗ ಮಣಿಯಂ
ಕೋಪಿಸದಿರ್ ಕೊಳ್ಳೆನೆಂದೊಡಂ ನಂಬದ ದು
ಷ್ಪಾಪಿ ಫಲಮೇವುದಿವಗಿ
ನ್ನೀ ಪದದೊಳ್ ಮೋನದಿಂದಮಿಪ್ಪುದೆ ಕಜ್ಜಂ ೨೧೬

ಮುನಿಶ್ರೇಷ್ಠನು ಸ್ವೀಕರಿಸಿ "ಅಕ್ಷಯದಾನ" ವೆಂದು ಲೋಕಪೂಜ್ಯನು ಆಶೀರ್ವದಿಸಿ ಹೋದನು. ಆ ಮೇಲೆ ಆ ವೈಶ್ಯಪುತ್ರನು ಅವರ ಜತೆಯಲ್ಲಿಯೇ ಹೊರಕ್ಕೆ ಬಂದು ನೋಡಲು ಅಲ್ಲಿ ತಾನು ಆಸೆಯಿಂದ ಇರಿಸಿದ್ದ ರತ್ನ ಇರಲಿಲ್ಲ. ೨೧೩. ರತ್ನವನ್ನು ಕಾಣದೆ ಕುದಿದು, 'ಲೋಭಿಯೇ ಬಹಳ ಪಾಪಿ ತುಡುಗುಣಿಯೇ ಬಹಳ ಧೂರ್ತ'ನೆಂಬ ಮಾತನ್ನು ದಿಟವಾಗಿಸಿ ಮೇಧಾವಿಮುನೀಶ್ವರನೇ ರತ್ನವನ್ನು ತೆಗೆದುಕೊಂಡು ಹೋದ ನೆಂದು ನಿರ್ಣಯ ಮಾಡಿಕೊಂಡು ಹಿಂದೆಯೇ ಓಡಿಬಂದು ಕಪಟದಿಂದ ಅಡ್ಡಬಿದ್ದು ಮನೆಗೆ ಕರೆದುಕೊಂಡು ಬಂದು ಕೂಡಿಸಿ, "ನಿಮ್ಮ ಪಾದ, ತಾವು ಸಕಲ ವಸ್ತುಗಳನ್ನೂ ತೊರೆದು ಕೂಡ ನಿಮಗೆ ಈ ರತ್ನದ ಮೋಹವೇಕೆ ? ಸುಮ್ಮನೆ ಕಾಡಬೇಡಿ, ಬೇಗ ನನ್ನ ಪದ್ಮರಾಗದ ಮಣಿಯನ್ನು ಕೊಡಿರಿ" ಎಂದು ಗದರಿ ಗರ್ಜಿಸಿ ನುಡಿದನು. ೨೧೪. ಆ ಮುನೀಂದ್ರಪೂಜ್ಯನು ಆ ಮಹಾಮೂರ್ಖನ ಮಾತಿಗೆ ಬಹಳ ಆಶ್ಚರ್ಯಪಟ್ಟು ಈತನು ತನ್ನ ಒಡವೆಯನ್ನು ಕಾಣದೆ ಕೆಟ್ಟ ಮಾತನ್ನಾಡಿದ. ಈ ಅವಿಚಾರಿಯು ನನ್ನನ್ನು ಈಗ ಕಳ್ಳನೆನ್ನುತ್ತಿದ್ದಾನೆ. ೨೧೫. "ಅಯ್ಯಾ, ಕೋಪಿಸಿಕೊಳ್ಳಬೇಡ. ನಾನು ಆ ಪದ್ಮರಾಗ ಮಣಿಯನ್ನು ತೆಗೆದುಕೊಳ್ಳಲಿಲ್ಲವೆಂದು ಹೇಳಿದರೂ ಇವನು ನಂಬುವುದಿಲ್ಲ. ಇವನು ಕೆಟ್ಟ ಪಾಪಿ. ಇನ್ನು ಈ ಸನ್ನಿವೇಶದಲ್ಲಿ ಏನು ಮಾಡಿದರೂ ಫಲವಿಲ್ಲ ; ಮೌನದಿಂದಿರುವುದೇ

ಎಂದು ಪರಿಚ್ಛೇದಿಸಿ ಪೆಱ
ತೊಂದುಮನಾ ಮುನಿಪನೆನ್ನದರ್ಹತ್ಪದವಂ
ಮಂದರ ಧೈರ್ಯಂ ತದ್ಧೃದ
ಯೇಂದೀವರದಲ್ಲಿ ತಾಳ್ದಿ ನಿಲ್ವುದುಮಿತ್ತಲ್ ೨೧೭

ನುಡಿದೊಡೆ ನುಡಿಯಂ ತಾನೆಂ
ದೊಡವೆಯನಳಿಪಿಂದವೊಯ್ದು ಮೋಹೋದಯದಿಂ
ಪಿಡಿದುಸಿರದೆ ಚದುರಿಕೆಯಿಂ
ಮಿಡುಕದೆ ಕುಳ್ಳಿರ್ದೊಡಬ್ಕಲಱಿಗುಮೆ ರತ್ನಂ ೨೧೮

ನುಡಿಯದೆ ನೀಂ ನಿಂತಿರ್ದೊಡೆ
ಕಿಡೆ ನೂಂಕಿ ಪೊರಟ್ಟಿ ಗಂಟಲಂ ಮೆಟ್ಟಿ ಕರಂ
ತಡೆಗೆಡಹಿ ತನುವ ಜಡಿದೆ
ನ್ನೊಡಮೆಯನುಗುಳಿಸದೆ ಮಾಣೆನಾರ್ಬಾರಿಪೊಡಂ ೨೧೯

ಗದ್ಯ॥ ಎಂದು ನುಡಿದು ವೈಶ್ಯಜಂ ಮುನಿಕುಂಜರನಂ ನುಡಿಯಿಸಲಾಱದೆ ಕೋಪಾಗ್ನಿಯಿಂ ಕಣ್ಗಾಣದೆ ಕೆಲದೊಳಿರ್ದ ಬಂಡಿಯ ಪುಳ್ಳಿಗಳಂ ಕೊಂಡು ಸೊಪ್ಪುಸೊವಡಪ್ಪಿನವಮಟ್ಟ ಬಡಿಯೆ
೨೨೦

ಸರಿಯಾದ ಕೆಲಸ" ೨೧೬. ಎಂದು ನಿರ್ಣಯಿಸಿಕೊಂಡು ಬೇರೇನನ್ನೂ ಮಾತನಾಡದೆ ಅಪಾರ ಧೈರ್ಯದಿಂದ ಅರ್ಹಂತರ ಪಾದಗಳನ್ನು ಹೃದಯದಲ್ಲಿ ಧ್ಯಾನಿಸುತ್ತ ನಿಂತನು. ೨೧೭. ಇತ್ತ, "ಮಾತನಾಡಿಸಿದರೆ ಮಾತನಾಡಲೊಲ್ಲ. ಒಡವೆಯನ್ನು ಆಸೆಯಿಂದ ಒಯ್ದಿದ್ದಾನೆ. ಚತುರತೆಯಿಂದ ಮೌನದಿಂದ ಕುಳಿತುಬಿಟ್ಟರೆ ರತ್ನವು ಅರಗುತ್ತದೆಯೆ ? ೨೧೮. ನೀನು ಹೀಗೆ ಮಾತನಾಡದೆ ಇದ್ದರೆ ಬೀಳನೂಕಿ ಹೊರಳಿಸಿ ಗಂಟಲನ್ನು ಮೆಟ್ಟಿ ಹೊಡೆದು ನನ್ನ ಸ್ವತ್ತನ್ನು ಕಕ್ಕಿಸದೆ ಬಿಡುವುದಿಲ್ಲ. ಯಾರೂ ತಡೆದರೂ ಕೇಳುವುದಿಲ್ಲ" ಎಂದು ಗದರಿಸಿ ಮಾತನಾಡಿ ಆ ವೈಶ್ಯಪುತ್ರನು ಮುನಿಶ್ರೇಷ್ಠನನ್ನು ಮಾತನಾಡಿಸಲಾರದೆ ವಿಶೇಷವಾದ ಕೋಪಕ್ಕೆ ಒಳಗಾಗಿ ಮುಂದುಗಾಣದೆ ಪಕ್ಕದಲ್ಲಿ ಬಿದ್ದಿದ್ದ ಬಂಡಿಯ ಕೋಲುಗಳಿಂದ ಆ ಯತಿಯನ್ನು ಮೈಮುರಿಯುವ ಹಾಗೆ ಕ್ರೂರವಾಗಿ ಬಡಿದನು. ೨೧೯-೨೨೦. "ನಿರ್ದೋಷಿಯಾದ ನನ್ನನ್ನು ಬಡಿಯುತ್ತಿದ್ದಾನೆ. ಇವನು ನೀಚ"

ಎನ್ನನದೋಪಿಯುಂ ಬಡಿದಪಂ ಖಳನೆನ್ನದೆ ಶುದ್ಧವೃತ್ತಿಯಿಂ
ದುನ್ನತ ಚಿತ್ತನಿಂದ್ರಧರಣೀಂದ್ರನಿಭಕ್ಷಮನಾಗಮಾನ್ವಿತಂ
ತನ್ನ ಶರೀರಮಲ್ಲದಿದು ತಾಂ ಪೆಱತೇಂ ಪೆಱರಂಗಮೆಂಬವೋಲ್
ಸನ್ನುತನಿರ್ದನಂತರ ದುರೋಘವಿರೋಧಿಯನಿಕ್ಕಿ ಮೆಟ್ಟುತುಂ ೨೨೧

ಗದ್ಯ॥ ಅಂತು ವೈಶ್ಯಜಂ ತನುವಂ ಬಾಧಿಸುವುದುಂ ಮೇಧಾವಿ ಮುನಿವರರ್ ಮೇಧಾವಿಯೆಂಬ ಪೆಸರನನ್ವರ್ಥಂ ಮಾಡಿ ಶುಕ್ಲಧ್ಯಾನಮೆಂಬ ದಳ್ಳುರಿಯಿಂ ಕರ್ಮೇಂಧನಂಗಳಂ ಸುಟ್ಟು ಕೇವಲಿಗಳಾಗಿ ಕೋಟಿ ಸೂರ್ಯ ಪ್ರಭಾನ್ವಿತ ದೇಹರಾಗಿರ್ಪುದುಂ ಕೇವಲಿ ಪೂಜೆಯಂ ಮಾಡಲೆಂದು ಚತುರ್ವಿಧ ದೇವನಿಕಾಯಂ ನೆರೆದು ಬರೆ ಕಂಡಂಗಾರಕಂ ನೀರ್ಮುಟ್ಟಿದಂಗಾರಕನಂತೆ ತಣ್ಣದನಾಗಿರ್ಪುದುಂ ೨೨೨

ಬಡಿವಲ್ಲಿ ನಿಡಿಯ ಪುಳ್ಳಿಯ
ಕಡೆಯುಡಿ ಸಿಡಿಲ್ಕೆಂದು ಪಾಱಿ ಕೊಂಚೆಯ ಕೊರಲಂ
ನಡುವುದು ಕೊರಲೊಡೆದಂತಾ
ಗಡೆ ರತ್ನಂ ಧರೆಗೆ ಬೀೞ್ವುದುಂ ತನ್ಮಣಿಯಂ ೨೨೩

ಕಂಡಂಗಾರಕನೀ ಮುನಿ
ಮಂಡನನಂ ನಿಷ್ಕಷಾಯನಂ ಮನದಟಲಿಂ
ಕೊಂಡಂ ರತ್ನಮನೆಂದಾಂ
ದಂಡಿಸಿದೆಂ ಪಾಪಕರ್ಮನೆಂ ನಿರ್ದಯನೆಂ ೨೨೪

ಎಂದು ಹೇಳದೆ, ಶುದ್ಧ ಮನೋವೃತ್ತಿಯಿಂದ ಮೇರುಸಮಾನಾದ ಧೈರ್ಯದಿಂದ ಕೂಡಿ ಆಗಮಾವೇತ್ತನಾದ ಆ ಮಹಾ ಮುನಿಯು ಅದು ತನ್ನ ದೇಹವೇ ಅಲ್ಲ ; ಅದು ಬೇರೆಯವರ ದೇಹವೆಂಬ ಹಾಗೆ ಅಂತರಂಗದಲ್ಲಿ ಮೂಡಬಹುದಾದ ವಿರೋಧ ಭಾವಗಳ ಗುಂಪನ್ನು ಇಕ್ಕಿ ಮೆಟ್ಟಿ ನಿಶ್ಚಲನಾಗಿದ್ದು ಬಿಟ್ಟನು. ೨೨೧. ಹಾಗೆ ವೈಶ್ಯಪುತ್ರನು ತನ್ನ ದೇಹವನ್ನು ಬಾಧಿಸುತ್ತ ಇರಲು ಮೇಧಾವಿ ಮುನಿಶ್ರೇಷ್ಠರು ಮೇಧಾವಿಯೆಂಬ ಹೆಸರನ್ನು ಅನ್ವರ್ಥವಾಗಿ ಮಾಡಿ ಶುಕ್ಲಧ್ಯಾನವೆಂಬ ತೀವ್ರವಾದ ಅಗ್ನಿಯಿಂದ ಕರ್ಮಗಳೆಂಬ ಸೌದೆಯನ್ನು ಸುಟ್ಟು ಕೇವಲಜ್ಞಾನಿಗಳಾಗಿ ಕೋಟಿ ಸೂರ್ಯರ ಪ್ರಭೆಯಿಂದ ಕೂಡಿದ ದೇಹವುಳ್ಳವರಾಗಿ ಇರಲು ಕೇವಲಿಯ ಪೂಜೆಯನ್ನು ಮಾಡುವ ಉದ್ದೇಶದಿಂದ ನಾಲ್ಕು ಬಗೆಯ ದೇವತೆಗಳ ಸಮೂಹವು ಗುಂಪು ಕೂಡಿ ಬರಲು ಕಂಡು ಅಂಗಾರಕನು ನೀರು ಮುಟ್ಟಿದ ಕೆಂಡದಂತೆ ತಣ್ಣಗಾದನು. ೨೨೨. ಹೊಡೆಯುವಾಗ ಉದ್ದವಾದ ಕೋಲುಗಳ ಕೊನೆಗಳು ಮುರಿದು ಸಿರ್ರೆಂದು ಹಾರಿ ನವಿಲಿನ ಕೊರಳಲ್ಲಿ ನೆಟ್ಟಿಕೊಳ್ಳಲು ಕೊರಳು ಒಡೆದು ಆಗಲೆ ಆ ರತ್ನವು ನೆಲಕ್ಕೆ ಬಿತ್ತು. ಆ ಮಣಿಯನ್ನು ಕಂಡು ಅಂಗಾರಕ "ಈ ಮುನಿಶ್ರೇಷ್ಠ ನಿಷ್ಕಷಾಯನು. ಈತನು ರತ್ನವನ್ನು ತೆಗೆದುಕೊಂಡನೆಂದು ತಿಳಿದು ನನ್ನ ಮನಸ್ಸಿನ ವ್ಯಥೆಯಿಂದ ದಂಡಿಸಿದೆ. ನಾನು ನಿರ್ದಯನಾದ ಪಾಪಕರ್ಮಿ" ೨೨೩-

ಎಂದಾಗಳ್ ತನ್ನಂ ತಾಂ
ನಿಂದಿಸಿ ವೈರಾಗ್ಯಮೊದವೆ ಮನದೊಳ್ ಬೇಗಂ
ಕಂದರ್ಪಸದೃಶನಮರರ
ವೃಂದಂ ಕೈಮುಗಿಯೆ ಜೈನದೀಕ್ಷೆಯನಾಂತಂ ೨೨೫

ಗದ್ಯ॥ ಅಂತಜ್ಞಾನಿಯಾಗಿ ಕಳ್ಳರಲ್ಲದರಂ ಕಳ್ಳರೆಂದು ತನ್ನರ್ಥಾಭಿಲಾಷೆಯಿಂ ಬಱಿದೆ ಕಾಡುವುದು ಪುರುಷನಪ್ಪಂಗೆ ಧರ್ಮಮಲ್ಲೆಂಬುದುಂ ವಣಿಜ್ಞಂದನಂ ಮತ್ತಂ ನಂಬದೆ ಬೆನ್ನನೆ ತಗುಳ್ವುದುಂ ೨೨೬

ಜಿನಪಾಲಿತ ಮುನಿ ಪರದನ
ಮುನಿಸುಂ ಕಂಡೀತನಪ್ಪೊಡತಿ ಲೋಭಂ ದು
ರ್ಜನನೆನ್ನ ಮೇಲೆ ಪರಿದಪ
ನನಘರಿವರ್ಶುದ್ಧರೆಂಬ ಮಾತನೆ ಬಿಟ್ಟಂ ೨೨೭

ಗದ್ಯ॥ ಕಿಮ್ಮನೆ ಬಾಯುಂ ಬಡಿವುದು ಕಜ್ಜಮಲ್ಲೆಂದು ಘೋರೋಪಸರ್ಗಂ ಪಿಂಗುವಿನ ಮಾಹಾರ ಶರೀರ ನಿವೃತ್ತಿಯೆಂದು ಕೈಯನಿಕ್ಕಿ ಮೋನಂಗೊಂಡಿರೆ ಜಿನದತ್ತಸೆಟ್ಟಿ ನುಡಿಯಿಸ ಲಾಱದೆ ಮೀಸೆಯುಂ ಕಡಿದು ೨೨೭

೨೨೪. ಎಂದು ತನ್ನನ್ನು ತಾನೇ ನಿಂದಿಸಿಕೊಂಡು ವೈರಾಗ್ಯ ಬರಲು ಬೇಗನೆ ಆ ಮನ್ಮಥ ನಂಥ ರೂಪದ ವೈಶ್ಯಪುತ್ರನು ಜೈನದೀಕ್ಷೆಯನ್ನು ತೆಗೆದುಕೊಂಡನು. ಅಲ್ಲಿ ಸೇರಿದ್ದ ದೇವಸಮೂಹ ಕೈಮುಗಿಯಿತು. ೨೨೫. ಹಾಗೆ ಅಜ್ಞಾನಿಯಾಗಿ ಕಳ್ಳರಲ್ಲದವರನ್ನು, ತನ್ನ ದ್ರವ್ಯಾಭಿಲಾಷೆಯಿಂದ, ಕಳ್ಳರೆಂದು ಹೇಳಿ ನಿಷ್ಕಾರಣವಾಗಿ ಹಿಂಸೆ ಮಾಡುವುದು ಪುರುಷನಾದವನಿಗೆ ಧರ್ಮವಲ್ಲ. ಹೀಗೆ ಹೇಳಿದರೂ ಜಿನದತ್ತಸೆಟ್ಟಿಯು ನಂಬದೆ ಪುನಃ ಹಿಂದೆಯೇ ತಾಕಲು ೨೨೬. ಜಿನಪಾಲಿತ ಮುನಿಯು ಸೆಟ್ಟಿಯ ಕೋಪವನ್ನು ಕಂಡು "ಈತನು ಅತಿ ಲೋಭಿ, ದುರ್ಜನನು. ನನ್ನ-ಮೇಲೆ ಹರಿದು ಬೀಳುತ್ತಾನೆ. ಇವರು ಶುದ್ಧರು, ಪಾಪರಹಿತರು, ಎಂಬ ಮಾತನ್ನೇ ಬಿಟ್ಟನು. ೨೨೭. ಇನ್ನು ಸುಮ್ಮನೆ ಬಾಯಿ ಬಡಿಯುವುದು ಕೆಲಸವಲ್ಲ" ಎಂದು ಘೋರವಾದ ಆ ಹಿಂಸೆಯು (ಉಪಸರ್ಗ) ಕಳೆಯುವ ತನಕ ಆಹಾರ ನಿವೃತ್ತಿ, ಶರೀರ ನಿವೃತ್ತಿಯೆಂದು ಸಂಕಲ್ಪಿಸಿ ಮೌನವಹಿಸಿರಲು ಜಿನದತ್ತಸೆಟ್ಟಿ ಮುನಿಯನ್ನು ಮಾತನಾಡಿಸಲಾರದೆ ಮೀಸೆಯನ್ನು ಕಡಿದು ೨೨೮.

ಕುಡು ಕೊಂಡೊಡವೆಯನೀಗಳೆ
ಕುಡದಿರ್ದೊಡೆ ಮುಱಿವೆನಿಕ್ಕುೞೊಳ್ಕಯ್ಯಂ ಕೊ
ಗಿಡೆ ಕೊಯ್ದು ಕೊಯ್ದು ಸುಣ್ಣಮ
ನಿಡುವೆಂ ಪಿಡಿದೊಯ್ದು ಮೆಟ್ಟುವೆಂ ಪೆರ್ಗಱಿಯೊಳ್ ೨೨೯

ಗದ್ಯ॥ ಎಂದು ರೌದ್ರಾಟೋಪಮಂ ಪಣ್ಣಿ ನಿಗ್ರಹಂಗೆಯ್ಯಲೆಂದಿರ್ಪುದುಂ ಒಳಗೆ ಪಡಿಯಂ ಪತ್ತಿರ್ದು ಕೇಳ್ದು ೨೩೦

ಜಿನದಾಸಂ ನಕ್ಕು ತಮ್ಮಯ್ಯನ ಮನದ ಮಹಾದ್ವೇಷಮಂ ಕಂಡು ಮೂರ್ಖಂ
ಮುನಿವಂದ್ಯಂಗುಗ್ರ ಕರ್ಮಾಂಟುರುಹರವಿಗೆ ಕೋಪಾಗ್ನಿಯಿಂ ಬಾಧೆಯಂ ಭೋಂ
ಕನೆ ತೀವ್ರಂ ಮಾಡದನ್ನಂ ಪೊಱಮಡುವೆನಿದಂ ಬೇಗದಿಂ ದ್ರವ್ಯಮಂ ದು
ರ್ವಿನಯಂಗಿತ್ತುಣ್ಮೆ ಲೋಕಂ ಪೊಗೞೆ ಪಲವು ಮಾತೇವುದಾಂ ದೀಕ್ಷೆಗೊಳ್ವೆಂ ೨೩೧

ಪೆಱತೇನೀ ಮುನಿಪಂ ಪೊಂ
ಗೆಱಗಂ ಪೊಂಗೆಱಗುವುದೊಂದು ಮನಮುಳ್ಳೊಡೆ ಮುಂ
ತೊಱೆವನೆ ಸಕಳಮನೆನ್ನದೆ
ನೆಱೆ ದಂಡಿಪನಿಂತು ಕಷ್ಟರಂ ಕಂಡಱಿಯೆಂ ೨೩೨

ಮಱೆದಂ ಧರ್ಮದ ಬಟ್ಟೆಯು
ನಱಿತಂ ಪಿಂತಾಗಿ ಪೋಯ್ತು ಲೋಭೋದಯದಿಂ
ಮಱುಕಮುಮನಱಿವೊಡರ್ಥದ
ಮಱುಕಕ್ಕೆಣೆ ಮಱುಕವೊಳವೆ ಬಗೆವೊಡೆ ಜಗದೊಳ್ ೨೩೩

ನೀನು ತೆಗೆದುಕೊಂಡ ಒಡವೆಯನ್ನು ಕೊಡು. ಈಗಲೇ ಕೊಡದಿದ್ದರೆ, ಇಕ್ಕಳದಿಂದ ನಿನ್ನ ಕೈಯನ್ನು ಮುರಿಯುತ್ತೇನೆ. ನೀನು ಗೋಳಿಡುವಂತೆ ನಿನ್ನನ್ನು ಕೊಯ್ದು ಕೊಯ್ದು ಸುಣ್ಣ ಹಚ್ಚುತ್ತೇನೆ. ನಿನ್ನನ್ನು ಹಿಡಿದೊಯ್ದು ಹೆಗ್ಗರೆಯಲ್ಲಿ ತುಳಿಯುತ್ತೇನೆ" ಎಂದು ಮಹಾ ಕ್ರೌರ್ಯದ ಆಟೋಪವನ್ನೇ ಮೆರೆದು ಅವನನ್ನು ಹಿಂಸೆ ಮಾಡಬೇಕೆಂದಿದ್ದನು. ೨೩೦. ಆಗ ಆ ಕೋಣೆಯೊಳಗೆ ಬಾಗಿಲಿಗೇ ಆತುಕೊಂಡಿದ್ದ ಸೆಟ್ಟಿಯ ಮಗ ಜಿನದಾಸ ಕೇಳಿ, ನಕ್ಕು ತನ್ನ ತಂದೆಯ ಮನಸ್ಸಿನ ಮಹಾ ದ್ವೇಷವನ್ನು ಕಂಡು "ಈ ಮೂರ್ಖನು ಉಗ್ರಕರ್ಮವಿರೋಧಿಯಾದ ಈ ಮುನಿಪೂಜ್ಯನಿಗೆ ಕೋಪದಿಂದ ಹಿಂಸೆಯನ್ನು ಮಾಡದ ಮೊದಲೇ ಹೊರಗೆ ಹೋಗುತ್ತೇನೆ"ಎಂದು ಯೋಚಿಸಿ ಜೈನದೀಕ್ಷೆ ಸ್ವೀಕರಿಸಲು ನಿರ್ಧರಿಸಿಕೊಂಡನು. ೨೩೧. "ಬೇರೆಯೇನು ? ಈ ಮುನಿಶ್ರೇಷ್ಠನು ಹೊನ್ನಿಗೆ ಆಸೆ ಪಡುವುದಿಲ್ಲ. ಹಾಗೆ ಹೊನ್ನಿಗೆ ಆಸೆಪಡುವ ಮನಸ್ಸಿದ್ದಿದ್ದರೆ ಮುಂಚೆಯೇ ಎಲ್ಲವನ್ನೂ ತೊರೆಯುತ್ತಿದ್ದನೆ ? ಇದನ್ನು ನೆನೆಯದೆ ಇಂಥವರನ್ನು ದಂಡಿಸುವ ನೀಚರನ್ನು ನಾನು ಕಂಡಿಲ್ಲ. ಧರ್ಮದ ದಾರಿಯನ್ನು ಮರೆತನು. ತಿಳಿವಳಿಕೆ ಹಿಂದೆ ಹೋಯಿತು. ಲೋಭದ ಹೆಚ್ಚಳದಿಂದ ಕರುಣೆಯನ್ನು ಮರೆತ. ವಿಚಾರಿಸಿದರೆ ಹಣದ ಸಂಕಟಕ್ಕೆ ಎಣೆಯಾದ

ಕಳ್ಳನಿವನೆಂದೊಡನಿತಱೊ
ಳೆಲ್ಲರುಮುಱಿಯಟ್ಟಿ ಪಿಡಿದು ನಾನಾವಿಧದಿಂ
ಕೊಲ್ಲದೆ ಮಾಣ್ಬರೆ ಕಳವಿಂ
ಪೊಲ್ಲಮೆ ಪೆಱತೊಳವೆ ಪಾಪದೆತ್ತರಮಲ್ತೇ ೨೩೪

ಪೆಱರರ್ಥಕ್ಕೆಱಗುವನುಂ
ಪೆಱರರ್ಥಮನೆಯ್ದೆ ತರಿಸಿಕೊಳ್ವವನುಂ ಕೇ
ಳಱಿವೊಡೆ ಕೊಲ್ವರ್ ನೆಲೆಯಿಂ
ಪೊಱಮಡಿಸುವರಟ್ಟಿ ದೂಱುವರ್ ಕೈಕೊಳ್ಳರ್ ೨೩೫

ಕಳ್ಳರ ಕೊಟ್ಟಮಿದೆಂದೊಡೆ
ಬಲ್ಲಿದರುಂ ನಡಗುತಿರ್ಪರಪ್ಪುದಱಿಂದಂ
ಪೊಲ್ಲದು ಕಳವೆಂದಂಜುವು
ದಲ್ಲದೆ ಲೇಸೆಂದು ನಚ್ಚಲಕ್ಕುಮೆ ಕಳವಂ ೨೩೬

ತನ್ನರ್ಥಂ ಕೆಟ್ಟೊಡೆ ಕೇ
ಳೆನ್ನರ್ಥಂ ಕೆಟ್ಟುದೆಂದು ಬಾಯ್ವಿಟ್ಟಱುವರ್
ತನ್ನಂತೆ ಬಗೆಯಲಾಗದೆ
ಸನ್ನುತಮತಿಯಾಗಿ ಲೋಗರರ್ಥದ ಕೇಡಂ ೨೩೭

ಸಂಕಟ ಜಗತ್ತಿನಲ್ಲಿ ಬೇರೊಂದು ಇದೆಯೆ ? ೨೩೨. 'ಇವನು ಕಳ್ಳ' ಎಂದಷ್ಟರಿಂದಲೇ ಎಲ್ಲರೂ ಸೇರಿ ಹಿಂಸಿಸಿ ನಾನಾ ವಿಧಗಳಿಂದ ಶಿಕ್ಷಿಸದೆ ಬಿಡುವರೆ ? ಕಳ್ಳತನಕ್ಕಿಂತ ಕೆಡುಕು ಬೇರೆಯುಂಟೆ ? ಅದು ಪಾಪದ ಉನ್ನತಿಯಲ್ಲವೆ ? ೨೩೩. ಬೇರೆಯವರ ಹಣಕ್ಕೆ ಆಸೆ ಪಡುವವನೂ ಅನ್ಯರ ದ್ರವ್ಯವನ್ನು ಹೆಚ್ಚಾಗಿ ತರಿಸಿಕೊಳ್ಳುವವನೂ ಇತರರಿಗೆ ತಿಳಿದರೆ ಜನ ಅವರನ್ನು ಕೊಂದಾರು, ದೇಶಭ್ರಷ್ಟರನ್ನಾಗಿ ಮಾಡುವರು. ಅಂಥವರನ್ನು ಬೆನ್ನಟ್ಟಿ ದೂಷಿಸುತ್ತಾರೆ. ಯಾರೂ ರಕ್ಷಿಸರು. ೨೩೫. "ಇದು ಕಳ್ಳರ ಕೂಟ" ಎಂದು ಹೇಳಿದರೆ, ಬಲ್ಲಿದರು ಕೂಡ ನಡುಗುವರು. ಆದ್ದರಿಂದ ಕಳ್ಳತನ ಕೆಟ್ಟದ್ದೆಂದು ತಿಳಿದು ಅಂಜಬೇಕಲ್ಲದೆ ಅದು ಶ್ರೇಷ್ಠವೆಂದು ನಂಬಬಹುದೆ ? ೨೩೬. 'ತನ್ನ ಹಣ ಕಳೆದು ಹೋಯಿತು' ಎಂದು ಒಬ್ಬರು ಹೇಳಿದರೆ 'ನನ್ನ ಹಣವೂ ಕಳೆದುಹೋಯಿತು' ಎಂದು ಬಾಯಿಬಿಟ್ಟು ಅಳುತ್ತಾರೆ, ಜನ. ಸದ್ಬುದ್ಧಿಯುಳ್ಳವನು ಕಂಡವರ ಹಣದ ಹಾನಿಯನ್ನು ತನ್ನ ಹಾಗೆಯೇ ಎಂದು ಭಾವಿಸಬೇಡವೆ ? (ಅರ್ಥಹಾನಿಯ ದುಃಖ ಎಲ್ಲರಿಗೂ ಒಂದೇ ಎಂದು ಭಾವ) ೨೩೭. ಮೈಯುರಿಯುವವರೆಗೂ ಹರಿತವಾದ

ಒಡಲುಱಿವನ್ನೆಗಂ ಬಸಿದ ಶೂಲದೊಳಿಕ್ಕೆ ಪಲರ್ ಕುಕಿಲ್ದುಬೊ
ಬ್ಬಿಡುತುಮಶಂಕೆಯಿಂ ತೆಗೆವ ಕಯ್ಯುಮನಂಘ್ರಿಯುಮಂ ನರರ್ತಡಂ
ಗಡಿವ ಧಗದ್ಧಗೆಂದುರಿವ ದಳ್ಳುರಿಯೊಳ್ ಪಿಡಿದೊತ್ತಿ ಕೋಪದಿಂ
ಸುಡುವತಿದುಃಖದೇಟ್ಗಿಗಳೆ ಪೇಟವೆ ತಾಂ ಕಳವಾಗದೆಂಬುದಂ ೨೩೮

ಪಿಡಿದು ತಳಾಱರೋವದೆ ಕನಲ್ದು ಮನಂಗಿಡೆ ಕಟ್ಟೆ ಶಂಕೆಯಿಂ
ನಡುಗುವ ದೇಹಮುಂ ನುಡಿಯಲಾಱದ ನಾಲಗೆಯುಂ ನಿಜೇಚ್ಛೆಯಿಂ
ನಡೆಯದ ಕಾಲುಮೞ್ಬೆಗಮುಮಂಜುಮೆಯುಂ ಕಳವಾಗದೆಂಬುದಂ
ತಡೆಯದೆ ತೋಱ ಸಾಱುವವೊಲಿರ್ದುವು ಭಾವಿಸಿ ನೋೞ್ಪೊಡುರ್ವಿಯೊಳ್ ೨೩೯

ಗದ್ಯ॥ ಎಂದು ಕಳವಿನ ಕಷ್ಟವೃತ್ತಿಯುಮಂ ದ್ರವ್ಯದೊಳಾದ ಸಂಕ್ಲೇಶಮುಮಂ ವಿಚಾರಿಸಿ ಸಂಸಾರಕ್ಕೆ ಪೇಸಿ ಪಡಿಯಂ ತೆಱೆಯಿಸಿ ಪೊಱಮಟ್ಟು ಮಹಾಪಾತಕಂ ಲೋಭದಿಂ ಮತಿಗೆಟ್ಟು ಸುಗತಿಯಂ ಕಿಡಿಸುವ ಕಜ್ಜಮಂನೆತ್ತಿಕೊಂಡು ಗಣಧರರಪ್ಪಿವರಂ ಬಱದೆ ಸುತ್ತುತ್ತಿರ್ದಪೆ, ಕೊಳ್ ನಿನ್ನ ಪೊನ್ನನೆಂದು ಪೊನ್ನಂ ತಂದೆರ್ದೆಯ ಮೇಲೀಡಾಡಿ ಮುನಿನಾಥಂಗೆ ಪೊಡೆಮಟ್ಟು ಮುಂದೆ ನಿಂದಿರ್ದು ೨೪೦

ಶೂಲಕ್ಕೆ ಹಾಕಿ, ಹಲವರು ಕೇಕೆ ಹಾಕಿ ಬೊಬ್ಬೆಯಿಡುತ್ತ, ನಿಶ್ಯಂಕೆಯಾಗಿ ತೆಗೆಯುವ ಕೈಯನ್ನೂ ಕಾಲುಗಳನ್ನೂ ಜನ ಕಡಿಯುವ, ಧಗಧಗನೆ ಉರಿಯುತ್ತಿರುವ ದಳ್ಳುರಿಯಲ್ಲಿ ಹಿಡಿದು ಒತ್ತಿ ಕೋಪದಿಂದ ಸುಡುವ ಅತಿ ಕ್ರೂರ ದುಃಖಗಳೇ ಕಳವು ಆಗದೆಂಬುದನ್ನು ಹೇಳುತ್ತವೆ. ೨೩೮. ತಳವಾರರು ಹಿಡಿದು ಲಕ್ಷ್ಯವಿಲ್ಲದೆ ಕೋಪಿಸಿಕೊಂಡು ಕಟ್ಟಲು, ಭಯದಿಂದ ನಡುಗುವ ದೇಹವೂ ನುಡಿಯಲಾರದ ನಾಲಗೆಯೂ ಸ್ವತಂತ್ರವಾಗಿ ನಡೆಯಲಾರದ ಕಾಲೂ ಧಾವಂತವೂ ಅಂಜಿಕೆಯೂ, ಲೋಕದಲ್ಲಿ ಕಳವು ಆಗದೆಂಬುದನ್ನು ಎಲ್ಲರಿಗೂ ತೋರಿಸಿ ಸಾರಿ ಹೇಳುತ್ತಿವೆ. ೨೩೯. ಎಂದು ಕಳವಿನ ನೀಚತನವನ್ನೂ ದ್ರವ್ಯದಿಂದಾಗುವ ಕ್ಲೇಶವನ್ನೂ ಯೋಚಿಸಿ ಸಂಸಾರಕ್ಕೆ ಅಸಹ್ಯಪಟ್ಟು ಕದವನ್ನು ತೆರೆಯಿಸಿ ಹೊರಕ್ಕೆ ಬಂದು "ಮಹಾಪಾತಕ, ಲೋಭದಿಂದ ಮತಿಹೀನನಾಗಿ ಸದ್ಗತಿಯನ್ನು ಹಾಳುಮಾಡುವ ಕೆಲಸವನ್ನು ಕೈಕೊಂಡು ಗಣಧರರಾದ ಇವರನ್ನು ನಿಷ್ಕಾರಣವಾಗಿ ಕಾಡಿಸುತ್ತಿದ್ದೀಯೆ ; ತಗೋ ನಿನ್ನ ಚಿನ್ನವನ್ನು" ಎಂದು ನುಡಿದು ಬಂಗಾರವನ್ನು ತನ್ನ ತಂದೆಯ ಎದೆಯ ಮೇಲೆ ಬೀಸಾಡಿ ಮುನಿಶ್ರೇಷ್ಠರಿಗೆ ನಮಸ್ಕಾರಮಾಡಿ ಮುಂದೆ ನಿಂತು ೨೪೦. "ಪಾಪವೆಂಬ ಮದ್ದಾನೆಗೆ ಸಿಂಹನಾದವನೆ, ಶ್ರೇಷ್ಠಚಾರಿತ್ರವುಳ್ಳವನೆ !

ದುರಿತಮದಗಂಧಸಿಂಧುರ
ಹರಿ ಚಾರುಚರಿತ್ರ ನಿರ್ವೃತಿ ಶ್ರೀಸತಿಯಂ
ಬರಿಸುವ ಜಿನೇಂದ್ರದೀಕ್ಷೆಯ
ನುರುಮುದದಿಂದೀವುದೆಂದು ಬೇಡುತೆ ಮುನಿಯಂ ೨೪೧

ಪರಮಶ್ರೀಯೊಳ್ ನೆರೆಪುವ
ದುರಿತಾರಿಯನಳಿವ ದೇವರಿಂ ಪೊಗಳಿಪ ಭಾ
ಸುರ ಜೈನದೀಕ್ಷೆಯಂ ಸ
ಚ್ಚರಿತಂ ಜಿನದಾಸನಾಕ್ಷಣಂ ಕೈಕೊಂಡಂ ೨೪೨

ಗದ್ಯ॥ ಅಂತು ಜಿನದಾಸಂ ಜಾತರೂಪಧರನಾಗಿರ್ಪುದುಂ ಜಿನದತ್ತಸೆಟ್ಟಿಯುಂ ವೈರಾಗ್ಯಂ ಪುಟ್ಟೆ ತನ್ನ ಮಾಡಿದ ಮಾಟಕ್ಕೆ ಕರಮಲ್ಲದೆ ನೊಂದೆನ್ನ ಪಾಪಮಿಂತಲ್ಲದೆ ಪೋಗದೆಂದು ತಾನುಂ ಜಿನದೀಕ್ಷೆಯಂ ಕೊಂಡು ತಪಂಗೆಯ್ದು ಸಂನ್ಯಸನವಿಧಿಯಿಂ ಮುಡಿಪಿ ಮಹರ್ಧಿಕದೇವನಾಗಿ ಪುಟ್ಟಿದಂ, ಜಿನದಾಸಮುನೀಂದ್ರನುಂ ಪಲಕಾಲಂ ತಪಂಗೆಯ್ದು ಸಮಾಧಿಮರಣದಿಂ ಮುಡಿಪಿ ಸರ್ವಾರ್ಥಸಿದ್ಧಿಯೊಳ್ ಮೂವತ್ತಮೂಱು ಸಾಗರೋಪಮಾಯುಃಪ್ರಮಾಣೊಡೆಯನಹಮಿಂದ್ರನಾಗಿ ಪುಟ್ಟಿದನದಱಿಂ ೨೪೩

ಕಳವಿನ ಮಾತಂ ನೆಱೆ ಪಂ
ಬಲಿಸದೆ ಜಿನಪಾದಸೇವೆಯಿಂದಿರ್ಪ ನರಂ
ಮಲಹಾರಿಯಾಗಿ ನಿರ್ವೃತಿ
ಲಲನೆಗೆ ಪತಿಯಪ್ಪನೆಂಬುದೊಂದಚ್ಚರಿಯೇ ೨೪೪

ನಿರ್ವೃತಿ ಶ್ರೀಯನ್ನು ಬರಮಾಡುವಂಥ ಜಿನೇಂದ್ರದೀಕ್ಷೆಯನ್ನು ಸಂತೋಷದಿಂದ ನೀಡಬೇಕು" ಎಂದು ಮುನಿಯನ್ನು ಬೇಡಿದನು. ೨೪೧. ಪರಮ ಶ್ರೀಯೊಡನೆ ಸೇರಿಸುವ, ಪಾಪವೆಂಬ ಶತ್ರುವನ್ನು ನಾಶಪಡಿಸುವ, ದೇವರುಗಳಿಂದ ಹೊಗಳಿಸುವ, ಶ್ರೇಷ್ಠವಾದ ಜೈನದೀಕ್ಷೆಯನ್ನು ಸಚ್ಚರಿತ್ರನಾದ ಜಿನದಾಸನು ಆಕ್ಷಣವೇ ಸ್ವೀಕರಿಸಿದನು. ೨೪೨, ಹಾಗೆ ಜಿನದಾಸನು ದಿಗಂಬರನಾಗಿರಲು ಜಿನದತ್ತಸೆಟ್ಟಿಯೂ ವೈರಾಗ್ಯ ಹುಟ್ಟಿ ತಾನು ಮಾಡಿದ ಕೆಲಸಕ್ಕೆ ಬಹಳವಾಗಿ ನೊಂದುಕೊಂಡು "ನನ್ನ ಪಾಪವು ಹೀಗಲ್ಲದೆ ಹೋಗದು" ಎಂದು ಭಾವಿಸಿ ತಾನು ಜಿನದೀಕ್ಷೆಯನ್ನು ತೆಗೆದುಕೊಂಡು ತಪಸ್ಸುಮಾಡಿ ಸಂನ್ಯಸನ ವಿಧಿಯಂತೆ ಸತ್ತು ಮಹರ್ಧಿಕ ದೇವನಾಗಿ ಹುಟ್ಟಿದನು. ಜಿನದಾಸಮುನೀಂದ್ರನೂ ಹಲವು ಕಾಲ ತಪಸ್ಸು ಮಾಡಿ ಸಮಾಧಿಮರಣದಿಂದ ಸತ್ತು ಸರ್ವಾರ್ಥಸಿದ್ಧಿಯಲ್ಲಿ ಮೂವತ್ತಮೂರು ಸಾಗರೋಪಮವಾದ ಆಯುಷ್ಯವುಳ್ಳ ಅಹಮಿಂದ್ರನಾಗಿ ಹುಟ್ಟಿದನು. ೨೪೩. ಆದ್ದರಿಂದ ಕಳ್ಳತನದ ಮಾತನ್ನು ಹಂಬಲಿಸದೆ ಜಿನಪಾದಸೇವೆಯಲ್ಲಿರುವ ಮನುಷ್ಯನು ಪಾಪಹರನಾಗಿ ಮೋಕ್ಷಲಲನೆಗೆ ಗಂಡನಾಗುವನೆಂಬುದು ಒಂದು ಆಶ್ಚ

ಕಳವಿನ ಮಱೆಯೊಳ್ ಮೆಲ್ಲನೆ
ಮುಳಿಸಿಂದಘಮೆಂಬ ಬೇಡನಿರ್ದೆಚ್ಚಪನಾ
ಖಳನಂ ಬಂಚಿಸಿ ಸುಖದೊಳ್
ನೆಲಸುವ ಮನಮುಳ್ಳೊಡಂಜಿ ಮಾಣ್ಬುದು ಕಳವಂ ೨೪೫

ಗದ್ಯ॥ ಎಂದು ಗಣಧರ ಸ್ವಾಮಿಗಳ್ ಕಳವಿನೊಳಾದ ಪೊಲ್ಲಮೆಯುಮನಸ್ತೇಯದೊಳಾದ ಮಹಾಮಹಿಮೆಯುಮಂ ಪೇಳ್ವುದುಂ ೨೪೬

ದುರಿತಾರಾತೀಭಕಂಠೀರವನಘಗಿರಿವಜ್ರಾಯುಧಂ ವಾಗ್ವಧೂ ಸೌಂ
ದರರೂಪಂ ಕೇಳ್ದು ರಾಗಂಬೆರಸು ನಲಿದನತ್ಯೂರ್ಜಿತಂ ದೇವಧಾತ್ರೀ
ಧರಧೈರ್ಯಂ ನಿರ್ಮಲಂ ಸಂಸೃತಿನಿಧಿಮದನಧ್ವಂಸಿ ತ್ರೈವಿದ್ಯ ಚಕ್ರೇ
ಶ್ವರ ಪಾದಾಂಭೋಜ ಭೃಂಗಂ ಸುಕವಿಜನಮನಃಪದ್ಮಿನೀರಾಜಹಂಸಂ ೨೪೭

ಗದ್ಯ॥ ಇದು ನಿಖಿಲದಿವಿಜ ಪರಿವೃಢಮಕುಟತಟಘಟಿತಮಣಿಗಣವಿಲುಳಿತಕಿರಣ ಚುಂಬನೀಯ ಪರಮಜಿನಚರಣಯುಗಳ ಸರಸಿರುಹಮತ್ತ ಮಧುಕರ ನಿರುಪಮ ಸಹಜಕವಿಜನಪಯಃಪಯೋಧಿ ಹಿಮಕರ, ನುತಭಾವಯುತ ದಿಗಂಬರದಾಸ ನೂತ್ನಕವಿತಾವಿಳಾಸ ಶ್ರೀಮನ್ನಯಸೇನದೇವ ವಿರಚಿತಮಪ್ಪ ಧರ್ಮಾಮೃತದೊಳ್ ಅಸ್ತೇಯವ್ರತವ್ಯಾವರ್ಣನಂ

## ದ್ವಾದಶಾಶ್ವಾಸಂ

ರ್ಯಾವೆ? ೨೪೪. ಕಳ್ಳತನದ ಮರೆಯಲ್ಲಿ ಮೆಲ್ಲಗೆ ಕೋಪದಿಂದ ಪಾತಕವೆಂಬ ಬೇಡನು ಇದ್ದು ಬಾಣ ಹೊಡೆಯುತ್ತಾನೆ. ಆ ದುಷ್ಟನನ್ನು ವಂಚಿಸಿ ಸುಖವಾಗಿ ನೆಲಸುವ ಮನಸ್ಸು ಇದ್ದರೆ ಕಳ್ಳತನವನ್ನು ಬಿಡತಕ್ಕದ್ದು: ೨೪೫. ಹೀಗೆಂದು ಗಣಧರಸ್ವಾಮಿಗಳು ಕಳ್ಳತನದಿಂದಾಗುವ ಕೆಡಕನ್ನೂ ಅಸ್ತೇಯ (ಕಳ್ಳತನ ಮಾಡದಿರುವುದು)ದಿಂದ ಆಗುವ ಮಹತ್ತಾದ ಮಹಿಮೆಯನ್ನೂ ಹೇಳಿದರು. ೨೪೬. ಪಾಪವೆಂಬ ಆನೆಗೆ ಕಂಠೀರವ (ಸಿಂಹ)ನು, ಪಾತಕಗಿರಿಗೆ ವಜ್ರಾಯುಧನು, ವಾಗ್ವಧೂಸೌಂದರರೂಪನು, ಅತ್ಯೂರ್ಜಿತನೂ ಮಂದರ ಧೈರ್ಯನೂ ನಿರ್ಮಲನೂ ಸಂಸಾರವನ್ನು ಹೂಳುವವನೂ, ಮನ್ಮಥ ಧ್ವಂಸಕ, ತ್ರೈವಿದ್ಯಚಕ್ರೇಶ್ವರರ ಪಾದಕಮಲಗಳಲ್ಲಿ ತುಂಬಿಯಾದವನೂ ಆದ ಸುಕವಿಜನರ ಮನಸ್ಸೆಂಬ ಪದ್ಮಿನಿಗಳಲ್ಲಿ ರಾಜಹಂಸನಂತೆ ಇರುವವನೂ ಕೇಳಿ ಪ್ರೀತಿಯಿಂದ ಕೂಡಿ ಹರ್ಷಿಸಿದನು. ೨೪೭. ಇದು ಸಮಸ್ತದೇವ ಮುಖಂಡರ ಕಿರೀಟಗಳಲ್ಲಿ ಕೆತ್ತಿದ ಮಣಿಗಳಿಂದ ಹೊರಟ ಕಿರಣಗಳಿಂದ ಚುಂಬಿತವಾದ ಪರಮಜಿನಚರಣದ್ವಂದ್ವವೆಂಬ ಕಮಲಗಳಲ್ಲಿ ಮದಿಸಿದ ಮಧುಕರ (ದುಂಬಿ)ನಾದ ನಿರುಪಮ ಸಹಜಕವಿಜನರೆಂಬ ಹಾಲ್ಗಡಲಿಗೆ ಚಂದ್ರನಾದ ನುತ ಭಾವಯುತನಾದ 'ದಿಗಂಬರದಾಸ' 'ನೂತ್ನಕವಿತಾವಿಳಾಸ'ನೆಂಬ ಬಿರುದಾಂಕಿತನಾದ ಶ್ರೀಮನ್ನಯಸೇನದೇವನು ವಿರಚಿಸಿದಂಥ 'ಧರ್ಮಾಮೃತ'ದಲ್ಲಿ ದ್ವಾದಶಾಶ್ವಾಸಂ

# ತ್ರಯೋದಶಾಶ್ವಾಸಂ

ಶ್ರೀಮತ್ಸುರೇಂದ್ರವಂದ್ಯಂ
ಸಾಮಾನ್ಯಮೆ ಕಳ್ಳದ ವ್ರತಂ ಚಿಂತಿತ ಚಿಂ
ತಾಮಣಿಯೆಂದೊಸೆದಂ ಧರ
ಣೀವಃಹಿತಂ ಸುಕವಿನಿಕರಪಿತಮಾಕಂದಂ ೧

ಅಂತಸ್ತೇಯವ್ರತಮಂ
ಕಂತುನಿಭಂ ಕೇಳ್ದು ಸಂತಸಂಬಟ್ಟು ಮಹೀ
ಕಾಂತಂ ನಾಲ್ಕನೆಯ ವ್ರತ
ಮಂ ತಡೆಯದೆ ಕೇಳ್ವೆನೆಂದು ಕರಮಾದರದಿಂ ೨

ಗದ್ಯ॥ ಗೌತಮಸ್ವಾಮಿಗಳ್ಗೆ ಪೊಡಮಟ್ಟು ಕೈಗಳಂ ಮುಗಿದು ಕರ್ಮರಾಜನೊಡ್ಡಂ ಕಿಡಿಸುವ ನಿಬ್ರಹ್ಮದ ಕಥೆಯುನೆನಗೆ ನಿಮ್ಮಡಿ ಬೆಸಸಿಮೆಂಬುದುಂ ೩

ಗಣಧರಮುನಿಮುಖ್ಯರ್ ಗುಣ
ಗಣನಿಳಯರ್ ಮೃದುನಿನಾದದಿಂ ಭೂಪಶಿಖಾ
ಮಣಿಗೆ ಸುರಮನುಜಪನ್ನಗ
ಗಣಪರ್ ಕೈಮುಗಿಯೆ ಪೇಟಲುದ್ಯತರಾದರ್ ೪

ಸುರೇಂದ್ರನಿಗೆ ವಂದ್ಯನಾದ ಗೌತಮಸ್ವಾಮಿಯು "ಕಳದ (ಕದಿಯದ) ವ್ರತವು ಸಾಮಾನ್ಯವೆ ? ಅದು ಚಿಂತಿತ ಚಿಂತಾಮಣಿ" ಎಂದು ಸಂತೋಷದಿಂದ ಹೇಳಲು ಶ್ರೇಣಿಕ ಮಹಾರಾಜನು ಕೇಳಿ ಬಹಳ ಸಂತೋಷಪಟ್ಟನು. ೧. ಹಾಗೆ ಅಸ್ತೇಯ ವ್ರತ ವನ್ನು ಆ ಮನ್ಮಥ ಸದೃಶನು ಕೇಳಿ ಸಂತೋಷಪಟ್ಟು ನಾಲ್ಕನೆಯ ವ್ರತ ಮಹಿಮೆಯನ್ನು ಕೇಳಬೇಕೆಂದು ಸಂಭ್ರಮಪಟ್ಟನು. ೨. ಆತನು ಗೌತಮಸ್ವಾಮಿಗಳಿಗೆ ನಮಸ್ಕಾರಮಾಡಿ ಕೈಗಳನ್ನು ಜೋಡಿಸಿ "ಕರ್ಮರಾಜನ ಸೈನ್ಯವನ್ನು ನಾಶಪಡಿಸುವ ನಿಬ್ರಹ್ಮದ ಕಥೆಯನ್ನು ನನಗೆ ದಯವಿಟ್ಟು ಹೇಳಬೇಕು" ಎಂದು ಬೇಡಿಕೊಂಡನು. ೩. ಗಣಧರಮುನಿಶ್ರೇಷ್ಠರೂ ಗುಣನಿಲಯರೂ ಆದ ಗೌತಮರು ರಾಜಶ್ರೇಷ್ಠನಿಗೆ ತಮ್ಮ ಮೃದುಧ್ವನಿಯಿಂದ ಹೇಳಲು ಸಿದ್ಧರಾದಾಗ ದೇವಮಾನವ ಪನ್ನಗ ಗಣಪಾಲಕರು ಕೈಮುಗಿದರು. ೪.

ಗದ್ಯ॥ ಇಂತೆಂದು ಪೇಟ್ದರ್ ಹಣತೆಯೊಳ್ ಕೂಡಿ ಬತ್ತಿಯಿಂದೆಣ್ಣೆಯಿಂದಂ ಬೆಂಕಿಯಿಂದಂ ಬೆಳಗಿಂದಂ ಸೊಡರೆಂತೊಪ್ಪುಗುಂ ಕರಿಯ ಭೂಮಿಯೊಡಗೂಡಿ ಬೊದಲಿಂದಂ ಪಣಿಯಿಂದಂ ಪೆರ್ಗೊಂಬುಗಳಿಂದಂ ಕಿಱುಗೊಂಬುಗಳಿಂದಂ ಆಲದಮರನೆಂತೊಪ್ಪುಗುಂ, ಟಲ್ಲವರೊಡಗೂಡಿ ಬಣ್ಣದಿಂದೊರೆಯಿಂ ತೂಕದಿಂ ಮೆಚ್ಚಿಯಿಂದಂ, ಪೊನ್ನೆಂತೊಪ್ಪುಗುಂ, ರೂಪಿನೊಳೊಡಗೂಡಿ ವಸ್ತ್ರದಿಂ ತಿಳಕದಿಂ ತೊಡವಿಂ ಕಾಡಿಗೆಯಿಂ ಸ್ತ್ರೀಯೆಂತೊಪ್ಪುಗುಂ, ಬೆಳ್ದಿಂಗಳೊಡಗೂಡಿ ತಂಗಾಳಿಯಿಂದುಯ್ಯಾಲ್ಗಳಿಂ ವಿಲಾಸದಿಂ ತಿಳಿಗೊಳಂಗಳಿಂ ವಸಂತಮಾಸವೆಂತೊಪ್ಪುಗುಮಂತೆ ಸಮ್ಯಕ್ತ್ವದೊಳ್ ಕೂಡಿ ಕೊಲ್ಲದ ಪುಸಿಯದ ಕಳ್ಳದ ಪಾದರವಿಲ್ಲದ ವ್ರತಂಗಳಿಂದಂ ಶ್ರಾವಕನು ವೊಪ್ಪುವುದು ೫

ಪರವನಿತೆಗೆಳಸದವನಂ
ಧರೆ ನಂಬುವುದವನಿಪಾಳರುಂ ಕೈಕೊಳ್ವರ್
ಆರವಾದರದಿಂದೆನೆ ಪಾ
ದರವಂ ಮಾಣೆಂಬ ಸುವ್ರತಂ ಕೇವಳಮೇ ೬

ಗದ್ಯ॥ ಇನ್ನಾವ್ರತದ ಮಹಿಮೆಯೆಂತೆಂದೊಡೆ, ಈ ಜಂಬೂದ್ವೀಪದ ಭರತಕ್ಷೇತ್ರದ ವತ್ಸಕಾವತೀವಿಷಯದ ಕೌಶಾಂಬಿಯೆಂಬ ಪೊಟಲನಾಳ್ವ ದಂತಿಬಳನೆಂಬ ಮಹಾಮಾಂಡಳಿಕನಾತನ ಪಟ್ಟದರಸಿ ಧಾರಿಣೀಮಹಾದೇವಿಯೆಂಬಳವರ್ಗೆ ಪ್ರಿಯನಂದನಂ ೭

ಆಗ ಸ್ವಾಮಿಗಳು ಹೀಗೆ ಹೇಳಿದರು : "ಹಣತೆಯಲ್ಲಿ ಬತ್ತಿ, ಎಣ್ಣೆ, ಬೆಂಕಿ, ಬೆಳಕುಗಳು ಸೇರಿ ಸೊಡರು ಹೇಗೆ ಶೋಭಿಸುವುದೊ, ಕರಿಯ ಭೂಮಿಯಲ್ಲಿ ಬುಡ, ಪಣೆ, ಹೆಗ್ಗೊಂಬೆಗಳು, ಚಿಕ್ಕ ಕೊಂಬೆಗಳು ಸೇರಿ ಆಲದ ಮರ ಹೇಗೆ ಒಪ್ಪುವುದೊ, ಚಿನ್ನವು ತಜ್ಞರೊಡನೆ ಕೂಡಿ ಒರೆ, ಬಣ್ಣ, ತೂಕ, ಮೆಚ್ಚುಗಳಿಂದ ಹೇಗೆ ಒಪ್ಪುವುದೊ, ರೂಪದಿಂದ ಕೂಡಿ ವಸ್ತ್ರತಿಳಕ, ಒಡವೆ, ಕಾಡಿಗೆಗಳಿಂದ ಹೇಗೆ ಹೆಣ್ಣು ಶೋಭಿಸುವಳೊ, ವಸಂತಮಾಸವು ಬೆಳುದಿಂಗಳಿಂದ, ತಂಗಾಳಿಯಿಂದ, ಉಯ್ಯಾಲೆ, ವಿಲಾಸಗಳಿಂದ, ತಿಳಿಗೊಳಗಳಿಂದ ಹೇಗೆ ಶೋಭಿಸುವುದೊ, ಹಾಗೆ, ಸಮ್ಯಕ್ತ್ವದಿಂದ ಕೂಡಿ, ಕೊಲ್ಲದ, ಹುಸಿಯದ, ಕದಿಯದ, ಹಾದರವಿಲ್ಲದ ವ್ರತಗಳಿಂದ ಶ್ರಾವಕನೂ ಶೋಭಿಸತಕ್ಕದ್ದು. ೫. ಪರರ ಹೆಂಗಸಿಗೆ ಸೋಲದವನನ್ನು ಪ್ರಪಂಚ ನಂಬುತ್ತದೆ, ರಾಜರು ಮೆಚ್ಚುತ್ತಾರೆ, ಬಹಳ ಆದರ ತೋರುತ್ತಾರೆ. ಆದ್ದರಿಂದ 'ಹಾದರವನ್ನು ಬಿಡು' ಎಂಬ ಶ್ರೇಷ್ಠವಾದ ವ್ರತವು ಸಾಮಾನ್ಯವೆ ? ೬. ಇನ್ನು ಆ ವ್ರತದ ಮಹಿಮೆ ಹೇಗೆಂದರೆ, ಈ ಜಂಬೂದ್ವೀಪದ ಭರತಭೂಮಿಯ ವತ್ಸಕಾವತೀ ದೇಶದ ಕೌಶಾಂಬಿಯೆಂಬ ಪಟ್ಟಣವನ್ನು ದಂತಿಬಲನೆಂಬ ಮಹಾ ಮಾಂಡಲಿಕನು ಆಳುತ್ತಿದ್ದನು. ಆತನ ಪಟ್ಟದರಾಣಿ ಧಾರಿಣೀ ಮಹಾದೇವಿ. ಅವರಿಗೆ ಪ್ರಿಯ ಪುತ್ರನು ೭. ಇಂದ್ರ ವೈಭವ, ಪರ್ವತಧೈರ್ಯಗಳಿಂದ ಕೂಡಿದವನು,

ಸುರಪತಿವಿಭವಂ ಧಾತ್ರೀ
ಧರಧೈರ್ಯಂ ಕಾಮದೇವಸನ್ನಿಭನಹಿತ
ದ್ವಿರದೇಂದ್ರಸಿಂಹನರ್ಹ
ಚ್ಚರಣ ಸರೋಜಾತಭೃಂಗನಮಳಚರಿತ್ರಂ ೮

ಗದ್ಯ॥ ಪ್ರಮಾಥಿಯೆಂಬಗ್ರನಂದನನಂತವರ್ ಸುಖದಿಂ ರಾಜ್ಯಂಗೆಯ್ಯುತ್ತುಮಿರ್ಪುದುಂ ೯

ವನಜಂಗಳ್ ದಳವೇಱೆ ಚೂತಲತೆಗಳ್ ನೀರೇಱೆ ಶೀತಾಂಶು ತೊ
ಟ್ಟನೆ ಪೂರ್ವಾದ್ರಿಯನೇಱೆ ಮನ್ಮಥಗಜಂ ಸೊಕ್ಕೇಱೆ ಪೊನ್ನುಯ್ಯಲಂ
ವನಜಾತಾಕ್ಷಿಯರೇಱೆ ಕಾಮನ ಶರಂ ಕೂರ್ಪೇಱೆ ಪುಂಡ್ರೇಕ್ಷುಚಾ
ಪನ ಚಾಪಂ ಗೊಲೆಗೇಱೆ ಬಂದುದು ವಸಂತಂ ಸಂತತೋತ್ಸಾಹದಿಂ ೧೦

ಜಿನವಚನಾಮೃತಾಬ್ಧಿ ಜಗಮಂ ನೆಱೆ ಪರ್ವಿತೊ ಮೇಣ್ ಧರಿತ್ರಿಯಂ
ಜಿನವರಕೀರ್ತಿ ನೆಱೆತೀವಿತೊ ಮೇಣಮೃತಾಬ್ಧಿ ಲೋಕಮಂ
ತನಗೆಡೆಮಾಡಿಕೊಂಡುದೊ ಮಹಾದ್ಭುತಮೆಂಬಿನಮುಜ್ವಳಿಕೆಯಿಂ
ವನಜವಿರೋಧಿಯೊಂದುನಿಜಕಾಂತಿ ಬಸಂತದೊಳೊಪ್ಪಿ ತೋಱುಗುಂ ೧೧

ಮನ್ಮನಂಥ ರೂಪವುಳ್ಳವನು, ಶತ್ರುಗಜಗಳಿಗೆ ಸಿಂಹ ಸಮಾನನು. ಆತನು ಅರ್ಹಂತನ ಪಾದಕಮಲಗಳಲ್ಲಿ ತುಂಬಿ. ಅವನು ಶುದ್ಧ ಚರಿತ್ರನು ೮. ಪ್ರಮಾಥಿಯೆಂಬ ಹಿರಿಯ ಮಗ. ಅವರು ಹಾಗೆ ಸುಖವಾಗಿ ರಾಜ್ಯಭಾರ ಮಾಡುತ್ತಿದ್ದಾಗ ೯. ಕಮಲಗಳು ಕಾಂತಿಯುಕ್ತವಾದವು, ಮಾವು, ಬಳ್ಳಿಗಳು ಚಿಗುರಿದವು, ಚಂದ್ರನು ತಟ್ಟನೆ ಪೂರ್ವದಲ್ಲಿ ಉದಯಿಸಿದ, ಮನ್ಮಥನೆಂಬ ಗಜಕ್ಕೆ ಮದವೇರಿತು ಚಿನ್ನದ ಉಯ್ಯಾಲೆಗಳನ್ನು ಕಮಲಾಕ್ಷಿಯರು ಹತ್ತಿದರು, ಕಾಮನ ಬಾಣಕ್ಕೆ ಹರಿತ ಹೆಚ್ಚಿತು, ಕಬ್ಬಿನಬಿಲ್ಲವನು ತನ್ನ ಧನುಸ್ಸನ್ನು ಕಟ್ಟಿ ಸಿದ್ಧಮಾಡಿದನು. ಆಗ ನಿರಂತರ ಉತ್ಸವಪ್ರದವಾದ ವಸಂತಮಾಸ ಬಂತು. ೧೦. ಕಮಲವಿರೋಧಿ (ಚಂದ್ರ)ಯ ಉಜ್ವಲಕಾಂತಿಯು ವಸಂತಮಾಸ ದಲ್ಲಿ ಬಹಳವಾಗಿ ಶೋಭಿಸುತ್ತಿತ್ತು. ಅದು "ಜಿನವಚನಾಮೃತವೆಂಬ ಸಮುದ್ರವು ಜಗತ್ತನ್ನು ಪೂರ್ಣವಾಗಿ ಹಬ್ಬಿತೋ, ಅಥವಾ ಜಿನೇಶ್ವರನ ಧವಳಕೀರ್ತಿ ಲೋಕದಲ್ಲೆಲ್ಲ ತುಂಬಿತೋ, ಅಥವಾ ಅಮೃತ ಸಮುದ್ರವು ಲೋಕವನ್ನು ತನಗೆ ಮನೆ ಮಾಡಿ ಕೊಂಡಿತೋ, ಇದು ಬಹಳ ಅದ್ಭುತ" ಎಂಬಂತೆ ಬೆಳ್ಳಗೆ ಶೋಭಿಸುತ್ತಿತ್ತು. ೧೧.

ಒಳಿಯೊಳಿರ್ದ ಚೂತಮಹಿಜಾತಸಮೂಹದ ಚೆಲ್ವುವೆತ್ತ ಪ
ಲ್ಲೀಲೆಯ ಕೆಂದಳಿರ್ಗಳಿಪಿ ಪೊರ್ದಿದ ತುಂಬಿಗಳರ್ತಿವಟ್ಟು ಪ
ಲ್ಲೀಲೆಯಿನಿಂದ್ರನೀಲದ ಪರಲ್ಗಳನಾ ವನದೇವಿಯರ್ ಮೃಗೇಂ
ದ್ರಾಳಿಗೆ ಕೆಂದಳಂಗಳಿನುದಾರತೆಯಿಂ ಕುಡುವಂತೆ ರಂಜಿಕುಂ ೧೨

ಕೊಸಗಿನ ಪೂವಿನೊಪ್ಪು ಸುರಹೊನ್ನೆಯ ಪುಷ್ಪದ ಚೆಲ್ವು ಪೆಂಪುವೆ
ತ್ತೆಸಕದಿನಿರ್ದ ಸಂಪಗೆಯ ಪೂವಿನೊಳಾದ ಬೆಡಂಗು ನಾಡೆ ರಾ
ಜಿಸೆ ವನದೇವಿಯರ್ ನಲಿದು ಮನ್ಮಥರಾಜನ ಬರ್ಪುದಕ್ಕೆ ರಾ
ಗಿಸಿ ಮನವೊಲ್ದು ಪೊತ್ತಿಸಿದ ದೀವಿಗೆಯಂದದಿನೊಪ್ಪಿ ತೋಱುಗುಂ ೧೩

ನಲಿನಲಿದತ್ತಲಿತ್ತಲೆಡೆಯಾಡುವ ಸೋಗೆನವಿಲ್ಕಡಂಗಿ ಮೆ
ಲ್ಲಲಿ ತರವೊಂದಿ ಪಾಡುವ ಮದಾಳಿಮನೋಭವರಾಗಮುಣ್ಮೆ ಬಂ
ದೆಳಸುವ ಜಕ್ಕವಕ್ಕಿ ಪುಗಲೆಂದದಟಿಂ ದನಿಗೆಯ್ಯುತಿರ್ಪ ಕೋ
ಗಿಲೆ ವಿಟರರ್ತಿಯಂ ಸಲಿಸಿ ಮೆಲ್ಲನೆ ತೀಡುವ ದಕ್ಷಿಣಾನಿಲಂ ೧೪

ಗದ್ಯ॥ ಅಂತು ವಿಟವಿಟೀಜನಕ್ಕಭ್ಯುದಯಮಾಗೆ ಬಂದ ವಸಂತಮಾಸದೊಳ್ ವನಪಾಲಕಂ ಬಂದು ದಂತಿಬಲಮಹಾರಾಜಂಗೆ ಬಿನ್ನಪಂಗೆಯ್ವುದುಮರಸನ....ಹೃದಯನಾಗಿವನಪಾಲಕಂಗಂಗ

ಸಾಲಾಗಿದ್ದ ಮಾವಿನ ಮರಗಳ ಗುಂಪಿನ ಚೆಲುವು ಪಡೆದ ಸುಂದರವಾದ ಕೆಂಪು ಚಿಗುರುಗಳಿಗೆ ಆಸೆಪಟ್ಟು ಸಮೀಪಿಸಿದ ತುಂಬಿಗಳು, ಆ ವನದೇವಿಯರು ಆಸೆಯಿಂದ ಇಂದ್ರನೀಲದ ಹರಳುಗಳನ್ನು ಮೃಗೇಂದ್ರ ಸಮೂಹಗಳಿಗೆ ತಮ್ಮ ಕೆಂಪನೆಯ ಅಂಗೈಗಳಿಂದ (ಉದಾರವಾಗಿ) ಕೊಡುತ್ತಿರುವರೆಂಬಂತೆ ತೋರುತ್ತಿದ್ದುವು, ೧೨. ಬೆಟ್ಟದಾವರೆ ಹೂವಿನ ಒಪ್ಪು, ಸುರಹೊನ್ನೆ ಹೂವಿನ ಚೆಲುವು, ಹೆಚ್ಚಿನ ಶೋಭೆಯಿಂದ ಕೂಡಿದ ಸಂಪಗೆಯ ಹೂವಿನ ಬೆಡಗು, ವಿಶೇಷವಾಗಿ ರಂಜಿಸುತ್ತಿರಲು ವನದೇವಿಯರು ಹರ್ಷಪಟ್ಟು ಮನ್ಮಥರಾಜನ ಬರವಿಗೆ ಆಸೆಪಟ್ಟು ಮನದೊಲವಿನಿಂದ ಹೊತ್ತಿಸಿಟ್ಟ ದೀಪದಹಾಗೆ ತೋರುತ್ತಿತ್ತು. ೧೩. ಕುಣಕುಣಿದು ಆಚೆಈಚೆ ಓಡಾಡುವ ಸೋಗೆ ನವಿಲು ಉತ್ಸಾಹಿಸಿ ಮೆಲ್ಲನೆ ಹಾಡುತ್ತಿರುವ ಮದಿಸಿದ ತುಂಬಿಗಳ ಸಮೂಹ, ಮನ್ಮಥ ಪ್ರೇಮವು ಉಕ್ಕಿಬಂದು ಆಸೆಪಡುವ ಚಕ್ರವಾಕಪಕ್ಷಿಗಳು, 'ಹೋಗಬೇಡ' ಎಂದು ಶೌರ್ಯದಿಂದ ಕೂಗುತ್ತಿರುವ ಕೋಗಿಲೆ, ವಿಟರ ಆಸೆಯನ್ನು ಸಲ್ಲಿಸಿ ಮೆಲ್ಲನೆ ತಾಕುವ ದಕ್ಷಿಣದ ಗಾಳಿ. ೧೪. ಹಾಗೆ ವಿಟವಿಟಿಯರಿಗೆ ಅಭ್ಯುದಯವಾಗುವಂತೆ ಬಂದ ವಸಂತ ಮಾಸದಲ್ಲಿ ವನಪಾಲಕನು ಬಂದು ದಂತಿಬಲ ಮಹಾರಾಜನಿಗೆ ಬಿನ್ನಹ ಮಾಡಲು ಅರಸನು ಆನಂದದಿಂದ ಅವನಿಗೆ ಬಹುಮಾನವನ್ನು ಕೊಟ್ಟು 'ಉದ್ಯಾನವನ್ನು

ಚಿತ್ತಮನಿತ್ತು ವನಮಂ ಲೇಸುಮಾಡೆಂದು ಪೋಗಲ್ವೇಟ್ಟು ಮಱುದಿವಸಂ ವನಕ್ರೀಡೆಗೆ ಪೋಪ
ಬಗೆಯಿಂದಾನಂದಭೇರಿಯಂ ಪೊಯ್ಸುವುದುಂ ೧೫

ಪೊಳೆವಲರ್ಗಣ್ಣ ನೀಳ್ದ ನಿಡುವುರ್ವಿನ ಸುಕ್ಕಿದಮರ್ಕೆವೆತ್ತಕುಂ
ತಳದ ಪೊದಳ್ಕೆವೆತ್ತಸಿಯ ಬಾಸೆಯ ಪೊಂಗಳಸಂಬೊಲಿರ್ದ ಪೆ
ರ್ಮೊಲೆಯ ಲತಾಂಗದುಳ್ಳುಡೆಯ ತೆಳ್ವಸಿಱಿಂದಮನಿಭಾಸ್ಯದಂಗನಾ
ವಳಿ ನೆರೆದಂದು ಬಂದುದು ಮನೋಜನ ತಂತ್ರದವೋಲ್ ವಿಲಾಸದಿಂ ೧೬

ಪೊಳೆಪಿಂದಂ ಚೆಲ್ಲೆಗಣ್ ಕಾಮನ ಕುಸುಮಶರಾನೀಕಮಂ ಪೋಲ್ವ ಭೂಷಾ
ವಳಿಯಂ ಕಯ್ಗಾಯುದಂ ಚುಚ್ಚುತ್ತಿರೆ ವಿಟಜನಮಂ ಸತ್ಕಟಾಕ್ಷಂಗಳಿಂದ
ವ್ವಳಿಸುತ್ತುಂ ಕಾಮಪಾಶಕ್ಕೆಣೆಯೆನಿಸಿ ಕರಂ ಸುತ್ತಿ ರಾಜಾಲಯಕ್ಕ
ಗ್ಗಳಮೊಪ್ಪಂಬೆತ್ತು ಬಂದಿರ್ದುದು ನಯದೊದವಿಂ ವಾರನಾರೀಕದಂಬಂ ೧೭

ಗದ್ಯ॥ ಅಂತು ಪೆಂಡವಾಸಮುಂ ಪುರಪುರಂಧ್ರಿಯರುಂ ರಾಜಕುಮಾರರುಂ ಪ್ರಮಾಥಿಕುಮಾರಂ
ಮೊದಲಾದ ಕುಮಾರರುಂ ಬೆರಸು ಧಾರಿಣೀ ಮಹಾದೇವಿಯುಂ ತಾನುಂ ಗಂಧಸಿಂಧುರಾರೂಢ
ರಾಗಿ ೧೮

ಕರಡೆಯ ಡಕ್ಕೆಯ ಪವಳದ
ಪರಿಡಕ್ಕೆಯಮರ್ದ ದನಿಗಳುಂ ಭೋರ್ಗರೆಯಲ್
ಶರನಿಧಿಗಂಭೀರರವ
ಕ್ಕೊರೆಯಾಗಿರೆ ಬಂದು ದಂತಿಬಳನರನಾಥಂ ೧೯

ಅಲಂಕರಿಸು' ಎಂದು ಹೋಗಲು ಹೇಳಿ ಮಾರನೆ ದಿನ ವನಕ್ರೀಡೆಗೆ ಹೋಗುವ ಯೋಚನೆಯಿಂದ ಆನಂದಭೇರಿಯನ್ನು ಹೊಡೆಯಿಸಿದನು ೧೫. ಹೊಳೆಯುವ ವಿಶಾಲನೇತ್ರಗಳ, ಉದ್ದನೆಯ ಹುಬ್ಬಿನ, ಸುಕ್ಕಿದಂತೆ ಹೊಂದಿಕೊಂಡಿರುವ ತಲೆಗೂದಲಿನ, ಹೊರ ಹೊಮ್ಮಿದ ತೆಳ್ಳನೆಯ ಬಾಸೆಯ, ಹೊನ್ನಿನ ಕಳಶಗಳ ಹಾಗಿದ್ದ ಹೆಮ್ಮೊಲೆಗಳ ಸುಂದರಿಯರು ಒಳ್ಳೆಯ ಉಡುಗೆಗಳನ್ನುಟ್ಟು ಮನ್ಮಥನ ಸೈನ್ಯದಂತೆ ಹೊರಟು ಬಂದರು ೧೬. ಹೊಳಪಿನ ಚೆಲ್ಲೆಗಣ್ಣು, ಕಾಮನ ಹೂಬಾಣಗಳನ್ನು ಹೋಲುವ ಆಭರಣಗಳು, ವಿಟಜನರನ್ನು ಚುಚ್ಚುತ್ತಿರಲು, ಕಡೆಗಣ್ಣನೋಟಗಳಿಂದ ಅಪ್ಪಳಿಸುತ್ತ ಕಾಮಪಾಶಕ್ಕೆ ಎಣೆಯೆನ್ನಿಸಿಕೊಂಡು ವಿಶೇಷವಾಗಿ ಸುತ್ತಿ ವಾರನಾರೀ ಸಮೂಹವು ಅರಮನೆಗೆ ಬಂದು ಸೇರಿತು ೧೭. ಹಾಗೆ, ಅಂತಃಪುರವೂ ನಗರದ ಸ್ತ್ರೀಯರೂ ರಾಜಕುಮಾರರೂ ಪ್ರಮಾಥಿಕುಮಾರನೇ ಮೊದಲಾದ ಯುವರಾಜರೂ ಕೂಡಿ ಧಾರಿಣಿ ಮಹಾದೇವಿಯೂ ತಾನೂ ಮದ್ದಾನೆಯನ್ನೇರಿದವರಾಗಿ ೧೮. ಕರಡೆ ಡಕ್ಕೆ, ಹವಳದ ಪರಿಡಕ್ಕೆಗಳ ಧ್ವನಿಗಳು, ಭೋರ್ಗರೆವ ಶಬ್ದವು ಸಮುದ್ರದ ಗಂಭೀರ ಶಬ್ದವನ್ನು ಹೋಲುತ್ತಿರಲು ದಂತಿಬಲಮಹಾರಾಜನು ಬಂದು ೧೯. ಮಹಾ

ಗದ್ಯ॥ ಮಹೋತ್ಸಾಹದಿಂ ಪೊಱಮಟ್ಟು ಬಂದು ವನಮಂ ಪೊಕ್ಕು ವಸಂತರಾಜನ ಕಟಕ ದಂತಿರ್ದ ವನದ ಚೆಲ್ವುಮಂ ನೋಡಿ ಧಾರಿಣೀ ಮಹಾದೇವಿಗೀಂತೆಂದಂ ೨೦

ಗಾಳಿಯ ತೀಟದಿಂದುಲಿವ ಕೆಂದಳಿರ್ಗಳ್ಪಱೆಯುಂ ಪೊದಳ್ದ ಭೃಂ
ಗಾಳಿನಿಸ್ವನಂ ನಿಮಿರ್ದ ಮಂಗಳಗೀತಮುನಂತೆ ಚೂತಭೂ
ಜಾಳಿಗಳೊಳ್ಪು ಮಂಟಪದ ಭಂಗಿಯುನಾವಗಮೇನೊ ಪೋಲೆ ಸ
ಲ್ಲೀಲೆಯಿನೀ ವನಂ ನೆಱೆಯೆ ಪೋಲ್ತುದು ನೋಡ ವಿವಾಹಗೇಹಮಂ ೨೧

ಗದ್ಯ॥ ಎಂದು ಮುಂದೆ ಕಿಱಿದಂತರಮಂ ಪೋಗಿ ಗಗನತಳದ ನಿರ್ಮಳತೆಯಂ ನೋಡಿ ನಲ್ಲಳ್ಗಿಂತೆಂದಂ ೨೨

ದುರಿತದೊಳೊಂದದಿರ್ಪ ಮತದಂದಮುಮಂ ದುರಿತಾರಿಯಪ್ಪ ಭಾ
ಸುರಜಿನವಾಕ್ಯದಂದಮುಮನೊಳ್ಪಿತುಗೇಳ್ದ ಮಹಾತ್ಮನಪ್ಪವಂ
ಪರಮತಮಂ ಬಿಸುಟ್ಟು ವಿಮಳಾಂತರನಾದವೊಲಭ್ರಮಂ ಸವಿ
ಸ್ತರದೊಳೆ ಬಿಟ್ಟು ನಿರ್ಮಲತೆಯಂ ನೆಱೆ ತಾಳ್ದಿದುದಾ ನಭೋಂಗಣಂ ೨೩

ಗದ್ಯ॥ ಎನುತ್ತುಂ ಬರ್ಪಾತನರಲ್ದತಾವರೆಗೊಳಂಗಳಂ ನೋಡಿ ಮನಃಪ್ರಿಯೆಗಿಂತೆಂದಂ ೨೪

ಉತ್ಸಾಹದಿಂದ ಪ್ರಯಾಣಮಾಡಿ ವನವನ್ನು ಪ್ರವೇಶಿಸಿ ವಸಂತರಾಜನ ಸೈನ್ಯದ ಹಾಗಿದ್ದ ವನದ ಚೆಲುವನ್ನು ನೋಡಿ ಧಾರಿಣೀ ಮಹಾದೇವಿಗೆ ಹೀಗೆಂದನು. ೨೦. "ಗಾಳಿಯ ಚಲನದಿಂದ ಧ್ವನಿಮಾಡುವ ಕೆಂದಳಿರು ತಂಬಟೆಯನ್ನೂ ಹೊರಬಿದ್ದ ದುಂಬಿಗಳ ಸಮೂಹದ ಧ್ವನಿಯು ಮಂಗಳ ಗೀತವನ್ನೂ ಹಾಗೆಯೇ ಮಾವಿನ ಮರಗಳ ಸುಂದರಾಕಾರವು ಮಂಟಪದ ಅಂದವನ್ನೂ ಯಾವಾಗಲೂ ಹೋಲು ತ್ತಿರಲು, ಈವನವು ಮದುವೆಯ ಮನೆಯನ್ನು ಸುಲಭವಾಗಿ ಹೋಲುತ್ತದೆ". ೨೧. ಹೀಗೆ ಹೇಳಿ ಕೊಂಚ ದೂರ ಮುಂದೆ ಹೋಗಿ ಆಕಾಶದ ಶುಭ್ರತೆಯನ್ನು ನೋಡಿ ನಲ್ಲೆಗೆ ಹೀಗೆ ಹೇಳಿದನು. ೨೨. "ಪಾಪಸಂಪರ್ಕವಿಲ್ಲದ ಮತದ ಬಗೆಯನ್ನು ಪಾಪ ವೈರಿಯಾದ ಶ್ರೇಷ್ಠ ಜಿನವಚನದ ರೀತಿಯನ್ನು, ಒಳ್ಳೆಯದನ್ನು ಕೇಳಿದ ಮಹಾತ್ಮನು ಪರಮತವನ್ನು ಬಿಟ್ಟು ಪರಿಶುದ್ಧನಾಗುವಂತೆ ಆಕಾಶವು ಮೋಡಗಳನ್ನು ಹಿಂದೆಯೇ ಬಿಟ್ಟು ನಿರ್ಮಲತೆಯನ್ನು ಹೊಂದಿದೆ." ೨೩. ಹೀಗೆ ಹೇಳುತ್ತ ಬರುತ್ತ ಆತನು ಅರಳಿದ ಕಮಲಗಳ ಕೊಳಗಳನ್ನು ನೋಡಿ ತನ್ನ ಮನದನ್ನೆಗೆ ಹೀಗೆ ಹೇಳಿದನು: ೨೪. "ಈ ಸರೋವರಗಳು ಇಂದ್ರವಂದಿತಪಾದನಾದ ಜಿನೇಶನಲ್ಲಿ ಮನಸ್ಸು

ಸುರಪತಿವಂದಿತಕ್ರಮಪಯೋರುಹನಪ್ಪ ಜಿನೇಶನೊಳ್ ಮನಂ
ಮುರಿಯದೆ ನಿಂದು ಕಾದಿ ಗೆಲಲಾಱದೆ ಕೆಟ್ಟೊಳಸಾರ್ದು ಪೋಗಿ ಬೆ
ಳ್ಪರಳೆಗಳಪ್ಪ ಲೋಕದ ಜಡಾತ್ಮರನಂಜಿಪನೆಂದು ಧಾರಿಣೀ
ವರವಧು ಕಾಮನಂ ನಗುವ ಭಂಗಿಯೊಳಿರ್ದುವು ಪಾರಿಜಾತಕಂ ೨೫

ಗದ್ಯ॥ ಎಂದು ನಗುತ್ತುಂ ಕಿಱಿದಂತರಂಬರಂ ನಡೆದು ಮನೋಜರಾಜನ ಮನೆಯಂತಿರ್ದ ಸಹಕಾರಮಹೀರುಹಂಗಳುಮಂ ಸುಜನರ ಮನದಂತೆ ನೇರಿತ್ತಾಗಿ ನಲಂಬೆತ್ತಿರ್ದೆಳಲತೆಗಳುಮಂ, ಜಿನಧರ್ಮದಂತೆ ನಿರ್ಮಳಮಾಗಿ ಸೊಗಯಿಸುವ ತಿಳಿಗೊಳಂಗಳುಮಂ ಸುಜ್ಞಾನಿಯ ಮನದಂತೆ ಚೆಲ್ವುವೆತ್ತಶೋಕೆಯ ಮರಂಗಳುಮಂ ಸಹಜಕವಿಯ ವಚನದ ರಚನೆಯಂತಿನಿದಪ್ಪ ಮೃಂದವಾಟಿಗಳುಮಂ ಮನೋವಲ್ಲಭೆಗೆ ತೋಱುತ್ತುಂ ಬಂದು ತದನಂತರಂ ಮೊಲ್ಲೆಯ ಸಂಪಗೆಯ ಸುರಹೊನ್ನೆಯ ಕುಸುಮನಿಚಯದಿಂ ವಿನಿರ್ಮಿಸಿದ ಬಾಸಿಗಮುಮಂ ಸುರಗಿಯ ಜಾದಿಯರಲ್ಗಳಿಂ ವಿರಚಿಸಿದ ಕಂಕಣಮುಮಂ ಮನೋರಮೆಗೆ ಮನೋನುರಾಗದಿಂ ತುಡಿಸಿ ತಾನುಂ ತೊಟ್ಟು ನೆಱೆಯೆ ಶೃಂಗಾರಂಗೆಯ್ದು ಪ್ರಮಾಥಿಕುಮಾರಂ ಮೊದಲಾದ ಕುಮಾರರ್ಗಂ ಕೊಟ್ಟು ಪಿರಿದು ಬೇಗಂ ವನಕ್ರೀಡೆಯನಾಡಿ ಬಟಲ್ದು ಬಂದೊಂದು ಮಾವಿನ ಲತಾಮಂಟಪದೊಳಗೆ ತಳಿರ ಪಾಸಿನ ಮೇಲೆ ಪಟ್ಟಿರ್ದುಂ ರಾಜಕುಮಾರರುಂ ವಿಳಾಸಿನೀಜನಮುಂ ಕುಮಾರತಂಡಮುಂ ತಂತಮ್ಮ

ಬಾಗದೆ, ನಿಂತು ಕಾದಿ ಗೆಲ್ಲಲು ಆಗದೆ, ಸೋತು ಹಿಮ್ಮೆಟ್ಟಿ ಹೋಗಿ ಬೆಪ್ಪುಜಿಂಕೆಗಳಂಥ ಜಡಬುದ್ಧಿಯುವರನ್ನು ಅಂಜಿಸುವೆನೆಂದು ಧಾರಿಣಿಯೆಂಬ ವಧು ಕಾಮನನ್ನು ಹಾಸ್ಯ ಮಾಡುತ್ತಿರುವಂತೆ ತೋರುತ್ತವೆ. ೨೫. ಹೀಗೆ ನಗುತ್ತ ಸ್ವಲ್ಪ ದೂರ ನಡೆದು ಮನ್ಮಥರಾಜನ ಮನೆಯ ಹಾಗೆ ಇದ್ದ ಮಾವಿನಮರಗಳನ್ನು, ಸುಜನರ ಮನಸ್ಸಿನಂತೆ ನೇರವಾಗಿ ಸುವಾಸನೆ ಬೀರುತ್ತಿದ್ದ ಎಳೆಯ ಬಳ್ಳಿಗಳನ್ನು, ಜಿನಧರ್ಮದ ಹಾಗೆ ನಿರ್ಮಲವಾದ, ಸೊಗಸಾದ ತಿಳಿಗೊಳಗಳನ್ನೂ ಜ್ಞಾನವಂತನ ಮನಸ್ಸಿನಂತೆ, ಚೆಲುವಿನಿಂದ ಕೂಡಿದ ಅಶೋಕವೃಕ್ಷಗಳನ್ನೂ, ಸಹಜಕವಿಯ ಮಾತಿನ ಜೋಡಣೆಯಂತೆ ಸವಿಯಾದ ಮೃಂದವಾಳಿಗಳನ್ನೂ ತನ್ನ ಹೆಂಡತಿಗೆ ತೋರಿಸುತ್ತ ಬಂದು ಆಮೇಲೆ, ಮೊಲ್ಲೆ, ಸಂಪಗೆ, ಸುರಹೊನ್ನೆಗಳ ಹೂಗಳ ಸಮೂಹದಿಂದ ರಚಿಸಿದ ಬಾಸಿಗವನ್ನೂ, ಸುರಗಿ, ಜಾಜಿಯ ಹೂಗಳಿಂದ ಕಟ್ಟಿದ ಕಂಕಣವನ್ನೂ ತನ್ನ ಪ್ರಿಯಳಿಗೆ ಸಂತೋಷದಿಂದ ತೊಡಿಸಿ, ತಾನೂ ತೊಟ್ಟುಕೊಂಡು, ವಿಶೇಷ ಶೃಂಗಾರ ಮಾಡಿ ಪ್ರಮಾಥಿಕುಮಾರನೇ ಮೊದಲಾದ ಕುಮಾರರಿಗೂ ಕೊಟ್ಟು ಬಹಳ ಹೊತ್ತು ವನವಿಹಾರವನ್ನು ನಡೆಸಿ ಬಳಲಿ ಬಂದು ಒಂದು ಮಾವಿನಮರದ ಬುಡದ ಬಳ್ಳಿಮನೆಯೊಳಗೆ ಚಿಗುರಿನ ಹಾಸಿಗೆಯಮೇಲೆ ಮಲಗಿರಲಾಗಿ ರಾಜಕುಮಾರರೂ ವಿಳಾಸಿನೀಜನರೂ ಕುಮಾರರ ಗುಂಪೂ ತಮತಮಗೆ ಮೆಚ್ಚಿಗೆಯಾದ ಮಾವಿನ ಮರಗಳನ್ನು ಸೇರಿ ವಿನೋದವಾಗ್ನ

ಮನಕ್ಕೆ ಬಂದ ಸಹಕಾರಮಹೀರುಹಂಗಳಂ ಸಾರ್ದು ವಿನೋದದಿಂದಿರ್ದರನ್ನೆಗಂ ಪ್ರಮಾಥಿ ಕುಮಾರನುಂ ಸೌಂದರದೇವಿಯುಮಾನಂದದಿಂದೊಂದು ಕಂಕೆಲ್ಲಿ ಮಹೀಜಾತದ ಕೆಳಗೆ ೨೬

ಅಲರ ಪಾಸಿನ ಮೇಲೆ ರಂಭೆಯುಮಿಂದ್ರನುಂ ರತಿಯುಂ ಮಹೋ
ಜ್ವಳಯಶೋನ್ವಿತನಪ್ಪ ಕಾಮನುಮಿರ್ಪ ಭಂಗಿಯೊಳಿರ್ದು ಕೋ
ಮಲೆಯ ಹಾವವಿಲಾಸ ವಿಭ್ರಮಮಂ ನೃಪಾತ್ಮಜನಾ ಮಹಾ
ಬಲನ ಗಾಡಿಯನೊಪ್ಪುವಾ ಸತಿ ಕೂರ್ತು ನೋಡುತುಮಿರ್ದಿಯಿಂ ೨೭

ಗದ್ಯ॥ ಮೊರೆವಳಿಗಳ ಮೃದುನಿನಾದಕ್ಕಂ ಪಾಡುವ ಗಾಂಧರ್ವರ ಗೇಯದ ನುಣ್ಪುವೆತ್ತ ಕೋಮಲನಿನಾದಕ್ಕಂ ಜನದ ಕಳಕಳಕ್ಕಂ ಕಿವಿ ಸೋಲ್ತು ಪುರುಡಿಂ ಸವತಿವೆಂಡತಿ ಮುನಿದಗ ಲ್ವಂತೆ ನಿದ್ರಾಂಗನೆ ಸೌಂದರ ಮಹಾದೇವಿಯನೊಲ್ದುದು ೨೮

ಅರೆ ಮುಚ್ಚುತ್ತಿರ್ದ ನೇತ್ರದ್ವಯದ ಪೊಳೆಪು ಪಾಠೀನಯುಗ್ಮಂ ಸರೋಜಾ
ಕರದಿಂದು ಮೇಲೆ ಬಂದುಮ್ಮಳಿಸಿ ಪುಗುವವೊಲ್ ನೋಡೆ ಕಣ್ಗೊಪ್ಪೆ ನಿದ್ರಾ
ಭರದಿಂ ಮೆಯ್ಸೋಲೆ ಹಾರಂ ಕಲಕೆ ತೊಲಗೆ ಸುಯ್ಗಂಪಿನೊಳ್ ಕೂಡಿ ಪೊ
ತ್ತಿರೆ ಧಮ್ಮಿಲ್ಲಂಗಳೆತ್ತಂ ಪರಿಯೆ ತೊಲಗೆ ದಿವ್ಯಾಂಬರಂ ದೇಹದಿಂದಂ ೨೯

ಗದ್ಯ॥ ಅಂತು ನಿದ್ರಾಂಗನಾಲಿಂಗಿತೆಯಾಗಿರ್ದ ನಲ್ಲಳಂ ತೆಗೆದು ತಟ್ಕೈಸಿ ಮೆಲ್ಲನೆ ಪ್ರಸೂನ ಶಯ್ಯೆಯೊಳ್ ಪಟ್ಟಿರಿಸಿ ದಿಶಾವಲೋಕನಂಗೆಯ್ಯುತ್ತಿರ್ಪನವೊರ್ವ ಮಹಾ ಸಾಮಂತನ ಮಗಂ

ರಾಗಿದ್ದರು. ಆಗ ಪ್ರಮಾಥಿಕುಮಾರನೂ ಸೌಂದರದೇವಿಯೂ ಆನಂದವಾಗಿ ಒಂದು ಅಶೋಕ ವೃಕ್ಷದ ಕೆಳಗೆ. ೨೬. ಹೂವಿನ ಹಾಸಿನ ಮೇಲೆ ರಂಭೆಯೂ ಇಂದ್ರನೂ ರತಿಯೂ ಮಹಾಯಶೋವಂತನಾದ ಕಾಮನೂ, ಇರುವ ರೀತಿಯಲ್ಲಿದ್ದು ಕೋಮಲೆಯ ಹಾವಭಾವ ವಿಳಾಸವನ್ನು ರಾಜಪುತ್ರನೂ ಆ ಮಹಾಬಲನ ಅಂದವನ್ನು ಆ ಸತಿಯೂ ಪ್ರೀತಿ ಸಂಭ್ರಮಗಳಿಂದ ನೋಡುತ್ತಿದ್ದರು. ೨೭. ಮೊರೆಯುವ ದುಂಬಿಗಳ ಮೃದು ಧ್ವನಿಗೂ ಹಾಡುವ ಗಂಧರ್ವರ ಹಾಡಿನ ಮೃದು ಧ್ವನಿಗೂ ಜನಗಳ ಕಳಕಳ ಶಬ್ದಕ್ಕೂ ಕಿವಿಸೋತು ಹುರುಡಿನಿಂದ, ಸವತಿ ಹೆಂಡತಿಯು ಮುನಿಸಿನಿಂದ ಅಗಲುವ ಹಾಗೆ, ನಿದ್ರಾಂಗನೆಯು ಸೌಂದರಿ ಮಹಾದೇವಿಯನ್ನು ಒಲಿದಳು. ೨೮. ಅರ್ಧಮುಚ್ಚಿಕೊಳ್ಳು ತ್ತಿದ್ದ ಎರಡು ಕಣ್ಣುಗಳ ಹೊಳಪು ಎರಡು ಮೀನುಗಳು ಕಮಲ ಸರೋವರದಿಂದ ಮೇಲೆದ್ದು ಉಮ್ಮಳಿಸಿ ಹೋಗುವ ಹಾಗೆ ನೋಡಲು ಕಣ್ಣಿಗೆ ಒಪ್ಪುತ್ತಿರಲು ನಿದ್ರಾತಿ ಶಯದಿಂದ ಮೈಸೋತು ಹಾರವು ಪಕ್ಕಕ್ಕೆ ಸರಿಯಲು ಉಸಿರು ಸುವಾಸನೆಯೊಡನೆ ಕೂಡಿ ಹೊಮ್ಮುತ್ತಿರಲು, ತಲೆಗೂದಲು ಗಾಳಿಗೆ ಅತ್ತಿತ್ತ ಚಲಿಸಲು, ದಿವ್ಯಾಂಬರವು ದೇಹದಿಂದ ತೊಲಗಿತು. ೨೯. ಹಾಗೆ ನಿದ್ರಾಂಗನೆಯ ಆಲಿಂಗನಕ್ಕೊಳಗಾದ ನಲ್ಲೆಯನ್ನು ತೆಗೆದು ಆಲಿಂಗಿಸಿ ಮೆಲ್ಲನೆ ಹೂವಿನ ಹಾಸಿಗೆಯ ಮೇಲೆ ಮಲಗಿಸಿ ದಿಕ್ಕುಗಳನ್ನು ಗಮನಿಸುತ್ತಿರು

ವಸಂತನೆಂಬಂ ತನ್ನ ಪ್ರಾಣವಲ್ಲಭೆಯಪ್ಪ ವಸಂತತಿಲಕೆಯೆಂಬ ರಾಜಪುತ್ರಿಗೆ ತನ್ನ ಬಿಲ್ಲ ಬಲ್ಮೆಯಂ ತೋಱಲೆಂದು ಸೀಮಾವಿನ ದೊರೆಗಾಯ್ಗಳಂ ಗೊಲೆವೆರಸು ನೆಲಕ್ಕೆ ಬೀೞಲೀಯದೆ ಸಾಯಕಮೆ ಕೈಯೆನೆ ಪಟ್ಟಿರ್ದ ಮಾರ್ಗದೊಳೆ ಪುಂಖಾನುಪುಂಖಮೆಂಬ ಲೀಲೆಯಿಂದೆಚ್ಚು ಮನೋಹರಿಗೆ ಕುಡುತಿರ್ಪುದುಂ ಅದಂ ಪ್ರಮಾಥಿಕುಮಾರಂ ಕಂಡು ೩೦

ಕಡುಜಾಣಂ ಬಿಲ್ಲೊಳೀತಂ ಸ್ಮರನಿಭನದಟಂ ನಲ್ಲಳೆಂದಂದು ನೇ
ರ್ಪಡೆ ನಾನಾ ಭಂಗಿಯಿಂ ತೋಱಿದಪನಿವನ ಕೌಶಲ್ಯಮಂ ಬೇಗದಿಂ ಕಂ
ಡೊಡೆ ನೀನುಂ ತೋಱವೇಟ್ಕೆನ್ನದೆ ಬಱಿದಿರಳೀ ಕಾಂತೆಯುಂ ಚಾಪಮುಂ ತಾಂ
ಪಿಡಿಯಲ್ ಜಾಣಲ್ಲ ಕೇಳಿಲ್ಲೆನಗೆನೆ ಪೇೞ್ತೇಂ ಬಲ್ಲೆನತ್ಯಂತ ದೂರಂ ೩೧

ಅದನೀ ಕಾಮಿನಿ ಕಾಣದೆ
ಕದ (?) ಲೇಸಾಯ್ತೆನ್ನ ಪುಣ್ಯದಿಂದೀ ಪದದೊಳ್
ಮದಗಜಗಮನೆಗೆ ನಿದ್ರೆಯು
ಮುದಯಿಸಿದುದು ಕೆಳದೊಂದತಿಶ್ರಮದಿಂದಂ ೩೨

ಇವಳಱಿಯದ ಕಳೆಗಳ್ ಭೂ
ಭುವನದೊಳಿಲ್ಲೀಕೆ ನಿದ್ರೆಯಿಂದೆರ್ದು ಮಹೀ
ಧವ ನಿನ್ನ ಬಿಲ್ಲ ಬಲ್ಮೆಯ
ನಿವನಂತಿರೆ ತೋಱವೇಟ್ಕುಮೆನ್ನದ ಮುನ್ನಂ ೩೩

ಆಗ ಒಬ್ಬ ಮಹಾ ಸಾಮಂತನ ಮಗ, ವಸಂತನೆಂಬವನು ತನ್ನ ಪ್ರಿಯಳಾದ ವಸಂತತಿಲಕೆಯೆಂಬ ರಾಜಪುತ್ರಿಗೆ ತನ್ನ ಬಿಲ್ಲವಿದ್ಯೆಯ ಪಾಂಡಿತ್ಯವನ್ನು ತೋರಿಸುವುದಕ್ಕಾಗಿ ಪುಂಖಾನುಪುಂಖವೆಂಬ ಬಾಣಪ್ರಯೋಗದಿಂದ ಸೀಮಾವಿನ ದೋರೆ ಹಣ್ಣುಗಳನ್ನು ಗೊನೆಯೊಡನೆ ನೆಲಕ್ಕೆ ಬೀಳಗೊಡದೆ ಬಾಣವೇ ಕೈಯೆಂಬ ಹಾಗೆ ಮಲಗಿದ್ದಂತೆಯೇ ಸುಲಭವಾಗಿ ಹೊಡೆದು ತನ್ನ ಪ್ರಿಯಳಿಗೆ ಕೊಡುತ್ತಿದ್ದನು. ಅದನ್ನು ಪ್ರಮಾಥಿ ಕುಮಾರನು ಕಂಡನು. ೩೦. "ಇವನು ಬಿಲ್ಲಿನಲ್ಲಿ ಬಹಳ ಜಾಣ, ಇವನು ಮನ್ಮಥನನ್ನು ಹೋಲುತ್ತಿದ್ದಾನೆ ; ಶೂರ. ತನ್ನ ಪ್ರಿಯೆ ಹೇಳಿದಂತೆ ತನ್ನ ಕೌಶಲವನ್ನು ನಾನಾ ರೀತಿಯಿಂದ ತೋರಿಸುತ್ತಿದ್ದಾನೆ. ನನ್ನ ಈ ಕಾಂತೆಯು ಇದನ್ನು ಕಂಡರೆ ನಾನೂ ಈ ಜಾಣ್ಮೆಯನ್ನು ತೋರಿಸಬೇಕೆಂದು ಕೇಳದೆ ಬಿಡುವುದಿಲ್ಲ. 'ಬಿಲ್ಲನ್ನು ಹಿಡಿಯಲು ನನಗೆ ತಿಳಿಯದು ; ಜಾಣ್ಮೆಯಿಲ್ಲ' ಎಂದು ನಾನು ಹೇಳಿಕೊಳ್ಳಲಾರೆ. ಅದು ನನಗೆ ಬಹಳ ದೂರ. ೩೧. ಈ ಕಾಮಿನಿಯು ಅದನ್ನು ಕಾಣದುದೇ ಒಳ್ಳೆಯದಾಯಿತು. ಈ ಸಂದರ್ಭದಲ್ಲಿ ನನ್ನ ಪುಣ್ಯದಿಂದ ಈ ಸುಂದರಿಗೆ ನಿದ್ದೆ ಬಂತು. ೩೨. ಇವಳಿಗೆ ತಿಳಿಯದ ಕಲೆಗಳು ಪ್ರಪಂಚದಲ್ಲಿ ಇಲ್ಲ. ಈಕೆ ನಿದ್ದೆಯಿಂದೆದ್ದು "ಅರಸನೇ ನಿನ್ನ ಬಿಲ್ಲ ಜಾಣ್ಮೆಯನ್ನು ಇವನ ಹಾಗೆ ತೋರಿಸಬೇಕು" ಎಂದು ಕೇಳುವ ಮೊದಲೇ ಹೋಗುತ್ತೇನೆ ೩೩.

ಗದ್ಯ॥ ಪೋಪೆನೆಂದೆರ್ದು ಮೆಲ್ಲನೆ ಪೊಱಮಟ್ಟು ತನ್ನ ಪೋಗನೊರ್ವರ್ಗಂ ಪೇೞದೆ ಧನುರ್ವಿದ್ಯೆಯಂ ಕಲ್ವೆನೆಂಬುದ್ಯೋಗಮನೆತ್ತಿಕೊಂಡು ಕತಿಪಯ ಪ್ರಯಾಣಂಗಳಿಂ ಪಾಟಲೀಪುತ್ರಮೆಂಬ ನಗರಕ್ಕೆ ಬಂದು ದ್ರೋಣಾಚಾರ್ಯರಂ ಕಂಡು ೩೪

ಬೆಲೆಯಿಲ್ಲೆನಿಸುವ ರತ್ನಾ
ವಳಿಯಿಂ ಬಿಲ್ಲೋಜನಂಘ್ರಿಯುಗಮಂ ಧಾತ್ರೀ
ತಳನಾಥಸುತಂ ಪೂಜಿಸಿ
ಪೊಡೆಮಟ್ಟು ಬೞಿಕ್ಕೆ ವಿನಯದಿಂದಿರೆ ಭೂಪಂ ೩೫

ದ್ರೋಣಾಚಾರ್ಯರ್ ಮನದೊಳ್
ಜಾಣನಿವಂ ಚಾರುರೂಪನತ್ಯಧಿಕ ಗುಣಂ
ಕ್ಷೋಣೀಶನಾಗವೇೞ್ಕುಂ
ಕ್ಷೋಣಿಯೊಳುೞಿದವರ್ಗೆ ವಿನಯಗುಣಮಿನಿತೊಳವೇ ೩೬

ಆ ವಿನಯಕ್ಕಂ ಬ್ರಾಹ್ಮಣ
ನವನೀನಾಥಂ ಸಮಸ್ತ ಗುಣಯುತನಕ್ಕುಂ
ಪ್ರವರವಣಿಕ್ತನಯಂ ಸಂ
ದ ವಿದಗ್ಧಂ ಜಾಡ್ಯನಕ್ಕುಮೆಂತುಂ ಶೂದ್ರಂ ೩೭

ಎಂದು ಮೆಲ್ಲನೆ ಹೊರಟು ತಾನು ಹೋಗುವುದನ್ನು ಒಬ್ಬರಿಗೂ ಹೇಳದೆ ಧನುರ್ವಿದ್ಯೆಯನ್ನು ಕಲಿಯಬೇಕೆಂಬ ಪ್ರಯತ್ನವನ್ನು ಕೈಕೊಂಡು ಕೆಲವು ಪ್ರಯಾಣಗಳಿಂದ ಪಾಟಲೀಪುತ್ರವೆಂಬ ನಗರಕ್ಕೆ ಹೋಗಿ ಸೇರಿ ದ್ರೋಣಾಚಾರ್ಯರನ್ನು ಕಂಡನು. ೩೪. ಅಮೂಲ್ಯವೆನಿಸುವ ರತ್ನಗಳ ರಾಶಿಯಿಂದ ಆ ಬಿಲ್ಲ ಗುರುವಿನ ಪಾದಯುಗಳವನ್ನು ಆ ರಾಜಪುತ್ರನು ಪೂಜೆ ಮಾಡಿ ನಮಸ್ಕಾರ ಮಾಡಿ ವಿನಯದಿಂದ ನಿಂತನು. ೩೫. ದ್ರೋಣಾಚಾರ್ಯರು ಮನಸ್ಸಿನಲ್ಲಿ "ಇವನು ಜಾಣ ; ಸುಂದರ ರೂಪಿ. ಅತ್ಯಧಿಕ ಗುಣಶಾಲಿಯಾದ ಇವನು ರಾಜನೇ ಆಗಿರಬೇಕು. ಲೋಕದಲ್ಲಿ ಇತರರಿಗೆ ಇಷ್ಟೊಂದು ವಿನಯಗುಣವಿರುವುದೆ ? ೩೬. ಆ ವಿನಯ ಗುಣಕ್ಕೆ ಬ್ರಾಹ್ಮಣ. ಅವನೀನಾಥನಾದವನು ಸಮಸ್ತಗುಣಗಳನ್ನೂ ಹೊಂದಿರುತ್ತಾನೆ. ಶ್ರೇಷ್ಠನಾದ ವರ್ತಕ ತನಯನು ಬಹಳ ಕುಶಲಿಯಾಗಿರುವನು. ಹೇಗೂ ಶೂದ್ರನು ದಡ್ಡನಾಗುತ್ತಾನೆ. ೩೭. ಜಗತ್ತಿನಲ್ಲಿ

ಚಾಗಿ ಗುಣಂ ಧಾರಿಣಿಪತಿ
ಗೋಗಡಿಸದೆ ವೈಶ್ಯಜಂಗೆ ಲುಬ್ಧಗುಣಂ ಕೇ
ಳಾಗಳುಮೆಲೆ ಶಾಠ್ಯ ಗುಣಂ
ಬೇಗಂ ವಿಪ್ರಂಗೆ ಸಹಜಮಕ್ಕುಂ ಜಗದೊಳ್ ೩೮

ಗದ್ಯ॥ ಎಂದು ಪೂರ್ವೋಕ್ತ ನೀತಿಶಾಸ್ತ್ರಮುಂ ನೋಡಿ ತಲೆಯುಂ ತೂಗಿ ಮಹಾವಿನಯ ಪರನೀತಂ ಕ್ಷತ್ರಿಯತನಯನಪ್ಪನೆಂದು ಪ್ರಮಾಥಿ ಕುಮಾರನ ಮೊಗಮುಂ ನೋಡಿ ನೀವೆಲ್ಲಿಂ ಬಂದಿರೆಲ್ಲಿರ್ಪಿರ್ನಿಮ್ಮ ಪೆಸರೇನೆಂಬುದಿಲ್ಲಿಗೇಂ ಕಾರಣಂ ಬಂದಿರೆಂದು ಬೆಸಗೊಳ್ವುದುಂ ಪ್ರಮಾಥಿ ಕುಮಾರನಿಂತೆಂದಂ ೩೯

ದೂರ ದೇಶದೊಳಿರ್ದು ಬಂದೆನಿಳಾಮರಾತ್ಮಜನೆಂ ಸವಿ
ಸ್ತಾರದಿಂ ಜಿನಭಕ್ತನೆಂಬುದು ಪೇಟಲೆನ್ನ ಪೆಸರ್ ಗುಣಾ
ಧಾರ ಪೆಂಪಿನ ಚಾಪವಿದ್ಯೆಯುನರ್ತಿಯಿಂ ಕಲಲೆಂದು ಪಂ
ಕೇರುಹೋದರವಂಶಭಾಸ್ಕರ ಬಂದೆನೆಂದೊಡೆ ಕುಂಭಜಂ ೪೦

ಗದ್ಯ॥ ಪ್ರಮಾಥಿಕುಮಾರನು ನುಡಿವ ಭಾವಕ್ಕಂ ವಿನಯಕ್ಕಂ ಮನದೆಗೊಂಡು ಚಾಪವಿದ್ಯೆಯೊಳೀತನಂ ಜಾಣನಂ ಮಾಡುವೆನೆಂದು ಚಿತ್ತದೊಳ್ ಪೂಣ್ದು ಪ್ರಮಾಥಿ ಕುಮಾರನ

ರಾಜನು ತ್ಯಾಗಶೀಲ, ಗುಣವಂತ. ವೈಶ್ಯಪುತ್ರನಿಗೆ ಯಾವಾಗಲೂ ಲೋಭಗುಣವು ಹೊರಹೊಮ್ಮುವುದಿಲ್ಲವೆ ? ಯಾವಾಗಲೂ ಬ್ರಾಹ್ಮಣನಿಗೆ ಶಾಠ್ಯಗುಣವು ಸಹಜವಾಗುತ್ತದೆ" ೩೮. ಎಂದು ಪೂರ್ವೋಕ್ತವಾದ ನೀತಿಶಾಸ್ತ್ರವನ್ನು ಗಮನಿಸಿ ತಲೆದೂಗಿ ಮೆಚ್ಚಿಕೊಂಡನು. ಈತನು ವಿನಯಪರನಾದ ಕ್ಷತ್ರಿಯ ವಂಶಜಾತನೇ ಹೌದು ಎಂದು ಭಾವಿಸಿ ಪ್ರಮಾಥಿಕುಮಾರನ ಮುಖವನ್ನು ನೋಡಿ "ನೀವು ಎಲ್ಲಿಂದ ಬಂದಿರಿ ? ಎಲ್ಲಿರುವಿರಿ ? ನಿಮ್ಮ ಹೆಸರೇನು ? ಇಲ್ಲಿಗೆ ಏನು ಕಾರಣದಿಂದ ಬಂದಿರಿ ? ಎಲ್ಲೀದ ಬಂದಿರಿ ?" ಎಂದು ಕೇಳಿದರು. ಅದಕ್ಕೆ ಪ್ರಮಾಥಿಕುಮಾರನು ಹೀಗೆ ಉತ್ತರ ಹೇಳಿದನು : ೩೯. ದೂರದೇಶದಿಂದ ಬಂದಿದ್ದೇನೆ. ನಾನು ಬ್ರಾಹ್ಮಣಪುತ್ರ. ಬ್ರಾಹ್ಮಣಕುಲ ಸೂರ್ಯನೆ ! ಜಿನಭಕ್ತನೆಂಬುದು ನನ್ನ ಹೆಸರು. ಗುಣಾಧಾರನೆ ! ಹೆಮ್ಮೆಯ ಬಿಲ್ಲುವಿದ್ಯೆಯನ್ನು ಕಲಿಯಬೇಕೆಂಬ ಆಸೆಯಿಂದ ಬಂದಿದ್ದೇನೆ. ೪೦. ಪ್ರಮಾಥಿ ಕುಮಾರನು ಮಾತನಾಡಿದ ರೀತಿಗೂ ವಿನಯಕ್ಕೂ ಮನಸ್ಸಿನಲ್ಲಿ ಬಹಳವಾಗಿ ಮೆಚ್ಚಿಕೊಂಡ ಆ ಕುಂಭಜ (ದ್ರೋಣ)ನು "ಇವನನ್ನು ಬಿಲ್ಲುವಿದ್ಯೆಯಲ್ಲಿ ಪಂಡಿತನಾಗಿಸುತ್ತೇನೆ" ಎಂದು ಸಂಕಲ್ಪಿಸಿಕೊಂಡು ಪ್ರಮಾಥಿಕುಮಾರನ ಕೈ ಹಿಡಿದುಕೊಂಡು ಒಳಗೆ ಕರೆದು

ಕ್ಕೆಯಂ ಪಿಡಿವೊಡಗೊಂಡು ಪೋಗಿ ಪಂಕ್ತಿಯೊಳುಣಲಿಕ್ಕಿಸಿ ವಸ್ತ್ರ ತಾಂಬೂಲಾದಿಗಳಿಂ ಸಂತೋಷಂಬಡಿಸಿ ಪಥಶ್ರಮಮಂ ಕಳೆದು ಮಱುದಿವಸಮಿಂತೆಂದಂ ೪೧

ಜಿನಭಕ್ತ ಚಾಪವಿದ್ಯೆಯು
ನನುನಯದಿಂದೆನ್ನ ಸಾರೆ ಧಾತ್ರೀ ತಳದೊಳ್
ಮನವೊಲ್ದು ಕಲ್ತನವನಾ
ವನೊ ಭಾವಿಸಿ ನೋಟ್ಪೊಡಣ್ಣ ಕೇಳಿನ್ನೊಂದಂ ೪೨

ಗದ್ಯ॥ ಚಾಪವಿದ್ಯೆಯೊಳ್ ನಿನ್ನಂ ಸವ್ಯಸಾಚಿಗಂ ಭೀಮಂಗಮಧಿಕನೆಂಬಂತು ಮಾಡುವೆ ನಂಜದೆ ಬಿಲ್ಲಂ ಕಲ್ಲೆಂಬುದುಂ ದ್ರೋಣಾಚಾರ್ಯರೊಳಾದ ಕಾರುಣ್ಯಕ್ಕೆ ಮನದೊಳ್ ಮೆಚ್ಚಿ ಪ್ರಮಾಥಿಕುಮಾರಂ ತನ್ನೊಳಿಂತೆಂದಂ ೪೩

ಓಲಗಿಪಂಗೆ ಭೂಭುಜರ ಕೂರ್ಮೆಯುಮುತ್ತಮಮಪ್ಪ ಧರ್ಮಮಂ
ಕೇಳಲು ಬಂದವಂಗೆ ಮುನಿನಾಥರ ಕೂರ್ಮೆಯುಮೆಯ್ದೆ ಶಸ್ತ್ರ ಶಾ
ಸ್ತ್ರಾಳಿಯುಮಂ ಕರಂ ಕಲಿವವಂಗಿರದೋಜರೊಳಾದ ಕೂರ್ಮೆಯುಂ
ಲೀಲೆಯಿನಾದೊಡಾತನೆ ಮಹೋದಯನಾತನೆ ಧನ್ಯನಲ್ಲನೇ ೪೪

ಗದ್ಯ॥ ಎಂದು ನಲಿದು ಬಿಲ್ಲ ಬಲ್ಮೆ ತನಗಾಗಳಾದಂತೆ ಮುಯ್ಯುಮ್ಮದವಾಗಿ ಶುಭದಿನದೊಳ್ ಚಾಪವಿದ್ಯೆಯಂ ಮೊದಲ್ಗೊಂಡು ೪೫

ಕೊಂಡು ಹೋಗಿ ತನ್ನ ಪಂಕ್ತಿಯಲ್ಲಿ ಕೂಡಿಸಿಕೊಂಡು ಊಟ ಮಾಡಿಸಿ ವಸ್ತ್ರ ತಾಂಬೂಲಾದಿಗಳಿಂದ ಸಂತೋಷಪಡಿಸಿ ಮಾರ್ಗಾಯಾಸವನ್ನು ಹೋಗಲಾಡಿಸಿ ಮಾರನೆಯ ದಿನ ಅವನ ಸಂಗಡ ಹೀಗೆ ಹೇಳಿದನು : ೪೧. "ಜಿನಭಕ್ತನೆ ! ಪ್ರೀತಿಯಿಂದ ನನ್ನ ಹತ್ತಿರ ಧನುರ್ವಿದ್ಯೆಯನ್ನು ಈ ಜಗತ್ತಿನಲ್ಲಿ ಚೆನ್ನಾಗಿ ಕಲಿತವನು ಯಾವನೊ ? ವಿಚಾರ ಮಾಡಿ ನೋಡುವುದಾದರೆ, ಅಣ್ಣ! ಇನ್ನೊಂದನ್ನು ಕೇಳು. ೪೨. ಧನುರ್ವಿದ್ಯೆಯಲ್ಲಿ ನಿನ್ನನ್ನು ಸವ್ಯಸಾಚಿಯಾದ ಅರ್ಜುನನಿಗಿಂತ, ಭೀಮನಿಗಿಂತ ಹೆಚ್ಚಿನವನೆನ್ನುವ ಹಾಗೆ ಮಾಡುತ್ತೇನೆ. ಅಂಜಬೇಡ. ಬಿಲ್ಲವಿದ್ಯೆಯನ್ನು ಕಲಿ" ಎಂದು ಹೇಳಲು ದ್ರೋಣಾಚಾರ್ಯರಲ್ಲಿ ಮೂಡಿದ ಕಾರುಣ್ಯ ಭಾವಕ್ಕೆ ಮನಸ್ಸಿನಲ್ಲಿ ಮೆಚ್ಚಿಕೊಂಡು ಪ್ರಮಾಥಿ ಕುಮಾರನು ತನ್ನಲ್ಲಿಯೇ ಹೀಗೆಂದುಕೊಂಡನು. ೪೩. ಓಲೈಸುವವರಿಗೆ ರಾಜರ ಪ್ರೀತಿಯೂ ಧರ್ಮವನ್ನು ಕೇಳಲು ಬಂದವರಿಗೆ ಮುನಿಶ್ರೇಷ್ಠರ ಪ್ರೀತಿಯೂ ವಿಶೇಷವಾಗಿ ಶಸ್ತ್ರಶಾಸ್ತ್ರ ಸಮೂಹಗಳನ್ನು ಚೆನ್ನಾಗಿ ಕಲಿಯುವವನಿಗೆ ತಡವಿಲ್ಲದೆ ಉಪಾಧ್ಯಾಯರ ಪ್ರೀತಿಯೂ ಸುಲಭವಾಗಿ ಲಭಿಸಿದರೆ ಆತನೇ ಮಹಾ ಭಾಗ್ಯಶಾಲಿ, ಆತನೇ ಧನ್ಯ. ಅಲ್ಲವೆ ?' ೪೪. ಎಂದು ಸಂತೋಷಪಟ್ಟು ಬಿಲ್ಲಪಾಂಡಿತ್ಯ ತನಗೆ ಆಗಲೇ ವಶವಾದ ಹಾಗೆ ಮಹತ್ತರವಾದ ಸಂತೋಷವಾಗಿ, ಶುಭದಿನದಂದು ಚಾಪವಿದ್ಯೆಯನ್ನು ಕಲಿಯಲು ಮೊದಲು ಮಾಡಿದ್ದನು. ೪೫. "ಒಂದೇ ಸ್ಥಳದಲ್ಲಿ ಊಟ ಮಾಡಿದ್ದ

ಒಂದೆಡೆಯೊಳುಂಡೆನಪ್ಪೊಡೆ,
ಸಂದೀ ಬಿಲ್ವಿದ್ಯೆಯಾಗಲಱಿಯದು ತಿರಿದುಂ
ಡಂಡಲ್ಲದೆ ಮೆಯ್ಮಣಿಯದು
ಸಂದೆಯಮಿನ್ನೇಕೆ ಬಿಲ್ಲ ನಾಂ ಕಲ್ವಿನೆಗಂ ೪೬

ಗದ್ಯ॥ ತಿರಿದುಂಬೆನೆಂದು ಪೂಣ್ದು ವಿದ್ಯೆ ಕಾರಣವಾಗೆ ಮೆಯ್ಸುಖಮಂ ಬಿಟ್ಟು ದ್ರೋಣಾಚಾರ್ಯರ ಮಾತಂ ಮೀಱಿ ಭಿಕ್ಷಾಹಾರಮನುಂಡು ಪಲವು ದಿವಸಮುಪಾಧ್ಯಾಯರ್ ಪೇೞ್ದಿಱಿಯೊಳ್ ನೆಗೞ್ದು ಚಾಪವಿದ್ಯೆಯೊಳತಿಪ್ರೀತನಾಗಿ ೪೭

ಜಿನಭಕ್ತನ ದೊರೆಯಾರ್ ಮೇ
ದಿನಿಯೊಳ್ ದೊರೆಯಪ್ಪೊಡರ್ಜುನಂ ಕರ್ಣಂ ರಾ
ಮನಮೋಘನಕ್ಕುಮಲ್ಲದೆ
ಜನಪಸುತರ್ ಚಾಪವಿದ್ಯೆಯೊಳ್ ಪೋಲ್ತಪರೆ ೪೮

ಗದ್ಯ॥ ಎಂದು ಪುರಜನಮುಂ ಜಗಜ್ಜನಮುಮೊಂದೆ ಕೊರಲೊಳ್ ಪೊಗೞೆ ಪ್ರಸಿದ್ಧಿಗೆ ಸಂದು ಚಟ್ಟುತ್ತರಮಾಯ್ತೆಂಬ ನಾಣ್ಣುಡಿಯಂ ನನ್ನಿಮಾಡಿ ದ್ರೋಣಾಚಾರ್ಯರ್ಗಂ ಮಿಗಿಲೆನಿಸಿ ಸುಖದಿಂದಿರ್ಪುದುಂ ೪೯

ನಾದರೆ ಶ್ರೇಷ್ಠವಾದ ಈ ಧನುರ್ವಿದ್ಯೆ ಸಾಧ್ಯವಾಗುವುದಿಲ್ಲ. ಭಿಕ್ಷೆಬೇಡಿ ಉಂಡಲ್ಲದೆ ದೇಹ ಮಣಿಯುವುದಿಲ್ಲ. ಇನ್ನು ಸಂದೇಹವೇಕೆ ? ಬಿಲ್ಲುವಿದ್ಯೆಯನ್ನು ನಾನು ಕಲಿಯುವವರೆಗೆ ತಿರಿದು ಉಣ್ಣುತ್ತೇನೆ.” ೪೬. ಎಂದು ಶಪಥ ಮಾಡಿ ವಿದ್ಯೆಯ ಕಾರಣದಿಂದ ದೇಹಸುಖವನ್ನು ಬಿಟ್ಟು ದ್ರೋಣಾಚಾರ್ಯರ ಮಾತನ್ನು ಮೀರಿ ಭಿಕ್ಷೆಯ ಆಹಾರವನ್ನುಂಡು ಹಲವು ದಿವಸ ಉಪಾಧ್ಯಾಯರು ಹೇಳಿದ ಕ್ರಮದಲ್ಲಿ ಆಚರಿಸಿ ಧನುರ್ವಿದ್ಯೆಯಲ್ಲಿ ಅತಿ ಪ್ರೀತನಾದನು. ೪೭. “ಜಿನಭಕ್ತನಿಗೆ ಸರಿ ಯಾರು ? ಈ ಲೋಕದಲ್ಲಿ ಸಮಾನನಾದರೆ ಅರ್ಜುನನಾಗಬಹುದು ; ಕರ್ಣನಾಗಬಹುದು. ರಾಮನು ಖಂಡಿತವಾಗಿಯೂ ಸಮನಾಗುತ್ತಾನೆ. ಅಷ್ಟೇ ಹೊರತು ಉಳಿದ ರಾಜಪುತ್ರರು ಧನುರ್ವಿದ್ಯೆಯಲ್ಲಿ ಇವನಿಗೆ ಸಮಾನರಾಗುತ್ತಾರೆಯೆ ?” ೪೮. ಎಂಬುದಾಗಿ ಪುರಜನರೂ ಜಗತ್ತಿನ ಜನರೂ ಒಂದೇ ಧ್ವನಿಯಿಂದ ಹೊಗಳುತ್ತಿರಲು ಪ್ರಸಿದ್ಧಿಗೆ ಬಂದನು. ಶಿಷ್ಯರೇ ಹೆಚ್ಚಾದರೆಂಬ ಗಾದೆಯನ್ನು ನಿಜಮಾಡಿ ದ್ರೋಣಾಚಾರ್ಯರಿಗಿಂತ ಮಿಗಿಲೆನ್ನಿಸಿಕೊಂಡು ಸುಖವಾಗಿದ್ದನು. ೪೯. “ನನ್ನ ಶಿಷ್ಯರಲ್ಲೆಲ್ಲ ಈತನೇ ಧನುರ್ವಿದ್ಯೆಗೆ ಜಾಣನು, ಅತ್ಯುನ್ನತನು,

ಎನ್ನ ಚಟ್ಟರೊಳಿಲ್ಲವಿಾತನ ಬಿಲ್ಲ ಬಲ್ಮೆಗೆ ಜಾಣನ
ತ್ಯನ್ನತಂ ಕಡು ವೀರನುತ್ತಮ ಜೈನನೂರ್ಜಿತತೇಜನು
ತ್ಪನ್ನ ಬುದ್ಧಿ ವಿವೇಕಿ ಧೈರ್ಯಪರಂ ಜನಸ್ತುತನೆಂದು ತಾಂ
ತನ್ನ ಚಿತ್ತದೊಳಾಗಳುಂ ಕಡುಗೊರ್ವೆಯಿಂ ದ್ವಿಜವಂದಿತಂ ೫೦

ಗದ್ಯ॥ ಪೊಗಟುತ್ತುಮತ್ಯಾದರದಿಂ ಪುತ್ರಸ್ಥಾನೀಯನಂ ಮಾಡಿ ಕೊಂಡಾಡುತ್ತಿರ್ದೊಂದು ದಿವಸಂ ಜಿನಭಕ್ತಕಂ ಮೊದಲಾದ ಶಿಷ್ಯನಿಕಾಯಂಬೆರಸು ಪೊಟಲಿಂ ಪೊಱಮಟ್ಟು ಪೋಗುತ್ತು ಮಿರ್ಪ್ಪುದುಮಾಪುರಮನಾಳ್ವ ಸಿಂಹಸೇನಮಹಾರಾಜನ ಮಗಳಪ್ಪ ಚಂದ್ರಲೇಖೆಯೆಂಬ ಕುಮಾರಿ ಕತಿಪಯ ಪರಿಜನಂಬೆರಸು ಪುರದ ಪೊಱಗಣ ಸಹಸ್ರಕೂಟ ಚೈತ್ಯಾಲಯಮಂ ಬಂದಿಸಿ ಮಗುಟ್ದು ಬರುತ್ತುಮಿರ್ಪ್ಪುದುಂ ೫೧

ಮದದಿಂ ಕಣ್ಗೆಟ್ಟು ಭೋರೆಂದಧಿಕಬಲದಿನೇವಯ್ಸಿ ಕಾಪಿರ್ದರಂ ಕ
ಟ್ಟಿರ್ದ ಶಂಭತ್ಕಂಬಮಂ ಕಿತ್ತೊಡಸಿ ಒಡಿಯುತಂ ಸೀಳುತಂ ಸೊರ್ಕಿನಿಂ ತೂ
ಳ್ದದಯಂ ಮೆಯ್ವೆರ್ಚಿ ಮುಂ ಬಂಧಿಸಿದ ನಿಗಳಮಂ ಚಕ್ಕುನೆಕ್ಕೆಂಬಿನಂ ಕೋ
ಪದಿನಾಗಳ್ ನುಗ್ಗು ನುಗ್ಗಪ್ಪಿನೆಗ ಮುಱಿದು ಕಾಡಾನೆವೊಲ್ ತೀವ್ರದಿಂದಂ ೫೨

ಮಹಾವೀರನು, ಉತ್ತಮಜೈನನು, ಊರ್ಜಿತವಾದ ತೇಜಸ್ಸುಳ್ಳವನು, ಪ್ರತ್ಯುತ್ಪನ್ನ ಬುದ್ಧಿ, ವಿವೇಕಿ, ಧೈರ್ಯಶಾಲಿ, ಜನರ ಸ್ತೋತ್ರಕ್ಕೆ ಪಾತ್ರನಾದವನು"ಎಂದು ದ್ರೋಣಾಚಾರ್ಯನು ತನ್ನ ಮನಸ್ಸಿನಲ್ಲಿ ಯಾವಾಗಲೂ ಬಹಳ ಪ್ರೇಮದಿಂದ ಭಾವಿಸುತ್ತಿದ್ದನು. ೫೦. ಆ ದ್ವಿಜವಂದಿತನಾದ ದ್ರೋಣ ಹೀಗೆ ಬಹಳ ಆದರದಿಂದ ಹೊಗಳುತ್ತ ಜಿನಭಕ್ತನನ್ನು ತನ್ನ ಮಗನ ಸ್ಥಾನದಲ್ಲಿ ಇಟ್ಟುಕೊಂಡು ಕೊಂಡಾಡುತ್ತಿದ್ದನು. ಒಂದು ದಿನ ಜಿನಭಕ್ತನೇ ಮೊದಲಾದ ಶಿಷ್ಯ ಸಮೂಹದೊಡನೆ ಕೂಡಿ ಪಟ್ಟಣದಿಂದ ಹೊರಟು ಹೋಗುತ್ತಿರುವಾಗ ಆ ಪಟ್ಟಣವನ್ನು ಆಳುವ ಸಿಂಹಸೇನ ಮಹಾರಾಜನ ಮಗಳಾದ ಚಂದ್ರಲೇಖೆಯೆಂಬ ಕುಮಾರಿ ಕೆಲವರು ಪರಿಜನರೊಡನೆ ಪಟ್ಟಣದ ಹೊರಗಿನ ಸಹಸ್ರಕೂಟ ಚೈತ್ಯಾಲಯವನ್ನು ವಂದಿಸಿ ಹಿಂದಿರುಗಿ ಬರುತ್ತಿದ್ದಳು. ೫೧. ಆಗ ಮದದಿಂದ ಕಣ್ಣು ಕಾಣದೆ ಭೋರೆಂದು ಗರ್ಜಿಸುತ್ತ ಮಹಾಬಲಯುತವಾದ ಆನೆಯೊಂದು ಕಾವಲಿದ್ದವರನ್ನು ಕಟ್ಟಿದ್ದ ಕಂಬವನ್ನೇ ಕಿತ್ತುಕೊಂಡು ಒಡಿಯುತ್ತ ಸೊಕ್ಕಿನಿಂದ ನುಗ್ಗಿ ತನ್ನನ್ನು ಬಂಧಿಸಿದ್ದ ಸಂಕೋಲೆಯನ್ನು ಚೂರು ಚೂರಾಗುವಂತೆ ಕೋಪದಿಂದ ಮುರಿದು ಕಾಡಾನೆಯ ಹಾಗೆ ರಭಸದಿಂದ ನುಗ್ಗಿ ಬರುತ್ತಿತ್ತು. ೫೨. ಮಾರಿಯ ಮೂರಿಯ ಹಾಗೆ

ಗದ್ಯ॥ ದೂರದಿಂ ಮಾರಿಯ ಮೂರಿಯಂತೆ ಬರ್ಪ ಸೊರ್ಕಿದಾನೆಯಂ ಕಂಡು ವೀರರೊಳಸಾರೆ ಗಟಪರೊಳಸುರ್ಕೆ ಪೊಂಕಮುಳ್ಳವರ್ ಪೊಂಕಂಗೆಟ್ಟೋಡೆ, ಬಿರುದರರಿದೆಂದು ಪೆಱಪಿಂಗೆ, ಬಂಟರ್ ಕೊಂಡಾಡುವರ್ಗೆಂಟೊಳಿರೆ ಬೆಸದವರ್ ಬೆಸದವರಂತೆ ಸಿವಿಗೆಯನಿರಿಸಿಪೋಗೆ. ಚಂದ್ರಲೇಖೆಯೊರ್ವಳೆ ೫೩

ಪರಮಜಿನೇಂದ್ರಪಾದಪದುಮದ್ವಯಮಂ ಹೃದಯಾಂಬುಜಾತದೊಳ್
ಧರಿಯಿಸಿ ಚಿತ್ತದೊಳ್ ಕದಡದುಜ್ಜ್ವಳಚಿತ್ತದಿನೀಗಜೇಂದ್ರ ನಿ
ಷ್ಠುರದುಪಸರ್ಗಮೊರ್ಮೊದಲೆ ಪಿಂಗುವಿನಂ ತನುವೆನ್ನದಲ್ಲಮೆಂ
ದರಸನ ಪೆರ್ಮೆಯಂ ತೊಱೆದು ಪಂಚಪದಂಗಳನೋದುತಿರ್ಪಿನಂ ೫೪

ಗದ್ಯ॥ ದ್ರೋಣಾಚಾರ್ಯರ ಶಿಷ್ಯರೆಲ್ಲಂ ಬೆತ್ತಿಬೆಟ್ಟಾಗೆ ಗೂಡುಗೊಂಡು ನೋಡುತ್ತಿರ್ಪುದುಂ ಜಿನಭಕ್ತಂ ಚಂದ್ರಲೇಖೆಯ ಮನದ ಧೈರ್ಯಮುಮಂ ಧರ್ಮದೊಳಾದ ನಂಬುಗೆಯುಮಂ ತಳರದೆ ನಿಂದ ಪರಿಚ್ಛೇದಮುಮಂ ಕಂಡು ಮೆಚ್ಚಿ ಸಮಯವಾತ್ಸಲ್ಯಮಂ ಮೆಱೆವೆನೆಂದು ಕೋಪಾಟೋಪದಿಂ ಕುಮಾರಿಗಾಗಿ ಪರಿತರ್ಪ ಗಂಧಸಿಂಧುರಕ್ಕಡ್ಡಂ ಬಂದು ನಿಂದು ೫೫

ತುಂಗಮೆನಿಸಿರ್ದ ಪಂಚಪ
ದಂಗಳನೋದುತ್ತುಮಧಿಕಗುಣಿ ಕರಿಪತಿಯಂ
ಭಂಗಂಮಾಡಿ ಗಜೇಂದ್ರದ
ಬೆಂಗೇಱಿದನಯ್ಯ ಭಾಪು ಜೀಯೆನೆ ಪಲರುಂ ೫೬

ಕೊಬ್ಬಿನಿಂದ ನುಗ್ಗಿ ಬರುತ್ತಿರುವ ಮದ್ದಾನೆಯನ್ನು ಕಂಡು ವೀರರು ಒಳಕ್ಕೆ ಸೇರಿಕೊಂಡರು. ಹರಟೆ ಹೊಡೆಯುವವರು ಅಂಜಿ ಸುಮ್ಮನಾದರು. ಬಿಂಕವಿದ್ದವರು ಗರ್ವಭಂಗವಾಗಿ ಓಡಿದರು. ಬಿರುದಿನ ಭಟರು ಇದು ಅಸಾಧ್ಯವೆಂದು ಹಿಮ್ಮೆಟ್ಟಿದರು. ಬಂಟರು ತಮ್ಮನ್ನು ಹೊಗಳುವವರು ದೂರದಲ್ಲಿರಲು, ಕೆಲಸಗಾರರು ಬೆಸೆದವರ ಹಾಗೆ ನಿಶ್ಚೇಷ್ಟರಾಗಿ ಪಲ್ಲಕ್ಕಿಯನ್ನು ಇಳಿಸಿ ಹೋದರು. ಆಗ ಚಂದ್ರಲೇಖೆಯೊಬ್ಬಳೇ ಉಳಿದಳು. ೫೩. ಅವಳು ಪರಮಜಿನೇಂದ್ರಪಾದಕಮಲಗಳೆರಡನ್ನೂ ಹೃದಯಕಮಲದಲ್ಲಿ ಧರಿಸಿ, ಚಿತ್ತಶಾಂತಿಯನ್ನು ಕಳೆದುಕೊಳ್ಳದೆ, ಈ ದೊಡ್ಡ ಆನೆಯ ಕ್ರೂರವಾದ ಉಪಸರ್ಗವು ಕಳೆಯುವ ತನಕ ದೇಹ ತನ್ನದಲ್ಲವೆಂದು ರಾಜತ್ವದ ಹೆಮ್ಮೆಯನ್ನು ಬಿಟ್ಟು ಪಂಚಪದಗಳನ್ನು ಹೇಳಿಕೊಳ್ಳುತ್ತಿದ್ದಳು. ೫೪. ದ್ರೋಣಾಚಾರ್ಯರ ಶಿಷ್ಯರೆಲ್ಲ ಬೆತ್ತ ಬೆಟ್ಟವಾದಂತೆ ಗುಂಪುಕೂಡಿಕೊಂಡು ನೋಡುತ್ತಿದ್ದರು. ಜಿನಭಕ್ತನು ಚಂದ್ರಲೇಖೆಯ ಮನಸ್ಸಿನ ಧೈರ್ಯವನ್ನೂ ಧರ್ಮದಲ್ಲಿನ ನಂಬಿಕೆಯನ್ನೂ ಚಲಿಸದೆ ನಿಂತ ನಿರ್ಣಯವನ್ನೂ ಮೆಚ್ಚಿ ಧರ್ಮಪ್ರೇಮವನ್ನು ಮೆರೆಸುವೆನೆಂದು ಆ ಕುಮಾರಿಗೋಸ್ಕರ ಆ ಮದ್ದಾನೆಗೆ ಕೋಪಾಟೋಪದಿಂದ ಅಡ್ಡವಾಗಿ ನಿಂತನು. ೫೫. ಶ್ರೇಷ್ಠವಾದ ಪಂಚಪದಗಳನ್ನು ಹೇಳುತ್ತ. ಆ ಮಹಾಗುಣವಂತನು ಆ ಆನೆಯ ಬೆನ್ನೇರಿದನು.

ಗದ್ಯ॥ ಅಂತು ವಿದ್ಯಾಧರಕರಣದಿಂದಾನೆಯೇಱಿ ಮಸೆದಸಿಯುಂ ಕಟ್ಟಿದ ನೇಣುಂ ಕೂರಂಕುಶಮಾಗೆ ಸಿಂಹಮೆನಿಸಿದಾನೆಯಂ ಗ್ರಾಮಸಿಂಹಮೆನಿಸಿ ನೆರೆದ ನೆರವಿ ಕಯ್ಮುಗಿಯೆ ಕುಮಾರಿಯಲ್ಲಿಗೆ ಬಂದು ೫೭

ಜಿನಧರ್ಮೋತ್ಪಳಚಂದ್ರಿಕೆ
ನಿನಗಾರ್ದೊರೆ ಶುದ್ಧಮಪ್ಪ ದರ್ಶನದೊಳ್ ಮೇ
ದಿನಿಪೂಜ್ಯೆ ನೀನೆ ಪಿರಿಯಳ್
ಜನವಂದಿತೆ ಕೇಳ ನೂಱುಸೂೞ್ ಬಣ್ಣಿಪೊಡಂ ೫೮

ಗದ್ಯ॥ ಮನದೊಳಾದಾದರಭಾವದಿಂ ಪೊಗೞ್ದುಪಸರ್ಗಂ ಪಿಂಗಿತ್ತು ಕಯ್ಯನೆತ್ತಿಕೊಳ್ಳಿಮೆಂಬುದುಂ ಚಂದ್ರಲೇಖೆ ಕಯ್ಯನೆತ್ತಿಕೊಂಡು ಜಿನಭಕ್ತನಂ ನೋಡಿ ಮಹಾತ್ಮನೆಂದಱಿದು ಮನದೊಳೆ ಪೊಗೞ್ದು ಇನ್ನೆನಗೀಭವದೊಳೀತನೆ ಗಂಡನುೞಿದ ರಾಜಕುಮಾರರ್ ಮೊಱೆಯಲ್ಲರೆಂದು ಪೂಣ್ದು ರಾಜಮಂದಿರಕ್ಕೆ ಪೋದಳಿತ್ತಲ್ ಪ್ರಮಾಥಿಕುಮಾರನಾನೆಯುಂ ಪೂರ್ವಸ್ಥಾನಕ್ಕೊಯ್ದು ಕಟ್ಟಿ ಮಗುೞ್ದು ಬಂದು ದ್ರೋಣಾಚಾರ್ಯರೊಳ್ ಕೂಡಿರ್ದನಿರ್ಪುದುಂ ೫೯

ಪುರಮುಂ ಭೂಮೀಶನುಂ ದ್ರೋಣನುಮತಿಶಯದಿಂದೀತನಂ ಮೆಚ್ಚಿ ಚಾಮೀ
ಕರಶೈಲೇಂದ್ರಕ್ಷಮಂ ವಾಸವವಿಭವನನಂಗಾಭನುದ್ಯದ್ಗುಣಂ ಖೇ
ಚರಶೌರ್ಯಂ ಚಾಪವಿದ್ಯಾಪರಿಣತನದಟಂ ವೀರನುರ್ವೀಸ್ತುತಂ ಭಾ
ಸ್ಕರತೇಜಂ ಸೌಮ್ಯನೆಂದೆಂದಣಮುಱಿಯದಲೋರಂತೆ ಕೊಂಡಾಡುತಿರ್ಪರ್ ೬೦

ಹಲವರು ಭಾಪು, ಭೇಷ್ ಎಂದರು. ೫೬. ಹಾಗೆ ವಿದ್ಯಾಧರಕರಣದಿಂದ ಆನೆಯಮೇಲೆ ಹತ್ತಿ ಮಸೆದ ಕತ್ತಿಯೂ ಕಟ್ಟಿದ ಹಗ್ಗವೂ ಹರಿತವಾದ ಅಂಕುಶವಾಗಲು ಸಿಂಗವೆನ್ನಿಸಿದ ಆ ಆನೆಯನ್ನು ಗ್ರಾಮಸಿಂಹವೆಂದೆನ್ನಿಸಿ ಸೇರಿದ್ದ ಸಮೂಹವೆಲ್ಲ ಕೈಮುಗಿಯಲು ಆ ಕುಮಾರಿಯ ಬಳಿಗೆ ಹೋದನು ೫೭. "ಜಿನಧರ್ಮವೆಂಬ ನೈದಿಲೆಗೆ ಬೆಳದಿಂಗಳಿನಂಥವಳೆ, ನಿನಗೆ ಯಾರು ಸರಿ ? ಶುದ್ಧ ದರ್ಶನದಲ್ಲಿ ನೀನೇ ಹಿರಿಯಳು, ಲೋಕಪೂಜ್ಯೆ ! ನೂರು ಸಲ ಹೇಳಿದರೂ ಇದು ಸರಿ" ೫೮. ಎಂದು ತನ್ನ ಮನಸ್ಸಿನಲ್ಲಿ ಆದ ಆದರ ಭಾವದಿಂದ ಹೊಗಳಿ "ಉಪಸರ್ಗ ಕಳೆಯಿತು ಕೈಯನ್ನು ಎತ್ತಿಕೊಳ್ಳಿ" ಎಂದು ಹೇಳಲು ಚಂದ್ರಲೇಖೆ ಕೈಯೆತ್ತಿಕೊಂಡು ಜಿನಭಕ್ತನನ್ನು ನೋಡಿ ಅವನು ಮಹಾತ್ಮನೆಂದು ತಿಳಿದು ಮನಸ್ಸಿನಲ್ಲಿಯೇ ಹೊಗಳಿ "ಇನ್ನು ನನಗೆ ಈ ಜನ್ಮದಲ್ಲಿ ಈತನೇ ಗಂಡ ; ಉಳಿದ ರಾಜಕುಮಾರರು ಸರಿಯಲ್ಲ" ಎಂದು ಪ್ರತಿಜ್ಞೆ ಮಾಡಿಕೊಂಡು ಅರಮನೆಗೆ ಹೋದಳು. ಇತ್ತ ಪ್ರಮಾಥಿಕುಮಾರನು ಆನೆಯನ್ನು ಮೊದಲಿನ ಜಾಗಕ್ಕೆ ಕರೆದುಕೊಂಡು ಹೋಗಿ ಕಟ್ಟಿಹಾಕಿ ಪುನಃ ಬಂದು ದ್ರೋಣಾಚಾರ್ಯರಲ್ಲಿ ಸೇರಿಕೊಂಡಿದ್ದನು. ೫೯. ಪಟ್ಟಣವೂ ರಾಜನೂ ದ್ರೋಣನೂ ಈತನನ್ನು ಬಹಳವಾಗಿ ಮೆಚ್ಚಿ ಬಂಗಾರದ ಬೆಟ್ಟ (ಮೇರು) ದಂಥ ಧೀರನಾದ ಇಂದ್ರವೈಭವವುಳ್ಳ ಅನಂಗರೂಪನೂ ಗುಣಗಂಭೀರನೂ, ಖೇಚರನಂಥ ಪರಾಕ್ರಮವುಳ್ಳವನೂ ಧನುರ್ವಿದ್ಯಾಪಂಡಿತನೂ ಶೂರ ವೀರನೂ

ಗದ್ಯ॥ ಎಂದು ಛಾತ್ರರೆಲ್ಲರುಂ ನೆರೆದು ಗುಜುಗುಜುಗೊಂಡು ಪಲ್ಮೊರೆಯುತ್ತುಮಿರ್ಪುದು ಮವರ ದುರ್ಜನತ್ವಮಂ ದ್ರೋಣಾಚಾರ್ಯರ್ ಮಾರ್ಕೊಂಡು ತಮ್ಮೊಳಿಂತೆಂದರ್ ೬೧

ಕವಿನಾಥರ್ ಕವಿಪುಂಗವರ್ಗೆ ಬಿರುದರ್ ಬೀರರ್ಗೆ ಭೂಪಾಲಕರ್
ಭುವನೇಶರ್ಗೆವಿಟರ್ ವಿಟರ್ಗೆ ಚತುರರ್ ಚಾತುರ್ಯರಪ್ಪರ್ಗೆ ವೈ
ಶ್ಯವರರ್ ವೈಶ್ಯವರರ್ಗೆ ಬಂಟರದಟಂ ಬಂಟರ್ಗೆ ಪುಣ್ಯಾಂಗನಾ
ನಿವಹಂ ಪುಣ್ಯವಧೂಜನಕ್ಕೆ ಸಹಜಂ ಕಾಯ್ವರ್ ಮಹೀಚಕ್ರದೊಳ್ ೬೨

ಗದ್ಯ॥ ಇವರ ಮುಳಿಸಿದಾಶ್ಚರ್ಯಮಲ್ಲದೆಂದು ಬೆರಲಂಮಿಡಿದು ಸಿಂಗದ ದನಿಯಂ ಕೇಳದನ್ನೆಗಂ ಗಜಂಗಳ್ ಪ್ರತಾಪಂಗೆಯ್ಗುಂ ಸಿಂಗದ ದನಿಯುಂ ಕೇಳ್ದೊಡೆ ಭಯಂಗೆಟ್ಟೋಡುಗುಮಂತೆ ಜಿನಭಕ್ತನ ಧನುರ್ವಿದ್ಯೆಯಂ ಕಾಣದನ್ನೆವರೆಗಮೀ ಲಲಿತಘಟೆ ತಾನೆಂದುದಂ ಮೆಚ್ಚಿ ಧನುರ್ವಿದ್ಯೆಯೊಳಾವೆ ಪ್ರವೀಣರೆಂದಿರ್ಪರಾತನ ಶರಾಸನದೊಳಾದ ಪರಿಣತೆಯಂ ಕಂಡರಪ್ಪೊಡೆ ತಂತಮ್ಮ ದರ್ಪವನುಡುಗುವರೆಂದೀ ಕಾರಣದಿಂ ೬೩

ಜಿನಭಕ್ತಂ ಚಾಪವಿದ್ಯಾಪರಿಣತನಧಿಕಂ ವೀರನತ್ಯಂತಧೀರಂ
ಮನುಮಾರ್ಗಂ ಜೀಯಭಾಪೆಂದಿವರ ಮನದ ಮಾತ್ಸರ್ಯಮುಂ ದರ್ಪಮುಂ ಭೋಂ
ಕನೆ ಪೋಪಂತಾಗೆ ನಾನಾ ಸ್ಥವನದಿಳಿ ಕೈವಾರದಿಂ ಕೂರ್ಮೆಯಿಂ ನೆ
ಟ್ಟನೆ ಬಣ್ಣಿಪ್ಪಂತೆ. ಪೊಟ್ಟಿಂ ಸೆಡೆದು ತಡೆವುದೇಕೆಂದುಪಾಧ್ಯಾಯನಾಗಳ್ ೬೪

ಲೋಕಸ್ತುತನೂ ಸೂರ್ಯತೇಜವಿದ್ದರೂ ಸೌಮ್ಯನೂ ಆದವನೆಂದು ಆತನನ್ನು ಹೆಚ್ಚಾಗಿ ಕೊಂಡಾಡುತ್ತಿದ್ದರು. ೬೦. ಹೀಗೆ ಶಿಷ್ಯರೆಲ್ಲ ಸೇರಿ ಗುಜುಗುಂಪಲುಮಾಡಿ ಹಲ್ಲು ಕಡಿಯುತ್ತ ಇರಲು ಅವರ ದುರ್ಜನತ್ವವನ್ನು ದ್ರೋಣಾಚಾರ್ಯರು ಪ್ರತಿಭಟಿಸಿ ತಮ್ಮಲ್ಲಿಯೇ ಹೀಗೆಂದುಕೊಂಡರು, ೬೧. ಕವಿಶ್ರೇಷ್ಠರು ಕವಿವರೇಣ್ಯರಿಗೆ, ಬಿರುದರು ಇತರ ಪ್ರತಿಷ್ಠಿತರಿಗೆ, ರಾಜರು ರಾಜರಿಗೆ, ವಿಟರು ವಿಟರಿಗೆ, ಚತುರರು ಚಾತುರ್ಯವುಳ್ಳ ಬೇರೆಯವರಿಗೆ, ವೈಶ್ಯರು ವೈಶ್ಯಶ್ರೇಷ್ಠರಿಗೆ, ಶೂರರು ಶೌರ್ಯದ ಬಂಟರಿಗೆ, ಪುಣ್ಯಾಂಗನಾ ಸಮೂಹವು ಪುಣ್ಯವಧೂ ಜನರಿಗೆ, ಅಸೂಯೆಪಟ್ಟು ದ್ವೇಷಮಾಡುವುದು ಈ ಲೋಕದಲ್ಲಿ ಸಹಜವಾಗಿದೆ. ೬೨. ಇವರ ಈ ಕೋಪ ಆಶ್ಚರ್ಯವಲ್ಲವೆಂದು ಬೆರಳು ಮಿಡಿದು, ಸಿಂಹದ ಧ್ವನಿಯನ್ನು ಕೇಳದಿರುವವರೆಗೆ ಆನೆಗಳು ಪ್ರತಾಪಮಾಡುವುವು. ಸಿಂಹಧ್ವನಿಯನ್ನು ಕೇಳಿದರೆ ಭಯದಿಂದ ದಿಕ್ಕೆಟ್ಟು ಓಡುವುವು. ಹಾಗೆಯೇ ಜಿನಭಕ್ತನ ಧನುರ್ವಿದ್ಯೆಯನ್ನು ಕಾಣದೆ ಇರುವತನಕ ಈ ಲಲಿತಾಕಾರರು ತಾನೆಂದದ್ದನ್ನು ಮೆಚ್ಚಿ ಧನುರ್ವಿದ್ಯೆಯಲ್ಲಿ ತಾವೇ ಪ್ರವೀಣರೆಂದು ಇರುವರು, ಆತನು ಬಿಲ್ಲವಿದ್ಯೆಯಲ್ಲಿ ಗಳಿಸಿದ ಪಾಂಡಿತ್ಯವನ್ನು ಕಂಡದಾದರೆ ತಮ್ಮ ತಮ್ಮ ಅಹಂಕಾರವನ್ನು ಬಿಡುವರು. ೬೩. ಜಿನಭಕ್ತನು ಧನುರ್ವಿದ್ಯೆಯಲ್ಲಿ ಪಂಡಿತ, ಮಹಾವೀರ, ಅತ್ಯಂತ ಧೈರ್ಯಶಾಲಿ, ಮನುಮಾರ್ಗವಲಂಬಿ. ಭಾಪು ಎಂದು ಮೆಚ್ಚಿ ಇವರ ಹೊಟ್ಟೆ ಕಿಚ್ಚನ್ನೂ ಅಹಂಕಾರವನ್ನೂ ಬೇಗನೆ ಕಳೆಯುವಂತೆ ಮಾಡುತ್ತೇನೆ. ಅಂಜಿ ಹಿಂತೆಗೆಯುವುದೇಕೆಂದು ಯೋಚಿಸಿ ಆ

ಜಿನಭಕ್ತನುಮಂ ಸಮಸ್ತ ಶಿಷ್ಯರುಮಂ ಕರೆದು ನಿಮ್ಮ ನಿಮ್ಮ ಧನುರ್ವಿದ್ಯೆಯೊಳಾದ ಕೌಶಲ್ಯಮನೆನಗೆ ತೋಱಲ್ವೇಳ್ಪುದೆಂದು ಪೇಳ್ವುದುಮಂತೆಗೆಯ್ವೆಮೆಂದು ಚಾಪೋಪಾಧ್ಯಾಯರ್ಗೆ ಪೊಡೆವಟ್ಟು, ಮಱುದಿವಸಮೊರ್ವರೊರ್ವರ್ಗೆ ಮಿಗಿಲಾಗಿ ನೆಱೆಯೆ ಶೃಂಗಾರಂಗೆಯ್ದು ದ್ರೋಣಾಚಾರ್ಯರಲ್ಲಿಗೆ ಬರ್ಪುದುಂ ಶಿಷ್ಯನಿಕಾಯಂ ಬೆರಸು ಪುರದ ಬಹಿರುದ್ಯಾನಕ್ಕೆ ಬಂದು

ಇನಿಬರುಮೋರಂತಿಕೆ ತೆಂ ೬೫
ಗಿನಕಾಯ್ಗಳನಿಳೆಗೆ ಬೀೞಲೀಯದೆ ಧರೆ ಜೀ
ಯೆನೆ ಬಾಣನಿಕರದಿಂ ಮೆ
ಲ್ಲನೆ ತರವೇೞ್ಕೆಂದು ಬೆಸಸೆ ಗುರುವಿನ ಮಾತಂ ೬೬

ಮಾಱದೆ ಕುಮಾರರನಿಬರು
ಮಾಱಿಂದಿಕ್ಕೆಂದು ಸೆಡೆದು ನಿಲ್ಲದೆ ಜಾಣಂ
ತೋಱುವೆವಧಿಕರ ಪಟ್ಟಂ
ಪಾಱಿಸುವೆವಮೋಘಮೆಂದು ನಲಿನಲಿದಾಗಳ್ ೬೭

ಕರಮೂದರದಿಂ ದ್ರೋ
ಣರ ಪಾದಕ್ಕೆಱಗಿ ಕೊಂಡು ಬಿಲ್ಗಳನವರು
ರ್ವರೆ ಪೊಗೞೆ ನೆರವಿ ನೋಡು
ತ್ತಿರೆ ತೆಂಗಿನಕಾಯ್ಗಳಂ ಮನೋಹರರೂಪರ್ ೬೮

ಉಪಾಧ್ಯಾಯನು ಆಗ ೬೪. ಜಿನಭಕ್ತನನ್ನೂ ಎಲ್ಲ ಶಿಷ್ಯರನ್ನೂ ಕರೆದು ನಿಮಗೆ ಬಿಲ್ಲ ವಿದ್ಯೆಯಲ್ಲಿ ಆದ ಕೌಶಲವನ್ನು ನನಗೆ ತೋರಬೇಕೆಂದು ಹೇಳಿದನು. ಹಾಗೆಯೇ ಮಾಡುವೆವೆಂದು ಬಿಲ್ಲ ಗುರುವಿಗೆ ನಮಸ್ಕಾರ ಮಾಡಿ ಮರುದಿನ ಒಬ್ಬರಿಗಿಂತ ಒಬ್ಬರು ಹೆಚ್ಚಾಗಿ ಶೃಂಗಾರ ಮಾಡಿಕೊಂಡು ದ್ರೋಣಾಚಾರ್ಯರ ಬಳಿಗೆ ಬಂದರು. ಆಗ ಶಿಷ್ಯ ಸಮೂಹದೊಡನೆ ಪುರದ ಹೊರಗಣ ಉದ್ಯಾನಕ್ಕೆ ಬಂದು ೬೫. ನೀವಿಷ್ಟು ಜನವೂ ಗಿಡಗಳಲ್ಲಿನ ತೆಂಗಿನಕಾಯಿಗಳನ್ನು ನೆಲಕ್ಕೆ ಬೀಳಗೊಡದೆ ಲೋಕ ಸೈಯೆನ್ನುವಂತೆ ನಿಮ್ಮ ಬಾಣಸಮೂಹದಿಂದ ಮೆಲ್ಲನೆ ತರಿಸಬೇಕೆಂದು ಅಪ್ಪಣೆ ಕೊಟ್ಟನು. ೬೬. ಅವರು ಗುರುವಿನ ಮಾತನ್ನು ವಿಚಾರದೆ 'ಶಕ್ತನಾಗು, ಇಕ್ಕು', ಎಂದು ಅಹಂಕಾರದಿಂದ (ಕೂಗಿ) ನಿಲ್ಲದೆ ಜಾಣತನವನ್ನು ತಪ್ಪದೆ ತೋರಿಸುವೆವೆಂದು ಶ್ರೇಷ್ಠರ ಪಾಳೆಯವನ್ನು ಹಾರಿಸುವೆವೆಂದು, ಕುಣಿದಾಡಿದರು. ೬೭. ಆಗ ಬಹಳ ಭಕ್ತಿಯಿಂದ ದ್ರೋಣರ ಕಾಲಿಗೆ ನಮಸ್ಕಾರ ಮಾಡಿ ಬಿಲ್ಲುಗಳನ್ನು ತೆಗೆದುಕೊಂಡು ಅವರು ಪ್ರಪಂಚವೇ ಹೊಗಳುವ ಹಾಗೆ, ಗುಂಪೆಲ್ಲ ನೋಡುತ್ತಿರಲು ಆ ಸುಂದರರೂಪಿಗಳು ತೆಂಗಿನಕಾಯಿಗಳನ್ನು ಹಲವು ಸಲ

ಗದ್ಯ॥ ಪಲವು ಸೂಟಿಚ್ಚು ದುಃಖಂಬಟ್ಟುಮೆಂತುಂ ನೆಲಕ್ಕೆ ಶರನಿಚಯದಿಂ ದ್ರೋಣರಲ್ಲಿಗೆ ತರಲಾಱದೆ ಬಟ್ಟೆವೋಪ ಕುತ್ತಂಗೊಳಿಯಂತೆ ಸೇದೆಗೆಟ್ಟು, ಜವ್ವನೆಗಾಳ್ದನಾದ ಮುದುಪನಂತೆ ಪಲ್ಗಿಡಿಗಿಱಿದು ಬಿರುದರೊಳ್ ತೊಡರ್ದ ಪಂದೆಯಂತೆ ಕುಂದಿ, ಸಂತತಿಯಿಲ್ಲದ ದ್ರವ್ಯಪತಿಯಂತೆ ಮಱುಗಿ, ನಾಂದೆರೆಯ ಪೆಟ್ಟೆಯಂತೆ ಕರಗಿ, ರಾಹುವಿಂ ಪಿಡಿವೆತ್ತ ಚಂದ್ರನಂತೆ ಮನದೊಳ್ ಕಂದಿ, ಪಲರ್ಗೆ ಲಜ್ಜಿಸಿ ದ್ರೋಣಾಚಾರ್ಯರ ಮೊಗಮಂ ನೋಡಲಱಿಯದೆ ತೋರತೆನೆಯಂತೆ ತಲೆಯಂ ಬಾಗಿರ್ಪುದುಂ ದ್ರೋಣಾಚಾರ್ಯಂ ತನ್ನೊಳಿಂತೆಂದಂ ೬೯

ಕುನರರ್ ಸತ್ಪುರುಷರ್ಗೆ ಕುತ್ಸಿತಗುಣರ್ ಮಾನ್ಯರ್ಗೆ ದುಷ್ಪಾಪಿಗಳ್
ಜಿನಧರ್ಮೋದಯರಪ್ಪವರ್ಗೆ ಬಡವರ್ ಧನ್ಯರ್ಗೆ ಹೀನರ್ ಜಗ
ಜ್ಜನವಂದ್ಯರ್ಗೆ ಕುರೂಪಿಗಳ್ ಬಿಡದೆ ಸೌರೂಪ್ಯರ್ಗೆ ದುರ್ಭಾವದಿಂ
ಮುನಿದುಂ ಕಾಯ್ದುಮಟಲ್ದುಮೇವರವರಿಂ ತಾನಪ್ಪುದೇಂ ಪೋಪುದೇ ೭೦

ಗದ್ಯ॥ ಎಂದು ಮನದೊಳ್ ನಕ್ಕು ಜಿನಭಕ್ತನಂ ಕರೆದು ನೀಂ ನಾಳಿಕೇರ ಫಲಂಗಳನಿಲ್ಲಿಗೆ ನೆಲನಂ ಮುಟ್ಟಲೀಯದಂತರಿಕ್ಷದೊಳ್ ತಡೆಯದೆ ತರ್ಪುದೆಂಬುದುಮಂತೆಗೆಯ್ವೆನೆಂದು ಪೊಡಮಟ್ಟು ಬಿಲ್ಲಂ ಕಳೆದುಕೊಂಡು ಜೇವೊಡೆಗೆಯ್ದು ೭೧

ಬಾಣದಿಂದ ಹೊಡೆದು ದುಃಖಪಟ್ಟುಕೊಂಡು ಹೇಗೂ ನೆಲಕ್ಕೆ ಬೀಳದೆ ಬಾಣಗಳಿಂದ ದ್ರೋಣರ ಬಳಿಗೆ ತರಲಾರದೆ ದಾರಿ ನಡೆಯುವ ರೋಗಿಯಂತೆ ಆಯಾಸ ಹೊಂದಿ, ಯುವತಿಗೆ ಗಂಡನಾದ ಮುದುಕನಂತೆ ಹಲ್ಲು ಕಚ್ಚಿಕೊಂಡು, ಶೂರರಲ್ಲಿ ಕಾದ ಹೊರಟ ಹೇಡಿಯಂತೆ ಕುಂದಿ, ಮಕ್ಕಳಿಲ್ಲದ ಧನವಂತನಂತೆ ಸಂಕಟಪಟ್ಟು, ನೆನೆದ ಎರೆಮಣ್ಣಿನ ಹೆಂಟೆಯ ಹಾಗೆ ಕರಗಿ, ರಾಹುವಿನ ಹಿಡಿತಕ್ಕೆ ಸಿಕ್ಕಿದ ಚಂದ್ರನ ಹಾಗೆ ಮನಸ್ಸಿನಲ್ಲಿ ಕಂದಿ, ಹಲವರೆದುರಿಗೆ ಲಜ್ಜೆಪಟ್ಟು, ದ್ರೋಣಾಚಾರ್ಯರ ಮುಖವನ್ನು ನೋಡಲಾರದೆ ದಪ್ಪ ತೆನೆಯ ಹಾಗೆ ತಲೆಬಗ್ಗಿಸಲು ದ್ರೋಣಾಚಾರ್ಯನು ಮನಸ್ಸಿನಲ್ಲಿ ಹೀಗೆಂದುಕೊಂಡನು. ೬೮–೬೯. ಕೆಟ್ಟ ಮನುಷ್ಯರು ಸತ್ಪುರುಷರಿಗೆ, ಕುತ್ಸಿತ ಗುಣದವರು ಮಾನ್ಯರಿಗೆ, ಕೆಟ್ಟ ಪಾಪಿಗಳು ಜಿನಧರ್ಮ ಹಿಡಿದವರಿಗೆ, ಬಡವರು ಧನವಂತರಿಗೆ, ಹೀನರು ಜಗಜ್ಜನರಿಂದ ವಂದ್ಯರಾದವರಿಗೆ, ಕುರೂಪಿಗಳು. ಸುರೂಪವುಳ್ಳವರಿಗೆ, ಕೆಟ್ಟ ಭಾವದಿಂದ ಸಿಟ್ಟುಗೊಂಡು ದ್ವೇಷಿಸಿ, ಅಳಲಿ. ಮಾಡುವುದೇನು? ಅವರಿಂದ ಏನಾದೀತು ? ೭೦. ಎಂದು ಮನಸ್ಸಿನಲ್ಲಿ ನಕ್ಕು ಜಿನಭಕ್ತನನ್ನು ಕರೆದು "ನೀನು ನಾರಿಕೇಳ ಫಲಗಳನ್ನು ಇಲ್ಲಿಗೆ ನೆಲಕ್ಕೆ ತಾಕದ ಹಾಗೆ ಅಂತರಿಕ್ಷದಲ್ಲಿ ತಡಮಾಡದೆ ತರಿಸು" ಎನ್ನಲು ಹಾಗೆಯೇ ಮಾಡುವೆನೆಂದು ನಮಸ್ಕರಿಸಿ ಬಿಲ್ಲನ್ನೆಳೆದುಕೊಂಡು ಟಂಕಾರಮಾಡಿ ೭೧,

ಪರಮಜಿನಚರಣಯುಗಮಂ
ಸ್ಮರಿಯಿಸಿ ತೊದಳಿಲ್ಲದೆರಡುಗೊಳದೆ ಮನದೊಳ್
ಜರಿಯದೆ ಕೊಂಡೊಡೆ ಕರಮು
ಬ್ಬರಿಸದೆ ಬಱಿದಂತೆ ಪೆಟ್ಟುವೆರ್ಚದೆ ನಯದಿಂ ೭೨

ಗದ್ಯ॥ ಶರಸಂಧಾನಮೆಂಬಲಗಿಂ ತೆಂಗಿನಕಾಯ್ಗಳಂ ಕೊಯ್ದು ನೆರೆದ ನೆರವಿ ಮಝು ಭಾಪೆಂದು ಘೋಂಕರಿಸೆ ದ್ರೋಣಾಚಾರ್ಯರಲ್ಲಿಗೆ ನೆಲಸಂ ಮುಟ್ಟಲೀಯದೆ ಬಾಣಸಂಚಯದಿಂ ತರ್ಪುದುಂ ನಾಡುಂ ಬೀಡುಂ ಜಿನಭಕ್ತನ ಬಿಲ್ಲಬಲ್ಮೆಗೆ ಸಂತೋಷಂಬಟ್ಟು ಪೊಗೞುತ್ತುಮಿರ್ದರಿರ್ಪುದುಂ ದ್ರೋಣಾಚಾರ್ಯರ್ ಛಾತ್ರನಿಕುರುಂಬಂಬೆರಸು ಮನೆಗೆ ವಂದು ಸುಖದಿಂದಿರ್ಪುದುಂ ಛಾತ್ರರೆಲ್ಲಂ ಪುರುಡಿಸಿ ೭೩

ಇವನೊಳ್ ಮುಂ ಕೆಳೆಗೊಂಡು ಕೂಡಿ ಬೞಿಕಂ ಕೂರ್ತಂತೆ ಗೆಯ್ದೀತನಂ
ಜವನಂತಪ್ಪ ಮದಾಂಧಸಿಂಧುರದ ಮುಂದಣ್ಗೊಯ್ದು ನೀನೀ ಗಜೇಂ
ದ್ರಮನೋರಂತಿರೆ ವೀರದಿಂದಡಸಿ ಪೊಯ್ಯೆಂದಾರ್ದು ಪಿಂಗಿರ್ದು ನೋ
ಡುವಮೀ ದೂರ್ತನನಾ ಗಜಂ ತುಳಿವುದಕ್ಕೆಪಚ್ಚದೆ ಮಂತಣಂ? ೭೪

ಗದ್ಯ॥ ಎಂದು ತಮ್ಮನಿಬರುಂ ಸಮಕಟ್ಟಿ ಪುಸಿಗೂರ್ಮೆಯಿಂ ಜಿನಭಕ್ತನಂ ನಂಬಿಸಿ ಕೆಲವಾನುಂ ದಿವಸಂ ಪೋಗಲಿತ್ತೊಂದು ದಿವಸಂ ಪೊಱವೊೞಲೊಳಾಡುತ್ತುಮಿರ್ಪುದುಂ ಅವರ ಬಗೆಗೊಡಂ

ಪರಮಜಿನನ ಪಾದಗಳನ್ನು ಸ್ಮರಿಸಿ ಹಿಂತೆಗೆಯದೆ ಶಂಕೆಪಡದೆ, ಮನಸ್ಸಿನಲ್ಲಿ ಹಿಂಜರಿಯದೆ, ಬಹಳ ಅಹಂಕಾರಪಡದೆ, ಹೆಮ್ಮೆಪಡದೆ ವಿನಯದಿಂದ ೭೨. ಬಾಣದ ಜೋಡಣೆಯೆಂಬ ಕತ್ತಿಯಿಂದ ತೆಂಗಿನಕಾಯಿಗಳನ್ನು ಕೊಯ್ದು ಅಲ್ಲಿ ಸೇರಿದ್ದ ಗುಂಪೆಲ್ಲ 'ಮಝು, ಭಾಪು' ಎಂದು ಹರ್ಷಧ್ವನಿ ಮಾಡಲು ದ್ರೋಣಾಚಾರ್ಯರ ಬಳಿಗೆ ತಂದನು. ಅದನ್ನು ಕಂಡು ಊರು ದೇಶಗಳೆಲ್ಲ ಜಿನಭಕ್ತನ ಬಿಲ್ಲಬಲ್ಮೆಗೆ ಸಂತೋಷಪಟ್ಟು ಹೊಗಳುತ್ತಿದ್ದರು. ಆಗ ದ್ರೋಣರು ಶಿಷ್ಯಸಮೂಹದೊಡನೆ ಮನೆಗೆ ಬಂದು ಸುಖದಿಂದಿದ್ದರು. ೭೩. ಆಗ ಶಿಷ್ಯರೆಲ್ಲ ಹುರುಡುಗಟ್ಟಿ "ಇವನಲ್ಲಿ ಮೊದಲು ಸ್ನೇಹಮಾಡಿ ಪ್ರೀತಿಸಿದವರಂತೆ ನಟಿಸಿ ಇವನನ್ನು ಯಮನಂಥ ಒಂದು ಮದ್ದಾನೆಯ ಮುಂದಕ್ಕೆ ಕರೆದುಕೊಂಡು ಹೋಗಿ, "ನೀನು ಈ ಗಜೇಂದ್ರನನ್ನು ಹೆಚ್ಚಾದ ಪರಾಕ್ರಮದಿಂದ ಹೊಡೆ" ಎಂದು ಅಬ್ಬರಿಸಿ ಹಿಂದಿದ್ದು ಈ ಧೂರ್ತನನ್ನು ಆ ಆನೆಯು ತುಳಿಯುವುದನ್ನು ನೋಡೋಣ. ಇದೇ ಮಂತ್ರ" ಎಂದು ೭೪. ತಮ್ಮತಮ್ಮಲ್ಲಿ ಯೋಚಿಸಿಕೊಂಡು ಹುಸಿಸ್ನೇಹದಿಂದ ಜಿನಭಕ್ತನನ್ನು ನಂಬಿಸಿ ಕೆಲವು ದಿನಗಳು ಕಳೆಯಲು ಒಂದು ದಿನ ಪಟ್ಟಣದ ಹೊರಗೆ ಆಡುತ್ತಿರುವಾಗ ಅವರ ಮನಸ್ಸಿಗೆ ಒಪ್ಪುವಂತೆ ಮದದಿಂದ ಕಣ್ಣು

ಬಟ್ಟಿಂತೆ ಮದದಿಂ ಕಣ್ಗಾಣದವರ ಬಯಸುವ ಮದಗಜಮೆ ಮೆಯ್ಯುಱಿಯುದೆ ಕಂಬಮಂ ಮುಱಿದು ಕೋಡು ಗಾಳಿಯಂತೆ ವೇಗಿಯುಂ ನಿಚ್ಚಗಲಿಯಂತೆ ನಿಶ್ಶಂಕನುಂ ಕಳ್ಗುಡಿಕನಂತೆ ತೀವ್ರನುಂ ಮೂರ್ಖನಂತವಿವೇಕಿಯುಂ ತಣಿಯುಂಡ ಹಾರ್ವನಂತಾಕಾಶದೃಷ್ಟಿಯುಂ ಗ್ರಾಮಣಿಯಂತೆ ನಿಷ್ಕರುಣಿಯುಂ ಕಿರಾತನಂತೆ ಕ್ರೂರನುಮಾಗಿರ್ಪ ಸೊಕ್ಕಿದಾನೆಯಂ ಕಂಡು ೭೫

ಜಿನಭಕ್ತಂ ವೀರದೊಳ್ ಫಲ್ಗುಣನನನಿಟಿಸುವಂ ಧಾರಿಣೀಪೂಜ್ಯನಿಂತೀ
ತನೆ ಪೋರ್ಗುಂ ಮಿಕ್ಕರೇವರ್ ದ್ವಿಪವರನದಟಿಂ ತಾಗೆ ಬಂದೆಂದು ದೂರ್ತರ್
ಮುನಿಸಿಂ ಕೂರ್ತಂತೆ ಗೆಯ್ದುನ್ನತ್ತರಿಸಿ ಪೊಗಟ್ದುದುಂ ಬರ್ಪ ಪೇರಾನೆಯಂ ಭೋಂ
ಕನೆ ವೀರಂ ಶಾಂತಿತೀರ್ಥೇಶ್ವರಪದಯುಗಮಂ ಚಿತ್ತದೊಳ್ ತಾಳ್ದಿ ಧೀರಂ ೭೬

ಗದ್ಯ॥ ತನ್ನ ಕಿಲದೊಳಿರ್ದ ತಿರಿದುಂಬ ದುಲ್ಲಟಿಯಂ ಕೊಂಡು ಗಜಮನಜಮನಿಡುವಂತೆ ಭಯವಿಲ್ಲದಿಡುವುದುಂ ಕರಿ ನರಿಯಂತೆ ಕೀಱಿಟ್ಟಾಱಟಿ ಭಯದಿಂದಿದಿರಾಗಿ ಬರಲಣ್ಮದೆ ಮಗುಟ್ದು ತನ್ನ ನೆಲೆಗೆ ಪೊಯಿತಿಪ್ಪಲ್ ಜಿನಭಕ್ತಂ ಹರಿಕಾಂತನಂತೆ ಮುಯ್ಪಂ ನೋಡದೆ ಕುಪ್ಪಳುಱಿಯೂಡುವ ಮಕ್ಕಳಂತೆ ತನ್ನಂ ಪೊಗಟ್ದುಕೊಳ್ಳದೆ ನವಿಲಂತೆ ತನ್ನಾಟಕ್ಕೆ ತಾನೆ ನಲಿಯದೆ ಸಮುದ್ರದಂತೆ ಗಂಭೀರನಾಗಿರ್ಪುದುಂ ದ್ರೋಣನ ಚಟ್ಟರೆಲ್ಲರುಂ ಜಿನಭಕ್ತನ ಪುಣ್ಯದ

ಕಾಣಿಸದೆ ಅವರು ಬಯಸುವ ಮದಗಜವೇ ಕಂಬವನ್ನು ಮುರಿದು ಕಿತ್ತುಕೊಂಡು ಗಾಳಿಯ ವೇಗದಲ್ಲಿ, ನಿತ್ಯಕಲಿಯಂತೆ ಶಂಕೆಯೇ ಇಲ್ಲದೆ, ಹೆಂಡಕುಡುಕನಹಾಗೆ ತೀಕ್ಷ್ಣವೂ ಮೂರ್ಖನಹಾಗೆ ಅವಿವೇಕದಿಂದ, ಕೂಡಿಯೂ ತೃಪ್ತಿಯಾಗಿ ಊಟ ಮಾಡಿದ ಬ್ರಾಹ್ಮಣನಂತೆ ಆಕಾಶದಲ್ಲಿಯೇ ದೃಷ್ಟಿಯಿಟ್ಟು, ಗ್ರಾಮಾಧಿಕಾರಿಯಂತೆ ನಿಷ್ಕರುಣೆಯಿಂದ, ಕಿರಾತನಂತೆ ಕ್ರೂರವಾಗಿ ಬರುತ್ತಿದ್ದ ಆ ಸೊಕ್ಕಿದಾನೆಯನ್ನು ಕಂಡು ೭೫. 'ಜಿನಭಕ್ತನು ವೀರತನದಲ್ಲಿ ಅರ್ಜುನನನ್ನು ಮೀರಿಸುವನು. ಅವನು ಲೋಕಪೂಜ್ಯ, ಈ ಮತ್ತಗಜವು ತಾಗಿದಾಗ ಈತನೇ ಕಾದುವನು. ಮಿಕ್ಕವರು ಏನು ಮಾಡಿ ಯಾರು?" ಎಂದು ಆ ಧೂರ್ತರು ಅವನಲ್ಲಿ ಸ್ನೇಹಿತರಂತೆ ನಟಿಸಿ ಹೊಗಳಿದರು. ಅವನು ನುಗ್ಗಿ ಬರುತ್ತಿದ್ದ ದೊಡ್ಡ ಆನೆಯನ್ನು ತಟ್ಟನೆ ಮನಸ್ಸಿನಲ್ಲಿ ಶಾಂತಿತೀರ್ಥಂಕರರ ಪಾದಗಳನ್ನು ಚಿತ್ತದಲ್ಲಿ ಧರಿಸಿದನು. ೭೬. ಹಾಗೆ ಧ್ಯಾನಿಸಿ ತಾನು ತಿರಿದು ಉಣ್ಣುವ ದುಲ್ಲಟಿ (ತಟ್ಟೆ ?) ಯನ್ನು ತೆಗೆದುಕೊಂಡು ಆ ಆನೆಯನ್ನು ಒಂದು ಆಡನ್ನು ಹೊಡೆಯುವಹಾಗೆ ಹೊಡೆಯಲು, ಆ ಕರಿ ನರಿಯ ಹಾಗೆ ಚೀರಿಟ್ಟು ಆರಾಟದ ಭಯದಿಂದ ಇದಿರಿಗೆ ಬರಲು ಧೈರ್ಯಸಾಲದೆ, ತನ್ನ ಸ್ಥಳಕ್ಕೆ ಹೊರಟುಹೋಯಿತು. ಇತ್ತ ಜಿನಭಕ್ತನು ಹರಿಕಾಂತನಂತೆ ಅಹಂಕಾರಪಡದೆ, ಕುಪ್ಪಕುರಿಯಾಟವಾಡುವ ಮಕ್ಕಳಹಾಗೆ ತನ್ನನ್ನು ತಾನು ಹೊಗಳಿಕೊಳ್ಳದೆ, ನವಿಲಿನ ಹಾಗೆ ತನ್ನ ಕುಣಿತಕ್ಕೆ ತಾನೇ ಸಂತೋಷಿಸದೆ ಸಮುದ್ರದಂತೆ ಗಂಭೀರನಾಗಿರಲು ದ್ರೋಣನ ಶಿಷ್ಯರೆಲ್ಲರೂ ಜಿನಭಕ್ತನ ಪುಣ್ಯದ ಮಹಿಮೆಗೂ ಮನಸ್ಸಿನ ಧೈರ್ಯಕ್ಕೂ

ಮಹಿಮೆಗಂ ಮನದ ಧೈರ್ಯಕ್ಕಂ ಚೋದ್ಯಂಬಟ್ಟು ಮನದ ಕೋಪಮಂ ಪತ್ತುವಿಟ್ಟು ಸಮ್ಯಕ್ತ್ವ ಚೂಡಾಮಣಿಗೆ ಮನದೊಳ್ ಪೊಡೆವಟ್ಟು ದ್ರೋಣಾಚಾರ್ಯರ್ಗೆ ತಮ್ಮ ದುರ್ಭಾವಮುಮಂ ವಾತ್ಸಲ್ಯರತ್ನಾಕರನ ಭಾಗ್ಯದ ಪೆಂಪುಮಂ ಪೇಟ್ದುದುಂ ದ್ರೋಣನಿಂತೆಂದಂ

ನೆವನೆವದಿಂದೆ ಧಾರಿಣಿ ಸುವಸ್ತು ಲತಾಲಲಿತಾಂಗಿಯರ್ ಮಹೋ ೭೭
ತ್ಸವಮತಿರಾಗಮುಣ್ಪು ಮಹಿಮಾಸ್ಪದಮುನ್ನತಿ ಪೆಂಪು ಸೌಖ್ಯ ಮಿ
ಕ್ಕವಿರಳಬುದ್ಧಿ ವೀರ್ಯಮಭಿವೃದ್ಧಿ ಮತಂಗಜಮುಂ ಹಯಾಳಿ ಸಂ
ಭವಿಸುಗು ಮುನ್ನುಪಾರ್ಜಿಸಿದ ಪುಣ್ಯದಿನಣ್ಣ ಮಹೀತಳಾಗ್ರದೊಳ್ ೭೮

ನುಡಿಯದೆ ಸಾರ್ದು ಕೈಮುಗಿದು ಸೇವಿಸಿ ಘುಮ್ಮನೆ ಬಾಯ್ಗೆವಂದುದಂ
ನುಡಿದೊಡಮಂತದೊಳ್ನುಡಿ ವಿರೋಧಿಬಲಕ್ಕಿದಿರಾಗಿ ದರ್ಪದಿಂ
ಮಡಿದೊಡಮಂತದಾ ರಿಪುಗೆ ತಲ್ಲಣಮರ್ಥಿಗೆ ಬೇಡಿದರ್ಥಮಂ
ಕುಡುವೊಡಮಂತದಕ್ಷಯಮೆನಲ್ ನೆಱೆ ಬಣ್ಣಿಪರಾರೊ ಪುಣ್ಯಮಂ ೭೯

ಒಲ್ಲದೆ ಕಾಡಿ ಖಂಡಿಸುವೊಡಂ ನಿಲಲಾಱದೆ ಸಲ್ಲಕಾಂಗಿಯರ್
ಮೆಲ್ಲನೆ ಪೊರ್ದಿ ಕಾಲ್ವಿಡಿದು ಬೇಡುವುದುಂ ದೆಸೆಯೆಲ್ಲಮಂಜಿ ತ
ಳ್ವಿಲ್ಲದೆ ಬಂದು ನಿಂದು ಬೆಸಕೆಯ್ವುದುಮಬ್ಧಿಯೊಳಿರ್ದ ರತ್ನಮುಂ
ನಿಲ್ಲದೆ ಬಂದು ಪೊರ್ದುವುದು ಸಂಚಿತ ಪುಣ್ಯಫಲಂಗಳಲ್ಲವೇ ೮೦

ಆಶ್ಚರ್ಯಪಟ್ಟು ಮನಸ್ಸಿನ ಕೋಪವನ್ನು ಬಿಟ್ಟು ಸಮ್ಯಕ್ತ್ವಚೂಡಾಮಣಿಗೆ ಮನದಲ್ಲಿಯೇ ನಮಸ್ಕರಿಸಿ ದ್ರೋಣಾಚಾರ್ಯರಿಗೆ ತಮ್ಮ ದುರ್ಭಾವನೆಯನ್ನೂ ಜಿನಭಕ್ತನ ಪುಣ್ಯದ ಆಧಿಕ್ಯವನ್ನೂ ಹೇಳಲಾಗಿ ದ್ರೋಣರು ಹೀಗೆಂದರು ೭೭. ಭೂಮಿ. ಶ್ರೇಷ್ಠವಸ್ತುಗಳು, ಸುಂದರಿಯರು, ಮಹೋತ್ಸವ, ಅತ್ಯಂತ ಪ್ರೇಮ, ಪರಾಕ್ರಮ ಮಹಿಮೆ, ಉನ್ನತಿ, ಆಧಿಕ್ಯ, ಸೌಖ್ಯ, ಬುದ್ಧಿಶಕ್ತಿ, ವೀರ್ಯ, ಅಭ್ಯುದಯ, ಆನೆ ಕುದುರೆಗಳು-ಇವೆಲ್ಲ ಮೊದಲು ಸಂಪಾದಿಸಿದ ಪುಣ್ಯದಿಂದ ಲಭಿಸುವು. ೭೮. ಮಾತನಾಡದೆ ಸಮೀಪಿಸಿ ಕೈ ಮುಗಿದು ಸೇವೆಮಾಡಿ ಗಂಭೀರವಾಗಿ ಬಾಯಿಗೆ ಬಂದದ್ದನ್ನು ನುಡಿದರೂ ಹಾಗೆ ಅದಂ ಒಳ್ಳೆಯ ಮಾತು, ಶತ್ರುಬಲಕ್ಕೆ ಇದಿರಾಗಿ ದರ್ಪದಿಂದ ಸತ್ತರೂ ಅದು ಆ ಶತ್ರುವಿಗೆ ತಲ್ಲಣ, ಅರ್ಥಿಗೆ ಕೇಳಿದ ಪ್ರಯೋಜನವನ್ನು ಕೊಟ್ಟರೆ ಅದು ಅಕ್ಷಯವೆಂದು ಆ ಪುಣ್ಯವನ್ನು ವರ್ಣಿಸುವವರು ಯಾರು! ೭೯. ಇಷ್ಟಪಡದೆ ಕಾಡಿಸಿ ಖಂಡಿಸಿದರೂ ನಿಲ್ಲಲಾರದೆ ಸುಂದರಿಯರು ಮೆಲ್ಲನೆ ಹೊಂದಿ ಕಾಲುಹಿಡಿದು ಬೇಡುವುದೂ, ದಿಕ್ಕು ದಿಕ್ಕುಗಳವರೆಲ್ಲ ಅಂಜಿಕೊಂಡು ಸಾವಕಾಶವಿಲ್ಲದೆ ಬಂದು ನಿಂತು ಸೇವೆ ಮಾಡುವುದೂ ಸಮುದ್ರದಲ್ಲಿರುವ ರತ್ನವು ನಿಲ್ಲದೆ ಬಂದು ಸೇರುವುದೂ ಪೂರ್ವಪುಣ್ಯದ ಫಲಗಳಲ್ಲವೆ?

ಗದ್ಯ॥ ಉದಯದಿಂ ತೊಡಗಿ ನೇಸಱ್ ಪಡುವನ್ನೆಗಂ ಊರವರ್ ಕೊಡಂಗೊಂಡಡಕಿದೊಡಂ ತುಂಬುರ್ಚಿ ಕಯ್ಗಳ್ಗೆ ಪಱಯಿಸಿದೊಡಂ ಪಶು ಮೊದಲಾದನೇಕ ಜೀವಂಗಳುಂಡೊಡಂ ಕೆಱೆಯ ನೀರ್ ಮೞೆಯ ನೀರುಳ್ಳನ್ನೆವರಂ ತವೆಯದು. ಮೞೆ ಪೋಗಲೊಡಮಾರ್ ಬಂದು ರಕ್ಷಿಸುವೊಡಂ ಬತ್ತುಗುಮಂತೆ ಪುಣ್ಯಾಧಿಕನಪ್ಪ ಮಹಾತ್ಮಂಗೆ ಸದ್ವಿದ್ಯೆಗಳುಂ ವೀರಮುಂ ಧನಮುಂ ಭೋಗಮುಂ ಬುದ್ಧಿಯುಮೊಂದುತ್ತರೋತ್ತರಮಾಗೆ ಪೆರ್ಚುಗುಂ ಆ ಪುಣ್ಯಮಿಲ್ಲದಾಗಳೆನಿತು ಪ್ರಯತ್ನಪರನಾದೊಡಂ ಪರಿಭವಮುಂ ಕಷ್ಟವೃತ್ತಿಯುಮಕ್ಕುಮೆಂದು ಧರ್ಮದೊಳಾದ ಮಹಿಮೆಯುಮಂ ಕರ್ಮದೊಳಾದ ಪೊಲ್ಲಮೆಯುಮಂ ಪೇೞ್ದು ಮತ್ತಂ ಪಾಪದೊಳಾದ ಹೀನತೆಯುಮನಿಂತೆಂದು ಪೇೞ್ದಂ ೮೧

ಸಿರಿಗೆ ನಿಲಯಂ ಸೂರ್ಯಂ ಮಿತ್ರಂ ಸರಸ್ವತಿಯಿಕ್ಕೆಯಾ
ಗಿರಲುಮರವಿಂದಂಗಳ್ ಶೀತಾಂಶು ಭೋಂಕನೆ ಮೂಡಿ ನಿ
ತ್ತರಿಸಿ ಬಲದಿಂ ಮತ್ತಂ ಪೆರ್ಚಿಂದಮಿಂದ್ರವು ದರ್ಪದಿಂ
ಕೊರಗಿ ಮುಗಿಯಲ್ ಕರ್ಮಕ್ಕಡ್ಡಂ ಬರಲ್ ಬಲಮುಳ್ಳರಾರ್ ೮೨

ಬಲದೊಳಧಿಕಂ ಕ್ರೂರಂ ಬಲ್ಲಾಳ್ವಿವೇಕಪರಾಯಣಂ
ಕುಲದೊಳಧಿಕಂ ವಿದ್ಯಾಧೀಶಂ ವಿಯಚ್ಚರವಲ್ಲಭಂ
ಕುಲಿಶವಿಭವಂ ಧೀರಂ ಲಂಕೇಶ್ವರಂ ಮೊದಲಾಗಿ ದು
ರ್ಮನದಿನಟಿದಂ ಕರ್ಮಕ್ಕಡ್ಡಂ ಬರಲ್ಕೆ ಸಮರ್ಥರಾರ್ ೮೩

೮೦. ಬೆಳಗಿನಿಂದ ತೊಡಗಿ ಸೂರ್ಯಮುಳುಗುವತನಕ ಊರಿನವರು ಕೊಡಗಳನ್ನು ಹಿಡಿದುಕೊಂಡು ನೀರು ಹೊತ್ತರೂ, ತೂಬು ತೆಗೆದು ಗದ್ದೆಗಳಿಗೆ ಹರಿಯಿಸಿದರೂ ಪಶುಗಳೇ ಮೊದಲಾದ ಅನೇಕ ಪ್ರಾಣಿಗಳು ಕುಡಿದರೂ ಕೆರೆಯ ನೀರು ಮಳೆಯನೀರು ಇರುವವರೆಗೂ ಮುಗಿಯುವುದಿಲ್ಲ. ಮಳೆಹೋಗಲು ಯಾರು ಬಂದು ರಕ್ಷಿಸಿದರೂ ಬತ್ತಿಹೋಗುವುವು. ಹಾಗೆಯೇ ಪುಣ್ಯಾಧಿಕನಾದ ಮಹಾತ್ಮನಿಗೆ ಸದ್ವಿದ್ಯೆಗಳೂ, ವೀರತನವೂ ಧನವೂ ಭೋಗವೂ ಬುದ್ಧಿಯೂ ಉತ್ತರೋತ್ತರವಾಗಿ ಹೆಚ್ಚುತ್ತವೆ. ಆ ಪುಣ್ಯವಿಲ್ಲದಿದ್ದಾಗ ಎಷ್ಟು ಪ್ರಯತ್ನ ಮಾಡಿದರೂ ಅಪಮಾನ, ದೈನ್ಯವೂ ಆಗುವುವೆಂದು ಧರ್ಮದಿಂದಾಗುವ ಮಹಿಮೆಯನ್ನೂ ಕರ್ಮದಿಂದ ಆಗುವ ಕೆಡಕನ್ನೂ ಹೇಳಿ ಪುನಃ ಪಾಪದಿಂದ ಆಗುವ ಹೀನತೆಯನ್ನು ಹೀಗೆಂದು ಹೇಳಿದನು. ೮೧. ಲಕ್ಷ್ಮಿಗೆ ಮನೆ, ಸೂರ್ಯನು ಸ್ನೇಹಿತ, ಸರಸ್ವತಿಯ ವಾಸಸ್ಥಾನ–ಬಲದಿಂದ ಕೂಡಿ ಹೆಮ್ಮೆಯಿಂದ ಇರುವಂಥವು. ಹೀಗಿದ್ದರೂ ಕಮಲಗಳು ಶೀತಕಿರಣ (ಚಂದ್ರ)ನು ಹುಟ್ಟಿದ ಕೂಡಲೆ ತಮ್ಮ ದರ್ಪವನ್ನು ಕಳೆದುಕೊಂಡು ಕೊರಗಿ ಮುಚ್ಚಿಕೊಳ್ಳಲು ಕರ್ಮ ಕಾರಣ. ಅದಕ್ಕೆ ಅಡ್ಡ ಬರಲು ಯಾರಿಗೆ ಬಲವಿದೆ ? ೮೨. ಬಲದಲ್ಲಿ ಅಧಿಕನು, ಕ್ರೂರಿ, ಬಲ್ಲಾಳು, ವಿವೇಕ ಪರಾಯಣ, ಕುಲದಲ್ಲಿ ದೊಡ್ಡವನು, ವಿದ್ಯಾಧೀಶ್ವರ, ವಿಯಚ್ಚರರ ಒಡೆಯ, ವಜ್ರಾಯುಧವುಳ್ಳ ಇಂದ್ರನ ವೈಭವ, ಧೀರ,—ಇಷ್ಟಿದ್ದರೂ ಲಂಕೇಶ್ವರನು ಮೊದಲು

೮೩

ಗದ್ಯ॥ ಆದುಕಾರಣದಿಂ ಕರ್ಮವುಳ್ಳಂಗೆ ನೇಣಂ ಪಿಡಿದೊಡಂ ಪಾವಾಗಿ ತಿಂಗುಂ ಪೊನ್ನಂ ಪಿಡಿದೊಡಂ ಮಣ್ಣಾಗಿರ್ಕುಂ ಆಯುವುಳ್ಳೊಡಂ ರುಜಾಧೀನನಾಗಿ ಸಮೆಗುಂ ಪಲವುಂ ಶಸ್ತ್ರ ಶಾಸ್ತ್ರ ವಿದ್ಯೆಗಳಂ ಕಲ್ತೊಡಂ ಫಲವಿಲ್ಲಾಯಲಜ್ಜಾಯವೆಂದು ಮಿಥ್ಯೆಯಂ ಪತ್ತುವಿಟ್ಟುಳ್ಳುದ ನುಳ್ಳಂತೆ ನುಡಿವುದು

೮೪

ಧರ್ಮವೆ ತಂದೆ ಧರ್ಮವೆ ಮನೋಹರಿ ಧರ್ಮವೆ ಬಂಧುವರ್ಗವೊ
ಳ್ಧರ್ಮವೆ ಸೋದರಂ ನೆಗಟ್ದ ಧರ್ಮವೆ ಸತ್ಸಖಿ ದಿವ್ಯಮಪ್ಪ ಸ
ದ್ಧರ್ಮವೆ ಪಜ್ಜನುತ್ತಮದ ಧರ್ಮವೆ ಭಾವಿಪೊಡಜ್ಜನೆಲ್ಲಿಯುಂ
ಧರ್ಮವೆ ಮುಖ್ಯವೆಂದು ಪರಿಭಾವಿಸುತಿರ್ಕೆ ಸುಖಾರ್ಥಿಯಪ್ಪವಂ ೮೫

ಧರ್ಮದಿನಕ್ಕುಮೊಳ್ಳುಣಸುಮುಳ್ಳುಣಮುಂ ಸುರರಾಜ ಭೋಗಮುಂ
ಧರ್ಮದಿನಕ್ಕುಮುನ್ನತಿಯುಮಾಜ್ಞೆಯುಮೊಳ್ನುಡಿಯುಂ ವಿವೇಕಮುಂ
ಧರ್ಮದಿನಕ್ಕುಮಾರ್ಪುಮದಟುಂ ಸುಜನತ್ವಮುಮುನ್ನತಿಕ್ಕೆಯುಂ
ಧರ್ಮದಿನಕ್ಕುಮುಗ್ಗಳದ ತೇಜಮುಮಕ್ಷಯ ಚಾರುಸೌಖ್ಯಮುಂ ೮೬

ಗದ್ಯ॥ ಎಂದಾ ದ್ರೋಣಾಚಾರ್ಯರ್ ಛಾತ್ರರ್ಗೆ ಧರ್ಮದ ಮಹಾಗುಣಮುಮಂ ಪಾಪದ ಮಹಾಕಷ್ಟಮುಮಂ ಲೇಸಾಗೆ ತತ್ವರೂಪದಿಂದಿಪ್ಪಂ ಧರ್ಮೇಣ ಯೋಜಯೇತ್ ಎಂಬ ನೀತಿ

ಕೆಟ್ಟ ಮನಸ್ಸಿನಿಂದ ನಾಶಹೊಂದಿದನು, ಕರ್ಮಕ್ಕೆ ಅಡ್ಡ ಬರುವುದಕ್ಕೆ ಯಾರು ಸಮರ್ಥರು ? ೮೩. ಆದಕಾರಣ ಕರ್ಮವುಳ್ಳವನಿಗೆ ಹಗ್ಗವನ್ನು ಹಿಡಿದರೂ ಹಾವಾಗಿ ಕಚ್ಚುತ್ತದೆ, ಹೊನ್ನನ್ನು ಹಿಡಿದರೂ ಮಣ್ಣಾಗಿರುತ್ತದೆ. ಆಯುಸ್ಸು ಇದ್ದರೂ ರೋಗದಿಂದ ಹೆಚ್ಚಾಗಿ ಸವೆಯುವನು. ಹಲವು ಶಸ್ತ್ರಶಾಸ್ತ್ರ ವಿದ್ಯೆಗಳನ್ನು ಕಲಿತರೂ ಫಲ ಕೊಡವು. ಹೀಗೆ ಮಿಥ್ಯೆಯನ್ನು ಕಳಚಿ ಇದ್ದುದನ್ನು ಇದ್ದ ಹಾಗೆ ನುಡಿಯುವುದು. ೮೪. ಧರ್ಮವೇ ತಂದೆ, ಧರ್ಮವೇ ಮನೋಹರಿ, ಧರ್ಮವೇ ಬಂಧುಗಳು, ಒಳ್ಳೆಯ ಧರ್ಮವೇ ಸಹೋದರ. ಆಚರಿಸಿದ ಧರ್ಮವೇ ಒಳ್ಳೆಯ ಸಖಿ ದಿವ್ಯವಾದ ಸದ್ಧರ್ಮ, ವಿಚಾರ ಮಾಡಿದರೆ ಅಜ್ಜ. ಧರ್ಮವೇ ಮುತ್ತಜ್ಜ. ಎಲ್ಲ ಸಂದರ್ಭಗಳಲ್ಲಿಯೂ ಧರ್ಮವೇ ಮುಖ್ಯವೆಂದು ಸುಖವನ್ನು ಬಯಸುವವನು ಪರಿಭಾವಿಸಬೇಕು. ೮೫. ಧರ್ಮದಿಂದ ಒಳ್ಳೆಯ ಊಟ, ದೇವೇಂದ್ರಭೋಗ, ಉನ್ನತಿ, ಒಳ್ಳೆಯಮಾತು, ವಿವೇಕ, ಆಜ್ಞಾಶಕ್ತಿ, ಆಗುವುವು. ಪರಾಕ್ರಮ ಶೌರ್ಯಗಳೂ ಸುಜನತ್ವವೂ ಔನ್ನತ್ಯವೂ ಧರ್ಮದ ಬಲದಿಂದಲೇ ಆಗುತ್ತವೆ, ಹೆಚ್ಚಿನ ತೇಜಸ್ಸೂ ಅಕ್ಷಯವಾದ ರಮ್ಯಸುಖವೂ ಧರ್ಮದಿಂದಲೇ ಲಭಿಸುತ್ತವೆ. ೮೬. ಎಂದು ಆ ದ್ರೋಣಾಚಾರ್ಯರು ಶಿಷ್ಯರಿಗೆ ಧರ್ಮದ ದೊಡ್ಡಗುಣವನ್ನೂ ಪಾಪದ ಫಲವಾದ ಮಹಾಕಷ್ಟವನ್ನೂ ಚೆನ್ನಾಗಿ ಹೇಳಿ

ಶಾಸ್ತ್ರದೋಜೆಯಂ ತೋಱಿ ಪೇೞ್ವುದುಮವರ್ ತಂತಮ್ಮ ಮನದ ಕೋಪಮನುಡುಗಿ ಜಿನ ಭಕ್ತನಂ ಕ್ಷಮೆಗೊಂಡು ಪರಮಮಿತ್ರರಾಗಿ ದ್ರೋಣಾಚಾರ್ಯರ್ಗೆ ಪರಮಭಕ್ತರಾಗಿ ವಿದ್ಯಾ ಭ್ಯಾಸಂಗೆಯ್ಯುತ್ತುಂ ಸುಖ ಸಂಕಥಾ ವಿನೋದದಿಂದಿರ್ಪುದುಮೊಂದು ದಿವಸಂ ೮೭

ಆವನಾದೊಡಮಕ್ಕೆ ಚಂದ್ರಕವೇಧಮಂ ಮನದರ್ತಿಯಿಂ
ದೋವದೆಚ್ಚು ಜಗಕ್ಕೆ ಚಾಪದ ಬಲ್ಮೆಯಂ ಮೆಱೆವಂಗೆ ಲ
ಕ್ಷ್ಮೀವಿಳಾಸೆಯನುನ್ನತಿಕ್ಕೆಯ ಚಂದ್ರಲೇಖೆಯನರ್ತಿಯಿಂ
ದೀವೆನೆಂದು ಮಹೀಶ್ವರಂ ತೊದಳಿಲ್ಲದಾ ಪುರಮಧ್ಯದೊಳ್ ೮೮

ಗದ್ಯ॥ ಗೋಸಣೆಗಳೆವುದುಂ ಪ್ರಮಾಥಿಕುಮಾರಂ ಭಿಕ್ಷಾನ್ನಮಂ ನದೀತೀರದೊಳುಣಲೆಂದು ಪೋಗುತುಮಿರ್ದು ಗೋಸಣೆಯಂ ಕೇಳ್ದು ತಡವಿಲ್ಲದೆ ಪರಿತಂದು ಗೋಸಣೆಯ ಪಿಡಿವುದು ಮವರ್ ಜಿನಭಕ್ತಂಬೆರಸು ಸಿಂಹಸೇನಮಹಾರಾಜನಲ್ಲಿಗೆ ವಂದು ಗೋಸಣೆಯನೀತಂ ಪಿಡಿದ ನೆಂದು ತೋಱಿ ಬಿನ್ನಪಂಗೆಯ್ವುದುಂ ಅರಸಂ ಪ್ರಮಾಥಿಕುಮಾರನಂ ಕಂಡು ೮೯

ಇವನೀ ಚಂದ್ರಕವೇಧಮ
ನವಯವದಿಂದೆಸೆಗುಮಲ್ಲಿ ತೊದಳಿಲ್ಲ ಮಹೀ
ಧವತನಯನಕ್ಕುಮಲ್ಲದೊ
ಡಿಮಂಗಿಂತೀ ರೂಪು ಶೌರ್ಯಮಿಂತೊಪ್ಪುಗುಮೇ ೯೦

'ಇಷ್ಟವನ್ನು ಧರ್ಮದಲ್ಲಿ ಜೋಡಿಸು' ಎಂಬ ನೀತಿಶಾಸ್ತ್ರದ ಕ್ರಮವನ್ನು ತೋರಿಸಿ ಹೇಳಲಾಗಿ ಅವರು ತಂತಮ್ಮ ಮನಸ್ಸಿನ ಕೋಪವನ್ನು ಕಳೆದುಕೊಂಡು ಜಿನಭಕ್ತನಲ್ಲಿ ಕ್ಷಮೆ ಕೇಳಿಕೊಂಡು ಪರಮಮಿತ್ರರಾಗಿ ದ್ರೋಣಾಚಾರ್ಯರಿಗೆ ಬಹಳ ಭಕ್ತರಾಗಿ, ವಿದ್ಯಾಭ್ಯಾಸಮಾಡುತ್ತ ಸುಖವಾಗಿದ್ದರು. ೮೭. ಯಾವನಾದರೂ ಆಗಲಿ ಚಂದ್ರಕವೇಧ (ನವಿಲುಗರಿಯಕಣ್ಣು)ವನ್ನು ಆಸೆಯಿಂದ ಭೇದಿಸಿ ತನ್ನ ಬಿಲ್ಲವಿದ್ಯೆಯನ್ನು ಜಗತ್ತಿಗೆ ತೋರಿಸುವವನಿಗೆ ಲಕ್ಷ್ಮಿಯಂತೆ ವಿಲಾಸದಿಂದ ಕೂಡಿದ ಚಂದ್ರಲೇಖೆಯನ್ನು ಕೊಡುವೆನೆಂದು ಸಂಶಯಕ್ಕೆಡೆಯಿಲ್ಲದ ಹಾಗೆ ಆ ಪಟ್ಟಣದ ರಾಜನು ನಗರ ಮಧ್ಯದಲ್ಲಿ ಘೋಷಣೆ ಮಾಡಿಸಿದನು. ೮೮. ಹಾಗೆ ಘೋಷಣೆ ಹೊರಡಿಸಲು ಪ್ರಮಾಥಿಕುಮಾರನು ತಾನು ತಂದುಕೊಂಡ ಭಿಕ್ಷಾನ್ನವನ್ನು ನದೀತೀರದಲ್ಲಿ ಉಣ್ಣಲು ಹೋಗುತ್ತಿದ್ದನು. ಆ ಘೋಷಣೆಯನ್ನು ಕೇಳಿ ಸಾವಕಾಶಮಾಡದೆ ಓಡಿ ಬಂದು ಘೋಷಣೆಯನ್ನು ಹಿಡಿದನು. ಆಗ ಆ ರಾಜಭಟರು ಜಿನಭಕ್ತ ನೊಡನೆ ಕೂಡಿ ಸಿಂಹಸೇನ ಮಹಾರಾಜನಲ್ಲಿಗೆ ಹೋಗಿ "ಈತನು ಘೋಷಣೆಯನ್ನು ಹಿಡಿದನು" ಎಂದು ತೋರಿಸಿ ಬಿನ್ನಹಮಾಡಿದರು. ಅರಸನು ಪ್ರಮಾಥಿಕುಮಾರನನ್ನು ಕಂಡು ೮೯. "ಇವನು ಈ ಚಂದ್ರಕವನ್ನು ಬೇಗನೆ ಬಾಣದಿಂದ ಹೊಡೆದು ಭೇದಿಸು ವನು. ಅದರಲ್ಲಿ ಸಂದೇಹವಿಲ್ಲ. ಇವನು ರಾಜಪುತ್ರನಾಗಿರಬೇಕು, ಹಾಗಲ್ಲದಿದ್ದರೆ

ಅದಟಂ ಪ್ರತಾಪಿ ಶೌರ್ಯಾ
ಭ್ಯುದಯಂ ಜಿನಪಾದಭಕ್ತನಮಲ ಚರಿತ್ರಂ
ಮದನಾವತಾರನರಿ ಬಲ
ಮದಭಂಜನನೀತನೆಮ್ಮ ಕಿಱುಕುಳನಲ್ಲಂ. ೯೧

ಗದ್ಯ॥ ಎಂದು ಸಿಂಹಸೇನಮಹಾರಾಜಂ ವಾತ್ಸಲ್ಯರತ್ನಾಕರನ ಮೂರ್ತಿಯಂ ನೋಡಿ ನಚ್ಚಿಮೆಚ್ಚಿ ಮನದೊಳ್ ಪೊಗೞ್ದು ಕಯ್ಯಂ ಪಿಡಿದೊಡಗೊಂಡು ಪೋಗಿ ಮಜ್ಜನ ಭೋಜನ ತಾಂಬೂಲ ವಸ್ತ್ರಾಭರಣಾದಿಗಳಿಂ ಸಂತೋಷಂಬಡಿಸಿ ಮಱುದಿವಂ ದ್ರೋಣಾಚಾರ್ಯರ್ಮೊದಲಾಗೆ ಚಾಪವಿದ್ಯಾ ಪರಿಣತರುಮಂ ವಿದ್ವಜ್ಜನಮುಮಂ ಬರಿಸಿ ಚಂದ್ರಕವೇಧ್ಯಮನೀತನೆಚ್ಚಪಂ ಪರೀಕ್ಷಿಸಿಮೆಂಬುದುಮಂತೆಗಯ್ವೆವೆಂದು ನೋಡುತ್ತಿರ್ಪುದುಂ ೯೨

ಸೆರಗಂ ಪಾರದೆ ಬೆಚ್ಚದಳ್ಕದೆ ಭಯಂಗೊಂಡೋಡದಲ್ಲಾಡದೊ
ರ್ವರನಾಶ್ರಯಿಸದೆ ದೃಷ್ಟಿಮುಷ್ಟಿ ಶರಸಂಧಾನಂಗಳಿಂ ಭೂಪನ
ಚ್ಚರಿವಟ್ಟದ್ಭುತಮೆಂದು ತೂಗೆ ತಲೆಯಂ ದ್ರೋಣಂ ಮನಂಗೊಂಡು ಸು
ಸ್ವರದಿಂ ಬಣ್ಣಿಸೆ ನೋಟಕರ್ ಪೊಗೞೆ ಭಾಪ್ಪೆಯೆಂದು ಸಂತೋಷದಿಂ ೯೩

ಇವನಿಗೆ ಈ ರೂಪವೂ ಶೌರ್ಯವೂ ಹೀಗೆ ಶೋಭಿಸುವುವೆ ? ೯೦. ಶೂರ, ಪ್ರತಾಪಿ, ಶೌರ್ಯಾಭ್ಯುದಯವುಳ್ಳ ಜಿನಭಕ್ತನು ಶುದ್ಧಚರಿತ್ರನಾದ ಮದನಾವತಾರನೇ ಸರಿ. ಇವನು ಶತ್ರುಸೈನ್ಯದ ಮದಭಂಜಕನು, ಈತನು ಅಲ್ಪನಲ್ಲ. ೯೧. ಎಂದು ಸಿಂಹಸೇನ ಮಹಾರಾಜನು ವಾತ್ಸಲ್ಯರತ್ನಾಕರನ ಆಕಾರವನ್ನು ನೋಡಿ ಮೆಚ್ಚಿ, ನಂಬಿ, ಮನಸ್ಸಿನಲ್ಲಿಯೇ ಹೊಗಳಿ ಕೈಹಿಡಿದು ಜತೆಯಲ್ಲಿ ಒಳಕ್ಕೆ ಕರೆದುಕೊಂಡು ಹೋಗಿ ಸ್ನಾನ ಭೋಜನ ತಾಂಬೂಲ ವಸ್ತ್ರಾಭರಣ ಮೊದಲಾದವುಗಳಿಂದ ಸಂತೋಷಪಡಿಸಿ ಮರುದಿನ ದ್ರೋಣಾಚಾರ್ಯರು ಮೊದಲುಗೊಂಡು ಧನುರ್ವಿದ್ಯಾಪಂಡಿತರನ್ನೂ, ವಿದ್ವಜ್ಜನರನ್ನೂ ಬರಮಾಡಿ "ಚಂದ್ರಕವೇಧ್ಯವನ್ನು ಈತನು ಹೊಡೆಯುತ್ತಾನೆ, ಪರೀಕ್ಷಿಸಿ" ಎಂದು ಹೇಳಿದನು. ಹಾಗೆಯೇ ಮಾಡುವೆವೆಂದು ಹೇಳಿ ಅವರು ನೋಡುತ್ತಿದ್ದರು. ೯೨. ಸಹಾಯವನ್ನು ನಿರೀಕ್ಷಿಸದೆ, ಭಯಪಡದೆ, ಅಳುಕದೆ, ಓಡದೆ, ಅಲ್ಲಾಡದೆ, ಒಬ್ಬರನ್ನೂ ಆಶ್ರಯಿಸದೆ ದೃಷ್ಟಿ, ಮುಷ್ಟಿ, ಶರಸಂಧಾನಗಳಿಂದ, ರಾಜನು ಆಶ್ಚರ್ಯಪಟ್ಟು 'ಅದ್ಭುತ' ಎಂದು ತಲೆದೂಗುವ ಹಾಗೆ, ದ್ರೋಣನು ಮನಮೆಚ್ಚಿ, ಗಟ್ಟಿಯಾಗಿ ಹೊಗಳುವಂತೆ, ನೋಟಕರು ಹೊಗಳಲು ಚಂದ್ರವೇಧಕವನ್ನು ಬಾಣದಿಂದ ಹೊಡೆದನು. ೯೩.

ಗದ್ಯ॥ ಚಂದ್ರವೇಧಮನಿಸುವುದುಂ ಸಿಂಹಸೇನ ಮಹಾರಾಜಂ ಮಹಾವಿಭೂತಿಯಿಂದರ್ಧ ರಾಜ್ಯಮುಮಂ ಪ್ರತಿಜ್ಞೆಯಿರ್ದ ಚಂದ್ರಲೇಖೆಯುಮಂ ಕುಡುವುದುಂ ಕೈಕೊಂಡು ಪ್ರಮಾಥಿ ಕುಮಾರಂ ಪೂರ್ವೋಪಾರ್ಜಿತ ಪುಣ್ಯದ ಫಲದಿಂ ಚಂದ್ರಲೇಖೆಯೊಳ್ ಕೂಡಿ ಮಾಳವಾರ್ಧಾ ಧೀಶ್ವರನಾಗಿ ಸುಖದಿಂ ರಾಜ್ಯಂಗೆಯ್ಯುತ್ತುಮಿರ್ಪುದಃ ೯೪

ಅರಸಂಗೊರ್ವಂ ಬಂದ
ಚ್ಚರಿ ದೇವ ಮಹಾಪ್ರತಾಪದಿಂ ಕೌಶಾಂಬೀ
ಪುರಮಂ ಮಂಡಳಿಕರ್
ನೆರೆದು ಭಯಂಗೆಯ್ದು ಮುತ್ತಿ ಕಾದಿಪರಿನ್ನುಂ ೯೫

ದಂತಿಬಲ ನೃಪತಿ ಕೋಟೆಯ
ನೆಂತುಂ ಕೊಳಲೀಯದೊಳಗೆ ಪೆರ್ಬಲದಿಂದಂ
ಭ್ರಾಂತಿಂ ಕಾದುತವಿರ್ದಪ
ನಿಂತಲಸದೆ ಪತ್ತಿ ಕಾದುವನ್ನರನಱಿಯೆಂ ೯೬

ಪೊಱಗೆ ಬಳಸಿರ್ದ ರಿಪು ನೃಪ
ರಱಿಯಟ್ಟಿ ತಗುಳ್ದು ಪೊಣ್ದು ಪೋಗದೆ ಚಲದಿಂ
ಕಱುಪಿಂ ಕಾದುತುಮಿರ್ದಪ
ರಱಿದನವರ್ಪೋಗಲಱಿಯಲಾತನ ಪುಣ್ಯಂ ೯೭

ಸಿಂಹಸೇನ ಮಹಾರಾಜನು ಮಹಾವೈಭವದಿಂದ ಅರ್ಧರಾಜ್ಯವನ್ನೂ ಪ್ರತಿಜ್ಞೆ ಮಾಡಿದ್ದ ಪ್ರಕಾರ ಚಂದ್ರಲೇಖೆಯನ್ನೂ ಕೊಡಲಾಗಿ, ಸ್ವೀಕರಿಸಿ ಪ್ರಮಥಾಥಿಕುಮಾರನು ಪೂರ್ವದ ಪುಣ್ಯದ ಫಲದಿಂದ ಚಂದ್ರಲೇಖೆಯೊಡನೆ ಕೂಡಿ ಅರ್ಧಮಾಳವದೇಶಕ್ಕೆ ಒಡೆಯನಾಗಿ ಸುಖವಾಗಿ ರಾಜ್ಯವಾಳುತ್ತಿದ್ದನು. ೯೪. ಹೀಗಿರಲು ಒಂದು ದಿನ ಒಬ್ಬನು ಬಂದು ಅರಸನಿಗೆ "ದೇವ! ಮಹಾ ಪ್ರತಾಪದಿಂದ ಕೌಶಾಂಬಿಯ ಪಟ್ಟಣವನ್ನು ಶತ್ರುಮಾಂಡಳಿಕರು ಒಟ್ಟುಗೂಡಿ ಭಯಂಕರವಾಗಿ ಕಾದುತ್ತಿದ್ದಾರೆ. ೯೫. ದಂತಿಬಲರಾಜನು ಕೋಟೆಯನ್ನು ಹೇಗೂ ಬಿಟ್ಟುಕೊಡದೆ ಒಳಗೆ ದೊಡ್ಡ ಸೈನ್ಯದೊಂದಿಗೆ ಇನ್ನೂ ಭ್ರಾಂತಿಯಿಂದ ಯುದ್ಧಮಾಡುತ್ತಿದ್ದಾನೆ. ಹೀಗೆ ಅಲಸದೆ ಹತ್ತಿ ಕಾದುವಂಥವರನ್ನು ನಾನು ಕಾಣೆ. ೯೬. ಹೊರಗೆ ಸುತ್ತುಗಟ್ಟಿರುವ ಶತ್ರುರಾಜರು ಬೆನ್ನಟ್ಟಿ ತಾಗುತ್ತ ಹಟತೊಟ್ಟು, ಹೋಗದೆ ಛಲದಿಂದ ತೀಕ್ಷ್ಣವಾಗಿ ಹೋರಾಡುತ್ತಿರುವರು. ಅವರು ಅಸಾಧ್ಯವೆಂದು ತಿಳಿದು ಹೊರಟುಹೋದರೆ ಆತನ ಪುಣ್ಯ" ೯೭. ಎಂದು ಬಿನ್ನಹಮಾಡಿದನು. ಆ

ಗದ್ಯ॥ ಎಂಬ ಮಾತನರಸನ ಕೆಲದೊಳಿರ್ದ ಪ್ರಮಾಥಿಕುಮಾರಂ ಕೇಳ್ದು ಸಿಂಹದಂತೆ ಗರ್ಜಿಸಿ ಮುನಿದು ಸಿಂಹಸೇನಮಹಾರಾಜಂಗಱಿಪಿದಡೆ ಪೋಗಲೀಯನೆಂದು ತತ್ಪುರೋದ್ಯಾನನಿವಾಸಿಯಪ್ಪ ಧರ್ಮೋಜ್ಜ್ವಳನೆಂಬ ಯಕ್ಷಂ ಕೊಟ್ಟದೃಶ್ಯಾಂಜನಪ್ರಯೋಗದಿಂ ನಡುವಿರುಳಪ್ಪಾಗಳ್ ತಾನುಂ ನಲ್ಲಳುಂ ಸ್ಯಂದನಾರೂಢರಾಗಿ ಪುರದಿಂ ಪೊಱಮಟ್ಟು ೯೮

ನಿಲ್ಲದೆ ಮುನಿಸಿಂ ಸಾಹಸ
ಮಲ್ಲಂ ರಿಪುಬಲಮನಲೆಯಲೆಂದದಟಂದಂ
ತಲ್ಲಣಿಸದ ಗಂಡಂ ಕೊಂ
ಕಿಲ್ಲದ ಕಲಿ ಕುಸಿಯದದಟನೂರ್ಜಿತತೇಜಂ ೯೯

ಗದ್ಯ॥ ಬರುತ್ತುಂ ನದೀನಿಕರಂಗಳಂ ಕಳಿದು ಧೂರ್ತನಂತೆ ಮೇಲೆ ಪಾಯ್ವ ಪುಲಿಗಳಿಂ ಪಿಸುಣನಂತೆ ಜಿನುಂಗುವ ನೊಣಗಳಿಂ ದುರ್ಜನನಂತೆ ಕವಿವ ಸೀನಾಯ್ಗಳಿಂ ದಾಯಾದನಂತೆ ಮಲೆವ ಕಾಡೆಮ್ಮೆಗಳಿಂ ಕೂರ್ತ ತೊತ್ತಿನಂತೆ ಚಿತ್ತಮನಱಿಯದೆ ಸೀಳ್ವ ಸೀರ್ಕರಡಿಗಳಿಂದದ್ಭುತಮಪ್ಪ ಭೀಮವನಮೆಂಬ ಪೆರಡವಿಯೊಳಗೆ ಪೊಕ್ಕು ತನಗಿದಿರಾಗಿ ಗಜಱಿ ಗರ್ಜಿಸಿ ಪಾಯ್ತಂದ ಸಿಂಹಮಂ ಚಕ್ರಘಾತದಿಂ ಶಾರ್ದೂಲನಂ ಶರವೇಧದಿಂ ಮದಾಂಧಸಿಂಧುರಮಂ ಶರಸಂಧಾನದಿಂ ದೃಷ್ಟಿ

ಮಾತನ್ನು ಅರಸನ ಪಕ್ಕದಲ್ಲಿದ್ದ ಪ್ರಮಾಥಿಕುಮಾರನು ಕೇಳಿ ಸಿಂಹದಂತೆ ಗರ್ಜಿಸಿ ಸಿಟ್ಟಾಗಿ ಸಿಂಹಸೇನ ಮಹಾರಾಜನಿಗೆ ತಿಳಿಸಿದರೆ ತನ್ನನ್ನು ಹೋಗಲು ಬಿಡುವುದಿಲ್ಲವೆಂದು ತಿಳಿದು ಆ ಪುರದ ಉದ್ಯಾನನಿವಾಸಿಯಾದ ಧರ್ಮೋಜ್ಜ್ವಳನೆಂಬ ಯಕ್ಷನು ಕೊಟ್ಟ ಅದೃಶ್ಯಾಂಜನವನ್ನು ಪ್ರಯೋಗಿಸಿ ನಡುವಿರುಳಿನಲ್ಲಿ ತಾನೂ ತನ್ನ ಪ್ರಿಯೆಯೂ ರಥಾರೂಢರಾಗಿ ಹೊರಟರು. ೯೮. ಸಿಟ್ಟಿನಿಂದ ಸಾಹಸಮಲ್ಲನು ನಿಲ್ಲದೆ ಶತ್ರು ಸೈನ್ಯವನ್ನು ಬಾಧಿಸುವುದಕ್ಕೋಸ್ಕರ, ಸ್ವಲ್ಪವೂ ತಲ್ಲಣಿಸದ ಶೂರ, ಡೊಂಕಿಲ್ಲದ ಕಲಿ, ಕುಗ್ಗದ ಶೂರ, ಊರ್ಜಿತ ತೇಜಸ್ಸುಳ್ಳ ಪ್ರಮಾಥಿಕುಮಾರನು ೯೯. ಬರುತ್ತ ನದೀ ಸಮೂಹಗಳನ್ನು ದಾಟಿ ಧೂರ್ತನ ಹಾಗೆ ಮೇಲೆ ಬೀಳುವ ಹುಲಿಗಳಿಂದಲೂ, ಚಾಡಿಕೋರರಂತೆ ಜಿನುಗುವ ನೊಣಗಳಿಂದಲೂ, ದುರ್ಜನನ ಹಾಗೆ ಮೇಲೆ ನುಗ್ಗುವ ಸೀಳುನಾಯಿಗಳಿಂದಲೂ. ದಾಯಾದಿಗಳ ಹಾಗೆ ಕಾಡುವ ಕಾಡೆಮ್ಮೆಗಳಿಂದಲೂ ಪ್ರೀತಿಸಿದ ದಾಸಿಯಂತೆ ಮನಸ್ಸನ್ನು ತಿಳಿಯದೆ ಸೀಳುವ ಸೀರ್ಕರಡಿಗಳಿಂದಲೂ ಅದ್ಭುತವಾದ ಭೀಮವನವೆಂಬ ದೊಡ್ಡ ಅಡವಿಯೊಳಗೆ ಪ್ರವೇಶಿಸಿ ತನಗೆ ಇದಿರಾಗಿ ಬಂದು ಗಜರಿ ಗರ್ಜಿಸಿ ಮೇಲೆ ಬಿದ್ದ ಸಿಂಹವನ್ನು ಚಕ್ರಾಯುಧದ ಪೆಟ್ಟಿನಿಂದ, ಶಾರ್ದೂಲವನ್ನು ಬಾಣದ ಭೇದನದಿಂದ, ಮದಾಂಧವಾದ ಆನೆಯನ್ನು ಬಾಣಸಂಧಾನದಿಂದ ದೃಷ್ಟಿ

ವಿಷಮಪ್ಪ ನಾಗರುಂ ಧ್ವನಿಯೆಂಬ ಶರದಿಂದೋಡಿಸಿ ವಲ್ಲಭೆಗೆ ತನ್ನ ಬಿಲ್ಲ ಬಲ್ಮೆಯುಂ ತೋಱುತ್ತುಂ ಮೆಲ್ಲಮೆಲ್ಲನೆ ಬರುತ್ತಿರ್ಪುದುಂ ೧೦೦

ಆ ನಟ್ಟಡವಿಯೊಳೊರ್ವಂ
ಹೀನಗುಣಂ ಪಾಪಯುಕ್ತನವಿಚಾರಿ ಸದಾ
ಸ್ತೇನವಿನೋದಂ ಚೋರಜ
ನಾನಂದಂ ಭೂಮಿಪಾಲನಪಗತಶೌಚಂ ೧೦೧

ಗದ್ಯ॥ ಸುವೇಗನೆಂಬಂ ದಾಯಾದರ್ ಬಲ್ಲಿದರಾಗಿ ರಾಜ್ಯಮಂ ಕೊಂಡೊಡೆ ತದ್ವನಮಂ ಪೊಕ್ಕು ಕಳ್ಳರೆಲ್ಲರುಮಂ ಕೂಡಿಕೊಂಡು ೧೦೨

ದ್ರೋಣಾಚಾರ್ಯರ ರೂಪಂ
ಮಾಡಿಟ್ಟು ಪಲವು ಪುಷ್ಪಾವಳಿಯಿಂ
ಮಾಣದೆ ಪೂಜಿಸಿ ನೆನೆದ
ಕ್ಷೂಣನ ಪದಪಂಕಜಂಗಳಂ ಚೋರೇಶಂ ೧೦೩

ಗದ್ಯ॥ ನಿಚ್ಚಲುಂ ಬಿಲ್ಲಂ ಶ್ರಮಂಗೆಯ್ಯುತ್ತಿರ್ಪುದುಂ ೧೦೪

ಕರಮಲ್ಲದೆ ಕೋದಂಡದೊ
ಳೆರಡಿಲ್ಲದೆ ಫಲ್ಗುಣಂಗಮೀತನೆ ಜಗದೊಳ್
ಪರಿಣತನೆನಿಸಿದನದಱಿಂ
ಗುರುಪದಭಕ್ತಂಗೆ ಸಾಧ್ಯಮಲ್ಲದುದುಂಟೇ ೧೦೫

ಯಿಂದಲೇ ವಿಷ ಬೀರುವ ನಾಗಸರ್ಪಗಳನ್ನು ಧ್ವನಿಯೆಂಬ ಬಾಣದಿಂದ ಓಡಿಸಿ ತನ್ನ ಪ್ರಿಯಳಿಗೆ ತನ್ನ ಬಿಲ್ಲಿನ ಸಾಮರ್ಥ್ಯವನ್ನು ತೋರಿಸುತ್ತ ಮೆಲ್ಲಮೆಲ್ಲನೆ ಬರುತ್ತಿರಲಾಗಿ ೧೦೦. ಆ ಅಡವಿಯ ನಟ್ಟನಡುವೆ ಒಬ್ಬ ಹೀನಗುಣನೂ ಪಾಪಿಷ್ಠನೂ ಅವಿಚಾರಿಯೂ ಸದಾ ಕಳ್ಳತನದಲ್ಲಿ ವಿನೋದಿಸುವವನೂ ಚೋರ ಜನಕ್ಕೆ ಆನಂದಪ್ರದನೂ ಶೌಚಹೀನನೂ ಆದ ರಾಜನು ಒಬ್ಬನಿದ್ದನು. ೧೦೧. ಸುವೇಗನೆಂಬವನು ದಾಯಾದಿಗಳು ಬಲಿಷ್ಠರಾಗಿ ರಾಜ್ಯವನ್ನು ವಶಪಡಿಸಿಕೊಳ್ಳಲು ಆ ವನವನ್ನು ಹೊಕ್ಕು ಕಳ್ಳರೆಲ್ಲರನ್ನೂ ಸೇರಿಸಿಕೊಂಡು ೧೦೨. ದ್ರೋಣಾಚಾರ್ಯರ ಆಕಾರವನ್ನು ಮಾಡಿ ಇಟ್ಟುಕೊಂಡು ಹಲವು ಪುಷ್ಪರಾಶಿಗಳಿಂದ ಬಿಡದೆ ಪೂಜಿಸಿ ಆ ಮಹಾತ್ಮನ ಪಾದಕಮಲಗಳನ್ನು ನೆನೆದು ಆ ಚೋರಪತಿಯು ನಿತ್ಯವೂ ಬಿಲ್ಲನ್ನು ಶ್ರಮದಿಂದ ಅಭ್ಯಾಸಮಾಡುತ್ತಿದ್ದನು. ೧೦೩-೧೦೪. ವಿಶೇಷವಾಗಿ ಧನುರ್ವಿದ್ಯೆಯಲ್ಲಿ ನಿಸ್ಸಂದೇಹವಾಗಿ ಅರ್ಜುನನಿಗಿಂತ ಹೆಚ್ಚಿನವನೆಂದೆನ್ನಿಸಿಕೊಂಡನು. ಗುರುಪಾದಭಕ್ತನಿಗೆ ಸಾಧ್ಯವಾಗದುದೂ ಇದೆಯೆ ? ೧೦೫. ಹಾಗೆ

ಗದ್ಯ॥ ಅಂತು ಬಿಲ್ಲೊಳತಿಜಾಣನುಂ ಪ್ರವೀಣನುಮೆನಿಸಿದ ಸುವೇಗಂ ಪ್ರಮಾಥಿ ಮಹಾರಾಜನ ಕೆಲದೊಳಿರ್ದ ಚಂದ್ರಲೇಖೆಯುಂ ಕಂಡು ಕಣ್ಬೇಟಂಗೊಂಡು, ಜ್ವರಮಾದಂತೆ ದಾಹದಿಂ ಮೆತ್ತಿ, ಕಾಯ್ದ ಕಬ್ಬುನದಂತೆ ಮೆಯ್ಗಾಯ್ದು, ಗಾಳಿಮುಟ್ಟಿದರಲೆಯಂತೆ ನಡುಗಿ ಗ್ರಹಂ ಪಿಡಿದ ಮನುಷ್ಯನಂತೆ ಪರವಶನಾಗಿ, ಕೊಂತಗೊಂಡವನಂತೆ ಜೋಲ್ದು, ಬೇಸಗೆಯೊಳ್ ಪಯಣಂ ಬೋಪನಂತೆ ಬೆಮರ್ತು, ಬಿಸಿಲೊಳಿರ್ದ ಶಿಶುವಿನಂತೆ ಕೊಱಗಿ, ಕಱುಸತ್ತ ಪಶುವಿನಂತೆ ಮಱುಗಿ ದಿವ್ಯಮಂ ಪಿಡಿದು ಸೋಲ್ತವನಂತೆ ಕೊಱಗಿ, ಬೇಗೆವೋದ ಬೆಟ್ಟದಂತೆ ಕಂದಿ, ಮುಯ್ಗೊಟ್ಟಪಟ್ಟ ಪುಲ್ಲೆಯಂತೆ ಬೆದಱಿ, ಬೇತಾಳನಂ ಕಂಡ ಪಂದೆಯಂತೆ ಮೂರ್ಛೆವೋಗಿ ಬಲವಿಲ್ಲದ ಕಾಳಗದಂತೆ ಕರಮೆ ಸೋಲ್ತು, ಶೀತಳಮಪ್ಪೆಡೆಯೊಳ್ ಪಡಲುಂ ಗಾಳಿಗೆ ಮೆಯ್ಯನೊಡ್ಡಲುಂ ಚಂದನಕರ್ಪೂರಂಗಳಂ ಮೇಲೊಟ್ಟಿಕೊಳಲುಂ ತಣ್ಣನಿರ್ಪ ನೀರಂ ಪೊಕ್ಕಿರಲುಂ ಮೇಲೆಱಚಿಕೊಳಲುಂ ಮನಮಾಗಿ ವಿರಹಾನಳನಿಂದಿರಲಾಱದೆ ೧೦೬

ಸಲ್ಲಲಿತಾಂಗಿಯುನ್ನತಿಯನಾರ್ಪೊಗೞಲ್ ಬಗೆವಂದು ಕಾಮನಂ
ಬಲ್ಲದೆ ಕಾಮದೇವನಧಿದೇವತೆಯಲ್ಲದೆ ಕಾಮನಿರ್ಪ ಬೀ
ಡಲ್ಲದೆ ಕಾಮದೇವನ ಪತಾಕಿನಿಯಲ್ಲದೆ ಕಾಮನಾಡುವ
ಚ್ಚಲ್ಲದೆ ಕಾಮನೇಱುವ ಮದದ್ವಿಪಮಲ್ಲದೆ ಕಾಂತೆಯಲ್ಲವಳ್ ೧೦೭

ಬಿಲ್ಲಿನಲ್ಲಿ ಬಹಳ ಜಾಣನೂ ಪ್ರವೀಣನೂ ಎನಿಸಿದ ಸುವೇಗನು ಪ್ರಮಾಥಿಕುಮಾರನ ಪಕ್ಕದಲ್ಲಿದ್ದ ಚಂದ್ರಲೇಖೆಯನ್ನು ಕಂಡು ದೃಷ್ಟಿಮಾತ್ರದಿಂದ ಪ್ರೇಮಿಯಾಗಿ, ಜ್ವರ ಬಂದವನಂತೆ ದಾಹದಿಂದ ಪರವಶನಾಗಿ ? ಕಾದ ಕಬ್ಬಿಣದ ಹಾಗೆ ಮೈಬಿಸಿಯಾಗಿ, ಗಾಳಿಗೆ ಸಿಕ್ಕಿದ ಹತ್ತಿಯಂತೆ ನಡುಗಿ, ಗ್ರಹಹಿಡಿದ ಮನುಷ್ಯನಂತೆ ಮೈಮರೆತು ಭರ್ಜಿಯಿಂದ ತಿವಿಸಿಕೊಂಡವನಂತೆ ಜೋತುಬಿದ್ದು, ಬೇಸಗೆಯಲ್ಲಿ ಪ್ರಯಾಣ ಹೋಗುವವನಂತೆ ಬೆವರುತ್ತ, ಬಿಸಿಲಲ್ಲಿ ಇದ್ದ ಹಸುಳೆಯಂತೆ ಕೊರಗಿ, ಕರು ಸತ್ತ ಹಸುವಿನ ಹಾಗೆ ಸಂಕಟಪಟ್ಟು ದಿವ್ಯ (ಪರೀಕ್ಷೆಗಾಗಿ ಹಿಡಿಯಬೇಕಾದ ಹಾವು, ಬೆಂಕಿ ಇತ್ಯಾದಿ) ವನ್ನು ಹಿಡಿದು ಸೋತವನ ಹಾಗೆ ಕೊರಗಿ ಬೇಗೆಗೆ ಸಿಕ್ಕಿದ ಬೆಟ್ಟದಂತೆ ಕಂದಿ, ಬಾವಿಯ ಮೂಲೆಯಲ್ಲಿ ಬಿದ್ದು ಮಲಗಿದ ಹುಲ್ಲೆಯಂತೆ ಬೆದರಿ, ಬೇತಾಳನನ್ನು ಕಂಡ ಹೇಡಿಯಂತೆ ಮೂರ್ಛೆಹೋಗಿ ಸೈನ್ಯವಿಲ್ಲದ ಕಾಳಗದಂತೆ ಬಹಳವಾಗಿ ಸೋತು, ತಣ್ಣಗಿರುವ ಸ್ಥಳದಲ್ಲಿ ಮಲಗಿ ಗಾಳಿಗೆ ಮೆಯ್ಯೊಡ್ಡಿ ಚಂದನ ಪಚ್ಚಕರ್ಪೂರಗಳನ್ನು ಮೇಲೆ ಹಾಕಿಕೊಳ್ಳಲು, ತಣ್ಣಗಿರುವ ನೀರನ್ನು ಹೊಕ್ಕಿರಲು, ಮೇಲೆ ಎರಚಿಕೊಳ್ಳಲು, ಆಸೆಪಟ್ಟು, ವಿರಹಾಗ್ನಿಯಿಂದ ಇರಲಾರದೆ ಹೋದನು. ೧೦೬. ಆ ಸುಂದರಿಯ ಶ್ರೇಷ್ಠತೆಯನ್ನು ಯಾರು ಹೊಗಳಬಲ್ಲರು? ಇದು ಕಾಮನಬಾಣವಲ್ಲದೆ, ಕಾಮದೇವನ ಅಧಿದೇವತೆ, ಕಾಮನಬೀಡಾರ, ಇದು ಕಾಮದೇವನ ಸೈನ್ಯ, ಕಾಮನು ಆಡುವ ಬೊಂಬೆ, ಕಾಮನು ಏರುವ ಮದ್ದಾನೆ–ಅಷ್ಟೇ ಹೊರತು ಇವಳು ಹೆಂಗಸಲ್ಲ. ೧೦೭. ಮನ್ಮಥನು

ಮನಸಿಜನಾರಡಿಕಾಱಂ
ಮುನಿಸಿಂದೀ ಕಾಂತೆಯೆಂಬ ಕೂರಲಗಿಂ ಗಿ
ರ್ಚಿನೆ ತೂಳ್ದು ಬೇಗಮಿಱಿದಪ
ನೆನಗಿಂ ಸಾವಲ್ಲದುೞಿವ ತೆಱನಂ ಕಾಣೆಂ ೧೦೮

ನೆರವಿಲ್ಲದಿಱಿವ ಕಷ್ಟಂ
ಸರೋಜಮುಖಿಯೀಕೆಯುನ್ನಳಂ ಬಲ್ನೆರವಂ
ನಿರುತಂ ಪಡೆವೊಡೆ ಮಾಣ್ಬನೆ
ಮರುಳಪ್ಪಂ ಮಕ್ಕಳಾದೊಡಂ ಮಾಣ್ದಪನೇ ೧೦೯

ಬಿರುದನೆನೆಂಬ ಮಾತು ಪೆಱಪಿಂಗಿದುದೊಳ್ಭಟನೆಂಬ ಮಾತು ನಿ
ಬ್ಬರಮುಡುಗಿತ್ತು ವೀರನೆನಿಪಗ್ಗದಮಾತದು ದೂರಮಾಯ್ತು ನಿ
ಷ್ಠುರನಿವನೆಂಬ ಮಾತು ತೊಱೆವಾದುದು ಪೆಂಪಿನ ಮಾತು ಕೆಟ್ಟುದೀ
ತರುಣಿಯ ಕಾಣ್ಕೆಯೊಳ್ ಭಯಮು ಮೋಹಮುಮಾದಪುದೆತ್ತವೋಪೆನೋ ೧೧೦

ಎೞೆದಪುದೆತ್ತಿ ನೂಂಕಿದಪುದಿರ್ದೆಡೆಯಿಂ ಕಡಿಕೆಯ್ದು ದರ್ಪದಿಂ
ತೊಲಗಿಪುದುರ್ವಿ ಬೇರ್ವಱಿದು ಕೀಲಿಸಿ ಕಾಡಿಪುದಟ್ಟಿ ಮುಟ್ಟಿ ಮಾ
ರ್ಮಲೆದಪುದೆನ್ನ ಚಿತ್ತಮನಗುರ್ವಿನೊಳೀಕೆಯ ಚೆಲ್ವು ರೂಪು ಸಂ
ಚಲನಯನಂ ಘನಸ್ತನಯುಗಂ ನುತಹಾವ ವಿಳಾಸ ವಿಭ್ರಮಂ ೧೧೧

ಹಿಂಸೆ ಮಾಡುವ ಶತ್ರುವಾಗಿ ಈ ಕಾಂತೆಯೆಂಬ ಹರಿತವಾದ ಕತ್ತಿಯಿಂದ ಗಿರ್ರನೆತಿರುಗಿಸಿ ಬೇಗ ಇರಿಯುತ್ತಾನೆ. ನನಗೆ ಇದು ಸಾವೇ ಹೊರತು ಉಳಿಯುವ ದಾರಿ ಕಾಣೆ. ೧೦೮. ಸಹಾಯವಿಲ್ಲದೆ ಕಾದುವ ನೀಚನು ಈಕೆಯಂಥ ಸರೋಜಮುಖಿಯ ಬಲವಾದ ನೆರವು ಸಿಕ್ಕಿವಾಗ ಅದನ್ನು ಪಡೆದುಕೊಳ್ಳದೆ ಬಿಡುತ್ತಾನೆಯೆ? ಮರುಳಾದವನು ಮಕ್ಕಳನ್ನಾದರೂ ಬಿಡುವನೆ ? ೧೦೯. ಈ ತರುಣಿಯ ದರ್ಶನದಿಂದ ನಾನು ಬಿರುದುಳ್ಳವನೆಂಬ ಮಾತು ಹಿಂದೆ ಉಳಿಯಿತು, ಶ್ರೇಷ್ಠ ಭಟನೆಂಬ ಮಾತು ಶಕ್ತಿಯನ್ನು ಕಳೆದುಕೊಂಡಿತು. ವೀರನೆಂಬ ಹೆಚ್ಚಿನ ಮಾತು ದೂರಹೋಯಿತು. ಇವನು ಕ್ರೂರನೆಂಬ ಮಾತು ತೊರೆ ದಾಟಿತು. ಇನ್ನು ನನ್ನ ಪೆಂಪಿನ ಮಾತು ಹಾಳಾಯಿತು. ಈಗ ಇವಳ ಮೇಲೆ ಮೋಹವುಂಟಾಗುತ್ತಿದೆ, ಭಯವಾಗುತ್ತಿದೆ. ಇದಕ್ಕೆ ಇನ್ನೆಲ್ಲಿ ಹೋಗಲಿ. ೧೧೦. ಈಕೆಯ ಚೆಲುವು, ಚಂಚಲನೇತ್ರ, ಘನವಾದ ಸ್ತನಗಳು, ಇವಳ ಹಾವಭಾವ ವಿಳಾಸಗಳು ನನ್ನನ್ನು ಎಳೆದು ಎತ್ತಿ ನೂಕುತ್ತಿವೆ. ಕುಕ್ಕಿ, ದರ್ಪದಿಂದ ತೊಲಗಿಸುವುವು, ಉಬ್ಬಿ ಬೇರು ಬಿಟ್ಟು ಕಟ್ಟಿ ಕಾಡಿಸುವುದು, ಇವಳ ರೂಪ ನನ್ನ ಮೇಲೆ ನುಗ್ಗಿ ಅಂಜಿಸಿ ಕಾಡುಸುತ್ತಿದೆ. ೧೧೧. ಆ ಸುಂದರಾಂಗಿಯ ಶೋಭೆಯನ್ನು ಎಲ್ಲಿಯೂ ಪಾದಗಳಿಂದ

ಸಲ್ಲಲಿತಾಂಗಿಯ ಪೊಪ್ಪಮ
ನೆಲ್ಲಿಯುಮಾಪಾದಮಸ್ತಕಂಬರೆಗಂ ತ
ಳ್ಪಿಲ್ಲದೆ ನೋಟ್ಪೊಡೆ ಚೋದ್ಯಂ
ಚೆಲ್ಲಂ ಬೀಱುವವೊಲಿರ್ದುವವಯವವನಿತುಂ ೧೧೨

ಬಿರುದರೊಳಾಂತು ಕಾದಿ ಸೆಡೆದುಳ್ಕನೆ ವೀರರೊಳಾಂತು ಕಾದಿ ಮ
ಯ್ಮುರಿಯನೆ ಸೊಕ್ಕಿಮಿಕ್ಕದಟರೊಳ್ ತೊಡರ್ದೆಯ್ದನೆ ಯುದ್ಧದೊಳ್ ಮನಂ
ದಿರಿಯನೆ ಕಾಮನೆಂಬ ಖಳನೀ ಲಲಿತಾಂಗಿಯನೊತ್ತುಗೊಂಡು ಚಿ
ಚ್ಚರವಿಸೆ ಪುಷ್ಪಬಾಣತತಿಗಳ್ಕಿದೆನೋವೊ ಬೆರ್ಚಿದೆಂ ೧೧೩

ಇವಳ ಕಟಾಕ್ಷಮನ್ನೆರ್ದೆಯನುರ್ಚಿಪುದೀಕೆಯ ರೂಪು ದಾಟಿಯೊಳ್
ಕವಿದಪುದೆತ್ತಲೀ ಸತಿಯ ಜವ್ವನಮೆನ್ನನಡುರ್ತು ತಾಗಿ ಕಾ
ಡುವುದತಿ ಕೋಪದುಬ್ಬರದಿನೀಲಲಿತಾಂಗಿಯ ಗಾಡಿ ಸೊಕ್ಕಿ ಕಾ
ದುವ ಬಲು ಬಂದಿಕಾಱನವೊಲಾಱಿಡಿಗೊಂಡಪುದೆನ್ನ ಚಿತ್ತಮಂ ೧೧೪

ಪೋಗದೆ ಸುತ್ತಿಮುತ್ತಿ ಪೊಣರ್ದಳ್ಕದೆ... ತನ್ನ ಗಂಡನಿಂ
ಬಾಗಿರೆ ತೋಱಲೀ ಸತಿಯ ಮುಂದೆ ಮನೋಭವನೆನ್ನನೆತ್ತಲುಂ
ತಾಗಿ ಕನಲ್ದು ಪುಷ್ಪಶರಸಂತತಿಯಿಂ ಬಿಡದೆಚ್ಚು ತಾಳುತ
ಟ್ಟಾಗೆ ತಗುಳ್ದು ಕಾದಿದಪನಾವನನಾಂ ಶರಣೆಂದು ಕಾಣ್ಬೆನೋ ೧೧೫

ತಲೆಯವರೆಗೆ ತಡವಿಲ್ಲದೆ ನೋಡಿದರೆ ಆಶ್ಚರ್ಯವನ್ನೂ ಚೆಲುವನ್ನು ಬೀರುವ ಹಾಗಿದೆ. ೧೧೩. ಶೂರರನ್ನು ಇದಿರಿಸಿ ಕಾದಿ, ಕಾಮನೆಂಬ ನೀಚನು ಈ ಲಲಿತಾಂಗಿಯ ಆಶ್ರಯವನ್ನು ಹೊಂದಿ. ಅಂಜಿಸನೆ ? ವೀರರನ್ನು ಇದಿರಿಸಿ ಕಾದಿ ಮೈಮುರಿಯದೆ ಇರುವನೆ ? ವಿಶೇಷವಾಗಿ ಸೊಕ್ಕಿದ ಶೂರರಲ್ಲಿ ತೊಡಕಿ ತಟ್ಟನೆ ಯುದ್ಧದಲ್ಲಿ ಮನಸ್ಸನ್ನು ತಿರುಗಿಸದಿರುವನೆ ? ಅವನು ಚಿಚ್ಚರದಿಂದ ಹೂವಿನ ಬಾಣಗಳನ್ನು ಎಸೆಯಲು ಅಳುಕಿದೆ ಅಂಜಿದೆ, ಅಯ್ಯೋ ಬೆಚ್ಚಿದೆ. ೧೧೪. ಇವಳ ಕಡೆಗಣ್ಣ ನೋಟವು ನನ್ನ ಎದೆಯನ್ನು ಭೇದಿಸುತ್ತಿದೆ. ಈಕೆಯ ರೂಪ ದಾಳಿಮಾಡಿ ಕವಿದುಕೊಳ್ಳುತ್ತಿದೆ. ಈ ಹೆಂಗಸಿನ ಯೌವನ ನನ್ನನ್ನು ಆಕ್ರಮಿಸಿ ತಾಗಿ ಕಾಡುತ್ತಿದೆ. ಈ ಲಲಿತಾಂಗಿಯ ಸೊಗಸು ಮದಿಸಿ ಯುದ್ಧಮಾಡುವ ವೀರನಂತೆ ನನ್ನ ಚಿತ್ತವನ್ನು ಹಿಂಸೆಗೀಡು ಮಾಡುತ್ತಿದೆ. ೧೧೫. ಹೋಗದೆ ಸುತ್ತಮುತ್ತಿ ಹೋರಾಡುತ್ತ ಅಳ್ಕದೆ, ತನ್ನ ಗಂಡನು ಆಶ್ರಯವಾಗಿರಲು, ಈ ಸತಿಯ ಮುಂದೆ ಮನ್ಮಥನು ನನ್ನನ್ನು ಎಲ್ಲ ಕಡೆಗಳಿಂದಲೂ ದಾಳಿಮಾಡಿ ಸಿಟ್ಟುಗೊಂಡು ಪುಷ್ಪಬಾಣಸಮೂಹದಿಂದ ಒಂದೇ ಸಮನೆ ಹೊಡೆಯುತ್ತ ತಾರುತಟ್ಟಾಗುವ ಹಾಗೆ ಮೇಲೆ ಬಿದ್ದು ಯುದ್ಧ ಮಾಡುತ್ತಿದ್ದಾನೆ, ನಾನು ಯಾರನ್ನು ಶರಣುಹೋಗಲಿ?

ಕುರುಳ ಬೆಡಂಗುಮಂ ಮುಡಿಯ ಚೆಲ್ವಮನಂಬುಜವಕ್ತ್ರದೊಳ್ಪುಮಂ
ಕೊರಲ ಸಮುನ್ನತ ಸ್ತನದ ತೋಳ ಕವುಂಕಳ ಬೆನ್ನ ಭಂಗಿವೆ
ತ್ತಿರವುಮನಣ್ಣ ಬಾಯ್ದೆರೆಯ ಪುರ್ವಿನ ಮೂಗಿನ ಕಂಗಳು
ಬ್ಬರಿಪ ವಿಳಾಸದಂದಮುಮನೀಕ್ಷಿಸಿ ಸೋಲದ ಗಂಡನಾವನೋ ೧೧೬

ಗದ್ಯ॥ ಎಂದು ತನ್ನೊಳೆ ನುಡಿದು ೧೧೭

ಸುರರಾಜಂ ಬಂದು ಮಾರ್ಕೊಂಡೊಡಮಹಿಪತಿ ಬಂದಡ್ಡಮಾಗಿರ್ದೊಡಂ
ಸ್ಕರನಣ್ಮಿಂ ಪೊಂಗಿ ಬಂದಾಂತೊಡಮವನಿಯೊಳುಳ್ಳ ಕ್ಷಿತೀನಾಥರೆಲ್ಲಂ
ಭರದಿಂ ಕೈಕೊಂಡು ವೀರಂಬೆರಸು ಪೆಣರ್ದೊಡಂ ಮಾಣೆನೀ ಕಾಂತೆಯಂ ವಿ
ಸ್ತರದಿಂ ಕೈಕೊಂಡು ಕೊಂದೀತನನವಯವದಿಂ ಭೋಗಿಪೆಂ ರಾಗದಿಂದಂ ೧೧೮

ಗದ್ಯ॥ ಎಂದು ಮನದೊಳ್ ಪ್ರಮಾಥಿಕುಮಾರನಂ ಕೊಲ್ವ ಕಜ್ಜಮನೆತ್ತಿಕೊಂಡು ಪ್ರತಾಪಪರನಪ್ಪುದಱಿಂ ಪ್ರಮಾಥಿಕುಮಾರನೊರ್ವನೆಂದೇಳಿಸಿ ತಾನೆತ್ತಲೊಲ್ಲದೆ ತನ್ನ ನಾಯಕನೊರ್ವನಂ ಕರೆದು ಬಟ್ಟೆವೋಪ ಬಡವನಂ ಕೊಂದು ಕೋಮಲ ಲತಾಲಲಿತಗಾತ್ರೆಯುಂ ವನಜನೇತ್ರೆಯುಮಪ್ಪಾತನ ಪೆಂಡತಿಯುಮನಿಲ್ಲಿಗೆ ತದ್ರಥಂಬೆರಸು ತರ್ಪುದೆಂದು ಬೆಸನಂ ಪೇಳ್ವುದುಮವನಂತೆ ಗೆಯ್ವೆನೆಂದು ಬೆಸನಂ ಕೈಕೊಂಡು ಪೊಡಮಟ್ಟು ತನ್ನ ನೆಲೆಗೆ ವಂದು ತನ್ನ ಬಲಮೆಲ್ಲಮಂ ಕೂಡಿಕೊಂಡು ಪ್ರಮಾಥಿಕುಮಾರನನೈದಿ ತಾಗಿ ೧೧೯

೧೧೬. ಎಂದು ತನ್ನೊಳಗೇ ಹೇಳಿಕೊಂಡನು. ೧೧೭. ದೇವೇಂದ್ರನೇ ಬಂದು ಎದುರಿಸಿದರೂ ಆದಿಶೇಷನೇ ಬಂದು ಅಡ್ಡನಿಂತರೂ ಸೂರ್ಯನು ಪರಾಕ್ರಮದಿಂದ ಉಬ್ಬಿ ಬಂದು ಮೇಲೆ ಬಿದ್ದರೂ ಭೂಮಿಯ ಮೇಲಿರುವ ರಾಜರೆಲ್ಲರೂ ರಭಸದಿಂದ ಬಂದು ವೀರತನದಿಂದ ಹೆಣಗಾಡಿದರೂ ಈ ಕಾಂತೆಯನ್ನು ನಾನು ಬಿಡುವುದಿಲ್ಲ. ಪ್ರಯತ್ನದಿಂದ ಈತನನ್ನು ಬೇಗ ಕೊಂದು ಸಂತೋಷದಿಂದ ಇವಳನ್ನು ಭೋಗಿಸುತ್ತೇನೆ. ೧೧೮. ಎಂದು ಮನಸ್ಸಿನಲ್ಲಿ ಪ್ರಮಾಥಿಕುಮಾರರನ್ನು ಕೊಲ್ಲಲು ಸಂಕಲ್ಪಿಸಿ, ಪ್ರತಾಪಿಯಾದ್ದರಿಂದ ಪ್ರಮಾಥಿಕುಮಾರನು ಒಬ್ಬನೇ ಎಂದು ಅಲಕ್ಷ್ಯದಿಂದ ತಾನೇ ದಂಡೆತ್ತಲು ಇಷ್ಟವಿಲ್ಲದೆ ತನ್ನ ನಾಯಕನೊಬ್ಬನನ್ನು ಕರೆದು ದಾರಿಹೋಕನಾದ ಆ ಬಡವನನ್ನು ಕೊಂದು ಆ ಕೋಮಲೆಯಾದ ಸುಂದರಿಯನ್ನು ಆ ರಥದೊಡನೆ ಇಲ್ಲಿಗೆ ತರತಕ್ಕದೆಂದು ಅಪ್ಪಣೆಮಾಡಲು ಅವನು ಹಾಗೆಯೇ ಆಗಲೆಂದು ಆ ಕೆಲಸವನ್ನು ಒಪ್ಪಿ ನಮಸ್ಕರಿಸಿ ತನ್ನ ಸ್ಥಳಕ್ಕೆ ಬಂದು ತನ್ನ ಸೈನ್ಯವೆಲ್ಲವನ್ನೂ ಕರೆದುಕೊಂಡು ಪ್ರಮಾಥಿಕುಮಾರವನ್ನು ಸೇರಿ ಕಾಳಗ ಹೂಡಿದನು. ೧೧೯. "ಈ ಚಂಚಲ

ನಿನಗೇಕೀ ತರಳಾಯತಾಕ್ಷಿ ನಿನಗೇಕೀ ಸೌಂದರಾಕಾರೆ ಕಾ
ಮಿನಿಯಂ ಕಾಯದೆ ಬಿಟ್ಟು ಪೋಗು ಪದಪಿಂದೀ ಕಾಂತೆಯಂ ಬಿಟ್ಟು ಭೋಂ
ಕನೆ ನೀಂ ಪೋಗದೆ ನಿಂದೆಯಪ್ಪೊಡಟಿವಕ್ಕೆಂದಾರ್ದು ಬಿಲ್ಲಾಳ್ಮಹಾ
ಮುನಿಸಿಂದಂ ಶರವೃಷ್ಟಿಯಂ ಸುರಿವುದುಂ ವಾತ್ಸಲ್ಯರತ್ನಾಕರಂ ೧೨೦

ಜಿನಪಾದಾಂಬುಜ ಯುಗ್ಮಮಂ ನೆನೆದು ಬಿಲ್ಲಂ ಕೊಂಡು ಕೈಗಾಯದೊ
ರ್ವನೆ ಬಂದೊಡ್ಡಿದ ವೈರಿಯಾಳನದಟಂ ಬಾಣಾಳಿಯಿಂದಿಕ್ಕಿ ಮೆ
ಲ್ಲನೆ ವೀರಂ ನಗುತುಂ ಮನೋರಮೆಗೆ ತೋಱುತ್ತಿರ್ಪಿನಂ ಭೃತ್ಯನೊ
ರ್ವನಮೋಘಾಸ್ತ್ರನ ಬಾಣದಿಂ ಬರ್ದುಕಿ ಭೀತಾತ್ಮಂ ಮಹಾಭೀತಿಯಿಂ ೧೨೧

ಗದ್ಯ॥ ಬಂದು ಸುವೇಗಂಗೆ ನಾಯಕರ ಭೃತ್ಯರ ಸಾವುಮಂ ಪ್ರಮಾಥಿಕುಮಾರನ ವೀರಮುಮಂ ಬಿನ್ನಪಂಗೆಯ್ವುದುಂ ಮುನಿದು ಕೋಪಾವೇಶದಿಂ ನಾಯಕರೆಲ್ಲರಂ ಕರೆದು ಬೆಟ್ಟಮಂ ಗುಂಗುರು ಕಾಡಿತ್ತೆಂಬ, ಗಜಮಂ ನರಿ ನುಂಗಿತ್ತೆಂಬ, ಸಿಂಹಮಂ ನಾಯ್ ಕೆಣಕಿತೆಂಬ ಶರಭನನಿರಲೆ ಱೋಡಾಡಿಸಿತೆಂಬ, ಮಾತಿನಂತೆ, ಬಟ್ಟೆವೋಪ ತಿರಿಕನೊರ್ವನೆನ್ನ ನಾಯಕನಂ ಕೊಂದು ಬಲಮೆಲ್ಲಮನಿಕ್ಕಿ ವೀರಕ್ಕೆ ತೊನೆದುದ್ಧತಂ ಮೆಟ್ಟಿ ಗಂಡಿಂಗಾನೆ ಪಿರಿಯನೆಂದಿರ್ದಪಂ ಗಡಮವನನೀಗಳೆ ನೀವೆನಿಬರುಂ ಪೋಗಿ ಕಾದಿ ದರ್ಪಮಂ ಕೆಡಿಸಿ ಕೊಲಲ್ವೇಡ ಪಿಡಿದು ಕೋಡಗಗಟ್ಟು

ನೇತ್ರೆಯು ನಿನಗೇತಕ್ಕೆ? ಈ ಸೌಂದರ್ಯರಾಶಿ ನಿನಗೇಕೆ ? ಈ ಕಾಮಿನಿಯನ್ನು ತಡಮಾಡದೆ ಇಲ್ಲಿ ಬಿಟ್ಟು ಹೋಗು. ಆಸೆಯಿಂದ ಈ ಕಾಂತೆಯನ್ನು ನೀನು ಒಡನೆಯೇ ಬಿಟ್ಟು ಹೋಗದಿದ್ದರೆ ನಿನಗೆ ವಿನಾಶ ಖಂಡಿತ" ಎಂದು ಅಬ್ಬರಿಸಿ ಆ ಬಿಲ್ಲಾಳು ಮಹಾ ಕೋಪದಿಂದ ಬಾಣದ ಮಳೆಯನ್ನು ಕರೆಯಲು ೧೨೦. ವಾತ್ಸಲ್ಯಸಮುದ್ರನಾದ ಪ್ರಮಾಥಿಕುಮಾರನು ಜಿನಪಾದಕಮಲಗಳನ್ನು ಸ್ಮರಿಸಿ ಬಿಲ್ಲನ್ನು ಹಿಡಿದು ತಡೆಯದೆ ತಾನೊಬ್ಬನೇ ಬಂದು ಎದುರಿಸಿದ ವೈರಿಸೈನ್ಯವನ್ನು ಬಾಣಸಮೂಹದಿಂದ ಹೊಡೆದು ವೀರನು ನಕ್ಕು ತನ್ನ ಹೆಂಡತಿಗೆ ತೋರಿಸುತ್ತಿದ್ದನು. ಆಗ ಆತನ ಅನ್ವರ್ಥವಾದ ಬಾಣಗಳಿಂದ ಹೇಗೋ ತಪ್ಪಿಸಿಕೊಂಡು ಬದುಕಿ ಮಹಾ ಭಯದಿಂದ ಬಂದು ಸುವೇಗನಿಗೆ ನಾಯಕರ ಮರಣವನ್ನೂ ಆ ಕುಮಾರನ ಶೌರ್ಯವನ್ನೂ ಬಿನ್ನಹಮಾಡಲು ಸಿಟ್ಟಾಗಿ ಕೋಪದ ಭರದಲ್ಲಿ ಎಲ್ಲ ನಾಯಕರನ್ನೂ ಕರೆದು "ಬೆಟ್ಟವನ್ನು ಗುಂಗುರು ಕಾಡಿಸಿತೆಂಬಂತೆ, ಆನೆಯನ್ನು ನರಿ ನುಂಗಿತ್ತೆಂಬಂತೆ ಸಿಂಹವನ್ನು ನಾಯಿ ಕೆಣಕಿತೆನ್ನುವ ಹಾಗೆ ಶರಭವನ್ನು ಜಿಂಕೆಯು ಹಾಸ್ಯಮಾಡಿತೆಂಬ ಮಾತಿನಂತೆ, ದಾರಿಯಲ್ಲಿ ಹೋಗುವ ತಿರುಕನೊಬ್ಬನು ನನ್ನ ಸೈನ್ಯದ ನಾಯಕನನ್ನು ಕೊಂದು ಸೈನ್ಯವನ್ನೆಲ್ಲ ಹೊಡೆದು ವೀರತನದಿಂದ ಮೆರೆದು ಉದ್ಧತನಾಗಿ ಗಂಡುತನಕ್ಕೆ ನಾನೇ ಹಿರಿಯನು ಎಂದಿರುವನಲ್ಲವೆ? ನೀವೆಲ್ಲರೂ ಹೋಗಿ ಅವನನ್ನು ಕೊಲ್ಲದೆ ಹಿಡಿದು ಕೋಡಗವನ್ನು ಕಟ್ಟುವಂತೆ ಕಟ್ಟಿ

ಗಟ್ಟಿಕೊಂಡೆನ್ನಲ್ಲಿಗೆ ತನ್ನಿಮಾತನನೆನ್ನ ಕಣ್ಣಣವಿನಮಾನೆ ನಾನಾವಿಧದಿಂ ಕೊಂದು ದೆಸೆವಲಿಗೆಯ್ದು ಬಳಿಕವಾತನ ಪೆಂಡತಿಯನರಸಿ ಮಾಡಿಕೊಳ್ವೆನೆಂದು ಬೆಸಸುವುದುಂ ೧೨೨

ನೆರೆದು ಸಮಸ್ತ ತಸ್ಕರರಗುರ್ವಿನೊಳುರ್ವಿ ಕಡಂಗಿ ಪೆರ್ಬಲಂ
ಬೆರಸು ಮಹಾ ಸಮುದ್ರಮೆಳೆಯಂ ತಳರ್ವಂತೆ ಧರಿತ್ರಿ ಭಾರದಿಂ
ಬಿರಿಯೆ ಧರಿತ್ರಿ ಮರ್ತ್ಯಮಯಮೊದವೊಲದ್ಭುತಮಾಗೆ ಕೋಪದಿಂ
ದುರಿಯುತುಮುಕ್ಕಿ ಸೊಕ್ಕಿ ಕಡುಪಿಂ ತಳರ್ದತ್ತು ಪುಳಿಂದಸಾಧನಂ ೧೨೩

ಗದ್ಯ॥ ಅಂತೆತ್ತಿ ಬಂದು ಪ್ರಮಾಥಿ ಕುಮಾರನ ರಥಮಂ ಮೂವಳಸಾಗೆ ಮುತ್ತಿಕೊಂಡು ಪೋಗದಡ್ಡಂಬಿನ ಕೂರಂಬಿನ ಕವಲಂಬಿನ ಪಾಱುಂಬಳಿಯ ಕಕ್ಕಡೆಯ ಮಿಟ್ಟೆಯ ಮೊಟ್ಟೆ ಪರಲ ಬಲ್ವರಲಂ ಸುರಿಯೆ ೧೨೪

ಇದು ಪೆರ್ಬಲಮಾನೊರ್ವನೆ
ಕದನಂ ಪಿಂದಕ್ಕುಮೆಂದು ಮನದೊಳ್ ಬೆಚ್ಚಿ
ಲ್ಲದೆ ಕೋಪಮಿಲ್ಲದಿರ್ದಂ
ವಿದಿತಯಶಃಪ್ರಕರನಮಳ ಚಾರುಚರಿತ್ರಂ ೧೨೫

ನನ್ನ ಬಳಿಗೆ ತನ್ನಿ, ಅವನನ್ನು ನನ್ನ ಕಣ್ಣಿದಣಿಯುವಂತೆ ನಾನೇ ಅನೇಕ ವಿಧಗಳಿಂದ ಕೊಂದು ದಿಗ್ಬಲಿಕೊಡುತ್ತೇನೆ. ಆಮೇಲೆ ಅವನ ಹೆಂಡತಿಯನ್ನು ನನ್ನ ಅರಸಿ ಮಾಡಿಕೊಳ್ಳುತ್ತೇನೆ," ಎಂದು ಹೇಳಿದನು. ೧೨೧-೧೨೨ ಎಲ್ಲ ಕಳ್ಳರೂ ಸೇರಿ ಪರಾಕ್ರಮದಿಂದ ಉಬ್ಬಿ ಉತ್ಸಾಹಗೊಂಡು ದೊಡ್ಡ ಸೈನ್ಯದೊಡನೆ, ಮಹಾಸಮುದ್ರವು ಭೂಮಿಯ ಮೇಲೆ ನುಗ್ಗುವಂತೆ, ಭೂಮಿ ಆ ಸೈನ್ಯದಿಂದ ಬಿರುಕು ಬಿಟ್ಟಿತೆಂಬಂತೆ, ಭೂಮಿ ಜನಮಯವಾಗಲು ಕೋಪದಿಂದ ಉರಿಯುತ್ತ ಆ ಬೇಡರ ಸೈನ್ಯ ಸೊಕ್ಕಿನಿಂದ ಉಬ್ಬಿ ಹೊರಟಿತು. ೧೨೩. ಹಾಗೆ ದಂಡೆತ್ತಿ ಬಂದು ಪ್ರಮಾಥಿ ಕುಮಾರನ ರಥವನ್ನು ಮೂರು ಸುತ್ತಾಗುವಂತೆ ಸುತ್ತುಗಟ್ಟಿ ಹೋಗದಂತೆ ಅಡ್ಡಿಪಡಿಸಿ ಹರಿತವಾದ ಬಾಣಗಳ, ಕವಲುಬಾಣಗಳ ಮತ್ತು ಚಕ್ರಾಯುಧಗಳ ಕಕ್ಕಡೆ ಮೊದಲಾದ ಅನೇಕ ಬಲವಾದ ಶಸ್ತ್ರಗಳ ರಾಶಿಯನ್ನೇ ಸುರಿದರು. ೧೨೪. ಪ್ರಮಾಥಿಯು "ಇದು ದೊಡ್ಡ ಸೈನ್ಯ ನಾನೊಬ್ಬ, ಕಾಳಗ ದೊಡ್ಡದಾಗುವುದು" ಎಂದು ಮನಸ್ಸಿನಲ್ಲಿ ಭಯವಿಲ್ಲದೆ, ಕೋಪವಿಲ್ಲದೆ ಇದ್ದನು. ಆ ಪ್ರಸಿದ್ಧ ಕೀರ್ತಿವಂತನಾದ ಶುದ್ಧಚರಿತ್ರವಾದ ಕುಮಾರನು ಹಾಗಿದ್ದು ಲೀಲಾಜಾಲವಾಗಿ ಅಷ್ಟು ಬಾಣಗಳಿಗೂ ರಭಸದಿಂದ ಒಂದಂ

ಅಂತಿದಿರ್ಗಾಯ್ದನ ಲೀಲೆಯಿಂದನಿತು ಬಾಣಕ್ಕಂ ಭರಂಗೆಯ್ದು ನಿ
ಶ್ಚಿಂತಂ ಸಾಯಕವೊಂದನೆಚ್ಚನಿತುಮಂ ಬಲ್ಪಲ್ಮೆಯಿಂ ಭೂಪನೋ
ರಂತಲ್ಲಾಡೆ ತಗುಳ್ದು ಖಂಡಿಸುವುದುಂ ಸಿಗ್ಗಾಗಿ ಬಂದೆಗ್ಗಿನೊ
ಳ್ಪಿಂತಿಂಗೋಡದೆ ಬೆಚ್ಚಿ ಕಟ್ಟಿದಲಗಿಂ ಕಿತ್ತಣ್ಮಿ ನಿಂದಿರ್ಪುದುಂ ೧೨೬

ಗದ್ಯ॥ ಚಂದ್ರಲೇಖೆ ನಕ್ಕು ದೇವ ನಿನಗಿವರ್ ದೊರೆಯಲ್ಲ. ಇವರ ನಿನ್ನ ಪ್ರತಾಪಮುಮಾರಯ್ವಂದು ಸಿಂಹದ ನಾಯು, ಕರಿಯು ನರಿಯು. ಪುಲಿಯು ಪುಲ್ಲೆಯು ತೋಳನ ಕುರಿಯು,ಗರುಡನ ಪಾವಿನ, ಬಲಾಬಲಂಗಳಂ ಪೋಲ್ಕುಮಿವರ್ ತಮ್ಮ ಬಂದೆಗ್ಗಿನೊಳ್ ಸಿಗ್ಗಾಗಿ ತಮ್ಮಾಳ್ದನ ಮೊಗಮಂ ಮಗುಳ್ದು ಪೋಗಿ ನೋಡಲ್ ನಾಣ್ಚಿ ದೇವರ ಬಾಣಾವಳಿಯೊಳ್ ಬರ್ದಕ್ಕಾಟಲ್ ಬಗೆದಪರ್ ; ಗೆಲ್ಲದ ಕಾಳಗದಿಂದೋಟಮೆ ಲೇಸೆಂಬುದು ; ನರಿಯುಂ ಬಡಿದೊಡೆ ಪೇಲ್ ಸುರಿಗುಮಲ್ಲದೆ ಲಾಭಮಿಲ್ಲದದುಕಾರಣದಿಂದಿನಿಬರುಮಂ ಬಱಿದೆ ಕೊಂದು ಪಾಪಮಂ ಮಾಡಿಕೊಳ್ಳದೆ ನಿದ್ರಾಬಾಣದಿಂದಿನಿಬರ್ಗಂ ನಿದ್ರೆಯುಂ ಮಾಡಿ ಸುಖದಿಂ ಪೋಪಮೆಂಬುದುಂ ಪ್ರಮಾಥಿಕುಮಾರಂ ನಲ್ಲಳ ಮಾತಿಂಗಂ ಮನದ ಕಾರುಣ್ಯಬುದ್ಧಿಗಂ ಮೆಚ್ಚಿ ಶುದ್ಧೆಯೆಂದಱಿದು ೧೨೭

ಬಾಣವನ್ನು ಹೊಡೆದು ಎಲ್ಲರೂ ತಲ್ಲಣಿಸುವಂತೆ ಖಂಡಿಸಲು ನಾಚಿಕೆಪಟ್ಟು, ಬಂದ ಅವಮಾನದಿಂದ ಹಿಂದಕ್ಕೆ ಓಡಿಹೋಗಲಾರದೆ ಹೆದರಿ ಕತ್ತಿ ಬಾಣಗಳನ್ನು ಧರಿಸಿ ನಿಂತಿರಲು ೧೨೫-೧೨೬. ಚಂದ್ರಲೇಖೆ ನಕ್ಕಳು. "ದೇವ, ಇವರು ನಿನಗೆ ಸಮನಲ್ಲ (ನಿನ್ನ ಪರಾಕ್ರಮವನ್ನೂ ಇವರ ಯೋಗ್ಯತೆಯನ್ನೂ) ಗಮನಿಸಿದರೆ ಸಿಂಹ-ನಾಯಿ, ಆನೆ-ನರಿ, ಹುಲಿ-ಹುಲ್ಲೆ, ತೋಳ-ಕುರಿ, ಗರುಡ-ಹಾವು-ಇವುಗಳ ಬಲಾಬಲಗಳನ್ನು ಹೋಲುವುವು. ಇವರು ಬಂದ ಅಪಮಾನಕ್ಕೆ ನಾಚಿಕೊಂಡು ಹಿಂತಿರುಗಿ ಹೋಗಿ ತಮ್ಮ ಒಡೆಯನ ಮುಖವನ್ನು ನೋಡಲು ನಾಚಿ ತಮ್ಮ ಬಾಣಾವಳಿಗೆ ಸಿಕ್ಕಿ ಸಾಯಲು ಯೋಚಿಸಿದ್ದಾರೆ ; ಗೆಲ್ಲದ ಯುದ್ಧದಿಂದ ಓಡುವುದೇ ಲೇಸೆನ್ನುವರು ; ನರಿಯನ್ನು ಬಡಿದರೆ ಹೇಲು ಸುರಿಯುವುದಲ್ಲದೆ ಲಾಭವಿಲ್ಲ. ಆದ್ದರಿಂದ ಇಷ್ಟರನ್ನೂ ಸುಮ್ಮನೆ ಕೊಂದು ಪಾಪ ಗಳಿಸದೆ, ನಿದ್ದೆಯ ಬಾಣದಿಂದ ಇಷ್ಟು ಜನಕ್ಕೂ ನಿದ್ರೆಯನ್ನು ತರಿಸಿ ಸುಖವಾಗಿ ಹೋಗೋಣ, ಎನ್ನಲು ಪ್ರಮಾಥಿಕುಮಾರನು ಪ್ರಿಯೆಯ ಮಾತಿಗೂ ಮನಸ್ಸಿನ ಕಾರುಣ್ಯಕ್ಕೂ ಮೆಚ್ಚಿಕೊಂಡು ಅವಳು ದರ್ಶನವಿಶುದ್ಧಳೆಂದು ತಿಳಿದನು. ೧೨೭. ಪ್ರಿಯಳ ಬುದ್ಧಿಯನ್ನು ಮೆಚ್ಚಿ ರಾಜನು ಆಗ ಆ ದುರ್ಜನರನ್ನು ಕೊಲ್ಲು

ಇನಿಯಳ ಬುದ್ಧಿಯಂ ಮನದೆಗೊಂಡು ಮಹೀಶ್ವರನಾಗಳಲ್ಲಿ ದು
ರ್ಜನರನುಪಾಯದಿಂ ಕೊಲಲು ಚಿಂತೆನಡುರ್ತ್ತು(?) ವಿವೇಕದಿಂದೆ ಮೆ
ಲ್ಲನೆ ದಯೆ ಪುಟ್ಟೆ ನಿದ್ರೆಯನೆ ಮಾಡುವ ಶಕ್ತಿಯನುಳ್ಳ ಬಾಣಮೊಂ
ದನೆ ತೆಗೆದಾರ್ದು ನಿಂದಿಸುವುದುಂ ರಿಪು ಸೇನೆ ಬಟಲ್ದು ನಿದ್ರೆಯಿಂ ೧೨೮

ಗದ್ಯ॥ ಬಡಿಕೊಂಡ ನೆಲ್ಲಿಯಂತೆ ನೆಲಕ್ಕೆ ಬೀೞ್ವುದುಂ ಅವರಪಜಯಮಂ ಸುವೇಗಂ ಕೇಳ್ದು ಕ್ಕುಡಿಸೆ, ನೆಲನಂ ಪೊಯ್ದು ಮೆಯ್ಯಱಿಯದೆ ತನ್ನ ಮುಂದಣ ನರಕ ಗಮನಮಂ ತೋರ್ಪಂತೆ ಕಂಪಿಸುವ ಮೆಯ್ಯುಂ ಕೆಚ್ಚನಾದ ಕಣ್ಣುಂ ಬೆಚ್ಚನಾದ ತನುವುಂ ಉರಿವೆರ್ದೆಯುಂಬೆರಸಗುರ್ವಾಗೆ ಮಸಗಿದ ಸಿಂಹದಂತಿರ್ದ ಸುವೇಗಂಗೆ ಪ್ರಧಾನರುಂ ಬುದ್ಧಿವಂತರುಂ ಚಾತುರ್ಯಮಪ್ಪವರುಂ ದೀರ್ಘಶರೀರಿಗಳುಂ ಕಾರ್ಯವೇದಿಗಳಪ್ಪವರುಮಿಂತೆಂದು ಪೇೞ್ದರ್ ೧೨೯

ಸೆರಗಂ ಪಾರದೆ ನಮ್ಮ ನಾಯಕರನಿಂದಾಟಂದು ಕೊಂದಿಕ್ಕಿ ಭಾ
ಸ್ಕರತೇಜಂ ಕಲಿಯಾಗಿ ಪೋಗದೆ ಭರಂಗೆಯ್ದಿರ್ದನೆಂದಂದು ನಿ
ಷ್ಠುರ ವೀರತ್ವಮನಾರ್ಪನಣ್ಮನದಟಂ ಕಾರ್ಯತ್ವಮಂ ಪೆಂಪನು
ರ್ವರೆಯೊಳ್ ಬಣ್ಣಿಪನಾವನಾತನಿದಿರೊಳ್ ನಿಂದಾಂತು ಮೆಯ್ದಾಗುವರಾರ್ ೧೩೦

ವುದಕ್ಕೆ ಹಿಂತೆಗೆದು ವಿವೇಕದಿಂದ ಮೆಲ್ಲಗೆ ಅವರಿಗೆ ನಿದ್ದೆಯನ್ನು ತರಿಸುವಂಥ ಬಾಣವನ್ನು ಹೂಡಿ ಹೊಡೆಯಲು ಶತ್ರು ಸೈನ್ಯವು ಒಳಲಿ ನಿದ್ದೆಯಲ್ಲಿ ಮುಳುಗಿತು. ೧೨೮. ಪೆಟ್ಟು ತಿಂದ ನೆಲ್ಲಿಯ ಕಾಯಿಗಳಂತೆ ನೆಲಕ್ಕೆ ಬೀಳಲು, ಅವರ ಅಪಜಯವನ್ನು ಸುವೇಗನು ಕೇಳಿ ರೋಷದಿಂದ ನೆಲ ಗುದ್ದಿ ಮೈಮೇಲೆ ಎಚ್ಚರವಿಲ್ಲದೆ ತನ್ನ ಮುಂದಿನ ನರಕ ಪ್ರಯಾಣವನ್ನು ತೋರಿಸುವಂತೆ ಮೈನಡುಕ ಹತ್ತಿ, ಕಣ್ಣು ಕೆಂಪಗಾಗಿ, ಮೈಬೆಚ್ಚಗಾಗಿ ಎದೆಯಲ್ಲಿ ಉರಿ ಹತ್ತಿ ಭಯಂಕರವಾಗಿ ಸಿಟ್ಟುಗೊಂಡ ಸಿಂಹದಂತೆ ಇದ್ದ ಸಂವೇಗನಿಗೆ ಪ್ರಧಾನರೂ ಬುದ್ಧಿವಂತರೂ ಚತುರರೂ ಆಢ್ಯರೂ ಕಾರ್ಯವನ್ನು ಬಲ್ಲವರೂ ಹೀಗೆ ಹೇಳಿದರು. ೧೨೯. ಸಹಾಯವನ್ನು ಕೋರದೆ ಇಂದು ನಮ್ಮ ನಾಯಕರನ್ನು ಕಾದಿ ಕೊಂದು ಹಾಕಿದ ಆ ಭಾಸರ್ಕತೇಜಸ್ಸಿನ ಶೂರನು ಹೆದರಿಕೊಳ್ಳದೆ ರಭಸದಿಂದ ಕಾದುತ್ತಿರುವೆನೆಂದಾಗ, ಅವನ ಮಹಾವೀರ್ಯ, ಪರಾಕ್ರಮ, ಶೌರ್ಯದ ಪೆಂಪುಗಳನ್ನು ಲೋಕದಲ್ಲಿ ವರ್ಣಿಸಬಲ್ಲವನು ಯಾವನು ? ಆತನ ಇದಿರಿಗೆ ನಿಂತು ಯುದ್ಧ ಮಾಡುವವರು ಯಾರು ? ೧೩೦. ಅವನು ಒಬ್ಬನೇ, ಯಾರೂ ಸಹಾಯಕ್ಕಿಲ್ಲ. ಈ

೯೧೧

ನೆರವಿಲ್ಲೊರ್ವನೆ ದಿವ್ಯಕಾಮಿನಿಯನೀ ರೌದ್ರಾಟವೀ ಮಧ್ಯದೊಳ್
ಭರದಿಂದೊಯ್ದಪನೆಂದೊಡಾತನಳವಂ ಸೌಂದರ್ಯಮಂ ಧೈರ್ಯಮಂ
ಬಿರುದಂ ಬಣ್ಣಿಪನಾವನೇಟಿಸಿದತನಂಗೆಯ್ದಾತನಂ ಕೊಂದು ಸೌಂ
ದರಿಯೊಳ್ ಕೂಡುವೆನೆಂಬುದೆಗ್ಗು ಮರುಳೇ ಸೀಳಿಕ್ಕದೇಂ ಮಾಣ್ಬನೇ ೧೩೧

ಪರವೆಣ್ಣೊಳಿದಳೆಂದು ಕೊರ್ತು ಸೆಱೆಯಿಟ್ಟಾರೆಂದೊಡಂ ಮಾಣದೊ
ರ್ವರುಮಂ ಕಾಣಿಕೆಗೊಳ್ಳದುಕ್ಕಿ ಬಲಮಂ ನಚ್ಚಿರ್ದ ಲಂಕೇಶನಾ
ದೊರೆಯಂ ನಾಯವೊಲಣ್ಮುಗೆಟ್ಟು ಮಡಿದಂ ತಾನೆಂದೊಡಾಡಾಗಿ ಸಾ
ಯದೆ ದೂಱುಗೆಡೆಯಾಗಿ ಬೇಯರೆ ಪರಸ್ತ್ರೀಗಾಸೆಗೆಯ್ದಿರ್ಪವರ್ ೧೩೨

ಪರವಧುವೆನ್ನದಗ್ನಿಜೆಗೆ ಸೋಲ್ತು ಸುಯೋಧನನನ್ನನುಂ ಮಹೀ
ಧರನಿಭಧೈರ್ಯನಪ್ಪ ವಿಭುವಪ್ಪ ಮಹಾಗುಣಯುಪ್ಪ ಭೀಮನಿಂ
ದರಿಯುವೊಲಟ್ಟಿ ತೂಳ್ದಿ ಗದೆಯಿಂ ನೆಱೆ ಮೋದಿಸಿಕೊಂಡು ಸತ್ತನಾ
ದೊರೆಯನುಮೆಂದೊಡಾರಟಿಯರನ್ಯರ ಪೆಂಡತಿಗಾಸೆವಟ್ಟವರ್ ೧೩೩

ಗದ್ಯ॥ ಅದುಕಾರಣದಿಂ ಪರಸ್ತ್ರೀಯ ನೋಟಮಂ ಜವನ ಕಾಟಮೆನ್ನದೆ, ಪೆಱರ ಪೆಂಡಿರ ಚೆಲ್ವುಮಂ ಸೂಲಮೆನ್ನದೆ, ಲೋಗರ ಭಾರ್ಯೆಯರ ವಿಳಾಸಮಂ ಮೃತ್ಯುವಿನ ಕಯ್ಯ ಪಾಶಮೆಂದೆನ್ನದೆ, ಅನ್ಯಾಂಗನೆಯರ ರೂಪಂ ಪಾಪದ ಬಟ್ಟೆಯೆನ್ನದೆ, ಮೆಚ್ಚಿ ನಚ್ಚಿ ಕೂಡುವ ಬಯಕೆ

ಭಯಂಕರವಾದ ಅಡವಿಯಲ್ಲಿ ದಿವ್ಯಸ್ತ್ರೀಯನ್ನು ಜತೆಗೂಡಿ ಹೊರಟಿದ್ದಾನೆಂದರೆ ಅವನ ಸಾಮರ್ಥ್ಯ, ಧೈರ್ಯ, ಕೀರ್ತಿಪರಾಕ್ರಮಗಳನ್ನು ಇನ್ನು ಹೇಳುವುದೇನಿದೆ ? ಅವನನ್ನು ಅಲಕ್ಷ್ಯದಿಂದ ಕಾದಿ ಕೊಂದು ಅವನ ಸುಂದರಿಯನ್ನು ಕೂಡುವೆನೆಂದು ಹೇಳುವುದು ದಡ್ಡತನ. ಅವನು ನಿನ್ನನ್ನು ಸೀಳಿಹಾಕದೆ ಬಿಡುವನೆ ? ೧೩೧. ಪರಸ್ತ್ರೀ ಚೆನ್ನಾಗಿರುವಳೆಂದು ಪ್ರೀತಿಸಿ ಹಿಡಿತಂದು ಸೆರೆಯಿಟ್ಟು ಯಾರು ಹೇಳಿದರೂ ಬಿಡದೆ ಒಬ್ಬರನ್ನೂ ಲಕ್ಷಿಸದೆ ಉಬ್ಬಿ ಬಲವನ್ನೇ ನಂಬಿದ್ದ ಲಂಕೇಶ್ವರನೂ ನಾಯಿಯ ಹಾಗೆ ಶಕ್ತಿಗುಂದಿ ಸತ್ತನೆಂದಮೇಲೆ ಪರಸ್ತ್ರೀಗೆ ಆಸೆಪಟ್ಟವರು ಆಡು ಸತ್ತಂತೆ ಅಸಹಾಯರಾಗಿ ಸಾಯರೆ ? ಅಪವಾದಕ್ಕೆ ಸಿಕ್ಕಿ ಬೆಂದು ಹೋಗರೆ ? ೧೩೨. ಪರರ ಹೆಂಡಿರೆನ್ನದೆ ದ್ರೌಪದಿಗೆ ಆಸೆಪಟ್ಟು ಸುಯೋಧನನಂಥವನೂ ಮಹಾ ಗುಣವಂತನೂ ಧೀರನೂ ಆದ ಭೀಮನಿಂದ ಗದೆಯ ಪೆಟ್ಟಿಗೆ ಸಿಕ್ಕಿ ಸತ್ತನೆಂದಮೇಲೆ ಅನ್ಯರ ಹೆಂಡಿರಿಗೆ ಆಸೆಪಟ್ಟವರು ಯಾರು ತಾನೆ ನಾಶ ಹೊಂದುವುದಿಲ್ಲ ? ೧೩೩. ಆದ್ದರಿಂದ ಪರಸ್ತ್ರೀಯ ನೋಟ ಯಮನ ಕಾಟ, ಪರರ ಹೆಂಡಿರ ಚೆಲುವು ಶೂಲ, ಕಂಡವರ ಹೆಂಡಿರ ವಿಲಾಸ ಮೃತ್ಯುವಿನ ಕೈಯಲ್ಲಿನ ಪಾಶ, ಅನ್ಯಸ್ತ್ರೀಯರ ರೂಪ ಪಾಪದ ದಾರಿ, ಎಂದು ತಿಳಿಯದೆ ಅವರನ್ನು ಮೆಚ್ಚಿ

ಯನುಳ್ಳಾತಂ ಸಱಿಯನೇಱಿ ನೆಲಕ್ಕೆ ಬೀೞ್ವ, ಕರಡಿಗಿದಿರಾಗಿ ಪುಯ್ಯಲಿಡುವ, ಪುಲಿಯ ಮುಂದೆ ಪಟ್ಟಿರ್ಪ, ಪಸಿದ ರಕ್ಕಸಿಯಂ ಕೆಳೆಗೊಳ್ವ, ಸಿಂಗದ ಮಿಾಸೆಯುಮಂ ಕೀಳ್ವ, ಶರಭಮುಂ ಪಿಡಿದೇಱುವ, ನೃಪರ ಮಂಡೆಯುಮಂ ಪೊಯ್ವ, ಮಸೆದ ಸುರಗಿಯುಮಂ ನುಂಗುವ, ಕಿಚ್ಚಂ ಪುಗುವ, ಪಾವಿನ ಬಾಯೊಳ್ ಕೈಯನಿಡುವ, ಪರರ ಬಂಡಿಗೆ ಕಾಲಂ ನೀಡುವ, ಸುಣ್ಣಮುಂ ಬಱಿದೆ ತಿಂಬೆಗ್ಗನಂ ಪೋಲ್ಕುಮಿಂತು ೧೩೪

ಪರಕಾಂತಾನಿಕರಕ್ಕೆ ಸೋಲ್ತು ಮನಮಂ ಸಂತಯ್ಸಲೇನಾಱದು
ಬ್ಬರದಿಂದುಬ್ಬರಮಾಗಿ ಕೂಡಿ ಪಿರಿದಾಟಂದೆತ್ತಿನೊಳ್ಪೊಡಿ ಮೇ
ಣ್ಪರಿಂದುಂ ವಿಗ್ರಹದಿಂದೆ ದಂಡಿಸಿ ಮಹಾ ದುಃಖತ್ವಮಂ ಮಾಡಿ ಮೇಣ್
ಧರಣೀಶರ್ ಕೊಲೆ ಸತ್ತು ಮತ್ತೆ ನರಕಂಬೊಕ್ಕಿರ್ಪರಾ ಪಾತಕರ್ ೧೩೫

ಪರವಧುಗಾಸೆಗೆಯ್ವ ನರನುಂ ಕುಲವೆಂಡಿರನೊಲ್ಲದಿರ್ಪ ನಿ
ಷ್ಠುರನುಮುದಾರನಲ್ಲದರಸುಂ ನೆರೆಯಂ ಪಗೆಗೊಳ್ವ ಗಾಂಪನುಂ
ಗುರುವನವಜ್ಞೆಗೆಯ್ವ ಋಷಿಯುಂ ಪದಪಿಲ್ಲದ ದಾನಿಯುಂ ಜಿನೇ
ಶ್ವರ ಪದಸೇವೆಯಿಲ್ಲದವನುಂ ನೆಱೆ ರಂಜಿಸಲಾಱರುರ್ವಿಯೊಳ್ ೧೩೬

ಪರವಧುಗಾಸೆಗೆಯ್ದು ಗತಿಗೆಟ್ಟು ಪರತ್ರೆಯನೊಕ್ಕು ಕಂಡರೆ
ಲ್ಲರುಮಱೆಯಟ್ಟಿ ಮುಟ್ಟಿ ಮುನಿದೋವದೆ ಪೊಯ್ದು ಕವರ್ತೆಗೊಂಡು ನಿ
ಷ್ಕರುಣದಿನೊತ್ತಿ ಮೆಟ್ಟಿ ತಲೆಯಂ ಕಡಿದಾಕೆಯ ಮೂಗನೊಳ್ಕಿತಾ
ಗಿರೆ ನಡುಬೀದಿಯೊಳ್ ಪಲರ ಮುಂದರಿವೊಂದಪಮಾನವೊಳ್ಕಿತೇ ೧೩೭

ಆಸೆಪಟ್ಟು ಕೂಡುವ ಬಯಕೆಯುಳ್ಳವನು ಬೆಟ್ಟವನ್ನೇರಿ ಕೆಳಕ್ಕೆ ಬೀಳುವ, ಹುಲಿಯ ಎದುರಿಗೆ ಮಲಗಿರುವ, ಕರಡಿಗೆ ಎದುರಾಗಿ ಕೂಗಿಕೊಳ್ಳುವ, ಹಸಿದಿರುವ ರಕ್ಕಸಿಯ ಸ್ನೇಹ ಮಾಡುವ, ಸಿಂಹದ ಮಿಾಸೆಯನ್ನು ಕೀಳುವ, ಶರಭವನ್ನು ಹಿಡಿದು ಏರುವ, ರಾಜರ ತಲೆಯಮೇಲೆ ಹೊಡೆಯುವ, ಮಸೆದ ಕತ್ತಿಯನ್ನು ನುಂಗುವ, ಬೆಂಕಿಗೆ ಬೀಳುವ ಹಾವಿನ ಬಾಯಲ್ಲಿ ಕೈಯಿಕ್ಕುವ ಹರಿಯುವ ಚಕ್ರಕ್ಕೆ ಕಾಲು ನೀಡುವ, ಸುಣ್ಣವನ್ನು ವೃಥಾ ತಿನ್ನುವೆನೆನ್ನುವ ದಡ್ಡನನ್ನು ಹೋಲುತ್ತಾನೆ. ೧೩೪ ಪರರ ಹೆಂಡಿರಿಗೆ ಆಸೆಪಟ್ಟು ಮನಸ್ಸನ್ನು ಬಿಗಿಹಿಡಿಯಲಾರದೆ ವಿಶೇಷವಾಗಿ ಆಸೆಪಟ್ಟು ವಿಶೇಷವಾದ ರಾಜದಂಡನೆಗೆ ಗುರಿಯಾಗಿ ಬಹಳ ದುಃಖಪಟ್ಟು ಆಮೇಲೆ ಆ ಪಾತಕರು ನರಕವನ್ನು ಹೊಕ್ಕಿರುತ್ತಾರೆ. ೧೩೫. ಅನ್ಯಸ್ತ್ರೀಗೆ ಆಸೆಪಡುವವನೂ ಕುಲಸ್ತ್ರೀಯನೊಲ್ಲದ ಕ್ರೂರನೂ ಉದಾರಿಯಲ್ಲದ ರಾಜನೂ ನೆರೆಯುವರೊಡನೆ ಹಗೆತನ ಮಾಡುವ ದಡ್ಡನೂ ಗುರುವನ್ನು ತಿರಸ್ಕರಿಸುವ ಋಷಿಯೂ ಉತ್ಸಾಹವಿಲ್ಲದ ದಾನಿಯೂ ಜಿನಪಾದ ಸೇವೆಮಾಡದವನೂ ಲೋಕದಲ್ಲಿ ರಂಜಿಸುವುದಿಲ್ಲ. ೧೩೬. ಪರರ ಹೆಂಡತಿಗೆ ಆಸೆಪಟ್ಟು ಗತಿ ಹೀನನಾಗಿ ಪರಗತಿಯನ್ನು ಕಳೆದುಕೊಂಡು ಕಂಡವರೆಲ್ಲ ಸಿಟ್ಟಿನಿಂದ ಅಟ್ಟಿಬಂದು ಹೊಡೆದರೆ, ದಯೆಯಿಲ್ಲದೆ ಲೂಟಿ ಮಾಡಿ ನಿಷ್ಕರುಣೆಯಿಂದ ಒತ್ತಿ ತುಳಿದು ಆಕೆಯ ಮೂಗನ್ನು ಕೊಯ್ದು ನಡುಬೀದಿಯಲ್ಲಿ

೧೩೭

ಪರವಧುಗೋತ ದುರ್ಜನನನಾಗಳೆ ಕೊಂದು ಧರಿತ್ರಿ ನೋಡೆ ಪಾ
ದರಿಗೆಯ ಮೂಗನಾಗಳರಿದಾತನ ಮಂಡೆಯನಾಗಳಾಕೆಗಾ
ಭರಣಮದೆಂದು ಕಟ್ಟಿ ಸೆಜಿ ಬೀದಿಗಳೊಳ್ ಪಲರಾರ್ದು ಡಂಗುರಂ
ಬೆರಸು ತೊಟಿಲ್ವ ಕಷ್ಟತೆಯೆ ಪೇಟದೆ ಮುಂದಣ ದುರ್ಗತಿತ್ವಮಂ ೧೩೮

ಪರವಧುಗೋತು ಕೂಡಲೆಡೆಯಿಲ್ಲದೆ ನೋಡಿ ಕನಲ್ದು ಜೋಲ್ದು ಕೊ
ಕ್ಕರಿಸಿ ಪೆಜಿರ್ಗೆ ಬೆಚ್ಚಿ ಮನೆಗೋಗಿ ಮಹಾಮುಜುಕ್ಕಿ ಭೂಮಿಯೊಳ್
ಪೊರಳುತುಮಿರ್ದು ನೀರಡಿಸಿ ಬಾಯ್ ಪೊಗೆವೋಗೆ ನಿರರ್ಥಕತ್ವದಿಂ
ದುರಿಯುತುಮಿರ್ಪ ತನ್ನೆರ್ದೆಯ ದಾಹಮೆ ಪೇಟದೆ ಪೊಲ್ಲದೆಂಬುದಂ ೧೩೯

ಗದ್ಯ॥ ಮಾವಿನಪಣ್ಣನೊಲ್ಲದೆ ಬೇವಿನಪಣ್ಣಂ ತಿಂಬಂತೆ, ನಿರ್ಮಲಮಪ್ಪ ನೀರಂ ಕುಡಯದೆ ಕೆಸಱ ನೀರಂ ಕುಡಿವಂತೆ, ಹಂಸೆಯ ಪಾಸನೊಲ್ಲದೆ ಮುಳ್ಳಮೇಲೆ ಪಡುವಂತೆ, ಬಟ್ಟೆಯೊಳ್ ಪೋಗದೆ ಕಾಡಂ ಪುಗುವಂತೆ, ಕಱೆವಾವಂ ಪೊರೆಯದೆ ಗೊಡ್ಡಂ ಪೊರೆವಂತೆ, ತೋಂಟಕ್ಕೆ ನೀರ ನೆತ್ತದೆ ಬೀದಿಗೆ ನೀರನೆತ್ತುವಂತೆ, ಮನೆಯಂ ಬಿಟ್ಟು ಶ್ಮಶಾನದೊಳಿರ್ಪಂತೆ, ಬಾವಿಯಂ ಪೂಟ್ದು ಬೆಟ್ಟಮನಗಟ್ಟುವಂತೆ, ಮಗನಂ ತೊಱೆದು ಕಳ್ಳನನೊಳಕೊಳ್ವಂತೆ, ಸೀರೆಯಂ ಕೊಟ್ಟು ನಾರಂ ಕೊಳ್ವಂತೆ, ತೆಂಗಿನಮರನಂ ಕಡಿದು ಸಾವೆಗೆ ಬೇಲಿಯನಿಕ್ಕುವಂತೆ, ಕಳವೆಯನೊಕ್ಕು ಮಳಲಂ

ಎಲ್ಲರ ಮುಂದೆ ಅಪಮಾನವಾದರೆ ಒಳ್ಳೆಯದೆ? ೧೩೭.ಪರವಧುವಿಗೆ ಒಲಿದ ಕೆಟ್ಟವನನ್ನು ಆಗಲೇ ಕೊಂದು ಆ ಹಾದರಗಿತ್ತಿಯ ಮೂಗನ್ನು ಕೊಯ್ದು ಅವನ ತಲೆಯನ್ನು ಆಕೆಗೆ ಒಂದು ಆಭರಣವೆಂದು ಕಟ್ಟಿ ಬೀದಿ ಬೀದಿಗಳಲ್ಲಿ ಮೆರವಣಿಗೆ ಮಾಡಿದರೆ ಅಳಲುವ ಆ ನೀಚತನವೇ ಮುಂದಿನ ದುರ್ಗತಿಯನ್ನು ಹೇಳುವುದಿಲ್ಲವೆ ? ೧೩೮. ಅನ್ಯರ ಹೆಂಗಸಿಗೆ ಒಲಿದು ಸೇರಲು ಅವಕಾಶವಿಲ್ಲದೆ ನೋಡಿ ಸಿಟ್ಟಾಗಿ ಜೋತು ಬಿದ್ದು ಬೇಸತ್ತು ಇತರರಿಗೆ ಭಯಪಟ್ಟು ಮನೆಗೆ ಹೋಗಿ ಸಂಕಟದಿಂದ ನೆಲದಮೇಲೆ ಹೊರಳುತ್ತ ನೀರಡಸಿ ಬಾಯಲ್ಲಿ ಹೊಗೆ ಹೋಗುತ್ತಿರಲು, ನಿರರ್ಥಕವಾಗಿ ಉರಿಯುತ್ತಿರುವ ತನ್ನ ಹೃದಯದಾಹವೇ ಅದು ಕೆಟ್ಟದ್ದೆಂಬುದನ್ನು ಹೇಳುವುದಿಲ್ಲವೆ ? ೧೩೯. ಮಾವಿನಹಣ್ಣನ್ನು ಒಲ್ಲದೆ ಬೇವಿನ ಹಣ್ಣನ್ನು ತಿನ್ನುವಂತೆ, ಶುದ್ಧವಾದ ನೀರನ್ನು ಕುಡಿಯದೆ, ಕೆಸರಿನ ನೀರನ್ನು ಕುಡಿಯುವ ಹಾಗೆ, ಹಂಸತೂಲಿಕಾತಲ್ಪವನ್ನೊಲ್ಲದೆ ಮುಳ್ಳಿನಮೇಲೆ ಮಲಗುವಂತೆ, ದಾರಿಯಲ್ಲಿ ಹೋಗದೆ ಕಾಡನ್ನು ಪ್ರವೇಶಿಸುವಂತೆ, ಕರೆಯುವ ಹಸುವನ್ನು ಸಾಕದೆ ಗೊಡ್ಡಾಕಳನ್ನು ಸಲಹುವಂತೆ ತೋಟಕ್ಕೆ ನೀರುಹಾಯಿಸದೆ ಬೀದಿಗೆ ಬಿಡುವಂತೆ, ಮನೆಯನ್ನು ಬಿಟ್ಟು ಶ್ಮಶಾನದಲ್ಲಿರುವಂತೆ, ಬಾವಿಯನ್ನು ಹೂಳಿ ಬೆಟ್ಟವನ್ನು ಅಗೆಯುವಂತೆ, ಮಗನನ್ನು ಬಿಟ್ಟು ಕಳ್ಳನನ್ನು ಸೇರಿಸಿಕೊಳ್ಳುವಹಾಗೆ, ಸೀರೆಯನ್ನು ಕೊಟ್ಟು ನಾರನ್ನು ತೆಗೆದು ಕೊಳ್ಳುವ ಹಾಗೆ, ತೆಂಗಿನ ಮರವನ್ನು ಕಡಿದು ಸಾವೆಯ ಹೊಲಕ್ಕೆ ಬೇಲಿ ಕಟ್ಟುವಂತೆ

ಕೊಳ್ವಂತೆ, ಮಾಣಿಕವಂ ಬಿಟ್ಟು ಗುರುಗುಂಜಿಯಂ ಪಿಡಿವಂತೆ, ಕರ್ಪುರವನೊಲ್ಲದೆ ಪಗಿನಂ ಕೊಳ್ವಂತೆ, ಸಿರಿಯನೊಲ್ಲದೆ ತಿರಿದುಂಬಂತೆ, ಮೊನಿಸವಾಳ್ಗಿಲಸಿ ನಂಜಂ ಕುಡಿವಂತೆ, ಸಮ್ಯಕ್ತ್ವಮುಮಂ ಸುಖಮುಮಂ ಪುತ್ರಲಾಭಮುಮನೀವ ಕುಲಾಂಗನೆಯನೊಲ್ಲದೆ ಪರಪೀಡೆಯುಮಂ ಮನೋದುಃಖಮುಮಂ ಬಹುಕ್ಲೇಶಮುಮಂ ಕೀರ್ತಿಯಳಿವುಮಂ ಧರ್ಮಕ್ಷಯಮುಮಂ ನರಕದ ಮಹಾದುಃಖಮುಮಂ ಮಾಳ್ಪ ಪರಾಂಗನೆಗಳಿಪುವುದು ಕಜ್ಜಮಲ್ಲೆಂದು ಧರ್ಮಸ್ವರೂಪಮಂ ನುಡಿವುದುಂ ೧೪೦

ಅವರ ವಚನಂಗಳಂ ಕೇ
ಳ್ದವಧಾರಿಸಿ ಪೊಲ್ಲದೆಂಬ ಬಗೆಯಿಲ್ಲದೆ ಲೋ
ಕವಿರುದ್ಧಮಪ್ಪ ಕಜ್ಜಮ
ನವಯುವದಿಂದೆತ್ತಿಕೊಂಡು ಮಾಣದೆ ಚಲದಿಂ ೧೪೧

ಮುನ್ನಿನ ನಾಯಕರ್ ಮಡಿದರೆಂಬುದನೊಯ್ಯನೆ ಕೇಳ್ದು ಭೀತಿಯಿಂ
ದನ್ನಡುಗುತ್ತುಮುಳ್ಳಳುಕಿ ಕಾದುವ ಬುದ್ಧಿಯನೊಲ್ಲದಂತುಮಿಂ
ತನ್ನಿಱಿ ಲೋಗರಂಗನೆಗೆ ಸೋಲದಿರೆಂದೆನಗೆಯ್ದೆ ಧರ್ಮಮಂ
ಸನ್ನುತಮಾಗಿ ಪೇೞ್ವಿರಱಿವೆಂ ಗಳ ನಿಮ್ಮ ಪರಾಕ್ರಮಂಗಳಂ ೧೪೨

ನೆಲ್ಲನ್ನು ಚೆಲ್ಲಿ ಮರಳನ್ನು ತೆಗೆದುಕೊಳ್ಳುವ ಹಾಗೆ, ಮಾಣಿಕ್ಯವನ್ನು ಬಿಟ್ಟು ಗುರುಗುಂಜಿಯನ್ನು ಹಿಡಿಯುವಂತೆ, ಕರ್ಪೂರವನ್ನು ಬಯಸದೆ ಗೋಂದನ್ನು ತೆಗೆದುಕೊಳ್ಳುವಂತೆ ಸಿರಿಯನ್ನು ತಿರಸ್ಕರಿಸಿ ತಿರಿದು ಊಟಮಾಡುವಂತೆ ಮಾನವ ಜೀವನಕ್ಕೆ ಬೇಸತ್ತು ವಿಷವನ್ನು ಕುಡಿಯುವಂತೆ, ಸಮ್ಯಕ್ತ್ವವನ್ನೂ ಸುಖವನ್ನೂ ಪುತ್ರಲಾಭವನ್ನೂ ಕೊಡುವ ಕುಲಸ್ತ್ರೀಯನ್ನು ತಿರಸ್ಕರಿಸಿ ಪರಪೀಡೆಯನ್ನೂ ಮನಸ್ಸಿಗೆ ದುಃಖವನ್ನೂ, ಬಹಳ ಕ್ಲೇಶವನ್ನೂ ಕೀರ್ತಿವಿನಾಶವನ್ನೂ ಧರ್ಮಹಾನಿಯನ್ನೂ ನರಕದ ಮಹಾದುಃಖವನ್ನೂ ಮಾಡುವ ಪರಸ್ತ್ರೀಗೆ ಆಸೆಪಡುವುದು ಸರಿಯಲ್ಲ, ಎಂದು ಧರ್ಮಸ್ವರೂಪವನ್ನು ನುಡಿದರು. ೧೪೦. ಅವರ ಮಾತುಗಳನ್ನು ಕೇಳಿ ವಿಚಾರಿಸಿ ಅದು ಕೆಟ್ಟದ್ದೆಂಬ ಯೋಚನೆಯಿಲ್ಲದೆ ಲೋಕವಿರುದ್ಧವಾದ ಕಾರ್ಯವನ್ನು ಕೂಡಲೆ ಕೈಕೊಂಡು ಹಟದಿಂದ ಬಿಡದೆ ೧೪೧. "ಮೊದಲಿನ ತನ್ನ ನಾಯಕರು ಸತ್ತರೆಂಬುದನ್ನು ಕೇಳಿ ಭಯದಿಂದ ನಡುಗುತ್ತ ಮನಸ್ಸಿನಲ್ಲಿ ಅಂಜಿ ಯುದ್ಧಕ್ಕೆ ಇಷ್ಟವಿಲ್ಲದಿದ್ದರೆ ಹಾಗೆ ಹೀಗೆ ಕಂಡವರ ಹೆಂಗಸಿಗೆ ಆಸೆಪಡದಿರೆಂದು ನನಗೆ ಧರ್ಮವನ್ನು ಚೆನ್ನಾಗಿ ಹೇಳುವಿರಿ ನಿಮ್ಮ ಪರಾಕ್ರಮಗಳನ್ನು ನಾನು ಚೆನ್ನಾಗಿ ಬಲ್ಲೆ. ೧೪೨. ನಾಯಿಯು ಬಾಲವನ್ನು ಹಿಡಿದುಕೊಂಡು ಹೋಳೆ

ಗದ್ಯ॥ ನಾಯಃಬಾಲವಂ ಪಿಡಿದು ತೊಱೆಯಂ ಪಾಯ್ವಂತೆ ನಿಮ್ಮ ಬಲವಂ ಪಿಡಿದು ಕಾದಿ ವಿಳಾಸವತಿಯನೆನಗೆ ಮಾಡಲಿರ್ದ ಗಾವಿಲನಲ್ಲೆನೆನ್ನಭುಜಬಲಮೆ ಸಾಲ್ಗುಂ ಪಂದೆತನದಿಂದೆನ್ನೊಡನೆ ಕಾಳಗಕ್ಕೆ ಬರಲೊಲ್ಲಿರಪ್ಪೊಡಿಲ್ಲಿಯೆ ಮಾಣ್ದುಸಿರದಿರ್ಪುದಲ್ಲದೆ ನಿಮ್ಮ ಕಾೞ್ ಧರ್ಮಶ್ರವಣಮಂ ಪೇೞವೇಡೆಂಬುದುಂ ಪ್ರಧಾನರ್ ಸುವೇಗನ ವಚನದ ತೀವ್ರತೆಯಂ ಕಂಡು ತಮ್ಮೊಳೀತೆಂದರ್

೧೪೩

ದಿನಪತಿಗುಷ್ಣಮಂಬುರುಹವೈರಿಗೆ ಶೀತಳಮಬ್ಧಿಗುಪ್ಪುನೀರ್
ವನಿತೆಗೆ ಮಾಯವೃತ್ತಿ ಫಣಿಗುಗ್ರವಿಷಂ ಸಹಜಂಗಳೆಂತು ಮೇ
ದಿನಿಯೊಳಗಂತೆ ದುರ್ಮತಿಯುಮುದ್ಧತಿಯುಂ ಪುರುಳ್ಗೆಟ್ಟವಾಕ್ಯಮುಂ
ಮುನಿಸುಮಪಾಯ ಚಿಂತೆಗಳುಮಿಂ ಸಹಜಂ ಕುನಯರ್ಗೆ ಲೋಕದೊಳ್ ೧೪೪

ಗದ್ಯ॥ ಪಾಪದೊಳಾದ ಚಿಂತೆಯುಂ ಕೊಲೆಯೊಳಾದ ರಾಗಮುಂ ಸದ್ಧರ್ಮದೊಳಾದ ಮುನಿಸುಂ ಪರಸ್ತ್ರೀಯೊಳಾದ ಕೂರ್ಮೆಯುಂ ಬೆಸನಿಗಳೊಳಾದ ಕೂಟಮುಂ ಕಳವಿನೊಳಾದ ಪ್ರೀತಿಯುಂ ಪುಸಿಯೊಳಾದ ಜಾಣುಂ ಪರಪೀಡೆಯೊಳಾದ ಪ್ರವೀಣತ್ವಮುಂ ಸಾಧುಗಳೊಳಾದ ದುರ್ವಚನಮುಂ ವಿಷಯಂಗಳೊಳಾದ ಮೋಹಮುಂ ದ್ರವ್ಯದೊಳಾದ ಕಡುಲೋಭಮುಂ, ನಿರ್ದೋಷಿ ಪರಮಾತ್ಮನೊಳಾದ ದೂಷಣೆಯುಂ ಸದ್ದಾನದೊಳಾದಾಲಸ್ಯಮುಂ ಕುತ್ಸಿತದಾನದೊಳಾದ ಪೆರ್ಚುಗೆಯುಂ ನರಕಂಬುಗಲ್ವೇಡಿರ್ದ ಜೀವಕ್ಕೆ ಸಹಜಮದಂ ಮಾಣಿಸುವೆನೆಂಬುದು

ಯನ್ನು ದಾಟುವಂತೆ ನಿಮ್ಮ ಬಲವನ್ನು ನಂಬಿ ಹೋರಾಡಿ ಸುಂದರಿಯನ್ನು ಪಡೆಯಲು ಆಸೆಪಟ್ಟ ದಡ್ಡ ನಾನಲ್ಲ ; ನನ್ನ ಭುಜಬಲವೇ ಸಾಕು. ಹೇಡಿತನದಿಂದ ನನ್ನ ಜತೆ ಕಾಳಗಕ್ಕೆ ಬರಲು ಇಷ್ಟವಿಲ್ಲದಿದ್ದರೆ ಇಲ್ಲಿಯೇ ಸುಮ್ಮನೆ ಇರಿ. ನಿಮ್ಮ ಹಾಳು ಧರ್ಮಶ್ರವಣವನ್ನು ಹೇಳಬೇಡಿ" ಎನ್ನಲು, ಪ್ರಧಾನರು ಸುವೇಗನ ಮನಸ್ಸಿನ ರಭಸವನ್ನು ಕಂಡು ತಮ್ಮ ತಮ್ಮಲ್ಲಿಯೇ ಹೀಗೆಂದುಕೊಂಡರು. ೧೪೩. ಸೂರ್ಯನಿಗೆ ಶಾಖ ಚಂದ್ರನಿಗೆ ಶೈತ್ಯ ಸಮುದ್ರಕ್ಕೆ ಉಪ್ಪು ನೀರು ಹೆಂಗಸಿಗೆ ಮಾಯೆಯ ನಡತೆ ಹಾವಿಗೆ ಕ್ರೂರ ವಿಷ,-ಇವು ಸಹಜ. ಹಾಗೆಯೇ ಲೋಕದಲ್ಲಿ ದುರ್ನೀತಿವಂತರಿಗೆ ಕೆಟ್ಟ ಬುದ್ಧಿ, ಔದ್ಧತ್ಯ, ಸತ್ವವಿಲ್ಲದ ಮಾತು, ಕೋಪ, ಅಪಾಯ ಚಿಂತೆಗಳೂ ಸಹಜ ೧೪೪. ಪಾಪದ ಆಸಕ್ತಿ, ಕೊಲೆಯಲ್ಲಿ ಪ್ರೀತಿ, ಸದ್ಧರ್ಮದಮೇಲೆ ಸಿಟ್ಟು, ಪರಸ್ತ್ರೀಯರಲ್ಲಿ ಆದ ಪ್ರೀತಿ, ವ್ಯಸನಿಗಳ ಸಹವಾಸವೂ ಕಳ್ಳತನದಲ್ಲಿ ಪ್ರಾವೀಣ್ಯವೂ ಸುಳ್ಳಿನಲ್ಲಿ ಆ ಜಾಣತನವೂ ಪರಪೀಡನೆಯೊಳಗಾದ ಪ್ರಾವೀಣ್ಯವೂ ಸಾಧುಗಳಲ್ಲಿ ಆದ ದುರ್ವಾಕ್ಯವೂ ವಿಷಯ ಸುಖಗಳಲ್ಲಿ ಮೋಹವೂ ದ್ರವ್ಯದಲ್ಲಿ ಉಂಟಾದ ಹೆಚ್ಚಿನ ಆಸೆಯೂ, ನಿರ್ದೋಷಿಯಾದ ಪರಮಾತ್ಮನ ದೂಷಣೆಯೂ ಒಳ್ಳೆಯ ದಾನದಲ್ಲಿ ಆದ ತಡವೂ ಕುತ್ಸಿತದಾನದಲ್ಲಿನ ಹೆಚ್ಚುಗೆಯೂ ನರಕವನ್ನು ಹೊಗಲು ಬಯಸುವ ಜೀವಕ್ಕೆ ಸಹಜ. ಅದನ್ನು

ಸರ್ವಜ್ಞಂಗಂ ಬಾರದದು ಕಾರಣದಿಂ ನರಕಂ ಬುಗಲ್ವೇಡಿರ್ದಂಗೆ ಪರವೆಣ್ಣೊಳಾದ ಪ್ರೀತಿ ಪೋಗಲಱಿಯದು "ದುರಾಗ್ರಹಸ್ಯ ಹಿತೋಪದೇಶೋ ಬಧಿರಸ್ಯಾಗ್ರತೋ ಗಾನಮಿವ" ಎಂಬ ನೀತಿಯುಂಟೀತಂಗಾವೇನೆಂದೊಡಂ ನಮ್ಮ ಮಾತು ಕೀೞಿಕ್ಕುಮಲ್ಲದೀತಂ ಕೇಳ್ವನಲ್ಲ. ನಾಮಿನ್ನು ಸಿರದಿರ್ಪಮೆಂದು ಪ್ರಧಾನರುಸಿರದಿರ್ಪುದುಂ ಸುವೇಗಂ ವೇಗಿಯಾಗಿ ಯುದ್ಧಕ್ಕೆ ನಡೆದು ೧೪೫

ಪೋಗದಿರೆಂದು ತಾಗಿ ರಥಮಂ ಸೆಡೆದುಳ್ಕದೆ ಪತ್ತಿಮುತ್ತಿ ಚೆ
ಲ್ವಾಗಿರೆ ತನ್ನ ಚಾಪದ ಪರಿಶ್ರಮಮಂ ನೆಱೆ ತೋರ್ಪೆನೆಂದು ಧ
ನ್ವಾಗಮವೇದಿಯಂ ಜಿನಪದಾಂಬುಜಭೃಂಗನನಾಗಳತ್ಯಗು
ರ್ವಾಗೆ ಕುಕಿಲ್ದು ಕಾರಸರಿವೋಲ್ ಸುರಿದಂ ಶರಸಂಕುಲಂಗಳಂ ೧೪೬

ಸರಳಸರಿಯಂ ನಿಕೃಷ್ಟಂ
ಸುರಿವುದುಮಪರಿಮಿತಮಾಗೆ ಭಯಮಿಲ್ಲದೆ ರ್ಝೇಂ
ಕರಿಸಿ ರಿಪುಸೇನೆ ಬಾಣೋ
ತ್ಕರದಿಂ ಕಯ್ಗ್ಗಾಯುದನಿತುಮಂ ಖಂಡಿಸಿದಂ ೧೪೭

ಎಡೆಯೊಳ್ ಬಾಣಾವಳಿಯಂ
ಕಡಿವುದುಮವನಾರ್ದು ಮತ್ತೆ ಸಾಯಕಚಯಮಂ
ಬಿಡುವುದು ಮಹಿಪನ ರಥಮಾ
ಗಡೆ ಸರಳಿಂ ಬಿದಿರ ಪೊದಱಿನಂತಾಯ್ತನಿಸುಂ ೧೪೮

ತಪ್ಪಿಸುವುದು ಆ ಸರ್ವಜ್ಞನಿಗೂ ಸಾಧ್ಯವಲ್ಲ. ಆದ್ದರಿಂದ ನರಕವನ್ನು ಪ್ರವೇಶಿಸಲು ಬಯಸಿದವನಿಗೆ ಅನ್ಯಸ್ತ್ರೀಯಲ್ಲಿ ಪ್ರೀತಿ ಹೋಗುವುದಿಲ್ಲ "ದುರಾಗ್ರಹಿಗೆ ಮಾಡಿದ ಹಿತೋಪದೇಶ ಕಿವುಡನ ಇದಿರಿನಲ್ಲಿ ಹಾಡು ಹೇಳಿದಂತೆ" ಎಂಬ ನೀತಿಯಿದೆ. ಈತನಿಗೆ ನಾವು ಏನು ಹೇಳಿದರೂ ನಮ್ಮ ಮಾತು ಕೀಳಾಗುವುದೇ ಹೊರತು ಇವನು ಕೇಳುವುದಿಲ್ಲ. ನಾವು ಇನ್ನು ನುಡಿಯದೆ ಇರೋಣವೆಂದು ಪ್ರಧಾನರು ಮೌನವಹಿಸಿದರು. ಸುವೇಗನು ವೇಗದಿಂದ ಯುದ್ಧಕ್ಕೆ ಹೋಗಿ ೧೪೫. 'ಹೋಗದಿರು' ಎಂದು ಮೇಲೆ ನುಗ್ಗಿ ರಥವನ್ನು ತಡೆದು ಅಂಜದೆ ತನ್ನ ಬಿಲ್ಲಿನ ಪಾಂಡಿತ್ಯವನ್ನು ಚೆನ್ನಾಗಿ ತೋರಿಸುವೆನೆಂದು ಧನುರಾಗಮ ವೇದಿಯೂ ಜಿನಪಾದಕಮಲಗಳಲ್ಲಿ ತುಂಬಿಯೂ ಆದ ಪ್ರಮಾಥಿಯನ್ನು ಆಗ ಬಹಳ ಭಯಂಕರವಾಗಿ ಕೂಗಿ ಮಳೆಗಾಲದ ಮಳೆಯಂತೆ ಬಾಣ ಸಮೂಹಗಳನ್ನು ಕರೆದನು. ೧೪೬. ಬಾಣದ ಮಳೆಯನ್ನು ನೀಚನು ಸುರಿಯುತ್ತಲೂ ಭಯವಿಲ್ಲದೆ ಶತ್ರು ಸೈನ್ಯವು ತಲ್ಲಣಿಸುವಂತೆ ಬಿಲ್ಲಿನ ಟಂಕಾರ ಮಾಡಿ ಅವನ ಬಾಣಗಳೆಲ್ಲವನ್ನೂ ಕತ್ತರಿಸಿದನು. ೧೪೭. ಬಾಣಸಮೂಹವನ್ನು ಮಧ್ಯದಲ್ಲಿಯೇ ಕಡಿಯುತ್ತಲೂ ಅವನು ಅಬ್ಬರಿಸಿ ಮತ್ತೆ ಬಾಣ ಸಮೂಹವನ್ನು ಹೊಡೆದನು. ಆಗ ರಾಜನ ರಥವು ಬಾಣಗಳಿಂದ ತುಂಬಿಹೋಗಿ ಬಿದಿರು ಮೆಳೆಯನ್ನು ಹೋಲುವಂತಿತ್ತು. ೧೪೮. ರಾಜಕುಮಾರನು ಆ ಬಾಣಗಳನ್ನು

ಅನಿತುಂ ಸಾಯಕತತಿಯಂ
ಮನುಜೇಂದ್ರಂ ನೋಡಿ ನಕ್ಕು ಮತ್ತೊಂದಂಬಿಂ
ದನಿತುಮನರಿಸೈನ್ಯಂ ಭೋಂ
ಕನೆ ಮನದೊಳ್ ಜಱಿಯೆ ಕುಸಿಯೆ ತತ್ತಱದಱಿದಂ ೧೪೯

ತಱಿವುದುಮಾತಂ ಮಲಮಲ
ಮಱುಗಿ ಮಹಾಕೋಪದಿಂ ಶರಾವಳಿಯಂ ಮ
ತ್ತಱಿಯಟ್ಟೆ ಬೇಗಮಿಸುವುದು
ಮಱಿದುಂಬಿಗಳಂತೆ ಪೋಗೆ ನೆಗೆದೊಬ್ಬುಳಿಯಿಂ ೧೫೦

ಬರುತಿರ್ಪ ಬಾಣಮಂ ಸೌಂ
ದರರೂಪಂ ಕಂಡು ಬಾಣಮೊಂದಱಿನವನಂ
ತರದೊಳ್ ನಿರಿಸುವುದುಂ ವಿ
ಸ್ತರದಿಂ ರಮಣೀಯಮಾಯ್ತು ಪೀಲಿಯ ತಟ್ಟುವೋಲ್ ೧೫೧

ಅಂತಂಬರದೊಳ್ ನಿಂದಂ
ಬಂ ತಡೆಯದೆ ಕಂಡುಕೋಪದೊದವಿಂದಾಕ
ರ್ಣಾಂತಂಬರೆಗಂ ತೆಗೆದಿಸೆ
ಸಂತತಮೊಡನೊಡನೆ ಮೇಗಣಂ ಬರ್ಪಂಬಂ ೧೫೨

ನೋಡಿ ನಕ್ಕು ಇನ್ನೊಂದು ಅಂಬಿನಿಂದ ಅಷ್ಟನ್ನೂ ಶತ್ರು ಸೈನ್ಯವೆಲ್ಲ ತಟ್ಟನೆ ಅಂಜಿ ಕುಸಿಯುವಂತೆ ಕತ್ತರಿಸಿಬಿಟ್ಟನು. ೧೪೯. ಹಾಗೆ ಬಾಣಗಳನ್ನೆಲ್ಲ ಕತ್ತರಿಸಲು ಮಲಮಲನೆ ಮರುಗಿ ಮಹಾ ಕೋಪದಿಂದ ಸುವೇಗನು ಬಾಣಸಮೂಹವನ್ನು ಮತ್ತೆ ವೇಗದಿಂದ ಹೊಡೆಯಲು ಅವು ಮರಿದುಂಬಿಗಳಹಾಗೆ ಒಟ್ಟಿಗೆ ಹಾರಿದುವು. ೧೫೦. ಬರುತ್ತಿರುವ ಬಾಣವನ್ನು ಆ ಸುಂದರರೂಪನು ಕಂಡು ಒಂದು ಬಾಣದಿಂದ ಅವುಗಳನ್ನು ಮಧ್ಯದಲ್ಲಿಯೇ ನಿಲ್ಲಿಸಲು ನವಿಲುಗರಿಯ ಕೊಡೆಯಂತೆ ಅದು ಬಹಳ ಸುಂದರವಾಯಿತು. ೧೫೧. ಹಾಗೆ ಆಕಾಶದಲ್ಲಿ ನಿಂತ ಬಾಣಗಳನ್ನು ಕಂಡು ಕೂಡಲೆ ಹೆಚ್ಚಿದ ಕೋಪದಿಂದ ಕಿವಿಯವರೆಗೆ ಹೆದೆಯನ್ನೆಳೆದು ಬಾಣವನ್ನು ಹೊಡೆದನು. ಪುನಃ ಪುನಃ ಮೇಲಿನಿಂದ ಬರುತ್ತಿದ್ದ ಬಾಣಗಳನ್ನು ೧೫೨. ರಾಜನು ಕಂಡು ಬಾಣಸಮೂಹವಷ್ಟನ್ನೂ ಆ

ವಸುಧೇಶಂ ಕಂಡು ಬಾಣಾವಳಿಯೆೊಳನಿತುಮಂ ತತ್ಕ್ಷಣಂ ಕೋಪದಿಂ ಖಂ
ಡಿಸೆ ಭೂಭಾಗಕ್ಕೆ ಬಿರ್ದಿರ್ದಲಗುಗಜೀಚಯುಂ ಕೋಲ್ಗಳಂಭೋಧಿಯುಂ ರಂ
ಜಿಸೆ ನೀಲಾದ್ರೀಂದ್ರಮಂ ದುರ್ಗಮನನುನಯದಿಂ ಪೋಲೆ ತತ್ಸ್ಯಂದನಂ ಭಾ
ವಿಸಿ ನೋಟ್ಪಂದೊಪ್ಪಿ ಲಂಕಾಪುರದ ಮಹಿಮೆಯುಂ ಸೂಱೆಗೊಂಡಂತಿರಲ್ಕುಂ ೧೫೩

ಗದ್ಯ॥ ಅಂತು ಪೊಗದೆಯಿಸೆ ಉಳ್ಕುಕ್ಕಂ ತಾಗುವಂತೆ ತಾಗಿ ಸೆರಗು ಗೆಯ್ಯದೆ ಕಾದುತ್ತಿರ್ಪುದುಂ ಪ್ರಮಾಥಿಕುಮಾರನ ಕಯ್ಯಂಬುಗಳೆರಡುಳಿಯೆ ಮತ್ತೆಲ್ಲಂ ತವುವುದುಂ ಚಂದ್ರಲೇಖೆ ಕಂಡು ಬೆಱಗಾಗಿ ಪಲ್ಲಿಲ್ಲದ ಪುಲಿಯುಂ ನಖವಿಲ್ಲದ ಸಿಂಹಮುಮೆನಿತು ಬಲ್ಲಿತಾದೊಡಮೇ ಗೆಯ್ವುದು ಈತನಪ್ಪೊಡೆ ಬಲ್ಲಿದಂ ಬಲ್ಲಿದನಾಗಿಯುಂ ಕೈದುವಿಲ್ಲದೇಗೆಯ್ಗುಂ, ಸಾವು ನಿಶ್ಚಯ ಮಾಯ್ತೆಂದು ಚಿಂತಾಕ್ರಾಂತೆಯಾಗಿ ೧೫೪

ಪತಿಯುಂ ಬಿಟ್ಟು ಪರತ್ರೆಗೆಟ್ಟು ಕುಲಮಂ ಕಿತ್ತಿಕ್ಕಿ ನಾಯಾಗಿ ದು
ರ್ಮತಿಯಿಂ ದುರ್ಜನರೊಳ್ ದುರಾಚರಿತರೊಳ್ ನಿರ್ಧರ್ಮರ್ಕಳೊಳ್ ಕೂಡಿ ಸ
ನ್ಮತಮಂ ಬಿಟ್ಟು ಪತಿವ್ರತಾಗುಣಮನೊಕ್ಕಾನಂದದಿಂದಿರ್ಪ ಸಂ
ಸೃತಿಸೌಖ್ಯೋನ್ನತಿಯಿಂ ಮಹಾಮಹಿಮೆಯಿಂ ಸಾವೇಂ ಕರಂ ಪೊಲ್ಲದೋ ೧೫೫

ಕ್ಷಣವೇ ಕೋಪದಿಂದ ಕತ್ತರಿಸಲು ನೆಲಕ್ಕೆ ಬಿದ್ದ ಬಾಣದ ಚೂರುಗಳೂ, ಅವುಗಳ ಗರಿಗಳ ರಾಶಿಯೂ ಸಮುದ್ರದಂತೆ ರಂಜಿಸುತ್ತಿತ್ತು. ಆ ವಿಷಮವನು ನೀಲಪರ್ವತವನ್ನು ಹೋಲುತ್ತಿರಲು ಆ ರಥವು ಲಂಕಾಪುರದ ಮಹಿಮೆಯನ್ನು ಸೂರೆಮಾಡಿಕೊಂಡಂತೆ ತೋರುತ್ತಿತ್ತು ೧೫೩. ಹಾಗೆ ಹೊರಟು ಹೋಗದಂತೆ ಬಾಣಗಳನ್ನು ಹೊಡೆಯಲು ಉಕ್ಕು ಉಕ್ಕನ್ನು ತಾಗುವಹಾಗೆ ತಾಕಿ ಲಕ್ಷ್ಯಮಾಡದೆ ಹೋರಾಡುತ್ತಿರಲಾಗಿ ಪ್ರಮಾಥಿ ಕುಮಾರನ ಕೈಯಲ್ಲಿ ಎರಡು ಬಾಣಗಳು ಮಾತ್ರ ಉಳಿದಿದ್ದು ಮತ್ತೆಲ್ಲವೂ ಮುಗಿದು ಹೋದುವು. ಅದನ್ನು ಚಂದ್ರಲೇಖೆ ಗಮನಿಸಿದಳು. ಅವಳಿಗೆ ಭಯವೇ ಆಯಿತು. "ಹಲ್ಲಿಲ್ಲದ ಹುಲಿಯೂ ಉಗುರಿಲ್ಲದ ಸಿಂಹವೂ ಎಷ್ಟು ಬಲಿಷ್ಠವಾದರೂ ಏನು ಮಾಡ ಬಲ್ಲವು ? ಈತನಾದರೋ ಬಲವಂತ. ಬಲವಂತನಾದರೂ ಆಯುಧವಿಲ್ಲದಿದ್ದರೆ ಏನು ಮಾಡಲ್ಲ ? ಈಗ ಸಾವು ಖಂಡಿತವಾಯಿತು." ಎಂದು ಚಿಂತೆಗೆ ಒಳಗಾಗಿ ೧೫೪. ಗಂಡನನ್ನು ಬಿಟ್ಟು ಪರಗತಿಯನ್ನು ಕಳೆದುಕೊಂಡು ಕುಲವನ್ನು ವಿನಾಶ ಮಾಡಿ ನಾಯಿಯಂತೆ ದುರ್ಬುದ್ಧಿಯಿಂದ ದುರ್ಜನರಲ್ಲಿ, ದುರಾಚಾರರಲ್ಲಿ, ಧರ್ಮಹೀನರಲ್ಲಿ, ಕೂಡಿ ಶ್ರೇಷ್ಠ ಮತವನ್ನು ಬಿಟ್ಟು ಪತಿವ್ರತಾ ಗುಣವನ್ನು ತ್ಯಜಿಸಿ, ಆನಂದದಿಂದಿರುವ ಸಂಸಾರ ಸೌಖ್ಯೋನ್ನತಿಗಿಂತ ಮಹಾ ಮಹಿಮೆಗಿಂತ, ಸಾವು ಬಹಳ ಕೆಟ್ಟದ್ದೆ ? ೧೫೫.

ಉರಿಯೊಳ್ ತಂದಿಕ್ಕಿ ಕಾಯ್ದೆಣ್ಣೆಯು ನೆಱೆದರಿಂದೀಡಾಡಿ ಖಂಡಂಗಳಂ ಸಿಂ
ಧುರದಿಂ ನುರ್ಗಾಗೆ ಕಾಲ್ಕೆಯ್ಮುಱಿಯೆ ತುಳಿಸಿ ಕೊಂತಂಗಳಿಂ ಕುತ್ತಿ ಶಸ್ತ್ರೌ
ತ್ಕರದಿಂ ಘೇಱಿಟ್ಟು ಖೈರಂದಱಿದು ಕಡಿದು ನಾನಾ ಪ್ರಕಾರಂಗಳಿಂ ನಿ
ಷ್ಠುರ ದುಃಖ ವ್ರಾತದಿಂ ದಂಡಿಸುವ ನರಕಜರ್ಗೀವೊ ಮೆಯ್ಯೊಡ ಲಾಱೆಂ ೧೫೬

ನರಿ ನಾಯ್ಬೆಕ್ಕೋತಿ ಮೀನ್ಪೇನ್ನೋಣಮುಡು ಕರಿ ಪೆರ್ಬಾವು ಪಾರಾವತಂ ವಾ
ನರನೆತ್ತಾಡಂಚೆ ಸಿಂಹಂ ಕರಡಿ ಮಹಿಷಿ ಪೆರ್ಮೀನಜಂ ಕೋೞಿ ಗಾರ್ದಂ
ಶರಭಂ ಸಾರಂಗಮಶ್ವಂ ಪಶು ಪುಲಿಯಿಲಿ ಕಾಡೆಮ್ಮೆ ಕಾಟ್ಕೋೞಿಯೆಂಬೀ
ತಿರಿಕವ್ರಾತಂಗಳೊಳ್ ಸಂಭವಿಸಿ ದುರಿತದಿಂ ದುಃಖಮಂ ಪೇಱಲಾಱೆಂ ೧೫೭

ಲಲಿತ ಪತಿವ್ರತಾಗುಣಮನುರ್ವಿಸೆ ಕಾಂತನೊಳಾದ ಭಕ್ತಿಯಂ
ನಿಲಿಸಿ ಪೊದಟ್ದ ದುಃಖಮುಮನಾರ್ಪಮುಮಂ ಕಡುನೋವುಮಂ ಮಹೀ
ವಳಯದೊಳಾಂತು ಬೆಬ್ಬಳಿಸದಂಜದೆ ನೋಡ ಸುಖಕ್ಕೆ ಕೀರ್ತಿಗ
ಗ್ಗಳಿಕೆಗೆ ಮುಖ್ಯರಾದರದಱಿಂ ಗುಣಮುಳ್ಳರೆ ಪೂಜ್ಯರಲ್ಲರೇ ೧೫೮

ಗದ್ಯ॥ ಎಂದು ಮುನ್ನಿನ ಮಹಾಗುಣವಂತರಪ್ಪರ ಕಥಾಂತರಂಗಳಂ ಭಾವಿಸಿ ಪ್ರಮಾಥಿಕುಮಾರನಿಂ ಮುನ್ನೆನ್ನ ಪತಿವ್ರತಾ ಗುಣಕ್ಕಂ ದರ್ಶನಕ್ಕಂ ಹಾನಿಯಾಗಲೀಯದೆ ಸಾವೆನೆಂದು

ಉರಿಯಲ್ಲಿ ತಂದು ಹಾಕಿಕಾದ ಎಣ್ಣೆಯನ್ನು ಹೊಯಿದು ಕತ್ತರಿಸಿ ಖಂಡಗಳನ್ನುಬಿಸಾಟು ಮೈನುಗ್ಗಿ ನುಗ್ಗಾಗುವ ಹಾಗೆ ಆನೆಯಿಂದ ತುಳಿಸಿ ಭರ್ಜಿಗಳಿಂದ ತಿವಿದು ಶಸ್ತ್ರಗಳಿಂದ ಕೊಯ್ದು ಕ್ಷೇಮವನ್ನು ನಾಶಪಡಿಸಿ ನಾನಾ ರೀತಿಗಳಿಂದ ಕ್ರೂರವಾದ ದುಃಖಕ್ಕೆ ಗುರಿಪಡಿಸಿ ದಂಡಿಸುವ ನರಕದಲ್ಲಿ ಜನಿಸಿದವರಿಗೆ ನನ್ನ ದೇಹವನ್ನು ಒಡ್ಡಲಾರೆ ೧೫೬. 'ನರಿ, ನಾಯಿ, ಬೆಕ್ಕು, ಓತಿ, ಮೀನು, ಹೇನು, ನೊಣ, ಉಡು, ಆನೆ, ಹೆಬ್ಬಾವು, ಮನುಷ್ಯ, ಎತ್ತು,' ಆಡು, ಹಂಸೆ, ಸಿಂಹ, ಕರಡಿ, ಎಮ್ಮೆ, ಹೆಮ್ಮೀನು, ಮೇಕೆ, ಕೋಳಿ, ಕತ್ತೆ, ಶರಭ, ಸಾರಂಗ, ಕುದುರೆ, ಪಶು, ಹುಲಿ, ಇಲಿ, ಕಾಡೆಮ್ಮೆ, ಕಾಡುಕೋಳಿ, ಇವೇ ಮೊದಲಾದ ತಿರ್ಯಗ್ಜಂತುಗಳ ಸಮೂಹಗಳಲ್ಲಿ ಹುಟ್ಟಿ ಪಾಪದಿಂದ ನನ್ನ ಮೇಲೆ ದುಃಖವನ್ನು ಹೇರಿಕೊಳ್ಳಲಾರೆ. ೧೫೭. ಶ್ರೇಷ್ಠವಾದ ಪತಿವ್ರತಾಗುಣವನ್ನು ಹೆಚ್ಚಿಸಿ ಗಂಡನಲ್ಲಿ ಆದ ಭಕ್ತಿಯನ್ನು ನಿಲ್ಲಿಸಿ ಹೆಚ್ಚಾದ ದುಃಖವನ್ನೂ ಸಾಮರ್ಥ್ಯವನ್ನೂ ಹೆಚ್ಚಿನ ನೋವನ್ನೂ ಈ ಭೂಮಂಡಲದಲ್ಲಿ ಸಹಿಸಿ ಭಯಪಡದೆ ಬೆಪ್ಪಾಗದೆ, ಸುಖ ಕೀರ್ತಿ, ಅಗ್ಗಳಿಕೆಗಳಿಗೆ ಮುಖ್ಯರಾದಂಥವರೇ ಗುಣವುಳ್ಳವರು, ಅವರೇ ಪೂಜ್ಯರಲ್ಲವೆ ? ೧೫೮. ಹೀಗೆ ಹಿಂದಿನ ಮಹಾ ಗುಣವತಿಯರಾದವರ ಬೇರೆ ಬೇರೆ ಕಥೆಗಳನ್ನು ಕುರಿತು ಧ್ಯಾನಿಸಿ, ಪ್ರಮಾಥಿಕುಮಾರನಿಗಿಂತ ಮುಂಚೆಯೇ, ತನ್ನ ಪತಿವ್ರತಾಗುಣಕ್ಕೂ ಹಾನಿಯೊದಗದ

ಶರೀರಮಂ ತೊಱೆದು ಧರ್ಮಧ್ಯಾನದಿಂ ಪಂಚಪರಮೇಷ್ಠಿಗಳ ಶ್ರೀಪಾದಂಗಳಂ ಹೃತ್ಕಮಲದೊಳ್ ತಾಳ್ದಿ ಪಂಚನಮಸ್ಕಾರಗಳನೋದುತ್ತುಂ ಬರ್ಪಂಬಿಗಿದಿರಾಗಿ ರಥದಿಂ ಪೋಯಿಮಟ್ಟು ನಿಂದಿರ್ಪುದುಂ ಸುವೇಗಂ ಚಂದ್ರಲೇಖೆಯ ಸರ್ವಾಂಗಮಂ ಕಂಡು ೧೫೯

ಕೀಲಿಸಿದಂತಿರೆ ನಯನಂ
ಬಾಲೆಯ ಲಲಿತಾಂಗದಲ್ಲಿ ನಟ್ಟಿರೆ ಮತಿಗೆ
ಟ್ಟಾಲಾಪಮಿಲ್ಲದಱಿಯದೆ
ಕಾಳಗದೊಳ್ ಕೂಪಕಂಭದಂತಿರೆ ನಿಂದಂ ೧೬೦

ಗದ್ಯ॥ ಅಂತಿರ್ಪುದುಂ ಪ್ರಮಾಥಿಕುಮಾರನೆಡೆವೆತ್ತು ಕೂರಂಬೊಂದಂ ತೊಟ್ಟು ತೀವಿ ತೆಗೆದಿಸುವುದುಂ ೧೬೧

ತಲೆ ಪಱಿದು ಜೋಲ್ದು ತೊಪ್ಪನೆ
ನೆಲದೊಳ್ ತನು ಬೀಟೆ ಸತ್ತು ಪರವನಿತೆಗೆ ಸೋ
ಲ್ತಳಿಪಿದ ಪಾಪದ ಫಲದಿಂ
ಮಲಿನಮನಂ ಜವನ ದಾಡೆಗಂದೊಳಗಾದಂ ೧೬೨

ನೋಡಿರೆ ಪಾಪದ ಪೆರ್ಚಂ
ಕೂಡದೆ ಪಿರಿದಪ್ಪಱೆಂದವೊದವಿರೆ ಸಲೆ ಮಾ
ತಾಡದೆ ದೂರಾಂತರದೊಳ್
ನೋಡಿದ ಫಲದಿಂದಮಿಱಿದನಸುಗತಿಗಾತಂ ೧೬೩

ದರ್ಶನಕ್ಕೂ ಹಾಗೆ, ಸಾಯುವುದೆಂದು ನಿರ್ಧರಿಸಿಕೊಂಡು ಶರೀರಮೋಹವನ್ನು ತ್ಯಜಿಸಿ ಧರ್ಮಧ್ಯಾನದಿಂದ ಪಂಚಪರಮೇಷ್ಠಿಗಳ ಶ್ರೀಪಾದಗಳನ್ನು ತನ್ನ ಹೃದಯಕಮಲದಲ್ಲಿ ಧರಿಸಿ ಪಂಚನಮಸ್ಕಾರಗಳನ್ನು ಹೇಳುತ್ತ, ವೇಗದಿಂದ ಬರುವ ಬಾಣಕ್ಕೆ ಇದಿರಾಗಿ ರಥದಿಂದ ಹೊರಟು ಇಳಿದು ನಿಂತಿದ್ದಳು. ಆ ಸುವೇಗನು ಚಂದ್ರಲೇಖೆಯ ಸರ್ವಾಂಗವನ್ನು ಕಂಡನು. ೧೫೯. ಅವನ ಕಣ್ಣುಗಳು ಕಟ್ಟಿ ಹಾಕಿದಂತೆ ಆ ಯುವತಿಯ ಸುಂದರಾಂಗದಲ್ಲಿ ನಾಟಿಕೊಂಡಂತೆ ಇರಲು ಬುದ್ಧಿಗೆಟ್ಟು ಮಾತಿಲ್ಲದೆ ಮೈಯರಿಯದೆ ಕಾಳಗದ ಕಣದಲ್ಲಿ ಕೂಪಕಂಬ (ಹಡಗಿನ ಮಧ್ಯದಲ್ಲಿರುವ ದೊಡ್ಡ ಕಂಭ) ದಂತೆ ನಿಶ್ಚಲನಾಗಿ ನಿಂತುಬಿಟ್ಟನು. ೧೬೦. ಹಾಗೆ ನಿಂತಿರುವಾಗ ಪ್ರಮಾಥಿಕುಮಾರನು ಅವಕಾಶ ಪಡೆದು ಚೂಪಾದ ಒಂದು ಬಾಣವನ್ನು ಹೂಡಿ ಎಳೆದು ಬಿಟ್ಟನು. ೧೬೦. ಆ ಬಾಣದ ಪೆಟ್ಟಿಗೆ ಸಿಕ್ಕಿ ತಲೆ ಹರಿದು ಜೋತು ತೊಪ್ಪೆಂದು ದೇಹ ನೆಲದ ಮೇಲೆ ಬಿತ್ತು. ಅವನು ಸತ್ತ, ಪರಸ್ತ್ರೀಗೆ ಆಸೆಪಟ್ಟ ಪಾಪದ ಫಲದಿಂದ ಆ ಮಲಿನಮನಸ್ಸಿನವನು ಯಮನ ದಾಡೆಗೆ ವಶನಾದನು. ೧೬೨. ಪಾಪದ ಹೆಚ್ಚಿಗೆಯನ್ನು ನೋಡಿ! (ಸುವೇಗನು) ಕೂಡದೆ, ಹೆಚ್ಚಿನ ಪ್ರೀತಿಯುಂಟಾಗುವಂತೆ ಅವಳೊಡನೆ ಮಾತನಾಡದೆ

ಕಾಳೆಗವೆಂಬುದನಱಿದುಂ
ಬಾಲೆಗೆ ಸೋಲ್ತತ್ತಲಿತ್ತ ಮಿಡುಕದೆ ನಿಂದೊ
ಳ್ಕಾಳಟಿದನೆಂದೊಡನ್ಯರ
ಬಾಲೆಗೆ ಸೋಲ್ತಂಗೆ ಬುದ್ಧಿ ದೊರೆಕೊಂಡಪುದೇ ೧೬೪

ಗತಿಯುಂಟೋ ದಯೆಯುಂಟೋ
ಮತಿಯುಂಟೋ ಸುಗತಿಯುಂಟೋ ನಿರ್ವೃತಿಯುಂಟೋ
ಧೃತಿಯುಂಟೋ ಕೇಳನ್ಯರ
ಸತಿಯರ್ಗಳಿಪಿದ ನರಂಗೆ ವಸುಧಾತಳದೊಳ್ ೧೬೫

ಗದ್ಯ॥ ಅಂತು ಪ್ರಮಾಥಿಕುಮಾರನ ಬಾಣದಿಂ ಮಿಡಮಿಡಮಿಡುಕಿ ಸುವೇಗಂ ನರಕದೊಳ್ ಪುಟ್ಟಿದಂ ಸಮ್ಯಕ್ತ್ವಚೂಡಾಮಣಿ ರಿಪುವಂ ಗೆಲ್ದು ಮುನ್ನಿನವರ ನಿದ್ರೆಯೆಲ್ಲಮನುಪಸಂಹರಿಸಿ ನಿಮ್ಮ ನಿಮ್ಮ ಮನೆಗೆ ಪೋಗಿಮೆಂದು ಕಳುಪಿ ಮನಃಪ್ರಿಯೆವೆರಸು ಕೌಶಾಂಬಿಗೆ ವಂದು ೧೬೬

ಬಿರುದಿಂ ಪೊಂಗಿ ಕಡಂಗಿ ದರ್ಪದೊದವಿಂ ಸುತ್ತಿರ್ದ ಭೂಪಾಲಕ
ರ್ಲ್ಲರುಮಂ ಬೇಗದೆ ತಾಗಿ ಬಾಣತತಿಯಿಂ ಕೈಗಾಯುದೆಚ್ಚುರ್ವಿ ನಿ
ಷ್ಠುರ ಕೋಪಾನಳನಿಂ ತಗುಳ್ದು ಹಯ........
............ಗೊಂಡು ವಿಜಯ ಶ್ರೀಗೀಶನಾಗಿರ್ಪುದುಂ ೧೬೭

ದೂರದಿಂದ ನೋಡಿದ ಫಲವಾಗಿ ಅವನು ಅಶುಭಗತಿಗೆ ಇಳಿದನು ! ೧೬೩. ಕಾಳಗವೆಂದು ತಿಳಿದೂ ಬಾಲೆಗೆ ಸೋತು ಆಚೆ ಈಚೆ ನೋಡದೆ, ಚಲಿಸದೆ ನಿಂದನು. ಅದನ್ನು ಗಮನಿಸಿದ ಶ್ರೇಷ್ಠಶೂರನು ಇರಿದನು. ಅನ್ಯರ ಹೆಣ್ಣಿಗೆ ಆಸೆಪಟ್ಟವರಿಗೆ ಬುದ್ಧಿ ಲಭಿಸುವುದೇ ? ೧೬೪. ಅನ್ಯರ ಸತಿಯರಿಗೆ ಆಸೆಪಟ್ಟ ಮಾನವರಿಗೆ ಈ ಲೋಕದಲ್ಲಿ ಸದ್ಗತಿಯುಂಟೆ ? ಅವನಿಗೆ ಮತಿಯಾಗಲಿ ಪರಲೋಕ ಸದ್ಗತಿಯಾಗಲಿ ಇರುವುದಿಲ್ಲ. ಅವನಿಗೆ ದಯೆಯೂ ಇಲ್ಲ, ಧೈರ್ಯವೂ ಇಲ್ಲ. ೧೬೫. ಹಾಗೆ ಪ್ರಮಾಥಿಕುಮಾರನ ಬಾಣದಿಂದ ಅಸಹಾಯಕನಾಗಿ ಒದ್ದಾಡಿ ಸುವೇಗನು ನರಕದಲ್ಲಿ ಹುಟ್ಟಿದನು. ಸಮ್ಯಕ್ತ್ವಚೂಡಾಮಣಿಯಾದ ಪ್ರಮಾಥಿಕುಮಾರನು ಶತ್ರುವನ್ನು ಗೆದ್ದು ಮೊದಲಿನವರ ನಿದ್ದೆಯನ್ನೆಲ್ಲ ಹೋಗಲಾಡಿಸಿ "ನಿಮ್ಮ ನಿಮ್ಮ ಮನೆಗಳಿಗೆ ಹೋಗಿ" ಎಂದು ಹೇಳಿ ಕಳುಹಿಸಿಬಿಟ್ಟು ತನ್ನ ಮನೋವಲ್ಲಭೆಯೊಡನೆ ಕೌಶಾಂಬಿಗೆ ಬಂದನು. ೧೬೬. ತಮ್ಮ ಬಿರುದಿನಿಂದ ಉಬ್ಬಿ ಹೆಚ್ಚಾದ ದರ್ಪದಿಂದ ರಭಸಮಾಡಿ ನಗರವನ್ನು ಮುತ್ತಿದ್ದ ರಾಜರೆಲ್ಲರನ್ನೂ ಬೇಗನೆ ಕುಮಾರನು ಎದುರಿಸಿ ಕಾಳಗ ಹೂಡಿ ಭಾಣಗಳಿಂದ ಹೊಡೆದು ಗೆದ್ದನು. ೧೬೭.

ದಂತಿಬಲಮಹಾರಾಜಂ ಪ್ರಮಾಥಿಕುಮಾರನಪ್ಪುದಂ ದೂರದಿಂ
ದಱಿದು ಪುರಮಂ ಶೃಂಗಾರಂಗೆಯ್ದಿದಿರ್ಗೆಳಲ್ ಗುಡಿತೋರಣಂ
ಗಳಂ ಕಟ್ಟಿಸಿ ಸಮಸ್ತ ಬಲಂಬೆರಸು ರಾಗದಿಂದಿದಿರ್ವಪ್ಪುದುಂ
ಕುಮಾರನಯ್ಯಂಗೆ ಬಂದು ಚಂದ್ರಲೇಖೆವೆರಸು ಪೊಡೆಮಡುವುದುಂ ೧೬೮

ಜಿನಪದಭಕ್ತನಾಗು ಜಿನಧರ್ಮದೊಳೊಳ್ಪಿದನಾಗು ಜೈನಶಾ
ಸನವರದೀಪನಾಗು ಜಿನಸೇವನೆಯೊಳ್ ದೃಢನಾಗು ರಾಜ್ಯಗೋ
ಮಿನಿಗಧಿನಾಥನಾಗಿ ಸಲೆ ಭವ್ಯಜನಾವಳಿಯೊಳೊಂದಿ ಕೂರ್ತು ಸ
ಜ್ಜನನುತನಾಗಿ ಪಾಲಿಸು ಮಹಾವನಿಯಂ ರವಿಚಂದ್ರರುಳ್ಳಿನಂ ೧೬೯

ಗದ್ಯ॥ ಎಂದು ಪರಸಿ ತಕ್ಕೈಸಿಕೊಂಡು ಮಹಾವಿಭೂತಿಯಿಂದರಮನೆಗೊಡಗೊಂಡು ಬಂದು
ಸಂತೋಷದಿಂ ಜಿನಾಭಿಷೇಕ ಪೂಜೆಗಳಂ ಮಾಡಿ ಕೆಲವು ದಿಸಕ್ಕೆ ಒಸಗೆಮರುಳ್ಗೊಂಡು ೧೭೦

ತನಯಂಗೆ ರಾಜ್ಯಭರವಂ
ಮನುಜೇಂದ್ರಂ ಕೊಟ್ಟುವಿೂಪರಿಗ್ರಹದಿಂ ಬೇ
ಳಿನಿಸದೆ ಜಿನೇಂದ್ರಪದಸೇ
ವನೆಯೊಳ್ ಸಚ್ಚಿತ್ತನಾಗಿ ನಿಲ್ವುದುಮಾಗಳ್ ೧೭೧

ದಂತಿಬಲ ಮಹಾರಾಜನು ಬಂದವನು ಪ್ರಮಾಥಿಕುಮಾರನೆಂಬುದನ್ನು ದೂರದಿಂದಲೇ ತಿಳಿದು ಪಟ್ಟಣವನ್ನು ಅಲಂಕಾರ ಮಾಡಿ ಗುಡಿತೋರಣಗಳನ್ನು ಕಟ್ಟಿಸಿ ಸಮಸ್ತ ಸೈನ್ಯದೊಡನೆ ಕೋಟೆಯಿಂದ ಹೊರಗೆ ಬಂದು ಮಗನನ್ನು ಎದುರುಗೊಂಡನು. ಆಗ ಪ್ರಮಾಥಿಕುಮಾರನು ತಂದೆಯನ್ನು ಕಂಡು ಹೆಂಡತಿ ಚಂದ್ರಲೇಖೆಯೊಡನೆ ನಮಸ್ಕಾರ ಮಾಡಿದನು. ೧೬೮. ವಿನಯದಿಂದ ಅಡ್ಡಬಿದ್ದ ಮಗನನ್ನು ಅರಸನು "ಜಿನಪಾದ ಭಕ್ತನಾಗು, ಜಿನಧರ್ಮಾಚರಣೆಯಲ್ಲಿ ಒಳ್ಳೆಯವನಾಗು. ಜಿನಸೇವೆಯಲ್ಲಿ ದೃಢಬುದ್ಧಿಯುಳ್ಳವನಾಗು. ರಾಜ್ಯಕ್ಕೆ ಅಧೀಶ್ವರನಾಗು. ಜಿನಶಾಸನದಲ್ಲಿ ಆಸಕ್ತನಾಗು. ಭವ್ಯಜನ ಸಮೂಹದೊಡನೆ ಪ್ರೀತಿಯಿಂದ ಸೇರಿ ಸಜ್ಜನರ ಸ್ತೋತ್ರಕ್ಕೆ ಪಾತ್ರನಾಗಿ ಸೂರ್ಯಚಂದ್ರರಿರುವ ತನಕ ಈ ಮಹಾರಾಜ್ಯವನ್ನು ಪರಿಪಾಲಿಸು" ಎಂದು ಹರಸಿ ಆಲಿಂಗಿಸಿಕೊಂಡು ಮಹಾ ವೈಭವದಿಂದ ಅರಮನೆಗೆ ಕರೆದುಕೊಂಡು ಬಂದು ಸಂತೋಷದಿಂದ ಜಿನಾಭಿಷೇಕ ಜಿನಪೂಜೆಗಳನ್ನು ಮಾಡಿ ಕೆಲವು ದಿನಗಳಿಗೆ ಸಂತೋಷದ ಸಂಭ್ರಮದಲ್ಲಿ ೧೭೦. ಮಗನಿಗೆ ರಾಜ್ಯಭಾರವನ್ನು ಒಪ್ಪಿಸಿ ಮಹಾರಾಜನು ಈ ಐಶ್ವರ್ಯದಿಂದ ಬೆಪ್ಪನಾಗದೆ ಜಿನಸ್ವಾಮಿಯ ಪಾದಸೇವೆಯಲ್ಲಿಯೇ ಮನಸ್ಸಿಟ್ಟು ನಿಂತನು. ೧೭೧. ರಾಜರು

೯೨೩

ಧರಣೀಶರ್ ಬೆಸಕೆಯ್ಯೆ ಕೊರ್ತು ಸತತಂ ಕೈವಾರದಿಂದೆಯ್ದೆ ಭೃ
ತ್ಯರುದಾರರ್ ಪದಪಿಂದೆ ಪೊರ್ದೆ ಪರಭೂಪಾಲರ್ ಮಹಾಭೀತಿಯಿಂ
ನರಿಯಂತಂಜಿ ಕುಸುಂಗಿ ತಮ್ಮ ಧನಮಂ ತಂದೀಯೆ ಭವ್ಯಾಳಿ ಪೆ
ರ್ಚಿರೆ ಸದ್ಧರ್ಮದಗುರ್ವು ಪರ್ವೆ ಧರೆಯುಂ ಭೂಭಾರಮಂ ತಾಳ್ದಿದಂ ೧೭೨

ಗದ್ಯ॥ ಅಂತು ರಾಜ್ಯಶ್ರೀಯುಂ ತಾಳ್ದಿ ಸೌಂದರಮಹಾದೇವಿಯುಂ ಚಂದ್ರಲೇಖೆಯುಂ ಮೊದಲಾದನೇಕರಸಿಯರೊಳ್ ಕೂಡಿ ಸುಖಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತುಮಿರ್ಪಿನ ಮಾಪುರಕ್ಕೊರ್ವ ಧರ್ಮಘೋಷ ಭಟ್ಟಾರಕರೆಂಬಧಿಕಗುಣರಪ್ಪ ರಾಜರ್ಷಿಯರ್ ಬರ್ಪುದುಂ ಅವರ ಬರವಂ ಋಷಿನಿವೇದಕಂ ಬಂದರಸಂಗೆ ಬಿನ್ನಪಂಗೆಯ್ವುದುಮಾತಂಗಂಗಚಿತ್ತಮನಿತ್ತು ೧೭೩

ಪರಮೋತ್ಸವದಿಂ ಪುಣ್ಯಂ
ದೊರೆಕೊಂಡುದು ದಿವ್ಯಮುನಿಯ ಬರವಿನೊಳಿವಂಗೆಂ
ದರಸಂ ರಾಜಕುಮಾರರ್
ವೆರಸು ಸುರಾಧೀಶನಂತೆ ಪೊಱಮಟ್ಟಾಗಳ್ ೧೭೪

ಬಂದು ಜಿನಭಕ್ತಿಯಿಂ ಮುನಿ
ವೃಂದಾರಕನಂಘ್ರಿಯುಗಳಮಂ ಪೂಜಿಸಿ ಭೂ
ವಂದಿತಪದಪಂಕರುಹಂ
ವಂದಿಸಿ ಕುಳ್ಳಿರ್ದು ಮುಗಿದು ಹಸ್ತಾಂಬುಜಮಂ ೧೭೫

ಸೇವೆಮಾಡಲು, ಯಾವಾಗಲೂ ಪ್ರೀತಿಯಿಂದಲೂ ಗೌರವದಿಂದಲೂ ಸೇವಕರು ಉತ್ಸಾಹದಿಂದ ಆಶ್ರಯಿಸಲು ಶತ್ರುರಾಜರು ಮಹಾಭಯದಿಂದ ನರಿಯ ಹಾಗೆ ಅಂಜಿ ಕೊಂಡು ಕುಗ್ಗಿ ತಮ್ಮ ಧನವನ್ನು ತಂದುಕೊಡಲು, ಭವ್ಯರ ಗುಂಪು ಹೆಚ್ಚು ಉತ್ಸಾಹ ಗೊಳ್ಳುವಂತೆ ಸದ್ಧರ್ಮದ ಆಧಿಕ್ಯವು ಲೋಕದಲ್ಲೆಲ್ಲ ಹಬ್ಬಲು, ರಾಜ್ಯಭಾರವನ್ನು ವಹಿಸಿಕೊಂಡನು. ೧೭೨. ಹಾಗೆ ರಾಜ್ಯಲಕ್ಷ್ಮಿಯನ್ನು ಧರಿಸಿ ಸೌಂದರ ಮಹಾದೇವಿಯೂ ಚಂದ್ರಲೇಖೆಯೂ ಮೊದಲಾದ ಅನೇಕ ರಾಣಿಯರೊಡನೆ ಕೂಡಿ ಸುಖಕಾಲಕ್ಷೇಪದಿಂದ ರಾಜ್ಯಭಾರ ಮಾಡುತ್ತಿರಲಾಗಿ ಆ ಪಟ್ಟಣಕ್ಕೆ ಒಬ್ಬ ಧರ್ಮಘೋಷ ಭಟ್ಟಾರಕರೆಂಬ ಮಹಾಗುಣಶಾಲಿಗಳಾದ ರಾಜಋಷಿ ಬಂದರು. ಅವರ ಬರುವಿಕೆಯನ್ನು ಋಷಿ ನಿವೇದಕನು ಬಂದು ಅರಸನಿಗೆ ಬಿನ್ನಹ ಮಾಡುತ್ತಲೇ ಅವನಿಗೆ ಬಹುಮಾನವನ್ನು ಕೊಟ್ಟು ೧೭೩. ಮಹಾ ಉತ್ಸವದಿಂದ, ದಿವ್ಯಮುನಿಗಳು ಬಂದದ್ದರಿಂದ ನಮಗೆ ಪುಣ್ಯಲಭಿಸಿತು ಎಂದು ಅರಸನು ರಾಜಕುಮಾರರೊಡನೆ ದೇವೇಂದ್ರನಂತೆ ಹೊರಟು ೧೭೪. ಆಗಲೇ ಬಂದು ಜಿನಭಕ್ತಿಯಿಂದ ಮುನಿಶ್ರೇಷ್ಠನ ಪಾದಯುಗಳವನ್ನು ಪೂಜೆ ಮಾಡಿ ಲೋಕವಂದಿತನಾದ ಅರಸನು ನಮಸ್ಕರಿಸಿ ಕೈಮುಗಿದು ಕುಳಿತುಕೊಂಡು ೧೭೫.

ಗದ್ಯ॥ ನಿರ್ವಾಣಶ್ರೀಯ ಶೃಂಗಾರಮೆನಿಸಿದ ಜಿನಧರ್ಮಮಂ ಕಿವಿಯಾಂತೇಕಚಿತ್ತದಿಂ ಕೇಳುತ್ತುಮಿರ್ದು ವಾತ್ಸಲ್ಯರತ್ನಾಕರಂ ಪರಾಂಗನೆಗಳಿಪಿ ಕಿಡೆದ ಸಹಸ್ರಭಟನಪ್ಪ ಸುವೇಗನಂ ನೆನೆದು ಮನದೊಳ್ ವಿಸ್ಮಯಂಬಡುತ್ತಿರ್ಪುದುಂ ಧರ್ಮಘೋಷಣ ಭಟ್ಟಾರಕರವಧಿಜ್ಞಾನರಪ್ಪುದಱಿಂ ಸಮ್ಯಕ್ತ್ವಚೂಡಾಮಣಿಯ ಮನದ ಚಿಂತೆಯನಱಿದಿಂತೆಂದರ್ ೧೭೬

ನೀಂ ನೆನೆಯುತ್ತಿರ್ಪ ಸುವೇ
ಗಂ ನಿನ್ನಂಗನೆಗೆ ಸೋಲ್ತು ಪಾಪದ ಫಲದಿಂ
ದಂ ನರಕಕೆಯ್ದಿ ವೇದನೆ
ಯಿಂ ನವೆದಪನೀಗಳೆಂಬುದುಮಂ ನೃಪತನಯಂ ೧೭೭

ಬೆಱಗಾಗಿ ಕರ್ಮಜೀವಿಗ
ಳಱಿಯದೆ ಮತಿಗೆಟ್ಟು ಪೆಱರ ಪೆಂಡಿರಯಿಂಪಿಂ
ಗೆಱಗಿ ಮತಿಗೆಟ್ಟು ಜಗುಟಿ್ದಡೆ
ಯಱಿಯದೆ ಮಱುಗುತ್ತುಮಿರ್ಪರೇಂ ಸಾಸಿಗರೋ ೧೭೮

ಸಾರಂ ಸ್ತ್ರೀಸುಖಮೆಂದವಿ
ಚಾರತೆಯೀಂ ಬಱಿದೆ ಮಱುಗಿ ಬೆಳ್ಪನದಿಂ ಸಂ
ಸಾರಿಗಳೆಱುಗುವರನ್ಯರ
ನಾರಿಗೆ ನರಕಕ್ಕೆ ಜಗುಟ್ವ ಸಮಕಟ್ಟೆಂದಂ ೧೭೯

ಮೋಕ್ಷಲಕ್ಷ್ಮಿಯ ಅಲಂಕಾರವೆನಿಸಿದ ಜಿನಧರ್ಮವನ್ನು ಒಂದೇ ಮನಸ್ಸಿನಿಂದ ಕಿವಿಗೊಟ್ಟು ಕೇಳುತ್ತಿದ್ದ.ರಾಜನು ಪರರ ಹೆಣ್ಣಿಗೆ ಆಸೆಪಟ್ಟು ಬಿದ್ದ ಸಹಸ್ರಭಟರ ಒಡೆಯನಾದ ಸುವೇಗನನ್ನು ಸ್ಮರಿಸಿ ಮನಸ್ಸಿನಲ್ಲಿ ಆಶ್ಚರ್ಯಪಟ್ಟು ಚಿಂತಿಸುತ್ತಿದ್ದಾಗ ಧರ್ಮಘೋಷಣ ಭಟ್ಟಾರಕರು ಅವಧಿಜ್ಞಾನವಿದ್ದವರಾದುದರಿಂದ ಆ ಸಮ್ಯಕ್ತ್ವ ಚೂಡಾಮಣಿಯ ಮನಸ್ಸಿನ ಚಿಂತೆಯನ್ನು ತಿಳಿದು ಹೀಗೆಂದರು : ೧೭೭. "ನೀನು ಸ್ಮರಿಸುತ್ತಿರುವ ಸುವೇಗನು ನಿನ್ನ ಹೆಂಡತಿಗೆ ಆಸೆಪಟ್ಟ ಪಾಪದ ಫಲದಿಂದ ನರಕಕ್ಕೆ ಸೇರಿ ಸಂಕಟದಿಂದ ಕೃಶನಾಗುತ್ತಿರುವನು ! ಈ ಮಾತುಗಳನ್ನು ಕೇಳಿದ ರಾಜಪುತ್ರನು ಬೆರಗಾದನು. ಕರ್ಮವಶರಾದ ಜೀವಿಗಳು ತಿಳಿಯದೆ ಬುದ್ಧಿಹೀನರಾಗಿ ಇತರರ ಹೆಂಡಿರ ಆಕರ್ಷಣೆಗೆ ಒಳಗಾಗಿ ವಿವೇಕಹೀನರಾಗಿ ಜಾರಿಬಿದ್ದು ಸಂಕಟಪಡುತ್ತಿರುತ್ತಾರೆ. ಅವರು ಇನ್ನೆಷ್ಟು ದುಡುಕಿನವರೊ ! ೧೭೮. ಸ್ತ್ರೀಸೌಖ್ಯವೇ ಸಾರವೆಂದು ಭಾವಿಸಿ ವಿಚಾರವಿಲ್ಲದೆ ವೃಥಾ ಸಂಕಟಪಟ್ಟು ಬೆಪ್ಪುತನದಿಂದ ಸಂಸಾರಮಗ್ನರು ಅನ್ಯರ ನಾರಿಯರಿಗೆ ಸೋತು ನರಕಕ್ಕೆ ಇಳಿಯುವರು. ೧೭೯. ತವುಡನ್ನು ತಿಂದು ಪಾಯಸವನ್ನುಂಡೆನೆನ್ನುವಂತೆ

ಗದ್ಯ॥ ತವುಡಂ ತಿಂದು ತುಯ್ಯಲನುಂಡೆನೆಂಬಂತೆ ಸಾಯನೇಱಿ ಕರಿಯನೇಱಿದೆನೆಂಬಂತೆ ಗಂಜಿಯಂ ಕುಡಿದು ಕಳವೆಯ ಕೂಟನುಂಡೆನೆಂಬಂತೆ ಬಾಟೆಲೆಯಂ ತಿಂದು ಪಣ್ಣಂ ತಿಂದೆನೆಂಬಂತೆ ಕಬ್ಬಿನಡಿಯ ಬೇರಂ ತಿಂದು ಕಬ್ಬಂ ಮೆಲ್ದೆನೆಂಬಂತೆ ಸಂಸಾರದಲ್ಪಸುಖಮಂ ಸಂಕಲ್ಪದಿಂ ಮಹಾಸುಖಮೆಂದು ನಂಬಿ ನರಕದೊಳಾದ ಮಹಾದುಃಖಕ್ಕೊಳಗಾದರಕ್ಕಟಾ ಮೂರ್ಖರೆಂದು ತನ್ನೊಳೆ ಭಾವಿಸಿ ಮುನಿಕುಂಜರಂಗೆ ಪುನರ್ನಮಸ್ಕಾರಂಗೆಯ್ದು ತನ್ನ ಮನೆಗೆ ವಂದು ೧೮೦

ಪುಲಿಯಂ ಸೊರ್ಕಿದ ಗಂಧಸಿಂಧುರಮನತ್ಯಾಳಾಪಿಯಾಗಿರ್ದ ದು
ಷ್ಕುಲನಂ ಪನ್ನಗನಂ ವಿಷೋತ್ಕರಮನಸ್ತ್ರಾನೀಕಮಂ ಸಿಂಹಸಂ
ಕುಲಮಂ ಕಾಣ್ಬವೊಲಂಜಿ ಸಾರದೆ ಪರಸ್ತ್ರೀಯರ್ಕಳಂ ಭೂರಿ ಭೂ
ತಳದೊಳ್ ತಾಯ ಸಮಾನಮೆಂದು ಬಗೆದಂ ವಾತ್ಸಲ್ಯರತ್ನಾಕರಂ ೧೮೧

ಎಸೆವ ಪರಸ್ತ್ರೀಯುರ ತೆ
ಳ್ವಸಿಱಂ ಪೆತ್ತ ಬಸುಱೆಂಬನಲ್ಲದೆ ಮತ್ತೊಂ
ದಸದಾಳಾಪಮನೆನ್ನಂ
ವಸುಮತಿಯೊಳ್ ಸುಕವಿನಿಕರಪಿಕಮಾಕಂದಂ ೧೮೨

ಮಂಡಿತಮೆನಿಸುವ ಲೋಗರ
ಪೆಂಡಿರ ಪೆರ್ಮೊಲೆಯುಮಂ ಮನೋಮುದದಿಂ ಮು
ನ್ನುಂಡ ಮೊಲೆಯೆಂಬನವನೀ
ಮಂಡಲದೊಳ್ ಸುಕವಿನಿಕರಪಿಕಮಾಕಂದಂ ೧೮೩

ನಾಯಿಯನ್ನು ಏರಿ ಆನೆಯನ್ನು ಏರಿದೆನೆಂಬಂತೆ, ಗಂಜಿಯನ್ನು ಕುಡಿದು ನೆಲ್ಲಕ್ಕಿಯ ಅನ್ನವನ್ನುಂಡೆನೆನ್ನುವ ಹಾಗೆ ಬಾಳೆಎಲೆಯನ್ನು ತಿಂದು ಹಣ್ಣನ್ನು ಮೆದ್ದೆನೆನ್ನುವ ಹಾಗೆ ಕಬ್ಬಿನ ಕೆಳಗಿನ ಬೇರನ್ನು ತಿಂದು ಕಬ್ಬನ್ನು ತಿಂದೆನೆನ್ನುವ ಹಾಗೆ ಸಂಸಾರದ ಅಲ್ಪಸುಖವನ್ನು ಉದ್ದೇಶಪೂರ್ವಕವಾಗಿ ಮಹಾಸುಖವೆಂದು ನಂಬಿ ನರಕದಲ್ಲಿ ಆಗುವ ಮಹಾ ದುಃಖಕ್ಕೆ ಒಳಗಾಗುವರು. ಅಯ್ಯೋ! ಮೂರ್ಖರು! ಎಂದು ತನ್ನಲ್ಲಿಯೇ ಯೋಚಿಸಿ ಮುನಿಶ್ರೇಷ್ಠನಿಗೆ ಪುನಃ ನಮಸ್ಕಾರ ಮಾಡಿ ತನ್ನ ಮನೆಗೆ ಬಂದನು. ೧೮೦. ಹುಲಿ, ಸೊಕ್ಕಿದ ಮದ್ದಾನೆ, ಬಹಳ ಮಾತನಾಡುವ ದುಷ್ಕುಲದವನು, ಸರ್ಪ, ಹೆಚ್ಚಿನ ವಿಷ, ಅಸ್ತ್ರಸಮೂಹ, ಸಿಂಹಗಳ ಗುಂಪು–ಇವುಗಳನ್ನು ಕಾಣುವ ರೀತಿಯಲ್ಲಿ ಕಂಡು, ಹೆದರಿ ಸಮೀಪಿಸದೆ ಪರಸ್ತ್ರೀಯರನ್ನು ನೋಡದೆ ಈ ಭೂತಳದಲ್ಲಿ ಅವರನ್ನು ತಾಯಿಯರಂತೆ ಕಾಣುತ್ತಿದ್ದನು. ೧೮೧. ಶೋಭಿಸುವ ಪರಸ್ತ್ರೀಯ ತೆಳುವಾದ ಬಸಿರನ್ನು ಹೆತ್ತ ಬಸುರೆಂಬನಲ್ಲದೆ ಮತ್ತೊಂದು ಕೆಟ್ಟ ಮಾತನ್ನು ಆಡನು. ೧೮೨. ಆ ಸುಕವನಿಕರಪಿಕವಮಾಕಂದ (ಪ್ರಮಾಥಿಕುಮಾರ) ನು, ಅಲಂಕಾರವೆನಿಸುವಂಥ ಅನ್ಯರ ಹೆಂಡಿರ ಸ್ತನಗಳನ್ನು ಮನಃಪೂರ್ವಕವಾಗಿ ಹಿಂದೆ ತಾನು ಉಂಡ

ಬಿತ್ತರದಿಂದನ್ಯರ ಸಂ
ಪತ್ತಿನ ವನಿತೆಯರ ನೀಳ್ದ ನಿಡಿದೋಳ್ ಕಿಱಿಯಂ
ದೆತ್ತಿದತೋಳೆಂದಿರ್ಪನು
ದಾತ್ತತೆಯಿಂ ಸುಕವಿನಿಕರಪಿಕವಾಕಂದಂ ೧೮೪

ಗದ್ಯ॥ ಅಂತು ಕಾಳಕೂಟದೊಳ್ ಬೆರಸಿದ ಕೂೞಂತೆ ದೃಷ್ಟಿವಿಷಮಪ್ಪ ಪಾವಿನ ತಲೆಯ ಮಾಣಿಕದಂತೆ ಬೆಟ್ಟದಡಿಯಲ್ಲಿರ್ದ ನಿಧಿಯಂತೆ ನೆಗಳುಳ್ಳ ಮಡುವಿನೊಳಿರ್ದ ನಿಕ್ಷೇಪದಂತೆ ಚಕ್ರವರ್ತಿಯ ಬಾಯತುತ್ತಿನಂತೆ ಕತ್ತರಿವಾಣಿಯೊಳಗಣ ಕರ್ವಿನಂತೆ ಪುಲಿಯ ಮೀಸೆಯೊಳಿರ್ದ ಮುತ್ತಿನಂತೆ ಸಿಂಹದ ದಾರಿಯೊಳಿರ್ದ ಗಾರಿಗೆಯಂತೆ ಡಾಕಿನಿಯರ ಕೈಯ ಪೋಳಿಗೆಯಂತೆ ರಕ್ಕಸಿಯರ ಮನೆಯ ಬೆಲ್ಲದಂತೆ ಕಲ್ಲ ಬಿಡವೆಯೊಳಿರ್ದ ಪಣವಿನಂತೆ ಸಿಡಿಲೊಳಗಿರ್ದ ಸಕ್ಕರೆಯಂತೆ ಕಾಡೆಮ್ಮೆಯ ಮೊಲೆಯ ಪಾಲಂತೆ ಕಟ್ಟರಿದಪ್ಪ ಪರವನಿತೆಯರಂ ಪಂಬಲಿಸುವ ನಾಲಗೆಯೊಳ್ ಪಣವನಿಕ್ಕಿ ತೋಱುವ ಕಣ್ಸನ್ನೆಗೆಯ್ದು ಸಂಕೇತಮಂ ನುಡಿವ ಬಟ್ಟೆಯಟ್ಟುವ ಮರುಳಂ ಕಾಲ ಕಿಚ್ಚನೆರ್ದೆಗೆ ತೆಗೆವ ಬೆಟ್ಟಮೇಱಿ ಮೃತ್ಯುಗರೆವ ಸುಣ್ಣಮಂ ಬಱಿದೆ ಕುಡಿದ ಕಣ್ಣೊಡೆದುಕೊಳ್ವ ಕೋಳಕ್ಕೆ ಕಾಲಂ ನೀಡುವ ಶೂಲಮನೇಱಿ ಕುಳ್ಳಿರ್ಪ ಕೊಲ್ವಾನೆಯ ಕಾಲಂ ಪಿಡಿವವನಂ ಪೋಲ್ಕುಂ. ಗಂಡನ ನೆರೆಯ ಪೊರೆಯ ತಳಾಱರ ಲೋಗರ ಮಿಂಡರ ಭೂಪರ ಬಾರಿಗೆ ಬಿರ್ದು

ಮೊಲೆಯೆನ್ನುವನು. ೧೮೩. ವಿಸ್ತಾರವಾದ ಇತರರ ಸಂಪತ್ತಾದ ಹೆಂಡಿರ ನಿಡಿದೋಳುಗಳು ಚಿಕ್ಕಂದಿನಲ್ಲಿ ತನ್ನನ್ನು ಎತ್ತಿ ಆಡಿಸಿದ ತೋಳೆಂದು ಆ ಸುಕವಿಗಳಿಗೆ ಆಶ್ರಯದಾತನಾದರಾಜನು ಉದಾತ್ತಚಿತ್ತದಿಂದ ಭಾವಿಸುತ್ತಿದ್ದನು. ೧೮೪. ಹಾಗೆ ಕಾಲಕೂಟ ವಿಷದೊಡನೆ ಬೆರಸಿದ ಅನ್ನದ ಹಾಗೆ, ದೃಷ್ಟಿಮಾತ್ರದಿಂದ ವಿಷವಾಗುವ ಹಾವಿನ ತಲೆಯಲ್ಲಿನ ಮಾಣಿಕ್ಯದಂತೆ, ಬೆಟ್ಟದ ತಳದಲ್ಲಿರುವ ನಿಧಿಯಂತೆ ಮೊಸಳೆಯಿರುವ ಮಡುವಿನಲ್ಲಿದ್ದ ನಿಕ್ಷೇಪದ ಹಾಗೆ, ಚಕ್ರವರ್ತಿಯ ಬಾಯತುತ್ತಿನ ಹಾಗೆ ವಿಷೋದಕ (ಸೋಕಿದರೆ ಕೈ ಕತ್ತರಿಸುವಂಥಾದ್ದು)ದ ಮಧ್ಯದಲ್ಲಿನ ಕಬ್ಬಿನಹಾಗೆ, ಹುಲಿಯ ಮೀಸೆಯ ಮೇಲಿರುವ ಮುತ್ತಿನಂತೆ. ಸಿಂಹದ ದಾರಿಯಲ್ಲಿರುವ ಗಾರಿಗೆಯಂತೆ, ಡಾಕಿನಿಯರ ಕೈಯಲ್ಲಿನ ಹೋಳಿಗೆಯಂತೆ, ರಕ್ಕಸಿಯರ ಮನೆಯ ಬೆಲ್ಲದಂತೆ, ಕಲ್ಲಸಂದಿನಲ್ಲಿರುವ ಹಣದಂತೆ, ಸಿಡಿಲಿನೊಳಗಣ ಸಕ್ಕರೆಯಂತೆ, ಕಾಡೆಮ್ಮೆಯ ಕೆಚ್ಚಲಿನ ಹಾಲಿನಂತೆ, ಬಹಳ ಅನುಚಿತವಾದ ಪರವನಿತೆಯರಿಗಾಗಿ ಹಂಬಲಿಸುವ ನಾಲಗೆಯಲ್ಲಿ ಹಣವನ್ನಿಟ್ಟು ತೋರಿಸುವ, ಕಣ್ಣುಸನ್ನೆ ಮಾಡುವ ಸಂಕೇತವನ್ನು ಹೇಳುವ, ಹೇಳಿಕಳುಹಿಸುವ ದಡ್ಡನು ಕಾಲಿನ ಬೆಂಕಿಯನ್ನು ಎದೆಗೆ ಏರಿಸುವ, ಬೆಟ್ಟವನ್ನೇರಿ ಮೃತ್ಯುವನ್ನು ಕರೆಯುವ, ಸುಣ್ಣವನ್ನು ಸುಮ್ಮನೆ ಕುಡಿಯುವ, ಕಣ್ಣುಗಳನ್ನು ತಾನೇ ಒಡೆದುಕೊಳ್ಳುವ, ಕೋಳಕ್ಕೆ ಕಾಲನ್ನು ಚಾಚುವ, ಶೂಲವನ್ನು ಹತ್ತಿ ಕುಳಿತಿರುವ, ಕೊಲ್ಲುವ ಆನೆಯ ಕಾಲನ್ನು ಹಿಡಿಯುವಂಥವನನ್ನು ಹೋಲುತ್ತಾನೆ. ಗಂಡನ ನೆರೆಹೊರೆಯ ತಳವಾರರ, ಕಂಡವರ, ಮಿಂಡರ

ಬೋಡಾಗಿ ನಾಯಾಗಿ ತೇಜಂಗೆಟ್ಟು, ಸಾಗುಮದು ತಪ್ಪಿ ಪಾದರಂ ಮೆಯ್ಯಿಕ್ಕಿದೊಡಂ ಕದ್ದಾತ ನರಸನ ಕಯ್ಯೊಳ್ ಕದ್ದು ಪರದಾಡುವಂ ಸುಂಕಿಗನ ಕಯ್ಯೊಳ್, ಕುಡುಗುಣಿಸಾಯ್ ಮನೆಯ ವರ ಕಯ್ಯೊಳ್ ವಂಚಕರಪ್ಪ ಗಂಡುಗಳ್ ತಳಾರರ ಕಯ್ಯೊಳ್ ಪಲವುಸೂಟ್ ನೀರನೀಸುವಂ ನೀರಕಯ್ಯೊಳ್ ಕಡುಬಿರುದಂ ಕಲಿಯ ಕಯ್ಯೊಳ್ ತುಡುಗಾಡುವ ಬಸವನಾರುಂಬಿಗನ ಕಯ್ಯೊಳ್ ಇರುಳ್ವಟ್ಟೆಗಾಱಂ ಕಳ್ಳನ ಕಯ್ಯೊಳ್ ಸಿಕ್ಕುವಂತೆ ನಾರಕರ ಬಾರಿಯೊಳ್ ಬಿರ್ದು ಬಾರದ ಭವಂ ಬರ್ಕುವೆಂಬ ಜಿನಾಗಮದೋಜೆಯುಂ ಭಾವಿಸಿ ಪಾದರದ ವ್ಯಸನಕ್ಕೆ ಭಯಸ್ಥನಾಗಿ ೧೮೫

ರತಿ ರಂಭೆ ತಿಲೋತ್ತಮೆ ಭಾ
ರತಿಯೆಂಬಿವರೊರೆಗೆ ಬರ್ಪ ಪರವನಿತೆಯರು
ನ್ನತ ರಾಜವಂಶತಿಲಕಂ
ಗತಿಶಯದಿಂ ಸೋಲವಲ್ತೆ ಕಣ್ಣುಂ ಮನಮುಂ

೧೮೬

ಗದ್ಯ॥ ಅಂತು ಪರನಾರೀನಂದನನುಂ ಜಿನಪಾದಪದ್ಮಷಟ್ಪದನುಂ ಸದ್ಧರ್ಮವಿನೋದನುಂ ಮುನಿವಚನಾನಂದಹೃದಯನುಂ ಸಮ್ಯಕ್ತ್ವಚೂಡಾಮಣಿಯುಂ ಭವ್ಯಜನಸರೋಜಿನೀ ರಾಜ ಹಂಸನುಮಾಗಿ ಪಲವು ಕಾಲಂ ರಾಜ್ಯಂಗೆಯ್ದೊಂದು ದಿವಸಂ ಗಂಟಲನಡಸಿ ಪಿಡಿದ ಕಯ್ಯುಗುರಿ

ರಾಜರ, ಬಾರಿಗೆ ಸಿಕ್ಕಿ, ಬೋಳಾಗಿ, ನಾಯಿಯಾಗಿ ತೇಜಸ್ಸನ್ನು ಕಳೆದುಕೊಂಡು ಸಾಯು ವನು. ಅದು ತಪ್ಪಿ ಹಾದರ ತೊಡಗಿದರೂ ಕದ್ದವನು ಅರಸನ ಕೈಯಲ್ಲಿ, ಕದ್ದು ವ್ಯಾಪಾರ ಮಾಡುವವನು ಸುಂಕದವನ ಕೈಯಲ್ಲಿ, ಕಳ್ಳನಾಯಿ ಮನೆಯವರ ಕೈಯಲ್ಲಿ, ವಂಚಕರಾದ ಗಂಡಸರು ತಳವಾರರ ಕೈಯಲ್ಲಿ, ಹಲವು ಸಲ ನೀರನ್ನು ಈಜಿ ದಾಟುವವನು ನೀರಿನಲ್ಲಿ, ಹಾವಾಡಿಗನು ಹಾವಿನ ಕೈಯಲ್ಲಿ, ಹುಲಿ ಬೇಟೆಯಾಡುವವನು ಹುಲಿಯ ಕೈಯಲ್ಲಿ, ಬಹಳ ಹೆಮ್ಮೆವಂತನು ಶೂರನ ಕೈಯಲ್ಲಿ, ಇರುಳು ಪ್ರಯಾಣಕನು ಕಳ್ಳರ ಕೈಯಲ್ಲಿ, ಸಿಕ್ಕಿಕೊಳ್ಳುವಂತೆ ನರಕದವರ ದಾರಿಗೆ ಬಿದ್ದು ಪಡಬಾರದ ಪಾಡುಪಡುವರೆಂಬ ಜಿನಾಗಮದ ಕ್ರಮವನ್ನು ಧ್ಯಾನಿಸಿ ಹಾದರದ ದುಶ್ಚಟಕ್ಕೆ ಭಯವುಳ್ಳವನಾದನು. ೧೮೫. ರತಿ, ರಂಭೆ, ತಿಲೋತ್ತಮೆ, ಭಾರತಿ ಮುಂತಾದವರಿಗೆ ಸರಿಯೆನಿಸುವಂಥ ಪರವನಿತೆಯರಿಗೆ ಆ ಉನ್ನತ ರಾಜವಂಶಶ್ರೇಷ್ಠನ ಕಣ್ಮನಗಳು ಸೋಲಲೊಲ್ಲವು. ೧೮೬. ಹಾಗೆ ಪರ ನಾರಿಯರಿಗೆ ಮಗನಂತೆ ನಡೆಯುವವನೂ ಜಿನಪಾದಕಮಲಗಳ ತುಂಬಿಯೂ, ಸದ್ಧರ್ಮದಲ್ಲಿ ವಿನೋದ ಪಡುವವನೂ ಮುನಿವಚನದಿಂದ ಹೃದಯದಲ್ಲಿ ಆನಂದಿಸುವವನೂ ಸಮ್ಯಕ್ತ್ವ ಚೂಡಾಮಣಿಯೂ ಭವ್ಯಜನರೆಂಬ ಸರೋಜಿನಿಗಳಿಗೆ ರಾಜಹಂಸನಂಥವನೂ (ಭವ್ಯಜನಸಹವಾಸದಲ್ಲಿರುವವನು.) ಆಗಿ ಬಹಳ ಕಾಲ ರಾಜ್ಯವಾಳಿ ಒಂದು ದಿನ ಗಂಟಲನ್ನು ಒತ್ತಿಹಿಡಿದ ಕೈಯ ಉಗುರಿನಂತೆ, ಸಾವು ಸಮೀಪಿಸಿತೆಂದು ಕಿವಿಯಲ್ಲಿ

ನಂತೆ ಸಾವು ಮುಟ್ಟಿವಂದುದೆಂದು ಕಿವಿಯೊಳ್ ಪರ್ಚಿ ಪೇೞಲ್ ಬಂದ ಯಮಧರ್ಮರಾಜನ ದೂತನಂತೆ ಮೃತ್ಯುರಾಜನ ತಳಾಱರಣೆದಡಂಗೆಯ್ವ ಸುಣ್ಣದಂತೆ ಮುನ್ನಂ ಧರ್ಮದ್ರೋಹನಾಗಿರ್ದ ಬೆಳ್ತನದ ಬೆಳ್ಪಿನಂತೆ ತಲೆಗೆ ಬಿಗಿದ ಕೃತಾಂತನ ಕಯ್ಯ ನೂಲನೇಣನಂತೆ ಕೊಲಲೆಂದು ಮೊಗಮಿಕ್ಕಿದ ಯಮಗಜದಂತದಂತೆ ಕೀನಾಶನೆಂಬ ಕಿರಾತನೆಚ್ಚ ಕವಲಂಬಿನ ಮೊನೆಯಂತೆ ತಲೆಗೆ ಪಾಯ್ವಂತಕನೆಂಬ ಪುಲಿಯ ಪಲ್ಲೆಂಬಂತೆ ಜವ್ವನಮೆಂಬ ಸೂರ್ಯನ ಕೇಡಿಂ ಮರಣಮೆಂಬ ರಾತ್ರಿಯೊಳುದಯಂಗೆಯ್ದೆಳವೆಱೆಯೆಂಬಂತೆ ಕುಂದಿದಾಯುಷ್ಯಮೆಂಬ ತೊಱೆಯೆರಡು ತಡಿಯ ಬಿಳಿಯ ಮಳಲ ದಿಂಟೆಯಂತೆ ಪಿಡಿದಡಸಿ ನುಂಗುವ ಸಂಸೃತಿಯೆಂಬ ಶಾಕಿನಿಯ ಕಡೆಗಣ್ಣೆಂಬಂತೆ ಭಯಂಕರಮಾಗಿರ್ದ ಕೆನ್ನೆಯ ನರೆಯಂ ಕನ್ನಡಿಯೊಳ್ ಕಂಡು ೧೮೭

ಎನಿಸೆನಿಸು ಸಿರಿಯೊಳಿರ್ದೊಡ
ಮನಿಸನಿಸು ಮನಕ್ಕೆ ಮೋಹಮೊದವುತ್ತಿರ್ಕುಂ
ಮದಮಿಂಗೆ ಸಹಜಮದಱಿಂ
ಮನಮೆಂದುದನಾಡುತಿರ್ಪ ಮನುಜನೆ ಗಾಂಪಂ ೧೮೮

ಧನಮನುಪಾರ್ಜಿಸುವುದು ಮ
ತ್ತೆನಗೆಂದುಂ ಮರಣಮಿಲ್ಲ ಶಾಶ್ವತಮೆಂಬಂ
ತನುನಯಮೊದವುಗುಮಳಿಪುಂ
ಘನಮಕ್ಕುಂ ಸಹಜಮಸುಗಿದಂ ಬಾರಿಪರಾರ್ ೧೮೯

ಪಿಸುಗುಟ್ಟಿ ಹೇಳಲು ಬಂದ ಯಮಧರ್ಮರಾಜನ ದೂತನ ಹಾಗೆ, ಮೃತ್ಯುರಾಜನ ತಳವಾರನು ಅಪ್ಪಳಿಸಿ ಹಚ್ಚುವ ಸುಣ್ಣದಂತೆ ಮೊದಲೇ ಧರ್ಮದ್ರೋಹನಾಗಿದ್ದ ಬೆಪ್ಪುತನದ ಬಿಳುಪಿನಂತೆ, ತಲೆಗೆ ಬಿಗಿದು ಕಟ್ಟಿದ ಯಮನ ಕೈಯ ನೂಲಿನ ಹಗ್ಗದಂತೆ, ಕೊಲ್ಲುವುದಕ್ಕೆಂದು ಮೂತಿಯಿಟ್ಟ ಯಮನ ಗಜ (ಕೋಣ)ದಂತದಂತೆ (ಹಲ್ಲಿನಂತೆ) ಯಮನೆಂಬ ಕಿರಾತನು ಹೊಡೆದ ಕವಲುಬಾಣದ ಚೂಪಿನ ತುದಿಯಂತೆ ತಲೆಗೆ ಹಾಯುವ ಯಮನೆಂಬ ಹುಲಿಯ ಹಲ್ಲೆಂಬ ಹಾಗೆ ಯೌವನವೆಂಬ ಸೂರ್ಯನ ನಾಶದಿಂದ ಮರಣವೆಂಬ ರಾತ್ರಿಯಲ್ಲಿ ಉದಯಿಸಿದ ಬಾಲಚಂದ್ರನೆಂಬಂತೆ, ಕುಗ್ಗಿದ ಆಯುಷ್ಯವೆಂಬ ಹೊಳೆಯ ಎರಡು ದಡಗಳ ಹತ್ತಿರದ ಮರಳಿನ ದಿನ್ನೆಯಂತೆ, ಮೇಲೆ ಬಿದ್ದು ಹಿಡಿದು ನುಂಗುವ ಸಂಸಾರವೆಂಬ ಶಾಕಿನಿಯ ಕಡೆಗಣ್ಣ ನೋಟವೆಂಬ ಹಾಗೆ ಭಯಂಕರವಾಗಿದ್ದ ಕೆನ್ನೆಯ ನರೆಗೂದಲನ್ನು ಕನ್ನಡಿಯಲ್ಲಿ ನೋಡಿದನು. ೧೮೭. ಎಷ್ಟೆಷ್ಟು ಐಶ್ವರ್ಯದಲ್ಲಿದ್ದರೂ ಮನಸ್ಸಿಗೆ ಅಷ್ಟಕ್ಕಷ್ಟು ಮೋಹ ಹೆಚ್ಚುತ್ತಿರುತ್ತದೆ. ಅದು ಮನಸ್ಸಿಗೆ ಸಹಜ. ಆದ್ದರಿಂದ ಮನಸ್ಸು ಹೇಳಿದಂತೆ ಆಡುತ್ತಿರುವ ಮನುಜನೇ ದಡ್ಡ. ೧೮೮. ಹಣವನ್ನು ಸಂಪಾದಿಸುವುದು, ನನಗೆ ಎಂದಿಗೂ ಮರಣವಿಲ್ಲ; ನಾನು ಶಾಶ್ವತ, ಎನ್ನುವ ಹಾಗೆ ಪ್ರೀತಿಯೊದಗುತ್ತದೆ, ಇದು ಪ್ರಾಣಿಗೆ ಸ್ವಭಾವ. ಇದನ್ನು ತಪ್ಪಿಸ

ಸಾವಕ್ಕುಂ ಕಡುನೋಗಂ
ಭಾವದೊಳಲ್ಲಾಡುತಿರ್ಕುಮತಿಲೋಲತೆಯಿಂ
ಭಾವಿಪುದು ಧರ್ಮಮೆಂದೊಡೆ
ಜೀವಂ ಧಾರಿಣಿಯೊಳಿಂತಿದಂ ಬಾರಿಪರಾರ್ ೧೯೦

ಪರವನಿತೆಗೋತು ಕೂಡಿರೆ
ಧರಣೀಶರ್ ಪಿಡಿಯೆ ಮೋಹಮಿಲ್ಲದೆ ಪೊನ್ನಂ
ಪಿರಿದೀವ ಧರ್ಮಕ್ಕೊಂ
ದರೆಗಾಣಿಗೆ ಜೀವಮಕಟ ಮೋಹಿಸುತಿರ್ಪಂ ೧೯೧

ನಿಕ್ಕಾರಣಮರಸರ್ ಪಿಡಿ
ದಕ್ಕಟ ತೆಱಿಮೆಂದು ಬೇಡೆ ಬೇಡಿದ ಪೊನ್ನಂ
ನಿಕ್ಕುವಮೀವರ್ಕೆಳೊಂ
ದಕ್ಕಿಯುಮಂ ಧರ್ಮಮೆಂದೊಡೀವವರೊಳರೇ ೧೯೨

ಪರಿತಂದು ಬಂದಿಕಾಱರ್
ಕೊರಲಂ ಪಿಡಿದೊತ್ತೆ ಬೇಡಿದರ್ಥಮನೀವರ್
ವರ ಧರ್ಮಕ್ಕೊಂದಡಕೆಯು
ನೆರೆದೊಡಮಣಮೀವರೊಳರೆ ವಸುಧಾತಳದೊಳ್ ೧೯೩

ಬಲ್ಲವರು ಯಾರು ? ೧೮೯. ಜೀವಿಗೆ ಸಾವು ಆಗುತ್ತದೆ, ಅವನು ಬಹಳ ನೋಯು ವನು. ಅತಿಯಾದ ಲೋಲುಪತೆಯಿಂದ ಮನಸ್ಸು ಅಲ್ಲಾಡುತ್ತಿರುತ್ತದೆ. ಧರ್ಮವೆಂದರೆ ಜೀವಿಯು ಇದನ್ನೆಲ್ಲ ಚಿಂತಿಸಬೇಕು. ಇದನ್ನು ತಪ್ಪಿಸುವವರು ಯಾರು ? ೧೯೦. ಬೇರೆಯವರ ಹೆಂಗಸಿಗೆ ಒಲಿದು ಕೂಡಿರಲು ರಾಜರು ಹಿಡಿದರೆ ಮೋಹವನ್ನು ಬಿಟ್ಟು ಹೊನ್ನನ್ನು ಹೆಚ್ಚಾಗಿ ಕೊಡುವ ಜೀವಿಯು ಧರ್ಮಕ್ಕೆ ಒಂದು ಅರೆಕಾಣಿಯನ್ನೂ ಕೊಡ ಲಾರದೆ ಮೋಹಗೊಳ್ಳುತ್ತಿರುತ್ತಾರೆ. ೧೯೧. ನಿಷ್ಕಾರಣವಾಗಿ ರಾಜರು ಹಿಡಿದು 'ತೆರಿ' ಎಂದು ಕೇಳಲು ಕೇಳಿದಷ್ಟು ಹೊನ್ನನ್ನು ನಿಶ್ಚಯವಾಗಿ ಕೊಡುವವರು ಧರ್ಮ ವೆಂದರೆ ಒಂದು ಅಕ್ಕಿಯ ಕಾಳನ್ನಾದರೂ ಕೊಡುತ್ತಾರೆಯೆ ? ೧೯೨. ಸೆರೆಹಿಡಿಯು ವವರು ಒಂದು ಕೊರಳನ್ನು ಹಿಡಿದೊತ್ತಿದಾಗ ಕೇಳಿದಷ್ಟು ಹಣವನ್ನು ಕೊಡುವರು. ಶ್ರೇಷ್ಠವಾದ ಧರ್ಮಕ್ಕೆ ಒಂದು ಅಡಿಕೆಯನ್ನು ಕೇಳಿದರೂ ಕೊಡುವವರಿದ್ದಾರೆಯೆ, ಈ ಲೋಕದಲ್ಲಿ ? ೧೯೩. ಸಾವು ಸಮೀಪಿಸಿದರೂ ಹಣಬಿದ್ದರೂ ಬಡವರಾಗಿದ್ದರೂ

ಮರಣಂ ಸಾರ್ಚಿದೊಡಂ ಪೆಣಂ ಕಿಡೆವೊಡಂ ದಾರಿದ್ರರಾಗಿರ್ದೊಡಂ
ಸಿರಿಯಂ ಚಿಂತಿಸಿ ಪೆಂಡಿರಂ ನೆನೆದು ಪುತ್ರಾನೀಕಮಂ ನೋಡಿ ನಿ
ಷ್ಠುರದಿಂ ಬರ್ದುಗ:ಮಲ್ಲದಣ್ಣ ಧರೆಯೊಳ್ ಕೂಡಿರ್ಪ ಸದ್ಧರ್ಮವಂ
ನಿರುತಂ ಚಿಂತಿಸಲಾಱರಲ್ತೆ ಸಹಜಂ ಜೀವಕ್ಕೆ ಭೂಲೋಕದೊಳ್ ೧೯೪

ಗದ್ಯ॥ ಎಂದು ಜೀವನೊಳಾದ ಹೀನಸ್ವಭಾವಮಂ ಚಿಂತಿಸಿ ರಾಜ್ಯದೊಳೆನಿತು ಕಾಲವಿರ್ದೊಡಂ ಜೀವಕ್ಕೆ ಮೋಹಮಗುರ್ವಾಗೊದವುಗುಮಲ್ಲದೆ ಸಾವೊಡಂ ಪೋಗದೆಂದು ನಕ್ಕು ತನ್ನ ಪಿರಿಯ ಮಗನಪ್ಪ ವಿಮಲಕೀರ್ತಿಯೆಂಬಂಗೆ ಪಟ್ಟಮಂ ಕಟ್ಟಿ ರಾಜ್ಯಮಂ ತೊಱೆದು ತಪಂಗೆಯ್ದು ಸಮಾಧಿಮರಣದಿಂ ಮುಡಿಪಿ ದೇವಗತಿವಡೆದಾರಣಮೆಂಬ ಪದಿನೈದನೆಯ ಸ್ವರ್ಗದೊಳಿಪ್ಪತ್ತೆರಡು ಸಾಗರೋಪಮಮಾಯುಷ್ಯಮನುಳ್ಳ ಕೀರ್ತಿಧರನೆಂಬ ಮಹರ್ಧಿಕದೇವನಾಗಿ ಪುಟ್ಟಿದನಿಂತು ೧೯೫

ಪರವನಿತೆಗೆ ಸೋಲ್ತೊಡೆ ತಾಂ
ಪರವನಿತೆಯೆ ಕಷ್ಟಮೆಂದು ಪರವನಿತೆಯರೊಳ್
ನೆರೆಯದೆ ಜಿನೇಂದ್ರಪದಮಂ
ಸ್ಮರಿಯಿಸಿದ ಮಹಾತ್ಮನೆಯ್ದುಗುಂ ನಿರ್ವೃತಿಯಂ ೧೯೬

ಐಶ್ವರ್ಯವನ್ನು ಕುರಿತು ಚಿಂತಿಸಿ ಹೆಂಡಿರನ್ನು ಸ್ಮರಿಸಿಕೊಂಡು ಮಕ್ಕಳ ಗುಂಪನ್ನು ನೋಡಿ ಕ್ರೌರ್ಯದಿಂದ, ಕಾಠಿಣ್ಯದಿಂದ ಸಾಯುವರೇ ಹೊರತು, ಅಣ್ಣ ! ಈ ಲೋಕದಲ್ಲಿ ಸದಾ ನಮ್ಮ ಜತೆಗಿರುವ ಸದ್ಧರ್ಮವನ್ನು ಕುರಿತು ಯೋಚಿಸಲಾರರಲ್ಲವೆ? ಈ ಭೂಲೋಕದಲ್ಲಿ ಇದು ಜೀವಕ್ಕೆ ಸ್ವಭಾವದಿಂದ ಬಂದದ್ದು. ೧೯೪. ಹೀಗೆಂದು ಜೀವದಲ್ಲಿ ಇರುವ ಹೀನಸ್ವಭಾವವನ್ನೂ ಕುರಿತು ಯೋಚಿಸಿ "ರಾಜ್ಯದಲ್ಲಿ ಎಷ್ಟು ಕಾಲವಿದ್ದರೂ ಜೀವಕ್ಕೆ ಮೋಹ ಅಧಿಕವಾಗುವುದೇ ಹೊರತು ಸತ್ತರೂ ಹೋಗದು ? ಎಂದು ನಕ್ಕು, ತನ್ನ ಹಿರಿಯ ಮಗನಾದ ವಿಮಲಕೀರ್ತಿಯೆಂಬವನಿಗೆ ಪಟ್ಟವನ್ನು ಕಟ್ಟಿ ರಾಜ್ಯವನ್ನು ಬಿಟ್ಟು ತಪಸ್ಸು ಮಾಡಿ ಸಮಾಧಿಮರಣದಿಂದ ಸತ್ತು ದೇವಗತಿಯನ್ನು ಪಡೆದು ಆರಣವೆಂಬ ಪದಿನೈದನೆಯ ಸ್ವರ್ಗದಲ್ಲಿ ಇಪ್ಪತ್ತೆರಡು ಸಾಗರದಷ್ಟು ಆಯುಸ್ಸುಳ್ಳ ಕೀರ್ತಿಧರನೆಂಬ ಮಹರ್ಧಿಕದೇವನಾಗಿ ಹುಟ್ಟಿದನು. ೧೯೫. ಅನ್ಯರ ಹೆಂಗಸಿಗೆ ಆಸೆಪಟ್ಟರೆ ಪರಗತಿಯು ಅಷ್ಟೇ ಕಷ್ಟವೆಂದು ತಿಳಿದು ಪರವನಿತೆಯಲ್ಲಿ ಸೇರದೆ ಜಿನೇಂದ್ರ ಪಾದಗಳನ್ನು ಸ್ಮರಿಸಿದ ಮಹಾತ್ಮನು ಮೋಕ್ಷವನ್ನು ಹೊಂದುವನು. ೧೯೬. ಸ್ವದಾರಸಂತುಷ್ಟತೆ

ಗದ್ಯ॥ ಎಂದು ಸ್ವದಾರ ಸಂತುಷ್ಟತೆಯಿಂ ದೇವಗತಿವಡೆದ ಪ್ರಮಾಥಿಕುಮಾರನ, ಪರಸ್ತ್ರೀ ರತಿಯಿಂ ನರಕಕ್ಕ ಸಂದ ಸುವೇಗನ ಕಥೆಯುಂ ಗಣಧರ ಸ್ವಾಮಿಗಳ್ ಪೇಳ್ದುದುಂ ೧೯೭

ಸುರರಾಜಾದ್ರೀಂದ್ರಧೈರ್ಯಂ ಪರಮತಗಿರಿವಜ್ರಾಯುಧಂ ಜೈನಯೋಗೀ
ಶ್ವರದಾಸಂ ವಾಗ್ವಧೂವಲ್ಲಭನಘತಮಃತೀವ್ರಾಂಶು ಪೆರ್ಚಿದರ್ಪನುರ್ವೀ
ಶ್ವರಪೂಜ್ಯಂ ರಾಗದಿಂದಂ ಗುಣಗಣನಿಳಯಂ ಕೇಳ್ದ ತ್ರೈವಿದ್ಯಚಕ್ರೀ
ಶ್ವರಪಾದಾಂಭೋಜಭೃಂಗಂ ಸುಕವಿಜನಮನಃಪದ್ಮಿನೀ ರಾಜಹಂಸಂ ೧೯೮

ಗದ್ಯ॥ ಇದು ನಿಖಿಲ ದಿವಿಜ ಪರಿವೃಢ ಮಕುಟತಟಘಟಿತ ಮಣಿಗಣವಿಲುಳಿತ ಕಿರಣ ಚುಂಬನೀಯ ಪರಮ ಜಿನಚರಣಯುಗಳ ಸರಸಿರುಹಮತ್ತ ಮಧುಕರ ನಿರುಪಮ ಸಹಜಕವಿಜನಪಯಃ ಪಯೋಧಿಹಿಮಕರ ನುತಭಾವಯುತ ದಿಗಂಬರದಾಸ ನೂತ್ನಕವಿತಾವಿಳಾಸ ಶ್ರೀಮನ್ನಯಸೇನ ದೇವ ವಿರಚಿತಮಪ್ಪ ಧರ್ಮಾಮೃತದೊಳ್ ಬ್ರಹ್ಮವ್ರತವ್ಯಾವರ್ಣನಂ

## ತ್ರಯೋದಶಾಶ್ವಾಸಂ

ಯಿಂದ ದೇವಗತಿಯನ್ನು ಪಡೆದ ಪ್ರಮಾಥಿಕುಮಾರನ, ಪರಸ್ತ್ರೀಪ್ರೇಮದಿಂದ ನರಕಕೇ ಸೇರಿದ ಸುವೇಗನ, ಕಥೆಯನ್ನು ಹೀಗೆ ಗಣಧರಸ್ವಾಮಿಗಳು ಹೇಳಿದರು. ೧೯೭: ಮೇರುವಿನಂತೆ ಧೈರ್ಯವುಳ್ಳವನು, ಅನ್ಯಮತಪರ್ವತಗಳಿಗೆ ವಜ್ರಾಯುಧನು, ಜೈನ ಯೋಗೀಶ್ವರರ ದಾಸ, ವಾಗ್ವಧುವಿಗೆ ಪ್ರಿಯನು ಪಾಪವೆಂಬ ಕತ್ತಲೆಗೆ, ಸೂರ್ಯ, ಇಂಥ ರಾಜಪೂಜ್ಯನೂ ಗುಣನಿಲಯನೂ ಆದ ಶ್ರೇಣಿಕಮಹಾರಾಜನು ಕೇಳಿ ತ್ರೈವಿದ್ಯ ಚಕ್ರೇಶ್ವರ ಪಾದಕಮಲಗಳಲ್ಲಿ ದುಂಬಿಯಾಗಿದ್ದನು. ೧೯೮. ಇದು ಸಕಲದೇವನಾಯಕರ ಕಿರೀಟಗಳಲ್ಲಿ ರತ್ನಗಳಿಂದ ಹೊರಡುವ ಕಿರಣಗಳಿಂದ ಚುಂಬಿತವಾದ ಪರಮ ಜಿನಪಾದ ಸರಸಿರುಹಮತ್ತ ಮಧುಕರ ನಿರುಪಮ ಸಹಜಕವಿಜನರೆಂಬ ಪಾಲ್ಗಡಲಿಗೆ ಚಂದ್ರನಾದ, ನುತಭಾವಯುತ, ದಿಗಂಬರದಾಸ, ನೂತ್ನಕವಿತಾವಿಲಾಸ, ಶ್ರೀಮನ್ನಯಸೇನ ದೇವನು ವಿರಚಿಸಿದ 'ಧರ್ಮಾಮೃತ'ದಲ್ಲಿ ಬ್ರಹ್ಮವ್ರತ ವ್ಯಾವರ್ಣನವನ್ನೊಳಗೊಂಡ ಹದಿಮೂರನೆಯ ಆಶ್ವಾಸ.

# ಚತುರ್ದಶಾಶ್ವಾಸಂ

ಶ್ರೀ ವಿಳಸಜ್ಜನವಂದ್ಯಂ
ಪಾವನ ಸಬ್ರಹ್ಮಸುವ್ರತಂ ನಿರ್ವಾಣ
ಶ್ರೀವಿಭವಮೆಂದು ನಲಿದಂ
ಭೂವಿದಿತಂ ಸುಕವಿನಿಕರಪಿಕವಾಕಂದಂ ೧

ಗದ್ಯ॥ ಅಂತು ಬ್ರಹ್ಮವ್ರತದ ಕಥೆಯಂ ಕೇಳ್ದು ತದನಂತರಂ ಶ್ರೇಣಿಕ ಮಹಾರಾಜನಮೃತ ಶ್ರೀ ರಮಣಿಯ ಗೃಹಮೆನಿಸುವಪರಿಗ್ರಹದ ಕಥೆಯನೆನಗೆ ನಿಮ್ಮಡಿ ಬೆಸಸುವುದೆಂದು ೨

ಕರಕಮಲಂಗಳಂ ಮುಗಿದು ಸಂತಸದಿಂದಿರೆ ಗೌತಮರ್ ಮಹೀ
ಧರನಿಭಧೈರ್ಯರೂರ್ಜಿತರನಂಗಹರರ್ ಮುನಿವಂದಿತ ಕ್ರಮಾಂ
ಬುರುಹರುದಾತ್ತ ಚಾರುಚರಿತರ್ ಜಲರಾಶಿ ನಿನಾದದಿಂ ಮಹೀ
ಶ್ವರರತಿಭಕ್ತಿಯಿಂದೊಸೆದು ಕೈಮುಗಿಯುತ್ತಿರೆ ಪೇಳ್ದರರ್ತಿಯಿಂ ೩

ಗದ್ಯ॥ ಫಲಮಿಲ್ಲದೆ ಪೂವನೆ ತೋಱಿ ಪೋಪ ಸಂಪಗೆಯಂತೆ ಬಱಿ ಮಾತನೆ ತೋಱಿ ಪೋಗದೆ, ತಳಿರನೆ ತೋಱಿ ಪೋಪಶೋಕೆಯಂತೆ ಸಿರಿಯನೆ ತೋಱಿ ಪೋಗದೆ,ಪರೆಪನೆ ತೋಱಿ

ಸುಕವಿಸಮೂಹಕ್ಕೆ ಆನಂದದಾಯಕನಾದ, ಶ್ರೇಣಿಕಮಹಾರಾಜನು ಮೋಕ್ಷ ಲಕ್ಷ್ಮಿಯ ವೈಭವವಾದ ಬ್ರಹ್ಮಚರ್ಯವೆಂಬ ಶ್ರೇಷ್ಠವ್ರತವನ್ನು ಮೆಚ್ಚಿ ಸಂತೋಷ ಪಟ್ಟನು. ೧. ಹಾಗೆ ಬ್ರಹ್ಮಚರ್ಯ ವ್ರತದ ಕಥೆಯನ್ನು ಕೇಳಿ ಆಮೇಲೆ ಶ್ರೇಣಿಕನು ಅಮೃತಲಕ್ಷ್ಮಿಯ ಮನೆಯೆನಿಸುವ ಅಪರಿಗ್ರಹದ ಕಥೆಯನ್ನು ತನಗೆ ಹೇಳಬೇಕೆಂದು ಬೇಡಿದನು. ೨. ಕೈಜೋಡಿಸಿಕೊಂಡು ನಿಂತು ಗೌತಮರನ್ನು ಕೇಳಿಕೊಳ್ಳಲು ಪರ್ವತ ದಂತೆ ಧೈರ್ಯಶೀಲರೂ, ಶ್ರೇಷ್ಠರೂ, ಮನ್ಮಥನನ್ನು ಗೆದ್ದವರೂ, ಮುನಿಗಳಿಂದ ತಮ್ಮ ಪಾದಗಳಿಗೆ ವಂದನೆ ಮಾಡಿಸಿಕೊಂಡವರೂ, ಉದಾತ್ತವೂ ಶ್ರೇಷ್ಠವೂ ಆದ ನಡತೆ ಯುಳ್ಳವರೂ, ಆದ ಗೌತಮರು ಸಮುದ್ರಘೋಷದಂತೆ ಗಂಭೀರವಾದ ಧ್ವನಿಯಿಂದ. ಸಂತೋಷದಿಂದ ಹೇಳಿದರು. ೩. ಹಣ್ಣಿಲ್ಲದೆ ಬರಿಯ ಹೂವನ್ನೇ ತೋರಿಸಿ ಹೋಗುವ ಸಂಪಗೆಯ ಹಾಗೆ, ಬರಿಯ ಮಾತನಾಡಿ ಹೊರಟು ಹೋಗದೆ, ಚಿಗುರನ್ನು ಮಾತ್ರ ತೋರಿಸಿ ಹೋಗುವ ಅಶೋಕವೃಕ್ಷದ ಹಾಗೆ ಐಶ್ವರ್ಯವನ್ನು ಮಾತ್ರ ಮೆರೆದು

ಪೋಪ ಆಲದಂತೆ ಬಳಸನೆ ಸುತ್ತಿ ಪೋಗದೆ, ಬಲ್ಪನೆ ತೋಱಿ ಪೋಪ ತರಿಯಂತೆ, ಮಹಿಮೆ ಯನೆ ತೋಱಿ ಪೋಗದೆ, ನಾರನೆ ತೋಱಿ ಪೋಪ ಸೆಣಂಬಿನಂತೆ ತನ್ನನೆ ಮೆಱೆದು ಪೋಗದೆ, ಮಾವಿನಂತೆಲ್ಲದಱೊಳಂ ನೆಱೆದು ಪುಣಿಸೆಯಂತೆ ಪಲವಱೊಳಮೊಪ್ಪಿ ಲವಣದಂತೆ, ಸದ್ದೃಷ್ಟಿ ಗಳ ಕೂಟದೊಳ್ ರುಚಿವಡೆದು ದೀಪವರ್ತಿಯಂತೆ ಪಂಚಪರಮೇಷ್ಠಿಗಳ್ಗೆಱಕಂ ಮಾಡಿ, ಸೊಡ ರಂತೆ ಚಾತುರ್ವರ್ಣ್ಯದೊಳ್ ಸ್ನೇಹದಿಂ ಕೂಡಿ ; ಸಮೆದ ಚೀಲದೊಳ್ ಪೊನ್ನನಿಕ್ಕುವಂತೆ, ಕಿಚ್ಚುಳ್ಳೊಲೆಯೊಳ್ ಕೂಟನಡುವಂತೆ, ಪೆಣ್ಣದಾನೆಯುನೇಱುವಂತೆ, ಮಡಿಯಾದ ಸೀರೆಯು ನುಡುವಂತೆ. ಮದುವೆಯಾದಳಂ ಮನೆಗೆ ತರ್ಪಂತೆ, ರಾಶಿಯಾದ ಧಾನ್ಯಮನಳೆವಂತೆ, ಸಮೆದಾ ಭರಣಮಂ ತುಡುಪಂತೆ, ತಂದೆ ತೋಱಿದ ಬಯ್ಕೆಯುನಗಳ್ವಂತೆ ಬಂದ ನಿಧಾನಮಂ ಕೈಕೊಳ್ವಂತೆ ಸಮ್ಯಕ್ತ್ವಂ ಬೆರಸು ಪಂಚಾಣುವ್ರತಮಂ ಕೈಕೊಂಡು ; ಕೋಡಗಂ ತಂಬುಲಮಂ ತಿಂಬಂತೆ, ಮರುಳ್ ಸೀರೆಯುನುಡುಪಂತೆ, ಕಾಗೆ ಕೂಟಂ ತಿಂಬಂತೆ, ಕುರುಡಿ ಜೋಳಮಂ ಕುಟ್ಟುವಂತೆ, ಪಸುಗೂಸು ಪಾಲ್ಗುಡಿವಂತೆ, ಪಲ್ಲಿಲ್ಲದೆಮ್ಮೆ ಪುಲ್ಲಂ ಮೇವಂತೆ, ಮುದುಕಂ ಪೂಗಟ್ಟುವಂತೆ ಜ್ವರಬಂದವನುಣ್ಬಂತೆ, ಮೋಟಂ ನೀರ್ಗುಡಿವಂತೆ, ಹಂಚುಹಱೆ ಮಾಡಿ ಕಿಡಿಸದೆ ಲೇಸಾಗಿ ನಡಪಿ ; ವ್ಯವಹಾರಕ್ಕೆ ಪೋದನೆಡೆಯ ದುಃಖಮಂ ಸೈರಿಸಿ ಲಾಭಂಬೆರಸಿ ಮನೆಯಂ ಪುಗುವಂತೆ,

ಹೋಗದೆ ಹರಹ(ವಿಸ್ತಾರ)ನ್ನು ಮಾತ್ರ ತೋರಿಸಿ ಹೋಗುವ ಆಲದ ಮರದಂತೆ, ಬಳಸು ದಾರಿಯನ್ನೇ ಸುತ್ತಿ ಹೋಗದೆ ಬಲವನ್ನೇ ತೋರಿಸಿ ಹಡಗಿನಂತೆ ದೊಡ್ಡತನ ವನ್ನೇ ಮೆರೆದು ಹೋಗದೆ, ನಾರನ್ನೇ ತೋರಿಸಿ ಹೋಗುವ ಸೆಣಬಿನ ಗಿಡದಂತೆ ತನ್ನನ್ನೆ ಮೆರಸಿ ಹೋಗದೆ, ಮಾವಿನ ಗಿಡದ ಹಾಗೆ ಎಲ್ಲದರಲ್ಲಿಯೂ ಸೇರಿ, ಹುಣಸೆಯಂತೆ ಹಲ ವರಲ್ಲಿ ಬೆರೆತು ಉಪ್ಪಿನಂತೆ ಒಳ್ಳೆಯ ದೃಷ್ಟಿಯುಳ್ಳವರ ಸಂಗದಲ್ಲಿ ರುಚಿಯನ್ನು ಪಡೆದು ದೀಪದ ಬತ್ತಿಯಂತೆ ಪಂಚಪರಮೇಷ್ಠಿಗಳಿಗೆ ಭಕ್ತಿಯನ್ನು ತೋರಿಸಿ, ದೀಪದಂತೆ ನಾಲ್ಕು ವರ್ಣಗಳವರಲ್ಲಿಯೂ ಸ್ನೇಹದಿಂದ ಸೇರಿ, ಸಿದ್ಧಪಡಿಸಿದ ಚೀಲದೊಳಕ್ಕೆ ಹೊನ್ನು (ನಾಣ್ಯ)ಗಳನ್ನು ಹಾಕುವಂತೆ. ಬೆಂಕಿಯಿರುವ ಒಲೆಯಲ್ಲಿ ಅನ್ನವನ್ನು ಮಾಡುವಂತೆ, ಮದುವೆಯಾದವಳನ್ನು ಮನೆಗೆ ಕರೆತರುವಂತೆ, ರಾಶಿಮಾಡಿದ ಕಾಳನ್ನು ಕಣದಲ್ಲಿ ಅಳೆ ಯುವ ಹಾಗೆ, ಸಿದ್ಧಮಾಡಿದ ಒಡವೆಯನ್ನು ಧರಿಸುವಂತೆ, ತಂದೆ ತೋರಿಸಿದ ನಿಕ್ಷೇಪ (ಬಚ್ಚಿಟ್ಟ ನಿಧಿ)ವನ್ನು ಅಗೆಯುವಂತೆ. ಬಂದ ನಿಕ್ಷೇಪವನ್ನು ತೆಗೆದುಕೊಳ್ಳುವ ಹಾಗೆ ಸಮ್ಯಕ್ತ್ವದಿಂದ ಕೂಡಿದ ಐದು ಅಣುವ್ರತಗಳನ್ನು ಹಿಡಿದು; ಕೋತಿ ತಾಂಬೂಲವನ್ನು ತಿನ್ನುವಂತೆ, ದಡ್ಡನು ಸೀರೆಯನ್ನು ಉಟ್ಟುಕೊಳ್ಳುವ ಹಾಗೆ, ಕಾಗೆ ಅನ್ನವನ್ನು ತಿನ್ನು ವಂತೆ ಕುರುಡಿ ಜೋಳವನ್ನು ಕುಟ್ಟುವಂತೆ, ಹಸುಮಗು ಹಾಲನ್ನು ಕುಡಿದ ಹಾಗೆ ಹಲ್ಲಿ ಲ್ಲದ ಎಮ್ಮೆ ಹುಲ್ಲನ್ನು ಮೇಯುವಂತೆ, ಮುದುಕನು ಹೂವನ್ನು ಕಟ್ಟುವಂತೆ ಜ್ವರಬಂದ ವನು ಊಟಮಾಡುವಂತೆ, ಮೋಟನು ನೀರು ಕುಡಿಯುವಂತೆ, ಚೂರು ಚೂರು ಮಾಡಿ ಕೆಡಿಸದೆ ಚೆನ್ನಾಗಿ ನಡೆಯಿಸಿ, ವ್ಯವಹಾರಕ್ಕೆ ಹೋದವನು ಮಧ್ಯದಲ್ಲಿನ ಕಷ್ಟವನ್ನು

ಪಟ್ಟಿಂಡಮಂ ಸಾಧಿಸಿದ ಚಕ್ರವರ್ತಿ ಗೆಲ್ಲಂ ಬೆರಸು ಪುರಮಂ ಪುಗುವಂತೆ, ಕೆಯ್ಯಂ ಕಾದು ದುಃಖ ಬಟ್ಟೊಕ್ಕಲಿಗಂ ಧಾನ್ಯಂಬೆರಸೂರಂ ಪುಗುವಂತೆ, ಪಲಕಾಲಂ ನಿಧಾನಮಂ ಸಾಧಿಸಿದಾತಂ ನಿಧಿ ವೆರಸು ನೆಲೆಗೆ ಪೋಪಂತೆ, ಕೂಸು ಕಾರಣಮಾಗಿ ಮಾವಂಗೆ ಬೆಸಕೆಯ್ದಳಿಯಂ ಮದುವೆಯಾಗಿ ಸುಖಮಿರ್ಪಂತೆ, ಸಿರಿಯುಳ್ಳ ತಂದೆಗೆಡಱದೆ ಮನದನ್ನನಾಗಿ ತೊಟ್ಟುವೆಸಂಗೆಯ್ದು ಮಗಂ ತಂದೆಯ ಸಿರಿಗೊಡೆಯನಾಗಿರ್ಪಂತೆ ಕಡೆಯೊಳ್ ದೇವೇಂದ್ರ ಚಕ್ರವರ್ತಿಗಳ ಪದವಮನೆಯ್ದಿ ಕ್ರಮದಿಂ ಮೋಕ್ಷಶ್ರೀಯೊಳ್ ಕೂಡಿ ಸುಖಮಿರ್ಪುದು ೪

ಎನಿತು ಪರಿಗ್ರಹದ ತೊಡ
ರ್ಪನಿತೆ ಮನೋದುಃಖಮೆಂಬುದಂ ತಾಂ ತನ್ನೊಳ್
ನೆನೆದು ಪರಿಗ್ರಹಮಂ ತೊಱೆ
ವನೆ ದೇವಂ ಮುಕ್ತಿವನಿತೆಗಾತನೆ ಕಾಂತಂ ೫

ಗದ್ಯ॥ ಇನ್ನು ಅಪರಿಗ್ರಹದೊಳಾದ ಮಹಾ ಮಹಿಮೆಯೆಂತೆಂದೊಡೆ, ಜಂಬೂದ್ವೀಪದ ಭರತ ಕ್ಷೇತ್ರದ ಕುರುಜಾಂಗಣ ವಿಷಯದ ಶ್ರಾವಂತಿಯೆಂಬ ಪುರಮಾ ಪುರಮನಾಳ್ವನುಪರಿಚರ ಮಹಾ

ಸಹಿಸಿಕೊಂಡು ಲಾಭದೊಡನೆ ಕೂಡಿ ಮನೆಯನ್ನು ಪ್ರವೇಶಿಸುವಂತೆ, ಆರೂ ಭೂಭಾಗಗಳನ್ನೂ ಗೆದ್ದು ವಶಪಡಿಸಿಕೊಂಡ ಚಕ್ರವರ್ತಿ ವಿಜಯ ಪಡೆದು ಪಟ್ಟಣವನ್ನು ಪ್ರವೇಶಿಸುವಂತೆ ಗದ್ದೆಯನ್ನು ಕಾವಲು ಕಾದು ಕ್ಲೇಶಪಟ್ಟ ರೈತನು ಧಾನ್ಯದೊಡನೆ ಊರನ್ನು ಪ್ರವೇಶಿಸುವಂತೆ, ಬಹಳ ಕಾಲ ಬಚ್ಚಿಟ್ಟ ನಿಧಿಯನ್ನು ಹುಡುಕಿ ಸಾಧಿಸಿಕೊಂಡವನು ಆ ನಿಧಿಯೊಡನೆ ತನ್ನ ಸ್ಥಳಕ್ಕೆ ಹೋಗುವಂತೆ, ಮಗಳ ನಿಮಿತ್ತದಿಂದ ಮಾವನಿಗೆ ಸೇವೆ ಮಾಡಿದ ಅಳಿಯನು ಮದುವೆಯಾಗಿ ಸುಖವಾಗಿರುವಂತೆ, ಐಶ್ವರ್ಯವುಳ್ಳ ತಂದೆಗೆ ಅವಿಧೇಯನಾಗದೆ ಪ್ರೀತಿಪಾತ್ರನಾಗಿ ಸೇವೆ ಮಾಡಿ ಮಗನು ತಂದೆಯ ಐಶ್ವರ್ಯಕ್ಕೆ ಒಡೆಯನಾಗಿ ಇರುವಂತೆ, ಕೊನೆಯಲ್ಲಿ ದೇವೇಂದ್ರ ಚಕ್ರವರ್ತಿಗಳ ಪದವಿಯನ್ನು ಹೊಂದಿ ಕ್ರಮವಾಗಿ ಮೋಕ್ಷಲಕ್ಷ್ಮಿಯೊಡನೆ ಕೂಡಿ ಸುಖವಾಗಿರತಕ್ಕದ್ದು. ೪ ಎಷ್ಟು ಆಸ್ತಿಯ ಸಂಗ್ರಹದ ಅಡ್ಡಿಯಿರುವುದೋ ಅಷ್ಟೇ ಮನಸ್ಸಿನ ದುಃಖವಿರುವುದೆಂಬುದನ್ನು ತಾನು ತನ್ನಲ್ಲಿಯೇ ಯೋಚಿಸಿ ಆಸ್ತಿಯ ಆಸೆಯನ್ನು ತೊರೆಯುವವನೇ ದೇವನು, ಮತ್ತು ಮುಕ್ತಿವನಿತೆಗೆ ಆತನೇ ಪ್ರಿಯನು. ೫. ಇನ್ನು ಆ ಪರಿಗ್ರಹ (ಆಸ್ತಿಯ ಸಂಗ್ರಹ)ದಿಂದ ಆಗುವ ಮಹಾಮಹಿಮೆಯೆಷ್ಟೆಂದರೆ; ಜಂಬೂದ್ವೀಪದ ಭರತಕ್ಷೇತ್ರದ ಕುರುಜಾಂಗಣ ದೇಶದ ಶ್ರಾವಂತಿಯೆಂಬ ಪಟ್ಟಣ. ಆ ಪುರವನ್ನು ಆಳುವವರು ಉಪರಿಚರನೆಂಬ

ರಾಜನೆಂಬನಾತನ ಮನೋಹರಿಯರ್ ಪದ್ಮಾವತಿಯುಂ ಪ್ರಭಾವತಿಯುಂ ಸುಪ್ರಭೆಯುಂ ಕನಕ ಪ್ರಭೆಯುಮೆಂಬ ನಾಲ್ವರ್ ಪಟ್ಟಮಹಾದೇವಿಯರ್ ಮೊದಲಾಗೈನೂರ್ವರರಸಿಯರಿಂಶು ೬

ಶತದಳನಯನೆ ಮನೋಭವ
ಲತಾಂಗಿ ಸಮ್ಯಕ್ತ್ವನಿಳಯೆ ಸೀತಾನಿಭೆ ಸ
ನ್ನುತ ರೂಪೆಯೆನಿಪ ಪದ್ಮಾ
ವತಿಯ ಮಗಂ ತಾನನಂತವೀರ್ಯಂ ಪೆಸರಿಂ

೭

ಗದ್ಯ॥ ಆತಂ ಮೊದಲಾಗೈನೂರ್ವರ್ ಕುಮಾರರುಂ ಮಕುಟಬದ್ಧರುಂ ವಿಳಾಸಿನೀಜನಮುಂ ಬೆರಸು ದೇವೇಂದ್ರನಂತೊಡ್ಡೋಲಗಂಗೊಟ್ಟು ರಸಗೀತಮುಮಂ ಪರಮಾಂಡಳಿಕರ ಪೆರ್ಗಡೆಗಳ ಮಾತುಗಳುಮಂ ಕೇಳುತ್ತುಂ ಕುಮಾರರ ವಿಳಾಸಿನೀಜನದ ಅರಸಿಯರ ರೂಪುಗಳಂ ನೋಡುತ್ತುಂ ಮಹಾ ವಿನೋದದಿಂದಿರ್ಪುದುಂ

೮

ಸುರಗಿಯು ಸಂದ ಸಂಪಗೆಯು ಪೊನ್ನೆಯು ಜಾದಿಯು ಚೆಲ್ವುವೆತ್ತ ಪಾ
ದರಿಯು ಸುಗಂಧಮಪ್ಪ ಕುಸುಮಾವಳಿಯಿಂ ನನೆಯಿಂ ಮುಗುಳ್ಗಳಿಂ
ಕರಮತಿ ಶೋಭೆಯಿಂ ಸಮೆದ ಹಾರಮುಮಂ ಸಹಕಾರ ಪಲ್ಲವೋ
ತ್ಕರಮುಮನೊಪ್ಪುವೆತ್ತೆಳೆಯ ಕಾಯ್ಗಳ ಗೊಂಚಲುಮಂ ಸರಾಗದಿಂ ೯

ಗದ್ಯ॥ ವನಪಾಲಕಂ ತಂದೊಡ್ಡೋಲಗಂಗೊಟ್ಟಿರ್ದುಪರಿಚರ ಮಹಾರಾಜಂಗೆ ಕೊಟ್ಟು ಮೆಯ್ಯಿಕ್ಕಿ ಪೊಡೆಮಟ್ಟು ದೂರದೊಳ್ ನಿಂದು ಕೈಗಳಂ ಮುಗಿದು ದೇವಾ ವಸಂತದ ಪುಗಿ

ಮಹಾರಾಜ. ಆತನ ಹೆಂಡತಿಯರು ಪದ್ಮಾವತಿ, ಪ್ರಭಾವತಿ, ಸುಪ್ರಭೆ ಮತ್ತು ಕನಕ ಪ್ರಭೆಯೆಂಬ ನಾಲ್ವರು ಪಟ್ಟದ ರಾಣಿಯರಂ ಮೊದಲುಗೊಂಡು ಐನೂರು ಮಂದಿ ಅರಸಿಯರಿದ್ದರು. ೬ ಕಮಲನೇತ್ರೆ, ಮನ್ಮಥಲತಾಂಗಿ, ಸಮ್ಯಕ್ತ್ವಕ್ಕೆ ಮನೆಯಂಥವಳು, ಸೀತೆಗೆ ಸದೃಶಳು, ಸುಂದರ ರೂಪವತಿಯೆನ್ನಿಸಿದ ಪದ್ಮಾವತಿಯ ಮಗ ಅನಂತವೀರ್ಯ ನೆಂಬುವನು. ೭. ಅವನು ಮೊದಲುಗೊಂಡು ಐನೂರು ಮಂದಿ ಕುಮಾರರೂ ಕಿರೀಟ ಬದ್ಧರೂ ವಿಳಾಸಿನೀ ಜನರೊಡನೆ ಕೂಡಿ ದೇವೇಂದ್ರನ ಹಾಗೆ ಸಭೆಯಲ್ಲಿ ಮಂಡಿಸಿ ಸಂಗೀತವನ್ನೂ ಇತರ ಸಾಮಂತ ಹೆಗ್ಗಡೆಗಳ ಮಾತುಗಳನ್ನೂ ಕೇಳುತ್ತ, ಕುಮಾರರ ಮತ್ತು ವಿಳಾಸಿನಿಯರ ರೂಪಗಳನ್ನು ನೋಡುತ್ತ ಬಹಳ ಸಂತೋಷದಿಂದಿದ್ದನು. ೮. ಒಂದು ದಿನ ವನಪಾಲಕನು ಬಂದು, ಸುರಗಿ, ಸಂಪಗೆ, ಹೊನ್ನೆ, ಜಾಜಿ, ಪಾದರಿ, ಮೊದಲಾದ ಪರಿಮಳದ ಹೂಮೊಗ್ಗುಗಳಿಂದ ಬಹಳ ಅಲಂಕಾರವಾಗಿ ಕಟ್ಟಿದ ಹಾರಗಳನ್ನೂ ಮಾವಿನ ಚಿಗುರನ್ನೂ ಎಳೆಯ ಕಾಯಿಗಳ ಗೊಂಚಲುಗಳನ್ನೂ ಸಂತೋಷದಿಂದ ತಂದು ರಾಜಸಭೆಯಲ್ಲಿದ್ದ ಉಪರಿಚರ ಮಹಾರಾಜನಿಗೆ ಕಾಣಿಕೆಗೊಟ್ಟು ನಮಸ್ಕರಿಸಿ ದೂರದಲ್ಲಿ ನಿಂತುಕೊಂಡು ಕೈಮುಗಿದುಕೊಂಡು "ಪ್ರಭು, ವನದೇವಿಯು

ಲೊಳ್ ವನಂ ವನದೇವಿಯ ಜವ್ವನದಂತೆ ರಮ್ಯಮಾಗಿರ್ಪುದದಂ ದೇವರ್ಗೆ ಬಿನ್ನಪಂಗೆಯ್ಯ ಲೆಂದು ಬಂದೆನವಧಾರಿಸುವುದೆಂದುಸಿರದಿರ್ಪುದುಮರಸನಾತಂಗೆಂಗಚಿತ್ತವಂ ಕೊಟ್ಟು ನಾಳೆ ಸಕಲ ಜನಂಬೆರಸು ವನಕ್ರೀಡೆಗೆ ಬಂದಪೆಂ ವನಮಂ ಲೇಸು ಮಾಡುವುದೆಂದು ಪೋಗಲ್ವೇಳ್ದು ಕುಮಾರರ್ಗಮರಸಿಯರ್ಗಂ ವನಪಾಲಕಂ ಕೊಟ್ಟ ಕುಸುಮದ ತೊಡವುಗಳುಮಂ ಪಿರಿಯರ್ಕಿರಿ ಯರಱಿದು ಕೊಟ್ಟು ಮಱುದಿವಸಂ ೧೦

ಶರನಿಧಿಯಂತೆ ತೂರ್ಯರವಮುಣ್ಮೆ ಮಹೀಶ್ವರನಂದನರ್ ಮದ
ದ್ವಿರದಘಟಾಳಿಯಿಂ ಮದಗಜೇಂದ್ರಮನೇಱಿ ಮನೋಜನಂದದಿಂ
ಬರೆ ತನಯರ್ ಮನೋಹರ ಮದದ್ವಿರದಂಗಳನೇಱಿ ಸುತ್ತಲುಂ
ಬರೆ ಗಣಿಕಾಜನಂ ನೆರೆದು ಚಾಮರಮಿಕ್ಕೆ ವಿಭೂತಿಯಿಂ ನೃಪಂ ೧೧

ಗದ್ಯ॥ ಪದ್ಮಾವತಿ ಮೊದಲಾದೈನೂರ್ವರರಸಿಯರುಂ ವಿಳಾಸಿನೀಜನಮುಂ ಬೆರಸು ಪೊಱ ಮಟ್ಟು ವನಕ್ಕೆ ಬಂದು ವನದ ಚೆಲ್ವಿಂಗೆ ಸಂತೋಷಂಬಟ್ಟು ಪಿರಿದು ಬೇಗಂ ವನಕ್ರೀಡೆಯನಾಡಿ ಬಟಲ್ದು ಮತ್ತಿನರಸಿಯರುಮಂ ರಾಜಕುಮಾರರುಮಂ ದೂರದೊಳಿರವೇಳ್ದು ಮನೋನಯನ ವಲ್ಲಭೆಯಪ್ಪ ಪದ್ಮಾವತಿಯುಮಮಿತಮತಿಯುಂ ಸುಪ್ರಭೆಯುಂ ಪ್ರಭಾವತಿಯುಮೆಂಬ ನಾಲ್ವರ್ ಪಟ್ಟದರಸಿಯರುಂ ತಾನುಂ ಚಂದನಕರ್ಪೂರ ಕಾಳಾಗರು ಕುಂಕುಮಂ ಮೊದಲಾದನೇಕ ದ್ರವ್ಯಂಗಳಿಂ ಮುನ್ನಮೆ ವನಪಾಲಕಂ ಕದಡಿದ ಸುದರ್ಶನಮೆಂಬ ಕೊಳಕ್ಕೆ ಬಂದು ೧೨

ಯೌವನದಂತೆ ಈಗ ವಸಂತಕಾಲ ಪ್ರವೇಶವಾಗಿದೆ, ವನವು ಬಹಳ ರಮ್ಯವಾಗಿದೆ, ಅದನ್ನು ಸನ್ನಿಧಿಗೆ ಬಿನ್ನಹ ಮಾಡಲೆಂದು ಬಂದೆ. ಲಾಲಿಸಬೇಕು." ಎಂದು ನುಡಿದು ಸುಮ್ಮನಾದನು. ಆಗ ಅರಸನು ಅವನಿಗೆ ಬಹುಮಾನವನ್ನು ಕೊಟ್ಟು "ನಾಳೆ ಎಲ್ಲರೊಡನೆ ವನವಿಹಾರಕ್ಕೆ ಬರುತ್ತೇವೆ. ವನವನ್ನು ಚೆನ್ನಾಗಿ ಅಲಂಕರಿಸು" ಎಂದು ಹೇಳಿ ಕಳುಹಿಸಿ, ಅರಸಿಯರಿಗೂ ಕುಮಾರರಿಗೂ ಆ ವನಪಾಲಕನು ತಂದು ಕೊಟ್ಟ ಹೂಗಳ ಆಭರಣ ಗಳನ್ನು ಹಿರಿಯರು ಕಿರಿಯರಿಗೆ ತಕ್ಕಂತೆ ಕೊಟ್ಟನು. ಮಾರನೆಯ ದಿನ ೧೦. ವಾದ್ಯ ಧ್ವನಿಯು ಸಮುದ್ರಘೋಷದಂತೆ ಮೊರೆಯುತ್ತಿರಲು ರಾಜನು ಆನೆಯ ಮೇಲೇರಿ ಮನ್ಮಥನಂತೆ ಬರಲು ಮಕ್ಕಳು ಮನೋಹರವಾದ ಮದಗಜಗಳನ್ನೇರಿ, ಸುತ್ತಲೂ ಗಣಿಕೆಯರು ಗುಂಪು ಕೂಡಿ ಚಾಮರ ಹಾಕುತ್ತಿರಲು, ಮಹಾವೈಭವ ದಿಂದ ರಾಜನು ಹೊರಟನು. ೧೧. ಪದ್ಮಾವತಿಯೇ ಮೊದಲಾದ ಐನೂರು ಮಂದಿ ರಾಣಿಯರೂ ಸಖೀಜನರೂ ಕೂಡಿ ಹೊರಟು ವನಕ್ಕೆ ಬಂದು ಅದರ ಚೆಲುವಿಗೆ ಸಂತೋಷಪಟ್ಟು ಬಹಳ ಹೊತ್ತು ವನದಲ್ಲಿ ವಿಹಾರ ನಡೆಸಿ ಆಯಾಸಪಟ್ಟು ಉಳಿದ ರಾಣಿಯರನ್ನೂ ರಾಜಕುಮಾರರನ್ನೂ ದೂರದಲ್ಲಿರಲು ಹೇಳಿ ತನ್ನ ಮನೋವಲ್ಲಭೆಯೂ ಕಣ್ಣಿಗೆ ಪ್ರಿಯಳೂ ಆದ ಪದ್ಮಾವತಿಯೂ ಅವಳ ಜತೆಯಲ್ಲಿ ಅಮಿತಮತಿ, ಸುಪ್ರಭೆ, ಪ್ರಭಾವತಿಯೆಂಬ ಪಟ್ಟದ ರಾಣಿಯರೂ ತಾನೂ ಶ್ರೀಗಂಧ, ಅಗರು, ಪಚ್ಚಕರ್ಪೂರ,

ಜಲವಿಹಗಂಗಳಿಂ ಸುೞಿವ ಹಂಸೆಗಳಿಂದೆಸೆದಿರ್ದ ನೆಯ್ದಿಲಂ
ಜಲದನಿಕಾಯದಿಂ ನೆಗಟ್ದನೀಳ ಸರೋರುಹದೊಪ್ಪದಿಂ ಮಹೋ
ಜ್ವಲತರಮಪ್ಪ ರತ್ನನಿಕುರುಂಬದ ಕಾಂತಿಗಳೆತ್ತಲುಂ ತಳ
ತ್ತಳಿಸುವ ಕೋಂಟೆಯಿಂ ಬಳಸಿಯುಂ ನೆಱೆ ಪತ್ತಿದ ಸಲ್ಲತಾಳಿಯಿಂ ೧೩

ಗದ್ಯ॥ ಒಪ್ಪುವ ಕೊಳನಂ ನೀಡುಂ ನೋಡಿ ಸರೋವರದ ಚೆಲ್ವಂ ಮನದೆಗೊಂಡು ರತ್ನ
ಮಯಮಪ್ಪ ಸೋಪಾನಂಗಳಂ ಮೆಟ್ಟಿ ಮೆಲ್ಲಮೆಲ್ಲನಿೞಿದು ನೀರಂ ಪೊಕ್ಕು ೧೪

ನರಪತಿ ಕೊಂಡು ಚೀಕೊೞವೆಯುಂ ಬಿಡದೊಯ್ಯನೆ ಕೂರ್ಮೆಯಿಂ ಮನೋ
ಹರಿಯರ ಮೇಲೆ ಚಿಮ್ಮೆ ನಯದಿಂದೆ ತದಂಬು ಮೃದುತ್ವದಿಂ ತಳೋ
ದರಿಯರ ಮೆಯ್ಯ ಕುಂಕುಮದೊಳೊಂದಿ ನಿಮಿರ್ಕೆಯಿನೊಪ್ಪಿ ಮಾಣಿಕಾ
ಭರಣಮಿದೆಂದು ಬೆಬ್ಬಳಿಸಿ ನೋಡುವ ನೋಟಕರುಂ ನರೇಂದ್ರರುಂ ೧೫

ಅರಸಿಯರಾತ್ಮವಲ್ಲಭನ ಮೇಲೆ ತುಳುಂಕೆ ತದಂಬು ಮೇದಿನೀ
ಶ್ವರನತ ಪಾದಪಂಕಜನ ಪೂಸಿದ ಚಂದನ ಪಂಕದೊಳ್ ಸವಿ
ಸ್ತರವೊಡಗೂಡಿ ಚೆಲ್ವುವಡೆದೊಪ್ಪುವುದದ್ಭುತಮಾಗೆ ಮೌಕ್ತಿಕಾ
ಭರಣಮಿದೆಂದು ಬೆಬ್ಬಳಿಸಿ ನೋಡುವ ನೋಟಕರುಂ ನರೇಂದ್ರರುಂ ೧೬

ಕುಂಕುಮ ಕೇಸರಿ ಮೊದಲಾದ ಅನೇಕ ಪರಿಮಳ ವಸ್ತುಗಳಿಂದ ಮೊದಲೇ ವನಪಾಲಕನು ಕದಡಿದ್ದ ಸುದರ್ಶನವೆಂಬ ಕೊಳಕ್ಕೆ ಬಂದನು. ೧೨. ಅಲ್ಲಿ ನೀರುಹಕ್ಕಿಗಳಿಂದಲೂ ಹಂಸೆಗಳಿಂದಲೂ ಶೋಭಿಸುತ್ತಿದ್ದ ನೆಯ್ದಿಲೆಗಳಿಂದಲೂ ಜಲದವೆಂಬ ಪರಿಮಳದ ಹುಲ್ಲಿನ ಸಮೂಹಗಳಿಂದಲೂ ಚೆನ್ನಾದ, ದೊಡ್ಡ ಕಮಲಗಳ ಅಂದದಿಂದ ಮತ್ತಷ್ಟು ಸುಂದರವಾದ,ರತ್ನಸಮೂಹಗಳ ಕಾಂತಿಗಳು ಎಲ್ಲ ಕಡೆಯಲ್ಲಿಯೂ ಹೊಳೆ ಹೊಳೆಯುವ ಕೋಟೆ ಸುತ್ತುಗಟ್ಟಿದ್ದರೂ ವಿಶೇಷವಾಗಿ ಹಬ್ಬಿದ ಸುಂದರವಾದ ಬಳ್ಳಿಗಳಿಂದಲೂ ಕೊಳ ಒಪ್ಪುತ್ತಿತ್ತು. ೧೩. ಅಂದವಾದ ಆ ಕೊಳವನ್ನು ಬಹಳ ಹೊತ್ತು ನೋಡಿ ಅದರ ಚೆಲುವನ್ನು ಮನಸಾರ ಮೆಚ್ಚಿ ರತ್ನಮಯವಾದ ಮೆಟ್ಟಿಲುಗಳನ್ನು ಮೆಲ್ಲ ಮೆಲ್ಲನೆ ಇಳಿದು ನೀರನ್ನು ಪ್ರವೇಶಿಸಿ ಅರಸನು ಚೀಕೊೞವಿಯನ್ನು ಹಿಡಿದು ಮೆಲ್ಲಗೆ ಪ್ರೇಮದಿಂದ ತನ್ನ ಪ್ರಿಯೆಯರ ಮೇಲೆ ಚಿಮ್ಮಲು ಆ ನೀರು ಮಾರ್ದವದಿಂದ ಆ ಕೃಶಾಂಗಿಯರ ಮೈ ಮೇಲಿನ ಕುಂಕುಮ ಲೇಪನದಿಂದ ಕೂಡಿ ಹೊಳೆಯಲು ಮಾಣಿಕ್ಯದ ಆಭರಣದಂತೆತೋರಿ ರಾಜನೂ ನೋಟಕರೂ ಆಶ್ಚರ್ಯದಿಂದ ನೋಡುತ್ತಿದ್ದರು. ೧೫. ರಾಣಿಯರು ತಮ್ಮ ಪ್ರಿಯನ ಮೇಲೆ ನೀರನ್ನು ತುಳುಕಿಸಲು ಆ ರಾಜವಂದಿತ ಪಾದನು ಹಚ್ಚಿಕೊಂಡಿದ್ದ ಚಂದನ ವಿಲೇಪನದಲ್ಲಿ ಅತಿಶಯವಾಗಿ ಬೆರೆತು ಅಂದವೂ ಅದ್ಭುತವೂ ಆದ ಮುತ್ತಿನ ಆಭರಣವೆಂದು ನರೇಂದ್ರರೂ ನೋಟಕರೂ ಭ್ರಾಂತಿಪಟ್ಟರು. ೧೬. ಸುಂದರಿಯು,

ಸುರಗಿಯು ಕೋದ ಮಲ್ಲಿಗೆಯ ಜಾದಿಯ ಮೊಲ್ಲೆಯ ಬೆಳ್ಪಿನಿಂ ಮನೋ
ಹರಮೆನಿಸಿರ್ದ ಕುಂಕುಮರಜಂಗಳ ಶೋಭನಮಪ್ಪ ಕೆಂಪಿನಿಂ
ಸುರುಚಿರಮಪ್ಪ ಕಸ್ತುರಿಯೊಳೊಂದಿ ವಿರಾಜಿಪ ಕರ್ಪಿನಿಂ ಸರೋ
ವರಮೆಸೆದಿರ್ದುದಂಗಜನ ಲೀಲೆಯ ಚಿತ್ರಪಟಂಬೊಲೊಪ್ಪದಿಂ ೧೭

ಅರಸಂ ಸರಸಿರುಹಾನನೆ
ಯರಮೇಲೆ ತುಳುಂಕೆ ರಾಗದಿಂದಂ ನೋಡು
ತ್ತಿರೆ ಬಿಡದೆ ವಾರಿಜಾನನೆ
ಯರುಮರಸನ ಮೇಲೆ ಸೂಸೆ ಜಲಮಂ ನಗುತುಂ ೧೮

ಗದ್ಯ॥ ಅಂತು ರಾಗರಸಮೊದವೆ ಚಿತ್ತಾಹ್ಲಾದದಿಂ ಮೆಯ್ಯಱಿಯದೆ ಜಲಕ್ರೀಡೆಯನಾಡುತ್ತು ಮಿರ್ಪನ್ನೆಗಂ ವಿಜಯಾರ್ಧಪರ್ವತದುತ್ತರ ಶ್ರೇಣಿಯೊಳಳಕಾಪುರಮೆಂಬುದುಂಟಾ ಪೊಟಲನಾಳ್ವಂ ಖೇಚರರಾಜಂ ವಜ್ರದಾಡನೆಂಬಂ ತನ್ನ ಪ್ರಾಣವಲ್ಲಭೆಯಪ್ಪ ಮದನವೇಗೆಯೆಂಬ ಪಟ್ಟದರಸಿ ವೆರಸಿ ಭೌಮವಿಹಾರಾರ್ಥಂ ವಿಮಾನಾರೂಢನಾಗಿ ದಕ್ಷಿಣ ದಿಶಾಭಾಗಕ್ಕೆ ಬರುತ್ತಿರ್ಪಲ್ಲಿ ಪ್ರಾಣೇಶ್ವರಿಯರೊಳ್ ಕೂಡಿ ಜಲಕ್ರೀಡೆಯನಾಡುವುಪರಿಚರ ಮಹಾರಾಜನುಮಂ ಮುಂದಿ ರ್ದ ನಾಲ್ವರ್ ಮಹಾದೇವಿಯರುಮಂ ನೆರೆದಿರ್ದಂತಃಪುರಪುರಂಧ್ರಿಯರುಮಂ ಕಂಡರ್ತಿವಟ್ಟು ಪೋಗದೆ ನೋಡುತ್ತಿರ್ಪುದುಂ ಮದನವೇಗೆಯಿಂತೆಂದಳ್ ೧೯

ಪೋಣಿಸಿದ ಮಲ್ಲಿಗೆ ಜಾಜಿ ಮೊಲ್ಲೆಗಳ ಬಿಳುಪಿನಿಂದ ಮನೋಹರವಾಗಿದ್ದ ಕುಂಕುಮದ ದೂಳಿಗಳ ಶೋಭನವಾದ ಕೆಂಬಣ್ಣದಿಂದ ಸುಂದರವಾದ ಕಸ್ತೂರಿಯೊಡನೆ ಬೆರೆತು ಪ್ರಕಾಶಿಸುವ ಕಪ್ಪಿನಿಂದ ಸರೋವರವು ಮನ್ಮಥಲೀಲೆಯ ಚಿತ್ರದಪಟದ ಹಾಗೆ ಶೋಭಿಸುತ್ತಿತ್ತು. ೧೭. ರಾಜನು ಕಮಲಮುಖಿಯರ ಮೇಲೆ ನೀರನ್ನು ತುಳುಕಲು ಸಂತೋಷದಿಂದ ನೋಡಿ ರಾಣಿಯರೂ ಅರಸನ ಮೇಲೆ ನೀರನ್ನು ಚಿಮ್ಮಿದರು, ೧೮. ಹಾಗೆ ಸಂತೋಷಾಧಿಕ್ಯದಲ್ಲಿ ಮೈಮೇಲೆ ಎಚ್ಚರವಿಲ್ಲದೆ ಜಲಕ್ರೀಡೆಯನ್ನಾಡುತ್ತಿರುವಾಗ, ವಿಜಯಾರ್ಧಪರ್ವತದ ಉತ್ತರ ಶ್ರೇಣಿಯಲ್ಲಿ ಅಳಕಾಪುರವೆಂಬ ನಗರವಿತ್ತು. ಆದರ ದೊರೆ ಖೇಚರಾಧಿಪತಿ ವಜ್ರದಾಡನೆಂಬುವನು, ತನ್ನ ಪ್ರಾಣವಲ್ಲಭೆಯಾದ ಮದನವೇಗೆಯೆಂಬ ಪಟ್ಟದ ರಾಣಿಯೊಡನೆ ಕೂಡಿ ಭೂಲೋಕ ವಿಹಾರಕ್ಕೋಸ್ಕರ ವಿಮಾನ ಹತ್ತಿ ದಕ್ಷಿಣದಿಗ್ಭಾಗಕ್ಕೆ ಬರುತ್ತಿದ್ದಾಗ, ತನ್ನ ಹೆಂಡಿರೊಡನೆ ಸೇರಿ ಜಲಕ್ರೀಡೆಯನ್ನು ನಡೆಸುತ್ತಿದ್ದ ಉಪರಿಚರ ಮಹಾರಾಜನನ್ನೂ ಅವನ ಮುಂದಿದ್ದ ನಾಲ್ವರು ಮಹಾದೇವಿಯರನ್ನೂ, ಸೇರಿದ್ದ ಅಂತಃಪುರಸ್ತ್ರೀಯರನ್ನೂ ಕಂಡು ಸಂಭ್ರಮ ಪಟ್ಟು ಹೋಗದೆ ನೋಡುತ್ತಿರಲು ಮದನವೇಗೆಯು ಹೀಗೆಂದಳು. ೧೯. "ಚಂಚಲ ನೇತ್ರೆಯರು, ಇಲ್ಲಿ ಸೇರಿರುವ

ಈ ತರಳಾಯತಾಕ್ಷಿಯರಿನೀ ನೆರೆದಿರ್ದ ಕುಮಾರರಿಂ ಮಹಾ
ಖ್ಯಾತಿಯನುಳ್ಳ ಭೂಪನಿಕುರುಂಬದಿನೀ ಹಯಕೋಟಿಯಿಂ ಕರಿ
ವ್ರಾತದಿನೀವಿಳಾಸದ ವಿಳಾಸಿನಿಯರ್ಕಳಿನೀ ಭಟಾಳಿಯಿಂ
ದೀತನ ರಾಜ್ಯಲೀಲೆ ಸುರರಾಜನ ಲೀಲೆವೊಲೊಪ್ಪಿ ತೋಱುಗುಂ ೨೦

ಗದ್ಯ॥ ಎಂದಂಗಾರಕವಾರದ ಪೆಸರ್ ಮಂಗಳವಾರಮೆಂಬಂತೆ ಬಱಿದೆ ಕಾಗೆಗಳಂತಂತರಿಕ್ಷದೊಳ್ ಪಾಱುವ ನಮಗೆ ವಿದ್ಯಾಧರರೆಂಬೊಣಪೆಸರಲ್ಲದೀ ಮಹೀನಾಥನಂತೆ ವಿಭವಾನ್ವಿತರಲ್ಲರೆಂಬುದುಂ ನಲ್ಲಳ ಮಾತಂ ಕೇಳ್ದು ವಜ್ರದಾಡನುಪರಿಚರ ಮಹಾರಾಜನ ಮೇಲೆ ಕೋಪಂ ಪುಟ್ಟಿ ಮದನವೇಗೆಯುನಳಕಾಪುರಕ್ಕೆ ಕಳಿಪಿ ಮಗುಳ್ದು ಬಂದು ೨೧

ಪಿರಿದಪ್ಪಱೆಯಂ ಖಚರೇ
ಶ್ವರನೊರ್ವನೆ ದಲೆತ್ತಿ ತಂದು ಮುನಿಸಿಂ ಪದ್ಮಾ
ಕರಮನಟಿಲೊದವೆ ಪರಿಜನ
ಮರಿದಾಯ್ತೆಂದೊಡನೆ ಮುಚ್ಚಿ ಪೋಪುದುಮಾಗಳ್ ೨೨

ಜನಪನುಮರಸಿಯರುಂ ಭೋಂ
ಕೆನೆ ಪಾಸಱೆ ಕೊಳದ ಮೇಲೆ ಕವಿದಿರೆ ಪೊಱಗ
ಣ್ಗೆನಸುಂ ಪೊಱಮಡಲಱಿಯದೆ
ಘನವಪ್ಪಾವಿಗೆಯ ಕಿರ್ಚಿನಂತೊಳಗಿರ್ದರ್ ೨೩

ಕುಮಾರರೂ, ಮಹಾಪ್ರಸಿದ್ಧರಾದ ರಾಜಸಮೂಹದಿಂದಲೂ ಈ ಆನೆಕುದುರೆಗಳಿಂದಲೂ ಈ ವಿಲಾಸಿನಿಯರಿಂದಲೂ ಈ ಭಟಸಮೂಹದಿಂದಲೂ ಈತನ ರಾಜವೈಭವ ದೇವೇಂದ್ರನ ವೈಭವದಂತೆ ಶೋಭಿಸುತ್ತಿದೆ. ೧೯. ಅಂಗಾರಕವಾರದ ಹೆಸರು ಮಂಗಳವಾರವೆಂದು ಹೇಳುವಂತೆ, ಕಾಗೆಗಳ ಹಾಗೆ ಸುಮ್ಮನೆ ಅಂತರಿಕ್ಷದಲ್ಲಿ ಹಾರುವ ನಮಗೆ ವಿದ್ಯಾಧರರೆಂಬ ಒಣ ಹೆಸರು ಹೊರತು ಈ ರಾಜನ ಹಾಗೆ ನಾವು ವೈಭವ ಪಡೆಯಲಿಲ್ಲ" ಹೀಗೆನ್ನಲು ಪ್ರಿಯಳ ಮಾತನ್ನು ಕೇಳಿ ವಜ್ರದಾಡನಿಗೆ ಉಪರಿಚರ ಮಹಾರಾಜನ ಮೇಲೆ ಕೋಪ ಹುಟ್ಟಿತು. ಅವನು ಮದನವೇಗೆಯನ್ನು ಅಳಕಾಪುರಕ್ಕೆ ಕಳಿಸಿ ಹಿಂತಿರುಗಿ ಬಂದನು. ೨೦. ದೊಡ್ಡದಾದ ಬಂಡೆಯೊಂದನ್ನು ಆ ಖೇಚರರಾಜನು ಒಂದೇ ಸಲ ಎತ್ತಿತಂದು ಕೋಪದಿಂದ ಆ ಪದ್ಮಸರೋವರವನ್ನು ತಟ್ಟನೆ ಮುಚ್ಚಿ ಹೊರಟುಹೋದನು ! ಆಗ ವಿಶೇಷ ರೋದನ ಹುಟ್ಟಿತು. ಪರಿಜನರು 'ಅಸಾಧ್ಯಕಾರ್ಯ' ಎಂದು ಕೂಗಿಕೊಂಡರು ೨೧. ರಾಜನೂ ರಾಣಿಯರೂ ತಟ್ಟನೆ ಆ ಹಾಸುಗಲ್ಲು ಕೊಳದಮೇಲೆ ಕವಿದುಕೊಂಡಿರಲು ಹೊರಕ್ಕೆ ಹೋಗಲು ಸ್ವಲ್ಪವೂ ದಾರಿಯಿಲ್ಲದೆ ಮಹತ್ತರವಾದ ಆವಿಗೆಯ ಬೆಂಕಿಯಂತೆ ಆ ಸರೋವರದೊಳಗೇ

ತಡೆಯದೆ ಮೇಲೆತ್ತಲ್ ಬ
ಲ್ಲಡಿಗರ್ ಬಲದಿಂದೆ ಕಿಡೆಯೆ ನೂಂಕಲುಮೆಂತುಂ
ಗಡ ಬಾರದನಿಪ ಬೆಟ್ಟಿಂ
ಗಡಹಡಿಸದೆ ನೋಡಿ ನಾಲ್ವರುಂ ಕಾಮಿನಿಯರ್ ೨೩

ಇದು ಕರ್ಮದೇಟ್ಗೆಯಿಂದಾ
ಯ್ತಿದಕ್ಕೆ ನಾವಲಸಿ ಮಱುಗಿ ಮನದಟಲಿಂದಂ
ಕುದಿದೊಡೆ ಪೋಕುಮೆ ಪೋಗದು
ಬಿದಿ ಬರೆದಕ್ಕರಮನೊರಸಿ ಕಳೆದವರೊಳರೇ ೨೪

ಪಾಪೋದಯದಿಂ ಪೊರ್ದುಗು
ಮೇ ಪಡೆಮಾತಧಿಕ ದುಃಖಮುಂ ಸಾವುಗಳುಂ
ಪೋಪುವೆ ಪೋಗವು ಕೆಮ್ಮನೆ
ಚಾಪಲಮನರಾಗಿ ಮಱುಗಲಕ್ಕುಮೆ ಭವ್ಯರ್ ೨೫

ಈಗಳಿನಾಯ್ತೀಸುಖಮೆಂ
ಬೀ ಗರ್ವಂ ಬೇಡ ತೀವ್ರಕರ್ಮೋದಯದಿಂ
ದಾಗದೆ ಪೋಕುಂ ಚಿಂತೆಯು
ನಾಗಳೆ ಪುಟ್ಟಿಸುಗುಮಘಮನಾರ್ ಬಾರಿಸುವರ್ ೨೬

ಇದ್ದರು. ೨೨. ಅನೇಕ ಬಲವಂತರಾದ ಧಾಂಡಿಗರು ತಡವಿಲ್ಲದೆ ಆ ಬಂಡೆಯನ್ನು ಮೇಲಕ್ಕೆತ್ತಲು ಎಷ್ಟು ನೂಕಿದರೂ ಏನೂ ಸಾಧ್ಯವಾಗಲಿಲ್ಲ. ಅಸಾಧ್ಯವಾದುದಕ್ಕೆ ಆತುರಪಡದೆ ನಾಲ್ವರು ರಾಣಿಯರು ನೋಡಿ ೨೩. "ಇದು ನಮ್ಮ ಕರ್ಮದ ಹೆಚ್ಚಳದಿಂದ ಆಗಿದೆ. ಇದಕ್ಕೆ ನಾವು ಬೇಸರಪಟ್ಟು ಗೋಳಾಡಿ ಮನಸ್ಸಿನ ಸಂಕಟದಿಂದ ಕುದಿದರೆ ಈ ವಿಪತ್ತು ಹೋಗುವುದೆ ? ಹೋಗುವುದಿಲ್ಲ. ವಿಧಿ ಬರೆದ ಅಕ್ಷರಗಳನ್ನು ಒರೆಸಿ ಹೋಗಲಾಡಿಸಿದವರಿದ್ದಾರೆಯೆ ? ೨೪. ಪಾಪದ ಭಾರದಿಂದ ಉಂಟಾಗುವ ದುಃಖ, ಸಾವು, ಇವುಗಳು ಹೋಗುವುವೆ ? ಹೋಗವು. ಹೆಚ್ಚು ಮಾತೇಕೆ ? ಭವ್ಯರಾದವರು ಚಪಲ ಮನಸ್ಸಿನಿಂದ ಕೂಡಿ ಸಂಕಟಪಡಬಹುದೆ ? ೨೫. ಈಗ ಈ ಸುಖವಾಯಿತೆಂಬ ಗರ್ವಬೇಡ ; ಅದು ತೀವ್ರವಾದ ಕರ್ಮದ ಹೆಚ್ಚಳದಿಂದ ಆಗದೆ ಹೋಗುವುದು. ಅದು ಆಗಲೇ ಚಿಂತೆಯನ್ನು ಹುಟ್ಟಿಸುತ್ತದೆ. ಪಾಪವನ್ನು ಯಾರು ತಡೆಯಬಲ್ಲವರು ? ೨೬. ಮಕ್ಕಳೂ ತಂದೆಯೂ ಅಜ್ಜನೂ ತಮ್ಮಂದಿರೂ, ಬಹಳ

ತನಯರುಮಯ್ಯನು ಮಜ್ಜನು
ಮನುಜರು ಮತಿಮಿತ್ರರಪ್ಪರುಂ ಪತಿಯುಂ ಕಾಂ
ಚನಮುಂ ಮನೆಯುಂ ನಿಕ್ಕುವ
ಮೆನಗೆಂದುಂ ತಿಬ್ಬಮೆಂದು ನಲಿವನೆ ಗಾಂಪಂ ೨೮

ಮಱುಗುವುದೇಕೆ ಚಿಂತಿಸುವುದೇಕೆ ಪಲುಂಬುವುದೇಕೆ ಸೇದೆಗೆ
ಟ್ಟಱಿಯದೆ ಬೇವುದೇಕೆ ಮನದೊಳ್ ಕಡುಗುಂದುವುದೇಕೆ ಚಿತ್ತದೊಳ್
ಮಱುಗದೆ ನೊಂದು ಚಿಂತಿಸದೆ ನಾಡೆ ಪಲುಂಬದೆ ಮತ್ತೆ ಸೇದೆಗೆ
ಟ್ಟಱಿಯದೆ ಬೇಯದಾತ್ಮಹಿತಮಂ ನೆಱೆಮಾಡುಗೆ ಬುದ್ಧಿಯುಳ್ಳವರ್ ೨೯

ಗದ್ಯ॥ ಎಂದು ತಮ್ಮೊಳೋರೊರ್ವರ್ಗೆ ಧರ್ಮಶ್ರವಣಂಗೆಯ್ದು ಶುದ್ಧಮನರಾಗಿ ನಮ್ಮಂ ಪೊರ್ದಿದರಸನ ಮನಮಂ ಸುಖಮಪ್ಪಂತು ಮಾಡುವೆಮೆಂದು ರಾಜ್ಯಾಭಿಲಾಷಾಚಿತ್ತನುಂ, ಅಧರ್ಮಮನನುಂ ಸ್ತ್ರೀಲಂಪಟನುಂ ಗದ್ಗದಕಂಠನುಂ ವಿಹ್ವಲೀಭೂತನುಂ ಮಹಾಭಯಸ್ಥನುಂ ಮರಣಭೀರುವುಮಾಗಿರ್ದುಪರಿಚರ ಮಹಾರಾಜಂಗಭಿಮುಖರಾಗಿ ಧರ್ಮಮನಿಂತೆಂದು ಪೇಳ್ದರ್ ೩೦

ಸಾವಾದುದೆಂದು ಬೆಚ್ಚದೆ
ಕಾವವರಾರೆನ್ನನೆಂದು ಜಱಿಯದೆ ಮನದೊಳ್
ನೋವಿಂಗೇಗುವೆನೆನ್ನದೆ
ಭಾವಿಸು ಜಿನಪದಮನನ್ಯರಂ ಭಾವಿಸದಿರ್ ೩೧

ಮಿತ್ರರಾದವರೂ ಗಂಡನೂ ಬಂಗಾರವೂ ಮನೆಯೂ ನನಗೆ ನಿಶ್ಚಯ, ಅತಿಶಯ, ಎಂದು ಸಂತೋಷಪಡುವವನೇ ದಡ್ಡ ೨೭. ಏಕೆ ಸಂಕಟಪಡಬೇಕು ? ಚಿಂತಿಸುವುದೇತಕ್ಕೆ, ಗೋಳಿಡುವುದೇಕೆ ? ಶಕ್ತಿಗುಂದಿ ತಿಳಿಯದೆ ಕುದಿಯುವುದೇಕೆ ? ಮನಸ್ಸಿನಲ್ಲಿ ಬಹಳವಾಗಿ ಕುಗ್ಗುವುದಾದರೂ ಏಕೆ ? ಮನಸ್ಸಿನಲ್ಲಿ ಸಂಕಟಪಡದೆ, ನೊಂದು ಚಿಂತೆ ಮಾಡದೆ ಬಹಳವಾಗಿ ಹಲುಬದೆ, ಅಜ್ಞಾನದಿಂದ ಬೆಂದು ನೋಯದೆ ಆತ್ಮಹಿತವನ್ನು ಬುದ್ಧಿಯುಳ್ಳವರು ಮಾಡಿಕೊಳ್ಳಬೇಕು ೨೮. ಎಂದು ತಮ್ಮ ತಮ್ಮಲ್ಲಿಯೆ ಒಬ್ಬರಿಗೊಬ್ಬರು ಧರ್ಮಶ್ರವಣಮಾಡಿಸಿ ಶುದ್ಧಮನಸ್ಕರಾಗಿ "ನಮ್ಮನ್ನು ಹೊಂದಿದ ಅರಸನ ಮನಸ್ಸನ್ನೂ ಸುಖವಾಗುವಂತೆ ಮಾಡೋಣ" ಎಂದು ರಾಜ್ಯದ ಅಭಿಲಾಷೆಯುಳ್ಳವನೂ ಅಧರ್ಮಮನಸ್ಕನೂ ಸ್ತ್ರೀಲೋಲನೂ ಆದ ಆ ದೊರೆ ಮರಣ ಭಯದಿಂದ ಗದ್ಗದಧ್ವನಿಯಿಂದ ಕೂಡಿ ಪರವಶನಾಗಿ ಬಹಳ ಭಯಪಟ್ಟಿದ್ದನು. ಉಪರಿಚರ ಮಹಾರಾಜನಿಗೆ ಇದಿರಾಗಿ ನಿಂತು ಅವರು ಹೀಗೆ ಧರ್ಮವನ್ನು ಹೇಳಿಧರು ೨೯. "ಸಾವು ಬಂದಿತೆಂದು ಭಯಪಡದೆ ನನ್ನನ್ನು ರಕ್ಷಿಸುವವರು ಯಾರೆಂದು ಕುಗ್ಗದೆ, ಮನಸ್ಸಿನ ವ್ಯಥೆಗೇನಂ ಮಾಡಲೆಂದು ಚಿಂತಿಸದೆ ಜಿನಪದವನ್ನು ಚಿಂತಿಸು. ಇತರರನ್ನು ಸ್ಮರಿಸಬೇಡ.

ಮುನ್ನಿನ ಸಿರಿಯುಂ ಮಹಿಮೆಯು
ನುನ್ನತಿಯುಂ ಗಜಮನಶ್ವಮುಂ ನಂದನರುಂ
ಭಿನ್ನಾಂಬುಜವದನೆಯರುಂ
ನೀನ್ನೆನೆಯದೆ ದೇವ ನೆನೆ ಜಿನೇಶ್ವರ ಪದಮುಂ ೩೨

ಏನಾನುಮ ನೆನೆದಾರ್ತ
ಧ್ಯಾನದಿನಲೆ ಸತ್ತು ತಿರಿಕರೊಳ್ ತಿರಿಯದೆ ಸು
ಜ್ಞಾನಾಂಬೋಧಿಯನಮೃತ ಸು
ಖಾನಂದನ ದಿವ್ಯಪಾದಮಂ ನೆನೆ ಮನದೊಳ್ ೩೩

ಬಿಡು ರಾಜ್ಯದ ಮೋಹಮನೆಡೆ
ಯುಡಂಗದೆ ನೆನೆ ಜೈನಧರ್ಮಮಂ ಕಿಡುವ ಪರಿ
ಗ್ರಹಯುಗಮಂ ಪಿಡಿಯದೆ ಬಿಡು
ಪಡಿಮಾತೇಂ ಬಿಟ್ಟೊಡೆಯುದ್ದುವೈ ಶುಭಗತಿಯುಂ ೩೪

ಗದ್ಯ॥ ಪರಿಗ್ರಹದ ಮೋಹದಿಂ ಸಂಸಾರದೊಳ್ ತಿಟ್ಟನೆ ತಿರಿದು ದೆಸೆಗೆಟ್ಟು ಮುಱುಗಿದ ಪಟಹಸ್ತನ ಕಡಾರಪಿಂಗಳನ ಪಿಣ್ಯಾಕಗಂಧನ ದಂಡಕಮಹಾರಾಜನ ಬ್ರಹ್ಮದತ್ತನಂತೆ ಮಹಾ ದುಃಖಕ್ಕೊಳಗಾಗದೆ ಬಾಹ್ಯಾಭ್ಯಂತರ ಪರಿಗ್ರಹಂಗಳಂ ಬಿಟ್ಟೇಕಚಿತ್ತದಿಂ ಜಿನಪಾದಪಲ್ಲವಂಗಳಂ ನೆನೆಯುತ್ತಿರ್ಪುದೆಂದು ಪೇಟ್ದು ೩೫

೩೦. ಮೊದಲಿನ ಐಶ್ವರ್ಯ, ಮಹಿಮೆ, ಶ್ರೇಷ್ಠತೆ, ಆನೆ ಕುದುರೆಗಳು, ಮಕ್ಕಳು ಅರಳಿದ ಕಮಲಗಳಂಥ ಮುಖವುಳ್ಳ ಸುಂದರಿಯರು, ಇವರನ್ನೆಲ್ಲ ಸ್ಮರಿಸದೆ ಜಿನೇಶ್ವರ ಸ್ವಾಮಿಯ ಪಾದವನ್ನೇ ಸ್ಮರಿಸು. ೩೧. ಇನ್ನೇನನ್ನಾದರೂ ಚಿಂತಿಸುತ್ತ ಆರ್ತಧ್ಯಾನದಲ್ಲಿದ್ದಾಗ ಸತ್ತು ತಿರ್ಯಕ್ ಗತಿಗೆ ಬಿದ್ದು ತಿರುಗದೆ ಸುಜ್ಞಾನಸಮುದ್ರನಾದ ಅಮೃತಸೌಖ್ಯವನ್ನು ಕೊಡುವ ಜಿನನ ದಿವ್ಯಪಾದಗಳನ್ನು ಮನಸ್ಸಿನಲ್ಲಿ ಧ್ಯಾನಿಸು ೩೨. ರಾಜ್ಯದ ಮೇಲಿನ ಮೋಹವನ್ನು ಬಿಡು. ಮಧ್ಯೆಬಿಡದೆ ಜೈನಧರ್ಮವನ್ನೇ ಸ್ಮರಿಸು. ನಶ್ವರವಾದ ಆಸ್ತಿ, ಸಂಪತ್ತುಗಳನ್ನು ಹಿಡಿಯದೆ ಬಿಟ್ಟುಬಿಡು. ಹೆಚ್ಚು ಮಾತೇಕೆ ? ಹಾಗೆ ಬಿಟ್ಟರೆ ನೀನು ಶುಭಗತಿಯನ್ನು ಹೊಂದುವೆ. ಪುನಃ ಪರಿಗ್ರಹದ ಮೋಹದಿಂದ ಜನನ ಮರಣಗಳಿಗೆ ಸಿಕ್ಕಿಕೊಂಡು ತಿರ್ರನೆ ತಿರುಗುತ್ತ ದಿಕ್ಕೆಟ್ಟು ಸಂಕಟಪಟ್ಟ ಪಟಹಸ್ತ, ಕಡಾರಪಿಂಗಳ, ಪಿಣ್ಯಾಕಗಂಧ, ದಂಡಕ ಮಹಾರಾಜ ಮತ್ತು ಬ್ರಹ್ಮದತ್ತ ಮಹಾರಾಜ— ಇವರುಗಳ ಹಾಗೆ ಹೆಚ್ಚು ದುಃಖಕ್ಕೆ ಗುರಿಯಾಗದೆ ಹೊರಗಿನ ಮತ್ತು ಒಳಗಿನ ಪರಿಗ್ರಹ

---

ಆಸ್ತಿ, ಸಂಗ್ರಹಕಾರ್ಯದ ಮೇಲಿನ ಮೋಹವೇ ಒಳಗಿನ (ಆಂತರಿಕ) ಪರಿಗ್ರಹ, ಮನೆ, ಹಣ, ಹೆಂಡತಿ, ಮಕ್ಕಳು ಮುಂತಾದುವೇ ಬಾಹ್ಯ (ಹೊರಗಿನ) ಪರಿಗ್ರಹ.

ಎನಿಸು ಪರಿಗ್ರಹಭರಮುಂ
ಟನಿತುಮನಿಂಬಾಗೆ ಬಿಟ್ಟು ನಿರ್ಮಲನಂ ದೇ
ವನಿಕಾಯವಂದ್ಯನಂ ಮ
ತ್ತೆನಿಸದೆ ಜಿನನಂ ಸುಚಿತ್ತದಿಂ ನೆನೆಯುತ್ತುಂ ೩೬

ಗದ್ಯ॥ ಮುಡಿಪಿ ಸೌಧರ್ಮಕಲ್ಪದೊಳ್ ಸ್ವಸ್ತಿಕಾವರ್ತಮೆಂಬ ವಿಮಾನದೊಳೊಂದು ಸಾಗರೋಪಮಾಯುಃಷ್ಯಮನೊಡೆಯು ಆನಂದನುಂ ಕಾಂತನುಂ ಅಮಿತಕಾಂತನುಂ ಸುಕಾಂತನು ಮೆಂಬ ಸಾಮಾನಿಕ ದೇವರಾಗಿ ಪುಟ್ಟಿದರಿತ್ತಲ್ ಉಪರಿಚರಮಹಾರಾಜಂ ೩೭

ಕರಿತುರಗಂ ಪದಾತಿರಥ ಸಂತತಿ ಸಂತತಮೊಪ್ಪೆ ಸುತ್ತಲುಂ
ಬರೆ ತರಳಾಯತಾಕ್ಷಿಯರನಂಗಲತಾಂಗಿಯರಿಕ್ಕೆ ಕೂರ್ತು ಚಾ
ಮರಮನಗುರ್ವಿಸಿಂ ದಿವಿಜರಾಜನವೋಲ್ ನೆಱೆ ರಾಜವೀಧಿಯೊಳ್
ಕರಮನುರಾಗದಿಂದೆಸೆದು ಬರ್ಪುದನಾಂ ನೆನೆದೆಂತು ಸೈರಿಪೆಂ ೩೮

ನಿಕ್ಕುವಮಿಂದ್ರನ ಭಂಡಾ
ರಕ್ಕಂ ಖಚರಾಧಿಪತಿಯ ಪೆಂಪಿನ ಭಂಡಾ
ರಕ್ಕಂ ನೋಡೆನ್ನರ್ಥಂ
ಮೊಕ್ಕಳಮದನೆಂತು ಬಿಸುಟು ಪೋಪೆನೊ ಬದಿಯೇ ೩೯

ಗಳನ್ನು ಬಿಟ್ಟು ಒಂದೇ ಮನಸ್ಸಿನಿಂದ ಜಿನಸ್ವಾಮಿಯ ಪಲ್ಲವಗಳಂತೆ ಕೋಮಲವಾದ ಪಾದಗಳನ್ನು ಸ್ಮರಿಸುತ್ತಿರುವುದು" ಎಂದು ಹೇಳಿದರು. ೩೫. ಎಷ್ಟು ಪರಿಗ್ರಹದ ಆಧಿಕ್ಯ ವುಂಟೋ ಅಷ್ಟನ್ನೂ ಸಂತೋಷದಿಂದ ಬಿಟ್ಟು ಪರಿಶುದ್ಧನೂ ದೇವಸಮೂಹಕ್ಕೇ ವಂದ್ಯನೂ ಆದಂಥ ಜಿನನನ್ನು ಒಳ್ಳೆಯ ಮನಸ್ಸಿನಿಂದ ಧ್ಯಾನಿಸುತ್ತ ೩೬. ದೇಹ ಬಿಟ್ಟು ಸೌಧರ್ಮಕಲ್ಪದಲ್ಲಿ ಸ್ವಸ್ತಿಕಾವರ್ತವೆಂಬ ವಿಮಾನದೊಳಗೆ ಒಂದು ಸಾಗರೋಪಮವಾದ ಆಯುಷ್ಯವುಳ್ಳ ಆನಂದ, ಕಾಂತ, ಅಮಿತಕಾಂತ, ಸುಕಾಂತ, ಎಂಬ ಸಾಮಾನಿಕ ದೇವರುಗಳಾಗಿ ಹುಟ್ಟಿದರು ೩೭. ಇತ್ತ, ಉಪರಿಚರ ಮಹಾರಾಜನು ಆನೆ, ಕುದುರೆ, ಪದಾತಿ, ರಥಸಮೂಹಗಳಿಂದ ಕೂಡಿದ ತನ್ನ ಸೈನ್ಯ, ತನ್ನ ಸುತ್ತ ಇರುತ್ತಿದ್ದ ಸುಂದರ ಸ್ತ್ರೀಯರು, ಅವರು ಚಾಮರವಿಕ್ಕುತ್ತಿದ್ದದ್ದು, ಇವನ್ನೆಲ್ಲ ಸ್ಮರಿಸಿಕೊಂಡು ದೇವೇಂದ್ರನ ಹಾಗೆ ರಾಜಧಾನಿಯಲ್ಲಿ ಸಂಚರಿಸುತ್ತಿದ್ದ ವೈಭವವನ್ನು ಮರೆಯಲಾರದೆ ಹೋದನು. ೩೮. ನಿಜವಾಗಿಯೂ ತನ್ನ ಧನಸಂಪತ್ತು ಇಂದ್ರನ ಭಂಡಾರಕ್ಕಿಂತಲೂ, ಖೇಚರರಾಜನ ಭಂಡಾರಕ್ಕಿಂತಲೂ ಹೆಚ್ಚಿನದೆಂದು ತಿಳಿದು ಅದನ್ನು ಹೇಗೆ ಬಿಟ್ಟು ಹೋಗುವುದೆಂದು ಪರಿತಪಿಸಿದನು ೩೯. ಧರಣೇಂದ್ರ (ಸರ್ಪರಾಜ)ನ

ಧರಣೇಂದ್ರನ ಸತಿಯರ್ಗಂ
ಸುರರಾಜನ ಪೆಂಡವಾಸದೊಳ್ಪೆಂಡಿರ್ಗಂ
ಕರಮೆನ್ನರಸಿಯರಯ್ಯೋ
ವರ್ಱುಮಗ್ಗಳಮವರನೆಂತು ಬಿಸುಟಾನಿರ್ಪೆಂ ೪೦

ಪನ್ನಗರಾಜನ ಸಿರಿಗಂ
ಸನ್ನುತಸುರಪತಿಯ ಪಿರಿಯ ಸಿರಿಗಂ ಬಗೆವಂ
ದೆನ್ನಸಿರಿ ಮಿಗಿಲಿದಂ ಬಿ
ಟ್ಟೆನ್ನಲ್ಲಿಗಮಾಯ್ದುಮಗನೆ (?) ನಾಂ ಪೋದಪೆನೋ ೪೧

ಗದ್ಯ॥ ಎಂದು ಪರಿಗ್ರಹಕಾಂಕ್ಷೆಯಿಂ ಕಾದಿವ ನೀರಂತೆ ಮಱುಗಿ ತಱಿದಿಕ್ಕಿದ ತಳಿರಂತೆ ಕಂದಿ ಮಾಗಿಯ ತೊಱೆಯಂತೆ ಕುಂದಿ ಪಿಡಿವೆತ್ತ ಪಾವಿನಂತೆ ಸುಯ್ದು ಬಿದಿಯಂ ಬೈದಾರ್ತಧ್ಯಾನದಿಂ ಸತ್ತು ಮನೋಹರಮೆಂಬುದ್ಯಾನದೊಳ್ ಸರ್ಪಾಶ್ರಯಮೆಂಬ ಗುಹೆಯೊಳ್ ಪೆರ್ಬಾವಾಗಿ ಪುಟ್ಟಿದನಿತ್ತಲ್ ಅನಂತವೀರ್ಯಂ ಮೊದಲಾದೈನೂರ್ವರ್ ಕುಮಾರರುಮರಸಿಯರುಂ ಸಾಮಂತರುಂ ಪರಿಜನಮುಮರಸಂಗೆ ತೊಟ್ಟನೆ ಕೇಡಾದುದಕ್ಕೆ ೪೨

ಚಿಂತಿಸಿ ದುಃಖಾನಳನಿಂ
ಸಂತತಮೆರ್ದೆಯುರಿಯೆ ಮಱುಕದಿಂ ಮತಿಗೆಟ್ಟೋ
ರಂತೆ ನೆನೆನೆನೆದು ಧರಣೀ
ಕಾಂತನ ಕಾಂತೆಯರ ಗುಣಮನಿರುಳುಂ ಪಗಲುಂ ೪೩

ಸತಿಯರಿಗಿಂತ ದೇವೇಂದ್ರನ ಅಂತಃಪುರದ ಸುಂದರಿಯರಿಗಿಂತ ತನ್ನ ಹೆಂಡಿರು ಶ್ರೇಷ್ಠರೆಂದೂ ಅವರನ್ನು ಬಿಟ್ಟು ಇರುವುದಾದರೂ ಹೇಗೆಂದೂ ಅವನು ಮರುಗಿದನು. ೪೦. ಸರ್ಪರಾಜನ ಐಶ್ವರ್ಯಕ್ಕಿಂತಲೂ, ಶ್ರೇಷ್ಠನಾದ ದೇವೇಂದ್ರನ ದೊಡ್ಡ ಐಶ್ವರ್ಯಕ್ಕಿಂತಲೂ ತನ್ನ ಐಸಿರಿಯು ಹೆಚ್ಚಿನದೆಂದೂ ಅದನ್ನು ಬಿಟ್ಟು ಎಲ್ಲಿಗೆ ಹೋಗುವುದೂ ದುಃಖವೆಂದೂ ಗೋಳಿಟ್ಟನು ೪೧. ಹೀಗೆ ಪರಿಗ್ರಹದ ಆಸೆಯಿಂದ ಕುದಿಯುವ ನೀರಿನಹಾಗೆ ತಳಮಳ ಮರುಗಿ ಕಿತ್ತುಹಾಕಿದ ಚಿಗುರಿನಂತೆ ಕಾಂತಿಹೀನನಾಗಿ ಮಾಗಿಯಕಾಲದ ಹೊಳೆಯ ಹಾಗೆ ಕುಗ್ಗಿ ಹಿಡಿದಿಟ್ಟ ಹಾವಿನಂತೆ ನಿಟ್ಟುಸುರು ಬಿಟ್ಟು ವಿಧಿಯನ್ನು ಬೈದು ಆರ್ತಧ್ಯಾನದಲ್ಲಿ ತೊಡಗಿ ಸತ್ತನು. ಅವನು ಮನೋಹರವೆಂಬ ಉದ್ಯಾನದೊಳಗೆ ಸರ್ಪಾಶ್ರಯವೆಂಬ ಒಂದು ಗವಿಯಲ್ಲಿ ಹೆಬ್ಬಾವಾಗಿ ಹುಟ್ಟಿದನು, ಇತ್ತ ಅನಂತವೀರ್ಯನೇ ಮೊದಲಾದ ಐನೂರು ಮಂದಿ ಕುಮಾರರೂ ಅರಸಿಯರೂ ಸಾಮಂತರೂ ಪರಿಜನರೂ ಅರಸನಿಗೆ ಇದ್ದಕ್ಕಿದ್ದಂತೆ ಕೇಡಾದುದಕ್ಕೆ ವ್ಯಥೆಪಟ್ಟರು. ೪೨. ಅವರು ರಾಜನ ಮತ್ತು ರಾಣಿಯರ ಗುಣಗಳನ್ನೂ ಹಗಲೂ ರಾತ್ರಿಯೂ ಸ್ಮರಿಸುತ್ತ ಸಂತತವಾಗಿ ಸಂಕಟಪಡುತ್ತ ಬುದ್ಧಿಕೆಟ್ಟು ಗೋಳಿಟ್ಟರು. ೪೩. ಬಹಳ ವೈಭವದಿಂದ

ಪಿರಿದು ವಿಭೂತಿಯಿಂ ಮದಗಜೇಂದ್ರಮನೇಱಿ ಸಮಸ್ತ ಭೂಮಿಪರ್
ವೆರಸು ಸಮಸ್ತ ಕಾಮಿನಿಯರುಂ ಪರಿವಾರಮುಮಾತ್ಮಜಾತರುಂ
ಬೆರಸು ವನಕ್ಕೆ ರಾಗದಿನುದಾರ ಗುಣಾಂಬುಧಿ ಪೋಪುದೇಕೆ ನಿ
ಷ್ಠುರದಪಮೃತ್ಯು ಬಂದಡಸಿ ಮುಟ್ಟುವುದೇಕಿದು ಚೋದ್ಯಮಲ್ಲವೇ ೪೪

ಸಿರಿಯುಂ ಖೇಚರರಾಜರ್
ಪುರುಡಿಸಿ ತಂದಿಕ್ಕಿ ಪೋದರೋ ದೂರ್ತಿಂ ವ್ಯಂ
ತರ ದೇವರಿಕ್ಕಿ ಪೋದರೊ
ಪರೀಕ್ಷಿಪಂದಿದು ಮಹಾದ್ಭುತಂ ಧಾರಿಣಿಯೊಳ್ ೪೫

ಗದ್ಯ॥ ಎಂದು ಮಹೀನಾಥನ ಪದ್ಮಾವತಿ ಮೊದಲಾದ ನಾಲ್ವರರಸಿಯರ ಗುಣಮಂ ನೆನೆನೆನೆದು ಮಱುಗಿ ಕುದಿದು ಕೆಟ್ಟೆನೆಂದೊಳಱಿ ಮೆಯ್ಯಱಿಯದಳಲ್ವನಂತವೀರ್ಯಂ ಮೊದಲಾದ ಕುಮಾರರಂ ಬುದ್ಧಿವಂತರ್ ಧರ್ಮಶ್ರವಣದಿಂ ಮಾಣಿಸಿ ದುಃಖಮನಾಱಿಸಿ ಮಱುದಿವಸಂ ೪೬

ಮಂಗಳವಱಿ ಭೋರೆನೆ ವಾ
ರಾಂಗನೆಯರ್ ನೆರೆದು ಪಾಡೆ ಮಂಗಳಮಂ ಪು
ಣ್ಯಾಂಗನೆಯರಿಕ್ಕೆ ಸೇಸೆಯ
ನಂಗಜ ಸದೃಶಂಗನಂತವೀರ್ಯಂಗಾಗಳ್ ೪೭

ಮದ್ದಾನೆಯ ಮೇಲೆ ಹತ್ತಿ ಸಮಸ್ತರಾಜರೊಡನೆ, ಸ್ತ್ರೀಜನ ಪರಿವಾರಗಳೊಡನೆ ವನವಿಹಾರಕ್ಕೆ ಹೋಗಲೇಕೆ, ಆ ಕ್ರೂರವಾದ ಅಪಮೃತ್ಯು ಬಂದು ಮೇಲೆ ಬೀಳಲೇಕೆ? ಇದು ವಿಚಿತ್ರವಲ್ಲವೆ ? ೪೪. ಐಶ್ವರ್ಯದಲ್ಲಿ ಹುರುಡು (ಹಟ) ಗಟ್ಟಿ ಖೇಚರರಾಜರು ಧೂರ್ತತನದಿಂದ ಹೀಗೆ ಬಂಡೆಯನ್ನು ಇಟ್ಟು ಹೋದರೋ, ವ್ಯಂತರ ದೇವರುಗಳು ಇಟ್ಟು ಹೋದರೋ, ಪರೀಕ್ಷಿಸುವಾಗ ಇದು ಲೋಕದಲ್ಲಿ ಮಹತ್ತರವಾದ ಆಶ್ಚರ್ಯವೇ ಸರಿ. ೪೫. ಎಂದು ಉಪರಿಚರರಾಜ, ಆವನ ಪದ್ಮಾವತಿ ಮೊದಲಾದ ನಾಲ್ವರು ರಾಣಿಯರು. ಅವರುಗಳ ಸದ್ಗುಣವನ್ನು ಸ್ಮರಿಸಿಕೊಂಡು ಸಂಕಟದಿಂದ ಕುದಿದು ಕೆಟ್ಟೆನೆಂದು ಕೂಗಿಕೊಂಡು ಪರವಶನಾಗಿ ಅಳಲುತ್ತಿದ್ದ ಅನಂತವೀರ್ಯ ಮೊದಲಾದ ಕುಮಾರರನ್ನು ಬುದ್ಧಿವಂತರು ಧರ್ಮಶ್ರವಣದಿಂದ ಸಂತೈಸಿ ದುಃಖವನ್ನು ಶಾಂತಗೊಳಿಸಿದರು. ೪೬. ಮರುದಿನ ಮಂಗಳ ವಾದ್ಯಗಳು ಭೋರ್ಗರೆದುವು. ವಾರಾಂಗನೆಯರು ಸೇರಿ ಮಂಗಳ ಗೀತೆಗಳನ್ನು ಹಾಡಿದರು. ಪುಣ್ಯಸ್ತ್ರೀಯರು ಅಕ್ಷತೆಯನ್ನು ಹಾಕಿದರು. ಮನ್ಮಥ ಸದೃಶನಾದ ಅನಂತವೀರ್ಯನಿಗೆ ಆಗ ಮುಕುಟಬದ್ಧರು ಎಲ್ಲ ಸೇರಿ ಪಟ್ಟಕಟ್ಟಿ,

ನಲಿನಲಿದು ಮಕುಟಬದ್ಧರ್
ವಿಳಾಸದಿಂ ಕಟ್ಟಿ ಪಟ್ಟಮಂ ಜಿನಧರ್ಮೋ
ತ್ಪಲ ಚಂದ್ರನಾಗು ಮುನಿಜನ
ವಿಳಸಿತ ಪದಭಕ್ತನಾಗು ನೆಲನುಳ್ಳಿನೆಗಂ ೪೮

ಗದ್ಯ॥ ಎಂದು ಪರಸಿ ಸಂತೋಷದಿಂದಿರೆ ಮಱುದಿವಸಂ ಸಾರಸ್ವತರೆಂಬಾಚಾರ್ಯರವಧಿಜ್ಞಾನಿಗಳಯ್ನೂರ್ವರ್ ಮುನಿವರರ್ವೆರಸು ವಿಹಾರಿಸುತ್ತುಂ ಶ್ರಾವಂತಿಪುರಕ್ಕೆ ಬಂದು ಮನೋಹರೋದ್ಯಾನದೊಳ್ ಲೇಸಪ್ಪ ಶಿಲಾತಳದ ಮೇಲೆ ಕುಳ್ಳಿರ್ದು ಪಂಥಾತಿಚಾರ ನೇಮಮಂ ಮಾಡುತ್ತಿರ್ಪುದುಮವರ ಬರವಂ ಋಷಿನಿವೇದಕನನಂತವೀರ್ಯ ಮಹಾರಾಜಂಗೆ ಬಿನ್ನಪಂಗೆಯ್ವುದುಂ ಅರಸನವರಿರ್ದ ದೆಸೆಯುತ್ತಲೇಟಡಿಯಂ ನಡೆದು ಪೊಡೆಮಟ್ಟು ಋಷಿನಿವೇದಕಂಗೆ ಮೆಚ್ಚುಗೊಟ್ಟು ೪೯

ಪಿರಿದು ವಿಭೂತಿಯಿನರ್ಚನೆ
ವೆರಸು ಸಮಸ್ತಾವನೀಶ್ವರರ್ವೆರಸು ಮಹೀ
ಶ್ವರನರ್ತಿವೆರಸು ಯೋಗೀ
ಶ್ವರರಲ್ಲಿಗೆ ಬಂದು ಮುನಿಕದಂಬಮನಾಗಳ್ ೫೦

ಬಲವಂದು ಮೂಱು ಸೂಟ್ನಿ
ರ್ಮಲನಂಘ್ರಿಯನಷ್ಟವಿಧ ಸದರ್ಚನೆಯಿಂದು
ಜ್ವಲಮನದಿಂದರ್ಚಿಸಿ ನಿ
ಶ್ಚಲಚಿತ್ತಂಗೆಱಗಿ ಭಕ್ತಿಪೂರ್ವಕದಿಂದಂ ೫೧

"ಲೋಕವಿರುವತನಕ ಜಿನಧರ್ಮವನ್ನು ವೃದ್ಧಿಪಡಿಸು. ಮುನಿಜನಪಾದಭಕ್ತನಾಗು." ಎಂದು ಹರಸಿದರು. ೪೭-೪೮. ಹಾಗೆ ಹರಸಿ ಎಲ್ಲರೂ ಸಂತೋಷದಿಂದಿದ್ದರು. ಮರುದಿನ ಸಾರಸ್ವತರೆಂಬ ಆಚಾರ್ಯರು ಅವಧಿಜ್ಞಾನಿಗಳಾದ ಐನೂರು ಮಂದಿ ಮುನಿಶ್ರೇಷ್ಠರೊಡನೆ ಸಂಚರಿಸುತ್ತ ಶ್ರಾವಂತಿಪುರಕ್ಕೆ ಬಂದು ಮನೋಹರೋದ್ಯಾನದಲ್ಲಿ ಶ್ರೇಷ್ಠವಾದ ಕಲ್ಲಿನಮೇಲೆ ಕುಳಿತು ಪಂಥಾತಿಚಾರ ನೇಮವನ್ನು ಮಾಡುತ್ತಿದ್ದಾಗ ಅವರು ಅಲ್ಲಿಗೆ ಬಂದದ್ದನ್ನು ಗಮನಿಸಿ ಋಷಿನಿವೇದಕನು ಅನಂತವೀರ್ಯ ಮಹಾರಾಜನಿಗೆ ಬಿನ್ನವಿಸಿದನು. ಅರಸನು ಅವರಿದ್ದ ದಿಕ್ಕಿನ ಕಡೆಗೆ ಏಳು ಹೆಜ್ಜೆ ನಡೆದು ನಮಸ್ಕರಿಸಿ, ಋಷಿನಿವೇದಕನಿಗೆ ಬಹುಮಾನ ಕೊಟ್ಟನು. ೪೯. ಆಮೇಲೆ ಅರಸನು ಶ್ರದ್ಧೆಯಿಂದ ಸಮಸ್ತ ರಾಜರೊಡನೆ ವಿವಿಧ ಪೂಜಾದ್ರವ್ಯಗಳೊಡನೆ ಯೋಗೀಶ್ವರರಲ್ಲಿಗೆ ಹೋದನು. ೫೦. ಮೂರು ಸಲ ಪ್ರದಕ್ಷಿಣೆಮಾಡಿ ಆ ಮುನಿಯ ಪಾದಗಳನ್ನು ಎಂಟು ವಿಧದ ಅರ್ಚನೆಗಳಿಂದ ಪೂಜೆಮಾಡಿ ಆ ದೃಢಚಿತ್ತನಿಗೆ

ವಂದಿಸಿ ನರೇಂದ್ರನಾದರ
ದಿಂದಂ ನಿರ್ಮಳರನುಳಿದ ಋಷಿಯರುಮಂ ಸಾ
ನಂದಮನಂ ಗುರು ಪರಿವಿಡಿ
ಯಿಂದಂ ವಂದಿಸಿ ಮನೋನುರಾಗದಿನಾಗಳ್ ೫೨

ಮುನಿಪತಿಯ ಮುಂದೆ ಕುಳ್ಳಿ
ರ್ದನುಪಮ ಸದ್ಧರ್ಮಮಂ ಮನೋಭವರೂಪಂ
ಮನವಾರೆ ಕಿಱಿದು ಬೇಗಂ
ಜನನಾಥಂ ಕೇಳ್ದು ತಿಳಿದು ತದನಂತರದೊಳ್ ೫೩

ಗದ್ಯ॥ ಎಮ್ಮ ಜನಕಂಗೀ ಜನನಿಯರ್ಗಮಾಕಸ್ಮಿಕಮೆ ಕಾರಣಂ ಸಾವಾದುದೆಂತು ನಿಮ್ಮಡಿ ಬೆಸಸಿಮೆಂಬುದುಂ ಮುನೀಶ್ವರನವಧಿಲೋಚನದಿಂದಱಿದು ವಜ್ರದಾಡನೆಂಬ ವಿದ್ಯಾಧರಂ ಭೌಮವಿಹಾರಾರ್ಥಂ ಮದನವೇಗೆಯೆಂಬ ತನ್ನ ಪೆಂಡತಿವೆರಸು ಬರುತ್ತುಂ ಜಲಕ್ರೀಡೆಯುನಾಡುತ್ತುಮಿರ್ಪೀ ನಿಮ್ಮಯ್ಯನಂ ನೋಡುತ್ತುಮಿರ್ಪುದುಂ ಮದನವೇಗೆ ಮಹೀನಾಥರೊಳೀತನ ರಾಜ್ಯಮೆ ಸಫಲವೆಂದು ಪೊಗಳ್ವುದುಮಾ ಮಾತಿಂಗೆ ವಜ್ರದಾಡಂ ಪುರುಡಿಸಿ ಮದನವೇಗೆಯ ನಳಕಾಪುರಕ್ಕೆ ಕಳಿಪಿ ಪಿರಿದಪ್ಪ ಶಿಲೆಯಂ ಕೊಂಡು ಬಂದು ನಿಚ್ಛಿದ್ರಮಾಗಿ ಮುಚ್ಚಿ ಪೋದ ನವನಿಂ ಸಾವಾಯ್ತೆಂದು ಪೇಳ್ವುದುಂ ೫೪

ನಮಸ್ಕಾರ ಮಾಡಿ ಭಕ್ತಿಪೂರ್ವಕವಾಗಿ ಕೈಮುಗಿದನು. ೫೧. ರಾಜನು ಆದರದಿಂದ ವಂದಿಸಿ ಆ ಋಷಿಶ್ರೇಷ್ಠನನ್ನೂ ಉಳಿದ ಮುನಿಗಳನ್ನೂ ಗುರು ಪರಂಪರೆಯ ಪ್ರಕಾರವಾಗಿ ನಮಸ್ಕರಿಸಿ ಆಗ ೫೨. ಮುನಿಪತಿಯ ಮುಂದೆ ಕುಳಿತು ಹೋಲಿಕೆಯಿಲ್ಲದ ಜೈನಧರ್ಮವನ್ನು ಸ್ವಲ್ಪ ಹೊತ್ತು ಕೇಳಿ ತಿಳಿದು ಆಮೇಲೆ ಹೀಗೆ ಕೇಳಿದನು. ೫೩. "ನಮ್ಮ ತಂದೆಗೂ ತಾಯಿಯರಿಗೂ ಆಕಸ್ಮಿಕವಾದ ಕಾರಣದಿಂದ ಮರಣವು ಆದದ್ದು ಏಕೆ? ಅದನ್ನು ದಯೆಯಿಟ್ಟು ಅಪ್ಪಣೆ ಕೊಡಿಸಬೇಕು." ಈ ಪ್ರಶ್ನೆಗೆ ಮುನಿಶ್ರೇಷ್ಠನು ಅವಧಿಜ್ಞಾನದಿಂದ ಉತ್ತರವನ್ನು ತಿಳಿದುಕೊಂಡು, "ವಜ್ರದಾಡನೆಂಬ ವಿದ್ಯಾಧರನು ಭೂಮಿ ವಿಹಾರಕ್ಕೆಂದು ತನ್ನ ಹೆಂಡತಿ ಮದನವೇಗಯ ಸಂಗಡ ಬರುತ್ತ ಜಲಕ್ರೀಡೆಯೊಡುತ್ತಿದ್ದ ನಿಮ್ಮ ತಂದೆಯನ್ನು ನೋಡುತ್ತಿದ್ದನು. ಆಗ ಮದನವೇಗೆ ರಾಜರಲ್ಲೆಲ್ಲ ಈತನ ರಾಜ್ಯವೇ ಸಫಲವೆಂದು ಹೊಗಳಿದಳು. ಆ ಮಾತಿಗೆ ವಜ್ರದಾಡನು ಹೊಟ್ಟೆಕಿಚ್ಚುಪಟ್ಟು ಮದನವೇಗೆಯನ್ನು ಅಳಕಾಪುರಕ್ಕೆ ಕಳಿಸಿ ದೊಡ್ಡ ಶಿಲೆಯನ್ನು ತಂದು ರಂಧ್ರವಿರದಂತೆ ಮುಚ್ಚಿಹೋದನು. ಅವನಿಂದ ನಿಮ್ಮ ತಂದೆ ತಾಯಿಯರಿಗೆ ಸಾವಾಯಿತು" ಎಂದು ಹೇಳಿದರು. ೫೪. ರಾಜನು ಮತ್ತೆ ಆ ಮುನಿಶ್ರೇಷ್ಠನಿಗೆ

ನರನಾಥನಱಿದು ಮತ್ತಂ
ವರ ಮುನಿನಾಥಂಗೆ ಭಕ್ತಿಯಿಂ ಪೊಡೆವಟ್ಟಾ
ದರದಿಂ ನಿಮ್ಮಡಿ ಭೂಮೀ
ಶ್ವರನುಂ ಜನನಿಯರುಮೆಲ್ಲಿ ಪುಟ್ಟಿರ್ದಪರೋ ೫೫

ಬೆಸಸುವುದದನೆನೆ ಕೀರ್ತಿ
ಪ್ರಸರಂ ಜೈನಾಗಮಾಂಬುನಿಧಿ ಶಿಶಿರಕರಂ
ವಸುಧಾಧಿಪತಿಗೆ ನೆಱೆ ಸಂ
ತಸಮಪ್ಪಂತಾಗೆ ಪೇೞಲುದ್ಯತನಾದಂ ೫೬

ಗದ್ಯ॥ ನಿನ್ನ ಜನನಿಯರ್ ಪದ್ಮಾವತಿ ಮೊದಲಾದ ನಾಲ್ವರುಂ ಮೇಲೆ ಭಯಂಕರಮಾಗಿರ್ದ ಶಿಲೆಗಂಜದೆ ಪ್ರಾಣಭಯಮಾಯ್ತೆಂದು ಮನದೊಳ್ ನಡುಗದೆ ಚಿತ್ತದೊಳ್ ಕೊಂಕದೆ ೫೭

ತನುವಂ ಮತ್ತಿಹಲೋಕದಲ್ಪಸುಖಮಂ ದಿವ್ಯಾಂಬರಾನೀಕಮಂ
ಧನಮಂ ಭೂಷಣಮಂ ಸುಭೋಜನಮನಾತ್ಮಾಧೀಶನಂ ಕೂರ್ಪ ಸಂ
ದನರಂ ಚೀತಿಸಿ ಕಂದಿ ಕುಂದಿರದೆ ಬಿಟ್ಟಾನಂದದಿಂ ಶುದ್ಧ ಭಾ
ವನೆಯಿಂ ನಿರ್ಮಲ ಚಿತ್ತದಿಂ ಮುಡಿಪಿ ತತ್ಸೌಧರ್ಮ ಸತ್ಕಲ್ಪದೊಳ್ ೫೮

ಗದ್ಯ॥ ಸ್ವಸ್ತಿಕಾವರ್ತಮೆಂಬ ವಿಮಾನದೊಳ್ ಸಾಮಾನಿಕದೇವರಾಗಿ ಪುಟ್ಟಿದರ್ ನಿಮ್ಮಯ್ಯಂ ರಾಜ್ಯವಿಭೂತಿಯುಂ ಮಕ್ಕಳುಂ ಭಂಡಾರದ ಪೆಂಡಿರ ಸ್ನೇಹಮುಂ ನಿನ್ನ ಚಾಗದ

ನಮಸ್ಕಾರಮಾಡಿ "ಸ್ವಾಮಿ, ನನ್ನ ತಂದೆಯೂ ತಾಯಿಯರೂ ಈಗ ಎಲ್ಲಿ ಹುಟ್ಟಿದ್ದಾರೆಂಬುದನ್ನು ಹೇಳಬೇಕು" ೫೫. ಎಂದು ಕೇಳಲು ಜೈನಾಗಮಸಮುದ್ರಕ್ಕೆ ಚಂದ್ರನೋಪಾದಿಯಾಗಿದ್ದ ಆ ಕೀರ್ತಿಶಾಲಿಯು ರಾಜನಿಗೆ ಬಹಳ ಸಂತೋಷವಾಗುವ ಹಾಗೆ ಉತ್ತರ ಕೊಡಲು ತೊಡಗಿದನು. ೫೬. "ಪದ್ಮಾವತಿಯೇ ಮೊದಲಾದ ನಿನ್ನ ನಾಲ್ವರು ತಾಯಿಯರೂ ಆ ಭಯಂಕರವಾಗಿದ್ದ ಬಂಡೆಗೆ ಭಯಪಡದೆ ಪ್ರಾಣಭಯದಿಂದ ಮನಸ್ಸಿನಲ್ಲಿ ನಡುಗದೆ, ಅಳುಕದೆ ಇದ್ದರು. ೫೭. ದೇಹವನ್ನೂ ಈ ಲೋಕದ ಅಲ್ಪಸುಖವನ್ನೂ ದಿವ್ಯವಸ್ತ್ರ, ಆಭರಣ, ಸುಭೋಜನ, ಪ್ರೀತಿಸುವ ತಮ್ಮಗಂಡ, ಮಕ್ಕಳು, ಇವರನ್ನೆಲ್ಲ ಕುರಿತು ಚಿಂತಿಸಿ ಕುಗ್ಗದೆ ಎಲ್ಲವನ್ನೂ ಬಿಟ್ಟು ಶುದ್ಧಮನಸ್ಸಿನಿಂದ ಧ್ಯಾನಮಗ್ನರಾಗಿ ಸತ್ತು ಸೌಧರ್ಮಕಲ್ಪದಲ್ಲಿ ಹುಟ್ಟಿದರು. ೫೮. ಅಲ್ಲಿ ಸ್ವಸ್ತಿಕಾವರ್ತವೆಂಬ ವಿಮಾನದಲ್ಲಿ ಅವರು ಸಾಮಾನಿಕ ದೇವರಾಗಿ ಹುಟ್ಟಿದರು. ನಿಮ್ಮ ತಂದೆ ರಾಜ್ಯವೈಭವ, ಮಕ್ಕಳು, ಭಂಡಾರ, ಹೆಂಡಿರ ಪ್ರೀತಿ, ತ್ಯಾಗ ಭೋಗಗಳು ಐಶ್ವರ್ಯ ದೇಶ,ನಗರ

ಭೋಗದ ಪರಿಗ್ರಹದ ನಾಡಿನ ಬೀಡಿನ ಚಾತುರಂಗಬಲದ ರಾಜ್ಯಭರದ ಮೋಹೋದಯ ದಿಂದಾರ್ತಧ್ಯಾನಪರನಾಗಿ ಸತ್ತು ಮಱುಕದಿಂ ಬಂದೀ ವನದೊಳ್ ಸರ್ಪಾಶ್ರಯಮೆಂಬ ಗುಹೆ ಯೊಳ್ ಪೆರ್ಬಾವಾಗಿ ಪುಟ್ಟಿರ್ದಪನೆಂಬುದುಂ ಜನನಿಯುರ್ ಪರಿಗ್ರಹ ನಿವೃತ್ತಿಯಿಂದಾದ ಶುಭ ಪರಿಣಾಮದಿಂ ಪಡೆದ ದೇವಗತಿಯುಮಂ, ಜನಕಂ ಪರಿಗ್ರಹದಿಂದಾದ ದುಷ್ಪರಿಣಾಮದಿಂ ಪಡೆದ ತಿರಿಕಗತಿಯುಮಂ ಕಂಡು ಬೆಱಗಾಗಿ

೭೯

ಬಱಿದೆ ಪರಿಗ್ರಹಕ್ಕೆಱಗಿ ದುಷ್ಪರಿಣಾಮದಿನೇೞ್ಗೆಗೆಟ್ಟು ಪಾಂ
ಗಱಿಯದೆ ಸೌಖ್ಯಭೂಮಿರುಹಮಂ ಕಡಿದಕ್ಷಯ ಲಕ್ಷ್ಮಿಯಂ ಮನಂ
ಮುಱಿಯಿಸಿ ಪುಟ್ಟಿ ನಾಡೆ ತಿರಿಕಂಗಳೊಳಕ್ಕಟ ತೀವ್ರದುಃಖದಿಂ
ಮಱುಗುತುಮಿರ್ಪ ಕಾರ್ಯಮನೆ ಚಿಂತಿಸುತಿರ್ಪುವು ದುಃಖಜೀವಿಗಳ್ ೬೦

ತನುವುಂ ಗೇಹಮುಮರ್ಥಮುಂ ಕರಿಗಳುಂ ಜಾತ್ಯಶ್ವಮುಂ ಸಂದ ನಂ
ದನರುಂ ಮಿತ್ರರುಮಯ್ಯನುಂ ಜನನಿಯುಂ ಮುನ್ನಾರೊಡಂ ಬೋದರೊ
ಯ್ಯನೆ ಮುನ್ನಾವನನೊತ್ತಿ ಕಾದರದಱಿಂ ತಾಂ ಬೇಱು ದೇಹಾದಿಯು
ಪ್ಪನಿತುಂ ಬೇಱೆನುತಿರ್ಪ ಭವ್ಯನೆ ವಲಂ ಧನ್ಯಂ ಪೆಱರ್ ಧನ್ಯರೇ ೬೧

ಗಳು, ಚತುರಂಗ ಸೈನ್ಯ, ಇವೆಲ್ಲವುಗಳ ಮೇಲಿನ ಮೋಹದಿಂದ ಅವನ್ನು ಬಿಟ್ಟು ಹೋಗ ಲಾರದೆ ಆರ್ತಧ್ಯಾನದಲ್ಲಿ ಮುಳುಗಿ ಸಂಕಟಪಟ್ಟು ಸತ್ತು ಬಂದು ಈ ವನದೊಳಗೆ ಸರ್ಪಾಶ್ರಯವೆಂಬ ಗವಿಯೊಳಗೆ ಹೆಬ್ಬಾವಾಗಿ ಹುಟ್ಟಿದ್ದಾನೆ." ಹೀಗೆ ಹೇಳಲು ಕೇಳಿ ತಾಯಿಯರು ಪರಿಗ್ರಹನಿವೃತ್ತಿಯಿಂದ ಆ ಒಳ್ಳೆಯ ಫಲವನ್ನೂ ತಂದೆ ಪರಿಗ್ರಹ ನಿಮಿತ್ತ ದಿಂದ ಹೊಂದಿದ ತಿರ್ಯಕ್ ಜನ್ಮವನ್ನೂ ಕೇಳಿ ಬೆರಗಾದನು. ೫೯. ವೃಥಾ ಆಸ್ತಿಗೆ (ಪರಿ ಗ್ರಹ) ಆಸೆಪಟ್ಟು ಕೆಟ್ಟ ಪರಿಣಾಮದಿಂದ ಏಳಿಗೆಯನ್ನು ಕಳೆದುಕೊಂಡು ಕ್ರಮವನ್ನು ತಿಳಿಯದೆ ಸೌಖ್ಯವೆಂಬ ವೃಕ್ಷವನ್ನು ಕಡಿದು ಹಾಕಿ ಅಕ್ಷಯ ಲಕ್ಷ್ಮಿಯ ಮನಸ್ಸನ್ನು ಮುರಿದು ತಿರ್ಯಗ್ಜನ್ಮಗಳಲ್ಲಿ ಹುಟ್ಟಿ ಕ್ರೂರವಾದ ದುಃಖದಿಂದ ಸಂಕಟಪಡುತ್ತ ಇರುವ ರೀತಿಯನ್ನೇ ಆ ದುಃಖಜೀವಿಗಳು ಚಿಂತಿಸುತ್ತಿರುತ್ತಾರೆ. ೬೦. 'ದೇಹ ಮನೆ ಧನ ಆನೆ ಕುದುರೆಗಳು, ಶ್ರೇಷ್ಠಪುತ್ರರೂ, ಸ್ನೇಹಿತರು, ತಂದೆತಾಯಿಯರು, ಇವರು ಹಿಂದೆ ಯಾರಾದರೂ ಸಂಗಡ ಹೋದರೆ ? ಹಿಂದೆ ಯಾರಾದರೂ ಸರ್ರನೆ ನುಗ್ಗಿ ರಕ್ಷಿಸಿದರೆ ? ಆದ್ದರಿಂದ ತಾನು ಬೇರೆ, ದೇಹ ಮೊದಲುಗೊಂಡು ಎಲ್ಲವೂ ಬೇರೆ, ಎಂದು ತಿಳಿದ, ಭವ್ಯನೇ ಧನ್ಯ. ಉಳಿದವರು ಧನ್ಯರೆ ?" ೬೧. ಎಂದು ಪರಿಗ್ರಹ ಮತ್ತು ನಿಷ್ಪರಿ

ಗದ್ಯ॥ ಎಂದು ಪರಿಗ್ರಹದ ನಿಷ್ಪರಿಗ್ರಹದ ಹೀನಾಧಿಕತ್ವಮಂ ಮನದೊಳ್ ವಿಚಾರಿಸಿ ಮುನಿನಾಥಂಗೆ ಕರಕಮಲಂಗಳಂ ಮುಗಿದಿಂತೆಂದಂ ೬೨

ಉಪರಿಚರನೃಪತಿ ನಿಮ್ಮಡಿ
ವಿಪರೀತ ಧ್ಯಾನದಿಂ ದುರಾಗ್ರಹಿಯಾಗಿ
ರ್ದಪನೀಗಳಾತನಂ ನಿ
ಷ್ಕಪಟ ಜಿನೇಶ್ವರ ಮತೋಕ್ತಿಯಿಂ ಪ್ರಿಯದಿಂದಂ ೬೩

ತಿಳಿಪಲ್ ಬರ್ಕುಮೊ ಬಾರದೊ
ಘಳಿಲೆನೆ ಬೆಸಸುವುದು ಶೀಘ್ರಮೆಂಬುದುಮವನೀ
ತಳಪತಿಗೆ ನುಡಿದರುರ್ವೀ
ತಳ ಪೂಜ್ಯರ್ ವಿಮಳರಂಬುನಿಧಿನಿಸ್ವನದಿಂ ೬೪

ಗದ್ಯ॥ ನೀಂ ಪೋಗಿ ಧರ್ಮಮಂ ಪೇಳ್ವುದುಮಾ ಪಾವು ಜಾತಿಸ್ಮರನಾಗಿ ತನ್ನ ಮುನ್ನಿನ ಭವಮನಱಿದು ಧರ್ಮಮಂ ಕೈಕೊಳ್ಗುಮನ್ನೆಗಂ ದೇವಲೋಕದಿಂ ನಿಮ್ಮ ಜನನಿಯರಪ್ಪ ನಾಲ್ವರುಂ ಬಂದು ಪೂರ್ವಸ್ವರೂಪದಿಂ ನಿನಗೆ ಸಂಘಾತಮಾಗಿರೆ ಧರ್ಮಮಂ ಪೇಳ್ದು ತದನಂತರಂ ಸದ್ಧರ್ಮದೊಳಾದ ಪರಮೈಶ್ವರ್ಯಮುಮಂ ಜಿನಪದ ಸ್ಮರಣೆಯೊಳಾದ ಮಹಾವಿಭವಮುಮಂ ನಿಷ್ಪರಿಗ್ರಹವ್ರತದೊಳಾದ ಪೆಂಪುಮಂ ತೋಱಿ ಸಾಱಿ ಲೋಕಕ್ಕಂ ನಿನಗಂ

ಗ್ರಹದ ಕೀಳು ಮೇಲುಗಳನ್ನು ಕುರಿತು ಮನಸ್ಸಿನಲ್ಲಿಯೇ ವಿಚಾರಮಾಡಿ ಮುನಿಶ್ರೇಷ್ಠನಿಗೆ ಕೈಜೋಡಿಸಿ ಹೀಗೆ ಹೇಳಿದನು : ೬೨. "ಸ್ವಾಮಿ, ಉಪರಿಚರ ರಾಜನು ಧ್ಯಾನ ವೈಪರೀತ್ಯದಿಂದ ಕೆಟ್ಟಸಿಟ್ಟುಳ್ಳವಾಗಿದ್ದಾನೆ. ಈಗ ಆತನನ್ನು ನಿಷ್ಕಪಟವಾದ ಜಿನಧರ್ಮದ ಉಪದೇಶದಿಂದ ಪ್ರೀತಿಯ ದಾರಿಯಲ್ಲಿ ತಿದ್ದಲು ಬರುತ್ತದೆಯೇ, ಇಲ್ಲವೆ ? ಅಪ್ಪಣೆ ಕೊಡಿಸಬೇಕು" ಎಂದು ಬಿನ್ನವಿಸಲು ಲೋಕಪೂಜ್ಯರಾದ ಮುನಿಗಳು ಸಮುದ್ರದಂತೆ ಗಂಭೀರಧ್ವನಿಯಿಂದ ಹೀಗೆ ಹೇಳಿದರು. ೬೩-೬೪. "ನೀನು ಹೋಗಿ ಧರ್ಮವನ್ನು ಹೇಳಿದರೆ ಆ ಹಾವು ಪೂರ್ವಜನ್ಮಸ್ಮರಣೆಯನ್ನು ಪಡೆದು ಧರ್ಮವನ್ನು ಅಂಗೀಕರಿಸುತ್ತದೆ. ಆ ವೇಳೆಗೆ ನಿನ್ನ ತಾಯಿಯರು ದೇವಲೋಕದಿಂದ ಬಂದು, ತಮ್ಮ ಮೊದಲಿನ ರೂಪದಿಂದ ನಿನಗೆ ಕಾಣಿಸಿ, ಧರ್ಮವನ್ನು ಹೇಳಿ, ಆಮೇಲೆ ಜೈನಧರ್ಮದಿಂದ ಆದ ಪರಮೈಶ್ವರ್ಯವನ್ನೂ ಜಿನಪಾದ ಧ್ಯಾನದಿಂದ ಆದ ಮಹಾವೈಭವವನ್ನೂ ನಿಷ್ಪರಿಗ್ರಹವ್ರತದಿಂದ ಆದ ಆಧಿಕ್ಯವನ್ನೂ ತೋರಿಸಿ, ಸಾರಿ ಹೇಳಿ, ಲೋಕಕ್ಕೂ ನಿನಗೂ

ಪೇಳ್ವಂತೆ ದಿವ್ಯಸ್ವರೂಪಮಂ ಕೈಕೊಂಡು ಗಗನತಳಕ್ಕೆ ನೆಗೆದು ತಂತಮ್ಮ ಶ್ರೀಯುಮಂ ವಿಭೂತಿಯುಮಂ ತೋಱಿ ದೇವಲೋಕಕ್ಕೆ ಪೋಪರೆಂಬುದುಂ ೬೫

ಮುನಿಪತಿಗನಂತ ವೀರ್ಯಾ
ವನಿನಾಥಂ ಭಕ್ತಿಪೂರ್ವಕಂ ಪೊಡೆವಟ್ಟೊ
ಯ್ಯನೆ ಸರ್ಪನಿರ್ದ ಪುತ್ತಿಂ
ಗನುನಯದಿಂ ಬಂದು ಗುಹೆಯ ಬಾಗಿಲ ಪೊರೆಯೊಳ್ ೬೬

ನಿಂದಿರ್ದು ನೋಟ್ಪುದುಂ ಮುನಿ
ವೃಂದಾರಕನೆಂದ ಮಾರ್ಗದಿಂ ಸುಯ್ಯುತ್ತುಂ
ಮುಂದಿರ್ದ ನಾಗನಂ ಕಂ
ಡೆಂದಂ ನೃಪನಿಚಯಮಕುಟಘಟ್ಟಿತಚರಣಂ ೬೭

ವನಿತೆಯರಾಗಿರ್ದುಂ ನೆ
ಟ್ಟನೆ ವೀರಂಬೆರಸು ತೊಱೆದು ಸಕಳಮುಮಂ ಸ
ಜ್ಜನಪಾದಭಕ್ತಿಯಿಂ ದೇ
ವನಿವಾಸಕ್ಕೊಗೆದರಂತುಟಾಗಲ್ವೇಡಾ ೬೮

ಮೀಸೆಗಳಂ ಪೊತ್ತಿರ್ದುಂ
ಸಾಸಂಗೆಟ್ಟಳ್ಕಿ ಬಳ್ಕಿ ಮನದುಬ್ಬೆಗದಿಂ
ಪೇಸುಪತಮಾಗಿ ನಾಗನಿ
ವಾಸದೊಳೋವಯ್ಯ ಪುಟ್ಟಿ ತಿರಿವುದುಮಾಯ್ತೇ ೬೯

ಹೇಳುವ ಹಾಗೆ, ದಿವ್ಯಸ್ವರೂಪವನ್ನು ಪಡೆದು ಆಕಾಶಕ್ಕೆ ಹಾರಿ ತಮ್ಮ ತಮ್ಮ ಐಶ್ವರ್ಯ ವೈಭವಗಳನ್ನು ತೋರಿಸಿ ದೇವಲೋಕಕ್ಕೆ ಹೋಗುವರು" ೬೫. ಆಗ ಅನಂತ ವೀರ್ಯರಾಜನು ಭಕ್ತಿಪೂರ್ವಕವಾಗಿ ನಮಸ್ಕಾರ ಮಾಡಿ ನೇರವಾಗಿ ಆ ಹಾವು ಇದ್ದ ಹುತ್ತದ ಹತ್ತಿರಕ್ಕೆ ಸ್ನೇಹದಿಂದ ಬಂದು ಗವಿಯ ಬಾಗಿಲಿನ ಹತ್ತಿರ ನಿಂತು ನೋಡಿದನು. ೬೬. ಮುನಿಶ್ರೇಷ್ಠನು ಹೇಳಿದ ರೀತಿಯಲ್ಲಿಯೇ ಉಸ್ಸೆಂದು ಉಸಿರು ಬಿಡುತ್ತ ಎದು ರಿಗೆ ಇದ್ದ ನಾಗನನ್ನು ನೋಡಿ ಅನೇಕ ರಾಜರ ಸಮೂಹದಿಂದ ವಂದನೆಯನ್ನು ಸ್ವೀಕರಿಸು ವಂಥ ಆ ರಾಜಶ್ರೇಷ್ಠನು ಹೀಗೆಂದನು : ೬೭. "ಹೆಂಗಸರಾಗಿದ್ದರೂ ನಿನ್ನ ಪತ್ನಿಯರು ಧೈರ್ಯದಿಂದ ಸಮಸ್ತವನ್ನೂ ತ್ಯಜಿಸಿ ಜಿನೇಶ್ವರನ ಪಾದಭಕ್ತಿಯಿಂದ ದೇವತೆಗಳ ಲೋಕಕ್ಕೆ ಹೋದರು. ನೀನೂ ಹಾಗೆ ಆಗಬೇಡವೆ ? ೬೮. ಮೀಸೆಗಳನ್ನು ಹೊತ್ತು ಗಂಡಸಾಗಿದ್ದೂ, ಸಾಹಸವನ್ನು ಕಳೆದುಕೊಂಡು ಹೆದರಿ ನಡುಕಗೊಂಡು ಮನಸ್ಸಿನ ಉದ್ವೇಗದಿಂದ ಹೇಸಿ ಪತನಹೊಂದಿ ಹಾವುಗಳ ನಿವಾಸದಲ್ಲಿ ಹುಟ್ಟಿ ಅಲೆಯುವಂತಾ

ಅರಸಿಯರನಿಬರುಮರ್ಹ
ಚ್ಚರಣಮೆ ಶರಣೆಂದು ವೀರದಿಂ ಮುಡಿಪಿ ಸುರಾ
ಸುರವಂದ್ಯರಾದರದಱಿಂ
ಧರೆಯೊಳ್ ಸನ್ಮತಿಗಳಪ್ಪವರ್ ಕೆಟ್ಟಪರೇ ೭೦

ತೊಡರ್ದು ಪರಿಗ್ರಹಯುಗದೊಳ್
ದೃಢನಲ್ಲದೆ ಬಿಟ್ಟು ಜೈನಪದಸೇವನೆಯಂ
ಮಡಿದಿಲ್ಲಿ ಸರ್ಪನಾದೈ
ಕಡುಮೂರ್ಖರ್ ಕಿಡುವರೆಂಬುದಾವುದು ಚೋದ್ಯಂ ೭೧

ಸುರುಚಿರ ರತ್ನಾವಳಿಯಿಂ
ಕರಮೊಪ್ಪುವ ರಾಜಭವನದೊಳ್ ಮುನ್ನಿರ್ದೈ
ದುರಿತದ ಫಲದಿಂ ಫಣಿಮಂ
ದಿರದೊಳ್ ನೀನೀಗಳಿರ್ದು ನಮೆವಂತಾದೈ ೭೨

ನರಪತಿ ನೀಂ ದಿವ್ಯಸ್ತ್ರೀ
ಯರ ನಡುವೆ ವಿಳಾಸವೊದವೆ ಮುನ್ನಿರ್ದೈ ನಿ
ಷ್ಠುರ ಪಾಪದಿಂದವೀಗಳ್
ಗರಳಧರರ ನಟ್ಟನಡುವೆ ನಿಲ್ವಂತಾದೈ ೭೩

ಯಿತೇ ? ೬೯. ಅರಸಿಯರೆಲ್ಲರೂ 'ಅರ್ಹಂತನ ಚರಣಗಳೇ ಶರಣು' ಎಂದು ವೀರತ್ವದಿಂದ ದೃಢವಾಗಿ ನಂಬಿ ಪ್ರಾಣಗಳನ್ನು ಬಿಟ್ಟು ದೇವದಾನವರಿಗೆಲ್ಲ ಪೂಜಾರ್ಹರಾದರು. ಆದ್ದರಿಂದ ಸನ್ಮತಿಗಳಾದವರು ಲೋಕದಲ್ಲಿ ಕೆಡುವುದಿಲ್ಲ. ೭೦. ಬಾಹ್ಯಪರಿಗ್ರಹ ಅಭ್ಯಂತರ ಪರಿಗ್ರಹಗಳೆರಡರಲ್ಲಿಯೂ ಸಿಕ್ಕಿಕೊಂಡು ದೃಢಚಿತ್ತನಲ್ಲದೆ ಜಿನಪಾದ ಸೇವನೆಯನ್ನು ಕೈಬಿಟ್ಟು ಸತ್ತು ಇಲ್ಲಿ ಹಾವಾದೆಯಯ್ಯಾ ! ಬಹಳ ಹಟಮಾರಿಗಳು ಕೆಡುವರೆಂಬುದರಲ್ಲಿ ಆಶ್ಚರ್ಯವೇನಿದೆ ? ೭೧. ಸುಂದರವಾದ ರತ್ನಸಮೂಹಗಳಿಂದ ಶೋಭಿಸುವ ಅರಮನೆಯಲ್ಲಿ ಹಿಂದೆ ಇರುತ್ತಿದ್ದೆ. ಪಾಪದ ಫಲದಿಂದ ಈಗ ಹಾವುಗಳ ಮಂದಿರದಲ್ಲಿ ಇದ್ದು ಕೃಶಿಸುವಂತಾದೆ. ೭೨. ನೀನು ರಾಜ ! ಶ್ರೇಷ್ಠರಾದ ಸ್ತ್ರೀಯರ ನಡುವೆ ಹೆಚ್ಚಾದ ಸೊಬಗಿನಿಂದ ಇರುತ್ತಿದ್ದ ನೀನು ಕ್ರೂರವಾದ ಪಾಪದ ದೆಸೆಯಿಂದ ಈಗ ವಿಷಧರಗಳಾದ ಸರ್ಪಗಳ ನಡುವೆ ನಿಲ್ಲುವಂತೆ ಆದೆಯಯ್ಯಾ ! ೭೩.

ಕಳವೆಯ ಕೂೞಂ ಸೊಗಯಿಪ
ತಿಳಿದುಪ್ಪಂಬೆರಸು ಲೀಲೆಯಿಂ ಮುನ್ನುಣ್ಬೈ
ಪುೞುಗಳನಿಲಿಗಳನಾಯ್ದಾ
ಯ್ದುೞಲೊಳಮೇವಮ್ಮ ಈಗ ತಿಂಬಂತಾದೈ ೭೪

ಮೃದು ಶಯ್ಯೆಯೊಳಂಗನೆಯರ್
ಪದಪಿಂದಂ ಸೋಂಕೆ ರಾಗದಿಂ ಪವಡಿಸುವೈ
ಮುದಮೊದವೆ ಮುನ್ನಮೀಗಳ್
ಮೃದುವಲ್ಲದ ಪರಲ ಮೇಲೆ ಪಡುವಂತಾದೈ ೭೫

ಈಗಳಿನ ಕಷ್ಟತನಮುಮ
ನೋಗಡಿಸದೆ ಮುನ್ನಮಾದ ಮಹಿಮೆಯುಮಂ ನೀಂ
ಬೇಗಂ ಚಿಂತಿಸಿ ಬಿಡುವುದು
ಭೋಗದ ದೇಹದ ತೊಡರ್ಪುಮಂ ಮೋಹಮುಮಂ ೭೬

ತನುವಿನ ಧನವಿನ ಪೆಂಡಿರ
ತನಯನ ಕಡುಮೋಹದಿಂದೆ ನೀನಿಂತಾದೈ
ವಿನಯಪರನಾಗಿ ಮುನ್ನಿನ
ವನಿತುಮನಿಂಬಾಗಿ ಬಿಟ್ಟು ನಿರ್ಮಳನಾಗೈ ೭೭

ನೆಲ್ಲಕ್ಕಿಯ ಅನ್ನವನ್ನು ಸೊಗಸಾದ ತಿಳಿಯಾದ ತುಪ್ಪದೊಡನೆ ಆನಂದವಾಗಿ ಹಿಂದೆ ಊಟ ಮಾಡುತ್ತಿದ್ದೆ. ಈಗ ನೀನು ಹುಳುಗಳನ್ನೂ ಇಲಿಗಳನ್ನೂ ಹುಡುಕಿ ಕಷ್ಟದಿಂದ ತಿನ್ನುವ ದುರ್ಗತಿಗೆ ಗುರಿಯಾದೆ! ೭೪. ಮೆತ್ತನೆಯ.ಹಾಸಿಗೆಯ ಮೇಲೆ ಹೆಂಡಿರು ಪ್ರೀತಿಯಿಂದ ಸೋಕುತ್ತಿರಲು ಸಂತೋಷವಾಗಿ ಪವಡಿಸುತ್ತಿದ್ದೆ. ಈಗ ಸಂತೋಷಕರವಲ್ಲದ ಕಲ್ಲುಗಳ ಮೇಲೆ ಬಿದ್ದಿರುವ ಹಾಗಾದೆಯಯ್ಯಾ ! ೭೫. ಈಗಿನ ಅಲ್ಪತನವನ್ನು ಅಸಹ್ಯಪಟ್ಟುಕೊಳ್ಳದೆ, ಹಿಂದೆ ಒದಗಿದ್ದ ಹಿರಿಮೆಯನ್ನು ನೀನು ಭಾವಿಸು. ಬೇಗ ಚಿಂತಿಸುತ್ತ ಭೋಗದ ಮೇಲಿನ ಆಸೆಯನ್ನೂ ದೇಹದ ತೊಡರನ್ನೂ, ಮೋಹವನ್ನೂ ಬಿಡಬೇಕು. ೭೬. ದೇಹ, ಧನ, ಹೆಂಡಿರು, ಮಕ್ಕಳು-ಇವರೆಲ್ಲರ ಮೇಲಿನ ವಿಶೇಷವಾದ ಮೋಹದ ದೆಸೆಯಿಂದ ನೀನು ಹೀಗಾದೆಯಯ್ಯಾ ! ವಿನಯವುಳ್ಳವನಾಗಿ ಮುಂಚಿನದಷ್ಟನ್ನೂ ನಿಶ್ಚಿಂತೆಯಿಂದ ಸಂಪೂರ್ಣವಾಗಿ ಬಿಟ್ಟು ಪರಿಶುದ್ಧನಾಗು. ೭೭. ವಿಷಯಸುಖಗಳ

ವಿಷಯಂಗಳ ಕಾಂಕ್ಷೆಯಿನೆಲೆ
ವಿಷಧರನಾಗಿರ್ದಯಿನ್ನುಮತಿಲೋಲತೆಯಿಂ
ವಿಷಮಂ ತಾಳ್ದಿದೆಯಪ್ಪೊಡೆ
ವಿಷಮಮಿದೆನಿಸಿರ್ದ ನರಕವಾರಿಧಿಗಿೞಿವೈ ೭೮

ಗದ್ಯ॥ ಎಂದು ಪೇೞ್ವುದುಮುಪರಿಚರನಪ್ಪ ಪೆರ್ಬಾವು ಜಾತಿಸ್ಮರನಾಗಿ ತನ್ನ ಮುನ್ನಿನ ಭವಮನಱಿದು ಗುಹೆಯ ಬಾಗಿಲ್ಗೆ ಬಂದು ಕಿವಿಯಾಂತನಂತವೀರ್ಯ ಮಹಾರಾಜನ ಮಾತುಗಳಂ ಕೇಳುತ್ತುಮಿರ್ಪುದುಂ ದೇವಲೋಕದೊಳ್ ಪುಟ್ಟಿದರಸಿಯರ್ ನಾಲ್ವರುಂ ಪರಿಗ್ರಹ ಕಾಂಕ್ಷೆಯಿಂ ಸ್ವಸ್ವಾಮಿಯಪ್ಪುಪರಿಚರನಾರ್ತಧ್ಯಾನದಿಂ ಸತ್ತು ಪೆರ್ಬಾವಾಗಿ ಪುಟ್ಟಿರ್ದುದನವಧಿಜ್ಞಾನದಿಂದಱಿದು ಧರ್ಮವಾತ್ಸಲ್ಯದಿಂ ಬೋಧಿಸಲೆಂದು ಮನೋಹರೋದ್ಯಾನವನಕ್ಕೆ ದೇವಲೋಕದಿಂದಿೞಿದು ಮುನ್ನಿನ ರೂಪಿಂ ಬಂದು ಗುಹೆಯ ಬಾಗಿಲೊಳಿರ್ದ ಪಾವಿಂಗೆ ಮೃದುನಿನಾದದಿಂ ಧರ್ಮಮನಿಂತೆಂದು ಪೇೞ್ದರ್ ೭೯

ಕಿಡುವ ಪರಿಗ್ರಹಯುಗಮಂ
ಪಿಡಿದು ದುರಾಚಾರ ನಿನ್ನ ಪಾಪೋದಯದಿಂ
ಕಡುದುಃಖಾಬ್ಧಿಯೊಳಿರ್ಪುದ
ನೊಡರಿಸಿ ಪಾವಾಗಿ ಪುಟ್ಟಿ ನಮೆವಂತಾದೈ ೮೦

ಆಸೆಯಿಂದ ನೀನು ವಿಷಧರ (ಹಾವು) ನಾಗಿದ್ದೀಯೆ, ಇನ್ನೂ ಅತಿಯಾದ ಲೋಲುಪತೆಯಿಂದ ಮನಸ್ಸಿನಲ್ಲಿ ಕೋಪದ್ವೇಷಗಳೆಂಬ ವಿಷವನ್ನು ಧರಿಸಿದೆಯಾದರೆ ಕ್ರೂರತಮವೆನಿಸಿರುವ ನರಕಸಮುದ್ರದೊಳಕ್ಕೆ ಇಳಿಯುವೆ." ೭೮. ಎಂದು ಹೇಳಲಾಗಿ ಹಿಂದೆ ಉಪರಿಚರನಾಗಿದ್ದ ಆ ಹೆಬ್ಬಾವು ಜನ್ಮಸ್ಮರಣೆಯುಳ್ಳುದಾಗಿ ತನ್ನ ಮುಂಚಿನ ಜನ್ಮದ ಕಥೆಯನ್ನು ತಿಳಿದು ಗವಿಯ ಬಾಗಿಲಿಗೆ ಬಂದು ಕಿವಿಯೊಡ್ಡಿ, ಅನಂತವೀರ್ಯ ಮಹಾರಾಜನ ಮಾತುಗಳನ್ನು ಕೇಳುತ್ತಿರಲಾಗಿ ದೇವಲೋಕದಲ್ಲಿ ಹುಟ್ಟಿದ್ದ ಅರಸಿಯರು ನಾಲ್ವರೂ ಪರಿಗ್ರಹದ ಆಸೆಯಿಂದ ತಮ್ಮ ಗಂಡನಾದ ಉಪರಿಚರನು ಆರ್ತಧ್ಯಾನದಿಂದ ಸತ್ತು ಹೆಬ್ಬಾವಾಗಿ ಹುಟ್ಟಿದ್ದುದನ್ನು ಅವಧಿಜ್ಞಾನದಿಂದ ತಿಳಿದು ಧರ್ಮದ ಪ್ರೀತಿಯಿಂದ ಅವನಿಗೆ ತಿಳಿಯಹೇಳುವುದಕ್ಕೆಂದು ಮನೋಹರೋದ್ಯಾನವನಕ್ಕೆ ದೇವಲೋಕದಿಂದ ಇಳಿದು ಬಂದು ಮೊದಲಿನ ರೂಪಧರಿಸಿ ಗವಿಯ ಬಾಗಿಲ ಬಳಿ ನಿಂತು ಆ ಹಾವಿಗೆ ಮೆಲ್ಲನೆಯ ಮಾತುಗಳಿಂದ ಧರ್ಮವನ್ನು ಹೀಗೆ ಹೇಳಿದರು : ೭೯. ನಶ್ವರವಾದ ಆಸ್ತಿಯನ್ನು ಹಿಡಿದು, ಓ ದುರಾಚಾರನೆ ! ನಿನ್ನ ಪಾಪದ ಹೆಚ್ಚಿಗೆಯಿಂದ ತೀವ್ರವಾದ ದುಃಖಸಮುದ್ರದಲ್ಲಿ ಇರುವಂತೆ ನಡೆದು ಹಾವಾಗಿ ಹುಟ್ಟಿ ಕೊರಗುವಂತಾದೆ. ೮೦. ಕೆಟ್ಟ

ತೊಱೆವುದು ದುಷ್ಪರಿಗ್ರಹಮನೆಂದು ಜಿನೋಕ್ತಿಯನೆಮ್ಮ ಪೇೞ್ದುದಂ
ಮಱೆದು ಪರಿಗ್ರಹಕ್ಕೆಳಸಿ ದುರ್ಮತಿಯಿಂ ಮರಣಕ್ಕೆ ಗೂಡುಗೊಂಡ
ಱಿತವನೊಕ್ಕು ಸತ್ತು ದುರಿತೋದಯದಿಂ ಫಣಿಯಾಗಿ ಪುಟ್ಟಿದೈ
ಕುಱಿ ಪೆಱರಾರೊ ನೀನೆ ಕುಱಿ ನೀನೆ ಜಡಾತ್ಮನೆ ನೀನೆ ಗಾಂಪನೈ ೮೧

ಮುನ್ನೆಮ್ಮ ಪೇೞ್ದ ಧರ್ಮಮ
ದನ್ನೆನೆಯದೆ ತಿರಿಕಯೋನಿಯೊಳ್ ಪುಟ್ಟಿದೆಯಿ
ನ್ನಿನ್ನ ಮರುಳಾಟಮಂ ಬಿ
ಟ್ಟಿನ್ನತ ಜಿನಪಾದಪದ್ಮಮಂ ನೆನೆ ಮನದೊಳ್ ೮೨

ಜಿನಪಾದಪದ್ಮಮಂ ಬಿ
ಟ್ಟಿನಿತೊಂದಪಮಾನವೃತ್ತಿಗೊಳಗಾದೈ ನೀಂ
ಮನದೊಳ್ ಬಗೆಯದೆ ಪೆಱತಂ
ನೆನೆ ರಾಗದಿನಿಂದ್ರವಂದ್ಯನಂಘ್ರಿದ್ವಯಮಂ ೮೩

ಗದ್ಯ॥ ನಿಷ್ಕಾರಣಂ ತೆರಳಿಯ ಪುೞುವಿನಂತೆ ನಿನ್ನಂ ನೀನೆ ದುಷ್ಪರಿಣಾಮದಿಂ ಸುತ್ತಿಕೊಂಡು ಬೆಟ್ಟದೊಳ್ ಪೋರ್ವ ಕೋಡಿಲ್ಲದ ಕಾಡಾನೆಯಂತೆ ಕೂಡದ ಸುಖಕ್ಕೆ ಬಯಸಿ ಸೇದೆಗಿಡದೆ, ಕಂಪಲೊಳ್ ಬಿರ್ದ ಪಶುವಿನಂತೆ ಸಂಸಾರದೊಳ್ ಬಿರ್ದು ಸವೆಯದೆ, ಮೋನಂಗೊಂಡ ಚಪಳ

ಪರಿಗ್ರಹವನ್ನು ತೊರೆಯಬೇಕೆಂದು ನಾವು ಹೇಳಿದ ಜಿನೋಕ್ತಿಯನ್ನು ಮರೆತು ಪರಿಗ್ರಹಕ್ಕೆ ಆಸೆಪಟ್ಟು ದುರ್ಬುದ್ಧಿಯಿಂದ ಮರಣಕ್ಕೆ ಆಶ್ರಯಕೊಟ್ಟು ವಿವೇಕವನ್ನು ಬಿಟ್ಟು ಸತ್ತೆ. ಪಾಪಾಧಿಕ್ಯದಿಂದ ಹಾವಾಗಿ ಹುಟ್ಟಿದೆ. ಇನ್ನು ಬೇರೆ ಕುರಿ ಯಾರು ? ನೀನೇ ಕುರಿ ! ನೀನೇ ಜಡಬುದ್ಧಿ ! ನೀನೇ ಗಾಂಪ (ದಡ್ಡ) ; ೮೧. ಮುಂಚೆ ನಾವು ಹೇಳಿದ ಧರ್ಮವನ್ನು ಸ್ಮರಿಸದೆ ತಿರ್ಯಕ್ ಜಾತಿಯಲ್ಲಿ ಹುಟ್ಟಿದೆ. ಇನ್ನಾದರೂ ನಿನ್ನ ಹುಚ್ಚಾಟವನ್ನು ಬಿಟ್ಟು ಮನಸ್ಸಿನಲ್ಲಿ ಜಿನಸ್ವಾಮಿಯ ಪಾದಕಮಲಗಳನ್ನು ಧ್ಯಾನಿಸು. ೮೨. ಜಿನಪಾದ ಕಮಲಗಳನ್ನು ಬಿಟ್ಟು ಇಷ್ಟೊಂದು ಅಪಮಾನಕರವಾದ ಜೀವನಕ್ಕೆ ಒಳಗಾದೆ. ನೀನು ಮನಸ್ಸಿನಲ್ಲಿ ಬೇರೆಯದೇನನ್ನೂ ಯೋಚಿಸದೆ ಆ ಇಂದ್ರಪೂಜ್ಯನಾದ ಜಿನೇಶ್ವರನ ಪಾದಯುಗಳವನ್ನು ಸ್ಮರಿಸು ೮೩. ಅಕಾರಣವಾಗಿ ತೆರಳಿಯ ಹುಳದ ಹಾಗೆ ನಿನ್ನನ್ನು ನೀನೇ ಈ ಕೆಟ್ಟ ಪರಿಣಾಮದಿಂದ ಸುತ್ತಿಕೊಂಡು ಬೆಟ್ಟದ ಸಂಗಡ ಹೋರಾಡುವ ಕೊಂಬಿಲ್ಲದ ಆನೆಯಂತೆ ಲಭಿಸದೇ ಇರುವ ಸುಖವನ್ನು ಕೋರಿ ಆಯಾಸ ಪಡದೆ ಕೆಸರಿನಲ್ಲಿ ಬಿದ್ದ ದನದಂತೆ ಸಂಸಾರದಲ್ಲಿ ಬಿದ್ದು ಸವೆಯದೆ, ಮೌನವನ್ನು ವಹಿಸಿದ ಚಪಲಚಿತ್ತನ ಹಾಗೆ ತಿರ್ಯಕ್‌ಗತಿಯಲ್ಲಿ ಹುಟ್ಟಿ ಮಲಮಲನೆ ಮರುಗದೆ,

ನಂತೆ ತಿರಿಕಯೋನಿಯೊಳ್ ಪುಟ್ಟಿ ಮಲಮಲಮಱುಗದೆ ಸಾಲಂಗೊಂಡ ಬಡವನಂತೆ ಸ್ತ್ರೀಸುಖ ಕ್ಕೆಳಸಿ ಮನದೊಳ್ ಜಱಿಯದೆ, ಮಾರ್ಬಲಮಂ ಕಂಡ ಪಂದೆಯಂತೆ ಸದ್ಧರ್ಮದೊಳಾದ ನಡೆ ವಳಿಗೆ ಬೆದಱದೆ, ತುಡುಗುಣ್ಬ ತೊಟ್ತ್ತಿನಂತೆ ಕೊಲ್ಲದ ವ್ರತಕ್ಕಲಸಿ ನಡುಗದೆ, ಸುರಗಿಯಂ ಕಂಡ ಪುಲ್ಲೆಯಂತೆ ಸತ್ಯವ್ರತಕ್ಕಾಱದೋಸರಿಸದೆ, ತೇಟಱ್ತಿಂದ ಮಗವಿನಂತೆ ಕೊಲ್ಲದ ವ್ರತಕ್ಕೆ ಬೇಸತ್ತು ದೆಸೆಗಿಡದೆ, ಕಳವುವೋದ ಮನೆಯಂತೆ ಬ್ರಹ್ಮವ್ರತಕ್ಕೆ ಬೆರ್ಚಿ ತಲ್ಲಣಿಸದೆ, ಪುಲ್ಲ ಕಡ್ಡಿಯಂ ಕಂಡ ತೃಣಗ್ರಾಹಿಯಪ್ಪನಿಲದಂತೆ ಗುಣವ್ರತಕ್ಕೆ ಸಂಚಲಿಸದೆ, ತೂಂಕಡಿಸುವ ವೃದ್ಧ ನಂತೆ ಶಿಕ್ಷಾವ್ರತಕ್ಕೆ ಭಯಸ್ಥನಾಗಿ ಜೋಲದೆ, ಪಱುಗೋಲೊಳಿರ್ದಂಬಿಗನಂತೆ ಗುರುವಚನವಂ ಬಿಟ್ಟು ಪೋಗದೆ, ಮೊದಲ್ಗೆಟ್ಟ ಪರದನಂತೆ ಘಳಿಗೆಗೊಂದಂ ನೆನೆಯದೆ, ಶೃಂಗಾರಕರ್ತಿಗನಪ್ಪ ಬಡವನಂತೆ ಚಿಂತಿಸಿ ಕಿಡದೆ, ವನಿತೆಗೋತ ಋಷಿಯಂತೆ ಶುಭಧ್ಯಾನದಿಂ ಕಿಡದೆ, ಕಾಲೂರ ಸೂಳೆ ಯಂತೆ ಬಱಿದೆ ದುರ್ಮತಕ್ಕೆ ತೊನೆಯದೆ, ಸನ್ಮಾರ್ಗಧಾರಿಯಾಗಿ ಮುನ್ನಿನವಗುಣಂಗಳಂ ಬಿಟ್ಟು ನಿರ್ಮಳಚಿತ್ತದಿಂ ಧರ್ಮದೊಳ್ ಕೂಡಿ ಜಿನಪಾದಸೇವೆಯೊಳಿರ್ದು ಸ್ವರ್ಗಾಪವರ್ಗ ಸುಖಕ್ಕೆ ಭಾಜನನಾಗೆಂದು ತಮ್ಮ ವೀರವೃತ್ತಿಯಿಂ ಪಡೆದ ದೇವಗತಿಯುಮಂ ಭೀತಮನದಿಂದ ನಿವೃತ್ತಿಯಿಂದುಪರಿಚರಮಹಾರಾಜಂ ಪಡೆದ ತಿರಿಕಗತಿಯು ಪಡೆಪುಮಂ ಪೇೞ್ದು ತದನಂತರಂ ೮೪

ಸಾಲ ತೆಗೆದುಕೊಂಡ ಬಡವನ ಹಾಗೆ, ಸ್ತ್ರೀ ಸುಖಕ್ಕೆ ಆಸೆಪಟ್ಟು ಮನಸ್ಸಿನಲ್ಲಿ ಕುಗ್ಗದೆ ಶತ್ರುಬಲವನ್ನು ಕಂಡ ಹೇಡಿಯ ಹಾಗೆ ಸದ್ಧರ್ಮದಲ್ಲಿ ಆಗಬೇಕಾದ ನಡವಳಿಕೆಗೆ ಭಯ ಪಡದೆ, ಕದ್ದು ತಿನ್ನುವ ದಾಸಿಯಂತೆ, ಕೊಲ್ಲದ ವ್ರತಕ್ಕೆ ಸೋಮಾರಿತನಪಟ್ಟು ಹೆದರದೆ, ಕತ್ತಿಯನ್ನು ಕಂಡ ಜಿಂಕೆಯ ಹಾಗೆ ಸತ್ಯವ್ರತಕ್ಕೆ ಅಶಕ್ತನಾಗದೆ, ಹಿಂಜರಿಯದೆ, ಚೇಳುಕಚ್ಚಿದ ಮಗುವಿನ ಹಾಗೆ ಕೊಲ್ಲದ ವ್ರತಕ್ಕೆ ಬೇಸತ್ತು ದಿಕ್ಕುಗೆಡದೆ, ಕಳ್ಳತನವಾದ ಮನೆಯಂತೆ ಬ್ರಹ್ಮವ್ರತಕ್ಕೆ (ಬ್ರಹ್ಮಚರ್ಯ) ಗಾಬರಿಗೊಳ್ಳದೆ, ಹುಲ್ಲುಕಡ್ಡಿಯನ್ನು ಕಂಡ (ಹುಲ್ಲನ್ನೆತ್ತುವಂಥ) ಗಾಳಿಯಂತೆ ಗುಣವ್ರತಕ್ಕೆ ಚಲಿಸದೆ, ತೂಕಡಿಸುವ ಮುದುಕ ನಂತೆ ಶಿಕ್ಷಾವ್ರತಕ್ಕೆ ಭಯಪಟ್ಟು ಸೋಲದೆ, ಹರಿಗೋಲಿನಲ್ಲಿರುವ ಅಂಬಿಗನ ಹಾಗೆ ಗುರುವಾಕ್ಯವನ್ನು ಬಿಟ್ಟುಹೋಗದೆ, ಬಂಡವಾಳ ಕಳೆದುಕೊಂಡ ವರ್ತಕನ ಹಾಗೆ ಕ್ಷಣಕ್ಕೊಂದು ಯೋಚನೆ ಮಾಡದೆ, ಶೃಂಗಾರಕ್ಕೆ ಆಸೆಪಡುವ ಬಡವನಂತೆ ಯೋಚಿಸಿ ಕೆಡದೆ, ಹೆಂಗಸಿಗೆ ಒಲಿದ ಋಷಿಯ ಹಾಗೆ ಶುಭಧ್ಯಾನವನ್ನು ಬಿಡದೆ, ಚಿಕ್ಕಊರಿನ ಸೂಳೆಯಂತೆ ವೃಥಾ ಕೆಟ್ಟಮತಕ್ಕೆ ಒಲಿಯದೆ, ಸನ್ಮಾರ್ಗವನ್ನು ಹಿಡಿದು ಮುಂಚಿನ ದೋಷಗಳನ್ನು ಬಿಟ್ಟು ಶುದ್ಧಚಿತ್ತದಿಂದ ಧರ್ಮದಲ್ಲಿ ಸೇರಿ ಜಿನಪಾದಸೇವೆ ಮಾಡುತ್ತ ಸ್ವರ್ಗ ಮತ್ತು ಮೋಕ್ಷಸುಖಕ್ಕೆ ಪಾತ್ರನಾಗು" ಎಂದು ತಮ್ಮ ವೀರ ಪ್ರವೃತ್ತಿಯಿಂದ ಪಡೆದ ದೇವಗತಿಯನ್ನೂ ಮನಸ್ಸಿನ ಭಯದಿಂದ, ಧರ್ಮ ನಿವೃತ್ತಿ ಯಿಂದ ಉಪರಿಚರ ಮಹಾರಾಜನು ಪಡೆದ ತಿರ್ಯಕ್‌ಗತಿಯನ್ನೂ ಹೇಳಿದರು. ೮೪.

ಉರದೊಳ್ ಮುತ್ತಿನಹಾರವೊಪ್ಪೆ ಶಿರದೊಳ್ ಮಿಕ್ಕಿರ್ದ ರತ್ನಾವಳೀ
ಸ್ಫುರಿತೋದ್ಯನ್ಮಕುಟಂ ಪಳಂಚೆ ಪೊಳೆಪಿಂ ಚೆಲ್ವಾಗಿ ಹಸ್ತಾಗ್ರದೊಳ್
ಕರಮಿಂಬಾಗಿರೆ ದಿವ್ಯರತ್ನವಳಯಂ ಸರ್ವಾಂಗದೊಳ್ ಭೂಷಣೋ
ತ್ಕರಮಲ್ಲಲ್ಲಿಗಮರ್ಕೆವೆತ್ತಿರೆ ಸುರರ್ ಲೋಕಕ್ಕಗುರ್ವಪ್ಪಿನಂ ೮೫

ಗದ್ಯ॥ ದಿವ್ಯಾಂಬರ ಭೂಷಣಾಲಂಕೃತರಾಗಿ ೮೬

ಇವರ್ಗಂ ಸೂರ್ಯಂಗಮೇನಂತರಮವನಿಯೊಳಾರ್ ನೋಟ್ಪೊಡಂ ತೇಜದೊಳ್ ಮ
ತ್ತಿವರ್ಗಂ ಚಂದ್ರಂಗಮೇನಂತರಮವನಿಯೊಳಾರ್ ನೋಟ್ಪೊಡಂ ಕಾಂತಿಯೊಳ್ ಮ
ತ್ತಿವರ್ಗಂ ಕಾಮಂಗಮೇನಂತರಮವನಿಯೊಳಾರ್ನೋಟ್ಪೊಡಂ ರೂಪಿನೊಳ್ ಭೂ
ಭುವನಕ್ಕಾಶ್ಚರ್ಯಮೆಂಬಂತೊಗೆದು ಗಗನದೊಳ್ ನಿಂದರತ್ಯಂತ ಧೈರ್ಯರ್ ೮೭

ಗದ್ಯ॥ ಅಂತು ಮುಕ್ತಾಜಾಲ ಘಂಟಾಜಾಲಕಂಗಳಿಂದೊಪ್ಪುವ ವಿಮಾನಾರೂಢರಾಗಿ ಸಮುದ್ರರವಕ್ಕಿಣೆಯೆನಿಸಿ ಘೂರ್ಣಿಸುವ ದೇವದುಂದುಭಿವೆರಸು ಗಗನತಳದೊಳ್ ನಾಲ್ವರ್ ದೇವರುಂ ತಂತಮ್ಮ ವಿಭೂತಿಯುಮಂ ಪರಿಗ್ರಹನಿವೃತ್ತಿಯೊಳಾದ ಮಹಾಫಲಮುಮಂ ಪೇಟ್ದು ದೇವಲೋಕಕ್ಕೆ ಪೋದರಿತ್ತಲನಂತವೀರ್ಯಮಹಾರಾಜನುಂ ನೆರೆದ ನೆರವಿಯುಂ ವಿಸ್ಮಯಂಬಟ್ಟು ೮೮

ಆ ತರುವಾಯ ಅವರು ಲೋಕಕ್ಕೆ ಆಶ್ಚರ್ಯವಾಗುವ ಹಾಗೆ ಎದೆಯ ಮೇಲೆ ಮುತ್ತಿನ ಹಾರ, ತಲೆಯ ಮೇಲೆ ರತ್ನಸಮೂಹದ ಕಾಂತಿ ಮಿರುಗುತ್ತಿರುವ ಕಿರೀಟ, ಕೈಯಲ್ಲಿ ಹೊಳೆಯುತ್ತ ಬಹಳ ಅಂದವಾಗಿರುವಂಥ ರತ್ನಕಂಕಣಗಳು, ಸರ್ವಾಂಗಗಳಲ್ಲಿಯೂ ಭೂಷಣಗಳ ಸಮೂಹವು ಅಲ್ಲಲ್ಲಿಗೆ ಹೊಂದಿಕೆಯಾಗಿರಲು, ದಿವ್ಯವಸ್ತ್ರ, ಆಭರಣಗಳಿಂದ ಅಲಂಕಾರ ಮಾಡಿಕೊಂಡವರಾಗಿ ಗಗನತಳದಲ್ಲಿ ನಿಂತರು ; ಪ್ರಪಂಚಕ್ಕೆ ಆಶ್ಚರ್ಯವಾಯಿತು ! "ಇವರಿಗೂ ಸೂರ್ಯನಿಗೂ ಏನು ವ್ಯತ್ಯಾಸ, ತೇಜಸ್ಸಿನಲ್ಲಿ ? ಇನ್ನು ಕಾಂತಿಯಲ್ಲಿ ಇವರಿಗೂ ಚಂದ್ರನಿಗೂ ಏನು ಭೇದ ? ಇನ್ನು ರೂಪದಲ್ಲಿ ಕಾಮಣ್ಣನಿಗೂ ಇವರಿಗೂ ಏನು ಭೇದ ?" ಎನ್ನುವಂತೆ ಆಯಿತು. (೮೫–೮೭) ಹಾಗೆ ಮುತ್ತಿನ ಹಾರಗಳಿಂದಲೂ ಘಂಟಿಕೆಗಳ ಸಾಲುಗಳಿಂದಲೂ ಶೋಭಿಸುವ ವಿಮಾನಗಳನ್ನು ಏರಿ, ಸಮುದ್ರದ ಶಬ್ದಕ್ಕೆ ಸಮಾನವೆನ್ನಿಸಿಕೊಂಡು ಘೂರ್ಣಿಸುವ ದೇವಲೋಕದ ನಗಾರಿಗಳ ಧ್ವನಿಯಿಂದ ಕೂಡಿ ಗಗನದಲ್ಲಿ ನಿಂತ ನಾಲ್ವರು ದೇವರುಗಳೂ ತಮ್ಮ ತಮ್ಮ ವೈಭವವನ್ನೂ ಪರಿಗ್ರಹನಿವೃತ್ತಿಯ ದೆಸೆಯಿಂದ ಲಭಿಸಿದ ದೊಡ್ಡ ಫಲವನ್ನೂ ಹೇಳಿ ದೇವಲೋಕಕ್ಕೆ ಹೋದರು. ಇತ್ತ ಅನಂತವೀರ್ಯ ಮಹಾರಾಜನೂ ಸೇರಿದ್ದ ಸಮೂಹವೂ ಆಶ್ಚರ್ಯಪಟ್ಟರು. ೮೮. ಜಿನತತ್ವದ ಮಾತುಗಳನ್ನು ಕೇಳಿ ಜೈನಮತವನ್ನು ಚೆನ್ನಾಗಿ

ಜಿನತತ್ತ್ವೋಕ್ತಿಯೊಳೊಂದಿ ಜೈನಮತಮಂ ಲೇಸಾಗಿ ಸಚ್ಚಿತ್ತದಿಂ
ಮನದೊಳ್ ಸಂಶಯಮಾಗದಾತ್ಮಹಿತಮೆಂದಾವಂ ಮನಂಗೊಂಡು ಸ
ಜ್ಜನರಂ ಮೆಚ್ಚಿಸಿ ಜೀಯ ಜೀಯೆನಿಸಿ ತಾಳ್ದಿರ್ದಾ ಮಹಾತ್ಮಂಗೆ ದೇ
ವನಿಕಾಯಂ ಬೆಸಕೆಯ್ವುದಚ್ಚರಿಯೆ ದೇವೇಂದ್ರತ್ವಮಾಶ್ಚರ್ಯಮೋ ೮೯

ಸಂದಾಣುವ್ರತಮಯ್ದುಮಂ ವಿಮಳ ಸದ್ರತ್ನಗಳೆಂದಂದು ಸಾ
ನಂದಂ ತಾಳ್ದಿ ಚತುಷ್ಕಷಾಯ ಭಟರಂ ತೂಳ್ದಟ್ಟಿ ಪಾಪಾರಿಯಂ
ಪೊಂದಲ್ಕೀಯದೆ ಕೂಡಿ ಸತ್ಪುರುಷರೊಳ್ ಜೈನಾಂಘ್ರಿಯಂ ತಾಳ್ದಿ ನಿಂ
ದಂದಕ್ಕುಂ ದಿವಿಜೇಂದ್ರದಿವ್ಯಸುಖಮುಂ ನಿರ್ವಾಣಸಾಮ್ರಾಜ್ಯಮುಂ ೯೦

ಗದ್ಯ॥ ಎಂದು ಜಿನಧರ್ಮದೊಳಾದ ವಿಭವಮುಮಂ ಜಿನಪಾದಸೇವನೆಯ ಪೆಂಪುಮಂ ಪೊಗಟ್ದು ಮಗುಟ್ದು ಬಂದು ಸಾರಸ್ವತ ಮುನಿನಾಥಂಗೆ ಪೊಡೆಮಟ್ಟು ನಿಮ್ಮ ಬೆಸಸಿದಂತೆಲ್ಲಾ ಕಾರ್ಯಮಾದುದಿನ್ನಾ ಪಾವಿಂಗಾಯುಷ್ಯಮೆನಿತುಂಟೆಂದು ಬೆಸಗೊಳ್ವುದುಂ ಮುನಿನಾಥ ನಿಂತೆಂದಂ ೯೧

ನರಪತಿ ಪದಿನ್ಯೆದು ದಿನಂ
ಬರೆಗಂ ಫಣಿಗುಂಟು ಜೀವಿತಂ ಮಿಗಿಲಿಲ್ಲೆಂ
ದರೆಗೇಳಗೆಯುಮನೆ ಭೂಮೀ
ಶ್ವರನಱಿದಾಶ್ಚರ್ಯಮೆಂದು ಮತ್ತಿಂತೆಂದಂ ೯೨

ಒಳ್ಳೆಯ ಮನಸ್ಸಿನಿಂದ ಸಂಶಯ ಹುಟ್ಟದಂತೆ ಒಪ್ಪಿ, ಅದು ಆತ್ಮಹಿತವಾದದ್ದೆಂದು ಯಾವನು ಮೆಚ್ಚಿ ಸಜ್ಜನರನ್ನು ಮೆಚ್ಚಿಸಿ 'ಜೀಯ ಜೀಯ' ಎನ್ನುವಂತೆ ಜೈನಧರ್ಮವನ್ನು ಧರಿಸುವನೋ, ಆ ಮಹಾತ್ಮನಿಗೆ ದೇವತೆಗಳು ಸೇವೆ ಮಾಡುವುದು ಆಶ್ಚರ್ಯವೇ? ದೇವೇಂದ್ರಪದವಿ ದೊರೆಯುವುದು ತಾನೆ ಆಶ್ಚರ್ಯವೆ ? ೮೯. ಶ್ರೇಷ್ಠವಾದ ಐದು ಅಣುವ್ರತಗಳನ್ನೂ, ಶುದ್ಧವಾದ ಒಳ್ಳೆಯ ರತ್ನಗಳೆಂದು ಹೇಳುವಾಗ, ಆನಂದದಿಂದ ಧರಿಸಿ ನಾಲ್ಕು ಕಷಾಯಗಳೆಂಬ ಭಟರನ್ನು ಹೊಡೆದಟ್ಟಿ ಪಾಪವೆಂಬ ಶತ್ರುವನ್ನು ಹೊಂದಿಕೊಳ್ಳಲು ಅವಕಾಶ ಕೊಡದೆ, ಸಜ್ಜನರೊಡನೆ ಸೇರಿ ಜೈನಾಂಘ್ರಿಗಳನ್ನು ಮನಸ್ಸಿನಲ್ಲಿ ಧರಿಸಿ ನಿಂತಾಗ ದೇವೇಂದ್ರನ ದಿವ್ಯಸೌಖ್ಯವೂ ಮೋಕ್ಷ ಸಾಮ್ರಾಜ್ಯವೂ ಲಭಿಸುತ್ತವೆ. ೯೦. ಹೀಗೆ ಜಿನಧರ್ಮದ ವೈಭವವನ್ನೂ ಜಿನಪಾದಸೇವೆಯ ಆಧಿಕ್ಯವನ್ನೂ ಹೊಗಳಿ, ಮತ್ತೆ ಬಂದು ಸಾರಸ್ವತ ಮುನಿನಾಥನಿಗೆ ಅಡ್ಡಬಿದ್ದು "ನೀವು ಹೇಳಿದಂತೆಯೇ ಎಲ್ಲಾ ಕೆಲಸವೂ ಆಯಿತು. ಇನ್ನು ಆ ಹಾವಿಗೆ ಆಯುಷ್ಯವೆಷ್ಟಿದೆಯೆಂದು ಕೇಳಲು ಮುನಿನಾಥನು ಹೀಗೆ ಹೇಳಿದನು. ೯೧. "ರಾಜನೆ, ಇನ್ನು ಹದಿನೈದು ದಿನಗಳವರೆಗೂ ಆ ಹಾವಿಗೆ ಜೀವಿತವಿದೆ. ಇನ್ನು ಅರ್ಧಗಳಿಗೆಯೂ ಹೆಚ್ಚಾಗಿಲ್ಲ !" ಹೀಗೆನ್ನಲು ರಾಜನು ಕೇಳಿ ಆಶ್ಚರ್ಯಪಟ್ಟು ಪುನಃ ಹೀಗೆಂದನು : ೯೨. "ಹಾಗಾದರೆ ತಾವು ಅಲ್ಲಿಗೆ ದಯ

ಗದ್ಯ॥ ಅಂತಾದೊಡೆ ನಿಮ್ಮಡಿ ನೀವಲ್ಲಿಗೆ ಬಿಜಯಂಗೆಯ್ದು ತತ್ಫಣಗೆ ತೊಱವಿಯುಂ ಕುಡುವುದೆಂಬುದುಂ ಸಾರಸ್ವತಮುನಿನಾಥಂ ಸಕಲಮುನಿವರರ್ವೆರಸು ಸರ್ಪಾಶ್ರಯ ಗುಹೆಗೆ ವಂದು ಬಾಗಿಲೊಳಿರ್ದು ಪೆರ್ಮಾವಿಂಗೆ ಧರ್ಮಂ ಪೇೞ್ದು ಮುಕ್ತಿಲಕ್ಷ್ಮಿಯ ಕುಡುವ ಪಂಚರತ್ನಮನಿಸುವ ಪಂಚಾಣುವ್ರತಮಂ ಕಾರುಣ್ಯದಿಂ ಕೊಟ್ಟು ಮೆಲ್ಲನಿಂತೆಂದರ್ ೯೩

ನಿನಗಾಯುಷ್ಯಂ ಪಿರಿದಿ
ಲ್ಲನುನಯದಿಂ ಮೇಲೆ ನೋಡ ಪದಿನೈದು ದಿನಂ
ಮನವಿಕ್ಕಿ ಕುಂದಿ ಜಱಿಯದೆ
ನಿನಗಪ್ಪುದಿದೊಳ್ಳಿತಾಗೆ ನೆನೆ ನೀಂ ಮನದೊಳ್ ೯೪

ಮುನ್ನಿನ ಭವದೊಳ್ ನೀನ
ತ್ಯುನ್ನತನೈ ರಾಜಪುತ್ರನೈ ದುರ್ಮನದಿಂ
ದೆನ್ನಸಿರಿಯೆಂದು ಮೋಹಿಸಿ
ಪನ್ನಗನಾದೈ ಜಡಾತ್ಮ ದುರಿತೋದಯದಿಂ ೯೫

ನೀನಱಿಯು ನಿನ್ನ ವನಿತೆಯು
ರೇನುಮನಟ್ಕರ್ತು ನೆನೆದು ಕುದಿಯದೆ ಜಿನನಂ
ಧ್ಯಾನಿಸಿ ತತ್ಫಲದಿಂದಮ
ನೂನ ಸುಖಾಸ್ಪದಮನೆಯ್ದಿದರ್ ಮಱುಭವದೊಳ್ ೯೬

ಮಾಡಿಸಿ ಆ ಹಾವಿಗೆ ವೈರಾಗ್ಯವನ್ನು ಉಪದೇಶಿಸಬೇಕು" (ಸಂನ್ಯಸನ ವಿಧಿಯನ್ನು ಹೇಳಬೇಕು) ಎಂದನು. ಆಗ ಸಾರಸ್ವತ ಮುನಿರಾಜನು ಸಮಸ್ತ ಮುನಿಗಳೊಡನೆ ಕೂಡಿ ಸರ್ಪಾಶ್ರಯದ ಗವಿಗೆ ಬಂದು ಬಾಗಿಲಲ್ಲಿ ಇದ್ದು ಹೆಬ್ಬಾವಿಗೆ ಧರ್ಮವನ್ನು ಹೇಳಿ ಮೋಕ್ಷಲಕ್ಷ್ಮಿಯನ್ನು ಕೊಡುವ ಐದು ರತ್ನಗಳಂಥ ಐದು ಅಣುವ್ರತಗಳನ್ನು ಕರುಣೆಯಿಂದ ಉಪದೇಶಿಸಿ ಮೆಲ್ಲಗೆ ಹೀಗೆಂದರು. ೯೩ : "ನಿನಗೆ ಆಯುಸ್ಸು ಇನ್ನು ಹೆಚ್ಚಿಗೆ ಇಲ್ಲ. ಪ್ರೀತಿಯಿಂದ ಮೇಲೆ ನೋಡು ! (ಊರ್ಧ್ವಮುಖಿಯಾಗು) ಹದಿನೈದು ದಿನಗಳ ಕಾಲ ಮನಸ್ಸಿಟ್ಟು ಕುಗ್ಗಿ ಭಯಪಡದೆ ಇದನ್ನು ಮನಸ್ಸಿನಲ್ಲಿ ಚೆನ್ನಾಗಿ ಧ್ಯಾನಿಸು ೯೪. ಹಿಂದಿನ ಜನ್ಮದಲ್ಲಿ ನೀನು ಅತ್ಯುನ್ನತನಾದ ರಾಜಪುತ್ರನಾಗಿದ್ದೆ. ಕೆಟ್ಟಮನಸ್ಸಿನಿಂದ 'ನನ್ನ ಸಂಪತ್ತು' ಎಂದು ಮೋಹಪಟ್ಟು ಹಾವಾದೆ. ಪಾಪದ ಹೆಚ್ಚಳದಿಂದ ಜಡಬುದ್ಧಿಯವನಾದೆ ! ೯೫. ನೀನು ತಿಳಿದುಕೊ ! ನಿನ್ನ ಹೆಂಡಿರು ಬೇರೆ ಏನನ್ನೂ ಆಸೆಯಿಂದ ನೆನೆಸಿಕೊಂಡು ದುಃಖಿಸದೆ ಜಿನೇಶ್ವರನನ್ನು ಧ್ಯಾನಿಸಿ ಆ ಫಲದಿಂದ ಈ ಜನ್ಮದಲ್ಲಿ ಕೊರತೆಯಿಲ್ಲದ ಸುಖಕ್ಕೆ ಆಶ್ರಯವಾದ ದೇವಲೋಕಕ್ಕೆ ಹೋದರು. ೯೬. ಆದಕಾರಣ ಜಿನಪಾದಸೇವೆ ಸೌಖ್ಯ ಮತ್ತು ಅಭ್ಯುದಯಗಳಿಗೆ

ಅದು ಕಾರಣದಿಂ ಸೌಖ್ಯಾ
ಭ್ಯುದಯಂ ಜಿನಪಾದಸೇವೆ ಮತ್ತುೞಿದವು ದುಃ
ಖದ ಪುತ್ತು ಚಿಂತೆಯಾಗರ
ಮೊದವಿದ ದುರ್ಗತಿಯ ದಾರಿ ನೋವಿನ ಮಡುಗಳ್ ೯೭

ಜಿನರೂಪಸ್ಮರಣೆಯೆ ಜೀ
ವನಿಕಾಯಕ್ಕಾರ್ಮೆಯಾತ್ಮಹಿತಮಘಹರಣಂ
ಜಿನನುತಮಪವರ್ಗಶ್ರೀ
ವನಿತೆಯ ತೊಡವಮರಪತಿಯ ಲಕ್ಷ್ಮಿಯ ತಿಲಕಂ ೯೮

ಗದ್ಯ॥ ಅದಕ್ಕೆ ಸಂದೆಯಮಿಲ್ಲೆಂದು ಜಿನಧರ್ಮದೊಳಾದ ವಿಭವಮುಮಂ ಜಿನಪಾದ ಸೇವೆಯ ಪೆಂಪುಮಂ ಪೊಗೞ್ದು ಮತ್ತಮಾರಾಧನೆಯಿನರ್ಚಿಸಿ ಸ್ವಾಧ್ಯಾಯಂಗೊಂಡು ಮೃದು ನಿನಾದದಿನಿಂತೆಂದು ಪೇೞ್ದರ್ ೯೯

ಜೀವಂ ಬಿಡುವೆಡೆಯೊಳ್ ದೃಢ
ಭಾವನೆಯಿಂ ತನುವನನ್ನಮಂ ತೊಱೆದವನು
ರ್ವೀವಳಯಮಱಿಯಲಮೃತ
ಶ್ರೀವನಿತೆಯೊಳಿರದೆ ನೆರೆದು ಸುಖಿಯಾಗಿರ್ಕುಂ ೧೦೦

ದಾರಿ. ಇನ್ನು ಉಳಿದವು ದುಃಖದ ಹುತ್ತ, ಚಿಂತೆಯ ಆಶ್ರಯ! ಅವು ಹೆಚ್ಚಿನ ದುರ್ಗತಿಗೆ ದಾರಿ; ದುಃಖ ನೋವಿನ ಮಡುವುಗಳು. ೯೭. ಜಿನರೂಪದ ಸ್ಮರಣೆಯೇ ದೇವಸಮೂಹಕ್ಕೆ ಆಶ್ರಯ. ಅದೇ ಆತ್ಮಹಿತ. ಅದೇ ಪಾಪಪರಿಹಾರಕವಾದದ್ದು. ಜೀವಸಮೂಹಕ್ಕೆ ಆಶ್ರಯ. ಜಿನಸ್ತುತಿಯು ಮೋಕ್ಷ ಲಕ್ಷ್ಮಿಯೆಂಬ ವನಿತೆಯ ಆಭರಣ, ಅಮರಪತಿ (ದೇವೇಂದ್ರ)ಯ ಲಕ್ಷ್ಮಿಯ ತಿಲಕ! ೯೮. ಅದಕ್ಕೆ ಸಂದೇಹವಿಲ್ಲ" ಎಂದು ಜಿನಧರ್ಮದಲ್ಲಿನ ವೈಭವವನ್ನೂ ಜಿನ ಪಾದಸೇವೆಯ ಹೆಚ್ಚಳವನ್ನೂ ಹೊಗಳಿ, ಪುನಃ ಜಿನನನ್ನು ಮನಸ್ಸಿನಲ್ಲಿಯೇ ಪೂಜಿಸಿ, ಅಧ್ಯಯನ ಮಾಡಿಕೊಂಡು, ಮೃದುಧ್ವನಿಯಲ್ಲಿ ಹೀಗೆ ಹೇಳಿದರು ೯೯. "ಜೀವವನ್ನು ಬಿಡುವ ಸಮಯದಲ್ಲಿ ದೃಢಭಾವನೆಯಿಂದ ದೇಹವನ್ನೂ ಆಹಾರವನ್ನೂ ಬಿಟ್ಟವನು ಲೋಕಕ್ಕೆಲ್ಲ ತಿಳಿಯುವಂತೆ ಅಮೃತಲಕ್ಷ್ಮೀ ವನಿತೆಯೊಡನೆ ತಡವಿಲ್ಲದೆ ಕೂಡಿ ಸುಖದಿಂದಿರುತ್ತಾನೆ. ೧೦೦. ಮುಂಚೆ ಅನೇಕ ಜನ್ಮಗಳಲ್ಲಿ ಕೂಡಿಟ್ಟುಕೊಂಡ ಕರ್ಮ

ಮುನ್ನಂ ಪಲವು ಭವಂಗಳೊ
ಳನ್ನೆರಪಿದ ಕರ್ಮಚಯಮುಮಾ ಭವದೊಳ್ ಮ
ತ್ತೆನ್ನದೆ ಮಾಡಿದ ಪಾಪಮು
ಮೇಂ ನಿಲಲಱಿದಪುದೆ ತೊಱೆದ ಭವ್ಯಂಗಿಳೆಯೊಳ್ ೧೦೦

ಗದ್ಯ॥ ಮತ್ತಂ ಸಂನ್ಯಸನದ ಪೆಂಪಂ ಪೇೞ್ವೊಡೆ ಸಂನ್ಯಸನಮಂ ಕೈಕೊಂಡ ಮಹಾಪುರುಷನ ಕರ್ಮಂ ಕಿಚ್ಚು ಪತ್ತಿದ ಕರಡದಂತೆ ಭಸ್ಮಮಕ್ಕುಂ ವಜ್ರಂ ತಾಗಿದ ಗಿರಿಯಂತೆ ನುಚ್ಚುನೂಱಕ್ಕುಂ ಸೂರ್ಯನ ರಶ್ಮಿ ಮುಟ್ಟಿದ ಮಂಜಿನಂತೆ ಕರಗುಗುಂ, ಬಲ್ಲಿದಂಗೆ ಪೊಣರ್ದೊಡ್ಡಿದನಂತೆ ಕೆಟ್ಟೋಡುಗುಂ, ಗಾಳಿಗೊಳಗಾದ ಮುಗಿಲಂತೆ ಪಾಱುಗುಂ, ಪೆರ್ದೊನಲಿಂಗಿದಿರಾದ ಮಳಲೇಱಿಯಂತೆ ಜರಿಗುಂ, ಸೊಡರಂ ಪೊರ್ದಿದ ಪತಂಗದಂತೆ ತವುಗುಂ, ಬೆಂಕಿಯಂ ಪೊರ್ದಿದ ತಱಗೆಲೆಯಂತೆ ಕರಿಮುರಿಯಕ್ಕುಂ, ಚಂದ್ರನ ಕಿರಣಕ್ಕಿದಿರಾದ ಕತ್ತಲೆಯಂತೆ ಪರಿದೋಡುಗುಂ, ಸಿಂಹಕ್ಕಿದಿರಾದ ಗಜದಂತೆ ಕಿಡುಗುಮೆಂತು . ೧೦೨

ಜಿನರಂ ನೆನೆ ಮನದೊಳ್ ಮ
ತ್ತಿನ ತನು ಮೊದಲಾದ ದುಷ್ಪರಿಗ್ರಹಮಂ ಬೆ
ಳ್ಪನದಿಂ ಪಂಬಲಿಸದಿರೊ
ಯ್ಯನೆ ಕೇಳುತ್ತಿರು ಮದೀಯ ವಚನಾಮೃತಮಂ ೧೦೩

ಸಮೂಹವೂ ಈ ಜನ್ಮದಲ್ಲಿ ಮತ್ತೆ ಮಾಡಿದ ಪಾಪವೂ, ಹಾಗೆ ಆಹಾರ ಶರೀರಗಳನ್ನು ತೊರೆದವನಿಗೆ, ಉಳಿಯ ಬಲ್ಲುವೆ ? ಇಲ್ಲ ೧೦೧. ಅಲ್ಲದೆ ಸಂನ್ಯಸನದ ಹೆಚ್ಚಳವನ್ನು ಹೇಳುವುದಾದರೆ, ಅದನ್ನು ಕೈಕೊಂಡ ಮಹಾ ಪುರುಷನ ಕರ್ಮವು ಬೆಂಕಿ ಹತ್ತಿಕೊಂಡ ಕಾಡಹುಲ್ಲಿನಂತೆ ಬೂದಿಯಾಗುವುದು. ವಜ್ರಾಯುಧವು ತಾಗಿದ ಪರ್ವತದಂತೆ ನುಚ್ಚು ನೂರಾಗುವುದು; ಸೂರ್ಯನ ಕಿರಣ ತಗಲಿದ ಮಂಜಿನ ಹಾಗೆ ಕರಗುತ್ತದೆ. ಬಲಿಷ್ಠನೊಡನೆ ಹೋರಾಡಿ ಎದುರುಬಿದ್ದವನಂತೆ ಕೆಟ್ಟು ಓಡುತ್ತದೆ. ಗಾಳಿಗೆ ಸಿಕ್ಕಿದ ಮೋಡದಂತೆ ಹಾರುವುದು ; ದೊಡ್ಡ ಪ್ರವಾಹಕ್ಕೆ ಎದುರಾದ ಮರಳಿನ ಏರಿಯ ಹಾಗೆ ಕೊಚ್ಚಿ ಹೋಗುತ್ತದೆ. ದೀಪಕ್ಕೆ ಹತ್ತಿದ ಪತಂಗದ ಹಾಗೆ ನಾಶವಾಗುವುದು ; ಅದು ಬೆಂಕಿ ಯನ್ನು ಮುಟ್ಟಿದ ತರಗೆಲೆಯಹಾಗೆ ಸೀದುಹೋಗುವುದು; ಚಂದ್ರನ ಕಿರಣಕ್ಕೆ ಎದುರಾದ ಕತ್ತಲೆಯಹಾಗೆ, ಕಿತ್ತುಕೊಂಡು ಓಡುವುದು ; ಸಿಂಹಕ್ಕೆ ಇದಿರಾದ ಆನೆಯಂತೆ ನಾಶ ಹೊಂದುವುದು ೧೦೨. "ಆದ್ದರಿಂದ ಜಿನರನ್ನು ಮನಸ್ಸಿನಲ್ಲಿ ಧ್ಯಾನಿಸು. ಉಳಿದ ದೇಹವೇ ಮೊದಲಾದ ಕೆಟ್ಟ ಪರಿಗ್ರಹವನ್ನು ಬೆಪ್ಪುತನದಿಂದ ಹಂಬಲಿಸದೆ ಇರು. ನಾನು ಹೇಳುವ ಜಿನವಚನಾಮೃತವನ್ನು ಸರಿಯಾಗಿ ಕೇಳುತ್ತಿರು ೧೦೩. ಅಲ್ಲದೆ ಹುಲ್ಲಿನ ಉರಿಯಂತೆ,

ಗದ್ಯ॥ ಮತ್ತಂ ಪುಲ್ಲ ಕಿರ್ಚಿನಂತೆ ಸುರಚಾಪದಂತೆ ಬೀದಿಯ ಸೊಡರಂತೆ ಬಯಲ್ತೊಳ್ಪಿ ಯಂತೆ ಮಾಗಿಯ ಮರದೆಲೆಯಂತೆ ಶರೀರಂ ಮೊದಲಾಗೆಲ್ಲ ವಸ್ತುಗಳುಂ ನಿಷ್ಟೆಯಲ್ಲೆಂದು ಪೇಳ್ವ ಧ್ರುವಮುಮಂ; ನೀರಂ ಕಂಡೆ ಕತ್ತೆಯಂತೆ, ಕಿರ್ಚಿಂ ಕಂಡ ಪುಲ್ಲೆಯಂತೆ ನಾಡರಸಂ ಕಂಡ ಮನ್ನೆ ಯನಂತೆ ತನು ಮೊದಲಾದ ಸಮಸ್ತಮಂ ಶರಣಲ್ಲೆಂದು ಪೇಳ್ವ ಶರಣಮುಮಂ ಕಳನೇಱಿ ದಂಕನಂತೆ ಸೂಲಮೇಱಿದ ಕಳ್ಳನಂತೆ ಸಾವ ಮಾನಿಸನಂತೆ ಕುತ್ತದೊಳ್ ನವೆವನಂತೆ ಕೊಳ ದೊಳಿರ್ದನಂತೆ, ಜೀವಮೆಲ್ಲಿಯುಮೇಕಮೆಂದು ಪೇಳ್ವೇಕತ್ವಮುಮಂ ; ಕಾಟ್ಕಿಚ್ಚಿಂಗೆ ಪುಲ್ಲ ಬೇಲಿ, ಪೆರ್ಪೊನಲಿಂಗೆರೆಯ ಪೆಟ್ಟೆ, ಗಜಘಟೆಗೆ ಬಾೞೆಯ ಬನಂ ಬಡಿಗೆಗೆ ಮಡಕೆಯಪೆಟ್ಟು ಪೆರ್ಗಾಳಿಗೆ ಬೂದಿಯ ರಾಶಿ ಬಲ್ಲಿತಲ್ಲದಂತೆ ಮಂತ್ರ ದುರ್ಗ ಬುದ್ಧಿ ಬಲಮಿತ್ರ ಬಾಂಧವರ್ಮೊದ ಲಾಗೆಲ್ಲಂ ಸಾವುಮಂ ಕೇಡುಮಂ ತಪ್ಪಿಸಲಾಱರೆಂದು ಪೇಳ್ವನನ್ಯತ್ವಮುಮಂ ; ಪಗರಣಿಗರಂತೆ ಪಚ್ಚೋಂತಿಯಂತೆ ತಿರಿವನ ಪಡಪಿನಂತೆ ಸೂರ್ಯನಂತೆ ಬೆಳೆವ ಸಸಿಯಂತೆ ಜೀವಂಗಳ್ ಬಗೆದ ಬಣ್ಣಗೆಯಕ್ಕುಮೆಂದು ಪೇಳ್ವ ಸಂಸಾರಮುಮಂ ; ಸುರಗಿಯ ಮಾಟದಂತೆ ಬೆಲ್ಲದಡಗಿಯಂತೆ ಕಾಳಗದ ಗೆಲ್ಲದಂತೆ ಬಂದಿಕಾಱನ ಪಡಪಿನಂತೆ ಸಾಧನಕಾಱನ ಸಿರಿಯಂತೆ ಕಡುದುಃಖಮುಂ ಸುಖಮುಮಿಾ ಸ್ವರೂಪಮೆಂದು ಪೇಳ್ವ ಲೋಕಮುಮಂ ; ಪಡಿಗದಂತೆ ತೊವಲ ಕುಟೀಯಂತೆ

ಕಾಮನ ಬಿಲ್ಲಿನಂತೆ, ಬೀದಿಯಲ್ಲಿಟ್ಟ ದೀಪದಂತೆ ಬಯಲು ತೋರೆಯಂತೆ, ಮಾಗಿಯ ಕಾಲದ ಮರದೆಲೆಯಹಾಗೆ, ಶರೀರ ಮೊದಲುಗೊಂಡು ಎಲ್ಲ ವಸ್ತುಗಳೂ ದೃಢವಲ್ಲ, ಸ್ಥಿರವಲ್ಲವೆಂದು ಹೇಳುವ ಅಧ್ರುವವನ್ನೂ ; ನೀರನ್ನು ಕಂಡ ಕತ್ತೆಯಂತೆ, ಬೆಂಕಿಯನ್ನು ನೋಡಿದ ಜಿಂಕೆಯಂತೆ, ನಾಡಿನ ಅರಸನನ್ನು ನೋಡಿದ ಪಾಳೆಯಗಾರನಂತೆ, ದೇಹ ಮೊದಲುಗೊಂಡು ಸಮಸ್ತವೂ ಶರಣ (ಆಶ್ರಯ)ವಲ್ಲವೆಂದು ಹೇಳುವ ಅಶರಣವನ್ನೂ ಯುದ್ಧಕ್ಕೆ ಹೋದ ವೀರನಂತೆ, ಶೂಲದಮೇಲೆ ಹತ್ತಿದ ಕಳ್ಳನಂತೆ, ಸಾಯುವ ಮನುಷ್ಯನಂತೆ, ರೋಗದಲ್ಲಿ ನರಳುವವನ ಹಾಗೆ, ಕೊಳದಲ್ಲಿರುವವನಂತೆ ಜೀವವು ಎಲ್ಲಿಯೂ ಒಂದೇ ಎಂದು ಹೇಳುವ ಏಕತ್ವವನ್ನೂ; ಕಾಳ್ಕಿಚ್ಚಿಗೆ ಹುಲ್ಲಿನ ಬೇಲಿ, ದೊಡ್ಡ ಪ್ರವಾಹಕ್ಕೆ ಎರೆಮಣ್ಣಿನ ಹೆಂಟೆ, ಆನೆಗಳ ಗುಂಪಿಗೆ ಬಾಳೆಯ ತೋಟ, ದೊಣ್ಣೆಗೆ ಮಡಿಕೆಯ ಪೆಟ್ಟು,ದೊಡ್ಡ ಗಾಳಿಗೆ ಬೂದಿಯ ರಾಶಿ, ಬಲಯುತವಾದುದಲ್ಲ. ಹಾಗೆಯೇ ಮಂತ್ರ, ಕೋಟೆ, ಬುದ್ಧಿ, ಸೈನ್ಯ, ಸ್ನೇಹಿತರು, ಬಂಧುಗಳು ಮೊದಲಾಗಿ ಎಲ್ಲರೂ ಸಾವನ್ನೂ ಕೆಡಕನ್ನೂ ತಪ್ಪಿಸಲಾರರೆಂದು ಹೇಳುವ ಅನನ್ಯತ್ವವನ್ನೂ ; ನಾಟಕದ ನಟರಂತೆ, ಊಸರವಳ್ಳಿಯಂತೆ (ಗೋಸುಂಬೆ) ತಿರುಪದವನ ಸಂಪಾದನೆಯಂತೆ, ಸೂರ್ಯನಂತೆ, ಬೆಳೆಯುವ ಚಂದ್ರ (ಶುಕ್ಲಪಕ್ಷದ ಚಂದ್ರ)ನಂತೆ ಜೀವಿಗಳು ಯೋಚಿಸಿದ ರೀತಿಯೆಂದು ಹೇಳುವ ಸಂಸಾರವನ್ನೂ ; ಕತ್ತಿಯ ಅಂದದಂತೆ, ಬೆಲ್ಲದ ಅಡಿಗೆಯಂತೆ, ಕಾಳಗದ ವಿಜಯದಂತೆ ಸೆರೆಕಾರನ ಲಾಭದಂತೆ, ಸಾಧನೆಕಾರನ ಸಂಪತ್ತಿನಂತೆ ಬಹಳ ದುಃಖವೂ ಸುಖವೂ ಈ ಸ್ವರೂಪವೆಂದು ಹೇಳುವ ಲೋಕವನ್ನೂ ; ಉಗುಳುವ

ಪೊಲೆಯರ ಮನೆಯಂತೆ ಪಾವಿನ ಕಣದಂತೆ ಕಳ್ಳ ಮಡಕೆಯಂತೆ ಶರೀರಂ ಪೊಲ್ಲೆಂದು ಪೇೞ್ವ ಶುಚಿತ್ವಮುಮಂ ; ಸೂಜಿಯ ಬೞಿಯ ದಾರದಂತೆ ತಾಯಬೞಿ ಶಿಶುವಿನಂತೆ ಕಾಲ ಬೞಿಯ ನೀರಂತೆ ಮೊಳಗಿನ ಬೞಿಯ ಮಿಂಚಿನಂತೆ ಬೞಲ್ಕೆಯ ಬೞಿಯ ನಿದ್ರೆಯಂತೆ ಆರ್ತ ರೌದ್ರ ಧರ್ಮ ಶುಕ್ಲಮೆಂಬ ನಾಲ್ಕುಂ ಧ್ಯಾನದ ಬೞಿವಿಡಿದು ಶುಭಾಶುಭ ಕರ್ಮಮಾಶ್ರಯಿಸುಗುಮೆಂದು ಪೇೞ್ವಾಶ್ರಯಮುಮಂ ; ಬಡ್ಡಿಯಿಕ್ಕುವಂ ಮೊದಲಂ ಕೊಟ್ಟು ಪತ್ರಮಂ ಸೀಳಿಸುವಂತೆ ಕೇಣಿಕಮಿಕ್ಕುವ ಪರದನೊತ್ತೆಯಂ ಬಿಡಿಸುವಂತೆ ನಡೆವ ಬಟ್ಟೆಯೊಳ್ ಪೊಂಗೆಡಿಸಿ ಅರಸುವಂತೆ ಭಂಡಾರಮನೊಪ್ಪಿಸಿ ಪೋಪ ಸೇನಬೋವನಂತೆ ಸಿದ್ಧಾಯಮನಿಕ್ಕಿ ವಿಶುದ್ಧಿಯಂ ಕೊಂಬ ಗ್ರಾಮಣಿಯಂತೆ ಬರ್ಪಂ ಕರ್ಮಮಂ ತೆಗೆವ ಇರ್ದ ಕರ್ಮಮಂ ಗೆಲ್ವುಪಾಯಮಂ ಪೇೞ್ವ ಸಂವರೆಯುಮಂ ಸೊಡರೆಣ್ಣೆಯಂ ಪೀರ್ವಂತೆ ಬಿಸಿಲ್ ನೀರಂ ಪೀರ್ವಂತೆ ಮಂತ್ರಾಕ್ಷರಂ ವಿಷಮಂ ಪೀರ್ವಂತೆ ಕಿರ್ಚು ನೀರಂ ಪೀರ್ವಂತೆ ಆನೆಯ ಕ್ಷುದಗ್ನಿ ಬೇಳದ ಕಾಯ ತಿರುಳಂ ಪೀರ್ವಂತೆ ಮಹಾ ಪರೀಷಹಂಗಳಿಂ ಕರ್ಮಂಗಳ್ ಕಿಡುಗುಮೆಂದು ಪೇೞ್ವ ನಿರ್ಜರೆಯುಮಂ ; ಚಂದ್ರೋದಯದಿಂ ಸಮುದ್ರಂ ಪೆರ್ಚುವಂತೆ ಗೊಬ್ಬರದಿಂ ಬೆಳಸು ಪೆರ್ಚುವಂತೆ ಆಜ್ಞೆಯಿಂ ನಾಡು ಪೆರ್ಚುವಂತೆ ಪಿಂಡಿಯಿಂದೆಮ್ಮೆಯ ಪಾಲ್ ಪೆರ್ಚುವಂತೆ ಮೊಲೆವಾಲಿಂ ಮಕ್ಕಳ್ ಪೆರ್ಚು

ಪಾತ್ರೆಯಂತೆ, ತೊಗಲಿನ ಗುಣಿಯಂತೆ, ಹೊಲೆಯರ ಮನೆಯಂತೆ, ಹಾವಿನ ಯುದ್ಧ ಭೂಮಿಯಂತೆ, ಹೆಂಡದ ಮಡಕೆಯಂತೆ ಶರೀರವು ಕೊಳಕೆಂದು ಹೇಳುವ ಅಶುಚಿತ್ವವನ್ನೂ ; ಸೂಜಿಯ ಹಿಂದಿನ ದಾರದಂತೆ, ತಾಯಿಯ ಹಿಂದಿರುವ ಮಗುವಿನಂತೆ, ಕಾಲುವೆ ಹಿಂದಿನ ನೀರಿನಂತೆ ಗುಡುಗಿನ ಹಿಂದೆ ಬರುವ ಮಿಂಚಿನಂತೆ, ಬಳಲಿಕೆಯ ಹಿಂದಿನ ನಿದ್ದೆಯಂತೆ, ಆರ್ತ, ರೌದ್ರ, ಧರ್ಮ, ಶುಕ್ಲವೆಂಬ ನಾಲ್ಕು ಧ್ಯಾನಗಳನ್ನು ಅನುಸರಿಸಿ ಶುಭಾಶುಭ ಕರ್ಮಗಳು ಆಶ್ರಯಿಸುವುವೆಂದು ಹೇಳುವ ಆಶ್ರಯವನ್ನೂ ; ಬಡ್ಡಿಕೊಡುವವನು ಮೂಲಧನವನ್ನು ಕೊಟ್ಟು ಪತ್ರವನ್ನು ಹರಿಸುವಂತೆ, ಗಿರವಿಯಿಡುವ ವರ್ತಕನು ಒತ್ತೆಯನ್ನು ಬಿಡಿಸುವಹಾಗೆ ನಡೆಯುವ ದಾರಿಯಲ್ಲಿ ಹೊನ್ನನ್ನು ಕಳೆದುಕೊಂಡು ಹುಡುಕುವಂತೆ, ಭಂಡಾರವನ್ನು ಒಪ್ಪಿಸಿ ಹೋಗುವ ಶಾನುಭೋಗನಂತೆ, ಸಿದ್ಧಾಯ (ನಿಗದಿಯಾದ ಕಂದಾಯ)ವನ್ನು ಕೊಟ್ಟು ವಿಶುದ್ಧಿಯನ್ನು ಹೊಂದುವ ಗ್ರಾಮಮುಖಂಡನಂತೆ, ಬರುವ ಕರ್ಮವನ್ನು ತಪ್ಪಿಸುವ, ಇದ್ದ ಕರ್ಮವನ್ನು ಕಳೆಯುವ ಉಪಾಯವನ್ನು ಹೇಳುವ ಸಂವರೆಯನ್ನೂ ಸೊಡರು ಎಣ್ಣೆಯನ್ನು ಹೀರುವ ಹಾಗೆ, ಬಿಸಿಲು ನೀರನ್ನು ಹೀರುವಂತೆ, ಮಂತ್ರಾಕ್ಷರವು ವಿಷವನ್ನು ಹೀರುವಂತೆ, ಬೆಂಕಿ ನೀರನ್ನು ಹೀರುವಂತೆ, ಆನೆಯ ಹಸಿವೆಂಬ ಬೆಂಕಿಯು ಬೇಲದಕಾಯಿಯ ತಿರುಳನ್ನು ಹೀರುವಂತೆ, ಮಹಾ ಪರೀಷಹಗಳಿಂದ ಕರ್ಮ ನಾಶವಾಗುವುದೆಂದು ಹೇಳುವ ನಿರ್ಜರೆಯನ್ನು, ಚಂದ್ರನ ಉದಯದಿಂದ ಸಮುದ್ರ ಉಕ್ಕುವಂತೆ, ಗೊಬ್ಬರದಿಂದ ಬೆಳೆ ಹೆಚ್ಚುವಂತೆ, ಆಜ್ಞೆಯಿಂದ (ವ್ಯವಸ್ಥೆ) ನಾಡು ವೃದ್ಧಿ ಹೊಂದುವಂತೆ, ಹಿಂಡಿಯಿಂದ ಎಮ್ಮೆಯ ಹಾಲು ಹೆಚ್ಚುವ

ವಂತೆ ದಾನಪೂಜೆ ಶೀಲೋಪವಾಸದಿಂ ಧರ್ಮದಿಂದಮುತ್ತಮ ಕ್ಷಮಾದಿ ತಪೋನುಷ್ಠಾನದಿಂ ಪುಣ್ಯಂ ಪೆರ್ಚುಗುಮೆಂದು ಪೇಟ್ವ ಧರ್ಮಮುಮಂ ; ಚಕ್ರಾಯುಧದಂತೆ ಬಿದಿಯ ರತ್ನದಂತೆ ಪರುಷವೇದಿಯಂತೆ ನಿಧಿಯಂತೆ ಅಪೂರ್ವಮಪ್ಪ ಬೋಧಿಯುಮಂ ಕ್ರಮಂ ತಪ್ಪಲೀಯದೆ ಪೇೞ್ದ ೧೦೪

ಒಂದು ಭವಂ ಸಮಾಧಿಮರಣಂ ದೊರೆಕೊಂಡೊಡೆ ಕಷ್ಟವೃತ್ತಿಯೊಳ್
ಪೊಂದದೆ ದೇವಮಾನವ ಪತಿತ್ವಮನೆಯ್ದಿ ಸಮಸ್ತ ಕರ್ಮಮಂ
ಕುಂದಿಸಿ ಬೇಗಮೆಂಟು ಭವದಿಂದೊಳಗಕ್ಷಯಮೋಕ್ಷಲಕ್ಷ್ಮಿಯೊಳ್
ಸಂದೆಯಮಿಲ್ಲದೊಂದಿ ಸುಖಿಮಿರ್ಪರಸಂಚಲರಾಗಿ ರಾಗದಿಂ ೧೦೫

ಗದ್ಯ॥ ದುಕೂಲಮನೀಡಾಡಿ ಬಣ್ಣಮನುಡುವ, ಸೊಡರಂ ಪೊಱಗಿಕ್ಕಿ ಮಿಂಬುಳುವನೊಳಗಿಡುವ, ಕಣ್ಣಂ ಕಳೆದು ಪೀಲಿಯ ಕಣ್ಣನಿಡುವ ಕಯ್ಯಂ ಕಡಿದು ಮರಗಯ್ಯಂ ಕಟ್ಟಿಕೊಳ್ವ ಪೊನ್ನಂ ಕೊಟ್ಟು ಮೂಗನರಿಸಿಕೊಳ್ವ, ಮೇಲುದಂ ಕೊಟ್ಟು ತಲೆಯಂ ಬೋಳಿಸಿಕೊಳ್ವ, ಕೆಯ್ಯಂ ಕೊಟ್ಟು ಪುಲ್ಲಂ ಕೊಳ್ವ ಕಂಕಣಮಂ ಬಿಟ್ಟು ಬಳೆಯಂ ಕೊಳ್ವ, ಪೆಂಡಿರಂ ಮಾಱಿ ತೊತ್ತಿರಂ ಕೊಳ್ವ ಹಾರಮನೀಡಾಡಿ ಪಾವಂ ಕಟ್ಟುವ, ಪಸುವಂ ಮಾಣ್ದು ನಾಯಂ ಕಱೆವ,

ಹಾಗೆ, ತಾಯ ಹಾಲಿನಿಂದ ಮಕ್ಕಳು ಬೆಳೆಯುವಂತೆ, ದಾನ, ಪೂಜೆ, ಶೀಲ, ಉಪವಾಸ, ಗಳಿಂದ ಧರ್ಮದಿಂದ, ಉತ್ತಮ ಕ್ಷಮೆ ಮೊದಲಾದ ತಪಸ್ಸಿನ ಅನುಷ್ಠಾನದಿಂದ ಪುಣ್ಯವು ಹೆಚ್ಚುವುದೆಂದು ಹೇಳುವ ಧರ್ಮವನ್ನೂ ; ಚಕ್ರಾಯುಧದಂತೆ, ವಿಧಿಯ ರತ್ನದಂತೆ, ಸ್ಪರ್ಶವೇದಿಯಂತೆ, ನಿಧಿಯ ಹಾಗೆ, ಅಪೂರ್ವವಾದ ಜ್ಞಾನವನ್ನೂ ಕ್ರಮ ತಪ್ಪಗೊಡದೆ ಹೇಳಿದರು. ೧೦೪. ಒಂದು ಜನ್ಮದಲ್ಲಿ ಸಮಾಧಿಮರಣ ಲಭಿಸಿದರೆ ನೀಚಜೀವನಕ್ಕೆ ಸಿಕ್ಕದೆ ದೇವಪದವಿ ರಾಜಪದವಿಗಳನ್ನು ಹೊಂದಿ ಸಮಸ್ತ ಕರ್ಮವನ್ನೂ ಕುಗ್ಗಿಸಿ, ಬೇಗನೆ, ಎಂಟು ಜನ್ಮಗಳೊಳಗೇ, ಸಂದೇಹವಿಲ್ಲದೆ ಮೋಕ್ಷಲಕ್ಷ್ಮಿಯೊಡನೆ ಕೂಡಿ ಅಚಂಚಲವಾದ ಸಂತೋಷದಿಂದ ಸುಖವಾಗಿರುವರು. ೧೦೫. ಉತ್ತಮವಸ್ತ್ರವನ್ನು ಬಿಸಾಟು ಬಣ್ಣದ ಬಟ್ಟೆಯನ್ನುಡುವ, ದೀಪವನ್ನು ಹೊರಗೆ ಇಟ್ಟು ಮಿಂಚುಹುಳುವನ್ನು ಒಳಗಿಡುವ, ಕಣ್ಣನ್ನು ಕಿತ್ತು ಹಾಕಿ ನವಿಲುಗರಿಯ ಕಣ್ಣನ್ನು ಇಟ್ಟುಕೊಳ್ಳುವ ಕೈಯನ್ನು ಕತ್ತರಿಸಿ ಮರಗೈಯನ್ನು ಕಟ್ಟಿಕೊಳ್ಳುವ, ಹೊನ್ನನ್ನು ಕೊಟ್ಟು ಮೂಗನ್ನು ಕೊಯ್ಸಿಕೊಳ್ಳುವ, ಉತ್ತರೀಯವನ್ನು ಕೊಟ್ಟು ತಲೆಯನ್ನು ಬೋಳಿಸಿಕೊಳ್ಳುವ, ಗದ್ದೆಯನ್ನು ಕೊಟ್ಟು ಹುಲ್ಲನ್ನು ತೆಗೆದುಕೊಳ್ಳುವ, ಹೆಂಡಿರನ್ನು ಮಾರಿ ತೊತ್ತುಗಳನ್ನು ಕೊಳ್ಳುವ, ಕಂಕಣವನ್ನು ಬಿಟ್ಟು ಬಳೆಯನ್ನು ಕೊಳ್ಳುವ, ಹಾರವನ್ನು ಬಿಸಾಟು ಹಾವನ್ನು ಕಟ್ಟುವ, ಹಸುವನ್ನು ಬಿಟ್ಟು

ತಂಬುಲಮಂ ಬಿಟ್ಟು ಸಗಣಮಂ ತಿಂಬ, ಕರ್ಪೂರಮಂ ಬಿಟ್ಟು ಪಗಿನಂ ಕೊಳ್ವ ಜಾತ್ಯಶ್ವಮಂ ಬಿಟ್ಟು ಮರಗಾಲಂ ಕೊಳ್ವ, ತುಪ್ಪಮಂ ಕೊಟ್ಟು ನೀರಂ ಕೊಳ್ವ, ಕೋಟಿವೇದಿಯಪ್ಪ ರಸಮಂ ಬಿಟ್ಟು ಎಣ್ಣೆಯಂ ಕೊಳ್ವ, ಭಂಡಾರಮಂ ಕೊಟ್ಟು ಪಿಂಡಿಯಂ ಮೆಲ್ವ ಗಾವಿಲನಂತಾಗಿ ಶಾಶ್ವತ ಸುಖಮನೀವ ರತ್ನತ್ರಯಂಗಳಂ ಬಿಟ್ಟು, ಕಿಡುವ ಪರಿಗ್ರಹಮುಮಂ ನೆನೆಯುತ್ತಮಿರಲಾಗದೆಂದು ಧರ್ಮಮಂ ಪೇಳುತ್ತುಮಿರ್ಪುದುಮಿತ್ತಲನಂತವೀರ್ಯಮಹಾರಾಜಂ ಪದಿನೈದು ದಿವಸಂ ಬರಂ ಜಿನಪೂಜೆಗಳಂ ಮಾಡಿಸುತ್ತುಮಿರ್ಪುದುಂ ಉಪರಿಚರನಪ್ಪ ಪೆರ್ಬಾವು ಧರ್ಮಮಂ ಕೇಳುತ್ತುಂ ಪ್ರಾಣವಿಯೋಗದೊಳ್ ವಜ್ರದಾಡನ ಮಾಡಿದ ಸಾಹಸಮಂ ನೆನೆಯುತ್ತುಂ ಸತ್ತು ಭವನವಾಸಿಗರಲ್ಲಿ ಮೂಱು ಪಳಿತೋಪಮಾಯುಷ್ಯಮನೊಡೆಯನಾಗಿ ವ್ಯಂತರಕುಲದೊಳ್ ವಿಮಳನೆಂಬ ಪೆಸರ ದೇವನಾಗಿ ಪುಟ್ಟಿದನಿತ್ತಲನಂತವೀರ್ಯಮಹಾರಾಜಂ ಮುನೀಂದ್ರೋತ್ತಮರಂ ಬೆಸಗೊಂಡು ದುರ್ಭಾವದಿಂ ಭವನವಾಸಿಗ ಲೋಕದೊಳ್ ತತ್ಫಣಿ ಪುಟ್ಟಿದುದನಱಿದು ಬೆಱಗಾಗಿ ೧೦೬

ಪಿರಿದಪ್ಪ ಪರಿಗ್ರಹಮಂ
ಪರಿಹರಿಸಿದ ಫಲದಿನುಪರಿಚರನರಸಿಯರೊ
ಪ್ಪಿರೆ ದಿವಿಜವಂದ್ಯರಾದರ್
ಪರಿಗ್ರಹಾಪೇಕ್ಷೆಯಿಂದಮವನಿಂತಾದಂ ೧೦೭

ನಾಯಿಯನ್ನು ಕರೆಯುವ, ತಾಂಬೂಲವನ್ನು ಬಿಟ್ಟು ಸಗಣಿಯನ್ನು ತಿನ್ನುವ, ಕರ್ಪೂರವನ್ನು ಬಿಟ್ಟು ಗೋಂದನ್ನು ಕೊಳ್ಳುವ, ಜಾತಿ ಕುದುರೆಯನ್ನು ಬಿಟ್ಟು ಮರದ ಕಾಲನ್ನು ಕೊಳ್ಳುವ ತುಪ್ಪವನ್ನು ಕೊಟ್ಟು ನೀರನ್ನು ತೆಗೆದುಕೊಳ್ಳುವ, ಕೋಟಿವೇದಿ?ಯಾದ ರಸವನ್ನು ಬಿಟ್ಟು ಎಣ್ಣೆಯನ್ನು ಕೊಳ್ಳುವ, ಭಂಡಾರವನ್ನು ಕೊಟ್ಟು ಹಿಂಡಿಯನ್ನು ಮೆಲ್ಲುವ, ದಡ್ಡನಹಾಗೆ ಶಾಶ್ವತ ಸುಖವನ್ನು ಕೊಡುವ ರತ್ನತ್ರಯಗಳನ್ನು ಬಿಟ್ಟು ನಾಶಹೊಂದುವ ಪರಿಗ್ರಹವನ್ನು ನೆನೆಯುತ್ತ ಇರತಕ್ಕದ್ದಲ್ಲವೆಂದು ಧರ್ಮವನ್ನು ಹೇಳುತ್ತ ಇರಲು, ಇತ್ತ ಅನಂತವೀರ್ಯಮಹಾರಾಜನು ಹದಿನೈದು ದಿನಗಳವರೆಗೆ ಜಿನಪೂಜೆಗಳನ್ನು ಮಾಡಿಸುತ್ತಿದ್ದನು. ಉಪರಿಚರನಾಗಿದ್ದ ಹೆಬ್ಬಾವು ಧರ್ಮವನ್ನು ಕೇಳುತ್ತ ಪ್ರಾಣ ಹೋಗುವ ಸಮಯದಲ್ಲಿ ವಜ್ರದಾಡನು ಮಾಡಿದ ದುಡುಕಿನ ಕೆಲಸವನ್ನು ಸ್ಮರಿಸುತ್ತ ಸತ್ತು ಭವನವಾಸಿಗರಲ್ಲಿ ಮೂರು ಪಳಿತೋಪಮವಾದ ಆಯುಸ್ಸುಳ್ಳವನಾಗಿ ವ್ಯಂತರಕುಲದಲ್ಲಿ ವಿಮಳನೆಂಬ ಹೆಸರಿನ ದೇವನಾಗಿ ಹುಟ್ಟಿದನು. ಇತ್ತ, ಅನಂತವೀರ್ಯ ಮಹಾರಾಜನು ಮುನಿಶ್ರೇಷ್ಠರನ್ನು ಕೇಳಿ ಆ ಹಾವು ದುರ್ಭಾವದಿಂದ ಭವನವಾಸಿಗಲೋಕದಲ್ಲಿ ಹುಟ್ಟಿದ್ದನ್ನು ತಿಳಿದು ಬೆರಗಾದನು. ೧೦೬. ಹೆಚ್ಚಾದ ಪರಿಗ್ರಹವನ್ನು ಬಿಟ್ಟ ಕಾರಣದಿಂದ, ಉಪರಿಚರನ ರಾಣಿಯರು ದೇವವಂದ್ಯರಾಗಿ ಶೋಭಿಸಿರಲು ಪರಿಗ್ರಹದ ಅಪೇಕ್ಷೆಯಿಂದ ಅರಸನು ಹೀಗಾದನು ೧೦೭. ಇದನ್ನು

ಗದ್ಯ॥ ಎಂದು ಬೆರ್ಚಿ ತನ್ನ ಪಿರಿಯ ಮಗನಪ್ಪ ಸುಬಾಹು ಕುಮಾರಂಗೆ ರಾಜ್ಯಪಟ್ಟಮಂ ಕಟ್ಟಿ ಸಕಳ ಸಾಮ್ರಾಜ್ಯಮಂ ತೊಱೆದು ಸಮಸ್ತ ರಾಜಕುಮಾರರ್ವೆರಸು ಜಿನದೀಕ್ಷೆಯಂ ಕೈಕೊಂಡುಗ್ರೋಗ್ರ ತಪಶ್ಚರಣಂಗೈದು ಸಂಮೇದ ಪರ್ವತದೊಳ್ ಕರ್ಮಕ್ಷಯಂಗೆಯ್ದು ನಿರ್ವೃತಿಯನೆಯ್ದಿದನಿತ್ತಲ್, ಭವನವಾಸಿಗನಪ್ಪ ವಿಮಲದೇವಂ ವಜ್ರದಾಡನಪ್ಪ ವಿದ್ಯಾಧರನಂ ಕಂಡು ವಿಭಂಗಜ್ಞಾನದಿಂ ಪೂರ್ವವೈರಮನಱಿದು ೧೦೮

ಮುನಿದು ಕಡುಕೋಪದಿಂ ಭೋಂ
ಕನೆ ಖಚರನ ವಿದ್ಯೆಯೆಲ್ಲಮಂ ಕಿಡಿಸಿ ಮಹಾ
ವನಧಿಗೆಱೆದೊಯ್ದು ಖಚರೇ
ಶನುಮಂ ಖಚರಾಧಿಪತಿಯ ವಲ್ಲಭೆಯರುಮಂ ೧೦೯

ಎನ್ನರಸಿಯರುಮನೆನ್ನುಮ
ನುನ್ನತಿಯಿಂ ಪೆಟ್ಟುವೆರ್ಚಿ ಪುರುಡಿಸಿ ಕೊಂದೈ
ಮುನ್ನಿಷ್ಕರುಣತೆಯಿಂ ನೀಂ
ನಿನ್ನಂ ಕಂಡೀಗಳೆಂತು ಸೈರಿಸಲಾರ್ಪೆಂ ೧೧೦

ಕುಡಿ ಕುಡಿ ನೀರಂ ಬಾಯಂ
ಬಿಡು ಬಿಡು ನೋವಿಂಗೆ ಸೆಡೆಯದಿರ್ ಸೆಡೆಯದಿರೆಂ
ದಡಿಗಡಿಗೆನುತುಮೋರಂ
ತೆಡೆಯುಡುಗದೆ ಪಿಂದು ಬೇಗಮಾ ಖಗಪತಿಯಂ ೧೧೧

ತಿಳಿದು ಭಯಪಟ್ಟು ತನ್ನ ಹಿರಿಯಮಗನಾದ ಸುಬಾಹುವಿಗೆ ಪಟ್ಟಕಟ್ಟಿ ಸಾಮ್ರಾಜ್ಯವನ್ನೆಲ್ಲ ಬಿಟ್ಟು, ಎಲ್ಲ ರಾಜಕುಮಾರರೊಡನೆ ಜಿನದೀಕ್ಷೆಯನ್ನು ಸ್ವೀಕರಿಸಿ ಕ್ರೂರವಾದ ತಪಸ್ಸು ಮಾಡಿ ಸಮ್ಮೇದವೆಂಬ ಬೆಟ್ಟದಮೇಲೆ ಕರ್ಮಕ್ಷಯಮಾಡಿಕೊಂಡು ಮೋಕ್ಷವನ್ನು ಹೊಂದಿದನು. ಇತ್ತ ಭವನವಾಸಿಗನಪ್ಪ ವಿಮಳದೇವನು ವಜ್ರದಾಡನೆಂಬ ವಿದ್ಯಾಧರನನ್ನು ಕಂಡು ಜ್ಞಾನಭಂಗವಾಗಿ ಹಿಂದಿನ ವೈರವನ್ನು ಜ್ಞಾಪಿಸಿಕೊಂಡು ೧೦೮. ಸಿಟ್ಟುಗೊಂಡು ತಟ್ಟನೆ ಆ ಖೇಚರನ ವಿದ್ಯೆಗಳೆಲ್ಲವನ್ನೂ ಹಾಳುಮಾಡಿ ಮಹಾಸಮುದ್ರಕ್ಕೆ ಎಳೆದುಕೊಂಡು ಹೋಗಿ ಖೇಚರರಾಜನನ್ನೂ ಅವನ ಹೆಂಡಿರನ್ನೂ ಕುರಿತು "ನನ್ನ ರಾಣಿಯರನ್ನೂ ನನ್ನನ್ನೂ ನಿನ್ನ ಉನ್ನತಿಯ ದೆಸೆಯಿಂದ ಗರ್ವಪಟ್ಟು ಹರುಡಿನಿಂದ ನಿಷ್ಕರುಣೆಯಿಂದ ಹಿಂದೆ ಕೊಂದೆ. ಈಗ ನಿನ್ನನ್ನು ಕಂಡು ಹೇಗೆ ತಾನೆ ಸೈರಿಸಿಕೊಳ್ಳಬಲ್ಲೆ ? ೧೦೯–೧೧೦. ಕುಡಿ, ನೀರನ್ನು ಕುಡಿ, ಬಾಯಿಬಿಡು. ನೋವಿಗೆ ಹೆದರದಿರು,ಹೆದರದಿರು"ಎಂದು ಪದೇ ಪದೇ ಹೇಳುತ್ತ ಒಂದೇ ಸಮನೆ ಬಹಳ ಹೊತ್ತು ಆ ಖೇಚರ ರಾಜನನ್ನು ೧೧೧. ಹುಡುಕು ನೀರದ್ದಿ ಮೂದಲಿಸುತ್ತ ಇದ್ದನು. ವಜ್ರದಾಡ

ಗದ್ಯ॥ ಪುತುಕುನೀರರ್ದಿ ಮೂದಲಿಸುತ್ತಿಮಿರ್ಪುದುಂ ವಜ್ರದಾಡ ವಿದ್ಯಾಧರಂ ಕಳತ್ರಂ ಬೆರಸು ಕೊಂದರ್ಕೊಲೆ ಸತ್ತರೆಂಬ ನಾಣ್ನುಡಿಯುಂ ದಿಟಂ ಮಾಡಿ ರೌದ್ರಧ್ಯಾನದಿಂ ಸತ್ತು ಮೊದಲ ನರಕದೊಳ್ ಮೂಱು ಪಳಿತೋಪಮಾಯುಷ್ಯಮನೊಡೆಯು ನಾರಕನಾಗಿ ಪುಟ್ಟಿದಂ ಇತ್ತಲ್ ಕುರುಜಾಂಗಣ ವಿಷಯದೊಳ್ ಹಸ್ತಿನಾಪುರಮನಾಳ್ವ ಜಯದತ್ತ ಮಹಾರಾಜನಾತನರಸಿ ವಿಜಯ ಮಹಾದೇವಿಯೆಂಬಳ್ ೧೧೨

ವನಜಾನನೆ ಸುತರಿಲ್ಲದ
ಮನಕತದಿಂ ಬಂದು ಗುರುಗಳಂ ವಂದಿಸಿ ಮೆ
ಲ್ಲನೆ ಬೆಸಗೊಳ್ವುದುಮಾ ಸ
ನ್ಮುನಿಯೆಂದಂ ಮಗಳೆ ನಿನಗೆ ಪರಮೋತ್ಸವದಿಂ ೧೧೩

ಮದನನಿಭಂ ಜಿನಧರ್ಮಾ
ಭ್ಯುದಯಂ ಭುವನೈಕವಂದ್ಯನಮಲಚರಿತ್ರಂ
ವಿದಿತಯಶಂ ಪುಟ್ಟುಗುಮೆಂ
ಬುದುಮಾಗಳ್ ನಲಿದು ದಿವ್ಯಮುನಿಪನ ನುಡಿಯುಂ ೧೧೪

ಗದ್ಯ॥ ನಂಬಿರ್ಪುದುಂ ಕೆಲವು ದಿವಸಕ್ಕೆ ವಿಮಲದೇವನಪ್ಪ ಭವನವಾಸಿಗಂ ಬಂದು ಗರ್ಭಮಾಗಿ ನವಮಾಸಂ ನೆಱೆದು ಗಂಡುಗೂಸಂ ಪೆತ್ತು ಗುರುದತ್ತ ಭಟ್ಟಾರಕರಾದೇಶದಿಂ ಪುಟ್ಟಿದ

ವಿದ್ಯಾಧರನು ಹೆಂಡತಿಯೊಡನೆ 'ಕೊಂದವರು ಕೊಲೆ ಸತ್ತರು' ಎಂಬ ಗಾದೆಯನ್ನು ದಿಟಮಾಡಿ ರೌದ್ರಧ್ಯಾನದಿಂದ ಸತ್ತು ಮೊದಲನೆಯ ನರಕದಲ್ಲಿ ಮೂರು ಪಳಿತೋಪಮವಾದ ಆಯುಸ್ಸನ್ನು ಹೊಂದಿ ನರಕವಾಸಿಯಾಗಿ ಹುಟ್ಟಿದನು. ಇತ್ತ ಕುರುಜಾಂಗಣ ದೇಶದಲ್ಲಿ ಹಸ್ತಿನಾಪುರವನ್ನು ಆಳುವ ರಾಜನಾದ ಜಯದತ್ತ ಮಹಾರಾಜ, ಅವನ ರಾಣಿ ವಿಜಯ ಮಹಾದೇವಿಯೂ ೧೧೨. ಮಕ್ಕಳಿಲ್ಲದೆ ಮನೋವ್ಯಥೆಯಿಂದ ಬಂದು ಗುರುಗಳಿಗೆ ವಂದನೆಮಾಡಿ ಮೆಲ್ಲನೆ ಪ್ರಾರ್ಥನೆಮಾಡಿಕೊಳ್ಳಲು ಆ ಮುನಿಶ್ರೇಷ್ಠನು "ಮಗಳೆ, ನಿನಗೆ ಮನ್ಮಥನನ್ನು ಹೋಲುವಂಥ ಜಿನಧರ್ಮವನ್ನು ಅಭಿವೃದ್ಧಿಪಡಿಸುವಂಥ ಲೋಕಪೂಜ್ಯನೂ ಶುದ್ಧಚಾರಿತ್ರನೂ ಬಹಳ ಪ್ರಸಿದ್ಧನೂ ಆದ ಮಗನು ಹುಟ್ಟುವನು" ಎಂದು ಹೇಳಿದನು. ಆ ಮುನಿಯ ದಿವ್ಯವಾಕ್ಯವನ್ನು ಕೇಳಿ ಬಹಳ ಸಂತೋಷಪಟ್ಟು, ಅದನ್ನು ನಂಬಿಕೊಂಡರು ೧೧೩–೧೧೪. ಹಾಗೆ ನಂಬಿರಲು ಕೆಲವು ದಿವಸಗಳಾದ ಮೇಲೆ ವಿಮಲದೇವನಾದ ಭವನವಾಸಿಗನು ಬಂದು ಗರ್ಭವಾಗಿ ಒಂಬತ್ತು ತಿಂಗಳು ತುಂಬಿ ಗಂಡುಮಗುವನ್ನು ಹೆತ್ತಳು. ಗುರುದತ್ತಭಟ್ಟಾರಕರ

ನಪ್ಪುದಱಿಂ ಗುರುದತ್ತನೆಂದು ಪೆಸರಿಟ್ಟು ಕೊಂಡಾಡುತ್ತಿರೆ ಸಕಲ ಶಾಸ್ತ್ರದೊಳ್ ಪರಿಣತನಪ್ಪುದಱಿಂ ವಿಜಯದತ್ತ ಮಹಾರಾಜಂ ಗುರುದತ್ತಂಗೆ ಪಟ್ಟಮಂ ಕಟ್ಟಿ ಧರಾಭಾರಮನೊಪ್ಪಿಸಿ ಸುಧರ್ಮಭಟ್ಟಾರಕರಲ್ಲಿ ದೀಕ್ಷೆಯಂ ಕೈಕೊಂಡು ಪೋದನಿತ್ತಲ್ ೧೧೫

ಗುರುದತ್ತನೃಪತಿ ಸಕಲೋ
ರ್ವರೆಯುಂ ತಮ್ಮಯ್ಯನೆಡೆಗೆ ತಾಂ ವೀರಕ್ಕೊ
ರ್ಬೆರಲಧಿಕಮೆಂದು ಧರೆ ಯೆಲ್ಲಂ
ಕರಿಸೆ ಮಹಾಖ್ಯಾತಿವೆರಸು ವಿಭವದಿನಾಳ್ದಂ ೧೧೬

ಗದ್ಯ॥ ಅಂತಿರ್ದೊರ್ಮೆ ಚಂಪಾಪುರದ ಧಾತ್ರಿವಾಹನನ ಮಗಳಪ್ಪಭಯಮತಿಯಂ ಬೇಡಿ ಪೆರ್ಗಡೆಗಳನಟ್ಟುವುದುಂ ಕೊಡಲೊಲ್ಲನೆಂದೊಡೆ ಭಂಗಮಾದ ಸಿಂಗದಂತೆ ಪೋಗದೆತ್ತಿ ಕಾದುವುದುಂ ಏಟನೆಯ ದಿವಸದಿಂದು ಮಹೇಂದ್ರದತ್ತನೆಂಬ ರಾಜಪುತ್ರನಂಗ್ಗೆ ಪಱಿದು ನೆಲಕ್ಕಿಬೀಟ್ಟುದುಂ ಅದನೊಂದು ಗಿಡುಗಂ ಕೊಂಡು ಪೋಗಿ ಕನ್ಯಾಮಾಡದ ಮುಂದಿಕ್ಕುವುದುಮದನ ಭಯಮತಿ ಕುಮಾರಿ ಕಂಡು ತದ್ವೃತ್ತಾಂತಮನೆಲ್ಲಮನಱಿದು ಜೀವಬಾಧೆಗೆ ಪಿರಿದುಂ ಭಯಸ್ಥೆಯಾಗಿ ೧೧೭

ಆದೇಶದಂತೆ ಹುಟ್ಟಿದನಾದ್ದರಿಂದ ಗುರುದತ್ತನೆಂದು ಹೆಸರಿಟ್ಟರು. ಅವನು ಸಕಲ ಶಾಸ್ತ್ರಗಳಲ್ಲಿಯೂ ಪಂಡಿತನಾದ್ದರಿಂದ ವಿಜಯದತ್ತ ಮಹಾರಾಜನು ಗುರುದತ್ತನಿಗೆ ಪಟ್ಟವನ್ನು ಕಟ್ಟಿ ರಾಜ್ಯವನ್ನುಒಪ್ಪಿಸಿ ಸುಧರ್ಮಭಟ್ಟಾರಕರಲ್ಲಿ ದೀಕ್ಷೆಯನ್ನು ಕೈಕೊಂಡು ಹೋದನು. ೧೧೫. ಇತ್ತ ಗುರುದತ್ತರಾಜನು ಸಕಲಭೂಮಿಯನ್ನೂ ತಮ್ಮ ತಂದೆಗಿಂತ ವೀರತ್ವದಲ್ಲಿ ಒಂದು ಬೆರಳಿನಷ್ಟು ದೊಡ್ಡವನೆಂದು ಲೋಕವೇ ಹೊಗಳಲು ಮಹಾ ಕೀರ್ತಿಶಾಲಿಯಾಗಿ ವೈಭವದಿಂದ ರಾಜ್ಯವಾಳಿದನು ೧೧೬. ಹಾಗೆ ಇದ್ದು ಒಂದು ಸಲ ಚಂಪಾಪುರದ ಧಾತ್ರಿವಾಹನನ ಮಗಳಾದ ಅಭಯಮತಿಯನ್ನು ಕೇಳಿ ಹೆಗ್ಗಡೆಗಳನ್ನು ಕಳಿಸಿದನು. ಅವನು ಕೊಡಲೊಲ್ಲೆನೆಂದು ಹೇಳಲು ಅಪಮಾನ ಹೊಂದಿದ ಸಿಂಹದ ಹಾಗೆ, ದಂಡೆತ್ತಿಹೋಗಿ ಯುದ್ಧಮಾಡಲು ಏಳನೆಯ ದಿನ ಮಹೇಂದ್ರದತ್ತನೆಂಬ ರಾಜಪುತ್ರನ ಕೈ ಹರಿದು ನೆಲಕ್ಕೆಬಿತ್ತು. ಅದನ್ನು ಒಂದು ಗಿಡುಗನು ಎತ್ತಿಕೊಂಡು ಹೋಗಿ ಕನ್ಯೆಯುರಿರುವ ಉಪ್ಪರಿಗೆಯ ಮುಂದೆ ಹಾಕಿತು. ಅದನ್ನು ಅಭಯಮತಿ ಕುಮಾರಿಯು ಕಂಡು ಆ ವೃತ್ತಾಂತವನ್ನೆಲ್ಲ ಕೇಳಿ ತಿಳಿದುಕೊಂಡು ಜೀವಹಿಂಸೆಗೆ ಬಹಳ ಭಯಪಟ್ಟಳು. ೧೧೭. "ನನಗೆ ಗುರುದತ್ತನಲ್ಲದೆ ಬೇರೆ ಜನನಾಥರು (ಸಲ್ಲರೆಂದು ?)"

ಎನಗೆ ಗುರುದತ್ತನಲ್ಲದೆ
ಜನನಾಥರ್ ತಮ್ಮ ರೂಪು ನಿಶ್ಚಯಮೆಂದಾ
ವನಜಮುಖಿ ದಾದಿಯಂ ನೆ
ಟ್ಟನೆ ವಸುಧಾಧೀಶನಲ್ಲಿಗಟ್ಟುವುದಾಗಳ್

೧೧೮

ಗದ್ಯ॥ ಧಾತ್ರೀವಾಹನ ಮಹಾರಾಜಂ ಮಗಳಟ್ಟಿದ ಮಾತಂ ಕೇಳ್ದು ಸಂತೋಷಂಬಟ್ಟು ಕಾಳಗಮಂ ಮಾಣಿಸಿ ಗುರುದತ್ತ ಮಹಾರಾಜಂಗೆ ಕುಮಾರಿಯಂ ಕುಡುವುದುಂ ವಾತ್ಸಲ್ಯ ರತ್ನಾಕರನಭಯಮತಿಗೆ ಮಹಾದೇವೀಪಟ್ಟಮಂ ಕಟ್ಟಿ ಹಸ್ತಿನಾಪುರಕ್ಕೆ ವಂದು ಸುಖದಿಂ ರಾಜ್ಯಂಗೆಯ್ಯುತ್ತುಮಿರ್ಪುದುಂ ವಜ್ರದಾಡನಪ್ಪ ನಾರಕಂ ನರಕದಿಂ ಬಂದು ನೀಲಗಿರಿಯೆಂಬ ಪರ್ವತದೊಳ್ ಪುಲಿಯಾಗಿ ಪುಟ್ಟಿ ತದ್ಗಿರೀಂದ್ರದ ಕೆಳಗಿರ್ದ ನಾಡವರೆಲ್ಲರುಮಂ ಕಾಡುತ್ತುಮಿರ್ಪುದುಮಾ ನಾಡವರೆಲ್ಲಂ ಗುರುದತ್ತ ಮಹಾರಾಜನಲ್ಲಿಗೆ ಬಂದು ಪುಯ್ಯಲಿಡುವುದುಂ ಪೂರ್ವವೈರಮುಂಟಪ್ಪುದಱಿಂ ತೊಟ್ಟನೆ ಕೋಪದಿಂ ಪುಲಿಯಿರ್ದ ಗುಹೆಯ ಬಾಗಿಲೊಳ್ ಬೆಟ್ಟಾಗಿ ಪುಳ್ಳಿಯನೊಟ್ಟಿ ಕಿಚ್ಚನಿಕ್ಕುವುದುಂ ಪಱೆಯ ರಭಸಕ್ಕೆ ಪುಲಿ ಪೊಱಮಡಲಮ್ಮದೆ ಬೆಂದು ಸತ್ತು ಕಾಮನಿರ್ಜರೆಯೆಂಬ ಸೌರಾಷ್ಟ್ರ ವಿಷಯದ ದ್ರೋಣಿಮಂಥಮೆಂಬ ಪರ್ವತದ ಕೆಳಗಿರ್ದ ಪಳ್ಳಿ ಖೇಟಮೆಂಬೂರೊಳಿಳಾಭರಣನೆಂಬ ಹಾರ್ವಂಗಂ ಕಂಟಕಿಯೆಂಬ ಪಾರ್ವಿತಿಗಂ ಹಳಮುಖನೆಂಬ ಮಗನಾಗಿ ಪುಟ್ಟಿ ಬಳೆಯುತ್ತಿರ್ದನಿತ್ತಲ್ ಗುರುದತ್ತ ಮಹಾರಾಜನಮೃತಾಶ್ರಯ ಭಟ್ಟಾರಕರೇಕ

ಆ ಕಮಲಮುಖಿಯು ದಾದಿಯನ್ನು ಕೂಡಲೆ ರಾಜನ ಹತ್ತಿರಕ್ಕೆ ಕಳುಹಿಸಿದಳು. ೧೧೮. ಆಗ ಧಾತ್ರೀವಾಹನ ಮಹಾರಾಜನು ಮಗಳು ಹೇಳಿ ಕಳುಹಿಸಿದ ಮಾತನ್ನು ಕೇಳಿ ಸಂತೋಷಪಟ್ಟು ಕಾಳಗವನ್ನು ನಿಲ್ಲಿಸಿ ಗುರುದತ್ತಮಹಾರಾಜನಿಗೆ ಮಗಳನ್ನು ಕೊಡಲಾಗಿ ವಾತ್ಸಲ್ಯರತ್ನಾಕರನು ಅಭಯಮತಿಗೆ ಮಹಾದೇವಿಯ ಪಟ್ಟವನ್ನು ಕಟ್ಟಿ ಹಸ್ತಿನಾಪುರಕ್ಕೆ ಬಂದು ಸುಖವಾಗಿ ರಾಜ್ಯಭಾರಮಾಡುತ್ತಿರುವಾಗ, ವಜ್ರದಾಡನಾಗಿದ್ದ ನಾರಕಿಯು ನರಕದಿಂದ ಬಂದು ನೀಲಗಿರಿಯೆಂಬ ಪರ್ವತದಲ್ಲಿ ಹುಲಿಯಾಗಿ ಹುಟ್ಟಿ ಆ ಬೆಟ್ಟದ ಕೆಳಗಿದ್ದ ಪ್ರಜೆಗಳನ್ನೆಲ್ಲ ಕಾಡಿಸುತ್ತಿರಲು ಆ ನಾಡಿನವರೆಲ್ಲರೂ ಗುರುದತ್ತ ಮಹಾರಾಜನ ಬಳಿಗೆ ಬಂದು ಹುಯ್ಯಲಿಟ್ಟುಕೊಳ್ಳಲು, ಹಿಂದಿನ ದ್ವೇಷವಿತ್ತಾದ್ದರಿಂದ ಕೂಡಲೆ ಕೋಪಗೊಂಡು ಹುಲಿಯಿದ್ದ ಗವಿಯ ಬಾಗಿಲಲ್ಲಿ ಹೆಚ್ಚಾಗಿ ಪುಳ್ಳೆಗಳನ್ನು ರಾಶಿ ಹಾಕಿಸಿ ಬೆಂಕಿ ಹಾಕಲು ತಮಟೆಗಳ ರಭಸಕ್ಕೆ ಹುಲಿ ಹೊರಬರಲು ಧೈರ್ಯಸಾಲದೆ ಸುಟ್ಟು ಸತ್ತು ಕಾಮನಿರ್ಜರೆಯೆಂಬ ಸೌರಾಷ್ಟ್ರದೇಶದ ದ್ರೋಣಿಮಂಥವೆಂಬ ಬೆಟ್ಟದ ಬುಡದಲ್ಲಿದ್ದ ಪಳ್ಳಿಖೇಟವೆಂಬ ಊರಿನಲ್ಲಿ ಇಳಾಭರಣನೆಂಬ ಹಾರುವನಿಗೂ ಕಂಟಕೆಯೆಂಬ ಅವನ ಹೆಂಡತಿಗೂ ಹಳಮುಖನೆಂಬ ಮಗನಾಗಿ ಹುಟ್ಟಿ ಬೆಳೆಯುತ್ತಿದ್ದನು. ಇತ್ತ ಗುರುದತ್ತ ಮಹಾರಾಜನು ಅಮೃತಾಶ್ರಯಭಟ್ಟಾರಕರು ಏಕವಿಹಾರಿಗಳಾಗಿ ತನ್ನ

ವಿಹಾರಿಗಳ್ ತನ್ನ ಪುರಕ್ಕೆ ಬಂದೊಡವರಂ ವಂದಿಸಿ ತನ್ನ ಭವಮಂ ಬೆಸಗೊಳ್ವುದೇಂ ಅವರು ಪರಿಚರ ಮಹಾರಾಜನಾದ ಭವಂ ಮೊದಲಾಗೆ ಗುರುದತ್ತನಾದಲ್ಲಿವರವಾದ ನಾಲ್ಕು ಭವದೊಳಾದ ವೃತ್ತಾಂತವೆಲ್ಲಮಂ ಪೇಳ್ವುದುಂ ೧೯೯

ಅಭಯಮತಿ ದೇವಿಯುಂ ತ
ನ್ನ ಭವಮನಟ್ಕರ್ತು ಕೇಳ್ವುದುಂ ಮುನಿಪಂ ಸಂ
ದಭಯಮತಿಗಱಿಪಿದಂ ಪೂ
ರ್ವಭವಮನಿಂತೆಂದು ದುಂದುಭಿಧ್ವನಿಯಿಂದಂ ೧೨೦

ಗದ್ಯ॥ ಚಂಪಾಪುರದೊಳೊರ್ವಂ ಗರುಡವೇಗನೆಂಬ ಕಿರಾತನಿರ್ಪನಾತನ ಪೆಂಡತಿ ಗೋಮುಖಿಯೆಂಬಳೊಂದು ದಿವಸಂ ಶ್ರಾವಕರೆಲ್ಲರುಂ ಸಮಾಧಿಗುಪ್ತಾಚಾರ್ಯರಲ್ಲಿ ವ್ರತಂಗಳಂ ಕೈಕೊಳ್ವುದುಂ ಕಂಡರ್ತಿಯಾಗಿ ತಾನುಂ ಪಂಚಾಣುವ್ರತಂಗಳಂ ಕೈಕೊಂಡು ಪೋಗಿ ಗರುಡವೇಗಂ ಬಲೆಯನೊಡ್ಡಿ ತಂದ ಪಕ್ಕಿಗಳೆಲ್ಲವಂ ಬಿಟ್ಟು ಕಳೆವುದುಂ ಬೇಡಂ ಬಂದು ಬಡಿವುದುಂ ಗಂಡನಂ ಬಿಟ್ಟು ನಂಟರ ಮನೆಯೊಳ್ ಪೊರ್ದಿರ್ದು ಧಾತ್ರೀವಾಹನ ಮಹಾರಾಜನ ಸಿರಿಯಂ ನೋಡಿ ಬಯಸಿ ಕೆಲವಾನುಂ ಕಾಲಕ್ಕೆ ವ್ಯಾಧಿಯಿಂ ಸತ್ತು ತದ್ವ್ರತದ ಫಲದಿಂ ಮಗಳಾಗಿ ಪುಟ್ಟಿದೆಯೆಂಬುದುಂ ೧೨೧

ನಗರಕ್ಕೆ ಬರಲು ಅವರನ್ನು ವಂದಿಸಿ ತನ್ನ ಹಿಂದಿನ ಜನ್ಮ ಕಥೆಯನ್ನು ಕೇಳಲು ಅವರು ಉಪರಿಚರ ಮಹಾರಾಜನಾಗಿದ್ದ ಜನ್ಮದಿಂದ ಹಿಡಿದು ಗುರುದತ್ತನಾದವರೆಗೆ ನಾಲ್ಕು ಜನ್ಮಗಳಲ್ಲಿ ನಡೆದ ವೃತ್ತಾಂತವನ್ನೆಲ್ಲ ಹೇಳಿದರು. ೧೧೯. ಅಭಯಮತಿ ದೇವಿಯೂ ತನ್ನ ಭವಾವಳಿಯನ್ನು ಆಸೆಯಿಂದ ಕೇಳಲಾಗಿ ಆ ಮುನಿಶ್ರೇಷ್ಠರಾದ ಅಭಯಮತಿಗೆ ಪೂರ್ವಜನ್ಮವೃತ್ತಾಂತವನ್ನು ದುಂದುಭಿಧ್ವನಿಯಲ್ಲಿ ಹೀಗೆ ಹೇಳಿದನು. ೧೨೦. "ಚಂಪಾಪುರದಲ್ಲಿ ಒಬ್ಬ ಗರುಡವೇಗನೆಂಬ ಕಿರಾತನಿದ್ದನು. ಆತನ ಹೆಂಡತಿ ಗೋಮುಖಿಯೆಂಬವಳು ಒಂದು ದಿನ ಶ್ರಾವಕರೆಲ್ಲರೂ ಸಮಾಧಿಗುಪ್ತಾಚಾರ್ಯರಲ್ಲಿ ವ್ರತಗಳನ್ನು ಕೈಕೊಳ್ಳುತ್ತಿದ್ದುದನ್ನು ಕಂಡು ಆಸೆಯಾಗಿ ತಾನೂ ಪಂಚಾಣುವ್ರತಗಳನ್ನು ಸ್ವೀಕರಿಸಿ ಹೋಗಿ, ಗರುಡವೇಗನು ಬಲೆಯನ್ನು ಬೀಸಿ ತಂದ ಹಕ್ಕಿಗಳೆಲ್ಲವನ್ನೂ ಬಿಟ್ಟುಬಿಟ್ಟಳು. ಆಗ ಆ ಬೇಡನು ಅವಳನ್ನು ಬಡಿದನು, ಆಗ ಅವಳು ಗಂಡನನ್ನು ಬಿಟ್ಟು ನಂಟರ ಮನೆಯಲ್ಲಿ ಆಶ್ರಯ ಹೊಂದಿದಳು. ಧಾತ್ರೀವಾಹನಮಹಾರಾಜನ ಐಶ್ವರ್ಯವನ್ನು ನೋಡಿ ಆಸೆಪಟ್ಟು ಕೆಲವು ದಿನಗಳ ಮೇಲೆ ರೋಗದಿಂದ ಸತ್ತು ಆವ್ರತದ ಫಲವಾಗಿ ಅವನ ಮಗಳಾಗಿ ಹುಟ್ಟಿದೆಯೆಂದು" ಹೇಳಿದರು, ಆಗ ರಾಜನೂ ರಾಣಿಯೂ ಹಿಂದಿನ

ಜನಪತಿಯುಮರಸಿಯುಂ ಮು
ನ್ನಿನ ತಮ್ಮ ಭವಂಗಳ ಸವಿಸ್ತರದಿಂ ಮೆ
ಲ್ಲನೆ ಕೇಳ್ದು ನಂಬಿ ಸಂಸೃತಿ
ವನಧಿಯುಮಂ ದಾಂಟ ಪೋಪ ಬಗೆಯನೆ ಬಗೆದರ್ ೧೨೨

ಜವನೆಂಬ ನಾಯ ಬಾಗಿಗೆ
ಭವಭವದೊಳ್ ಜೀವನೆಂಬ ಮೊಲನಘವಟ್ಟುಂ
ಭವಮಱಿಯದೆ ಬೆಚ್ಚಲ್ಲದೆ
ಜವನನೆ ಮೆಚ್ಚಿಪ್ಪುದೊಲ್ಲದತಿಶಯಸುಖಮಂ ೧೨೩

ಪುಸಿವರ ಪಿಸುಣರ ದೆಸೆಯಿಂ
ವಸುಮತಿ ಕಿಡುಗೆನ್ನದವರ ಮಾತನೆ ಪಿಡಿದಾ
ಲಿಸುವವನಿಪಾಳರಂದದಿ
ನಸುವಂ ಬಿಡದಿಂದ್ರಿಯಂಗಳೆಂದುದನೆಂಗುಂ ೧೨೪

ಅಳಿಪಿಂ ಸಂಸೃತಿಯಂ ಮು
ನ್ನೊಳಗಱಿಯದೆ ನಂಬಿ ಕೆಟ್ಟ ಕೇಡದೆ ಪಾಲ್ಗುಂ
ಮಳರಹಿತಮಪ್ಪ ಜಿನರು
ಜ್ಜ್ವಳಪಾದಪಯೋಜಯುಗ್ಮಮಂ ಪೊರ್ದಿರ್ಪೆಂ ೧೨೫

ತಮ್ಮ ಜನ್ಮಗಳನ್ನು ವಿಸ್ತಾರವಾಗಿ ಕೇಳಿ ನಂಬಿ ಜನನ ಮರಣ ರೂಪವಾದ ಸಂಸಾರ ಸಮುದ್ರವನ್ನು ದಾಟಿ ಹೋಗುವ ಯೋಚನೆಯನ್ನೇ ಮಾಡಿದರು. ೧೨೧-೧೨೨, ಜನ್ಮಜನ್ಮದಲ್ಲಿಯೂ ಜೀವನೆಂಬ ಮೊಲನು ಯಮನೆಂಬ ನಾಯಿಯ ಪಾಲಿಗೆ ಸಿಕ್ಕಿ ಬಿದ್ದೂ ಸಹ ಜನ್ಮವೃತ್ತಾಂತ ತಿಳಿಯದೆ ಭಯವಿಲ್ಲದೆ ಯಮನನ್ನೇ ಮೆಚ್ಚಿಸುವುದು ; ಅತಿಶಯ ಸುಖವನ್ನು ಅದು ಒಲ್ಲದು. ೧೨೩. ಸುಳ್ಳಾಡುವವರ, ಚಾಡಿಕೋರರ, ದೆಸೆಯಿಂದ ರಾಜ್ಯ ಹಾಳಾಗುವುದೆಂದೆನ್ನದೆ ಅವರ ಮಾತುಗಳನ್ನೇ ಹಿಡಿದು ಕೇಳುವ ರಾಜರ ಹಾಗೆ, ಪ್ರಾಣವನ್ನು ಬಿಡದೆ ಇಂದ್ರಿಯಗಳ ಅಪೇಕ್ಷೆಯನ್ನೇ ನಡೆಸುತ್ತಾರೆ. ೧೨೪. ಆಸೆಯಿಂದ ಸಂಸಾರದ ರಹಸ್ಯ ತಿಳಿಯದೆ ಅದನ್ನು ನಂಬಿ ಕೆಟ್ಟ ಕೇಡೇ ಸಾಕು. ಇನ್ನು ಪಾಪವಿಲ್ಲದ ಜಿನರ ಪ್ರಕಾಶಮಯವಾದ ಪಾದಕಮಲಗಳನ್ನು ಆಶ್ರಯಿಸುತ್ತೇನೆ. ೧೨೫. ಮನೆಯನ್ನು ನಡೆಸುವ ಗರತಿಯಾದ ಹೆಂಡತಿಯನ್ನು ಬಿಟ್ಟು

ಮನೆಯಂ ನಿಲಿಸುವ ಸಜ್ಜನ
ವನಿತೆಯನೀಡಾಡಿ ಸೂಳೆಗೆಳಸಿರ್ಪ ಜಡಾ
ತ್ಮನ ತೆಱದಿನೆಗ್ಗನಾಗದೆ
ಜಿನಮತಮಂ ಪಿಡಿವೆನನ್ಯಮತಮಂ ಬಿಡುವೆಂ ೧೨೬

ದಿವಿಜೇಂದ್ರ ಖೇಚರೇಂದ್ರ ವಿ
ಭವಮುಂ ಮನುಜೇಂದ್ರರಱಿಸುಖಂಗಳುಮೇವ
ಧ್ರುವಮವನವೋಘಮೊಲ್ಲೆಂ
ಪ್ರವರಜಿನರ್ ಪಡೆದ ಮೋಕ್ಷಪದಮದೆ ಸಾಲ್ಗುಂ ೧೨೭

ನಿಲ್ಲದೆ ನಾಲ್ಕುಂ ಗತಿಗಳೊ
ಳೆಲ್ಲಂ ತಿರಿತಂದೆನನ್ಯರಂ ಪೊರ್ದಿ ಮನಂ
ತಲ್ಲಣಿಸಿದುದೀ ಜಿನಪದ
ಪಲ್ಲವಮಂ ಪೊರ್ದಿ ಪೊರ್ದುವೆಂ ನಿರ್ವೃತಿಯಂ ೧೨೮

ಗದ್ಯ॥ ಎಂದು ಭಾವಿಸಿ ಶ್ರೀದತ್ತನೆಂಬ ತನ್ನ ಪಿರಿಯ ಮಗಂಗೆ ಪಟ್ಟಮಂ ಕಟ್ಟಿ ಧರಾಭಾರಮನೊಪ್ಪಿಸಿ ಸಕಲರಾಜ್ಯಮುಮಂ ತೊಱೆದಮೃತಾಸ್ರವಭಟ್ಟಾರಕರಲ್ಲಿ ಜಿನದೀಕ್ಷೆಯಂ ಕೈಕೊಂಡು ದ್ವಾದಶಾಂಗಶ್ರುತಧರನಾಗಿ ಪಲವು ಕಾಲಂ ಗುರುಸೇವೆಯೊಳಿರ್ದು ಗುರುಗಳಾಜ್ಞೆ

ಸೂಳೆಗೆ ಆಸೆಪಟ್ಟಿರುವ ಜಡಾತ್ಮನ ಹಾಗೆ ದಡ್ಡನಾಗದೆ ಜಿನಮತವನ್ನೇ ಆಶ್ರಯಿಸುತ್ತೇನೆ ; ಉಳಿದ ಮತಗಳನ್ನು ಬಿಡುತ್ತೇನೆ. ೧೨೬. ದೇವೇಂದ್ರ, ಖೇಚರರ ಇಂದ್ರ, ಇವರ ವೈಭವವೂ ಮಾನವೇಂದ್ರರಿಗಾದ ನೀಚಸುಖಗಳೂ ಅಶಾಶ್ವತ. ಅವನ್ನು ಖಂಡಿತವಾಗಿಯೂ ಒಲ್ಲೆ. ಶ್ರೇಷ್ಠರಾದ ಜಿನೇಶ್ವರರು ಪಡೆದ ಮೋಕ್ಷಪದವಿಯೇ ಸಾಕು. ೧೨೭. ನೆಲೆಯಾಗಿ ನಿಲ್ಲದೆ ದೇವ ಮಾನವ ತಿರ್ಯಕ್ ನಾರಕಗಳೆಂಬ ನಾಲ್ಕು ಗತಿಗಳಲ್ಲಿಯೂ ಅಲೆದು ಬಂದೆ. ಇತರರನ್ನು ಆಶ್ರಯಿಸಿ ಮನಸ್ಸು ತಲ್ಲಣಗೊಂಡಿತು. ಈಗ ಜಿನಪಾದಗಳನ್ನು ಆಶ್ರಯಿಸಿ ಮೋಕ್ಷವನ್ನು ಹೊಂದುವೆನು. ೧೨೮. ಹೀಗೆ ಯೋಚಿಸಿ ಶ್ರೀದತ್ತನೆಂಬ ತನ್ನ ಹಿರಿಯ ಮಗನಿಗೆ ಪಟ್ಟವನ್ನು ಕಟ್ಟಿ ರಾಜ್ಯಭಾರವನ್ನು ಒಪ್ಪಿಸಿ ಸಮಸ್ತ ರಾಜ್ಯವನ್ನೂ ತ್ಯಜಿಸಿ ಅಮೃತಾಸ್ರವಭಟ್ಟಾರಕರ ಬಳಿಯಲ್ಲಿ ಜಿನದೀಕ್ಷೆಯನ್ನು ತೆಗೆದುಕೊಂಡು ದ್ವಾದಶಾಂಗಶ್ರುತಧರನಾಗಿ ಬಹಳ ಕಾಲ ಗುರುಸೇವೆ ಮಾಡುತ್ತಿದ್ದು ಆಮೇಲೆ ಗುರುಗಳ ಆಜ್ಞೆಯಿಂದ ಏಕವಿಹಾರಿಯಾಗಿ (ಒಂಟಿಯಾಗಿ

ಯಿಂದೇಕವಿಹಾರಿಗಳಾಗಿ ಪೋದರಿತ್ತಲಭಯಮತಿಯುಮವರೆ ಗುರುಗಳಾಗೆ ಸುವ್ರತಗಂತಿಯಲ್ಲಿ ಜಿನದೀಕ್ಷೆಯಂ ಕೈಕೊಂಡುಗ್ರೋಗ್ರ ತಪಶ್ಚರಣಂಗೆಯ್ದು ಸಮಾಧಿಮರಣದಿಂ ಮುಡಿಪಿ ಕಾಪಿಷ್ಠಮೆಂಬೆಂಟನೆಯ ಕಲ್ಪದೊಳ್ ಮಿತ್ರಕಾಂತನೆಂಬ ದೇವನಾಗಿ ಪುಟ್ಟಿದಳಿತ್ತ ಗುರುದತ್ತ ಭಟ್ಟಾರಕರುಂ ವಿಹಾರಿಸುತ್ತುಂ ಬಂದು ಪಳ್ಳಿಖೇಡ ಪೊಟಲೊಳ್ ಯತ್ರಾಸ್ತಮಿತವಾಸಿಗಳಪ್ಪುದರಿಂ ನೇಸರ್ಪಡುವುದುಂ ಪೋಗಲೊಲ್ಲದೆ ರಾತ್ರಿಪ್ರತಿಮೆಯಿಂದು ಬೆಳಗಾದಾಗಳ್ ಮೞೆ ಪರಿದಾಗೆ ನೆಲನಪ್ರಾಸುಕಮೆಂದು ಸೂರ್ಯಪ್ರತಿಮೆಯಿಂದರನ್ನೆಗಂ ವಜ್ರದಾಡಚರನಪ್ಪ ಹಳಮುಖನುೞಲೆಂದು ಪೋಗುತ್ತೆ ತನ್ನ ವಲ್ಲಭೆಗೆ ಮೂಡಣ ಕೆಯ್ಗೆ ಕೂೞಂ ತರ್ಪುದೆಂದು ಪೇೞ್ದು ಪೋಗಿ ಮೂಡಣ ಕೆಯ್ ಕೆಸಱಾಗಿರೆ ಪಡುವಣ ಕೆಯ್ಗೆ ಪೋಗುತ್ತೆ ಮೂಡಣ ಕೆಯ್ ಕೆಸಱ್ ಪರಿದಾದೊಡೆ ಪಡುವಣ ಕೆಯ್ಗೆ ಪೋದಂ ಕೂೞನಲ್ಲಿಗೊಯ್ಯೆಂದು ಪೇೞ್ವುದೆಂದು ಮುನಿವರರ ಮುಂದೆ ನುಡಿದು ಪೋಗಿ ಮೂಱು ಜಾವಂಬರಮುತ್ತು ಪೆಂಡತಿಯ ಬರವಂ ಕಾಣದೆ ಪಸಿದು ಮನೆಗೆ ಬಂದು ಪಸಿದ ಕೋಪದಿಂ ತನ್ನ ಭಾರ್ಯೆಯಂ ಸಾಯಬಡಿವುದುಮಾಕೆ ನಿಮ್ಮ ಪೋದ ದೆಸೆಯ

ಸಂಚರಿಸುವವರು) ಹೋದನು. ಇತ್ತ ಅಭಯಮತಿಯೂ ಅವರೇ ಗುರುಗಳಾಗಲು ಸುವ್ರತಗಂತಿ[1]ಯರಲ್ಲಿ ಜಿನದೀಕ್ಷೆಯನ್ನು ತೆಗೆದುಕೊಂಡು ಬಹಳ ಕಠಿಣವಾದ ತಪಸ್ಸನ್ನು ಆಚರಿಸಿ ಸಮಾಧಿ ಮರಣವನ್ನು ಹೊಂದಿ ಕಾಪಿಷ್ಠವೆಂಬ ಎಂಟನೆಯ ಕಲ್ಪದಲ್ಲಿ ಮಿತ್ರ ಕಾಂತನೆಂಬ ದೇವನಾಗಿ ಹುಟ್ಟಿದಳು. ಇತ್ತಕಡೆ ಗುರುದತ್ತ ಭಟ್ಟಾರಕರು ದೇಶಸಂಚಾರ ಮಾಡುತ್ತ ಬಂದು ಪಳ್ಳಿಖೇಡವೆಂಬ ಪಟ್ಟಣದಲ್ಲಿ, ಎಲ್ಲಿ ಸೂರ್ಯ ಮುಳುಗಿದರೆ ಅಲ್ಲಿ ವಸತಿ ಮಾಡುವ ವ್ರತದವರಾದುದರಿಂದ, ಅಲ್ಲಿಗೆ ಸೇರಿದಾಗ ಸೂರ್ಯ ಮುಳುಗಿದ್ದ ರಿಂದ ಮುಂದೆ ಹೋಗಲು ಇಷ್ಟಪಡದೆ ರಾತ್ರಿಪ್ರತಿಮೆಯಂತೆ ನಿಂತುಬಿಟ್ಟರು. ಬೆಳಗಾಗಲು ಮಳೆ ಹೆಚ್ಚಾಯಿತು. ಆದ್ದರಿಂದ ನೆಲ ಜೀವಂತ ವಸ್ತುಗಳಿಂದ ಕೂಡಿದೆ ಯೆಂದು ಆಗ ಭಟ್ಟಾರಕರು ಸೂರ್ಯನಿಗೆ ಅಭಿಮುಖರಾಗಿ ಪ್ರತಿಮೆನಿಂತರು. ಆ ವೇಳೆಗೆ ಹಿಂದೆ ವಜ್ರದಾಡನಾಗಿದ್ದ ಹಳಮುಖನು ಉಳುವುದಕ್ಕಾಗಿ ಹೋಗುತ್ತ ತನ್ನ ಹೆಂಡತಿಯನ್ನು ಕುರಿತು ಪೂರ್ವದಿಕ್ಕಿನ ಹೊಲಕ್ಕೆ ಅನ್ನವನ್ನು ತರಬೇಕೆಂದು ಹೇಳಿ ಹೋಗಿ ಪೂರ್ವದಲ್ಲಿನ ಹೊಲ ಕೆಸರಾಗಿದ್ದುದನ್ನು ಕಂಡು ಪಶ್ಚಿಮದ ಹೊಲಕ್ಕೆ ಹೋಗುತ್ತ, "ಮೂಡಲು ದಿಕ್ಕಿನ ಹೊಲ ಹೆಚ್ಚು ಕೆಸರಾಗಿರುವುದರಿಂದ ಪಶ್ಚಿಮದ ಹೊಲಕ್ಕೆ ಹೋದ, ಅನ್ನವನ್ನು ಅಲ್ಲಿಗೆ ತೆಗೆದುಕೊಂಡು ಹೋಗು" ಎಂದು ಹೇಳ ಬೇಕೆಂದು ಪ್ರತಿಮೆಯಂತೆ ನಿಂದಿದ್ದ ಮುನಿಶ್ರೇಷ್ಠರ ಮುಂದೆ ಹೇಳಿ ಹೋದನು. ಮೂರು ಜಾವದವರೆಗೂ ಉತ್ತು ಹಳಮುಖನು ಹೆಂಡತಿಯು ಬರದೆ ಇದ್ದುದರಿಂದ ಹಸಿದುಕೊಂಡು ಮನೆಗೆ ಹೋಗಿ ಹಸಿವಿನ ಕೋಪದಿಂದ ಹೆಂಡತಿಯನ್ನು ಕ್ರೂರವಾಗಿ

---

1. ಕಂತಿ=ಜೈನಸನ್ಯಾಸಿನಿ

ನಱಿಯದಿರ್ದೆನೆನೆ ಅಲ್ಲಿ ನಿಂದ ರಿಸಿಯರ್ಪೇೞ್ದರಿಲ್ಲಾ ಪೇೞೆನೆ ಅವಳಂಜಿ ಪೇೞ್ದರಿಲ್ಲೆಂದು ಪುಸಿದು ಪೇೞ್ವುದುಂ ಮುನಿನಾಥನ ಮೇಲೆ ಮುನಿಸಾಗಿ ದುಷ್ಟ ಋಷಿಯಂ ಸುಟ್ಟು ಕೊಂದಲ್ಲದುಣ್ಣೆನೆಂದು ಪರಿದು ಪೋಗಿ ಸೀರೆಯನೆಣ್ಣೆಯೊಳದ್ದಿ ಪಾದದಿಂ ತಲೆವರಂ ಸುತ್ತಿ ಕಿಚ್ಚಂ ತಗುಳ್ಚುವುದುಂ ೧೨೯

ಹಳಮುಖನೆನ್ನಂ ಕಿಮ್ಮನೆ<br>
ಮುಳಿಸಿಂ ನಾನಾ ಪ್ರಕಾರದಿಂ ಸುಟ್ಟಪನೆಂ<br>
ದೊಳಗುರಿಯದೆ ತಲ್ಲಣಿಸದೆ<br>
ತಳರದೆ ಸಂಕಿಸದೆ ನಿಂದನಚಲಿತಧೈರ್ಯಂ ೧೩೦

ಆತಂಗೆ ಮುನಿಯಲೊಲ್ಲದೆ<br>
ಭೀತಿಯಿನಲ್ಲಾಡದೊಂದೆ ಮನದಿಂ ಕರ್ಮ<br>
ವ್ರಾತಮನರಿದಂ ಬಗೆವೊಡೆ<br>
ಭೂತಳದೊಳ್ ಕೋಪವಿಲ್ಲದಾತನೆ ಧನ್ಯಂ ೧೩೧

ಮುನ್ನಿನ ಕರ್ಮಮೆ ನೆವನೆವ<br>
ದಿನ್ನೆಟ್ಟನೆ ಬಂದು ಫಲಮನಿತ್ತಪುದದಱಿಂ<br>
ದಿನ್ನಾ ಕರ್ಮಕ್ಕಲ್ಲದೆ<br>
ಸನ್ನುತಮತಿಯುವರ್ಗೆ ಮುಳಿವುದೊಂದೆಗ್ಗಲ್ತೇ ೧೩೨

ಬಡಿದನು. ಅವಳು 'ನೀವು ಹೋದ ದಿಕ್ಕೇ ನನಗೆ ತಿಳಿಯಲಿಲ್ಲ' ಎಂದಳು. ಅಲ್ಲಿ ನಿಂತಿದ್ದ ಋಷಿಗಳು ಹೇಳಲಿಲ್ಲವೆ ? ಹೇಳು' ಎಂದನು. ಅವಳು ಹೆದರಿ 'ಅವರು ಹೇಳಲಿಲ್ಲ' ಎಂದಳು. ಅವನಿಗೆ ಆ ಮುನಿಶ್ರೇಷ್ಠನ ಮೇಲೆ ಮುನಿಸು ಹುಟ್ಟಿತು. 'ಆ ಕೆಟ್ಟ ಋಷಿಯನ್ನು ಕೊಂದಲ್ಲದೆ ಊಟ ಮಾಡುವುದಿಲ್ಲ' ವೆಂದು ಓಡಿಹೋಗಿ ಬಟ್ಟೆಯನ್ನು ಎಣ್ಣೆಯಲ್ಲಿ ಅದ್ದಿ ಕಾಲಿನಿಂದ ತಲೆಯವರೆಗೂ ಸುತ್ತಿ ಬೆಂಕಿ ಹೊತ್ತಿಸಿದನು. ೧೨೯. 'ಹಳಮುಖನು ನನ್ನನ್ನು ನಿಷ್ಕಾರಣವಾದ ಸಿಟ್ಟಿನಿಂದ ನಾನಾ ರೀತಿಯಿಂದ ಸುಡುತ್ತಿದ್ದಾನೆ' ಎಂದು ಮನಸ್ಸಿನಲ್ಲಿ ಸಿಟ್ಟಾಗದೆ ಗಾಬರಿಗೊಳ್ಳದೆ, ಚಲಿಸದೆ, ಭಯಪಡದೆ ಚಲಿಸದ ಧೈರ್ಯದಿಂದ ಆ ಋಷಿಯು ನಿಂತುಬಿಟ್ಟನು. ೧೩೦. ಆ ಹಳಮುಖನ ಮೇಲೆ ಸಿಟ್ಟಾಗಲು ಇಷ್ಟವಿಲ್ಲದೆ, ಭಯದಿಂದ ಅಲ್ಲಾಡದೆ, ಒಂದೇ ಮನಸ್ಸಿನಿಂದ ಕರ್ಮ ಸಮೂಹವನ್ನು ಕಳೆದುಕೊಂಡನು. ಲೋಕದಲ್ಲಿ ಕೋಪವಿಲ್ಲದವನೇ ಧನ್ಯನು. ೧೩೧. ಹಿಂದಿನ ಕರ್ಮವೇ ನಾನಾ ನೆವಗಳಿಂದ ನೇರವಾಗಿ ಬಂದು ಫಲ ಕೊಡುತ್ತವೆಯಾದ್ದರಿಂದ ಇನ್ನು ಆ ಕರ್ಮಕ್ಕೆ ಮುಳಿಯಬೇಕೇ ಹೊರತು ಇವರ ಮೇಲೆ ಸಿಟ್ಟುಗೊಳ್ಳುವುದೆಂ

ಮುನಿದೊಡೆ ಕರ್ಮವಿರೋಧಿಗೆ
ಮುನಿವುದು ತತ್ಕರ್ಮರಾಜನ ಪ್ರೇರಣೆಯಿಂ
ಘನಮಪ್ಪ ಪೀಡೆಯಂ ನೆ
ಟ್ಟನೆ ಮಾಡುವ ದುರ್ಜನರ್ಗೆ ಮುನಿವುದು ಚದುರೇ ೧೩೩

ಗದ್ಯ॥ ಒಱೆವೆರಸಿದೇಱುಂ ಕುಪ್ಪಸವೆರಸಿದ ಮಿಂಹವುಂ ಮುಗಿಲ್ವೆರಸಿದ ಮದುವೆಯುಂ ಮಣ್ವೆರಸಿದ ನೀರುಂ ಕಿಸುವೆರಸಿದ ಪೊನ್ನುಂ ಗಸಿವೆರಸಿದೆಣ್ಣೆಯುಂ ನೀರ್ವೆರಸಿದ ಪಾಲುಂ ಕಪ್ಪು ವೆರಸಿದ ಮಾಣಿಕಮುಂ ಮುನಿಸುವೆರಸಿದ ಕೂರ್ಮೆಯುಂ ಮಳಲ್ವೆರಸಿದ ಕೂಟುಮೆಂತುಂ ಲೇಸಲ್ಲದಂತೆ ಶರೀರದ ಪರಿಗ್ರಹದ ಮೋಹದೊಳ್ ಬೆರಸಿದ ಧ್ಯಾನಮುಮೊಪ್ಪದು. ಮತ್ತಂ ತೋಱೆ ಕಾರಣಮಾಗಿ ಪಱಿಗೋಲಂ ಮುಳ್ ಕಾರಣಮಾಗಿ ಕೆರ್ಪಂ ಸೂಳೆ ಕಾರಣಮಾಗಿ ಕುಂಟ ಣಿಯುಂ ಮಗಳ್ ಕಾರಣಮಾಗಿ ಅಳಿಯನಂ ಬೆಸಂ ಕಾರಣಮಾಗಿ ಬಂಟನಂ ಕೊಂಡಾಡುವಂತೆ ಸ್ವರ್ಗಾಪವರ್ಗಂ ಕಾರಣಮಾಗಿ ಶರೀರಮುಮಂ ಪರಿಗ್ರಹಮುಮಂ ತಕ್ಕಂತೆ ಕೊಂಡಾಡುವುದು. ರಸಂ ಬಂದೊಡೆ ತಂಬುಲಮಂ, ಎಳ್ ಬಂದೊಡೆ ಕೊದಳಿಯುಂ, ಬೆಳಸು ಬಂದೊಡೆ ನೆಲನಂ, ಸಾಲಂ ಬಂದೊಡೆ ಒಟ್ಟೆಗುತ್ತನಂ, ಕೂಟನುಂಡೊಡೆ ಪುಲ್ಲಿಗೆಯುಂ, ಬಿಡುವಂತೆ ತನ್ನ ಕಾರ್ಯಂ

ಮತಿವಂತರಿಗೆ ನಾಚಿಕೆ ತರುವಂಥದಲ್ಲವೆ ? ಸಿಟ್ಟಾದರೆ ಕರ್ಮವೆಂಬ ಶತ್ರುವಿನ ಮೇಲೆ ಸಿಟ್ಟಾಗಬೇಕು. ಆ ಕರ್ಮರಾಜನ ಪ್ರೇರಣೆಯಿಂದ ಹೆಚ್ಚಿನ ಕಷ್ಟವನ್ನುಂಟುಮಾಡುವ ದುರ್ಜನರ ಮೇಲೆ ಸಿಟ್ಟುಗೊಳ್ಳುವುದು ಒಂದು ಚಾತುರ್ಯವೆ ? ೧೩೨-೧೩೩. ಒರೆಯಿಂದ ಕೂಡಿದ ಕತ್ತಿಯ ಏಟೂ ಅಂಗಿಯಿಂದ ಕೂಡಿ ಮಾಡಿದ ಸ್ನಾನವೂ ಮುಗಿಲಿನಿಂದ (?) ಕೂಡಿದ ಮದುವೆಯೂ ಮಣ್ಣು ಬೆರಸಿದ ನೀರೂ ತಾಮ್ರ ಬೆರಸಿದ ಚಿನ್ನವೂ ಗಸಿ ಬೆರಸಿದ ಎಣ್ಣೆಯೂ ನೀರು ಬೆರಸಿದ ಹಾಲೂ, ಕಪ್ಪುಬಣ್ಣದಿಂದ ಕೂಡಿದ ಮಾಣಿಕ್ಯವೂ ಕೋಪ ಬೆರೆತ ಪ್ರೇಮವೂ ಮರಳು ಬೆರಸಿದ ಅನ್ನವೂ ಹೇಗೂ ಚೆನ್ನಲ್ಲ. ಹಾಗೆಯೇ ಶರೀರದ, ಆಸ್ತಿಸಂಗ್ರಹದ, ಮೋಹದಿಂದ ಕೂಡಿದ ಧ್ಯಾನವೂ ಶೋಭಿ ಸುವುದಿಲ್ಲ. ಅಲ್ಲದೆ ಹೊಳೆಯ ಕಾರಣದಿಂದ ಹರಿಗೋಲನ್ನು, ಮುಳ್ಳಿನ ಕಾರಣದಿಂದ ಚಪ್ಪಲಿಯನ್ನೂ ಸೂಳೆಯ ಕಾರಣದಿಂದ ಕುಂಟಿಣಿಯನ್ನೂ ಮಗಳ ಕಾರಣದಿಂದ ಅಳಿಯನನ್ನೂ ಕೆಲಸಕ್ಕೋಸ್ಕರ ಬಂಟನನ್ನೂ ಹೊಗಳುವಂತೆ ಸ್ವರ್ಗಾಪವರ್ಗಗಳಿ ಗೋಸ್ಕರ ಶರೀರವನ್ನೂ ಪರಿಗ್ರಹವನ್ನೂ ತಕ್ಕಷ್ಟು ಕೊಂಡಾಡಬೇಕು (ಆದರಿಸಬೇಕು). ರಸಬಂದ ಮೇಲೆ ತಂಬುಲವನ್ನೂ ಎಳ್ಳು ಸಿಕ್ಕಿದ ಮೇಲೆ ಎಳ್ಳಿನಕಾಯಿ ಸಿಪ್ಪೆಯನ್ನೂ ಬೆಳೆ ಬಂದರೆ ನೆಲವನ್ನೂ, ಸಾಲಬಂದರೆ ಗಿರವಿಯ ವಸ್ತುವನ್ನೂ ಅನ್ನವನ್ನು ತಿಂದ ಮೇಲೆ ಪುಲ್ಲಿಗೆ (ಒಂದು ಭಕ್ಷ್ಯ)ಯನ್ನೂ ಬಿಟ್ಟು ಬಿಡುವ ಹಾಗೆ ತನ್ನ ಕೆಲಸ ತೀರಿದ

ತೀರ್ದ ಬೞಿಕ್ಕೆ ಕಡೆಯೊಳ್ ಶರೀರಮುಮಂ ಪರಿಗ್ರಹಮುಮಂ ತ್ರಿಶುದ್ಧಿಯಿಂ ಬಿಟ್ಟು ಪರಿಚ್ಛೇದಿಪ್ಪುದೀ ನೀತಿಯಲ್ಲದೆ ಸ್ವರ್ಗಾಪವರ್ಗಂಗಳನೆಯ್ದುವೆನೆಂಬಂ ಗಳೆವೆರಸು ಬಿಲಂಬುಗುವೆನೆಂಬ ಕಡಿತಲೆವೆರಸು ಪಾಸಿನಮೇಲೆ ನಿದ್ರೆಗೆಯ್ವೆನೆಂಬ ಕುದುರೆಯನೇಱಿ ಮಾಡಕೆಯ್ದುವೆನೆಂಬ ಬಂಡಿವೆರಸು ಕೋಂಟೆಯಂ ಲಂಘಿಸುವೆನೆಂಬ ಬಿಟ್ಟೇಱುಮಡ್ಡಣಂ ಬೆರಸು ತೊಱೆಯನೀಸುವೆನೆಂಬ ಬೆಳ್ತನಮಕ್ಕುಮೆಂದು ಶರೀರಮುಮಂ ಪರಿಗ್ರಹಮುಮಂ ತೊಱೆದು ಶುಕ್ಲಧ್ಯಾನದಿಂ ಘಾತಿಕರ್ಮಂಗಳಂ ಕಿಡಿಸಿ ಕೇವಲಜ್ಞಾನಿಯಾಗಿರ್ಪುದುಂ ಚತುರ್ವಿಧದೇವರ್ಕಳುಂ ಕೇವಲಿಪೂಜೆಯಂ ಮಾಡಲ್ವೇಡಿ ಬಂದು ಪೂಜಿಸಿ ಮುಂದೆ ನಿಂದು ಸ್ತುತಿಸಿದರಿಂತು ೧೩೪

ಜಯದಿವಿಜಮಹಿತ ಜಯ ದೋಷರಹಿತ
ಜಯದಿವ್ಯಮೂರ್ತಿ ಜಯ ವಿದಿತಕೀರ್ತಿ
ಜಯಮದನವೈರಿ ಜಯ ದುರಿತಹಾರಿ
ಜಯ ಗುಣನಿಧಾನ ಜಯ ಸುಖನಿಧಾನ
ಜಯಶಾಂತರೂಪ ಜಯ ವಿಜಿತಕೋಪ
ಜಯ ಮೋಹವಿಳಯ ಜಯ ಧರ್ಮನಿಳಯ
ಜಯ ಭವ್ಯವಂದ್ಯ ಜಯ ಜಗದ್ವಂದ್ಯ

ತರುವಾಯ, ಕೊನೆಯಲ್ಲಿ ಶರೀರವನ್ನೂ ಪರಿಗ್ರಹವನ್ನೂ ತ್ರಿಕರಣಶುದ್ಧವಾಗಿ (ಮನಸ್ಸು, ಮಾತು, ಕ್ರಿಯೆ) ಬಿಟ್ಟು ನಿರ್ಧರಿಸುವುದೇ ನೀತಿಯೇ ಹೊರತು ಸ್ವರ್ಗ ಮೋಕ್ಷಗಳನ್ನು ಹೊಂದುವೆನೆಂಬವನು ಗಳೆಯೊಡನೆ ಬಿಲವನ್ನು ಹೋಗುತ್ತೇನೆನ್ನುವ, ಕತ್ತಿಯೊಡನೆ ಹಾಸಿಗೆಯ ಮೇಲೆ ನಿದ್ದೆ ಮಾಡುವೆನೆಂಬ, ಕುದುರೆಯನ್ನು ಹತ್ತಿಕೊಂಡು ಉಪ್ಪರಿಗೆಗೆ ಹತ್ತುವೆನೆಂಬ, ಬಂಡಿಯೊಡನೆ ಕೋಟೆಯನ್ನು ಹಾರಿ ದಾಟುವೆನೆನ್ನುವ ಭರ್ಜಿ, ಗುರಾಣಿಗಳನ್ನು ಹಿಡಿದುಕೊಂಡೇ ಹೊಳೆಯನ್ನು ಈಜುವೆನೆನ್ನುವ ಬೆಪ್ಪುತನವಾಗುವುದೆಂದು, ಶರೀರವನ್ನೂ ಪರಿಗ್ರಹವನ್ನೂ ತ್ಯಜಿಸಿ ಶುಕ್ಲಧ್ಯಾನದಿಂದ ಘಾತಿ ಕರ್ಮಗಳನ್ನು ನಾಶಪಡಿಸಿ ಕೇವಲಜ್ಞಾನವನ್ನು ಹೊಂದಿರಲಾಗಿ ನಾಲ್ಕು ಬಗೆಯ ದೇವರುಗಳೂ ಕೇವಲಿಯ ಪೂಜೆಯನ್ನು ಮಾಡಲು ಬಯಸಿ ಬಂದು ಪೂಜೆಮಾಡಿ ಆತನ ಮುಂದೆ ನಿಂತು ಈ ರೀತಿಯಾಗಿ ಸ್ತೋತ್ರ ಮಾಡಿದರು. ೧೩೪. ದೇವತೆಗಳಿಂದ ಮನ್ನಣೆ ಹೊಂದಿದವನೇ, ಜಯ! ದೋಷವಿಲ್ಲದವನೇ, ಜಯ! ದಿವ್ಯಮೂರ್ತಿಯೇ ಕೀರ್ತಿವಂತನೇ, ಜಯ! ಮನ್ಮಥಶತ್ರುವೇ, ಪಾಪಪರಿಹಾರಕನೇ ಜಯ! ಗುಣಗಳ ನಿಕ್ಷೇಪದಂತಿರುವವನೇ, ಜಯ! ಸುಖನಿಧಾನನೇ ಜಯ! ಕೋಪವನ್ನು ಗೆದ್ದವನೇ. ಶಾಂತರೂಪನೇ, ಜಯ! ಮೋಹಕ್ಕೆ ಪ್ರಳಯವನ್ನುಂಟುಮಾಡಿದವನೇ, ಧರ್ಮಕ್ಕೆ ಮನೆಯಾಗಿರುವವನೇ, ನಿನಗೆ ಜಯ! ಭವ್ಯರಿಂದ ವಂದನೆ ಪಡೆವವನೆ, ಜಗತ್ತಿಗೇ

೯೭೭

ಜಯ ಕಾಂತಿಧಾಮ ಜಯ ಪುಣ್ಯಧಾಮ
ಜಯ ಮುನಿಗಣೇಶ ಜಯ ಮದವಿನಾಶ
ಜಯ ದಯಾಸಮುದ್ರ ಜಯ ನಯಸಮುದ್ರ
ಜಯಸಚ್ಚರಿತ್ರ ಜಯ ಜಗಪವಿತ್ರ
ಜಯ ಸೇವ್ಯವಚನ ಜಯ ಸತ್ಯವಚನ
ಜಯ ಯಮಕೃತಾಂತ ಜಯ ಮುಕ್ತಿಕಾಂತ
ಜಯ ಬೋಧರೂಪ ಜಯ ನಷ್ಟತಾಪ
ಜಯ ಸಕಲರುಂದ್ರ ಜಯ ಜಯ ಜಿನೇಂದ್ರಾ ೧೩೫

ಶ್ರೀಯುಂ ನಿಶ್ಶ್ರೇಯಸಸಂ
ಶ್ರೀಯುಂ ಜಿನ ನಿನ್ನ ಪಾದಸೇವನೆಯಿಂ ವಾ
ಕ್ಶ್ರೀಯುಂ ಧವಳಿತಕೀರ್ತಿ
ಶ್ರೀಯುಂ ದೊರೆಕೊಳ್ಗುಮಲ್ಲಿ ಸಂದೆಯಮುಂಟೇ ೧೩೬

ಸುರರಾಜ ಮಕುಟ ಘಟ್ಟಿತ
ಚರಣದ್ವಯ ಕರ್ಮಜಲಧಿಬಡಬಾನಲ ಭಾ
ಸುರಬೋಧ ನಿನ್ನನಱಿಯದೆ
ದುರಿತಯುತರ್ ಪೊರ್ದಲಾಱರಕ್ಷಯಸುಖಮಂ ೧೩೭

ವಂದನಾರ್ಹನೇ ಜಯವಾಗಲಿ ! ಕಾಂತಿಗೆ ಆಶ್ರಯನಾದವನೆ, ಪುಣ್ಯಕ್ಕೆ ನೆಲೆಯಾದವನೆ, ಜಯಂ ! ಮುನಿಗಳ ಸಮೂಹಕ್ಕೆ ಒಡೆಯನೆ, ಅಹಂಕಾರ ವಿನಾಶಮಾಡಿದವನೇ, ಜಯ ! ದಯಾಸಮುದ್ರನೇ, ನೀತಿಶಾಸ್ತ್ರಸಮುದ್ರನೇ ಜಯ ! ಸಚ್ಚರಿತ್ರನೇ, ಜಗತ್ತನ್ನು ಪವಿತ್ರಗೊಳಿಸಿದವನೇ, ಜಯ ! ಸತ್ಯವಾಕ್ಯನೇ ಪೂಜ್ಯವಾಕ್ಯನೇ ಜಯ ! ಯಮನಿಗೆ ಯಮನಾದವನೇ (ಯಮನನ್ನು ಗೆದ್ದವನೇ) ಮುಕ್ತಿಕಾಂತಾಪ್ರಿಯನೇ, ಜಯ ! ಜ್ಞಾನಸ್ವರೂಪನೆ, ತಾಪಗಳನ್ನು ಕಳೆದುಕೊಂಡವನೇ, ಜಯಂ, ಜಯ ! ಸಕಲರಿಗೂ ದೊಡ್ಡವನಾದ ಜಿನೇಂದ್ರನೇ ಜಯಾ ಜಯ ಜಯಾ ! ೧೩೫. ಜಿನನೇ, ನಿನ್ನ ಪಾದಸೇವೆಯಿಂದ ಐಶ್ವರ್ಯವೂ ಮೋಕ್ಷಲಕ್ಷ್ಮಿಯೂ, ವಾಕ್‌ಶ್ರೀಯೂ ಶುದ್ಧವಾದ ಕೀರ್ತಿಲಕ್ಷ್ಮಿಯೂ ಲಭಿಸುವುದರಲ್ಲಿ ಸಂಶಯವುಂಟೆ ? ೧೩೬. ದೇವರಾಜನ ಕಿರೀಟ ತಾಕಿದ ಪಾದಗಳುಳ್ಳವನೆ, ಕರ್ಮಸಮುದ್ರಕ್ಕೆ ಬಡಬಾಗ್ನಿಯಾದವನೆ, ಜ್ಞಾನಪ್ರಕಾಶನೆ, ನಿನ್ನನ್ನು ತಿಳಿಯಲಾರದೆ ಪಾಪಿಗಳು ಅಕ್ಷಯ ಸುಖವನ್ನು ಪಡೆಯಲಾರರು. ೧೩೭.

ನರಕದೊಳಡಿಗಡಿಗೆ ಮಹಾ
ದುರಿತದ ಫಲದಿಂದೆ ಬರ್ದು ನವೆವರ್ ನಿನ್ನಂ
ಸ್ಮರಿಯಿಸಲರ್ಚಿಸಲೊಲ್ಲದೆ
ನರರವನಿಯೊಳಲ್ಲಿ ದೇವ ಸಂದೆಯಮುಂಟೇ ೧೩೮

ದಿನಕರನುದಯಂಗೆಯ್ಯದೆ
ಘನವಪ್ಪ ಮಹಾಂಧಕಾರಮುಡುಗದ ತೆಱದಿಂ
ಜಿನನಾಥ ನಿನ್ನ ಪದಮಂ
ನೆನೆಯದ ಮನುಜಂಗೆ ಪೋಗದೆಂತುಂ ಕರ್ಮಂ ೧೩೯

ತಾರಾಧೀಶ್ವರನುದಯದೆ
ವಾರಾಸಿ ಕಡಂಗಿ ಪೆರ್ಚುವಂತಿರೆ ಮುಕ್ತಿ
ಶ್ರೀರಮಣ ನಿನ್ನ ಮಹಿಮೆಗೆ
ಧಾರಿಣಿಯೊಳ್ ಭವ್ಯನಪ್ಪ ಮನುಜನೆ ನಲಿಗುಂ ೧೪೦

ಪಿಂಗದ ಬೆಳ್ದಿಂಗಳ್ ಕ
ಳ್ಳಂಗೆಂತುಂ ಶೋಭೆವಡೆಯದಂತದಱಿಂದು
ತ್ತುಂಗಗುಣ ನಿನ್ನ ಮೃದುವಚ
ನಂಗಳುಮೇಗೆಯ್ದುಮೊಪ್ಪವಱಿಮನದಂಗಂ ೧೪೧

ಲೋಕದಲ್ಲಿ ನಿನ್ನನ್ನು ಸ್ಮರಿಸುವುದಕ್ಕೂ ಪೂಜಿಸುವುದಕ್ಕೂ ಇಷ್ಟವಿಲ್ಲದೆ, ಪುನಃ ಪುನಃ ತಮ್ಮ ಹೆಚ್ಚಿನ ಪಾಪದ ಫಲದಿಂದ ನರಕದಲ್ಲಿ ಬಿದ್ದು ನರಳುತ್ತಾರೆ. ಸ್ವಾಮಿ, ಆದರಲ್ಲಿ ಸಂದೇಹವುಂಟೆ ? ೧೩೮. ಸೂರ್ಯೋದಯವಾಗದೆ ದಟ್ಟವಾದ ಕತ್ತಲೆ ಕಳೆದು ಹೋಗದ ರೀತಿಯಲ್ಲಿ ಜಿನನಾಥನೇ ! ನಿನ್ನ ಪಾದಗಳನ್ನು ಸ್ಮರಿಸದ ಮನುಷ್ಯನಿಗೆ ಹೇಗೂ ಕರ್ಮವು ಕಳೆದುಹೋಗುವುದಿಲ್ಲ. ೧೩೯. ತಾರಾಪತಿಯಾದ ಚಂದ್ರನ ಉದಯ ಕಾಲದಲ್ಲಿ ಸಮುದ್ರವು ಉತ್ಸಾಹದಿಂದ ಉಕ್ಕುವ ಹಾಗೆ, ಮುಕ್ತಿಶ್ರೀರಮಣನೆ ! ನಿನ್ನ ಮಹಿಮೆಗೆ ಈ ಲೋಕದಲ್ಲಿ ಭವ್ಯನಾದ ಮನುಷ್ಯನೇ ನಲಿಯುತ್ತಾನೆ. ೧೪೦. ಕುಗ್ಗದ ಬೆಳದಿಂಗಳು ಕಳ್ಳನಿಗೆ ಹೇಗೂ ಅಂದವೆನಿಸಲಾರದು. ಅದರೆ ಹಾಗೆಯೇ ಉನ್ನತ ಗುಣಶಾಲಿಯೇ ! ನಿನ್ನ ಮೃದುವಾಕ್ಯಗಳು ನೀಚಮನಸ್ಸಿನವನಿಗೆ ಏನು ಮಾಡಿದರೂ ಒಪ್ಪಿಗೆ ಯಾಗುವುದಿಲ್ಲ, ೧೪೧. ನಿನ್ನ ಆಗಮ (ಜಿನಾಗಮ)ವು ಇದ್ದ ಹಾಗೆಯೇ ಇದೆ.

ನಿನ್ನಾಗಮ ಮಿರ್ದಂತಿರೆ
ತನ್ನಿಚ್ಛೆಗೆ ನಚ್ಚಿ ಮೆಚ್ಚಿ ಕಪ್ಪರ ಮನಮಂ
ಮನ್ನಿಸಿ ನೆಱೆ ಕೇಳ್ವ ನರಂ
ಸನ್ನುತಸೌಖ್ಯಕ್ಕೆ ದೇವ ಭಾಜನನಲ್ಲಂ ೧೪೨

ಬಿಡದಭವ ನಿನ್ನ ಮತಮಂ
ಪಿಡಿದಿರ್ದನೆ ಪಡೆಗುಮಕ್ಷಯಶ್ರೀಸುಖಮಂ
ಕುಡುವುದು ನಿನ್ನಭಿಮತಮಂ
ಬಿಡದಿರ್ಪತಿಶಯ ಸುಬುದ್ಧಿಯಂ ದುರಿತಹರಾ ೧೪೩

ಗದ್ಯ॥ ಎಂದನೇಕಸ್ತುತಿಶತ ಸಹಸ್ರಂಗಳಿಂ ಸ್ತುತಿಯಿಸುವ ದಿವಿಜನಿಕಾಯಮಂ ಹಳಮುಖಂ ಕಂಡು ಭಯಂಗೊಂಡು ಗುರುದತ್ತಕೇವಳಿಗಳ ಶ್ರೀಪಾದಪದ್ಮಂಗಳ್ಗೆಱಗಿ ಪೊಡೆಮಟ್ಟು ತನ್ನ ಮುನ್ನಿನ ನಾಲ್ಕು ಭವಂಗಳಂ ಕೇಳ್ದು ಸಂಸಾರಕ್ಕೆ ವಿಸ್ಮಯಂ ಬಟ್ಟು ವಿರಕ್ತನಾಗಿ ಅವಸರ್ಪಿಣೀ ಕಾಲದ ಸಾಮರ್ಥ್ಯಮನೆನಗೆ ಬೆಸಸುವುದೆಂದು ವಿನಮಿತಮಸ್ತಕನಾಗಿರ್ಪುದುಂ ಜಿನಸಮಯ ವಾರ್ಧಿವರ್ಧನ ಚಂದ್ರನಿಂತೆಂದು ಪೇಟ್ದಂ ೧೪೪

ಪರಹಿತರಿಲ್ಲ ಧರ್ಮಪರರಿಲ್ಲ ದಯಾನ್ವಿತರಿಲ್ಲ ಮರ್ತ್ಯರೊಳ್
ಕರುಣೆಗಳಿಲ್ಲ ಸಚ್ಚರಿತರಿಲ್ಲ ದೃಢವ್ರತರಿಲ್ಲ ಮೋಹದೊಳ್
ಪೊರೆಯದರಿಲ್ಲ ಶೀಲಗುಣಮುಳ್ಳವರಿಲ್ಲ ಸಮಸ್ತಶಾಸ್ತ್ರದೊಳ್
ಪರಿಣತರಿಲ್ಲ ಧಾರಿಣಿಯೊಳುರ್ವಿದ ದುಷ್ಷಮಕಾಲದೇಟ್ಗೆಯೊಳ್ ೧೪೫

ಆದರೆ ತನ್ನ ಇಷ್ಟದಂತೆ ಆಲ್ಪರ ಮನಸ್ಸನ್ನು ಪ್ರೀತಿಸಿ ಮೆಚ್ಚಿಸಿಕೊಂಡು ಮನ್ನಿಸಿ ವಿಶೇಷವಾಗಿ ಕೇಳುವ ಮಾನವನು ಶ್ರೇಷ್ಠವಾದ ಸೌಖ್ಯ (ಮೋಕ್ಷ) ಕ್ಕೆ ಪಾತ್ರನಲ್ಲ. ೧೪೨. ಜನ್ಮರಹಿತನೆ, ನಿನ್ನ ಮತವನ್ನು ಬಿಡದೆ ಒಂದೇ ಸಮನಾಗಿ ಹಿಡಿದಿರುವವನೇ ಅಕ್ಷಯಮೋಕ್ಷಸುಖವನ್ನು ಪಡೆಯುವನು, ಪಾಪಹರನೇ! ನಿನ್ನ ಧರ್ಮವನ್ನು ಬಿಡದೆ ಇರುವಂಥ ಅತಿಶಯವಾದ ಒಳ್ಳೆಯ ಬುದ್ಧಿಯನ್ನು ಕೊಡಬೇಕು ೧೪೩. ಎಂದು ಅನೇಕ ಶತಸಹಸ್ರ ಸ್ತೋತ್ರಗಳಿಂದ ಹೊಗಳುವ ದೇವಸಮೂಹವನ್ನು ಕಂಡು ಆ ಹಳಮುಖನು ಭಯಪಟ್ಟುಕೊಂಡು ಗುರುದತ್ತ ಕೇವಲಿಗಳ ಪಾದಗಳಿಗೆ ನಮಸ್ಕರಿಸಿ ತನ್ನ ಮುಂಚಿನ ನಾಲ್ಕು ಜನ್ಮಗಳ ವೃತ್ತಾಂತವನ್ನು ಕೇಳಿ ಸಂಸಾರದ ವಿಷಯಕ್ಕೆ ಆಶ್ಚರ್ಯ ಪಟ್ಟು ವೈರಾಗ್ಯಹೊಂದಿ ಅವಸರ್ಪಿಣೀಕಾಲದ ಸಾಮರ್ಥ್ಯವನ್ನು ನನಗೆ ಹೇಳಬೇಕೆಂದು ತಲೆಬಾಗಿರಲು ಜೈನಧರ್ಮಸಮುದ್ರವನ್ನು ವೃದ್ಧಿಪಡಿಸುವ ಚಂದ್ರನು ಹೀಗೆಂದು ಹೇಳಿದನು. ೧೪೪. "ಲೋಕದಲ್ಲಿ ಹಬ್ಬಿದ ದುಷ್ಷಮಕಾಲದ ಏಳಿಗೆಯಲ್ಲಿ ಪರಹಿತ ಚಿಂತಕರು, ಧರ್ಮಾಸಕ್ತರು, ದಯೆಯುಳ್ಳವರು, ಇರುವುದಿಲ್ಲ. ಮಾನವರಲ್ಲಿ ಕರುಣಾ ಶಾಲಿಗಳಿರರು. ಒಳ್ಳೆಯ ನಡತೆಯವರು, ದೃಢವ್ರತರು, ಇರುವುದಿಲ್ಲ. ಮೋಹ ದಿಂದ ತುಂಬದವರು, ಶೀಲಗುಣವುಳ್ಳವರು, ಎಲ್ಲ ಶಾಸ್ತ್ರಗಳಲ್ಲಿಯೂ ಪಂಡಿತರಾದವರು

ದರವುರಮಾಗಿ ಪೋಕು ಮುಟಿ ಪೆರ್ವೆಳಸಲ್ಲಿಯುಮಾಗದೊರ್ವರುಂ
ಸ್ಥಿರಗುಣರಿಲ್ಲ ಭೂಭುಜರೊಳಾಜ್ಞೆಗಳಿಲ್ಲ ಕವರ್ತೆ ಮೊಕ್ಕಳಂ
ತಿರಿವರನೇಕರರ್ಥಪತಿಗಳ್ ಪಲರಿಲ್ಲ ಜನಕ್ಕೆಪೀಡೆ ತ
ಸ್ಕರರಿನಿಳೇಶರಿಂದೊದವುಗುಂ ಸಲೆ ದುಷ್ಷಮಕಾಲದೇಟ್ಗಿಯೊಳ್ ೧೪೭

ಸಿರಿ ದೊರೆಕೊಳ್ಳದಾಸಿರಿಗೆ ಚಿಂತಿಸುತಿರ್ಪರನೇಕರಾಗಮ
ಜ್ಞರ ನುಡಿದೋಜೆಯಿಂ ನಡೆವರಿಲ್ಲ ತದಾಗಮಮಂ ಧರಿತ್ರಿಯೊಳ್
ಕರಮನುರಾಗದಿಂ ಪದೆದು ಕೇಳದೆ ದುರ್ಗತಿಹೇತುವಪ್ಪ ದು
ಶ್ಚರಿತಕಥಾಳಿಯೊಳ್ನಲಿವರೊಪ್ಪಿರೆ ದುಷ್ಷಮಕಾಲದೇಟ್ಗಿಯೊಳ್ ೧೪೭

ದಯೆ ದಮಮಪ್ಪ ಧರ್ಮಮಮನೇಕರುಮೊಲ್ಲದೆ ಕಷ್ಟಮಪ್ಪ ನಿ
ರ್ದಯೆವೆರಸಿರ್ದಧರ್ಮಮನುದಾರತೆಯಿಂ ನೆಟಿ ಪೊರ್ದುವರ್ ಗುಣಾ
ಶ್ರಯರನವುಂಕಿ ಬಾಧಿಸಿ ಕನಿಷ್ಠಗುಣಾನ್ವಿತರಪ್ಪರೊಳ್ ಮಹಾ
ಪ್ರಿಯಮನೆ ಮಾಡುವರ್ ಪದೆದು ಮಾಣದೆ ದುಷ್ಷಮಕಾಲದೇಟ್ಗಿಯೊಳ್ ೧೪೮

ಗಂಡರಮೇಲೆ ಸತ್ಯಗುಣಮುಂ ಪ್ರಭುಶಕ್ತಿಯುಮಾಯತಿಕ್ಕೆಯುಂ
ಪೆಂಡಿರ ಮೇಲೆ ದಿವ್ಯಗುಣಮುಂ ಪತಿಭಕ್ತಿಯುಮುನ್ನತಿಕ್ಕೆಯುಂ
ಪಂಡಿತರಪ್ಪರೊಳ್ಗುಣಮುಮಾಗಮದೋಜೆಯುಮುನ್ನತಿಕ್ಕೆಯುಂ
ಮಂಡಲದೊಳ್ ವಿಚಾರಿಸುವೊಡಾಗವು ದುಷ್ಷಮಕಾಲದೇಟ್ಗಿಯೊಳ್ ೧೪೯

ಇರುವುದಿಲ್ಲ. ೧೪೫. ಹೆಚ್ಚಾದ ದುಷ್ಷಮಕಾಲದ ವಿಳಿಗೆಯಲ್ಲಿ ಮಳೆ ಚದರಿ ಹೋಗುವುದು. ಎಲ್ಲಿಯೂ ಹೆಚ್ಚಾದ ಬೆಳೆಯಾಗದು. ಒಬ್ಬರೂ ಸ್ಥಿರವಾದ ಗುಣವುಳ್ಳವರಾಗಿರುವುದಿಲ್ಲ. ರಾಜರು ದಕ್ಷರಲ್ಲ ; ಲೂಟಿ ಹೆಚ್ಚು. ತಿರುಪೆಯವರು ಹೆಚ್ಚು. ಅನೇಕ ಶ್ರೀಮಂತರಿರುವುದಿಲ್ಲ. ಕಳ್ಳರಿಂದ, ರಾಜರಿಂದ, ಪ್ರಜೆಗಳಿಗೆ ಪೀಡೆಯುಂಟಾಗುವುದು. ೧೪೬. ಐಶ್ವರ್ಯ ಲಭಿಸದು. ಆ ಸಿರಿತನಕ್ಕೆ ಚಿಂತಿಸುತ್ತಿರುವವರು ಅನೇಕರು. ದುಷ್ಷಮಕಾಲದ ವಿಳಿಗೆಯಾದಾಗ ಆಗಮಜ್ಞರು ಹೇಳಿದ ಕ್ರಮದಂತೆ ನಡೆಯುವವರಿರುವುದಿಲ್ಲ. ಜಿನಾಗಮವನ್ನು ಲೋಕದಲ್ಲಿ ಬಹಳ ಪ್ರೇಮದಿಂದ ಉತ್ಸಾಹಿಸಿ ಕೇಳದೆ ದುರ್ಗತಿಗೆ ಕಾರಣವಾದ ದುಷ್ಟಚರಿತ್ರೆ, ಕಥೆಗಳ ಸಮೂಹದಿಂದ ನಲಿಯುವರು. ೧೪೭. ದುಷ್ಷಮಕಾಲದಲ್ಲಿ ದಯೆ, ಮನೋನಿಗ್ರಹಗಳ ಧರ್ಮವನ್ನು ಒಲ್ಲದೆ ಅನೇಕರು ನೀಚವಾದ ನಿರ್ದಯೆಯಿಂದ ಕೂಡಿದ ಧರ್ಮವನ್ನು ಧಾರಾಳವಾಗಿ ಆಶ್ರಯಿಸುವರು. ಗುಣವಂತರನ್ನು ಮೇಲೆ ಬಿದ್ದು ಹಿಂಸೆಪಡಿಸಿ ನೀಚಗುಣದವರಲ್ಲಿ ಬಹಳ ಪ್ರೀತಿಯನ್ನೇ ಮಾಡುತ್ತಾರೆ. ಅದರಲ್ಲಿ ಅವರು ಉತ್ಸಾಹವನ್ನು ಬಿಡುವುದಿಲ್ಲ. ೧೪೮. ದುಷ್ಷಮಕಾಲದಲ್ಲಿ ವಿಚಾರಮಾಡಿದರೆ ದೇಶದಲ್ಲಿ ಶೂರರಿಗೆ, ಸತ್ಯ, ಪ್ರಭುಶಕ್ತಿ, ಸಾಮರ್ಥ್ಯವಿರುವುದಿಲ್ಲ. ಹೆಂಗಸರಲ್ಲಿ ಒಳ್ಳೆಯ ಗುಣ, ಪತಿಭಕ್ತಿಯ ಹೆಚ್ಚಿಗೆಯೂ ಇರುವುದಿಲ್ಲ. ಪಂಡಿತರಾದವ

ಬಡವರ ಮೇಲುದಾರಗುಣಮುಳ್ಳವರೊಳ್ ಕಡುಲೋಭಮೊಳ್ಳಿತಂ
ನುಡಿವವರೊಳ್ ದರಿದ್ರತೆ ಕುಲಾನ್ವಿತರೊಳ್ ಕಡುಹೀನವೃತ್ತಿ ನೋ
ೞ್ಪಡೆ ಕುಲಹೀನರೊಳ್ ಮಹಿಮೆ ಗಾವಿಲರೊಳ್ ಸಿರಿ ಬುದ್ಧಿವಂತರೊಳ್
ಬಡತನಮಾವಗಂ ಜನಿಯಿಕುಂ ಸಲೆ ದುಷ್ಷಮಕಾಲದೇೞ್ಗೆಯೊಳ್ ೧೫೦

ಸಸಿ ಕಿಡುಗುಂ ತೃಣಂ ಬಹಳಮಕ್ಕುಮಸತ್ಯಮೆ ಪೆರ್ಚುಗುಂ ಶ್ರುತಂ
ಕುಸಿಗುಮನಿಷ್ಟಕಾರಿಗಳ್ ಬಾೞ್ವರುದಾರರೆ ಸಾವರೆತ್ತಲುಂ
ಮಿಸುಕದು ಜೈನಧರ್ಮದ ನೆಗೞ್ತಿ ಕುಲಿಂಗಿಗಳುಂ ಕುದೈವಮುಂ
ವಸುಧೆಯೊಳುರ್ವುಗುಂ ನಿಮಿರ್ದು ದುಷ್ಷಮ ಕಾಲದೇೞ್ಗೆಯೊಳ್ ೧೫೧

ದುರಿತದೊಳಾರ್ತು ಕೊರ್ತೆಸಗಿ ದುರ್ಮತಮಂ ಪಿಡಿದುರ್ಕಿ ಸೊಕ್ಕಿ ನಿ
ಷ್ಠುರ ನರಕಾಬ್ಧಿಯೊಳ್ ಕೆಡೆದು ದುಃಖಮನುಣ್ಬವರುರ್ವಿಯೊಳ್ ಪಲರ್
ನಿರುಪಮಮಪ್ಪ ಜೈನಪದಸೇವನೆಯಿಂ ಸುರಲೋಕಕ್ಕೆಯ್ದುವರ್
ಧರೆಯೊಳಪೂರ್ವಮಚ್ಚರಿ ವಿಚಾರಿಸೆ ದುಷ್ಷಮಕಾಲದೇೞ್ಗೆಯೊಳ್ ೧೫೨

ಗದ್ಯ॥ ಎಂದು ಪೇೞ್ವುದುಂ ದುಷ್ಷಮ ಕಾಲಕ್ಕಂ ತನ್ನ ಮುನ್ನಗೆಯ್ದ ಪಾಪಕ್ಕಂ ನಡುಗಿ ಜಿನದೀಕ್ಷೆಯುಂ ಕೈಕೊಂಡು ಪೋದಂ ; ಗುರುದತ್ತಮುನಿನಾಥಂ ಧರಣೀ ಚಕ್ರದೊಳ್ ವಿಹಾರಿ

ರಲ್ಲಿ ಒಳ್ಳೆಯ ಗುಣವೂ ಓಜಸ್ಸೂ, ಔನ್ನತ್ಯವೂ ಆಗುವುದಿಲ್ಲ. ೧೪೯. ಉದಾರ ಗುಣವುಳ್ಳವರಿಗೆ ಬಡವರ ವಿಚಾರದಲ್ಲಿ ಹೆಚ್ಚಿನ ಜಿಪುಣತನ, ಒಳ್ಳೆಯದನ್ನು ಹೇಳುವವರಲ್ಲಿ ಬಡತನ, ಸತ್ಕುಲಪ್ರಸೂತರಲ್ಲಿ ಬಹಳ ನೀಚಜೀವನ, ಕುಲಹೀನರಲ್ಲಿ ಮಹತ್ವ, ದಡ್ಡರಲ್ಲಿ ಐಶ್ವರ್ಯ, ಬುದ್ಧಿಶಾಲಿಗಳಿಗೆ ಬಡತನ, ದುಷ್ಷಮ ಕಾಲದಲ್ಲಿ ನಿರಂತರವಾಗಿ ಇರುತ್ತವೆ. ೧೫೦. ದುಷ್ಷಮಕಾಲದಲ್ಲಿ ಪೈರು ಹಾಳಾಗುತ್ತದೆ ; ಹುಲ್ಲು ಬಹಳವಾಗುತ್ತದೆ. ಅಸತ್ಯವೇ ಹೆಚ್ಚುತ್ತದೆ, ಶಾಸ್ತ್ರವು ಕುಸಿಯುತ್ತದೆ, ಕೆಟ್ಟದ್ದನ್ನು ಮಾಡುವವರು ಬಾಳುತ್ತಾರೆ. ಎಲ್ಲ ಕಡೆಗಳಲ್ಲಿಯೂ ಉದಾರಸ್ವಭಾವದವರೇ ಸಾಯುವರು. ಜೈನಧರ್ಮದ ಅಭ್ಯುದಯವು ಸ್ವಲ್ಪವೂ ಆಗದು. ಭೂಮಿಯ ಮೇಲೆ ನೀಚದೈವ, ನೀಚಧರ್ಮಗಳವರು ಹೆಚ್ಚುತ್ತಾರೆ. ೧೫೧. ದುಷ್ಷಮಕಾಲದ ಏಳಿಗೆಯಾದಾಗ ಪಾಪಕಾರ್ಯದಲ್ಲಿ ಸಮರ್ಥರಾಗಿ ಪ್ರೀತಿಯಿಂದ ಕೆಲಸ ಮಾಡಿ ಕೆಟ್ಟಮತವನ್ನು ಆಶ್ರಯಿಸಿ ಉಬ್ಬಿ ಗರ್ವದಿಂದ ಕ್ರೂರವಾದ ನರಕಸಮುದ್ರದಲ್ಲಿ ಬಿದ್ದು ದುಃಖವನ್ನನುಭವಿಸುವವರು ಅನೇಕರು. ಎಣೆಯಿಲ್ಲದ ಜೈನಪಾದಸೇವೆಯಿಂದ ದೇವಲೋಕಕ್ಕೆ ಹೋಗುವವರು ಈ ಲೋಕದಲ್ಲಿ ಅಪೂರ್ವ,ಇದು ಆಶ್ಚರ್ಯ" ೧೫೨. ಎಂದು ಹೇಳಲು ಹಲಮುಖನು ದುಷ್ಷಮಕಾಲಕ್ಕೂ ತಾನು ಮುಂಚೆ ಮಾಡಿದ ಪಾಪಕ್ಕೂ ಅಂಜಿ ಜಿನದೀಕ್ಷೆಯನ್ನು ಸ್ವೀಕರಿಸಿ ಹೋದನು ; ಗುರುದತ್ತ ಮುನಿಶ್ರೇಷ್ಠನು ಭೂಮಂಡಲ

ಸುತ್ತುಂ ಬಂದು ಪಳ್ಳಿಖೇಟದೊಳ್ ಜಾತಿಜರಾಮರಣತ್ರಯ ದೂರಮಪ್ಪ ನಿರ್ವಾಣಶ್ರೀಯ ನೆಯ್ದಿದನದು ಕಾರಣದಿಂ ೧೫೩

ಕರಮೆ ಪರಿಗ್ರಹವಂ ಪಿಡಿ
ದಿರದೆ ಜಿನೇಂದ್ರಾಗಮೋಕ್ತಿಯಿಂದಿರ್ಪ ಮಹಾ
ಪುರುಷಂಗೆ ತಡೆಯದಕ್ಷಯ
ಸಿರಿಯಕ್ಕುಂ ಸುಕವಿನಿಕರಪಿಕಮಾಕಂದಾ ೧೫೪

ಜಿನಪದಸೇವನೆಯುಂ ಮನ
ದನವರತ ಜಿನೇಂದ್ರಭಕ್ತಿಯುಂ ತತ್ಪದ ಭಾ
ವನೆಯುಂ ಭಾವಿಸೆ ಸಹಜಂ
ನಿನಗಿಳೆಯೊಳ್ ಸುಕವಿನಿಕರಪಿಕಮಾಕಂದಾ ೧೫೫

ಪಿಂಗದೆ ಮಿಥ್ಯಾವಾದಿಗ
ಳಂ ಗೆಡೆಗೊಂಡಾಡದಿರ್ಪ ಕಾರಣದಿಂದಂ
ಪಿಂಗದ ಸಂಸೃತಿಯನಿದಂ
ನೀಂ ಗೆಲ್ದೈ ಸುಕವಿನಿಕರಪಿಕಮಾಕಂದಾ ೧೫೬

ಉಱೆ ಸೆಱೆವಿಡಿದಿರ್ದುದಱಿಂ
ಮಱೆಯದೆ ಜಿನಪಾದಯುಗ್ಮಮಂ ದುರಿತಂಗಳ್
ಪೆಱಪಿಂಗಿದುವಮೃತಶ್ರೀ
ಗೆಱೆಯನೆ ನೀಂ ಸುಕವಿನಿಕರಪಿಕಮಾಕಂದಾ ೧೫೭

ದಲ್ಲಿ ವಿಹಾರಿಸುತ್ತ ಬಂದು ಪಳ್ಳಿಖೇಟದಲ್ಲಿ ಜನ್ಮ, ಮುಪ್ಪು, ಮರಣಗಳೆಂಬ ಮೂರರಿಂದ ದೂರವಾದ ಮೋಕ್ಷಲಕ್ಷ್ಮಿಯನ್ನು ಸೇರಿದನು. ಆದ ಕಾರಣ ೧೫೩. ಹೆಚ್ಚಾಗಿ ಪರಿಗ್ರಹವನ್ನು ಹಿಡಿಕೊಂಡು ನಿಲ್ಲದೆ ಜಿನೇಂದ್ರನ ಆಗಮದ ಹೇಳಿಕೆಯಂತೆ ಇರುವ ಮಹಾಪುರುಷನಿಗೆ ತಡವಿಲ್ಲದೆ ಅಕ್ಷಯವಾದ ಸಂಪತ್ತು (ಮೋಕ್ಷ) ಆಗುತ್ತದೆ. ೧೫೪. ಸುಕವಿಸಮೂಹವೆಂಬ ಕೋಗಿಲೆಗಳಿಗೆ ಮಾವಿನ ಮರದಂತಿರುವ ಶ್ರೇಣಿಕ ಮಹಾರಾಜನೆ! ಜಿನಪಾದಸೇವೆಯೂ ಮನಸ್ಸಿನಲ್ಲಿ ಎಲ್ಲ ಕಾಲದಲ್ಲಿಯೂ ಜಿನೇಂದ್ರನ ಭಕ್ತಿಯೂ ಆತನ ಪಾದಧ್ಯಾನವೂ ನಿನಗೆ ಲೋಕದಲ್ಲಿ ಸ್ವಾಭಾವಿಕವಾಗಿದೆ. ೧೫೫. ಹಿಂದೆಗೆಯದೆ ಮಿಥ್ಯಾಧರ್ಮಗಳ ಪರವಾಗಿ ವಾದಿಸುವವರನ್ನು ಸ್ನೇಹಮಾಡಿಕೊಳ್ಳದೆ ಇರುವ ಕಾರಣದಿಂದ ಕಳೆಯದ ಸಂಸಾರವನ್ನು ನೀನು ಗೆದ್ದೆ. ೧೫೬. ಸುಕವಿನಿಕರಪಿಕ ಮಾಕಂದನೇ, ಜಿನಪಾದಪದ್ಮಯುಗಳವನ್ನು ಹೆಚ್ಚಾಗಿ ಮನಸ್ಸಿನಲ್ಲಿ ಸೆರೆಹಿಡಿದಿದ್ದುದರಿಂದ ಪಾತಕಗಳು ಹಿಮ್ಮೆಟ್ಟಿ ಹೋಗಿಬಿಟ್ಟವು. ನೀನು ಅಮೃತಸಂಪತ್ತಿಗೆ ಒಡೆಯನಾಗಿರುವೆ. ೧೫೭. ಮುಟ್ಟಾದ ಹೆಂಗಸಿನ ಹಾಗೆ, ನಾಲ್ಕು ದಿವಸ ಇದ್ದೂ ಇರುವುದಕ್ಕಿಲ್ಲ.

೯೮೩

ಮುಟ್ಟಲೆಗಂಡ ಸ್ತ್ರೀಯುಂ
ತಿಟ್ಟುಮಿರಲ್ಕಿಲ್ಲ ನಾಲ್ಕು ದಿವಸಂ ನಿನಗಿಂ
ಕಟ್ಟಾಸನ್ನಮುಮೆಂದೆನೆ
ನಿಟ್ಟಿಸುವೊಡೆ ಸುಕವಿನಿಕರಪಿಕವಸಂತಾ ೧೫೮

ಧರೆಯಂ ಬಿಟ್ಟತ್ತಿತ್ತಲ್
ಸುರಗಿರಿ ತೊಲಗದವೊಲರ್ಹನಂಘ್ರಿಯುಮೆಂತುಂ
ಪರಿಹರಿಸದು ನಿನ್ನ ಮನಂ
ಪರಮಾರ್ಥಂ ಸುಕವಿನಿಕರಪಿಕವಸಂತಾ ೧೫೯

ಗದ್ಯ॥ ಕೆಱೆಯಂ ಕಂಡು ಕಳವೆಯಂ ಬಿತ್ತುವಂತೆ ರಪಣಮಂ ಕಂಡು ಕಡನಂ ಕುಡುವಂತೆ ಮದವಣಿಗೆಯುಂ ಕಂಡು ಮದುವೆಗೊಡರ್ಚುವಂತೆ ಮೞೆಯುಂ ಕಂಡು ಆರಂಬಕ್ಕೊಡರ್ಚುವಂತೆ ಕೂಟಂ ಕಂಡು ಬದ್ದಿನರಂ ಕರೆವಂತೆ ಪಯಿನಂ ಕಂಡು ಕಱುಮಂ ಬಿಡುವಂತೆ ಬೆಳಗಂ ಕಂಡು ಪೊನ್ನಂ ನೋಡುವಂತೆ ಕಂಬಮಂ ಕಂಡು ಮನೆಯಂ ಮಾಡುವಂತೆ ಬೆಳೆದ ಕೆಯ್ಯಂ ಕಂಡು ಕಣನಂ ಮಾಡುವಂತೆ ಸಸಿಯಂ ಕಂಡು ನೀರಂ ಬಿಡುವಂತೆ ಮೊದಲೊಳ್ ನಿರ್ದೋಷಿಯಪ್ಪ ದೇವನನಱಿದು ಸಮ್ಯಕ್ತ್ವಂಬೆರಸು ವ್ರತಂಗಳೊಳಂ ಧರ್ಮದೊಳಂ ನೆಗೞ್ವಾತಂಗೆ ವ್ರತದೊಳ್ ತಪದೊಳಾದ ಕಾರ್ಯಸಿದ್ಧಿಯಕ್ಕುಂ. ಸಮ್ಯಕ್ತ್ವಮಿಲ್ಲದೆ ವ್ರತಮುಂ ಧರ್ಮಮುಂ ತಪಮುಂ ಪ್ರಭುವಿಲ್ಲದೂ

ನಿನಗೆ ಇನ್ನು ಬಹಳ ಹತ್ತಿರವಾಗಿದೆ (ಧರ್ಮಸಿದ್ಧಿ) ೧೫೮. ಮೇರುಪರ್ವತವು ಭೂಮಿಯನ್ನು ಬಿಟ್ಟು ಆಚೆ ಈಚೆ ಕದಲದ ಹಾಗೆ ಅರ್ಹಂತನ ಪಾದಗಳನ್ನು ನಿನ್ನ ಮನಸ್ಸು ಹೇಗೂ ಬಿಡುವುದಿಲ್ಲ. ಇದು ಸತ್ಯ ೧೫೯. ಕೆರೆಯನ್ನು ನೋಡಿ ಬತ್ತವನ್ನು ಬಿತ್ತುವ ಹಾಗೆ ಆಸ್ತಿಯನ್ನು ನೋಡಿ ಸಾಲಕೊಡುವ ಹಾಗೆ, ಮದವಣಗಿತ್ತಿಯನ್ನು ನೋಡಿ ಮದುವೆಗೆ ಪ್ರಯತ್ನಿಸುವಂತೆ, ಮಳೆಯನ್ನು ನೋಡಿ ಆರಂಭಕ್ಕೆ ಮೊದಲಿಡುವಂತೆ, ಅನ್ನವನ್ನು ಕಂಡು ಅತಿಥಿಗಳನ್ನು ಕರೆಯುವ ಹಾಗೆ, ಹಾಲನ್ನು ಗಮನಿಸಿ ಕರುವನ್ನು ಬಿಡುವ ಹಾಗೆ, ಬೆಳಕನ್ನು ಕಂಡು ಚಿನ್ನವನ್ನು ಪರೀಕ್ಷಿಸುವಂತೆ ಕಂಬವನ್ನು ನೋಡಿ ಮನೆಯನ್ನು ಮಾಡುವ ಹಾಗೆ ಬೆಳೆದ ಹೊಲವನ್ನು ನೋಡಿ ಕಣವನ್ನು ಮಾಡುವ ಹಾಗೆ ಸಸಿಯನ್ನು ನೋಡಿ ನೀರು ಹಾಯಿಸುವಂತೆ, ಮೊದಲಿನಲ್ಲಿ ದೋಷರಹಿತನಾದ ಋಷಿಯನ್ನು ನೋಡಿ ಸಮ್ಯಕ್ತ್ವದಿಂದ ಕೂಡಿದ ವ್ರತಗಳಲ್ಲಿಯೂ ಧರ್ಮದಲ್ಲಿಯೂ ಆಚರಣೆ ಮಾಡುವವನಿಗೆ ವ್ರತ ತಪಸ್ಸುಗಳಲ್ಲಿ ಬೇಕಾದ ಕಾರ್ಯಸಿದ್ಧಿಯಾಗುತ್ತದೆ. ಸಮ್ಯಕ್ತ್ವವಿಲ್ಲದೆ ಮಾಡುವ ವ್ರತ ಧರ್ಮ ತಪಸ್ಸುಗಳು ಪ್ರಭುವೇ ಇಲ್ಲದ ಊರಿನ

ರಂತೆ ಸೂರ್ಯನಿಲ್ಲದ ಪಗಲಂತೆ ಬಟ್ಟೆಯಿಲ್ಲದ ಪಯಣದಂತೆ ಕೆಚ್ಚಲಿಲ್ಲದಾವಿನಂತೆ ನೀರಿಲ್ಲದ ಬೆಳಸಿನಂತೆ ಮಡಿಯಿಲ್ಲದ ಶೃಂಗಾರದಂತೆ ಮೊಲೆವಾಲಿಲ್ಲದ ತಾಯಂತೆ ಬಾರ್ತೆಯಿಲ್ಲದದು ಕಾರಣದಿಂ ದರ್ಶನಾಂಗಂಗಳ ನಿಶ್ಶಂಕಾದ್ಯಷ್ಟ ಗುಣಂಗಳ ಫಲದಿಂ, ದರ್ಶನಂ ಬೆರಸಿದಯ್ದಣು ವ್ರತಫಲದಿಂ, ದರ್ಶನಂ ಬೆರಸಿ, ಸುಖಮನೆಯ್ದಿದ ವಸುಭೂತಿಯುಂ ಅಂಜನಚೋರನುಂ ಅನಂತಮತಿಕುಮಾರಿಯುಂ ಒದ್ದಾಯನಮಹಾರಾಜನುಂ ರೇವತೀಮಹಾದೇವಿಯುಂ ಜಿನೇಂದ್ರಭಕ್ತನುಂ ವಾರಿಷೇಣಕುಮಾರನುಂ ವಜ್ರಕುಮಾರನುಂ ವಿಷ್ಣುಕುಮಾರನುಂ ಧನಕೀರ್ತಿಕುಮಾರನುಂ ಧನದಮಹಾರಾಜನುಂ ಜಿನೇಂದ್ರದಾಸನುಂ ಪ್ರಮಾಥಿಕುಮಾರನುಂ ಗುರುದತ್ತಮಹಾರಾಜನುಮೆಂಬೀ ಪದಿನಾಲ್ವರ್ ಮಹಾಪುರುಷರೊಳಾದ ಪದಿನಾಲ್ಕುಂ ಕಥೆಗಳ ನಱಿದು ತಾನುಮವರಂತೆ ನೆಗಟ್ದು ಸಂಸಾರಸಮುದ್ರಮಂ ಕಳೆವುದೆಂದು ಗೌತಮಸ್ವಾಮಿಗಳ್ ಪೇೞೆ ಕೇಳ್ದು ಮಗಧಾವನೀವಲ್ಲಭಂ ತನಗಾಗಳ್ ಮುಕ್ತಿಶ್ರೀ ಕೈಸಾರ್ದುದೆಂಬಂತೆ ಸಂತೋಷಂಬಟ್ಟು ಪುರಕ್ಕೆ ವಂದು ಪೆರ್ಚಿಂದಿಪ್ಪತ್ತನಾಲ್ವರ್ ತೀರ್ಥಂಕರ ಪರಮದೇವರ್ಗೆಯಭಿಷೇಕಮುಮಂ ಪೂಜೆಯುಮಂ ಮಾಡಿ ಪಲವು ತೆಱದ ರತ್ನಂಗಳಿಂದರ್ಚಿಸಿ ಕೈಗಳಂ ಮುಗಿದು ೧೬೦

ಹಾಗೆ ಸೂರ್ಯನಿಲ್ಲದ ಹಗಲಿನ ಹಾಗೆ, ದಾರಿಯಿಲ್ಲದೆ ಮಾಡುವ ಪ್ರಯಾಣದ ಹಾಗೆ, ಕೆಚ್ಚಲಿಲ್ಲದ ಹಸುವಿನಂತೆ, ನೀರಿಲ್ಲದ ಬೆಳೆಯ ಹಾಗೆ, ಶುಚಿಯಿಲ್ಲದ ಶೃಂಗಾರದ ಹಾಗೆ, ಮೊಲೆ ಹಾಲು ಇಲ್ಲದ ತಾಯಿಯ ಹಾಗೆ, ಉಪಯೋಗವಿಲ್ಲದವು. ಆದಕಾರಣ ದರ್ಶನಾಂಗಗಳ, ನಿಶ್ಶಂಕೆಯೇ ಮೊದಲಾದ ಎಂಟು ಗುಣಗಳ, ಫಲದಿಂದ, ದರ್ಶನದಿಂದ ಕೂಡಿದ ಐದು ಅಣುವ್ರಗಳ ಫಲದಿಂದ, ದರ್ಶನವನ್ನು ಪಡೆದು ಸುಖ ಹೊಂದಿದ ವಸುಭೂತಿಯೂ, ಅಂಜನಚೋರನೂ ಅನಂತಮತಿಕುಮಾರಿಯೂ ಒದ್ದಾಯನಮಹಾರಾಜನೂ, ರೇವತೀಮಹಾದೇವಿಯೂ ಜಿನೇಂದ್ರಭಕ್ತನೂ, ವಾರಿಷೇಣಕುಮಾರನೂ, ವಜ್ರಕುಮಾರನೂ, ವಿಷ್ಣುಕುಮಾರನೂ ಧನಕೀರ್ತಿಕುಮಾರನೂ, ಧನದ ಮಹಾರಾಜನೂ, ಜಿನೇಂದ್ರದಾಸನೂ ಪ್ರಮಾಥಿಕುಮಾರನೂ, ಗುರುದತ್ತಮಹಾರಾಜನೂ, ಎಂಬ ಈ ಹದಿನಾಲ್ವರು ಮಹಾಪುರುಷರೊಳಗೆ ಆದ ಹದಿನಾಲ್ಕು ಕಥೆಗಳನ್ನು ತಿಳಿದು ತಾನೂ ಅವರ ಹಾಗೆಯೇ ಆಚರಿಸಿ ಸಂಸಾರವೆಂಬ ಈ ಸಮುದ್ರವನ್ನು ದಾಟಿ ಕಳೆಯಬೇಕೆಂದು ಗೌತಮಸ್ವಾಮಿಗಳು ಹೇಳಿದರು. ಅದನ್ನು ಕೇಳಿ ಮಗಧ ದೇಶದ ದೊರೆ ಶ್ರೇಣಿಕಮಹಾರಾಜನು ತನಗೆ ಆಗಲೇ ಮುಕ್ತಿಲಕ್ಷ್ಮಿ ಕೈ ಸೇರಿದಳೆಂಬ ಹಾಗೆ ಸಂತೋಷಪಟ್ಟು ಪಟ್ಟಣಕ್ಕೆ ಬಂದು ಅತಿಶಯ ಭಕ್ತಿಯಿಂದ ಇಪ್ಪತ್ತನಾಲ್ಕು ಜನ ತೀರ್ಥಂಕರ ಪರಮದೇವರುಗಳಿಗೆ ಅಭಿಷೇಕವನ್ನೂ, ಪೂಜೆಯನ್ನೂ ಮಾಡಿ ಹಲವು ರೀತಿಯ ರತ್ನಗಳಿಂದ ಪೂಜೆ ಸಲ್ಲಿಸಿ ಕೈಮುಗಿದು ೧೬೦.

ಪುರಪರಮೇಶ್ವರ ಸೌಖ್ಯಸದನ ಜಯ
ದಿವಿಜಗಣಾರ್ಚಿತಪಾದಪದ್ಮ ಜಯ
ವಿಲಸದಜಿತಜಿನ ದುರಿತಹರಣ ಜಯ
ಶತಮುಖ ಶತನುತ ಚಾರುಚರಣ ಜಯ
ಶಂಭವ ಜಿನಪತಿ ದುರಘದೂರ ಜಯ
ಮುಕ್ತಿಶ್ರೀಕುಚನೂತ್ನಹಾರ ಜಯ
ಸಂದಭಿನಂದನ ವಿಗತಮೋಹ ಜಯ
ರಮ್ಯಾಲಂಕೃತ ಗುಣಸಮೂಹ ಜಯ
ಸುಮತಿಜಿನೇಶ ಪರೋಪಕಾರಿ ಜಯ
ಮನಸಿಜಮದಗಜಸಿಂಧುರಾರಿ ಜಯ
ಪದ್ಮಪ್ರಭಜಿನ ಶಾಂತರೂಪ ಜಯ
ಲೋಕತ್ರಯಹಿತ ಪೂಜ್ಯಪಾದ ಜಯ
ಸತ್ಸುಪಾರ್ಶ್ವ ಭುವನೈಕಸಾರ ಜಯ
ಕರ್ಮಮಹೀರುಹವರಕುಠಾರ ಜಯ
ಚಂದ್ರಪ್ರಭ ಹಿಮಕಿರಣತೇಜ ಜಯ
ಭಾಕ್ತಿಕಜನಕಲ್ಪಾವನೀಜ ಜಯ
ಪುಷ್ಪದಂತ ದಿಗ್ರಮ್ಯವಸ್ತ್ರ ಜಯ
ಕಿಲ್ಬಿಷನಗಕುಲವಾಸವಾಸ್ತ್ರ ಜಯ

ಸೌಖ್ಯಕ್ಕೆ ನಿವಾಸನೆನಿಸಿದ ಪುರುಪರಮೇಶ್ವರನೇ, ಜಯಂ ! ದೇವಸಮೂಹದಿಂದ ಪಾದಪದ್ಮಗಳ ಪೂಜೆ ಮಾಡಿಸಿಕೊಂಡವನೇ ಜಯ ! ಪ್ರಕಾಶಮಾನದ ಅಜಿತಜಿನೇಶ್ವರ ! ಪಾಪಪರಿಹಾರಕಾ ! ಜಯ ; ಇಂದ್ರನಿಂದ ಸ್ತೋತ್ರ ಮಾಡಿಸಿಕೊಂಡ ಸುಂದರ ಪಾದಗಳುಳ್ಳವನೇ ಜಯ ! ದುಷ್ಟಪಾಪಗಳನ್ನು ದೂರಮಾಡುವವನೇ, ಶಂಭವ ಜಿನಪತಿ ಜಯಂ ! ಮುಕ್ತಿಲಕ್ಷ್ಮಿಯ ಕುಚದಮೇಲಿನ ನೂತನಹಾರನೇ ಜಯಂ ! ಮೋಹರಹಿತವಾದ ಅಭಿನಂದನ, ರಮ್ಯ ಗುಣಸಮೂಹದಿಂದ ಅಲಂಕೃತನಾದವನೇ, ಜಯ ಜಯ ! ಸುಮತಿಜಿನೇಶ, ಪರೋಪಕಾರಿ, ಮನ್ಮಥನೆಂಬ ಮದ್ದಾನೆಯ ವೈರಿಯೆ ಜಯ ! ಪದ್ಮಪ್ರಭಜಿನನೇ ಶಾಂತರೂಪನೇ ಜಯ ! ಮೂರು ಲೋಕಗಳಿಗೆ ಹಿತನಾದ ಪೂಜ್ಯಪಾದನೇ, ಜಯ ! ಸುಪಾರ್ಶ್ವಜಿನನೇ, ಭುವನೈಕ ಸಾರಸ್ವರೂಪನೇ ಜಯ ! ಕರ್ಮವೆಂಬ ವೃಕ್ಷಕ್ಕೆ ಕೊಡಲಿಯಾದವನೇ ಜಯಂ! ಚಂದ್ರಪ್ರಭ, ಚಂದ್ರ ತೇಜಸ್ಸುಳ್ಳವನೆ ಭಕ್ತಜನಕಲ್ಪವೃಕ್ಷನೇ ಜಯ ! ಪುಷ್ಪದಂತ ದಿಗಂಬರಸ್ವಾಮಿಯೇ, ಪಾಪಪರ್ವತಗಳಿಗೆ ವಜ್ರಾಯುಧಸ್ವರೂಪನೇ ಜಯ ! ಶೀತಲವಚನನಾದ ಶೀತಲನಾಥನೇ, ವಜ್ರ

ಶೀತಲ ಶೀತಲಸದೃಶ ವಚನ ಜಯ
ವಜ್ರಶಿಲಾತಲಲಿಖಿತವಚನ ಜಯ
ಸುಶ್ರೇಯಾಂಸಜಿನೇಂದ್ರರುದ್ರ ಜಯ
ದುಷ್ಕೃತಪನ್ನಗಪತಿಖಗೇಂದ್ರ ಜಯ
ವಾಸುಪೂಜ್ಯದೇವಾಧಿದೇವ ಜಯ
ಸನ್ಮುನಿಸೇವ್ಯಮಹಾನುಭಾವ ಜಯ
ವಿಮಲ ಗುಣರತ್ನರಾಶಿ ಜಯ
ನಿಖಿಲ ಶೀಲಗುಣತೋಯರಾಶಿ ಜಯ
ಅನಂತಗುಣಾಂಬುಧಿ ವೀತರಾಗ ಜಯ
ಪಂಚಮಹಾಕಲ್ಯಾಣಯೋಗ್ಯ ಜಯ
ಧರ್ಮಜಿನೇಶ್ವರ ಧರ್ಮವಾರ್ಧಿ ಜಯ
ನಿಷ್ಠುರಾಷ್ಟಕರ್ಮಾಭ್ರಪವನ ಜಯ
ಶಾಂತಿಜಿನೇಶ್ವರ ಪುಣ್ಯನಿಳಯ ಜಯ
ಶರಣಾಗತಜನಕರ್ಮವಿಲಯ ಜಯ
ಕುಂಥುಜಿನೇಶ್ವರ ಜಗದ್ವಂದ್ಯ ಜಯ
ಗುಣಮಣಿ ಮುನಿಗುಣನಿಕರವಂದ್ಯ ಜಯ
ಅರಜಿನ ಸುರನರನಿಕರವಂದ್ಯ ಜಯ
ಸಾರಸ್ವತತತ್ವವಿದಿತನೂತ ಜಯ
ಮಲ್ಲಿಜಿನೇಶ್ವರ ಸುಸ್ವರೂಪ ಜಯ
ಕರ್ಮಕಲಂಕತಮಃಪ್ರದೀಪ ಜಯ

ಶಿಲಾಪ್ರದೇಶದಮೇಲೆ ವಚನಗಳನ್ನು ಬರೆಯಿಸಿದವನೇ, ಜಯ ! ಶ್ರೇಷ್ಠನಾದ ಜಿನೇಂದ್ರರುದ್ರನಾದ ಶ್ರೇಯಾಂಸನೇ, ಜಯ ! ಪಾಪಗಳೆಂಬ ಸರ್ಪಗಳಿಗೆ ಗರುಡ ಸ್ವರೂಪನೇ ಜಯ ! ವಾಸುಪೂಜ್ಯಸ್ವಾಮಿಯೇ, ದೇವಾಧಿದೇವನೇ ಸನ್ಮುನಿಗಳಿಗೆ ಸೇವ್ಯನಾದ ಮಹಾನುಭಾವನೇ ಜಯ ! ಪರಿಶುದ್ಧವಾದ ಗುಣರತ್ನಗಳ ರಾಶಿಯೇ ಆದಂಥ ವಿಮಲಸ್ವಾಮಿಯೇ, ಸಮಸ್ತ ಶೀಲಗುಣಗಳೆಂಬ ನೀರಿಗೆ ಸಮುದ್ರನಂಥವನೇ ಜಯ ! ಆಸೆಯನ್ನು ಬಿಟ್ಟು ಪಂಚಮಹಾಕಲ್ಯಾಣಯೋಗ್ಯವಾದ ಅನಂತಸ್ವಾಮಿಯೇ, ಜಯ ! ಧರ್ಮನಾಥಜಿನೇಶ್ವರನೇ ಧರ್ಮಸಮುದ್ರನೇ ಕ್ರೂರವಾದ ಅಷ್ಟಕರ್ಮಗಳೆಂಬ ಮೋಡಗಳಿಗೆ ಪವನನಂಥವನೇ, ಜಯ, ಜಯ ! ಪುಣ್ಯನಿಳಯನಾದ ಶಾಂತಿ ಜಿನೇಶ್ವರನೇ ಶರಣಾಗತರಾದ ಜನರ ಕರ್ಮಕ್ಕೆ ಪ್ರಳಯಸ್ವರೂಪನೇ ಜಯ ! ಕುಂಥು ಜಿನೇಶ್ವರನೇ, ಜಗತ್ತಿಗೇ ವಂದ್ಯನಾದವನೇ ಜಯ! ದೇವತೆಗಳ ಸಮೂಹದಿಂದ ವಂದನೆ, ಪಡೆದವನೆ, ಅರಜಿನೇಶ್ವರನೇ, ಸಾರಸ್ವತ ತತ್ವವಿದನೇ ಜಯ! ಮಲ್ಲಿಜಿನೇಶ್ವರ, ಸುಂದರ

ಮುನಿಸುವ್ರತ ಜಿನರಾಜಹಂಸ ಜಯ
ಸುಗತಿವಧೂಕರ್ಣಾವತಂಸ ಜಯ
ನಮಿಜಿನಮುಕ್ತಿಶ್ರೀನಿವಾಸ ಜಯ
ಸಕಲಶ್ರೀವನಿತಾವಿಲಾಸ ಜಯ
ನೇಮಿಜಿನೇಶ್ವರವಿನುತಶರಣ ಜಯ
ಹರಿಕುಲಗಗನಸಹಸ್ರಕಿರಣ ಜಯ
ಪಾರ್ಶ್ವಜಿನೇಶ್ವರ ದಿವ್ಯಮೂರ್ತಿ ಜಯ
ಲೋಕಾಲೋಕವ್ಯಾಪ್ತಕೀರ್ತಿ ಜಯ
ವರ್ಧಮಾನಜಿನ ಭುವನಪೂಜ್ಯ ಜಯ
ನೆಗಟ್ದಷ್ಟಾದಶದೋಷರಹಿತ ಜಯ ಜಯಜಯಾ ೧೬೦

ಗದ್ಯ॥ ಎಂದನೇಕಸ್ತುತಿ ಶತಸಹಸ್ರಂಗಳಿಂ ಸ್ತುತಿಸಿ ೧೬೧

ಪ್ರಿಯದಿಂ ತೂರ್ಯಸ್ವನಂ ವಾರಿಧಿವೊಲೆಸೆಯಲುಂ ವಾರನಾರೀ ಕದಂಬಂ
ನಯದಿಂ ಕೈಗೆಯ್ದು ಸುತ್ತಂ ಬರಲುಮೊಸಗೆಯಿಂ ಪುಣ್ಯಕಾಂತಾಜನಂಸೇ
ಸೆಯನುತ್ಸಾಹದಿಂದಂ ಪರಸಿ ವಿಭವದಿಂದಿಕ್ಕಲುಂ ಬಂದು ರಾಜಾ
ಲಯಮಂ ಚೆಲ್ವಾಗೆ ಪೊಕ್ಕಂ ಸುಕವಿಜನಮನಃಪದ್ಮಿನೀರಾಜಹಂಸಂ ೧೬೨

ಸ್ವರೂಪನೇ ಜಯ ! ಕರ್ಮವೆಂಬ ಕಳಂಕದ ಕತ್ತಲೆಗೆ ದೊಡ್ಡ ದೀಪನಾದವನೇ ಜಯ ! ಜಿನರಾಜಹಂಸ, ಮುನಿಸುವ್ರತನೇ, ಸದ್ಗತಿಯೆಂಬ ವಧುವಿನ ಕರ್ಣಾಭರಣನೇ, ಜಯ ! ನಮಿಜಿನೇಶ್ವರ, ಮುಕ್ತಿಲಕ್ಷ್ಮಿಯ ನಿವಾಸ, ಸಮಸ್ತಲಕ್ಷ್ಮೀ ವಿಲಾಸನೇ ಜಯ ! ನೇಮಿ ಜಿನೇಶ್ವರ, ಭಕ್ತರಶರಣ, ಹರಿಕುಲ ಗಗನದ ಸೂರ್ಯನೇ ಜಯ ! ಪಾರ್ಶ್ವನಾಥಸ್ವಾಮಿ, ದಿವ್ಯಾಕಾರ, ಲೋಕ ಅಲೋಕಗಳೆರಡರಲ್ಲಿಯೂ ವ್ಯಾಪಿಸಿದ ಕೀರ್ತಿಯುಳ್ಳವನೇ, ಜಯ! ಲೋಕಪೂಜ್ಯ, ಅಷ್ಟಾದಶದೋಷರಹಿತ,ವರ್ಧಮಾನ ಜಿನೇಶ್ವರಾ, ಜಯ ಜಯ ಜಯಶಾ ೧೬೧. ಎಂದು ಅನೇಕ ಸಹಸ್ರಸ್ತೋತ್ರಗಳಿಂದ ಹೊಗಳಿದನು. ೧೬೨. ವಾದ್ಯಧ್ವನಿಗಳು ಸಮುದ್ರದಂತೆ ಘೂರ್ಣಿಸುತ್ತಿರಲು, ವಾರಾಂಗನೆಯರ ಗುಂಪು ಒಟ್ಟುಗೂಡಿ ಸುತ್ತಲೂ ಬರುತ್ತಿರಲು ಸಂತೋಷದಿಂದ ಪುಣ್ಯಸ್ತ್ರೀಯರು ಉತ್ಸಾಹ ಪ್ರೀತಿಗಳಿಂದ ಅಕ್ಷತೆಯನ್ನು ಎರಚಿ ಹರಸುತ್ತಿರಲು ವೈಭವದಿಂದ ಬಂದು ಸುಕವಿಜನರ ಮನಸ್ಸೆಂಬ ಕಮಲಗಳಲ್ಲಿನ ರಾಜಹಂಸನಂತೆ (ಕವಿಗಳಿಗೆ ಪ್ರೀತಿಪಾತ್ರ) ಶೋಭಿಸುವ ಶ್ರೇಣಿಕನು ಸುಂದರವಾದ ರಾಜಾಲಯವನ್ನು ವೈಭವದಿಂದ ಪ್ರವೇಶಿದನು. ೧೬೩. ಬೆಟ್ಟ, ಅಗ್ನಿ, ಆಕಾಶ, ಚಂದ್ರರ

ಗಿರಿಶಿಖಿವಾಯುಮಾರ್ಗಶಶಿಸಂಖ್ಯೆಯೊಳಾವಗವೊಂದಿ ವರ್ತಿಸು
ತ್ತಿರೆ ಶಕಕಾಲಮುನ್ನತಿಯ ನಂದನವತ್ಸರದೊಳ್ ಮಹೋತ್ಸವಂ
ಬೆರಸಿಸಿದಿರ್ದ ಭಾದ್ರಪದಮಾಸದೊಳಗ್ಗದ ಶುಕ್ಲಪಕ್ಷದೊಳ್
ನಿರುಪಮಮಪ್ಪ ಪಾಡಿವದೊಳೊಪ್ಪುವ ಹಸ್ತಯುತಾರ್ಕವಾರದೊಳ್ ೧೬೪

ಧರಣೀಪೂಜ್ಯಂ ಭವ್ಯೋ
ತ್ಕರವಂದ್ಯಂ ಕಾವ್ಯರತ್ನಮಮಳಯಶಶ್ರೀ
ಕರಮೆನಿಸಿರ್ದೀಗ್ರಂಥಂ
ನಿರುತಂ ನಿರ್ವಾಹಮಾಯ್ತು ನಿರ್ವಿಘ್ನತೆಯಿಂ ೧೬೫

ವರಚಕ್ರಾದಿಲಸಚ್ಚತುರ್ದಶ ಮಹಾರತ್ನಂಗಳಂ ತಾಳ್ದಿ ನಿಂ
ದರಮೋಘಂ ನುತಚಕ್ರವರ್ತಿಪದದೊಳ್ ನಿಲ್ವಂತೆ ಸದ್ದರ್ಶನಾ
ದ್ಯರುದೇವಾನತಸಚ್ಚತುರ್ದಶವಿದಗ್ಧಪ್ರೀತಿಯುಪ್ಪೀ ಕಥೋ
ತ್ಕರಮಂ ತಾಳ್ದಿದರುಂ ವಿಶೇಷಪದದೊಳ್ ನಿಲ್ವರ್ ಮಹೋತ್ಸಾಹದಿಂ ೧೬೬

ಪಲರುಂ ಧರ್ಮಮನೊಲ್ಲದುಗ್ರನರಕಾಂಭೋರಾಶಿಯೊಳ್ ಬಿರ್ದು ಕೋ
ಟಲೆಗೊಳ್ವರ್ಗಱಿವಂತು ಕನ್ನಡದಿನೊಪ್ಪಂಬೆತ್ತು ಜಾಣ್ಮಾತಿನಿಂ
ಪಲವುಂ ದೇಸಿಯ ಸಂದುದಾಹರಣೆಯಿಂ ಪೇಟ್ದಂ ಬುಧರ್ಕೂರ್ಮೆಯಿಂ
ತಲೆಯಂ ತೂಗುವಿನಂ ಜಿನೇಂದ್ರಮತಮಂ ವಾತ್ಸಲ್ಯರತ್ನಾಕರಂ ೧೬೭

ಸಂಖ್ಯೆಯ ಶಾಲಿವಾಹನ ಶಕದ (೧೦೫೭)ಶ್ರೇಷ್ಠವಾದ ನಂದನ ಸಂವತ್ಸರದ ಭಾದ್ರಪದ ಶುದ್ಧಪಾಡ್ಯಮಿ ಹಸ್ತ ನಕ್ಷತ್ರದ ಭಾನುವಾರದ ದಿನ ೧೬೪. ಲೋಕಪೂಜ್ಯವೂ ಭವ್ಯ ಸಮೂಹಕ್ಕೆ ಪೂಜ್ಯವೂ ಆದ ಈ ಕಾವ್ಯರತ್ನವು,ಪರಿಶುದ್ಧ ಯಶೋಲಕ್ಷ್ಮೀಕಾರಕವೆನಿಸಿದ ಈ ಗ್ರಂಥವು, ನಿರ್ವಿಘ್ನವಾಗಿ ಪೂರ್ಣವಾಯಿತು. ೧೬೫. ಶ್ರೇಷ್ಠವಾದ ಚಕ್ರಾಯುಧವೇ ಮೊದಲಾದ ಹದಿನಾಲ್ಕು ಮಹಾ ರತ್ನಗಳನ್ನು ಧರಿಸಿ ನಿಂತಂಥವರು ತಪ್ಪದೆ ಚಕ್ರವರ್ತಿ ಪದವಿಯಲ್ಲಿ ನಿಲ್ಲುವಹಾಗೆ ಶ್ರೇಷ್ಠವಾದ ದರ್ಶನವೇ ಮೊದಲಾದ, ದೇವರುಗಳಿಂದ ನಮಸ್ಕರಿಸಲ್ಪಟ್ಟ, ಶ್ರೇಷ್ಠವಾದ ಪಂಡಿತರಿಗೂ ಪ್ರೀತಿಯನ್ನುಂಟುಮಾಡುವಂಥ ಈ ಹದಿನಾಲ್ಕು ಕಥಾ ಸಮೂಹವನ್ನು ಧರಿಸಿದವರು (ಓದಿ ಚಿಂತನ ಮಾಡುವವರು) ಬಹಳ ಉತ್ಸಾಹ ಪ್ರದವಾದ ವಿಶೇಷ ಪದವಿಯನ್ನು ಪಡೆಯುವರು. ೧೬೬. ಅನೇಕರು ಧರ್ಮ ವನ್ನು ಒಲ್ಲದೆ ಕ್ರೂರವಾದ ನರಕಸಮುದ್ರದಲ್ಲಿ ಬಿದ್ದು ಕೋಟಲೆಪಡುತ್ತಾರೆ, ಅವರಿಗೂ ತಿಳಿಯುವಹಾಗೆ ಕನ್ನಡ ಭಾಷೆಯಲ್ಲಿ ಜಾಣಮಾತಿನಿಂದ ಹಲವು ದೇಸಿಯ ಮಾತು ಗಳೊಡನೆ, ಪ್ರಸಿದ್ಧವಾದ ಉದಾಹರಣೆಗಳೊಡನೆ, ಪಂಡಿತರು ಪ್ರೀತಿಯಿಂದ ಮೆಚ್ಚಿ ತಲೆದೂಗುವಹಾಗೆ ಶೋಭಾಯಮಾನವಾದ ರೀತಿಯಲ್ಲಿ ವಾತ್ಸಲ್ಯ ಸಮುದ್ರನಾದ

ಮುಳುಗುಂದದೊಳಿರ್ದು ಮಹೋ
ಜ್ಜ್ವಳಧರ್ಮಾಮೃತಮನರ್ತಿಯಿಂದಂ ಭವ್ಯಾ
ವಳಿಗರುಪಿದಂ ಧರಿತ್ರೀ
ತಳಪೂಜ್ಯಂ ಸುಕವಿನಿಕರಪಿಕಮಾಕಂದಂ ೧೬೮

ಕುಲಶೈಲಾವಳಿ ನಿಲ್ವಿನಂ ಸುರನಿವಾಸಂ ನಿಲ್ವಿನಂ ಧಾರಿಣೀ
ವಲಯಂ ನಿಲ್ವಿನಮಂಬುರಾಶಿಕುಲ್ಪಂಬಂ ನಿಲ್ವಿನಂ ನಿಲ್ಕೆ ನಿ
ರ್ಮಲ ಧರ್ಮಾಮೃತಮೆಯ್ದೆ ತೋಯನಿಧಿಪರ್ಯಂತಂಬರಂ ಪರ್ವಿ ಭೂ
ತಳದೊಳ್ ಕಾಂಚನರಾಶಿಯಂತೆಸೆಯುತುಂ ಚಂದ್ರಾರ್ಕರುಳ್ಳನ್ನೆಗಂ ೧೬೯

ಜಿನಧರ್ಮಂ ಸಕಳಾವನೀತಳಮುಮಂ ಪರ್ವಿಕ್ಕೆ ಭೂಪಾಲಕರ್
ಜನಮಂ ನ್ಯಾಯದೊಳೊಂದಿ ರಕ್ಷಿಸುಗೆ ಭೂಲೋಕಕ್ಕೆ ಸಂತೋಷಮ
ಪ್ಪಿನೆಗಂ ಪೆರ್ಮಳೆ ಕೊಳ್ಗೆ ಭವ್ಯನಿಕರಕ್ಕಾನಂದಮುಂ ಬೇಟ್ಪ ಕಾಂ
ಚನಮುಂ ಕೀರ್ತಿಯುಮಕ್ಕೆ ದಿವ್ಯಸುಖಮುಂ ಭದ್ರಂ ಶುಭಂ ಮಂಗಳಂ ೧೭೦

ಕವಿಯು ಜಿನೇಂದ್ರಮತವನ್ನು ಹೇಳಿದನು. ೧೬೭. ಮುಳುಗುಂದದಲ್ಲಿದ್ದುಕೊಂಡು ಮಹಾ ಪ್ರಕಾಶಮಾನವಾದ ಈ ಧರ್ಮಾಮೃತವನ್ನು ಪ್ರೀತಿಯಿಂದ ಭವ್ಯಸಮೂಹಕ್ಕೆ ಭೂಲೋಕಕ್ಕೇ ಪೂಜ್ಯನಾದ ಸುಕವಿನಿಕರಪಿಕಮಾಕಂದ (ನಯಸೇನ)ನು ತಿಳಿಸಿದನು. ೧೬೮. ಕುಲಪರ್ವತಗಳ ಗುಂಪು ನಿಲ್ಲುವತನಕ ದೇವನಿವಾಸವಾದ ಸ್ವರ್ಗವಿರುವತನಕ, ಚಂದ್ರಸೂರ್ಯರಿರುವವರೆಗೆ, ಸಮುದ್ರಪರ್ಯಂತ ಸಮಸ್ತ ಭೂಮಂಡಲದಲ್ಲಿಯೂ ಹಬ್ಬಿ ಈ ಧರ್ಮಾಮೃತವು ಚಿನ್ನದ ರಾಶಿಯ ಹಾಗೆ ಜನಪ್ರಿಯವಾಗಿ ನಿಲ್ಲಲಿ ೧೬೯. ಜೈನ ಧರ್ಮವು ಸಮಸ್ತ ಭೂಮಂಡಲಕ್ಕೂ ಹಬ್ಬಲಿ. ರಾಜರು ನ್ಯಾಯದಿಂದ ಕೂಡಿ ಜನರನ್ನು ರಕ್ಷಿಸಲಿ. ಭೂಲೋಕಕ್ಕೆ ಸಂತೋಷವಾಗುವ ರೀತಿಯಲ್ಲಿ ಹೆಚ್ಚಾಗಿ ಮಳೆ ಬರಲಿ, ಭವ್ಯಜನ ಸಮೂಹಕ್ಕೆ ಆನಂದವೂ ಬೇಕಾದ ಕಾಂಚನವೂ ಕೀರ್ತಿಯೂ ಲಭಿಸಲಿ. ದಿವ್ಯಸುಖವೂ ಕ್ಷೇಮ ಶುಭ ಮಂಗಳಗಳೂ ಆಗಲಿ. ಭದ್ರಂ ಶುಭಂ ಮಂಗಳಂ.

ಇದು ನಿಖಿಲ ದಿವಿಜ ಪರಿವೃಢಮಕುಟತಟಘಟಿತಮಣಿಗಣ ವಿಲುಳಿತ ಕಿರಣ
ಚುಂಬನೀಯ ಪರಮಜಿನ ಚರಣಯುಗಳ ಸರಸಿರುಹಮತ್ತಮಧುಕರ,
ನಿರುಪಮ ಸಹಜ ಕವಿಜನಪಯಃ ಪಯೋಧಿಹಿಮಕರ,
ನುತಭಾವಯುತ ದಿಗಂಬರದಾಸ ನೂತ್ನಕವಿತಾವಿಳಾಸ
ಶ್ರೀಮನ್ನಯಸೇನದೇವವಿರಚಿತಮಪ್ಪ
ಧರ್ಮಾಮೃತದೊಳ್
ಅಪರಿಗ್ರಹವ್ರತವ್ಯಾವರ್ಣನಂ
ಚತುರ್ದಶಾಶ್ವಾಸಂ

## ಧರ್ಮಾಮೃತಂ ಸಂಪೂರ್ಣಂ

ಇದು ಸಮಸ್ತ ದೇವನಾಯಕರ ಕಿರೀಟದಲ್ಲಿ ಖಚಿತವಾದ ರತ್ನ ಸಮೂಹದಿಂದ
ಹೊರ ಹೊಮ್ಮಿದ ಕಿರಣಗಳು ಮುತ್ತಿಡುತ್ತಿರುವ ಪರಮಜಿನನ ಪಾದ
ಕಮಲಗಳಲ್ಲಿ ಮದಿಸಿದ ದುಂಬಿಯಾದ, ಹೋಲಿಕೆಯಿಲ್ಲದ ಸಹಜಕವಿಜನರೆಂಬ
ಕ್ಷೀರಸಮುದ್ರಕ್ಕೆ ಹಿಮಕಿರಣ (ಚಂದ್ರ)ನಾದ, ಸ್ತೋತ್ರಾರ್ಹವಾದ
ಭಾವಗಳಿಂದ ಕೂಡಿದವನಾದ 'ದಿಗಂಬರದಾಸ,' 'ನೂತ್ನ ಕವಿತಾವಿಳಾಸ'
ಎಂಬ ಬಿರುದುಗಳುಳ್ಳ, ಶ್ರೀಮನ್ನಯಸೇನದೇವನಿಂದ ರಚಿತವಾದ
ಧರ್ಮಾಮೃತದಲ್ಲಿ
ಅಪರಿಗ್ರಹದ ವರ್ಣನೆಯನ್ನೊಳಗೊಂಡ
ಹದಿನಾಲ್ಕನೆಯ ಆಶ್ವಾಸ.
ಧರ್ಮಾಮೃತ ಸಂಪೂರ್ಣವಾಯಿತು.

---

# ಜೈನ ಪಾರಿಭಾಷಿಕ ಶಬ್ದಗಳು

**ಅಣುವ್ರತ :** (೧-೭೯) ಜೈನ ಗೃಹಸ್ಥರು ಧರಿಸಿ ಪೂರ್ಣ ಆಸಕ್ತಿಯಿಂದ ಆಚರಿಸುವ ಐದು ವ್ರತಗಳು ; ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯೆ ಮತ್ತು ಅಪರಿಗ್ರಹ, ಇವುಗಳನ್ನು ಪಂಚಾಣುವ್ರತಗಳೆಂದೇ ಕರೆಯುವರು.

**ಅಮೂಢ ದೃಷ್ಟಿತ್ವ :** (೧-೭೮) ಮಿಥ್ಯಾದೇವತೆಗಳು, ಮಿಥ್ಯಾಗುರುಗಳು ಮತ್ತು ಮಿಥ್ಯಾಕ್ಷೇತ್ರಗಳನ್ನು ನಂಬದೆ ಜಿನಾಗಮವನ್ನೇ ನಂಬಿ ಅದರಂತೆ ಆಚರಿಸುವುದು.

**ಅವಧಿಜ್ಞಾನ :** ಜೈನಯತಿಗಳಿಗೆ ಲಭಿಸುವ ಒಂದು ವಿಶಿಷ್ಟಜ್ಞಾನ. ಕಾಲದೇಶಗಳು ಎಷ್ಟೇ ದೂರವಾಗಿದ್ದರೂ ಅಲ್ಲಿನ ವಿಚಾರಗಳನ್ನು ತಿಳಿದುಕೊಳ್ಳಬಲ್ಲ ಜ್ಞಾನ,

**ಅವಲೋಕಿನೀ ವಿದ್ಯೆ :** ದೂರದಲ್ಲಿನ ಸಂಗತಿಗಳನ್ನು ತಿಳಿಯುವ ವಿದ್ಯೆ.

**ಅಷ್ಟಗುಣಗಳು :** (೫-೧೩೪) ಮಕಾರತ್ರಯ, ಎಂದರೆ ಮಧುಮದ್ಯ ಮತ್ತು ಮಾಂಸಗಳ ವರ್ಜನೆ ಮತ್ತು ಪಂಚಾಣು ವ್ರತಗಳು:-ಈ ಎಂಟೂ ಮೂಲ ಗುಣಗಳು. ಇನ್ನೊಂದು ಹೇಳಿಕೆಯಂತೆ ಮಕಾರತ್ರಯತ್ಯಾಗ, ರಾತ್ರಿ ಭೋಜನತ್ಯಾಗ, ಉದುಂಬರ ಫಲತ್ಯಾಗ, ಪಂಚಪರಮೇಷ್ಠಿಗಳ ಸ್ತೋತ್ರ, ಜೀವದಯೆ ಮತ್ತು ಜಲಶೋಧನೆ-ಈ ಎಂಟೂ ಅಷ್ಟ ಮೂಲಗುಣಗಳು.

**ಅಷ್ಟಾಂಗ :** (೧-೭೮) ಸಮ್ಯಗ್ದರ್ಶನದ ಅಂಗಗಳಾದ ನಿಶ್ಶಂಕೆ, ನಿಷ್ಕಾಂಕ್ಷೆ, ನಿರ್ವಿಚಿಕಿತ್ಸೆ, ಅಮೂಢದೃಷ್ಟಿತ್ವ, ಉಪಗೂಹನ, ಸ್ಥಿತಿಕರಣ, ವಾತ್ಸಲ್ಯ ಮತ್ತು ಪ್ರಭಾವನೆ.

**ಅಷ್ಟಾದಶ ದೋಷಗಳು :** (೧-೭೦) ಹಸಿವು, ಬಾಯಾರಿಕೆ, ಮುಪ್ಪು, ರೋಗ ಜನನ, ಮರಣ, ಭಯ, ಗರ್ವ, ಪ್ರೀತಿ, ವೈರ, ಮಮತೆ, ರತಿ, ಚಿಂತೆ, ವಿಷಾದ, ಖೇದ, ಸ್ವೇದ, ನಿದ್ರೆ ಮತ್ತು ಆಶ್ಚರ್ಯ-ಈ ಹದಿನೆಂಟು ದೋಷಗಳಿಲ್ಲದವನೇ ಆಪ್ತ, ಭಗವಂತ.

**ಉಪಗೂಹನ :** (೧-೭೮) ಜೈನಧರ್ಮಕ್ಕೆ ಅಜ್ಞಾನಿಗಳಾದ ಮಿಥ್ಯಾದೃಷ್ಟಿಯ ಜನರಿಂದ ಆಗಬಹುದಾದ ನಿಂದೆಯನ್ನು ದೂರಮಾಡುವಿಕೆ. ಸಹಧರ್ಮಿಗಳಲ್ಲಿ ಇರಬಹುದಾದ ಲೋಪದೋಷಗಳನ್ನು ಎತ್ತಿ ಆಡದೆ ಅವರಿಗೆ ರಹಸ್ಯವಾಗಿ ತಿಳಿಯ ಹೇಳಿ, ತಿದ್ದುವುದು.

**ಎಂಟು ಕರ್ಮ :** (೧-೨) ನಾಲ್ಕು ಘಾತಿಕರ್ಮಗಳು ನಾಲ್ಕು ಅಘಾತಿಕರ್ಮಗಳು, ಒಟ್ಟು ಎಂಟು.

**ಕೇವಲಿ :** (೧೨-೨೨೨) ಕೇವಲ ಜ್ಞಾನವನ್ನು ಪಡೆದವನು. ಲೋಕ ಮತ್ತು ಅಲೋಕಗಳಲ್ಲಿನ ತ್ರಿಕಾಲಗಳಲ್ಲಿನ ಸರ್ವವಸ್ತುಗಳ ಸಮಗ್ರಜ್ಞಾನವಾಗುವುದೇ ಕೇವಲ ಜ್ಞಾನ.

**ಕರುಣಾನುಯೋಗ :** ಲೋಕಾಲೋಕಗಳ ವಿಭಾಗ ಉತ್ಸರ್ಪಿಣೀ ಮತ್ತು ಅವಸರ್ಪಿಣಿ ಮತ್ತು ಚತುರ್ಗತಿಗಳ ಸ್ವರೂಪಗಳನ್ನು ತಿಳಿಸುವ ಶಾಸ್ತ್ರಭಾಗವೇ ಕರಣಾನುಯೋಗ.

**ಖೇಚರ :** (೧೦-೧೨) ಆಕಾಶ ಸಂಚಾರಿಗಳು ; ಇವರಿಗೆ ಹಲವು ವಿದ್ಯೆಗಳ ಬಲವಿರುತ್ತದೆ.

**ಜಿನ :** (೧೦-೨೮೩) ಕರ್ಮವನ್ನು ಜಯಿಸಿರುವವರೇ ಜಿನರು. ಅವರ ಆರಾಧಕರೇ ಜೈನರು.

**ಚತು : ಕಷಾಯ** (೧೪-೯೯) ಕ್ರೋಧ, ಮಾನ, ಮಾಯಾ ಮತ್ತು ಲೋಭ ಎಂಬ ನಾಲ್ಕು ಬಗೆಯ ಕಷಾಯಗಳು.

**ಚತುರ್ಗತಿ :** ೧-೬೭ ದೇವ ಮಾನವ ತಿರ್ಯಕ್ ಮತ್ತು ನಾರಕವೆಂಬ ನಾಲ್ಕು ಗತಿಗಳು.

**ಚತುರ್ವಿಧ ದಾನ :** ೪-೧೨ ಆಹಾರ, ಅಭಯ, ಭೈಷಜ್ಯ(ಚಿಕಿತ್ಸೆ)ಮತ್ತು ಶಾಸ್ತ್ರ.

**ಚತುರ್ವಿಧ ಸುರಾಳಿ** ೧-೬೬ ಭವನಪತಿ, ವ್ಯಂತರಿಕ, ಜ್ಯೋತಿಷ್ಕ ಮತ್ತು ವಿಮಾನವಾಸಿಗಳೆಂಬ ನಾಲ್ಕು ಬಗೆಯ ದೇವತೆಗಳು.

**ಚತುರ್ವಿಧ ಧ್ಯಾನಗಳು** (೧೪-೧೦೪) ಆರ್ತಧ್ಯಾನ, ರೌದ್ರಧ್ಯಾನ, ಧರ್ಮಧ್ಯಾನ ಮತ್ತು ಶುಕ್ಲಧ್ಯಾನ.

**ಚರಿಗೆ :** ೧೦-೧೧೦ ಜೈನಯತಿಗಳು ಭಿಕ್ಷೆಗಾಗಿ ಸಂಚಾರ ಹೊರಡುವುದು.

**ತ್ರಿಷಷ್ಟಿ ಶಲಾಕಾಪುರುಷರು** (೧೦-೧೮)

24 ಜನ ತೀರ್ಥಂಕರರು
12 ಜನ ಚಕ್ರವರ್ತಿಗಳು
9 ಜನ ನಾರಾಯಣರು
9 ಜನ ಪ್ರತಿನಾರಾಯಣರು
9 ಜನ ಬಲಭದ್ರರು

ಒಟ್ಟು ಈ 63 ಜನರನ್ನು ಶಲಾಕಾಪುರುಷರೆಂದು ಕರೆಯುವರು.

ತ್ರೈವಿದ್ಯ : ೧–೨೪ ಷಟ್‌ಖಂಡಾಗಮದ ಮೊದಲ ಮೂರು ಖಂಡಗಳಾದ ಜೀವಸ್ಥಾನ ಕ್ಷುಂದ್ರಕಬಂಧ ಮತ್ತು ಬಂಧಸ್ವಾಮಿತ್ವವಿಚಯ, ಈ ಮೂರು ಖಂಡ ಗಳನ್ನು ಪೂರ್ಣವಾಗಿ ಅಭ್ಯಾಸ ಮಾಡಿದವರಿಗೆ ತ್ರೈವಿದ್ಯದೇವ ಎಂಬ ಹೆಸರು ಬರುತ್ತದೆ.

ದಶಧರ್ಮಗಳು : (೧೨–೩೮) ಉತ್ತಮ ಕ್ಷಮೆ, ಮಾರ್ದವ, ಆರ್ಜವ, ಶೌಚ, ಸತ್ಯ, ಸಂಯಮ, ತಪಸ್ಸು, ತ್ಯಾಗ, ಆಕಿಂಚನ್ಯ, ಮತ್ತು ಬ್ರಹ್ಮಚರ್ಯ.

ದ್ರವ್ಯಾನುಯೋಗ : (೧೨–೩೮) ಪುಣ್ಯಪಾಪಗಳು, ಸಮ್ಯಕ್ತ್ವ ಬಂಧ ಮೋಕ್ಷಗಳು–ಇವುಗಳನ್ನು ತಿಳಿಸುವ ಶಾಸ್ತ್ರಕ್ಕೆ ದ್ರವ್ಯಾನುಯೋಗವೆಂದು ಹೆಸರು.

ನವ ಗ್ರೈವೇಯಕ : ೧೨–೨೪ ಹದಿನಾರು ಸ್ವರ್ಗಗಳ ಮೇಲೆ ಇರುವ ಒಂಬತ್ತು ಕಲ್ಪಾತೀತವಾದ ಸ್ವರ್ಗಗಳು.

ನಿರ್ವೃತಿ ಸೌಖ್ಯ (೧–೬೩) ನಿರ್ವಾಣ, ಮೋಕ್ಷ

ನಿಶ್ಶಂಕೆ (೧–೭೮) ಜಿನಧರ್ಮವೇ ಸರಿ. ಬೇರೆ ಯಾವ ಧರ್ಮವೂ ಸರಿಯಲ್ಲ ವೆಂದು ಸಂಶಯವಿಲ್ಲದೆ ನಂಬುವುದೇ ನಿಶ್ಶಂಕೆ (ಸಮ್ಯಗ್ದರ್ಶನಕ್ಕೆ ಇದು ಮೊದಲ ಅಂಗ)

ನಿಷ್ಕಾಂಕ್ಷೆ : (೧–೭೮) ಸಾಂಸಾರಿಕ ಸುಖವು ಪುಣ್ಯಫಲದಿಂದಲೇ ಲಭಿಸುವು ದಾದರೂ ಅದು ನಾಶ ಹೊಂದುವಂಥಾದ್ದು, ದುಃಖಕ್ಕೆ ಕಾರಣವಾಗುವಂಥಾದ್ದು, ಪಾಪಕ್ಕೆ ಬೀಜವಾಗುವಂಥಾದ್ದು, ಎಂದು ತಿಳಿದು ಅದರಲ್ಲಿ ಆಸೆಯನ್ನು ತೊರೆದುಬಿಡು ವುದೇ ನಿಷ್ಕಾಂಕ್ಷೆ.

ನಿರ್ವಿಚಿಕಿತ್ಸೆ : (೧–೭೮) ಸ್ವಭಾವದಿಂದ ಅಪವಿತ್ರವಾದ ರಕ್ತಮಾಂಸಾದಿ ಗಳಿಂದ ಕೂಡಿದ ಶರೀರವೂ ಸಮ್ಯಗ್ದರ್ಶನ ಜ್ಞಾನಚಾರಿತ್ರ ರೂಪವಾದ ರತ್ನತ್ರಯ ಗಳಿಂದ ಪವಿತ್ರವಾಗುವುದೆಂದು ತಿಳಿದು ಅಂಥವರ ದೇಹದಮೇಲೆ ಜುಗುಪ್ಸೆಪಟ್ಟು ಅವರ ಗುಣಗಳಲ್ಲಿ ಪ್ರೀತಿ ಹೊಂದುವುದು.

ಪಂಚಾಚಾರ : ೧-೩ ದರ್ಶನಾಚಾರ, ಜ್ಞಾನಾಚಾರ, ಚಾರಿತ್ರಾಚಾರ, ತಪ ಆಚಾರ, ವೀರ್ಯಾಚಾರ.

ಪಂಚ ಕಲ್ಯಾಣ : ೧೪–೧೬೧ ಸುರಲೋಕಾವತರೋತ್ಸವ. ಜನ್ಮಾಭಿಷೇಕೋ ತ್ಸವ, ಪರಿನಿಷ್ಕ್ರಾಂತಿಮಹೋತ್ಸವ, ಕೈವಲ್ಯಬೋಧೋತ್ಸವ, ಪರಿನಿರ್ವಾಣ ಮಹೋ ತ್ಸವ ಈ ಐದೂ ಜಿನ ಮಹಾ ಕಲ್ಯಾಗಳು.

ಪುದ್ಗಲ : (೫–೧೩೧) ಶರೀರ, ಇಂದ್ರಿಯಗಳು, ಇಂದ್ರಿಯಗಳ ಮೂಲಕ ಅನುಭವಿಸುವ ವಿಷಯಗಳು, ಮನಸ್ಸು, ಕರ್ಮ ಇವೆಲ್ಲ ಪುದ್ಗಲಗಳು. ಪುದ್ಗಲ ಅಚೇತನ ಮತ್ತು ಮೂರ್ತವಾಗಿರುವ ಅಜೀವ.

ಪ್ರಥಮಾನುಯೋಗ : ೧೨-೩೮ ದೃಷ್ಟಿವಾದಾಂಗಶಾಸ್ತ್ರದಲ್ಲಿ ಪರಿಕರ್ಮ, ಸೂತ್ರ, ಪ್ರಥಮಾನುಯೋಗ, ಪೂರ್ವಗತ, ಚೂಲಿಕೆ ಎಂದು ಐದುಂ ಭೇದಗಳುಂಟು. ಪ್ರಥಮಾನುಯೋಗದಲ್ಲಿ 24 ಮಂದಿ ತೀರ್ಥಂಕರರು ಹನ್ನೆರಡು ಮಂದಿ ಚಕ್ರವರ್ತಿಗಳು, ಒಂಬತ್ತು ಮಂದಿ ಬಲದೇವರುಗಳು ಒಂಬತ್ತು ಮಂದಿ ಕೇಶವರು ಮತ್ತು ಒಂಬತ್ತು ಮಂದಿ ಪ್ರತಿಕೇಶವರು—ಈ 63 ಮಹಾ ಪುರುಷರ ಪುರಾಣವೂ ಇತರ ಪುಣ್ಯ ಪುರುಷರ ಚರಿತ್ರೆಗಳೂ ಇವೆ.

ಮತಿಜ್ಞಾನ : ಪಂಚೇಂದ್ರಿಯಗಳಿಂದಲೂ ಮನಸ್ಸಿನಿಂದಲೂ ಆತ್ಮನಿಗೆ ಆಗುವ ಜ್ಞಾನ ಮತಿಜ್ಞಾನ.

ಮನಃಪರ್ಯಾಯ ಜ್ಞಾನ : ಅನ್ಯರ ಮನಸ್ಸನ್ನು ಇಂದ್ರಿಯಗಳ ನೆರವಿಲ್ಲದೆ ತಿಳಿಯುವುದು ಮನಃಪರ್ಯಾಯಜ್ಞಾನ.

ಮಹರ್ಧಿಕ ದೇವರು : (೧೨-೨೪೩) ಇಂದ್ರ, ಪ್ರತೀಂದ್ರ, ಸಾಮಾನಿಕ, ತ್ರಯಸ್ತ್ರಿಂಶ, ಪಾರಿಷದಾತ್ಮರಕ್ಷ, ಲೋಕಪಾಲ, ಅಹಮಿಂದ್ರ.

ಮಿಥ್ಯಾದೃಷ್ಟಿ : (೧೦-೫೦) ಜೈನ ಧರ್ಮ, ಗುರು ಆಚಾರ್ಯರಲ್ಲಿ ಸಂಪೂರ್ಣ ಶ್ರದ್ಧೆಯಿಲ್ಲದಿರುವಿಕೆ.

ಶ್ರುತ : (೧೦-೧೪) ಪ್ರಾಚೀನ ಮತ್ತು ಅರ್ವಾಚೀನ ಸಂಪ್ರದಾಯಗಳ ಜ್ಞಾನವಿಚಾರ ಮತ್ತು ಸ್ವಾನುಭವಜನ್ಯ ಸತ್ಯಜ್ಞಾನ ಸಂಗ್ರಹ, ಇವೆಲ್ಲ ಸೇರಿ ಜೈನಶ್ರುತ ವಿದ್ಯೆಯೆನಿಸಿಕೊಳ್ಳುತ್ತದೆ—ಜೈನ ವೇದ ಅಥವಾ ಶಾಸ್ತ್ರ.

ಶ್ರಾವಕ : (೧-೧೦೨) ಜೈನಗೃಹಸ್ಥ : ಧರ್ಮಶ್ರವಣ ಮಾಡುವವನು.

ಶಲ್ಯತ್ರಯಂ : ೫-೧೩೦ ವ್ರತಾಚರಣೆಗೆ ಭಂಗವನ್ನುಂಟುಮಾಡುವಂಥವು : ಮಾಯಾಶಲ್ಯ, ಮಿಥ್ಯಾಶಲ್ಯ, ನಿದಾನಶಲ್ಯ.

ಸಮ್ಯಕ್ತ್ವ : (೧-೨೧೬) ಜೈನಮತದ ಸಮ್ಯಗ್ದರ್ಶನವೇ ಮೊದಲಾದ ತತ್ವಗಳನ್ನು ಪೂರ್ಣಸತ್ಯವೆಂದು ತಿಳಿದು ನಂಬುವುದೇ ಸಮ್ಯಕ್ತ್ವ.

ಸಮ್ಯಕ್‌ದರ್ಶನ : ೧-೬೭ "ತತ್ವಾರ್ಥಶ್ರದ್ಧಾನಂ ಸಮ್ಯಗ್ದರ್ಶನಮ್" ಜೈನ ತತ್ವಾರ್ಥದಲ್ಲಿ ನಂಬಿಕೆಯೇ ಸಮ್ಯಗ್ದರ್ಶನ.

ಸಮವಸರಣ : (೧-೬೨) ತೀರ್ಥಂಕರರು ತತ್ವೋಪದೇಶ ಮಾಡುವುದಕ್ಕೋಸ್ಕರ ಕುಬೇರನು ಕಟ್ಟುವ ಮಂಟಪ.

ಸವಣ : (೧೨-೨೪೩) ಶ್ರವಣ ; ಜೈನಸನ್ಯಾಸಿ

ಸಾಗರೋಪಮಕಾಲ : ೧-೨೧೮ ಕಾಲದ ಗಣನೆಯಲ್ಲಿ ಲೆಕ್ಕಕ್ಕೆ ಸಿಕ್ಕದಷ್ಟು ದೊಡ್ಡ ಅಂಕಿ.

ಸ್ಥಿತಿಕರಣ : (೧-೭೮) ಸಮ್ಯಗ್ದರ್ಶನ ಚಾರಿತ್ರಗಳಲ್ಲಿ ಚಂಚಲ ಮನಸ್ಕರಾಗಿರುವವರನ್ನು ಧರ್ಮವಾತ್ಸಲ್ಯದಿಂದ ಧೈರ್ಯ ಹೇಳಿ ದೃಢವಾಗಿ ನಿಲ್ಲಿಸುವುದಕ್ಕೆ ಸ್ಥಿತಿಕರಣವೆಂದು ಹೆಸರು.

# ಅರ್ಥಕೋಶ

## ಅ

| | | |
|---|---|---|
| ಅಂಗಚಿತ್ತ | ೧-೬೨ | ಬಹುಮಾನ, ಪಾರಿತೋಷಕ |
| ಅಂಬರ | ೫-೧೯೬ | ಆಕಾಶ |
| ಅಕ್ಕೊಂದಲೆ | ೨-೧೯ | ರಭಸದಿಂದ (?) |
| ಅಗ್ಗಾಯಿತಿ | ೮-೭೭ | ಹೆಚ್ಚು ಹಣ ಕೇಳುವ ಸೂಳೆ |
| ಅಘ | ೧೧-೩೫ | ಪಾಪ |
| ಅಚ್ಚುಳಾಯಿಲೆ | ೩-೧೯೦ | ಊಳಿಗದವ, ಪರಿಚಾರಕ |
| ಅಡ್ಡಣಿಗೆ | ೧೨-೨೦೨ | ಊಟದ ತಟ್ಟೆಯನ್ನಿಡುವ ಪೀಠ |
| ಅಣುಗು | ೪-೧೯೬ | ಪ್ರೀತಿ, ವಾತ್ಸಲ್ಯ |
| ಅನದೆ | ೮-೧೬೩ | ನಿರ್ಗತಿಕಳು (?) |
| ಅನುನಯ | ೧೦-೧೬೦ | ಮನವೊಲಿಸುವಿಕೆ |
| ಅಪವರ್ಗ | ೪-೨೩ | ಮೋಕ್ಷ |
| ಅಪ್ರಾಸುಕ | ೧೪-೧೨೯ | ಜೀವಂತವಸ್ತು ಸಹಿತವಾದದ್ದು |
| ಅಭಿನಿವೇಶ | ೫-೧೩೧ | ಹಟ ; ಆಸಕ್ತಿ |
| ಅರದ | ೮-೧೯೬ | ರಥ, ತೇರು |
| ಅರವರಿಸು | ೫-೧೩೫ | ಉಪೇಕ್ಷಿಸು, ಕಡೆಗಣಿಸು |
| ಅರ್ತಿ | ೯-೧೭ | ಸಂತೋಷ |
| ಅವಧಿಜ್ಞಾನ (ಜೈನ) | ೧೪-೪೯ | ಎಂಟು ಬಗೆಯ ಜ್ಞಾನಗಳಲ್ಲಿ ಒಂದು |
| ಅವಯವದಿಂ | ೮-೩೩ | ಸುಲಭವಾಗಿ, ನಿರಾಯಾಸವಾಗಿ |
| ಅವಲ್ | ೨-೧೪೯ | ಅವಲಕ್ಕಿ |
| ಅವಸರ್ಪಿಣೀ | ೧೪-೧೪೪ | ಇಳಿಗಾಲ, ಕುಂದುವ ಕಾಲ |
| ಅವುಗು | ೧೦-೩೫ | ಹಾಲುಖೋವದ ಒಂದು ಭಕ್ಷ್ಯ |
| ಅಷ್ಟಾಪದಗಿರಿ | ೧೧-೨೬ | ಕೈಲಾಸ ಪರ್ವತ |
| ಅಕ್ಷೂಣನ್ | ೧೩-೧೦೩ | ಕೊರತೆಯಿಲ್ಲದವನು, |
| ಅಹಮಿಂದ್ರ (ಜೈನ) | ೧೦-೨೯೧ | ಗ್ರೈವೇಯ ಲೋಕದಲ್ಲಿ ಹುಟ್ಟಿದ ಜೀವ |
| ಅಳಿಪು | ೫-೧೧೨ | ಆಸೆ |
| ಅಳ್ಳೇಟು | ೮-೧೩೬ | ಬಲವಾದ ಪೆಟ್ಟು |

| | | |
|---|---|---|
| ಅಟಿಗಂಡು | ೬–೨೩ | ಹೀನಪರಾಕ್ರಮಿ, ಶೌರ್ಯವಿಲ್ಲದವ |
| ಅಟ್ಕಮೆ | ೯–೧೦೮ | ಅಜೀರ್ಣವಾಗಿರುವಿಕೆ |
| ಅಟಿಚಟ್ಟು | ೬–೨೬ | ಕೀಳಾದ ಲೇಪನವಸ್ತು |
| ಅಜ್ಜಿಕೆಯ | ೮–೨೩ | ಹೆಸರಾದ, ಸುಪ್ರಸಿದ್ಧ |
| ಅಜ್ಜೆಯಟ್ಟು | ೬–೧೧೨ | ಬೆನ್ನಟ್ಟಿ ಹೋಗು |
| | **ಆ** | |
| ಆಟಿಸು | ೫–೨೨೧ | ಆಸೆಪಡು |
| ಆತೋದ್ಯ | ೧೦–೧೯ | ವಾದ್ಯ |
| ಆಜಿಡಿ | ೩–೮೧ | ಸುಲಿಗೆ, ದರೋಡೆ |
| ಆರ್ತಧ್ಯಾನ | ೧೪–೭೯ | ಅನಿಷ್ಟ ವಸ್ತುಗಳನ್ನೇ ಚಿಂತಿಸುತ್ತಿರುವುದು |
| ಆರ್ಮ | ೧–೬೧ | ಆಶ್ರಯ; ಮನೆ. |
| | ೫–೨೪೨ | |
| ಆಸನಕಂಪ | ೩–೧೦೨ | ವಿಶೇಷ ಪ್ರಸಂಗಗಳಲ್ಲಿ ದೇವತೆಗಳಿಗೆ ಉಂಟಾಗುವ ಪೀಠದ ಅಲುಗಾಟ |
| ಆಸನ್ನಭವ್ಯ (ಜೈನ) | ೩–೧೦೨ | ಸದ್ಯದಲ್ಲಿಯೇ ಮನಃಪರಿಪಾಕವನ್ನು ಹೊಂದುವವನು. |
| ಆಳ್ದನ್ | ೩–೧೯ | ಸ್ವಾಮಿ, ರಾಜ |
| | **ಇ** | |
| ಇಂದ್ರಾದ್ರಿ | ೨–೧೩೪ | ಮಂದರಪರ್ವತ |
| ಇಂಬು | ೧೦–೩೮ | ಸುಲಭವಾಗಿ. ಸರಿಯಾಗಿ |
| ಇಕ್ಕು | ೯–೧೮೭ | ಬಡಿಸು, ಊಟಕ್ಕೆ ನೀಡು |
| ಇರ್ಕುಳಿಗೊಳ್ | ೨–೧೪೪ | ಆಕರ್ಷಣೆಗೊಳಗಾಗು |
| | **ಉ** | |
| ಉಕ್ಕೆವ | ೭–೩೬ | ಮೋಸ |
| ಉಡೆವಜ್ಜಿ | ೭–೧೫ | ದಿಗಂಬರನಾಗು, ಬಟ್ಟೆಬಿಡು |
| ಉತ್ತರಿಗೆ | ೫–೨೦೬ | ಉತ್ತರೀಯ, ಹೊದೆಯುವ ವಸ್ತ್ರ |
| ಉತ್ತರೋತ್ತರ | ೮–೧೫೪ | ಏಳಿಗೆ, ಹೆಚ್ಚು ಹೆಚ್ಚಿನ ವೃದ್ಧಿ |
| ಉನ್ನತಿಕ್ಕೆ | ೫–೭೩ | ಹಿರಿಮೆ, ಶ್ರೇಷ್ಠತೆ |
| ಉಪಕಂಠ | ೨–೧೪೩ | ಸಮೀಪ, ಹತ್ತಿರ |
| ಉಮ್ಮಳಿಕೆ | ೮–೧೮೯ | ವ್ಯಥೆ |
| ಉಯ್ | ೧೨–೨೪ | ಧಾನ್ಯದ ಹೊಟ್ಟು |

| | | |
|---|---|---|
| ಉಯಲ್ | ೯–೧೮೭ | ಪಾಯಷ್ಕ (?) |
| ಉರ್ಕು | ೨–೧೫೨ | ಕೊಬ್ಬು, ಗರ್ವ |
| ಉರ್ದು | ೭–೧೪೨ | ಉಜ್ಜು |

ಋ

| | | |
|---|---|---|
| ಋಷಿಯರು | ೧೦–೧೪ | ಮುನಿಗಳು, ತಪಸ್ವಿಗಳು |
| ಋಷಿನಿವೇದಕ | ೧–೬೨<br>೧೪–೪೯ | ಋಷಿಗಳು ಬಂದ ಸುದ್ದಿ ದೊರೆಗೆ ತಿಳಿಸ ಲೇದೇ ಇರುವ ಸೇವಕ |
| ಋದ್ಧಿ | ೭–೧೨೪ | ಅಭ್ಯುದಯ, ಸಮೃದ್ಧಿ |

ಎ

| | | |
|---|---|---|
| ಎಗ್ಗ | ೧–೬೭ | ದಡ್ಡ |
| ಎಗ್ಗಿಕೆ | ೩–೧೮೬ | ದಡ್ಡತನ |
| ಎಡೆಯ | ೨–೧೨೪ | ಗೊಲ್ಲ, ದನಕಾಯುವವ |
| ಎಡೆಯಾಡು | ೨–೧೪೪ | ಸಂಚರಿಸು |
| ಎರೆ | ೫–೨೪೩ | ಬೇಡು |
| ಎರೆಯ ಪೆಟ್ಟೆ | ೮೪–೧೦೪ | ಎರೆಮಣ್ಣಿನಹೆಂಟೆ |
| ಎಟ್ಟೆಟ್ಟು | ೬–೧೨೫ | ಓಡಿಸು ; ಬೆನ್ನಟ್ಟು |

ಏ

| | | |
|---|---|---|
| ಏಡಿಸು | ೫–೧೩೬ | ಹೀಯಾಳಿಸು, ನಿಂದಿಸು |
| ಏಸು | ೩–೧೭೬ | ಹೊಡೆತ, ಬಾಣಬಿಡುವುದು, |

ಒ

| | | |
|---|---|---|
| ಒಕ್ಕಳ | ೧–೫೦ | ಒಂದು ಕೊಳಗ |
| ಒಬ್ಬಳ | ೨–೧೬ | ಒಂದು ಬಳ್ಳ |
| ಒಳಚ್ | ೧೪–೪೬ | ಕೂಗು, ಅರಚು, ಹುಯ್ಯಲಿಡು |
| ಒಳ್ಳಿತವಸರ | ೬–೭೭ | ಒಳ್ಳೆಯ ಅವಕಾಶ, ಸಂದರ್ಭ |
| ಒಜಿಂಟು | ೧೧–೧೭೪ | ಒರಟುತನ |
| ಒಜಿಲೆ | ೪–೧೭೫ | ಗೆದ್ದಲು, ಬಿಳಿ ಇರುವೆ |

ಓ

| | | |
|---|---|---|
| ಓಗಡಿಸು | ೬–೩೧ | ಅಸಹ್ಯಪಡು, |
| ಓಜಾಯಿಲ | ೬–೬೨ | ಮೋಸಗಾರ |
| ಓಜೆ | ೭–೪೨ | ಕ್ರಮ, ರೀತಿ ; ಶ್ರೇಣಿ |
| ಓರಂತಿರೆ | ೧–೪೩ | ಒಂದೇಸಮನಾಗಿರಲು |

## ಕ

| | | |
|---|---|---|
| ಕಂಕೆಲ್ಲಿ | ೧೧–೧೧೫ | ಅಶೋಕವೃಕ್ಷ |
| ಕಡಾರ | ೩–೨೪೧ | ಕೊಪ್ಪರಿಗೆ |
| ಕಡೆಗಣಿಸು | ೬–೧೬೯ | ಅಲಕ್ಷ್ಯಮಾಡು |
| ಕಬ್ಬಿಲ | ೮–೨೨ | ಬೇಡ ; ಮೀನುಗಾರ |
| ಕಮಂಧ | ೧೨–೧೬ | ಮೋಡ ; ರಾಹು |
| ಕಮ್ಮಟಿ | ೭–೪೭ | ಕಮ್ಮಾರಿ |
| ಕಯ್ವಾರ | ೫–೧೩೬ | ಕೊಂಡಾಟ, ಹೊಗಳಿಕೆ |
| ಕರಂಡ | ೧೧–೪೬ | ಬಿದಿರಿನ ಬುಟ್ಟಿ, ಹಳಿಗೆ |
| ಕರಡ | ೧೪–೧೦೨ | ಕಾಡುಹುಲ್ಲು |
| ಕರ್ಬು | ೮–೧೮೬ | ತೊಳೆ |
| ಕುಪ್ಪಸ | ೭–೬೩ | ಕೂರ್ಪಾಸ, ನಿಲುವಂಗಿ |
| ಕಱಿಮಱಿ | ೫–೧೦೨ | ಕಂದು ಕೂದುಗಳು, ಲೋಪದೋಷ |
| ಕರ್ಬಳ್ಳಿ | ೭–೨೨೧ | ಕಪ್ಪನೆಯ ಬಳ್ಳಿ |
| ಕರ್ಮೇಂಧನ | ೮–೧೧೮ | ಕರ್ಮವೆಂಬ ಸೌದೆ |
| ಕಲ್ಲೆಯುಂ ಕವಿಲೆಯುಂ | ೫–೨೦೭, ೬–೧೦೪ | ಅಲ್ಲೋಲಕಲ್ಲೋಲ |
| ಕವಯರ | ೧–೮೫ | ಕೈವಾರ (?) |
| ಕವರಿಸು | ೫–೧೨೫ | ಲೂಟಿಮಾಡಿಸು; ಅಪಹರಿಸು |
| ಕಪ್ಪತಿಕ್ಕೆ | ೧೦–೧೫೫ | ಕಪ್ಪತನ, ಅಲ್ಪತನ |
| ಕಾಗೆದೊಂಡೆಹಣ್ಣು | ೬–೩೮ | ಕಾಗೆ ತೊಂಡೆ ಹಣ್ಣು (ಕಾಕತುಂಡಿಕಾ) |
| ಕಾಲದು | ೮–೫೧ | ಕಾಲಿನೊಳಗಿನದು |
| ಕಿಡೆನುಡಿ | ೬–೧೦೯ | ಕೆಟ್ಟಮಾತನಾಡು |
| ಕಿಱುಕುಳನ್ | ೧೩–೯೧ | ಅಲ್ಪ, ಚಿಲ್ಲರೆ ಮನುಷ್ಯ, |
| ಕಿಸು | ೧೪–೧೩೪, ೪–೩೯, ೫–೧೭೧ | ತಾಮ್ರ |
| ಕಿಳ್ಳಮಡು | ೫–೨೮ | ಪಿಸುರಿನಹಳ್ಳ |
| ಕೀನಾಶ | ೭–೧೫೩ | ಯಮ |
| ಕುಂಟಣಿ | ೩–೧೨೩ | ತಲೆಹಿಡುಕಿ, ಸೂಳೆ |
| ಕುಕಿಲ್ | ೨–೧೪೪ | ಕೋಗಿಲೆಯ ಧ್ವನಿ |
| ಕುತ್ತ | ೪–೯೦ | ರೋಗ |

| | | |
|---|---|---|
| ಕುನುಂಗು | ೧೩–೧೭೨ | ಕುಗ್ಗು, ಸುಕ್ಕು |
| ಕುಪ್ಪಕುಜಿ | ೧೩–೬೭ | ಮಕ್ಕಳ ಒಂದು ಆಟ |
| ಕುಜುತ್ತು | ೫–೧೪೬ | ಉದ್ದೇಶಿಸಿ |
| ಕೃತಕ | ೩–೪೭ | ಮೋಸ |
| ಕೆಂದಳಿರು | ೨–೧೪೩ | ಕೆಂಪನೆಯ ಚಿಗುರು |
| ಕೆಮ್ಮನೆ | ೭–೮೯ | ಸುಮ್ಮನೆ, ವೃಥಾ |
| ಕೆಯ್ | ೯–೧೮೭ | ಗದ್ದೆ, ತೋಟ |
| ಕೆರಕು | ೬–೧೭೫ | ಸೀಕಲು |
| ಕೆರಪು | ೮–೨೧೦ | ಚಪ್ಪಲಿ ; ಕೆರ್ಪು |
| ಕೇಕಿ | ೨–೧೪೪ | ನವಿಲು |
| ಕೇಣಿಕ | ೧೪–೧೦೪ | ಗಿರವಿ, ಆಡವು |
| ಕೇರ್ | ೨–೧೪೫ | ಗೋಡೆ |
| ಕೇಳ್ಪೆ | ೫–೨೦೭ | ಕೇಳುವಿಕೆ, ಶ್ರುತತ್ವ |
| ಕೈಗರ್ಪು | ೯–೧೮೭ | ಕೈತೊಳೆ |
| ಕೈಪೆ | ೫–೧೫೬ | ಕಹಿ |
| ಕೈಪೊಡೆ | ೧೦–೩೧, ೭–೬೩ | ಚರ್ಮದಪಟ್ಟಿ |
| ಕೈಯದು | ೮–೫೧ | ಕೈಯೊಳಗಿನದು |
| ಕೈವಲ್ಯಲಕ್ಷ್ಮಿ | ೫–೩೭ | ಮೋಕ್ಷವೆಂಬ ಭಾಗ್ಯ |
| ಕೊಂಡು ಕೊನೆ | ೬–೧೨೭ | ಹೊಗಳು, ಕೊಂಡಾಡು |
| ಕೊಕ್ಕರಿಸು | ೫–೧೭೭ | ಅಸಹ್ಯಪಡು |
| ಕೋಟಿವೇದಿ | ೧೪–೧೦೬ | ವರ್ಗವನ್ನು ತಿಳಿಸುವ (?) |
| ಕೋಡು | ೮–೩೮ | ಚಳಿಯನ್ನುಂಟುಮಾಡು |
| ಕೋಡು | ೧–೭೫,೭–೧೯ | ದಾನ, ಕೊಡಿಗೆ |
| ಕೊದಳಿ | ೧೪–೧೩೪ | ಎಳ್ಳಿನ ಕಾಯಿಯ ಸಿಪ್ಪೆ |
| ಕೋವಣ | ೭–೯೫ | ಕೌಪೀನ, ಲಂಗೋಟಿ |
| ಕೋಳು | ೫–೯೯ | ಕೊಳ್ಳೆ, ಸೂರೆ |

ಖ

| | | |
|---|---|---|
| ಖಗೇಶ | ೫–೮೧ | ಖೇಚರರಾಜ |
| ಖರ್ವಡ | ೫–೪ | ಬೆಟ್ಟಗಳು ಸುತ್ತುಗಟ್ಟಿದ ಪಟ್ಟಣ |
| ಖೇಡ | ೫–೪ | ಹಳ್ಳಿ, (ಕೋಟೆ ಇರುವ ಊರು) |
| ಖೈರು | ೧೩–೧೫೬ | ಕ್ಷೇಮ, ಸುಸ್ಥಿತಿ |

## ಗ

| | | |
|---|---|---|
| ಗಮ್ಮನೆ | ೧೦-೯೧ | ಬೇಗನೆ, ನೇರವಾಗಿ |
| ಗಟಿಪಂ | ೬-೧೪ | ಹರಟುವವನು |
| ಗಾತ್ರ | ೧೦-೩೦ | ಶರೀರ |
| ಗಾಂಪ | ೯-೨೮ | ದಡ್ಡ |
| ಗುಂಡಃ | ೫-೧೭೨ | ಗುಂಡುಕಲ್ಲು (?) |
| ಗುಂಡೋತ್ತರ | ೧೨-೨೪ | ತಳಪಾಯ |
| ಗುಡಿಗಟ್ಟು | ೧-೧೨೬ | ಉತ್ಸಾಹ ಪ(ಟ್ಟು) ಡು |
| ಗುಣ | ೨-೧೫೫ | ಬಿಲ್ಲಿನಹಗ್ಗ ; ಒಳ್ಳೆಯತನ |
| ಗುಣ್ಪು | ೫-೭೩ | ಆಳ, ಗಾಂಭೀರ್ಯ |
| ಗುಣವ್ರತ | ೧೪-೮೪ | ದಿಗ್ವಿರತಿ, ದೇಶವಿರತಿ, ಅನರ್ಥದಂಡ ವಿರತಿ ಎಂಬ ಮೂರು ಬಗೆ ವ್ರತ |
| ಗುಜಿಗುಜಿಸು | | ಆಕ್ಷೇಪಿಸು, ಗೊಣಗು ; ಗೊರಕೆ ಹೊಡೆ |
| ಗೆಂಟು | ೮-೧೫೯ | ದೂರ |
| ಗೊಂದಣ | ೨-೧೪೩ | ಗೊಂಚಲು |
| ಗೊಟ್ಟಾಟ | ೧೨-೮೩, | ಮೋಸ, ಕಾಟ |
| ಗೋಮಿನಿ | ೭-೮ | ಇಳೆ, ಭೂದೇವಿ |
| ಗೋರಿ | ೮-೬೯ | ಆಕರ್ಷಣೆ |
| ಗ್ರಾಮಣಿ | ೮-೫೧ | ಹಳ್ಳಿಯ ಮುಖಂಡ |
| ಘಾತಿಕರ್ಮ | ೧೪-೧೩೪ ೮೫ | ಆತ್ಮನ ಗುಣಕ್ಕೆ ಹಾನಿಕರವಾದ ಕರ್ಮ, ನಾಲ್ಕು ಬಗೆ |
| ಚಂದ್ರಗತಿ | ೧೦-೧೧೦ | ಚಂದ್ರನ ಕಿರಣಗಳಂತೆ ಭೇದವಿಲ್ಲದೆ ಎಲ್ಲರ ಮನೆಯಲ್ಲಿಯೂ ಮಾಡುವ ಭಿಕ್ಷೆ |
| ಚಟ್ಟ (ಛಾತ್ರ) | ೧೩-೭೭ | ಶಿಷ್ಯ |
| ಚತುಃಕಷಾಯ | ೮-೧೫೪ | ನಾಲ್ಕು ಕಷಾಯಗಳು |
| ಚಮೂರು | ೭-೧೫೮ | ಹುಲಿ |
| ಚರಿಗೆ | ೮-೧೬೫, ೧೦-೧೧೦ | ಭಿಕ್ಷೆ |
| ಚರು | ೧೦-೧೮೪ | ಅನ್ನ (ಹೋಮ, ನೈವೇದ್ಯಗಳಿಗಾಗಿ ಮಾಡಿದ್ದು) |
| ಚಾಮೀಕರ | ೮-೧೧೯ | ಚಿನ್ನ |
| ಚಾರಣ ಋದ್ಧಿ | ೮-೧೫೫ | ಗಗನ ಸಂಚಾರ ಶಕ್ತಿ |

| | | |
|---|---|---|
| ಜೆಚ್ಚರ | ೫-೧೫೦ | ಬೇಗ |

**ಜ**

| | | |
|---|---|---|
| ಜಂಘಾಚಾರಣಋದ್ಧಿ | ೭-೧೭೦ | ನೆಲದ ಮೇಲೆ ಕಾಲೂರದೆ ನಡೆಯುವ ಶಕ್ತಿ |
| ಜನ್ನಿವರ | ೫-೨೦೬ | ಜನಿವಾರ, ಯಜ್ಞೋಪವೀತ |
| ಜಲದನಿಕಾಯ | ೧೪-೧೩ | ಸುಗಂಧದ ಹುಲ್ಲು, ಭದ್ರಮುಸ್ತೆ |
| ಜಾತರೂಪಧರ | ೮-೫೩ | ಬೆತ್ತಲೆ, ದಿಗಂಬರ, ಜೈನ ಸನ್ಯಾಸಿ |
| ಜಾದು | ೧೧-೧೬೨ | ಗೈರಿಕಧಾತು |
| ಜಿನಭವನ | ೧೦-೧೪ | ಚೈತ್ಯ, ದೇಹಾರ |
| ಜೀವನಧಿ | ೧೧-೧೫೬ | ಸಮುದ್ರ (ಜೀವನ = ನೀರು) |
| ಜ್ಯೋತಿರ್ಲೋಕ | ೧-೨೧೬ | ಬೆಳಕಿನಿಂದ ತುಂಬಿದ ಲೋಕ |
| ಝಷ | ೧೧-೩೩ | ಮೀನು |
| ಝಷಕೇತು | ೧೦-೩೩ | ಮನ್ಮಥ(ಬಾವುಟದಲ್ಲಿ ಮೀನಿನ ಚಿತ್ರ ವುಳ್ಳವನು) |
| ಡೊಳ್ಳಿಗ | ೧೨-೭೫ | ಡೊಳ್ಳುಹೊಟ್ಟೆಯವ (ಇಲ್ಲಿ ಶ್ರೀಮಂತ ನೆಂದು ಭಾವ) |

**ತ**

| | | |
|---|---|---|
| ತಕ್ಕುಮೆ | ೭-೪೯ | ಯೋಗ್ಯತೆ |
| ತಡವು | ೧೦-೧೨೧ | ನೇವರಿಸು, ಸವರು |
| ತತಿ | ೮-೧೯೩ | ಸಮೂಹ, ಗುಂಪು |
| ತಱಂಟು | ೧೧-೧೭೪ | ಬೋಳು |
| ತಳ | ೫-೨೨೫ | ಹಸ್ತ, ಅಂಗೈ |
| ತಳರ್ನಡೆ | ೭-೧೩ | ತಪ್ಪುಹೆಜ್ಜೆ, ಅಸ್ಥಿರವಾದ ಹೆಜ್ಜೆ |
| ತಳಿ | ೮-೧೮೬ | ಚಿಮುಕಿಸು |
| ತಳೋದಕ | ೮-೧೮೬ | ಪಾದೋದಕ, ಕಾಲು ತೊಳೆದ ನೀರು |
| ತಾಱು | ೬-೪೫ | ಒಣಗು, ಒತ್ತು |
| ತಿಂಗುರಿ | ೧೦-೨೮೬ | ಆಹಾರ, ತಿನಿಸು, ತಿನ್ನಲು ಸಾಕಿದ ಕುರಿ |
| ತಿಗುರಿ | ೬-೧೦೪ | ಕುಂಬಾರನ ಚಕ್ರ |
| ತಿಣ್ಣಂ | ೨-೧೧ | ಹೆಚ್ಚಾಗಿ |
| ತಿಬ್ಬಂ | ೨-೧೫೧, ೫-೧೨೨, ೧೦-೩೯ | ತೀವ್ರ, ಅತಿಶಯ |
| ತಿಱಕ | ೧-೬೫, ೧೦-೮೩ | ತಿರ್ಯಕ್‌ಗತಿ (ಪಶುಜನ್ಮ) |

| | | |
|---|---|---|
| ತೀವು | ೪–೪೯ | ತುಂಬು |
| ತುಡುಗು. | ೬–೧೧೫ | ಕಳ್ಳತನ |
| ತುರಿಪ | ೬–೯೯ | ವೇಗ, ಶೀಘ್ರ |
| ತುಱುಂಬು | ೭–೧೭೮ | ಮುಡಿದುಕೊಳ್ಳು, ತುಱುಬಿನಲ್ಲಿ ಧರಿಸು. |
| ತುಱಿಲಾಳ್ | ೫–೪೩ | ವೀರ |
| ತೂಂತು | ೯–೧೮೭ | ತೂತು |
| ತೆಲ್ಲಿಗ | ೮–೫೧, ೨–೨೧ | ತೈಲಿಕ, ಗಾಣಿಗ, ಎಣ್ಣೆ ಮಾರುವವ |
| ತೇಂಕು | ೭–೧೦೫ | ತೇಲು |
| ತೇೞ್ | ೧೪–೮೪ | ಚೇಳು |
| ತೊಂಡಲ್ | ೩–೭೪ | ಸಮೂಹ (ಇರುವೆ ಸಾಲು) |
| ತೋಟಿ | ೮–೯೪ | ಯುದ್ಧ, ಜಗಳ |
| ತೋಲ್ | ೭–೬೩ | ಚರ್ಮ |
| ತ್ರಿಕರಣ | ೧೦–೨೫೦ | ಮನ ವಚನ ಕಾರ್ಯಗಳು |
| ತ್ರಿದಂಡ | ೧೦–೮೩ | ಸನ್ಯಾಸಿಯ ಕೋಲು |
| ತ್ರೈವಿದ್ಯ | ೧೦–೨೯೭ | ಮೂರು ವಿದ್ಯೆಗಳು |
| | ದ | |
| ದಯಿತೆ | ೭–೧೫೫ | ಪ್ರಿಯೆ, ಹೆಂಡತಿ |
| ದರಿ | ೭–೧೬೦ | ಹಳ್ಳ |
| ದಶಧರ್ಮ | ೮–೧೫೪ | ಹತ್ತು ನಿಯಮಗಳು (ಜೈನ) |
| ದಿಂಟೆ | ೧೩–೧೮೭ | ದಿಣ್ಣೆ ? |
| ದಿಗ್ವಾಸ | ೧೧–೧೫೦ | ದಿಗಂಬರ, ದಿಕ್ಕುಗಳೇ ಬಟ್ಟೆಯಾಗಿ ಉಳ್ಳವ |
| ದಿವ್ಯ | ೯–೬೮ | ಪರೀಕ್ಷೆ |
| ದುರಂತರ | ೧೦–೧೧೧ | ದುಃಖಕರ |
| ದುಲ್ಲಟಿ | ೧೩–೭೭ | ಭಿಕ್ಷಾಪಾತ್ರೆ |
| ದೂರಿಸು | ೩–೨೩೮ | ದೂಷಿಸು |
| ದೂರ್ತು | ೨–೩೦ | ಧೂರ್ತತನ |
| ದೂಸಿಗ | ೨–೩೩ | ಬಟ್ಟೆ ವ್ಯಾಪಾರಿ |
| ದೆಸೆವಲಿ | ೨–೧೩೬ | ದಿಗ್ಬಲಿ |
| ದೇಸಿಗತನ | ೩–೯೯ | ಭಿಕ್ಷಾವೃತ್ತಿ |
| ದೇಹಾರ | ೮–೧೬೫ | ದೇವಾಲಯ |
| ದ್ವಾದಶ ತಪಂಗಳ್ | ೯–೧೫ | ಹನ್ನೆರಡು ಬಗೆಯ ತಪಸ್ಸು (ಜೈ) |

| | | |
|---|---|---|
| ಧರ್ಮಗಳ್ | ೧–೧೮೪ | ಧರ್ಮದ ಹೆಂಡ |
| ಧೂರ್ತ | ೯–೧೩೪ | ಉದ್ಧತ–ವಂಚಕ |

**ನ**

| | | |
|---|---|---|
| ನಂಜಿನುರುಳಿ | ೭–೧೫೫ | ಉಷದ ಉಂಡೆ |
| ನಂದೀಶ್ವರ | ೮–೧೭೧ | ಜೈನರ ಒಂದು ವ್ರತ |
| ನಗೇಂದ್ರ ಧೈರ್ಯ | ೯–೨ | ಪರ್ವತದಂಥ ಧೈರ್ಯ |
| ನಡಪು | ೮–೧೬೫, ೯–೧೮೭ | ಸಾಕು, ಸಲಹು |
| ನಮೇರು | ೮–೧೮೭ | ಸುರಗಿಮರ |
| ನವನಿಧಿ | ೯–೩ | ಒಂಬತ್ತು ನಿಧಿಗಳು : ನೀಲ, ಖರ್ವ ಪದ್ಮ, ಮಹಾಪದ್ಮ, ಶಂಖ ಮಕರ, ಕಚ್ಛಪ, ಮುಕುಂದ, ನಂದ |
| ನವವಿಧ ಪುಣ್ಯ | ೧೨–೨೧೩ | ಒಂಬತ್ತು ಬಗೆಯ ಪುಣ್ಯ (ಜೈ) |
| ನಿಕರ | ೧–೧೦೩ | ನಿಷ್ಕರ್ಷೆ, ಖಚಿತ |
| ನಿಕುರುಂಬ | ೮–೧೮೯ | ಸಮೂಹ |
| ನಿಗ್ರಹ | ೪–೩೮ | ಶಿಕ್ಷೆ, ಹಿಂಸೆ |
| ನಿತ್ತರಿಸು | ೧–೧೨೫ | ಸಹಿಸು, ದಾಟು |
| ನಿಧಿ | ೧೨–೨೪೭ | ನಿಕ್ಷೇಪ, ಬಚ್ಚಿಟ್ಟ ಹಣ |
| ನಿರೋಧ | ೪–೮೬ | ಹಿಂಸೆ, ಕಷ್ಟ |
| ನಿರ್ಗ್ರಂಥ | ೯–೭೪ | ಬೆತ್ತಲೆ |
| ನಿರ್ಜರೆ | ೧೦–೧೦೪ | ನಾಶಮಾಡುವುದು ; ಹೋಗಲಾಡಿಸುವಿಕೆ |
| ನಿರ್ಬುದ್ಧಿ | ೬–೧೦೦ | ಬುದ್ಧಿಯಿಲ್ಲದವ |
| ನಿರ್ವಾಹಂ | ೧೦–೯೮ | ಉಪಾಯ |
| ನಿವಾಳಿವಟ್ಟ | ೨–೧೪೯ | ವಿನಾಶ |
| ನೆಕ್ಕನೆ | ೭–೧೬೩ | ತಟ್ಟನೆ, ಹಟಾತ್ತಾಗಿ |
| ನೆಗಟಿಸು | ೪–೩೪ | ಮಾಡಿಸು |
| ನೆಜನ್ | ೧೦–೩೦ | ಮರ್ಮಸ್ಥಾನ |
| ನೆಲಪು | ೨–೧೩೯ | ನೆಲವು, ನೆಲ, |
| ನೇರಿದರ್ | ೧೦–೮೯ | ನಿಷ್ಠರು, ಧರ್ಮಿಷ್ಠರು |
| ನೋಂಪಿ | ೧–೧೨೨ | ವ್ರತ |
| ನೋನು | ೧–೧೨೨ | ವ್ರತಮಾಡು, ಪುಣ್ಯ ಸಂಪಾದಿಸು |

**ಪ**

| | | |
|---|---|---|
| ಪಂಚ ಪರಮೇಷ್ಠಿ | ೧೨–೨೪ | ಅರ್ಹತನೇ ಮೊದಲಾದ ಐವರು ಜೈನ ಗುರುಗಳು |

| | | |
|---|---|---|
| ಪಂಚಮಹಾಶಬ್ದ | ೧೨-೫೧ | ಐದು ಬಿರುದಿನ ವಾದ್ಯಗಳು |
| ಪಂಚಾನನ | ೬-೧೮೬ | ಸಿಂಹ |
| ಪಂಥಾತಿಚಾರ ನೇಮ | ೧೪-೪೯ | ದಾರಿ ನಡೆದಾಗ ಆದ ತಪ್ಪಿಗೆ ಪ್ರಾಯಶ್ಚಿತ್ತ |
| ಪಂದೆ | ೨-೧೩೬ | ಹೇಡಿ |
| ಪಗವ | ೯-೩ | ಹಗೇವು |
| ಪಗಿನು | ೮-೧೧೫ | ಗಿಡದಿಂದ ಸ್ರವಿಸುವ ರಸ, ಗೋಂದು |
| ಪಗಗಾಳಿ | ೮-೫೧ | ಶತ್ರು, ದ್ವೇಷಸಾಧಕ |
| ಪಚ್ಚೋಂತಿ | ೧೪-೧೦೪ | ಊಸುರುಳ್ಳಿ, ಗೋಸುಂಬೆ |
| ಪಡಿ | ೨-೧೭೨, ೯-೧೬೨ | ಕದ |
| ಪಡಿಗ | ೧೪-೧೦೪ | ಪೀಕದಾನಿ, ಉಗುಳುವ ಪಾತ್ರೆ |
| ಪಡೆಪು | ೯-೩ | ಲಾಭ, ಸಂಪಾದನೆ |
| ಪಡೆವಳ | ೧-೬೨ | ಸೇನಾನಿ |
| ಪಣವಿನೀತೆ | ೧೩-೧೮೫ | ಒಂದು ಬಗೆಯ ಚರ್ಮವಾದ್ಯ |
| ಪಣೆ | ೧೩-೫ | ಪಣೆಯಾಲ |
| ಪತ್ರಚ್ಛೇದ | ೮-೧೦೭ | ಎಪ್ಪತ್ತು ಕಲೆಗಳಲ್ಲಿ ಒಂದು |
| ಪದುಟಿಗ | ೬-೨೦೬ | ಕ್ಷೇಮದಿಂದಿರುವವ |
| ಪಯಿನು | ೧೪-೧೬೦ | ಹಾಲುಳ್ಳ ಕೆಚ್ಚಲು |
| ಪರತ್ರೆ | ೯-೨೬ | ಪರಲೋಕದಲ್ಲಿ ಸದ್ಗತಿ |
| ಪರದು | ೧-೭೫ | ವ್ಯಾಪಾರ |
| ಪರಸು (ಪರಶು) | ೭-೧೦೯<br>೬-೧೨೩ | ಗಂಡುಗೊಡಲಿ |
| ಪರಿವಿಡಿ | ೧೪-೫೨ | ಕ್ರಮ, ಪರಂಪರೆ |
| ಪರಿವೃಢ | ೭-೧೬೮ | ಮುಖಂಡ ; ಶ್ರೇಷ್ಠ |
| ಪರೀಷಹ | ೩-೧೭೦ | ತಪಸ್ಸಿಗೆ ಅಡ್ಡಿಯಾದ ಕಷ್ಟ |
| ಪಱಿ | ೨-೧೪೮ | ತಮಟೆ |
| ಪರ್ಚು | ೧೩-೧೮೭ | ಪಿಸುಗುಟ್ಟು |
| ಪರ್ವ | ೧೨-೮೮ | ಹಬ್ಬ |
| ಪರ್ವೋಪವಾಸ | ೨-೧೬೨ | ಪುಣ್ಯದಿನದ ಉಪವಾಸ |
| ಪಸದನ | ೩-೯ | ಅಲಂಕಾರ, (ಪ್ರಸಾಧನ) |
| ಪಸರ | ೨-೧೫೫ | ಅಂಗಡಿಯ ಸರಕು |
| ಪಳಿತ | ೧೪-೧೦೬ | ಲೆಕ್ಕಕ್ಕೆ ಸಿಕ್ಕದಷ್ಟು ದೀರ್ಘಕಾಲ |

| | | |
|---|---|---|
| ಪೞವಾವಿ | ೬–೩೮ | ಹಳೆಯ ಬಾವಿ |
| ಪೞಿಯಾಳ್ತನ | ೬–೨೩ | ಹೇಡಿತನ, ಓಡುವ ಶೌರ್ಯ |
| ಪಾಚಿಸು | ೬–೭೦ | ಆಚರಿಸು |
| ಪಾರ್ | ೬–೩೪ | ಲಕ್ಷಿಸು |
| ಪಾಸಱೆ | ೧೪–೩೩ | ಹಾಸುಗಲ್ಲು, ದೊಡ್ಡ ಬಂಡೆ |
| ಪುಡುಕುನೀರು | ೪–೨೩೫ | ಕುದಿಯುವ ನೀರು |
| ಪುಲ್ಲಿಗೆ | ೧೪–೧೩೪ | ಹೋಳಿಗೆ |
| ಪುಳ್ಗಿ | ೩–೬೯ | ಹುಗ್ಗಿ |
| ಪೂರಣೆ | ೧೦–೨೩ | ತುಂಬುವಿಕೆ |
| ಪೆಟ್ಟುವೆರ್ಚು | ೧೪–೨೦೭ | ಗರ್ವಪಡು |
| ಪೆಂಪು | ೯–೯ | ಆಧಿಕ್ಯ |
| ಪೆಱದೆಗೆ | ೬–೧೧೩ | ಹಿಂದೆಗೆ |
| ಪೆರ್ಗಣ | ೩–೧೨೨ | ಹೆಗ್ಗಣ |
| ಪೊಚ್ಚಱು | ೯–೧೯೨ | ಶೌರ್ಯ |
| ಪೊಱಬೀಡು | ೬–೯೪ | ಪ್ರಯಾಣ ಸಿದ್ಧತೆಗೆ ಊರ ಹೊರಗೆ ಬಿಟ್ಟ ಬೀಡು |
| ಪೊಱಮಡು | ೧–೬೨ | ಹೊರಡು |
| ಪೊರ್ದು | ೯–೧೪ | ಹೊಂದು, ಆಶ್ರಯಿಸು, ಸೇರು |
| ಪೊಲ್ಲಮೆ | ೬–೧೨೬ | ಕೆಟ್ಟತನ |
| | ಬ | |
| ಬಂಡ | ೬–೬೪ | ಸರಕು |
| ಬಂದಿಗೆ | ೪–೫೦ | ಗುರಾಣಿ |
| ಬಕವೇಸಿ | ೬–೬೧ | ಕಪಟವೇಷ, ಕಳ್ಳತಪಸ್ವಿ |
| ಬಟ್ಟೆ | ೩–೪೬ | ದಾರಿ |
| ಬತ್ತಲಿಗ | ೮–೯೩ | ದಿಗಂಬರ ಜೈನಮುನಿ |
| ಬದರೀಕಂಟಕ | ೧೦–೮೯ | ಬದರೀ ಪ್ರಯಾಣಕ್ಕೆ ಅಡ್ಡಿಮಾಡುವವ(?) |
| ಬದ್ಧ ಮಿಥ್ಯಾದೃಷ್ಟಿ | ೪–೯೯ | ಕುಧರ್ಮವನ್ನು ಬಿಡದವನು |
| ಬಧಿರನ ಕೇಳ್ವೆ | ೬–೯೭ | ಕಿವುಡನ ಕೇಳ್ಮೆ |
| ಬೞಿಯ | ೨–೧೭೫ | ನಿಷ್ಪ್ರಯೋಜಕ |
| ಬಸದಿ | ೧೦–೧೪ | ಜೈನಮತ, ದೇವಾಲಯ |
| ಬಾರಿ | ೬–೨೦೬ | ಸರದಿ |
| ಬಾರಿಕ | ೭–೧೧೯ | ಸರದಿಯನ್ನು ಜ್ಞಾಪಿಸುವವ |
| ಬಿಚ್ಚತಿಕ್ಕೆ | ೨–೧೬೮ | ಧಾರಾಳತನ |

| | | |
|---|---|---|
| ಬಿತ್ತರ | ೧–೧೨೭ | ವಿಸ್ತಾರ, ಅತಿಶಯ |
| ಬಿರ್ದು | ೫–೧೭೮ | ಔತಣ |
| ಬೀಡು | ೧–೬೨ | ಬಿಡಾರ |
| ಬುಂಭುಕ | ೧೪–೮೭ | ಗೊಂಚಲು |
| ಬುಗುಂಟು | ೬–೨೬ | ಬುಗುಟು, ಬೋರೆ |
| ಬೆಗಡು | ೨–೨೭ | ಭಯಮಿಶ್ರಿತ ಆಶ್ಚರ್ಯ |
| ಬೆಟ್ಟಿತು | ೬–೧೦೬ | ಕಠಿಣ |
| ಬೆಸನು | ೬–೨೭ | ಕೆಲಸ |
| ಬೆಸಗೊಳ್ | ೯–೩ | ಕೇಳು, ವಿಚಾರಿಸು |
| ಬೆಳ್ಪನ | ೭–೭೨ | ಬೆಪ್ಪುತನ |
| ಬೇವಸ | ೫–೮೨ | ದುಃಖ, ಧಾವಂತ |
| | ಭ | |
| ಭಂಗಿ | ೬–೩೩ | ರೀತಿ, ಕ್ರಮ |
| ಭಗಣ | ೩–೧೮ | ನಕ್ಷತ್ರ |
| ಭರ್ತಾರಿ | ೮–೪೫ | ಹೆಂಡತಿ |
| ಭವ್ಯ | ೧೪–೨೬ | ಸಿದ್ಧಿ ಹೊಂದಲಿರುವ ಜೀವ |
| ಭಾಜನ | ೧೪–೮೪ | ಪಾತ್ರ |
| ಭೂತಿ | ೧–೧೨೧ | ಮಹಿಮೆ, ವೈಭವ |
| ಭೈತ್ರ | ೧–೬೭ | ಹಡಗು |
| ಭೈಷಜ್ಯ | ೪–೬೪ | ಚಿಕಿತ್ಸೆ |
| | ಮ | |
| ಮಂತಣ | ೧–೨೩ | ಮಂಥನ, ವಿಚಾರ, ಚರ್ಚೆ |
| ಮಚ್ಚಿ | ೧೩–೫ | ಮೆಚ್ಚು, ಚೆನ್ನದ ಚೂರು |
| ಮಡಂಬ | ೫–೪ | ಐನೂರು ಹಳ್ಳಿಗಳ ಮುಖ್ಯನಗರ |
| ಮನಕತ | ೩–೨೪೨ | ಮನಃಕ್ಷತ, ಒಳಗಿನ ದುಃಖ |
| ಮರಗಾಲು | ೧೪–೧೦೬ | ಮರದಿಂದ ಮಾಡಿದ ಕಾಲು |
| ಮಹಾಮಾತ್ಯ* | ೯–೧೮ | ದೊಡ್ಡ ಮಂತ್ರಿ |
| ಮಹಾವಿಭೂತಿ | ೭–೧೧೯ | ಅತಿಶಯವಾದ ವೈಭವ |
| ಮಹೇಂದ್ರಜಾಲ | ೫–೨೪೪ | ಗಾರುಡಿ, ಯಕ್ಷಿಣಿ ; ವಂಚನೆ |
| ಮಾನಸ್ತಂಭಂ | ೨–೧೪೧ | ವಿಜಯದ ಕಂಬ |
| ಮಾನ್ಯದೆಱೆ | ೮–೮೦ | ಮಾನ್ಯದ ಭೂಮಿಗಾಗಿ ಕೊಡುವ ತೆರಿಗೆ |
| ಮಿಳ್ಳಿಸು | ೧೦–೨೭೧ | ಅಲುಗಾಡು, ಚಲಿಸು |

* ಮೂಲದಲ್ಲಿ ಇದು 'ಮಾಹಾಮತ್ಯ' ಎಂದು ತಪ್ಪಾಗಿ ಅಚ್ಚಾಗಿದೆ.

| | | |
|---|---|---|
| ಮುಂಗೊಳೆಯ | ೧೦-೮೭ | ವಲಸೆಯ ಮುಂಚೂಣಿ |
| ಮುಕುರ | ೯-೬ | ಕನ್ನಡಿ |
| ಮುನಿ | ೯-೪ | ಜೈನಯತಿ |
| ಮೂವೆಡ್ಡಂ | ೫-೧೩ | ಬಹಳ ಸುಂದರ |
| ಮೇಲುದು | ೮-೩೮ | ಉತ್ತರೀಯ |
| ಮೊಂಟು | ೬-೧೮೦ | ಮೋಟು |
| ಮೊಕ್ಕಳಂ | ೧೪-೩೯ | ವಿಶೇಷ ; ರಾಶಿ |
| ಮೊಗಪೆ | ೯-೨೩ | ನೀರೆತ್ತುವ ಪಾತ್ರೆ |
| ಮೊಗ್ಗು | ೫-೮೧ | ಸೌಲಭ್ಯ |
| ಮೊಟ್ಟನೆ | ೪-೨೫೫ | ನೆಲಸಮ |
| ಮೊದಲು | ೧೪-೮೪ | ಬಂಡವಾಳ |
| | ರ | |
| ರಪಣ | ೧೪-೧೬೦ | ಆಸ್ತಿ, ಐಶ್ವರ್ಯ |
| ರಯ್ಯ | ೨-೧೪೪ | ರಮ್ಯ, ಮನೋಹರ |
| ರಾಟಣ | ೯-೨೩ | ರಾಟೆ, ನೀರೆತ್ತುವ ಯಂತ್ರ |
| ರುಂದ್ರ | ೭-೧೧೨ | ವಿಸ್ತಾರ, ದೊಡ್ಡ |
| | ಲ | |
| ಲಂಬಣ | ೫-೫೮ | ಕುಚ್ಚು |
| | ವ | |
| ವಂಶಮಾಲೆ | ೧೦-೨೮ | ಚಿನ್ನದಿಂದ ಮಾಡಿದ ಹಾರ |
| ವಿಕಚ | ೬-೩೫ | ಅರಳಿದ |
| ವಿಗುರ್ವಣೆ | ೮-೨೩೪ | ಮಾಯಾಸೃಷ್ಟಿ |
| ವಿಯಚ್ಚರ | ೫-೧೨೧ | ಖೇಚರ, ಆಕಾಶಸಂಚಾರಿ |
| ವಿಷ್ಟರ | ೮-೧೮೬ | ಆಸನ, ಪೀಠ |
| ವಿಹಾರಿಸು | ೧೪-೪೯ | ಸಂಚರಿಸು |
| ವೃತ್ತಿ | ೬-೬೯ | ಸಂಪಾದನೆ |
| ವೇಗಿ | ೬-೧೦೨ | ವೇಗಚಾರ, ಸುದ್ದಿವಾಹಕ |
| ವೇತಂಡ | ೨-೧೭೧ | ಆನೆ |
| ವ್ಯಂತರ | ೧-೨೧೬ | ಬೆಂತರ, ಪಿಶಾಚ |
| | ಶ | |
| ಶತಪತ್ರಷಂಡ | ೯-೧೯ | ಕಮಲಸರೋವರ |
| ಶೃಂಗಾರದುರುಳಿ | ೮-೧೬೭ | ಅಲಂಕಾರದ ಒಂದು ಉಂಡೆ |
| ಶ್ರಾವಕ | ೧-೧೦೨ | ಜೈನಗೃಹಸ್ಥ |
| ಶ್ರುತ | ೧೦-೧೪ | ಜೈನಾಗಮ |

## ಸ

| | | |
|---|---|---|
| ಸಂಕೆ | ೭–೧೯ | ಶಂಖ |
| ಸಂಘಾತ | ೧೪–೬೫ | ಹೊಂದಿಕೆ, ಸಾಮರಸ್ಯ |
| ಸಂತತಂ | ೧೪–೧೧೭ | ನಿರಂತರ, ಶಾಶ್ವತ |
| ಸಂವರ | ೧೪–೧೦೪ | ಕರ್ಮಪ್ರವಾಹವನ್ನು ತಡೆಯುವುದು |
| ಸಂಸೃತಿ | ೫–೧೧೦ | ಸಂಸಾರ : ಜನನ ಮರಣ ಚಕ್ರ |
| ಸಮಯ | ೧೦–೧೭ | ಮತ |
| ಸಮನಿಸು | ೯–೨೬ | ಲಭಿಸು |
| ಸಮವಸರಣ | ೧–೬೨ | ತೀರ್ಥಂಕರರ ಉಪದೇಶ ಮಂಟಪ |
| ಸವಣ | ೧–೧೦೩ | ಶ್ರಮಣ, ಜೈನಸನ್ಯಾಸಿ |
| ಸವಳ | ೧೦–೨೭೯ | ಸಬಳ, ಈಟಿ |
| ಸಾಗರ | ೧೦–೫೭ | ಕಾಲದ ಒಂದು ಅಳತೆ (ಜೈನ) |
| ಸಾರು | ೧–೬೨ | ಡಂಗುರಹಾಕಿಸು |
| ಸಿತಗೆ | ೨–೧೨೨ | ಜಾರೆ |
| ಸಿದ್ಧಾಯ | ೧೪–೧೦೪ | ನಿಗದಿಯಾದ ಕಂದಾಯ |
| ಸಿರಿಸು | ೯–೧೧೮ | ಶಿರಸ್ಸು |
| ಸೀಪು | ೯–೧೩೨ | ಸಿಹಿ |
| ಸುಂಟಿ | ೩–೭೧ | ಶುಂಠಿ |
| ಸುಭಗ | ೧–೨೧೮ | ಚೆಲುವ ; ಅದೃಷ್ಟವಂತ |
| ಸೂಜಿಯಿ ಪಿನ್ನೆ | ೬–೧೯ | ಸೂಜಿಯರಂಧ್ರ |
| ಸೂಡು | ೮–೧೩೫ | ಮಾಲೆಹಾಕು |
| ಸೂರುಳ್ | ೨–೧೬೯ | ಪ್ರಮಾಣ, ಶಪಥ |
| ಸೂಸಕ | ೬–೪೮ | ಕುಚ್ಚು, ಗೊಂಡೆ |
| ಸೆಡೆ | ೬–೩ | ಹಿಂಜರಿ, ಅಂಜು |
| ಸೇಸೆ | ೯–೧೮೭ | ಅಕ್ಷತೆ |
| ಸೈತು | ೩–೧೦೦ | ಸರಿ |
| ಸೈದಾರಿ | ೧೧–೩೧ | ನೇರವಾದ ದಾರಿ |
| ಸೊಂಬತನ | ೬–೧೦೦ | ಸೋಮಾರಿತನ |
| ಸೊವಡು | ೨–೪೮ | ಶಕ್ತಿಹೀನ, ಸುಸ್ತು |
| ಸೋಗಿಲು | ೧೦–೧೬೯ | ಮಡಿಲು |
| ಸ್ಥಳಯಾತ್ರೆ | ೬–೬೭ | ವ್ಯಾಪಾರಕ್ಕೋಸ್ಕರ ಕ್ಷೇತ್ರಸಂಸಾರ |

## ಹ

| | | |
|---|---|---|
| ಹಡಹಾಳಿ | ೫–೧೨೫ | ಸಂಪಾದನಕರ್ತ |
| ಹೀನಿ | ೮–೫೧ | ಅವಿವೇಕಿ, ದಡ್ಡ |

[ಮುಂದುವರಿದದ್ದು]

ಕೆಳದಿನೃಪ ವಿಜಯಂ * ದಮಯಂತೀ ಸ್ವಯಂವರ
ಶಾಂತಿಪುರಾಣ * ಚಂದ್ರಪ್ರಭ ಪುರಾಣ
ಉದ್ಭಟ ಕಾವ್ಯ * ಕುಸುಮಾವಳಿ
ಅಭಿನವ ದಶಕುಮಾರ ಚರಿತೆ
ಮಲ್ಲಿನಾಥಪುರಾಣ * ರಾಜಶೇಖರ
ವಿಳಾಸ * ಚಿಕ್ಕದೇವರಾಜ ವಂಶಾವಳಿ
ದಿವ್ಯಸೂರಿ ಚರಿತೆ * ಸಿದ್ಧರಾಮಚಾರಿತ್ರ
ಬಸವಪುರಾಣ * ಪ್ರಭುಲಿಂಗ ಲೀಲೆ

[ಮುಂದುವರಿದದ್ದು]

ಕೆಳದಿನೃಪ ವಿಜಯಂ * ದಮಯಂತೀ ಸ್ವಯಂವರ

ಶಾಂತಿಪುರಾಣ * ಚಂದ್ರಪ್ರಭ ಪುರಾಣ

ಉದ್ಭಟ ಕಾವ್ಯ * ಕುಸುಮಾವಳಿ

ಅಭಿನವ ದಶಕುಮಾರ ಚರಿತೆ

ಮಲ್ಲಿನಾಥಪುರಾಣ * ರಾಜಶೇಖರ

ವಿಳಾಸ * ಚಿಕ್ಕದೇವರಾಜ ವಂಶಾವಳಿ

ದಿವ್ಯಸೂರಿ ಚರಿತೆ * ಸಿದ್ಧರಾಮಚಾರಿತ್ರ

ಬಸವಪುರಾಣ * ಪ್ರಭುಲಿಂಗ ಲೀಲೆ



1977

ಕನ್ನಡದ ಪ್ರಾಚೀನ ಕಾವ್ಯ ಸಂಪತ್ತು ಅಮೂಲ್ಯವಾಗಿದೆ. ಈ ಸಂಪತ್ತನ್ನು ಈಗಿನ ಕನ್ನಡ ಜನತೆ ಓದಿ ತಿಳಿದುಕೊಳ್ಳುವುದು ಅತ್ಯಾವಶ್ಯಕವಾಗಿದೆ. ಆದರೆ ಈ ಕಾವ್ಯಗಳು ಜನಸಾಮಾನ್ಯರಿಗೆ ಕಠಿಣವಾಗಿ ತೋರುವುದರಿಂದ ಇವುಗಳ ವ್ಯಾಸಂಗದಲ್ಲಿ ಉತ್ಸಾಹಪೂರ್ಣವಾದ ಪ್ರವೃತ್ತಿ ಕಂಡುಬರುತ್ತಿಲ್ಲ. ಅನೇಕ ಸಂದರ್ಭಗಳಲ್ಲಿ ಮೂಲಗ್ರಂಥಗಳೂ ದೊರೆಯುವುದಿಲ್ಲ........ಆದ್ದರಿಂದ ಈ ಕೊರತೆಯನ್ನು ನಿವಾರಣೆ ಮಾಡಲು ಕನ್ನಡ ಸಾಹಿತ್ಯ ಪರಿಷತ್ತು ತನ್ನ ಪಂಚವಾರ್ಷಿಕ ಯೋಜನೆಯಲ್ಲಿ ಹಳಗನ್ನಡ ಕಾವ್ಯಗಳ ಪುನರ್ಮುದ್ರಣಕ್ಕೆ ವಿಶೇಷಗಮನ ಹರಿಸಿ ಅದಕ್ಕಾಗಿ ಪ್ರತ್ಯೇಕ ಯೋಜನೆಯನ್ನು ಹಾಕಿಕೊಂಡಿತು. ಆರಿಸಿದ ಹಳಗನ್ನಡ ಹಾಗೂ ನಡುಗನ್ನಡ ಕಾವ್ಯಗಳನ್ನು ಹೊಸಗನ್ನಡ ಗದ್ಯದಲ್ಲಿ ಅನುವಾದಿಸಿ ಆ ಅನುವಾದದೊಡನೆ ಮೂಲಪಾಠವನ್ನು ಪ್ರಕಟಿಸಿ ಪುಸ್ತಕರೂಪದಲ್ಲಿ ಹೊರತರುವುದು ಮತ್ತು ಸರ್ಕಾರದ ಸಹಾಯ ಪಡೆದು ಆ ಪುಸ್ತಕಗಳು ಸಾಧ್ಯವಾದ ಮಟ್ಟಿಗೆ ಸುಲಭ ಬೆಲೆಯಲ್ಲಿ ದೊರೆಯುವಂತೆ ಮಾಡುವುದು ಇವು ಆ ಯೋಜನೆಯ ಮುಖ್ಯ ಅಂಶಗಳು.

—ಪ್ರಸ್ತಾವನೆಯಿಂದ

---

ಈ ಕಾರ್ಯಕ್ರಮದಲ್ಲಿ ಈಗ ಅಂಗೀಕರಿಸಿರುವ ಹಳಗನ್ನಡ–ನಡುಗನ್ನಡ ಕಾವ್ಯಗಳು ನಲವತ್ತನಾಲ್ಕು. ಇವುಗಳಲ್ಲಿ ಮೊದಲ ಕಂತಾಗಿ ಹದಿಮೂರು ಗ್ರಂಥಗಳು ಪರಿಷತ್ತಿನ ವಜ್ರಮಹೋತ್ಸವ ಸಂದರ್ಭದಲ್ಲಿ ಬಿಡುಗಡೆಯಾಗಲಿವೆ.